# ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ : ಒಂದು ಅಧ್ಯಯನ

ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾ ಪ್ರಬಂಧ

ಸಂಶೋಧಕರು

**ಯಾದಪ್ಪ ಬ. ಪರದೇಶಿ.**



ಮಾರ್ಗದರ್ಶಕರು

**ಡಾ. ಎಸ್.ಸಿ. ಪಾಟೀಲ.**

ಪ್ರವಾಚಕರು ಹಾಗೂ ಮುಖ್ಯಸ್ಥರು

ವಾಸ್ತುಶಿಲ್ಪ ಮತ್ತು ಪ್ರತಿಮಾಶಾಸ್ತ್ರ ವಿಭಾಗ




ಲಲಿತಕಲಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ,

ವಿದ್ಯಾರಣ್ಯ - ೫೮೩೨೭೬

೨೦೦೦

# ಪ್ರಮಾಣ ಪತ್ರ

**ಯಾದಪ್ಪ ಬ. ಪರದೇಶಿ** ಇವರು ಬರೆದು ಸಾದರಪಡಿಸಿದ **ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ : ಒಂದು ಅಧ್ಯಯನ** ಎಂಬ ವಿಷಯ ಕುರಿತ ಈ ಮಹಾಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದ್ದು ಶ್ರೀಯುತರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗದಲ್ಲಿ ಸಂಶೋಧನೆ ನಡೆಸಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದಾರೆ. ಈ ಸಂಶೋಧನ ಮಹಾಪ್ರಬಂಧವು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣಪತ್ರ ನೀಡುತ್ತೇನೆ.

೨೬-೧೨-೨೦೦೦
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೨೬/೧೨/೨೦೦೦
**(ಡಾ. ಎಸ್. ಸಿ. ಪಾಟೀಲ)**
ಮಾರ್ಗದರ್ಶಕರು

# ಘೋಷಣಾ ಪತ್ರ

**ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ : ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಡಾ. ಎಸ್. ಸಿ. ಪಾಟೀಲ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರಾವುದೇ ಪದವಿಗಾಗಿಯಾಗಲಿ, ಇತರ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲವೆಂದು ಈ ಮೂಲಕ ತಿಳಿಯಪಡಿಸುತ್ತೇನೆ.

Y B Paradeshi

**(ಯಾದಪ್ಪ ಬ. ಪರದೇಶಿ)**

ಸಂಶೋಧನ ವಿದ್ಯಾರ್ಥಿ

೨೬-೧೨-೨೦೦೦

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

# ಅರಿಕೆ

ನಾನು ಚಿತ್ರಕಲೆಯ ಪದವಿ ತರಗತಿಯಲ್ಲಿ ಓದುತ್ತಿರುವಾಗಲೇ ಈ ಕ್ಷೇತ್ರದಲ್ಲಿ ಉನ್ನತ ವ್ಯಾಸಂಗ ಕೈಕೊಳ್ಳಬೇಕೆಂಬ ಒಲವು ಹೊಂದಿದ್ದೆ. ಸ್ನಾತಕೋತ್ತರ ಹಂತದಲ್ಲಿ ಅದು ಇನ್ನಷ್ಟು ಬಲವಾಯಿತು. ಆದರೆ ಚಿತ್ರಕಲಾ ಕ್ಷೇತ್ರದಲ್ಲಿ ಸಂಶೋಧನೆ, ಪಿಹೆಚ್. ಡಿ. ಅಧ್ಯಯನಗಳ ರೂಪರೇಷೆಗಳೇನು ? ಅಂಥಹ ಅಧ್ಯಯನವನ್ನು ಯಾವ ವಿಶ್ವವಿದ್ಯಾಲಯದಲ್ಲಿ ಮಾಡಬೇಕು. ಅದಕ್ಕೆ ಸೂಕ್ತ ಮಾರ್ಗದರ್ಶಕರು ಯಾರು ? ಯಾರನ್ನು ಆಯ್ಕೆ ಮಾಡಿಕೊಳ್ಳಬೇಕು ? ಯಾವ ವಿಷಯವನ್ನು ತೆಗೆದುಕೊಳ್ಳಬೇಕು ? ಎಂಬ ಹಲವಾರು ಪ್ರಶ್ನೆಗಳು ನನ್ನನ್ನು ಸದಾಕಾಲವೂ ಕಾಡುತ್ತಿದ್ದವು. ಈ ನನ್ನ ಬಯಕೆಯನ್ನು ಹಲವು ಕಲಾವಿದ, ವಿದ್ವಾಂಸರ ಮುಂದೆ ವ್ಯಕ್ತಪಡಿಸಿದ್ದೂ ಉಂಟು. ಮುಂದೆ ಸ್ನಾತಕೋತ್ತರ ಪದವಿ ಮುಗಿಸಿ ಗದುಗಿನ ವಿಜಯಲಲಿತಾ ಮಹಾವಿದ್ಯಾಲಯದಲ್ಲಿ ಉಪನ್ಯಾಸಕನಾಗಿ ಸೇವೆಗೆ ಸೇರಿಕೊಂಡೆನು. ಈ ಕಲಾ ಮಹಾವಿದ್ಯಾಲಯದ ವಾರ್ಷಿಕ ಕಾರ್ಯಕ್ರಮ ಒಂದರಲ್ಲಿ ಭಾಗವಹಿಸಲು ಆಗಮಿಸಿದ್ದ ಡಾ. ಎಸ್. ಸಿ. ಪಾಟೀಲ ಅವರು ಕರ್ನಾಟಕದಲ್ಲಿ ಚಿತ್ರಕಲಾ ಕ್ಷೇತ್ರದಲ್ಲಿ ಮೊದಲು ಪಿಹೆಚ್.ಡಿ. ಪದವಿ ಪಡೆದ ಕಲಾವಿದರೆಂದು ಅವರನ್ನು ಪರಿಚಯಿಸುವ ಸಂದರ್ಭದಲ್ಲಿ ಹೇಳಿದ ಮಾತು ನನಗೆ ಮತ್ತೆ ಸಂಶೋಧನೆ ಮಾಡುವ ಅಭಿಲಾಷೆ ಚಿಗುರೊಡೆಯಿತು. ನಂತರ ಡಾ. ಎಸ್. ಸಿ. ಪಾಟೀಲ ಅವರನ್ನೂ ಭೇಟಿಯಾಗಿ ನನ್ನ ಅಭಿಲಾಷೆಯನ್ನು ಅವರ ಮುಂದೆ ವ್ಯಕ್ತಪಡಿಸಿದೆ. ಅವರು ಅಧ್ಯಯನ ಮಾಡಲು ಪೂರ್ವಭಾವಿಯಾಗಿ ಮಾಡಬೇಕಾದ ಸಿದ್ಧತೆ, ಗ್ರಂಥ, ಲೇಖನಗಳ ಸಂಗ್ರಹ ಇತ್ಯಾದಿ ಸಂಶೋಧನ ಶಾಸ್ತ್ರದ ವಿಧಿ-ವಿಧಾನಗಳನ್ನು ಅಧ್ಯಯನ ಮಾಡಲು ಮತ್ತು ಕೆಲವು ಲೇಖನಗಳನ್ನು ಬರೆದು ಪ್ರಕಟಿಸಲು ಸೂಚಿಸಿದರು. ಒಂದು ರೀತಿಯಲ್ಲಿ ನನ್ನ ಸಂಶೋಧನೆಯ ಅಧ್ಯಯನ ಆವಾಗಿನಿಂದಲೇ ಪ್ರಾರಂಭವಾಯಿತೆನ್ನಬೇಕು. ಇದೇ ಸಂದರ್ಭದಲ್ಲಿ ದೆಹಲಿಯ ನ್ಯಾಷನಲ್ ಮ್ಯುಜಿಯಂ, ಡೀಮ್ಡ್ ವಿಶ್ವವಿದ್ಯಾಲಯವು ಪಿಹೆಚ್. ಡಿ. ಅಧ್ಯಯನ ಕೈಕೊಳ್ಳಲು ಅರ್ಜಿಗಳನ್ನು ಕರೆದಿದ್ದರು. ನಾನೂ ಅರ್ಜಿಯನ್ನು ಹಾಕಿದ್ದೆ. ಮುಂದೆ ಅರ್ಜಿ ಪುರಸ್ಕೃತವಾಗಿ, ಸಂದರ್ಶನ ನಡೆದು ಅಧ್ಯಯನಕ್ಕೆ ಅವಕಾಶವೂ ಸಿಕ್ಕಿತು. ಆದರೆ ಮನೆತನದ ಕೆಲವು ಸಮಸ್ಯೆಗಳ ಕಾರಣವಾಗಿ ಅಧ್ಯಯನ ಮಾಡಲು ಸಾಧ್ಯವಾಗಲಿಲ್ಲ. ಮುಂದೆ ಕೆಲವು ತಿಂಗಳುಗಳ ನಂತರ ಕನ್ನಡ ವಿಶ್ವವಿದ್ಯಾಲಯ, ಹಂಪಿಯಲ್ಲಿ ಪಿಹೆಚ್. ಡಿ. ಅಧ್ಯಯನ ಮಾಡಲು ಅವಕಾಶ ದೊರೆಯಿತು. ಒಂದು ವರ್ಷ ಸಂಶೋಧನೆಯ ಪೂರ್ವಭಾವಿ ಅಧ್ಯಯನ ಮಾಡುತ್ತಿದ್ದ ಸಂದರ್ಭದಲ್ಲಿ ದೃಶ್ಯಕಲಾ ವಿಭಾಗಕ್ಕೆ ಡಾ. ಎಸ್. ಸಿ. ಪಾಟೀಲ ಅವರು ಪ್ರವಾಚಕರಾಗಿ ನೇಮಕಾತಿಯಾಗಿ ಬಂದರು. ಅವರು ಬಂದದ್ದು ನನಗೆ ಇನ್ನಷ್ಟು ಸಂತೋಷವಾಯಿತು.

ಅವರೊಂದಿಗೆ ನನ್ನ ಸಂಶೋಧನೆಯ ಒಂದೆರಡು ವರ್ಷದ ಪೂರ್ವ ತಯಾರಿಯನ್ನು ಅವರಿಗೆ ತೋರಿಸಿ ನನಗೆ ಮಾರ್ಗದರ್ಶನ ನೀಡಲು ವಿನಂತಿಸಿಕೊಂಡೆ. ಅವರು ಸಂತೋಷದಿಂದ ಒಪ್ಪಿಕೊಂಡು ನನ್ನ ಆಸಕ್ತಿಯ ಕ್ಷೇತ್ರವನ್ನು ಗುರುತಿಸಿ. ' ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ : ಒಂದು ಅಧ್ಯಯನ ' ಎಂಬ ವಿಷಯ ಕುರಿತು ಸಂಶೋಧನೆ ಕೈಕೊಳ್ಳಲು ಮಾರ್ಗದರ್ಶನ ಮಾಡಿದರು. ಅಲ್ಲಿಂದ ಈ ಮಹಾಪ್ರಬಂಧದ ಮುಕ್ತಾಯದ ಹಂತದವರೆಗೂ ಅಮೂಲ್ಯವಾದ ಸಲಹೆ ಸೂಚನೆಗಳನ್ನು ನೀಡಿ ನನ್ನ ಬರವಣಿಗೆಯನ್ನು ತಿದ್ದಿ ಒಂದು ರೂಪಕ್ಕೆ ತರುವಲ್ಲಿ ಅವರ ಪರಿಶ್ರಮ ನನಗೊಂದು ವರವಾಗಿ ಪರಿಣಮಿಸಿದೆ.

ಕನ್ನಡ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರ ಅವರು ನನಗೆ ಅಧ್ಯಯನಕ್ಕೆ ಅವಕಾಶ ಒದಗಿಸಿಕೊಟ್ಟಿದ್ದು ಮತ್ತು ಈಗಿನ ಕುಲಪತಿಗಳಾದ ಡಾ. ಎಂ. ಎಂ. ಕಲಬುರ್ಗಿಯವರು ಆಸಕ್ತಿಯಿಂದ ನನ್ನ ಬರವಣಿಗೆಯನ್ನು ಗಮನಿಸಿ ಸಲಹೆ-ಸೂಚನೆಗಳನ್ನು ನೀಡಿ ಉಪಕರಿಸಿದ್ದಾರೆ. ಅವರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಈ ಮಹಾಪ್ರಬಂಧದ ಎಲ್ಲ ನೆಲೆಗಳಲ್ಲಿ ನಿಂತು ನನಗೆ ಮಾರ್ಗದರ್ಶನ ಮಾಡಿದ ಡಾ. ಎಸ್. ಸಿ. ಪಾಟೀಲ ಅವರು ತಾವೂ ದುಡಿಯುವುದರೊಂದಿಗೆ ನನ್ನನ್ನೂ ದುಡಿಸಿದ್ದಾರೆ. ಅವರು ನನಗೆ ಮಾರ್ಗದರ್ಶಕರಾಗಿ ಸಿಕ್ಕಿದ್ದು ಒಂದು ಭಾಗ್ಯ. ಅವರಿಗೆ ನನ್ನ ಕೃತಜ್ಞತೆಗಳನ್ನೂ, ಹಂಪಿ ಕನ್ನಡ ವಿಶ್ವವಿದ್ಯಾಲಯ ನನಗೆ ಶಿಷ್ಯವೇತನ ನೀಡಿ ನೆರವು ನೀಡಿದ್ದನ್ನು ಅತ್ಯಂತ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ.

ಕುಲಸಚಿವರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ, ಅಧ್ಯಯನಾಂಗ ನಿರ್ದೇಶಕರಾದ ಡಾ. ಕೆ. ವಿ. ನಾರಾಯಣ ಅವರನ್ನು ಮತ್ತು ಪ್ರಾಗೈತಿಹಾಸಿಕ ಚಿತ್ರಕಲೆಯ ಕುರಿತು ಉಪಯುಕ್ತವಾದ ಮಾಹಿತಿ ಮತ್ತು ಸಲಹೆಯನ್ನು ನೀಡಿದ ಪ್ರೊ. ಲಕ್ಷ್ಮಣ ತೆಲಗಾವಿ ಅವರನ್ನು. ಡಾ. ಕೆ. ಎಮ್. ಸುರೇಶ್, ಶ್ರೀ ಬಾಲಸುಬ್ರಹ್ಮಣ್ಯಂ, ಡಾ. ಹಿ. ಚಿ. ಬೋರಲಿಂಗಯ್ಯಾ, ಡಾ. ಕರಿಗೌಡ ಬೀಚನಹಳ್ಳಿ, ಪ್ರೊ. ಎ. ವ್ಹಿ. ನಾವಡ, ಪ್ರೊ. ಹನುಮಣ್ಣ ನಾಯಕದೊರೆ, ಡಾ. ದೇವರಕೊಂಡಾರೆಡ್ಡಿ. ಶ್ರೀ ಜಿ. ಜಯಕುಮಾರ ಇವರೊಂದಿಗೆ ನನ್ನ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಲಹೆಯನ್ನು ಪಡೆದುಕೊಂಡಿದ್ದೇನೆ. ಡಾ. ಮಂಜುನಾಥ ಬೇವಿನಕಟ್ಟಿ. ಡಾ. ಸ. ಚಿ. ರಮೇಶ. ಡಾ. ವೀರೇಶ ಬಡಿಗೇರ, ಮೊಗಳ್ಳಿ ಗಣೇಶ. ಚಲುವರಾಜ. ಡಾ. ಎಫ್. ಟಿ. ಹಳ್ಳಿಕೇರಿ. ಡಾ. ಕೆ. ರವೀಂದ್ರನಾಥ. ಡಾ. ಕೇಶವನ್ ಪ್ರಸಾದ. ಡಾ. ಮೈತ್ರಿ ಕಾಮಣ್ಣ. ಶಿವಾನಂದ ವಿರಕ್ತಮಠರು ತೋರಿದ ಸಹಕಾರಕ್ಕೆ ವಂದನೆಗಳು.

ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಡಾ. ಬಿ. ಆರ್. ಹಿರೇಮಠ ಅವರು ಈ ಮಹಾಪ್ರಬಂಧದ ಡಿ. ಟಿ. ಪಿ. ಪ್ರತಿಯನ್ನು ನೋಡಿ ಉಪಯುಕ್ತವಾದ ಸಲಹೆ-ಸೂಚನೆಗಳನ್ನು ನೀಡಿ ಉಪಕರಿಸಿದ್ದಾರೆ. ಮತ್ತು ಹಿರಿಯ ವಿದ್ವಾಂಸರಾದ ಪ್ರೊ. ಅ. ಸುಂದರ. ಡಾ. ಬಿ. ಕೆ. ಹಿರೇಮಠ ಅವರು ಮಹಾಪ್ರಬಂಧದ ರೂಪರೇಷೆಯ ಕುರಿತು ಮೌಲಿಕ ಸಲಹೆ ನೀಡಿದ್ದಾರೆ. ಹಾಗೆಯೇ ಡಾ. ರಘುನಾಥ ಭಟ್, ಡಾ. ಶ್ರೀನಿವಾಸ ಪಾಡಿಗಾರ್. ಪ್ರೊ. ವ್ಹಿ. ಜಿ. ಮಾರೀಹಾಳ್. ಡಾ. ಕೆ. ಎಂ. ಗೌಡರ. ಡಾ. ರು. ಮ. ಷಡಕ್ಷರಯ್ಯ. ಡಾ. ಕೆ. ರಾಮಚಂದ್ರಾಚಾರ್ಯ. ಡಾ. ಆರ್. ಟಿ. ಜಂತ್ಲಿ. ಡಾ. ಶಶಿಕಲಾ ದೇಶಪಾಂಡೆ. ಡಾ. ಎಚ್. ಎಂ. ಕಾಶೀನಾಥ ಅವರ ಸಹಾಯ ಪಡೆದಿದ್ದೇನೆ. ಅವರಿಗೆ ವಂದನೆಗಳು.

ಕಲಾವಿದ ಶ್ರೀ ಆರ್. ಎಂ. ಹಡಪದ, ಶ್ರೀ ಜಿ. ಎಸ್. ಖಂಡೇರಾವ್, ಪ್ರೊ. ವ್ಹಿ. ಜಿ. ಅಂದಾನಿ, ಶ್ರೀ ಸಿ. ಚಂದ್ರಶೇಖರ. ಪ್ರೊ. ವ್ಹಿ. ಬಿ. ಹಿರೇಗೌಡರ ಅವರು, ಸಾಹಿತಿಗಳಾದ ಪ್ರೊ. ಎಂ. ಎಚ್. ಕೃಷ್ಣಯ್ಯ. ಪ್ರೊ. ಚೂಡಾಮಣಿ ನಂದಗೋಪಾಲ. ಡಾ. ಅ. ಲ. ನ., ಶ್ರೀ ಎನ್. ಮರಿಶಾಮಾಚಾರ, ಶ್ರೀ ಜಿ. ಸು. ಕೃಷ್ಣಶೆಟ್ಟಿ, ದಿ. ಶಂಕರ ಪಾಟೀಲ, ಶ್ರೀ ಕೆ. ವ್ಹಿ. ಸುಬ್ರಹ್ಮಣ್ಯಂ, ಪ್ರಿ. ಅಶೋಕ ಅಕ್ಕಿ ಡಾ. ಸದಾನಂದ ಪಾಟೀಲ, ಹಳಿಯಾಳ ಅವರು ಅಧ್ಯಯನ ಮಾಡಲು ಪ್ರೋತ್ಸಾಹಿಸಿದ್ದಾರೆ, ಅವರಿಗೆಲ್ಲ ನಮನಗಳು.

ಕ್ಷೇತ್ರಕಾರ್ಯಕ್ಕೆ ಹೋದಾಗ ಅನೇಕ ಜನರು ನನ್ನ ಅಧ್ಯಯನಕ್ಕೆ ನೆರವಾಗಿದ್ದಾರೆ. ಅವರೆಲ್ಲರನ್ನೂ ಇಲ್ಲಿ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ. ಹೊಸ ದೆಹಲಿಯ ವಿಶ್ವವಿದ್ಯಾಲಯದಲ್ಲಿ ಗ್ರಂಥಾಲಯದ ಸಿಬ್ಬಂದಿ ಅಮೂಲ್ಯ ಗ್ರಂಥಗಳನ್ನು ಒದಗಿಸಿ, ಉಪಕಾರ ಮಾಡಿದ್ದಾರೆ. ಹಾಗೆಯೇ ಗುಲಬರ್ಗಾ, ಬೆಂಗಳೂರು, ಮೈಸೂರು, ಕರ್ನಾಟಕ ವಿಶ್ವವಿದ್ಯಾಲಯಗಳ ಗ್ರಂಥಾಲಯದ ಸಿಬ್ಬಂದಿಯವರ ಸಹಕಾರವನ್ನು ನೆನೆಯುತ್ತೇನೆ.

ಧಾರವಾಡದಲ್ಲಿ ಕ್ಷೇತ್ರಕಾರ್ಯಕ್ಕೆ ಹೋದಾಗ ಮತ್ತು ಮಹಾಪ್ರಬಂಧ ಮುಕ್ತಾಯ ಹಂತದಲ್ಲಿ ತಮ್ಮ ಮನೆಯಲ್ಲಿ ಇರಲು ಅವಕಾಶ ಮಾಡಿಕೊಟ್ಟು ನನಗೆ ಹಲವಾರು ರೀತಿಯಲ್ಲಿ ಸಹಾಯ ಮಾಡಿದ ಸ್ಕೂಲ್ ಆಫ್ ಆರ್ಟ್ಸ ನ ಉಪನ್ಯಾಸಕರಾದ ಶ್ರೀ ಬಿ. ಎಮ್. ಪಾಟೀಲ ಅವರನ್ನು ವಿಶೇಷವಾಗಿ ಸ್ಮರಿಸುತ್ತೇನೆ. ಬಾದಾಮಿಯ ಡಾ. ಶೀಲಾಕಾಂತ ಪತ್ತಾರ ಅವರು ಛಾಯಾಚಿತ್ರಗಳನ್ನು ಒದಗಿಸುವದರೊಂದಿಗೆ ಹಲವಾರು ರೀತಿಯಲ್ಲಿ ಸಹಾಯ ಮಾಡಿದ್ದಾರೆ. ಕ್ಷೇತ್ರಕಾರ್ಯದಲ್ಲಿ ನನ್ನೊಂದಿಗೆ ಛಾಯಾಚಿತ್ರಣ ಮಾಡಿಕೊಟ್ಟ ಇಲಕಲ್ಲದ ಬಸವರಾಜ ಗವಿಮಠ, ಬಾದಾಮಿಯ ಎಮ್. ಐ. ಬಾರಾವಲಿ ಅವರನ್ನು ಮಹಾಪ್ರಬಂಧದ ಪ್ರೂಫ್ ನೋಡುವಲ್ಲಿ ನನ್ನೊಂದಿಗೆ ಇದ್ದು ಪ್ರಬಂಧ ಉತ್ತಮ ರೀತಿಯಲ್ಲಿ ರೂಪಗೊಳ್ಳಲು ಶ್ರಮಿಸಿದ ಸಂಶೋಧನಾ ವಿದ್ಯಾರ್ಥಿ ಶಿವಪ್ರಕಾಶ ತುಕ್ಕಣ್ಣವರ ಹಾಗೂ ಆನಂದ ಪೂಜಾರ, ಶಿವಾನಂದ ಭಂಟನೂರು, ಸಿದ್ದು ಹಿರೇಮಠ, ಲಕ್ಷ್ಮೀಗವಾಯಿ, ಧಾರವಾಡದ ಪ್ರೊ. ಜಿ. ಜಿ. ರೊಡ್ಡಣ್ಣನವರ ಅವರನ್ನು ನೆನೆಯುತ್ತೇನೆ.

ಕಡಿಮೆ ಅವಧಿಯಲ್ಲಿ ಶ್ರಮವಹಿಸಿ ಡಿ. ಟಿ. ಪಿ. ಮಾಡಿಕೊಟ್ಟ ಧಾರವಾಡದ ಮನೋಹರ ಮುದ್ರಣಾಲಯದ ಮಾಲಿಕರಾದ ರವಿ-ಚಂದ್ರು ಸಹೋದರ ಅವರನ್ನು. ಉತ್ತಮ ರೀತಿಯಲ್ಲಿ ಬೈಂಡಿಂಗ್ ಮಾಡಿಕೊಟ್ಟ ಎಸ್. ವಿ. ಪಾಟೀಲ ಅನೇಕ ರೀತಿಯಲ್ಲಿ ಸಹಾಯ ಮಾಡಿದ ಶಿಲ್ಪಕಲಾ ವಿಭಾಗದ ಆರ್. ವ್ಹಿ. ದೇಶಪಾಂಡೆ, ವಸಂತ, ಶಿವಾನಂದ ಅವರಿಗೆಲ್ಲ ಕೃತಜ್ಞತೆಗಳು. ಕೊನೆಯದಾಗಿ ನನ್ನ ಅಧ್ಯಯನಕ್ಕೆ ಆರ್ಥಿಕ ನೆರವು ನೀಡಿ ಪ್ರೋತ್ಸಾಹಿಸಿದ ಮಾವನವರಾದ ಶ್ರೀ ಕೆ. ಎ. ಕೊಪ್ಪಳ ಅವರಿಗೆ ಎಷ್ಟು ಕೃತಜ್ಞತೆ ಹೇಳಿದರೂ ಕಡಿಮೆಯೇ. ನನ್ನ ತಂದೆ-ತಾಯಿ, ಸಹೋದರರ ನಿರಂತರ ಶುಭ ಹಾರೈಕೆಗಳನ್ನು ಸಹ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ.

ಎಲ್ಲ ಅಧ್ಯಾಯಗಳನ್ನು ಸರಿಯಾಗಿ ಗಮನಿಸಿದಾಗ್ಯೂ ಮುದ್ರಣದಲ್ಲಿ ಏನಾದರೂ ತಪ್ಪುತಡೆಗಳಿದ್ದರೆ ಕ್ಷಮಿಸುವಿರೆಂದು ಭಾವಿಸುತ್ತೇನೆ.

**ಯಾದಪ್ಪ ಬ. ಪರದೇಶಿ**

## ಪರಿವಿಡಿ

ಭಾರತೀಯ ಚಿತ್ರಕಲಾ ಪರಂಪರೆಯಲ್ಲಿ ಕರ್ನಾಟಕದ ಭಿತ್ತಿಚಿತ್ರಗಳಿಗೆ ತನ್ನದೇ ಆದ ಮಹತ್ವದ ಸ್ಥಾನವಿದೆ. ಕನ್ನಡ ನಾಡಿನ ಜನತೆ ಭಿತ್ತಿಚಿತ್ರಗಳನ್ನು ರಚಿಸುವ ಮೂಲಕ ಕಲಾಕಾರರಾಗಿ, ಭಿತ್ತಿಚಿತ್ರಗಳನ್ನು ಬರೆಯಿಸುವುದರೊಂದಿಗೆ ಕಲಾ ಪೋಷಕರಾಗಿದ್ದಾರೆ. ಈ ಭಿತ್ತಿಚಿತ್ರ ನಿರ್ಮಾಣ ಪರಂಪರೆಯನ್ನು ಜೀವಂತವಾಗಿರಿಸುವುದರ ಜೊತೆಗೆ ನಮ್ಮ ನಾಡನ್ನು ಸಂಪದ್ಭರಿತ ಪ್ರದೇಶವನ್ನಾಗಿ ಮಾಡಿದ್ದಾರೆ. ಹೀಗೆ ಈ ಭಿತ್ತಿಚಿತ್ರ ರಚನಾ ಪರಂಪರೆ ಪ್ರಾಗೈತಿಹಾಸಿಕ ಕಾಲದಿಂದ ಇಂದಿನವರೆಗೂ ಉಳಿದುಕೊಂಡು ಬಂದಿರುವುದಲ್ಲದೇ ವ್ಯಕ್ತಿಯಿಂದ ವ್ಯಕ್ತಿಗೆ, ಸಮುದಾಯದಿಂದ ಸಮುದಾಯಕ್ಕೆ ಬೇರೆಬೇರೆಯಾಗಿ ಸೃಷ್ಟಿಗೊಂಡಿದೆ. ಪ್ರಾದೇಶಿಕತೆ, ಆ ಪ್ರದೇಶದ ಜನರ ಜೀವನ ವಿಧಾನ, ಆಚಾರ ವಿಚಾರ, ಧಾರ್ಮಿಕ ನಂಬಿಕೆ ಮುಂತಾದವುಗಳು ಅವರ ಭಿತ್ತಿ ಚಿತ್ರರಚನೆಯ ಮೇಲೆ ಪ್ರಭಾವ ಬೀರಿ ಈ ಪರಂಪರೆ ವೈವಿಧ್ಯಮಯವಾಗಿ ರೂಪುಗೊಳ್ಳಲು ಕಾರಣವಾಗಿದೆ. ಯಾವುದೇ ಕಾಲದ ಭಿತ್ತಿಚಿತ್ರಗಳು ಆಯಾ ಕಾಲದ ಜನಜೀವನದ ವಿವರಗಳನ್ನು ಒಳಗೊಂಡಿರುತ್ತವೆ ; ಹಾಗೆಯೇ ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಇತಿಹಾಸವನ್ನು ತಿಳಿಯಲು ಇವು ಮಹತ್ವದ ಆಕರಗಳಾಗಿವೆ. ಭಿತ್ತಿಚಿತ್ರಗಳ ಅಧ್ಯಯನದಿಂದ ನಿರ್ಮಾತೃಗಳ ಇತಿಹಾಸ ಮತ್ತು ಅವುಗಳ ಪೋಷಕರು ಯಾವ ಕಾರಣ ಮತ್ತು ಉದ್ದೇಶಗಳಿಗಾಗಿ ಅವುಗಳನ್ನು ರಚಿಸಿದರು ಎಂಬುದನ್ನು ತಿಳಿಯುವದರ ಜೊತೆಗೆ, ಶಿಲೆ, ಮಣ್ಣು, ಗಾರೆ, ಮರ, ಲೋಹ, ಗಾಜಿನ ಮಾಧ್ಯಮದಲ್ಲಿ ಭಿತ್ತಿಚಿತ್ರ ರಚನೆಗೊಂಡ ರೀತಿ, ಭಿತ್ತಿಸಿದ್ಧತಾ ವಿಧಾನ, ಚಿತ್ರರಚನೆ, ವರ್ಣಗಳ ತಯಾರಿಕೆ, ಚಿತ್ರರಚನಾ ಪರಿಕರಗಳು ಮುಂತಾದ ಚಿತ್ರಕಲಾ ಕ್ಷೇತ್ರದ ಹಲವಾರು ತಾಂತ್ರಿಕ ಅಂಶಗಳನ್ನು ತಿಳಿದುಕೊಳ್ಳಬಹುದಾಗಿದೆ. ಹಾಗೆಯೇ ಕಾಲಮಾನದ ಪ್ರಭಾವದಿಂದ, ವಿವಿಧ ರೀತಿಯ ವಿಪತ್ತುಗಳಿಂದ ನಾಶಹೊಂದುತ್ತಿರುವ ಭಿತ್ತಿಚಿತ್ರಗಳನ್ನು ಒಂದು ವ್ಯವಸ್ಥಿತ ಅಧ್ಯಯನಕ್ಕೊಳಪಡಿಸಿ ಅವುಗಳ ಮಹತ್ವವನ್ನು ಮನವರಿಕೆ ಮಾಡಿಕೊಡುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ.

ಸಂಸ್ಕೃತಿಯನ್ನು ಅರಿಯಲು ಇರುವ ಆಕರಗಳಲ್ಲಿ ಚಿತ್ರಕಲೆಗೆ ಒಂದು ವಿಶಿಷ್ಟವಾದ ಸ್ಥಾನವಿದೆ. ಆ ದಿಸೆಯಲ್ಲಿ ಚಿತ್ರಕಲೆಯ ಮುಖಾಂತರ ಮಾನವ ತನ್ನ ಸಂಸ್ಕೃತಿಯನ್ನು ಹೇಗೆ ವ್ಯಕ್ತಗೊಳಿಸಿದ್ದಾನೆ ಎಂಬುದು, ಅಥವಾ ಸಂಸ್ಕೃತಿಯ ಒಂದು ಭಾಗವೇ ಆಗಿರುವ ಚಿತ್ರಕಲೆ ಇತರ ಆಕರಗಳಿಗಿಂತ ಬೇರೆಯಾಗಿ ಇದು ನಮ್ಮ ಸಾಂಸ್ಕೃತಿಕ ಇತಿಹಾಸವನ್ನು ಪುನರ್ ರಚಿಸಲು ಹೇಗ ಸಹಾಯ ಮಾಡುತ್ತದೆ[1] ಎಂಬುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಬಹುದಾಗಿದೆ. ಭಿತ್ತಿಚಿತ್ರಕಲಾ ಪರಂಪರೆಯನ್ನು ನಮ್ಮ ಪೂರ್ವಜರು ಧರ್ಮಪ್ರಚಾರದ ಸಾಧನವಾಗಿ, ಸಮಾಜವನ್ನು ರೂಪಿಸುವಲ್ಲಿ,

---

೧. ಡಾ. ಎಸ್. ಸಿ. ಪಾಟೀಲ : ವರ್ಣ ಸಂಚಯ. ಪ್ರಸ್ತಾವನೆ. ಪುಟ - ೧

ಮನರಂಜನೆಗಾಗಿ. ವೈಯಕ್ತಿಕ ಭಾವನೆಗಳ ಕಲಾತ್ಮಕ ಅಭಿವ್ಯಕ್ತಿಗಾಗಿ, ರಾಜಕೀಯ ಉದ್ದೇಶಗಳಿಗಾಗಿ ಹೇಗೆ ಬಳಸಿಕೊಂಡರು ಎಂಬುದನ್ನು ನೋಡುವುದರ ಜೊತೆಗೆ, ಭಿತ್ತಿಚಿತ್ರಗಳ ಶೈಲಿ ಕಾಲದಿಂದ ಕಾಲಕ್ಕೆ ಬದಲಾದ ಅವುಗಳ ಬಳಕೆ, ಭಿತ್ತಿಚಿತ್ರಗಳ ತೌಲನಿಕ ಅಧ್ಯಯನದಿಂದ ಕಂಡುಬರುವ ಮಹತ್ವದ ಅಂಶಗಳು, ಅಲ್ಲದೆ ಚಿತ್ರ ರಚನೆಯ ಸಂದರ್ಭದಲ್ಲಿ ಅನುಸರಿಸಿರಬಹುದಾದ ತಾಂತ್ರಿಕತೆಯ ವಿಚಾರಗಳನ್ನು ತಿಳಿದುಕೊಳ್ಳಲು ಪ್ರಸ್ತುತ ಅಧ್ಯಯನ ತುಂಬ ಮಹತ್ವದ್ದಾಗಿದೆ.

ಕಲೆಗಳ ಅಧ್ಯಯನದಿಂದ ತಿಳಿಯುವ ಮಹತ್ವದ ವಿಷಯಗಳಲ್ಲಿ ಕೆಲವು ಸಲ ಯಾವುದೇ ಕಲೆಗಳ ಪ್ರದರ್ಶನ ಸಂದರ್ಭದ ಹಿಂದಿನ ಆಶಯಗಳಲ್ಲಿ ಕಲೆಗಳು ಆ ಭಾಗದ ಮೂಲ ಸಂಸ್ಕೃತಿಯೊಂದರ ಕಡೆಗೆ ಬೆರಳುಮಾಡುತ್ತ, ಇತಿಹಾಸದ ಹಲವು ಕಾಲಘಟ್ಟಗಳಲ್ಲಿ ನಡೆದಿರಬಹುದಾದ ಸಾಂಸ್ಕೃತಿಕ ಸಂಘರ್ಷಗಳ ಕಡೆಗೆ ನಮ್ಮ ಗಮನ ಸೆಳೆಯುತ್ತವೆ.[೨] ಅಲ್ಲದೆ ಸಾಂಸ್ಕೃತಿಕ ಇತಿಹಾಸದ ಸಂದರ್ಭದಲ್ಲಿ ಇವು ಮಹತ್ವದ ಆಕರಗಳಾಗುವ ಸಾಧ್ಯತೆಯಿದೆ. ಯಾವುದೇ ಒಂದು ಸಂಸ್ಕೃತಿ ತನ್ನ ಸಾಮಾಜಿಕ ಬದಲಾವಣೆಯಲ್ಲಿ ಅನೇಕ ಆಯಾಮಗಳನ್ನು ಪಡೆದು, ಹೊಸಹೊಸ ನೆಲೆಗಳನ್ನೂ ಕಂಡುಕೊಳ್ಳುತ್ತಲೇ, ಪರಂಪರೆಗೆ ವಿವಿಧ ಮುಖಗಳ ಬದಲಾವಣೆಯನ್ನೂ ಸೇರಿಸುತ್ತದೆ. ಕಲಾಪ್ರಕಾರಗಳು, ಅವುಗಳ ಅಭಿವ್ಯಕ್ತಿಯ ರೂಪಗಳು, ಇಲ್ಲಿ ಪುರಾವೆಗಳಾಗಿ ಉಳಿಯುತ್ತವೆ. ಹೀಗೆ ಉಳಿದು ಬಂದ ಭಿತ್ತಿಚಿತ್ರಗಳ ಅಧ್ಯಯನದಿಂದ ಅವು ರೂಪುಗೊಂಡ ಉದ್ದೇಶಗಳನ್ನು ಮತ್ತು ಸಾಮಾಜಿಕ ಬದಲಾವಣೆಯಲ್ಲಿ ವಹಿಸಿದ ಪಾತ್ರವನ್ನೂ ಕಂಡುಕೊಳ್ಳಬಹುದಾಗಿದೆ. ಅಂದರೆ 'ಧರ್ಮ, ದೇವರು, ಆರಾಧನೆ, ಪಂಥ, ಪಂಗಡ ಹಾಗೂ ಸಾಮಾಜಿಕ ಶ್ರೇಣೀಕರಣಗಳ ಸಂಕೀರ್ಣ ಬದುಕು ಹೇಗೆ ಈ ಕಲಾಜಗತ್ತಿನ ಮೇಲೆ ಪ್ರಭಾವ ಬೀರಿತು. ಆ ಮೂಲಕ ಕಲೆಗಳು ಕಂಡುಕೊಂಡ ಸ್ಥಾನಗಳೇನು ?' ಎಂಬಂತಹ ಪ್ರಶ್ನೆಗಳಿಗೆ ಉತ್ತರವನ್ನು ಹುಡುಕುವ ಪ್ರಯತ್ನವು ಈ ಅಧ್ಯಯನದಲ್ಲಿದೆ.

ಈ ನಾಡಿನ ಭಿತ್ತಿಚಿತ್ರ ಪರಂಪರೆಯಿಂದ ಕನ್ನಡಿಗರ ಕಲಾಭಿಮಾನ, ಧರ್ಮಾಭಿಮಾನದ ಹೆಜ್ಜೆಗಳನ್ನೂ ಗುರುತಿಸುವ, ಹಾಗೆಯೇ, ಕನ್ನಡಿಗರ ಸಾಂಸ್ಕೃತಿಕ ಜೀವನದ ಕಲಾತ್ಮಕ ಬದುಕನ್ನು ಕಂಡುಕೊಳ್ಳುವದರತ್ತ ಗಮನಹರಿಸುವುದಾಗಿದೆ. ನಮ್ಮ ಪ್ರಾಚೀನರ ಈ ಅಮೂಲ್ಯ ಸಾಂಸ್ಕೃತಿಕ ಸಂಪತ್ತು ದಿನದಿಂದ ದಿನಕ್ಕೆ ನಾಶವಾಗುತ್ತಿರುವ ಈ ಸಂದರ್ಭದಲ್ಲಿ ಇವುಗಳ ವ್ಯಾಪಕ ಅಧ್ಯಯನದ ಅವಶ್ಯಕತೆ ಇಂದು ತುಂಬಾ ಮಹತ್ವದ್ದಾಗಿದೆ. ಪ್ರತಿ ಮಾಡಿದ, ಫೋಟೋಗ್ರಾಫ್ ಮಾಡಿದ, ವಿಡಿಯೋ ಚಿತ್ರೀಕರಣದಿಂದ ಸೆರೆಹಿಡಿದ ಭಿತ್ತಿಚಿತ್ರಗಳ ದಾಖಲೆಗಳು, ಸಿಗಬಹುದಾದರೂ ಮೂಲ ಚಿತ್ರಗಳು ಒದಗಿಸುವ ಅನುಭವವೇ ಬೇರೆ. ಆ ದೃಷ್ಟಿಯಿಂದ ಮೂಲ ಚಿತ್ರಗಳನ್ನೇ ಆಕರಗಳನ್ನಾಗಿ ಮಾಡಿಕೊಂಡು ಅಭ್ಯಸಿಸುವಂತಹ ಅಧ್ಯಯನ ಒಂದರ ಅಗತ್ಯವಿತ್ತು. ಕರ್ನಾಟಕದುದ್ದಕ್ಕೂ ಹರಡಿಕೊಂಡಿರುವ ಭಿತ್ತಿಚಿತ್ರ ಪರಂಪರೆಯನ್ನು ಇಲ್ಲಿ ಉತ್ತರ ಕರ್ನಾಟಕದ ವ್ಯಾಪ್ತಿಗೆ ಸೀಮಿತಗೊಳಿಸಿಕೊಂಡು ವಿಶೇಷವಾಗಿ ಅಧ್ಯಯನ ಮಾಡಲಾಗಿದೆ. ಪೂರಕವಾಗಿ ಇತರೆಡೆಯ ಭಿತ್ತಿಚಿತ್ರಕಲೆಯನ್ನೂ ಅಲ್ಲಲ್ಲಿ ಸಂದರ್ಭೋಚಿತವಾಗಿ ಗಮನಿಸಲಾಗಿದೆ. ಪ್ರಾಗೈತಿಹಾಸಿಕ ಬರೆಸುಲು ಬಂಡೆ ಚಿತ್ರಗಳು, ಗುಹಾವರ್ಣ ಚಿತ್ರಗಳು ಉತ್ತರ ಕರ್ನಾಟಕದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಕಂಡುಬಂದಿವೆ.

---

೨. ಹಿ. ಚಿ. ಬೋರಲಿಂಗಯ್ಯ (ಸಂ.) : ಕರ್ನಾಟಕ ಕಲೆಗಳ ಕೋಶ. ಪುಟ - ೩

ಕಲ್ಲಾಸರೆಯ ಚಿತ್ರಗಳಿಂದಲೇ ಭಿತ್ತಿಚಿತ್ರಕಲೆಯ ಪ್ರಾರಂಭಿಕ ಹೆಜ್ಜೆಗಳನ್ನು ಗುರುತಿಸಿ, ಭಿತ್ತಿಚಿತ್ರ ಪರಂಪರೆಯ ವ್ಯವಸ್ಥಿತ ಬೆಳವಣಿಗೆಯನ್ನು ಇಲ್ಲಿ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

ಮಾತಿಗೆ ಮೊದಲು ಸಂಜ್ಞೆ, ಭಾಷೆಗೆ ಮೊದಲು ಚಿತ್ರಕಲೆ ಮಾನವನ ಸಂಪರ್ಕ ಸಾಧನವಾಗಿತ್ತು. ಆ ದೃಷ್ಟಿಯಿಂದ ಪ್ರಾಗೈತಿಹಾಸಿಕ ಕಾಲದ ಕಲ್ಲಾಸರೆಯ ವರ್ಣಚಿತ್ರಗಳು ಮತ್ತು ಬಯಲುಬಂಡೆಯ ಕೊರೆದ ಚಿತ್ರಗಳು ಮಾನವನ ತೀರ ಹಳೆಯ ಬರವಣಿಗೆಯ ದಾಖಲೆಗಳಾಗಿವೆ. " ಈ ದಾಖಲೆಗಳು ನಮಗೆ ಅವರ ವಿಚಾರಗಳು, ನಂಬಿಕೆಗಳು, ಮತ್ತು ಸೌಂದರ್ಯೋಪಾಸನೆಯ ಬೆಳವಣಿಗೆಯಂತಹ ಆಂತರಿಕ ವಿಷಯಗಳನ್ನು ತಿಳಿಸಿಕೊಡುತ್ತವೆ. ಅಲ್ಲದೇ ಆ ಕಾಲದ ಸಾಮಾಜಿಕ, ಧಾರ್ಮಿಕ ಜೀವನದ ಬಗ್ಗೆ ಹಾಗೂ ಸಮಕಾಲೀನ ಪ್ರಾಣಿವರ್ಗ ಸಸ್ಯವರ್ಗಗಳ ಕುರಿತು ತಿಳಿಸಿಕೊಡುವ ಮಹತ್ವದ ಚಿತ್ರಲಿಪಿಗಳಾಗಿವೆ. "[೩] ಎಂಬ ವಿಚಾರಗಳು ಹಾಗೆಯೇ " ಜೀವ ಸಂತತಿಯ ಐತಿಹಾಸಿಕ ಅಧ್ಯಯನ " ಗಳಂತಹ ಸಂದರ್ಭದಲ್ಲಿ ಅಸ್ಥಿಪಂಜರದಂತಹ ಅವಶೇಷಗಳು ಸಿಗದೇ ಹೋದಾಗ ಚಿತ್ರಗಳು ಮತ್ತು ಇವರ ಕಲಾಕೃತಿಗಳು ಕೆಲವು ಮಟ್ಟಿಗೆ ಆ ಕಾಲದ ಜೀವಿಗಳ ಇರುವಿಕೆಯ ಬಗ್ಗೆ ಮಹತ್ವದ ದಾಖಲೆಗಳಾಗುತ್ತವೆ[೪] ಎಂಬುದನ್ನು ಇಲ್ಲಿ ಕಂಡುಕೊಳ್ಳಬಹುದು. ನಾಗರಿಕತೆ ಬೆಳೆದಂತೆ ಭಿತ್ತಿಚಿತ್ರಕಲಾ ಪರಂಪರೆಯೂ ಜೊತೆಜೊತೆಗೇ ಬೆಳೆದುಬಂದಿದೆ. ಈ ದಿಸೆಯಲ್ಲಿ ಭಿತ್ತಿಚಿತ್ರ ಪರಂಪರೆಯನ್ನು ಗುರುತಿಸುವುದರೊಂದಿಗೆ ಒಂದು ರೀತಿಯಲ್ಲಿ ಮಾನವನ ನಾಗರಿಕತೆಯ ಹೆಜ್ಜೆಯನ್ನು ಗುರುತಿಸಿದಂತಾಗುತ್ತದೆ. ಯಾವುದೇ ಕಲೆ, ಕಲಾ ಪ್ರಕಾರಗಳು ನಿರ್ದಿಷ್ಟ ಜ್ಞಾನದ ಚೌಕಟ್ಟಿನಲ್ಲಿ ಹುಟ್ಟು ಹಾಕಲ್ಪಡುವದಿಲ್ಲ. ಸಾಂದರ್ಭಿಕ ಹಾಗೂ ಅನುಭವ ಅಭಿವ್ಯಕ್ತಿಯಿಂದ ಅವು ಬೆಳೆಯುತ್ತ ಬಂದಿವೆ. ಅಂದರೆ ಮಾನವನ ಸಾಂಸ್ಕೃತಿಕ ಇತಿಹಾಸದಲ್ಲಿ ಒಂದೇ ಉದ್ದೇಶಕ್ಕಾಗಿ ಕಲೆ ಹುಟ್ಟಿಕೊಂಡಿರದೇ ವಿವಿಧ ಕಾರಣಗಳಿಗಾಗಿ ಅದು ರೂಪುಗೊಂಡು ತನ್ನ ದಿಗಂತವನ್ನು ವಿಸ್ತರಿಸಿಕೊಂಡಿದೆ. ಹಲವು ಕುತೂಹಲಗಳನ್ನು ಹುಟ್ಟಿಸುವ ಕಲೆಗಳು ನಮ್ಮ ಸಂಸ್ಕೃತಿಯ ಅಧ್ಯಯನಕ್ಕೆ ಪ್ರಧಾನ ಆಕರಗಳಾಗಿವೆ.

ಕರ್ನಾಟಕದ ಇತಿಹಾಸವನ್ನು ಕಲೆಗಳ ದೃಷ್ಟಿಯಿಂದ ಪರಿಶೀಲಿಸಿದರೆ, ಅದರ ಭವ್ಯತೆ, ಸೌಂದರ್ಯ ಮತ್ತು ವೈವಿಧ್ಯತೆಗಳು ಎಂಥವರನ್ನೂ ಬೆರಗುಗೊಳಿಸುತ್ತವೆ. ಪ್ರಾಗೈತಿಹಾಸಿಕ ಕಾಲ, ಪೂರ್ವಭಾವಿ ಇತಿಹಾಸ ಕಾಲಗಳಲ್ಲೂ ಇಲ್ಲಿ ಕಲಾಚಟುವಟಿಕೆ ನಡೆದಿದೆ. ಐತಿಹಾಸಿಕ ಕಾಲವನ್ನು ನೋಡಿದಾಗ ಕದಂಬರಿಂದ ಮೈಸೂರು ಒಡೆಯರ ಕಾಲವವರೆಗೆ ಈ ನೆಲದಲ್ಲಿ ಭಿತ್ತಿಚಿತ್ರ ಪರಂಪರೆ ಬೆಳೆದುಬಂದಿದೆ. ದಕ್ಷಿಣ ಭಾರತ ರಾಜ್ಯಗಳಲ್ಲಿ ಕರ್ನಾಟಕವು ಹೆಚ್ಚು ಭಿತ್ತಿಚಿತ್ರ ನೆಲೆಗಳನ್ನು ಹೊಂದಿದ ರಾಜ್ಯವಾಗಿದೆ. ಕರ್ನಾಟಕದ ಭಿತ್ತಿಚಿತ್ರಗಳು ಸಂಖ್ಯೆಯಲ್ಲಿ ಹೆಚ್ಚಿವೆಯಷ್ಟೇ ಅಲ್ಲದೇ ಶೈಲಿ, ವಿನ್ಯಾಸ, ವಸ್ತುವಿಷಯಗಳಲ್ಲಿಯೂ ವೈವಿಧ್ಯತೆಯಿಂದ ಕೂಡಿವೆ. ಈ ವೈವಿಧ್ಯತೆಗೆ ಕಾರಣ ಕರ್ನಾಟಕದ ಸಾಂಸ್ಕೃತಿಕ ಪರಂಪರೆ ಮತ್ತು ಭೌಗೋಳಿಕ ಹಿನ್ನೆಲೆ ಕಾರಣವೆನ್ನಬಹುದು. ಉತ್ತರ ಕರ್ನಾಟಕದ ಬೀದರ್, ಗುಲಬರ್ಗಾ, ರಾಯಚೂರು, ಬಳ್ಳಾರಿ, ಕೊಪ್ಪಳ, ಬಾಗಲಕೋಟ್, ವಿಜಾಪೂರ, ಗದಗ, ಹಾವೇರಿ, ಧಾರವಾಡ, ಬೆಳಗಾಂವ, ಉತ್ತರ ಕನ್ನಡ ಜಿಲ್ಲೆಗಳ ವ್ಯಾಪ್ತಿಗೆ ಈ ಅಧ್ಯಯನ ಸೀಮಿತಗೊಂಡಿದೆ. ಸಾಂದರ್ಭಿಕವಾಗಿ, ಇತರೆಡೆಯ ಭಿತ್ತಿಚಿತ್ರಗಳನ್ನೂ ಗಮನಿಸಲಾಗಿದೆ.

---

೩. Yashodhar Mathpal : Pre Historic Rock Paintings of Bhimbetka, Page - 1

೪. Ibid., Page - 1

ವಿಜಯನಗರ ಕಾಲದಲ್ಲಿ ಭಿತ್ತಿಚಿತ್ರಕಲೆಯು ಹಂಪೆಯಲ್ಲಿ ಅಷ್ಟೇ ಅಲ್ಲದೇ ಆಂಧ್ರದ ಲೇಪಾಕ್ಷಿ. ಕಾಳಹಸ್ತಿ. ಸೋಮಾಪಲ್ಲಿ. ತಾಡಪತ್ರಿ. ಚಿಪ್ಪಗಿರಿ. ಪೆನುಗೊಂಡಗಳಲ್ಲಿ ಅಲ್ಲದೇ ತಮಿಳುನಾಡಿನ ಸುಮಾರು ಹದಿನಾಲ್ಕು ಸ್ಥಳಗಳಲ್ಲಿ ಕಂಡುಬರುತ್ತದೆ. ವಿಜಯನಗರ ಭಿತ್ತಿಚಿತ್ರಕಲೆಯು ವ್ಯಾಪಿಸಿದ ಹರವು ತುಂಬಾ ವಿಸ್ತಾರವಾಗಿದ್ದು ಅದೇ ಒಂದು ಪ್ರತ್ಯೇಕ ಅಧ್ಯಯನದ ವಿಷಯವಾಗಿದೆ. ಇಲ್ಲಿ ವಿಜಯನಗರದ ಭಿತ್ತಿಚಿತ್ರಗಳನ್ನು ಮಾತ್ರ ನಮ್ಮ ಅಧ್ಯಯನಕ್ಕೆ ಸೀಮಿತಗೊಳಿಸಿಕೊಂಡು ಅಧ್ಯಯನ ಮಾಡಲಾಗಿದೆ. ಈ ಹಿಂದಿನ ಸಾವಿರಾರು ವರ್ಷಗಳಲ್ಲಿ ಮನುಷ್ಯಕುಲ ವಿಕಸನದ ಹಲವು ಮಜಲುಗಳನ್ನು ಕಂಡಿರುವ ಕರ್ನಾಟಕವು ಐತಿಹಾಸಿಕವಾಗಿ ನಾನಾ ಧರ್ಮ, ಪರಂಪರೆಗಳ ಹುಟ್ಟಿಗೆ ಕಾರಣವಾಗಿದೆ. ಒಟ್ಟಾರೆ ಈ ಸಾಂಸ್ಕೃತಿಕ ಇತಿಹಾಸದ ವಿವಿಧ ಕಾಲಘಟ್ಟಗಳಲ್ಲಿ ರಚನೆಗೊಂಡ ಭಿತ್ತಿಚಿತ್ರಗಳು ಆಯಾ ಪ್ರದೇಶದ, ಜನ ಸಮುದಾಯದ ಆಶೋತ್ತರಗಳನ್ನು ಬಿಂಬಿಸುತ್ತವೆ. ಇಂತಹ ಅಧ್ಯಯನವೊಂದರ ಅಗತ್ಯತೆಯನ್ನು ಗಮನಿಸಿ ಈ ಅಧ್ಯಯನವನ್ನು ಕೈಕೊಳ್ಳಲಾಗಿದೆ.

## ಇದುವರೆಗೆ ನಡೆದ ಅಧ್ಯಯನ :

ಪ್ರಸ್ತುತ ಅಧ್ಯಯನಕ್ಕೆ ಹಿನ್ನೆಲೆಯಾಗಿ ಇಲ್ಲಿಯವರೆಗೆ ನಡೆದ ಅಧ್ಯಯನಗಳನ್ನು ಸ್ಥೂಲವಾಗಿ ಹೀಗೆ ಸಮೀಕ್ಷಿಸಬಹುದಾಗಿದೆ.

ಭಾರತದಲ್ಲಿ ೧೮೩೦ ರಲ್ಲಿ ಪ್ರಕಟವಾದ ರಾಮರಾಜ್ ಅವರ " ಎಸ್ಸೇ ಆನ್ ದಿ ಆರ್ಕಿಟೆಕ್ಚರ್ ಆಫ್ ದಿ ಹಿಂದೂಸ್ " [೫] ಎಂಬ ಗ್ರಂಥವು ವಾಸ್ತುಶಿಲ್ಪಕ್ಕೆ ಸಂಬಂಧಿಸಿದ ಕೃತಿಯಾಗಿದ್ದು ಮನೆ, ಅರಮನೆ, ದೇವಾಲಯ, ಚಿತ್ರಶಾಲೆ, ಮುಂತಾದ ಹಿಂದೂ ವಾಸ್ತುರಚನೆಗಳ ಸ್ವರೂಪ ಹೇಳುವಾಗ ಸಾಂದರ್ಭಿಕವಾಗಿ ಭಿತ್ತಿಚಿತ್ರಕಲೆಯನ್ನು ಪ್ರಸ್ತಾಪಿಸಿದ್ದಾರೆ. ೧೮೮೭ ರಲ್ಲಿ ಜೆ. ಗ್ರಿಫಿತ್ ಅವರು ' ಪೇಂಟಿಂಗ್ಸ್ ಆಫ್ ಅಜಂತಾ ' ಎಂಬ ಕೃತಿ ರಚಿಸಿದ್ದಾರೆ.[೬] ೧೯೦೮ ರಲ್ಲಿ ಇ. ಬಿ. ಹ್ಯಾವೆಲ್‌ರು [೭] ' ಇಂಡಿಯನ್ ಸ್ಕಲ್ಪಚರ್ ಆ್ಯಂಡ್ ಪೇಂಟಿಂಗ್ ' ಎಂಬ ಪುಸ್ತಕ ಪ್ರಕಟಿಸಿದ್ದಾರೆ. ಇವುಗಳಲ್ಲಿ ಭಿತ್ತಿಚಿತ್ರಗಳ ಕುರಿತು ವಿವರಣೆ ಮಾಡಲಾಗಿದೆ. ೧೯೧೦ ರಲ್ಲಿ ಆನಂದಕುಮಾರ ಸ್ವಾಮಿಯವರಿಂದ ' ಇಂಡಿಯನ್ ಡ್ರಾಯಿಂಗ್ ' [೮] ಕುರಿತು ಎರಡು ಸಂಪುಟಗಳು ಮತ್ತು ಇವರಿಂದಲೇ ೧೯೧೧ ರಲ್ಲಿ " ಸೆಲೆಕ್ಟೆಡ್ ಎಕ್ಸಾಂಪಲ್ಸ್ ಆಫ್ ಇಂಡಿಯನ್ ಆರ್ಟ್ " [೯] ಎಂಬ ಕೃತಿಗಳು ಬಂದಿವೆ. ಅಲ್ಲದೇ ೧೯೧೧ ರಲ್ಲಿ ವಿ. ಎ. ಸ್ಮಿತ್ ಅವರ ' ಎ ಹಿಸ್ಟರಿ ಆಫ್ ಫೈನ್ ಆರ್ಟ್ ಇನ್ ಇಂಡಿಯಾ ಆ್ಯಂಡ್ ಸಿಲೋನ್ '. ಎಂಬ ಗ್ರಂಥ [೧೦] ದಲ್ಲಿ ಭಿತ್ತಿಚಿತ್ರಗಳ ವಿಷಯ ಪ್ರಸ್ತಾಪಿತವಾಗಿದೆ. ೧೯೧೨ ರಲ್ಲಿ ಮಧುಸೂದನ ಮತ್ತು ಮಾಧವ ಪ್ರಸಾದ ಶರ್ಮಾ ಅವರು ವಿಷ್ಣುಧರ್ಮೋತ್ತರ ಮಹಾಪುರಾಣವನ್ನು ಸಂಪಾದಿಸಿದ್ದಾರೆ. [೧೧] ಇವರಲ್ಲಿ ಭಿತ್ತಿಚಿತ್ರಕಲೆಯ ಹಲವಾರು ಅಂಶಗಳು ಪ್ರಸ್ತಾಪಿಸಲ್ಪಟ್ಟಿವೆ. ೧೯೧೩ ರಲ್ಲಿ

---

೫. Ram Raj : Eassy on the architecture of the Hindu's, London.

೬. J. Griffiths: Paintings of Ajanta, Secretary of State for India.

೭. E. B. Havell : Indian Sculpture and Painting Murray.

೮. A. K. Coomaraswamy : Indian Drawings (Volumes), Oxford University Press.

೯. A. K.Coomaraswamy : Selected Examples of Indian Art, Oxford University Press.

೧೦. Vincent A. Smith : A History of Fine Art in India and Ceylon, Clarendon Press.

೧೧. Madhusudan and Madhav Prasad Sharma (Ed.) : Visnudharmottara Mahapurana, Venkateshwara Press, Bombay, 1910.

ಆನಂದಕುಮಾರ ಸ್ವಾಮಿಯವರು ' ಆರ್ಟ್ಸ್ ಆ್ಯಂಡ್ ಕ್ರಾಫ್ಟ್ಸ್ ಆಫ್ ಇಂಡಿಯಾ ಆ್ಯಂಡ್ ಸಿಲೋನ್ ' ಕೃತಿ ರಚಿಸಿದ್ದು [೧೨] ಅದರಲ್ಲಿಯೂ ಸಾಂದರ್ಭಿಕವಾಗಿ ಭಿತ್ತಿಚಿತ್ರಕಲೆ ಉಲ್ಲೇಖ ದೊರೆಯುತ್ತದೆ. ೧೯೧೫ ರಲ್ಲಿ ಲೇಡಿ ಹೆರಿಂಗ್‌ಹ್ಯಾಮ್ ಅವರು [೧೩] ಅಜಂತಾ ಭಿತ್ತಿಚಿತ್ರಗಳ ಭಿತ್ತಿಸಿದ್ಧತೆ. ಚಿತ್ರರಚನಾಕ್ರಮ. ವರ್ಣಸಂಯೋಜನೆಗಳ ಬಗ್ಗೆ ವಿವರಿಸಿದ್ದಾರೆ.

೧೯೧೭ ರಲ್ಲಿ ಪರ್ಸಿಬ್ರೌನರು [೧೪] ' ಇಂಡಿಯನ್ ಪೇಂಟಿಂಗ್ ' ಎಂಬ ಕೃತಿಯಲ್ಲಿ ಭಾರತದ ಪ್ರಾಗೈತಿಹಾಸಿಕ ಭಿತ್ತಿಚಿತ್ರ ಮತ್ತು ಬೌದ್ಧ ಸಂಪ್ರದಾಯದ ಭಿತ್ತಿಚಿತ್ರಗಳನ್ನು ಪರಿಚಯಿಸಿದ್ದಾರೆ. ೧೯೨೦ ರಲ್ಲಿ ಇ. ಬಿ. ಹ್ಯಾವೆಲ್ ಅವರು [೧೫] ಭಾರತೀಯ ಕಲೆಯ ಬಗ್ಗೆ ಕಿರುಪುಸ್ತಕ ರಚಿಸಿದ್ದು ಇಲ್ಲಿಯೂ ಭಿತ್ತಿಚಿತ್ರಗಳ ಸ್ಥೂಲ ವಿವರಣೆಯಿದೆ. ೧೯೨೧ ರಲ್ಲಿ ಬಿನಯನ್ ಅವರು [೧೬] ' ದಿ ಕೋರ್ಟ್ ಪೇಂಟರ ಆಫ್ ದಿ ಗ್ರ್ಯಾಂಡ್ ಮೊಗಲ್ಸ್' ಎಂಬ ಕೃತಿ ರಚಿಸಿದ್ದು ಅಲ್ಲಿ ಭಾರತೀಯ ಭಿತ್ತಿಚಿತ್ರಗಳ ಸ್ಥೂಲವಾದ ಪ್ರಸ್ತಾಪವಿದೆ. ೧೯೨೪ ರಲ್ಲಿ ಸ್ಟೆಲ್ಲಾಕ್ರಾಮ್ರಿಷ್ [೧೭] ವಿಷ್ಣುಧರ್ಮೋತ್ತರ ಪುರಾಣದ ' ಚಿತ್ರಸೂತ್ರ ' ಮತ್ತು ' ಪ್ರತಿಮಾಲಕ್ಷಣ ' ಭಾಗಗಳನ್ನು ಇಂಗ್ಲೀಷಿಗೆ ಭಾಷಾಂತರಿಸಿದ್ದಾರೆ. ಹಾಗೆಯೇ ೧೯೨೬ ರಲ್ಲಿ ಆನಂದಕುಮಾರ ಸ್ವಾಮಿಯವರು [೧೮] ಶಿಲ್ಪರತ್ನ ಗ್ರಂಥದ ' ಚಿತ್ರ ಲಕ್ಷಣ ' ಭಾಗವನ್ನು ಇಂಗ್ಲೀಷಿಗೆ ಭಾಷಾಂತರಿಸಿದ್ದಾರೆ. ಇವುಗಳಲ್ಲಿ ಆಯಾ ಮೂಲ ಗ್ರಂಥಗಳಲ್ಲಿ ಹೇಳಲಾದ ಭಿತ್ತಿಚಿತ್ರಕಲೆಯ ಅನೇಕ ವಿವರಗಳಿವೆ.

೧೯೨೬ ರಲ್ಲಿ ಎನ್. ಸಿ. ಮೆಹತಾ ಅವರ [೧೯] ' ಸ್ಟಡೀ ಇನ್ ಇಂಡಿಯನ್ ಪೇಂಟಿಂಗ್ ' ಓ. ಸಿ. ಗಂಗೂಲಿಯವರ [೨೦] ರಜಪೂತ್ ಪೇಂಟಿಂಗ್ ಕೃತಿಗಳು ಪ್ರಕಟವಾಗಿದ್ದು ಇವುಗಳಲ್ಲಿ ಭಿತ್ತಿಚಿತ್ರಗಳ ಉಲ್ಲೇಖಗಳಿವೆ. ೧೯೨೬ ರಲ್ಲಿ ಆರ್. ಶ್ಯಾಮಾಶಾಸ್ತ್ರಿ ಅವರ ' ಅಭಿಲಷಿತಾರ್ಥ ಚಿಂತಾಮಣಿ ' ಗ್ರಂಥದಲ್ಲಿ [೨೧] ಮೂಲದಲ್ಲಿರುವಂತೆ ಭಿತ್ತಿಚಿತ್ರಕಲೆಯ ತಾಂತ್ರಿಕ ಅಂಶಗಳಿರುವುದು ವಿಶೇಷವಾಗಿದೆ. ೧೯೨೭ ರಲ್ಲಿ ಆನಂದಕುಮಾರ ಸ್ವಾಮಿಯವರು [೨೨] ' ಹಿಸ್ಟರಿ ಆಫ್ ಇಂಡಿಯನ್ ಆ್ಯಂಡ ಇಂಡೋನೇಷಿಯನ್ ಆರ್ಟ್ ' ಕೃತಿಯಲ್ಲಿ ಭಾರತೀಯ ಮತ್ತು ಇಂಡೋನೇಷಿಯಾದ ಭಿತ್ತಿಚಿತ್ರಕಲಾ ಇತಿಹಾಸವನ್ನು ತೌಲನಿಕವಾಗಿ ಚರ್ಚಿಸಿದ್ದಾರೆ. ೧೯೨೭ ರಲ್ಲಿಯೇ ಜೆ. ಮಾರ್ಷಲ್, ಗಾರ್ಡೆ, ಜೆ. ಓಗೆಲ್. ಇ. ಬಿ. ಹ್ಯಾವೆಲ್. ಕಜಿನ್ಸ್ ಅವರುಗಳು ಕೂಡಿ [೨೩] ಗ್ವಾಲಿಯರ್ ಸಮೀಪ ಇರುವ ' ಬಾಗ್ ' ಗುಹೆಗಳ ಬಗ್ಗೆ ಪ್ರಕಟಿಸಿದ್ದು. ಅಲ್ಲಿರುವ ಭಿತ್ತಿಚಿತ್ರಗಳ ವಿಷಯ ಕುರಿತು ವಿವರ ನೀಡಿದ್ದಾರೆ.

---

೧೨. A. K. Coomaraswamy : Arts and Crafts of India and Ceylon, Foulis, 1913.
೧೩. Lady Herringham : Ajant Fresco, Oxford University Press, 1915.
೧೪. Percy Brown : Indian Painting, Y. M. C. A. Publishing House, 5 Russell Street, Calcutta, 1917.
೧೫. E. B. Havell : Hand Book of Indian Art, Murry.
೧೬. L. Binyon : The Court Painters of the Grand Moghuls, Oxford.
೧೭. Stella Kramrisch : ' The Visnudharmottaram ' – Part III, Calcutta.
೧೮. A. K. Coomaraswamy : ' Citralaksana ', Sir Asutosh Memorial Val, Patna.
೧೯. N. C. Mehta : ' Studies in Indian Painting ', Bombay.
೨೦. O. C. Gangoly : ' Rajput Painting ', Calcutta.
೨೧. R. Shama Sastri : Abhilashitartaha Chintamani, Vol. I, Mysore Sanskrit Series, Mysore.
೨೨. A. K. Coomaraswamy : History of Indian and Indonesian Art, London.
೨೩. Sir. J. Marshall, M. B. Garde, J. Vogel, E. B. Havell and J. H. Cousins : ' The Bagh Caves in the Gwalior State ', London.

೧೯೩೦ ರಿಂದ ೧೯೫೮ ರ ಅವಧಿಯಲ್ಲಿ ಜಿ. ಯಜದಾನಿ ಅವರು [೨೪] ' ಅಜಂತಾ ' ಕುರಿತು ನಾಲ್ಕು ಸಂಪುಟಗಳನ್ನು ಹೊರತಂದಿದ್ದು. ಅಜಂತಾ ಭಿತ್ತಿಚಿತ್ರಗಳ ವಿವರವಾದ ವಿಶ್ಲೇಷಣೆ ಇವುಗಳಲ್ಲಿದೆ. ೧೯೩೨ ರಲ್ಲಿ ಆನಂದಕುಮಾರ ಸ್ವಾಮಿಯವರು ' ವಿಷ್ಣುಧರ್ಮೋತ್ತರ ಪುರಾಣ ' ದ ೪೧ ನೇ ಅಧ್ಯಾಯವನ್ನು ಪ್ರಕಟಿಸಿದ್ದಾರೆ. [೨೫] ಕೆ. ಪಿ. ಜಯಸ್ವಾಲ್[೨೬] ಅವರು ಶಿಲ್ಪರತ್ನ ಗ್ರಂಥದ ' ಚಿತ್ರ ಲಕ್ಷಣ ' ಭಾಗವನ್ನು ಕುರಿತು ವಿಶ್ಲೇಷಣಾತ್ಮಕವಾದ ಟಿಪ್ಪಣಿ ಬರೆದಿದ್ದಾರೆ. ಇವುಗಳಲ್ಲಿ ಭಿತ್ತಿಚಿತ್ರಗಳ ರಚನಾಕ್ರಮಗಳು ಮತ್ತು ಚಿತ್ರ ಲಕ್ಷಣಗಳನ್ನು ಹೇಳಲಾಗಿದೆ.

೧೯೩೩ ರಲ್ಲಿ ವ್ಹಿ. ರಾಘವನ್ ಅವರು [೨೭] " ಸಮ್ ಸಂಸ್ಕೃತ್ ಟೆಕ್ಸ್ಟ ಆನ್ ಪೇಂಟಿಂಗ್ " ಎಂಬ ಗ್ರಂಥದಲ್ಲಿ ಭಿತ್ತಿ ಸಿದ್ಧತಾ ವಿಧಾನ. ಚಿತ್ರ ರಚನಾ ಕ್ರಮ. ವರ್ಣ. ಕುಂಚ. ಅಂಟುಮಾಧ್ಯಮ ಮುಂತಾದ ತಾಂತ್ರಿಕ ವಿಷಯಗಳ ಕುರಿತು ಚರ್ಚಿಸಿದ್ದಾರೆ. ೧೯೩೪ ರಲ್ಲಿ ಆನಂದಕುಮಾರ ಸ್ವಾಮಿಯವರು [೨೮] ' ಮಾನಸೋಲ್ಲಾಸ ' (ಅಭಿಲಷಿತಾರ್ಥ ಚಿಂತಾಮಣಿ) ಕೃತಿಯನ್ನು ಇಂಗ್ಲೀಷಿಗೆ ಭಾಷಾಂತರಿಸಿದರಲ್ಲದೇ ಅದರ ಮೇಲೆ ಟಿಪ್ಪಣಿಯನ್ನೂ ಬರೆದಿದ್ದಾರೆ. ಇಲ್ಲಿ ಭಿತ್ತಿ ಸಿದ್ಧತಾ ವಿಧಾನ. ಚಿತ್ರ ರಚನಾ ಹಂತ. ಅಲ್ಲದೇ ಅಂಟುಮಾಧ್ಯಮ ಮುಂತಾದ ತಾಂತ್ರಿಕ ಅಂಶಗಳ ಚರ್ಚೆ ಇದೆ.

೧೯೩೭ ರಲ್ಲಿ ಪ್ರಕಟವಾದ ಸ್ಟೆಲ್ಲಾಕ್ರಾಮ್ರಿಷ್ ಅವರ [೨೯] ' ಸರ್ವೇ ಆಫ್ ಪೇಂಟಿಂಗ್ ಇನ್ ದಿ ಡೆಕ್ಕನ್ ', ೧೯೩೮ ರಲ್ಲಿ ಪ್ರಕಟವಾದ ಜೆ. ಖಂಡಲವಾಲ್ [೩೦] ಅವರ ' ಇಂಡಿಯನ್ ಸ್ಕಲ್ಪ್‌ಚರ್ ಆ್ಯಂಡ್ ಪೇಂಟಿಂಗ್ ' ಕೃತಿಗಳಲ್ಲಿ ಭಿತ್ತಿಚಿತ್ರಗಳ ಕುರಿತಾಗಿ ವಿವರಗಳು ದೊರೆಯುತ್ತವೆ. ೧೯೪೮ ರಲ್ಲಿ ಪೊಡವಾಲ್ ಮತ್ತು ಕಸಿನ್ಸ್ ಅವರ [೩೧] ' ಆರ್ಟ್ಸ್ ಆ್ಯಂಡ್ ಕ್ರಾಫ್ಟ್ಸ ಆಫ್ ತ್ರಾವಣಕೋರ್ ' ಮತ್ತು ೧೯೬೨ ರಲ್ಲಿ ಜಿ. ಯಜದಾನಿ ಅವರ [೩೨] ' ದಿ ಅರ್ಲಿ ಹಿಸ್ಟರಿ ಆಫ್ ದಿ ಡೆಕ್ಕನ್ ' ಕೃತಿಗಳಲ್ಲಿ ಸಾಂದರ್ಭಿಕವಾಗಿ ಭಿತ್ತಿಚಿತ್ರಗಳ ವಿವರಗಳು ದೊರೆಯುತ್ತವೆ. ೧೯೫೮ ರಲ್ಲಿ ಪ್ರಿಯಬಾಲಾ ಶಹಾ ಅವರು [೩೩] ವಿಷ್ಣುಧರ್ಮೋತ್ತರ ಪುರಾಣವನ್ನು ಮೂಲ ಮತ್ತು ಅನುವಾದ ಹೀಗೆ ಎರಡು ಸಂಪುಟಗಳಲ್ಲಿ ಪ್ರಕಟಿಸಿದರು. ಮೊದಲ ಸಂಪುಟ ಮೂಲ ಕೃತಿಯಾಗಿದ್ದರೆ. ಎರಡನೆಯ ಸಂಪುಟ ಅನುವಾದವಾಗಿದೆ. ೧೯೬೫ ರಲ್ಲಿ ಪ್ರಕಟವಾದ ಮದನ ಜೀತ್ ಸಿಂಗ್ ಅವರ [೩೪] ' ದಿ ಕೇವ್ ಪೇಂಟಿಂಗ್ಸ್ ಆಫ್ ಅಜಂತಾ ', ೧೯೬೯ ರಲ್ಲಿ ಪ್ರಕಟವಾದ ಎ. ಗೋಪಾಲರಾವ್ ಅವರ [೩೫] ಲೇಪಾಕ್ಷಿ ಕೃತಿಗಳಲ್ಲಿ ಭಿತ್ತಿಚಿತ್ರಗಳ ವಸ್ತುವಿಷಯ ಕುರಿತಾಗಿ ವಿವರಿಸಲಾಗಿದೆ.

---

೨೪. G. Yazdani : Ajanta (4 Vols.), Oxford.

೨೫. A. K. Coomaraswamy : The Visnudharmottara, Chapter 41, JAOS, Vol. 52.

೨೬. K. P. Jayaswal : ' A Hindu Text on Painting ', JBORS, Vol. IX, Patna.

೨೭. V. Raghavan : ' Some Sanskrit Texts on Painting ', IHQ, Vol. IX, Haraprasad Memorial Volume, Calcutta.

೨೮. A. K. Coomaraswamy : ' The Technique and Theory of Indian Painting, Technical Studies, Vol. III, No. 2, Fogg Art Museum, U.S.A.

೨೯. Stella Kramrisch : ' Survey of Painting in the Deccan ', London.

೩೦. J. Karl, Khandalavala : Indian Sculpture and Painting, Bombay.

೩೧. R. V. Poduval and J. H. Cousins : Arts and Crafts of Travancore, London.

೩೨. G. Yazdani : The Early History of the Deccan, Fine Arts, Oxford.

೩೩. Priyabala Shah (Edt.) : ' The Visnudharmottaram Purana ', Vol. I (text) and Vol. II (trans.), Gaekwada's Oriental Series, Baroda.

೩೪. Madanjeet Singh : ' The Cave Paintings of Ajanta ', London.

೩೫. Amancherla Gopal Rao : Lepakshi, Delhi.

೧೯೭೧ ರಲ್ಲಿ ಪ್ರಕಟವಾದ ಕೆ. ಆರ್. ಶ್ರೀನಿವಾಸನ್ ಅವರ [೩೬] ' ಟೆಂಪಲ್ಸ್ ಆಫ್ ಸೌತ್ ಇಂಡಿಯಾ ' ಕೃತಿಯಲ್ಲಿ ದಕ್ಷಿಣ ಭಾರತದ ಕೆಲವು ದೇವಾಲಯಗಳಲ್ಲಿ ರಚನೆಯಾದ ಭಿತ್ತಿಚಿತ್ರಗಳ ಮಾಹಿತಿಯನ್ನು ಕೊಡುತ್ತಾರೆ. ೧೯೭೪ ರಲ್ಲಿ ಶ್ರೀಕುಮಾರನ ' ಚಿತ್ರಲಕ್ಷಣ ' ಗ್ರಂಥವನ್ನು ಅಶೋಕ ಭಟ್ಟಾಚಾರ್ಯ ಅವರು [೩೭] ಸಂಪಾದಿಸಿದ್ದು ಅದರಲ್ಲಿ ಚಿತ್ರಕಲೆಯ ವಿವರಗಳು ಬರುತ್ತವೆ. ೧೯೭೬ ರಲ್ಲಿ ಬಿ. ಎನ್. ಗೋಸ್ವಾಮಿ ಮತ್ತು ಎ. ಆಯ್. ಧಮೆನ್ ಅವರ [೩೮] ' ಆ್ಯನ್ ಅರ್ಲಿ ಡಾಕ್ಯುಮೆಂಟ್ ಆಫ್ ಇಂಡಿಯನ್ ಆರ್ಟ ' ಕೃತಿಯಲ್ಲಿ ಭಾರತೀಯ ಪ್ರಾಚೀನ ಚಿತ್ರಕಲೆಯ ಉಲ್ಲೇಖಗಳನ್ನು ಚರ್ಚಿಸಲಾಗಿದೆ.

೧೯೭೬ ರಲ್ಲಿ ಆರ್. ನಾಥ ಅವರ [೩೯] ' ಹಿಸ್ಟರಿ ಆಫ್ ಡೆಕೊರೇಟಿವ್ ಆರ್ಟ ಇನ್ ಮೊಗಲ್ ಆರ್ಕಿಟೆಕ್ಚರ್ ' ಕೃತಿಯಲ್ಲಿ ಮೊಗಲ್ ಕಟ್ಟಡಗಳಲ್ಲಿನ ವರ್ಣಭಿತ್ತಿಚಿತ್ರಗಳ ಕುರಿತು ಚರ್ಚಿಸಲಾಗಿದೆ. ೧೯೭೬ ರಲ್ಲಿ ಎ. ಕೆ. ಭಟ್ಟಾಚಾರ್ಯ ಅವರ [೪೦] ' ಟೆಕ್ನಿಕ್ ಆಫ್ ಇಂಡಿಯನ್ ಪೇಂಟಿಂಗ್ ' ೧೯೮೦ ರಲ್ಲಿ ಜಯಂತ್ ಚಕ್ರವರ್ತಿ ಅವರ [೪೧] ' ಟೆಕ್ನಿಕ್ಸ್ ಇನ್ ಇಂಡಿಯನ್ ಮ್ಯುರಲ್ ಪೇಂಟಿಂಗ್ ' ಕೃತಿಗಳಲ್ಲಿ ಭಾರತೀಯ ಭಿತ್ತಿಚಿತ್ರಕಲೆಯ ತಯಾರಿಕೆ ಅವುಗಳ ಬಳಕೆ, ಮುಂತಾದ ಚಿತ್ರರಚನಾ ತಾಂತ್ರಿಕ ಅಂಶಗಳ ಬಗ್ಗೆ ಪ್ರಾಚೀನ ಶಿಲ್ಪಶಾಸ್ತ್ರಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ೧೯೮೦ ರಲ್ಲಿ ಪ್ರಕಟಗೊಂಡ ಜಯ ಅಪ್ಪಸಾಮಿ ಅವರ [೪೨] ' ತಂಜಾವೂರು ಪೇಂಟಿಂಗ್ಸ್ ಆಫ್ ಮರಾಠಾ ಪಿರೇಡ್ ', ೧೯೮೦ ರಲ್ಲಿ ಹೆಚ್. ಹೆರಾಸ್ ಅವರ [೪೩] ' ಸೌತ್ ಇಂಡಿಯಾ ಅಂಡರ್ ದಿ ವಿಜಯನಗರ ಎಂಪಾಯರ್ ' ಕೃತಿಗಳಲ್ಲಿ ಭಿತ್ತಿಚಿತ್ರಗಳ ವಿವರಗಳು ದೊರೆಯುತ್ತವೆ.

೧೯೮೨ ರಲ್ಲಿ ಬಾಳಾಸಾಹೇಬ ಪಂತ್ ಅವರ [೪೪] ' ಅಜಂತಾ ' ಕೃತಿ ಅಜಂತಾ ಭಿತ್ತಿಚಿತ್ರಗಳ ವಿವರಗಳನ್ನು ಒಳಗೊಂಡಿದೆ. ೧೯೮೨ ರಲ್ಲಿ ಪುರಾತತ್ವ ಇಲಾಖೆಯ ' ಮಾಂಡು ' ಬಗೆಗೆ ಕೈಪಿಡಿ ಪುಸ್ತಕವನ್ನು ಪ್ರಕಾಶಿಸಿದ್ದು ಅದರಲ್ಲಿ ಅಲ್ಲಿನ ಪ್ರಾಚೀನ ಕಟ್ಟಡಗಳ ವರ್ಣಮಯ ನಕ್ಷೆಗಳನ್ನು ಪ್ರಸ್ತಾಪಿಸಲಾಗಿದೆ. [೪೫] ಮಾರ್ಕ ಜಬ್ರೋವೆಸ್ಕಿ ಅವರ [೪೬] ' ಡೆಕ್ಕನೀ ಪೇಂಟಿಂಗ್ಸ್ ' ಕೃತಿಗಳಲ್ಲಿ ಸಾಂದರ್ಭಿಕವಾಗಿ ಭಿತ್ತಿಚಿತ್ರಗಳ ಉಲ್ಲೇಖಗಳು ಬಂದಿವೆ. ೧೯೮೭ ರಲ್ಲಿ ಜೆ. ಸಿ. ನಾಗಪಾಲ್ ಅವರು [೪೭] ' ಮ್ಯುರಲ್ ಪೇಂಟಿಂಗ್ಸ್ ಇನ್ ಇಂಡಿಯಾ ' ಕೃತಿಯಲ್ಲಿ ಭಾರತದ ವಿವಿಧ ರಾಜ್ಯಗಳ ಭಿತ್ತಿಚಿತ್ರಗಳ ನೆಲೆಗಳ ಕುರಿತು, ಚಿತ್ರಗಳ ಸಧ್ಯದ ಪರಿಸ್ಥಿತಿ, ರಚನೆಯಾದ ಕಾಲಮಾನ, ಬಳಕೆಗೊಂಡ ವರ್ಣ ಮುಂತಾದ

---

೩೬. K. R. Srinivasan : ' Temples of South India ', Dehli.
೩೭. Ashok K. Bhattacharya (Ed.) : Srikumara Citralaksana, Calcutta.
೩೮. B. N. Goswamy : A. I. Dahmen Dallapiccola : An Early Document of Indian Art, Delhi.
೩೯. R. Nath : ' Histoty of Decorative Art in Mughal Architecture ', Delhi.
೪೦. A. K. Bhattacharya : Technique of Indian Painting, Calcutta.
೪೧. Jayanth Chakravarthi : ' Techniques in Indian Mural Paintings ', K. P. Bagachi & Company, Calcutta.
೪೨. Jaya Appasamy : ' Tanjavur Paintings of Maratha Period ', New Dehli.
೪೩. H. Heras : ' South India Under the Vijayanagar Empire ', Vol. II.
೪೪. Balasaheb Pant : ' Ajanta ', Bombay.
೪೫. Mandu : A. S. I., Dehli.
೪೬. Mark Zebrowski : ' Deccani Painting ', London.
೪೭. J. C. Nagapal : ' Mural Paintings in India ', Gain Publication, Delhi.

ವಿಷಯಗಳ ಬಗೆಗೆ ಮಾಹಿತಿ ನೀಡಿದ್ದಾರೆ. ೧೯೭೨ ರಲ್ಲಿ ಎಡಿಟ್ ಟಮೊರಿ ಅವರ[೪೮] ' ಎ ಹಿಸ್ಟರಿ ಆಫ್ ಫೈನ್ ಆರ್ಟ್ಸ್ ಇನ್ ಇಂಡಿಯಾ ಆ್ಯಂಡ ವೆಸ್ಟ್ ' ೧೯೬೮ ರಲ್ಲಿ ಸಿ. ಶಿವರಾಮಮೂರ್ತಿ ಅವರ ಸೌತ್ ಇಂಡಿಯನ್ ಪೇಂಟಿಂಗ್ಸ್[೪೯] ಹಾಗೂ ೧೯೭೦ ರಲ್ಲಿ ಇಂಡಿಯನ್ ಪೇಂಟಿಂಗ್ಸ್[೫೦] ಕೃತಿಗಳು ಪ್ರಮುಖವಾಗಿ ಭಿತ್ತಿಚಿತ್ರಕಲೆಯ ಕುರಿತಾದ ಮಾಹಿತಿ ಕೊಡುತ್ತವೆ. ಇವುಗಳಲ್ಲದೇ ' ಆರ್ಟ ಆ್ಯಂಡ್ ಕ್ರಾಫ್ಟ್ ಆಫ್ ಇಂಡಿಯಾ '[೫೧] ದಿ ಆರ್ಟ ಆ್ಯಂಡ್ ಆರ್ಕಿಟೆಕ್ಚರ್ ಆಫ ಇಂಡಿಯನ್ ಸಬ್‌ಕಾಂಟಿನೆಂಟ್[೫೨]. ಇಂಡಿಯನ್ ಆರ್ಟ[೫೩]. ಮುಂತಾದ ಕೃತಿಗಳಲ್ಲಿ ಸಾಂದರ್ಭಿಕವಾಗಿ ಭಾರತೀಯ ಭಿತ್ತಿಚಿತ್ರಕಲೆಯ ವಿವರಗಳು ಕಂಡುಬರುತ್ತವೆ. ಈ ಪುಸ್ತಕಗಳಲ್ಲದೇ ಹಲವು ಲೇಖನಗಳೂ ಭಿತ್ತಿಚಿತ್ರಕಲೆಯ ವಿಷಯವಾಗಿ ವಿವರಗಳನ್ನು ಕೊಡುತ್ತಿದ್ದು ಅವುಗಳಿಗೆ ಸಂಬಂಧಿಸಿದ ಲೇಖನಗಳನ್ನು ಇಲ್ಲಿ ಹೆಸರಿಸಿದೆ.

೧೯೧೩ ರಲ್ಲಿ ಸಮರೇಂದ್ರನಾಥ ಗುಪ್ತ[೫೪]. ೧೯೧೮ ರಲ್ಲಿ ಗೋಪಿನಾಥರಾವ್ [೫೫]. ೧೯೩೧ ರಲ್ಲಿ ಕೆ. ವಿ. ರಾಮಚಂದ್ರನ್ ಅವರ[೫೬] ಲೇಖನಗಳು ಭಿತ್ತಿಚಿತ್ರಕಲೆಯ ಬಗ್ಗೆಯೇ ಇವೆ. ಸಿ. ಶಿವರಾಮಮೂರ್ತಿಯವರ ಎರಡು ಲೇಖನಗಳು ೧೯೩೨ ರಲ್ಲಿ[೫೭]. ಮೂರು ಲೇಖನಗಳು ೧೯೩೩[೫೮] ರಲ್ಲಿ ಪ್ರಕಟವಾಗಿದ್ದು, ಭಿತ್ತಿಚಿತ್ರಕಲೆಯ ವಿಷಯ ತಿಳಿಸಿಕೊಡುತ್ತವೆ. ೧೯೩೪ ರಲ್ಲಿ ಎಸ್. ಕೆ. ಗೋವಿಂದಸ್ವಾಮಿ[೫೯]. ಟಿ. ಎನ್. ರಾಮಚಂದ್ರನ್[೬೦] ಅವರ ಒಂದೊಂದು ಲೇಖನಗಳಿದ್ದರೆ. ಸಿ. ಶಿವರಾಮ ಮೂರ್ತಿ ಯವರ ಐದು ಲೇಖನಗಳು[೬೧] ೧೯೩೪ ರಲ್ಲೇ ಬಂದಿದ್ದು ಇವುಗಳೆಲ್ಲ

---

೪೮. Edith Tomory : ' A History of Fine Arts in India and West ', Orient Longman Limited, Madras.
೪೯. C. Sivaramamurti : South Indian Paintings, National Museum, Dehli
೫೦. C. Sivaramamurti : Indian Painting, National Book Trust, India, New Dehli.
೫೧. Watts Brown : ' Art and Craft of India ',Cosmo Publication.
೫೨. J. C. Harle : ' The Art and Architecture of Indian Subcontinent ', Penguin Group.
೫೩. Roy C. Craven : ' Indian Art ', World of Art Series.
೫೪. Modern Review : December 1913, The Classic Art of Ajanta, Samarendranath Gupta.
೫೫. Modern Review : December, 1918, Vol. XXIV, Painting in Ancient India, Gopinath Rao.
೫೬. Triveni : IV, Madras, 1931, Paintings from Tiruvanjikulam, K. V. Ramachandran.
೫೭. i) Triveni : V, Madras, 1932, Fresco Painting in Sivatatvaratnakara, C. Sivaramamurti.
ii) Triveni : VI, Madras, 1932, Some Frescos of the Cholas, C. Sivaramamurti.
೫೮. i) Journal of Orient Research : VI, Madras, 1933, Painting and Allied Arts as Revealed in Bana's Works, C, Sivaramamurti.
ii) Journal of Orient Research : VI, Madras, 1933, Sri Harsha's Observations on Painting with Special Reference to Naishadhiya Charita, C. Sivaramamurti
iii) Journal of Oriental Research : VII, Madras, 1933, Kalidas and Painting, C. Sivaramamurti.
೫೯. J. I. S. O. A. : 1934, Discovery of Cholapaintings in the Brihadisvara Temple, Tanjore, S. K. Govindaswamy.
೬೦. Journal of Oriental Research : Madras, 1934, The Royal Artist of Mahendravarman, T. N. Ramachandram.
೬೧. i) Triveni : VII, 1934, Chitrasalas, Ancient Indian Art Galleries, C. Sivaramamurti.
ii) Journal of Oriental Research : VII, Madras, 1934, Artist's Jatting from the Nalachampu of Trivikrama, C. Sivaramamurti.
iii) Journal of Oriental Research : VIII, Madras, 1934, The Artist in Ancient India, C. Sivaramamurti.
iv) J. I. S. O. A. : Calcutta, 1934, Sanskrit Sayings Based on Paintings, C. Sivaramamurti.
v) Journal of Oriental Research : Madras, 1934, Conventions in the Art of Painting, C. Sivaramamurti.

ಭಿತ್ತಿಚಿತ್ರಗಳ ಕುರಿತಾಗಿ ಸಾಂದರ್ಭಿಕ ವಿವರಗಳನ್ನು ಕೊಡುತ್ತವೆ. ಸಿ. ಶಿವರಾಮಮೂರ್ತಿಯವರ ಮತ್ತೊಂದು ಲೇಖನ ೧೯೩೫ ರಲ್ಲಿ [೬೨] ಬಂದಿದೆ. ೧೯೩೫ ರಲ್ಲಿಯೇ ವ್ಹಿ. ರಾಘವನ್ [೬೩] ಮತ್ತು ಅನುಜನ್ ಅಚನ್ [೬೪] ಅವರ ಲೇಖನಗಳೂ ಪ್ರಕಟವಾಗಿವೆ.

೧೯೩೬ ರಲ್ಲಿ ಸಿ. ಶಿವರಾಮಮೂರ್ತಿ [೬೫] ಮತ್ತು ಅನುಜನ್ ಅಚನ್ [೬೬] ಅವರ ಲೇಖನಗಳು ಬಂದಿವೆ. ಹಾಗೆಯೇ ೧೯೩೭ ರಲ್ಲಿ ಸಿ. ಶಿವರಾಮಮೂರ್ತಿ [೬೭]. ಆರ್. ವಿ. ಪೊಡವಾಲ್ [೬೮] ಮತ್ತು ಸ್ಟೆಲ್ಲಾಕ್ರಾಮ್ರಿಷ್ [೬೯]. ೧೯೩೯ ರಲ್ಲಿ ಟಿ. ಜಿ. ಅರವಮುತ್ತನ್ [೭೦]. ೧೯೫೨ ರಲ್ಲಿ ಜಿ. ಗೋಯೇತ್ [೭೧]. ೧೯೫೭ ರಲ್ಲಿ ಓ. ಸಿ. ಗಂಗೂಲಿ [೭೨] ಅವರ ಲೇಖನಗಳು ಪ್ರಕಾಶಿತಗೊಂಡಿವೆ. ೧೯೫೯ ರಲ್ಲಿ ಸಿ. ಶಿವರಾಮಮೂರ್ತಿ [೭೩], ೧೯೬೧ ರಲ್ಲಿ ಟಿ. ಎನ್. ರಾಮಚಂದ್ರನ್ [೭೪], ೧೯೭೧ ರಲ್ಲಿ ಅನಿಲ್ ಡಿಸಿಲ್ವಾ [೭೫]. ೧೯೮೩ ರಲ್ಲಿ ಲೀಲಾ ಗಣಪತಿ ಅವರ [೭೬] ಲೇಖನಗಳಿದ್ದು ಅವುಗಳೂ ಸಹಿತ ಭಿತ್ತಿಚಿತ್ರಕಲೆಯ ವಿವರಗಳನ್ನು ಕೊಡುತ್ತವೆ. ಈ ಲೇಖನಗಳಲ್ಲಿ ಕೆಲವು ಲೇಖನಗಳು ಭಿತ್ತಿಚಿತ್ರಗಳ ಕುರಿತಾಗಿಯೇ ಇದ್ದರೆ. ಇನ್ನು ಕೆಲವು ಸಾಂದರ್ಭಿಕವಾಗಿ ಭಿತ್ತಿಚಿತ್ರಕಲೆಯ ಬಗ್ಗೆ ಹೇಳುತ್ತವೆ. ಸಿ. ಶಿವರಾಮಮೂರ್ತಿ ಯವರ ಒಂದು ಲೇಖನ ವಿಜಯನಗರ ಆರನೇ ಶತಮಾನೋತ್ಸವ ಸಂಚಿಕೆಯಲ್ಲಿ [೭೭], ಮತ್ತೊಂದು ಡಾ|| ಕೃಷ್ಣಸ್ವಾಮಿ ಅಯ್ಯಂಗಾರ್ ನೆನಪಿನ ಸಂಚಿಕೆಯಲ್ಲಿದೆ [೭೮].

ಈ ಪುಸ್ತಕಗಳು. ಲೇಖನಗಳು. ಸ್ಮರಣ ಸಂಚಿಕೆಗಳಲ್ಲದೇ ಪುರಾತತ್ವ ಇಲಾಖೆಯ ವಾರ್ಷಿಕ ವರದಿ. ವಿಶೇಷ ಸಂಚಿಕೆ. ಮೊನೋಗ್ರಾಫ್ ಹಾಗೂ ಕಿರುಪುಸ್ತಕ ಮತ್ತು ಇಲಾಖೆಯಿಂದ ಬಿಡುಗಡೆಗೊಳಿಸಲಾದ ಭಿತ್ತಿಚಿತ್ರಗಳ

---

೬೨. Journal of Oriental Research : II, Calcutta, 1935, ' Artist's Materials ', C. Sivaramamurti.

೬೩. J. I. S. O. A. : Vol. III, Calcutta, 1935, Two Chapters on Painting in the Naradasilpasastra, V. Raghavan.

೬೪. J. I. S. O. A. : Vol. IV, Calcutta, 1935, The Marriage Scene of Uma as Depicted on the walls of the Mattancheri Palace, Anujan Achan.

೬೫. J. I. S. O. A. : IV, 1936, Note on the Paintings at Tirumalaipuram, C. Sivaramamurti.

೬೬. J. I. S. O. A. : IV, 1936, Two Scences from the Ramayana Paintings on the Walls of the Mattancheri Palace, Anujan Achan.

೬೭. J. I. S. O. A. : V, 1937, Calcutta, Paintings from Lepakshi, C. Sivaramamurti.

೬೮. J. I. S. O. A. : V, 1937, Calcutta, Note on Paintings and Sculptures in Travanacore, R. V. Podval.

೬೯. J. I. S. O. A. : V, 1937, Calcutta, Dakshinachitra, Stella Kramrisch.

೭೦. Journal of Oriental Research : XIII, 1939, Madras, A Fragment of an Ancient Painting in Deccan, T. G. Aravamuthan.

೭೧. Artibus Asiae : XV, 1952, Ascona, The Kailasa of Ellora, and the Chronology of Rashtrakuta Art, H. Goetz.

೭೨. March of India : May 1957, Pages 8, Art in the Service of History, O. C. Gongoly.

೭೩. Lalita Kala : 1959, New Dehli, Early Western Chalukya Paintings from Badami, C. Sivaramamurti.

೭೪. Lalita Kala : IX, New Delhi, 1961, Sittannavasal Paintings, T. N. Ramachandran.

೭೫. Times of India Annual : 1971, page 66, Indian influence in the art of Tun-Huang, Anil-de-silva.

೭೬. Nuan - Kalai : July - Dec. 1983, The Artist and his Patron through the ages, Leela Ganapati.

೭೭. Vijayanagara Sexcentenary Commemoration Vol. : Dharwad, 1936, Vijayanagara Paintings from Lepakshi, C. Sivaramamurti.

೭೮. Dr. S. Krishnaswamy Aiyanger Commemoration Volume : Madras, 1936, Art Titbits from Ratnakara's Haravijaya, C. Sivaramamurti.

ವರ್ಣರಂಜಿತ ಕಾರ್ಡುಗಳಿಂದಲೂ ಭಿತ್ತಿಚಿತ್ರಕಲೆಯ ಬಗೆಗೆ ಮಾಹಿತಿ ದೊರೆಯುತ್ತದೆ. ೧೯೨೦-೨೧ [೨೯]. ೧೯೨೭-೨೮ [೩೦] ರ ವಾರ್ಷಿಕ ವರದಿಗಳು ಆಯಾ ಸ್ಥಳದ ಭಿತ್ತಿಚಿತ್ರಗಳ ವಿವರ ನೀಡುತ್ತವೆ. ಪುರಾತತ್ವ ಇಲಾಖೆಯ ಪುಸ್ತಕಗಳಲ್ಲಿ ಕೆ. ಆರ್. ಶ್ರೀನಿವಾಸನ್ [೩೧]. ಎ. ಘೋಷ್ [೩೨], ಎಚ್. ಸರಕಾರ [೩೩], ಕೆ. ವಿ. ಸೌಂದರ್ಯರಾಜನ್ [೩೪], ಜೆ. ಬರ್ಜೆಸ್ [೩೫], ಅಲೆಕ್ಸಾಂಡರ್ ರಿಯಾ [೩೬] ಮತ್ತು ಇತ್ತೀಚೆಗೆ ಬಂದ ಹೆನ್ರಿ ಕಸಿನ್ಸ್ ಅವರ [೩೭] ಪುಸ್ತಕಗಳು ಭಿತ್ತಿಚಿತ್ರಕಲೆಯ ಬಗ್ಗೆ ವಿವರ ನೀಡುತ್ತವೆ.

ಕರ್ನಾಟಕದ ಭಿತ್ತಿಚಿತ್ರಕಲೆಯ ಬಗ್ಗೆ ಇದುವರೆಗೆ ನಡೆದ ಅಧ್ಯಯನದ ಸ್ಥೂಲ ಸಮೀಕ್ಷೆಯನ್ನು ನೋಡಬಹುದು.

ಶ್ರೀರಂಗಪಟ್ಟಣದ ದರಿಯಾದೌಲತ್ ಚಿತ್ರಗಳ ಬಗ್ಗೆ ೧೮೧೦ ರಲ್ಲಿ ' ವಿಲ್ಕ್ಸ್ ' ಎಂಬುವವರು [೩೮] ಬರೆದಿದ್ದು ಅದನ್ನಾಧರಿಸಿ ೧೯೩೨ ರಲ್ಲಿ ಮರ್ರೆ ಅವರು ಪುಸ್ತಕ ಒಂದನ್ನು ಬರೆದಿದ್ದಾರೆ. ಅದರಲ್ಲಿ ಅಲ್ಲಿಯ ಭಿತ್ತಿಚಿತ್ರಗಳ ವಿಷಯ. ವರ್ಣಸಂಯೋಜನೆ ಕುರಿತು ಹೇಳಲಾಗಿದೆ. ೧೮೫೧ ರಲ್ಲಿ ಜಾನ್ ವಿಲ್ಸನ್ [೩೯] ಅವರು ಬಾದಾಮಿಯ ಭಿತ್ತಿಚಿತ್ರಗಳ ಬಗ್ಗೆ ಬರೆದಿದ್ದಾರೆ. ಅವರು ತಮಗಿಂತ ಪೂರ್ವದಲ್ಲಿ ೧೮೧೮ ರಲ್ಲಿಯೇ ಥಾಮಸ್ ಮನ್ರೊ ಎಂಬುವವರು ಬದಾಮಿ ವೈಷ್ಣವ ಗುಹಾಲಯದ ಭಿತ್ತಿಚಿತ್ರಗಳ ಬಗ್ಗೆ ಹೇಳಿದ್ದನ್ನು ಉಲ್ಲೇಖಿಸುತ್ತಾರೆ. ಕ್ರಿ. ಶ. ೧೮೦೦ ರ ಸುಮಾರಿಗೆ ಫ್ರಾನ್ಸಿಸ್ ಬುಕ್ಯಾನನ್ ಭಾರತ ಪ್ರವಾಸ ಕೈಕೊಂಡಿದ್ದು ಆತ ಕರ್ನಾಟಕದಲ್ಲಿ ಸಂಚರಿಸುವಾಗ ತಾನು ಶ್ರೀರಂಗಪಟ್ಟಣದ ದರಿಯಾ ದೌಲತ್‌ನಲ್ಲಿ ಕಂಡ ಚಿತ್ರಗಳ ಕುರಿತಾಗಿ ತನ್ನ ಪ್ರವಾಸ ಕಥನದಲ್ಲಿ ಬರೆದಿದ್ದಾನೆ. [೪೦] ಅಲ್ಲದೇ ಅಲ್ಲಿನ ಗೋಡೆಯ ಮೇಲೆ ಚಿತ್ರಿತವಾಗಿರುವ ಸ್ತ್ರೀ, ಪುರುಷ ಹಾಗೂ ಮಗುವಿನ ಚಿತ್ರಗಳನ್ನು ಸ್ಥಳೀಯ ಚಿತ್ರಕಾರರಿಂದ ಬರೆಸಿ ತನ್ನ ಕೃತಿಯಲ್ಲಿ ಅಳವಡಿಸಿದ್ದಾನೆ. ೧೮೭೨ ರಲ್ಲಿ ಬೌರಿಂಗ್ ಅವರು [೪೧] ಶ್ರೀರಂಗಪಟ್ಟಣದ ದರಿಯಾದೌಲತ್ ನಲ್ಲಿರುವ ಭಿತ್ತಿಚಿತ್ರಗಳ ಬಗ್ಗೆ ವಿವರವಾಗಿ ಬರೆದು. ಅವುಗಳ ವಸ್ತುವಿಷಯ. ವರ್ಣಗಾರಿಕೆ. ಸಂಯೋಜನೆ ಮುಂತಾದ ಸಂಗತಿಗಳನ್ನು ತಿಳಿಸುತ್ತಾರೆ.

---

೨೯. A. S. I. Annual Report : 1920-21, Coloured Picture Preserved in the Siva Temple at Mukhalingam, Srikakulam ; Sir, John Marshall.
೩೦. A. S. I. Annual Report : 1927-28, Preservation of Frescos in Pundarik-ji's House.
೩೧. Cave Tamples of the Pallavas : A. S. I. Monograph 1964, K. R. Srinivasan.
೩೨. Ajanta Murals : A. S. I. Monograph, 1967, A. Ghosh (Ed.)
೩೩. An Architectural Survey of Temples of Kerala : A. S. I. Monograph, 1978, H. Sarkar.
೩೪. Cave Temples of the Deccan : A. S. I. Monograph, 1981, K. V. Sundara Rajan.
೩೫. i) Report on the Buddhist Cave Temples and their Inscriptions : J. Burgess, A. S. I. Imperial Series, (1883, reprint 1994), New Delhi.
ii) Report on the Ellora Cave Temples and the Brahmanical and Jain Caves in Western India, J. Burgess, A. S. I. Imperial Series (1883 reprint 1994)
೩೬. The Chalukyan Architecture : Including Examples of the Bellari District, Alexander Rea, A. S. I. Imperial Series (1896 reprint 1995).
೩೭. Bijapur and its Architectural Remains with an Historical out line of the Adil Shahi Dynasty, Henry Cousens, A. S. I. Imperial Series (1916 reprint 1996).
೩೮. Wilks : History of Mysore , 1810, Edited with Notes by Murry Hammnic 1932, Vol. II, Page, 160.
೩೯. John Wilson : Ancient Remains of Western India, 1851.
೪೦. Francis Buchanan : A Journey from Madras through countries of Mysore, Canara and Malbar, Vol. I, (IInd Ed.) Madras, 1870, Page 50-52.
೪೧. Lewin B. Bowring : ' Mysore Historical and Despective Eastern Experience .'

೧೯೨೪ ರಲ್ಲಿ ' ಕರ್ನಾಟಕ ' ಕುರಿತು ಕೈಪಿಡಿಯಲ್ಲಿ [೯೨] ಅಜಂತಾದಲ್ಲಿ ಎರಡನೇ ಪುಲಿಕೇಶಿಯಿಂದ ಭಿತ್ತಿಚಿತ್ರ ಬರೆಸಲ್ಪಟ್ಟ. ಮತ್ತು ಬಿಜಾಪುರದಲ್ಲಿ ಮೊಗಲ್ ಶೈಲಿಯ ಚಿತ್ರಗಳು ರಚನೆಯಾದ ಕುರಿತು ಮಾಹಿತಿ ಇದೆ. ೧೯೩೧ ರಲ್ಲಿ ಸಿ. ಇ. ಪಾರಸನ್ಸ್ ಅವರು [೯೩] ಶ್ರೀರಂಗಪಟ್ಟಣದ ಬಗ್ಗೆ ಕಿರುಪುಸ್ತಕ (ಕೈಪಿಡಿ) ಒಂದನ್ನು ಬರೆದಿದ್ದು ಅದರಲ್ಲಿ ದರಿಯಾದೌಲತ್ ಅರಮನೆಯ ಭಿತ್ತಿಚಿತ್ರಗಳ ಕುರಿತಾಗಿ ವಿವರಣೆ ಕೊಟ್ಟಿದ್ದಾರೆ. ೧೯೪೦ ರಲ್ಲಿ ಎಂ. ಎಚ್. ಕೃಷ್ಣ ಅವರು [೯೪] ಶ್ರವಣಬೆಳಗೊಳದ ಬಗ್ಗೆ ಒಂದು ಕಿರುಪುಸ್ತಕ ರಚಿಸಿದ್ದು ಅದರಲ್ಲಿ ಅಲ್ಲಿಯ ಭಿತ್ತಿಚಿತ್ರಗಳ ವಿವರ ಇದೆ.

೧೯೭೨ ರಲ್ಲಿ ಪ್ರಕಟವಾದ ' ಬೆಳೆದುಬಂದ ಭಾರತದ ಚಿತ್ರಕಲೆ ' ಪುಸ್ತಕದಲ್ಲಿ ಪಿ. ಆರ್. ತಿಪ್ಪೇಸ್ವಾಮಿ [೯೫] ಯವರು ಅಜಂತಾ. ಎಲ್ಲೋರಾ. ಬದಾಮಿ ಭಿತ್ತಿಚಿತ್ರದ ವಿವರಗಳನ್ನೂ ಸಾಂದರ್ಭಿಕವಾಗಿ ಉಲ್ಲೇಖಿಸಿದ್ದಾರೆ. ೧೯೭೮ ರಲ್ಲಿ ' ಕರ್ನಾಟಕ ಸಂಸ್ಕೃತಿ ಸಮೀಕ್ಷೆ ' ಪುಸ್ತಕದಲ್ಲಿ ಡಾ. ಎಚ್. ತಿಪ್ಪೇರುದ್ರಸ್ವಾಮಿ [೯೬] ಯವರು ಕರ್ನಾಟಕದ ಭಿತ್ತಿಚಿತ್ರ ಪರಂಪರೆಯನ್ನು ಬದಾಮಿ ಚಾಲುಕ್ಯರಿಂದ ಮೈಸೂರು ಅರಸರವರೆಗೆ ಕೆಲವು ಚಿತ್ರ ನೆಲೆಗಳನ್ನು ಉದಾಹರಿಸುತ್ತ ಚರ್ಚಿಸಿದ್ದಾರೆ.

೧೯೮೦ ರಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ ಪ್ರಕಟಗೊಂಡ ಡಾ. ಎಂ. ಚಿದಾನಂದ ಮೂರ್ತಿ [೯೭] ಯವರ ' ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ' ಎಂಬ ಪುಸ್ತಕದಲ್ಲಿ ಅವರು ಶಾಸನಗಳಲ್ಲಿ ಬರುವ ಭಿತ್ತಿಚಿತ್ರಗಳ ಉಲ್ಲೇಖಗಳನ್ನು ಹೇಳುತ್ತಾರೆ. ಇವುಗಳಲ್ಲದೇ ೧೯೮೦ ರಲ್ಲಿ ಅ. ನ. ಕೃಷ್ಣರಾಯರ [೯೮] ಚಿತ್ರಕಲೆ, ಎಸ್. ಎಂ. ಶಿರಹಟ್ಟಿಯವರ [೯೯] ' ಚಿತ್ರಕಲಾ ಕೈದೀಪ ' ಕೃತಿಗಳು ಪ್ರಕಟವಾಗಿದ್ದು ಇವುಗಳಲ್ಲಿ ಭಿತ್ತಿಚಿತ್ರಗಳ ಸಂಕ್ಷಿಪ್ತ ಮಾಹಿತಿ ದೊರೆಯುತ್ತದೆ.

೧೯೮೫ ರಲ್ಲಿ ಪ್ರಕಟಗೊಂಡ ' ಭಾರತೀಯ ಸಂಸ್ಕೃತಿ ' ಕೃತಿಯಲ್ಲಿ ಎಸ್. ಶ್ರೀಕಂಠ ಶಾಸ್ತ್ರಿಗಳು [೧೦೦] ಭಿತ್ತಿಚಿತ್ರಕಲೆಯ ಬಗ್ಗೆ ಸಾಂದರ್ಭಿಕವಾಗಿ ಚರ್ಚಿಸುತ್ತಾರೆ. ೧೯೮೮ ರಲ್ಲಿ ಪ್ರಕಟವಾದ ' ದಿ ಚಾಲುಕ್ಯ ಆಫ್ ಬದಾಮಿ ' ಕೃತಿಯಲ್ಲಿ ಎಮ್. ಎಸ್. ನಾಗರಾಜರಾವ್ [೧೦೧] ಅವರು ಬದಾಮಿ ವೈಷ್ಣವ ಗುಹೆಯ ಭಿತ್ತಿಚಿತ್ರಗಳ ಕುರಿತು ಹೇಳುತ್ತಾರಲ್ಲದೇ. ಒಂದು ಕಾಲದಲ್ಲಿ ಗುಹೆಯ ಒಳಭಾಗದಲ್ಲಿ ಹೆಚ್ಚಿನ ಪ್ರಮಾಣದ ವರ್ಣಚಿತ್ರಗಳಿದ್ದುವಲ್ಲದೇ ಚಿತ್ರಗಳಿರದ ಸ್ಥಳವನ್ನು ಬಣ್ಣ ಲೇಪಿಸಿ ಅಲಂಕರಿಸಲಾಗಿತ್ತು. ಹೀಗೆ ಇಡೀ ಗುಹೆ ವರ್ಣ ಮತ್ತು ವರ್ಣಚಿತ್ರಗಳಿಂದ ಅಲಂಕರಿಸಲ್ಪಟ್ಟಿತ್ತು ಎಂದು ಹೇಳುತ್ತಾರೆ.

---

೯೨. D. K. Bharadvaj (Ed.) : ' Paintings ' Karnataka Hand Book, Mysore.

೯೩. Constance, E. Parsons : ' Seringapatanm ' Madras.

೯೪. M. H. Krishna : A Guide to Shravana Belagola, Mysore.

೯೫. ಪಿ. ಆರ್. ತಿಪ್ಪೇಸ್ವಾಮಿ : ' ಬೆಳೆದು ಬಂದ ಬಾರತದ ಚಿತ್ರಕಲೆ ', ಕಲಾಕ್ಷೇತ್ರ, ಮೈಸೂರು. ೧೯೭೨.

೯೬. ಡಾ. ಎಚ್. ತಿಪ್ಪೇರುದ್ರಸ್ವಾಮಿ : ' ಕರ್ನಾಟಕ ಸಂಸ್ಕೃತಿ ಸಮೀಕ್ಷೆ '. ಕೃಷ್ಣಮೂರ್ತಿಪುರಂ, ಮೈಸೂರು.

೯೭. ಡಾ. ಎಂ. ಚಿದಾನಂದಮೂರ್ತಿ : ' ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ '. ಮೈಸೂರು ವಿಶ್ವವಿದ್ಯಾಲಯ. ಮೈಸೂರು.

೯೮. ಅ. ನ. ಕೃಷ್ಣರಾಯ : ' ಚಿತ್ರಕಲೆ '. ಎಚ್. ವೆಂಕಟರಾಮಯ್ಯ ಆ್ಯಂಡ್ ಸನ್ಸ್. ವಿದ್ಯಾನಿಧಿ ಬುಕ್ ಡಿಪ್ರೋ. ಮೈಸೂರು.

೯೯. ಎಸ್. ಎಂ. ಶಿರಹಟ್ಟಿ : ಚಿತ್ರಕಲಾ ಕೈದೀಪ. ಹಿಮಾಮಿ ಪಬ್ಲಿಕೇಶನ್. ಗದಗ.

೧೦೦. ಎಸ್. ಶ್ರೀಕಂಠಶಾಸ್ತ್ರಿ : ' ಭಾರತೀಯ ಸಂಸ್ಕೃತಿ '. ಪ್ರಸಾರಾಂಗ. ಮೈಸೂರು ವಿಶ್ವವಿದ್ಯಾಲಯ. ಮೈಸೂರು.

೧೦೧. M. S. Nagaraj Rao : ' The Chalukya of Badami ' Bangalore.

೧೯೭೯ ರಲ್ಲಿ ಎಮ್. ಎಸ್. ನಾಗರಾಜರಾವ್ [೧೦೨] ಅವರ ' ಭಾರತೀಯ ಕಲೆಗಳಲ್ಲಿ ಕಿರಾತಾರ್ಜುನೀಯ ಪ್ರಸಂಗ ' ಕೃತಿಯಲ್ಲಿ ಭಾರತೀಯ ಶಿಲ್ಪ ಮತ್ತು ಭಿತ್ತಿಚಿತ್ರಗಳಲ್ಲಿ ರಚನೆಯಾಗಿರುವ ಕಿರಾತಾರ್ಜುನೀಯ ಪ್ರಸಂಗಗಳ ಕುರಿತ ತೌಲನಿಕ ಚರ್ಚೆ ಇದೆ. ೧೯೭೯ ರಲ್ಲಿ ಬಿ. ಪಿ. ಬಾಯಿರಿ ಅವರ [೧೦೩] ಭಾರತೀಯ ಚಿತ್ರಕಲೆಯಲ್ಲಿ ಬದಾಮಿ ಭಿತ್ತಿಚಿತ್ರಗಳ ಬಗ್ಗೆ ಕಿರು ಮಾಹಿತಿ ಇದೆ.

೧೯೮೦ ರಲ್ಲಿ ಕರ್ನಾಟಕದ ಸಂಪ್ರದಾಯ ಚಿತ್ರಗಳು ಎಂಬ ಕೃತಿಯನ್ನು ಎಸ್. ಆರ್. ರಾವ್ ಮತ್ತು ಬಿ. ವಿ. ಕೆ. ಶಾಸ್ತ್ರಿ ಅವರು ಕೂಡಿ ರಚಿಸಿದ್ದು [೧೦೪] ಅದರಲ್ಲಿ ಭಿತ್ತಿಚಿತ್ರಗಳ ಬಗ್ಗೆ ಮಾಹಿತಿ ಇದೆ. ಎಸ್. ಕೆ. ರಾಮಚಂದ್ರರಾವ್ ಅವರ ಸಂಪಾದಕತ್ವದ ' ಕರ್ನಾಟಕದ ಕಲೆಗಳು ' ಸಂ. ೧ ರಲ್ಲಿ [೧೦೫] ಸಂಪುಟ ೨ ರಲ್ಲಿ [೧೦೬] ಭಿತ್ತಿಸಿದ್ಧತಾ ವಿಧಾನ, ಚಿತ್ರ ರಚನಾ ಕ್ರಮಗಳ ಕುರಿತು ವಿವರಣೆ ಇದೆ.

೧೯೮೨ ರಲ್ಲಿ ಆರ್. ಎನ್. ಸಾಲತ್ತೂರೆ ಅವರು [೧೦೭] ವಿಜಯನಗರ ಕಲೆ ಬಗ್ಗೆ ಬರೆದಿದ್ದು ಅದರಲ್ಲಿ ಭಿತ್ತಿಚಿತ್ರಗಳ ಭಿತ್ತಿ ವಸ್ತುವಿಷಯವನ್ನು ಹೇಳುತ್ತಾರೆ. ೧೯೮೩ ರಲ್ಲಿ ಗದಗ ತೋಂಟದಾರ್ಯಮಠದಿಂದ ಪ್ರಕಟವಾದ ಡಾ. ಪಿ. ವಿ. ನಾರಾಯಣ [೧೦೮] ಅವರ ' ವಚನ ಸಾಹಿತ್ಯ : ಒಂದು ಸಾಂಸ್ಕೃತಿಕ ಅಧ್ಯಯನ ' ಎಂಬ ಗ್ರಂಥದಲ್ಲಿ ವಚನಗಳಲ್ಲಿ ಉಲ್ಲೇಖಗೊಂಡಿರುವ ಭಿತ್ತಿಚಿತ್ರದ ಪ್ರಸ್ತಾಪವಿದೆ.

೧೯೮೩ ರಲ್ಲಿ ಪ್ರಕಟಿತವಾದ ' ಸಂಪ್ರದಾಯ ಶಿಲ್ಪಕಲೆ ಮತ್ತು ಚಿತ್ರಕಲೆ ' ಪುಸ್ತಕದಲ್ಲಿ ಎಸ್. ಕೆ. ರಾಮಚಂದ್ರರಾವ್ ಅವರು [೧೦೯] ನಗ್ನಜಿತನ ಚಿತ್ರಲಕ್ಷಣ ಅಲ್ಲದೆ ವಿಷ್ಣುಧರ್ಮೋತ್ತರ ಗ್ರಂಥ. ವಿದ್ಯಾರಣ್ಯರ ' ಪಂಚದಶಿ ' ಕೃತಿಯಲ್ಲಿನ ಭಿತ್ತಿಚಿತ್ರರಚನಾ ಹಂತಗಳನ್ನು ಚರ್ಚಿಸಿದ್ದಾರೆ. ೧೯೮೩ ರಲ್ಲಿ ಬಿ. ವಿ. ಕೆ. ಶಾಸ್ತ್ರಿ ಅವರ [೧೧೦] ' ಕರ್ನಾಟಕದ ಭಿತ್ತಿಚಿತ್ರಗಳು ' ಎಂಬ ಕೃತಿ ಪ್ರಕಟವಾಗಿದ್ದು. ಅದರಲ್ಲಿ ಬದಾಮಿ. ಹಂಪಿ. ಮೈಸೂರು. ಹರದನಹಳ್ಳಿ. ಶ್ರವಣಬೆಳಗೊಳ. ಮುಡುಕುತೊರೆ ಮುಂತಾದ ಸ್ಥಳಗಳ ಭಿತ್ತಿಚಿತ್ರಗಳ ಬಗ್ಗೆ ಸಂಕ್ಷಿಪ್ತವಾಗಿ ಹೇಳಿದ್ದಾರೆ.

೧೯೮೪ ರಲ್ಲಿ ಕೆ. ಆರ್. ಬಸವರಾಜ್ ಅವರ [೧೧೧] ಕೃತಿಯಲ್ಲಿ ಕರ್ನಾಟಕದ ಭಿತ್ತಿಚಿತ್ರಗಳ ಬಗ್ಗೆ ಸಾಂದರ್ಭಿಕವಾಗಿ ಹೇಳಲಾಗಿದೆ.

---

೧೦೨. M. S. Nagaraj Rao : ' Kiratarjuneeyam in Indian Art ', Delhi.

೧೦೩. ಬಿ. ಪಿ. ಬಾಯಿರಿ : ಭಾರತೀಯ ಚಿತ್ರಕಲೆ, ಪ್ರತಿಭಾ ಗ್ರಂಥಮಾಲೆ, ಧಾರವಾಡ.

೧೦೪. S. R. Rao, B. V. K. Shastry : ' Traditional Painting of Karnataka ', C. K. P., Bangalore.

೧೦೫. ಎಸ್. ಕೆ. ರಾಮಚಂದ್ರರಾವ್ : ಕರ್ನಾಟಕದ ಕಲೆಗಳು (ಸಂಪುಟ ೧). ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು.

೧೦೬. – ಅದೇ –

೧೦೭. R. N. Saletore : ' Vijayanagara Art ', Delhi.

೧೦೮. ಡಾ. ಪಿ. ವಿ. ನಾರಾಯಣ : ' ವಚನಸಾಹಿತ್ಯ : ಒಂದು ಸಾಂಸ್ಕೃತಿಕ ಅಧ್ಯಯನ '. ವೀರಶೈವ ಅಧ್ಯಯನ ಸಂಸ್ಥೆ. ಶ್ರೀ ತೋಂಟದಾರ್ಯಮಠ. ಗದಗ.

೧೦೯. ಎಸ್. ಕೆ. ರಾಮಚಂದ್ರರಾವ್ : ' ಸಂಪ್ರದಾಯ ಶಿಲ್ಪಕಲೆ ಮತ್ತು ಚಿತ್ರಕಲೆ '. ಶಿಲ್ಪಕಲಾ ಪ್ರತಿಷ್ಠಾನ. ಬೆಂಗಳೂರು.

೧೧೦. ಬಿ. ವಿ. ಕೆ. ಶಾಸ್ತ್ರಿ : ' ಕರ್ನಾಟಕದ ಭಿತ್ತಿಚಿತ್ರಗಳು '. ಕರ್ನಾಟಕ ಲಲಿತಕಲಾ ಅಕಾಡೆಮಿ. ಬೆಂಗಳೂರು.

೧೧೧. K. R. Basavaraj : ' Fine Arts, History and Culture of Karnataka ', Dharwad.

೧೯೮೫ ರಲ್ಲಿ ಸಿ. ಶಿವರಾಮಮೂರ್ತಿ [೧೧೨] ಅವರ ' ವಿಜಯ ನಗರ ಪೇಂಟಿಂಗ್ಸ್ ' ಕೃತಿಯಲ್ಲಿ ಹಂಪಿಯ ವಿರುಪಾಕ್ಷ ದೇವಾಲಯದ ಮಂಟಪದ ಚಿತ್ರಗಳು. ಲೇಪಾಕ್ಷಿಯ ಚಿತ್ರಗಳ ಕುರಿತು ಮಾಹಿತಿ ಇದೆ.

೧೯೮೫ ರಲ್ಲಿ ಪ್ರಕಟವಾದ ವಿ. ಸೀತಾರಾಮಯ್ಯ [೧೧೩] ನವರ ' ಸಾಹಿತ್ಯ ಮತ್ತು ಚಿತ್ರಕಲೆ ' ಪುಸ್ತಕದಲ್ಲಿ ಸಾಹಿತ್ಯದಲ್ಲಿ ಸಾಂದರ್ಭಿಕವಾಗಿ ಬರುವ ಭಿತ್ತಿಚಿತ್ರಕಲೆಯ ವಿವರಗಳಿವೆ.

೧೯೮೮ ರಲ್ಲಿ ಡಾ. ಎಸ್. ರಾಜಶೇಖರ್ [೧೧೪] ಅವರು ' ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ ' ಎಂಬ ಕೃತಿಯಲ್ಲಿ ಬದಾಮಿಯ ವೈಷ್ಣವ ಗುಹಾಲಯದ ಭಿತ್ತಿಚಿತ್ರಗಳು ಮತ್ತು ಹಂಪಿಯ ವಿರುಪಾಕ್ಷ ದೇವಾಲಯದ ಭಿತ್ತಿಚಿತ್ರಗಳ ಬಗ್ಗೆ ಮಾಹಿತಿ ಕೊಟ್ಟಿದ್ದಾರೆ. ಅಲ್ಲದೇ ಹಂಪಿಯ ವಿರೂಪಾಕ್ಷ ದೇವಾಲಯದ ಚಿತ್ರಗಳ ರಚನೆಯ ಕಾಲ ವಿಚಾರವಾಗಿ ದೀರ್ಘ ಚರ್ಚೆ ಮಾಡಿದ್ದಾರೆ.

೧೯೮೯ ರಲ್ಲಿ ಪ್ರಕಟವಾದ ಎಂ. ಎಚ್. ಕೃಷ್ಣ [೧೧೫] ಮತ್ತು ೧೯೮೯ ರಲ್ಲಿ ಎನ್. ಮರಿಶಾಮಾಚಾರ್ [೧೧೬] ಅವರ ' ಸಾಹಿತ್ಯದಲ್ಲಿ ಚಿತ್ರಕಲೆ ' ಎಂಬ ಕೃತಿಗಳಲ್ಲಿ ಭಿತ್ತಿಚಿತ್ರದ ಮಾಹಿತಿ ಇದೆ. ೧೯೯೪ ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯು ' ಕಲಾಕೋಶ ' ವನ್ನು ಪ್ರಕಟಿಸಿದ್ದು [೧೧೭] ಅದರಲ್ಲಿ ಕರ್ನಾಟಕದ ಭಿತ್ತಿಚಿತ್ರಗಳ ನೆಲೆಗಳ ಮಾಹಿತಿ ಇದೆ. ೧೯೯೫ ರಲ್ಲಿ ಜಿ. ಯಜದಾನಿ [೧೧೮] ಯವರ ' ಬೀದರ್, ಇಟ್ಸ್ ಹಿಸ್ಟರಿ ಆ್ಯಂಡ್ ಮಾನ್ಯುಮೆಂಟ್ಸ್' ಎಂಬ ಕೃತಿಯಲ್ಲಿ ಬೀದರ್ ಮತ್ತು ಸಮೀಪದ ಅಸ್ಟೂರಿನ ಭಿತ್ತಿಚಿತ್ರಗಳ ಕುರಿತಾದ ಮಾಹಿತಿ ಇದೆ. ೧೯೯೫ ರಲ್ಲಿ ಬಸವರಾಜ ಉಪ್ಪಿನ [೧೧೯] ಅವರು ' ಮಾನಯ್ಯ ಗರುಡಾದ್ರಿ ' ಎಂಬ ಕಿರುಪುಸ್ತಕ ರಚಿಸಿದ್ದು ಅದರಲ್ಲಿ ಸಾಂದರ್ಭಿಕವಾಗಿ ಸುರಪುರದ ಭಿತ್ತಿಚಿತ್ರಗಳ ಬಗೆಗೆ ಹೇಳಲಾಗಿದೆ.

೧೯೯೮ ರಲ್ಲಿ ' ಕೊಪ್ಪಳ : ಸಾಂಸ್ಕೃತಿಕ ಪರಂಪರೆ ' ಎಂಬ ಕೃತಿಯನ್ನು ಬಿ. ಸಿ. ಪಾಟೀಲ್ [೧೨೦] ಅವರು ರಚಿಸಿದ್ದು ಅದರಲ್ಲಿ ಕೊಪ್ಪಳ ಪರಿಸರದ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳ ಬಗೆಗೆ ಮಾಹಿತಿ ಇದೆ. ಶಿವರಾಮ ಕಾರಂತ ಅವರ ' ಕರ್ನಾಟಕದ ಚಿತ್ರಕಲೆ ' [೧೨೧] ಕೃತಿಯು ಕನ್ನಡ ಹಾಗೂ ಇಂಗ್ಲೀಷ ಎರಡೂ ಭಾಷೆಯಲ್ಲಿ ಬಂದಿದ್ದು ಇದರಲ್ಲಿ ಬಾದಾಮಿ. ನರಗುಂದ. ನಿಪ್ಪಾಣಿ. ಅಥಣಿ. ಶ್ರವಣಬೆಳಗೊಳ. ಹಂಪೆ. ವಿಜಾಪುರದ ಬಳಿಯ ಕುಮಟಗಿ ಭಿತ್ತಿಚಿತ್ರಗಳ ಬಗೆಗಿನ ಚರ್ಚೆ ಇದೆ. ಕಲಾಪ್ರಪಂಚದಲ್ಲಿ [೧೨೨] ಜಗತ್ತಿನ ವಿವಿಧ ರಾಷ್ಟ್ರಗಳ ಭಿತ್ತಿಚಿತ್ರಕಲೆಯನ್ನು ಸಾಂದರ್ಭಿಕವಾಗಿ

---

೧೧೨. C. Sivaramamurti : ' Vijayanagara Paintings ', Delhi.
೧೧೩. ವಿ. ಸೀತಾರಾಮಯ್ಯ : ಸಾಹಿತ್ಯ ಮತ್ತು ಚಿತ್ರಕಲೆ. ರಾಘವ ಪ್ರಕಾಶನ. ಬೆಂಗಳೂರು.
೧೧೪. ಸಿಂದಗಿ ರಾಜಶೇಖರ : ' ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ '. ಸುಜಾತಾ ಪಬ್ಲಿಕೇಶನ್. ಧಾರವಾಡ.
೧೧೫. ಎಂ. ಎಚ್. ಕೃಷ್ಣಯ್ಯ : ' ಶೃಂಗಾರ ಲಹರಿ '. ಸಿ. ಎಂ. ಎನ್. ಪ್ರಕಾಶನ. ಬೆಂಗಳೂರು.
೧೧೬. ಎನ್. ಮರಿಶಾಮಾಚಾರ್ : ' ಸಾಹಿತ್ಯದಲ್ಲಿ ಚಿತ್ರಕಲೆ '. ಸಿ. ಎಂ. ಎನ್. ಪ್ರಕಾಶನ. ಬೆಂಗಳೂರು.
೧೧೭. ಪಿ. ಆರ್. ತಿಪ್ಪೇಸ್ವಾಮಿ (ಸಂ.) : ' ಕಲಾಕೋಶ '. ಕರ್ನಾಟಕ ಲಲಿತಕಲಾ ಅಕಾಡೆಮಿ. ಬೆಂಗಳೂರು.
೧೧೮. G. Yazdani : Bidar, Its History and Monuments, Motilal Banarasidas Publishers Private Limited, Delhi.
೧೧೯. ಬಸವರಾಜ ಉಪ್ಪಿನ : ಬಾನಯ್ಯ ಗರುಡಾದ್ರಿ. ಕರ್ನಾಟಕ ಲಲಿತಕಲಾ ಅಕಾಡೆಮಿ. ಬೆಂಗಳೂರು.
೧೨೦. ಬಿ. ಸಿ. ಪಾಟೀಲ್ : ' ಕೊಪ್ಪಳ : ಸಾಂಸ್ಕೃತಿಕ ಪರಂಪರೆ '. ಹರಿಹರ ಪ್ರಕಾಶನ. ಜವಾಹರ ರಸ್ತೆ. ಕೊಪ್ಪಳ.
೧೨೧. ಡಾ. ಶಿವರಾಮ ಕಾರಂತ : ' ಕರ್ನಾಟಕದಲ್ಲಿ ಚಿತ್ರಕಲೆ '. ಮೈಸೂರು ವಿಶ್ವವಿದ್ಯಾಲಯ.
೧೨೨. ಡಾ. ಶಿವರಾಮ ಕಾರಂತ : ' ಕಲಾ ಪ್ರಪಂಚ '. ಕರ್ನಾಟಕ ವಿಶ್ವವಿದ್ಯಾಲಯ. ಧಾರವಾಡ.

ಹೇಳಲಾಗಿದೆ. ' ಭಾರತೀಯ ಚಿತ್ರಕಲೆ ' [೧೨೩] ಪುಸ್ತಕದಲ್ಲಿ ಪ್ರಾಚೀನ ಗ್ರಂಥಗಳಲ್ಲಿಯ ಭಿತ್ತಿಚಿತ್ರಕಲೆಯ ಉಲ್ಲೇಖಗಳ ವಿವರವಿದೆ.

೨೦೦೦ ರಲ್ಲಿ ' ಬಾದಾಮಿ : ಒಂದು ಸಾಂಸ್ಕೃತಿಕ ಅಧ್ಯಯನ ' ಎಂಬ ಸಂಶೋಧನ ಪ್ರಬಂಧದಲ್ಲಿ ಡಾ. ಶೀಲಾಕಾಂತ ಪತ್ತಾರ [೧೨೪] ಅವರು ಬಾದಾಮಿಯ ಪರಿಸರದ ಭಿತ್ತಿಚಿತ್ರಕಲೆಯನ್ನು ಪ್ರಾಸಂಗಿಕವಾಗಿ ಅಧ್ಯಯನ ಮಾಡಿದ್ದಾರೆ. ಮಲ್ಲಿಕಾರ್ಜುನ ಹಿರೇಮಠ [೧೨೫] ಅವರು ಸಂಪಾದಿಸಿದ ' ಬಾಗಿಲು ' (ಬಾಗಿಲುಕೋಟೆ ಸಾಂಸ್ಕೃತಿಕ ಪರಂಪರೆ) ಕೃತಿಯಲ್ಲಿ ಬಾಗಲಕೋಟೆ ಜಿಲ್ಲೆಯ ಗೋಡೆ ಚಿತ್ರಗಳ ಪ್ರಸ್ತಾಪವಿದೆ.

೧೮೭೪ ರಲ್ಲಿ ಜೇಮ್ಸ್ ಬರ್ಜಸ್ ಅವರು [೧೨೬] ಬಾದಾಮಿಯ ವೈಷ್ಣವ ಗುಹೆಯ ಭಿತ್ತಿಚಿತ್ರಗಳ ಬಗ್ಗೆ ವಿವರ ಕೊಟ್ಟಿದ್ದಾರೆ. ೧೯೨೩ ರ ಎಪಿಗ್ರಾಫಿಯ ಕರ್ನಾಟಕದ ಎರಡನೆಯ ಸಂಪುಟದಲ್ಲಿ [೧೨೭] ಶ್ರವಣಬೆಳಗೊಳದ ಭಿತ್ತಿಚಿತ್ರಗಳ ಕುರಿತು ಮಾಹಿತಿ ದೊರೆಯುತ್ತದೆ. ೧೯೩೦ ರಲ್ಲಿ ಮೈಸೂರು ಜಿಲ್ಲಾ ಗೆಜೆಟೀಯರ್‌ದಲ್ಲಿ [೧೨೮] ಆ ಜಿಲ್ಲೆಯ ಭಿತ್ತಿಚಿತ್ರಗಳ ವಿವರಣೆ ಇದೆ.

೧೯೩೦ ರಲ್ಲಿ ರಸಯೋಗಿ ಗೆಳೆಯರ ಗುಂಪು [೧೨೯] ' ಕನ್ನಡ ಸಾಹಿತ್ಯದಲ್ಲಿ ಚಿತ್ರಕಲೆ ' ಎಂಬ ಲೇಖನ ಬರೆದಿದ್ದು, ಇದರಲ್ಲಿ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಸಾಂದರ್ಭಿಕವಾಗಿ ಬಂದಿರುವ ಭಿತ್ತಿಚಿತ್ರಕಲೆಯ ವಿವರ ಮತ್ತು ಚಿತ್ರಕಲಾವಿದ ಚಿರಪಟ್ಟಿಯ ಕುರಿತು ಪ್ರಸ್ತಾಪಿಸಲಾಗಿದೆ. ೧೯೩೫ ರಲ್ಲಿ [೧೩೦] ರಲ್ಲಿ ಬೆಂಗಳೂರು ಜಿಲ್ಲೆಯ ಚನ್ನಪಟ್ಟಣದಲ್ಲಿರುವ ತಿಪ್ಪೋಜಿ ಅರಮನೆಯ ಭಿತ್ತಿಚಿತ್ರಗಳ ಬಗೆಗಿನ ಮಾಹಿತಿ ದೊರೆಯುತ್ತದೆ.

೧೯೩೬ ರಲ್ಲಿ ಪ್ರಕಟವಾದ ವಿಜಯನಗರ ಸಾಮ್ರಾಜ್ಯದ ಆರನೆಯ ಶತಮಾನೋತ್ಸವ ಸಮಾರಂಭದ ಸ್ಮರಣ ಸಂಚಿಕೆಯಲ್ಲಿ [೧೩೧] ಸಿ. ಶಿವರಾಮಮೂರ್ತಿಯವರ ' ವಿಜಯನಗರ ಪೇಂಟಿಂಗ್ಸ್ ಫ್ರಾಮ್ ಲೇಪಾಕ್ಷಿ ' ಹಾಗೂ ಎಸ್. ಪರಮಶಿವನ್ ಅವರ ' ವಿಜಯನಗರ ಪೇಂಟಿಗ್ಸ್ ' ಎಂಬ ಲೇಖನಗಳಿವೆ. ಅವು ಅನುಕ್ರಮವಾಗಿ ಲೇಪಾಕ್ಷಿ ಮತ್ತು ಹಂಪಿಯ ವಿರುಪಾಕ್ಷ ದೇವಾಲಯದ ಭಿತ್ತಿಚಿತ್ರಗಳ ಬಗೆಗಿನ ವಿವರಗಳನ್ನು ನೀಡುತ್ತವೆ. ೧೯೩೬ [೧೩೨] ರಲ್ಲಿ ಚಿಕ್ಕಮಗಳೂರು ಜಿಲ್ಲೆ ಮೂಡಗೆರೆ ತಾಲೂಕಿನ ' ಅಂಗಡಿ ' ಯ ವಾಸಂತಿಕಾ ದೇವಾಲಯದ ಭಿತ್ತಿಚಿತ್ರಗಳ ಕುರಿತು ತಿಳಿದುಬರುತ್ತದೆ.

---

೧೨೩. ಡಾ. ಶಿವರಾಮ ಕಾರಂತ : ' ಭಾರತೀಯ ಚಿತ್ರಕಲೆ '. ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
೧೨೪. ಡಾ. ಶೀಲಾಕಾಂತ ಪತ್ತಾರ : ' ಬದಾಮಿ : ಒಂದು ಸಾಂಸ್ಕೃತಿಕ ಅಧ್ಯಯನ '. ಕನ್ನಡ ವಿಶ್ವವಿದ್ಯಾಲಯ. ಹಂಪಿ. ೨೦೦೦
೧೨೫. ಮಲ್ಲಿಕಾರ್ಜುನ ಹಿರೇಮಠ (ಸಂ.) : ' ಬಾಗಿಲು '. ಅಖಿಲಭಾರತ ೬೮ ನೇ ಕನ್ನಡ ಸಾಹಿತ್ಯ ಸಮ್ಮೇಳನ. ಬಾಗಲಕೋಟೆ.
೧೨೬. Archaeological Report of Western India : January to May (1974), Page 20, James Burgess.
೧೨೭. R. Narasimhachar (Ed.) : Epigraphia Carnatika, Vol. II, (Inscriptions of Shravanabelagola, 1923, Page 4.
೧೨೮. C. Hayavadana Rao : Paintings, Mysore Gazetteer, Vol. II, Part-I (Bangalore, 1930), Page 333-340.
೧೨೯. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ : (ಏಪ್ರಿಲ್ ೧೯೩೦) ' ಕನ್ನಡ ಸಾಹಿತ್ಯದಲ್ಲಿ ಚಿತ್ರಕಲೆ. ರಸಯೋಗಿ ಗೆಳೆಯರ ಗುಂಪು.
೧೩೦. Mysore Archaeological Report : (1935), Page 20.
೧೩೧.i) Vijayanagara Sexcentenary Commemoration Volume, Dharwad, (1936), Vijayanagara Paintings from Lepakshi, C. Sivaramamurti.
ii) Ibid : S. Paramasivan.
೧೩೨. Mysore Archaeological Report : (1936), Page 17.

೧೯೩೭ ರ ಪುರಾತತ್ವದ ವರದಿಯಲ್ಲಿ [೧೩೩] ಮೈಸೂರು ಜಿಲ್ಲೆ ಚಾಮರಾಜನಗರ ತಾಲೂಕು ಹರದನಹಳ್ಳಿಯ ದಿವ್ಯಲಿಂಗೇಶ್ವರ ದೇವಾಲಯದ ಭಿತ್ತಿಚಿತ್ರಗಳ ಬಗ್ಗೆ ಮಾಹಿತಿ ದೊರಕುತ್ತದೆ. ಅದೇ ರೀತಿ ೧೯೩೮ [೧೩೪] ರಲ್ಲಿ ಮೈಸೂರಿನ ಜಗನ್ಮೋಹನ ಚಿತ್ರಶಾಲೆಯ ಚಿತ್ರಗಳ ಕುರಿತು ವಿವರಣೆ ಕಾಣಸಿಗುತ್ತದೆ.

೧೯೪೦ [೧೩೫] ರಲ್ಲಿ ದ. ರಾ. ಬೇಂದ್ರೆಯವರ ಲೇಖನ ಕಲಾವಿದ ಚಿರಫಟ್ಟಿಯ ಕುರಿತು ಚರ್ಚಿಸಿದರೆ. ೧೯೪೧ ರಲ್ಲಿ ಎಸ್. ರಾಮಚಂದ್ರರಾವ್ [೧೩೬] ಅವರ 'ಭಾಸನಲ್ಲಿ ಚಿತ್ರಕಲೆ ಮತ್ತು ಸಂಗೀತ' ಲೇಖನವು ಭಾಸನ ನಾಟಕದಲ್ಲಿ ಬರುವ ಭಿತ್ತಿಚಿತ್ರಗಳಿಂದ ಶೋಭಿಸುವ ಮನೆ. ಅರಮನೆ. ದೇವಾಲಯಗಳನ್ನು ವರ್ಣಿಸುತ್ತದೆ. ೧೯೪೨ ರಲ್ಲಿ ಬಿ. ವಿ. ಕೆ. ಶಾಸ್ತ್ರಿ ಅವರ 'ಪ್ರಾಚೀನ ಚಿತ್ರಕಲೆ' ಲೇಖನ [೧೩೭] ಪ್ರಾಗೈತಿಹಾಸಿಕ ಭಿತ್ತಿಚಿತ್ರಕಲೆಯ ಕುರಿತು ಸ್ಥೂಲವಾಗಿ ಚರ್ಚಿಸಿದೆ.

೧೯೪೨ ರಲ್ಲಿ ವಿ. ಎಂ. ಇನಾಮದಾರ್ ಅವರ 'ಕಾಳಿದಾಸ ಮತ್ತು ಚಿತ್ರಕಲೆ' ಲೇಖನವು [೧೩೮] ಕಾಳಿದಾಸನ ಕೃತಿಗಳಲ್ಲಿ ಬರುವ ಭಿತ್ತಿಚಿತ್ರಗಳಿಂದ ಅಲಂಕರಿಸಿದ ಗುಹೆ, ಮನೆ, ಅರಮನೆ ಮತ್ತು ದೇವಾಲಯಗಳನ್ನು ವರ್ಣಿಸುತ್ತದೆ. ೧೯೪೩ ರಲ್ಲಿ ಪುರಾತತ್ವ ವರದಿಯು [೧೩೯] ಕೋಲಾರ ಜಿಲ್ಲೆಯ ಮುಳುಬಾಗಿಲು ಆಂಜನೇಯ ದೇವಾಲಯದ ಭಿತ್ತಿಚಿತ್ರಗಳ ಬಗ್ಗೆ ಮತ್ತು ೧೯೪೫ ರ ವರದಿಯಲ್ಲಿ [೧೪೦] ತುಮಕೂರು ಜಿಲ್ಲೆ ಸಿರಾ ತಾಲೂಕಿನ ಶಿಬಿಯ ರೇವಣಸಿದ್ಧೇಶ್ವರ ದೇವಾಲಯದ ಭಿತ್ತಿಚಿತ್ರಗಳ ಮಾಹಿತಿ ನೀಡುತ್ತವೆ.

೧೯೪೯ ರಲ್ಲಿ ಸಿ. ಟಿ. ಎಂ. ಕೊಟ್ರಯ್ಯ ಅವರ ಲೇಖನವು [೧೪೧] ಹಂಪಿಯ ವಿರುಪಾಕ್ಷ ದೇವಾಲಯದ ಭಿತ್ತಿಚಿತ್ರಗಳ ವಿವರ ನೀಡುತ್ತದೆ. ಇಲ್ಲಿ ಚಿತ್ರಗಳ ಕಾಲಮಾನದ ಬಗ್ಗೆಯೂ ಚರ್ಚೆ ಇದೆ. ೧೯೫೦ ರಲ್ಲಿ ಎಂ. ವಿ. ಸೀತಾರಾಮಯ್ಯನವರ ಲೇಖನವು [೧೪೨] ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಬರುವ ಭಿತ್ತಿಚಿತ್ರಗಳಿಂದ ಅಲಂಕರಿಸಿದ ಮನೆ, ಅರಮನೆ. ದೇವಾಲಯಗಳನ್ನು ಕುರಿತು ವಿವರಿಸಿ ಜನಪದ ಭಿತ್ತಿಚಿತ್ರಗಳ ಬಗೆಗೆ ಚಿಕ್ಕ ಮಾಹಿತಿ ಕೊಡುತ್ತದೆ. ೧೯೫೪ ರಲ್ಲಿ ಮೋತಿಚಂದ್ರ ಅವರ ಲೇಖನವು [೧೪೩] ಬಿಜಾಪುರದ ಅರಸ್‌ಮಹಲ್ ಮತ್ತು ಸಮೀಪದ ಕುಮಟಗಿಯ ಭಿತ್ತಿಚಿತ್ರಗಳ ಕುರಿತು ಚರ್ಚಿಸುತ್ತದೆ.

---

೧೩೩. Mysore Archaeological Report : (1937), Page 38.
೧೩೪. Mysore Archaeological Report : (1938), Page 71.
೧೩೫. ಸಾಹಿತ್ಯ ಸಂಶೋಧನ. (ಧಾರವಾಡ. ೧೯೪೦) ಪುಟ. ೧೩೪-೧೩೭. ಚಿರಫಟ್ಟಿ ಯಾರು ? ಒಂದೂಹೆ. ದ. ರಾ. ಬೇಂದ್ರೆ.
೧೩೬. ಸಂಭಾವನೆ : (ಬಿ. ಎಂ. ಶ್ರೀ. ಸಂಭಾವನಾ ಗ್ರಂಥ. ೧೯೪೧). ಪುಟ ೪೯೦-೯೫. ಭಾಸನಲ್ಲಿ ಚಿತ್ರಕಲೆ ಮತ್ತು ಸಂಗೀತ. ಎಸ್. ರಾಮಚಂದ್ರರಾವ್.
೧೩೭. ಪ್ರಬುದ್ಧ ಕರ್ನಾಟಕ : (೧೯೪೨) ಪುಟ ೧೨೧-೩೧. ಮೈಸೂರು. ಪ್ರಾಚೀನ ಚಿತ್ರಕಲೆ. ಬಿ. ವಿ. ಕೆ. ಶಾಸ್ತ್ರಿ.
೧೩೮. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ : (ಡಿಸೆಂಬರ್. ೧೯೪೨). 'ಕಾಳಿದಾಸ ಮತ್ತು ಚಿತ್ರಕಲೆ'. ವಿ. ಎಂ. ಇನಾಮದಾರ್.
೧೩೯. Mysore Archaeological Report : (1943), Page 39.
೧೪೦. Mysore Archaeological Report : (1945), Page 35.
೧೪೧. Q. J. M. S.-II, (1949) Page 228-37, Vijayanagara Paintings at the Virupaksha Temple, Hampi.
೧೪೨. ಜೀವನ ಪತ್ರಿಕೆ : (ಸಂಚಿಕೆ ೪. ಸಂಪು II. ೧೯೫೦). ಪುಟ ೧೬೦. ಭಾರತೀಯ ಚಿತ್ರಕಲೆ ಅದರ ಪ್ರಾಚೀನತೆ ಮತ್ತು ಬೆಳವಣಿಗೆ. ಎಂ. ವಿ. ಸೀತಾರಾಮಯ್ಯ.
೧೪೩. Bijapur Municipality Century Souviner : (1954), Page 55-64, Deccani School – Bijapur, Motichandra.

೧೯೫೯ ರಲ್ಲಿ ಸಿ. ಶಿವರಾಮ ಮೂರ್ತಿಯವರ ಲೇಖನವು [೧೪೪] ಬದಾಮಿಯ ವೈಷ್ಣವ ಗುಹೆಯ ಭಿತ್ತಿಚಿತ್ರಗಳ ವಿಷಯ. ಶೈಲಿ. ವರ್ಣಗಾರಿಕೆ ಕುರಿತು ಮಾಹಿತಿ ನೀಡುತ್ತದೆ. ೧೯೫೯ ರಲ್ಲಿ ಪಿ. ಆರ್. ತಿಪ್ಪೇಸ್ವಾಮಿಯವರು ' ಪ್ರಾಚೀನಚಿತ್ರ ರಚನೆಯಲ್ಲಿ ಭಿತ್ತಿ ಸಿದ್ಧತೆ. ಎಂಬ ಲೇಖನ ಬರೆದಿದ್ದು, [೧೪೫] ಇದರಲ್ಲಿ ವಿಷ್ಣುಧರ್ಮೋತ್ತರ, ಶಿಲ್ಪರತ್ನ, ಮಾನಸೋಲ್ಲಾಸ ಗ್ರಂಥಗಳಲ್ಲಿನ ಭಿತ್ತಿಚಿತ್ರ ವಿವರಗಳನ್ನು ಚರ್ಚಿಸಲಾಗಿದೆ. ೧೯೬೬ ರಲ್ಲಿ ತಿ. ತಾ. ಶರ್ಮ ಅವರ ಲೇಖನ [೧೪೬] ಶಿಬಿ ಭಿತ್ತಿಚಿತ್ರಗಳ ಬಗೆಗೆ ಕಿರುಮಾಹಿತಿ ಇದೆ.

೧೯೬೯ ರಲ್ಲಿ ಬಿಜಾಪುರ ಜಿಲ್ಲಾ ಗೆಝೆಟೀಯರ್‌ದಲ್ಲಿ [೧೪೭] ಆ ಜಿಲ್ಲೆಯ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳ ಕುರಿತಾದ ಲೇಖನಗಳಿವೆ. ೧೯೭೦ ರ ರಾಯಚೂರು ಜಿಲ್ಲಾ ಗೆಝೆಟೀಯರ್‌ದಲ್ಲಿ [೧೪೮], ೧೯೭೨ ರ ಬಳ್ಳಾರಿ ಜಿಲ್ಲಾ ಗೆಝೆಟೀಯರ್‌ದಲ್ಲಿ [೧೪೯] ಹಾಗೂ ಧಾರವಾಡ ಜಿಲ್ಲಾ ಗೆಝೆಟೀಯರ್‌ದಲ್ಲಿ, ಆಯಾ ಜಿಲ್ಲೆಗಳ ಭಿತ್ತಿಚಿತ್ರಗಳ ವಿವರ ದೊರೆಯುತ್ತದೆ.

೧೯೭೧ ರಲ್ಲಿ ಬಿ. ವಿ. ಕೆ. ಶಾಸ್ತ್ರಿ ಅವರು ಸುಧಾ ಯುಗಾದಿ ವಿಶೇಷಾಂಕಕ್ಕೆ ' ಮಾನಸೋಲ್ಲಾಸ ' ಕುರಿತು ಪರಿಚಯಾತ್ಮಕ ಲೇಖನ ಬರೆದಿದ್ದಾರೆ. [೧೫೦] ಹಾಗೇ ೧೯೭೩ ರಲ್ಲಿ ಸುಧಾ ವಾರಪತ್ರಿಕೆಗೆ ' ಮಾನಸೋಲ್ಲಾಸದಲ್ಲಿ ಚಿತ್ರಕಲೆ ' ಎಂಬ ಮತ್ತೊಂದು ಲೇಖನ ಬರೆದಿದ್ದಾರೆ. [೧೫೧] ಇವುಗಳಲ್ಲಿ ಮಾನಸೋಲ್ಲಾಸ ಗ್ರಂಥದಲ್ಲಿ ಹೇಳಲ್ಪಟ್ಟ ಭಿತ್ತಿಚಿತ್ರ ವಿವರಗಳನ್ನು ಚರ್ಚಿಸಲಾಗಿದೆ. ೧೯೭೩ ರಲ್ಲಿ ಪ್ರಕಟವಾದ ಜ್ಞಾನಗಂಗೋತ್ರಿಯ ೫ ನೇ ಸಂಪುಟದಲ್ಲಿ [೧೫೨] ಭಿತ್ತಿಚಿತ್ರ ನೆಲೆಗಳು, ಭಿತ್ತಿಚಿತ್ರ ಸಿದ್ಧತೆ, ಚಿತ್ರರಚನಾ ಕ್ರಮ. ಬಣ್ಣಗಾರಿಕೆ, ಚಿತ್ರಗಳ ವಸ್ತುವಿಷಯಗಳ ಕುರಿತಾದ ಲೇಖನಗಳಿವೆ. ೧೯೭೮ ರಲ್ಲಿ ಆರ್. ಸಿ. ಅಗರವಾಲ್ ಅವರ ಲೇಖನವು [೧೫೩] ಬಿಜಾಪುರ ಭಿತ್ತಿಚಿತ್ರಗಳ ಬಗೆಗೆ ಕಿರುಮಾಹಿತಿ ನೀಡುತ್ತದೆ. ೧೯೭೮ ರ ಪಿ. ಆರ್. ತಿಪ್ಪೇಸ್ವಾಮಿಯವರ ಲೇಖನ [೧೫೪] ಕರ್ನಾಟಕದ ಭಿತ್ತಿಚಿತ್ರಕಲೆಯ ಸಂಕ್ಷಿಪ್ತ ಮಾಹಿತಿ ನೀಡುತ್ತದೆ.

೧೯೭೯ ರಲ್ಲಿ ಪ್ರಕಟವಾದ ಕನ್ನಡ ವಿಷಯ ವಿಶ್ವಕೋಶದಲ್ಲಿ [೧೫೫] ಭಿತ್ತಿಚಿತ್ರಕಲೆಯ ಮಾಹಿತಿ ದೊರಕುತ್ತದೆ. ೧೯೮೦ ರಲ್ಲಿ ಕೆ. ಜಿ. ಕುಂದಣಗಾರ ಅವರ ಲೇಖನ [೧೫೬] ಕನ್ನಡ ಸಾಹಿತ್ಯದಲ್ಲಿ ಸಾಂದರ್ಭಿಕವಾಗಿ ಬರುವ ಭಿತ್ತಿಚಿತ್ರಕಲೆಯ

---

೧೪೪. Lalita Kala, (April, 1959), Page 49-58, Western Chalukya Paintings at Badami, C. Sivaramamurti.

೧೪೫. ಚಿತ್ರಕಲಾ ಪ್ರಪಂಚ : ಪುಟ ೨೫೫-೭೩. ಪ್ರಾಚೀನ ಚಿತ್ರರಚನೆಯಲ್ಲಿ ಭಿತ್ತಿಚಿತ್ರ ಸಿದ್ಧತೆ. ಪಿ. ಆರ್. ತಿಪ್ಪೇಸ್ವಾಮಿ.

೧೪೬. ಪ್ರಜಾಮತ : ದೀಪಾವಳಿ ಸಂಚಿಕೆ (೧೯೬೬) ಪುಟ ೩೫. ೩೯. ಶಿಬಿ - ಒಂದು ಕಲಾಕ್ಷೇತ್ರ. ತಿ. ತಾ. ಶರ್ಮ.

೧೪೭. Bijapur District Gazetteer, (1969), Page 30, 40, A. Sundra.

೧೪೮. Raichur District Gazetteer, (1970), Page 30, 38, A. Sundra.

೧೪೯. Bellary District Gazetteer, (1972), Page 38, 49, A. Sundra.

೧೫೦. ಸುಧಾ. ಯುಗಾದಿ ವಿಶೇಷಾಂಕ (೧೯೭೧). ಪುಟ ೭೩-೭೭. ಮಾನಸೋಲ್ಲಾಸ (ಅಭಿಲಷಿತಾರ್ಥ ಚಿಂತಾಮಣಿ). ಬಿ. ವಿ. ಕೆ. ಶಾಸ್ತ್ರಿ.

೧೫೧. ಸುಧಾ. (ಏಪ್ರಿಲ್ ೨೯. ೧೯೭೩). ಪುಟ ೯-೧೭. ಮಾನಸೋಲ್ಲಾಸದಲ್ಲಿ ಚಿತ್ರಕಲೆ. ಬಿ. ವಿ. ಕೆ. ಶಾಸ್ತ್ರಿ.

೧೫೨. ನಿರಂಜನ (ಸಂ.) : ಜ್ಞಾನಗಂಗೋತ್ರಿ. ಸಂಪುಟ ೫. (೧೯೭೩). ಪ್ರಸಾರಾಂಗ. ಮೈಸೂರು ವಿಶ್ವವಿದ್ಯಾಲಯ. ಮೈಸೂರು.

೧೫೩. Archaeological Studies, Vol. III, (Mysore, 1978), Page 107-30, A Notes on Adilshahi Paintings, R. C. Agarwal.

೧೫೪. ಕಲಾವಿಕಾಸ. ಸಂಪುಟ ೬ (ಡಿಸೆಂಬರ್ ೧೯೭೮). ಪುಟ ೫. ೯. ಭಿತ್ತಿಚಿತ್ರ ನಮ್ಮ ಪ್ರಾಚೀನರ ಅಪೂರ್ವಸಿದ್ಧಿ. ಪಿ. ಆರ್. ತಿಪ್ಪೇಸ್ವಾಮಿ.

೧೫೫. ಕನ್ನಡ ವಿಷಯ ವಿಶ್ವಕೋಶ : (ಮೈಸೂರು ೧೯೭೯). ಪುಟ ೬೦೧-೬೦೯.

೧೫೬. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ (ಏಪ್ರಿಲ್ ೧೯೮೦). ಪುಟ ೧೧೯. ' ಕರ್ನಾಟಕ ಸಾಹಿತ್ಯದಲ್ಲಿ ಚಿತ್ರಕಲೆ '. ಕೆ. ಜಿ. ಕುಂದಣಗಾರ.

ವಿವರಗಳನ್ನು ಹೇಳುತ್ತದೆ. ೧೯೮೦ ರಲ್ಲಿ ಪಿ. ಆರ್. ತಿಪ್ಪೇಸ್ವಾಮಿಯವರ ಲೇಖನದಲ್ಲಿ [೧೫೭] ಭಾರತೀಯ ಚಿತ್ರಕಲಾ ಪರಂಪರೆ ಬೆಳೆದು ಬಂದಿದ್ದನ್ನು ಹೇಳುವಲ್ಲಿ ಕರ್ನಾಟಕದ ಭಿತ್ತಿಚಿತ್ರಕಲೆಯ ವಿವರ ಹೇಳಲಾಗಿದೆ. ೧೯೮೨ ರಲ್ಲಿ ಡಾ॥ ಅ. ಸುಂದರ ಅವರ ಲೇಖನದಲ್ಲಿ [೧೫೮] ಬದಾಮಿ ಮತ್ತು ಸುತ್ತಲಿನ ಪ್ರಾಗೈತಿಹಾಸಿಕ ಮತ್ತು ಐತಿಹಾಸಿಕ ಭಿತ್ತಿಚಿತ್ರಗಳನ್ನು ಕುರಿತು ಚರ್ಚಿಸಲಾಗಿದೆ. ೧೯೮೨ ರಲ್ಲಿ ಕರ್ನಾಟಕ ರಾಜ್ಯ ಗೆಝೆಟೀಯರ್‌ದಲ್ಲಿ [೧೫೯] ಭಿತ್ತಿಚಿತ್ರಗಳ ಬಗೆಗಿನ ವಿವರಗಳು ಕಂಡುಬರುತ್ತವೆ.

೧೯೮೬ ರಲ್ಲಿ ಪಿ. ಆರ್. ತಿಪ್ಪೇಸ್ವಾಮಿಯವರ ಲೇಖನ [೧೬೦] ಕರ್ನಾಟಕದ ಭಿತ್ತಿಚಿತ್ರಕಲೆಯ ಬಗೆಗೆ ಕಿರುನೋಟ ಹರಿಸುತ್ತದೆ. ಎಂ. ಆರ್. ಶ್ಯಾನಭಾಗ ಅವರ ಲೇಖನ [೧೬೧] ಕರಾವಳಿ ಭಾಗದ ಕಾವಿ ಭಿತ್ತಿಚಿತ್ರಕಲೆಯನ್ನು ಸಂಕ್ಷಿಪ್ತವಾಗಿ ಪರಿಚಯಿಸಿದರೆ. ಡಾ॥ ಎಸ್. ಸಿ. ಪಾಟೀಲ ಅವರ ಲೇಖನ [೧೬೨] ಪ್ರಾಚೀನ ಭಿತ್ತಿಚಿತ್ರ ರಚನೆಯಲ್ಲಿ ಅನುಸರಿಸುತ್ತಿದ್ದ ಚಿತ್ರಕಲೆಯ ಆರು ಅಂಗಲಕ್ಷಣಗಳನ್ನು ಕುರಿತು ಚರ್ಚಿಸಿದೆ. ಬಿ. ವಿ. ಕೆ. ಶಾಸ್ತ್ರಿ ಅವರ ಲೇಖನ [೧೬೩] ಕನ್ನಡ ಸಾಹಿತ್ಯದಲ್ಲಿ ಬರುವ ಭಿತ್ತಿಚಿತ್ರಕಲೆಯ ಅಂಶಗಳು ಮತ್ತು ಕಲಾವಿದ ಚೀರಘಟ್ಟಿಯ ಬಗ್ಗೆ ಚರ್ಚಿಸಿದೆ.

೧೯೮೭ ರಲ್ಲಿ ಪ್ರಕಟವಾದ ಹರತಿಸಿರಿ ನೆನಪಿನ ಸಂಪುಟದಲ್ಲಿ [೧೬೪] ಅ. ಸುಂದರ ಅವರ ಲೇಖನ ಪ್ರಾಗೈತಿಹಾಸಿಕ ಗವಿವರ್ಣ ಮತ್ತು ಬಯಲು ಬಂಡೆ ಚಿತ್ರಗಳ ಬಗೆಗೆ ಮಾಹಿತಿ ನೀಡಿದರೆ, ಶ್ರೀಶೈಲ ಆರಾಧ್ಯ ಅವರ ಲೇಖನ ಚಿತ್ರದುರ್ಗ ಪರಿಸರದ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳ ಕುರಿತಾದ ವಿವರಣೆ ಕೊಡುತ್ತದೆ. ಡಾ॥ ಕೃಷ್ಣಾನಂದ ಕಾಮತ್ ಅವರ ಲೇಖನ ಸಿಬಿಯ ಭಿತ್ತಿಚಿತ್ರಗಳ ವಸ್ತುವಿಷಯ, ವರ್ಣಗಾರಿಕೆ, ಚಿತ್ರಶೈಲಿಗಳನ್ನು ಪರಿಚಯಿಸುತ್ತದೆ.

೧೯೮೮ ರಲ್ಲಿ ಆರ್. ರಾಮಕೃಷ್ಣನ್ ಅವರ ಲೇಖನ [೧೬೫] ಶಿಬಿಯ ಭಿತ್ತಿಚಿತ್ರಗಳ ಬಗೆಗೆ ಒಂದು ಸ್ಥೂಲನೋಟ ಕೊಡುತ್ತದೆ. ೧೯೯೧ ರಲ್ಲಿ ಡಾ॥ ಜೋತ್ಸ್ನಾ ಕಾಮತ್[೧೬೬] ಅವರ ಲೇಖನ ಭಿತ್ತಿಚಿತ್ರಗಳಲ್ಲಿ ಐತಿಹಾಸಿಕ ವ್ಯಕ್ತಿಗಳನ್ನು

---

೧೫೭. ಸವಿ ಸಂಚಯ (ಸದಾಶಿವ ಒಡೆಯರ್. ಸ್ಮರಣಗ್ರಂಥ. ೧೯೮೦). ಪುಟ ೨೦೮-೧೨. ಭಾರತೀಯ ಚಿತ್ರಕಲೆಯ ಪರಂಪರೆ. ಪಿ. ಆರ್. ತಿಪ್ಪೇಸ್ವಾಮಿ.

೧೫೮. ಚಾಳುಕ್ಯಶ್ರೀ (ಬಾದಾಮಿ ೧೯೮೨). ಪುಟ ೧೧೮. ೨೫. ವಿಶಿಷ್ಟ ವರ್ಣಚಿತ್ರಕಲೆಯ ಆಗರ. ಬದಾಮಿ. ಡಾ. ಅ. ಸುಂದರ.

೧೫೯. Suryanath U. Kamat (Ed.) : Karnataka State Gazetteer (1982), Page 190-215.

೧೬೦. ಅವಲೋಕನ (ವಿಶ್ವಕನ್ನಡ ಸಮ್ಮೇಳನ. ಮೈಸೂರು. ೧೯೮೬). ಪುಟ ೩೨೮-೩೨. ಕರ್ನಾಟಕದ ಚಿತ್ರಕಲೆ. ಪಿ. ಆರ್. ತಿಪ್ಪೇಸ್ವಾಮಿ.

೧೬೧. 'ಸಂಯುಕ್ತ ಕರ್ನಾಟಕ'. ಸಾಪ್ತಾಹಿಕ ಸೌರಭ (ಡಿಸೆಂಬರ ೨೮. ೧೯೮೬) ಪುಟ ೧-೩. ಕರಾವಳಿ ದೇಗುಲಗಳಲ್ಲಿ ಭಿತ್ತಿಚಿತ್ರಗಳು. ಎಂ. ಆರ್. ಶ್ಯಾನಭಾಗ.

೧೬೨. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ (ಡಿಸೆಂಬರ್ ೧೯೮೬). ಪುಟ ೧೩೦-೩೨. 'ಚಿತ್ರಕಲೆಯ ಆರು ಅಂಗಲಕ್ಷಣಗಳು'. ಎಸ್. ಸಿ. ಪಾಟೀಲ.

೧೬೩. ವಿಶ್ವಕನ್ನಡ. ಸಂಪುಟ ೩ (೧೯೮೬). ಪುಟ ??. ಕನ್ನಡ ಸಾಹಿತ್ಯದಲ್ಲಿ ದೃಶ್ಯಕಲೆ. ಬಿ. ವಿ. ಕೆ. ಶಾಸ್ತ್ರಿ.

೧೬೪.i) ಲಕ್ಷ್ಮಣ ತೆಲಗಾವಿ (ಸಂ.) : ಹರತಿಸಿರಿ (ಹೆಚ್. ಪಿ. ವೀರನಾಯಕ 'ಹರತಿ' ನೆನಪಿನ ಸಂಪುಟ. ಹರ್ತಿಕೋಟೆ. ೧೯೮೭). ಪ್ರಾಗೈತಿಹಾಸಿಕ ಗವಿವರ್ಣ ಮತ್ತು ಬಯಲುಬಂಡೆ ಚಿತ್ರಗಳು. ಅ. ಸುಂದರ

ii) – ಅದೇ – ಚಿತ್ರದುರ್ಗದ ಪರಿಸರದ ಪ್ರಾಗೈತಿಹಾಸಿಕ ಚಿತ್ರಗಳು. ಎಚ್. ಶ್ರೀಶೈಲ ಆರಾಧ್ಯ.

iii) – ಅದೇ – ಶಿಬಿಯ ಭಿತ್ತಿಚಿತ್ರಗಳು. ಡಾ॥ ಕೃಷ್ಣಾನಂದ ಕಾಮತ್.

೧೬೫. Souviner from The Sibi Temple (1988), Page 83, 88, The Sibimurals, R. Ramakrishna.

೧೬೬. ಇತಿಹಾಸದರ್ಶನ. ಸಂಪುಟ ೬ (೧೯೯೧). ಕರ್ನಾಟಕ ಇತಿಹಾಸ ಅಕಾಡೆಮಿ. ಬೆಂಗಳೂರು. ಭಿತ್ತಿಚಿತ್ರಗಳಲ್ಲಿ ಐತಿಹಾಸಿಕ ವ್ಯಕ್ತಿಗಳು. ಡಾ॥ ಜೋತ್ಸ್ನಾ ಕಾಮತ್.

ಗುರುತಿಸುವುದಾಗಿದ್ದಾರೆ. ಇವರದೇ ಇನ್ನೊಂದು ಲೇಖನ ೧೯೯೨ ರಲ್ಲಿ [೧೬೭] ಭಿತ್ತಿಚಿತ್ರಗಳಲ್ಲಿ ತೇರನ್ನು ಕುರಿತದ್ದಾಗಿದೆ. ೧೯೯೩ ರಲ್ಲಿ ಪ್ರಕಟವಾದ ೬೨ ನೇ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆಯಲ್ಲಿ [೧೬೮] ರಾಯಚೂರು ಮತ್ತು ಕೊಪ್ಪಳ ಜಿಲ್ಲೆಯ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳ ವಿವರಣೆ ಇದೆ.

೧೯೯೫ ರಲ್ಲಿ ಸ್ಕೂಲ್ ಆಫ್ ಆರ್ಟ್ಸ್. ಧಾರವಾಡ ವಜ್ರಮಹೋತ್ಸವ ಸ್ಮರಣ ಸಂಚಿಕೆ ಚಿತ್ರಾಕ್ಷಿಯಲ್ಲಿ [೧೬೯] ಗುಳೇದಗುಡ್ಡದ ಭಿತ್ತಿಚಿತ್ರಗಳು. ವಿಶಿಷ್ಟ ವರ್ಣಚಿತ್ರಕಲೆಯ ಆಗರ ಬದಾಮಿ ಹೀಗೆ ಭಿತ್ತಿಚಿತ್ರಕಲೆ ಮತ್ತು ಅದಕ್ಕೆ ಪೂರಕವಾದ ೧೧ (ಹನ್ನೊಂದು) ಲೇಖನಗಳಿವೆ. ಇವು ಭಿತ್ತಿಚಿತ್ರಕಲೆಯ ಒಂದು ಪರಿಚಯಾತ್ಮಕ ನೋಟ ಕೊಡುತ್ತವೆ. ೧೯೯೬ ರಲ್ಲಿ ಪುರಾತತ್ವ ಇಲಾಖೆಯು ಗ್ರಂಥ ಒಂದನ್ನು ಹೊರತಂದಿದ್ದು, [೧೭೦] ಅದರಲ್ಲಿ ಕೃಷ್ಣಾನಂದ ಕಾಮತ್ ಅವರ ಲೇಖನವಿದ್ದು. ಕರಾವಳಿ ಭಾಗದ ಕಾವಿ ಭಿತ್ತಿಚಿತ್ರಗಳ ಕುರಿತಾದ ಮಾಹಿತಿ ಇದರಲ್ಲಿದೆ. ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿನ ಜಯತೀರ್ಥ ಕಾಗಲಕರ ಅವರ ಲೇಖನ [೧೭೧] ಸುರಪುರದ ಗರುಡಾದ್ರಿ ಶೈಲಿಯ ಭಿತ್ತಿಚಿತ್ರಗಳ ಬಗ್ಗೆ ಸಂಕ್ಷಿಪ್ತವಾಗಿ ಹೇಳುತ್ತದೆ.

೧೯೯೭ ರಲ್ಲಿ ಕನ್ನಡ ವಿಶ್ವವಿದ್ಯಾಲಯವು 'ಕರ್ನಾಟಕ ಚರಿತ್ರೆ ಮಾಲೆ' ಎಂಬ ಏಳು ಸಂಪುಟಗಳನ್ನು ಹೊರತಂದಿದ್ದು [೧೭೨] ಅವುಗಳಲ್ಲಿ ಕಲೆಯನ್ನು ಕುರಿತು ಹೇಳುವಾಗ ಆಯಾ ಕಾಲದ ಭಿತ್ತಿಚಿತ್ರಗಳ ಕುರಿತು ಪ್ರಾಸಂಗಿಕವಾಗಿ ವಿವರಗಳನ್ನು ಕೊಡಮಾಡಿದ್ದಾರೆ.

೧೯೯೮ ರ ಇತಿಹಾಸ ದರ್ಶನ ಸಂಪುಟ ೧೩ ರಲ್ಲಿ [೧೭೩] ಶೀಲಾಕಾಂತ ಪತ್ತಾರ ಅವರ 'ಮತ್ತೆರಡು ಚಾಲುಕ್ಯ ವರ್ಣಚಿತ್ರಗಳ ಶೋಧ', ವಿ. ಟಿ. ಎಸ್. ರಾವ್ ಅವರ ಕರ್ನಾಟಕದ ಭಿತ್ತಿಚಿತ್ರಗಳಲ್ಲಿ ವಿಶಿಷ್ಟವಾದ ಲೇಪಾಕ್ಷಿಯ ಚಿತ್ರಗಳು. ಡಾ॥ ಬೆಂ. ಶಾ. ಶ್ಯಾಮಲಾ ರತ್ನಕುಮಾರಿ ಅವರ 'ಗೇರುಸೊಪ್ಪಾದಲ್ಲಿನ ಕಾವಿ ಚಿತ್ರಗಳು ಒಂದು ಹೊಸಶೋಧ' ಎಂಬ ಲೇಖನಗಳು ಪ್ರಕಟವಾಗಿವೆ. ೧೯೯೮ ರಲ್ಲಿ ಕರ್ಮವೀರ ಪತ್ರಿಕೆಯಲ್ಲಿನ ಎಸ್. ವೆಂಕಟೇಶ

---

೧೬೭. ಇತಿಹಾಸದರ್ಶನ. ಸಂಪುಟ ೭ (೧೯೯೨). ಕರ್ನಾಟಕ ಇತಿಹಾಸ ಅಕಾಡೆಮಿ. ಬೆಂಗಳೂರು. ವಾಸ್ತುಶಿಲ್ಪ ಭಿತ್ತಿಚಿತ್ರಗಳಲ್ಲಿ ತೇರು. ಡಾ॥ ಜೋತ್ಸ್ನಾ ಕಾಮತ್.

೧೬೮. ತಿರುಳ್ಗನ್ನಡ (ಅಖಿಲ ಭಾರತ ೬೨ ನೇ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣಸಂಚಿಕೆ. ಕೊಪ್ಪಳ. ೧೯೯೩). ಪುಟ ೫೨. ೫೭.

೧೬೯. ಡಾ. ಎಸ್. ಸಿ. ಪಾಟೀಲ್ (ಸಂ.) : 'ಚಿತ್ರಾಕ್ಷಿ' (ವಜ್ರಮಹೋತ್ಸವ ಸ್ಮರಣಸಂಚಿಕೆ. ಸ್ಕೂಲ್ ಆಫ್ ಆರ್ಟ್ಸ್. ಧಾರವಾಡ. (೧೯೯೫)

೧೭೦. Dr. D. V. Devaraj and C. S. Patil (Ed.) (1996) : Art and Architecture in Karnataka (Paper presented at the National Seminor on Archaeology (1985), Directorate of Archaeology and Museams, Mysore.

೧೭೧. ಸಂಯುಕ್ತ ಕರ್ನಾಟಕ (ಮೇ ೨೮. ೧೯೯೬) ಪುಟ ೮. ನಶಿಸುತ್ತಿರುವ ಗರುಡಾದ್ರಿ ಪರಂಪರೆಯ ಚಿತ್ರಕಲೆ. ಜಯತೀರ್ಥ ಕಾಗಲಕರ.

೧೭೨. ಕರ್ನಾಟಕ ಚರಿತ್ರೆ ಮಾಲೆ ಸಂಪುಟಗಳು (೧೯೯೭). ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ. ಹಂಪಿ.

i) ಪ್ರೊ. ಅ. ಸುಂದರ (ಸಂ.). ಸಂಪುಟ - ೧.
ii) ಪ್ರೊ. ಬಿ. ಸುರೇಂದ್ರರಾವ್ (ಸಂ.). ಸಂಪುಟ - ೨.
iii) ಪ್ರೊ. ಕೆ. ಶಿವರಣ್ಣ (ಸಂ.). ಸಂಪುಟ - ೩.
iv) ಪ್ರೊ. ಬಿ. ಷೇಕ್‌ಅಲಿ (ಸಂ.). ಸಂಪುಟ - ೪.
v) ಪ್ರೊ. ಬಿ. ಷೇಕ್‌ಅಲಿ (ಸಂ.). ಸಂಪುಟ - ೫.
vi) ಡಾ॥ ಸೆಬಾಸ್ಟಿಯನ್ ಜೋಸೆಫ್ (ಸಂ.). ಸಂಪುಟ - ೬.
vii) ಪ್ರೊ. ಎಸ್. ಚಂದ್ರಶೇಖರ್ (ಸಂ.). ಸಂಪುಟ - ೭.

೧೭೩. ಇತಿಹಾಸ ದರ್ಶನ. ಸಂಪುಟ ೧೩. (೧೯೯೮). ಕರ್ನಾಟಕ ಇತಿಹಾಸ ಅಕಾಡೆಮಿ (ರಿ.). ಬೆಂಗಳೂರು.

ಅವರ ಲೇಖನ [೧೭೪] ಸಿರಾದ ಭಿತ್ತಿಚಿತ್ರಗಳ ಮತ್ತು ಪ್ರಜಾವಾಣಿ ದೀಪಾವಳಿ ಸಂಚಿಕೆಯಲ್ಲಿನ ಕೃಷ್ಣಾನಂದ ಕಾಮತ್ ಅವರ ಲೇಖನ [೧೭೫] ಲೇಪಾಕ್ಷಿ ಭಿತ್ತಿಚಿತ್ರಗಳ ವಿಷಯ ವೈವಿಧ್ಯ. ವರ್ಣಗಾರಿಕೆ. ರೇಖಾವಿನ್ಯಾಸ. ಕಾಲವಿಚಾರಗಳ ಕುರಿತು ಸ್ಥೂಲ ಮಾಹಿತಿ ನೀಡುತ್ತವೆ.

೧೯೯೯ ರಲ್ಲಿ ಮ. ಮುರಳೀಕೃಷ್ಣ ಅವರು [೧೭೬] ಸುಧಾ ಪತ್ರಿಕೆಗೆ ಲೇಖನ ಬರೆದಿದ್ದು ಅದರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ' ಸುರಾಲು ' ವಿನ ಹಳೆಯ ಮಣ್ಣಿನ ಅರಮನೆಯ ಭಿತ್ತಿಚಿತ್ರಗಳ ಕುರಿತು ಪ್ರಸ್ತಾಪಿಸುತ್ತಾರೆ. ೧೯೯೯ ರಲ್ಲಿ ಅ. ಲ. ನರಸಿಂಹನ್ ಅವರು ' ಆಲೇಖ್ಯ ' ಎಂಬ ಕೃತಿ ಹೊರತಂದಿದ್ದು [೧೭೭] ಅದರಲ್ಲಿ ' ಶಿಷ್ಟಪದ ಚಿತ್ರಕಲೆಯ ಉಗಮ '. ಕರ್ನಾಟಕದ ಚಿತ್ರಕಲೆಯಲ್ಲಿ ಸಂಸ್ಕೃತಿ. ಎಂಬ ಎರಡು ಲೇಖನಗಳು ಭಿತ್ತಿಚಿತ್ರಕಲೆಗೆ ಸಂಬಂಧಿಸಿದವುಗಳಾಗಿವೆ. ಕರ್ಮವೀರದಲ್ಲಿನ ಎಸ್. ವೆಂಕಟೇಶ ಅವರ ಲೇಖನ [೧೭೮] ತುಮಕೂರಿನ ನಲ್ಲಪ್ಪನ ಹಳೆಯ ಮನೆಯಲ್ಲಿನ ಭಿತ್ತಿಚಿತ್ರಗಳನ್ನು ವಿವರಿಸಿದರೆ. ಎನ್. ಜಗನ್ನಾಥ ಪ್ರಕಾಶ ಅವರ ಲೇಖನ [೧೭೯] ಶ್ರವಣಬೆಳಗೊಳದ ಜೈನಮಠದ ಭಿತ್ತಿಚಿತ್ರಗಳ ಬಗ್ಗೆ ಸಂಕ್ಷಿಪ್ತವಾಗಿ ಹೇಳುತ್ತದೆ.

೨೦೦೦ ರಲ್ಲಿನ ಎಸ್. ವೆಂಕಟೇಶ್[೧೮೦] ಅವರ ಲೇಖನ ಆನೆಗೊಂದಿಯ ಹಾಳಾಗಿರುವ ಭಿತ್ತಿಚಿತ್ರಗಳ ಬಗೆಗೆ ಸಂಕ್ಷಿಪ್ತವಾದ ಮಾಹಿತಿ ನೀಡಿದರೆ. ರಾಜೇಶ್ ಶಹಬಾದಿ ಅವರ ಲೇಖನ[೧೮೧] ಸುರಪುರದ ಭಿತ್ತಿಚಿತ್ರಗಳ ಕುರಿತು ಕಿರುನೋಟ ಬೀರುತ್ತದೆ. ೨೦೦೦ ರಲ್ಲಿ ಇತ್ತೀಚೆಗೆ ಡಾ॥ ಎಸ್. ಸಿ. ಪಾಟೀಲರ ಪ್ರಬಂಧವು[೧೮೨] ಬಿ. ಕೆ. ಹಳ್ಳಿಯ ಅಪೂರ್ವ ಭಿತ್ತಿಚಿತ್ರ ಭಾಂಡಾರ ಶೋಧ ಹಳಿಯಾಳ ಸಮೀಪದ ಬಂಜರ ಕಂಚನ ಹಳ್ಳಿಯ ಶ್ರೀರಾಮ ಮಂದಿರದ ಭಿತ್ತಿಚಿತ್ರಗಳನ್ನು ಮೊದಲ ಬಾರಿಗೆ ಬೆಳಕಿಗೆ ತಂದಿರುವದಲ್ಲದೇ. ಅವುಗಳ ವಿಷಯ ವೈವಿಧ್ಯ. ವರ್ಣಸಂಯೋಜನೆ. ರೇಖಾವಿನ್ಯಾಸ. ಕಾಲಮಾನದ ಬಗೆಗೆ ಚರ್ಚಿಸಲಾಗಿದೆ.

ಇನ್ನು ಕನ್ನಡದಲ್ಲಿ ಚಿತ್ರಕಲೆಯ ಬಗ್ಗೆ ಶಾಸ್ತ್ರೀಯ ನೆಲೆಯಲ್ಲಿ. ವಿಶ್ವವಿದ್ಯಾಲಯಗಳಲ್ಲಿ ಸಂಶೋಧನಾ ಅಧ್ಯಯನಗಳು ಇತ್ತೀಚೆಗೆ ಪ್ರಾರಂಭಗೊಂಡಿವೆ. ಕನ್ನಡದಲ್ಲಿ ಮೊದಲು ಚಿತ್ರಕಲೆಯನ್ನೇ ಅಧ್ಯಯನ ವಿಷಯವಾಗಿ ತೆಗೆದುಕೊಂಡು ಸಂಶೋಧನೆ ಮಾಡಿದವರು ಡಾ॥ ಎಸ್. ಸಿ. ಪಾಟೀಲ್ ಅವರು. [೧೮೩] ಅವರ ' ಕರ್ನಾಟಕದ ಜನಪದ

---

೧೭೪. ಕರ್ಮವೀರ (ನವ್ಹೆಂಬರ ೧. ೧೯೯೮). ಪುಟ ೩೮-೪೧. ಅವಸಾನದ ಅಂಚಿನಲ್ಲಿ ಸಿರಾದ ಭಿತ್ತಿಚಿತ್ರಗಳು. ಎಸ್. ವೆಂಕಟೇಶ್.

೧೭೫. ಪ್ರಜಾವಾಣಿ. ದೀಪಾವಳಿ ವಿಶೇಷಾಂಕ (೧೯೯೮). ಪುಟ ೬೮-೭೫. ಲೇಪಾಕ್ಷಿಯ ಭಿತ್ತಿಚಿತ್ರಗಳು. ಕೃಷ್ಣಾನಂದ ಕಾಮತ್.

೧೭೬. ಸುಧಾ (ಜುಲೈ ೧೫. ೧೯೯೯). ಪುಟ ೪೨. ೪೪. ' ತೋಳಹರಾಳಿದ ಸುಂದರ ಸುರಾಲು ' ಮ. ಮುರಳೀಕೃಷ್ಣ.

೧೭೭. ಅ. ಲ. ನರಸಿಂಹನ್ : (೧೯೯೯). ಆಲೇಖ್ಯ. ಸಂಯೋಜಿತ. ಬೆಂಗಳೂರು.

೧೭೮. ಕರ್ಮವೀರ (ಜುಲೈ ೨೫. ೧೯೯೯). ಪುಟ ೪೨-೪೩. ಕಣ್ಣು ಹಾಯಿಸಬಾರದೇ ಈ ಭಿತ್ತಿಚಿತ್ರಗಳತ್ತ ? ಎಸ್. ವೆಂಕಟೇಶ್.

೧೭೯. ಕರ್ಮವೀರ (ಆಗಸ್ಟ ೧೫. ೧೯೯೯). ಪುಟ ೩೮-೩೯. ಶ್ರವಣಬೆಳಗೊಳದ ಭಿತ್ತಿಚಿತ್ರಗಳು. ಎನ್. ಜಗನ್ನಾಥ ಪ್ರಕಾಶ.

೧೮೦. ನೂತನ (ಫೆಬ್ರುವರಿ ೨೦. ೨೦೦೦) ಪುಟ ೩೫. ೩೬. ಕಣ್ಮರೆಯಾಗುತ್ತಿರುವ ಆನೆಗೊಂದಿಯ ಭಿತ್ತಿಚಿತ್ರಗಳು. ಎಸ್. ವೆಂಕಟೇಶ್.

೧೮೧. ವಿಜಯ ಕರ್ನಾಟಕ (ಸೆಪ್ಟೆಂಬರ ೨೨. ೨೦೦೦). ಪುಟ ೮. ವಿನಾಶದ ಅಂಚಿನಲ್ಲಿ ವಿಶ್ವವಿಖ್ಯಾತ ಗರುಡಾದ್ರಿ ಕಲೆ. ರಾಜೇಶ ಶಹಬಾದಿ.

೧೮೨. ಡಾ॥ ಎಸ್. ಸಿ. ಪಾಟೀಲ ಅವರ ಅಪ್ರಕಟಿತ ಲೇಖನ. ಇದನ್ನು ಇತಿಹಾಸ ಅಕಾಡೆಮಿ ವಾರ್ಷಿಕ ಸಮಾವೇಶ ಹಂಪಿಯಲ್ಲಿ ಮಂಡಿಸಲಾಗಿದೆ. ಈ ಲೇಖನವನ್ನು ಬಳಸಿಕೊಳ್ಳಲು ಅವಕಾಶ ಮಾಡಿಕೊಟ್ಟಿದ್ದಕ್ಕಾಗಿ ಅವರಿಗೆ ಕೃತಜ್ಞನಾಗಿದ್ದೇನೆ.

೧೮೩. ಈ ಮೊದಲು ಡಾ. ಬಿ. ಕೆ. ಹಿರೇಮಠ ಅವರು ' ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ ' ಎಂಬ ಸಂಶೋಧನಾ ಮಹಾಪ್ರಬಂಧವನ್ನು ರಚಿಸಿದ್ದು. ಅದರಲ್ಲಿ ಹಸ್ತಪ್ರತಿ ಚಿತ್ರಕಲೆಯನ್ನು ಕುರಿತು ಸಾಂದರ್ಭಿಕವಾಗಿ ಅಧ್ಯಯನ ಮಾಡಿದ್ದಾರೆ.

ಚಿತ್ರಕಲೆ ' ಎಂಬ ಸಂಶೋಧನ ಮಹಾಪ್ರಬಂಧವೇ ಕರ್ನಾಟಕದಲ್ಲಿ ಮೊದಲ ಚಿತ್ರಕಲಾ ಕ್ಷೇತ್ರದ ಪಿಹೆಚ್. ಡಿ. ಮಹಾಪ್ರಬಂಧವೆಂಬ ಅಗ್ಗಳಿಕೆಗೆ ಪಾತ್ರವಾಗಿದೆ. ಇದರಲ್ಲಿ ಕರ್ನಾಟಕದ ಅದರಲ್ಲೂ ಉತ್ತರ ಕರ್ನಾಟಕದ ಜನಪದ ಚಿತ್ರಕಲೆಯ ವಿವರಣೆ ವಿಶ್ಲೇಷಣೆ ಇದೆಯಲ್ಲದೇ ಜನಪದ ಭಿತ್ತಿಚಿತ್ರಕಲೆಯ ಬಗ್ಗೆಯೂ ಸಾಂದರ್ಭಿಕವಾಗಿ ಅಧ್ಯಯನ ಮಾಡಿದ್ದಾರೆ. ಇದಕ್ಕೆ ೧೯೯೧ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಡಾಕ್ಟರೇಟ ಪದವಿ ನೀಡಿದೆ.

ಡಾ॥ ಅ. ಲ. ನರಸಿಂಹನ್ ಅವರು ' ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು ' ಎಂಬ ವಿಷಯವಾಗಿ ಮಹಾಪ್ರಬಂಧ ರಚಿಸಿದ್ದು ಇದರಲ್ಲಿ ಕರ್ನಾಟಕದ ಕೆಲವು ಪ್ರದೇಶಗಳ ಭಿತ್ತಿಚಿತ್ರಗಳನ್ನು ಸಾಂಸ್ಕೃತಿಕ ಅಂಶಗಳಿಗೆ ಸಾಂದರ್ಭಿಕವಾಗಿ ಬಳಸಿಕೊಂಡು. ವಿಶೇಷವಾಗಿ ಅಧ್ಯಯನ ಮಾಡಿದ್ದಾರೆ. ೧೯೯೮ ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದಿಂದ ಡಾ. ಪುಷ್ಪಾ ದ್ರಾವಿಡ್[೧೮೪] ಅವರು ಕಲಾವಿದ ರೋರಿಚ್ ಅವರ ಕಲಾಕೃತಿಗಳ ಬಗ್ಗೆ ಅಧ್ಯಯನ ಮಾಡಿದ್ದು ಅವರಿಗೆ ಡಾಕ್ಟರೇಟ ಪದವಿ ಲಭಿಸಿದೆ.

ಇಷ್ಟೆಲ್ಲದರ ನಡುವೆಯೂ ರಾಜ್ಯ ಲಲಿತಕಲಾ ಅಕಾಡೆಮಿ ರಾಜ್ಯದೆಲ್ಲೆಡೆ ಸಂಚರಿಸಿ ಭಿತ್ತಿಚಿತ್ರಗಳನ್ನು ವಿಡಿಯೋ ಚಿತ್ರೀಕರಣದಿಂದ ಸಂಗ್ರಹಿಸಿದೆ. ಇದುವರೆಗೆ ನೋಡಿದಂತೆ ಭಿತ್ತಿಚಿತ್ರಗಳ ಬಗ್ಗೆ ಅಲ್ಲಲ್ಲಿ ಕೆಲವು ಪರಿಚಯಾತ್ಮಕ ಲೇಖನಗಳು ಬಂದಿದ್ದರೂ. ವ್ಯವಸ್ಥಿತವಾದ ಅಧ್ಯಯನ ಇಲ್ಲಿಯ ವರೆಗೆ ನಡೆದಿಲ್ಲ. ಅಂದರೆ ಉತ್ತರ ಕರ್ನಾಟಕದಲ್ಲಿ ರಚನೆಯಾದ ಭಿತ್ತಿಚಿತ್ರಗಳ ಬಗ್ಗೆ ಪ್ರಾಚೀನ ಪರಂಪರೆಯಿಂದ ಇಪ್ಪತ್ತನೆಯ ಶತಮಾನದ ವರೆಗೆ ಅನ್ವಯಿಸಿದಂತೆ ಇದುವರೆಗೆ ಸಮಗ್ರವಾದ ಅಧ್ಯಯನಗಳು ನಡೆದಿಲ್ಲ. ಇದನ್ನು ಗಮನದಲ್ಲಿರಿಸಿಕೊಂಡು ಪ್ರಸ್ತುತ ಅಧ್ಯಯನವನ್ನು ಕೈಕೊಳ್ಳಲಾಗಿದೆ.

## ಅಧ್ಯಯನದ ಸ್ವರೂಪ

ಈ ಅಧ್ಯಯನವನ್ನು ಒಂಬತ್ತು ಅಧ್ಯಾಯಗಳಲ್ಲಿ ವಿಂಗಡಿಸಿಕೊಂಡಿದ್ದು, ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚಿತಗೊಂಡ ವಿಷಯಗಳನ್ನು ಸಂಕ್ಷಿಪ್ತದಲ್ಲಿ ಈ ಕೆಳಗಿನಂತೆ ಹೇಳಬಹುದು.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನ ಮತ್ತು ಆಕರ ಸಾಮಗ್ರಿಗಳನ್ನು ಕುರಿತಾದ ವಿವರಣೆ ಇದೆ. ಎರಡನೆಯ ಅಧ್ಯಾಯದಲ್ಲಿ ಭಿತ್ತಿಚಿತ್ರಕಲೆಯ ಅರ್ಥ, ಸ್ವರೂಪ, ಪ್ರಾಚೀನತೆಯನ್ನು ಹೇಳಿ, ಭಿತ್ತಿಚಿತ್ರಕಲೆಯ ಇತಿಹಾಸವನ್ನು ಗುರುತಿಸಲಾಗಿದೆ. ಮೂರನೆಯ ಅಧ್ಯಾಯದಲ್ಲಿ ಪ್ರಾರಂಭಿಕ ಭಿತ್ತಿಚಿತ್ರಗಳು ಶಿಲೆಯ ಮೇಲೆ ರಚನೆಗೊಳ್ಳುತ್ತಿದ್ದರೂ ನಂತರದಲ್ಲಿ ಶಿಲೆ ಮೇಲೆ ಲೇಪಿಸಲಾಗುವ ಮಣ್ಣು, ಗಾರೆಗಳ ಮೇಲೆ. ಅಲ್ಲದೇ ಕಟ್ಟಿಗೆ ಲೋಹ ಮತ್ತು ಗಾಜುಗಳನ್ನು ಕಟ್ಟಡದ ಭಾಗವಾಗಿ ಹೊಂದಿಸಿ ಅವುಗಳ ಮೇಲೂ ಭಿತ್ತಿಚಿತ್ರ ರಚಿಸಿದ್ದನ್ನು ಕಾಣಬಹುದು. ಭಿತ್ತಿಚಿತ್ರ ರಚನೆಗೊಂಡ ಇಂತಹ ವಿವಿಧ ಮಾಧ್ಯಮಗಳು ಅವುಗಳನ್ನು ಚಿತ್ರರಚನೆಗಾಗಿ ಸಿದ್ಧಗೊಳಿಸುವ ವಿಧಾನಗಳ ಕುರಿತು ಮೂರನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

---

೧೮೪. ಡಾ. ಪುಷ್ಪಾ ದ್ರಾವಿಡ್ : ಕಲಾವಿದ ರೋರಿಚ್ ಮತ್ತು ಅವರ ಕಲಾಕೃತಿಗಳು - ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ. ೧೯೯೮

ನಾಲ್ಕನೆಯ ಅಧ್ಯಾಯದಲ್ಲಿ ಭಿತ್ತಿಚಿತ್ರರಚನೆಯ ಪರಿಕರಗಳಾದ ಬಣ್ಣಗಳು, ರೇಖಾಚಿತ್ರಕ್ಕಾಗಿ ಬಳಸುವ ಪೆನ್ಸಿಲ್, ಇದ್ದಿಲುಗಳಂತಹ ವಸ್ತುಗಳು, ಅಂಟುಮಾಧ್ಯಮಗಳು, ವರ್ಣಲೇಪಿಸಲು ಉಪಯೋಗಿಸುವ ಕುಂಚಗಳು, ವರ್ಣ ತಯಾರಿಕೆಗಾಗಿ ಉಪಯೋಗಿಸುವ ನೈಸರ್ಗಿಕ ವಸ್ತುಗಳು ಮುಂತಾದವುಗಳ ಬಗ್ಗೆ ವಿವರಿಸಲಾಗಿದೆ. ಭಿತ್ತಿ ಹಸಿ ಇರುವಾಗ ಚಿತ್ರ ರಚಿಸುವುದು, ಭಿತ್ತಿ ಒಣಗಿದ ನಂತರ ಚಿತ್ರ ರಚಿಸುವುದು, ಬಣ್ಣದ ಪುಡಿಗಳನ್ನು ಅಂಟುಮಾಧ್ಯಮದಲ್ಲಿ ಬೆರೆಸಿ ಚಿತ್ರ ರಚಿಸುವ ಟೆಂಪರಾ ವಿಧಾನಗಳಲ್ಲದೇ ಚಿತ್ರ ರಚನೆಯಲ್ಲಿ ಅನುಸರಿಸುವ ಅಳತೆ ವಿಧಾನ, ಚಿತ್ರ ರಚನೆಯ ಹಂತಗಳು ಐದನೆಯ ಅಧ್ಯಾಯದಲ್ಲಿ ಚರ್ಚಿತಗೊಂಡಿವೆ.

ಭಿತ್ತಿ ಚಿತ್ರಕಲೆಯಲ್ಲಿ ಪ್ರಾಗೈತಿಹಾಸಿಕ ಭಿತ್ತಿಚಿತ್ರಕಲೆ, ಜನಪದ ಭಿತ್ತಿಚಿತ್ರಕಲೆ, ಶಿಷ್ಟಪದ ಭಿತ್ತಿಚಿತ್ರಕಲೆ, ಸಮ್ಮಿಶ್ರ ಭಿತ್ತಿಚಿತ್ರಕಲೆ ಎಂದು ನಾಲ್ಕು ಭಾಗಗಳನ್ನು ಮಾಡಿಕೊಂಡು ಅವುಗಳ ನೆಲೆಗಳನ್ನು ಹೇಳಿ ಚಿತ್ರಗಳ ವಸ್ತುವಿಷಯ, ಚಿತ್ರಶೈಲಿ, ವರ್ಣವಿನ್ಯಾಸ, ಸಂಯೋಜನೆ ಮುಂತಾದ ಅಂಶಗಳ ಬಗ್ಗೆ ವಿವರವಾಗಿ ಆರನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಏಳನೆಯ ಅಧ್ಯಾಯದಲ್ಲಿ ಭಿತ್ತಿಚಿತ್ರಕಲೆಯ ಕಲಾವಿದರು ಮತ್ತು ಪೋಷಕರ ಕುರಿತಾದ ಮಾಹಿತಿ ಇದೆ. ಶತಮಾನಗಳ ಉದ್ದಕ್ಕೂ ಭಿತ್ತಿಚಿತ್ರಗಳ ಅಳಿವಿಗೆ ಒದಗುತ್ತಿರುವ ಆಪತ್ತುಗಳು ಹಲವಾರು. ಅವುಗಳನ್ನು ರಾಜಕೀಯ, ಧಾರ್ಮಿಕ, ನೈಸರ್ಗಿಕ, ಸ್ವಾಭಾವಿಕ, ಮತ್ತು ವ್ಯಕ್ತಿಗತ ವಿಪತ್ತುಗಳೆಂದು ವಿಂಗಡಿಸಿಕೊಂಡು ಪರಿಶೀಲಿಸಿ ಅವುಗಲ ಸಂರಕ್ಷಣಾ ಕ್ರಮಗಳನ್ನು ಎಂಟನೆಯ ಅಧ್ಯಾಯದಲ್ಲಿ ಹೇಳಲಾಗಿದೆ.

ಈ ಮಹಾಪ್ರಬಂಧದ ಎಂಟೂ ಅಧ್ಯಾಯಗಳ ಸಂಕ್ಷಿಪ್ತ ಸಮಾಲೋಚನೆ ಹಾಗೂ ಪ್ರಸ್ತುತ ಅಧ್ಯಯನದಿಂದ ಹೊರಬಂದ ಪ್ರಮುಖ ವಿಷಯಗಳ ಸಮೀಕ್ಷೆ ಒಂಬತ್ತನೆಯ ಅಧ್ಯಾಯದಲ್ಲಿ ಇದೆ.

## ಅಧ್ಯಯನದ ವಿಧಾನ

ಈ ಮಹಾಪ್ರಬಂಧದ ರಚನೆಗೆ ಎರಡು ರೀತಿಯ ಆಕರ ಸಾಮಗ್ರಿಗಳನ್ನು ಬಳಸಿಕೊಳ್ಳಲಾಗಿದೆ.

೧) ಮೂಲ ಆಕರ ಸಾಮಗ್ರಿ (Primary Sources)

೨) ಆನುಷಂಗಿಕ ಆಕರ ಸಾಮಗ್ರಿ (Secondary Sources)

ಈ ಎರಡೂ ಮೂಲದಿಂದ ಇಲ್ಲಿ ವಿಷಯ ಸಂಗ್ರಹಣೆ ಮಾಡಲಾಗಿದೆ.

### ೧) ಮೂಲ ಆಕರ ಸಾಮಗ್ರಿ :

ಒಂದು ನಾಡಿನ ಸಂಸ್ಕೃತಿ, ಇತಿಹಾಸ, ಕಲೆ, ಜನಜೀವನಗಳಂತಹ ವಿಷಯಗಳ ಬಗ್ಗೆ ಸಂಶೋಧನೆ ಮಾಡುವಾಗ ಕ್ಷೇತ್ರಕಾರ್ಯ ಅನಿವಾರ್ಯವಾಗುತ್ತದೆ. ಇದು ಮೂಲ ಆಕರ ಸಾಮಗ್ರಿಗಳಿಂದ ಮಾಹಿತಿ ಸಂಗ್ರಹಿಸಲು ಸುಲಭ ಮಾರ್ಗವಾಗಿದೆ. ಈ ಅಧ್ಯಯನಕ್ಕೆ ಮೂಲ ಆಕರ ಸಾಮಗ್ರಿಯಾಗಿ ಮೂಲ ಭಿತ್ತಿಚಿತ್ರಗಳನ್ನೇ ಬಳಸಿಕೊಳ್ಳಲಾಗಿದೆ.

ಈ ಅಧ್ಯಯನದ ಕ್ಷೇತ್ರಕಾರ್ಯವು ಛಾಯಾಚಿತ್ರಣ ಮಾಡುವುದು (ಫೋಟೋಗ್ರಾಫ್ ಮಾಡುವುದು), ಸ್ಲ್ಯಾಡ್ಸ್‌ಗಳ ನಿರ್ಮಾಣ ಹೀಗೆ ವಿವಿಧ ರೂಪದಲ್ಲಿ ಅಧ್ಯಯನ ಕೈಕೊಳ್ಳಲಾಗಿದೆ. ಕೆಲವು ಸಲ ಮೂಲಚಿತ್ರದ ಎದುರಿಗೇ

ಕುರಿತು ಚಿತ್ರಪ್ರತಿಗಳನ್ನು ಮಾಡಿಕೊಂಡು ಅದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಅದೇ ಸ್ಥಳದಲ್ಲೇ ಬರೆದುಕೊಳ್ಳಲಾಯಿತು. ಭಿತ್ತಿಚಿತ್ರಗಳಿದ್ದ ಮಠಗಳ ಮಠಾಧಿಪತಿಗಳು. ದೇವಾಲಯಗಳ ಪೂಜಾರಿಗಳು ಅವುಗಳ ಆವಳಿತಕ್ಕೆ ಸಂಬಂಧಿಸಿದ ಗಣ್ಯರು. ಸ್ಥಳೀಯ ಹಿರಿಯರನ್ನು ಕೇಳಿ ಮಾಹಿತಿ ಪಡೆದುಕೊಳ್ಳಲಾಗಿದೆ. ಮೂಲ ಚಿತ್ರಗಳು ಲಭ್ಯವಿಲ್ಲದ ಸಮಯದಲ್ಲಿ ಅವುಗಳನ್ನು ಪ್ರತಿಮಾಡಿಟ್ಟ ಅಥವಾ ಫೋಟೋಗ್ರಾಫ್ ಮಾಡಿ ಕಾಯ್ದಿಟ್ಟ ಸಂಗ್ರಹಾಲಯಗಳಿಗೆ ಭೇಟಿ ಕೊಟ್ಟು ವಿಷಯ ಸಂಗ್ರಹ ಮಾಡಿಕೊಂಡಿದೆ. ಅಲ್ಲದೇ ಈ ಕ್ಷೇತ್ರಕಾರ್ಯದಲ್ಲಿ ಚಿತ್ರಕಲಾ ಕ್ಷೇತ್ರದ ಹಲವಾರು ವಿದ್ವಾಂಸರ ಜೊತೆಗೆ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚಿಸಿ ಮಾಹಿತಿ ಸಂಗ್ರಹಿಸಲಾಗಿದೆ.

ಕ್ಷೇತ್ರಕಾರ್ಯಕ್ಕೆ ಹೊರಡುವ ಮುಂಚೆ ಎಲ್ಲ ರೀತಿಯ ಪೂರ್ವ ತಯಾರಿ ಮಾಡಿಕೊಳ್ಳಲಾಯಿತು. ಹೊರಡಬೇಕಾದ ಊರು. ಅಲ್ಲಿ ನೋಡಬೇಕಾದ ಸ್ಥಳ. ಎಲ್ಲೆಲ್ಲಿ ನಮಗೆ ಬೇಕಾದ ಭಿತ್ತಿಚಿತ್ರಗಳು ಇವೆ ಎಂದು ಮೊದಲೇ ಪಟ್ಟಿಕೆಗಳಲ್ಲಿ ಬರೆದಿಟ್ಟುಕೊಂಡಿದ್ದಲ್ಲದೇ ಸಂದರ್ಶಿಸುವ ಸ್ಥಳಗಳ ಬಗ್ಗೆ ಈಗಾಗಲೇ ಪ್ರಕಟವಾಗಿರುವ ಐತಿಹಾಸಿಕ. ಸಾಂಸ್ಕೃತಿಕ ವಿವರಗಳನ್ನು ಅಭ್ಯಸಿಸಿ ಅಗತ್ಯವಿರುವ ಅಂಶಗಳನ್ನು ಗುರುತುಹಾಕಿಕೊಂಡು ಅಧ್ಯಯನ ನಡೆಸಲಾಗಿದೆ.

ಹೀಗೆ ಕ್ಷೇತ್ರಕಾರ್ಯದಿಂದ ದೊರೆತ ವಿವರಗಳನ್ನು ಅಭ್ಯಾಸಕ್ಕೆ ಬರವಣಿಗೆಗೆ ಅನುಕೂಲವಾಗುವಂತೆ ಪಟ್ಟಿಕೆಗಳಲ್ಲಿ ಸಂಗ್ರಹ ಮಾಡಿಕೊಂಡು ಪ್ರಬಂಧ ರಚನೆ ಮಾಡಲಾಗಿದೆ.

## ೨) ಆನುಷಂಗಿಕ ಆಕರ ಸಾಮಗ್ರಿ :

(ಸಂಶೋಧನ ಮಹಾಪ್ರಬಂಧಗಳು. ಪ್ರಕಟಿತ-ಅಪ್ರಕಟಿತ ಸಾಹಿತ್ಯ ಕೃತಿಗಳು, ಶಾಸನ ಸಂಪುಟಗಳು. ನಿಘಂಟುಗಳು. ವಿಶ್ವಕೋಶಗಳು. ಗ್ಯಾಝೆಟೀಯರ್‌ಗಳು. ಅನುವಾದ ಗ್ರಂಥಗಳು, ಹಸ್ತಪ್ರತಿಗಳು, ಉದ್ಧರಣೆಯ ಪಟಲಗಳು, ದೇಶಿ ಮತ್ತು ವಿದೇಶಿ ಪ್ರವಾಸಿಗರ ಬರವಣಿಗೆಗಳು. ಸಂಶೋಧನ ಲೇಖನಗಳು, ಪತ್ರಿಕೆಗಳು, ಸಂಪಾದನಾ ಗ್ರಂಥ ಮುಂತಾದವುಗಳನ್ನು ಅಧ್ಯಯನದ ಆನುಷಂಗಿಕ ಆಕರ ಸಾಮಗ್ರಿಗಳಾಗಿ ಬಳಸಿಕೊಳ್ಳಲಾಗಿದೆ.) ಅಲ್ಲದೇ ಶಾಸನಗಳು. ವೀರಗಲ್ಲುಗಳು. ಮಾಸ್ತಿಕಲ್ಲುಗಳಂತಹ ಸ್ಮಾರಕಗಳನ್ನೂ ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಹಾಗೇ ಬೇರೆ ಬೇರೆ ಸ್ಥಳಗಳಲ್ಲಿನ ಗ್ರಂಥಾಲಯಗಳು. ವಸ್ತುಸಂಗ್ರಹಾಲಯಗಳು. ಕಲಾ ಶಾಲೆಗಳು, ಮತ್ತು ಕಲಾ ಪ್ರದರ್ಶನಗಳಿಗೆ ಭೇಟಿ ನೀಡಿ ವಿಷಯ ಸಂಗ್ರಹಿಸಲಾಗಿದೆ.

ಕ್ಷೇತ್ರಕಾರ್ಯದಿಂದ ದೊರೆತ ಮೂಲ ಆಕರ ಸಾಮಗ್ರಿ ಮಾಹಿತಿಯನ್ನು ಪಟ್ಟಿಕೆಗಳಲ್ಲಿ ಸಂಗ್ರಹಿಸಿಕೊಂಡಂತೆ ಆನುಷಂಗಿಕ ಮಾಹಿತಿಯನ್ನೂ ಪಟ್ಟಿಕೆಗಳಲ್ಲಿ ಸಂಗ್ರಹ ಮಾಡಿಕೊಂಡು ಈ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

## ಭಿತ್ತಿಚಿತ್ರ ಕಲೆ

ಭಿತ್ತಿಚಿತ್ರವನ್ನು ಆಂಗ್ಲಭಾಷೆಯಲ್ಲಿ " Mural painting " ಎಂದು ಕರೆಯಲಾಗಿದೆ. ಈ " Mural " ಶಬ್ದವು ಲ್ಯಾಟಿನ್ ಭಾಷೆಯ 'Murus'ದಿಂದ ಬಂದಿದೆ. ' Murus ' ದ ಅರ್ಥವು ಗೋಡೆ (wall) ಎಂದಾಗುವುದು.[೧] ಗೋಡೆಯಮೇಲೆ ಬಣ್ಣದಿಂದ ಬರೆದ ಚಿತ್ರ ಮತ್ತು ಕೆತ್ತಿ. ಕೊರೆದು ಅಂಟಿಸಿ ಹೀಗೆ ಇತರ ಯಾವುದೇ ವಿಧಾನದಿಂದ ಗೋಡೆಯ ಮೇಲೆ ರೂಪಿಸಿದ ಚಿತ್ರಗಳು " Mural " ವ್ಯಾಪ್ತಿಯಲ್ಲಿ ಬರುತ್ತವೆ ಎಂದು ಕ್ಯಾಂಬ್ರಿಜ್ ವಿಶ್ವಕೋಶ ತಿಳಿಸುತ್ತದೆ.[೨] ಗೋಡೆ ಮತ್ತು ಮೇಲ್ಛಾವಣಿಗಳನ್ನು ವರ್ಣಚಿತ್ರಗಳಿಂದ ಅಲಂಕರಿಸುವ ವಿಧಾನವನ್ನು ಭಿತ್ತಿಚಿತ್ರಕಲೆ ಎಂದು ಆಕ್ಸ್‌ಫೋರ್ಡ್ ಶಬ್ದಕೋಶದಲ್ಲಿ ಹೇಳಲಾಗಿದೆ.[೩] ಗೋಡೆಗಳು, ಮೇಲ್ಛಾವಣಿಗಳು. ಮತ್ತು ಗುಹೆಗಳನ್ನು ಫ್ರೆಸ್ಕೊ. ಸೆಕ್ಕೋ. ತೈಲವರ್ಣ. ಟೆಂಪರಾ. ಇಲ್ಲವೆ ಎನ್‌ಕ್ಯಾಸ್ಟಕ್ ವಿಧಾನಗಳಿಂದ ಚಿತ್ರರಚಿಸಿ ಅಲಂಕರಿಸುವ ವಿಧಾನವನ್ನು ಸಹ (Mural painting) ಭಿತ್ತಿಚಿತ್ರಕಲೆ ಎಂದು ವೆಬ್‌ಸ್ಟರ್ಸ್ ನ್ಯೂ ವರ್ಲ್ಡ್‌ಸೈಕ್ಲೋಪಿಡಿಯಾ ಪರಿಗಣಿಸಿದೆ.[೪] ಗೋಡೆ ಮತ್ತು ಮೇಲ್ಛಾವಣಿಗಳ ಮೇಲೆ ವರ್ಣದಿಂದ ರಚಿಸಿದ ಚಿತ್ರಗಳು. ಮತ್ತು ಬಣ್ಣದ ಕಲ್ಲಿನ ತುಂಡುಗಳನ್ನು (ಸೂಡುಬಿಲ್ಲೆ) ಅಂಟಿಸಿ ರೂಪಿಸಿದ ಮೊಸಾಯಿಕ್ ಚಿತ್ರಗಳು (Mural painting) ಭಿತ್ತಿ ಚಿತ್ರಗಳ ವ್ಯಾಪ್ತಿಯಲ್ಲಿ ಒಳಗೊಳ್ಳುತ್ತವೆ ಎಂದು ಬ್ರಿಟಾನಿಕಾ ಎನ್‌ಸೈಕ್ಲೋಪಿಡಿಯಾ ಹೇಳುತ್ತದೆ.[೫] ಕನ್ನಡ ಜಾನಪದ ವಿಶ್ವಕೋಶವು ಭಿತ್ತಿಚಿತ್ರ ಎಂದರೆ ಗೋಡೆಯ ಮೇಲೆ ಬರೆದಿರುವ ಚಿತ್ರವೆಂದು ಹೇಳಿ. ಭಿತ್ತಿ ಎಂಬುದಕ್ಕೆ ಗೋಡೆ, ಕುಡ್ಯ. ಮೂಲ, ತಳ, ಹಿನ್ನೆಲೆ, ಚಿತ್ರವನ್ನು ಬರೆಯುವ ಮೂಲಾಧಾರಗಳಾದ ಬಟ್ಟೆ. ಗೋಡೆ. ಮೊದಲಾದ ಸಾಧನಗಳು ಎಂಬ ಅರ್ಥಗಳನ್ನು ಕೊಟ್ಟಿದೆ.[೬] ಭಾರತೀಯ ಪ್ರಾಚೀನ ಶಿಲ್ಪಶಾಸ್ತ್ರಗಳು ಚಿತ್ರಬರೆಯಲಾಗುವ ಮೂಲಾಧಾರವಾದ ಗೋಡೆ, ಮತ್ತು ಚಿತ್ರಣಕ್ಕಾಗಿ ಆಧಾರದ ಮೇಲೆ ಲೇಪಿಸಲಾಗುವ ಗಾರೆ ಲೇಪನ ಎರಡಕ್ಕೂ ಭಿತ್ತಿ ಎಂದೇ ಕರೆದಿವೆ.[೭] ಗೋಡೆಮೇಲೆ ಲೇಪಿಸಲಾಗುವ ಗಾರೆ ಲೇಪನವನ್ನು ಭಿತ್ತಿ ಎಂದು ಪರಿಗಣಿಸಿದಾಗ. ಗಾರೆ ಲೇಪನದ ಮೇಲೆ ರಚನೆಗೊಂಡ ಚಿತ್ರಗಳನ್ನು ' ಭಿತ್ತಿಚಿತ್ರ '

---

೧. ಜಯಂತ್ ಚಕ್ರವರ್ತಿ : ಟೆಕ್ನಿಕ್ಸ್ ಇನ್ ಇಂಡಿಯನ್ ಮ್ಯುರಲ್ ಪೇಂಟಿಂಗ್ಸ್. ಪುಟ - ೧೨
೨. ಡೇವಿಡ್ ಕ್ರಿಸ್ಟಲ್ : ದಿ ಕ್ಯಾಂಬ್ರಿಜ್ ಎನ್‌ಸೈಕ್ಲೋಪಿಡಿಯಾ. ಪುಟ - ೮೨೨
೩. ದಿ ಆಕ್ಸ್‌ಫರ್ಡ ಇಂಗ್ಲೀಷ ಡಿಕ್ಷನರಿ : ವ್ಹಾಲ್ಯುಮ್ ೧೦. ಪುಟ - ೧೦೬
೪. ವೆಬ್‌ಸ್ಟರ್ಸ್ ನ್ಯೂ ವರ್ಲ್ಡ್ ಎನ್‌ಸೈಕ್ಲೋಪಿಡಿಯಾ : ಪುಟ - ೭೭೨
೫. ದಿ ನ್ಯೂ ಎನ್‌ಸೈಕ್ಲೋಪಿಡಿಯಾ ಬ್ರಿಟಾನಿಕಾ : ಭಾಗ-೮. ಪುಟ - ೪೨೫
೬. ಡಾ. ಚಂದ್ರಶೇಖರ ಕಂಬಾರ (ಸಂ) : ಜನಪದ ವಿಶ್ವಕೋಶ -ಭಾಗ-೨ ಪುಟ-೨೪೨
೭. ಜಯಂತ್ ಚಕ್ರವರ್ತಿ : ಟೆಕ್ನಿಕ್ ಇನ್ ಇಂಡಿಯನ್ ಮುರ್‍ಯಲ್ ಪೇಂಟಿಂಗ್. ಪುಟ - ೨೦

ಎಂದು ಹೇಳಬೇಕಾಗುವುದು. ವಿಶಾಲಾರ್ಥದಲ್ಲಿ ಈ ಲೇಪನವನ್ನು ಗೋಡೆಯಮೇಲೆ ಲೇಪಿಸಲಾಗುವ ಗಾರೆ ಮಿಶ್ರಣಕ್ಕೆ ಸೀಮಿತಗೊಳಿಸದೇ ಚಿತ್ರರಚನೆಯ ಪೂರ್ವದ ಯಾವುದೇ ಹಿನ್ನೆಲೆಯ ಲೇಪನಕ್ಕೂ ಅನ್ವಯಿಸಬಹುದಾಗಿದೆ.

ಕೆಲವು ಸಾಹಿತ್ಯ ಕೃತಿಗಳಲ್ಲಿಯೂ ಭಿತ್ತಿ ಚಿತ್ರಗಳ ಬಗ್ಗೆ ಪ್ರಾಸಂಗಿಕ ವಿವರಗಳಿರುವುದನ್ನು ಇಲ್ಲಿ ಕಾಣಬಹುದು.

' ಭಿತ್ತಿ ಇಲ್ಲದೇ ಬರೆಯಬಹುದೇ ಚಿತ್ತಾರವ,
ಭಿತ್ತಿಯೊಂದಿಲ್ಲದಿರೆ ಚಿತ್ರವೆಂತಿರಲಹುದು
ಚಿತ್ರವಿಲ್ಲದೇ ಭಿತ್ತಿ ಸೊಗಸಹುದೆಂತು. ' [೮]

ದಿನೇಶ್ವರಸುತನ ರೂಪವು ಚಿತ್ರಂ ಬರೆದಂತಿರ್ಪುದು
ಚಿತ್ರ ಭಿತ್ತಿಯೊಳೆನ್ನಾ. [೯]

ಎಂಬಂತಹ ಸಾಲುಗಳು ಭಿತ್ತಿ. ಮತ್ತು ಭಿತ್ತಿ ಚಿತ್ರದ ಬಗೆಗೆ ತಿಳಿಸುತ್ತವೆ. ಇವುಗಳ ಒಟ್ಟಾರೆ ಅರ್ಥ ಭಿತ್ತಿ ಎಂದರೆ ಚಿತ್ರವನ್ನು ಬರೆಯುವ ಮುಲಾಧಾರ ಎಂದು ಪರಿಗಣಿಸಬಹುದು. ಭಿತ್ತಿ ಚಿತ್ರವೆಂದರೆ ಗೋಡೆಯ ಮೇಲೆ ಬರೆದ ಚಿತ್ರವೆಂದು ಸಾಮಾನ್ಯವಾದ ತಿಳುವಳಿಕೆಯಿದ್ದರೂ ಮೇಲಿನ ಸಾಲುಗಳಲ್ಲಿನ ವಿವರಣೆಯಿಂದ ಭಿತ್ತಿಚಿತ್ರವೆಂದರೆ ಬರೀ ಗೋಡೆಯ ಮೇಲೆ ರಚಿಸಿದ ಚಿತ್ರಗಳಲ್ಲದೇ ಯಾವುದೇ ಆಧಾರದ ಮೇಲೆ ರಚಿಸಿದ ಚಿತ್ರಗಳೂ ಭಿತ್ತಿಚಿತ್ರಗಳೆನಿಸುತ್ತವೆ. ಭಿತ್ತಿ ಇಲ್ಲದೇ ಬರೆಯಬಹುದೇ ಚಿತ್ತಾರವ ? ಭಿತ್ತಿಯೊಂದಿಲ್ಲದಿರೆ ಚಿತ್ರವೆಂತಿರಲಹುದು ? ಎನ್ನುವಲ್ಲಿ ಚಿತ್ರಬರೆಯಲು ಭಿತ್ತಿಯ ಅವಶ್ಯಕತೆಯನ್ನು ತಿಳಿಸಿಕೊಡುತ್ತದೆ.

ಇದುವರೆಗಿನ ವಿವರಗಳ ಪ್ರಕಾರ ಭಿತ್ತಿಚಿತ್ರಕಲೆ ಎಂದರೆ ಗೋಡೆಗಳು, ಮೇಲ್ಛಾವಣಿಗಳು ಹೀಗೆ ಕಟ್ಟಡದ ಯಾವುದೇ ಭಾಗವನ್ನು ವರ್ಣ ಚಿತ್ರದಿಂದ ಮತ್ತು ಉಬ್ಬು ಇಲ್ಲವೆ ತಗ್ಗು ಚಿತ್ರ ಇಲ್ಲವೇ ಮೊಸಾಯಿಕ್‌ನಂತಹ ಚಿತ್ರಗಳಿಂದ ಅಲಂಕರಿಸುವ ವಿಧಾನವಾಗಿದೆ. ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಈ ಪ್ರಬಂಧದಲ್ಲಿ ಭಿತ್ತಿ ಚಿತ್ರಕಲೆ ಎಂದರೆ ಸ್ವಾಭಾವಿಕಗುಹೆ. ಶಿಲಾಶ್ರಯ. ಬಯಲುಬಂಡೆಗಳ ಮೇಲೆ ಮತ್ತು ಮಾನವ ನಿರ್ಮಿತ ಶಿಲಾಗುಹೆ, ದೇವಾಲಯಗಳು. ಮನೆ. ಅರಮನೆ. ಮಠಮಾನ್ಯ. ಚರ್ಚು. ಮಸೀದೆ, ಸಮಾಧಿ ಮುಂತಾದ ಯಾವುದೇ ಕಟ್ಟಡಗಳ ಗೋಡೆ. ಮೇಲ್ಛಾವಣಿ. ಜಂತಿ. ತೊಲೆ. ಬೋದಿಗೆ. ಕಂಬ. ಬಾಗಿಲು, ಕಿಟಕಿ, ಕಮಾನು, ಹೀಗೆ ವಾಸ್ತುವಿನ (ಕಟ್ಟಡದ) ಯಾವುದೇ ಭಾಗದಲ್ಲಿ ಚಿತ್ರರಚಿಸಿ ಅವುಗಳನ್ನು ಅಲಂಕರಿಸುವ ವಿಧಾನವನ್ನು ಭಿತ್ತಿ ಚಿತ್ರಕಲೆ ಎಂದು ಪರಿಗಣಿಸಿ ಇಲ್ಲಿ ಅಧ್ಯಯನ ಮಾಡಲಾಗಿದೆ. ಭಿತ್ತಿ ಚಿತ್ರಕಲೆಯ ಪ್ರಾಚೀನತೆಯ ಬಗ್ಗೆ ನಿಖರವಾದ ಕಾಲಸೂಚಿ ಹೇಳುವುದು ಅಸಾಧ್ಯವಾದುದಾದರೂ ಮನುಷ್ಯ ಪ್ರಪಂಚಕ್ಕೆ ಕಾಲಿಟ್ಟು. ಅವನು ಕಲೆಯ ಮೊಳಕೆಗಳನ್ನು ಹಾಕಿಕೊಂಡು. ಅವನ್ನು ನಿತ್ಯದ ಬದುಕಿನಲ್ಲಿ ತಂದುಕೊಳ್ಳುವವರೆಗಿನ ಕಾಲವನ್ನು ಈ ಕಲೆಯ ಕಾಲವೆಂದು ಗುರುತಿಸಬೇಕಾಗುತ್ತದೆ. ಹಾಗಾದಾಗ

---

೮. ಡಾ. ಹಿ. ಚಿ. ನಾರಾಯಣ : ವಚನ ಸಾಹಿತ್ಯ - ಒಂದು ಅಧ್ಯಯನ. ಪುಟ - ೩೯೯
೯. ಡಾ. ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ. ಪುಟ - ೪೮

ಕಲೆ ಧಿಡೀರನೆ ಹುಟ್ಟಿಬರಲಿಲ್ಲ; ಅಥವಾ ಇಂಥ ಕಾಲದಲ್ಲಿಯೇ ಹುಟ್ಟಿತೆಂದು ಹೇಳಲಿಕ್ಕಾಗುವುದೂ ಇಲ್ಲ. ಪ್ರಾಚೀನ ವರ್ಣಚಿತ್ರಗಳಿಗೆ ಅಂಟಿದ ಬಣ್ಣವನ್ನೋ ಅದರ ಕಲ್ಲನ್ನೋ, ಮಣ್ಣನ್ನೋ ಪರೀಕ್ಷೆಗೆ ಒಳಪಡಿಸಿ ಕಾಲಗಣನೆ ಮಾಡಬೇಕಾಗುತ್ತದೆ.[೧೦] ಎಂಬ ವಿಚಾರಗಳು ಹೆಚ್ಚು ಅರ್ಥಪೂರ್ಣವಾದವುಗಳಾಗಿವೆ. ಕಾಲಮಾನದಿಂದ ಅತ್ಯಂತ ಪುರಾತನ ವರ್ಣಭಿತ್ತಿ ಚಿತ್ರಗಳು ಇದುವರೆಗೆ ತಿಳಿದುಬಂದಂತೆ ನೈರುತ್ಯಯುರೋಪಿನಲ್ಲಿ ಕಂಡುಬಂದಿವೆ. ಇವು ಹಿಮಯುಗಕಾಲಕ್ಕೆ ಸೇರಿದ್ದು. ಹಿಮಯುಗ ಕಾಲದ ಚಿತ್ರಗಳಿರುವ ಸುಮಾರು ಒಂದುನೂರು ಸ್ಥಳಗಳನ್ನು ಈ ವರೆಗೆ ದಕ್ಷಿಣಯುರೋಪಿನಲ್ಲಿ ಕಂಡುಹಿಡಿಯಲಾಗಿದೆ.[೧೧]

ಹಳೇ ಶಿಲಾಯುಗ ಕಾಲದಲ್ಲಿಯೂ ಮಾನವನ ಭಿತ್ತಿಚಿತ್ರಕಲಾ ನಿದರ್ಶನಗಳು ಕಂಡುಬರುತ್ತವೆ. ಈ ಕಾಲದ ಶಿಲಾಶ್ರಯ ತಾಣಗಳು. ಶಿಲಾಗುಹೆಗಳಲ್ಲಿ ವರ್ಣಚಿತ್ರಗಳು ಕಂಡುಬಂದಿದ್ದರಿಂದ ತನ್ನ ವಾಸಸ್ಥಳದಲ್ಲೇ ಆತ ಚಿತ್ರರಚನೆಮಾಡಿ ಅವುಗಳನ್ನು ಅಂದಗೊಳಿಸತೊಡಗಿದ. ಮುಂದಿನ ಕಾಲಾವಧಿಗೆ ಹೋಲಿಸಿದರೆ ಈ ಕಾಲದಲ್ಲಿ ಹೆಚ್ಚಿನ ಪ್ರಮಾಣದ ಭಿತ್ತಿ ಚಿತ್ರಗಳು ಕಂಡುಬರುವುದಿಲ್ಲ. ಆದರೂ ಈ ಕಾಲದ ಮಾನವನು ವರ್ಣದ್ರವ್ಯಗಳ ಬಗ್ಗೆ, ವರ್ಣಗಳ ತಯಾರಿಕೆ. ಅಂಟುಮಾಧ್ಯಮ. ವರ್ಣಗಳನ್ನು ಕುಟ್ಟಿಪುಡಿಮಾಡುವುದು, ವರ್ಣಗಟ್ಟಿಗಳನ್ನು ಅರೆಯುವುದು. ಅವುಗಳನ್ನು ಮುಂದದ್ರಾವಣವಾಗಿ ಮಾಡಿಕೊಳ್ಳುವುದು. ಕುಂಚಗಳ ಉಪಯೋಗ ಮುಂತಾದ ತಾಂತ್ರಿಕತೆಗಳನ್ನು ಆಗಲೇ ಬಲ್ಲವನಾಗಿದ್ದನು ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೧೨] ಈ ಅಭಿಪ್ರಾಯ ಸರಿಯಾದುದೆಂದೇ ಹೇಳಬೇಕಾಗುತ್ತದೆ.

ಕ್ರಿ. ಪೂ. ೩೫,೦೦೦ (ಮುವ್ವತ್ತೈದು ಸಾವಿರ) ವರ್ಷಗಳ ಹಿಂದಿನ ಭಿತ್ತಿ ಚಿತ್ರಗಳು ಸ್ಪೇನ್ ಮತ್ತು ಫ್ರಾನ್ಸ್ ದೇಶಗಳ ಅನೇಕ ಗುಹೆಗಳಲ್ಲಿ ಕಂಡುಬಂದಿವೆ. ಸ್ಪೇನಿನ ಪಸೇಗಾ, ಅಲ್ತಮಿರಾ, ಫ್ರಾನ್ಸಿನ ಲಾಮೌತ್, ಫಂಟ್-ಡಿ-ಗಾಮ್. ಲಾಗ್ರೀಜ್ ಮುಂತಾದವುಗಳನ್ನು ಹೆಸರಿಸಬಹುದು. ಈ ಚಿತ್ರಗಳಲ್ಲಿ ಬಹುಪಾಲು ಪ್ರಾಣಿಗಳೇ ಇದ್ದು ಕಾಡು ಹಂದಿ. ಕುದುರೆ. ಜಿಂಕೆ. ಖಡ್ಗಮೃಗ. ಮಾಮತ್. ಕೋಣಗಳಂತಹ ಬಲಿಷ್ಟ ಪ್ರಾಣಿಗಳು ಇಲ್ಲಿ ಕಾಣಿಸಿಕೊಂಡಿವೆ.[೧೩] ಆಸ್ಟ್ರೇಲಿಯಾ ದೇಶದಲ್ಲಿ ಹತ್ತು ಸಾವಿರ ವರ್ಷಗಳಿಗೂ ಹಿಂದಿನ ಭಿತ್ತಿಚಿತ್ರಗಳು ಕಂಡುಬಂದಿವೆ. ದಕ್ಷಿಣ ಭಾಗದಲ್ಲಿ ಬಂಡೆಯ ಮೇಲೆ ಚೂಪಾದ ಸಾಧನದಿಂದ ಕೊರೆದ ಭಿತ್ತಿಚಿತ್ರಗಳು ರಚನೆಯಾಗಿದ್ದರೆ. ಉತ್ತರ ಭಾಗದಲ್ಲಿ ಬಂಡೆಯಮೇಲೆ ವರ್ಣದಿಂದ ರಚಿಸಿದ ಚಿತ್ರಗಳು ಹೆಚ್ಚಾಗಿವೆ.[೧೪] ಕ್ರಿ. ಪೂ. ನಾಲ್ಕುಸಾವಿರ ವರ್ಷಗಳ ಹಿಂದಿನ ಭಿತ್ತಿಚಿತ್ರಗಳು ಆಫ್ರಿಕಾದಲ್ಲಿ ಕಾಣಸಿಕ್ಕಿವೆ. ರೊಡೇಷಿಯಾ ಪ್ರಾಂತ್ಯ, ಟಾಂಗನೀಕ್, ಸಹರಾ ಭಾಗದಲ್ಲಿ ಈ ಚಿತ್ರಗಳು ರಚನೆಯಾಗಿವೆ. ಕಪ್ಪು. ಕಂದು. ಬಿಳಿ. ಹಳದಿ. ಬಣ್ಣಗಳನ್ನು ಇಲ್ಲಿ ಬಳಸಲಾಗಿದ್ದು, ಜಿರಾಫೆ. ಘೇಂಡಾಮೃಗ. ಮೊಸಳೆ

---

೧೦. ಡಾ. ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪುಟ - ೨೭
೧೧. Yashodhar Mathpal : Prehistoric Rock Paintings of Bhimbetka, page - 10
೧೨. S. K. Panday : Indian Rock Art, Page - 199
೧೩. ಬಿ. ಪಿ. ಬಾಯಿರಿ : ಜಾಗತಿಕ ಚಿತ್ರಕಲೆ, ಪುಟ - ೬
೧೪. Yashodhar Mathpal : Prehistoric Rock paintings of Bhimbetka, page - 10.

ಮುಂತಾದ ಬೃಹತ್ ಪ್ರಾಣಿಗಳು ನೈಜ ಆಳತೆಯಷ್ಟು ದೊಡ್ಡದಾಗಿವೆ.[೧೫] ಎಂಬ ವಿವರಗಳು ಸಿಗುತ್ತವೆ. ಒಂದೇ ಬಣ್ಣದ ಹಲವು ಛಾಯೆಗಳನ್ನು ಬಳಸಿ ಬರೆದಿರುವ ಭಿತ್ತಿ ಚಿತ್ರಗಳು ಮಾಲ್ಟದ್ವೀಪಗಳಲ್ಲಿದ್ದು ಇವು ಮೆಗಾಲಥಿಕ್ ಕಾಲದಲ್ಲಿ ರಚನೆಯಾಗಿರುವದಾಗಿ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.[೧೬]

"ಬ್ರಿಟನ್‌ನ ಮೆಗಾಲಿಥಿಕ್ ಕಾಲದ ಸಮಾಧಿಗಳ ಬಳಿಯಲ್ಲಿ ಸಪೂರವಾದ ಆಕೃತಿಗಳನ್ನು ಹೊಂದಿದ ಭಿತ್ತಿಚಿತ್ರಗಳಿವೆ. ಅಲ್ಲದೆ ಇಬ್ರಿಯಸ್ ಪರ್ಯಾಯ ದ್ವೀಪದಲ್ಲಿ ಇದೇ ಕಾಲಮಾನದ ಭಿತ್ತಿಚಿತ್ರಗಳು ವಿಶಿಷ್ಟವಾಗಿ ರಚನೆಯಾಗಿದ್ದುದನ್ನು ಕಾಣಬಹುದಾಗಿದೆ. ಮೇಲೆ ರೇಖಾಚಿತ್ರಗಳನ್ನು ಆಳವಾಗಿ ಕೊರೆದು ನಂತರ ಅದರ ಮೇಲೆ ಮಣ್ಣುಲೇಪಿಸಿ. ಲೇಪಿಸಿದ ಮಣ್ಣಿನ ಮೇಲೆ ಬಣ್ಣಗಳಿಂದ ಚಿತ್ರಿಸಿರುವುದನ್ನು ವಿದ್ವಾಂಸರು ಗುರ್ತಿಸಿದ್ದಾರೆ.[೧೭] ಫ್ರಾನ್ಸ್ ಮತ್ತು ಸ್ಪೇನ್‌ಗಳಲ್ಲಿನ ಕಂಚಿನಯುಗದ ಸಮಾಧಿಗಳಲ್ಲಿ ಅಂತ್ಯಕ್ರಿಯಾ ಸಂಬಂಧಿ ಭಿತ್ತಿಚಿತ್ರಗಳಿದ್ದು ಇವು ರೇಖಾಪ್ರಧಾನವಾಗಿವೆ. ಇದೇ ಕಾಲದ ರೇಖಾಪ್ರಧಾನ ಭಿತ್ತಿಚಿತ್ರಗಳು ಉತ್ತರ ಇಟಲಿಯಲ್ಲಿದ್ದು ಇವುಗಳನ್ನು ಬಂಡೆಯಮೇಲೆ ಚೂಪಾದ ಸಾಧನದಿಂದ ಕೆತ್ತಿಮೂಡಿಸಲಾಗಿದೆ ಎಂಬ ಅಭಿಪ್ರಾಯವು ಇದೆ.[೧೮] ಇವುಗಲ್ಲದೇ ಪ್ರಾಗಿತಿಹಾಸಕಾಲದ ಭಿತ್ತಿ ಚಿತ್ರಗಳು ಆಲ್ಪ್ಸ ಪರ್ವತ ಪ್ರದೇಶ. ಸ್ಕಾಂಡೇನೇವಿಯಾ. ಸೈಬೀರಿಯಾ. ಜರ್ಮನ್. ಉತ್ತರ ಅಮೇರಿಕಾ. ದಕ್ಷಿಣ ಅಮೇರಿಕಾ. ಉತ್ತರ ಟೋಕಿಂಗ್. ನ್ಯೂಗಿನಿ. ಫಿಜಿನಡುಗಡ್ಡೆ ಮುಂತಾದ ಕಡೆಗಳಲ್ಲಿ ಕಂಡುಬಂದಿವೆ.[೧೯]

ಮಾನವನು ಬೆಟ್ಟಗುಡ್ಡಗಳಲ್ಲಿನ ಗುಹೆಗಳು. ಶಿಲಾಶ್ರಯ ತಾಣಗಳಲ್ಲಿ ವಾಸಿಸುತ್ತಿದ್ದ ಸಂದರ್ಭದ ಭಿತ್ತಿಚಿತ್ರಗಳ ಸ್ವರೂಪ ಇದಾದರೆ. ಆತ ವ್ಯವಸಾಯ ಯೋಗ್ಯವಾದ ಬಯಲು ಪ್ರದೇಶಕ್ಕೆ ಬಂದು ನೆಲೆಸಿದ ನಂತರ ಆತ ರಚಿಸುತ್ತಿದ್ದ ಭಿತ್ತಿ ಚಿತ್ರಕಲೆಯ ಸ್ವರೂಪ ಬದಲಾಯಿತು. ಈ ಹೊತ್ತಿಗೆ ಭಿತ್ತಿ ಚಿತ್ರರಚನೆಯಲ್ಲಿ ನೀತಿ ನಿಯಮಗಳು, ಕಟ್ಟುಪಾಡುಗಳು. ಉದ್ದ ಅಗಲಗಳೆಂಬ ಪ್ರಮಾಣಗಳು. ಚಿತ್ರಗಳನ್ನು ಹೇಗೆ ಬರೆಯಬೇಕೆಂಬ ಶಾಸ್ತ್ರೀಯ ವಿಧಾನಗಳು ರೂಪುತಾಳಿರಬಹುದಾದ ಸಾಧ್ಯತೆಗಳಿವೆ. ಇಂತಹ ಚಿತ್ರಗಳು ಆಕಾಲದಲ್ಲಿ ಆತ ನಿರ್ಮಿಸಿದ ವಾಸ್ತುರಚನೆಗಳಲ್ಲಿ ಕಂಡು ಬಂದಿರುವುದನ್ನು ತಜ್ಞರು ಗುರುತಿಸಿದ್ದಾರೆ. ಒಂದೆ ತಾನು ವಾಸಿಸುವ ನೆಲೆಗಳಾದ ಶಿಲಾಶ್ರಯ ತಾಣಗಳು, ಶಿಲಾಗುಹೆಗಳನ್ನು ವರ್ಣಚಿತ್ರಗಳಿಂದ ಅಲಂಕರಿಸಿದಂತೆ ಬಯಲು ಪ್ರದೇಶದಲ್ಲಿ ನೆಲೆಸಿದ ಮಾನವನೂ ತನ್ನ ನಿವಾಸ. ಅರಮನೆ. ದೇವಾಲಯ. ಸಾರ್ವಜನಿಕ ಭವನಗಳು. ಮತ್ತು ಸಮಾಧಿ ಮುಂತಾದ ಸ್ಥಳಗಳನ್ನು ವರ್ಣಚಿತ್ರಗಳಿಂದ ಅಲಂಕರಿಸುತ್ತಿದ್ದನೆಂಬುದಕ್ಕೆ ಪುರಾವೆಗಳು ಸಿಗುತ್ತವೆ.

ಇಜಿಪ್ತದಲ್ಲಿ ಕ್ರಿ. ಪೂ. ೩೦೦೦ (ಮೂರುಸಾವಿರ) ವರ್ಷಗಳ ಪೂರ್ವದಲ್ಲಿಯೇ ಉತ್ತಮಮಟ್ಟದ ಭಿತ್ತಿಚಿತ್ರಗಳು ಕಂಡುಬಂದಿವೆ. ಈ ಕಾಲಕ್ಕಾಗಲೇ ಅವರು ಪರೋಹರ ಮತ್ತು ಪ್ರಧಾನ ವ್ಯಕ್ತಿಗಳ ಸಮಾಧಿಗಳಲ್ಲಿ (ಪಿರಾಮಿಡ್)

---

೧೫. ಬಿ. ವಿ. ಕೆ. ಶಾಸ್ತ್ರೀ (ಸಂ.) : ರೇಖಾ ಚಿತ್ರ. ಪುಟ - ೩

೧೬. ಬಿ. ವಿ. ಕೆ. ಶಾಸ್ತ್ರೀ (ಸಂ.) : ರೇಖಾ ಚಿತ್ರ. ಪುಟ - ೩

೧೭. ಬಿ. ವಿ. ಕೆ. ಶಾಸ್ತ್ರೀ (ಸಂ.) : ರೇಖಾ ಚಿತ್ರ. ಪುಟ - ೪

೧೮. ಬಿ. ವಿ. ಕೆ. ಶಾಸ್ತ್ರೀ (ಸಂ.) : ರೇಖಾ ಚಿತ್ರ. ಪುಟ - ೪

೧೯. Yashodhar Mathpal : Prehistoric Rock paintings of Bhimbetka, page - 12.

ಮತ್ತು ದೇಗುಲ ಹಾಗೂ ಅರಮನೆಗಳಲ್ಲಿ ಭಿತ್ತಿಚಿತ್ರರಚಿಸುತ್ತಿದ್ದರು. ಧಾರ್ಮಿಕ ವಿಷಯಗಳನ್ನೊಳಗೊಂಡ ಚಿತ್ರಗಳನ್ನು ಇವರ ಭಿತ್ತಿಚಿತ್ರಗಳಲ್ಲಿ ಕಾಣಬಹುದು.[೨೦] ಬಾಲ್ಕನ್ ಭೂಶಿರ ಹಾಗೂ ಏಷ್ಯಾಖಂಡದ ದಕ್ಷಿಣದ ಈಗಿನ ' ಟರ್ಕಿ ' ಇವೆರಡರ ಮಧ್ಯಹರಡಿರುವ ಸಮುದ್ರ ಪ್ರದೇಶದಲ್ಲಿರುವ ಏಜಿಯನ್ ಸಮುದ್ರದಲ್ಲಿರುವ ಕ್ರೀಟ್ಸ್ ದ್ವೀಪದಲ್ಲಿ ಕ್ರಿ. ಪೂ. ೧೬೦೦ ಸುಮಾರಿನಲ್ಲಿ ಮಿನೋವರೆಂಬ ಜನಾಂಗದವರು ಭಿತ್ತಿಚಿತ್ರಗಳನ್ನು ರಚಿಸುತ್ತಿದ್ದರು. ಇವರ ಮನೆ ಅರಮನೆ, ಮಠಗಳು ಮುಂತಾದ ಕಟ್ಟಡಗಳು ನಾಲ್ಕೈದು ಅಂತಸ್ತು ಹೊಂದಿರುತ್ತಿದ್ದು ಇವುಗಳಲ್ಲಿ ಭಿತ್ತಿಚಿತ್ರಗಳನ್ನು ಬರೆಯುತ್ತಿದ್ದರು.[೨೧] ಎಂಬ ವಿವರ ಸಿಗುತ್ತವೆ.

ಇದೇ ಅವಧಿಯಲ್ಲಿ (ಕ್ರಿ. ಪೂ. ೧೬೦೦) ಗ್ರೀಕ್ ದೇಶದಲ್ಲಿಯೂ ಭಿತ್ತಿಚಿತ್ರಗಳನ್ನು ರಚಿಸಲಾಗುತ್ತಿತ್ತು.[೨೨] ಹಾಗೆಯೇ ರೋಮ್‌ನಲ್ಲಿ ಕ್ರಿ. ಪೂ. ೭೦೦ ರಿಂದ ೫೦೦ ರಲ್ಲಿ ಬೆಳೆದಂತಹ ಪ್ರಾಚೀನ ನಾಗರಿಕತೆಯಲ್ಲಿ ಭಿತ್ತಿಚಿತ್ರಕಲೆಯ ಅತ್ಯುತ್ತಮ ಉದಾಹರಣೆಗಳನ್ನು ನೋಡಬಹುದು. ರೋಮ್‌ನ ಪ್ರಾಚೀನ ನಾಗರಿಕತೆಗೆ ಸಂಬಂಧಿಸಿದ ಭಿತ್ತಿ ಚಿತ್ರಗಳು ರೋಮ್. ಸಿಸಿಲಿ. ನೇಪಲ್ಸ್. ಪಾಂಪೆ ಸ್ಥಳಗಳಲ್ಲಿ ಕಂಡುಬರುತ್ತವೆ[೨೩] ಎಂದು ಹೇಳಲಾಗಿದೆ.

ಮಧ್ಯ ಅಮೇರಿಕಾದ ದಕ್ಷಿಣ ಮೆಕ್ಸಿಕೋ. ಯುಕಾತನ. ಗ್ವಾಟೇಮಾಲಾ ಮತ್ತು ಹೊಂಡುರಸ್ ಪ್ರದೇಶಗಳಲ್ಲಿ ಪ್ರಾಚೀನ ಜನಾಂಗವಾದ ಮಯಜನರ ಭಿತ್ತಿಚಿತ್ರಗಳು ಕಂಡುಬಂದಿವೆ. ಮಾಯಾಜನರು ಇನ್ನೂರು ಮುನ್ನೂರು ಅಡಿಗಳಷ್ಟು ಎತ್ತರ ದಿಬ್ಬಗಳನ್ನು ಸುಟ್ಟಇಟ್ಟಿಗೆ ಇಲ್ಲವೆ ಕಲ್ಲುಗಳಿಂದ ಕಟ್ಟಿ, ಆ ದಿಬ್ಬದ ಮೇಲೆ ದೇವಾಲಯಗಳನ್ನು ಮತ್ತು ಇತರ ಕಟ್ಟಡಗಳನ್ನು ಕಟ್ಟುತ್ತಿದ್ದರು. ಈ ದೇವಾಲಯ ಮತ್ತು ಕಟ್ಟಡದ ಗೋಡೆಗಳ ಮೇಲೆ ವರ್ಣಚಿತ್ರ ಕಂಡುಬಂದಿವೆ.[೨೪] ಇಂದಿನ ಮೆಕ್ಸಿಕೋ ನಗರದ ಸಮೀಪದಲ್ಲಿ ಕ್ರಿ. ಶ. ೩ ರಿಂದ ೬ ನೇ ಶತಮಾನದ ಅವಧಿಯಲ್ಲಿ ಹಾದಿಬೀದಿಗಳು. ಮನೆಮಠಗಳು. ಸೂರ್ಯಚಂದ್ರರಿಗಾಗಿ ಕಟ್ಟಿದ ಪವಿತ್ರದಿಬ್ಬಗಳು. ಸಾಮಾಜಿಕ ಕಟ್ಟಡಗಳು. ಹಾಗೂ ಶ್ರೀಮಂತರ ಸೌಧಗಳನ್ನು ಭಿತ್ತಿಚಿತ್ರಗಳಿಂದ ಅಲಂಕರಿಸಿದ್ದು ಕಂಡುಬಂದಿದೆ.[೨೫] ಅಲ್ಲದೇ ಮಾಯಾಜನರ ಭಿತ್ತಿ ಚಿತ್ರಗಳ ಕೆಳಗೆ ಅವುಗಳ ವಸ್ತುವಿಷಯ ವಿವರಗಳನ್ನು ತಿಳಿಸುವ ಬರವಣಿಗೆಗಳಿವೆ ಎಂಬುದಾಗಿ ತಿಳಿದುಬರುತ್ತದೆ.

ರೋಮ್ ಪ್ರಾಚೀನ ನಾಗರಿಕತೆಯಲ್ಲಿ ಕಟ್ಟಡಗಳಲ್ಲಿ ಮಾತ್ರವಲ್ಲದೇ. ನೆಲದಡಿಯಲ್ಲಿ ಮನುಷ್ಯರು ಓಡಾಡುವಷ್ಟು ಅವಕಾಶವಿರುವ ಸುರಂಗಗಳನ್ನು ಕೊರೆದು ಅವುಗಳ ಎರಡೂ ಬದಿಗಳಲ್ಲೂ ಗೋಡೆಗಳಲ್ಲಿ ಮಾಡು (ಕಿಂಡಿ)ಗಳನ್ನು ಕೊರೆದು ಶವಗಳನ್ನು ಇರಿಸುತ್ತಿದ್ದರು. ಇಂತಹ ಶವ ಸುರಂಗದ ಎರಡೂ ಬದಿಯ ಗೋಡೆಗಳಮೇಲೆ ವರ್ಣ ಭಿತ್ತಿಚಿತ್ರಗಳು ಕಂಡುಬಂದಿವೆ. ಇವುಗಳಲ್ಲದೇ ಮೃತರ ಸ್ಮರಣಾರ್ಥ ಬೃಹತ್ ಗಾತ್ರದ ಸಮಾಧಿಭವನಗಳನ್ನು

---

೨೦. ಶಿವರಾಮ ಕಾರಂತ : ಕಲಾಪ್ರಪಂಚ. ಪುಟ - ೧೫೨
೨೧. ಶಿವರಾಮ ಕಾರಂತ : ಕಲಾ ಪ್ರಪಂಚ. ಪುಟ - ೧೪೯
೨೨. ಎಸ್. ಕೆ. ರಾಮಚಂದ್ರರಾವ್ : ಕರ್ನಾಟಕದ ಕಲೆಗಳು. (ಸಂಪುಟ-೧) ಪುಟ - ೧೦೨
೨೩. ಬಿ. ಪಿ. ಬಾಯಿರಿ : ಜಾಗತಿಕ ಚಿತ್ರಕಲೆ. ಪುಟ - ೪೦
೨೪. H. W. Janson : Encyclopedia (History of Art), Page - 234
೨೫. ಬಿ. ಪಿ. ಬಾಯಿರಿ : ಜಾಗತಿ ಚಿತ್ರಕಲೆ. ಪುಟ ೪೮

ಕಟ್ಟಿ ಅವುಗಳ ಗೋಡೆಗಳ ಮೇಲೂ ಭಿತ್ತಿಚಿತ್ರಗಳನ್ನು ರಚಿಸುತ್ತಿದ್ದರು.[೨೬] ಇಟಲಿಯಲ್ಲಿ 'ಟಾರ್ಕ್ವಿನ್' ಎಂಬ ಪ್ರದೇಶದಲ್ಲಿಯ ಸಮಾಧಿ ಭವನಗಳಲ್ಲಿ ಕ್ರಿ. ಪೂ. ೬೦೦ ವರ್ಷಗಳಷ್ಟು ಪುರಾತನವಾದ ಭಿತ್ತಿಚಿತ್ರಗಳು[೨೭] ಕಂಡುಬಂದಿವೆ. ಚೀನಾದಲ್ಲಿಯೂ ಇದೇ ಅವಧಿಯಲ್ಲಿ ವಾಸಗೃಹ, ಅರಮನೆ, ದೇವಾಲಯಗಳನ್ನು ಭಿತ್ತಿಚಿತ್ರಗಳಿಂದ ಅಲಂಕರಿಸುತ್ತಿದ್ದರೆಂದೂ ತಿಳಿದುಬರುವುದು.[೨೮]

ಕ್ರಿ. ಶ. ಆರಂಭದ ಮೊದಲ ಶತಮಾನಗಳಲ್ಲಿ ಜಪಾನಿನಲ್ಲಿ ಅರಮನೆಗಳು, ದೇವಾಲಯಗಳು, ವಿಹಾರಧಾಮಗಳು, ಮನೆ ಹಾಗೂ ಇತರ ಸೌಧಗಳು ಮರದಿಂದಲೇ ನಿರ್ಮಿಸಲ್ಪಡುತ್ತಿದ್ದು, ಅಂತಹ ಮರದ ಗೋಡೆಗಳ ಮೇಲೆ ಅವರು ಭಿತ್ತಿಚಿತ್ರ ರಚಿಸುತ್ತಿದ್ದರು. ಅಲ್ಲಿನ ತ್ಸೋತ್ಸೋ, ಮತ್ತು ನಾರಾ ಎಂಬ ಪುರಾತನ ನಗರಗಳಲ್ಲಿ ಕಂಡುಬಂದಿರುವ ಪ್ರಾಚೀನ ಅರಮನೆ, ಮಠ, ದೇವಾಲಯಗಳಲ್ಲಿನ ಮರದ ಗೋಡೆಗಳ ಮೇಲೆ ಸುಂದರ ಭಿತ್ತಿಚಿತ್ರಗಳನ್ನು[೨೯] ಇಂದಿಗೂ ನೋಡಬಹುದಾಗಿದೆ. ಕ್ರಿ. ಶ. ೩೦೦ ರ ಸುಮಾರಿಗೆ ಬೆಂಜೆಂಟೈನಾದ ಚರ್ಚುಗಳಲ್ಲಿ ಕ್ರಿಸ್ತನ ಮತ್ತು ಕ್ರೈಸ್ತ ಸಂತರ ಭಿತ್ತಿಚಿತ್ರಗಳನ್ನು ದೊಡ್ಡ ಪ್ರಮಾಣದಲ್ಲಿ ಚಿತ್ರಿಸಿದ್ದು ತಿಳಿಯುತ್ತದೆ.[೩೦] ಕ್ರಿ. ಶ. ೩೬೦ ರ ಸುಮಾರಿನಲ್ಲಿ ಚೀನಾದ 'ಟುನ್‌ಹ್ವಾಂಗ್' ಪ್ರದೇಶದಲ್ಲಿ ಗುಹಾಲಯಗಳನ್ನು ಕೊರೆದು ಭಿತ್ತಿಚಿತ್ರ ರಚಿಸುವ ಪ್ರಕ್ರಿಯೆ ಪ್ರಾರಂಭವಾಗಿ ಅದು ಸುಮಾರು ಒಂದುಸಾವಿರ ವರ್ಷಗಳ ತನಕವೂ ಮುಂದುವರೆಯಿತು. ಇಲ್ಲಿ ಬೌದ್ಧ ಧಾರ್ಮಿಕ ಚಿತ್ರಗಳು ರಚಿಸಿವೆ ಎನ್ನಲಾಗಿದೆ.[೩೧]

ಶ್ರೀಲಂಕಾದ ಸಿಗೇರಿಯಾ ಗುಹಾಲಯಗಳಲ್ಲಿ ಕ್ರಿ. ಶ. ೫ ನೇ ಶತಮಾನದ ಭಿತ್ತಿಚಿತ್ರಗಳಿವೆ. ಇವುಗಳನ್ನು ರಾಜಾ ಕಶ್ಯಪನೆಂಬುವವನು ಬರೆಯಿಸಿದ್ದು ಸುಂದರ ರೂಪದ ಮಾನವಾಕೃತಿಗಳು ಇಲ್ಲಿವೆ. ಅಲ್ಲದೇ ಸ್ತ್ರೀ ರೂಪಗಳು ಇಲ್ಲಿ ಅಧಿಕವಾಗಿ ರಚಿಸಿವೆ ಎಂಬುದಾಗಿ ತಿಳಿದುಬರುವುದು.[೩೨] ಕ್ರಿ. ಶ. ೮ ನೇ ಶತಮಾನದಲ್ಲಿ, ಹಿಂದಿನ ಪೆಲೆಸ್ತೀನ್ ಪ್ರದೇಶಕ್ಕೆ ಸೇರಿದ ಇಂದಿನ ಲೆಬನಾನ್‌ದಲ್ಲಿರುವ ಡಮಾಸ್ಕಸ್ ಪೂರ್ವಭಾಗದಲ್ಲಿದ್ದ ರೋಮನ್ ಕಾಲದ ಪ್ರಾಂಗಣ ಒಂದನ್ನು ಮುಸ್ಲಿಮರು ತಮ್ಮ ಮಸೀದೆಯಾಗಿ ಕ್ರಿ. ಶ. ೮ ನೇ ಶತಮಾನದಲ್ಲಿ (ಕ್ರಿ. ಶ. ೭೦೫) ಪರಿವರ್ತಿಸಿದರು. ಹೀಗೆ ಪರಿವರ್ತಿಸಿದ ಮಸೀದೆಯ ಅಲಂಕರಣಕ್ಕಾಗಿ ಭಿತ್ತಿಚಿತ್ರಗಳನ್ನು ಅದರಲ್ಲಿ ರಚಿಸಿದರು. ಇವು ಹೆಚ್ಚಾಗಿ ನಿಸರ್ಗ ದೃಶ್ಯಗಳು, ಜ್ಯಾಮಿತಿಕ ರೂಪಗಳನ್ನು ಒಳಗೊಂಡಿವೆ ಎಂದು ಹೇಳಲಾಗುತ್ತದೆ.[೩೩]

ಇಂಗ್ಲೆಂಡಿನ ಇಗರ್ಜಿಗಳಲ್ಲಿಯೂ ಕ್ರಿ. ಶ. ೮ ನೇ ಶತಮಾನದ ಭಿತ್ತಿಚಿತ್ರಗಳಿದ್ದು ಇವು ಎಲೆ, ಹೂ-ಬಳ್ಳಿಗಳು, ಪಕ್ಷಿ ಹಾಗೂ ಇತರ ಜ್ಯಾಮಿತಿಕ ನಕ್ಷೆಗಳನ್ನು ಒಳಗೊಂಡಿವೆ.[೩೪] ಕ್ರಿ. ಶ. ೯ ನೇ ಶತಮಾನದಲ್ಲಿ ಕಟ್ಟಲ್ಪಟ್ಟ

---

೨೬. H. W. Janson : Encyclopedia (History of Art), Page - 213
೨೭. ಶಿವರಾಮ ಕಾರಂತ : ಕಲಾ ಪ್ರಪಂಚ. ಪುಟ - ೬೬
೨೮. Yashodhar Mathpal : Prehistoric Rock paintings of Bhimbetka, page - 11
೨೯. H. W. Janson : Encyclopedia (History of Art), Page 275
೩೦. ಎಸ್. ಕೆ. ರಾಮಚಂದ್ರರಾವ್ : ಕರ್ನಾಟಕದ ಕಲೆಗಳು (ಸಂಪುಟ ೧), ಪುಟ - ೧೦೨
೩೧. 'ಸುಧಾ' ಯುಗಾದಿ ವಿಶೇಷಾಂಕ : ೧೯೯೫, ಪುಟ ೭೦, 'ಮೊಗಾವೋ ಭಿತ್ತಿಚಿತ್ರಗಳು' ಬಿ. ವ್ಹಿ. ಕೆ. ಶಾಸ್ತ್ರಿ
೩೨. ಬಿ. ಪಿ. ಬಾಯಿರಿ : ಜಾಗತಿಕ ಚಿತ್ರಕಲೆ. ಪುಟ - ೧೨೬
೩೩. ಶಿವರಾಮ ಕಾರಂತ : ಚಿತ್ರಕಲಾ ಪ್ರಪಂಚ. ಪುಟ - ೨೦೦
೩೪. – ಅದೇ – ಪುಟ - ೧೮೦

ಇಂಡೋನೇಷಿಯಾದ 'ಪ್ರಾಂಬನನ್' ಎಂಬ ಶಿವದೇವಾಲಯದ ಒಳಗೋಡೆಗಳಲ್ಲಿ ಮತ್ತು ಈ ದೇವಾಲಯದ ಆವರಣದಲ್ಲಿರುವ ಬ್ರಹ್ಮ, ವಿಷ್ಣು ದೇವಾಲಯದ ಗೋಡೆಗಳಲ್ಲಿಯೂ ಸುಂದರ ಭಿತ್ತಿಚಿತ್ರಗಳಿವೆ. ಇವು ರಾಮಾಯಣ, ಮಹಾಭಾರತ ಮತ್ತು ಇತರ ಹಿಂದೂ ಪುರಾಣಗಳಿಗೆ ಸಂಬಂಧಿಸಿವೆ. ಅಲ್ಲದೇ ಬ್ಯಾಂಕಾಕ್‌ನಲ್ಲಿರುವ 'ಮರಕತ' ಎಂಬ ಬುದ್ಧ ಪಗೋಡದ ಸುತ್ತಲಿನ ಗೋಡೆಯು ಸುಮಾರು ಒಂದುಮೈಲು ಉದ್ದವಾಗಿದ್ದು ಅದರ ಮೇಲೆ ಉದ್ದಕ್ಕೂ ರಾಮಾಯಣ ಕಥೆಯನ್ನು ಧಾರವಾಹಿಯ ಹಾಗೆ ಚಿತ್ರಿಸಲಾಗಿದೆ ಎಂದು ತಿಳಿದುಬರುವುದು.[೩೫] ಕ್ರಿ. ಶ. ೧೦ ನೇ ಶತಮಾನದ ಹೊತ್ತಿಗೆ ರಶಿಯನ್ನರು ಕ್ರೈಸ್ತ ಇಗರ್ಜಿಗಳನ್ನು ಮತ್ತು ಸನ್ಯಾಸಿಮಠಗಳನ್ನು ನಿರ್ಮಿಸಿ ಅವುಗಳಲ್ಲಿ ನಿತ್ಯ ಜೀವನದ ಘಟನೆಗಳು ಮತ್ತು ಧಾರ್ಮಿಕ ಸಂಬಂಧೀ ಚಿತ್ರಗಳನ್ನು ರಚಿಸುತ್ತಿದ್ದರು. ಹಾಗೆಯೇ ಜರ್ಮನಿಯಲ್ಲಿ ಕ್ರಿ. ಶ. ೧೧ ಮತ್ತು ೧೨ ನೇ ಶತಮಾನಗಳಲ್ಲಿ ಭವ್ಯವೂ ವಿಶಾಲವೂ ಆದ ಇಗರ್ಜಿಗಳನ್ನು ಭಿತ್ತಿಚಿತ್ರಗಳಿಂದ[೩೬] ಅಲಂಕರಿಸಲಾಗಿದೆ. ಇವುಗಳಲ್ಲದೇ ಯುರೋಪಿನ ಟಾಹುಲಿ ಎಂಬ ಪ್ರದೇಶದ ಕ್ಲೆಮೆಂಟ್ ಚರ್ಚ (ಕ್ರಿ. ಶ. ೧೧೨೩), ಸಿಯನ್ನಾ ನಗರದ ಕೆಥೆಡ್ರಿಲ್, ಪಾಡುವಾ ನಗರದ ಏರಿನಾ ಚೇಪಲ್ ಚರ್ಚಗಳಲ್ಲಿ ಈ ಕಾಲದ ಭಿತ್ತಿಚಿತ್ರಗಳಿವೆ.[೩೭]

ಕ್ರಿ. ಶ. ೧೫ ನೇ ಶತಮಾನದಲ್ಲಿ ಯುರೋಪಿನಲ್ಲಿ ಮತ್ತೆ ಭಿತ್ತಿಚಿತ್ರಕಲೆ ವೇಗದಿಂದ ಬೆಳೆಯಿತೆಂಬುದಕ್ಕೆ ಅಲ್ಲಿಯ ಚರ್ಚುಗಳಲ್ಲಿರುವ ಆ ಕಾಲದ ಭಿತ್ತಿಚಿತ್ರಗಳೇ ಸಾಕ್ಷಿಗಳಾಗಿವೆ.[೩೮] ರೋಮ್ ನಗರದ ' ಸಿಸ್ಟೇನ್ ಚಾಪೆಲ್ ' ಎಂಬ ಚರ್ಚಿನಲ್ಲಿ ಮೈಕಲ್ ಎಂಜಲೋ ರಚಿಸಿದ ಭಿತ್ತಿಚಿತ್ರಗಳು, ಮತ್ತು ಬೆಲ್ಜಿಯಂ ನ ' ಪ್ಲೆಮೆಲ್ ' ಚರ್ಚಿನ ಅರ್ಪಣಾ ಪೀಠದ ಮೇಲೆ ತೈಲವರ್ಣದಿಂದ ರಚಿಸಿರುವ ಭಿತ್ತಿಚಿತ್ರಗಳು ಕ್ರಿ. ಶ. ೧೫ ನೇ ಶತಮಾನಕ್ಕೆ ಸೇರುತ್ತವೆ. ಇವುಗಳಲ್ಲದೇ ಉತ್ತರ ಯುರೋಪಿನ ಘೆಂಟ್ ನಗರದ ಚರ್ಚಿನ ' ಜಾನ್‌ವಾನ್ ಐಕ್ ' ರಚಿಸಿದ ಭಿತ್ತಿಚಿತ್ರಗಳು, ಮೆಡ್ರಿಡ್ ನಗರದ ಚರ್ಚಿನಲ್ಲಿರುವ ಹಾಲೆಂಡಿನ ಕಲಾವಿದ ' ಹಿರೋನಿಮಾಸ್ ಬಾಗ್ ' ಎಂಬುವವನು ರಚಿಸಿದ ಭಿತ್ತಿಚಿತ್ರಗಳು, ಅಲ್ಲದೇ ಫ್ಲಾರೆನ್ಸ್ ನಗರದ ' ಮೇರಿಯಾ ನೋವೆಲ್ಲಾ ' ಮತ್ತು ಬ್ರಾಕಾಂಚಿ ಚೇಪಲ್ ' ಚರ್ಚಗಳಲ್ಲಿ ಮೊಸಾಚಿಯೋ ಬರೆದ ಭಿತ್ತಿಚಿತ್ರಗಳು. ' ಸಾನ್‌ಲೋರೆಂಟೋ ಬೆಸಿಲಿಕಾ ' ದಲ್ಲಿ ಫಿಲಿಪ್ಪೋ ಎಂಬ ಕಲಾವಿದ ರಚಿಸಿದ ಭಿತ್ತಿಚಿತ್ರಗಳು, ಮತ್ತು ಮಿಲಾನಿನ ' ಮೆರಿಯಾ ಡೆಲ್‌ಗ್ರೇಜಿ ' ಎಂಬ ಚರ್ಚನಲ್ಲಿ ಕಲಾವಿದ ಲಿಯೋನಾರ್ಡೋ-ಡ-ವಿನ್ನಿ ರಚಿಸಿದ ಭಿತ್ತಿಚಿತ್ರಗಳು ಇದೇ ಕಾಲಕ್ಕೆ ಸೇರುತ್ತವೆ. ಮಿಲಾನಿನ ಚರ್ಚಿನಲ್ಲಿಯೇ ಲಿಯೋನಾರ್ಡೋ-ಡ-ವಿನ್ಸಿಯ ಪ್ರಸಿದ್ಧ ಚಿತ್ರಕೃತಿ ' ಕೊನೆಯ ಭೋಜನ ' ಎಂಬುದು ರಚನೆಯಾಗಿದೆ.

ರೋಮ್ ನಗರದ ' ಕೆಂಟರೆಲಿ ' ಚೇಪಲ್ ದಲ್ಲಿ ಕೆಪ್ರವಾಜಿಯೋ ರಚಿಸಿದ ಭಿತ್ತಿಚಿತ್ರಗಳು ಹಾಗೆಯೇ ಇಲ್ಲಿನ ಅರಮನೆಯೊಂದರ ಗೋಡೆಗಳ ಮೇಲೆ ' ಕೆಹ್ರಾಚಿ ಎನಿಬಾಲೆ ' ಎಂಬ ಕಲಾವಿದನಿಂದ ರಚಿಸಿದ ಚಿತ್ರಗಳು, ಹಾಗೂ ಇಲ್ಲಿನ ' ವೆಟಿಕನ್ ' ದಲ್ಲಿರುವ ಗುರುಮನೆಯೊಂದರಲ್ಲಿ ರಾಫೆಲ್ ರಚಿಸಿದ ಭಿತ್ತಿಚಿತ್ರಗಳು ಕ್ರಿ. ಶ. ೧೬ ನೇ

---

೩೫. H. W. Janson : Encyclopedia (History of Art), Page 290

೩೬. ಬಿ. ಪಿ. ಬಾಯಿರಿ : ಜಾಗತಿಕ ಚಿತ್ರಕಲೆ, ಪುಟ - ೨೦, ೭೫

೩೭. ಶಿವರಾಮ ಕಾರಂತ : ಕಲಾ ಪ್ರಪಂಚ, ಪುಟ - ೨೫೦

೩೮. ಈ ಕೆಳಗೆ ಹೇಳಲಾದ ಯುರೋಪಿನ ಚರ್ಚುಗಳಲ್ಲಿನ ಭಿತ್ತಿಚಿತ್ರಗಳ ವಿವರವನ್ನು H. W. Janson : Encyclopedia (History of Art) ಮತ್ತು ಶಿವರಾಮ ಕಾರಂತ ಅವರ ಕಲಾಪ್ರಪಂಚ ಪುಸ್ತಕದಿಂದ ಪಡೆಯಲಾಗಿದೆ.

ಶತಮಾನದವುಗಳಾಗಿವೆ. ರಾಫೆಲ್ ರಚಿಸಿದ ಪ್ರಸಿದ್ಧ ಕೃತಿ ' ಅಥೆನ್ಸಿನ ವಿದ್ವಾಂಸ ಕೂಟ ' ರಚನೆಯಾಗಿರುವುದು ವೆಟಿಕನ್‌ದಲ್ಲಿಯೇ. ಇಟಲಿಯ ವೆನಿಸ್ ನಗರದ ' ಸಾನ್ ಮಾಗಿಯೋರಿ ' ಎಂಬಲ್ಲಿ ' ಟೆಂಟರಿಟೋ ' ಎಂಬ ಕಲಾವಿದ ರಚಿಸಿದ ಭಿತ್ತಿಚಿತ್ರಗಳು, ಸ್ಪೇನಿನ ಚರ್ಚೊಂದರಲ್ಲಿ ಎಲ್‌ಗ್ರೇಕೋ ಬರೆದ ಭಿತ್ತಿಚಿತ್ರಗಳು, ಮತ್ತು ಜರ್ಮನಿಯ ಚರ್ಚಗಳಲ್ಲಿ ಆಲ್ಬರ್ಟಡ್ಯುರರ್ ರಚಿಸಿದ ದೊಡ್ಡ ಪ್ರಮಾಣದ ಭಿತ್ತಿಚಿತ್ರಗಳು ಇದೇ ಕಾಲಕ್ಕೆ ಸೇರುತ್ತವೆ.

ಕ್ರಿ. ಶ. ೧೭ ನೇ ಶತಮಾನದ ಭಿತ್ತಿಚಿತ್ರಗಳು ಸ್ಪೇನಿನ ' ಎಂಟ್ವರ್ಪ ' ಕೆಥೆಡ್ರಿಲ್‌ದಲ್ಲಿ ರಚನೆಯಾಗಿವೆ. ಇವು ಬೃಹತ್ ಪ್ರಮಾಣದ ಭಿತ್ತಿಚಿತ್ರಗಳಾಗಿದ್ದು, ' ಪೀಟರ್ ಪಾಲ್ ರೂಬೆನ್ಸ್ ' ಎಂಬ ಕಲಾವಿದ ಇವುಗಳನ್ನು ೧೬೦೦ ರಲ್ಲಿ ರಚಿಸಿದ್ದಾನೆ ಎಂದು ತಿಳಿದುಬರುವುದು.[೩೯] ರೋಮ್ ನಗರದ ' ಗೇಸು ಚರ್ಚ ' ನಲ್ಲಿಯೂ ಈ ಕಾಲದ ಭಿತ್ತಿಚಿತ್ರಗಳಿದ್ದು. ಇವುಗಳನ್ನು ' ಬೆಚಿತ್‌ಶಿಯಾ ' ಎಂಬ ಕಲಾವಿದ ರಚಿಸಿದ್ದಾನೆ. ಅಲ್ಲದೇ ವೆನಿಸ್ ನಗರದ ' ಸಾನ್ ಮಾರ್ಕೋ ' ಚರ್ಚಿನಲ್ಲಿಯೂ ಈ ಕಾಲದ ಭಿತ್ತಿಚಿತ್ರಗಳು ಇವೆ ಎನ್ನುವ ವಿವರಗಳು ದೊರೆಯುತ್ತವೆ.[೪೦]

ಕ್ರಿ. ಶ. ೧೮ ನೇ ಶತಮಾನದಲ್ಲಿ ಕಟ್ಟಲ್ಪಟ್ಟ ರಶಿಯಾ ದೇಶದ ಸಾರ್ವಜನಿಕ ಭವನಗಳು, ವಿಶ್ವವಿದ್ಯಾಲಯಗಳು, ಸಭಾಂಗಣಗಳು, ಇಗರ್ಜಿಗಳು, ಅಲ್ಲದೇ ಮನೆಗಳಲ್ಲೂ ಭಿತ್ತಿಚಿತ್ರಗಳು ರಚನೆಯಾಗಿವೆ. ಅಲ್ಲದೇ, ಸ್ಪೇನಿನ ' ಸಾಂಟಿಯಾಗೋ ' ನಗರದಲ್ಲಿರುವ ಚರ್ಚೊಂದರಲ್ಲಿಯೂ ೧೮ ನೇ ಶತಮಾನದ ಭಿತ್ತಿಚಿತ್ರಗಳು ಕಂಡುಬರುತ್ತವೆ.[೪೧] ವೆನಿಸ್ ನಗರದ ಚರ್ಚೊಂದರಲ್ಲಿ ಕ್ರಿ. ಶ. ೧೯ ನೇ ಶತಮಾನದ ಭಿತ್ತಿಚಿತ್ರಗಳಿದ್ದು, ಇವುಗಳನ್ನು ' ಹೆನ್ರಿಮಾತಿಸ್ ' ರಚಿಸಿದ್ದಾನೆ. ಯುನೈಟೆಡ್ ಸ್ಟೇಟ್ ನಲ್ಲಿರುವ ಬಾರ್ನ್ಸ್ ಫೌಂಡೇಶನ್ ಕಟ್ಟಡದಲ್ಲಿಯೂ ಹೆನ್ರಿ ಮಾತಿಸ್ ಬರೆದ ಇದೇ ಕಾಲದ ಭಿತ್ತಿಚಿತ್ರಗಳಿವೆ. ಅಲ್ಲದೇ ನಾರ್ವೇ ದೇಶದ ಓಸ್ಲೋ ವಿಶ್ವವಿದ್ಯಾಲಯದಲ್ಲಿ ಕ್ರಿ. ಶ. ೨೦ ನೇ ಶತಮಾನದಲ್ಲಿ ರಚನೆಯಾದ ಭಿತ್ತಿಚಿತ್ರಗಳಿರುವುದು ತಿಳಿದುಬರುತ್ತದೆ.[೪೨]

ಹೀಗೆ ಪ್ರಪಂಚದಾದ್ಯಂತ ಭಿತ್ತಿಚಿತ್ರ ಪರಂಪರೆ ಪ್ರಾಗಿತಿಹಾಸ ಕಾಲದಿಂದ ಬೆಳೆದುಕೊಂಡು ಬಂದಿರುವದು ಕಂಡುಬರುತ್ತದೆ.

## ಭಾರತ

ಭಿತ್ತಿ ಚಿತ್ರಕಲೆ ಅತ್ಯಂತ ಪುರಾತನ ಕಾಲದಿಂದಲೇ ಭಾರತದಲ್ಲಿ ಕಂಡುಬರುತ್ತದೆ. ಮಧ್ಯಪ್ರದೇಶದ ಭಿಂಬೇಟ್ಕಾ ಪ್ರದೇಶದಲ್ಲಿ ಕ್ರಿ. ಪೂ. ೨೫೦೦೦ ವರ್ಷಗಳಷ್ಟು ಪುರಾತನವಾದ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳಿವೆ.[೪೩] ಅದೇ ರೀತಿ ಮಧ್ಯಪ್ರದೇಶದ ಮೊರೇನಾ ಜಿಲ್ಲೆಯ ಪಹಾರ್‌ಘರ ಎಂಬಲ್ಲಿನ ಶಿಲಾಶ್ರಯಗಳಲ್ಲಿ ಸುಮಾರು ಕ್ರಿ. ಪೂ. ೨೩೦೦೦

---

೩೯. ಶಿವರಾಮ ಕಾರಂತ : ಕಲಾ ಪ್ರಪಂಚ, ಪುಟ - ೨೮೮
೪೦. – ಅದೇ –
೪೧. ಶಿವರಾಮ ಕಾರಂತ : ಕಲಾ ಪ್ರಪಂಚ, ಪುಟ - ೨೯೫
೪೨. – ಅದೇ – ಪುಟ - ೨೯೬
೪೩. Yashodhar Mathpal : Prehistoric Rock paintings of Bhimbetka, page - 29

ವರ್ಷಗಳಷ್ಟು ಹಿಂದಿನ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಕಂಡುಬಂದಿವೆ. [೪೪] ಮಧ್ಯಪ್ರದೇಶದಲ್ಲಿರುವ ಆಡಮ್‌ಘರ ಬೆಟ್ಟ. ಮಹದೇವ ಬೆಟ್ಟ. ರಾಮಘಡ ಬೆಟ್ಟದ ಜೋಗಿಮಾರಾ ಗುಹೆಗಳಲ್ಲಿ ಕಂಡುಬಂದ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಕ್ರಿ. ಪೂ. ೧೦.೦೦೦ ವರ್ಷಗಳಷ್ಟು ಹಿಂದಿನವುಗಳಾಗಿವೆ. [೪೫]

ಸುಮಾರು ಕ್ರಿ. ಪೂ. ೫೦೦೦ ವರ್ಷಗಳ ಹಿಂದಿನ ಸಿಂಧೂ ನಾಗರಿಕತೆಯ ಕಾಲದಲ್ಲಿ ಜನರು ತಮ್ಮ ವಾಸ್ತುಗಳನ್ನು ಭಿತ್ತಿಚಿತ್ರಗಳಿಂದ ಅಲಂಕರಿಸುತ್ತಿದ್ದರು. ಹರಪ್ಪಾ ಮೆಹೆಂಜೋದಾರೋದಲ್ಲಿನ ಉತ್ಖನನ ಸಮಯದಲ್ಲಿ ದೊರೆತ ಶಿಲಾಗೃಹಗಳ ಗೋಡೆಗಳ ಮೇಲೆ ಬಣ್ಣದ ಉಳಿಕೆಗಳು ಕಂಡುಬಂದಿವೆ. [೪೬] ಟಿಬೆಟ್‌ನಲ್ಲಿ ಕ್ರಿ. ಶ. ೭ ನೇ ಶತಮಾನದಲ್ಲಿ ಜೀವಿಸಿದ್ದ ತಾರಾನಾಥನೆಂಬ ಚರಿತ್ರಕಾರನು ಭಾರತದ ಬೌದ್ಧ ಭಿತ್ತಿಚಿತ್ರಕಲೆಯ ಬಗ್ಗೆ ಪ್ರಸ್ತಾಪಿಸುತ್ತ ಇದು ಕ್ರಿ. ಪೂ. ೪೮೦ ರಲ್ಲಿಯೇ ಉನ್ನತಾವಸ್ಥೆಯನ್ನು ಮುಟ್ಟಿತ್ತು ಎಂದು ಹೇಳುತ್ತಾನೆ. [೪೭] ವೇದಗಳಲ್ಲೇ ಮೊದಲನೆಯದಾದ ಋಗ್ವೇದದಲ್ಲಿ ಚಿತ್ರಕಲೆಯ ಕುರಿತು ಪ್ರಸ್ತಾಪ ಬರುತ್ತದೆ. [೪೮] ಅಲ್ಲದೇ ವೇದ ಕಾಲದಲ್ಲಿ (ಕ್ರಿ. ಪೂ. ೧೫೦೦) ಯಜ್ಞ ವೇದಿಕೆಗಳನ್ನು ಬಣ್ಣಗಳಿಂದ ಚಿತ್ತಾರ ಬರೆದು ಅಲಂಕರಿಸುತ್ತಿದ್ದರೆಂದೂ ತಿಳಿಯುತ್ತದೆ. ಮಹಾಭಾರತದ ಪೂರ್ವದಲ್ಲಿ ಬದುಕಿದ್ದ ಆಪಸ್ತಂಭನೆಂಬ ಋಷಿವರ್ಯನು ತನ್ನ ' ಕರ್ಮಬುದ್ಧಿಸಾರ ' ಎಂಬ ಗ್ರಂಥದಲ್ಲಿ ಚಿತ್ರಕಲೆಯ ಬಗೆಗೆ ಪ್ರಸ್ತಾಪಿಸಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. [೪೯]

(ರಾಮಾಯಣ. ಮಹಾಭಾರತಗಳಲ್ಲೂ ಭಿತ್ತಿಚಿತ್ರಗಳಿಂದ ಅಲಂಕರಿಸಲಾದ ಅರಮನೆಗಳ ವರ್ಣನೆ ಬರುತ್ತದೆ. [೫೦]) ಅಲ್ಲದೇ ಕ್ರಿ. ಪೂ. ಕಾಲದಲ್ಲಿ ಪಾಲೀಭಾಷೆಯಲ್ಲಿ ರಚನೆಯಾದ ' ವಿನಯ ಪಿಟಕ ' ಎಂಬ ಬೌದ್ಧ ಕೃತಿಯಲ್ಲಿ ಪಸೇನದ ಎಂಬ ರಾಜನ ಅರಮನೆಯಲ್ಲಿ ಸಂತೋಷಪಾರ್ಥ ಚಿತ್ರಗೃಹಗಳಿದ್ದವೆಂದು ತಿಳಿದುಬರುತ್ತದೆ. [೫೧] ಚಿತ್ರಕಲೆಯ ಕುರಿತಾದ ಪ್ರಾಚೀನ ಗ್ರಂಥವೆಂದು ಹೇಳಲಾಗುವ ' ಚಿತ್ರಸೂತ್ರವು ' ಕ್ರಿ. ಪೂ. ೪ ನೇ ಶತಮಾನಕ್ಕಿಂತ ಮೊದಲೇ ರಚನೆಯಾಗಿರಬಹುದೆಂದು ಹೇಳಿಕೆ ಇದ್ದು. [೫೨] ಇದರಲ್ಲಿ ಭಿತ್ತಿಚಿತ್ರಕಲೆಯ ವಿವರಗಳಿವೆ. ಮೌರ್ಯರ ಕಾಲದಲ್ಲಿ (ಕ್ರಿ. ಪೂ. ೩೨೨) ಚಂದ್ರಗುಪ್ತನ ಮಂತ್ರಿ ಕೌಟಿಲ್ಯನಿಂದ ವಿರಚಿತ ಅರ್ಥಶಾಸ್ತ್ರದಲ್ಲಿ [೫೩] ಚಿತ್ರಕಲೆಯ ಉಲ್ಲೇಖವಿದ್ದಂತೆಯೇ. ಅದೇ ಶತಮಾನದ ಬೌದ್ಧ ತ್ರಿಪೀಠಕಗಳಲ್ಲಿಯೂ ಚಿತ್ರಗೃಹಗಳ. ಚಿತ್ರಶಾಲೆಗಳ ಪ್ರಸ್ತಾಪ ಬರುತ್ತದೆ. [೫೪] ಸುಮಾರು

---

೪೪. J. C. Nagpal : Mural Paintings in India, Page - 147
೪೫. ಬಿ. ಪಿ. ಬಾಯಿರಿ : ಜಾಗತಿಕ ಚಿತ್ರಕಲೆ. ಪುಟ - ೩
೪೬. ' ಅವಲೋಕನ ' ಪುಟ - ೩೨೮. ' ಕರ್ನಾಟಕ ಪರಂಪರೆ : ಸಮೀಕ್ಷೆ. ಲೇಖನ ' ಪಿ. ಆರ್. ತಿಪ್ಪೇಸ್ವಾಮಿ
೪೭. ಶಿವರಾಮ ಕಾರಂತ : ಭಾರತೀಯ ಚಿತ್ರಕಲೆ. ಪುಟ - ೩೨
೪೮. J. C. Nagpal : Mural Paintings in India, Page - 9
೪೯. ಶಿವರಾಮ ಕಾರಂತ : ಭಾರತೀಯ ಚಿತ್ರಕಲೆ. ಪುಟ - ೩೩
೫೦. ಶಿವರಾಮ ಕಾರಂತ : ಭಾರತೀಯ ಚಿತ್ರಕಲೆ. ಪುಟ - ೩೨
೫೧. ಬಿ. ಪಿ. ಬಾಯಿರಿ : ಭಾರತೀಯ ಚಿತ್ರಕಲೆ. ಪುಟ - ೮
೫೨. ಪಿ. ಆರ್. ತಿಪ್ಪೇಸ್ವಾಮಿ (ಪ್ರ. ಸಂ.) : ಚಿತ್ರಕಲಾ ಪ್ರಪಂಚ. ಪುಟ - ೭೪
೫೩. ಪಾಂಡುರಂಗರಾವ್ ದೇಸಾಯಿ : ಪ್ರಾಚೀನ ಭಾರತದ ಚರಿತ್ರೆ. ಪುಟ - ೧೦೭
೫೪. ಪಿ. ಆರ್. ತಿಪ್ಪೇಸ್ವಾಮಿ (ಪ್ರ. ಸಂ.) : ಚಿತ್ರಕಲಾ ಪ್ರಪಂಚ. ಪುಟ - ೧೧೨

ಕ್ರಿ. ಪೂ. ೩ ನೇ ಶತಮಾನದಲ್ಲಿ ರಚನೆಯಾಗಿರಬಹುದೆಂದು ಹೇಳಲಾಗುವ ಕಲ್ಲವಗ್ಗ ಗ್ರಂಥದಲ್ಲಿ ಭಿತ್ತಿಚಿತ್ರಕಲೆಯ ವಿವರಗಳಿವೆ. [೫೫]

ತಕ್ಷ ಶಿಲೆಯಲ್ಲಿ ಅಲೆಕ್ಸಾಂಡರ್ ಮತ್ತು ಪೋರಸ್ ಇವರ ವೀರಗಾಥೆಯನ್ನು ಗೋಡೆಗಳ ಮೇಲೆ ಚಿತ್ರಿಸಿದ್ದರೆಂದು ' ಫಿಲೋಸ್ಟ್ರಸ್ ' ಎಂಬ ವಿದೇಶಿ ಬರಹಗಾರನು ಕ್ರಿ. ಶ. ೨೫೦ ರಲ್ಲಿಯೇ ಉಲ್ಲೇಖಿಸಿದ್ದು ತಿಳಿದುಬರುತ್ತದೆ. [೫೬] ಬಿಹಾರದ ಗಯಾ ಜಿಲ್ಲೆಯ ಬಾರಾಬರ್ ಬೆಟ್ಟದಲ್ಲಿನ ಗುಹೆಗಳಲ್ಲಿ ಕ್ರಿ. ಪೂ. ೨೫೦ ಕಾಲಮಾನದ ಕಂದುಬಣ್ಣದ ಭಿತ್ತಿಚಿತ್ರಗಳಿವೆ ಎನ್ನಲಾಗಿದೆ. [೫೭] ಕ್ರಿ. ಪೂ. ೨ ನೇ ಶತಮಾನಕ್ಕೆ ಸೇರಿದ ಭಿತ್ತಿಚಿತ್ರಗಳು ಓರಿಸ್ಸಾ ರಾಜ್ಯದ ಉದಯಗಿರಿ ಮತ್ತು ಖಾಂಡಗಿರಿ ಗುಹೆಗಳಲ್ಲಿ, ಖಾಂಡಗಿರಿ ಬೆಟ್ಟದ ಮೇಲಿನ ಅನಂತ ಗೋಂಪ್ಸನಲ್ಲಿ, ಮತ್ತು ಖೇಡಿ ರಾಜನೋರ್ವನಿಂದ ಇದೇ ಬೆಟ್ಟದ ಮೇಲೆ ರಚನೆಯಾದ ಜೈನವಿಹಾರ ಒಂದರಲ್ಲಿ ಕಂಡುಬರುತ್ತವೆ. [೫೮] ಇದೇ ಕಾಲಕ್ಕೆ ಸೇರಿದ ಭಿತ್ತಿಚಿತ್ರಗಳು ಮಧ್ಯಪ್ರದೇಶದ ರಾಮಘಡ ಬೆಟ್ಟದಲ್ಲಿರುವ ಕೆಲವು ಗುಹೆಗಳಲ್ಲೂ ರಚನೆಯಾಗಿವೆ. ಇವು ಜೈನ ಪ್ರಭಾವಕ್ಕೊಳಗಾಗಿದ್ದು ನಾಟ್ಯದ ದೃಶ್ಯಗಳು, ವಾದ್ಯಗಾರರು, ಹೂ-ಬಳ್ಳಿ ನಕ್ಷೆಗಳು, ವಿವಿಧ ಮಾನವಾಕೃತಿಗಳು ರಚಿಸಿದ್ದು ತಿಳಿದುಬರುವುದು. [೫೯]

ಮಹಾರಾಷ್ಟ್ರದ ಪುನಾ ಜಿಲ್ಲೆಯ ಕಾರ್ಲೆ, ನಾಸಿಕ, ಭಾಜ, ಬೇಡ್ಸ ಮತ್ತು ಕೊಂಡಾನೆ ಗುಹೆಗಳಲ್ಲಿ ಕ್ರಿ. ಪೂ. ೧೫೦ ರಿಂದ ಕ್ರಿ. ಶ. ೧೦೦ ಅವಧಿಯಲ್ಲಿ ರಚನೆಯಾದ ಬೌದ್ಧ ಭಿತ್ತಿಚಿತ್ರಗಳಿದ್ದರೆ ಜುನ್ನಾರ ತಾಲೂಕಿನ ಜುನ್ನಾರ ಗುಹೆಗಳಲ್ಲಿ ಕ್ರಿ. ಪೂ. ೧೦೦ ರಿಂದ ಕ್ರಿ. ಶ. ೨ ನೇ ಶತಮಾನದ ಅವಧಿಯಲ್ಲಿ ರಚನೆಯಾದ ಭಿತ್ತಿಚಿತ್ರಗಳಿವೆ. [೬೦] ಮಹಾರಾಷ್ಟ್ರದ ಕನ್ಹೇರಿ ಗುಹಾಲಯಗಳಲ್ಲಿ ಕ್ರಿ. ಪೂ. ೧೦೦ ರಿಂದಲೇ ಭಿತ್ತಿಚಿತ್ರ ರಚನೆ ಪ್ರಾರಂಭವಾಗಿ ಕ್ರಿ. ಶ. ೭ ನೇ ಶತಮಾನದ ತನಕ ಮುಂದುವರಿಯಿತು ಎಂದು ಹೇಳಲಾಗಿದೆ. [೬೧] ಅದೇ ರೀತಿ ಅಜಂತಾದಲ್ಲಿಯೂ ಕ್ರಿ. ಪೂ. ೧ ನೇ ಶತಮಾನದಿಂದ ಕ್ರಿ. ಶ. ೮ ನೇ ಶತಮಾನದವರೆಗೆ ಭಿತ್ತಿಚಿತ್ರರಚನೆ ನಡೆಯಿತೆಂಬುದು ಬಹುಜನ ವಿದ್ವಾಂಸರ ಅಭಿಪ್ರಾಯ. ಕುಶಾನರ ಕಾಲದ ಕ್ರಿ. ಶ. ೧ ನೇ ಶತಮಾನದ ಭಿತ್ತಿಚಿತ್ರಗಳು ಪೂರ್ವ ತುರ್ಕಸ್ಥಾನದಲ್ಲಿರುವ ' ನಿಯ ' ಎಂಬ ಓಯಸಿಸ್ ಬಳಿಯ ' ಮಿರಾನ್ ' ಸ್ತೂಪ ಒಂದರಲ್ಲಿ ರಚನೆಯಾಗಿದ್ದು, ಹಾರಾಡುವ ಅಪ್ಸರೆಯರು, ಬೌದ್ಧ ಜಾತಕ ಕಥೆಗಳು ಇಲ್ಲಿನ ಭಿತ್ತಿಚಿತ್ರಗಳಿಗೆ ವಸ್ತುವಾಗಿವೆ ಎಂಬಂತಹ ಸಂಗತಿಗಳು ತಿಳಿದುಬರುತ್ತವೆ. [೬೨] ಅಲ್ಲದೇ ಕುಶಾನರಿಂದ ಕ್ರಿ. ಶ. ೭ ನೇ ಶತಮಾನದಲ್ಲಿ ರಚನೆಯಾದ ಭಿತ್ತಿಚಿತ್ರಗಳು ಮಧ್ಯ ಏಶಿಯಾ ಪ್ರದೇಶದಲ್ಲಿ ಕಂಡುಬರುತ್ತವೆ ಎಂಬ ಅಭಿಪ್ರಾಯವಿದೆ. [೬೩]

---

೫೫. ಟಿ. ಆರ್. ತಿಪ್ಪೇಸ್ವಾಮಿ (ಪ್ರ. ಸಂ.) : ಚಿತ್ರಕಲಾ ಪ್ರಪಂಚ, ಪುಟ - ೧೪೦

೫೬. ಅ. ಲ. ನರಸಿಂಹನ್ : ' ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು ' (ಬೆಂಗಳೂರು ವಿ. ವಿ. ಗೆ ಸಲ್ಲಿಸಿದ ಪಿಎಚ್‌ಡಿ ಮಹಾಪ್ರಬಂಧ), ಪುಟ - ೧೪೦

೫೭. J. C. Nagpal : Mural Paintings in India, Page - 79

೫೮. Ibid., Page - 160

೫೯. T. N. Ramachandran : Jain Monuments and Palacess of first class Importences, Page - ೩೧

೬೦. A. S. I. Annual Report : (1928-29), Page - 28

೬೧. ಫರ್ಗುಸನ್ ಜೆ. ಆ್ಯಂಡ ಬರ್ಜಸ್ ಜೆ. : ಕೇವ್ ಟೆಂಪಲ್ಸ್ ಆಫ್ ಇಂಡಿಯಾ, ಪುಟ - ೮೪

೬೨. ಎಸ್. ಕೆ. ರಾಮಚಂದ್ರರಾವ್ : ಕರ್ನಾಟಕದ ಕಲೆಗಳು (ಸಂಪುಟ ೧), ಪುಟ - ೧೦೭

೬೩. C. Sivaramamurti : ' Indian Painting ', Page - 13

ಮಹಾರಾಷ್ಟ್ರದ ಜುನ್ನಾರ ಪಟ್ಟಣದಿಂದ ನೈರುತ್ಯಕ್ಕೆ ೨ ಮೈಲು ದೂರದಲ್ಲಿರುವ ತುಳಜಾ ಗುಹೆಗಳಲ್ಲಿ ಕ್ರಿ. ಶ. ೩ ನೇ ಶತಮಾನದ ಭಿತ್ತಿಚಿತ್ರಗಳಿದ್ದು. ಇವು ಶಾತವಾಹನರ ನಂತರದಲ್ಲಿ ರಚನೆಯಾಗಿವೆ ಎಂಬ ಅಭಿಪ್ರಾಯವಿದೆ.[೬೪] ಕ್ರಿ. ಶ. ೪ ನೇ ಶತಮಾನದ ಭಿತ್ತಿಚಿತ್ರಗಳು ಮಹಾರಾಷ್ಟ್ರದ ಎಲಿಫೆಂಟಾ ನಡುಗಡ್ಡೆಯಲ್ಲಿರುವ ಗುಹೆಗಳಲ್ಲಿ ಮತ್ತು ಅಜಂತಾದ ಕೆಲವು ಗುಹೆಗಳಲ್ಲಿ ಕಂಡುಬರುತ್ತವೆ. ಎಲಿಫೆಂಟಾದಲ್ಲಿ ಕ್ರಿ. ಶ. ೪ ರಿಂದ ೮ ನೇ ಶತಮಾನದ ತನಕ ಭಿತ್ತಿಚಿತ್ರರಚನೆ ಕಾರ್ಯ ನಡೆದರೆ.[೬೫] ಅಜಂತಾದಲ್ಲಿ ವಾಕಾಟಕರ ಕಾಲದಲ್ಲಿ ಕ್ರಿ. ಶ. ೪ ರಿಂದ ೬ ನೇ ಶತಮಾನಗಳ ಅವಧಿಯಲ್ಲಿ ೧೬. ೧೭. ೨೦ ಮತ್ತು ೨೬ ನೇ ಗುಹೆಗಳಲ್ಲಿ ಭಿತ್ತಿಚಿತ್ರರಚನೆ ಮಾಡಲಾಯಿತೆಂಬ[೬೬] ವಿವರಗಳು ತಿಳಿದುಬರುತ್ತವೆ. ಇದೇ ಕಾಲದಲ್ಲಿ ರಚನೆಯಾದ ಚಿತ್ರಗಳು ಗ್ವಾಲಿಯರ್ ಸಮೀಪದ ಭಾಗ್ ಗುಹೆಗಳಲ್ಲಿಯೂ ಇವೆ ಎನ್ನಲಾಗಿದೆ.[೬೭] ತಮಿಳುನಾಡಿನ ಮಹಾಬಲಿಪುರಂನಲ್ಲಿರುವ ಪಲ್ಲವರ ಕಾಲದ ಪಂಚಶಿಲಾ ರಥಗಳಲ್ಲಿ ಧರ್ಮರಾಜನ ರಥವಲ್ಲಿ ರಚನೆಯಾಗಿರುವ ಭಿತ್ತಿಚಿತ್ರಗಳೂ ೬ ನೇ ಶತಮಾನಕ್ಕೆ ಸೇರುತ್ತವೆ.[೬೮]

ಕ್ರಿ. ಶ. ೭ ನೇ ಶತಮಾನದ ಭಿತ್ತಿಚಿತ್ರಗಳು ಓರಿಸ್ಸಾ ರಾಜ್ಯದ ' ಕೆಂಜಹಾರ್ ' ಜಿಲ್ಲೆಯ ಸೀತಾಭಿಂಜಿ ಎಂಬಲ್ಲಿ ರಚನೆಯಾಗಿದ್ದು. ಇವು ಭಾಂಜಾ ಅರಸರ ಕೊಡುಗೆಯಾಗಿವೆ. ಇಲ್ಲಿ ಆನೆಯ ಮೇಲೆ ಸವಾರಿ ಹೊರಟ ರಾಜನ ಮೆರವಣಿಗೆ. ಛತ್ರ-ಚಾಮರ ಹಿಡಿದ ಸೇವಕರು. ಕುದುರೆ ಸವಾರರು. ಕಾಲಾಳುಗಳು ಮುಂತಾದ ಚಿತ್ರಗಳಿವೆ.[೬೯] ಮಹಾರಾಷ್ಟ್ರದ ಔರಂಗಾಬಾದ್ ಬಳಿಯಲ್ಲಿರುವ ಗುಹೆಗಳಲ್ಲಿ[೭೦] ಔರಂಗಾಬಾದ್ ಜಿಲ್ಲೆಯ ಫಿಥಲ್‌ಕೋರಾ ಗುಹೆಗಳಲ್ಲಿ[೭೧] ಇದೇ ಕಾಲದ ಭಿತ್ತಿಚಿತ್ರಗಳು ರಚಿಸಿವೆ. ಇವುಗಳಲ್ಲದೇ ತಮಿಳುನಾಡಿನ ಚಂಗಲ್‌ಪೇಟೆ ಜಿಲ್ಲೆಯ ಕಂಚೀಪುರದ ಕೈಲಾಸನಾಥ ದೇವಾಲಯ. ಉತ್ತರ ಅರ್ಕಾಟ್ ಜಿಲ್ಲೆಯ ಮಾಮಂದೂರು ಗುಹಾ ದೇವಾಲಯ. ದಕ್ಷಿಣ ಅರ್ಕಾಟ್ ಜಿಲ್ಲೆಯ ಪನಮಲ್ಲೈ ದೇವಾಲಯ. ತಿರುಮಲ್ಲಪುರಂ ಹಾಗೂ ತಿರುಮಲೈಪುರಗಳಲ್ಲಿ ಗುಹಾದೇವಾಲಯಗಳಲ್ಲಿ[೭೨] ಮತ್ತು ಆಂಧ್ರಪ್ರದೇಶದ ವಿಜಯವಾಡ ಸಮೀಪದ ' ಊಂದವಲ್ಲಿ ' ಗುಹಾಲಯಗಳಲ್ಲಿ[೭೩] ಕ್ರಿ. ಶ. ೭ ನೇ ಶತಮಾನದ ಭಿತ್ತಿಚಿತ್ರಗಳು ಕಂಡುಬಂದಿವೆ.

ಕ್ರಿ. ಶ. ೮ ನೇ ಶತಮಾನದ ಭಿತ್ತಿಚಿತ್ರಗಳು ತಮಿಳುನಾಡಿನ ಕಾಂಚೀಪುರಂದಲ್ಲಿರುವ ವೈಕುಂಠ ಪೆರುಮಾಳ್ ದೇವಾಲಯದಲ್ಲಿ.[೭೪] ಪುದುಕೋಟೆ ಜಿಲ್ಲೆಯ ಸಿತ್ತಸಿವಾಸಲ್ ಗುಹೆಗಳಲ್ಲಿ.[೭೫] ಕೇರಳದ ತಿರುನಂದಿಕರ್ ಎಂಬಲ್ಲಿನ

---

೬೪. C. Sivaramamurti : ' South Indian Painting ', Page - 42

೬೫. ಫರ್ಗ್ಯುಸನ್ ಜೆ. ಆ್ಯಂಡ ಬರ್ಜಸ್ ಜೆ. : ಕೇವ್ ಟೆಂಪಲ್ಸ್ ಆಫ್ ಇಂಡಿಯಾ. ಪುಟ - ೮೦

೬೬. C. Sivaramamurti : ' Indian Painting ', Page - 34

೬೭. Ibid., Page - 35

೬೮. J. C. Nagpal : Mural Paintings in India, Page - 180

೬೯. Marg, Vol.-4, No. 4, Sept., 1955, Page - 63

೭೦. ಫರ್ಗ್ಯುಸನ್ ಜೆ. ಆ್ಯಂಡ ಬರ್ಜಸ್ ಜೆ. : ಕೇವ್ ಟೆಂಪಲ್ಸ್ ಆಫ್ ಇಂಡಿಯಾ. ಪುಟ - ೧೮

೭೧. M. N. Despande : Ancient India, Page - 15

೭೨. C. Sivaramamurti : ' Indian Painting ', Page - ??

೭೩. ಫರ್ಗ್ಯುಸನ್ ಜೆ. ಆ್ಯಂಡ ಬರ್ಜಸ್ ಜೆ. : ಕೇವ್ ಟೆಂಪಲ್ಸ್ ಆಫ್ ಇಂಡಿಯಾ. ಪುಟ - ೬೯

೭೪. K. V. Raman : Varadarajaswamy Temple, Page - 17

೭೫. J. C. Nagpal : Mural Paintings in India, Page - 180

ಬಂಡೆಯಲ್ಲಿ ಕೊರೆದ ಶಿವದೇವಾಲಯದಲ್ಲಿ [೭೬] ಕಂಡುಬರುತ್ತವೆ. ಕ್ರಿ. ಶ. ೯ ನೇ ಶತಮಾನದ ಭಿತ್ತಿಚಿತ್ರಗಳು ತಮಿಳುನಾಡಿನ ಚಂಗಲ್‌ಪೇಟೆ ಜಿಲ್ಲೆಯ ಉತ್ತರ ಮೇರೂರುದಲ್ಲಿರುವ ಸುಂದರ-ವರ್ಧ-ಪೆರುಮಾಳ್ ದೇವಾಲಯದಲ್ಲಿ. [೭೭] ಮಧುರೈ ಜಿಲ್ಲೆಯ 'ತಿರುಪರ್ಮಕುನರಮ್' ದಲ್ಲಿನ ಕಾರ್ತಿಕೇಯ ದೇವಾಲಯದಲ್ಲಿ, [೭೮] ಉತ್ತರ ಅರ್ಕಾಟ್ ಜಿಲ್ಲೆ ಅರಮಾಮಲೈದಲ್ಲಿರುವ ಜೈನ ಗುಹಾಲಯದಲ್ಲಿ, [೭೯] ಇವೆ.

ಕ್ರಿ. ಶ. ೧೦ ನೇ ಶತಮಾನದ ಭಿತ್ತಿಚಿತ್ರಗಳು ತಮಿಳುನಾಡಿನ ಪುದುಕೋಟೆ ಜಿಲ್ಲೆಯ ನಾರ್ಥಾಮಲೈದಲ್ಲಿನ ವಿಜಯಾಲಯ ಚೋಳೇಶ್ವರ ದೇವಾಲಯದಲ್ಲಿ ಕಂಡುಬಂದಿದ್ದು. ಇವು ಚೋಳರ ಕೊಡುಗೆಗಳಾಗಿವೆ. ಕಾಳೀಮಾತೆ, ಗಂಧರ್ವನೃತ್ಯ. ಶಿವನ ಭೈರವ ರೂಪಗಳು[೮೦] ಇಲ್ಲಿ ರಚಿನೆಯಾಗಿವೆ. [೮೦] ಅಲ್ಲದೇ ಎಲ್ಲೋರಾದ ಗುಹಾಲಯಗಳಲ್ಲಿಯೂ ಈ ಕಾಲದ ಭಿತ್ತಿಚಿತ್ರಗಳು ರಚಿಸಿವೆ. ಕ್ರಿ. ಶ. ೧೧ ನೇ ಶತಮಾನದ ಭಿತ್ತಿಚಿತ್ರಗಳು ಬಿಹಾರದ ನಲಂದಾದಲ್ಲಿ. [೮೧] ಒರಿಸ್ಸಾದ ಪುರಿಯಲ್ಲಿನ ಜಗನ್ನಾಥ ದೇವಾಲಯದಲ್ಲಿ, [೮೨] ಆಂಧ್ರಪ್ರದೇಶದ ಮಚೇರ್ಲದಲ್ಲಿನ [೮೩] ಚನ್ನಕೇಶವ ದೇವಾಲಯದಲ್ಲಿ. ತ್ರಿಪುರಾಂತಕಮ್‌ದಲ್ಲಿನ ತ್ರಿಪುರಾಂತಕ ದೇವಾಲಯದಲ್ಲಿ [೮೪] ಕಂಡುಬರುತ್ತವೆ.

ಕ್ರಿ. ಶ. ೧೧ ರಿಂದ ೧೨ ನೇ ಶತಮಾನಕ್ಕೆ ಸೇರಿದ ಭಿತ್ತಿಚಿತ್ರಗಳು ಉತ್ತರ ಭಾರತದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಜಮ್ಮು-ಕಾಶ್ಮೀರದ ಲಡ್ಡಾಕ್‌ದಲ್ಲಿರುವ ಅಲ್ಚಿ ಮತ್ತು ಹೇಮಿಸ್ ಬೌದ್ಧ ಸನ್ಯಾಸಿಮಠಗಳಲ್ಲಿ, ಲಡ್ಡಾಕ್ ಜಿಲ್ಲೆಯ ಲೇಹ್ ಪ್ರದೇಶದ ಬೌದ್ಧಗೋಂಪ್ಪಗಳಲ್ಲಿ, ಹಿಮಾಚಲ ಪ್ರದೇಶದ ಸ್ಪಿಟೀ ಕೊಳ್ಳ ಪ್ರದೇಶದಲ್ಲಿರುವ ಬೌದ್ಧಗೋಂಪ್ಪಗಳಲ್ಲಿ ಈ ಕಾಲದ ಭಿತ್ತಿಚಿತ್ರಗಳು ಕಂಡುಬರುತ್ತವೆ. [೮೫] ಸ್ಪಿಟೀ ಕೊಳ್ಳ ಪ್ರದೇಶದ ಭಿತ್ತಿಚಿತ್ರಗಳಿರುವ ಬೌದ್ಧಗೋಂಪ್ಪಗಳಲ್ಲಿ ಡುವಾಂಗ, ಸೇರಲಾಂಗ್, ಡೋಮೋಲಾಂಗ್, ಚಾಮುಲಾಂಗ್, ಚಂಬಾಚಿಬೋ, ಚಿಲ್‌ಕಾಂಗ್, ಲಾಂಗ್‌ಚಡ್ಬೋ ಗೋಂಪ್ಪಗಳು ಮುಖ್ಯವಾಗಿವೆ. ಇವುಗಳಲ್ಲದೇ ಆಂಧ್ರದ ನಲಗೊಂಡಾ ಜಿಲ್ಲೆಯ

---

೭೬. R. N. Podwal : Notes on Sculptures and Painting in Travana Core, Page - 181

೭೭. J. C. Nagpal : Mural Paintings in India, Page - 181

೭೮. Ibid., Page - 182

೭೯. K. V. Sudar Rajan : Glimpsess of Indian Culture, Page - 102

೮೦. J. C. Nagpal : Mural Paintings in India, Page - 180

೮೧. ನಲಂದಾದಲ್ಲಿ ಉತ್ಖನನ ಸಮಯದಲ್ಲಿ (೧೯೭೪) ದೇವಾಲಯವೊಂದರ ಅವಶೇಷ ಪತ್ತೆಯಾಗಿದ್ದು. ಅದರ ಗೋಡೆಗಳ ಮೇಲೆ ಕ್ರಿ. ಶ. ೧೧ ನೇ ಶತಮಾನದ ಪಾಲರ ಕಾಲದ ಭಿತ್ತಿಚಿತ್ರಗಳು ಕಂಡುಬಂದಿವೆ. ಇವು ಬೌದ್ಧ ಧಾರ್ಮಿಕ ವಿಷಯಗಳನ್ನು ಒಳಗೊಂಡಿದ್ದು ಹೂ-ಬಳ್ಳಿಯ ನಕ್ಷೆಗಳು. ಮನುಷ್ಯರ. ಪ್ರಾಣಿ-ಪಕ್ಷಿಗಳ ಆಕೃತಿಗಳು ಮಸುಕಾಗಿ ಕಾಣುತ್ತವೆ ಎನ್ನಲಾಗಿದೆ. (J. C. Nagpal : Mural Paintings in India, Page - 79)

೮೨. ಒರಿಸ್ಸಾದ ಪುರಿಯ ಜಗನ್ನಾಥ ದೇವಾಲಯದ ಸಮುಚ್ಚಯದಲ್ಲಿರುವ ಲಕ್ಷ್ಮೀ ದೇವಾಲಯದಲ್ಲಿ ಕ್ರಿ. ಶ. ೧೧ ನೇ ಶತಮಾನದ ಭಿತ್ತಿಚಿತ್ರಗಳಿವೆ.

೮೩. 'ಮಚೇರ್ಲ' ಎಂಬ ಹಳ್ಳಿಯು ಆಂಧ್ರಪ್ರದೇಶದ ಗುಂಟೂರು ಜಿಲ್ಲೆಯ ಸತ್ಯಂಪಲ್ಲಿ ತಾಲ್ಲೂಕಿನಲ್ಲಿದೆ. ಇಲ್ಲಿನ ಚನ್ನಕೇಶವ ದೇವಾಲಯದಲ್ಲಿ ಕಾಕತೀಯ ಅರಸರು ಬರೆಸಿದ ೧೧ ನೇ ಶತಮಾನದ ಭಿತ್ತಿಚಿತ್ರಗಳಿವೆ.

೮೪. 'ತ್ರಿಪುರಾಂತಕಂ' ಇದು ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯ ಮಾರ್ಕಪುರ ತಾಲೂಕಿನಲ್ಲಿದೆ. ಇಲ್ಲಿನ ತ್ರಿಪುರಾಂತಕ ದೇವಾಲಯದಲ್ಲಿ ಕಾಕತೀಯ ಅರಸರು ಬರೆಸಿದ ೧೧ ನೇ ಶತಮಾನದ ಭಿತ್ತಿಚಿತ್ರಗಳಿವೆ.

೮೫. J. C. Nagpal : Mural Paintings in India, Page - 5

ಪಿಲ್ಲಲಮರಿಯಲ್ಲಿನ ನರಸಿಂಹ ದೇವಾಲಯದಲ್ಲಿ ಕಾಕತೀಯರು ಕ್ರಿ. ಶ. ೧೨ ನೇ ಶತಮಾನದಲ್ಲಿ ಬರೆಸಿದ ಭಿತ್ತಿಚಿತ್ರಗಳಿವೆ ಎಂದು ತಿಳಿದುಬರುತ್ತದೆ.[೮೬] ಕ್ರಿ. ಶ. ೧೩ ಮತ್ತು ೧೪ ನೇ ಶತಮಾನಗಳಲ್ಲಿನ ಭಿತ್ತಿಚಿತ್ರಗಳು ಭಾರತದಲ್ಲಿ ಹೆಚ್ಚಾಗಿ ಕಂಡುಬಂದಿಲ್ಲ. ಆದರೂ ಆಗ ಭಿತ್ತಿಚಿತ್ರರಚನೆ ಇತ್ತೆಂದು ಹೇಳಬಹುದು. ಕ್ರಿ. ಶ. ೧೨೨೬ ರಲ್ಲಿ ಟಿಬೆಟ್‌ನಿಂದ ಬಂದಿದ್ದ ಧರ್ಮಸಾವಿ ಎಂಬ ಪ್ರವಾಸಿಗನು ಮಗಧ ರಾಜ್ಯದಲ್ಲಿ ವಜ್ರಾಸನ ಎಂಬಲ್ಲಿ ತುರಷ್ಕರ ಹಾವಳಿಯಿಂದಾಗಿ ವಿಗ್ರಹವಿದ್ದ ಗುಡಿಯ ಬಾಗಿಲನ್ನು ಮುಚ್ಚಿ ಅದರ ಮೇಲೆ ಮಹೇಶ್ವರನ ಚಿತ್ರ ಬರೆದುದನ್ನು ತಾನು ಕಂಡದ್ದಾಗಿ ಹೇಳುತ್ತಾನೆ. ಎಂಬ ವಿವರ ದೊರಕುತ್ತದೆ.[೮೭]

ಕೇರಳದ ತ್ರಿವೇಂದ್ರಂ ನಲ್ಲಿರುವ ಪದ್ಮನಾಭಸ್ವಾಮಿ ದೇವಾಲಯದಲ್ಲಿ ಕ್ರಿ. ಶ. ೧೪ ನೇ ಶತಮಾನದ ಭಿತ್ತಿಚಿತ್ರಗಳು ರಚನೆಯಾಗಿವೆ.[೮೮] ಕ್ರಿ. ಶ. ೧೫ ನೇ ಶತಮಾನದ ಭಿತ್ತಿಚಿತ್ರಗಳು ಓರಿಸ್ಸಾ ರಾಜ್ಯದ ಪುರಿಯ ಜಗನ್ನಾಥ ದೇವಾಲಯದ ಪ್ರೇಕ್ಷಕರ ಮಂಟಪದಲ್ಲಿ, ರಾಜಸ್ಥಾನದ ಕೋಟಾ ಜಿಲ್ಲೆಯ ಇಂದರಘರ್, ಅರಮನೆಯಲ್ಲಿ, ಕರೌಲೀ ತಾಲೂಕಿನ ಮಹಾರಾಜಾ ಗೋಪಾಲಲಾಲ್‌ನ ಅರಮನೆಯಲ್ಲಿ,[೮೯] ಹಾಗೂ ರಾಜಸ್ತಾನದ ನಾಗೂರ ಕೋಟೆಯಲ್ಲಿನ ಬದಲ್‌ಮಹಲ್. ಹವಾಮಹಲ್ ಕಟ್ಟಡಗಳಲ್ಲಿ[೯೦] ರಚನೆಯಾಗಿವೆ ಎಂಬುದಾಗಿ ತಿಳಿದುಬರುತ್ತದೆ. ನಾಗೂರ್ ಕೋಟೆಯಲ್ಲಿನ ಭಿತ್ತಿಚಿತ್ರಗಳು ಮಾರವಾರ್ ಶೈಲಿಯಲ್ಲಿವೆ. ಇವುಗಳಲ್ಲದೇ ಮಧ್ಯಪ್ರದೇಶದ ಗ್ವಾಲಿಯರ್ ನಲ್ಲಿರುವ ಮಾನಸಿಂಗನ ಅರಮನೆಯಲ್ಲಿ. ಗೋವಾದಲ್ಲಿನ ಬಾಮ್ ಜೆಸಸ್ ಬೆಸೆಲಿಕಾ, ಸಂತ ಪ್ರಾನ್ಸಿಸ್ ಚರ್ಚ, ಸೇಕೆಥೆಡ್ರಿಲ್, ಸಂತ ಕಚೇತನ ಚರ್ಚಗಳಲ್ಲಿ ಈ ಕಾಲದಲ್ಲಿ ರಚನೆಯಾದ ಭಿತ್ತಿಚಿತ್ರಗಳಿವೆ ಎಂದು ತಿಳಿದುಬರುತ್ತದೆ.[೯೧] ಹಾಗೆಯೇ ತಮಿಳುನಾಡಿನ ಕಾಂಚೀಪುರಂದಲ್ಲಿನ ವೈಕುಂಠ ಪೆರುಮಾಳ್ ದೇವಾಲಯದಲ್ಲಿ, ಚಂಗಲ್‌ಪೇಟೆ ಜಿಲ್ಲೆಯ ತಿರುಪರುತ್ತಿಕುನರಮ್‌ದಲ್ಲಿನ ವರ್ಧಮಾನ್ ದೇವಾಲಯದಲ್ಲಿನ ಮುಖಮಂಟಪ ಮತ್ತು ಸಂಗೀತ ಮಂಟಪಗಳಲ್ಲಿ.[೯೨] ಮಧುರೈ ಮೀನಾಕ್ಷಿ ದೇವಾಲಯದಲ್ಲಿ.[೯೩] ಮತ್ತು ಉತ್ತರ ಅರ್ಕಾಟ್ ಜಿಲ್ಲೆಯ ತಿರುಮಲೈ ಯಲ್ಲಿರುವ ವಯಗೈಮಲೈ ಬೆಟ್ಟದ ಮೇಲಿನ ಜೈನ ಗುಹಾಲಯದಲ್ಲಿ[೯೪] ಕ್ರಿ. ಶ. ೧೫ ನೇ ಶತಮಾನದ ಭಿತ್ತಿಚಿತ್ರಗಳಿವೆ ಎಂದು ತಿಳಿದುಬರುತ್ತದೆ. ಕ್ರಿ. ಶ. ೧೬ ನೇ ಶತಮಾನದ ಭಿತ್ತಿಚಿತ್ರಗಳು ಉತ್ತರ ಪ್ರದೇಶದ ಆಗ್ರಾ ಜಿಲ್ಲೆಯ ಸಿಕಂದ್ರಾದಲ್ಲಿನ ಅಕ್ಬರನ ಸಮಾಧಿಯಲ್ಲಿ. ಆಗ್ರಾದಲ್ಲಿರುವ ' ಚಿನ್ನಿ-ಕಾ-ರೋಜಾ ' ಕಟ್ಟಡದಲ್ಲಿ ಮತ್ತು ಇತಿಮದ್-ಉದ್ದೌಲ್ ಸಮಾಧಿಯಲ್ಲಿ ರಚನೆಯಾಗಿವೆ. ಇವು ಹೂ-ಬಳ್ಳಿಯ ನಕ್ಷೆಗಳು. ವಿವಿಧ ರೀತಿಯ ಜ್ಯಾಮಿತಿಕ

---

೮೬. C. Sivaramamurti : ' South Indian Painting ', Page - 80
೮೭. ಅ. ಲ. ನರಸಿಂಹನ್ : ' ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು ' (ಬೆಂಗಳೂರು ವಿ. ವಿ. ಗೆ ಸಲ್ಲಿಸಿದ ಪಿಎಚ್.ಡಿ ಮಹಾಪ್ರಬಂಧ). ಪುಟ - ೧೪೧
೮೮. J. C. Nagpal : Mural Paintings in India, Page - 133
೮೯. Ibid., Page - 160
೯೦. R. A. Agarwal : Marwar Murals, Page - 84
೯೧. J. C. Nagpal : Mural Paintings in India, Page - 89
೯೨. R. Nagaswamy : South Indian Studies, Page - 78
೯೩. J. C. Nagpal : Mural Paintings in India, Page - 182
೯೪. V. Smith : ' History of Fine Arts in India ', Page - 45

ನಕ್ಷೆಗಳನ್ನು ಹೊಂದಿವೆ ಎನ್ನಲಾಗಿದೆ.[೯೫] ಆಗ್ರಾ ಜಿಲ್ಲೆಯ 'ಅರಮ್‌ಭಾಗ್ ಬಾರದರಿ' ಎಂಬ ತೋಟದ ಒಂದು ವಿಹಾರ ಮಂಟಪದಲ್ಲಿ ಬಾಬರನ ಕಾಲದಲ್ಲಿ (೧೫೨೬-೩೦) ರಚಿಸಲಾದ ಭಿತ್ತಿಚಿತ್ರಗಳು ಇದೇ ಕಾಲಕ್ಕೆ ಸೇರುತ್ತವೆ. ಇಲ್ಲಿ ಎರಡು ಮನುಷ್ಯಾಕೃತಿಗಳು. ವಿವಿಧ ರೀತಿಯ ನಕ್ಷೆಗಳು. ಪ್ರಾಣಿ-ಪಕ್ಷಿಗಳು ರಚಿಸಿವೆ.[೯೬] ಹಾಗೆಯೇ, ಆಗ್ರಾ ಜಿಲ್ಲೆಯ ಫತ್ತೇಪುರಸಿಕ್ರಿಯಲ್ಲಿನ 'ಮಾರೆವ್ ಜಮಾನಿ' ಮನೆಗಳಲ್ಲಿ ಮತ್ತು ಶೇಖ ಸಲೀಮ್ ಚಿಸ್ತಿ ಸಮಾಧಿ ಭವನದಲ್ಲಿ ಫತ್ತೇಪುರಸಿಕ್ರಿಯಲ್ಲಿರುವ 'ಅಬುಲ್ ಫಜಲ್' ಮತ್ತು 'ಫೈಜಿ ಹೌಸ್' ಗಳಲ್ಲಿ ಈ ಕಾಲದ ಭಿತ್ತಿಚಿತ್ರಗಳು ರಚನೆಯಾಗಿದ್ದು. ಹೂ-ಬಳ್ಳಿ ನಕ್ಷೆಗಳು. ಜ್ಯಾಮಿತಿಕ ಆಕೃತಿಗಳನ್ನು ಒಳಗೊಂಡಿವೆ. ಅಲ್ಲದೇ ಬಿಹಾರದ ಶಹಬಾದ್ ಜಿಲ್ಲೆಯ ರೋಹತ್ ಸಾಗರ ಕೋಟೆಯಲ್ಲಿ. ರಾಜಾ ಮಾನಸಿಂಗನು ಬರೆಸಿದ ಭಿತ್ತಿಚಿತ್ರಗಳು. ಇದೇ ಜಿಲ್ಲೆಯ ಸಸರಾಮ್‌ದಲ್ಲಿನ ಷೇರಶಹನ ಸಮಾಧಿ ಭವನದ ಚಿತ್ರಗಳು. ಕ್ರಿ. ಶ. ೧೬ ನೇ ಶತಮಾನಕ್ಕೆ ಸೇರುತ್ತವೆ.[೯೭] ದೆಹಲಿಯ ಕೆಂಪುಕೋಟೆಯಲ್ಲಿನ ನೌಬತ್‌ಖಾನಾ ಕಟ್ಟಡ. ಹಳೆಕೋಟೆಯ ಕಲಕುಮ್ಮ ಮಸೀದಿ. ಜಮಾಲಿ-ಕಮಾಲಿ. ಸಮಾಧಿ ಭವನ. ಹೊಸದೆಹಲಿಯ ಅರಬ್-ಕಿ-ಸರೈ. ರೋಷನಾರಾಬಾರದರಿ ಕಟ್ಟಡಗಳಲ್ಲಿರುವ ಭಿತ್ತಿಚಿತ್ರಗಳೂ ಇದೇ ಕಾಲಮಾನಕ್ಕೆ ಸೇರುತ್ತವೆ.[೯೮]

ರಾಜಸ್ಥಾನದ ಚಿತ್ತೋರಘರ್‌ನಲ್ಲಿರುವ 'ಅಲ್ ಕಬ್ರಾ ಹೌಸ್'. ಬಹಾಮ್‌ಶಹಾ ಸ್ಮಾರಕ. ಜಯಪುರ ಜಿಲ್ಲೆಯ ಅಮೀರ್‌ನಲ್ಲಿರುವ ಜಗತ್ ಶಿರೋಮಣಿ ದೇವಾಲಯ. ಹಾಗೂ ಮಧ್ಯಪ್ರದೇಶದ ಬೇಹಿಂದ್ ಜಿಲ್ಲೆಯ 'ಅತರ್' ನಲ್ಲಿರುವ ಕೋಟೆಯಲ್ಲಿ. ಖಾಂಡವಾ ಜಿಲ್ಲೆಯ ಬುರಾನ್‌ಪುರದಲ್ಲಿನ ಧರ್ಮಶಾಲೆಯೊಂದರಲ್ಲಿ. ಶಹಷೂಜಾ. ಶಹನವಾಜ್ ಸಮಾಧಿಗಳಲ್ಲಿ. ಧಾರ್ ಜಿಲ್ಲೆಯ ಮಾಂಡುವಿನಲ್ಲಿರುವ ಗಢ್‌ಶಹಾನ ಅರಮನೆ. ಗ್ವಾಲಿಯರ್ ಕೋಟೆಯಲ್ಲಿರುವ 'ಹಜರತ್ ಮಹಮ್ಮದ್‌ಗೌಸ್' ಸಮಾಧಿಯಲ್ಲಿ. ಸಾಗರ ಜಿಲ್ಲೆಯ ಘರಪಹೇರಾ ಕೋಟೆಯಲ್ಲಿ ಈ ಕಾಲದ ಭಿತ್ತಿಚಿತ್ರಗಳಿವೆ ಎಂದು ತಿಳಿದುಬರುವುದು.[೯೯]

ಕೇರಳದ ಕೊಚ್ಚಿಯಲ್ಲಿರುವ ಮಟ್ಟಂಚರಿ ಅರಮನೆಯಲ್ಲಿ.[೧೦೦] ಕೊಟ್ಟಾಯಮ್ ಜಿಲ್ಲೆಯ ಎಟ್ಟುಮನೂರು ಶಿವದೇವಾಲಯದಲ್ಲಿ. ತ್ರಿಚೂರು ಜಿಲ್ಲೆಯ ತ್ರಿಪಯಾರ್‌ದಲ್ಲಿನ ಶ್ರೀರಾಮದೇವಾಲಯದಲ್ಲಿ. ಕನ್ಯಾಕುಮಾರಿ ಜಿಲ್ಲೆಯ ಪದ್ಮನಾಭಪುರಮ್ ಅರಮನೆಯಲ್ಲಿ[೧೦೧] ಮತ್ತು ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಆದಿಯಮ್ಮನ ಕೊಟ್ಟಾಯ್‌ದಲ್ಲಿರುವ ಚನ್ನರಾಯ ಪೆರುಮಾಳ್ ದೇವಾಲಯ.[೧೦೨] ಅಗಸ್ತಿವರಂ ತಾಲೂಕು ಸುಚೀಂದ್ರಮ್‌ದಲ್ಲಿರುವ ಸ್ಥಾನುಮಲಯಂ ದೇವಾಲಯಗಳಲ್ಲಿ[೧೦೩] ಕ್ರಿ. ಶ. ೧೬ ನೇ ಶತಮಾನದ ಭಿತ್ತಿಚಿತ್ರಗಳಿವೆ. ಹಾಗೆಯೇ ಆಂಧ್ರಪ್ರದೇಶದ

---

೯೫. J. C. Nagpal : ಪೂರ್ವೋಕ್ತ. ಪುಟ - ೧೯೬

೯೬. – ಅದೇ –

೯೭. J. C. Nagpal : Mural Paintings in India, Page - 169

೯೮. ದೆಹಲಿ ಭಿತ್ತಿಚಿತ್ರಗಳ ಪರಿವೀಕ್ಷಣೆ : ದಿನಾಂಕ ೨೦ ರಿಂದ ೨೫ ಸೆಪ್ಟೆಂಬರ್. ೧೯೯೬

೯೯. J. C. Nagpal : ಪೂರ್ವೋಕ್ತ. ಪುಟ - ೧೭೦

೧೦೦. V. R. Chitra and T. N. Srinivasan : Cochin Murals, Page - 40

೧೦೧. R. N. Podwal : Notes on Sculptures and Painting in Travana Core, Page - 183

೧೦೨. K. V. Sudar Rajan : Art of South India, Page - 79

೧೦೩. K. K Pillaya : Suchindram Temple, Page - 42

ಅನಂತಪುರ ಜಿಲ್ಲೆಯ ಹಿಂದೂಪುರ ತಾಲೂಕಿನ ಲೇಪಾಕ್ಷಿಯಲ್ಲಿನ ವೀರಭದ್ರಸ್ವಾಮಿ ದೇವಾಲಯ, ಇದೇ ಜಿಲ್ಲೆಯ ತಾಡಪತ್ರಿಯ ರಾಮೇಶ್ವರ ಮತ್ತು ಚಿಂತಾಲರಾಯಸ್ವಾಮಿ ದೇವಾಲಯ,[೧೦೪] ಪೆನುಗೊಂಡದ ಶಿವ ದೇವಾಲಯ ಮತ್ತು ರಾಮ ದೇವಾಲಯ, ಚಿತ್ತೂರು ಜಿಲ್ಲೆಯ ಮದನಪಲ್ಲಿ ತಾಲೂಕು ಸೋಮಪಲ್ಲಿಯ ವಿಷ್ಣು ದೇವಾಲಯ,[೧೦೫] ಕಾಳಹಸ್ತಿಯ ಕಣ್ಣಪ್ಪ ಬೆಟ್ಟದಲ್ಲಿರುವ ಶಿವದೇವಾಲಯದ ಭಿತ್ತಿಚಿತ್ರಗಳು ಇದೇ ಕಾಲದಲ್ಲಿ ರಚನೆಯಾಗಿವೆ[೧೦೬] ಎಂದು ತಿಳಿದುಬರುವುದು.

ಕ್ರಿ. ಶ. ೧೭ ನೇ ಶತಮಾನದ ಭಿತ್ತಿಚಿತ್ರಗಳು ಉತ್ತರ ಪ್ರದೇಶದ ಅಲಹಾಬಾದ್ ಜಿಲ್ಲೆಯ ಕುಶ್ರೋಭಾಗ ತೋಟ, ಕುಶ್ರೋನ ಸಮಾಧಿ, ಸುಲ್ತಾನ-ಉನ್-ನಿಸಾ ಬೇಗಮ್ ಸಮಾಧಿ, ಅಲಹಾಬಾದ್ ಕೋಟೆಯಲ್ಲಿರುವ ರಾಣಿಮಹಲ್‌ಗಳಲ್ಲಿ ರಚನೆಯಾಗಿವೆ. ಇವುಗಳಲ್ಲಿ ಮೊಗಲ್ ಶೈಲಿಯ ನಕ್ಷೆಗಳಿದ್ದು ಕ್ವಚಿತ್ತಾಗಿ ಮಾನವಾಕೃತಿಗಳು ರಚನೆಯಾಗಿವೆ ಎಂದು ತಿಳಿದುಬರಬಹುದು.[೧೦೭] ರಾಜಸ್ಥಾನದ ಬುಂದಿ ಪಟ್ಟಣದಲ್ಲಿರುವ ಛತ್ರಮಹಲ್ ಅರಮನೆ,[೧೦೮] ಜಯಪುರ ಜಿಲ್ಲೆಯ ಬೈರಾತ್‌ನಲ್ಲಿರುವ ಹೆಬ್ಬಾಗಿಲೊಂದರಲ್ಲಿ, ಉದಯಪುರದಲ್ಲಿರುವ ದಿಲ್‌ಕುಶ್‌ಮಹಲ್, ರಂಗಮಹಲ್ ಮತ್ತು ಬದಲ್‌ಮಹಲ್‌ಗಳಲ್ಲಿ,[೧೦೯] ಮಧ್ಯಪ್ರದೇಶದ ದಾಮೋ ಜಿಲ್ಲೆಯ ಹಟ್ಟಾ ಎಂಬಲ್ಲಿನ ರಂಗಮಹಲ್ ಅರಮನೆಯಲ್ಲಿ, ಸಾಗರ ಜಿಲ್ಲೆಯ ರಾಹತ್‌ಘರ ಕೋಟೆಯ 'ಬದಲ್‌ಮಹಲ್' ಕಟ್ಟಡದಲ್ಲಿ,[೧೧೦] ಡಟಿಯಾ ಮತ್ತು ಓರಚ್ಚಾಗಳಲ್ಲಿನ ಬೀರಸಿಂಗನ ಅರಮನೆಗಳಲ್ಲಿ[೧೧೧] ಇದೇ ಕಾಲದ ಭಿತ್ತಿಚಿತ್ರಗಳಿವೆ.

ದೆಹಲಿಯಲ್ಲಿನ ಕೆಂಪು ಕೋಟೆಯಲ್ಲಿನ ದಿವಾನ್-ಇ-ಖಾಸ್ ಕಟ್ಟಡದಲ್ಲಿ, ರಂಗ ಮಹಲ್‌ದಲ್ಲಿ,[೧೧೨] ಪಂಜಾಬಿನ ಜಲಂಧರ ಜಿಲ್ಲೆಯ ಮುಕೋದರನಲ್ಲಿರುವ ಮಹಮ್ಮದ್ ಮೋಯಿನ್ ಮತ್ತು ಹಾಜಿ ಜಮಾಲ್ ಸಮಾಧಿಯಲ್ಲಿ, ಮಹಾರಾಷ್ಟ್ರದ ಔರಂಗಾಬಾದ್ ಪಟ್ಟಣದಲ್ಲಿರುವ ಬಿಬೀ-ಕಾ-ಮಕಬಾರಾ ಸಮಾಧಿಯಲ್ಲಿ[೧೧೩] ಕ್ರಿ. ಶ. ೧೭ ನೇ ಶತಮಾನದ ಚಿತ್ರಗಳಿವೆ.

ತಮಿಳುನಾಡಿನ ಉತ್ತರ ಅರ್ಕಾಟ್ ಜಿಲ್ಲೆಯ ಚೆಂಗಮ್‌ದಲ್ಲಿನ ವೇಣುಗೋಪಾಲ ಪಾರ್ಥ ಸಾರಥಿ ದೇವಾಲಯದಲ್ಲಿ,[೧೧೪] ಕೇರಳದ ತ್ರಿವೇಂದ್ರಂ ಜಿಲ್ಲೆಯ ತಿರುವಲ್ಲಮ್‌ನಲ್ಲಿರುವ ಪರಶುರಾಮ

---

೧೦೪. C. Sivaramamurti : South Indian Paintings, Page - 39
೧೦೫. R. Nagaswamy : South Indian Studies
೧೦೬. J. C. Nagpal : Mural Paintings in India, Page - 79
೧೦೭. J. C. Nagpal : Mural Paintings in India, Page - 102
೧೦೮. W. G. Archer : Indian Paintings in Bundi and Kota, Page - 64
೧೦೯. J. C. Nagpal : ಪೂರ್ವೋಕ್ತ. ಪುಟ - ೧೭೩
೧೧೦. –ಅದೇ– ಪುಟ - ೧೩೬
೧೧೧. K. K. Chakravarthi : The Arts of India (Orachha), Page - 48
೧೧೨. ದೆಹಲಿಯ ಭಿತ್ತಿಚಿತ್ರಗಳ ಪರಿವೀಕ್ಷಣೆ : ದಿನಾಂಕ ೨೦ ರಿಂದ ೨೫. ಸಪ್ಟಂಬರ್ ೧೯೯೬
೧೧೩. J. C. Nagpal : ಪೂರ್ವೋಕ್ತ. ಪುಟ - ೧೪೫
೧೧೪. The Hindu : 27 August 1975, Page - 17

ಬ್ರಹ್ಮದೇವಾಲಯದಲ್ಲಿ ಸಹಿತ ಈ ಕಾಲದ ಭಿತ್ತಿಚಿತ್ರಗಳು [೧೧೫] (ಕ್ರಿ. ಶ. ೧೭ ನೇ ಶತಮಾನ) ರಚನೆಯಾಗಿವೆ. ಕ್ರಿ. ಶ. ೧೮ ನೇ ಶತಮಾನದ ಭಿತ್ತಿಚಿತ್ರಗಳು ಹಿಮಾಚಲ ಪ್ರದೇಶದ ಚಂಬಾದಲ್ಲಿರುವ ಅಖಂಡಚಂಡಿ ಅರಮನೆ, [೧೧೬] ದುರ್ಗಾ ದೇವಾಲಯ. ರಂಗಮಹಲ್ ಅರಮನೆ. ಕಾಂಗ್ರಾ ಜಿಲ್ಲೆಯ ತಿರುಜಸನ್‌ಪುರದ ಗೌರೀಶಂಕರ ದೇವಾಲಯ. ನರಬದೇಶ್ವರ ದೇವಾಲಯ. ಮುರಲೀ ಮನೋಹರ ದೇವಾಲಯ. ಇದೇ ಜಿಲ್ಲೆಯ ನಡೌನ್‌ದಲ್ಲಿರುವ ಅರಮನೆಯಲ್ಲಿ. ಶಿವ ದೇವಾಲಯದಲ್ಲಿ. [೧೧೭] ಕುಲು ಜಿಲ್ಲೆಯ ಸುಲ್ತಾನಪುರದಲ್ಲಿರುವ ಶಿಶ್‌ಮಹಲ್ ಅರಮನೆಯಲ್ಲಿ [೧೧೮] ಕಂಡುಬರುತ್ತವೆ.

ಅದೇ ರೀತಿ ಉತ್ತರ ಪ್ರದೇಶದ ಬರೇಲಿಯಲ್ಲಿರುವ ಹಫೀಜ್-ಉಲ್-ಮುಲ್ಕ ಸಮಾಧಿ, ಪೀರ್ ಶಹದಾನಾ ಸಮಾಧಿ. [೧೧೯] ಡೆಹರಾಡೂನ್‌ದಲ್ಲಿರುವ ಗುರುರಾಮದಾಸ್ ದೇವಾಲಯ, ಫೈಜಾಬಾದ್‌ನಲ್ಲಿರುವ ಬೇಗಮ್ ಸಮಾಧಿಗಳಲ್ಲಿ [೧೨೦] ಇದೇ ಕಾಲದ ಭಿತ್ತಿಚಿತ್ರಗಳು ರಚನೆಯಾಗಿವೆ.

ಹಾಗೆಯೇ ಪಶ್ಚಿಮ ಬಂಗಾಳದ ಬಂಕುರಾ ಜಿಲ್ಲೆಯ ವಿಷ್ಣುಪುರದ ರಾಧೇಶ್ಯಾಮ್ ದೇವಾಲಯ, ಜಮ್ಮು ಕಾಶ್ಮೀರದ ಉಧಮ್‌ಪುರ ಜಿಲ್ಲೆಯ ರಾಮನಗರದ ಶಿಶ್‌ಮಹಲ್ ಅರಮನೆ, ಗುಜರಾತದ ಬರೋಡಾ ಜಿಲ್ಲೆಯ ವಿಠ್ಠಲ ದೇವಾಲಯ. ಭರತ್‌ಪುರ ಜಿಲ್ಲೆಯ ಡೀಗ್ ಅರಮನೆ, ರಾಜಸ್ಥಾನದ ಜಯಪುರದಲ್ಲಿರುವ ' ಗಲ್‌ತಾಜೀ ಬಾರದರಿ ' ಎಂಬ ಕಟ್ಟಡದ ಸ್ನಾನಗೃಹದಲ್ಲಿ. [೧೨೧] ಕೋಟಾದಲ್ಲಿರುವ ಜಲಾಜಾಲಿಮ್‌ಸಿಂಗನ ಹವೇಲಿಯಲ್ಲಿ, [೧೨೨] ಪಂಜಾಬದ ಪಟಿಯಾಲಾದಲ್ಲಿನ ಕಿಲ್ಲಾಮುಬಾರಕ್ ಸ್ಮಾರಕ, ರಂಗಮಹಲ್, ಶಿಶ್‌ಮಹಲ್ ಮತ್ತು ಮೋತೀಮಹಲ್ ಗಳಲ್ಲಿ [೧೨೩] ೧೮ ನೇ ಶತಮಾನದ ಭಿತ್ತಿಚಿತ್ರಗಳಿವೆ ಎಂಬುದಾಗಿ ತಿಳಿದುಬರುತ್ತದೆ.

ಮಹಾರಾಷ್ಟ್ರದ ಪುನಾ ಜಿಲ್ಲೆಯ ಶನಿವಾರ ವಾಡಾದಲ್ಲಿನ ಅರಮನೆ, [೧೨೪] ಕೇರಳದ ಅಲೆಪ್ಪಿ ಜಿಲ್ಲೆಯಲ್ಲಿರುವ ಕಯ್ಯಾಕುಲಂದಲ್ಲಿನ ಕೃಷ್ಣಪುರಂ ಅರಮನೆ. ಕನ್ನಾನೂರು ಜಿಲ್ಲೆಯ ಕಾಸರಗೋಡು ತಾಲೂಕಿನ ಅನಂತ ಪದ್ಮನಾಭ ದೇವಾಲಯ. ಇದೇ ಜಿಲ್ಲೆಯ ಕನ್ನಿರಂಗಡದಲ್ಲಿನ ಅರಮನೆ ಆವರಣದಲ್ಲಿರುವ ವೈದ್ಯನಾಥಸ್ವಾಮಿ ದೇವಾಲಯ, ಮತ್ತು ತ್ರಿಚಚಂಬರಮ್ ದಲ್ಲಿನ ಕೃಷ್ಣದೇವಾಲಯದಲ್ಲಿ [೧೨೫] ಈ ಕಾಲದ ಭಿತ್ತಿಚಿತ್ರಗಳಿವೆ ಎನ್ನಲಾಗಿದೆ.

---

೧೧೫. J. C. Nagpal : ಪೂರ್ವೋಕ್ತ, ಪುಟ - ೧೫೩

೧೧೬. Marga : VII, 4 Sept, 1954, Page - 25

೧೧೭. J. C. Nagpal : ಪೂರ್ವೋಕ್ತ, ಪುಟ - ೯೫, ೧೦೦

೧೧೮. Jagadish Mitthal : Roopalekha, Page - 86

೧೧೯. R. S. Tewari : A. S. I. Report, (1970), Page - 71

೧೨೦. J. C. Nagpal : ಪೂರ್ವೋಕ್ತ, ಪುಟ - ೨೦೫

೧೨೧. J. C. Nagpal : ಪೂರ್ವೋಕ್ತ, ಪುಟ - ೧೬೭, ೧೬೮, ೨೦೫

೧೨೨. The Times of India : 13 July, 1981, Page - 8

೧೨೩. Karuna Goswamy : Roopalekha, Page - 127

೧೨೪. ಶನಿವಾರವಾಡಾ ಕಮಿಟಿ ಹೊರತಂದಿರುವ : ದಿ ಎಕ್ಸ್‌ಟೆಂಟ್ ಆರ್ಕಿಟೆಕ್ಚರಲ್ ಆಫ್ ಶನಿವಾರ ವಾಡಾ. ಪುಟ - ೬

೧೨೫. J. C. Nagpal : ಪೂರ್ವೋಕ್ತ, ಪುಟ - ೧೧೮

ಇವುಗಳಲ್ಲದೇ ಕೇರಳದಲ್ಲಿಯೇ ' ಪಾಲಗಾಟ್ ' ಜಿಲ್ಲೆಯ ಪಲ್ಲಿಯಾರಕಾವುದಲ್ಲಿನ ಶಿವ ದೇವಾಲಯ, ತ್ರಿಚೂರು ಜಿಲ್ಲೆಯ ಅವಿತ್ತೂರಿನಲ್ಲಿನ ಶಿವ ದೇವಾಲಯಗಳಲ್ಲಿ [೧೨೬] ೧೮ ನೇ ಶತಮಾನದ ಭಿತ್ತಿಚಿತ್ರಗಳು ರಚನೆಯಾಗಿವೆ. ಕ್ರಿ. ಶ. ೧೯ ನೇ ಶತಮಾನದಲ್ಲಿ ರಚನೆಯಾದ ಅನೇಕ ಭಿತ್ತಿಚಿತ್ರಗಳು ಭಾರತದಲ್ಲಿ ಕಂಡುಬರುತ್ತವೆ. ಹಿಮಾಚಲ ಪ್ರದೇಶದ ಚಂಬಾ ಜಿಲ್ಲೆಯ ' ಚತ್ರಾರಿ ' ಯಲ್ಲಿರುವ ಶಕ್ತಿದೇವಿ ಮಂದಿರ, ವಜೀರ್ ಅರಮನೆ, ಕಾಂಗ್ರಾ ಜಿಲ್ಲೆಯ ಧರ್ಮತಾಲ್ ದೇವಾಲಯ, ದೇಡಾಸಿಬಾ ದೇವಾಲಯ, [೧೨೭] ನೂರಪುರದಲ್ಲಿನ ಬ್ರಿಜ್‌ಬಿಹಾರಿ ದೇವಾಲಯ. [೧೨೮] ಶಿಮ್ಲಾ ಜಿಲ್ಲೆಯ ಶೋಗಿಯಲ್ಲಿರುವ ಗೋಪಾಲ ದೇವಾಲಯ [೧೨೯] ಗಳಲ್ಲಿ ಕ್ರಿ. ಶ. ೧೯ ನೇ ಶತಮಾನದ ಭಿತ್ತಿಚಿತ್ರಗಳು ರಚನೆಯಾಗಿವೆ. ಬಿಹಾರದ ಪಾಟ್ನಾ ಜಿಲ್ಲೆಯ ಬೈಕಾಟಪುರದಲ್ಲಿರುವ ರಾಜಾಮಾನಸಿಂಗನ ತಾಯಿಯ ನೆನಪಿನ ಕಟ್ಟಡದಲ್ಲಿ, ಪಶ್ಚಿಮ ಬಂಗಾಳದ ಹೂಗ್ಲಿ ಜಿಲ್ಲೆಯ ಗುಪ್ತಿಪುರ ಹಳ್ಳಿಯಲ್ಲಿರುವ ಬೃಂದಾವನ ಚಂದ್ರ ದೇವಾಲಯದಲ್ಲಿ [೧೩೦] ಈ ಕಾಲದ ಚಿತ್ರಗಳಿರುವುದಾಗಿ ತಿಳಿದುಬರುತ್ತದೆ.

ಅಲ್ಲದೇ ಜಮ್ಮು-ಕಾಶ್ಮೀರ ರಾಜ್ಯದ ಜಮ್ಮು ಜಿಲ್ಲೆಯ ರೇಯಾಸಿ ಎಂಬಲ್ಲಿರುವ ಮಹಾರಾಜಾ ಗುಲಾಬಸಿಂಗನ ಅರಮನೆಯಲ್ಲಿ, [೧೩೧] ಇದೇ ಜಿಲ್ಲೆಯ ದೇರಾಬಾಬಾ ಬಂದಬಹದ್ದೂರ ಮಠದಲ್ಲಿ, ಪುರಮಂಡಲ ಧರ್ಮಶಾಲೆಯಲ್ಲಿ, ಹಾಗೂ ಸುಯಿ ಸಿಂಬಾಲಿ ಎಂಬಲ್ಲಿನ ರಘುನಾಥ ದೇವಾಲಯದಲ್ಲಿ [೧೩೨] ೧೯ ನೇ ಶತಮಾನದ ಭಿತ್ತಿಚಿತ್ರಗಳಿವೆ. ಗುಜರಾತ್ ರಾಜ್ಯದ ಬರೋಡಾದಲ್ಲಿನ ತಾಂಬೇಕರ್ ವಾಡಾದಲ್ಲಿ, [೧೩೩] ಭಾವನಗರ ಜಿಲ್ಲೆಯ ಶೇಹೋರ್‌ದಲ್ಲಿನ ಅತ್ತಾಬಾಯಿ ಥಾಕರ್ ಅರಮನೆಯಲ್ಲಿ, [೧೩೪] ರಾಜಸ್ತಾನದ ಅಜ್ಮೀರ ಜಿಲ್ಲೆಯ ಪುಸ್ಕರ್ ಎಂಬಲ್ಲಿಯ ರಂಗಜೀ ದೇವಾಲಯದಲ್ಲಿ, [೧೩೫] ಜಯಪುರ ಜಿಲ್ಲೆಯ ಬ್ರಹ್ಮಪುರಿ ಎಂಬಲ್ಲಿನ ಪುಂಡರೀಕಜೀ-ಕಿ-ಹವೇಲಿ ಎಂಬ ಸ್ಮಾರಕದಲ್ಲಿ, ಇದೇ ಜಿಲ್ಲೆಯ ಅಮೀರ್ ಕೋಟೆಯಲ್ಲಿನ ಭೋಜನ ಶಾಲೆಯಲ್ಲಿ, [೧೩೬] ಜೋಧಪುರ ದಲ್ಲಿನ ಕೋಟೆಯಲ್ಲಿರುವ ಫೂಲಮಹಲ್, ತಕ್ತಮಹಲ್, [೧೩೭] ಜೋಧಪುರದಲ್ಲಿಯೇ ಇರುವ ತೇಜಮಾಜ ದೇವಾಲಯ, ತಾಲಬಾಬಾ ದೇವಾಲಯ, [೧೩೮] ಉದಯಪುರ ಜಿಲ್ಲೆಯ ನಾಥದ್ವಾರ ದೇವಾಲಯದಲ್ಲಿ [೧೩೯] ಈ ಕಾಲಮಾನದ ಭಿತ್ತಿಚಿತ್ರಗಳು ರಚನೆಯಾಗಿವೆ.

---

೧೨೬. H. Sarkar : Architectural Servay of Temples of Kerala, A. S. I. Report, (1973), Page - 23
೧೨೭. J. C. Nagpal : Mural Paintings in India, Page - 20
೧೨೮. Times of India : 4 March, 1979, Page - 10
೧೨೯. Sukhadeva Sing Charaka : History and Culture of Himalayan States, Page - 181
೧೩೦. J. C. Nagpal : ಪೂರ್ವೋಕ್ತ, ಪುಟ - ೨೨
೧೩೧. Marga : XVIII, 3, 4, June, Sept., 1964, Page - 48
೧೩೨. J. C. Nagpal : Mural Paintings in India, Page - 107
೧೩೩. Hindustan Times : 12 June 1983, Page - 12, Wall Paintings of Tambeker Wada, Subhas Arryan
೧೩೪. J. C. Nagpal : ಪೂರ್ವೋಕ್ತ, ಪುಟ - ೯೩
೧೩೫. H. Bheeshmapal : Temples of Rajastan, Page - 63
೧೩೬. A. S. I. Annual Report : (1927–28), Page - 81
೧೩೭. ನವಭಾರತ ಟೈಮ್ಸ್ : ಏಪ್ರಿಲ್ ೨೮, (೧೯೭೬), ಪುಟ - ೬
೧೩೮. R. A. Agarwal : Marwar Murals, Page - 77
೧೩೯. J. C. Nagpal : ಪೂರ್ವೋಕ್ತ, ಪುಟ - ೧೭೬

ಹಾಗೆಯೇ ಪಂಜಾಬ ರಾಜ್ಯದ ಹೋಷಿಯಾರ್‌ಪುರ ಜಿಲ್ಲೆಯ ಭರವೈನ್ ಬೆಟ್ಟಗಳಲ್ಲಿರುವ ಧರ್ಮಶಾಲಾದಲ್ಲಿ,[೧೪೦] ಅಮೃತಸರ ಸ್ವರ್ಣಮಂದಿರ, ಮೈಯಾನಾಥ ದೇವಾಲಯ, ಕತ್ರಾದೂಲ್ ದೇವಾಲಯ, ಬಟಾಲದಲ್ಲಿರುವ ಬಂದರನ್ ಮಂದಿರ, ರಘುನಾಥ ದೇವಾಲಯ, ಊನಾ ಜಿಲ್ಲೆಯ ಬಾಬಾ ಕಲಧರಿ ಗುರುದ್ವಾರ, ಸಂಗ್ರೂರ್ ಜಿಲ್ಲೆಯ ಬಾಬಾದಯಾಲ್ ಸಮಾಧಿ, ಹೋಷಿಯಾರ್‌ಪುರ ಜಿಲ್ಲೆಯ ಬಾಬಾ ಮಹರ್‌ಸಿಂಗನ ಸಮಾಧಿಗಳಲ್ಲಿ [೧೪೧] ಕ್ರಿ. ಶ. ೧೯ ನೇ ಶತಮಾನದ ಭಿತ್ತಿಚಿತ್ರಗಳಿರುವುದು ತಿಳಿದುಬರುತ್ತದೆ. ಕ್ರಿ. ಶ. ೨೦ ನೇ ಶತಮಾನದ ಭಿತ್ತಿಚಿತ್ರಗಳು ಹಿಮಾಚಲ ಪ್ರದೇಶದ ಸಿಮ್ಲಾ ಜಿಲ್ಲೆಯ ಆರ್ಕೀ ಪ್ರದೇಶದಲ್ಲಿರುವ ಕೋಟೆಯಲ್ಲಿನ ದಿವಾನ್‌ಖಾನಾದಲ್ಲಿ, ಕೇರಳದ ತ್ರಿವೇಂದ್ರಮ್ ಜಿಲ್ಲೆಯ ಕಡಿನಮ್‌ಕುಲಮ್‌ದಲ್ಲಿನ ಮಹಾದೇವ ದೇವಾಲಯಗಳಲ್ಲಿ [೧೪೨] ಕಂಡುಬರುತ್ತವೆ. ಕರ್ನಾಟಕವು ಸಹ ಶ್ರೀಮಂತವಾದ ಭಿತ್ತಿಚಿತ್ರ ಪರಂಪರೆಯನ್ನೂ ಹೊಂದಿದ್ದು ಅದರ ಇತಿಹಾಸವನ್ನು ಇಲ್ಲಿ ನೋಡಬಹುದಾಗಿದೆ.

## ಕರ್ನಾಟಕ

ಕರ್ನಾಟಕದಲ್ಲಿ ಕಾಲಮಾನದಿಂದ ಅತ್ಯಂತ ಪುರಾತನ ಭಿತ್ತಿಚಿತ್ರಗಳು ಬದಾಮಿ ಬಳಿ ಇರುವ ಅರೆಗುಡ್ಡ, ಹಿರೇಗುಡ್ಡ ಎಂಬಲ್ಲಿಯ ಕಲ್ಲಾಸರೆಯಲ್ಲಿ, ಸಮೀಪದ ಸೀತಿದೋಣಿ, ಸಿದ್ಲಫಡಿಯಲ್ಲಿ ಹಾಗೂ ರಾಮದುರ್ಗದ ಪಶ್ಚಿಮಕ್ಕೆ ೪ ಕಿ. ಮೀ. ದೂರದಲ್ಲಿರುವ ಮೇಗುಂಡೇಶ್ವರ ದೇವಾಲಯದ ಬಳಿಯ ಖಾಜೀ ಗುಡ್ಡದಲ್ಲಿ ಕಂಡುಬರುತ್ತವೆ. ಇವು ಸೂಕ್ಷ್ಮ ಶಿಲಾಯುಗ ಕಾಲದ ಕ್ರಿ. ಪೂ. ೧೦,೦೦೦ (ಹತ್ತುಸಾವಿರ) ವರ್ಷಗಳ ಕಾಲಾವಧಿಗೆ, ಇಲ್ಲವೇ ಅದಕ್ಕೂ ಪೂರ್ವದ ಅಂತ್ಯ ಹಳೇ ಶಿಲಾಯುಗದ ಕ್ರಿ. ಪೂ. ೪೦,೦೦೦ (ನಲವತ್ತುಸಾವಿರ) ವರ್ಷಗಳ ಅವಧಿಗೆ ಸೇರುತ್ತವೆ [೧೪೩] ಯಲ್ಲದೇ ಇದುವರೆಗೆ ತಿಳಿದುಬಂದಂತೆ ದಕ್ಷಿಣ ಭಾರತದ ಅತ್ಯಂತ ಪುರಾತನ ಭಿತ್ತಿಚಿತ್ರಗಳೂ ಇವೇ ಆಗಿವೆ ಎಂದೂ ಡಾ. ಅ. ಸುಂದರ ಅವರು ಅಭಿಪ್ರಾಯ ಪಡುತ್ತಾರೆ.[೧೪೪]

ನಂತರದ ನೂತನ ಶಿಲಾಯುಗ, ಶಿಲಾತಾಮ್ರಯುಗ ಕಾಲದ ಕ್ರಿ. ಪೂ. ೨೦೦೦ (ಎರಡುಸಾವಿರ) ವರ್ಷಗಳ ಅವಧಿಗೆ ಸೇರಿದ ಭಿತ್ತಿಚಿತ್ರಗಳು ಕೊಪ್ಪಳ ಗಂಗಾವತಿ ತಾಲೂಕಿನ ಹಿರೇಬೆನಕಲ್, ಅಂಜನ ಹಳ್ಳಿ, ತಿಮ್ಮಲಾಪುರ, ನಾರಾಯಣಪುರ, ಬಂಡಿಹರ್ಲಾಪುರ, ಚಿಕ್ಕರಾಮಾಪುರ, ಲಿಂಗಸುಗೂರು ತಾಲೂಕಿನ ಪಿಕ್ಕಿಹಾಳ, ಮಸ್ಕಿ, ತಾವರಗೇರಾ, ಭಿಲ್ಲಮರಾಯನ ಗುಡ್ಡ, ರಾಯಚೂರು ತಾಲೂಕಿನ ತೊಗಲಗುಡ್ಡ, ಕಲ್ಲೂರು, ಶಿರಗುಪ್ಪ ತಾಲೂಕಿನ ತೆಕ್ಕಲಕೋಟೆ, ಹೊಸಪೇಟೆ ಬಳಿಯ ಹಂಪಿ, ಹಳಕುಂಡಿ, ಬೆಳಗಲ್, ಬಳ್ಳಾರಿ ಸಮೀಪದ ಕುರುಗೋಡು, ಶಿವಮೊಗ್ಗ ತಾಲೂಕಿನ ಹೊಳಲೂರು, ಜಮಖಂಡಿ ತಾಲೂಕಿನ ಕುಳ್ಳೊಳ್ಳಿ, ಚಿತ್ರದುರ್ಗದ ಸುತ್ತಮುತ್ತಲಿನ ಗುಡ್ಡಗಳಲ್ಲಿ, ಮೊಳಕಾಲ್ಮೂರು

---

೧೪೦. Marga : XVIII, No. 3, 4, June 1964, Page - 34
೧೪೧. J. C. Nagpal : Mural Paintings in India, Page - 164
೧೪೨. -ಅದೇ- ಪುಟ - ೧೩೫
೧೪೩. ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಪುಟ - ೨೨
೧೪೪. -ಅದೇ- ಪುಟ - ೬೪

ತಾಲೂಕಿನ ಜಟ್ಟಿಂಗ ರಾಮೇಶ್ವರ, ಬ್ರಹ್ಮಗಿರಿ, ಸೊಂಡೂರು ತಾಲೂಕಿನ ರಾಜಾಪುರ, ಬೈರನಾಯಕ ಹಳ್ಳಿ, ಮುಂತಾದ ಕಡೆಗಳಲ್ಲಿ ಕಂಡುಬಂದಿವೆ. [೧೪೫]

ಬೃಹತ್ ಶಿಲಾ ಸಂಸ್ಕೃತಿಯ ಕಾಲದ ಕ್ರಿ. ಪೂ. ೧೨೦೦ (ಸಾವಿರದ ಎರಡುನೂರು) ಭಿತ್ತಿಚಿತ್ರಗಳು ಹುನಗುಂದ ತಾಲೂಕಿನ ಐಹೊಳೆ. ಕೊಪ್ಪಳ, ಗಂಗಾವತಿ ತಾಲೂಕಿನ ಬಿಳಿಭಾವಿ, ಹಿರೇಬೆನಕಲ್, ಆನೆಗೊಂದಿ, ಮಲ್ಲಾಪುರ, ಹೊಸಪೇಟೆಯ ಹಂಪಿ. ಚಿತ್ರದುರ್ಗ ಪ್ರದೇಶಗಳ ಗುಡ್ಡಗಳಲ್ಲಿ ಶಿಲಾಶ್ರಯಗಳಲ್ಲಿ ಇವೆ. ಪೂರ್ವಭಾವಿ ಇತಿಹಾಸ ಕಾಲದ ಭಿತ್ತಿಚಿತ್ರಗಳು ಗಂಗಾವತಿ ತಾಲೂಕಿನ ಇಂದುರ್ಗಿ, ವೆಂಕಟಾಪುರ, ಲಿಂಗಸುಗೂರು ತಾಲೂಕಿನ ಚಿಕ್ಕಿಹಾಳ, ಹೊಸಪೇಟೆಯ ಬಳಿಯ ಹಂಪಿ, ಕೊಪ್ಪಳ, ಗಾವಳಿ, ಹೊಳಲೂರು, ಜಟ್ಟಿಂಗ ರಾಮೇಶ್ವರ, ಚಿತ್ರದುರ್ಗ ಪ್ರದೇಶಗಳಲ್ಲಿ ರಚನೆಯಾಗಿವೆ. [೧೪೬]

ಕರ್ನಾಟಕದ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಇವಾದರೆ ಶಿಷ್ಟ ಪರಂಪರೆಯ ಭಿತ್ತಿಚಿತ್ರಗಳ ಬೆಳವಣಿಗೆಯನ್ನು ಸಾಮಾನ್ಯವಾಗಿ ಬಾದಾಮಿಯ ವೈಷ್ಣವ ಗುಹೆಯ ಚಾಲುಕ್ಯರ ಭಿತ್ತಿಚಿತ್ರಗಳಿಂದ ಪ್ರಾರಂಭಿಸುವುದು ವಾಡಿಕೆ. ಆದರೆ ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕದ ಶಿಷ್ಟಪರಂಪರೆಯ ಭಿತ್ತಿಚಿತ್ರಕಲೆಯು ಇನ್ನೂ ಪುರಾತನವೆಂದೇ ಹೇಳಬಹುದು. ಕ್ರಿ. ಪೂ. ೨ ನೇ ಶತಮಾನದಿಂದ ಕ್ರಿ. ಶ. ೨ ನೇ ಶತಮಾನದವರೆಗೆ ಆಳ್ವಿಕೆ ನಡೆಸಿದ ಶಾತವಾಹನರು ಆಳಿದ ಪ್ರದೇಶವು ಇಂದಿನ ಕರ್ನಾಟಕದ ಬಹುಭಾಗವನ್ನು ಒಳಗೊಂಡಿತ್ತು. ಅಲ್ಲದೇ ಅವರು ತಮ್ಮ ರಾಜಕೀಯ ಚಟುವಟಿಕೆಗಳನ್ನು ಆರಂಭಿಸಿದ ಪ್ರದೇಶವು ಕರ್ನಾಟಕ ಆಂಧ್ರಗಳ ಗಡಿಪ್ರದೇಶವೇ ಆಗಿದೆ ಎಂದು ವಿದ್ವಾಂಸರ ಅಭಿಪ್ರಾಯ [೧೪೭] ಪಡುತ್ತಾರೆ.

ಕರ್ನಾಟಕದ ಬಳ್ಳಾರಿ, ಆಂಧ್ರಪ್ರದೇಶದ ಸ್ವಲ್ಪ ಭಾಗವನ್ನು ಸ್ಪಷ್ಟವಾಗಿ ಶಾತವಾಹನೀಹಾರ ಮತ್ತು ಶಾತವಾಹನೀ ರಾಷ್ಟ್ರವೆಂದು ಕರೆದಿರುವುದರಿಂದ ಈ ಪ್ರದೇಶದಿಂದಲೇ ಅವರ ರಾಜಕೀಯ ಚಟುವಟಿಕೆಗಳು ಆರಂಭವಾಗಿರಬಹುದು ಎಂದು ಹೇಳಲಾಗಿದೆ. [೧೪೮]

ಈ ದೃಷ್ಟಿಯಿಂದ ನೋಡಿದಾಗ ಶಾತವಾಹನರ ಕಲಾಕೊಡುಗೆಗಳು ಕರ್ನಾಟಕದ ಗಡಿಭಾಗಗಳಲ್ಲಿ ಆಳುತ್ತಿದ್ದ ಅರಸರ ರಚನೆಗಳೇ ಆಗಿವೆ ಎಂದು ಹೇಳಬಹುದು. ಶಾತವಾಹನರ ಕಾಲದಲ್ಲಿ ಅಜಂತಾ, ನಾಸಿಕ್, ಬೇಡ್ಸ್, ಭಾಜಾ, ಕೊಂಡಾನೆ, ಕಾರ್ಲೆ ಸ್ಥಳಗಳಲ್ಲಿ ಗುಹಾಲಯಗಳನ್ನು ಕೊರೆದು ಭಿತ್ತಿಚಿತ್ರಗಳನ್ನು ಬರೆಸಲಾಗಿದೆ. [೧೪೯] ಶಾತವಾಹನರ ಈ ಭಿತ್ತಿಚಿತ್ರಗಳನ್ನು ಕರ್ನಾಟಕದ ಗಡಿಭಾಗದ ದೊರೆಗಳ ರಚನೆಗಳೆಂದೇ ಪರಿಗಣಿಸಿದಾಗ ಕರ್ನಾಟಕದ ಶಿಷ್ಟಪದ ಭಿತ್ತಿಚಿತ್ರ ಕಲೆಯ ಹಳಮೆಯು (ಪುರಾತನತೆಯು) ಕ್ರಿ. ಶ. ೬ ನೇ ಶತಮಾನದ ಚಾಲುಕ್ಯರ ಬದಾಮಿ ಭಿತ್ತಿಚಿತ್ರಗಳಿಂದ

೧೪೫. ಡಾ. ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ. ಪುಟ - ೬೭-೬೮
೧೪೬. – ಅದೇ – ಪುಟ - ೬೯
೧೪೭. ಡಾ. ಅ. ಸುಂದರ (ಸಂ.) : ಕರ್ನಾಟಕ ಚರಿತ್ರೆ, ಸಂಪುಟ ೧, ಪುಟ - ೩೦೨
೧೪೮. – ಅದೇ –
೧೪೯. C. Sivaramamurti : Indian Paintings, Page - 24

ಕ್ರಿ. ಪೂ. ೨ ನೇ ಶತಮಾನದ ಶಾತವಾಹನರ ಅಜಂತಾ ಭಿತ್ತಿಚಿತ್ರಗಳವರೆಗೂ ಹಿಂದೆ ಸರಿದಂತಾಗುತ್ತದೆ. ಶಾತವಾಹನರ ಕಾಲದ ಭಿತ್ತಿಚಿತ್ರಗಳು ಅಜಂತಾದಲ್ಲಿ ೯ ಮತ್ತು ೧೦ ನೇ ಗುಹೆಯಲ್ಲಿ ರಚನೆಯಾಗಿರುವುದನ್ನು ವಿದ್ವಾಂಸರು [೧೫೦] ಈಗಾಗಲೇ ಗುರುತಿಸಿದ್ದಾರೆ.

ಕ್ರಿ. ಶ. ೪ ನೇ ಶತಮಾನದಲ್ಲಿ ರಾಜ್ಯ ಸ್ಥಾಪಿಸಿ ಆಳ್ವಿಕೆ ಪ್ರಾರಂಭಿಸಿದ ಕದಂಬರ ಕಾಲದ ಯಾವುದೇ ಭಿತ್ತಿಚಿತ್ರ ನಿದರ್ಶನಗಳು ಇಂದು ಉಳಿದುಬಂದಿಲ್ಲ. ಆದರೆ ಆವಾಗಲೂ ಭಿತ್ತಿಚಿತ್ರ ರಚನೆ ನಡೆದಿರಬಹುದೆಂದು ಹೇಳಬಹುದು. " ಕದಂಬ ಕಾಲದ ವಾಸ್ತುರಚನೆಗಳು ಕಲಸುಮಣ್ಣಿನಿಂದ ಕಟ್ಟಿದ ಇಟ್ಟಿಗೆ ಕಟ್ಟಡಗಳೇ ಆಗಿದ್ದವು ಎನ್ನಲಾಗಿದ್ದು. " [೧೫೧] ಅವು ನಾಶವಾಗಿರುವುದು ಸ್ವಾಭಾವಿಕವಾಗಿದೆ. ಹಾಗಾಗಿ ಅವುಗಳಲ್ಲಿ ರಚನೆಯಾಗಿರುವ ಭಿತ್ತಿಚಿತ್ರಗಳೂ ಹಾಳಾಗಿರುವುದನ್ನು ಊಹಿಸಬಹುದು.

ಕದಂಬ ದೊರೆ ರವಿವರ್ಮ (ಕ್ರಿ. ಶ. ೪೮೫-೫೧೯) ನು ಬರೆಸಿದ ಗುಡ್ನಾಪುರದಲ್ಲಿನ ಸ್ತಂಭಶಾಸನ ಒಂದರಲ್ಲಿ ಮನ್ಮಥನಿಗೆ ಒಂದು ಮಂದಿರ. ಅರಮನೆ, ಅಂತಃಪುರಗಳನ್ನು ಮತ್ತು ಎರಡು ನೃತ್ಯ ಶಾಲೆಗಳನ್ನು ಕಟ್ಟಿಸಿದ[೧೫೨] ಉಲ್ಲೇಖವಿದೆ. ಈ ಅರಮನೆ, ನೃತ್ಯಶಾಲೆಗಳಲ್ಲಿ ಭಿತ್ತಿಚಿತ್ರಗಳಿದ್ದಿರಬಹುದಾಗಿದೆ. ಅರಮನೆಗಳಲ್ಲಿ, ನೃತ್ಯಶಾಲೆಗಳಲ್ಲಿ ಭಿತ್ತಿಚಿತ್ರಗಳನ್ನು ರಚಿಸುವುದು, ಚಿತ್ರಗಳಿಗಾಗಿಯೇ ಪ್ರತ್ಯೇಕ ಚಿತ್ರಶಾಲೆಗಳನ್ನು ರಚಿಸುವುದು ರಾಮಾಯಣ – ಮಹಾಭಾರತಗಳಲ್ಲೇ ಉಲ್ಲೇಖಿಸಲ್ಪಟ್ಟಿದೆ. ಹಾಗಾಗಿ ಕದಂಬರ ಕಾಲದ ಈ ನೃತ್ಯಶಾಲೆಗಳಲ್ಲಿ ಮತ್ತು ಅರಮನೆಗಳಲ್ಲಿಯೂ ಭಿತ್ತಿಚಿತ್ರಗಳಿದ್ದವು ಎಂದು ತರ್ಕಿಸಬಹುದಾಗಿದೆ.

ಕ್ರಿ. ಶ. ೬ ನೇ ಶತಮಾನದಲ್ಲಿ ಬಾದಾಮಿಯಲ್ಲಿ ಮತ್ತೆ ಭಿತ್ತಿಚಿತ್ರರಚನೆ ನಡೆದದ್ದು ಕಂಡುಬರುತ್ತದೆ. ಚಾಲುಕ್ಯರ ಮಂಗಳೇಶನ ಕಾಲದ ವೈಷ್ಣವ ಗುಹೆಯ ಭಿತ್ತಿಚಿತ್ರಗಳಲ್ಲದೇ ಅದಕ್ಕಿಂತಲೂ ಪೂರ್ವದ ಶಿಷ್ಟ ಪರಂಪರೆಯ ಭಿತ್ತಿಚಿತ್ರಗಳು ಬದಾಮಿಯ ಸುತ್ತಮುತ್ತ ಪತ್ತೆಯಾಗಿವೆ. ಬದಾಮಿಯ ಉತ್ತರ ಬೆಟ್ಟದ ಪುಲಕೇಶಿ ಕೋಟೆಯ ಹತ್ತಿರದ ಚಾಚಿಕೊಂಡಿರುವ ಒಂದು ಬಂಡೆಯಾಸರೆಯಲ್ಲಿ ಡಾ|| ಅ. ಸುಂದರ್ ಅವರು ಸುಮಾರು ೨೫ ವರ್ಷಗಳ ಹಿಂದೆಯೇ ಇತಿಹಾಸ ಕಾಲದ ಭಿತ್ತಿಚಿತ್ರವನ್ನು ಪತ್ತೆ ಮಾಡಿದ್ದಾರೆ. [೧೫೩] ಇದರಲ್ಲಿ ಕಮಲಪುಷ್ಪ ಹಿಡಿದ ಗಣ್ಯಸ್ತ್ರೀಯರ ಚಿತ್ರಗಳಿವೆ. ಈ ಸ್ಥಳದ ಚಿತ್ರಗಳು ವೈಷ್ಣವ ಗುಹೆಯ ಚಿತ್ರಗಳಿಗಿಂತ ಮೊದಲಿನವು ಎಂದು ಅವರು ಹೇಳುತ್ತಾರೆ. ಹಾಗೆಯೇ ಅವರು [೧೫೪] ಇನ್ನೊಂದು ಇತಿಹಾಸ ಕಾಲದ ವರ್ಣಚಿತ್ರವನ್ನು ಕುಟಕನಕರೆಯಲ್ಲಿ ಶೋಧಿಸಿದ್ದಾರೆ. ಈ ಚಿತ್ರಗಳು ಚಾಲುಕ್ಯರ ಕಾಲದವುಗಳಾಗಿರಬಹುದಾಗಿದೆ. ಇನ್ನು ಈ ದಿಸೆಯಲ್ಲಿ ಹೆಚ್ಚಿನ ಅಧ್ಯಯನವಾಗಬೇಕಾಗಿದೆ.

---

೧೫೦. C. Sivaramamurti : Indian Paintings, Page - 24
೧೫೧. ಡಾ. ಅ. ಸುಂದರ (ಸಂ.) : ಕರ್ನಾಟಕ ಚರಿತ್ರೆ. ಸಂಪುಟ ೧. ಪುಟ - ೩೯೯
೧೫೨. – ಅದೇ – ಪುಟ -೪೦೩
೧೫೩. ಚಾಲುಕ್ಯಶ್ರೀ : ಪುಟ - ೧೧೮, ವಿಶಿಷ್ಟವರ್ಣ ಚಿತ್ರಕಲೆಯ ಆಗರ ಬದಾಮಿ. ಅ. ಸುಂದರ
೧೫೪. ಡಾ. ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಚಿತ್ರಕಲೆ. ಚಿತ್ರಸಂಖ್ಯೆ ೨೪. ಪುಟ - ೬೬

ಈ ಕಲ್ಲಾಸರೆಯ ವರ್ಣಚಿತ್ರಗಳಲ್ಲದೇ ಇದರ ಪಕ್ಕದ ಇನ್ನೊಂದು ಕಲ್ಲಾಸರೆಯಲ್ಲಿ ಇದೇ ಶೈಲಿಯ ವರ್ಣಭಿತ್ತಿಚಿತ್ರಗಳನ್ನು ಡಾ॥ ಶೀಲಾಕಾಂತ ಪತ್ತಾರ ಅವರು ಶೋಧಿಸಿದ್ದು.[೧೫೫] ಇಲ್ಲಿಯೂ ಗಣ್ಯ ಸ್ತ್ರೀಯರು ಕಮಲಪುಷ್ಪ ರಚನೆಯಾಗಿವೆ. ಇವು ಕೂಡಾ ಅ. ಸುಂದರ ಅವರು ಶೋಧಿಸಿದ ಚಿತ್ರಗಳ ಕಾಲಮಾನದ್ದೇ ಇರಬಹುದೆಂದು ಅವರು ತಿಳಿಸುತ್ತಾರೆ. ಈ ಎರಡೂ ಸ್ಥಳದ ಚಿತ್ರಗಳು ವಿಷ್ಣು ಗುಹೆಯ ಕಾಲಕ್ಕಿಂತ (ಕ್ರಿ. ಶ. ೫೭೮) ಮೊದಲಿನವು ಎಂಬ ಅವರ ಊಹೆ ಸರಿ ಎನಿಸುತ್ತದೆ. ಶೈಲಿ. ವರ್ಣಗಾರಿಕೆ. ರಚನಾ ವಿಧಾನಗಳನ್ನು ನೋಡಿದಾಗ ಈ ಮಾತನ್ನು ಒಪ್ಪಬಹುದು.

ಇತ್ತೀಚೆಗೆ ಡಾ. ಎಸ್. ಸಿ. ಪಾಟೀಲ ಅವರು ಕುಟುಕನಕೇರಿಯಲ್ಲಿ ಮತ್ತೊಂದು ಇತಿಹಾಸ ಕಾಲದ ಇದೇ ರೀತಿಯ........ ಚಿತ್ರವನ್ನು ಶೋಧಿಸಿದ್ದಾರೆ. ಬಹುಶಃ ಈ ಸ್ಥಳದ ಭಿತ್ತಿಚಿತ್ರಗಳು ಚಾಲುಕ್ಯರ ಮೊದಲ ರಾಜ ಜಯಸಿಂಹನ ಮಗನಾದ ರಣರಾಗನ ಕಾಲದಲ್ಲಿ (ಕ್ರಿ. ಶ. ೫೨೦-೪೦) ರಚನೆಯಾಗಿರಬೇಕು ಎಂದು ತರ್ಕಿಸಬಹುದಾಗಿದೆ. ಈ ಭಿತ್ತಿಚಿತ್ರಗಳ ರಚನೆಯಲ್ಲಿ ಬಂಡೆಗೆ ಭಿತ್ತಿಯ ದಪ್ಪಪದರು ಲೇಪಿಸದೇ ತೆಳುವಾದ ಹಳದೀ ಮಿಶ್ರಿತ ಸುಣ್ಣ ಲೇಪಿಸಲಾಗಿದೆ. ಅಲ್ಲದೇ ಚಿತ್ರಗಳು ಬಹುವರ್ಣಗಳಲ್ಲದೇ ಕಂದುವರ್ಣದಿಂದ ಮಾತ್ರ ರಚನೆಯಾಗಿವೆ. ಹಾಗಾಗಿ ಚಾಲುಕ್ಯರ ಪ್ರಾರಂಭಿಕ ಭಿತ್ತಿಚಿತ್ರ ರಚನೆಗಳು ಎಂದು ಹೇಳಬಹುದು. ಇವುಗಳ ರಚನಾ ಪರಂಪರೆಯೇ ಮುಂದೆ ಇನ್ನಷ್ಟು ಉತ್ಕೃಷ್ಟ ಮಟ್ಟ ತಲುಪಿ ರಾವಣಫಡಿ. ಬಾದಾಮಿಯ ವೈಷ್ಣವ ಗುಹೆ ಹಾಗೂ ಅಜಂತಾದಲ್ಲಿ ರಚನೆಯಾಗಿದೆ ಎನ್ನಬಹುದು.

ಕ್ರಿ. ಶ. ೫೫೦ ರಲ್ಲಿ ರಚನೆಯಾದ ಐಹೊಳೆಯ ರಾವಣಫಡಿ ಗುಹಾಲಯದ ಭಿತ್ತಿಚಿತ್ರಗಳು ಗುಹಾ ನಿರ್ಮಾಣ ಕಾರ್ಯ ಮುಗಿಯುತ್ತಲೇ ಅದೇ ಅವಧಿಯಲ್ಲೇ ಒಂದನೇ ಪುಲಕೇಶಿಯ ಕಾಲದಲ್ಲಿ ರಚನೆಯಾಗಿವೆ[೧೫೬] ಎನ್ನುವುದು ಹೆಚ್ಚು ಯೋಗ್ಯವೆನಿಸುತ್ತದೆ.

ಬಾದಾಮಿಯ ವೈಷ್ಣವ ಗುಹಾಲಯದ ಭಿತ್ತಿಚಿತ್ರಗಳು ಕ್ರಿ. ಶ. ೫೭೮ ರಲ್ಲಿ ರಚನೆಯಾಗಿವೆ ಎನ್ನುವುದು ಈಗಾಗಲೇ ಒಪ್ಪಿತವಾದ ಸಂಗತಿ. ಕ್ರಿ. ಶ. ೭ ನೇ ಶತಮಾನದ ಭಿತ್ತಿಚಿತ್ರಗಳು ಗುಲಬರ್ಗಾ ಜಿಲ್ಲೆಯಲ್ಲಿ ಕಂಡುಬರುತ್ತವೆ. ಗುಲಬರ್ಗಾ ಜಿಲ್ಲೆಯ ಯಾದಗಿರಿ ತಾಲೂಕು ಬಲಚಕ್ರ ಎಂಬಲ್ಲಿನ ಗುಡ್ಡದಲ್ಲಿನ ಕಲ್ಲಾಸರೆಯೊಂದರಲ್ಲಿ ಕೆಲವು ಶಿಷ್ಟ ಸಂಪ್ರದಾಯದ ಭಿತ್ತಿಚಿತ್ರಗಳು ರಚನೆಯಾಗಿದ್ದು. ಇವು ಕ್ರಿ. ಶ. ೭ ನೇ ಶತಮಾನಕ್ಕೆ ಸೇರುತ್ತವೆ ಎಂಬ ಅಭಿಪ್ರಾಯವಿದೆ.[೧೫೭] ಬಂಡೆಗೆ ತೆಳುವಾದ ಸುಣ್ಣ ಬಳಿದು ಕಂದು ಬಣ್ಣದಿಂದ ರಚಿಸಿದ ರೇಖಾ ಪ್ರಧಾನ ಚಿತ್ರಗಳು ಇವಾಗಿದ್ದು ಮನುಷ್ಯಾಕೃತಿಗಳು. ಪ್ರಾಣಿ ಪಕ್ಷಿಗಳು ಕಂಡುಬರುತ್ತವೆ. ಚಿತ್ರ ಪಟ್ಟಿಕೆಯ ಮೇಲೆ ಕ್ರಿ. ಶ. ೭ ನೇ ಶತಮಾನಕ್ಕೆ ಸೇರುವ ಶಾಸನ ಒಂದು ಇದ್ದು ಚಿತ್ರಗಳು ಸಹಿತ ಇದೇ ಕಾಲಕ್ಕೆ ಸೇರುತ್ತವೆ ಎಂದು ಡಾ. ಅ. ಸುಂದರ ಹೇಳುತ್ತಾರೆ.[೧೫೮]

ಕ್ರಿ. ಶ. ೮ ರಿಂದ ೧೦ ನೇ ಶತಮಾನದಲ್ಲಿ ಆಳ್ವಿಕೆ ನಡೆಸಿದ ರಾಷ್ಟ್ರಕೂಟರ ಕಾಲದ ಭಿತ್ತಿಚಿತ್ರಗಳು ಇಂದಿನ ಕರ್ನಾಟಕ ವ್ಯಾಪ್ತಿಯಲ್ಲಿ ಇದುವರೆಗೆ ಕಂಡುಬಂದಿಲ್ಲ. ಆದರೆ ರಾಷ್ಟ್ರಕೂಟರ ಅವಧಿಯ ಭಿತ್ತಿಚಿತ್ರಗಳು ಎಲ್ಲೋರಾ

---

೧೫೫. ಇತಿಹಾಸ ದರ್ಶನ (ಸಂಪುಟ ೧೩) : ಪುಟ - ೧೧೭- ೧೯. ಮತ್ತೆರಡು ಚಾಲುಕ್ಯ ವರ್ಣಚಿತ್ರಗಳ ಶೋಧ. ಶೀಲಾಕಾಂತ ಪತ್ತಾರ

೧೫೬. – ಅದೇ – ಪುಟ - ೧೧೮

೧೫೭. ಡಾ. ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ. ಪುಟ - ೩೧

೧೫೮. – ಅದೇ –

ಗುಹಾಲಯಗಳಲ್ಲಿ ರಚನೆಯಾಗಿವೆ. ಇವುಗಳಲ್ಲದೇ ರೋಣ ತಾಲೂಕಿನ ಸವಡಿ ಗ್ರಾಮದಲ್ಲಿನ ರಾಷ್ಟ್ರಕೂಟ ಕಾಲದ ಬ್ರಹ್ಮ ದೇವಾಲಯದಲ್ಲಿ ಭಿತ್ತಿಚಿತ್ರಗಳಿರುವ ಬಗ್ಗೆ ಉಲ್ಲೇಖವಿದೆ.[೧೫೯] ಆದರೆ ಇಂದು ಅಲ್ಲಿ ಯಾವ ಚಿತ್ರಗಳೂ ಕಂಡುಬರುವದಿಲ್ಲ. ಬಹುಶಃ ನಾಶವಾಗಿರಬಹುದು. ಕ್ರಿ. ಶ. ೮ ನೇ ಶತಮಾನದ ಭಿತ್ತಿಚಿತ್ರ ಕಲೆಯನ್ನು ಸಮಕಾಲೀನ ಶಾಸನದಿಂದಲೂ ತಿಳಿದುಕೊಳ್ಳಬಹುದು (ಇದರ ಬಗ್ಗೆ ೭ ನೇ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ). ಕ್ರಿ. ಶ. ೯ ನೇ ಶತಮಾನದಲ್ಲಿ ರಚನೆಯಾದ ಕವಿರಾಜಮಾರ್ಗ ಸಾಹಿತ್ಯ ಕೃತಿಯಲ್ಲಿ [೧೬೦] ಸೂಚ್ಯವಾಗಿ ಭಿತ್ತಿಚಿತ್ರಕಲೆಯ ಬಗ್ಗೆ ಹೇಳಲಾಗಿದೆ.

ಕ್ರಿ. ಶ. ೧೦ ನೇ ಶತಮಾನದಲ್ಲಿ ರಚನೆಯಾದ ಸಾಹಿತ್ಯವು ಆ ಕಾಲದಲ್ಲಿದ್ದ ಭಿತ್ತಿಚಿತ್ರಕಲೆಯನ್ನು ತಿಳಿಸಿಕೊಡುತ್ತದೆ. ಕ್ರಿ. ಶ. ೯೨೦ ರ ಸುಮಾರಿನಲ್ಲಿ ಜೀವಿಸಿದ್ದ ಶಿವಕೋಟಾಚಾರ್ಯನು ಬರೆದಿರುವನೆಂದು ತಿಳಿಯಲಾಗಿರುವ 'ವಡ್ಡಾರಾಧನೆ' ಗ್ರಂಥದ ಸುಕುಮಾರಸ್ವಾಮಿ, ಕೌಶಳಸ್ವಾಮಿ, ಸನತ್ಕುಮಾರ ಚಕ್ರವರ್ತಿ, ಸಿರಿವಿಣ್ಣ, ಗುರುದತ್ತ, ಮತ್ತು ಭಟ್ಟಾರರ ಕಥೆಗಳಲ್ಲಿ ಭಿತ್ತಿಚಿತ್ರಕಲೆಯ ಪ್ರಸ್ತಾಪ ಬರುತ್ತದೆ. ಚಿತ್ರಕಥೆಗಳನ್ನು ಪಟಗಳಲ್ಲಿ ಬರೆದು ತೋರಿಸುತ್ತಿದ್ದುದು, ಕುರುಮಾಡದ ಗೋಡೆಗಳ ಮೇಲೆಲ್ಲ ಚಿತ್ರಾಂಗರಿಂದ ಅರಸನು ಚಿತ್ರ ಬರೆಯಿಸುವುದು. ಹಿಂದಿನ ಜನ್ಮದ ಘಟನೆಗಳನ್ನು ನೆನೆದುಕೊಂಡು ಸ್ವತಃ ಚಿತ್ರ ಬರೆಯುವುದ, ಸಹಸ್ರಕೂಟಾಕಾರದ ಮುಗಿಲನ್ನು ಕಂಡು ಮರದ ಹಲಗೆಯ ಮೇಲೆ ರೇಖಿಸಲು ತೊಡಗುವುದು, ಪಟದ ಮೇಲೆ ಬರೆದ ಪಟಚಿತ್ರ (ಚಿತ್ರಪಟ) ಮುಂತಾದ ವಿಷಯಗಳು ಇಲ್ಲಿ ಹೇಳಲಾಗಿದೆ.[೧೬೧]

ಕ್ರಿ. ಶ. ೯೪೦ ರ ಸುಮಾರಿನಲ್ಲಿ ಪಂಪನು ಬರೆದ 'ವಿಕ್ರಮಾರ್ಜುನ ವಿಜಯ'[೧೬೨] ಮತ್ತು ಆದಿಪುರಾಣಗಳಲ್ಲಿ[೧೬೩] ಚಿತ್ರಕಲೆಯ ಕುರಿತು ಮಾಹಿತಿ ದೊರಕುತ್ತದೆ. ವಿಕ್ರಮಾರ್ಜುನ ವಿಜಯದಲ್ಲಿ (ಪುಟ - ೧೪೯. ೧೯೯. ೪೨೨. ಮತ್ತು ೬೯೪) ಚಿತ್ರದ ವರ್ಣಕ್ರಮ. ಚಿತ್ರದ ಪಳ. ಮಾಸಿದ ಚಿತ್ರಗಳ ಪ್ರಸ್ತಾಪವಲ್ಲದೇ ಸಮಾನ ತಳದಲ್ಲಿ ಉಬ್ಬು-ತಗ್ಗುಗಳನ್ನು ತೋರುವ ಚಿತ್ರಕಾರನ ನೈಪುಣ್ಯದ ಬಗ್ಗೆ ಮತ್ತು ಆದಿಪುರಾಣದಲ್ಲಿ (ಪುಟ - ೧೪೬. ೧೬೬. ೧೭೦. ೨೩೪) ಚಿತ್ರಪಟ. ಚಿತ್ರದ ರಸಭಾವ. ರೇಖೆ. ವರ್ಣಕ್ರಮ. ಚಿತ್ರದ ಆಯಾಮಗಳು. ಚಿತ್ರಶಾಲೆ. ಚಿತ್ರಕಲಾವಿದ್ಯೆ ಮುಂತಾದ ವಿಷಯಗಳ ಬಗ್ಗೆ ಹೇಳಲಾಗಿದೆ.

ರಾಷ್ಟ್ರಕೂಟ ಚಕ್ರವರ್ತಿ ಮೂರನೇ ಕೃಷ್ಣನ ಆಸ್ಥಾನದಲ್ಲಿದ್ದ 'ಪೊನ್ನ' ಕವಿಯು (ಕ್ರಿ. ಶ. ೯೫೦) ಬರೆದ ಶಾಂತಿಪುರಾಣದಲ್ಲಿ [೧೬೪] ಭಿತ್ತಿಚಿತ್ರಕಲೆಯ ಉಲ್ಲೇಖ ಬರುತ್ತದೆ. ಗೃಹಾಂಗಗಳಲ್ಲಿ ಚಿತ್ರಶಾಲೆಯೂ ಒಂದು ಎಂದು

---

೧೫೯. ಡಾ. ಅ. ಲ. ನರಸಿಂಹನ್ : ಕರ್ನಾಟಕದ ಭಿತ್ತಿಚಿತ್ರ ಪರಂಪರೆ. ಪುಟ - ೧೯೪
೧೬೦. ಪಿ. ವೆಂಕಟರಾವ್. ಎಚ್. ಶೇಷ ಅಯ್ಯಂಗಾರ್ (ಸಂ.) : ಕರ್ನಾಟಕ ಪಿರಾಜಮಾರ್ಗ. ಪ್ರಥಮ ಪರಿಚ್ಛೇದ ಪದ್ಯ - ೧೫೦
೧೬೧. ಡಿ. ಎಲ್. ನರಸಿಂಹಾಚಾರ್ (ಸಂ.) : ವಡ್ಡಾರಾಧನೆ. ಮೈಸೂರು ೧೯೬೨. (ಐನನೇ ಮುದ್ರಣ)
೧೬೨. ಎನ್. ಅನಂತರಂಗಾಚಾರ್ (ಅನು.) : ವಿಕ್ರಮಾರ್ಜುನ ವಿಜಯ. ಪುಟ - ೧೪೯. ೧೯೯, ೪೨೨. ೬೯೪
೧೬೩. ಕೆ. ಎಲ್. ನರಸಿಂಹಾಚಾರ್ (ಅನು.) : ಆದಿಪುರಾಣ. ಪುಟ - ೧೪೬. ೧೬೬. ೧೭೦. ೨೩೪
೧೬೪. ಹಂ. ಪ. ನಾಗರಾಜಯ್ಯ (ಅನು.) : ಶಾಂತಿಪುರಾಣ. ಅಧ್ಯಾಯ - ೬. ಪುಟ - ೧೪೬. ೧೬೬. ೧೭೦. ೨೩೪

ಹೇಳುತ್ತ, ಭಿತ್ತಿಚಿತ್ರ ವಿವರಣೆ, ಚೀರಘಟ್ಟೆ, ವಿಶ್ವಕರ್ಮರೆಂಬ ಚಿತ್ರಕಲಾವಿದರ ಬಗೆಗೂ, ಪಂಚವಿಧವರ್ಣ ಇತ್ಯಾದಿಗಳ ಕುರಿತು ಇಲ್ಲಿ ಪೊನ್ನ ಪ್ರಸ್ತಾಪಿಸುತ್ತಾನೆ. ರನ್ನ ಕವಿಯ ಸಮಕಾಲೀನನಾದ ಒಂದನೆಯ ನಾಗವರ್ಮನು ತನ್ನ ' ಕರ್ಣಾಟಕ ಕಾದಂಬರಿ ' ಕೃತಿಯಲ್ಲಿ [೧೬೫] – ರಸಭಾವ ಕಂಚುಕಿತ ಚಿತ್ರಕರ್ಮ, ಚಿತ್ರಿತ ಹಂಸಾನೀಕ, ಚಿತ್ರಶಾಲೆ, ಚಿತ್ರಕರ್ಮಚತುರೆ, ಚಿತ್ರಹೂಲಿಕೆ, ಚಿತ್ರವಿದ್ಯಾವಿಲಾಸೈಕ ವಿನೋದ ಮುಂತಾದ ವಿಷಯಗಳನ್ನು ಹೇಳಿದ್ದಾನೆ. ಕ್ರಿ. ಶ. ೧೦ ರಿಂದ ೧೨ ನೇ ಶತಮಾನದವರೆಗೆ ಆಳಿದ ಕಲ್ಯಾಣದ ಚಾಲುಕ್ಯರ ಕಾಲದ ಭಿತ್ತಿಚಿತ್ರಗಳು ಕರ್ನಾಟಕದಲ್ಲಿ ಇದುವರೆಗೆ ಕಂಡುಬಂದಿಲ್ಲ. ಆದರೆ ಇವರ ಕಾಲದಲ್ಲಿ ರಚನೆಯಾದ ಭಿತ್ತಿಚಿತ್ರಗಳು ಆಂಧ್ರಪ್ರದೇಶದಲ್ಲಿ ಒಂದು ಮನೆಯಲ್ಲಿ ಕಂಡುಬಂದಿವೆ. [೧೬೬] ಕಲ್ಯಾಣ ಚಾಲುಕ್ಯರ ಕಾಲದ ಭಿತ್ತಿಚಿತ್ರಗಳು ಹೆಚ್ಚು ಕಂಡುಬರದಿದ್ದರೂ ಆಗ ಭಿತ್ತಿಚಿತ್ರರಚನೆ ವ್ಯಾಪಕವಾಗಿತ್ತು ಎಂದು ಹೇಳಬಹುದು. ಕಲ್ಯಾಣ ಚಾಲುಕ್ಯರ ದೊರೆ ಮೂರನೇ ಸೋಮೇಶ್ವರನು (ಕ್ರಿ. ಶ. ೧೧೨೭-೩೯) ಮಾನಸೋಲ್ಲಾಸ ಎಂಬ ಕೃತಿ ರಚಿಸಿದ್ದು ಇದರಲ್ಲಿ ಭಿತ್ತಿಚಿತ್ರರಚನೆಯ ವಿಧಿವಿಧಾನಗಳು, ಬಣ್ಣಕುಂಚಗಳು ಹೀಗೆ ಭಿತ್ತಿಚಿತ್ರ ರಚನೆಯ ಹೇರಳವಾದ ಮಾಹಿತಿ ದೊರೆಯುತ್ತದೆ.

ಕ್ರಿ. ಶ. ೧೧ ನೇ ಶತಮಾನದ ಭಿತ್ತಿಚಿತ್ರ ರಚನೆಗಳನ್ನು ಇದುವರೆಗೆ ಕರ್ನಾಟಕ ಭಾಗದಲ್ಲಿ ಗುರುತಿಸದೇ ಹೋದರೂ ಆಗ ಭಿತ್ತಿಚಿತ್ರ ರಚನೆಯಾಗಿರಬಹುದು. ಅವು ನಾಶ ಹೊಂದಿರಬಹುದು ಎಂದು ತರ್ಕಿಸಬಹುದು. ಆ ಕಾಲದ ಕೆಲವು ಸಾಹಿತ್ಯಕೃತಿಗಳು ಭಿತ್ತಿಚಿತ್ರಗಳ ಬಗೆಗೆ ಸಾಂದರ್ಭಿಕವಾಗಿ ವಿವರಿಸುತ್ತವೆ. ಕ್ರಿ. ಶ. ೧೧ ನೇ ಶತಮಾನದ ಪ್ರಾರಂಭದಲ್ಲಿ ಇದ್ದಂತಹ ನಯಸೇನನ ಧರ್ಮಾಮೃತ ಕೃತಿಯಲ್ಲಿ [೧೬೭] ಭಿತ್ತಿಚಿತ್ರಕಲೆ ಮತ್ತು ಪಟಚಿತ್ರಗಳ ಪ್ರಸ್ತಾಪ ಮಾಡುತ್ತಾನೆ. ಅದೇ ರೀತಿಯಾಗಿ ಕ್ರಿ. ಶ. ೧೦೬೮ ರಲ್ಲಿ ಶಾಂತಿನಾಥನ ' ಸುಕುಮಾರ ಚರಿತೆ ' ಕೃತಿಯಲ್ಲಿಯೂ ಸೂಚ್ಯವಾಗಿ ಭಿತ್ತಿಚಿತ್ರಕಲೆಯ ವಿವರಗಳಿವೆ. [೧೬೮]

ಕ್ರಿ. ಶ. ೧೨ ನೇ ಶತಮಾನದಲ್ಲಿ ಕೆಲವು ಸ್ಥಳಗಳಲ್ಲಿ ಭಿತ್ತಿಚಿತ್ರಗಳು ರಚನೆಯಾಗಿದ್ದು ಕಂಡುಬರುತ್ತವೆ. ಮೂಡಬಿದಿರೆಯ ಬಸದಿ (೧೧೧೩), ಶ್ರವಣಬೆಳಗೊಳದ ಚಿಕ್ಕಬೆಟ್ಟದ ಮೇಲಿನ ಪೋಚವ್ವೆಯ ಹೆಸರಿನ ಬಸದಿ (೧೧೧೮) ಗಳಲ್ಲಿ ಹೊಯ್ಸಳದೊರೆ ವಿಷ್ಣುವರ್ಧನನ ಕಾಲದ ಭಿತ್ತಿಚಿತ್ರಗಳಿದ್ದರೆ, ಜಕ್ಕನ ಹಳ್ಳಿಯ ಕಲ್ಲೇಶ್ವರ ದೇವಾಲಯ (೧೧೭೦) ದಲ್ಲಿ ಹೊಯ್ಸಳ ದೊರೆ ಒಂದನೇ ನರಸಿಂಹನ ಕಾಲದ ಭಿತ್ತಿಚಿತ್ರಗಳಿವೆ. [೧೬೯] ಇವುಗಳಲ್ಲದೇ ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದಲ್ಲಿ ಕೆಂಪುಬಣ್ಣದ ಗುರುತುಗಳು ಉಳಿದುಕೊಂಡಿರುವ ವಿಷಯ ತಿಳಿದುಬರುತ್ತದೆ. [೧೭೦]

---

೧೬೫. ಟಿ. ಎಸ್. ವೆಂಕಣ್ಣಯ್ಯ (ಸಂ.) : ಕರ್ನಾಟಕದ ಕಾದಂಬರೀ ಸಂಗ್ರಹ. ಪುಟ - ೩೬. ೨೬೮. ೨೬೯

೧೬೬. ಕಲ್ಯಾಣ ಚಾಲುಕ್ಯರ ಕಾಲದ ಭಿತ್ತಿಚಿತ್ರಗಳು ಆಂಧ್ರದ ಒಂದು ಮನೆಯಲ್ಲಿ ಕಂಡುಬರುತ್ತವೆ ಎಂಬ ವಿಷಯ ತಿಳಿಸಿದವರು ಡಾ|| ಅ. ಸುಂದರ. ದಿನಾಂಕ ೨೪-೯-೨೦೦೦

೧೬೭. ಕೆ. ವೆಂಕಪ್ಪ (ಅನು.) : ಧರ್ಮಾಮೃತ. ಅಧ್ಯಾಯ - ೧. ೪. ೧೨ ಮತ್ತು ೧೪

೧೬೮. ಡಾ|| ಅ. ಲ. ನರಸಿಂಹನ್ : ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು (ಬೆಂಗಳೂರು ವಿ. ವಿ. ಗೆ ಸಲ್ಲಿಸಿದ ಪಿಎಚ್‌ಡಿ ಮಹಾಪ್ರಬಂಧ). ಪುಟ - ೨೪೮

೧೬೯. ಡಾ|| ಅ. ಲ. ನರಸಿಂಹನ್ : ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು (ಬೆಂಗಳೂರು ವಿ. ವಿ. ಗೆ ಸಲ್ಲಿಸಿದ ಪಿಎಚ್‌ಡಿ ಮಹಾಪ್ರಬಂಧ). ಪುಟ - ೨೫೩

೧೭೦. ಎಂ. ಎಚ್. ಕೃಷ್ಣಯ್ಯ : ಶೃಂಗಾರ ಲಹರಿ. ಪುಟ - ೬೧

ಅಲ್ಲದೇ ಹೊಯ್ಸಳರ ಕಾಲದಲ್ಲಿ ರಚಿತವಾದ ಚಿಕ್ಕಮಗಳೂರು ಜಿಲ್ಲೆಯ ಅಂಗಡಿಯಲ್ಲಿನ ವಾಸಂತಿಕಾ ದೇವಾಲಯದಲ್ಲಿ ಗಾರೆ ಶಿಲ್ಪಕ್ಕೆ ಬಣ್ಣ ಹಚ್ಚಿದ್ದಾರಲ್ಲದೇ, ದೇವಿಯ ಶಿಲ್ಪದ ಹಿನ್ನೆಲೆಯ ಗೋಡೆಯಲ್ಲಿ ಕೆಲವು ನಕ್ಷಾಚಿತ್ರಗಳು ಇರುವ ಬಗ್ಗೆ ಮಾಹಿತಿ ದೊರಕುತ್ತದೆ.[೧೭೧] ಮೂಡಬಿದಿರೆಯ ಧವಳತ್ರಯಗಳಲ್ಲಿನ ವರ್ಣಚಿತ್ರಗಳು ವಿಷ್ಣುವರ್ಧನನ ಕಾಲದಲ್ಲಿಯೇ (೧೧೧೩) ರಚನೆಯಾಗಿದ್ದನ್ನು ನಾವಿಲ್ಲಿ ಸ್ಮರಿಸಬಹುದು.

ಹೊಯ್ಸಳರ ಕಾಲದಲ್ಲಿ ದೇವಾಲಯಗಳನ್ನು ಮೂರ್ತಿಶಿಲ್ಪದಿಂದ ಅಲಂಕರಿಸುವ ಹವ್ಯಾಸ ಹೆಚ್ಚಾಯಿತು. ಭಿತ್ತಿಚಿತ್ರ ರಚನಾ ಪರಂಪರೆ ಹಿಂದೆಬಿತ್ತು ಎಂಬಂತಹ ಹೇಳಿಕೆಯಲ್ಲಿ ನಿಜಾಂಶವಿರಲಾರದು ಎನಿಸುತ್ತದೆ. ಮೂರ್ತಿಶಿಲ್ಪಗಳಿಂದ ದೇವಾಲಯಗಳನ್ನು ಅಲಂಕರಿಸುವ ಜೊತೆಗೇ ಇವರು ಭಿತ್ತಿಚಿತ್ರ ರಚನೆಯನ್ನೂ ಕೈಕೊಂಡರೆಂದು ಹೇಳಬಹುದು. ಇವರ ಹಿಂದಿನ ಕಲ್ಯಾಣದ ಚಾಲುಕ್ಯರು ಮತ್ತು ರಾಷ್ಟ್ರಕೂಟರ ಕಾಲದಲ್ಲಿ ರಚನೆಯಾದ ಭಿತ್ತಿಚಿತ್ರ ನೆಲೆಗಳು ಅತ್ಯಂತ ಸೀಮಿತವಾಗಿ, ಅಂದರೆ ಕಲ್ಯಾಣದ ಚಾಲುಕ್ಯರ ಒಂದು ನೆಲೆ, ರಾಷ್ಟ್ರಕೂಟರ ಎಲ್ಲೋರಾದ ಗುಹಾಲಯಗಳು ಹೀಗೆ ಕಡಿಮೆ ಸಂಖ್ಯೆಯಲ್ಲಿ ಕಂಡುಬಂದಿದ್ದರೆ, ಹೊಯ್ಸಳರ ಕಾಲದಲ್ಲಿ ಸುಮಾರು ೫ ಸ್ಥಳಗಳಲ್ಲಿ ಭಿತ್ತಿಚಿತ್ರಗಳು ಕಂಡುಬಂದಿವೆ.

ಕ್ರಿ. ಶ. ೧೨ ನೇ ಶತಮಾನದಲ್ಲಿ ರಚನೆಯಾದ ಕೆಲವು ಸಾಹಿತ್ಯಕೃತಿಗಳಲ್ಲಿ ಭಿತ್ತಿಚಿತ್ರಕಲೆಯ ಬಗ್ಗೆ ಮಾಹಿತಿ ಇದ್ದು ಆ ಕಾಲದಲ್ಲಿ ಭಿತ್ತಿಚಿತ್ರಕಲೆಯ ಕುರಿತು ತಿಳಿಯಬಹುದಾಗಿದೆ. ಹೊಯ್ಸಳ ಒಂದನೇ ಬಲ್ಲಾಳನ (ಕ್ರಿ. ಶ. ೧೧೦೨–೧೧೦೮) ಆಸ್ಥಾನ ಕವಿಯಾಗಿದ್ದ ನಾಗಚಂದ್ರನು ರಚಿಸಿದ ರಾಮಚಂದ್ರ ಚರಿತ ಪುರಾಣ ಮತ್ತು ಮಲ್ಲಿನಾಥ ಪುರಾಣಗಳಲ್ಲಿ ಭಿತ್ತಿಚಿತ್ರಕಲೆಯ ಬಗ್ಗೆ ಸಾಂದರ್ಭಿಕವಾಗಿ ವಿವರಣೆ ದೊರಕುತ್ತದೆ. ರಾಮಚಂದ್ರ ಚರಿತ ಪುರಾಣದ[೧೭೨] ಪೀಠಿಕಾ ಪ್ರಕರಣ, ಕುಮಾರೋದಯ ವರ್ಣನೆ ಭಾಗಗಳಲ್ಲಿ ಪುರವನಿತೆಯರು ಮಾಡುತ್ತಲಿದ್ದ ಚಿತ್ರರಚನೆ, ಸಪ್ತಧಾತುಗಳಿಂದ ಸಿದ್ಧಪಡಿಸಿಕೊಂಡ ವರ್ಣಕ್ರಮ, ಚಿತ್ರ ಬರೆಯುವ ಭಿತ್ತಿ, ನಿರ್ವಾಣ ರೇಖೆ ಮುಂತಾದ ವಿಚಾರಗಳಿದ್ದರೆ ಮಲ್ಲಿನಾಥ ಪುರಾಣದಲ್ಲಿ[೧೭೩] ಅಧ್ಯಾಯ ಐದು, ಪದ್ಯ ೨೭ ರಿಂದ ೪೦ ರ ವರೆಗಿನ ವಿವರಣೆಯಲ್ಲಿ ಚಿತ್ರರಚನೆ, ಚಿತ್ರರಚನಾ ಕೌಶಲ, ಚಿತ್ರಪ್ರಕಾರ, ವರ್ಣಕ್ರಮಾದಿಗಳ ವಿವರಗಳು ಇದ್ದುದು ತಿಳಿದುಬರುತ್ತದೆ. ಎರಡನೇ ವೀರಬಲ್ಲಾಳನ ಆಸ್ಥಾನದಲ್ಲಿ (ಕ್ರಿ. ಶ. ೧೧೭೩–೧೨೨೦) ಜೈನ ಕವಿಗಳಾಗಿದ್ದ ' ನೇಮಿಚಂದ್ರ ' ಮತ್ತು ' ಜನ್ನ ' ರು ತಮ್ಮ ಕೃತಿಗಳಲ್ಲಿ ಭಿತ್ತಿಚಿತ್ರಕಲೆಯ ಪ್ರಸ್ತಾಪ ಮಾಡಿದ್ದಾರೆ. ' ನೇಮಿಚಂದ್ರ ' ನೇಮಿನಾಥ ಪುರಾಣ[೧೭೪] ಜನ್ನನ ಯಶೋಧರ ಚರಿತೆ, ಮತ್ತು ಅನಂತನಾಥ ಪುರಾಣ ಕೃತಿಗಳು[೧೭೫] ಚಿತ್ರಕಲೆಯ ವಿವರಣೆ ನೀಡುತ್ತವೆ. ನೇಮಿನಾಥ ಪುರಾಣದ ಎರಡನೆಯ ಅಧ್ಯಾಯ, ಯಶೋಧರ ಚರಿತೆಯ ನಾಲ್ಕನೆಯ ಅಧ್ಯಾಯ, ಅನಂತನಾಥ ಪುರಾಣದ ಒಂದನೆಯ ಅಧ್ಯಾಯಗಳು – ಭಿತ್ತಿ ಹಾಗೂ ಪಟಗಳಲ್ಲಿನ ಚಿತ್ರಗಳು, ಧೂಳಿಚಿತ್ರ, ರಸಚಿತ್ರ, ಚಿತ್ರಶಾಲೆಗಳ ಕುರಿತಾಗಿ ಹೇಳುತ್ತವೆ.

---

೧೭೧. ಡಾ|| ಅ. ಲ. ನರಸಿಂಹನ್ : ಕರ್ನಾಟಕದ ಭಿತ್ತಿಚಿತ್ರ ಪರಂಪರೆ, ಪುಟ - ೧೭೮

೧೭೨. ಡಾ|| ಆರ್. ಸಿ. ಹಿರೇಮಠ (ಸಂ.) : ರಾಮಚಂದ್ರ ಚರಿತ ಪುರಾಣ, ಅಧ್ಯಾಯ - ೫, ಪುಟ -೧೧೪

೧೭೩. ಡಾ|| ಬಿ. ಬಿ. ಹೆಂಡಿ (ಸಂ.) : ಮಲ್ಲಿನಾಥ ಪುರಾಣ, ಅಧ್ಯಾಯ - ೫, ಪದ್ಯ ೨೭ ರಿಂದ ೪೦, ಪುಟ - ೯೪, ೯೫, ೨೩೦, ೨೭೦, ೨೮೦

೧೭೪. ಹಂ. ಪ. ನಾಗರಾಜಯ್ಯ, ಆರ್. ವಿ. ಕುಲಕರ್ಣಿ (ಸಂ.) : ನೇಮಿನಾಥ ಪುರಾಣ, ಭಾಗ - I, ಅಧ್ಯಾಯ - ೩, ಪುಟ - ೧೭೩

೧೭೫. ಡಾ|| ಬಿ. ಕೆ. ಹಿರೇಮಠ : ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ, ಪುಟ - ೨೨೧

ಕವಿ ರಾಘವಾಂಕನು ತನ್ನ ಸಿದ್ಧರಾಮ ಚರಿತೆಯಲ್ಲಿ ಗೃಹವನ್ನಲಂಕರಿಸಿದ ವಿವಿಧ ಚಿತ್ರ ರಚನೆಗಳ ಬಗ್ಗೆ ತಿಳಿಸಿದರೆ, ಬಸವಣ್ಣ (ವಚನ - ೧೨೬, ೩೯೮), ಮಧುವಯ್ಯ (ವಚನ - ೧೪೪), ಭಂಡಾರಿ ಶಾಂತರಸ (ವಚನ - ೭), ಅಂಬಿಗರ ಚೌಡಯ್ಯ (ವಚನ - ೫೯, ೯೧), ಮೋಳಿಗೆಯ್ಯ (ವಚನ - ೪೨), ಮುಂತಾದವರು ಭಿತ್ತಿಚಿತ್ರ, ಲೆಕ್ಕಣಿಕೆ, ಟಿಪ್ಪಣಿ ಬರೆವ ಚಿತ್ರಜ್ಞ, ಲೆಕ್ಕಣಿಕೆಯ ಕಟ್ಟಿಗೆ, ರೋಮ, ತಿಟ್ಟವ ಲೆಕ್ಕಿಸುವ ಲೆಕ್ಕಣಿಕೆ ಮೊದಲಾದ ಸಂಗತಿಗಳನ್ನು ಹೇಳಿರುವವಾಗಿ ತಿಳಿದುಬರುತ್ತದೆ.[೧೬೬] ಇವುಗಳಲ್ಲದೇ ರುದ್ರಭಟ್ಟನ ಜಗನ್ನಾಥ ವಿಜಯ (೧೧೮೫), ಅಗ್ಗಳನ ಚಂದ್ರಪ್ರಭ ಪುರಾಣ (೧೧೮೯), ಕೃತಿಗಳಲ್ಲೂ ಭಿತ್ತಿಚಿತ್ರಕಲೆಯ ಬಗ್ಗೆ ಸೂಚ್ಯವಾಗಿ ವಿವರಗಳು ದೊರೆಯುತ್ತವೆ.[೧೬೭] ಅಲ್ಲದೇ ಶ್ರವಣಬೆಳಗೊಳದ ಕ್ರಿ. ಶ. ೧೧೩೫ ರ ಶಾಸನವೊಂದರಲ್ಲಿ ಹುಳ್ಳರಾಜನು ಮಾಡಿಸಿದಂ ಜಿನೇಂದ್ರ ಭವನಗಳನಾ ಕೊಪಣ ತೀರ್ಥದೊಲು ಬಹು ಚಿತ್ರಿಭಿತ್ತಿಯಂ ನೋಡಿದರಂ ಮನಂಗೊಳಿಸುವದು ಎಂದಿದೆ.[೧೬೮] ಹಾಗಾಗಿ ಕ್ರಿ. ಶ. ೧೨ ನೇ ಶತಮಾನದಲ್ಲಿ ಭಿತ್ತಿಚಿತ್ರ ರಚನೆ ವಿಪುಲವಾಗಿ ನಡೆದಿರಬೇಕೆಂದು ಹೇಳಬಹುದಾಗಿದೆ.

ಕ್ರಿ. ಶ. ೧೩ ನೇ ಶತಮಾನದಲ್ಲಿ ರಚನೆಯಾದ ಭಿತ್ತಿಚಿತ್ರಗಳು ಶ್ರವಣಬೆಳಗೊಳದ ಶಾಂತಿನಾಥ ಬಸದಿಯಲ್ಲಿ ಕಂಡುಬರುತ್ತವೆ.[೧೬೯] ಈ ಕಾಲದಲ್ಲಿ ರಚನೆಯಾದ ಕೆಲವು ಸಾಹಿತ್ಯಕೃತಿಗಳಲ್ಲೂ ಭಿತ್ತಿಚಿತ್ರ ಕಲೆಯ ಉಲ್ಲೇಖ ಕಂಡುಬಂದಿದ್ದು ಆ ಕಾಲದ ಭಿತ್ತಿಚಿತ್ರರಚನೆಯ ಪರಂಪರೆಯನ್ನೂ ನೆನಪಿಸಿಕೊಡುತ್ತವೆ. ಕ್ರಿ. ಶ. ೧೨೫೦ ರ ಸುಮಾರಿನಲ್ಲಿ ಇದ್ದಂತಹ ಅಂಡಯ್ಯ ಕವಿಯು ತನ್ನ ಕಬ್ಬಿಗರ ಕಾವ ಕೃತಿಯಲ್ಲಿ ಗೋಡೆಚಿತ್ರ, ಚಿತ್ರಫಲಕಗಳ ಕುರಿತು ಹೇಳಿದ್ದರೆ.[೧೭೦] ಗುಣವರ್ಮನ (೧೨೧೫) ಪುಷ್ಪದಂತ ಪುರಾಣ ಕೃತಿಯಲ್ಲಿಯೂ ಸೂಚ್ಯವಾಗಿ ಭಿತ್ತಿಚಿತ್ರಕಲೆಯ ಪ್ರಸ್ತಾಪ ಬರುತ್ತದೆ.[೧೭೧] ಕ್ರಿ. ಶ. ೧೪ ನೇ ಶತಮಾನದ ಯಾವುದೇ ಭಿತ್ತಿಚಿತ್ರಗಳು ಕರ್ನಾಟಕದಲ್ಲಿ ಇದುವರೆಗೆ ಕಂಡುಬಂದಿಲ್ಲ. ಹಿಂದೆ ಹೇಳಿದ ಶ್ರವಣಬೆಳಗೊಳದ ಶಾಂತಿನಾಥ ಬಸದಿಯ ಚಿತ್ರಗಳು ೧೩ ರಿಂದ ೧೪ ನೇ ಶತಮಾನಕ್ಕೆ ಸೇರುತ್ತವೆ ಎನ್ನುವುದನ್ನು ಬಿಟ್ಟರೆ ಮತ್ತೆ ಯಾವ ಉದಾಹರಣೆಗಳೂ ದೊರೆತಿಲ್ಲ.

ಆದರೆ, ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿನ ವೈಲಮರ್ಚೆಡ ಗ್ರಾಮದ ಹತ್ತಿರವಿರುವ ಕಾಟಮಯ್ಯನ ಗುಂಡು ಎಂಬ ಗುಡ್ಡದಲ್ಲಿರುವ ಕಲ್ಲಾಸರೆಯಲ್ಲಿ ಕೆಲವು ಕುದುರೆ ಸವಾರರ, ಮತ್ತು ದನಗಳ ಚಿತ್ರಗಳು ಕಂಡುಬಂದಿದ್ದು ಇವು ಶೈಲಿಯಲ್ಲಿ ಕ್ರಿ. ಶ. ೧೪ ನೇ ಶತಮಾನದ ವಿಜಯನಗರ ಸಾಲು ಪಟ್ಟಿಕೆಗಳ ಶಿಲ್ಪಗಳನ್ನು ಹೋಲುತ್ತಿದ್ದು ಚಿತ್ರಗಳೂ ಅದೇ ಅವಧಿಗೆ ಸೇರುತ್ತವೆ ಎಂದು ಅ. ಸುಂದರರು ತಿಳಿಸುತ್ತಾರೆ.[೧೭೨] ಇಲ್ಲಿ ಚಿತ್ರಗಳು ಬಹುವರ್ಣದಲ್ಲಿರದೇ

---

೧೬೬. ಡಾ|| ಬಿ. ಕೆ. ಹಿರೇಮಠ : ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ. ಪುಟ - ೨೨೨

೧೬೭. – ಅದೇ –

೧೬೮. ಡಾ|| ಅ. ಲ. ನರಸಿಂಹನ್ : ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು (ಬೆಂಗಳೂರು ವಿ. ವಿ. ಗೆ ಸಲ್ಲಿಸಿದ ಪಿಎಚ್ಡಿ ಮಹಾಪ್ರಬಂಧ). ಪುಟ - ೨೫೨

೧೬೯. ಡಾ|| ಅ. ಲ. ನರಸಿಂಹನ್ : ಕರ್ನಾಟಕ ಭಿತ್ತಿಚಿತ್ರ ಪರಂಪರೆ. ಪುಟ - ೧೯೩

೧೭೦. ಡಾ|| ಬಿ. ಕೆ. ಹಿರೇಮಠ : ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ. ಪುಟ - ೨೨೧

೧೭೧. ಡಾ|| ಅ. ಲ. ನರಸಿಂಹನ್ : ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು (ಬೆಂಗಳೂರು ವಿ. ವಿ. ಗೆ ಸಲ್ಲಿಸಿದ ಪಿಎಚ್ಡಿ ಮಹಾಪ್ರಬಂಧ). ಪುಟ - ೨೫೪

೧೭೨. ಡಾ|| ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ. ಪುಟ - ೨೯

ಹಳದೀ ಮಿಶ್ರಿತ ಸುಣ್ಣವನ್ನು ಕಲ್ಲು ಬಂಡೆಗೆ ಲೇಪಿಸಿ ಅದರ ಮೇಲೆ ಕೆಮ್ಮಣ್ಣಿನ ಬಣ್ಣದಿಂದ ಚಿತ್ರ ರಚಿಸಲಾಗಿದೆ. ಇದೇ ಅವಧಿಯ ಚಿತ್ರಗಳು ಮಾನ್ವಿ ಊರಿನ ಪಶ್ಚಿಮಕ್ಕೆ ಇರುವ ಗುಡ್ಡದಲ್ಲಿ, ಸ್ಥಳೀಯವಾಗಿ ರಂಗೋಲಿ ಗುಹೆ ಎಂದು ಕರೆಯುವ ಗುಹೆಯಲ್ಲಿ ಇವೆ. ಇವೂ ಕೂಡಾ ವಿಜಯನಗರ ಕಾಲದ ಶೈಲಿಯಲ್ಲಿವೆ ಎಂದು ಅ. ಸುಂದರ ತಿಳಿಸುತ್ತಾರೆ.[೧೮೩] ಇವು ಪೌರಾಣಿಕ ಕಥಾನಕಗಳನ್ನು ಆಧರಿಸಿ ರಚಿಸಿದ್ದು ಎರಡೂ ಅಂಚುಗಳಲ್ಲಿ (ಮೇಲೆ ಕೆಳಗೆ) ವಜ್ರಾಕೃತಿಯ ನಕ್ಷೆಯ ಸಾಲುಗಳಿವೆ. ಈ ಚಿತ್ರಗಳೂ ಕೂಡಾ ಬಂಡೆಗೆ ಬಿಳಿಸುಣ್ಣ ಲೇಪಿಸಿ ಕೆಮ್ಮಣ್ಣಿನಿಂದ ಬರೆಯಲಾಗಿದೆ.

ಕ್ರಿ. ಶ. ೧೪೪೩ ರಲ್ಲಿ ಪರ್ಶಿಯಾದ ಅಬ್ದುಲ್ ರಜಾಕನು ಮಂಗಳೂರಿನಿಂದ ಹಂಪೆಗೆ ಬರುವಾಗ ದಾರಿಯಲ್ಲಿ ಬೇಲೌರ್ ಎಂಬಲ್ಲಿ ಅಸಂಖ್ಯಾತ ವರ್ಣಚಿತ್ರಗಳಿಂದ ಅಲಂಕೃತವಾದ ದೇವಾಲಯವನ್ನು ತಾನು ನೋಡಿದ್ದಾಗಿ ಹೇಳುತ್ತಾನೆ. ಈ ದೇವಾಲಯದ ಬುಡದಿಂದ ತುದಿಯವರೆಗೆ ಎಲ್ಲ ಗೋಡೆಗಳೂ ಚಿತ್ರಗಳಿಂದ ತುಂಬಿದ್ದವು. ಮತ್ತು ಈ ಊರಿನ ಪ್ರತಿ ಮನೆಗಳಲ್ಲೂ ಅವು ಚಿಕ್ಕವಿರಲಿ, ದೊಡ್ಡವಿರಲಿ ಅಲ್ಲಿ ಗೋಡೆಯ ಮೇಲೆ ಚಿತ್ರಗಳನ್ನು ಬರೆಯಲಾಗಿತ್ತು ಎಂದು ಹೇಳುತ್ತಾನೆ. ಈತನೇ ಮುಂದೆ ವಿಜಯನಗರಕ್ಕೂ ಹೋಗಿದ್ದು ಅಲ್ಲಿ ಮನೆಯ ಜಗಲಿಗಳನ್ನು ಚಿತ್ರಗಳಿಂದ ಅಲಂಕರಿಸುತ್ತಿದ್ದರೆಂದೂ, ವೇಶ್ಯಾಂಗನೆಯರ ಮನೆಗಳ ಮುಂದೆ ಹುಲಿ, ಸಿಂಹ, ಚಿರತೆ ಇತ್ಯಾದಿ ಪ್ರಾಣಿಗಳ ಚಿತ್ರಗಳನ್ನೂ ಬರೆಯುತ್ತಿದ್ದರೆಂದು ತಿಳಿಸುತ್ತಾನೆ.[೧೮೪] ಕ್ರಿ. ಶ. ೧೫ ನೇ ಶತಮಾನದ ಕವಿ ಕುಮಾರವ್ಯಾಸನು ತನ್ನ ಗದುಗಿನ ಭಾರತ ಕೃತಿಯಲ್ಲಿ ಚಿತ್ರಕಾರರು, ಚಿತ್ರಕಲೆ ಕುರಿತಾಗಿ ಹೇಳುತ್ತಾನೆ.[೧೮೫] ಬೀದರ್‌ನಲ್ಲಿರುವ ರಂಗೀನ್ ಮಹಲ್ ಮತ್ತು ಟರ್ಕಿಶ್ ಮಹಲ್‌ಗಳಲ್ಲಿರುವ ಮುಸ್ಲಿಂ ಶೈಲಿಯ ನಕ್ಷೆಗಳು ಕ್ರಿ. ಶ. ೧೫ ನೇ ಶತಮಾನದಲ್ಲಿ ರಚನೆಯಾಗಿವೆ.

ಕ್ರಿ. ಶ. ೧೬ ನೇ ಶತಮಾನದಲ್ಲಿ ಮತ್ತೆ ಕರ್ನಾಟಕದಲ್ಲಿ ಹೆಚ್ಚಿನ ಭಿತ್ತಿಚಿತ್ರರಚನೆ ನಡೆದಂತೆ ತೋರುತ್ತದೆ. ಹಂಪೆಯ ವಿರುಪಾಕ್ಷ ದವಾಲಯದ ಮೇಲ್ಚಾವಣಿಯಲ್ಲಿನ ಚಿತ್ರಗಳು, ಕನಕಗಿರಿಯ ಕನಕಾಚಲಪತಿ ದೇವಾಲಯದ ಚಿತ್ರಗಳು, ಆನೆಗೊಂದಿಯ ಹುಚ್ಚಪ್ಪಯ್ಯ ಮಠದ ಭಿತ್ತಿಚಿತ್ರಗಳು, ಗುಲಬರ್ಗಾದ ಬಂದೇನವಾಜ್ ದರ್ಗಾದಲ್ಲಿನ ನಕ್ಷಾಚಿತ್ರಗಳು, ಬೀದರ್ ಸಮೀಪದ ಅಷ್ಟೂರಿನಲ್ಲಿರುವ ಸಮಾಧಿಗಳಲ್ಲಿನ ಚಿತ್ರಗಳು, ವಿಜಾಪುರದ ಅರಸ್ ಮಹಲ್ ಮತ್ತು ಸಮೀಪದ ಕುಮಟಗಿಯ ನೀರಿನ ಕೊಳದ ಭಿತ್ತಿಚಿತ್ರಗಳು ಕ್ರಿ. ಶ. ೧೬ ನೇ ಶತಮಾನದಲ್ಲಿ ರಚನೆಯಾಗಿವೆ. ಕ್ರಿ. ಶ. ೧೫೮೪ ರಲ್ಲಿದ್ದಂತಹ ವಿರುಪಾಕ್ಷ ಪಂಡಿತನು ಬರೆದ 'ಚನ್ನಬಸವ ಪುರಾಣ' ದಲ್ಲಿ ಪರಿಪರಿಯ ಚಿತ್ರ ಕುಶಲಂಗಳು, ಭಿತ್ತಿ ಹಾಗೂ ಪಡಿಗಳಲ್ಲಿನ ಗೊಂಬೆಗಳ ಕುರಿತಾಗಿ ಪ್ರಸ್ತಾಪ ಇರುವುದು ತಿಳಿದುಬರುತ್ತದೆ.[೧೮೬] ಕನಕದಾಸರು ತಮ್ಮ ಮೋಹನ ತರಂಗಿಣಿ (೧೫೫೦) ಕೃತಿಯಲ್ಲಿ[೧೮೭] ಚಿತ್ರಕಾರರು, ಚಿತ್ರಕೆಲಸಗಳು ಮುಂತಾಗಿ ಹೇಳುತ್ತಾರೆ. ರತ್ನಾಕರ ವರ್ಣಿಯು ತನ್ನ ಭರತೇಶ ವೈಭವ (ಕ್ರಿ. ಶ. ೧೫೫೭) ಕೃತಿಯಲ್ಲಿ[೧೮೮] ಭರತೇಶನ

---

೧೮೩. ಡಾ|| ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ. ಪುಟ - ೨೯

೧೮೪. ಡಾ|| ಅ. ಲ. ನರಸಿಂಹನ್ : ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು (ಬೆಂಗಳೂರು ವಿ. ವಿ. ಗೆ ಸಲ್ಲಿಸಿದ ಪಿಎಚ್‌ಡಿ ಮಹಾಪ್ರಬಂಧ). ಪುಟ - ೧೪೨

೧೮೫. ಡಾ|| ಎಸ್. ಸಿ. ಪಾಟೀಲ್ : ಕರ್ನಾಟಕದ ಜನಪದ ಚಿತ್ರಕಲೆ. ಪುಟ - ೫೯

೧೮೬. ಡಾ|| ಬಿ. ಕೆ. ಹಿರೇಮಠ : ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ. ಪುಟ - ೨೫೩

೧೮೭. ಎಸ್. ಎಸ್. ಕೋತಿನ (ಅನು.) : ಮೋಹನ ತರಂಗಿಣಿ. ಪುಟ - ೪೦೧, ೧೨

೧೮೮. ಎಸ್. ಎಸ್. ಕೋತಿನ (ಅನು.) : ಭರತೇಶ್ವರ ವೈಭವ, ಪದ್ಯ ೬-೮. ಪುಟ - ೧೩೫

ನಾಟ್ಯಶಾಲೆಯಲ್ಲಿನ ಭಿತ್ತಿಚಿತ್ರಗಳನ್ನು ವರ್ಣಿಸುತ್ತಾನೆ. ಕ್ರಿ. ಶ. ೧೭ ನೇ ಶತಮಾನದ ಭಿತ್ತಿಚಿತ್ರಗಳು ಚಿತ್ರದುರ್ಗ ಜಿಲ್ಲೆಯ ಹಿರಿಯೂರಿನಲ್ಲಿರುವ ತೇರುಮಲ್ಲೇಶ್ವರ ದೇವಾಲಯದಲ್ಲಿ ರಚನೆಯಾಗಿದ್ದು ಕಂಡುಬರುತ್ತದೆ.[೧೮೯] ಕೆಂಚಪ್ಪ ನಾಯಕನಿಂದ ಬರೆಸಲಾದ ಈ ಚಿತ್ರಗಳಲ್ಲಿ ಕಿರಾತಾರ್ಜುನೀಯ ಪ್ರಸಂಗ, ದಶಾವತಾರ, ಅಷ್ಟ ದಿಕ್ಪಾಲಕರು, ಸೀತಾ ಕಲ್ಯಾಣ ಮುಂತಾದ ಚಿತ್ರಗಳಿವೆ. ಮೈಸೂರಿನ ರಾಜ ಒಡೆಯರು ಸ್ವತಂತ್ರ್ಯರಾದ ನಂತರ ಕ್ರಿ. ಶ. ೧೬೧೦ ರಲ್ಲಿ ಶ್ರೀರಂಗ ಪಟ್ಟಣವನ್ನು ರಾಜಧಾನಿಯಾಗಿ ಮಾಡಿಕೊಂಡರು. ಕಂಠೀರವ ನರಸಿಂಹರಾಜ ಒಡೆಯರಾಯರು, ಚಿಕ್ಕದೇವರಾಜ ಒಡೆಯರು ಇಲ್ಲಿಂದಲೇ ರಾಜ್ಯವಾಳಿದರು. ಆಗ ರಾಜಧಾನಿಯಾಗಿದ್ದ ಶ್ರೀರಂಗಪಟ್ಟಣದಲ್ಲಿ ಅರಮನೆ ಮತ್ತು ಇತರ ಭವನಗಳನ್ನು ವರ್ಣಚಿತ್ರಗಳಿಂದ ಅಲಂಕರಿಸಿದ್ದರು ಎಂಬ ವಿವರಗಳು ಸಿಗುತ್ತವೆ.[೧೯೦] ಆದರೆ, ಹಲವು ಬಾರಿ ವೈರಿಗಳ ಆಕ್ರಮಣಕ್ಕೆ ತುತ್ತಾಗಿ ಶ್ರೀರಂಗಪಟ್ಟಣದ ಹಳೆಯ ಕಟ್ಟಡಗಳು ಇಂದು ಕಂಡುಬರುತ್ತಲಿಲ್ಲ. ಇವುಗಳಲ್ಲದೇ ಸಮಕಾಲೀನ ಸಾಹಿತ್ಯಕೃತಿಗಳಲ್ಲೂ ಭಿತ್ತಿಚಿತ್ರಕಲೆಯ ವಿವರಣೆಗಳು ದೊರೆಯುತ್ತವೆ.



ಷಡಕ್ಷರ ದೇವನ 'ರಾಜಶೇಖರ ವಿಳಾಸ' (೧೬೩೫) ಎಂಬ ಕೃತಿಯಲ್ಲಿ ಚಿತ್ರಕಾರ, ಚಿತ್ರಶಾಲೆಯ ಪ್ರಸ್ತಾಪವಿದೆ.[೧೯೧] ಕ್ರಿ. ಶ. ೧೭ ನೇ ಶತಮಾನದಲ್ಲಿ ಕೆಳದಿಯ ಬಸವ ಭೂಪಾಲನಿಂದ ವಿರಚಿತವಾದ 'ಶಿವತತ್ವ ರತ್ನಾಕರ' ದಲ್ಲಿ[೧೯೨] ನಾಟ್ಯಶಾಲೆಯ ಗೋಡೆಗಳಲ್ಲಿ ಭಿತ್ತಿಚಿತ್ರ ರಚಿಸುವುದು, ಭಿತ್ತಿರಚನಾ ವಿಧಾನ, ವರ್ಣಗಳು, ಕುಂಚಗಳು, ಚಿತ್ರಕ್ಕೆ ಹೊಳಪು ಕೊಡುವ ರೀತಿ ಮುಂತಾದವುಗಳ ಬಗ್ಗೆ ಚರ್ಚಿಸಲಾಗಿದೆ. ಕ್ರಿ. ಶ. ೧೮ ನೇ ಶತಮಾನದ ಭಿತ್ತಿಚಿತ್ರಗಳು ಹಲವು ಸ್ಥಳಗಳಲ್ಲಿ ರಚನೆಯಾಗಿವೆ. ಶ್ರವಣಬೆಳಗೊಳದ ಚಾರುಕೀರ್ತಿ ಪಂಡಿತಾಚಾರ್ಯರ ಮಠದಲ್ಲಿ ಮತ್ತು ಮಠದ ಸಮೀಪವಿರುವ ಒಂದು ಮಂಟಪದಲ್ಲಿ ಕ್ರಿ. ಶ. ೧೭೮೦ ರಲ್ಲಿ ಮೈಸೂರು ಒಡೆಯರು ಬರೆಸಿದ ಭಿತ್ತಿಚಿತ್ರಗಳಿವೆ.[೧೯೩] ಇಲ್ಲಿನ ಚಿತ್ರಗಳಲ್ಲಿ ಬಹುಪಾಲು ಜೈನತೀರ್ಥಂಕರರ ಜೀವನಕ್ಕೆ ಸಂಬಂಧಪಟ್ಟವುಗಳಾಗಿವೆ. ಮಧ್ಯದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ನವರಾತ್ರಿ ಮೆರವಣಿಗೆಯ ದೃಶ್ಯವಿದೆ. ಈ ಚಿತ್ರದ ಎಡಗಡೆಯ ಗೋಡೆಯಲ್ಲಿ ಮೂರು ಸಾಲು ಚಿತ್ರಗಳಿವೆ. ಮೇಲಿನಿಂದ ಮೊದಲನೆಯ ಸಾಲಿನಲ್ಲಿ ಪಂಚಪರಮೇಷ್ಠಿಗಳನ್ನು ಚಿತ್ರಿಸಲಾಗಿದ್ದರೆ, ಮಧ್ಯದ ಸಾಲಿನಲ್ಲಿ ನೇಮಿನಾಥ ಯಕ್ಷ, ಯಕ್ಷಿಯರ ಚಿತ್ರಗಳನ್ನು ರಚಿಸಿದ್ದಾರೆ. ಕೆಳಗಡೆಯ ಸಾಲಿನಲ್ಲಿ ಮಠದ ಸ್ವಾಮಿಗಳು ಮತ್ತು ಶಿಷ್ಯರನ್ನು ಒಳಗೊಂಡ ಚಿತ್ರಗಳಿವೆ. ಉತ್ತರ ದಿಕ್ಕಿನ ಗೋಡೆಯಲ್ಲಿನ ಚಿತ್ರಗಳಲ್ಲಿ ಪಾರ್ಶ್ವನಾಥನ ಸಮವಸರಣದ ಚಿತ್ರವಿದ್ದು ಅದರ ಸುತ್ತಲೂ ವಿವಿಧ ರೀತಿಯ ಚಿಕ್ಕಚಿಕ್ಕ ಚಿತ್ರಗಳನ್ನು ವೃತ್ತಾಕಾರವಲ್ಲಿ ರಚಿಸಲಾಗಿದೆ. ದಕ್ಷಿಣ ದಿಕ್ಕಿನ ಗೋಡೆಯ ಮೇಲೆ ಭರತ ಚಕ್ರವರ್ತಿಯ ಜೀವನ ಆಯರಿಸಿದ ಘಟನೆಗಳನ್ನು ನಿರೂಪಿಸಿದ್ದರೆ, ಪಶ್ಚಿಮ ದಿಕ್ಕಿನ ಗೋಡೆಯಲ್ಲಿ ನಾಗಕುಮಾರನ ಜೀವನ ವೃತ್ತಾಂತವನ್ನು ಚಿತ್ರಿಸಲಾಗಿದೆ. ಇಲ್ಲಿನ ಒಂದು ಗಮನಾರ್ಹ ಚಿತ್ರ ಒಂದರಲ್ಲಿ ಜೈನ ಸಿದ್ಧಾಂತದಲ್ಲಿ ಬರುವ ಆರು ಲೇಶ್ಯಗಳನ್ನು ಸಾಂಕೇತಿಸುವ ದೃಶ್ಯವಿದೆ. ಆ





೧೮೯. ಡಾ|| ಅ. ಲ. ನರಸಿಂಹನ್ : ಕರ್ನಾಟಕ ಭಿತ್ತಿಚಿತ್ರ ಪರಂಪರೆ, ಪುಟ - ೧೯೩

೧೯೦. ಜಿ. ವಿ. ಕೆ. ಶಾಸ್ತ್ರಿ : ಕರ್ನಾಟಕದ ಭಿತ್ತಿಚಿತ್ರಗಳು, ಪುಟ - ೧೭

೧೯೧. ಡಾ|| ಬಿ. ಕೆ. ಹಿರೇಮಠ : ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ, ಪುಟ - ೨೫೨

೧೯೨. ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ (ಸಂ.) : ಶಿವತತ್ವ ರತ್ನಾಕರ, ಆರನೆಯ ಕಲ್ಲೋಲ, ಎರಡನೇ ತರಂಗ, ಪುಟ - ೩೫೫ - ೩೬೫

೧೯೩. ಜಿ. ವ್ಹಿ. ಕೆ. ಶಾಸ್ತ್ರಿ : ಕರ್ನಾಟಕದ ಭಿತ್ತಿಚಿತ್ರಗಳು, ಪುಟ - ೧೬

ಆರು ಲೇಶ್ಯಗಳಲ್ಲಿ ಮೂರು ಲೇಶ್ಯಗಳು ಪಾಪಕಾರಕ, ಇನ್ನುಳಿದ ಮೂರು ಪುಣ್ಯಕಾರಕವಾದವು. ಪುಣ್ಯಕಾರಕವಾದ ಲೇಶ್ಯಗಳನ್ನು ಸಾಂಕೇತಿಸಲು ಕಿತ್ತಳೆ ವರ್ಣ, ತಿಳಿಗುಲಾಬಿ ವರ್ಣ, ಮತ್ತು ಬಿಳಿ ವರ್ಣ ಬಳಸಿದ್ದರೆ, ಪಾಪಕರವಾದ ಲೇಶ್ಯಗಳಿಗಾಗಿ ಕಪ್ಪು, ನೀಲಿ ಮತ್ತು ನಸುಕೆಂಪು ವರ್ಣವನ್ನು ಬಳಸಲಾಗಿದೆ.

ಈ ಚಿತ್ರದಲ್ಲಿ ಮಾವಿನ ಹಣ್ಣಿನ ಮರವೊಂದರಿಂದ ಆರು ಜನರು ಹಣ್ಣನ್ನು ಪಡೆದುಕೊಳ್ಳುವ ಕಾರ್ಯದಲ್ಲಿ ನಿರತರಾಗಿದ್ದಾರೆ. ಅವರು ತಮ್ಮನ್ನು ಆವರಿಸಿರುವ ಲೇಶ್ಯಗಳಿಂದಾಗಿ (ಪಾಪ-ಪುಣ್ಯ-ಕರ್ಮಗಳು) ಅದಕ್ಕೆ ತಕ್ಕನಾದ ಕ್ರಿಯೆಯಲ್ಲಿಯೇ ತೊಡಗಿದ್ದಾರೆ. ಪಾಪಕಾರಕವಾದ ಲೇಶ್ಯಗಳಿಂದ ಪ್ರಭಾವಿತವಾದ ವ್ಯಕ್ತಿಗಳಲ್ಲಿ ಕಪ್ಪು ಲೇಶ್ಯದಿಂದ ಪ್ರಭಾವಿತನಾದ ವ್ಯಕ್ತಿ ಹಣ್ಣನ್ನು ಪಡೆಯಲು ಇಡೀ ಮರವನ್ನೇ ಬುಡಸಹಿತ ಕಿತ್ತುಹಾಕಲು ತೊಡಗಿದ್ದಾನೆ. ನೀಲಿ ವರ್ಣದ ಲೇಶ್ಯದಿಂದ ಪ್ರಭಾವಿತ ವ್ಯಕ್ತಿ ಹಣನ್ನು ಪಡೆಯಲು ಮರದ ಕಾಂಡವನ್ನೇ (ಬೊಡ್ಡೆಯನ್ನೇ) ಕತ್ತರಿಸುತ್ತಿದ್ದರೆ, ನಸುಕೆಂದು ವರ್ಣದ ಲೇಶ್ಯಕ್ಕೆ ಒಳಗಾದ ವ್ಯಕ್ತಿ ಮರದ ದೊಡ್ಡ ದೊಡ್ಡ ಟೊಂಗೆಗಳನ್ನು ಕತ್ತರಿಸುತ್ತಿದ್ದಾನೆ.

**ಮೂರು :-** ಪುಣ್ಯಕಾರಕ ಲೇಶ್ಯಗಳಿಂದ ಪ್ರಭಾವಿತ ವ್ಯಕ್ತಿಗಳಲ್ಲಿ ಕಿತ್ತಳೆ ವರ್ಣದ ಲೇಶ್ಯಕ್ಕೆ ಒಳಗಾದ ವ್ಯಕ್ತಿ ಹಣ್ಣು ಪಡೆಯಲು ಹಣ್ಣು ಬಿಟ್ಟಂತಹ ಚಿಕ್ಕ ಟೊಂಗೆಗಳನ್ನು ಮುರಿದುಕೊಳ್ಳುವದರಲ್ಲಿ ನಿರತನಾಗಿದ್ದಾನೆ. ತಿಳಿಗುಲಾಬಿ ವರ್ಣದ ಪ್ರಭಾವಿತ ವ್ಯಕ್ತಿ ಮರದ ಯಾವ ಭಾಗವನ್ನು ಮುರಿಯದೇ ಕೇವಲ ಹಣ್ಣನ್ನು ಕಿತ್ತುಕೊಳ್ಳುವದರಲ್ಲಿ ತೊಡಗಿದ್ದರೆ. ಉತ್ತಮವಾದ ಲೇಶ್ಯವಾದ ಬಿಳಿವರ್ಣದ ಲೇಶ್ಯದ ಪ್ರಭಾವದಿಂದ ಕೂಡಿದ ವ್ಯಕ್ತಿಯು ಹಣ್ಣು ಕೀಳಲು ಉದ್ಯುಕ್ತನಾಗದೇ ತಾನಾಗಿಯೇ ಕೆಳಗೆ ಬಿದ್ದ ಹಣ್ಣನ್ನು ಎತ್ತಿಕೊಳ್ಳುವದರಲ್ಲಿ ತೃಪ್ತನಾಗಿದ್ದಾನೆ. ಈ ಚಿತ್ರದಲ್ಲಿ ವರ್ಣಸಂಯೋಜನೆಯು ಪ್ರಖರವಾಗಿದ್ದರೂ ಕಣ್ಣಿಗೆ ಹಿತವನ್ನುಂಟು ಮಾಡುತ್ತದೆ.

ಈ ಕಾಲದ ಭಿತ್ತಿಚಿತ್ರಗಳು ಶಿಬಿಯಲ್ಲಿಯೂ ರಚನೆಯಾಗಿವೆ.[೧೯೪] ಶಿಬಿಯು ತುಮಕೂರಿನಿಂದ ಸುಮಾರು ೨೪ ಕಿ. ಮೀ. ದೂರದಲ್ಲಿದೆ. ಶ್ರೀರಂಗಪಟ್ಟಣದ ನವಾಬರ ಬಳಿ ಅಧಿಕಾರಿಯಾಗಿದ್ದ ನಲ್ಲಪ್ಪನೆಂಬವನು ಇಲ್ಲಿ ಕ್ರಿ. ಶ. ೧೭೮೩ ರಲ್ಲಿ ನರಸಿಂಹಸ್ವಾಮಿ ದೇವಾಲಯವನ್ನು ಕಟ್ಟಿಸಿದನು. ಈ ದೇವಾಲಯದ ಮುಖಮಂಟಪವನ್ನು ವರ್ಣಚಿತ್ರಗಳಿಂದ ಅಲಂಕರಿಸಲಾಗಿದೆ. ಮುಖಮಂಟಪದ ಛಾವಣಿ ಮತ್ತು ಮಹಾದ್ವಾರದ ತೊಲೆಗಳು ಚಿತ್ರಗಳಿಂದ ತುಂಬಿವೆ. ಇಲ್ಲಿ ಅಂಕಣಗಳನ್ನಾಗಿ ಮಾಡಿಕೊಂಡು ಅದರಲ್ಲಿ ಚಿತ್ರಿಸಲಾಗಿದೆ. ಪ್ರತಿಯೊಂದು ಅಂಕಣದಲ್ಲಿಯೂ ಒಂದೊಂದು ವಿಷಯಕ್ಕೆ ಸಂಬಂಧಪಟ್ಟದಂತೆ ಚಿತ್ರಗಳಿವೆ. ಒಂದು ಅಂಕಣದಲ್ಲಿ ಶಿವನ ಚಿತ್ರವಿದ್ದು ಆತನ ತೊಡೆಯ ಮೇಲೆ ಒಂದು ಕಡೆ ಗೌರಿಯೂ ಇನ್ನೊಂದು ಕಡೆ ಗಂಗೆಯೂ ಕುಳಿತಿದ್ದಾರೆ. ಮತ್ತೊಂದು ಅಂಕಣದಲ್ಲಿ ಚಂದ್ರಶೇಖರ ಶಿವನ ಚಿತ್ರವಿದೆ. ಅಕ್ಕಪಕ್ಕದಲ್ಲಿ ಷಣ್ಮುಖ ಮತ್ತು ಪಾರ್ವತಿ ಚಿತ್ರಗಳಿವೆ. ಈ ಚಿತ್ರ ಸಾಲಿನ ಕೊನೆಯ ಅಂಕಣದಲ್ಲಿ ನಾರದ ಮತ್ತು ತುಂಬುರರು ವಾದ್ಯ ನುಡಿಸುತ್ತಿರುವ ಚಿತ್ರವಿದೆ. ಈ ಚಿತ್ರಪಟ್ಟಿಕೆಯಲ್ಲಿಯೇ ದಕ್ಷಿಣಾಮೂರ್ತಿ ಮತ್ತು ತ್ರಿವಿಕ್ರಮರ ಚಿತ್ರಗಳೂ ಇವೆ. ದೊಡ್ಡ ಚಿತ್ರಗಳ ಅಂಕಣದ ಪಕ್ಕದಲ್ಲಿಯೇ ಚಿಕ್ಕ ಚಿತ್ರಗಳೂ ಇದ್ದು ಶಿವಲೀಲೆಯನ್ನು

---

೧೯೪. ಜಿ. ವ್ಹಿ. ಕೆ. ಶಾಸ್ತ್ರಿ : ಕರ್ನಾಟಕದ ಭಿತ್ತಿಚಿತ್ರಗಳು. ಪುಟ - ೧೬

ಮುಖ್ಯ ವಸ್ತುವಾಗಿ ಹೊಂದಿರುವ ಈ ಚಿತ್ರಗಳಲ್ಲಿ ಸುಂದರ ಕಲ್ಯಾಣಮೂರ್ತಿ, ಉಮಾಮಹೇಶ್ವರ ಅಂಧಕಾಸುರ ಸಂಹಾರ, ಶರಭಾವತಾರ ಮುಂತಾದ ದೃಶ್ಯಗಳಿವೆ.

ಶ್ರೀರಂಗಪಟ್ಟಣದ ದರಿಯಾ ದೌಲತ್‌ದಲ್ಲಿಯೂ ೧೮ ನೇ ಶತಮಾನದ ಭಿತ್ತಿಚಿತ್ರಗಳಿವೆ. ಇಲ್ಲಿಯ ಚಿತ್ರಗಳು ಒಂದೇ ಕಾಲದಲ್ಲಿ ರಚನೆಯಾಗಿರದೇ ೧೭೮೪ ರಿಂದ ೧೮೬೦ ರ ನಡುವಿನ ಕಾಲಾವಧಿಯಲ್ಲಿ ಬೇರೆಬೇರೆ ಸಂದರ್ಭಗಳಲ್ಲಿ ರಚನೆಗೊಂಡಿವೆ. ಇಲ್ಲಿ ಯುದ್ಧದ ದೃಶ್ಯಗಳು. ಆ ಕಾಲದ ಭಾರತದ ಪ್ರಸಿದ್ಧ ರಾಜಮಹಾರಾಜರ. ನವಾಬರ ಚಿತ್ರಗಳು ಮುಖ್ಯವಾಗಿ ರಚನೆಗೊಂಡಿವೆ. ಇಲ್ಲಿರುವ ಒಂದು ಯುದ್ಧದ ಚಿತ್ರದಲ್ಲಿ ಹೈದರಾಲಿ ಮತ್ತು ಟಿಪ್ಪು ಇಬ್ಬರೂ ಸೈನ್ಯವನ್ನು ಮುನ್ನಡೆಸಿಕೊಂಡು ಯುದ್ಧಕ್ಕೆ ಹೊರಟಿದ್ದಾರೆ. ಇನ್ನೊಂದು ಯುದ್ಧ ದೃಶ್ಯದಲ್ಲಿ ಟಿಪ್ಪುವಿಗೂ ಆಂಗ್ಲರ ಸೈನ್ಯಕ್ಕೂ ನಡೆಯುತ್ತಿರುವ ಭೀಕರ ಕದನವಿದೆ. ಈ ಯುದ್ಧ ದೃಶ್ಯದ ಮೇಲಿನ ಪಟ್ಟಿಕೆಯಲ್ಲಿ ಟಿಪ್ಪು ಕುದುರೆಯ ಮೇಲೆ ಕುಳಿತು ಯುದ್ಧಕ್ಕೆ ಹೊರಟಿದ್ದು ಪಕ್ಕದಲ್ಲಿ ಪಟ್ಟೆ ಹುಲಿಯ ಆಕೃತಿಗಳು ಚಿತ್ರಿತವಾಗಿವೆ. ಇಲ್ಲಿನ ಇನ್ನೊಂದು ಚಿತ್ರಪಟ್ಟಿಕೆಯಲ್ಲಿ ಪೊಲ್ಲೈಯೂರಿನ ಯುದ್ಧದಲ್ಲಿ ಇಂಗ್ಲೀಷ ಸೈನ್ಯದೊಡನೆ ಹೋರಾಡಿ ಗೆಲವು ಕಂಡ ಹೈದರಾಲಿ ಮತ್ತು ಟಿಪ್ಪುವಿನ ಸೈನ್ಯ ಉತ್ಸಾಹದಿಂದ ಕಾದಾಟದಲ್ಲಿ ತೊಡಗಿಕೊಂಡಿದೆ. ಈ ಯುದ್ಧದಲ್ಲಿ ಫ್ರೆಂಚ್ ಸೈನಿಕರು ಮೈಸೂರು ಸೈನ್ಯಕ್ಕೆ ಸಹಾಯ ಮಾಡುತ್ತಿದ್ದಾರೆ. ಕೆಂಪು ಕೋಟನ್ನು ಧರಿಸಿರುವ ಸೈನಿಕರು ತಮ್ಮ ನಾಯಕ ಕರ್ನಲ್ ಬೈಲೆಯನ್ನು ಸುತ್ತುಗಟ್ಟಿ ರಕ್ಷಿಸುತ್ತಿದ್ದಾರೆ.

ನಾಲ್ಕನೆಯ ಚಿತ್ರಪಟ್ಟಿಕೆಯಲ್ಲಿ ನಿಜಾಮನ ಸೈನ್ಯ ಬ್ರಿಟೀಷರ ಸಹಾಯಕ್ಕಾಗಿ ಧಾವಿಸುತ್ತಿದೆ. ಪೂರ್ವ ದಿಕ್ಕಿನ ಗೋಡೆಯ ಮೇಲೆ ಅನೇಕ ಚಿತ್ರಪಟ್ಟಿಕೆಗಳ ಸಾಲುಗಳಿದ್ದು ಅವುಗಳಲ್ಲಿ ಭಾರತದ ಸಮಕಾಲೀನ ಪ್ರಸಿದ್ಧ ರಾಜರುಗಳ ಚಿತ್ರ ರಚಿಸಿವೆ. ಚಿತ್ತೂರಿನ ರಾಣಿ. ಮಹಮ್ಮದ ಅಲಿ. ತಂಜಾವೂರಿನ ರಾಜ. ಬಾಲಾಜಿರಾವ್ ಪೇಶ್ವೆ. ಮುಮ್ಮಡಿ ಕೃಷ್ಣರಾಜ ಒಡೆಯರು. ಮಾಗಡಿ ಕೆಂಪೇಗೌಡ. ಚಿತ್ರದುರ್ಗದ ಮದಕರಿನಾಯಕ. ಅರ್ಕಾಟ್ ಮತ್ತು ಸವಣೂರಿನ ನವಾಬರು ಮೊದಲಾದವರ ಚಿತ್ರಗಳಿವೆ. ಟಿಪ್ಪು ಹಾಗೂ ಆತನ ಮಕ್ಕಳ ಚಿತ್ರಗಳೂ ಇಲ್ಲಿವೆ. ಇವುಗಳಲ್ಲದೇ ಈ ಕೆಳಗಿನ ಸ್ಥಳಗಳಲ್ಲಿಯೂ ಕ್ರಿ. ಶ. ೧೮ ನೇ ಶತಮಾನದ ಭಿತ್ತಿಚಿತ್ರಗಳು ಕಂಡುಬರುತ್ತವೆ.[೧೯೫] ಬೆಂಗಳೂರಿನ ಸಮೀಪವಿರುವ ಟಿಪ್ಪುವಿನ ಅರಮನೆ (೧೭೯೧). ಚನ್ನಪಟ್ಟಣ ತಾಲೂಕಿನ ತಿಪ್ಪೋಜಿ ಅರಮನೆ. ಮಾಗಡಿಯ ಸೋಮೇಶ್ವರ ದೇವಾಲಯ (೧೭೧೨). ಚಾಮರಾಜ ನಗರದಲ್ಲಿನ ಪಾರ್ಶ್ವನಾಥ ಜಿನಾಲಯ. ಪಿರಿಯಾಪಟ್ಟಣದ ತಾಲೂಕು ಬೆಟ್ಟದಪುರಸಿಡ್ಲು ಮಲ್ಲಿಕಾರ್ಜುನ ದೇವಾಲಯ. ಕೊಡಗು ಜಿಲ್ಲೆಯ ವಿರಾಜಪೇಟೆ ತಾಲೂಕು ನಾಲ್ಕುನಾಡು ಅರಮನೆ (೧೭೯೧). ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಕಾನ್ಲೆ ಶಿವದೇವಾಲಯ. ನರಗುಂದದ ಬಾಬಾಸಾಹೇಬನ ಅರಮನೆ. ಗುಳೇದಗುಡ್ಡದ ಹೊಸಮನಿಗೌಡರ ಮನೆ. ಅಮ್ಮಿನಭಾವಿಯ ಹಿರೇಮಠ. ತುಮಕೂರು ಜಿಲ್ಲೆ ತಿಪಟೂರು ತಾಲೂಕು ಕೆರೆಗೋಡಿ ರಂಗಾಪುರ (೧೭೭೦). ಯಡೆಯೂರು ರೇವಣಸಿದ್ಧೇಶ್ವರ ದೇವಾಲಯ. ತುಮಕೂರಿನಲ್ಲೇ ಇರುವ ಲಕ್ಷ್ಮೀ ನರಸಿಂಹ ದೇವಾಲಯ (೧೭೮೩) ಮತ್ತು ಸು. ಕ್ರಿ. ಶ. ೧೮ ನೇ ಶತಮಾನದಲ್ಲಿ ರಚನೆಯಾದ ಕಾರವಾರ ಜಿಲ್ಲೆಯ

---

೧೯೫. ಡಾ॥ ಅ. ಲ. ನರಸಿಂಹನ್ : ಕರ್ನಾಟಕ ಭಿತ್ತಿಚಿತ್ರ ಪರಂಪರೆ, ಪುಟ - ೧೯೩ - ೯೫

ಹಳಿಯಾಳ ತಾಲೂಕಿನ ಬಿ. ಕೆ. ಹಳ್ಳಿಯ ರಾಮಮಂದಿರದಲ್ಲಿ ರಾಮಾಯಣಕ್ಕೆ ಸಂಬಂಧಿಸಿದ ಮತ್ತು ಇತರ ಪೌರಾಣಿಕ ದೃಶ್ಯಗಳ ಭಿತ್ತಿಚಿತ್ರಗಳು ಶೋಧವಾಗಿವೆ.[೧೯೬]

ಕ್ರಿ. ಶ. ೧೯ ನೇ ಶತಮಾನದ ಭಿತ್ತಿಚಿತ್ರಗಳು ಅನೇಕ ಕಡೆಗಳಲ್ಲಿ ಕಂಡುಬರುತ್ತವೆ. ಚಾಮರಾಜ ನಗರದಿಂದ ಸುಮಾರು ೫ ಕಿ. ಮೀ. ದೂರದಲ್ಲಿರುವ ಹರದನಹಳ್ಳಿಯು ಕ್ರಿ. ಶ. ೧೫ ನೇ ಶತಮಾನಕ್ಕೂ ಪೂರ್ವದಲ್ಲಿಯೇ ಪ್ರಸಿದ್ಧಿಯನ್ನು ಪಡೆದ ಸ್ಥಳವಾಗಿತ್ತು. ಸಿದ್ಧಲಿಂಗೇಶ್ವರರು ದೀಕ್ಷೆ ಪಡೆದುಕೊಂಡ ಈ ಸ್ಥಳದಲ್ಲಿ ಪುರಾತನವಾದ ದಿವ್ಯಲಿಂಗೇಶ್ವರ ದೇವಾಲಯವಿದೆ. ೧೪ ನೇ ಶತಮಾನಕ್ಕಿಂತಲೂ ಮೊದಲೇ ನಿರ್ಮಾಣವಾದ ಈ ದೇವಾಲಯವನ್ನು ಮೈಸೂರು ಅರಸರ ಕಾಲಕಾಲಕ್ಕೆ ಕ್ರಿ. ಶ. ೧೮೧೦ ರಲ್ಲಿ ಜೀರ್ಣೋದ್ಧಾರ ಮಾಡಲಾಯಿತು. ಇದೇ ವೇಳೆಗೆ ಇಲ್ಲಿ ಭಿತ್ತಿಚಿತ್ರಗಳನ್ನು ಬರೆಸಲಾಯಿತು ಎನ್ನಲಾಗಿದೆ.[೧೯೭]

ಈ ದೇವಾಲಯದ ಗರ್ಭಗುಡಿಯ ಹಿಂಭಾಗಕ್ಕೆ ಹೊಂದಿಕೊಂಡಿರುವ ಒಂದು ಮಂಟಪದಲ್ಲಿ ಭಿತ್ತಿಚಿತ್ರಗಳು ರಚನೆಯಾಗಿವೆ. ಈ ಮಂಟಪದ ಮೇಲ್ಛಾವಣಿ ಮತ್ತು ಅಡ್ಡ ತೊಲೆಗಳು ಚಿತ್ರಗಳಿಂದ ತುಂಬಿವೆ. ಈ ಮಂಟಪದ ಮೇಲ್ಛಾವಣಿಯ ಐದನೆಯ ಅಂಕಣದಲ್ಲಿರುವ ' ಗಜಾಸುರ ಮರ್ಧನ ' ಚಿತ್ರವು ಇಲ್ಲಿನ ಚಿತ್ರಗಳಲ್ಲಿ ಅತ್ಯಂತ ಗಮನಾರ್ಹ ಚಿತ್ರವಾಗಿದೆ. ಗಜಾಸುರನನ್ನು ಕೊಂದ ಶಿವನು ಆನೆಯ ತಲೆಯ ಮೇಲೆ ನೃತ್ಯ ಮಾಡುತ್ತಿದ್ದಾನೆ. ಈ ಚಿತ್ರದ ಸುತ್ತಲೂ ಚಕ್ರಾಕಾರದ ನಕ್ಷೆಯನ್ನು ರಚಿಸಿದ್ದು. ಅದು ಚಿತ್ರವು ಮತ್ತಷ್ಟು ಸುಂದರವಾಗಿ ಕಾಣುವಂತೆ ಮಾಡಿದೆ. ಮೇಲ್ಛಾವಣಿಯ ಇತರ ಅಂಕಣಗಳಲ್ಲಿರುವ ಚಿತ್ರಗಳಲ್ಲಿ ಲಕ್ಷ್ಮೀ ನಾರಾಯಣ. ಪಂಚಮುಖದ ಶಿವ. ಉಮಾಮಹೇಶ್ವರ. ಅಂಧಕಾಸುರ ಸಂಹಾರ ದೃಶ್ಯ. ನಂದಿಯ ಮೇಲೆ ಕುಳಿತಿರುವ ಶಿವಪಾರ್ವತಿಯರು ಮೊದಲಾದ ಚಿತ್ರಗಳು ಗಮನಾರ್ಹವಾಗಿವೆ. ಅಡ್ಡ ತೊಲೆಗಳ ಮೇಲೆ ಭಾಗವತ. ಮಹಾಭಾರತ. ಶಿವಪುರಾಣಕ್ಕೆ ಸಂಬಂಧಿಸಿದ ಚಿತ್ರಗಳ ಜೊತೆಗೇ ದಂಪತಿಗಳ ಚಿತ್ರಗಳೂ ರಚನೆಯಾಗಿವೆ.

ಮೊದಲನೆಯ ತೊಲೆಯ ಮೇಲೆ ಲಕ್ಷ್ಮೀನಾರಾಯಣ. ಉಮಾಮಹೇಶ್ವರ. ಮೊಸರು ಕಡೆಯುತ್ತಿರುವ ಸ್ತ್ರೀ. ಅವಳನ್ನು ಕೆಣಕುತ್ತಿರುವ ಕೃಷ್ಣ. ಗಜಲಕ್ಷ್ಮೀ. ವೇಣುಗೋಪಾಲ. ಕಿರಾತಾರ್ಜುನೀಯ ಪ್ರಸಂಗ ಚಿತ್ರಿತವಾಗಿವೆ. ಎರಡನೆಯ ತೊಲೆಯ ಮೇಲೆ ಸಮುದ್ರಮಂಥನ. ಲಿಂಗಪೂಜೆಯಲ್ಲಿ ನಿರತರಾದ ಅಷ್ಟ ದಿಕ್ಪಾಲಕರು. ಅಂಧಕಾಸುರ ಸಂಹಾರ. ತುಂಬುರ ವಾದ್ಯ ನುಡಿಸುತ್ತಿರುವುದು. ಆತನ ಜೊತೆಗೆ ದೇವಲೋಕದ ಅನೇಕ ಸಂಗೀತಕಾರರು ಮುಂತಾದ ಚಿತ್ರಗಳು ರಚನೆಯಾಗಿವೆ. ಮೂರನೆಯ ತೊಲೆಯ ಮೇಲೆ ಹಾವಾಡಿಗನೊಬ್ಬ ತನ್ನ ಕಾಯಕದಲ್ಲಿ ನಿರತನಾಗಿ ತನ್ನ ನಾಗಸ್ವರ ವಾದನ ಬಾರಿಸುತ್ತ ಹಾವನ್ನು ಆಡಿಸುತ್ತಿದ್ದಾನೆ. ಪಕ್ಕದಲ್ಲಿಯೇ ಕಪಿಯೊಂದು ಚಲ್ಲಾಟದಲ್ಲಿ ತೊಡಗಿದೆ. ನಾಲ್ಕನೆಯ ತೊಲೆಯ ಮೇಲೆ ಗೋಪಿಕಾ ವಸ್ತ್ರಾಪಹರಣ ದೃಶ್ಯ ಮುಖ್ಯವಾಗಿದ್ದರೆ. ಇತರ ತೊಲೆಗಳಲ್ಲಿ ಶಿವನಿಗೆ

---

೧೯೬. ಡಾ|| ಎಸ್. ಸಿ. ಪಾಟೀಲ ಅವರು ೧೪ ನೇ ಕರ್ನಾಟಕ ಇತಿಹಾಸ ಅಕಾಡೆಮಿಯ ಸಮ್ಮೇಳನ ೧೦. ಜುಲೈ ೨೦೦೦. ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ಸಾದರಪಡಿಸಿದ ಸಂಶೋಧನ ಪ್ರಬಂಧದ ಸಹಾಯ ಪಡೆದು ಕ್ಷೇತ್ರಕಾರ್ಯ ಮಾಡಿಬರಲಾಗಿದೆ.

೧೯೭. ಜಿ. ವ್ಹಿ. ಕೆ. ಶಾಸ್ತ್ರಿ : ಕರ್ನಾಟಕದ ಭಿತ್ತಿಚಿತ್ರಗಳು. ಪುಟ - ೧೨

ಕಣ್ಣನ್ನು ಅರ್ಪಿಸುತ್ತಿರುವ ಬೇಡರ ಕಣ್ಣಪ್ಪ, ವೇಣುಗೋಪಾಲ, ವೀಣೆ ಬಾರಿಸುತ್ತಿರುವ ಗೋಪಿಕಾ ಸ್ತ್ರೀಯರು, ಇತ್ಯಾದಿ ಚಿತ್ರಗಳಿವೆ.

ಚಾಮರಾಜ ನಗರದಲ್ಲಿಯೂ ಈ ಕಾಲದ ಭಿತ್ತಿಚಿತ್ರಗಳು ಕಂಡುಬರುತ್ತವೆ.[೧೯೮] " ಚಾಮರಾಜ ನಗರವು ಇತಿಹಾಸ ಪ್ರಸಿದ್ಧ ಸ್ಥಳವಾಗಿದ್ದು, ಹಿಂದೆ ಅರಿಕುಠಾರವೆಂದು ಕರೆಯಲಾಗುತ್ತಿತ್ತು. ೧೯ ನೇ ಶತಮಾನದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ತಮ್ಮ ತಂದೆಯವರ ನೆನಪಿಗಾಗಿ ಚಾಮರಾಜ ನಗರವೆಂದು ಹೆಸರು ಬದಲಾಯಿಸಿದರು. ಅವರೇ ಈ ಸ್ಥಳದಲ್ಲಿ ಕ್ರಿ. ಶ. ೧೮೨೬ ರಲ್ಲಿ ಚಾಮರಾಜೇಶ್ವರ ದೇವಾಲಯವನ್ನು ಕಟ್ಟಿಸಿದರು. ". ಈ ದೇವಾಲಯದಲ್ಲಿ ವರ್ಣಭಿತ್ತಿಚಿತ್ರಗಳನ್ನು ಬರೆಸಿದರು. ಇಲ್ಲಿನ ಚಿತ್ರಗಳಲ್ಲಿ ಗಿರಿಜಾಕಲ್ಯಾಣ ಚಿತ್ರವು ದೊಡ್ಡ ಪ್ರಮಾಣದಲ್ಲಿ ರಚನೆಯಾಗಿದೆ. ಇದರ ಪಕ್ಕದಲ್ಲೇ ಶಿವತಾಂಡವದೃಶ್ಯ, ಸ್ವಲ್ಪ ಮೇಲುಗಡೆ ಸಮುದ್ರ ಮಥನ ದೃಶ್ಯ ರಚಿಸಿದೆ : ಇವು ಪಾರ್ವತಿ ಅಥವಾ ಕೆಂಪನಂಜಮಾಂಬ ಎಂದು ಕರೆಯಲಾಗುವ ದೇವಿಯ ಸನ್ನಿಧಿಯಲ್ಲಿ ಎಡಬಲಗಳಲ್ಲಿ ರಚನೆಗೊಂಡಿವೆ. ಇದೇ ದೇವಾಲಯದಲ್ಲಿ ಬಲ ಪಾರ್ಶ್ವದಲ್ಲಿ ಚಾಮುಂಡೇಶ್ವರಿಯ ಸನ್ನಿಧಿಯ ಅಕ್ಕಪಕ್ಕದಲ್ಲಿಯೂ ಭಿತ್ತಿಚಿತ್ರಗಳನ್ನು ರಚಿಸಲಾಗಿದೆ. ಇಲ್ಲಿನ ಚಿತ್ರಗಳಲ್ಲಿ ಮಹಿಷಾಸುರ ಮರ್ಧಿನಿ, ಮತ್ತು ಚಾಮುಂಡೇಶ್ವರಿ ದೇವಿಯನ್ನು ಚಿತ್ರಿಸಲಾಗಿದೆ. ಚಾಮರಾಜೇಶ್ವರ ದೇವಾಲಯದ ಸ್ವಲ್ಪ ದೂರದಲ್ಲಿಯೇ ಒಂದು ಮಂಟಪವಿದ್ದು ಅದನ್ನು ಜನನ ಮಂಟಪವೆಂದು ಕರೆಯುತ್ತಾರೆ. ಅಲ್ಲಿಯೂ ಚಿತ್ರಗಳನ್ನು ರಚಿಸಿದ್ದು, ಅವು ಚಾಮುಂಡೇಶ್ವರಿ, ರಾಜರಾಜೇಶ್ವರಿ ಹೀಗೆ ದೇವಿಯ ವಿವಿಧ ರೂಪಗಳನ್ನು ಹೊಂದಿವೆ.

ಸಿರಾ ಮತ್ತು ಮುಡುಕುತೊರೆಗಳಲ್ಲಿ ಕ್ರಿ. ಶ. ೧೯ ನೇ ಶತಮಾನಕ್ಕೆ ಸೇರಿದ ಭಿತ್ತಿಚಿತ್ರಗಳು ಕಂಡುಬರುತ್ತವೆ. ತುಮಕೂರಿನಿಂದ ಸುಮಾರು ೫೦ ಕಿ. ಮೀ. ದೂರದಲ್ಲಿರುವ ' ಸಿರಾ ' ಎಂಬ ಊರಿನ ಮಧ್ಯದಲ್ಲಿ ರೇವಣಸಿದ್ಧೇಶ್ವರ ದೇವಾಲಯವಿದ್ದು ಅದರಲ್ಲಿ ಸುಮಾರು ಕ್ರಿ. ಶ. ೧೮೫೦ ರಲ್ಲಿ ರಚನೆಯಾದ ಭಿತ್ತಿಚಿತ್ರಗಳಿವೆ.[೧೯೯] ಈ ಚಿತ್ರಗಳು ಶೈಲಿಯಲ್ಲಿ ಹಿರಿಯೂರಿನ ಚಿತ್ರಗಳನ್ನು ಹೋಲುತ್ತಿದ್ದರೂ ಹೊರ ರೇಖೆಗಳು ದಪ್ಪನಾಗಿವೆ. ಇಲ್ಲಿ ಕೆಂಪು, ನೀಲಿ, ವರ್ಣವನ್ನು ಹೆಚ್ಚಾಗಿ ಬಳಸಿದ್ದರೂ ಚಿತ್ರಗಳು ಕಣ್ಣಿಗೆ ಪ್ರಖರತೆಯನ್ನು ಉಂಟುಮಾಡುವದಿಲ್ಲ. ಮೈಸೂರು ಜಿಲ್ಲೆಯಲ್ಲಿರುವ ಮುಡುಕು ತೊರೆಯಲ್ಲಿನ ಮಲ್ಲಿಕಾರ್ಜುನ ದೇವಾಲಯದ ಪ್ರಾಂಗಣದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಕಲ್ಯಾಣ ಮಂಟಪ ಒಂದನ್ನು ಕಟ್ಟಿಸಿ ಅದನ್ನು ವರ್ಣಚಿತ್ರಗಳಿಂದ ಅಲಂಕರಿಸಲಾಯಿತು ಎಂದು ತಿಳಿದುಬರುತ್ತದೆ.[೨೦೦] ಗಿರಿಜಾ ಕಲ್ಯಾಣದ ಕಥೆಯ ಘಟನೆಗಳನ್ನು ಇಲ್ಲಿ ಹಂತಹಂತವಾಗಿ ನಿರೂಪಿಸಲಾಗಿದೆ. ಶಿವತಾಂಡವ ನೃತ್ಯ, ವಾದ್ಯಧಾರಿಗಳಾದ ಬ್ರಹ್ಮ, ವಿಷ್ಣು, ಸರಸ್ವತಿ ಮುಂತಾದ ದೇವತೆಗಳು, ಸಪ್ತಋಷಿಗಳು, ಕಾಳಿ, ವೀರಭದ್ರ ಮೊದಲಾದ ಚಿತ್ರಗಳು ಇಲ್ಲಿ ರಚನೆಯಾಗಿವೆ. ಇವು ಕ್ರಿ. ಶ. ೧೮೫೦ ರಲ್ಲಿ ರಚನೆಯಾಗಿವೆ.

---

೧೯೮. ಎಂ. ಎಚ್. ಕೃಷ್ಣಯ್ಯ : ಶೃಂಗಾರ ಲಹರಿ. ಪುಟ - ೭೩

೧೯೯. ಬಿ. ವ್ಹಿ. ಕೆ. ಶಾಸ್ತ್ರಿ : ಕರ್ನಾಟಕದ ಭಿತ್ತಿಚಿತ್ರಗಳು. ಪುಟ - ೧೪

೨೦೦. – ಅದೇ – ಪುಟ -೧೫

ಕರ್ನಾಟಕದಲ್ಲಿ ಕ್ರಿ. ಶ. ೧೯ ನೇ ಶತಮಾನದ ಭಿತ್ತಿಚಿತ್ರಗಳ ಅತಿದೊಡ್ಡ ಭಂಡಾರವೆಂದರೆ ಮೈಸೂರು ನಗರವೆನ್ನಬಹುದು. ಇಲ್ಲಿನ ಜಗನ್ಮೋಹನ ಬಂಗಲೆಯಲ್ಲಿ, ಕೋಟೆಯಲ್ಲಿರುವ ವರಾಹಸ್ವಾಮಿ ಮತ್ತು ಪ್ರಸನ್ನ ಕೃಷ್ಣಸ್ವಾಮಿ ದೇವಾಲಯ ಹಾಗೂ ಕೋಟೆಯ ಹೊರಗಿರುವ ವೆಂಕಟರಮಣ ಸ್ವಾಮಿ ದೇವಾಲಯಗಳಲ್ಲಿ ಮೈಸೂರು ಅರಸರು ಬರೆಸಿದ ಈ ಕಾಲದ ಭಿತ್ತಿಚಿತ್ರಗಳಿವೆ.[೨೦೧] ಕೋಟೆಯ ಹೊರಗಿರುವ ವೆಂಕಟರಮಣ ದೇವಾಲಯವು ೧೯ ನೇ ಶತಮಾನದಲ್ಲಿ ಕಟ್ಟಲಾದುದು. ಈ ದೇವಾಲಯದ ಮಾಳಿಗೆ ಮೇಲಿರುವ ಮಂಟಪದಲ್ಲಿ ಚಿತ್ರಗಳಿವೆ. ಇದು ದೇವಾಲಯಕ್ಕೆ ಹೊಂದಿಕೊಂಡಂತಿರುವ ಅದಕ್ಕೆ ಸಂಬಂಧಿಸಿದ್ದೇ ಆದ ಪ್ರತ್ಯೇಕ ಚಿತ್ರಮಂಟಪವಾಗಿದೆ. ಇಂತಹ ಚಿತ್ರಮಂಟಪಗಳ ಉಲ್ಲೇಖವು ಕಾವ್ಯಗಳಲ್ಲಿ ಕಂಡುಬರುತ್ತದೆ.

ಆದರೆ ಕರ್ನಾಟಕದಲ್ಲಿ ಇಂತಹ ಚಿತ್ರಮಂಟಪಗಳು ಉಳಿದಿರುವ ನಿದರ್ಶನ ಇದೊಂದೇ ಆಗಿದೆ. ಮಂಟಪದ ಗೋಡೆಗಳನ್ನು ಅಂಕಣಗಳಾಗಿ ವಿಭಜಿಸಿಕೊಂಡು ಆ ಅಂಕಣಗಳಲ್ಲಿ ಚಿತ್ರ ರಚಿಸಲಾಗಿದೆ. ಮೈಸೂರ ಅರಸರು, ಅವರ ವಂಶಾವಳಿ, ತೀರ್ಥಕ್ಷೇತ್ರಗಳನ್ನು ಪ್ರತಿನಿಧಿಸುವ ಸಾಂಕೇತಿಕ ಚಿತ್ರಗಳು, ವ್ಯಾಸರಾಯರು, ಮದ್ವಾಚಾರ್ಯರು, ಹನುಮಂತ ಭೀಮರು, ದಿವಾನ್ ಪೂರ್ಣಯ್ಯ ಮತ್ತು ಇತರ ಅಧಿಕಾರಿಗಳು ಮುಂತಾದ ಚಿತ್ರಗಳು ಇಲ್ಲಿವೆ. ವರಾಹ ಸ್ವಾಮಿ ದೇವಸ್ಥಾನ ಕೋಟೆಯಲ್ಲಿ ಅರಮನೆಯ ಆಗ್ನೇಯ ದಿಕ್ಕಿನಲ್ಲಿರುವ ಈ ದೇವಾಲಯವನ್ನು ದಿವಾನ್ ಪೂರ್ಣಯ್ಯನವರು ಕಟ್ಟಿಸಿದರು. ಈ ದೇವಾಲಯದ ಗೋಡೆಗಳ ಮೇಲೆ ಭಿತ್ತಿಚಿತ್ರಗಳನ್ನು ಬರೆಸಲಾಗಿದೆ. ರಾಮಾಯಣ ಮತ್ತು ಭಾಗವತದ ಕಥೆಯನ್ನಾಧರಿಸಿದ ಚಿತ್ರಗಳನ್ನು ಚಿಕ್ಕಚಿಕ್ಕ ಅಂಕಣ ಮಾಡಿಕೊಂಡು ಅದರಲ್ಲಿ ಚಿತ್ರಿಸಲಾಗಿದೆ. ಇಲ್ಲಿರುವ ದೊಡ್ಡ ಚಿತ್ರವೆಂದರೆ ಶ್ರೀರಾಮ ಪಟ್ಟಾಭಿಷೇಕದ ದೃಶ್ಯವಾಗಿದೆ. ವರ್ಣಶೋಭೆಯು ಕಾಂತಿಯಿಂದ ಕೂಡಿದೆ.

**ಪ್ರಸನ್ನ ಕೃಷ್ಣಸ್ವಾಮಿ ದೇವಾಲಯ :** ಅರಮನೆಯ ಸಮೀಪವೇ ದಕ್ಷಿಣ ದಿಕ್ಕಿಗಿರುವ ಈ ದೇವಾಲಯದ ಗೋಡೆಗಳಲ್ಲಿ ಭಾಗವತ ಹಾಗೂ ಕೃಷ್ಣ ಕಥಾನಕಗಳು ರಚನೆಯಾಗಿವೆ. ವರ್ಣಗಳು ಪ್ರಖರವಾಗಿದ್ದು ಸಾಮಾನ್ಯ ನೋಡುಗರನ್ನೂ ಸೆಳೆಯುತ್ತವೆ.

**ಜಗನ್ಮೋಹನ ಬಂಗಲೆ :** ಜಗನ್ಮೋಹನ ಬಂಗಲೆಯನ್ನು ಮುಮ್ಮಡಿ ಕೃಷ್ಣರಾಜ ಒಡೆಯರು ಕ್ರಿ. ಶ. ೧೮೬೦ ರಲ್ಲಿ ಕಟ್ಟಿಸಿ ಅದರ ಗೋಡೆಗಳಲ್ಲಿ ಭಿತ್ತಿಚಿತ್ರಗಳನ್ನು ಬರೆಸಿದರು. ಎರಡು ಮಹಡಿಗಳುಳ್ಳ ಈ ಕಟ್ಟಡದಲ್ಲಿ ಮೇಲಿನ ಮಹಡಿಯಲ್ಲಿ ಮಾತ್ರ ಭಿತ್ತಿಚಿತ್ರಗಳಿವೆ. ಮಹಡಿ ಮೇಲಿನ ವಿಶಾಲ ಪ್ರಾಂಗಣದ ಪಶ್ಚಿಮ ದಿಕ್ಕಿನ ಗೋಡೆಯಲ್ಲಿ ಮೈಸೂರು ಅರಸರ ವಂಶವೃಕ್ಷವನ್ನು ಪ್ರತಿಬಿಂಬಿಸುವ ' ಸಂತಾನಾಂಭುಜ ' ಎಂಬ ಚಿತ್ರವಿದೆ. ಇದರ ಅಕ್ಕಪಕ್ಕದಲ್ಲಿ ಭಾರತದ ಮತ್ತು ಕೆಲವು ಹೊರದೇಶದ ರಾಜರುಗಳ ಚಿತ್ರ ರಚಿಸಲಾಗಿದೆ. ನಿಜಾಂ ಅಲಿಖಾನ್, ನವಾಬ್ ಹೈದರಲಿ ಟಿಪ್ಪುಸುಲ್ತಾನ್ ಮುಂತಾದವರನ್ನು ಇಲ್ಲಿ ಚಿತ್ರಗಳಲ್ಲಿ ಕಾಣಬಹುದು. ದಕ್ಷಿಣ ಗೋಡೆಯಲ್ಲಿ ಮುಖ್ಯವಾಗಿ ಮೈಸೂರು ದೊರೆಗಳ ಜಂಬೂಸವಾರಿಯ ದೀರ್ಘವಾದ ಸಾಲುಗಳಿವೆ. ಪೂರ್ವ ಭಾಗದ ಗೋಡೆಯಲ್ಲಿ ಪಶುಗಳು, ಸುಂದರಿಯರು, ಕೆಲವು ಬೇಟೆಯ ದೃಶ್ಯಗಳು ಕಂಡುಬರುತ್ತವೆ.

---

೨೦೧. ಬಿ. ವ್ಹಿ. ಕೆ. ಶಾಸ್ತ್ರಿ : ಕರ್ನಾಟಕದ ಭಿತ್ತಿಚಿತ್ರಗಳು, ಪುಟ - ೧೪ - ೧೫

ಈ ಪ್ರಾಂಗಣದ ಉತ್ತರ ದಿಕ್ಕಿನಲ್ಲಿರುವ ಕೋಣೆಯೊಂದರ ಗೋಡೆಯ ಮೇಲೆ ' ಕಲ್ಪ ದ್ರುವಮ್ ' ಎಂಬ ಚಿತ್ರವಿದೆ. ಮುಮ್ಮಡಿ ಕೃಷ್ಣರಾಜ ಒಡೆಯರ ಸಾಂಸಾರಿಕ ಸಂಬಂಧವನ್ನೆಲ್ಲ ಒಂದು ಮರದ ರೂಪದಲ್ಲಿ ಸಾಂಕೇತಿಸಿ ಚಿತ್ರಿಸಲಾಗಿದೆ. ಉತ್ತರ ದಿಕ್ಕಿನ ಕೋಣೆಗೆ ಎದುರಾಗಿ ಇರುವ ದಕ್ಷಿಣ ದಿಕ್ಕಿನ ಕೋಣೆಯ ಗೋಡೆಯ ಮೇಲೆ ವಸಂತೋತ್ಸವದ ಚಿತ್ರವಿದೆ. ಈ ದೃಶ್ಯದಲ್ಲಿ ಹಿನ್ನೆಲೆಯಲ್ಲಿ ಅರಮನೆ ಚಿತ್ರಿತವಾಗಿದೆ. ಅರಮನೆಯ ಮಹಡಿಯ ಮೇಲೆ ರಾಣಿಯರು ನಿಂತಿದ್ದಾರೆ. ಹಂಸಪೀಠದ ಮೇಲೆ ಮುಮ್ಮಡಿ ಕೃಷ್ಣರಾಜ ಒಡೆಯರು ಇದ್ದು, ಮುಂಭಾಗದಲ್ಲಿ ಕೊಳಗಗಳನ್ನು ಚಿತ್ರಿಸಲಾಗಿದೆ. ಮೃದಂಗ, ವೀಣೆ, ತಂಬೂರಿ ಮುಂತಾದ ಅನೇಕ ವಾದ್ಯ ಪರಿಕರಗಳನ್ನು ಹಲವು ಸ್ತ್ರೀಯರು ನುಡಿಸುತ್ತಲಿದ್ದು ಇನ್ನು ಕೆಲವು ಸ್ತ್ರೀಯರು ವಸಂತೋತ್ಸವ ನೃತ್ಯ ಮಾಡುತ್ತಿದ್ದಾರೆ. ವರ್ಣವಿನ್ಯಾಸವು ಉಜ್ವಲವಾಗಿದ್ದು ವಿಷಯಕ್ಕೆ ಪೂರಕವಾಗಿದೆ.

ಇವುಗಳಲ್ಲದೇ [೨೦೨] ಚನ್ನಪಟ್ಟಣ ತಾಲೂಕಿನ ನಲ್ಲಪ್ಪ ಅರಮನೆ, ಮಂಡ್ಯ ಜಿಲ್ಲೆಯ ನಾಗಮಂಗಲದಲ್ಲಿರುವ ಸೌಮ್ಯಕೇಶವ ದೇವಾಲಯ (೧೯ ನೇ ಶತಮಾನ), ಕೊಳ್ಳೇಗಾಲದ ಪರಿವಾರದವರ ಚಾವಡಿ (೧೮೫೦), ಟಿ. ನರಸೀಪುರ ತಾಲೂಕು ಮುಡುಕು ತೊರೆ ಮಲ್ಲಿಕಾರ್ಜುನ ದೇವಾಲಯ (೧೮೫೦), ಟಿ. ನರಸೀಪುರ ಅಗಸ್ತ್ಯೇಶ್ವರ ದೇವಾಲಯ, ಕುಲಗಾಣ ಬಸವೇಶ್ವರ ದೇವಾಲಯ, ಕೆ. ಆರ್. ನಗರ ತಾಲೂಕಿನ ಸಾಲಿಗ್ರಾಮ ಪಾರ್ಶ್ವನಾಥ ಬಸದಿ (೧೮೭೮), ಚುಂಚನಕಟ್ಟೆಯ ರಾಮದೇವಾಲಯ, ಗುಂಡ್ಲುಪೇಟೆ ತಾಲೂಕು ಕೋಟಕೆರೆ ಗೋಪಾಲಕೃಷ್ಣ ದೇವಾಲಯ, ಮಡಿಕೇರಿಯ ಅರಮನೆ (೧೮೧೫), ಕಾರ್ಕಳದ ಜೈನಮಠ, ಕಾರ್ಕಳ ತಾಲೂಕಿನ ಬಜಗೋಳಿಯ ಅಪ್ಪಾಯಿ ಬಸದಿ, ಉಡುಪಿ ತಾಲೂಕಿನ ಉಗ್ಗಲ್‌ಬೆಟ್ಟುವಿನ ಬ್ರಹ್ಮ ಬೈದರ್ಕಳ ಗರಡಿ (೧೮೩೦), ಉಡುಪಿಯ ಅನಂತೇಶ್ವರ ದೇವಾಲಯ, ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲೂಕು ವಸ್ತಾರೆ ಪದ್ಮಾವತಿ ದೇವಾಲಯ, ಹಾಸನದ ದೊಡ್ಡಬಸದಿ ಮತ್ತು ಸಿದ್ಧೇಶ್ವರ ದೇವಾಲಯ, ಹೊಳೇನರಸೀಪುರದ ಜೈನ ಬಸದಿ, ಹರಿಹರದ ಹರಿಹರೇಶ್ವರ ದೇವಾಲಯದಲ್ಲಿನ ಲಕ್ಷ್ಮೀಗುಡಿ, ರಾಯಚೂರು ಖಾಜಿನ ಗೌಡರ ವಾಡೆ, ಸುರಪುರದ ಅರಮನೆ, ರಂಗಮ್ ಪೇಟೆಯ ಅಣ್ಣಯ್ಯನ ಮಠ, ಮಹಾಲಿಂಗಪುರದ ಮಹಾಲಿಂಗೇಶ್ವರ ಮಠ (೧೮೫೬), ನಿಪ್ಪಾಣಿಯ ನಿಪ್ಪಾಣಿಕರ್ ವಾಡೆ, ತುಮಕೂರು ಜಿಲ್ಲೆಯ ಸಿರಾದಲ್ಲಿನ ರೇವಣಸಿದ್ಧೇಶ್ವರ ದೇವಾಲಯ (೧೮೫೦), ಕುಣಿಗಲ್‌ನ ಅಮೃತೂರು ಲಕ್ಷ್ಮೀ ದೇವಾಲಯ, ತುಮಕೂರು ತಾಲೂಕು ಮಿಂಚುಕಲ್ಲು ಗೊಲ್ಲಹಳ್ಳಿಯ ಆಂಜನೇಯ ದೇವಾಲಯ, ಕೋಲಾರ ಜಿಲ್ಲೆಯ ಮುಳುಬಾಗಿಲು ತಾಲೂಕು ಆಂಜನೇಯ ದೇವಾಲಯ (೧೮೭೦) ಸುಮಾರಿನ ಬೆಳಗಾಂವ ಜಿಲ್ಲೆಯ ಸಂಕೇಶ್ವರ ವರ್ತಕರೊಬ್ಬರ ಮನೆಯಲ್ಲಿ ಕ್ರಿ. ಶ. ೧೯ ನೇ ಶತಮಾನದ ಭಿತ್ತಿಚಿತ್ರಗಳು ಇತ್ತೀಚೆಗೆ ಕಂಡುಬಂದಿವೆ.

ಕ್ರಿ. ಶ. ೨೦ ನೇ ಶತಮಾನದಲ್ಲಿ ಕೂಡಾ ಭಿತ್ತಿಚಿತ್ರಕಲೆ ನಿಲ್ಲದಂತೆ ಬೆಳೆದುಬಂದಿದೆ. ಮಂಡ್ಯ ಜಿಲ್ಲೆಯ ನಾಗಮಂಡಲ ತಾಲೂಕಿನ ಮೇಲುಕೋಟೆಯ ಶ್ರೀವೈಷ್ಣವ ಮಠ (೧೯೧೪), ಯಲ್ಲಾದ ಹಳ್ಳಿಯ ಲಕ್ಷ್ಮೀ ದೇವಾಲಯ (೧೯೦೬), ಮಂಗಳೂರಿನ ಸೇಂಟ ಅಲಾಯಿಸೆಸ್ ಚರ್ಚ, ಕುಲಶೇಖರ ಚರ್ಚ, ಜಪ್ಪೋ ಚರ್ಚ (೧೯೦೨) ಬಂಟ್ವಾಳದ

---

೨೦೨. ಹೆಚ್ಚಿನ ವಿವರಗಳಿಗೆ ನೋಡಿ : ಡಾ|| ಅ. ಲ. ನರಸಿಂಹನ್ : ಕರ್ನಾಟಕದ ಭಿತ್ತಿಚಿತ್ರ ಪರಂಪರೆ, ಪುಟ - ೯೩ - ೯೬

ಅಗರಾರ್ ಚರ್ಚ್, ತುಮಕೂರು ಜಿಲ್ಲೆ ತ್ಯಾಗೊಂಡ್ಲುವಿನ ಲಕ್ಷ್ಮೀ ದೇವಾಲಯ, ತುರುವೇಕೆರೆ ಬಳಿಯ ಬೆನಕನಕೆರೆ ಮುಂತಾದ ಕಡೆಗೆ ಕ್ರಿ. ಶ. ೨೦ ನೇ ಶತಮಾನದಲ್ಲಿ ರಚನೆಯಾದ ಚಿತ್ರಗಳಿವೆ.[೨೦೩] ಹೀಗೆ ಪ್ರಾಗೈತಿಹಾಸಿಕ ಕಾಲದಿಂದ ಬೆಳೆದುಬಂದ ಭಿತ್ತಿ ಚಿತ್ರಕಲೆ ಈಗಲೂ ತನ್ನ ವಿಶಿಷ್ಟತೆಯನ್ನು ಉಳಿಸಿಕೊಂಡಿದೆ. ದೇವಾಲಯಗಳಲ್ಲಿ, ಮಠಮಾನ್ಯಗಳಲ್ಲಿ, ಈಗಲೂ ಭಿತ್ತಿಚಿತ್ರ ರಚನೆಯಾಗುತ್ತಲಿದೆ. ಇತ್ತೀಚೆಗೆ ಭಿತ್ತಿಚಿತ್ರಕಲೆಯನ್ನು ವಾಣಿಜ್ಯಕರಣಕ್ಕಾಗಿ ಉಪಯೋಗಿಸುತ್ತಿದ್ದು ತನ್ನ ಪರಿಮಿತಿಯನ್ನು ಹೆಚ್ಚಿಸಿಕೊಂಡಿದೆ ಎನ್ನಬಹುದು. ವ್ಯಾಪಾರೀ ಸಂಸ್ಥೆಯೊಂದು ತನ್ನ ಉತ್ಪನ್ನಗಳ ಬಗ್ಗೆ ಹೆಚ್ಚು ಜನರಿಗೆ ತಿಳಿಸಲು ಉಪಯೋಗಿಸುವ ತಂತ್ರಗಳಲ್ಲಿ ಭಿತ್ತಿಚಿತ್ರಕಲೆಯೂ ಒಂದಾಗಿದೆ. ಹೆಚ್ಚಿನ ಜನಸಂಪರ್ಕವಿರುವ ಸ್ಥಳಗಳಲ್ಲಿ ಗೋಡೆಗಳ ಮೇಲೆ ಜಾಹೀರಾತುಗಳನ್ನು ಬರೆದು ತಮ್ಮ ಉತ್ಪನ್ನಗಳ ಚಿತ್ರ ರಚಿಸಿ ಜನರನ್ನು ಆಕರ್ಷಿಸುವುದು ಇಂದು ಹೆಚ್ಚಾಗಿದೆ. ಇದಲ್ಲದೇ ಕೆಲವು ದೊಡ್ಡ ದೊಡ್ಡ ಹೊಟೇಲ್‌ಗಳಲ್ಲಿ ಭಿತ್ತಿಚಿತ್ರಗಳನ್ನು ಬರೆದು ಅಲಂಕರಿಸುವುದು ಈಗ ಪ್ರತಿಷ್ಠೆಯಾಗಿ ಉಳಿದುಕೊಂಡಿದೆ.

ಕ್ರಿ. ಪೂ. ಕಾಲದಿಂದಲೇ ರಚನೆಯಾಗುತ್ತಲಿರುವ ಶಿಷ್ಟ ಪರಂಪರೆಯ ಭಿತ್ತಿಚಿತ್ರಕಲೆಯ ಜೊತೆಗೆ ಪ್ರಾಗೈತಿಹಾಸ ಕಾಲದಿಂದಲೇ ಜನಪದ ಭಿತ್ತಿಚಿತ್ರಕಲೆಯೂ ಬೆಳೆಯುತ್ತ ಬಂದಿದೆ. ಜನಪದ ಭಿತ್ತಿಚಿತ್ರಕಲೆಯೂ ಮನೆಗಳಲ್ಲಿ, ಮಠಮಾನ್ಯಗಳಲ್ಲಿ, ದೇವಾಲಯಗಳಲ್ಲಿ, ತುಳಸೀಕಟ್ಟೆ, ಸಮಾಧಿ, ಗದ್ದುಗೆ, ಗರಡೀಮನೆ ಮುಂತಾದವುಗಳ ಮೇಲೆ ಅಲ್ಲದೇ ಹಬ್ಬ-ಹರಿದಿನ, ಮದುವೆ-ಮುಂಜಿವೆ, ಜಾತ್ರೆ-ಉತ್ಸವ, ಹೀಗೆ ಕೆಲವು ನಿರ್ಧಿಷ್ಟಪಡಿಸಿದ ಆಚರಣೆಯ ದಿನಗಳಲ್ಲಿ ರಚನೆಯಾಗುತ್ತ ಬಂದಿದೆ.[೨೦೪] ಹೀಗೆ ಈ ಭಿತ್ತಿಚಿತ್ರಕಲೆಯ ಪರಂಪರೆಯು ಇವತ್ತಿನವರೆಗೂ ರಚನೆಯಾಗುತ್ತಲೇ ಇದೆ. ಪ್ರಾಚೀನ ಕಾಲದಿಂದಲೂ ಪ್ರಾಗೈತಿಹಾಸಿಕ ಮತ್ತು ಜನಪದ, ಶಿಷ್ಟಪದ ಅಲ್ಲದೆ ಸಮ್ಮಿಶ್ರಣದ ಮಾದರಿಯ ಭಿತ್ತಿಚಿತ್ರಕಲೆಯು ವಿವಿಧ ಮಾಧ್ಯಮಗಳಲ್ಲಿ ರಚನೆಯಾಗುತ್ತ ಬೆಳವಣಿಗೆಯಾಗಿರುವದನ್ನು ಕಾಣಬಹುದಾಗಿದೆ.

---

೨೦೩. ಹೆಚ್ಚಿನ ವಿವರಗಳಿಗೆ ನೋಡಿ : ಡಾ॥ ಅ. ಲ. ನರಸಿಂಹನ್ : ಕರ್ನಾಟಕದ ಭಿತ್ತಿಚಿತ್ರ ಪರಂಪರೆ, ಪುಟ - ೧೯೩ - ೯೬

೨೦೪. ಹೆಚ್ಚಿನ ವಿವರಗಳಿಗೆ ನೋಡಿ : ಡಾ॥ ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪುಟ - ೪೯

ಭಿತ್ತಿ ಸಿದ್ಧತಾ ವಿಧಾನವನ್ನು ಮೂರು ರೀತಿಯಲ್ಲಿ ವಿಭಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ. I. ಭಿತ್ತಿ, II. ಭಿತ್ತಿ ಸಿದ್ಧತಾ ಹಂತ, III. ಭಿತ್ತಿಯ ಭಿನ್ನ ಮಾಧ್ಯಮಗಳು. ಇವುಗಳನ್ನು ಒಂದೊಂದಾಗಿ ನೋಡಬಹುದು.

## I. ಭಿತ್ತಿ

ಇದು ಚಿತ್ರ ರಚಿಸುವ ಆಧಾರದ ಮೇಲೆ ಲೇಪಿಸುವ ಮಿಶ್ರಣದ ಪದರವಾಗಿದೆ. ಭಾರತೀಯ ಶಿಲ್ಪಶಾಸ್ತ್ರಗಳು ಭಿತ್ತಿ, ಭೂಮಿ, ಕುಡ್ಯ ಎಂಬ ಹೆಸರುಗಳಿಂದ ಈ ಮಿಶ್ರಣ ಲೇಪನದ ಪದರನ್ನು ಹೆಸರಿಸಿವೆ. [೧] ವಿವಿಧ ವಸ್ತುಗಳನ್ನು ಉಪಯೋಗಿಸಿ ಭಿತ್ತಿಯನ್ನು ನಿರ್ಮಿಸಲಾಗುತ್ತದಲ್ಲದೇ, ಬೇರೆ ಬೇರೆ ಪ್ರಕಾರದ ಭಿತ್ತಿಗಳನ್ನು ಸಿದ್ಧಗೊಳಿಸಲಾಗುತ್ತದೆ. [೨] ಎಂಬ ವಿವರಗಳು ದೊರೆಯುತ್ತವೆ. ಭಾರತೀಯ ಭಿತ್ತಿಚಿತ್ರ ಇತಿಹಾಸದಲ್ಲಿ ಪ್ರಮುಖವಾಗಿ ಎರಡು ಪ್ರಕಾರದ ಭಿತ್ತಿಗಳನ್ನು ಗುರುತಿಸಬಹುದು. [೩]

೧. ಮಣ್ಣಿನ ಭಿತ್ತಿ (Mud Plaster)

೨. ಗಾರೆ ಭಿತ್ತಿ (Lime Plaster Ground)

**೧. ಮಣ್ಣಿನ ಭಿತ್ತಿ (Mud Plaster) :** ಮಣ್ಣಿನ ಭಿತ್ತಿ ರಚಿಸುವ ವಿಧಾನವು ಈಜಿಪ್ತದಲ್ಲಿ ಕ್ರಿ. ಪೂ. ೩೫೦೦ (ಮೂರು ಸಾವಿರದ ಐನೂರು) ವರ್ಷಗಳಿಗೂ ಪೂರ್ವದಲ್ಲೇ ಬಳಕೆಯಲ್ಲಿತ್ತು. ಭಾರತದ ಪ್ರಾಚೀನ ಮತ್ತು ಕೆಲವು ಮಧ್ಯಯುಗೀನ ಭಿತ್ತಿಚಿತ್ರಗಳಲ್ಲಿ ಈ ವಿಧಾನ ಬಳಕೆಗೊಂಡಿದೆ. ಮಣ್ಣಿನ ಭಿತ್ತಿ ರಚಿಸುವ ವಿಧಾನವು ಕ್ರಿ. ಶ. ೬ ನೇ ಶತಮಾನದ ವರೆಗೂ ಹೆಚ್ಚಾಗಿ ಬಳಕೆಯಲ್ಲಿತ್ತು [೪] ಎಂಬ ವಿವರ ದೊರೆಯುತ್ತದೆ. ಮಣ್ಣಿನ ಭಿತ್ತಿ ನಿರ್ಮಾಣಕ್ಕೆ ಮೂರು ವಿಧದ ಮಣ್ಣು ಉಪಯೋಗಿಸಬಹುದೆಂದು 'ಕಾಶ್ಯಪ ಶಿಲ್ಪಶಾಸ್ತ್ರ' ಹೇಳುತ್ತದೆ. [೫]

i) ಜಾಂಗಲ

ii) ಅನುರೂಪ

iii) ಸಮ್ಮಿಶ್ರ

---

೧. Jayanth Chakravarthi : Techniques in Indian Mural Painting, Page - 20

೨. Ibid., Page - 21

೩. Ibid., Page - 35

೪. Jayanth Chakravarthi : Techniques in Indian Mural Painting, Page - 23

೫. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ, ಅಧ್ಯಾಯ ೮೬, ಪುಟ - ೬೪೮

**i) ಜಾಂಗಲ :** ಸುಲಭವಾಗಿ ಅಗೆಯಲು ಸಾಧ್ಯವಾಗದ ಬಹುಗಟ್ಟಿಯಾದ ಭೂಮಿಯಿಂದ ಅಗೆದು ತೆಗೆದ ಮಣ್ಣಿಗೆ ಜಾಂಗಲವೆಂದು ಹೆಸರು.

**ii) ಅನುರೂಪ :** ಸುಣ್ಣ ಮರಳು ಬೆರೆತಿದ್ದು ಹೆಚ್ಚಿನ ಶ್ರಮವಿಲ್ಲದೇ ಅಗೆಯಲು ಬರುವಂತಹ ಭೂಮಿಯಲ್ಲಿ, ಹಳ್ಳವು ಮೂರುಮೊಳ ಆಳವಾಗಿದ್ದರೂ ಭೂಮಿಯು ಮನೋಹರವಾಗಿದ್ದರೆ ಅಲ್ಲಿ ಸಿಗುವ ಮಣ್ಣಿಗೆ 'ಅನುರೂಪ' ವೆಂದು ಕರೆಯುವರು.

**iii) ಸಮ್ಮಿಶ್ರ :** ಈ ಎರಡೂ ಬಗೆಯ ಮಣ್ಣ ಬೆರೆತಿದ್ದರೆ ಅದನ್ನು 'ಸಮ್ಮಿಶ್ರ' ವೆಂದು ಹೇಳುತ್ತಾರೆ.

ಮಣ್ಣಿನ ಭಿತ್ತಿಯು ಒಂದರ ಮೇಲೊಂದರಂತೆ ಹಲವಾರು ಪದರುಗಳನ್ನು ಹೊಂದಿರುತ್ತದೆ. ತೀರ ಮೇಲಿನ ಪದರು ಅತೀ ತೆಳುವಾಗಿ ನಿರ್ಮಿಸಲಾಗಿರುತ್ತದೆ. ಗೋಡೆಗೆ ಮೆತ್ತಿದ ಈ ಮಣ್ಣಿನ ಭಿತ್ತಿಯು ಸೀಳದಂತೆ, ಕಳಚಿಬೀಳದಂತೆ ಮಣ್ಣಿನಲ್ಲಿ ಒಣಹುಲ್ಲು, ಹೊಟ್ಟು, ಕೂದಲುಗಳಂತಹ ನಾರು ಪದಾರ್ಥಗಳನ್ನು ಸೇರಿಸಲಾಗುತ್ತದೆ. ಈ ನಾರು ಪದಾರ್ಥಗಳು ಮಿಶ್ರಣವು ಗಟ್ಟಿಯಾಗಿ ಕುಳಿತುಕೊಳ್ಳಲು ಸಹಾಯ ಮಾಡುತ್ತವೆ. ಆಕಳ ಸೆಗಣಿಯನ್ನು ಈ ಮಿಶ್ರಣಕ್ಕೆ ಸೇರಿಸುವದಿದೆ. ಸೆಗಣಿ ಸೇರಿಸಿದಾಗ ಭಿತ್ತಿಯ ಮಿಶ್ರಣದ ಮೆದುತನ ಹೆಚ್ಚಾಗುತ್ತದೆ. ಆದರೆ ಇದರಿಂದ ಭಿತ್ತಿಯು ಕೀಟಗಳ ದಾಳಿಗೆ ಒಳಗಾಗುತ್ತದೆ. ಕಾರಣ ಸೆಗಣಿಯು ಒಂದು ಸಾವಯವ ವಸ್ತು ಆಗಿರುವದರಿಂದ ಕೀಟಗಳ ಸಹಜ ಆಹಾರವಾಗುವುದಲ್ಲದೇ ಇದರಿಂದ ಭಿತ್ತಿಯು ಬಹುಬೇಗ ಶಕ್ತಿಹೀನವಾಗುತ್ತದೆ [೬] ಎಂಬ ವಿವರಗಳು ಮಣ್ಣಿನ ಭಿತ್ತಿಯ ಅಲ್ಪಾಯುಷ್ಯವನ್ನು ತಿಳಿಸುತ್ತವೆ.

ಮಣ್ಣಿನ ಭಿತ್ತಿಯು ಅಜಂತಾ, ಭಾಗ್, ಸಿತ್ತನಿವಾಸಲ್‌ಗಳಲ್ಲಿ [೭] ಕಂಡುಬರುತ್ತದೆ ಎನ್ನಲಾಗಿದ್ದು, ಉತ್ತರ ಕರ್ನಾಟಕದಲ್ಲಿ ಬೆಳಗಾಂವ ಜಿಲ್ಲೆಯ ನಿಪ್ಪಾಣಿ ರಾಜವಾಡೆ, ಅಥಣಿಯ ಗಚ್ಚಿನ ಮಠ, ಹಳೆಯ ವಾಡೆ, [೮] ಗುಲಬರ್ಗಾ ಜಿಲ್ಲೆಯ ಸುರಪುರದ ಅಣ್ಣಯ್ಯನ ಮಠ, ಬಾಗಲಕೋಟ ಜಿಲ್ಲೆಯ ಗುಳೇದಗುಡ್ಡದ ಹೊಸಮನಿಗೌಡರ ಮನೆ, ಗದಗ ಜಿಲ್ಲೆಯ ನರಗುಂದದ ವೆಂಕಟೇಶ್ವರ ದೇವಸ್ಥಾನದ ಭಿತ್ತಿಚಿತ್ರ, ರಚನೆಗಾಗಿ ಮಣ್ಣಿನ ಭಿತ್ತಿ ರಚಿಸಿದ್ದು ಕಂಡುಬರುತ್ತದೆ.

**೨. ಗಾರೆ ಭಿತ್ತಿ :** ಗಾರೆ ಭಿತ್ತಿ ರಚನೆಯಲ್ಲಿ ಸುಣ್ಣವು ಪ್ರಮುಖ ವಸ್ತು. ಅದರ ಜೊತೆಗೆ ಉಸುಕು, ಕಲ್ಲಿನ ಪುಡಿ, ವಜ್ರಸರಿ, ಇವುಗಳನ್ನು ಉಪಯೋಗಿಸಲಾಗುತ್ತದೆ. [೯] ಎಂಬುದಾದರೂ ಜೊತೆಗೆ ಸೇರಿಸುವ ಪೂರಕ ವಸ್ತುಗಳಲ್ಲಿ

---

೬. J. C. Nagpal : Mural Paintings in India, Page - 25

೭. – ಅದೇ –

೮. ಅಥಣಿಯ ಗಚ್ಚಿನಮಠ ಮತ್ತು ಹಳೆಯ ವಾಡೆಗಳಲ್ಲಿ ಈಗ ಭಿತ್ತಿಚಿತ್ರಗಳು ಇಲ್ಲ. ಸಂಪೂರ್ಣ ಹಾಳಾಗಿವೆ. ಗಚ್ಚಿನಮಠದಲ್ಲಿ ಚಿತ್ರಗಳಿರುವ ಗೋಡೆಯನ್ನು ಸಿಮೆಂಟ್ ಮಾಡಿದ್ದರೆ. ಹಳೆಯ ವಾಡೆಯನ್ನು ಆಧುನಿಕ ಕಟ್ಟಡವಾಗಿ ಪರಿವರ್ತಿಸಲಾಗಿದೆ. ಹಾಗಾಗಿ ಅಲ್ಲಿಯ ಭಿತ್ತಿಯ ಸ್ವರೂಪ ತಿಳಿದುಬಂದಿಲ್ಲ. ಆದರೆ ಇಲ್ಲಿಯ ಭಿತ್ತಿಗಳ ಸ್ವರೂಪ ಹೇಳುವಾಗ ಇವು ಮಣ್ಣಿನ ಭಿತ್ತಿಲೇಪನದ ಮೇಲೆ ರಚನೆಯಾಗಿವೆ ಎಂಬ ವಿಷಯವನ್ನು ಡಾ॥ ಶಿವರಾಮ ಕಾರಂತ ಅವರು ಕರ್ನಾಟಕದ ಚಿತ್ರಕಲೆ ಪುಸ್ತಕದಲ್ಲಿ (ಪುಟ ೮೯) ಹೇಳಿದ್ದಾರೆ. ಅದನ್ನೇ ನಾವು ಒಪ್ಪಬೇಕಾಗಿದೆ.

೯. Jayanth Chakravarthi : Techniques in Indian Mural Painting, Page - 26

ಲೋಳೆಸರ ಎಂಬ ಸಸ್ಯದ ರಸ, ಬೆಲ್ಲ, ಬೇಲದಕಾಯಿ, ಅಂಟು ಹೀಗೆ ವಿವಿಧ ರೀತಿಯಲ್ಲಿರುತ್ತವೆ.[೧೦] ಮಧ್ಯಯುಗದ ಹೊತ್ತಿಗೆ ಭಾರತದಲ್ಲಿ ಮಣ್ಣಿನ ಭಿತ್ತಿ ರಚನೆಯು ಕಡಿಮೆಯಾಗಿ ಗಾರೆ ಭಿತ್ತಿಯ ರಚನೆ ಹೆಚ್ಚಾಯಿತು ಎಂಬ ಅಭಿಪ್ರಾಯವಿದೆ. ಭಾರತದಲ್ಲಿ ಆಗ್ರಾದಲ್ಲಿನ ಮೊಗಲ್ ಕಟ್ಟಡಗಳಲ್ಲಿ ದೆಹಲಿಯ ಅರಬ್-ಕಿ-ಸರಾಯ್ ಕಟ್ಟಡದಲ್ಲಿನ ಭಿತ್ತಿಚಿತ್ರಗಳು ಗಾರೆ ಭಿತ್ತಿಯ ಮೇಲೆ ರಚನೆಯಾಗಿವೆ[೧೧] ಎಂಬ ಅಭಿಪ್ರಾಯವಿದ್ದು, ಉತ್ತರ ಕರ್ನಾಟಕದಲ್ಲಿ ಹಂಪೆ ವಿರುಪಾಕ್ಷ ದೇವಾಲಯ, ಕನಕಗಿರಿಯ ಕನಕಾಚಲಪತಿ ದೇವಾಲಯ, ಬಿಜಾಪುರದ ಅಸರ್ ಮಹಲ್, ಕುಮಟಗಿಯ ನೀರಿನ ಕೊಳ, ಗುಲಬರ್ಗಾದ ಬಂದೇ ನವಾಜ್ ದರ್ಗಾ, ಬೀದರಿನ ರಂಗೀನ ಮಹಲ್, ಅಸ್ತೂರಿನ ಬಹಾಮಿ ಸಮಾಧಿಗಳ ಭಿತ್ತಿಚಿತ್ರಗಳು ಗಾರೆ ಭಿತ್ತಿಯ ಮೇಲೆ ರಚಿಸಲಾಗಿವೆ.

ಮುಖ್ಯವಾಗಿ ಜಿಪ್ಸಮ್ ಇಲ್ಲವೆ ಮಾರ್ಬಲ್ ಕಲ್ಲಿನ ಪುಡಿಯನ್ನು ಭಿತ್ತಿ ರಚನೆಗಾಗಿ ಬಳಸಿದರೂ ಅದರ ಜೊತೆಗೆ ಸೂಕ್ಷ್ಮವಾದ ಮರಳು, ಅಂಟುದ್ರಾವಕ, ಕಲ್ಲಿನ ಪುಡಿ ಹೀಗೆ ವಿವಿಧ ಪೂರಕ ವಸ್ತುಗಳನ್ನು ಸೇರಿಸುವುದು[೧೨] ಕಂಡುಬರುತ್ತದೆ. ಮಾನಸೋಲ್ಲಾಸ ಗ್ರಂಥವು[೧೩] ಈ ರೀತಿಯ ಭಿತ್ತಿ ನಿರ್ಮಾಣವನ್ನೇ ಹೇಳಿದ್ದು ಚಂದಿರನ ಹಾಗೆ ಹೊಳೆಯುವ ನೀಲಗಿರಿ ಬೆಟ್ಟದಲ್ಲಿ ಮಾತ್ರ ದೊರೆಯುವ ಬಿಳಿದಾದ ಕಲ್ಲಿನ ಪುಡಿಯನ್ನು ಉಪಯೋಗಿಸಬೇಕೆಂದು ತಿಳಿಸುತ್ತದೆ. ಗಾರೆ ಭಿತ್ತಿ ಮತ್ತು ಮಾರ್ಬಲ್ ಕಲ್ಲಿನ ಪುಡಿಯ ಭಿತ್ತಿ ತಯಾರಿಕೆಯ ವಿಧಾನಗಳು ಸಾಮಾನ್ಯವಾಗಿ ಒಂದೇ ತೆರನಾಗಿವೆ[೧೪] ಎನ್ನಲಾಗಿದೆ : ಉತ್ತರ ಕರ್ನಾಟಕದಲ್ಲಿ ನರಗುಂದದ ಅರಮನೆ ಮಹಾಲಿಂಗಪುರದ ಮಹಲಿಂಗೇಶ್ವರ ಮಠ, ಅಮ್ಮಿನ ಭಾವಿಯ ಹಿರೇಮಠದ ಭಿತ್ತಿಚಿತ್ರಗಳು ಈ ತೆರನಾದ ಭಿತ್ತಿಯ ಮೇಲೆ ರಚಿಸಿವೆ.

## II. ಭಿತ್ತಿ ಸಿದ್ಧತಾ ಹಂತಗಳು

ಭಿತ್ತಿ ಸಿದ್ಧತೆಗೊಳಿಸುವ ಕ್ರಿಯೆ ಒಂದೇ ಹಂತದಲ್ಲಿ ಪೂರ್ಣಗೊಳ್ಳದೇ ಆಧಾರ ಸಂಸ್ಕರಣೆಗೊಳಿಸುವುದರಿಂದ ಹಿಡಿದು ಚಿತ್ರ ರಚನೆಗಾಗಿ ಭಿತ್ತಿಯನ್ನು ಸಜ್ಜುಗೊಳಿಸುವವರೆಗೆ ಅನೇಕ ಹಂತಗಳಲ್ಲಿ ನಡೆಯುತ್ತದೆ. ಈ ಭಿತ್ತಿ ಸಿದ್ಧತಾ ಹಂತವನ್ನು ಮುಖ್ಯವಾಗಿ ನಾಲ್ಕು ಹಂತಗಳಲ್ಲಿ ವಿಂಗಡಿಸಿಕೊಳ್ಳಬಹುದು.

೧. ಆಧಾರ ಸಂಸ್ಕರಣ ಹಂತ
೨. ಮಿಶ್ರಣ ಲೇಪನ ಹಂತ
೩. ಭಿತ್ತಿ ನುಣುಪುಗೊಳಿಸುವ ಹಂತ
೪. ಓನ್ನೆಲೆ ಲೇಪನದ ಹಂತ

**೧. ಆಧಾರ ಸಂಸ್ಕರಣ ಹಂತ :** ಯಾವ ಮಾಧ್ಯಮದ ಮೇಲೆ ಚಿತ್ರ ರಚನೆ ಮಾಡಲಾಗುತ್ತದೆಯೋ ಅದನ್ನು ಆಧಾರವೆನ್ನುತ್ತಾರೆ. ಕಲ್ಲಿನ ಗೋಡೆ, ಇಟ್ಟಿಗೆಯ ಗೋಡೆ, ಮರ, ಲೋಹ ಫಲಕ ಹಾಗೂ ಗಾಜುಗಳ ಮೇಲೆ ಭಿತ್ತಿಚಿತ್ರ

೧೦. S. Paramasivan : An Investigation in to the Methods of Mural Paintings, Page - 23
೧೧. J. C. Nagpal : Mural Paintings in India, Page - 24
೧೨. Jayanth Chakravarthi : Techniques in Indian Mural Painting, Page - 26
೧೩. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ, ಭಾಗ II, ಅಧ್ಯಾಯ I, ಶ್ಲೋಕ ೧೩, ಮತ್ತು ೧೩೭
೧೪. Jayanth Chakravarthi : ಪೂರ್ವೋಕ್ತ, ಪುಟ - ೨೫

ರಚನೆಯಾಗಿದ್ದು ಕಂಡುಬರುತ್ತದೆ. ಇಲ್ಲೆಲ್ಲ ಚಿತ್ರಗಳಿಗೆ ಅವು ಆಧಾರಗಳಾಗಿವೆ. ಆಯಾ ಮಾಧ್ಯಮದ ಮೇಲೆ ಭಿತ್ತಿ ಚಿತ್ರರಚನೆ ಮಾಡಬೇಕಾದಾಗ ಮಿಶ್ರಣ ಲೇಪನಕ್ಕಿಂತ ಮೊದಲು ಆಧಾರವನ್ನು ಸಂಸ್ಕರಣಗೊಳಿಸುವುದು [೧೫] ತಿಳಿದುಬರುತ್ತದೆಯಾದರೂ ಈ ಕುರಿತು ಹೆಚ್ಚಿನ ವಿವರಗಳು ದೊರಕುವುದಿಲ್ಲ. ಅಜಂತಾ, ಬಾದಾಮಿ ಗುಹಾಲಯಗಳ ಕಲ್ಲಿನ ಗೋಡೆಗೆ ಭಿತ್ತಿ ಲೇಪಿಸುವ ಮೊದಲು ಯಾವ ರೀತಿಯಲ್ಲಿ ಆಧಾರ ಸಂಸ್ಕರಣೆ ಮಾಡಿಕೊಂಡರೆಂಬುದು ತಿಳಿದುಬರುವುದಿಲ್ಲ. ಉರುಟಾದ ಬಂಡೆಗೆ ನೇರವಾಗಿ ಮಿಶ್ರಣ ಲೇಪಿಸಿರಬಹುದು. ಕಾರಣ ಬಂಡೆಯ ಮೈಯನ್ನು ನುಣುಪುಗೊಳಿಸಿದರೆ ಮಿಶ್ರಣ ಲೇಪನವು ಸರಿಯಾಗಿ ಅಂಟಿಕೊಳ್ಳಲಾರದು ಎಂಬುದನ್ನು ಗಮನಿಸಬಹುದು.

ವಿಷ್ಣು ಧರ್ಮೋತ್ತರವು [೧೬] ಮಿಶ್ರಣ ಲೇಪನಕ್ಕಿಂತ ಮೊದಲು ಗೋಡೆಯನ್ನು ಸಮತಟ್ಟು ಮಾಡಲು ತಿಳಿಸಿ ಅದಕ್ಕಾಗಿ ಲಿಂಗಸೂತ್ರವನ್ನು ಉಪಯೋಗಿಸಲು ತಿಳಿಸುತ್ತದೆ. ಸಮರಾಂಗಣ ಸೂತ್ರಧಾರವು [೧೭] ಮಿಶ್ರಣ ಲೇಪಿಸುವ ಪೂರ್ವದಲ್ಲಿ ಗೋಡೆಯನ್ನು ಬಿಸಿನೀರು ಮತ್ತು ಸುಣ್ಣದ ನೀರಿನಿಂದ ತೊಳೆದು ಸಂಸ್ಕರಿಸಲು ಹೇಳುತ್ತದೆ.

ಸಮರಾಂಗಣ ಸೂತ್ರಧಾರ ಗ್ರಂಥದಲ್ಲಿ ಹೇಳಲಾದ ಆಧಾರ ಸಂಸ್ಕರಣವನ್ನು ಜಯಂತ ಚಕ್ರವರ್ತಿ ಅವರು [೧೮] " ಇಟ್ಟಿಗೆಯ ಗೋಡೆಯ ಮೇಲೆ ಮಿಶ್ರಣ ಲೇಪಿಸುವ ಮೊದಲು ಹೈಡ್ರೋಕ್ಲೋರಿಕ್ ಆ್ಯಸಿಡ್‌ದ ಮಂದ ಮಿಶ್ರಣವನ್ನು ಗೋಡೆಗೆ ಎರಚಬೇಕು. ನಂತರ ಬಿಸಿನೀರು ಆಮೇಲೆ ತಣ್ಣೀರು ಉಪಯೋಗಿಸಿ ಗೋಡೆಯನ್ನು ತೊಳೆಯಬೇಕು. ಹೀಗೆ ತೊಳೆಯುವಾಗ ಗೋಡೆಯಲ್ಲಿನ ಇಟ್ಟಿಗೆಗಳ ಗುಣಮಣ್ಣ ಸರಿ ಇರದೇ ಅವು ಅಲ್ಲಲ್ಲಿ ಪುಡಿಯಾಗಿ ಉದುರಿ ತಗ್ಗುಗಳಾದರೆ. ಆ ತಗ್ಗುಗಳನ್ನು ಸುಣ್ಣ-ಉಸುಕುಗಳ ಗಾರೆ ಮಿಶ್ರಣದಿಂದ ತುಂಬಿ ಸರಿಪಡಿಸಬೇಕು. ಅಲ್ಲಲ್ಲಿ ಪೂರ್ತಿ ಉದುರಿ ಹೋಗುವ ಇಟ್ಟಿಗೆಗಳಿದ್ದರೆ ಅವುಗಳನ್ನು ಸುತ್ತಿಗೆ ಉಳಿಗಳಿಂದ ಒಡೆದು ತೆಗೆದು ಆ ಸ್ಥಳದಲ್ಲಿ ಒಳ್ಳೆಯ ಗುಣಮಟ್ಟದ ಇಟ್ಟಿಗೆಯನ್ನು ಕೂಡ್ರಿಸಬೇಕು. ಈ ರೀತಿ ಸಂಸ್ಕರಿಸಿದ ಇಟ್ಟಿಗೆಯ ಗೋಡೆಗೆ ಭಿತ್ತಿಯ ಮಿಶ್ರಣ ಲೇಪನ ಮಾಡಬೇಕು " ಎಂದು ಹೇಳುತ್ತಾರೆ.

ಮೀರಾ ಸೇಠ್ ಅವರು [೧೯] ಪಶ್ಚಿಮ ಹಿಮಾಲಯದ ಭಿತ್ತಿಚಿತ್ರಗಳ ಬಗ್ಗೆ ಬರೆಯುತ್ತ ಅಲ್ಲಿನ ಭಿತ್ತಿಚಿತ್ರಗಳ ರಚನೆಯಲ್ಲಿ ಭಿತ್ತಿ ಲೇಪನದ ಮೊದಲು ಆಧಾರ ಸಂಸ್ಕರಿಸುವ ವಿಧಾನವನ್ನು ಹೀಗೆ ಹೇಳುತ್ತಾರೆ. " ಅಲ್ಲಿನ ಗೋಡೆಗಳು ಮಣ್ಣಿನವಾಗಿದ್ದು ಅವು ಕಳಚಿ ಬೀಳದಂತೆ ಅವುಗಳಲ್ಲಿ ಅಲ್ಲಲ್ಲಿ ಒಳಭಾಗದಲ್ಲಿ ಕಟ್ಟಿಗೆಯ ರೀಪಗಳನ್ನು ಅಳವಡಿಸಿ ಗೋಡೆಯನ್ನು ಭದ್ರಪಡಿಸಿ ಆಮೇಲೆ ಮಿಶ್ರಣ ಲೇಪನವನ್ನು ಮಾಡಬೇಕು " ಎಂದು ತಿಳಿಸುತ್ತಾರೆ. ಮರದ ಫಲಕದ ಮೇಲೆ ಭಿತ್ತಿಚಿತ್ರ ರಚನೆ ಮಾಡಬೇಕಾದ ಫಲಕದ ಮೇಲೆ ತೆಳುವಾದ ಗಾರೆ ಲೇಪನ ಮಾಡಲಾಗಿದೆ. ಅದಕ್ಕಿಂತ ಪೂರ್ವದಲ್ಲಿ ಮರದ ಫಲಕವನ್ನು ಉಳಿಯಿಂದ ಕೆತ್ತಿ ಉಪ್ಪು ಕಾಗದದಿಂದ ನುಣುಪುಗೊಳಿಸಲಾಗುತ್ತಿತ್ತೆಂದು

---

೧೫. Jayanth Chakravarthi : Techniques in Indian Mural Painting, Page - 21

೧೬. ಪ್ರಿಯ ಬಾಲಾಶಹಾ (ಸಂ.) : ವಿಷ್ಣುಧರ್ಮೋತ್ತರ. ಭಾಗ III. ಅಧ್ಯಾಯ ೪೦. ಪುಟ - ೪೧೫

೧೭. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ, ಅಧ್ಯಾಯ ೭೨. ಶ್ಲೋಕ ೧೩. ೩೫

೧೮. Jayanth Chakravarthi : Techniques in Indian Mural Painting, Page - 19

೧೯. Meeraseth : Wall Paintings of the Western Himalayas, Page - 93

ತಿಳಿಯಬಹುದಾಗಿದೆ. ಮರದ ಫಲಕದ ಭಿತ್ತಿಚಿತ್ರಗಳು ಕಂಡುಬಂದಲ್ಲಿ ಫಲಕದ ಮೇಲ್ಮೈ ಅತ್ಯಂತ ನುಣುಪಾಗಿರುವುದು ಗಮನಿಸಬಹುದು.

**೨. ಮಿಶ್ರಣ ಲೇಪನ ಹಂತ :** ಭಿತ್ತಿ ಸಿದ್ಧತಾ ವಿಧಾನದಲ್ಲಿ ಮಹತ್ವದ ಹಂತ ಇದಾಗಿದ್ದು, ಬೇರೆ ಬೇರೆ ವಿಧಾನಗಳಿಗನುಸಾರವಾಗಿ ಬೇರೆ ಬೇರೆ ವಸ್ತುಗಳನ್ನು ಕೂಡಿಸಿ ಮಿಶ್ರಣ ತಯಾರಿಸಿ ಲೇಪಿಸಲಾಗುತ್ತದೆ. ಶಿಲ್ಪಶಾಸ್ತ್ರಗಳು ಅನೇಕ ವಿಧದ ಮಿಶ್ರಣ ತಯಾರಿಸಿ ಲೇಪಿಸುವ ಕುರಿತು ಹೇಳಿವೆ. ಅವುಗಳಲ್ಲಿ ಕೆಲವು ಹೀಗಿವೆ. ವಿಷ್ಣುಧರ್ಮೋತ್ತರ ಗ್ರಂಥದಲ್ಲಿ [೨೦] ಭಿತ್ತಿ ತಯಾರಿಕೆಯ ಮಿಶ್ರಣ ಲೇಪನದ ಈ ಹಂತವನ್ನು ಹೇಳಿದೆ : ಮೂರು ಪ್ರಕಾರದ ಇಟ್ಟಿಗೆ ಪುಡಿಯನ್ನು ತೆಗೆದುಕೊಂಡು ಅದಕ್ಕೆ ಅಷ್ಟೇ ಪ್ರಮಾಣದ ಜೇಡಿ ಮಣ್ಣು ಬೆರೆಸಿ, ಅದಕ್ಕೆ ಮತ್ತೆ ಮೂರು ಪ್ರಮಾಣದ ಗುಗ್ಗಳು, ಜೇನುಮೇಣ, ಅತಿಮಧುರ, ಜೇನುಬೆಲ್ಲ (ಕಾಕಂಬಿ), ಕುಸುಂಬ ಎಂಬ ಗಂದಿಗರ ಸರಕು ಇವುಗಳನ್ನು ಸೇರಿಸಿ ಮಿಶ್ರಣ ಮಾಡುವುದು. ಈ ಮಿಶ್ರಣಕ್ಕೆ ಸುಣ್ಣದ ಪುಡಿಯನ್ನು ¼ ಭಾಗದಷ್ಟು ಸೇರಿಸಿ ಉರಿಯಲ್ಲಿ ಕಾಯಿಸಬೇಕು. ನಂತರ ಇದಕ್ಕೆ ಬಿಲ್ವಪತ್ರಿ ಕಾಯಿಯ ಜಜ್ಜಿದ ಅಂಟನ್ನು ಸೇರಿಸುವುದು ಆಮೇಲೆ ಕಪ್ಪು ಕಲ್ಲಿನ (ಕಪ್ಪು ಪಾಟೀಕಲ್ಲು) ಪುಡಿಯನ್ನು ಹಾಕಿ. ಆ ಮಿಶ್ರಣಕ್ಕೆ ಅವಶ್ಯವಾದಷ್ಟು ಪ್ರಮಾಣದ ಉಸುಕು ಸೇರಿಸಿ ನೀರು ಹಾಕಿ ಒಟ್ಟು ಮಿಶ್ರಣವನ್ನು ಚನ್ನಾಗಿ ಕಲಕಬೇಕು. ಈ ಹದ ಮಾಡಿದ ಮಿಶ್ರಣವನ್ನು ನೀರಿನಲ್ಲಿಯೇ ಒಂದು ತಿಂಗಳವರೆಗೆ ನೆನೆಹಾಕಿ ಪಕ್ವವಾಗುವಂತೆ ಮಾಡಬೇಕು. ಈ ಮಿಶ್ರಣ ಚನ್ನಾಗಿ ನೆನೆದು ಹದವಾದಾಗ, ಜಾಗ್ರತೆಯಾಗಿ ಹೊರತೆಗೆದು ಗೋಡೆಗೆ ಲೇಪಿಸಬೇಕು. ಮಿಶ್ರಣವನ್ನು ಒಂದೇ ಸಲ ಲೇಪಿಸಿ ಕೈ ಬಿಡದೇ ಅಸಮೀಚಿನ ಭಾಗಗಳು ಉಳಿಯದಂತೆ ಮೇಲ್ಮೈ ಸಮತಟ್ಟಾಗಿ ನುಣುಪಾಗುವಂತೆ ಬಾರಿ ಬಾರಿ ಲೇಪಿಸುತ್ತಿರಬೇಕು.

ಕಾಶ್ಯಪ ಶಿಲ್ಪಶಾಸ್ತ್ರದಲ್ಲಿ [೨೧] ಮಿಶ್ರಣ ಲೇಪನವನ್ನು ಈ ರೀತಿ ವಿವರಣೆ ನೀಡಿದೆ : " ಸದಾ ನೀರಿನಲ್ಲಿದ್ದು ಶುದ್ಧವಾಗಿಯೂ, ಮನೋಹರವಾಗಿಯೂ ಇರುವ ನದೀ ತೀರವಾಗಲಿ, ಕೆರೆಯಿಂದಾಗಲಿ ಮಣ್ಣನ್ನು ತೆಗೆಯಬೇಕು. ಈ ರೀತಿ ತೆಗೆದ ಮಣ್ಣು ಭೂಮಿಯ ಗುಣಧರ್ಮಕ್ಕನುಸಾರವಾಗಿ ಕೆಂಪು, ಹಳದಿ, ಬಿಳಿ ಮತ್ತು ಕಪ್ಪು ಎಂದು ನಾಲ್ಕು ಬಗೆಯಲ್ಲಿರಬಹುದು. ಹೀಗೆ ತೆಗೆದುಕೊಂಡ ಮಣ್ಣಿಗೆ ನೀರು ಬೆರೆಸಿ ಕಲಕಿ, ಆಮೇಲೆ ಹಾಲು ಒಸರುವ ನಾಲ್ಕು ಮರಗಳ ತೊಗಟೆಯಿಂದ ರಸ ತಯಾರಿಸಿ ಮಣ್ಣಿಗೆ ಬೆರೆಸಿ ಚನ್ನಾಗಿ ನಾದಬೇಕು. ನಂತರ ತ್ರಿಫಲಾ ಚೂರ್ಣದ ಪುಡಿಯನ್ನು ನೀರಿನಲ್ಲಿ ಕಲಸಿ ಆ ನೀರನ್ನು ಮಣ್ಣಿಗೆ ಸೇರಿಸಿ ಚನ್ನಾಗಿ ಮರ್ದಿಸಬೇಕು. ನಂತರ ಸೂಕ್ಷ್ಮವಾದ ಮರಳನ್ನು ಮತ್ತು ಕಲ್ಲಿನ ಪುಡಿಯನ್ನು ಸಮನಾದ ಅಳತೆಯಲ್ಲಿ ತೆಗೆದುಕೊಂಡು ಮಿಶ್ರಮಾಡಿ ಕಾಲು ಭಾಗದಷ್ಟು ಮಣ್ಣಿನಲ್ಲಿ ಚನ್ನಾಗಿ ಬೆರೆಸಬೇಕು. ಆಮೇಲೆ ಬಲಿತ ತೆಂಗಿನಕಾಯಿಯ ನೀರನ್ನು ಮಣ್ಣಿಗೆ ಬೆರೆಸಬೇಕು. ಹಾಗೂ ಅದೇ ತೆಂಗಿನ ನಾರನ್ನು ಕುಟ್ಟಿ ಅದರ ರಸವನ್ನು ಹಾಗೂ ಕುಟ್ಟಿದ ನಾರನ್ನು ಮಣ್ಣಿಗೆ ಬೆರೆಸಿ ಹತ್ತು ದಿನಗಳ ಕಾಲ ನೆನೆ ಹಾಕಲು ಇಡಬೇಕು. ತೆಂಗಿನ ನಾರು ಮಣ್ಣು ಭದ್ರವಾಗಿ ಹಿಡಿದುಕೊಳ್ಳಲು ಸಹಾಯ ಮಾಡುತ್ತದೆ. ಆಮೇಲೆ ಶ್ರೀವೇಷ್ಟಕ, ಗುಗ್ಗಳು,

---

೨೦. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೪೦, ಶ್ಲೋಕ ೧ ರಿಂದ ೧೧
೨೧. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ, ಅಧ್ಯಾಯ ೮೬, ಪುಟ - ೬೪೮-೫೦

ಶಿಲಾರಾಳ. ಸರ್ಜರಸ. ಇವುಗಳನ್ನು ಪುಡಿಮಾಡಿ ಮಣ್ಣಿನ ಭಾಗದ ೧/೬ ಪ್ರಮಾಣದಷ್ಟು ಬೆರೆಸಬೇಕು. ಆಮೇಲೆ ಬಿಲ್ವಪತ್ರಿ. ಕಾಯಿ. ಬೇಲದ ಕಾಯಿಗಳ ರಸವನ್ನು, ಅವುಗಳ ತಿರುಳನ್ನು ನುಣ್ಣಗೆ ರುಬ್ಬಿ ಅದನ್ನು ಮಣ್ಣಿಗೆ ಬೆರೆಸಬೇಕು. ಇದರ ಪ್ರಮಾಣ ಮಿಶ್ರಣದ ೧/೧೬ ಭಾಗದಷ್ಟಿರಬೇಕು. ಆಮೇಲೆ ಕಾವಿಮಣ್ಣು, ಅರಿದಾಳ, ಚಂದನ, ಪಚ್ಚಕರ್ಪೂರಗಳನ್ನು ಪುಡಿಮಾಡಿ ಮಣ್ಣಿನ ಮಿಶ್ರಣದಲ್ಲಿ ಬೆರೆಸಬೇಕು. ಈ ಒಟ್ಟು ಮಿಶ್ರಣವನ್ನು ಚನ್ನಾಗಿ ಮರ್ದಿಸಿ ೫ ದಿನಗಳವರೆಗೆ ನೆನೆಹಾಕಲು ಇಟ್ಟು ನಂತರ ಉಪಯೋಗಿಸಬೇಕು. "

ಶಿಲ್ಪರತ್ನ ಗ್ರಂಥದಲ್ಲಿ [೨೨] ಮಿಶ್ರಣ ತಯಾರಿಸಿಕೊಂಡು ಲೇಪಿಸುವ ಹಂತವನ್ನು ತಿಳಿಸುತ್ತದೆ. " ಶಂಖ ಮತ್ತು ಕಪ್ಪೆ ಚಿಪ್ಪುಗಳನ್ನು ಕಟ್ಟಿಗೆಯ ಉರಿಯಿಂದ ಸುಟ್ಟು ಪುಡಿಮಾಡಿ ಸುಣ್ಣ ತಯಾರಿಸಬೇಕು. ಈ ಶಂಖ ಚೂರ್ಣದ ಸುಣ್ಣಕ್ಕೆ ೧:೪ ಭಾಗದಷ್ಟು ಜೇನುಬೆಲ್ಲ ಸೇರಿಸಬೇಕು. ಇದಕ್ಕೆ ಅಷ್ಟೇ ಪ್ರಮಾಣದ (೧:೪) ಉಸುಕು ಮತ್ತು ಕಾಕಂಬಿಯನ್ನು ಸೇರಿಸಿ ಚನ್ನಾಗಿ ಮಿಶ್ರಣ ಮಾಡಬೇಕು. ಈ ಮಿಶ್ರಣಕ್ಕೆ ಮತ್ತೆ ಬಾಳೆಹಣ್ಣನ್ನು (ಕಳಿತ, ಪೂರ್ತಿಯಾಗಿ ಹಣ್ಣಾದ) ಕಿವುಚಿ. ಹಿಚುಕಿ ಪೇಷ್ಟನ ಹಾಗೆ ಮಾಡಿ ಆ ಪೇಷ್ಟನ್ನು ಮಿಶ್ರಣಕ್ಕೆ ಸೇರಿಸಿ, ನಿರ್ದಿಷ್ಟ ಸಮಯದವರೆಗೆ ಸೂಕ್ಷ್ಮ ಜ್ವಾಲೆಯಲ್ಲಿ ಇಡೀ ಮಿಶ್ರಣವನ್ನು ಕಾಯಿಸಬೇಕು. ನಂತರ ಈ ಬಿಸಿಯಾಗಿರುವ ಮಿಶ್ರಣವನ್ನು ಬೇರೊಂದು ಪಾತ್ರೆಗೆ ಹಾಕಿಕೊಂಡು ಚನ್ನಾಗಿ ಕಲೆಸಿಕೊಳ್ಳಬೇಕು. ಹೀಗೆ ಕಲೆಸಿದ ಮಿಶ್ರಣವನ್ನು ಮಣ್ಣಿನ ಮಡಕೆಯೊಂದರಲ್ಲಿ ಮೂರು ತಿಂಗಳವರೆಗೆ ನೆನೆಯಲು ಬಿಡಬೇಕು. ಮೂರು ತಿಂಗಳ ನಂತರ, ಮಿಶ್ರಣವು ಚನ್ನಾಗಿ ನೆನೆಯಲು ಬಿಡಬೇಕು. ಮೂರು ತಿಂಗಳ ನಂತರ. ಮಿಶ್ರಣವು ಚನ್ನಾಗಿ ನೆನೆದು ಹದಗೊಂಡ ನಂತರ ಅದನ್ನು ಹೊರತೆಗೆದು ಅದಕ್ಕೆ ಜೇನುಬೆಲ್ಲದ ನೀರನ್ನು ಬೆರೆಸಿ, ಮಜ್ಜಿಗೆಯನ್ನು ಕಡೆಯುವ ಹಾಗೆ ಕಡೆಯಬೇಕು. ಈ ಮಿಶ್ರಣವು ಬೆಣ್ಣೆಯ ಹಾಗೆ ಆಗುವ ವರೆಗೂ ಕಡೆಯಬೇಕು. ಬೆಣ್ಣೆಯಂತಾದ ಈ ಮಿಶ್ರಣವನ್ನು ತೆಗೆದುಕೊಂಡು ಕರಣೆ ಅಥವಾ ತ್ಯಾಪಿ (Trowel) ಯಂತಹ ಸಾಧನದಿಂದ ಗೋಡೆಗೆ ಲೇಪಿಸಬೇಕು. "

ಸುಧಾಲೇಪನ ವಿಧಾನ ಎಂಬ ಗ್ರಂಥದಲ್ಲಿ [೨೩] ಮಿಶ್ರಣ ಲೇಪಿಸುವ ವಿಧಾನ ಹೀಗೆ ಹೇಳಲಾಗಿದೆ. " ಉರಿಯಲ್ಲಿ ಸುಟ್ಟ ಶಂಖದ ಸುಣ್ಣದ ಪುಡಿಯನ್ನು ತೆಗೆದುಕೊಂಡು ಇದಕ್ಕೆ ಜೇನುಬೆಲ್ಲವನ್ನು ಕೂಡಿಸಬೇಕು. ಆಮೇಲೆ ಈ ಮಿಶ್ರಣಕ್ಕೆ ಮುದ್ಗದ ರಸವನ್ನು ೧/೪ ಭಾಗದಷ್ಟು ಬೆರೆಸಬೇಕು. ನಂತರ ಈ ಮಿಶ್ರಣದ ೧/೪ ಭಾಗದಷ್ಟು ಉಸುಕು ಮತ್ತು ಸುಟ್ಟ ಬಾಳೆಹಣ್ಣಿನ ತಿರುಳು ಸೇರಿಸಬೇಕು. ಈ ಎಲ್ಲ ಮಿಶ್ರಣವನ್ನು ಒಂದು ಪಾತ್ರೆಯಲ್ಲಿ ಹಾಕಿ ಚನ್ನಾಗಿ ಬೆರೆತುಕೊಳ್ಳುವಂತೆ ಕಲಕಬೇಕು. ಗಟ್ಟಿಯಾಗಿ ಕಣಕದ ಹಾಗೆ ಮಾಡಿಕೊಂಡು ನಾದಿಕೊಳ್ಳಬೇಕು. ಈ ಮಿಶ್ರಣವನ್ನು ಎರಡು ತಿಂಗಳವರೆಗೆ ನೆನೆಯಲು ಬಿಡಬೇಕು. ಎರಡು ತಿಂಗಳ ನಂತರ ಪಾತ್ರೆಯಿಂದ ಈ ಮಿಶ್ರಣವನ್ನು ಹೊರತೆಗೆದು ಮತ್ತೆ ಚನ್ನಾಗಿ ನಾದಬೇಕು. ಹೀಗೆ ನಾದುವಾಗ ಅದಕ್ಕೆ ಜೇನುಬೆಲ್ಲದ ನೀರನ್ನು ಚಿಮುಕಿಸುತ್ತಿರಬೇಕು. ಈ ಮಿಶ್ರಣ ಬೆಣ್ಣೆಯ ಹಾಗೆ ಮೃದುವಾಗುವವರೆಗೆ ನಾದುತ್ತಿರಬೇಕು. ಆ ಮೇಲೆ ಹೀಗೆ ತಯಾರಿಸಿಕೊಂಡ ಮಿಶ್ರಣವನ್ನು ಸಂಸ್ಕರಿಸಿಕೊಂಡು ಗೋಡೆಗೆ ಲೇಪಿಸಬೇಕು. ಮಿಶ್ರಣವನ್ನು ಗೋಡೆಗೆ ಲೇಪಿಸಲು ಟೆಂಗಿನ ನಾರಿನಿಂದ ಮಾಡಲಾದ ಕಸಬರಿಗೆಯಂತಹ ಸಾಧನಗಳನ್ನು

೨೨. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೦. ಶ್ಲೋಕ ೧೫ ರಿಂದ ೨೪

೨೩. V. V. Sharma : Sudhalepavidhana, Page - 97, 99

ಬಳಸಬೇಕು. ಈ ರೀತಿಯಾಗಿ ಗೋಡೆಗೆ ಮಿಶ್ರಣವನ್ನು ಲೇಪಿಸಿದ ನಂತರ ಕನಿಷ್ಠ ಅರ್ಧದಿನ ಬಿಡಬೇಕು. ಅರ್ಧ ದಿನದ ನಂತರ ಆ ಮಿಶ್ರಣ ಆರಿದ್ದು ಅದರ ಮೇಲೆ ಮತ್ತೆ ಮಿಶ್ರಣ ಲೇಪಿಸಿ ಸಮತಟ್ಟು ಮಾಡಿಕೊಳ್ಳಲು ಅನುಕೂಲವಾಗುವುದು. "

ರಾಯ್. ಸಿ. ಕ್ರಾವೆನ್ (Roy C. Craven) ಅವರು [೨೪] ಅಜಂತಾದಲ್ಲಿನ ಭಿತ್ತಿಚಿತ್ರ ರಚನೆಗೆ ಮಿಶ್ರಣವನ್ನು ಕೆಳಗಿನಂತೆ ಸಿದ್ಧಗೊಳಿಸಿರಬಹುದೆನ್ನುತ್ತಾರೆ : "ಕುಂಬಾರರು ಗಡಿಗೆ ಮಾಡುವ ಜಿಗುಟಾದ ಜೇಡಿಮಣ್ಣು ತೆಗೆದುಕೊಂಡು ಅದಕ್ಕೆ ಆಕಳ ಸೆಗಣಿ, ಕೊಚ್ಚಿದ ಒಣ ಹುಲ್ಲು, ಮತ್ತು ಪ್ರಾಣಿಗಳ ಕೂದಲುಗಳನ್ನು ಸೇರಿಸಿ ಚೆನ್ನಾಗಿ ಕಲಕಿ ಅದನ್ನು ನೆನೆಯಲು ಬಿಟ್ಟು ಕೆಲವು ದಿನಗಳ ನಂತರ ನೆನೆದು ಹದವಾದ ಬೆಣ್ಣೆಯಂತಹ ಆ ಮಿಶ್ರಣವನ್ನು ಗುಹೆಯ ಶಿಲಾ ಗೋಡೆಗಳಿಗೆ ಲೇಪಿಸಲಾಗಿದೆ. ಲೇಪಿಸಿದ ಪದರು ಒಂದೂವರೆ ಅಥವಾ ಎರಡು ಇಂಚು ದಪ್ಪನಾಗಿಯೂ ಇರಬಹುದು. ಹಲವು ಬಾರಿ ಮಿಶ್ರಣ ಲೇಪಿಸುತ್ತ ಭಿತ್ತಿಯ ಮೇಲ್ಮೈಯನ್ನು ಸಮತಟ್ಟುಗೊಳಿಸಿದ್ದಾರೆ. ನಂತರ ಈ ಮಿಶ್ರಣ ಒಣಗಿದ ತರುವಾಯ ಸೂಕ್ಷ್ಮವಾದ ಮರಳು ಮತ್ತು ಬಿಳಿದಾದ ಸುಣ್ಣದಿಂದ ತಯಾರಿಸಿದ ಗಾರೆಯ ಲೇಪನವನ್ನು ಮಾಡಿ, ಇದು ಒಣಗಿದ ನಂತರ ಸುಣ್ಣದ ಹಿನ್ನೆಲೆ ಕೊಟ್ಟು ಚಿತ್ರ ರಚಿಸಲಾಗಿದೆ. "

ಮೀರಾ ಸೇಠ್ [೨೫] ಪಶ್ಚಿಮ ಹಿಮಾಲಯ ಭಾಗದ ಭಿತ್ತಿಚಿತ್ರಗಳ ಭಿತ್ತಿ ತಯಾರಿಕೆಯಲ್ಲಿನ ಮಿಶ್ರಣ ಲೇಪನ ಕುರಿತು "ಜಿಗುಟಾದ ಮಣ್ಣು ಮತ್ತು ಕೊಚ್ಚಿದ ಒಣ ಹುಲ್ಲುಗಳ ಮಿಶ್ರಣವನ್ನು ತಯಾರಿಸಿ, ಸಂಸ್ಕರಿಸಿದ ಗೋಡೆಗೆ ೫ ಮಿ. ಮೀ. ದಿಂದ ೩೧ ಮಿ. ಮೀ. ದಪ್ಪನಾಗಿ ಲೇಪಿಸಲಾಗಿದೆ. ಈ ಮಿಶ್ರಣ ಆರಿದ ನಂತರ ಮಂದವಾದ ಸುಣ್ಣಕ್ಕೆ ಜಿನುಗಾದ ಮರಳನ್ನು ಸೇರಿಸಿ ಗಾರೆ ತಯಾರಿಸಿ ಲೇಪಿಸುವುದು. ಈ ಗಾರೆಯ ಮೇಲೆ ಕೊನೆಯ ಹಂತವಾಗಿ ಚಿತ್ರಣಕ್ಕಾಗಿ ಸುಣ್ಣದ ಲೇಪನ ಕೊಡಲಾಗಿದೆ. " ಎಂದು ಅಭಿಪ್ರಾಯಪಡುತ್ತಾರೆ.

ನೈಜೀರಿಯಾ ಮತ್ತು ಸಿಂಹಳದ ಕೆಲವು ಪ್ರಾಚೀನ ಭಿತ್ತಿಚಿತ್ರಗಳಲ್ಲಿ ಕಪ್ಪೆಚಿಪ್ಪಿನ ಪುಡಿ ಅನ್ನದ ಗಂಜಿ ಇವುಗಳ ಮಿಶ್ರಣ. ಕಂಡುಬರುತ್ತದಲ್ಲದೇ ಬೌದ್ಧವಿನಯ ಪಿಟಕದಲ್ಲಿ ಜೇಡಿ ಮಣ್ಣು, ಸುಣ್ಣ, ಉಸುಕು ಇವುಗಳ ಜೊತೆಗೆ ಮರದ ಅಂಟು. ರಾಳ. ಅನ್ನದ ಗಂಜಿ ಮತ್ತು ಜೇನುಮೇಣಗಳನ್ನು ಮಿಶ್ರಣ ತಯಾರಿಕೆಯಲ್ಲಿ ಬಳಸುತ್ತಿದ್ದರೆಂಬ [೨೬] ವಿವರಗಳು ತಿಳಿದುಬರುತ್ತವೆ. ಎಂ. ಎಚ್. ಕೃಷ್ಣಯ್ಯ ಅವರು [೨೭] " ಬದಾಮಿಯ ಭಿತ್ತಿಚಿತ್ರದಲ್ಲಿ ಮರಳನ್ನು ಜರಡಿ ಹಿಡಿದು. ಸೂಕ್ಷ್ಮಕಣಗಳನ್ನು ಶುದ್ಧಗೊಳಿಸಿ. ಜೇಡಿ ಮಣ್ಣಿನೊಂದಿಗೆ ಬೆರೆಸಿ ಅದಕ್ಕೆ ನಾರು, ಕಬ್ಬಿಣದ ಅದಿರು. ಸುಣ್ಣ ಮತ್ತು ಅಂಟುಗಳನ್ನು ಕೂಡಿಸಿ ಕಲಸಿ ಮಿಶ್ರಣ ತಯಾರಿಸಿ ಲೇಪನ ಮಾಡಲಾಗಿದೆ " ಎನ್ನುತ್ತಾರೆ.

ಹೀಗೆ ಬೇರೆ ಬೇರೆ ಪ್ರಕಾರದ ಮಿಶ್ರಣ ಲೇಪನದ ಕ್ರಮಗಳಿದ್ದರೂ ಕೆಲವು ಸಮಾನ ಅಂಶಗಳು ಕಂಡುಬರುತ್ತವೆ. ಜೇಡಿಮಣ್ಣು. ಸುಣ್ಣ. ಉಸುಕು. ನಾರುಪದಾರ್ಥ. ಮಿಶ್ರಣ ಜಿಗುಟಾಗಿರಲು ಬೆರೆಸುವ ಅಂಟು ದ್ರಾವಕಗಳು ಸಾಮಾನ್ಯವಾಗಿ ಎಲ್ಲ ಪ್ರಕಾರದ ಮಿಶ್ರಣದಲ್ಲಿಯೂ ಬಳಕೆಯಾಗುವುದು ಕಂಡುಬರುತ್ತದೆ.

---

೨೪. Roy C. Craven : Indian Art, Page - 127
೨೫. Meera Seth : Wall Paintings of the Western Himalayas, Page - 93
೨೬. ಟಿ. ಆರ್. ತಿಪ್ಪೇಸ್ವಾಮಿ (ಸಂ.) : ಚಿತ್ರಕಲಾ ಪ್ರಪಂಚ. ಪುಟ - ೨೫೫
೨೭. ಎಂ. ಎಚ್. ಕೃಷ್ಣಯ್ಯ : ಶೃಂಗಾರ ಲಹರಿ. ಪುಟ - ೫೨

**೩. ಭಿತ್ತಿ ನುಣುಪುಗೊಳಿಸುವ ಹಂತ :** ಮಿಶ್ರಣ ಲೇಪನ ಮಾಡಿ ಸಿದ್ಧಗೊಳಿಸಿದ ಭಿತ್ತಿಯು ಒಮ್ಮೆಲೇ ಚಿತ್ರಣಕ್ಕೆ ಸಜ್ಜುಗೊಳ್ಳುವುದಿಲ್ಲ. ಮಿಶ್ರಣ ಲೇಪನ ಮಾಡಿ ಸಿದ್ಧಗೊಳಿಸಿದ ಭಿತ್ತಿಯನ್ನು ಮತ್ತೆ ಸಮತಟ್ಟುಗೊಳಿಸಿ ನುಣುಪುಗೊಳಿಸುವ ಕ್ರಿಯೆ ಈ ಹಂತದಲ್ಲಿ ನಡೆಯುತ್ತದೆ. ಜನಪದ ಭಿತ್ತಿಚಿತ್ರಕಲಾವಿದರು ಸಹಿತ ಗೋಡೆಗೆ ಮಣ್ಣಿನ ಮಿಶ್ರಣ ಲೇಪಿಸಿ ಒಮ್ಮೆಲೇ ಅದರ ಮೇಲೆ ಚಿತ್ರ ರಚಿಸುವುದಿಲ್ಲ. ಲೇಪಿಸಿದ ಮಣ್ಣಿನ ಮಿಶ್ರಣವು ಸ್ವಲ್ಪ ಆರಿದ ನಂತರ ಮತ್ತೆ ಅದರ ಮೇಲೆ ಸಗಣಿ. ಸುಣ್ಣ. ಜೇಡಿಮಣ್ಣುಗಳ ಇನ್ನೊಂದು ನಯವಾದ ಲೇಪನ ಕೊಟ್ಟು ಸಮತಟ್ಟುಗೊಳಿಸುವುದನ್ನು ನೋಡಬಹುದಾಗಿದೆ.

ವಿಷ್ಣುಧರ್ಮೋತ್ತರದಲ್ಲಿ [೨೮] ಭಿತ್ತಿಯನ್ನು ಸಮತಟ್ಟುಗೊಳಿಸಿ ನುಣುಪುಗೊಳಿಸಲು ಎರಡು ವಿಧಾನ ಹೇಳಿದೆ:

i) ಮೊದಲು ಲೇಪಿಸಲಾದ ಭಿತ್ತಿಯ ಮಿಶ್ರಣವು ಆರುತ್ತ ಬಂದಂತೆ ಅಸ್ತ್ರಕರ್ಮ ಎಂದು ಕರೆಯುವ ವಿಧಾನದಿಂದ ಭಿತ್ತಿಯನ್ನು ಉಜ್ಜಬೇಕು. ಇದಕ್ಕಾಗಿ ನುಣುಪಾದ ಬಿಳಿ ಮಣ್ಣಿನ ಜೊತೆಗೆ ಸರ್ಜರಸ (ಸಾಲಮರದ ರಸ) ಜೊತೆಗೆ ಎಣ್ಣೆ ಬೆರೆಸಿ ಮಿಶ್ರಣ ಮಾಡಿಕೊಂಡು ಉಜ್ಜಲು ಬಳಸಬೇಕು.. ನಂತರ ದೀಪದ ಕಪ್ಪು ಇಲ್ಲವೆ ಕಾಡಿಗೆಯಿಂದ ಪಾಲಿಸ್ ಮಾಡಿ. ಆಮೇಲೆ ಹಾಲು ಚಿಮುಕಿಸಿ ಉಜ್ಜುತ್ತಿರಬೇಕು. ಈ ಕ್ರಿಯೆಯು ಭಿತ್ತಿ ಅತೀ ನುಣುಪಾಗಿ ಆಗುವವರೆಗೂ ಮಾಡುತ್ತಿರಬೇಕು. ಬೇರೆ ಬೇರೆ ವರ್ಣ ಛಾಯೆಯ ಭಿತ್ತಿಗಳನ್ನು ನಿರ್ಮಿಸಲು ಬೇರೆ ಬೇರೆ ವರ್ಣ (ಬಿಳಿ ಮತ್ತು ಕಪ್ಪು) ಗಳನ್ನು ಉಪಯೋಗಿಸಬೇಕೆಂದೂ ಅದು ತಿಳಿಸುತ್ತದೆ.

ii) ಮೊದಲ ಹಂತದ ಭಿತ್ತಿಯನ್ನು ಗೋಡೆಗೆ ಲೇಪಿಸಿದ ನಂತರ ಅದನ್ನು ಸಮತಟ್ಟು ಗೊಳಿಸಲು ಕಲ್ಲಿನ ಚೂರುಗಳಿಂದ ಮುಕ್ತವಾದ ನಯವಾದ ಒಂದು ರೀತಿಯ ಮಣ್ಣು ತೆಗೆದುಕೊಂಡು ಅದಕ್ಕೆ ಎರಡು ಭಾಗ ಉಸುಕು ಸೇರಿಸಿ. ಆಮೇಲೆ ಕಾಕುವ (Kakuva) ಮತ್ತು ಬೀನ್ ಬೀಜಗಳನ್ನು. ಹತ್ತಿಯ ಗಿಡದ ರಸ. ಬಿಲ್ವಪತ್ರಿ ಕಾಯಿಯ ರಸಗಳನ್ನು ಬೆರೆಸಿ ಆನೆಯ ಚರ್ಮದಷ್ಟು ದಪ್ಪ ಹಚ್ಚಿದ ಭಿತ್ತಿಯ ಮೇಲೆ ಬಳಿಯಬೇಕು. ಇದನ್ನು ಭಿತ್ತಿಯು ಸಮತಟ್ಟುಗೊಳ್ಳುವವರೆಗೂ ಲೇಪಿಸುತ್ತಿರಬೇಕು.

ಮಾನಸೋಲ್ಲಾಸವು [೨೯] ಭಿತ್ತಿಯನ್ನು ಸಮತಟ್ಟುಗೊಳಿಸಲು ಮತ್ತು ನುಣುಪುಗೊಳಿಸುವುದನ್ನು ಹೇಳುತ್ತದೆ. " ಬಿಳಿಮಣ್ಣು ತೆಗೆದುಕೊಂಡು ವಜ್ರಸರಿ (ವಜ್ರಲೇಪ) ಯಲ್ಲಿ ಬೆರೆಸಿ ಮೂರು ಬಾರಿ ಬಿಟ್ಟು ಬಿಟ್ಟು ಭಿತ್ತಿಗೆ ಲೇಪಿಸಬೇಕು. ನಂತರ ಶಂಖದ ಸುಣ್ಣದ ಪುಡಿಯನ್ನು ಮತ್ತು ಸುಣ್ಣವನ್ನು ವಜ್ರಸರಿಯಲ್ಲಿ ಬೆರೆಸಿ ಮತ್ತೆ ಭಿತ್ತಿಗೆ ಹಚ್ಚುತ್ತ ಹೋಗಬೇಕು. ಮೇಲ್ಮೈ ನುಣುಪಾಗುವವರೆಗೂ ಹಚ್ಚಬೇಕು. ಆ ಮೇಲೆ ನೀಲಗಿರಿ ಬೆಟ್ಟದಲ್ಲಿ ಮಾತ್ರ ಸಿಗುವ ಚಂದಿರನ ಪ್ರಕಾಶದಂತ ಮಿದುಕಲ್ಲಿನ ಪುಡಿಯನ್ನು ತೆಗೆದುಕೊಂಡು ವಜ್ರಲೇಪದಲ್ಲಿ ಬೆರೆಸಿ ಚನ್ನಾಗಿ ಕಲಕಿ ಈ ಮಿಶ್ರಣವನ್ನು ಭಿತ್ತಿಗೆ ಬಳಿಯಬೇಕು. ಇದನ್ನು ಹಲವಾರು ಬಾರಿ ಬಿಟ್ಟು ಬಿಟ್ಟು ಬಳಿದಾಗ ಭಿತ್ತಿಯ ಮೇಲ್ಮೈ ನುಣುಪಾಗಿ ಪ್ರಕಾಶಮಾನವಾಗುವುದು. "

---

೨೮. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ. ಭಾಗ III. ಅಧ್ಯಾಯ ೪೦. ಶ್ಲೋಕ ೧೨. ೧೪

೨೯. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ. ಭಾಗ II. ಅಧ್ಯಾಯ I. ಶ್ಲೋಕ ೧೪. ೧೫

ಸಮರಾಂಗಣ ಸೂತ್ರಧಾನ ಗ್ರಂಥವು ಭಿತ್ತಿ ನುಣುಪುಗೊಳಿಸುವಲ್ಲಿ ಮೂರು ವಿಧಾನಗಳನ್ನು ಹೇಳಿದೆ. ಅವು ಹೀಗಿವೆ.

**ವಿಧಾನ ೧ :** ಭಿತ್ತಿಯನ್ನು ನುಣುಪಾಗಿ ಮಾಡಲು ಈಗಾಗಲೇ ಲೇಪಿಸಿದ ಮಿಶ್ರಣಕ್ಕೆ ಹಾಲು ಚಿಮುಕಿಸುತ್ತಿರಬೇಕು. ನಂತರ ಸ್ನುಹಿವಸ್ತುಕಾ. ಕುಸ್ಮಂಡ. ಕುಡ್ಡಲಿ. ಅಪಮಾರ್ಗ. ಕಬ್ಬು ಇವುಗಳ ರಸವನ್ನು ತೆಗೆದ ಮೇಲೆ ಒಂದು ವಾರದ ವರೆಗೆ ಇಟ್ಟು ಸಿಸೋ. ನೀವಮ್. ತ್ರಿಫಲಾ. ಕುಟಜಾ. ಮತ್ತು ಸಮುದ್ರದ ಉಪ್ಪು ಇವುಗಳೊಡನೆ ಬೆರೆಸಿ ಭಿತ್ತಿಯ ಮೇಲೆ ಚಿಮುಕಿಸುತ್ತಿರಬೇಕು. ಆಮೇಲೆ ಸ್ವಚ್ಛವಾದ ಬಿಳಿಯ ಸುಣ್ಣದ ಕಲ್ಲು ತೆಗೆದುಕೊಂಡು ಪುಡಿಮಾಡಿ ಕುದಿಸಿದ ಅಕ್ಕಿಗಂಜಿಯಲ್ಲಿ ಕಲೆಸಿಕೊಂಡು ನಾರಿನಂತಹ ಕುಂಚದಿಂದ ಭಿತ್ತಿಗೆ ಹಲವು ಬಾರಿ ಬಿಟ್ಟು ಬಿಟ್ಟು ಲೇಪಿಸುತ್ತಿರಬೇಕು. ಇದರಿಂದ ಭಿತ್ತಿಯು ನುಣುಪಾಗಿ ಹೊಳಪುಳ್ಳದ್ದಾಗುವುದು.[೩೦] ಎಂದು ಹೇಳಿದೆ.

**ವಿಧಾನ ೨ :** ಸಮರಾಂಗಣ ಸೂತ್ರಧಾರ[೩೧] ಭಿತ್ತಿ ನುಣುಪುಗೊಳಿಸಲು ಕಮಲದ ಹೂವಿನ ಕೊಳದ ದಂಡೆಯ ಮಣ್ಣು. ಬಾವಿಯ ಬಿಳಿಯ ಮಣ್ಣು. ಗಿಡದ ಕೆಳಗಿನ ಬೇರು. ನದಿ ದಂಡೆಯ ಮಣ್ಣು. ಮೃದುವಾದ ಭೂಮಿಯಲ್ಲಿನ ಮಣ್ಣು ಎಲ್ಲವೂ ಬಿಳಿಯಾಗಿರಬೇಕು. ಇವುಗಳನ್ನೆಲ್ಲ ಒಟ್ಟು ಸೇರಿಸಿ ಇಟ್ಟುಕೊಂಡು ಅದಕ್ಕೆ ಶಾಲ್ಮಲಗಿಡ. ಅಶೋಕಗಿಡ. ಕಾಕುಭಗಿಡ. ತ್ರಿಪಲೋದ್ಭವಗಿಡ ಈ ಎಲ್ಲ ಗಿಡಗಳ ರಸ ತೆಗೆದುಕೊಂಡು ಸೇರಿಸಬೇಕು. ಮತ್ತೆ ಇದಕ್ಕೆ ಕ್ರಾಮುಕ ಎಂಬ ಗಿಡದ ಬೇರು ಬಿಲ್ವಪತ್ರಿಕಾಯಿ. ಕುದುರೆಯ ಬೆನ್ನಮೇಲಿನ ಮಿನಿಯ ಕೂದಲು. ಆಕಳಿನ ಕೂದಲು. ತೆಂಗಿನ ನಾರು. ಬೇಕಾದಷ್ಟು ಪ್ರಮಾಣ ಒಣಹೊಟ್ಟು. ಒಣಹೊಟ್ಟಿನ ಎರಡರಷ್ಟು ಪ್ರಮಾಣದ ಜಿಗುಟಾದ ಬಿಳಿ ಮಣ್ಣು. ಈ ಮಣ್ಣಿನ ಅರ್ಧದಷ್ಟು ಜಿನುಗಾದ ಉಸುಕು. ಕೆಲವು ಹತ್ತಿಯಂತಹ ವಸ್ತುಗಳನ್ನು ಸೇರಿಸಿ ಚನ್ನಾಗಿ ಅರೆದು ಮಂದ ಮಿಶ್ರಣ ಮಾಡಿ ಈಗಾಗಲೇ ತಯಾರಿಸಿದ ಭಿತ್ತಿಗೆ ಲೇಪಿಸಬೇಕು. ಇದನ್ನು ಭಿತ್ತಿಯು ಸಮತಟ್ಟು ಆಗಿ ನುಣುಪುಗೊಳ್ಳುವವರೆಗೂ ಲೇಪಿಸುತ್ತಿರಬೇಕು ಎನ್ನುತ್ತದೆ.

**ವಿಧಾನ ೩ :** ಸಮರಾಂಗಣ ಸೂತ್ರಧಾರವು[೩೨] ಸ್ವಚ್ಛವಾದ. ಸೂಕ್ಷ್ಮವಾದ ಕಲ್ಲು ಹರಳುಗಳಿಂದ ಮುಕ್ತವಾದ ಮಣ್ಣನ್ನು (ಬಿಳಿ) ತೆಗೆದುಕೊಂಡು ಅದಕ್ಕೆ ಎರಡರಷ್ಟು ಪ್ರಮಾಣದ ಸೂಕ್ಷ್ಮ ಮರಳನ್ನು ಸೇರಿಸಬೇಕು. ಇದಕ್ಕೆ ಶಾಲ್ಮಲಗಿಡ. ಬಿಲ್ವಪತ್ರಿಕಾಯಿ. ಕಾಕುವಗಿಡ ಇವುಗಳಿಂದ ಪಡೆದ ಜಿಗುಟಾದ ರಸವನ್ನು ತೆಗೆದುಕೊಂಡು ಮಿಶ್ರ ಮಾಡಬೇಕು. ಈ ಮಂದ ಮಿಶ್ರಣವನ್ನು ಭಿತ್ತಿ ನುಣುಪಾಗುವವರೆಗೂ ಲೇಪಿಸುತ್ತಿರಬೇಕು " ಎಂದು ಹೇಳಿದೆ. ಶಿಲ್ಪರತ್ನ ಗ್ರಂಥದಲ್ಲಿ[೩೩] " ಭಿತ್ತಿಯನ್ನು ಸಮತಟ್ಟುಗೊಳಿಸಲು ಮತ್ತು ನುಣುಪುಗೊಳಿಸಲು ಹೇಳಿದೆ. ಗೋಡೆಗೆ ಈ ಮೊದಲೇ ಲೇಪಿಸಲಾದ ಗಾರೆಯ ಮಿಶ್ರಣ ಒಣಗಿದ ನಂತರ ಅದೇ ಬೆಣ್ಣೆಯಂತ ಮಿಶ್ರಣಕ್ಕೆ ಜೇನುಬೆಲ್ಲದ ನೀರನ್ನು ಬೆರೆಸಿ ಕಲೆಸಿಕೊಂಡು ಮಂದವಾಗಿ ಮಾಡಿಕೊಂಡು ತ್ಯಾಪಿಯಂತಹ (Trowel) ಸಾಧನಗಳನ್ನು ಬಳಸಿ ಮತ್ತೆ ಮತ್ತೆ ಲೇಪಿಸಬೇಕು.

---

೩೦. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ. ಅಧ್ಯಾಯ ೭೨. ಪುಟ - ೩೫೮

೩೧. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ. ಅಧ್ಯಾಯ ೭೨. ಪುಟ - ೩೫೮-೫೯

೩೨. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ. ಅಧ್ಯಾಯ ೭೨. ಪುಟ - ೩೬೦

೩೩. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ. ಭಾಗ I. ಅಧ್ಯಾಯ ೪೦. ಶ್ಲೋಕ ೨೫

ಎಲ್ಲೂ ಉಬ್ಬು-ತಗ್ಗುಗಳಿಲ್ಲದಂತೆ ನೋಡಿಕೊಳ್ಳಬೇಕು. ಭಿತ್ತಿ ಸಮತಟ್ಟುಗೊಂಡ ನಂತರ ಅದನ್ನು ಆರಲು ಬಿಟ್ಟು ಅದು ಒಣಗಿದ ನಂತರ ಸ್ವಚ್ಛವಾದ ನೀರಿನಿಂದ ತೆಂಗಿನ ನಾರನ್ನು ಉಪಯೋಗಿಸಿ ತಿಕ್ಕಿ ತಿಕ್ಕಿ ತೊಳೆಯಬೇಕು. ಹೀಗೆ ಮಾಡುವದರಿಂದ ಭಿತ್ತಿಯು ನುಣುಪಾಗಿ ಹೊಳಪುಳ್ಳದ್ದಾಗುವುದು.

ಕಾಶ್ಯಪ ಶಿಲ್ಪಶಾಸ್ತ್ರದಲ್ಲಿ [೩೪] ಭಿತ್ತಿ ನುಣುಪುಗೊಳಿಸುವದನ್ನು ಹೀಗೆ ವಿವರಿಸಲಾಗಿದೆ. " ನದೀ, ಪುಷ್ಕರಣಿ, ಕೆರೆ. ಪೈರು ಬೆಳೆದಿರುವ ಭೂಮಿ ಇವುಗಳಲ್ಲಿ ಉಪ್ಪು ನೀರು ಇಲ್ಲದೇ ಇರುವ ಶುದ್ಧವಾದ ನೀರು ಇರುವ, ದೊಡ್ಡ ಮರಳು ಇಲ್ಲದ. ಸಣ್ಣ ಮರಳಿನಿಂದ ಮಿಶ್ರವಾಗಿರುವ ಮಣ್ಣನ್ನು ತೆಗೆದುಕೊಂಡು ಅದಕ್ಕೆ ತ್ರಿಫಲಾ ಕಷಾಯವನ್ನು ಬೆರೆಸಿ ಚನ್ನಾಗಿ ಮರ್ದಿಸಬೇಕು. ಆಮೇಲೆ ಬೇಲದ ಕಾಯಿಯ ರಸವನ್ನು ಮಿಶ್ರಮಾಡಿ ಚನ್ನಾಗಿ ಬೆಣ್ಣೆಯಂತಾಗುವವರೆಗೆ ಕಲಕಬೇಕು. ಈ ಬೆಣ್ಣೆಯಂತಹ ಮಂದ ಮಿಶ್ರಣವನ್ನು ಭಿತ್ತಿಗೆ ಎರಡರಿಂದ ಮೂರು ಬಾರಿ ಲೇಪಿಸಬೇಕು. ಸಂದುಗಳು, ತಗ್ಗುಗಳು. ಇರದಂತೆ ಮಾಡಬೇಕು. ಹೀಗೆ ಮೇಲ್ಮೈಯನ್ನು ನುಣುಪಾಗುವಂತೆ ಈ ಮಿಶ್ರಣವನ್ನು ಲೇಪಿಸುತ್ತಿರಬೇಕು. ಆಮೇಲೆ ಇದು ಒಣಗಿದ ನಂತರ ಬಿಳಿ ಹಿನ್ನೆಲೆ ಲೇಪಿಸಿ ವರ್ಣಸಂಸ್ಕಾರ ಕೈಗೊಳ್ಳಬೇಕು. "

'ಸುಧಾಲೇಪ ವಿಧಾನ' ಎಂಬ ಗ್ರಂಥದಲ್ಲಿ [೩೫] " ಭಿತ್ತಿಯನ್ನು ಸಮತಟ್ಟುಗೊಳಿಸಲು ಮತ್ತು ನುಣುಪುಗೊಳಿಸಲು ಈ ಕೆಳಗಿನ ಕ್ರಮ ಹೇಳಲಾಗಿದೆ. " ಭಿತ್ತಿಗೆ ಮೊದಲು ಲೇಪಿಸಿದ ಮಿಶ್ರಣ ಸ್ವಲ್ಪ ಆರಿದ ನಂತರ, ಭಿತ್ತಿಯ ಮೇಲೆ ಮತ್ತೆ ಮತ್ತೆ ಅದೇ ಮಿಶ್ರಣ ಲೇಪಿಸುತ್ತಿರಬೇಕು. ಈ ಹಂತದಲ್ಲಿ ಮಿಶ್ರಣ ಲೇಪಿಸಲು ಗೌಂಡಿಗಳು ಸಿಮೆಂಟ್ ಮಾಡಲು ಉಪಯೋಗಿಸುವ ಥ್ಯಾಪಿ (Trowel) ಸಾಧನಗಳನ್ನು ಉಪಯೋಗಿಸಬೇಕು. ಅವು ಕಬ್ಬಿಣ ಅಥವಾ ಕಟ್ಟಿಗೆ ಎರಡರಿಂದಲೂ ಮಾಡಿದ್ದು ನುಣುಪಾದ ಮೈಯನ್ನು ಹೊಂದಿರುತ್ತವಲ್ಲದೆ ಬೇರೆ ಬೇರೆ ಅಳತೆಯಲ್ಲೂ ಇರುತ್ತವೆ. ಭಿತ್ತಿ ಸಮತಟ್ಟುಗೊಂಡಾಗ ಅದನ್ನು ನುಣುಕುಗೊಳಿಸಲು ಟೆಂಗಿನ ನಾರಿನಂತಹ ಕುಂಚಗಳನ್ನು ಉಪಯೋಗಿಸಿ. ಸ್ವಚ್ಛವಾದ ನೀರು ಚಿಮುಕಿಸುತ್ತ ತೊಳೆಯಬೇಕು. ಹೀಗೆ ತೊಳೆಯುವದರಿಂದ ಭಿತ್ತಿಯು ನುಣುಪಾಗಿ ಹಿನ್ನೆಲೆ ವರ್ಣ ಲೇಪನಕ್ಕೆ ತಕ್ಕುದಾಗುತ್ತದೆ. "

**೪. ಹಿನ್ನೆಲೆ ಲೇಪನ ಹಂತ :** ಭಿತ್ತಿ ಸಿದ್ಧತೆಯು ಪೂರ್ಣವಾಗಬೇಕಾದರೆ ಹಿನ್ನೆಲೆ ಲೇಪನ ಕಾರ್ಯ ಮುಗಿದಾಗಲೇ ಎನ್ನಬಹುದು. ಕೆಲವು ವೇಳೆ ಹಿನ್ನೆಲೆ ಲೇಪನವನ್ನೇ ಭಿತ್ತಿಯಾಗಿ ಪರಿಗಣಿಸಲಾಗುತ್ತದೆ. ಬಾದಾಮಿ ಪ್ರಾಗೈತಿಹಾಸಿಕ ಬಂಡೆ ಚಿತ್ರಗಳಲ್ಲಿ ತೆಳುವಾದ ಹಿನ್ನೆಲೆ ಲೇಪನದ ಮೇಲೆಯೇ ಚಿತ್ರ ರಚಿಸಿದ್ದು ಇಲ್ಲಿ ಹಿನ್ನೆಲೆ ಲೇಪನವೇ ಭಿತ್ತಿಯಾಗಿಯೂ ಪರಿಗಣಿತವಾಗಿದೆ. ಹಾಗೇ ಕ್ಯಾನ್‌ವಾಸ್ ಪೇಂಟಿಂಗ್‌ನಲ್ಲೂ ಹಿನ್ನೆಲೆ ಲೇಪನವೇ ಭಿತ್ತಿಯಾಗಿರುವುದು. ಭಿತ್ತಿ ಹಸಿ ಇರುವಾಗ ಚಿತ್ರ ರಚಿಸುವ ಫ್ರೆಸ್ಕೋಬ್ಯುನೋ ವಿಧಾನಕ್ಕಿಂತ ಒಣದಾದ ಭಿತ್ತಿಯ ಮೇಲೆ ಚಿತ್ರ ರಚಿಸುವ ವಿಧಾನಗಳಲ್ಲಿ ಹಿನ್ನೆಲೆ ಲೇಪನಕ್ಕೆ ಹೆಚ್ಚು ಮಹತ್ವವಿದೆ. [೩೬] ಎಂದು ಹೇಳಲಾಗುತ್ತದೆ. ಸಮರಾಂಗಣ ಸೂತ್ರಧಾರ,

---

೩೪. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ. ಅಧ್ಯಾಯ ೮೬. ಪುಟ - ೬೪೯

೩೫. V. V. Sharma : Sudhalepavidhana, Page - 175

೩೬. Jayanth Chakravarthi : Techniques in Indian Mural Painting, Page - 31

ಶಿಲ್ಪರತ್ನ, ವಿಷ್ಣುಧರ್ಮೋತ್ತರ, ಮತ್ತು ಮಾನಸೋಲ್ಲಾಸ ಗ್ರಂಥಗಳು ಹಿನ್ನೆಲೆ ಲೇಪನದ ಬಗ್ಗೆ ಹೇಳಿವೆ. ಸಮರಾಂಗಣ ಸೂತ್ರಧಾರವು [೩೭] ಭಿತ್ತಿ ತಯಾರಿಕೆಯ ಕೊನೆಯ ಹಂತವಾಗಿ ಹಿನ್ನೆಲೆ ಲೇಪನವನ್ನು ಹೇಳಿದ್ದು, ಇದಕ್ಕಾಗಿ ಒಂದು ಅಧ್ಯಾಯವನ್ನೇ ಅದು ಮೀಸಲಿರಿಸಿದೆ. ಈ ಗ್ರಂಥದಲ್ಲಿ ಲೇಪನ ಕರ್ಮ–ಮೃತ್ತಿಕ ನಿರ್ಣಯ ಎಂದು ಇದಕ್ಕೆ ಹೇಳಲಾಗಿದೆ.

ವಿಷ್ಣು ಧರ್ಮೋತ್ತರ ಪುರಾಣವು [೩೮] ಹಿನ್ನೆಲೆ ಲೇಪನಕ್ಕಾಗಿ ಎರಡು ವರ್ಣ ಛಾಯೆಗಳನ್ನು ಹೇಳುತ್ತದೆ. ಅದು ಹೇಳುವ ಒಂದು ಹಿನ್ನೆಲೆ ವರ್ಣ ಕಪ್ಪು ಆಗಿದ್ದು ಇನ್ನೊಂದನ್ನು ಅದು ಹೆಸರಿಸಿಲ್ಲ. ಆ ಇನ್ನೊಂದು ಹಿನ್ನೆಲೆ ಲೇಪನ ವರ್ಣ ಸುಣ್ಣದ ಬಿಳಿಯಾಗಿರಬೇಕೆಂದು ಜಯಂತ ಚಕ್ರವರ್ತಿ ಅವರು [೩೯] ಊಹಿಸುತ್ತಾರೆ. ವಿಷ್ಣು ಧರ್ಮೋತ್ತರದಲ್ಲಿ ಹಿನ್ನೆಲೆ ಲೇಪನಕ್ಕೆ ಕಪ್ಪು ವರ್ಣ ಉಪಯೋಗಿಸಲು ಹೇಳಿದ್ದನ್ನು 'ಓಲ್ಲೇನಾರ್ಡ್‌ಮಾರ್ಕ' ಅವರು [೪೦] ಹೀಗೆ ಅರ್ಥೈಸುತ್ತಾರೆ– "ಬಿಳುಪಿನ ಅತಿಯಾದ ಹೊಳಪನ್ನು ಕಡಿಮೆ ಮಾಡಲು ಕೆಲವು ಸಂದರ್ಭಗಳಲ್ಲಿ ಬಿಳಿ ಹಿನ್ನೆಲೆಗೆ ಕಪ್ಪು ವರ್ಣ ಮಿಶ್ರಮಾಡಿ ಲೇಪಿಸುತ್ತಿರಬೇಕು ಎನ್ನುತ್ತಾರೆ. ಓಲ್ಲೇನಾರ್ಡಮಾರ್ಕ್ ಅವರು ಭಿತ್ತಿಚಿತ್ರಗಳಿಗಾಗಿ ಉತ್ತಮ ಹಿನ್ನೆಲೆ ಲೇಪನವು ಮಸುಕಾದ ವರ್ಣವಾಗಿದ್ದು ಇದು ಬಿಳಿ ಮತ್ತು ಕಪ್ಪು ವರ್ಣ ಬೆರೆಸಿದಾಗ ಉಂಟಾಗುವದೆಂದು [೪೧] ತಿಳಿಸುತ್ತಾರೆ. ಪ್ರಾಚೀನ ಭಿತ್ತಿಚಿತ್ರಗಳಲ್ಲಿ ಬರೀ ಸುಣ್ಣ ಒಂದನ್ನೇ ಹಿನ್ನೆಲೆ ಲೇಪನಕ್ಕೆ ಅಲ್ಲಲ್ಲಿ ಬಳಸಿದ್ದರೂ ಹೆಚ್ಚಿನ ಸಂದರ್ಭಗಳಲ್ಲಿ ಸುಣ್ಣದೊಂದಿಗೆ (ಬಿಳಿ) ಬೇರೆ ವರ್ಣಗಳಾದ ಕಪ್ಪು, ಹಳದಿ, ಕೆಂಪು, ನಸುಗೆಂಪು ಮುಂತಾದ ವರ್ಣಗಳನ್ನು ಬೆರಕೆ ಮಾಡಿ ಉಪಯೋಗಿಸಿದ್ದನ್ನು [೪೨] ವಿದ್ವಾಂಸರು ಗುರುತಿಸಿದ್ದಾರೆ. ಈ ರೀತಿ ಬೇರೆ ಬೇರೆ ವರ್ಣಗಳ ಮಿಶ್ರಣ ಮಾಡಿ ಹಿನ್ನೆಲೆ ಲೇಪಿಸುವುದು ಬಹುಶಃ ಹಿನ್ನೆಲೆ ಲೇಪನ ವರ್ಣದ ಹೆಚ್ಚಿನ ಪ್ರಕಾಶ ಕಡಿಮೆ ಮಾಡಿ ಕಣ್ಣಿಗೆ ತಂಪಾಗಿ ಕಾಣುವಂತೆ ಮಾಡುವ ಉದ್ದೇಶವಿದ್ದಿರಬೇಕು.

ಸಮರಾಂಗಣ ಸೂತ್ರಧಾರವು [೪೩] ಹಿನ್ನೆಲೆ ಲೇಪನವನ್ನು ಹೀಗೆ ಮಾಡಬೇಕೆಂದು ಹೇಳುತ್ತದೆ. ಬಿಳಿಯ ಮಣ್ಣನ್ನು ತೆಗೆದುಕೊಂಡು ಅದನ್ನು ಕಲ್ಲು-ಹರಳು ಇರದಂತೆ ಚನ್ನಾಗಿ ಶೋಧಿಸಬೇಕು (ಸೋಸಬೇಕು). ಅದಕ್ಕೆ ಜಿಪ್ಸಮ್ ಅಥವಾ ಮಾರ್ಬಲ್ ಪುಡಿಯನ್ನು ಶೋಧಿಸಿ ಕೂಡಿಸಬೇಕು. ಅದಕ್ಕೆ ಕಲ್ಲುಸಕ್ಕರೆಯ ಪುಡಿಯನ್ನು ಬೆರೆಸಿ ಒಟ್ಟಾಗಿ ಚನ್ನಾಗಿ ಮಿಶ್ರವಾಗುವಂತೆ ಕಲಕಬೇಕು. ಈ ಮಿಶ್ರಣಕ್ಕೆ ಸ್ವಲ್ಪ ನೀರು ನಂತರ ಶಾಲ್ಮಲಗಿಡ, ಅಶೋಕ ಗಿಡ, ಕಾಕುಭಗಿಡ, ತ್ರಿಫಲೋದ್ಭವಗಿಡ ಈ ಎಲ್ಲ ಗಿಡಗಳಿಂದ ಸಂಗ್ರಹಿಸಿದ ಅಂಟನ್ನು ಹಾಕಿ ಮಿಶ್ರಣ ಮಾಡಬೇಕು. ಮಂದವಾದ ಮಿಶ್ರಣಕ್ಕೆ ಬೆಣ್ಣೆಯ ಹಾಗಿರುವ ಸುಣ್ಣವನ್ನು ಹಾಕಿ ಚನ್ನಾಗಿ ಕಲಕಬೇಕು. ಆಮೇಲೆ ಇದಕ್ಕೆ ಜೇನುಮೇಣವನ್ನು ಸೇರಿಸಿ ಕಲಕಿಕೊಂಡು ಕುಂಚಗಳ ಸಹಾಯದಿಂದ ಭಿತ್ತಿಗೆ ಲೇಪಿಸಬೇಕು. ಮೇಲೆ ಹೇಳಲಾದ ಮಣ್ಣು ನಿರ್ದಿಷ್ಟ ಸ್ಥಳಗಳಿಂದ

---

೩೭. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ, ಅಧ್ಯಾಯ ೭೩, ಶ್ಲೋಕ ೧ ರಿಂದ ೧೨

೩೮. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೪೦, ಶ್ಲೋಕ ೩೨೮

೩೯. Jayanth Chakravarthi : ಪೂರ್ವೋಕ್ತ, ಪುಟ - ೩೨

೪೦. Olle Nard Mark : Fresco Painting, Page - 14

೪೧. – ಅದೇ –

೪೨. Jayanth Chakravarthi : Techniques in Indian Mural Painting, Page - 32

೪೩. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ, ಅಧ್ಯಾಯ ೭೩, ಶ್ಲೋಕ ೧ ರಿಂದ ೧೧

ತೆಗೆದುಕೊಂಡಿರಬೇಕು. ಅಂದರೆ ನದಿದಂಡೆ, ಕಮಲದ ಹೂವಿನ ಕೊಳದ ದಂಡೆ, ಪರ್ವತ ಪ್ರದೇಶ ಮುಂತಾದ ಸ್ಥಳಗಳಿಂದ ತೆಗೆದುಕೊಂಡ ಬಿಳಿದಾದ ಮಣ್ಣನ್ನು ಶೋಧಿಸಿಕೊಳ್ಳಬೇಕೆಂದು ಹೇಳುತ್ತದೆ.

ಶಿಲ್ಪರತ್ನ ಗ್ರಂಥವು [೬೪] ಎರಡು ರೀತಿಯ ಹಿನ್ನೆಲೆ ಲೇಪನವನ್ನು ಹೇಳಿದ್ದು, ಒಂದು ಟೆಂಪರಾ ವಿಧಾನಕ್ಕೆ ಇನ್ನೊಂದು ಫ್ರೆಸ್ಕೋ ವಿಧಾನಕ್ಕೆ ವಜ್ರಲೇಪದಲ್ಲಿ ಬಿಳಿ ಕಲ್ಲಿನ ಪುಡಿ, ಸುಣ್ಣ, ಶಂಖ ಚೂರ್ಣ, ಬಿಳಿಮಣ್ಣು, ಜಿಪ್ಸಮ್ ಇವುಗಳನ್ನು ಸೇರಿಸಿ ಹಿನ್ನೆಲೆ ಲೇಪಿಸುವುದು ಟೆಂಪರಾ ವಿಧಾನಕ್ಕಾದರೆ, ಅತ್ಯಲ್ಪ ಪ್ರಮಾಣದ ಮರದ ಅಂಟನ್ನು ಹೆಚ್ಚಿನ ಭಾಗದ ಸುಣ್ಣದಲ್ಲಿ ಸೇರಿಸಿ ಹಲವಾರು ಸಲ ಪದರ ಪದರವಾಗಿ ಹಿನ್ನೆಲೆ ಲೇಪಿಸುವದು ಫ್ರೆಸ್ಕೋ ಸೆಕ್ಕೋ ವಿಧಾನದ ಹಿನ್ನೆಲೆ ಲೇಪನ ವಿಧಾನವಾಗಿದೆ ಎಂದು ಅದು ಹೇಳುತ್ತದೆ. ಈ ಗ್ರಂಥವು ಸುಣ್ಣದೊಡನೆ ಮಿಶ್ರ ಮಾಡಲು ಬೇಲದ ಕಾಯಿಯ ಅಂಟನ್ನು ಮತ್ತು ನಿಂಬಗಿಡದ ರಸವನ್ನು ಹೇಳುವುದು. ಹಿನ್ನೆಲೆ ಲೇಪನವನ್ನು ಸಕೋಟಾ ಗಿಡದಿಂದ ರಚಿಸಲಾದ ನಾರಿನ ಕುಂಚದಿಂದ ಇಲ್ಲವೇ ಕೇತಕಿ ಗಿಡದಿಂದ ರೂಪಿತಗೊಂಡ ಕುಂಚದಿಂದ ಲೇಪಿಸಲು ಹೇಳಿದೆ.

ಹಿನ್ನೆಲೆ ಲೇಪನ ತಯಾರಿಕೆಯ ಪ್ರಾಚೀನ ಪದ್ಧತಿಯೊಂದನ್ನು ಜಯಂತ್ ಚಕ್ರವರ್ತಿಯವರು [೬೫] ಹೀಗೆ ಹೇಳುತ್ತಾರೆ. " ಕಲ್ಲಿನ ತಗ್ಗಾದ ಪ್ರದೇಶದಲ್ಲಿ (ಕಲ್ಲಿನ ಒರಳು) ಗಟ್ಟಿಯಾದ ಸುಣ್ಣದ ಹರಳನ್ನು ಕುಟ್ಟಿ ಪುಡಿಮಾಡಿ ಈ ಪುಡಿಯನ್ನು ಅರಿವೆಯ ಮುಖಾಂತರ ಸೋಸಿಕೊಂಡು ಆ ಮೃದುವಾದ ಪುಡಿಗೆ ಟೆಂಗಿನ ಎಳೆನೀರನ್ನು ಹಾಕಿ ಕಲೆಸಿಕೊಳ್ಳಬೇಕು. ಈ ಮಂದ್ರ ಮಿಶ್ರಣವನ್ನು ಮತ್ತೆ ಒರಳಲ್ಲಿ ಹಾಕಿ ಚನ್ನಾಗಿ ರುಬ್ಬಿಕೊಂಡು ನಂತರ ಒಲೆಯ ಮೇಲಿಟ್ಟು ಕುದಿಸಬೇಕು. ಸ್ವಲ್ಪ ಹೊತ್ತಿನ ನಂತರ ಕುದಿದ ಈ ಮಿಶ್ರಣ ಬೆಣ್ಣೆಯ ಹಾಗೆ ನುಣುಪಾಗಿರುವುದು. ಇವನ್ನು ತೆಗೆದುಕೊಂಡು ಹಿನ್ನೆಲೆ ಲೇಪನ ಕಾರ್ಯ ಮಾಡಬೇಕು.

ಹಿನ್ನೆಲೆ ಲೇಪನಕ್ಕೆ ಬಿಳಿಮಣ್ಣು, ಸುಣ್ಣ, ಕಪ್ಪೆ ಚಿಪ್ಪಿನ ಸುಣ್ಣ, ನೀಲಗಿರಿ ಪರ್ವತದಲ್ಲಿ ದೊರೆಯುವ ಬಿಳಿದಾದ ಕಲ್ಲು, ಮಾರ್ಬಲ್, ಕೋಲಿನ್, ಮತ್ತು ಜಿಪ್ಸಮ್‌ಗಳನ್ನು [೬೬] ಮತ್ತು ಇವುಗಳ ಜೊತೆಗೆ ಮಿಶ್ರಮಾಡಲು ವಜ್ರಲೇಪ, ಮರದ ಅಂಟು, ವಿವಿಧ ಗಿಡದ ರಸಗಳನ್ನು ಅಂಟು ಮಾಧ್ಯಮವಾಗಿ ಬಳಸಿದ ವಿವರಗಳು ತಿಳಿದುಬರುತ್ತವೆ. ಸಾಮಾನ್ಯವಾಗಿ ಹಿನ್ನೆಲೆ ಲೇಪನವು ಬಿಳಿಯ ವರ್ಣಕ್ಕಾಗಿರುವುದೇ ಆದರೂ ಹಲವು ಸಂದರ್ಭಗಳಲ್ಲಿ ತಿಳಿಹಳದಿ, ತಿಳಿಕೆಂಪು, ನಸುಗೆಂಪು ಅಥವಾ ಕಂದು ಹೀಗೆ ವಿವಿಧ ವರ್ಣಛಾಯೆಗಳಿಂದ ಕೂಡಿರುವುದೂ ಕಂಡುಬರುತ್ತದೆ. ಕಲಾವಿದರ ಅಭಿರುಚಿಯನ್ನು ಅವಲಂಬಿಸಿ ಇದು ನಿರ್ಧಾರವಾಗುವುದು. ಗುಳೇದಗುಡ್ಡದ ಹೊಸಮನಿಗೌಡರ ಮನೆಯ ಭಿತ್ತಿಚಿತ್ರಗಳಲ್ಲಿ ಹಿನ್ನೆಲೆ ಲೇಪನವು ಬೂದು ವರ್ಣದ್ದಾಗಿದ್ದರೆ, ನಿಪ್ಪಾಣಿಯ ರಾಜವಾಡೆಯಲ್ಲಿನ ಭಿತ್ತಿಯ ಹಿನ್ನೆಲೆಯು ಕಂದುಗೆಂಪು ವರ್ಣದಿಂದ ಕೂಡಿದೆ.

ಹೀಗೆ ಕಟ್ಟಡದ ಗೋಡೆ, ಮೇಲ್ಛಾವಣಿಗಳಿಗೆ ಭಿತ್ತಿಸಿದ್ಧತೆಗೊಳಿಸಿ ಚಿತ್ರ ರಚಿಸುವ ಪ್ರಮುಖ ವಿಧಾನ ಇದಾದರೆ ಕಟ್ಟಡದ ಗೋಡೆ ಮೇಲ್ಛಾವಣಿ ಅಥವಾ ಇತರ ಯಾವುದೇ ಭಾಗಕ್ಕೆ ಅಳವಡಿಸಿದ ಮರ, ಲೋಹ, ಗಾಜುಗಳಂತಹ

---

೬೪. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೨೮ ರಿಂದ ೩೪
೬೫. Jayanth Chakravarthi : Techniques in Indian Mural Painting, Page - 35
೬೬. Jayanth Chakravarthi : Techniques in Indian Mural Painting, Page - 34

ಭಿನ್ನಭಿನ್ನ ಮಾಧ್ಯಮಗಳ ಮೇಲೆಯೂ ಆಯಾ ಮಾಧ್ಯಮಕ್ಕೆ ಸೂಕ್ತವಾದ ಭಿತ್ತಿ ತಯಾರಿಸಿ, ಇಲ್ಲವೆ ಸಂಸ್ಕರಣಗೊಳಿಸಿ ಚಿತ್ರ ರಚಿಸಿದ್ದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಉತ್ತರ ಕರ್ನಾಟಕದ ಭಿತ್ತಿಚಿತ್ರ ರಚನಾ ಮಾಧ್ಯಮಗಳನ್ನು ೬ ರೀತಿಯಲ್ಲಿ ವಿಂಗಡಿಸಿಕೊಂಡು ಅಧ್ಯಯನ ಮಾಡಬಹುದಾಗಿದೆ.

## III. ಭಿತ್ತಿಯ ಭಿನ್ನ ಮಾಧ್ಯಮಗಳು

೧. ಶಿಲಾ ಮಾಧ್ಯಮ

೨. ಮಣ್ಣು ಮಾಧ್ಯಮ

೩. ಗಾರೆ ಮಾಧ್ಯಮ

೪. ಮರ ಮಾಧ್ಯಮ

೫. ಲೋಹ ಮಾಧ್ಯಮ

೬. ಗಾಜು ಮಾಧ್ಯಮ

**೧. ಶಿಲಾ ಮಾಧ್ಯಮ :** ಪ್ರಪಂಚದಲ್ಲಿ ಅತ್ಯಂತ ಪುರಾತನ ಭಿತ್ತಿಚಿತ್ರಕಲೆಯ ನಿದರ್ಶನಗಳೆಂದರೆ ಶಿಲೆಯ ಮೇಲೆ ರಚನೆಯಾದ ಚಿತ್ರಗಳೇ ಆಗಿವೆ.

ಈ ದೃಷ್ಟಿಯಿಂದ ಭಿತ್ತಿಚಿತ್ರ ರಚನಾ ಮಾಧ್ಯಮದಲ್ಲಿ ಶಿಲೆ ಮೊದಲ ಮಾಧ್ಯಮವಾಗಿದೆ ಎನ್ನಬಹುದು. ಪ್ರಾಗಿತಿಹಾಸ ಕಾಲದಲ್ಲಿ ಶಿಲಾಶ್ರಯ ತಾಣಗಳು, ಶಿಲಾ ಗುಹೆಗಳು, ಬಯಲು ಬಂಡೆಗಳ ಮೇಲೆ ಮಾನವನು ಭಿತ್ತಿಚಿತ್ರ ರಚಿಸಿದ್ದಾನೆ. ಜಗತ್ತಿನ ಅನೇಕ ದೇಶಗಳಲ್ಲಿ ಇಂತಹ ಶಿಲೆಗಳ ಮೇಲಿನ ಭಿತ್ತಿಚಿತ್ರಗಳು ಕಂಡುಬಂದಿವೆ. "ಫ್ರಾನ್ಸ್, ಸ್ಪೇನ್, ಆಫ್ರಿಕಾ, ಆಸ್ಟ್ರೇಲಿಯಾ ಮುಂತಾದ ಇತರ ಅನೇಕ ದೇಶಗಳಲ್ಲಿ ಶಿಲೆ ಮೇಲೆ ರಚನೆಯಾದ ಭಿತ್ತಿಚಿತ್ರಗಳಿವೆ. ಭಾರತದಲ್ಲೂ ಶಿಲೆ ಮೇಲೆ ರಚನೆಯಾದ ಪ್ರಾಗಿತಿಹಾಸ ಕಾಲದ ಭಿತ್ತಿಚಿತ್ರಗಳು ವಿಪುಲ ಸಂಖ್ಯೆಯಲ್ಲಿ ಕಂಡುಬಂದಿದ್ದು, ಇಂದು ಪ್ರಾಗಿತಿಹಾಸ ಕಾಲದ ಶಿಲೆ ಮೇಲಿನ ಭಿತ್ತಿಚಿತ್ರಗಳಿಗೆ ಭಾರತವೇ ಮೊದಲ ಸ್ಥಾನದಲ್ಲಿದೆ [೪೭] ಎಂದು ವಿದ್ವಾಂಸರ ಅಭಿಪ್ರಾಯ.

ಭಾರತದಲ್ಲಿ ಭಿಂಬೇಟ್ಕಾ, ಮಿರ್ಜಾಪುರ, ವಾರಣಾಸಿ, ಪಚ್ಚಮರಿ, ರೈಜಿನ್, ಹೊಷಂಗಾಬಾದ್, ರಾಯಘಡ, ಓರಿಸ್ಸಾ, ಬಿಹಾರ್, ಎಡಕಲ್ಲು, ಕರ್ನೂಲ್, ಅಬುಬೆಟ್ಟ, ಗ್ವಾಲಿಯರ್, ಚಂಬಲ್, ಸಾಗರ್ ಹೀಗೆ ಇನ್ನೂ ಅನೇಕ ಸ್ಥಳಗಳಲ್ಲಿ ಶಿಲೆಯ ಮೇಲಿನ ಭಿತ್ತಿಚಿತ್ರಗಳು [೪೮] ಕಂಡು ಬಂದಿವೆ. ಕರ್ನಾಟಕದಲ್ಲಿ, ಅದರಲ್ಲೂ ಉತ್ತರ ಕರ್ನಾಟಕ ಭಾಗದಲ್ಲಿ, ಹೆಚ್ಚಿನ ಸಂಖ್ಯೆಯ ಪ್ರಾಗಿತಿಹಾಸ ಕಾಲದ ಶಿಲಾ ಮಾಧ್ಯಮದ ಮೇಲೆ ರಚನೆಯಾದ ಭಿತ್ತಿಚಿತ್ರಗಳು, ಬಾದಾಮಿ, ಐಹೊಳೆ, ರಾಮದುರ್ಗ, ರಾಯಚೂರು, ಕೊಪ್ಪಳ, ಲಿಂಗಸುಗೂರು, ಹಿರೇಬೆನಕಲ್, ಬಳ್ಳಾರಿ, ಹೊಸಪೇಟೆ, ಹಂಪಿ, ತಾವರಗೆರೆ, ಹೊಳಲೂರು, ಸೋಂದಾ ಮುಂತಾದ [೪೯] ಅನೇಕ ಪ್ರದೇಶಗಳಲ್ಲಿ ಕಂಡುಬರುತ್ತಿವೆ. ಶಿಲಾ

---

೪೭. Yashodhar Mathpal : Prehistoric Rock Paintings of Bhimbetka, Page - 10

೪೮. – ಅದೇ –

೪೯. ಉತ್ತರ ಕರ್ನಾಟಕದ ಶಿಲಾ ಮಾಧ್ಯಮದ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳ ಬಗ್ಗೆ ಹೆಚ್ಚಿನ ವಿವರಣೆ ಆರನೆಯ ಅಧ್ಯಾಯದಲ್ಲಿ ಇದೆ.

ಮಾಧ್ಯಮದ ಮೇಲೆ ಭಿತ್ತಿಚಿತ್ರ ರಚನೆ ಮಾಡುವಾಗ ಒಂದೇ ವಿಧಾನ ಅನುಸರಿಸದೇ ವಿವಿಧ ರೀತಿಯಲ್ಲಿ ಚಿತ್ರಗಳನ್ನು ರಚನೆ ಮಾಡಲಾಗಿದೆ. ಶಿಲೆಯ ಮೇಲೆ ಚೂಪಾದ ಸಾಧನದಿಂದ ಗೀರಿ, ಕೊರೆದು, ಇಲ್ಲವೇ ಕುಟ್ಟಿ ರಚಿಸಿದ ಚಿತ್ರಗಳಲ್ಲದೇ, ಶಿಲೆಯ ಮೇಲೆ ಬಣ್ಣಗಳಿಂದ ರಚಿಸಿದ ಭಿತ್ತಿಚಿತ್ರಗಳೂ ಕಂಡುಬರುತ್ತವೆ. ಉತ್ತರ ಕರ್ನಾಟಕದಲ್ಲಿ ಈ ಎರಡೂ ಬಗೆಯ ಚಿತ್ರಗಳೂ ಇವೆ.

**ಶಿಲಾ ಮಾಧ್ಯಮ ಸಿದ್ಧತಾ ವಿಧಾನ :** ಶಿಲೆ ಮೇಲೆ ಭಿತ್ತಿಚಿತ್ರ ರಚನೆ ಮಾಡಬೇಕಾದಾಗ ಹೆಚ್ಚಿನ ಸಿದ್ಧತಾ ವಿಧಾನಗಳನ್ನು ಅನುಸರಿಸಿದ ಉದಾಹರಣೆ ಉತ್ತರ ಕರ್ನಾಟಕದಲ್ಲಿ ಕಂಡುಬರುವದಿಲ್ಲ. ಬಾದಾಮಿಯ ರಂಗನಾಥ ಬೆಟ್ಟದಲ್ಲಿರುವ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಬಂಡೆಯ ನುಣುಪಾದ ಭಾಗದಲ್ಲಿ ರಚನೆಯಾಗಿದ್ದು ಚಿತ್ರರಚನೆಗೆ ಮೊದಲು ಬಂಡೆಯನ್ನು ತಿಕ್ಕಿ ನುಣುಪುಗೊಳಿಸಿರಬಹುದಾದ ಸಾಧ್ಯತೆಗಿಂತಲೂ ಸ್ವಾಭಾವಿಕವಾದ ನುಣುಪು ಸ್ಥಳವನ್ನು ಆಯ್ದುಕೊಂಡು ಚಿತ್ರ ರಚನೆ ಮಾಡಿರುವ ಸಂಭವವೇ ಹೆಚ್ಚು.

ನಯಸೇನನ 'ಧರ್ಮಾಮೃತ ಗ್ರಂಥದಲ್ಲಿ [೫೦] " ಕಲ್ಲಂ ನುಣ್ಪು ಮಾಡದೇ ಚಿತ್ರ ಬರೆದಂತೆ " ಎಂದು ಸಿದ್ಧತೆ ಇಲ್ಲದೇ ಚಿತ್ರ ರಚನೆಗೆ ತೊಡಗುವುದನ್ನು ಉಪಮೆಯಿಂದ ಹೇಳಿದ್ದರೂ, ಕಲ್ಲಿನ ಮೇಲೆ ಚಿತ್ರರಚನೆಗಿಂತ ಮೊದಲು ಕಲ್ಲನ್ನು ತಿಕ್ಕಿ ನುಣುಪುಗೊಳಿಸುವ ಪದ್ಧತಿಯನ್ನು ತಿಳಿಸಿಕೊಡುತ್ತದೆ. ಶಿಲೆಯನ್ನು ನುಣುಪುಗೊಳಿಸುವ ಕ್ರಿಯೆಯನ್ನು ಹೊರತುಪಡಿಸಿ ಹೆಚ್ಚಿನ ಸಿದ್ಧತಾ ವಿಧಾನಗಳು ತಿಳಿದುಬರುವದಿಲ್ಲ.

**೨. ಮಣ್ಣು ಮಾಧ್ಯಮ :** ಮಣ್ಣಿನ ಭಿತ್ತಿರಚನೆ ಮಾಡಿ ಅದರ ಮೇಲೆ ಚಿತ್ರ ಬರೆಯುವ ಶಿಷ್ಟ ಪರಂಪರೆಯ ವಿಧಾನವನ್ನು ಈಗಾಗಲೇ ವಿವರಿಸಲಾಗಿದ್ದು ಈಗ ಮಣ್ಣಿನ ಮೇಲೆ ರಚಿಸುವ ಜನಪದ ಭಿತ್ತಿಚಿತ್ರಗಳನ್ನು ಕುರಿತು ಚರ್ಚಿಸಲಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಮನೆಗಳು, ಗುಡಿಸಲುಗಳು, ದೇವಾಲಯಗಳು, ಸಮಾಧಿಗಳು, ಗರಡಿ ಮನೆಗಳು, ದನದ ಕೊಟ್ಟಿಗೆಗಳು ಹೀಗೆ ವಿವಿಧ ವಾಸ್ತುಗಳನ್ನು ಭಿತ್ತಿಚಿತ್ರಗಳಿಂದ ಅಲಂಕರಿಸುವ ಪದ್ಧತಿಯನ್ನು ನಾವು ಈಗಲೂ ನೋಡಬಹುದು. ಇಲ್ಲೆಲ್ಲ ಮಣ್ಣನ್ನೇ ಲೇಪಿಸಿ ಚಿತ್ರ ಬರೆಯುತ್ತಾರೆಂಬುದು ಗಮನಾರ್ಹ ಅಂಶ. ಇದಕ್ಕಾಗಿ ಹಳದಿ, ಕೆಂಪು, ಕಪ್ಪು, ಬೂದು ವರ್ಣದ ಮಣ್ಣನ್ನು ಉಪಯೋಗಿಸುವುದು ಕಂಡುಬಂದರೂ ಸ್ಥಳೀಯವಾಗಿ ದೊರಕುವ ಮಣ್ಣು ಪ್ರಮುಖವಾದುದಾಗಿದೆ ಎನ್ನಬಹುದು.

ಕರ್ನಾಟಕದ ಕರಾವಳಿ ಪ್ರದೇಶದ ಕಾವಿ ಭಿತ್ತಿ ಚಿತ್ರಕಲೆಯಲ್ಲಿ ಕಾವಿಮಣ್ಣು (ಕೆಮ್ಮಣ್ಣು) ಪ್ರಮುಖ ಪಾತ್ರ ವಹಿಸುತ್ತದೆ. ಕಾವಿ ಭಿತ್ತಿಚಿತ್ರಗಳು ಕೆಮ್ಮಣ್ಣಿನಿಂದಲೇ ರೂಪು ತಾಳುತ್ತವೆ ಎಂಬುದು ಇಲ್ಲಿ ಗಮನಿಸಬಹುದಾದ ಅಂಶವಾಗಿದೆ. ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ, ಕುಮಟಾ, ಕಾರವಾರ, ಹೊನ್ನಾವರ ತಾಲೂಕುಗಳಲ್ಲಿ ಹೆಚ್ಚಾಗಿ ವಾಸಿಸುತ್ತಿರುವ ಹಾಲಕ್ಕಿ ಜನಾಂಗದವರು ತಮ್ಮ ಗುಡಿಸಲುಗಳು, ಮನೆಗಳನ್ನು ಚಿತ್ರಗಳಿಂದ ಅಲಂಕರಿಸುತ್ತಾರೆ. ಚಿತ್ರ ರಚಿಸಬೇಕಾದ ಗೋಡೆಯನ್ನು ಅವರು ಜಿಗುಟಾದ ಮಣ್ಣಿನಿಂದ ಲೇಪಿಸುತ್ತಾರೆ ಎಂಬುದು ಗಮನಾರ್ಹ. ಇವರು

---

೫೦. ಕೆ. ವೆಂಕಟರಾಮಪ್ಪ (ಅನು.) : ಧರ್ಮಾಮೃತ, ಅಧ್ಯಾಯ ೧೨, ಪದ್ಯ ೨೪, ಪುಟ - ೨೪೨

ಹಬ್ಬ-ಹರಿದಿನ. ಮದುವೆ-ಮುಂಜಿವೆ ಮುಂತಾದ ಶುಭ ಸಂದರ್ಭಗಳಲ್ಲಿಯೂ ಗೋಡೆಗೆ ಮಣ್ಣು ಲೇಪಿಸಿ ಚಿತ್ರ ಬರೆಯುತ್ತಾರೆ.

ಬೀದರ್ ಭಾಗದಲ್ಲಿ ವಿಜಯದಶಮಿಯಿಂದ ಶೀಗಿ ಹುಣ್ಣಿಮೆ ವರೆಗಿನ ದಿನಗಳಲ್ಲಿ ಮತ್ತು ಶೀಗಿ ಹುಣ್ಣಿಮೆಯಲ್ಲಿ ಗೋಡೆಯ ಮೇಲೆ ಶೀಗಿ ಚಿತ್ರಗಳೆಂಬ ಭಿತ್ತಿಚಿತ್ರಗಳನ್ನು ರಚಿಸುವ ಸಂಪ್ರದಾಯವಿದೆ. ಈ ಚಿತ್ರಗಳನ್ನು ಮಣ್ಣಿನ ಗೋಡೆಯಲ್ಲಿಯೇ ರಚನೆ ಮಾಡುತ್ತಾರೆ. ಉತ್ತರ ಕರ್ನಾಟಕದ ಧಾರವಾಡ, ಗುಲಬರ್ಗಾ, ಬಾಗಲಕೋಟ, ಬೆಳಗಾಂವ, ಬಿಜಾಪುರ ಜಿಲ್ಲೆಗಳ ಭಾಗದಲ್ಲಿ ಮಣ್ಣಿನ ಲೇಪನದ ಮೇಲೆ ಜನಪದ ಭಿತ್ತಿಚಿತ್ರಗಳನ್ನು ರಚಿಸುವ ವಿಧಾನಗಳಲ್ಲಿ ವೈವಿಧ್ಯತೆ ಕಂಡುಬರುತ್ತದೆ. ಹಬ್ಬ-ಹರಿದಿನ, ಮದುವೆ-ಮುಂಜಿವೆ ಮುಂತಾದ ಶುಭ ಸಂದರ್ಭಗಳಲ್ಲಿ ಮನೆ, ಮಠ, ದೇವಾಲಯಗಳಲ್ಲಿ ಅಷ್ಟೇ ಅಲ್ಲದೇ ದನದ ಕೊಟ್ಟಿಗೆ ಗುಡಿಸಲುಗಳಲ್ಲಿಯೂ ಚಿತ್ರ ರಚಿಸಲಾಗುತ್ತದೆ. ಇವುಗಳಲ್ಲದೇ ಗರಡಿ ಮನೆ. ತುಳಸೀಕಟ್ಟೆ. ಇಟ್ಟಿಗೆ ಸುಡುವ ಭಟ್ಟಿ. ಸಮಾಧಿ, ಗದ್ದುಗೆಗಳಲ್ಲೂ ಮಣ್ಣಿನ ಲೇಪನದ ಮೇಲೆ ಭಿತ್ತಿಚಿತ್ರ ಬರೆಯಲಾಗುತ್ತದೆ.

**ಮಣ್ಣಿನ ಸಿದ್ಧತಾ ವಿಧಾನ :** ಜನಪದರು ಚಿತ್ರಣಕ್ಕಾಗಿ ಭಿತ್ತಿ ಮಣ್ಣನ್ನು ಲೇಪಿಸುವಲ್ಲಿ ಇಂತಹುದೇ ಎಂದು ನಿರ್ದಿಷ್ಟ ಪದ್ಧತಿಯನ್ನು ಅನುಸರಿಸದೇ ತಮಗೆ ತಿಳಿದಂತಹ ವಿಧಾನಗಳಿಂದ ಮಣ್ಣನ್ನು ಕಲೆಸಿ, ಸಂಸ್ಕಾರಗೊಳಿಸಿ ಮಿಶ್ರಣ ತಯಾರಿಸಿ ಲೇಪಿಸುವುದು ಕಾಣಬಹುದಾಗಿದೆ. ಕೆಲವೊಮ್ಮೆ ಜೇಡಿ ಮಣ್ಣನ್ನು ನೀರಿನೊಂದಿಗೆ ಕಲೆಸಿ ನೆನೆಯಿಟ್ಟು ಲೇಪಿಸಿದರೆ. ಇನ್ನು ಹಲವು ಸಲ ಜೇಡಿಮಣ್ಣಿನೊಂದಿಗೆ ಸಗಣಿ, ಸುಣ್ಣ, ಕೊಚ್ಚಿದ ಹುಲ್ಲು, ಹೊಟ್ಟುಗಳಂತಹ ಪದಾರ್ಥಗಳನ್ನೂ ಮಿಶ್ರಣಗೊಳಿಸುವುದು ಸಾಮಾನ್ಯವಾದುದಾಗಿದೆ.

ಬೀದರ ಭಾಗದ ಶೀಗಿ ಆಚರಣೆಯ ಚಿತ್ರಗಳನ್ನು ಜೇಡಿಮಣ್ಣು, ಸೆಗಣಿಗಳಿಂದ ತಯಾರಿಸಿದ ಮಿಶ್ರಣದ ಮೇಲೆ ರೂಪಿಸಿದರೆ. ಉತ್ತರ ಕರ್ನಾಟಕದ ಬಾಗಲಕೋಟ್. ಬಿಜಾಪುರ, ಬೆಳಗಾಂವ, ಧಾರವಾಡ, ಗದಗ ಜಿಲ್ಲೆಗಳಲ್ಲಿ ಹಬ್ಬ-ಹರಿದಿನಗಳಂದು ಭಿತ್ತಿಚಿತ್ರ ರಚನೆ ಮಾಡಲು ಜಿಗುಟು ಮಣ್ಣು. ಸಗಣಿ ಮಿಶ್ರಣಗೊಳಿಸಿ ನೆನೆಯಿಟ್ಟು ಲೇಪನ ಮಾಡುತ್ತಾರೆ.

**೩. ಗಾರೆ ಮಾಧ್ಯಮ :** ಗಾರೆ ಲೇಪನದ ಮೇಲೆ ಶಿಷ್ಟ ಪರಂಪರೆಯ ಭಿತ್ತಿಚಿತ್ರಗಳು ರಚನೆಯಾಗಿದ್ದುದು ಸಾಮಾನ್ಯವಾಗಿ ಕಂಡುಬರುತ್ತದೆ. ಗಾರೆ ಭಿತ್ತಿಯ ಸಿದ್ಧತೆ, ಅವುಗಳ ನೆಲೆಗಳನ್ನು ಇದೇ ಅಧ್ಯಾಯದ 'ಪ್ರಾರಂಭದಲ್ಲಿ ಚರ್ಚಿಸಲಾಗಿದೆ.

**೪. ಮರ ಮಾಧ್ಯಮ :** ಇಜಿಪ್ತಿಯನ್ನರು ಕ್ರಿ. ಪೂ. ೩ ನೇ ಶತಮಾನದ ಹಿಂದೆಯೇ ಗಾರೆ ಲೇಪಿಸಿದ ಗೋಡೆಯ ಮೇಲೆ ಮಾತ್ರವಲ್ಲದೇ ಕಲ್ಲು, ಚಪ್ಪಡಿ, ಮರದ ಹಲಗೆ, ಲೋಹ ಫಲಕಗಳ ಮೇಲೆಯೂ ಭಿತ್ತಿ ಚಿತ್ರ ರಚಿಸುತ್ತಿದ್ದರು.[೫೧] ಪ್ರಾಚೀನ ಕಾಲದ ಜಪಾನಿನ ಅರಮನೆಗಳು. ದೇವಾಲಯಗಳು. ಮನೆ. ವಿಹಾರ ಹಾಗೂ ಇತರ ಸೌಧಗಳು ಮರಗಳಿಂದಲೇ

---

೫೧. ಎಸ್. ಕೆ. ರಾಮಚಂದ್ರರಾವ್ : ಕರ್ನಾಟಕದ ಕಲೆಗಳು, (ಸಂಪುಟ - ೧), ಪುಟ - ೧೦೨

ನಿರ್ಮಿಸಲ್ಪಡುತ್ತಿದ್ದು ಅಂತಹ ಮರದ ಗೋಡೆಗಳ ಮೇಲೆ ಅವರು ಭಿತ್ತಿಚಿತ್ರ ರಚಿಸುತ್ತಿದ್ದರು. ಅಲ್ಲಿನ ' ತ್ಸೊತ್ಸೋ ' ಮತ್ತು ' ನಾರಾ ' ಎಂಬ ಪುರಾತನ ನಗರಗಳಲ್ಲಿ ಉಳಿದುಕೊಂಡಿರುವ ಪ್ರಾಚೀನ ಅರಮನೆ, ಮಠ, ದೇವಾಲಯಗಳಲ್ಲಿ ಮರದ ಗೋಡೆಗಳ ಮೇಲೆ ಭಿತ್ತಿಚಿತ್ರಗಳನ್ನು ಇಂದಿಗೂ ಕಾಣಬಹುದು. [೫೨]

ಭಾರತದಲ್ಲಿ ಮರದ (ಕಟ್ಟಿಗೆ) ಮೇಲೆ ಚಿತ್ರಿಸಿದ ಭಿತ್ತಿಚಿತ್ರಗಳಿರುವಂತೆ ಪ್ರಾಚೀನ ಕಾಲದಲ್ಲಿ ಮರದ ಫಲಕದ ಮೇಲೆ ಚಿತ್ರಿಸುತ್ತಿದ್ದರೆಂದು ಸಾಹಿತ್ಯಗ್ರಂಥಗಳಲ್ಲಿ ಉಲ್ಲೇಖಗಳೂ ಸಿಗುತ್ತವೆ. ಪಂಪನ ಆದಿಪುರಾಣದಲ್ಲಿ 'ಬರೆಯಲಿದ್ದು ಬಟ್ಟೆಗೆ ಹಲಗೆಯುಂ ತರಿಸಿ ತಿಟ್ಟಿಮಿಟ್ಟು' ಎಂದೂ, ಅರವಿಂದ ಮಹಾರಾಜನು ಮೋಡಗಳನ್ನು ಹಲಗೆಯ ಮೇಲೆ ಚಿತ್ರಿಸ ಬಯಸಿದನೆಂದು ಪಾರ್ಶ್ವಪಂಡಿತನ ' ಪಾರ್ಶ್ವನಾಥ ಪುರಾಣ ' ಗಳಲ್ಲೂ ಹೇಳಿದ [೫೩] ವಿಷಯ ತಿಳಿದುಬರುವುದು.

ಕಾಳಿದಾಸನ ' ಅಭಿಜ್ಞಾನ ಶಾಕುಂತಲ ' ದಲ್ಲಿ ದುಷ್ಯಂತನು ಚಿತ್ರಫಲಕದ ಮೇಲೆ ಶಕುಂತಲೆಯ ಚಿತ್ರ ಬರೆಯುವ ಪ್ರಸ್ತಾಪವಿದ್ದು ಈ ಚಿತ್ರಫಲಕ ಮರದ ಹಲಗೆಯಾಗಿರಬೇಕೆಂದು [೫೪] ಹೇಳಲಾಗಿದೆ. ರಾಷ್ಟ್ರಕೂಟ ೩ ನೇ ಕೃಷ್ಣನ ಕ್ರಿ. ಶ. ೯೫೦ ರ ತಾಮ್ರಶಾಸನವೊಂದರಲ್ಲಿ ಅಲ್ಲಿಯ ದೇವಾಲಯದ ದೇವರನ್ನು ಫಲಕಾಕಾರನಾಥ ಎಂದು ಕರೆದಿದ್ದು, ಸ್ಥಳ ಪುರಾಣದಲ್ಲಿ ಚಿತ್ರಫಲಕವೆಂದು ಉಲ್ಲೇಖಿಸಲಾಗಿದೆ. ಇದು ಪೂಜಾರ್ಹ ಚಿತ್ರವನ್ನು ಮರದ ಹಲಗೆಯ ಮೇಲೆ ರಚಿಸಿದ್ದ ಉದಾಹರಣೆಯಾಗಿದೆ [೫೫] ಎಂಬ ಅಭಿಪ್ರಾಯವಿದೆ.

ಭಾರತದಲ್ಲಿ ಕಟ್ಟಿಗೆ ಮಾಧ್ಯಮದ ಮೇಲೆ ಭಿತ್ತಿಚಿತ್ರ ರಚಿಸಿದ ಅನೇಕ ಉದಾಹರಣೆಗಳು ದೊರೆಯುತ್ತವೆ. ಹಿಮಾಚಲ ಪ್ರದೇಶದ ಚಂಬಾ ಜಿಲ್ಲೆಯ ' ಚತ್ರಾರಿ ' ಎಂಬಲ್ಲಿನ ಗುಡ್ಡದಲ್ಲಿ ರಾಜಾ ಶ್ರೀಚಂದ್ರನು ಮರದಿಂದ ನಿರ್ಮಿಸಿದ ದುರ್ಗಾ ದೇವಾಲಯದಲ್ಲಿ ಕ್ರಿ. ಶ. ೧೯ ನೇ ಶತಮಾನದಲ್ಲಿ ರಚನೆಯಾದ ಭಿತ್ತಿಚಿತ್ರಗಳಿವೆ. ಉತ್ತರಪ್ರದೇಶದ ಝಾನ್ಸಿಯಲ್ಲಿರುವ ರಾಣಿಮಹಲ್ ಅರಮನೆಯಲ್ಲಿ ಮೇಲ್ಛಾವಣಿಯ ಕಟ್ಟಿಗೆ ತೊಲೆಗಳಿಗೆ ಹಿನ್ನೆಲೆ ಲೇಪನ ಕೊಟ್ಟು ಅದರ ಮೇಲೆ ಚಿತ್ರ ರಚಿಸಲಾಗಿದೆ. ಜಮ್ಮು-ಕಾಶ್ಮೀರದ ಉಧಮ್‌ಪುರ ಜಿಲ್ಲೆಯ ಶಿಶ್ ಮಹಲ್ ಅರಮನೆಯಲ್ಲಿ ಕಟ್ಟಿಗೆ ಬಾಗಿಲು. ಕಿಟಕಿ. ಕಂಬಗಳು. ಕದಗಳು. ಬೋದಿಗೆಗಳು. ತೊಲೆಗಳು ಚಿತ್ರಗಳಿಂದ ತುಂಬಿವೆ. ಗುಜರಾತದ ಭಾವನಗರ ಜಿಲ್ಲೆಯ ಶೇಹೋರ್ ನಲ್ಲಿರುವ ಅತ್ತಾಬಾಯಿ ಥಾಕರ್ ಅರಮನೆಯಲ್ಲಿ ಮೇಲ್ಮಾಳಿಗೆಯಲ್ಲಿನ ಕಟ್ಟಿಗೆ ತೊಲೆ. ಜಂತಿ. ಬೋದಿಗೆ. ಕಂಬಗಳು. ಬಾಗಿಲುಗಳ ಮೇಲೆ ಭಿತ್ತಿಚಿತ್ರ ರಚನೆ ಮಾಡಲಾಗಿದೆ.

ಕೇರಳದ ಪಾಲ್‌ಘಾಟ್ ಜಿಲ್ಲೆಯಲ್ಲಿರುವ ' ತಿರುಕೈಗೋಡ್ ' ಎಂಬಲ್ಲಿನ ' ಎರೆಂಡು ಮೂರ್ತಿ ' ದೇವಾಲಯದ ಎದುರಿಗಿರುವ ಮಂಟಪ ಒಂದರಲ್ಲಿ ಕಟ್ಟಿಗೆಯ ಮೇಲ್ಛಾವಣಿಯಲ್ಲಿ ಕ್ರಿ. ಶ. ೧೮ ನೇ ಶತಮಾನದ

---

೫೨. ಬಿ. ಪಿ. ಬಾಯಿರಿ : ಜಾಗತಿಕ ಚಿತ್ರಕಲೆ, ಪುಟ - ೭೧

೫೩. ಡಾ॥ ಅ. ಲ. ನರಸಿಂಹನ್ : ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು (ಬೆಂಗಳೂರು ವಿ. ವಿ. ಗೆ ಸಲ್ಲಿಸಿದ ಬೆರಳಚ್ಚು ಮಹಾಪ್ರಬಂಧ), ಪುಟ - ೪೯

೫೪. ಎಸ್. ಕೆ. ರಾಮಚಂದ್ರರಾವ್ : ಕರ್ನಾಟಕದ ಕಲೆಗಳು, (ಸಂಪುಟ - ೧), ಪುಟ - ೧೧೧

೫೫. ಡಾ॥ ಅ. ಲ. ನರಸಿಂಹನ್ : ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು (ಬೆಂಗಳೂರು ವಿ. ವಿ. ಗೆ ಸಲ್ಲಿಸಿದ ಬೆರಳಚ್ಚು ಮಹಾಪ್ರಬಂಧ), ಪುಟ - ೪೯

ಭಿತ್ತಿಚಿತ್ರಗಳಿವೆ. ತ್ರಿಚೂರು ಜಿಲ್ಲೆಯ ಅವಿತ್ತೂರುನಲ್ಲಿರುವ ಶಿವದೇವಾಲಯದಲ್ಲೂ ಕಟ್ಟಿಗೆಯ ಕಂಬ, ತೊಲೆಗಳು, ಮೇಲ್ಛಾವಣಿಯ ಕಟ್ಟಿಗೆಯ ಹಲಗೆಗಳ ಮೇಲೆ ವರ್ಣಚಿತ್ರಗಳಿವೆ. ತ್ರಿಚೂರುನಲ್ಲಿರುವ ವಡಕ್ಕುನಾಥ ದೇವಾಲಯದ ರಾಮಸ್ವಾಮಿ ಮಂಟಪದ ಕಟ್ಟಿಗೆಯ ಮೇಲ್ಛಾವಣಿ ಮತ್ತು ತೊಲೆಗಳ ಮೇಲೆ ಭಿತ್ತಿಚಿತ್ರಗಳು ರಚನೆಯಾಗಿವೆ. ತ್ರಿವೇಂದ್ರಂ ಜಿಲ್ಲೆಯ 'ಕಡಿನಮ್ ಕುಲಮ್' ಎಂಬಲ್ಲಿನ ಮಹಾದೇವ ದೇವಾಲಯದಲ್ಲಿ ಗರ್ಭಗೃಹದ ಎದುರಿಗಿರುವ ಮಂಟಪದಲ್ಲಿನ ಕಟ್ಟಿಗೆಯ ಮೇಲ್ಛಾವಣಿ. ತೊಲೆಗಳ ಮೇಲೆ ಭಿತ್ತಿಚಿತ್ರಗಳು ರಚನೆಯಾಗಿವೆ[೫೬] ಎಂಬಂತಹ ವಿವರಣೆಗಳು ಕಂಡುಬರುತ್ತವೆ.

ಕರ್ನಾಟಕದಲ್ಲೂ ಕಟ್ಟಿಗೆಯ ಮೇಲೆ ರಚನೆಯಾದ ಭಿತ್ತಿಚಿತ್ರಗಳು ಕಂಡುಬರುತ್ತವೆ. " ಮೈಸೂರಿನ ಅರಮನೆಯ ವರಾಹಸ್ವಾಮಿ ದೇವಾಲಯದಲ್ಲಿ ದೊಡ್ಡ ಕನ್ನಡಿಯ ಮರದ ಬಾಗಿಲ ಎರಡೂ ಬದಿಗೆ ಸುಂದರವಾದ ಮೈಸೂರು ಶೈಲಿಯ ಚಿತ್ರಗಳಿವೆ. ಮೈಸೂರಿನ ಪ್ರಸನ್ನ ವೆಂಕಟರಮಣ ದೇವಾಲಯದಲ್ಲಿ ಮರದ ಹಲಗೆಯ ಮೇಲೆ ಬಟ್ಟೆಯನ್ನು ಅಂಟಿಸಿ ರಚಿಸಿದ ಚಿತ್ರಗಳಿವೆ.[೫೭] ಉತ್ತರ ಕರ್ನಾಟಕದ ಭಾಗದಲ್ಲಿಯೂ ಕಟ್ಟಿಗೆ ಮಾಧ್ಯಮದ ಮೇಲೆ ರಚನೆಯಾದ ಭಿತ್ತಿಚಿತ್ರಗಳಿವೆ. ಅಮ್ಮಿನಭಾವಿಯ ಹಿರೇಮಠ. ನರಗುಂದದ ಗುಂಡಪ್ಪ ಹಸಬಿ ಎಂಬುವರ ಮನೆಯಲ್ಲಿ, ಸವಣೂರಿನ ನವಾಬರ ವಾಡೆಯಲ್ಲಿ, ಉಪ್ಪಿನ ಬೆಟಗೇರಿಯ ಯಲ್ಲಮ್ಮ ದೇವಾಲಯದಲ್ಲಿ, ಹಳಿಯಾಳ ಸಮೀಪದ ಬಿ. ಕೆ. ಹಳ್ಳಿಯ ರಾಮಮಂದಿರದಲ್ಲಿ. ಕಟ್ಟಿಗೆಯ ಮೇಲೆ ರಚಿಸಿದ ಭಿತ್ತಿಚಿತ್ರಗಳು ಕಂಡುಬರುತ್ತವೆ. ಕಟ್ಟಿಗೆ ಮಾಧ್ಯಮದ ಮೇಲೆ ಭಿತ್ತಿಚಿತ್ರ ರಚಿಸುವಲ್ಲಿ ಎರಡು ರೀತಿಯ ವಿಧಾನಗಳಿದ್ದು ಒಂದು ಕಟ್ಟಿಗೆಯ ಫಲಕಕ್ಕೆ ಬಟ್ಟೆಯನ್ನು ಅಂಟಿಸಿ ಅದರ ಮೇಲೆ ಹಿನ್ನಲೆ ಲೇಪನ ಕೊಟ್ಟು ಚಿತ್ರಿಸುವುದು ಒಂದು ವಿಧಾನವಾದರೆ, ಕಟ್ಟಿಗೆಯ ಫಲಕಕ್ಕೆ ಬಟ್ಟೆಯನ್ನು ಅಂಟಿಸದೇ ನೇರವಾಗಿ ಹಿನ್ನಲೆ ಲೇಪನ ಕೊಟ್ಟು ಚಿತ್ರ ರಚಿಸುವುದು ಇನ್ನೊಂದು ವಿಧಾನ.

ಮರವನ್ನು ಹೀಗೆ ಕಟ್ಟಡದ ಭಾಗವಾಗಿ ಹೊಂದಿಸಿ ಅದರ ಮೇಲೆ ಚಿತ್ರ ರಚಿಸುವುದು ಅಲ್ಲದೇ ಮರದ ಬಿಡಿ ಫಲಕ. ಮರದಿಂದ ಮಾಡಿದ ತೇರು. ಪಲ್ಲಕ್ಕಿ, ದುರುಗುಮುರುಗಿಯವರ ಪೆಟ್ಟಿಗೆ, ತೊಟ್ಟಿಲು, ಅಲಂಕಾರಿಕ ಸಂದುಕದಂತಹ ಪೆಟ್ಟಿಗೆಗಳು ಮುಂತಾದ ಕಟ್ಟಿಗೆಯ ವಸ್ತುಗಳ ಮೇಲೂ ವರ್ಣಚಿತ್ರಗಳನ್ನು ರಚಿಸುವುದು ಉತ್ತರ ಕರ್ನಾಟಕ ಭಾಗದಲ್ಲಿ ಕಂಡುಬರುತ್ತವೆ. ಕಟ್ಟಿಗೆಯ ಫಲಕಗಳಿಂದ ನಿರ್ಮಿಸಿದ ದುರಗಮುರಗಿಯವರ ಪೆಟ್ಟಿಗೆಯ ಮೇಲೆ ಚಿತ್ರ ರಚಿಸುವುದಕ್ಕೆ ಬಿಜಾಪುರ ಜಿಲ್ಲೆಯ ತಾಳಿಕೋಟೆ, ಬೆಳಗಾಂವ ಜಿಲ್ಲೆಯ ಬೈಲಹೊಂಗಲ, ಗೋಕಾಕ ಭಾಗಗಳು ಪ್ರಸಿದ್ಧವಾಗಿವೆ. ಬೆಳಗಾಂವ ಜಿಲ್ಲೆಯ ಬೈಲಹೊಂಗಲ, ಗೋಕಾಕ ಭಾಗಗಳಲ್ಲಿ ಕಟ್ಟಿಗೆಯಿಂದ ನಿರ್ಮಿಸಿದ ಪಲ್ಲಕ್ಕಿಗಳ ಮೇಲೂ ಚಿತ್ರರಚನೆ ಮಾಡುತ್ತಾರೆ. ಧಾರವಾಡ ಜಿಲ್ಲೆಯ ಕಲಘಟಗಿಯಲ್ಲಿ ಕಟ್ಟಿಗೆಯ ತೊಟ್ಟಿಲುಗಳನ್ನು ನಿರ್ಮಿಸಿ ಅವುಗಳ ಮೇಲೆ ಸುಂದರವಾದ ವರ್ಣಚಿತ್ರ ರಚಿಸುತ್ತಾರೆ. ಕೊಪ್ಪಳ ಜಿಲ್ಲೆಯ ಕಿನ್ನಾಳದಲ್ಲಿ ಕಟ್ಟಿಗೆಯ ತುಂಡು. ಚಹಾಪುಡಿಯ ಕಟ್ಟಿಗೆಯ ತೆಳುವಾದ ಪೆಟ್ಟಿಗೆ, ತಟ್ಟಿನ ಗುಂಜು, ಮಣ್ಣು ಮುಂತಾದವುಗಳನ್ನು ಬಳಸಿ ನಿರ್ಮಿಸುವ ಗೊಂಬೆಗಳಿಗೆ ವರ್ಣಾಲಂಕಾರ ಮಾಡುತ್ತಾರೆ. ಹೀಗೆ ಕಟ್ಟಿಗೆಯ ಮಾಧ್ಯಮದ ಮೇಲೆ ಚಿತ್ರಕಲೆ ರೂಪಿಸುವಲ್ಲಿ ಹಲವು ವಿಧಾನಗಳಿವೆ.

---

೫೬. J. C. Nagpal : Mural Paintings in India, Page - 40 - 180
೫೭. ಡಾ॥ ಅ. ಲ. ನರಸಿಂಹನ್ : ಪೂರ್ವೋಕ್ತ

**ಮರ (ಕಟ್ಟಿಗೆ) ಮಾಧ್ಯಮದ ಸಿದ್ಧತಾ ವಿಧಾನ :** ಮರ (ಕಟ್ಟಿಗೆ) ಮಾಧ್ಯಮದ ಮೇಲೆ ಭಿತ್ತಿಚಿತ್ರ ರಚಿಸುವಾಗ ಅನುಸರಿಸುವ ಸಿದ್ಧತಾ ವಿಧಾನಗಳಲ್ಲಿ ಮೊದಲಿಗೆ ಕಟ್ಟಿಗೆಯನ್ನು (ಮರದ ಹಲಗೆಯನ್ನು) ಉಳಿಯಂತಹ ಸಾಧನದಿಂದ ಕೆತ್ತಿ ಸಮತಟ್ಟು ಗೊಳಿಸುವುದಾಗಿದೆ ಎನ್ನಬಹುದು. ನಂತರ ಎರಡನೆಯ ಹಂತವಾಗಿ ಕೆತ್ತಿ ಸಮತಟ್ಟುಗೊಳಿಸಿದ ಮರದ ಫಲಕಕ್ಕೆ ತೆಳುವಾದ ಗಾರೆ ಲೇಪನವನ್ನು ಕೊಡುವುದು. ಆ ಗಾರೆ ಲೇಪನ ಒಣಗಿದ ನಂತರ ಚಿತ್ರ ರಚಿಸುತ್ತಿದ್ದರೆಂದು ಸಾಮಾನ್ಯವಾಗಿ ಊಹಿಸಬಹುದು. ಮತ್ತೊಂದು ವಿಧಾನದಲ್ಲಿ ಮರದ ಹಲಗೆಯನ್ನು ಕೆತ್ತಿ ಸಮತಟ್ಟು ಮಾಡಿ ನುಣುಪುಗೊಳಿಸಿ ಅದರ ಮೇಲೆ ಅಂಟುಮಾಧ್ಯಮ ಬಳಸಿ ಬಟ್ಟೆಯನ್ನು ಅಂಟಿಸುವುದಾಗಿದೆ. ಈ ಬಟ್ಟೆಯ ಮೇಲೆ ಮತ್ತೆ ತೆಳುವಾದ ಗಾರೆ ಲೇಪನ ಕೊಟ್ಟು ಅದು ಆರಿದ ನಂತರ ಚಿತ್ರಿಸುವುದಾಗಿದೆ. ಮರದ ಫಲಕಗಳನ್ನು ಚಿತ್ರ ರಚನೆಗಾಗಿ ಕೆತ್ತಿ ಅನುವುಗೊಳಿಸುವಾಗ ಕೆಲವು ಸಂದರ್ಭಗಳಲ್ಲಿ ಮರದ ಫಲಕದ ಅಂಚುಗಳನ್ನು ಸುಂದರ ನಕ್ಷೆಗಳಿಂದ ಕೂಡಿದಂತೆ ನಿರ್ಮಿಸುತ್ತಿದ್ದರಲ್ಲದೇ. ಮಧ್ಯದಲ್ಲಿ ಇಲ್ಲವೆ ಎಡಬಲಗಳ ಅಥವಾ ಮೂಲೆಗಳಲ್ಲಿ ಅವಶ್ಯಕ ನಕ್ಷಾ ವಿನ್ಯಾಸಗಳನ್ನು ಕೆತ್ತಿರುವುದೂ ಉಂಟು. ಹೀಗೆ ಫಲಕದ ಮಾಧ್ಯಮದಲ್ಲಿ ಮೂಲೆಗಳಲ್ಲಿ, ಅಂಚುಗಳಲ್ಲಿ ನಕ್ಷೆಗಳನ್ನು ಕೆತ್ತಿ ಫಲಕಗಳನ್ನು ಸಿದ್ಧಗೊಳಿಸಿದ್ದು ಅಮ್ಮಿನಭಾವಿಯ ಹಿರೇಮಠದಲ್ಲಿ ಹಾಗೂ ಬಂಜರಕಂಚನಹಳ್ಳಿಯ ರಾಮಮಂದಿರದಲ್ಲಿ ಕಾಣಬಹುದಾಗಿದೆ.

ಹಸ್ತಪ್ರತಿಗಳ ಮೇಲಿನ ಮರದ ಫಲಕದ ಮೇಲೆ ಚಿತ್ರ ರಚಿಸುವುದನ್ನು ಬಿ. ಕೆ. ಹಿರೇಮಠ ಅವರು [೫೮] ಹೀಗೆ ಹೇಳುತ್ತಾರೆ : " ಮರದ ಫಲಕಗಳನ್ನು ನುಣುಪುಗೊಳಿಸಿ ಅದರ ಮೇಲೆ ಚಿತ್ರ ಬರೆಯುವುದು, ನುಣುಪುಗೊಳಿಸಿದ ಮರದ ಫಲಕಗಳ ಮೇಲೆ ತೀರ ತೆಳುವಾದ ಪೊರೆಯಂತಹ ಬಿಳಿಯ ಲೇಪವೊಂದನ್ನು ಬಳಿದು ಅದು ಒಣಗಿದ ಮೇಲೆ ಚಿತ್ರ ಬರೆಯುವುದು. ಅಲ್ಲದೇ ಮತ್ತೊಂದು ವಿಧಾನ ಫಲಕಗಳಿಗೆ ಅಂಟು ಇಲ್ಲವೇ ಸರಿಸನ್ನು ಚನ್ನಾಗಿ ಬಳಿದು ಒರಟಾದ ಬಟ್ಟೆಯನ್ನು ಮಡಿಕೆಯಾಗದಂತೆ ಎಳೆದು ಅಂಟಿಸಿ, ಒಣಗಬಿಟ್ಟು ಅನಂತರ ಕವಡೆಯ ಬೆನ್ನು ಇಲ್ಲವೇ ಶಂಖದಿಂದ ತಿಕ್ಕಿ ಹೊಳಪು ಕೊಟ್ಟು ಚಿತ್ರ ರಚನೆಗೆ ಮೇಲ್ಮೈಯನ್ನು ತಯಾರಿಸುತ್ತಿದ್ದಾರೆಂದು ತಿಳಿಸುತ್ತಾರೆ. ಹಸ್ತಪ್ರತಿಗಳ ಮೇಲಿನ ಚಿತ್ರ ರಚನೆ ಮತ್ತು ಭಿತ್ತಿಚಿತ್ರ ರಚನೆಯಲ್ಲಿ ಸರಿಸುಮಾರಾಗಿ ಒಂದೇ ರೀತಿಯ ವಿಧಾನ ಅನುಸರಿಸುತ್ತಾರಲ್ಲದೇ ಮಠಮಾನ್ಯಗಳಲ್ಲಿದ್ದ ಭಿತ್ತಿಚಿತ್ರ ಕಲಾವಿದರೇ ಹಸ್ತಪ್ರತಿಗಳ ಮೇಲೆ ಚಿತ್ರಿಸುತ್ತಿದ್ದರೆಂದು ಮತ್ತು ಮರದದ ಫಲಕಕ್ಕೆ ಮತ್ತು ಫಲಕಕ್ಕೆ ಅಂಟಿಸಿದ ಬಟ್ಟೆಯ ಮೇಲೆ ಹಿನ್ನಲೆ ಲೇಪನ ಮಾಡಲು ಶಂಖಶುದ್ಧವನ್ನು (ಅಂದರೆ ಶಂಖ, ಕಪ್ಪೆಚಿಪ್ಪುಗಳನ್ನು ಸುಟ್ಟುಮಾಡಿದ ಸುಣ್ಣ) ಬಳಸುತ್ತಿದ್ದರೆಂದು ಡಾ. ಬಿ. ಕೆ. ಹಿರೇಮಠರು [೫೯] ಅಭಿಪ್ರಾಯಪಡುತ್ತಾರೆ.

ಧಾರವಾಡ ಜಿಲ್ಲೆಯ ಕಲಘಟಗಿಯಲ್ಲಿ ಬಣ್ಣದ ತೊಟ್ಟಿಲು ತಯಾರಿಸುವ ವೃತ್ತಿಯವರು ತಾವು ನಿರ್ಮಿಸುವ ಕಟ್ಟಿಗೆಯ ತೊಟ್ಟಿಲು ಮತ್ತು ಅದಕ್ಕೆ ಅಳವಡಿಸುವ ಚಿಕ್ಕ ಚಿಕ್ಕ ಮರದ ಫಲಕಗಳ ಮೇಲೆ ಚಿತ್ರ ಬರೆಯುವ ಪೂರ್ವದಲ್ಲಿ ನೆನೆಹಾಕಿದ ಹುಣಸೆ ಬೀಜವನ್ನು ರುಬ್ಬಿ, ಕುದಿಸಿ ಸರಿಸನ್ನು ತಯಾರಿಸಿ ಅದಕ್ಕೆ ಶೇಡಿಮಣ್ಣನ್ನು ಕೂಡಿಸಿ ಮಿಶ್ರಣವನ್ನು ಹಚ್ಚಿ ಬಿಸಿಲಲ್ಲಿ ಒಣಗಿಸುತ್ತಾರೆ. ಅದು ಒಣಗಿದ ನಂತರ ನೀರು ಹಾಕಿ ಕಲ್ಲಿನಿಂದ ತಿಕ್ಕಿ, ತೊಳೆದು, ಹೊಳಪು ಮಾಡಿ

೫೮. ಡಾ|| ಬಿ. ಕೆ. ಹಿರೇಮಠ : ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ (ಬೆರಳಚ್ಚು ಪ್ರತಿ), ಪುಟ - ೩೦೪
೫೯. –ಅದೇ– ಪುಟ -೩೦೬

ನಂತರ ಅದರ ಮೇಲೆ ವರ್ಣದಿಂದ ಚಿತ್ರಿಸುತ್ತಾರೆ.[೬೦] ಬೆಳಗಾಂವ ಜಿಲ್ಲೆಯ ಗೋಕಾಕ ಕಟ್ಟಿಗೆಯ ವಸ್ತುಗಳ ವರ್ಣಚಿತ್ರಕಾರರು ಕಟ್ಟಿಗೆಯ ಮೇಲೆ ವರ್ಣಲೇಪಿಸಬೇಕಾದಾಗ ಮೊದಲು ಕಟ್ಟಿಗೆಯನ್ನು ಕೆತ್ತಿ ನುಣುಪುಗೊಳಿಸಿ, ನಂತರ ಸುಣಬುರಲಿ ಹರಳನ್ನು ಪುಡಿಮಾಡಿ ದ್ರಾವಣ ತಯಾರಿಸಿ ಅದಕ್ಕೆ ಅಂಟು ಬೆರೆಸಿ ನುಣುಪುಗೊಳಿಸಲಾದ ಕಟ್ಟಿಗೆಯ ಮೇಲೆ ಲೇಪಿಸುತ್ತಾರೆ. ಇದು ಒಣಗಿದ ನಂತರ ಬಣ್ಣ ಲೇಪಿಸುತ್ತಾರೆ.[೬೧] ಹೀಗೆ ಕಟ್ಟಿಗೆಯ ಮೇಲೆ ಚಿತ್ರ ರಚಿಸುವಲ್ಲಿ ಅನೇಕ ಸಿದ್ಧತಾ ವಿಧಾನಗಳಿದ್ದರೂ, ಉತ್ತರ ಕರ್ನಾಟಕದ ಕಟ್ಟಿಗೆಯ ಮೇಲಿನ ಭಿತ್ತಿಚಿತ್ರಗಳು ಕಟ್ಟಿಗೆಯ ಫಲಕದ ಮೇಲೆ ಬಿಳಿದಾದ ತೆಳು ಹಿನ್ನೆಲೆಯನ್ನು ಕೊಟ್ಟು ಚಿತ್ರ ರಚಿಸಿದ ವಿಧಾನವನ್ನೇ ಅನುಸರಿಸಿವೆ.

**೫. ಲೋಹ ಮಾಧ್ಯಮ :** ಇಜಿಪ್ಶಿಯನ್‌ರು ಕ್ರಿ. ಪೂ. ೩ ನೇ ಶತಮಾನಕ್ಕೆ ಮೊದಲೇ ಲೋಹ ಫಲಕಗಳ ಮೇಲೆ ಭಿತ್ತಿಚಿತ್ರ ರಚಿಸುತ್ತಿದ್ದರು ಲೋಹ ಫಲಕದ ಮೇಲೆ ಭಿತ್ತಿಚಿತ್ರ ರಚಿಸಿದ್ದು ಉತ್ತರ ಕರ್ನಾಟಕದಲ್ಲಿ ಅಮ್ಮಿನಭಾವಿಯ ಪಂಚಗೃಹ ಹಿರೇಮಠದಲ್ಲಿ ನೋಡಬಹುದಾಗಿದೆ. ಕಬ್ಬಿಣದ ತೆಳುವಾದ ಫಲಕಗಳನ್ನು ಮೇಲ್ಛಾವಣಿಗೆ ಹೊಂದಿಸಿ ಅವುಗಳ ಮೇಲೆ ವರ್ಣಚಿತ್ರಗಳನ್ನು ರಚಿಸಲಾಗಿದೆ. ಇವುಗಳನ್ನು ಬಿಟ್ಟರೆ ಲೋಹ ಫಲಕದ ಮೇಲೆ ರಚನೆಯಾದ ಭಿತ್ತಿಚಿತ್ರಗಳು ಕರ್ನಾಟಕದಲ್ಲಿ ಇದುವರೆಗೆ ಕಂಡುಬಂದಿಲ್ಲವೆಂದೇ ಹೇಳಬೇಕಾಗುತ್ತದೆ.

**ಲೋಹ ಮಾಧ್ಯಮದ ಸಿದ್ಧತಾ ವಿಧಾನ :** ಲೋಹ ಮಾಧ್ಯಮದ ಮೇಲೆ ಚಿತ್ರರಚನೆ ಮಾಡುವ ಮೊದಲು ಸಿದ್ಧತೆಗೊಳಿಸುವ ವಿಧಾನಗಳು ತಿಳಿದುಬರುವುದಿಲ್ಲ. ಆದರೆ ಲೋಹ ಫಲಕಕ್ಕೆ ತೆಳುವಾದ ಗಾರೆ ಲೇಪನ, ಅಥವಾ ಮಂದದ್ರಾವಣದ ಹಿನ್ನೆಲೆ ಲೇಪನ ಕೊಟ್ಟು ಚಿತ್ರರಚನೆ ಮಾಡಿರುವುದು ಕಂಡುಬರುತ್ತದೆ. ಅಮ್ಮಿನಭಾವಿಯ ಪಂಚಗೃಹ ಹಿರೇಮಠದಲ್ಲಿನ ಮೇಲ್ಛಾವಣಿಯ ಕಬ್ಬಿಣ ಫಲಕದ ಮೇಲಿನ ಭಿತ್ತಿಚಿತ್ರಗಳ ರಚನೆಗೆ ಮೊದಲು ತೆಳುವಾದ ಗಾರೆಲೇಪನ ಕೊಟ್ಟು ಚಿತ್ರಿಸಲಾಗಿದೆ. ಚಿತ್ರಗಳು ಈಗ ಹಾಳಾಗಿದ್ದು ಹಿನ್ನೆಲೆಯಲ್ಲಿ ಬಿಳಿಯಾದ ಗಾರೆಲೇಪನದ ಪದರು ಅಲ್ಲಲ್ಲಿ ಗೋಚರಿಸುತ್ತದೆ.

**೬. ಗಾಜು ಮಾಧ್ಯಮ :** ಗಾಜಿನ ಮಾಧ್ಯಮದ ಮೇಲೆ ಭಿತ್ತಿಚಿತ್ರ ರಚಿಸುವುದು ಯುರೋಪಿನಲ್ಲಿ ಸುಮಾರು ೧೬-೧೭ ನೇ ಶತಮಾನದಲ್ಲಿ ಪ್ರಚಲಿತದಲ್ಲಿದ್ದು, ೧೭ ರಿಂದ ೧೮ ನೇ ಶತಮಾನದಲ್ಲಿ ಭಾರತಕ್ಕೆ ಪ್ರವೇಶಿಸಿತು.[೬೨] ಗಾಜಿನ ಭಿತ್ತಿಚಿತ್ರಗಳನ್ನು ರಚಿಸುವಲ್ಲಿ ಎರಡು ವಿಧಗಳಿದ್ದು ಬಣ್ಣಬಣ್ಣದ ಗಾಜುಗಳನ್ನು ಬೇಕಾದ ಆಕಾರಕ್ಕೆ ಕತ್ತರಿಸಿಕೊಂಡು, ಯೋಜಿಸಿದ ಆಕೃತಿಗಳಿಗನುಸಾರವಾಗಿ ಲೋಹದ ಪಟ್ಟಿಗಳಿಂದ ಇಲ್ಲವೇ ಅಂಟುಮಾಧ್ಯಮದಿಂದ ಬಂಧಿಸುವ ಮೂಲಕ ರೂಪಿಸಿ, ಕಿಟಕಿ ಬಾಗಿಲುಗಳ ಮೇಲ್ಭಾಗ, ಕಮಾನುಗಳು, ಗೋಡೆಗಳು, ಮೇಲ್ಛಾವಣಿ ಮುಂತಾದ ಕಟ್ಟಡದ ವಿವಿಧ ಭಾಗಕ್ಕೆ ಹೊಂದಿಸುವುದು ಒಂದು ಬಗೆ. ಈ ತರಹದ ಚಿತ್ರಗಳಿಂದ ಬೆಳಕು ಅದರ ಮೂಲಕ ಒಳತೂರಿದಾಗ ಒಂದು ಅಲೌಕಿಕ ಅನುಭವ ಉಂಟಾಗುವುದು. ಮಧ್ಯಯುಗದ ಯುರೋಪಿನ ಚರ್ಚಗಳು, ಅರಮನೆಗಳು, ಶ್ರೀಮಂತರ ಖಾಸಗೀ ನಿವಾಸಗಳಲ್ಲಿ ಇಂತಹ ಗಾಜಿನ ಚಿತ್ರ ರಚಿಸುವುದು ಒಂದು ಪ್ರತಿಷ್ಠೆಯ

---

೬೦. ಡಾ. ಎಸ್. ಸಿ. ಪಾಟೀಲ್ : ಕರ್ನಾಟಕದ ಜನಪದ ಚಿತ್ರಕಲೆ, ಪುಟ - ೨೫೮

೬೧. – ಅದೇ – ಪುಟ - ೨೫೯

೬೨. ಎಸ್. ಕೆ. ರಾಮಚಂದ್ರರಾವ್ : ಕರ್ನಾಟಕದ ಕಲೆಗಳು, (ಸಂಪುಟ - ೧), ಪುಟ - ೧೯೯

ಹವ್ಯಾಸವಾಗಿತ್ತಲ್ಲದೇ. ಭಾರತದ ಪಶ್ಚಿಮ ಕರಾವಳಿಯಗುಂಟ ವಿದೇಶಿಯರು ಹೆಚ್ಚಾಗಿ ಬಂದು ನೆಲೆಸಿದ್ದರಿಂದ ಈ ಭಾಗದಲ್ಲಿ ಚರ್ಚುಗಳಲ್ಲೂ ಈ ಬಗೆಯ ಗಾಜಿನ ಭಿತ್ತಿಚಿತ್ರಗಳು ಕಂಡುಬರುತ್ತವೆ.[೬೩] ಇನ್ನೊಂದು ಬಗೆಯ ವಿಧಾನವೆಂದರೆ ಗಾಜಿನ ಒಂದು ಬದಿಯಿಂದ ಚಿತ್ರ ಬರೆದು ಇನ್ನೊಂದು ಬದಿಯಿಂದ ನೋಡುವುದು. ತೂಗು ಹಾಕಲಾಗುವ ಬಿಡಿ ಗಾಜಿನ ಫಲಕಗಳ ಮೇಲೆ ವರ್ಣಗಳಿಂದ ಚಿತ್ರ ಬರೆಯುವುದೇ ಹೆಚ್ಚಾದರೂ ಕೆಲವು ಸಂದರ್ಭಗಳಲ್ಲಿ ಗಾಜಿನ ಇಡಿಯಾದ ಫಲಕಗಳನ್ನು ಕಟ್ಟಡದ ಕಿಟಕಿ. ಮೇಲ್ಛಾವಣಿ. ಕಮಾನು. ಮುಂತಾದ ವಾಸ್ತುವಿನ ವಿವಿಧ ಭಾಗಗಳಿಗೆ ಹೊಂದಿಸಿ ಆ ಫಲಕಗಳ ಮೇಲೂ ವರ್ಣಗಳಿಂದ ಚಿತ್ರ ರಚಿಸಲಾಗುತ್ತದೆ. ಈ ವಿಧಾನವು ಮುಸ್ಲಿಂ ದೊರೆಗಳ ಪ್ರೋತ್ಸಾಹದಿಂದ ಸುಮಾರು ಕ್ರಿ. ಶ. ೧೮ ನೇ ಶತಮಾನದಲ್ಲಿ ಭಾರತದಲ್ಲಿ ಪರಿಚಯವಾಯಿತು. ಮುಂದೆ ಮರಾಠರು, ಮೈಸೂರು ಅರಸರು. ಮತ್ತು ತಂಜಾವೂರು ದೊರೆಗಳಿಂದ ವ್ಯಾಪಕವಾಗಿ ಪ್ರಚಾರಗೊಂಡಿತು.

ವಾಸ್ತುವಿನೊಂದಿಗೆ ಗಾಜಿನ ಫಲಕಗಳನ್ನು ಹೊಂದಿಸಿ ಅದರ ಮೇಲೆ ವರ್ಣದಿಂದ ಚಿತ್ರರಚನೆ ಮಾಡಿರುವುದು ಹೆಚ್ಚಾಗಿ ಕ್ರೈಸ್ತ ಚರ್ಚುಗಳಲ್ಲಿ ಕಂಡುಬರುತ್ತವೆ. ಮಂಗಳೂರಿನ ಕುಲಶೇಖರ ಚರ್ಚು, ಜಪ್ಪೋ ಚರ್ಚು, ಇನ್‌ಫೆಂಟ್ ಮೇರಿ ಕಾನ್ವೆಂಟ್. ಪ್ರಶಾಂತಿ ನಿಲಯ. ಕಂಕವಾಡಿಯ ಕಾರ್ಮೆಲ್ ಕಾನ್ವೆಂಟ್. ಬಂಟ್ವಾಳದ ಇನ್ಫೆಂಟ್ ಜೆಸಿಸ್ ಚರ್ಚ, ಅಗರಾರ್ ಬಳಿಯ ಚರ್ಚಗಳಲ್ಲಿ ಗಾಜಿನ ಮೇಲೆ ಭಿತ್ತಿಚಿತ್ರಗಳನ್ನು ರಚಿಸಲಾಗಿದೆ.[೬೪] ಇವುಗಳಲ್ಲಿ ಕುಲಶೇಖರ ಹಾಗೂ ಕಾರ್ಮೆಲ್ ಕಾನ್ವೆಂಟ್ ಚರ್ಚಗಳಲ್ಲಿನ ಗಾಜಿನ ಭಿತ್ತಿಚಿತ್ರಗಳು ಅತ್ಯಂತ ದೊಡ್ಡವಾಗಿವೆ. ಉತ್ತರ ಕರ್ನಾಟಕದಲ್ಲಿ ಗಾಜಿನ ಮೇಲೆ ರಚಿಸಿದ ಭಿತ್ತಿಚಿತ್ರಗಳು ಬೆಳಗಾಂವಿಯ ಸೇಂಟ್ ಮೇರಿ ಚರ್ಚ, ಮತ್ತು ಸೇಂಟ್ ಕ್ಸೇವಿಯರ್ ಚರ್ಚ ಹಾಗೂ ರಾಮದುರ್ಗದ ರಾಜವಾಡೆಯಲ್ಲಿ ಕಂಡುಬರುತ್ತವೆ.

ಹೀಗೆ ವಿವಿಧ ಮಾಧ್ಯಮದ ಮೇಲೆ ಭಿತ್ತಿಚಿತ್ರಗಳು ರಚನೆಯಾಗುತ್ತ ಬಂದಿದ್ದು, ಭಿತ್ತಿಚಿತ್ರಗಳ ರಚನೆಗಾಗಿ ಅನೇಕ ವೈವಿಧ್ಯಮಯವಾದ ಪರಿಕರಗಳ ಅವಶ್ಯಕತೆ ಇದ್ದು ಅವುಗಳನ್ನು ಭಿತ್ತಿಚಿತ್ರಕಲೆಯ ಪರಿಕರಗಳು ಎಂದು ಕರೆಯಲಾಗಿದ್ದು ಮುಂದಿನ ಅಧ್ಯಾಯದಲ್ಲಿ ಇವುಗಳನ್ನು ವಿವೇಚಿಸಲಾಗಿದೆ.

---

೬೩. ಡಾ|| ಅ. ಲ. ನರಸಿಂಹನ್ : ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು (ಬೆಂಗಳೂರು ವಿ. ವಿ. ಗೆ ಸಲ್ಲಿಸಿದ ಬೆರಳಚ್ಚು ಮಹಾಪ್ರಬಂಧ). ಪುಟ - ೪೯೮

೬೪. –ಅದೇ– ಪುಟ -೪೯೦

ಭಿತ್ತಿ ಚಿತ್ರಕಲೆಯ ಅಧ್ಯಯನದಲ್ಲಿ ಅದರ ಪರಿಕರಗಳ ಕುರಿತಾದ ಅಧ್ಯಯನವು ತುಂಬ ಮಹತ್ವದ್ದಾಗಿದ್ದು ಅವುಗಳನ್ನು ಇಲ್ಲಿ ಸ್ಥೂಲವಾಗಿ ವಿವೇಚಿಸಲಾಗಿದೆ. ಭಿತ್ತಿ ಚಿತ್ರಕಲೆಯ ಪರಿಕರಗಳನ್ನು ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಈ ಕೆಳಗಿನಂತೆ ನಾಲ್ಕು ರೀತಿಯಲ್ಲಿ ವಿಂಗಡಿಸಿಕೊಳ್ಳಲಾಗಿದೆ.

೧. ಭಿತ್ತಿ ಆಧಾರ ಪರಿಕರ

೨. ಭಿತ್ತಿ ಆಧಾರ ಸಂಸ್ಕರಣ ಪರಿಕರ

೩. ಭಿತ್ತಿ ನಿರ್ಮಾಣ ಪರಿಕರ

೪. ಭಿತ್ತಿ ಚಿತ್ರರಚನಾ ಪರಿಕರ

**೧. ಭಿತ್ತಿ ಆಧಾರ ಪರಿಕರ :** ಚಿತ್ರ ರಚನೆಗಾಗಿ ಭಿತ್ತಿ ಲೇಪಿಸುವ ಆಧಾರಗಳನ್ನು ಇಲ್ಲಿ ಆಧಾರ ಪರಿಕರಗಳೆಂದು ಪರಿಗಣಿಸಲಾಗಿದೆ. ಉತ್ತರ ಕರ್ನಾಟಕ ಭಾಗದಲ್ಲಿ ಶಿಲೆ, ಮಣ್ಣು, ಗಾರೆ, ಮರ, ಲೋಹ ಮತ್ತು ಗಾಜುಗಳ ಮೇಲೆ ಭಿತ್ತಿ ಚಿತ್ರ ಕಂಡುಬಂದಿವೆ. ಆಯಾ ಮಾಧ್ಯಮದ ಮೇಲೆ ಚಿತ್ರರಚನೆ ಮಾಡುವುದರಿಂದ ಇವುಗಳನ್ನು ಆಧಾರ ಪರಿಕರಗಳೆಂದು ಗುರುತಿಸಲಾಗಿದ್ದು. ಇವುಗಳ ಬಗೆಗೆ ಭಿತ್ತಿರಚನಾ ವಿಧಾನ ಹೇಳುವಾಗ ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**೨. ಭಿತ್ತಿ ಆಧಾರ ಸಂಸ್ಕರಣ ಪರಿಕರ :** ಭಿತ್ತಿ ಚಿತ್ರರಚನೆಗಾಗಿ ಮಿಶ್ರಣ ಲೇಪಿಸುವ ಮೊದಲು ಆಧಾರವನ್ನು ಯೋಗ್ಯ ವಿಧಾನಗಳಿಂದ ಸಂಸ್ಕರಿಸಿ ಮಿಶ್ರಣ ಲೇಪಿಸಬೇಕಾಗುತ್ತದೆ [೧] ಎಂಬುದಾಗಿ ತಿಳಿದುಬರುತ್ತದೆ. ಆಧಾರ ಸಂಸ್ಕರಿಸಲು ಕೆಲವು ವಸ್ತುಗಳು ಬಳಕೆಯಾಗುತ್ತಿದ್ದು ಅವುಗಳ ಬಗೆಗೆ ಹೆಚ್ಚಿನ ವಿವರ ಶಿಲ್ಪಶಾಸ್ತ್ರಗಳಿಂದ ತಿಳಿದು ಬರುವುದಿಲ್ಲ. ಶಿಲಾ ಮಾಧ್ಯಮದ ಮೇಲೆ ಭಿತ್ತಿ ಲೇಪಿಸುವ ಮೊದಲು ಶಿಲೆಯ ಮೈಯನ್ನು ಸುತ್ತಿಗೆ, ಉಳಿಯಿಂದ ಉರುಟಾಗಿ ಮಾಡಿಕೊಂಡು ಭಿತ್ತಿ ಲೇಪಿಸಿರುವುದು ಕಂಡುಬರುವುದು. ಅಜಂತಾ, ಎಲ್ಲೋರಾಗಳಲ್ಲಿ [೨] ಗುಹಾಲಯದ ಗೋಡೆಯನ್ನು ಮೊದಲು ಉರುಟಾಗಿ ಮಾಡಿ ನಂತರ ಮಿಶ್ರಣ ಲೇಪಿಸಲಾಗಿದೆ ಎಂಬ ಅಭಿಪ್ರಾಯವಿದೆ.

ಮರದ ಫಲಕದ ಮೇಲೆ ಭಿತ್ತಿಚಿತ್ರ ರಚಿಸಬೇಕಾದಾಗ ಮರದ ಫಲಕವನ್ನು ಕೆತ್ತಿ ಹದಗೊಳಿಸಲೂ ಸುತ್ತಿಗೆ, ಉಳಿಗಳ ಅವಶ್ಯಕತೆ ಇದೆ. ಇಂತಹ ಕೆತ್ತಿ ಹದಗೊಳಿಸಿದ ಮರದ ಫಲಕದ ಚಿತ್ರಗಳು ಅಮ್ಮಿನಭಾವಿಯ ಹಿರೇಮಠ,

---

೧. Jayanth Chakravarthi : Techniques in Indian Mural Painting, Page - 16

೨. Jayanth Chakravarthi : Techniques in Indian Mural Painting, Page - 19



ಭಿತ್ತಿ ಚಿತ್ರಕಲೆಯ ಪರಿಕರಗಳು
1) ಭಿತ್ತಿ ಆಧಾರ ಪರಿಕರ
I) ಶಿಲೆ
II) ಮಣ್ಣು
III) ಗಾರೆ
IV) ಮರ
V) ಲೋಹ
VI) ಗಾಜು
2) ಭಿತ್ತಿ ಆಧಾರ ಸಂಸ್ಕರಣ ಪರಿಕರ
3) ಭಿತ್ತಿ ನಿರ್ಮಾಣ ಪರಿಕರ
I) ಮಿಶ್ರಣ ಪರಿಕರ
1) ಮಣ್ಣು
2) ಕಲ್ಲಿನ ಪುಡಿ
3) ಉಸುಕು
4) ಸುಣ್ಣ
5) ನಾರುಪದಾರ್ಥ
6) ಶಂಖಚೂರ್ಣ
7) ಇಟ್ಟಿಗೆ ಪುಡಿ
II) ಬಂಧಕ ಪರಿಕರ
1) ವಜ್ರಲೇಪ
2) ಮರದಂಟು
3) ವಿವಿಧ ಗಿಡದ ರಸ
4) ಬಾಳೆ ಹಣ್ಣು
5) ಕಾಕಂಬಿ
III) ಲೇಪಿಸುವ ಪರಿಕರ
1) ತ್ಯಾಪಿ
2) ಪೊರಕೆ
3) ಕಾಗದ
4) ಭಿತ್ತಿ ಚಿತ್ರರಚನಾ ಪರಿಕರ
I) ವರ್ತಿಕಾ
II) ಬಣ್ಣ
1) ಖನಿಜಮೂಲ ಬಣ್ಣ
2) ಪ್ರಾಣಿಮೂಲ ಬಣ್ಣ
3) ಸಸ್ಯಮೂಲ ಬಣ್ಣ
4) ಲೋಹಮೂಲ ಬಣ್ಣ
5) ರಾಸಾಯನಿಕ ಬಣ್ಣ
6) ಮೂಲ ಬಣ್ಣ
7) ಮಿಶ್ರ ಬಣ್ಣ
III) ಅಂಟುದ್ರಾವಕ
1) ಪ್ರಾಣಿಜನ್ಯ ಅಂಟುದ್ರಾವಕ
I) ವಜ್ರಸರಿ
II) ಹಾಲಿನ ಕೆನೆ
III) ತತ್ತಿಯ ಲೋಳೆ
2) ಸಸ್ಯಜನ್ಯ ಅಂಟುದ್ರಾವಕ
3) ಖನಿಜಜನ್ಯ ಅಂಟುದ್ರಾವಕ
IV) ಬಣ್ಣ ಮಿಶ್ರಗೊಳಿಸುವ ತಟ್ಟೆ
V) ಕುಂಚ
VI) ಕಂಟ

ನರಗುಂದದ ಗುಂಡಪ್ಪ ಹಸಬಿಯವರ ಮನೆ. ಸವಣೂರಿನ ನವಾಬರ ವಾಡೆ, ಮತ್ತು ಉಪ್ಪಿನಬೆಟಗೇರಿಯ ಎಲ್ಲಮ್ಮ ದೇವಾಲಯದಲ್ಲಿವೆ. "ಇಟ್ಟಿಗೆ ಗೋಡೆಯ ಮೇಲೆ ಭಿತ್ತಿ ಲೇಪನ ಮಾಡುವ ಮೊದಲು ಇಟ್ಟಿಗೆ ಗೋಡೆಯನ್ನು ಸುತ್ತಿಗೆ, ಉಳಿ ಬಳಸಿ ಕೆತ್ತಿ ಉರುಟಾಗಿ ಮಾಡಿಕೊಂಡು. ನಂತರ ಸುಣ್ಣದ ನೀರು, ಬಿಸಿನೀರು ಹಾಗೂ ತಣ್ಣೀರುಗಳನ್ನು ಒಂದಾದ ನಂತರ ಒಂದು ಎರಚಿ ಸಂಸ್ಕರಿಸಿ ಆಮೇಲೆ ಮಿಶ್ರಣ ಲೇಪಿಸಲಾಗುತ್ತಿತ್ತು "[೩] ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಸಮರಾಂಗಣ ಸೂತ್ರಧಾರ[೪] ಗ್ರಂಥವು ಭಿತ್ತಿ ಲೇಪನಕ್ಕಿಂತ ಮೊದಲು ಗೋಡೆಗೆ ಸುಣ್ಣದ ನೀರು ನಂತರ ತಣ್ಣೀರು ಎರಚಬೇಕೆಂದು ಹೇಳುತ್ತದೆ. ಇವುಗಳನ್ನು ಬಿಟ್ಟರೆ ಆಧಾರ ಸಂಸ್ಕರಣದ ಹೆಚ್ಚಿನ ವಿವರಗಳು ಶಿಲ್ಪಶಾಸ್ತ್ರದಲ್ಲಿ ಹೇಳಲಾಗಿಲ್ಲ. ಗೋಡೆಯನ್ನು ಸಮತಟ್ಟುಗೊಳಿಸಲು ಮತ್ತು ಲೇಪಿಸಿದ ಭಿತ್ತಿಯು ಸಮನಾಗಿದೆ ಎಂದು ನೋಡಲು ಲಿಂಗಸೂತ್ರವು ಬಳಕೆಯಾಗುತ್ತಿತ್ತು[೫] ಎಂದು ವಿದ್ವಾಂಸರ ಅಭಿಪ್ರಾಯ. ಈ ಲಿಂಗಸೂತ್ರವನ್ನು ಗೌಂಡಿಗಳು ಇಂದೂ ಬಳಸುತ್ತಾರೆ ಎನ್ನುವುದು ಗಮನಾರ್ಹ. ಗೋಡೆಯ ಸಮಪಾತಳಿಯನ್ನು ತಿಳಿಯಲು ಇದು ಬಳಕೆಯಾಗುವ ಸಾಧನ.

**೩. ಭಿತ್ತಿ ನಿರ್ಮಾಣ ಪರಿಕರ :** ಭಿತ್ತಿ ನಿರ್ಮಾಣ ಮಾಡಲು ಬಳಸುವ ಪರಿಕರಗಳನ್ನು ಭಿತ್ತಿ ನಿರ್ಮಾಣ ಪರಿಕರಗಳೆಂದು ಪರಿಗಣಿಸಲಾಗಿದ್ದು ಇದರಲ್ಲಿ ಮತ್ತೆ ಮೂರು ವಿಭಾಗಗಳನ್ನು ಮಾಡಲಾಗಿದೆ.

I. ಮಿಶ್ರಣ ಪರಿಕರ
II. ಬಂಧಕ ಪರಿಕರ
III. ಲೇಪಿಸುವ ಪರಿಕರ

**I. ಮಿಶ್ರಣ ಪರಿಕರ :** ಭಿತ್ತಿ ಚಿತ್ರ ರಚನೆ ಮಾಡುವಲ್ಲಿ ಆಧಾರವನ್ನು ಸಂಸ್ಕರಿಸಿದ ನಂತರ ಮಿಶ್ರಣ ಲೇಪಿಸಲಾಗುತ್ತದೆ. ಈ ಮಿಶ್ರಣ ತಯಾರಿಸಲು ೧. ಮಣ್ಣು ೨. ಕಲ್ಲಿನ ಪುಡಿ ೩. ಉಸುಕು ೪. ಸುಣ್ಣ ೫. ನಾರುಪದಾರ್ಥ ೬. ಶಂಖಚೂರ್ಣ ೭. ಇಟ್ಟಿಗೆ ಪುಡಿಯಂತಹ ವಸ್ತುಗಳು ಬೇಕಾಗುತ್ತಿದ್ದು ಇವುಗಳನ್ನು ಮಿಶ್ರಣ ಪರಿಕರಗಳೆಂದು ಕರೆಯಲಾಗಿದೆ. ಇವುಗಳ ಕುರಿತು ಹೀಗೆ ವಿವರಿಸಬಹುದು.

**೧. ಮಣ್ಣು :** ಭಿತ್ತಿ ನಿರ್ಮಾಣದಲ್ಲಿ ಬಳಸುವ ಪರಿಕರಗಳಲ್ಲಿ ಮಣ್ಣು ಮುಖ್ಯವಾದುದಾಗಿದೆ. ಉಸುಕು, ಕಲ್ಲಿನ ಪುಡಿಯನ್ನು ಮುಖ್ಯವಾಗಿ ಬಳಸಿಕೊಂಡು ಗಾರೆ ಲೇಪನ ತಯಾರಿಸುವುದಕ್ಕಿಂತ ಮೊದಲಿನ ದಿನಗಳಲ್ಲಿ ಬರೀ ಮಣ್ಣನ್ನೇ ಹದವಾಗಿ ಕಲಸಿ ಗೋಡೆಗೆ ಲೇಪಿಸಿ ಚಿತ್ರರಚನೆ ಮಾಡಿರುವುದು ಅಲ್ಲಲ್ಲಿ ಕಂಡುಬರುವುದು. ಅಮೇರಿಕದ ಮೂಲ ನಿವಾಸಿಗಳಾದ ಮಾಯಾಜನರು ತಮ್ಮ ನಿವಾಸಗಳಲ್ಲಿ ಜಿಗುಟು ಮಣ್ಣ ಲೇಪಿಸಿ ಚಿತ್ರ ಬರೆದಿದ್ದು[೬] ತಿಳಿದುಬರುವುದು. ಕರ್ನಾಟಕದ ಬದಾಮಿ ಉತ್ತರಗುಡ್ಡದಲ್ಲಿ, ರಾಯಚೂರಿನ ಬಳಿಯ ಮಾನ್ವಿಯಲ್ಲಿ[೭] ರಚನೆಯಾಗಿರುವ ಶಿಲಾಶ್ರಯ ಚಿತ್ರಗಳಲ್ಲಿ ಮೊದಲಿಗೆ ಜಿಗುಟು ಹಳದೀ ಮಣ್ಣಿನ ಲೇಪನ ಮಾಡಿದ್ದು ಕಂಡುಬರುವುದು. ಕ್ರಿ. ಪೂ. ೩೫೦೦ ವರ್ಷಗಳಷ್ಟು ಪೂರ್ವದಲ್ಲಿಯೇ ಇಜಿಪ್ತದಲ್ಲಿ[೮] ಮಣ್ಣನ್ನು ಬಳಸಿಕೊಂಡು ಭಿತ್ತಿ ನಿರ್ಮಾಣ ಮಾಡಿ

---

೩. Olle Nard Mark : Fresco Painting, Page - 49
೪. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ, ಅಧ್ಯಾಯ ೭೨, ಶ್ಲೋಕ ೧೩, ೩೫
೫. Olle Nard Mark : Fresco Painting, Page - 29
೬. ಬಿ. ಪಿ. ಬಾಯಿರಿ : ಜಾಗತಿಕ ಚಿತ್ರಕಲೆ, ಪುಟ - ೩೯
೭. ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಪುಟ - ೨೭, ೨೯
೮. Jayanth Chakravarthi : Techniques in Indian Mural Painting, Page - 16

ಚಿತ್ರ ರಚಿಸಿದ ಉದಾಹರಣೆಗಳು ದೊರೆಯುತ್ತವೆ. ಹಾಗೇ ಮಧ್ಯ ಏಶಿಯಾ ಪ್ರಾಂತ್ಯದ ಪ್ರಾಚೀನ ಭಿತ್ತಿಚಿತ್ರಗಳಲ್ಲಿ ಮತ್ತು ಭಾರತದ ಪ್ರಾಚೀನ ಮತ್ತು ಮಧ್ಯಯುಗೀನ ಭಿತ್ತಿಚಿತ್ರಗಳ ನಿರ್ಮಾಣದಲ್ಲಿ [೯] ಮಣ್ಣು ಬಳಕೆಯಾಗಿದೆ ಎಂಬುದಾಗಿ ಹೇಳಲಾಗುತ್ತದೆ. ಭೂಮಿಯ ಗುಣಕ್ಕನುಸಾರವಾಗಿ ಮಣ್ಣಿನ ಬಣ್ಣ, ಸ್ವರೂಪ, ಜಿಗುಟುಗುಣಗಳು ಪ್ರದೇಶದಿಂದ ಪ್ರದೇಶಕ್ಕೆ ಬೇರೆ ಬೇರೆಯಾಗುತ್ತವೆ. ಆದರೆ ಭಿತ್ತಿ ನಿರ್ಮಾಣದಲ್ಲಿ ಜಿಗುಟಾದ ಮಣ್ಣನ್ನು ಬಳಸಬೇಕೆಂಬುದು ಗಮನಾರ್ಹ. ಅಜಂತಾ ಭಿತ್ತಿ ನಿರ್ಮಾಣದಲ್ಲಿ 'Ferruginous' ಎಂಬ ಮಣ್ಣನ್ನು [೧೦] ಬಳಸಲಾಗಿದ್ದರೆ, ಉತ್ತರ ಭಾರತದ ಚಂಬಾದಲ್ಲಿನ ರಂಗಮಹಲ್ ಭಿತ್ತಿ ನಿರ್ಮಾಣದಲ್ಲಿ [೧೧] 'ಮಕೋಲ' ಎಂಬ ಜಾತಿಯ ಮಣ್ಣು ಬಳಕೆಗೊಂಡಿದೆ ಎಂದು ಹೇಳಲಾಗುತ್ತದೆ. ವಿಷ್ಣುಧರ್ಮೋತ್ತರ ಮತ್ತು ಸಮರಾಂಗಣ ಸೂತ್ರಧಾರ ಗ್ರಂಥಗಳು ಭಿತ್ತಿ ನಿರ್ಮಾಣದಲ್ಲಿ ಬಳಸುವ ಪರಿಕರಗಳಲ್ಲಿ ಮಣ್ಣನ್ನು ಪ್ರಮುಖವಾಗಿ ಹೇಳಿವೆ. ವಿಷ್ಣುಧರ್ಮೋತ್ತರವು [೧೨] ಮಿಶ್ರಣ ಲೇಪನದಲ್ಲಿ ಜಿಗುಟಾದ ಮಣ್ಣನ್ನು ಬಳಸಲು ಹೇಳಿದೆಯಲ್ಲದೇ ಭಿತ್ತಿಯನ್ನು ನುಣುಪುಗೊಳಿಸಲು ಅತ್ಯಂತ ಸೂಕ್ಷ್ಮವಾದ ಮಣ್ಣನ್ನೇ ಅಂಟಿನ ಜೊತೆ ಕಲಸಿ ಲೇಪಿಸಲು ತಿಳಿಸುತ್ತದೆ. ಸಮರಾಂಗಣ ಸೂತ್ರಧಾರವು [೧೩] ಮೊದಲ ಹಂತದ ಮಿಶ್ರಣದಲ್ಲಿ ಜಿಗುಟು ಮಣ್ಣನ್ನು ಬಳಸಲು ಹೇಳಿ ನಂತರ ಭಿತ್ತಿಯನ್ನು ನುಣುಪುಗೊಳಿಸಲು ಕಮಲದ ಹೂವಿನ ಕೊಳದ ದಂಡೆಯ ಮಣ್ಣು, ಭಾವಿಯ ಬಳಿಯ ಮಣ್ಣು, ಗಿಡದ ಬೇರಿನ ಕೆಳಗಿನ ಮಣ್ಣು ನದಿ ತೀರದ ಮಣ್ಣು, ಇರುವೆ ಹುತ್ತದ ಮಣ್ಣುಗಳನ್ನು ಲೇಪಿಸಲು ಹೇಳುತ್ತದೆ. ಮಾನಸೋಲ್ಲಾಸವು [೧೪] ಬಿಳಿ ಮಣ್ಣನ್ನು ಭಿತ್ತ ನಿರ್ಮಾಣದಲ್ಲಿ ಬಳಸಲು ಸೂಚಿಸಿದರೆ, ಕಾಶ್ಯಪ ಶಿಲ್ಪಶಾಸ್ತ್ರವು [೧೫] ಜಾಂಗಲ, ಅನುರೂಪ, ಸಮ್ಮಿಶ್ರ ಎಂಬ ಮೂರು ಬಗೆಯ ಮಣ್ಣುಗಳನ್ನು ಹೆಸರಿಸುತ್ತದೆ. ಕಾಶ್ಯಪ ಶಿಲ್ಪಶಾಸ್ತ್ರವು ಇನ್ನೊಂದು ಕಡೆಗೆ [೧೬] ಈಗಾಗಲೇ ಲೇಪಿಸಿದ ಮಣ್ಣಿನ ಮಿಶ್ರಣ ನುಣುಪಾಗಿ ಮಾಡಲು ಜಿಗುಟಾದ ನುಣುಪಾದ ಮಣ್ಣು ಹೇಳಿ ಅದನ್ನು ಪಡೆಯುವ ಸ್ಥಳಗಳನ್ನು ಹೇಳಿದೆ. ಪರ್ವತ, ನದಿ, ಗದ್ದೆ, ಸಮುದ್ರ, ನೀರು ಬತ್ತಿಹೋಗಿರುವ ಸ್ಥಳದ ಮಣ್ಣು, ಆನೆಯ ದಂತವು ಸೋಕಿರುವ ಭೂಮಿಯ ಮಣ್ಣು, ಹಸುವಿನ ಕೋಡು ಸೋಕಿರುವ ಭೂಮಿಯ ಮಣ್ಣು, ಸರೋವರದ ತಳದಿಂದ ತೆಗೆದುಕೊಳ್ಳಲಾದ ಮಣ್ಣುಗಳನ್ನು ಬಳಸಬೇಕೆಂದು ಹೇಳುತ್ತದೆ.

ಈ ರೀತಿಯಾಗಿ ಪ್ರಾಚೀನ ಕಾಲದಿಂದಲೇ ಮಣ್ಣನ್ನು ಭಿತ್ತಿ ನಿರ್ಮಾಣದಲ್ಲಿ ಬಳಸುತ್ತಿದ್ದುದಾಗಿ ವಿವರಗಳು ತಿಳಿಯುತ್ತವೆ. ಉತ್ತರ ಕರ್ನಾಟಕದಲ್ಲಿ ನಿಪ್ಪಾಣಿಯ ರಾಜವಾಡೆ, ಗುಳೇದಗುಡ್ಡದ ಹೊಸಮನಿ ಗೌಡರ ಮನೆ, ಹಳಿಯಾಳದ ಸಮೀಪದ ಬಂಜರ ಕಂಚನಹಳ್ಳಿ ರಾಮದೇವಾಲಯಗಳಲ್ಲಿ ಭಿತ್ತಿ ನಿರ್ಮಾಣದಲ್ಲಿ ಪ್ರಮುಖವಾಗಿ ಮಣ್ಣನ್ನೇ ಬಳಸಿದ್ದು ಕಂಡುಬರುವುದು. ಕರಾವಳಿ ಭಾಗದ ಕಾವಿ ಭಿತ್ತಿ ನಿರ್ಮಾಣದಲ್ಲಿ ಕಾವಿ ಮಣ್ಣಿನ ಜೊತೆಗೆ ಬೇರೆ ಜಿಗುಟು ಮಣ್ಣನ್ನು ಬಳಸಲಾಗುತ್ತದೆ.

---

೯. Jayanth Chakravarthi : Techniques in Indian Mural Painting, Page - 16

೧೦. B. B. Lal : The Murals : Their composition and Techniques, Ajanta Mural, Page - 53

೧೧. Jagadish Mittal : Mural Paintings in Chamba, Page - 15

೧೨. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ. ಭಾಗ III. ಅಧ್ಯಾಯ ೪೦, ಶ್ಲೋಕ ೧ - ೧೧

೧೩. ಪಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ, ಅಧ್ಯಾಯ ೭೨, ಶ್ಲೋಕ ೨೪, ೩೫

೧೪. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ. ಭಾಗ II. ಅಧ್ಯಾಯ I, ಶ್ಲೋಕ ೧೩೨ - ೧೩೭

೧೫. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ, ಅಧ್ಯಾಯ ೮೬, ಶ್ಲೋಕ ೨೮, ಪುಟ - ೬೪೭

೧೬. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ, ಅಧ್ಯಾಯ ೮೬, ಪುಟ - ೬೫೦

ಜನಪದ ಭಿತ್ತಿ ಚಿತ್ರಕಲೆಯು ಹೆಚ್ಚಾಗಿ ಮಣ್ಣಿನ ಮೇಲೆಯೇ ರಚನೆಯಾಗುವುದು ಕಂಡುಬರುವುದು. ಉತ್ತರ ಕನ್ನಡ ಜಿಲ್ಲೆ ಹಾಲಕ್ಕಿ ಜನಾಂಗದವರು ಬರೆಯುವ ಗೋಡೆ ಚಿತ್ರಗಳಲ್ಲಿ ಜಿಗುಟಾದ ಮಣ್ಣು ಲೇಪಿಸುತ್ತಾರೆ. ಉತ್ತರ ಕರ್ನಾಟಕ ಭಾಗದ ಹಬ್ಬ-ಹರಿದಿನಗಳಲ್ಲಿ ರಚನೆಯಾಗುವ ಜನಪದ ಭಿತ್ತಿ ಚಿತ್ರಗಳಲ್ಲಿ ಮಣ್ಣು ಬಳಸುವುದು ಕಂಡುಬರುವುದು. ದೀಪಾವಳಿಯಲ್ಲಿ ಬಾಗಿಲು, ಮಾಡುಗಳಲ್ಲಿ ಚಿತ್ತಾರ ಬರೆಯಲು ಜಿಗುಟು ಜೇಡಿ ಮಣ್ಣು, ಇಲ್ಲವೇ ಕಾವಿ ಬಣ್ಣದ ಜಿಗುಟು ಮಣ್ಣು ಸಗಣಿಯ ಜೊತೆ ಬೆರೆಸಿ ಲೇಪಿಸಲಾಗುತ್ತದೆ. ಮಣ್ಣನ್ನು ಚಿತ್ರ ರಚನೆಗಾಗಿ ಅಲ್ಲದೇ ಅದನ್ನು ಹದಗೊಳಿಸಿ ಅದಕ್ಕೆ ನಾರುಪದಾರ್ಥಗಳನ್ನು ಸೇರಿಸಿ ಮನೆಗಳನ್ನು ಕಟ್ಟಲೂ ಬಳಸುತ್ತಾರೆ. ಮಣ್ಣಿನಿಂದ ನಿರ್ಮಿಸುವ ಮನೆಗಳಲ್ಲಿ ಕಲ್ಲಿನ ಬಳಕೆ ಇರದೇ ಮಣ್ಣಿನ ಗೋಡೆಗಳೇ ಪ್ರಮುಖವಾಗಿರುತ್ತವೆ. ಹೀಗೆ ಮಣ್ಣು ಜಿಗುಟಾಗಿರುವ ಗುಣದಿಂದ ಭಿತ್ತಿ ರಚನೆಯಲ್ಲಿ ಪ್ರಮುಖವಾದ ಪರಿಕರವಾಗಿದೆ.

**೨. ಕಲ್ಲಿನ ಪುಡಿ :** ಭಿತ್ತಿ ನಿರ್ಮಾಣದಲ್ಲಿ ಬಳಸಲಾಗುವ ಪರಿಕರಗಳಲ್ಲಿ ಮಣ್ಣಿನ ಜೊತೆ ಕಲ್ಲಿನ ಪುಡಿಗಳನ್ನು ಬಳಸಲು ಶಿಲ್ಪಶಾಸ್ತ್ರಗಳು ಹೇಳುತ್ತವೆ. ಪ್ರಾಚೀನ ಕಾಲದಿಂದಲೇ ಕಲ್ಲಿನ ಪುಡಿಯನ್ನು ಭಿತ್ತಿ ನಿರ್ಮಾಣದಲ್ಲಿ ಬಳಸಿದ್ದು ಕಂಡುಬರುವುದು. ಕಲ್ಲಿನ ಪುಡಿಯನ್ನು ಅತ್ಯಂತ ನುಣುಪಾಗಿ ಕುಟ್ಟಿಕೊಂಡು [೧೭] ಬಳಸಿರುವುದು ತಿಳಿಯುವುದು. ಪ್ರಾಚೀನ ಪಾಂಪಿ ನಗರದಲ್ಲಿ, [೧೮] ಭಾರತದ ಅಜಂತಾ, [೧೯] ತ್ರಾವಣಕೋರ್, ಮತ್ತು ಕೋಚಿನ್ [೨೦] ಗಳಲ್ಲಿನ ಭಿತ್ತಿಯಲ್ಲಿ ಕಲ್ಲಿನ ಪುಡಿ ಬಳಕೆಯಾಗಿರುವುದು ಕಂಡುಕೊಳ್ಳಲಾಗಿದೆ. ಮಾನಸೋಲ್ಲಾಸವು [೨೧] ನೀಲಗಿರಿ ಪರ್ವತದಲ್ಲಿ ದೊರೆಯುವ ಬಿಳಿದಾದ ಕಲ್ಲನ್ನು ಕುಟ್ಟಿ ಪುಡಿ ಮಾಡಿ ಭಿತ್ತಿ ರಚನೆಯಲ್ಲಿ ಬಳಸಬೇಕೆಂದು ಹೇಳುತ್ತದೆ. ಭಿತ್ತಿ ನಿರ್ಮಾಣದಲ್ಲಿ ಶಿಲ್ಪಶಾಸ್ತ್ರಗಳು ಬಳಸಲು ಹೇಳಿದ ಬಿಳಿ ಕಲ್ಲಿನ ಪುಡಿಗಳು ಕೋಲಿನ್ (Kaolin), ಜಿಪ್ಸಮ್ [೨೨] (Gypsum), ಮತ್ತು ಮಾರ್ಬಲ್ [೨೩] ಕಲ್ಲಿನ ಪುಡಿಗಳಾಗಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಉತ್ತರ ಕರ್ನಾಟಕದಲ್ಲಿ ನರಗುಂದದ ಅರಮನೆ, ಹಂಪಿಯ ವಿರೂಪಾಕ್ಷ ದೇವಾಲಯ, ಕನಕಗಿರಿಯ ಕನಕಾಚಲಪತಿ ದೇವಾಲಯ, ರಾಯಚೂರಿನ ಖಾಜಿನಗೌಡರ ಮನೆಯಲ್ಲಿನ ಭಿತ್ತಿ ಚಿತ್ರಗಳಲ್ಲಿ ಭಿತ್ತಿ ಹಾಳಾದ ಕಡೆಯಲ್ಲಿ ಬಿಳಿಪುಡಿಯು ಉದುರುತ್ತಲಿದ್ದು ಇಲ್ಲೆಲ್ಲ ಜಿಪ್ಸಮ್, ಮಾರ್ಬಲ್, ಕೋಲಿನ್‌ಗಳಂತಹ ಬಿಳಿ ಕಲ್ಲಿನ ಪುಡಿಯನ್ನು ಬಳಸಿರುವ ಸಾಧ್ಯತೆ ಇದೆ. ವಿಷ್ಣುಧರ್ಮೋತ್ತರವು [೨೪] ಭಿತ್ತಿ ನಿರ್ಮಾಣದಲ್ಲಿ ಚಕಮಕಿ ಕಲ್ಲನ್ನು ಕುಟ್ಟಿ ಪುಡಿಮಾಡಿ ಮಿಶ್ರಣದಲ್ಲಿ ಸೇರಿಸಲು ಹೇಳಿದೆ. ಕಲ್ಲಿನ ಪುಡಿಯನ್ನು ಮಿಶ್ರಣದಲ್ಲಿ ಸೇರಿಸುವುದರಿಂದ ಭಿತ್ತಿಗೆ ದೃಢತೆ ಬರುತ್ತದೆ ಎನ್ನುವ ಕಾರಣಕ್ಕಾಗಿ ಇದನ್ನು ಬಳಸುತ್ತಿರಬಹುದು. ಕಾಂಕ್ರಿಟ್ ಮಿಶ್ರಣದಲ್ಲಿ, ರಸ್ತೆಗಳನ್ನು ನಿರ್ಮಿಸುವಲ್ಲಿ ಟಾರ್‌ನಲ್ಲಿ ಕಲ್ಲಿನ ಪುಡಿಯನ್ನು ಬಳಸುವುದನ್ನು ನೆನಪಿಸಿಕೊಳ್ಳಬಹುದು.

**೩. ಉಸುಕು :** ಉಸುಕು ಭಿತ್ತಿ ನಿರ್ಮಾಣದಲ್ಲಿ ಬಳಸಲ್ಪಡುವ ಮುಖ್ಯ ಪರಿಕರಗಳಲ್ಲಿ ಒಂದಾಗಿದೆ. ಮಣ್ಣಿನ ಭಿತ್ತಿ, ಗಾರೆ ಭಿತ್ತಿ ಎರಡೂ ವಿಧದ ಭಿತ್ತಿ ತಯಾರಿಕೆಯಲ್ಲೂ ಉಸುಕು ಬಳಸಲ್ಪಡುತ್ತದೆ. ವಿಷ್ಣುಧರ್ಮೋತ್ತರ, [೨೫]

---

೧೭. Jayanth Chakravarthi : Techniques in Indian Mural Painting, Page -
೧೮. Herbert Kurt : The complete Book of Artist's Techniques, Page - 32
೧೯. B. B. Lal : The Murals : Their composition and Techniques, Ajanta Mural, Page - 53
೨೦. S. Paramasivan : An Investigation in to the Methods of Mural Paintings, Page - 23
೨೧. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ, ಭಾಗ II, ಅಧ್ಯಾಯ I, ಶ್ಲೋಕ ೧೩೨ - ೧೩೭
೨೨. Motichandra : Jain Miniature Paintings from Western India, Page - 77
೨೩. S. Paramasivan : An Investigation in to the Methods of Mural Paintings, Page - 23
೨೪. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೪೦, ಶ್ಲೋಕ ೧ - ೧೧
೨೫. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೪೦, ಶ್ಲೋಕ ೧ - ೧೧

ಶಿಲ್ಪರತ್ನ.[೨೬] ಸಮರಾಂಗಣ ಸೂತ್ರಧಾರ.[೨೭] ಮಾನಸೋಲ್ಲಾಸ.[೨೮] ಸುಧಾಲೇಪನ ವಿಧಾನ[೨೯] ಗಳಲ್ಲಿ ಭಿತ್ತಿ ನಿರ್ಮಾಣದಲ್ಲಿ ಉಸುಕನ್ನು ಬಳಸಲು ಹೇಳಿದೆ. ಆಯಾ ಗ್ರಂಥಗಳು ಉಸುಕನ್ನು ಮಿಶ್ರಣದಲ್ಲಿ ಬೆರೆಸಲು ಪ್ರಮಾಣವನ್ನು ಹೇಳಿವೆ. ಅಲ್ಲದೇ ಉಸುಕನ್ನು ಮಿಶ್ರಣದ ಮೊದಲ ಹಂತದ ಲೇಪನದಲ್ಲಿ ಹೆಸರಿಸದೇ ಮೇಲಿನ ಎಲ್ಲ ಗ್ರಂಥಗಳೂ ಎರಡನೇ ಹಂತದ ಲೇಪನದಲ್ಲಿ ಬಳಸಲು ತಿಳಿಸಿವೆ. ಬದಾಮಿಯ ೩ ನೇ ಗುಹಾಲಯದ ಭಿತ್ತಿ ನಿರ್ಮಾಣದಲ್ಲಿ[೩೦] ಉಸುಕನ್ನು ಜರಡಿ ಹಿಡಿದು ಸೂಕ್ಷ್ಮವಾಗಿ ಮಾಡಿಕೊಂಡು ಬಳಸಲಾಗಿದೆ ಎನ್ನುವ ಅಭಿಪ್ರಾಯವಿದೆ. ಹಾಗೇ ಅಜಂತಾ,[೩೧] ಎಲ್ಲೋರಾ, ಭಾಘ್,[೩೨] ಚಂಬಾ[೩೩] ಹಾಗೂ ಮಧ್ಯ ಏಶಿಯಾ[೩೪] ಭಿತ್ತಿ ಚಿತ್ರಗಳ ನಿರ್ಮಾಣದಲ್ಲಿ ಉಸುಕು ಬಳಸಲ್ಪಟ್ಟಿದೆ ಎಂದು ರಾಸಾಯನಿಕ ಪ್ರಯೋಗಗಳಿಂದ ಕಂಡುಕೊಳ್ಳಲಾಗಿದೆ. ಎಲ್ಲ ರೀತಿಯ ಭಿತ್ತಿಯಲ್ಲೂ ಉಸುಕು ಪ್ರಮುಖವಾಗಿ ಬಳಸುತ್ತಿದ್ದರೂ ಉತ್ತರ ಕರ್ನಾಟಕದ ಬೀದರಿನ ರಂಗೀನ ಮಹಲ್. ಬೀರದ್ ಸಮೀಪದ ಅಷ್ಟೂರಿನಲ್ಲಿಯ ಸಮಾಧಿಗಳಲ್ಲಿ ದಪ್ಪನಾದ ಹರಳಿನ ಉಸುಕು ಬಳಸಿದ್ದು ಕಂಡುಬರುವುದು. ಗಾರೆ ತಯಾರಿಕೆಯಲ್ಲಿ, ಸಿಮೆಂಟ್ ಲೇಪನದಲ್ಲಿ, ಉಸುಕು ಪ್ರಮುಖವಾಗಿ ಬಳಸಲ್ಪಡುವುದನ್ನು ಗಮನಿಸಿದರೆ ಉಸುಕು ಇಂದಿಗೂ ಪ್ರಮುಖ ಮಿಶ್ರಣ ಪರಿಕರವಾಗಿದೆ ಎನ್ನಬಹುದು. ಕರಾವಳಿ ಭಾಗದ ಕಾವಿ ಚಿತ್ರ ರಚನೆಯ ಭಿತ್ತಿ ತಯಾರಿಕೆಯಲ್ಲಿ ಉಸುಕು ಬಳಸಲಾಗುತ್ತದೆ.

೪. **ಸುಣ್ಣ :** ಭಿತ್ತಿ ನಿರ್ಮಾಣದಲ್ಲಿ ಅವಶ್ಯವಾಗಿ ಬೇಕಾಗುವ ಪರಿಕರ ಸುಣ್ಣವಾಗಿದೆ. ಭಿತ್ತಿ ನಿರ್ಮಾಣದ ಮೊದಲ ಹಂತದ ಮಿಶ್ರಣದಿಂದ ಭಿತ್ತಿ ನುಣುಪುಗೊಳಿಸಿ ಹಿನ್ನೆಲೆ ಲೇಪಿಸುವವರೆಗಿನ ವಿವಿಧ ಹಂತಗಳಲ್ಲಿ ಸುಣ್ಣವು ಬಳಕೆಯಾಗುತ್ತದೆ. ವಿಷ್ಣುಧರ್ಮೋತ್ತರವು[೩೫] ಬೆಂಕಿಯಲ್ಲಿ ಸುಟ್ಟು ಕುಟ್ಟಿ ಪುಡಿ ಮಾಡಿದ ಸುಣ್ಣವನ್ನು ಭಿತ್ತಿ ತಯಾರಿಕೆಯಲ್ಲಿ ಬಳಸಬೇಕೆಂದು ಹೇಳುತ್ತದೆ. ಶಿಲ್ಪರತ್ನ ಗ್ರಂಥವು[೩೬] ಭಿತ್ತಿ ತಯಾರಿಕೆ ಮಿಶ್ರಣದಲ್ಲಿ ಕಲಸಲು ಮತ್ತು ಹಿನ್ನೆಲೆ ಲೇಪನಕ್ಕೆ ಸುಣ್ಣ ಅವಶ್ಯವೆಂದು ಹೇಳಿದೆ. ಹಾಗೆಯೇ ಸಮರಾಂಗಣ ಸೂತ್ರಧಾರವು[೩೭] ನುಣುಪಾದ, ಸ್ವಚ್ಛವಾದ. ಅತ್ಯಂತ ಬಿಳಿಯಾದ ಸುಣ್ಣದ ಕಲ್ಲನ್ನು ತೆಗೆದುಕೊಂಡು ಕುಟ್ಟಿ ಪುಡಿಮಾಡಿ ಅದಕ್ಕೆ ಅಕ್ಕಿಗಂಜಿ ಸೇರಿಸಿ ಭಿತ್ತಿಗೆ ಲೇಪಿಸಬೇಕೆನ್ನುವ ವಿವರ ಕೊಟ್ಟಿದೆ. ಸುಧಾಲೇಪವಿಧ[೩೮] ಗ್ರಂಥದಲ್ಲಿಯೂ ಭಿತ್ತಿ ತಯಾರಿಕೆಯಲ್ಲಿ ಸುಣ್ಣ ಬಳಸಲು ಸೂಚಿಸಲಾಗಿದೆ. ಒಣವಾದ ಭಿತ್ತಿಯ ಮೇಲೆ (Fresco-Secco) ಚಿತ್ರ ರಚನೆ ಮಾಡಬೇಕಾದ ವಿಧಾನದಲ್ಲಿ ನಿರ್ಮಿಸುವ ಭಿತ್ತಿಗೆ ಮತ್ತು ಚಿತ್ರ ರಚನೆಗೆ ಕುದಿಸಿದ ಸುಣ್ಣವನ್ನು[೩೯] ಬಳಸಬೇಕೆಂಬ ಸಂಗತಿ ತಿಳಿಯುವುದು.

---

೨೬. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೧೫ ರಿಂದ ೨೪

೨೭. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ, ಅಧ್ಯಾಯ ೭೨, ಶ್ಲೋಕ ೨೪, ೩೫

೨೮. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ, ಭಾಗ II, ಅಧ್ಯಾಯ I, ಶ್ಲೋಕ ೧೩೨ - ೧೩೭

೨೯. V. V. Sharma : Sudhalepavidhana, Page - 53

೩೦. ಎಂ. ಎಚ್. ಕೃಷ್ಣಯ್ಯ : ' ಶೃಂಗಾರ ಲಹರಿ ', ಪುಟ - ೬೩

೩೧. B. B. Lal : The Murals : Their composition and Techniques, Ajanta Mural, Page - 53

೩೨. S. Paramasivam : A. S. I. Annual Report, (1936-37), Page - 25

೩೩. Jagadish Mittal : Mural Paintings in Chambala, Page - 19

೩೪. Jayanth Chakravarthi : Techniques in Indian Mural Painting, Page - ೧೬

೩೫. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೪೦, ಶ್ಲೋಕ ೧ - ೧೧

೩೬. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೨೮ ರಿಂದ ೩೫

೩೭. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ, ಅಧ್ಯಾಯ ೭೨, ಶ್ಲೋಕ ೨೪, ೩೫

೩೮. V. V. Sharma : Sudhalepavidha, Page - 53

೩೯. Jayanth Chakravarthi : Techniques in Indian Mural Painting, Page - ೧೪

ಸಾಮಾನ್ಯವಾಗಿ ಎಲ್ಲ ಪ್ರಕಾರದ ಮಿಶ್ರಣ ಲೇಪನದಲ್ಲಿಯೂ ಸುಣ್ಣವು ಅನಿವಾರ್ಯ ಪರಿಕರವಾಗಿದೆ ಎನ್ನಬಹುದು. ಕರಾವಳಿ ಭಾಗದ ಕಾವಿ ಭಿತ್ತಿಚಿತ್ರ ರಚನೆಯಲ್ಲಿ ಕೆಂಪು ಕಾವಿ ಮಣ್ಣಿನ ಜೊತೆಗೆ ಸುಣ್ಣವು ಅವಶ್ಯವಾಗಿ ಬೇಕಾದ ವಸ್ತುವಾಗಿದೆ. ಇಲ್ಲಿ ಕುದಿಸಿದ ಬೆಣ್ಣೆಯಂತಹ ಮೃದುವಾದ ಸುಣ್ಣವನ್ನು ಮಿಶ್ರಣ ತಯಾರಿಕೆಯಲ್ಲಿ ಬಳಸಲಾಗುತ್ತದೆ. ಜನಪದರ ನಿತ್ಯ ಬದುಕಿನಲ್ಲಿ ಸುಣ್ಣವು ಅವಿಭಾಜ್ಯ ಅಂಗವಾಗಿ ಬೆಳೆದುಕೊಂಡು ಬಂದಿದೆ. ಗುಡಿಸಲಿನಿಂದ ಹಿಡಿದು ಅರಮನೆಯವರೆಗೆ ಸುಣ್ಣವನ್ನು ಲೇಪಿಸಿದ ಗೋಡೆಗಳು ಕಂಡುಬರುತ್ತವೆ. ಆಧುನಿಕ ಬಣ್ಣಗಳು ಮಾರುಕಟ್ಟೆಗೆ ಬರುವವರೆಗೆ ಸುಣ್ಣವೇ ಎಲ್ಲ ರೀತಿಯ ಲೇಪನಗಳಿಗೂ ಪ್ರಮುಖವಾಗಿತ್ತು. ಸುಣ್ಣ-ಬಣ್ಣ ಸಾರಿಸಿ ಅಲಂಕರಿಸಲಾಯಿತು. ಎನ್ನುವಲ್ಲಿ ಸುಣ್ಣದ ಮೇಲೆ ಬಣ್ಣವನ್ನು ಬರೆಯುವ ಅನಿವಾರ್ಯತೆಯನ್ನು ಕಂಡುಕೊಳ್ಳಬಹುದು. ಬಣ್ಣವು ಗೋಡೆಯ ಮೇಲೆ ಕಂಗೊಳಿಸಲು ಹಿನ್ನೆಲೆಯಾಗಿ ಸುಣ್ಣವು ಬೇಕು. ಉತ್ತರ ಕನ್ನಡ ಜಿಲ್ಲೆಯ ಹಾಲಕ್ಕಿ ಜನಾಂಗದವರು ಬರೆಯುವ ' ಹಲಿ ' ಚಿತ್ರಗಳಲ್ಲಿ ಸುಣ್ಣವು ಬಳಸಲ್ಪಡುತ್ತದೆ. ಉತ್ತರ ಕರ್ನಾಟಕದ ಹಬ್ಬ-ಹರಿದಿನಗಳಲ್ಲಿ ರಚಿಸಲಾಗುವ ಬೆಳದಿಂಗಳ ಚಿತ್ರ. ಪಾಂಡವರ ಚಿತ್ರ. ಕೃಷ್ಣಪಾದ ಬರೆಯುವುದು. ಬಾಗಿಲಿಗೆ ಅಲಂಕರಿಸುವುದು. ಕಾರಹುಣ್ಣಿಮೆಯಲ್ಲಿ ಹೋಳಿಗೆ ಚಿತ್ರ ಬರೆಯುವುದು, ಗರಡಿ ಮನೆಗಳಿಗೆ ಚಿತ್ರ ಬರೆಯುವುದು, ಸಮಾಧಿಗಳಿಗೆ ಚಿತ್ತಾರ ಬರೆಯುವುದು ಹೀಗೆ ಅನೇಕ ಸಂದರ್ಭಗಳಲ್ಲಿ ಚಿತ್ರ ಬರೆಯಲು ಲೇಪಿಸಲಾಗುವ ಮಿಶ್ರಣದಲ್ಲಿ ಕೆಮ್ಮಣ್ಣು. ಸಗಣಿ. ಜಿಗುಟು ಮಣ್ಣಿನ ಜೊತೆಗೆ ಸುಣ್ಣವು ಪ್ರಮುಖವಾಗಿದೆ ಎಂಬುದನ್ನು ಗಮನಿಸಬಹುದು.

**೫. ನಾರು ಪದಾರ್ಥ :** ಭಿತ್ತಿ ನಿರ್ಮಾಣದಲ್ಲಿ ಇತರ ವಸ್ತುಗಳ ಜೊತೆಗೆ ವಿವಿಧ ಬಗೆಯ ನಾರು ಪದಾರ್ಥಗಳನ್ನೂ ಬಳಸುತ್ತಿದ್ದ ಬಗೆಗೆ ವಿವರಗಳು ತಿಳಿದುಬರುತ್ತವೆ. ಈ ನಾರು ಪದಾರ್ಥಗಳು ಭಿತ್ತಿಯು ಕಳಚಿ ಬೀಳದಂತೆ ಹಿಡಿದುಕೊಳ್ಳಲು ಸಹಾಯ ಮಾಡುತ್ತವೆ. ಒಣಹುಲ್ಲು, ಹೊಟ್ಟು, ಕೂದಲು, ಟೆಂಗಿನ ನಾರು, ಹತ್ತಿ (ಅರಳೆ) ಗಳನ್ನು ಮಿಶ್ರಣ ಲೇಪನದಲ್ಲಿ ನಾರು ಪದಾರ್ಥಗಳಾಗಿ ಬಳಸಲು ಶಿಲ್ಪಶಾಸ್ತ್ರಗಳು ಹೇಳುತ್ತವೆ. ಸಮರಾಂಗಣ ಸೂತ್ರಧಾರವು [೪೦] ಕುದುರೆ ಬಾಲದ ಕೂದಲು, ಆಕಳ ಬಾಲದ ಕೂದಲು, ಒಣಹುಲ್ಲು, ಹೊಟ್ಟು, ಹತ್ತಿ, ಮತ್ತು ಟೆಂಗಿನ ನಾರುಗಳನ್ನು ಮಿಶ್ರಣದಲ್ಲಿ ಬೆರೆಸಲು ಹೇಳಿದೆ. ವಿಷ್ಣುಧರ್ಮೋತ್ತರ, ಶಿಲ್ಪರತ್ನ, ಮಾನಸೋಲ್ಲಾಸ ಗ್ರಂಥಗಳು ನಾರುಪದಾರ್ಥವನ್ನು ಬಳಸಲು ಪ್ರತ್ಯೇಕವಾಗಿ ಹೇಳದೇ ಇದ್ದರೂ ಅವುಗಳು ಹೇಳುವ ಭಿತ್ತಿ ನಿರ್ಮಾಣ ವಿಧಾನದಲ್ಲಿ ಹತ್ತಿ, ಅಥವಾ ಇತರ ಸಸ್ಯ ಸಂಬಂಧಿ ನಾರು ಪದಾರ್ಥಗಳ ಅವಶ್ಯಕತೆ ಇದೆ [೪೧] ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಅಜಂತಾದಲ್ಲಿನ ಭಿತ್ತಿಯಲ್ಲಿ [೪೨] ಹುಲ್ಲು ಮತ್ತು ಹೊಟ್ಟುಗಳಂತಹ ಸಸ್ಯಸಂಬಂಧೀ ನಾರಿನ ಅಂಶ ಕಂಡುಬಂದಿದೆ ಎನ್ನಲಾಗಿದೆ. ಉತ್ತರ ಕರ್ನಾಟಕದ ಗುಳೇದಗುಡ್ಡದ ಹೊಸಮನಿಗೌಡರ ಮನೆ, ನರಗುಂದದ ವೆಂಕಟೇಶ್ವರ ದೇವಾಲಯ, ನಿಪ್ಪಾಣಿಯ ರಾಜವಾಡೆಗಳಲ್ಲಿ ಭಿತ್ತಿ ನಿರ್ಮಾಣ ಸಂದರ್ಭದಲ್ಲಿ ಒಣಹುಲ್ಲು, ಹೊಟ್ಟುಗಳಂತಹ ನಾರು ಪದಾರ್ಥಗಳು ಬಳಕೆಯಾಗಿವೆ. ಇಲ್ಲೆಲ್ಲ ಭಿತ್ತಿ ಉದುರಿದ ಭಾಗದಲ್ಲಿ ನಾರಿನ ಅಂಶ ಕಂಡುಬರುತ್ತದೆ. ಯಾವುದೇ ಮಿಶ್ರಣ ಬಿಗಿಯಾಗಿ ಹಿಡಿದುಕೊಳ್ಳಲು ನಾರುಪದಾರ್ಥಗಳು ಅವಶ್ಯವೆನಿಸುತ್ತವೆ. ಹಳ್ಳಿಗಾಡಿನಲ್ಲಿ ಗುಡಿಸಲುಗಳ ಗೋಡೆಗಳನ್ನು ಮೆತ್ತಲು ತಯಾರಿಸುವ ಮಣ್ಣಿನ ಮಿಶ್ರಣದಲ್ಲಿ ಹೊಟ್ಟು. ಹುಲ್ಲುಗಳನ್ನು ಸೇರಿಸುವುದು ನೆನಪಿಸಿಕೊಳ್ಳಬಹುದು.

---

೪೦. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ. ಅಧ್ಯಾಯ ೭೩, ಶ್ಲೋಕ ೧ - ೧೧

೪೧. Jayanth Chakravarthi : Techniques in Indian Mural Painting, Page - ೨೩

೪೨. B. B. Lal : The Murals : Their composition and Techniques, Ajanta Mural, Page - 15

**೬. ಶಂಖಚೂರ್ಣ :** ಭಿತ್ತಿ ತಯಾರಿಕೆಯ ಮಿಶ್ರಣ ಪರಿಕರಗಳಲ್ಲಿ ಶಂಖಚೂರ್ಣವೂ ಒಂದು. ಶಂಖಚೂರ್ಣವೆಂದರೆ ಶಂಖಗಳನ್ನು ಅರೆದು ಮಾಡಿದ ಚೂರ್ಣ (ಪುಡಿ) ವಾಗಿದೆ. ಇದನ್ನು ಬಳಸುವಾಗ ಇದರ ಜೊತೆಗೆ ವಜ್ರಲೇಪ. ಮರದಂಟುಗಳಂತಹ ಬಂಧಕಗಳನ್ನು ಹೇಳಲಾಗುತ್ತದೆ. ಮಾನಸೋಲ್ಲಾಸವು [೪೩] ಭಿತ್ತಿ ನಿರ್ಮಾಣದ ಎರಡನೆಯ ಲೇಪನದಲ್ಲಿ ಕಪ್ಪೆಚಿಪ್ಪು ಮತ್ತು ಶಂಖಗಳನ್ನು ಕುಟ್ಟಿ ಪುಡಿ ಮಾಡಿ ವಜ್ರಲೇಪದೊಡನೆ ಬೆರೆಸಲು ಹೇಳಿದೆ. ಶಿಲ್ಪರತ್ನವು [೪೪] ಶಂಖ ಮತ್ತು ಕಪ್ಪೆಚಿಪ್ಪುಗಳನ್ನು ಬೆಂಕಿಯಲ್ಲಿ ಸುಟ್ಟು ನಂತರ ಕುಟ್ಟಿ ಪುಡಿಮಾಡಿ ಬಳಸಲು ಸೂಚಿಸುತ್ತದೆ. ಶಂಖ ಚೂರ್ಣದ ಬಳಕೆಯಿಂದ ಭಿತ್ತಿ ಲೇಪನದಲ್ಲಿ ದೃಢತೆಯ ಜೊತೆಗೆ ಮೃದುತನವೂ [೪೫] ಹೆಚ್ಚಾಗುತ್ತದೆ ಎನ್ನಲಾಗುತ್ತದೆ.

**೭. ಇಟ್ಟಿಗೆ ಪುಡಿ :** ಭಿತ್ತಿ ತಯಾರಿಕೆಯಲ್ಲಿ ಇಟ್ಟಿಗೆ ಪುಡಿಯನ್ನು ಬಳಸಲು ವಿಷ್ಣುಧರ್ಮೋತ್ತರ ಪುರಾಣ [೪೬] ಗ್ರಂಥ ಮಾತ್ರ ಹೇಳುತ್ತದೆ. ಭಾರತದ ಯಾವುದೇ ಪ್ರಾಚೀನ ಭಿತ್ತಿಯಲ್ಲಿಯೂ ಇಟ್ಟಿಗೆ ಪುಡಿ ಬಳಕೆಯಾಗಿದ್ದು [೪೭] ಕಂಡುಬರುವದಿಲ್ಲ. ವಿಷ್ಣುಧರ್ಮೋತ್ತರದಲ್ಲಿ ಕಲ್ಲಿನ ಪುಡಿ ಹೇಳಿಲ್ಲ, ಹಾಗಾಗಿ ಕಲ್ಲಿನ ಪುಡಿಯ ಬದಲಾಗಿ ಇಟ್ಟಿಗೆ ಪುಡಿ ಹೇಳಿದೆ ಎನ್ನಬಹುದು.

**II. ಬಂಧಕ ಪರಿಕರ :** ಭಿತ್ತಿ ರಚನೆಗಾಗಿ ಮಿಶ್ರಣ ತಯಾರಿಸಲು ವಿವಿಧ ಪರಿಕರಗಳ ಜೊತೆಗೆ ಯೋಗ್ಯವಾದ ಜಿಗುಟು ಪದಾರ್ಥಗಳು ಬೇಕಾಗುತ್ತವೆ. ಅಂತಹ ಜಿಗುಟು ಪದಾರ್ಥಗಳನ್ನು ಇಲ್ಲಿ ಬಂಧಕ ಪರಿಕರಗಳೆಂದು ಪರಿಗಣಿಸಲಾಗಿದೆ. ಈ ಅಂಟು ಪದಾರ್ಥಗಳೂ ಮಿಶ್ರಣದಲ್ಲೇ ಒಳಗೊಳ್ಳುತ್ತಿದ್ದರೂ ಅಂಟುವ ಅವುಗಳ ಗುಣಧರ್ಮವನ್ನಾಧರಿಸಿ ಅಧ್ಯಯನದ ಅನುಕೂಲ ದೃಷ್ಟಿಯಿಂದ ಬಂಧಕಗಳನ್ನು ಪ್ರತ್ಯೇಕ ಗುಂಪಿನಲ್ಲಿ ವರ್ಗೀಕರಿಸಿಕೊಳ್ಳಲಾಗಿದೆ.

ಭಿತ್ತಿ ತಯಾರಿಕೆಯಲ್ಲಿ ಬಳಸುವ ಬಂಧಕಗಳು –

೧. ವಜ್ರಲೇಪ
೨. ಮರದ ಅಂಟು
೩. ವಿವಿಧ ಗಿಡದ ರಸಗಳು
೪. ಬಾಳೆಹಣ್ಣು
೫. ಕಾಕಂಬಿ (ಜೇನುಬೆಲ್ಲ)

**೧. ವಜ್ರಲೇಪ :** ಭಿತ್ತಿ ತಯಾರಿಕೆಯಲ್ಲಿ ಬಳಸಲ್ಪಡುವ ವಜ್ರಲೇಪವು ಪ್ರಾಣಿ ಮೂಲದ ಬಂಧಕವಾಗಿದ್ದು, ಪ್ರಾಣಿಗಳ ಕೋಡು. ಚರ್ಮ. ಎಲುಬುಗಳಿಂದ ಪಡೆಯಲಾಗುತ್ತದೆ. ವಿಷ್ಣುಧರ್ಮೋತ್ತರವು [೪೮] ವಜ್ರಲೇಪವನ್ನು ಚಿತ್ರ ತಯಾರಿಕೆ ಮತ್ತು ವರ್ಣಲೇಪದಲ್ಲೂ ಬಳಸಲು ಹೇಳಿದೆ. ಅಲ್ಲದೇ ಈ ಗ್ರಂಥವು ಇಟ್ಟಿಗೆ ಮತ್ತು ಕಲ್ಲಿನ ಕಟ್ಟಡಗಳ ನಿರ್ಮಾಣ ಸಂದರ್ಭದಲ್ಲಿ ಐದು ಬಗೆಯ ವಜ್ರಲೇಪನಗಳನ್ನು ಬಳಸಬೇಕೆಂದು [೪೯] ಇನ್ನೊಂದು ಕಡೆಗೆ

---

೪೩. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ. ಭಾಗ II. ಅಧ್ಯಾಯ I. ಶ್ಲೋಕ ೧೩೨ - ೧೩೭
೪೪. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ. ಭಾಗ I. ಅಧ್ಯಾಯ ೪೬. ಶ್ಲೋಕ ೧೫ - ೨೪
೪೫. Jayanth Chakravarthi : Techniques in Indian Mural Painting, Page - ೩೬
೪೬. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ. ಭಾಗ III. ಅಧ್ಯಾಯ ೪೦. ಶ್ಲೋಕ ೧
೪೭. Jayanth Chakravarthi : Techniques in Indian Mural Painting, Page - ೨೩
೪೮. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ. ಭಾಗ III. ಅಧ್ಯಾಯ ೪೦. ಶ್ಲೋಕ ೨೯
೪೯. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ. ಭಾಗ III. ಅಧ್ಯಾಯ ೯೨. ಶ್ಲೋಕ ೮, ೯

ಹೇಳಿವೆ. ಆದರೆ ಇದು ಆ ಐದು ಬಗೆಯ ವಜ್ರಲೇಪಗಳು ಯಾವವು ಎಂಬ ಬಗೆಗೆ ಹೆಚ್ಚಿನ ವಿವರಣೆ ಕೊಟ್ಟಿಲ್ಲ. ಅವುಗಳಲ್ಲಿ ಮೂರನೇ ಪ್ರಕಾರದ ವಜ್ರಲೇಪವನ್ನು ಗೂಳಿ ಮತ್ತು ಕೋಣದ ಕೋಡುಗಳಿಂದ, ಆಡು, ಕೋಣ, ಮತ್ತು ಆಕಳಿನ ಚರ್ಮದಿಂದ ತಯಾರಿಸಬೇಕೆಂದು ಹೇಳುತ್ತದೆ. ಮುಂದುವರಿದು ಹೇಳುತ್ತ ದೇವಾಲಯ ಮತ್ತು ಅರಮನೆಗಳನ್ನು ಒಳಭಾಗದಲ್ಲಿ ಅಲಂಕರಿಸಲು ಕೂಡಾ ವಜ್ರಲೇಪವನ್ನು [೫೦] ಬಳಸಬೇಕೆಂದು ಹೇಳುತ್ತದೆ.

ಮಾನಸೋಲ್ಲಾಸ [೫೧] ಮತ್ತು ಶಿಲ್ಪರತ್ನ [೫೨] ಗ್ರಂಥಗಳು ವಜ್ರಲೇಪದ ಬಗೆಗೆ ಹೇಳುತ್ತ ಇದನ್ನು ಭಿತ್ತಿ ತಯಾರಿಕೆ ಮತ್ತು ವರ್ಣಲೇಪನದಲ್ಲೂ ಬಳಸಲು ತಿಳಿಸುತ್ತವೆ. ಅಲ್ಲದೇ ಈ ಗ್ರಂಥಗಳು ವಜ್ರಲೇಪ ತಯಾರಿಕೆಯ ವಿಧಾನವನ್ನು ಹೇಳಿದ್ದು ಸಾಮಾನ್ಯವಾಗಿ ಒಂದೇ ತೆರನಾಗಿವೆ. ಅಜಂತಾ, ಎಲ್ಲೋರಾ, ಭಾಘ್ ಭಿತ್ತಿಚಿತ್ರಗಳಲ್ಲಿ ವಜ್ರಲೇಪವು ಉಪಯೋಗಿಸಲ್ಪಟ್ಟಿರುವುದನ್ನು ಪ್ರಯೋಗದಿಂದ [೫೩] ಕಂಡುಕೊಳ್ಳಲಾಗಿದೆ. ವಜ್ರಲೇಪವು ಭಿತ್ತಿ ತಯಾರಿಕೆಯಲ್ಲಿ ಬಳಸಲ್ಪಟ್ಟಂತೆಯೇ ಚಿತ್ರ ರಚನೆಯಲ್ಲಿಯೂ ಬಳಸಲ್ಪಡುವ ಪರಿಕರವಾಗಿದ್ದು ಇದರ ತಯಾರಿಕೆ ಮತ್ತು ಹೆಚ್ಚಿನ ವಿವರವನ್ನು ಭಿತ್ತಿಚಿತ್ರ ರಚನಾ ಪರಿಕರ ಎಂಬ ಭಾಗದಲ್ಲಿ ಇದೇ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಅಲ್ಲದೇ ಭಿತ್ತಿಚಿತ್ರ ರಚನಾ ವಿಧಾನ ಹೇಳುವಲ್ಲಿಯೂ ಸಾಂದರ್ಭಿಕವಾಗಿ ವಜ್ರಲೇಪದ ವಿವರಗಳು ಬಂದಿವೆ.

**೨. ಮರದ ಅಂಟು :** ಸಸ್ಯಗಳಿಂದ ಪಡೆಯುವ ಅಂಟುಗಳನ್ನು ಈ ಗುಂಪಿನಲ್ಲಿ ಸೇರಿಸಬಹುದು. ಸಸ್ಯಗಳ ಟೊಂಗೆಗಳಲ್ಲಿ ಸ್ವಾಭಾವಿಕವಾಗಿ, ಇಲ್ಲವೆ ಟೊಂಗೆಗಳ ಭಾಗಕ್ಕೆ ಗಾಯಮಾಡಿ ಅದರಿಂದ ಅಂಟು ವಸರುವಂತೆ ಮಾಡಿ ಪಡೆಯಲಾಗುತ್ತದೆ. ಅಲ್ಲದೇ ಬಿಲ್ವಪತ್ರಿ ಕಾಯಿಯಂತಹ ಕೆಲವು ಗಿಡಗಳ ಕಾಯಿ ಹಣ್ಣುಗಳು ಅಂಟುಗಳನ್ನು ಹೊಂದಿದ್ದು ಅವುಗಳಿಂದಲೂ ಅಂಟು ಪಡೆಯುತ್ತಿದ್ದರು ಎಂದು ಹೇಳಲಾಗುತ್ತದೆ.

ವಿಷ್ಣುಧರ್ಮೋತ್ತರವು [೫೪] ಒಂದು ಕಡೆಗೆ ಬಕುಳದ ಗಿಡ ಮತ್ತು ' ಸಿಂಧೂರ ' ಗಿಡದ ಅಂಟುಗಳ ಬಗೆಗೆ ಹೇಳಿದರೆ, ಇನ್ನೊಂದು ಕಡೆಗೆ [೫೫] ಒಂದು ರೀತಿಯ ಹುಲ್ಲನ್ನು ಅರೆದು ಅಂಟು ಪಡೆಯಲು ತಿಳಸುತ್ತದೆ. ಶಿಲ್ಪರತ್ನವು [೫೬] ನಿಂಬಗಿಡ ಮತ್ತು ಬಿಲ್ವಪತ್ರಿ ಕಾಯಿಯಿಂದ ಪಡೆದ ಅಂಟು ಉತ್ತಮವಾಗಿರುತ್ತದೆ ಎಂದು ಹೇಳುತ್ತದೆ.

ಸಮರಾಂಗಣ ಸೂತ್ರಧಾರ [೫೭] ಮತ್ತು ವಿಷ್ಣುಧರ್ಮೋತ್ತರ ಗ್ರಂಥಗಳು [೫೮] ಭಿತ್ತಿ ನಿರ್ಮಾಣದಲ್ಲಿ ಬಿಲ್ವಪತ್ರಿ ಕಾಯಿಯ ಅಂಟನ್ನು ಹೇಳಿದ್ದು ಇದು ಮಣ್ಣಿನ ಭಿತ್ತಿ ತಯಾರಿಕೆಯಲ್ಲಿ ಪ್ರಮುಖ ಬಂಧಕವಾಗಿತ್ತೆಂದು ಹೇಳಬಹುದು. ವಿಷ್ಣುಧರ್ಮೋತ್ತರವು ಬಿಲ್ವಪತ್ರಿ ಕಾಯಿಯ ಅಂಟನ್ನು ಹೇಳುವಂತೆಯೇ ಗುಗ್ಗಳವನ್ನೂ ಭಿತ್ತಿ ತಯಾರಿಕೆಯಲ್ಲಿ ಹೇಳಿದೆ.

---

೫೦. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೯೨, ಶ್ಲೋಕ ೧೫
೫೧. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ, ಭಾಗ II, ಅಧ್ಯಾಯ I, ಶ್ಲೋಕ ೧೩೩ - ೧೩೬
೫೨. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೧೩೧ - ೧೩೩
೫೩. Jayanth Chakravarthi : Techniques in Indian Mural Painting, Page - ೬೩
೫೪. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೪೦, ಶ್ಲೋಕ ೨೯
೫೫. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೪೦, ಶ್ಲೋಕ ೩೦
೫೬. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೫೧
೫೭. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ, ಅಧ್ಯಾಯ ೭೩, ಶ್ಲೋಕ ೮ - ೯
೫೮. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೪೦, ಶ್ಲೋಕ ೧ - ೧೧

**೩. ವಿವಿಧ ಗಿಡದ ರಸಗಳು :** ಗಿಡದ ಟೊಂಗೆ, ಕಾಯಿಗಳಿಂದ ಪಡೆದ ಸ್ವಾಭಾವಿಕ ಅಂಟುಗಳಲ್ಲದೇ ಕೆಲವು ಗಿಡದ ಕಾಂಡ, ಎಲೆ, ಹೂ-ಹಣ್ಣುಗಳನ್ನು ಜಜ್ಜಿ ರಸ ತೆಗೆದು ಅಂಟಿನಂತೆ ಬಳಸಲೂ ಶಿಲ್ಪಶಾಸ್ತ್ರಗಳು ಹೇಳಿವೆ. ಸಮರಾಂಗಣ ಸೂತ್ರಧಾರ [೫೯] ಸ್ನುಹಿವಸ್ತುಕಾ, ಕುಸ್ಮಂಡ, ಕುಡ್ಡಲಿ, ಅಪಮಾರ್ಗ, ಕಬ್ಬು, ಸಿಸೋ, ಮಧುಕ, ಬೇವು, ತ್ರಿಫಲಾ, ಕುಟಜಾ, ಕಾಕುವ, ಶಾಲ್ಮಲ ಗಿಡ, ಅವರೆ ಬೀಜ ಮತ್ತು ಕ್ರಾಮುಕ ಗಿಡದ ಬೇರು ಇವುಗಳಿಂದ ಪಡೆದ ರಸವನ್ನು ಭಿತ್ತಿ ತಯಾರಿಕೆಯಲ್ಲಿ ಬಳಸಲು ಹೇಳಿದೆ.

ವಿಷ್ಣುಧರ್ಮೋತ್ತರವು [೬೦] ಮಧು ಕುಂದರುಕ, ಸಾಲವೃಕ್ಷ, ಗಿಡದ ರಸಗಳನ್ನು ಹೇಳಿದ್ದರೆ, ಶಿಲ್ಪರತ್ನವು [೬೧] ಮುದ್ಗದ ರಸವನ್ನು ಹೇಳಿದೆ. ಕಾಶ್ಯಪ ಶಿಲ್ಪ ಶಾಸ್ತ್ರವು [೬೨] ಬಿಲ್ವಪತ್ರಿಕಾಯಿಯ ಅಂಟನ್ನು ಮುಖ್ಯವಾಗಿ ಹೇಳಿದಂತೆಯೇ ತ್ರಿಫಲಾ ಗಿಡದ ರಸ, ಬಾರ್ಲಿ, ಗೋದಿ, ಉದ್ದು, ಅಗಸೆ ಬೀಜಗಳ ರಸ, ಗುಗ್ಗಳು, ಶಾಲ್ಮಲ ಗಿಡದ ರಸ, ಶುಂಠಿ, ಪಿಪ್ಪಲಿ, ಕರಿ ಮೆಣಸುಗಳ ರಸಗಳನ್ನೂ ಅಂಟುಮಾಧ್ಯಮಗಳಾಗಿ ಬಳಸಲು ತಿಳಿಸುತ್ತದೆ. ಇವುಗಳ ಬಳಕೆ ಮತ್ತು ಇನ್ನಷ್ಟು ಹೆಚ್ಚಿನ ವಿವರಗಳನ್ನು ಭಿತ್ತಿ ತಯಾರಿಕಾ ವಿಧಾನದಲ್ಲಿ ಸಾಂದರ್ಭಿಕವಾಗಿ ಹೇಳಲಾಗಿದೆ.

**೪. ಬಾಳೆಹಣ್ಣು :** ಭಿತ್ತಿ ತಯಾರಿಕೆಯಲ್ಲಿ ವಜ್ರಲೇಪ, ಮರದ ಅಂಟು, ವಿವಿಧ ಗಿಡದ ರಸಗಳನ್ನು ಹೇಳಿದಂತೆಯೇ ಬಾಳೆಹಣ್ಣನ್ನೂ ಬಂಧಕವಾಗಿ ಉಪಯೋಗಿಸಲು ಕೆಲವು ಶಿಲ್ಪಶಾಸ್ತ್ರಗಳು ಹೇಳಿವೆ. ಬಾಳೆಹಣ್ಣಿನ ಒಳಗಿನ ತಿರುಳು ಭಾಗವನ್ನು ಜಿಗುಟು ಪದಾರ್ಥವಾಗಿ ಭಿತ್ತಿ ತಯಾರಿಕೆಯಲ್ಲೂ ಬಳಸಲಾಗುತ್ತದೆ. ಬರೀ ಬಾಳೆಹಣ್ಣನ್ನು ನೇರವಾಗಿ ಉಪಯೋಗಿಸದೇ ಅದರ ತಿರುಳನ್ನು ವಿವಿಧ ವಿಧಾನಗಳಿಂದ ಸಂಸ್ಕರಿಸಿ ಉಪಯೋಗಿಸಿದಂತೆ ಕಂಡುಬರುತ್ತದೆ. ಶಿಲ್ಪರತ್ನವು [೬೩] ಬಾಳೆ ಹಣ್ಣಿನ ತಿರುಳನ್ನು ಬೆಂಕಿಯಲ್ಲಿ ಸುಟ್ಟು ಕಣಕದ ಹಾಗೆ ಮಾಡಿಕೊಂಡು ಮಿಶ್ರಣದ ೧/೪ ಭಾಗದಷ್ಟು ಇರುವಂತೆ ಬೆರೆಸಬೇಕೆಂದು ತಿಳಿಸುತ್ತದೆ. ಸುಧಾಲೇಪ ವಿಧ [೬೪] ಎಂಬ ಗ್ರಂಥದಲ್ಲಿಯೂ ಬಾಳೆಹಣ್ಣಿನ ತಿರುಳನ್ನು ಸೂಕ್ಷ್ಮ ಜ್ವಾಲೆಯಲ್ಲಿ ಸುಟ್ಟು ಕಣಕದ ಹಾಗೆ ಮಾಡಿಕೊಂಡು ಮಿಶ್ರಣಕ್ಕೆ ಸೇರಿಸಬೇಕು ಎಂದಿದೆ.

**೫. ಕಾಕಂಬಿ (ಜೇನುಬೆಲ್ಲ) :** ಭಿತ್ತಿ ತಯಾರಿಕೆಯಲ್ಲಿ ಜೇನುಬೆಲ್ಲವನ್ನು ಬಂಧಕವಾಗಿ ಬಳಸುವುದನ್ನೂ ಶಿಲ್ಪಶಾಸ್ತ್ರಗಳು ಅನುಮೋದಿಸುತ್ತವೆ. ವಿಷ್ಣುಧರ್ಮೋತ್ತರವು [೬೫] ಜೇನು ಬೆಲ್ಲವನ್ನು ಇಟ್ಟಿಗೆ ಪುಡಿ, ಜೇಡಿಮಣ್ಣು, ಮತ್ತು ಇತರ ವಸ್ತುಗಳ ಜೊತೆಗೆ ಮೊದಲ ಹಂತದ ಲೇಪನದಲ್ಲಿ ಬೆರೆಸಲು ಹೇಳುತ್ತದೆ. ಶಿಲ್ಪರತ್ನವು [೬೬] ಕೂಡಾ ಮೊದಲ ಲೇಪನದಲ್ಲಿ ಶಂಖಚೂರ್ಣ, ಮುದ್ಗರಸ, ಬಾಳೆಹಣ್ಣಿನ ತಿರುಳು ಮತ್ತು ಉಸುಕಿನ ಜೊತೆಗೆ ಜೇನುಬೆಲ್ಲವನ್ನು ಮಿಶ್ರಣದಲ್ಲಿ ಸೇರಿಸಲು ಹೇಳಿದೆಯಲ್ಲದೇ ಹಿನ್ನಲೆ ಲೇಪನಕ್ಕಿಂತ ಮೊದಲು ಭಿತ್ತಿ ನುಣುಪುಗೊಳಿಸುವಾಗ ಜೇನುಬೆಲ್ಲದ ನೀರಿನಿಂದ ಭಿತ್ತಿಯನ್ನು ಹಲವು ಬಾರಿ ತೊಳೆಯಬೇಕು ಎಂದು ತಿಳಿಸುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಗೋಡೆಗೆ

---

೫೯. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ, ಅಧ್ಯಾಯ ೭೨, ಶ್ಲೋಕ ೨೪ - ೩೫

೬೦. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೪೦, ಶ್ಲೋಕ ೧ - ೧೧

೬೧. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೧೫ - ೨೪

೬೨. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ, ಅಧ್ಯಾಯ ೮೬, ಪುಟ - ೬೫೦

೬೩. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೧೫ - ೨೪

೬೪. V. V. Sharma : Sudhalepavidha, Page - 53 - 59

೬೫. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೪೦, ಶ್ಲೋಕ ೧ - ೧೧

೬೬. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೧೫ - ೨೪

ಜೇಡಿಮಣ್ಣು ಲೇಪನದ ನಂತರ ಎರಡನೆಯ ಲೇಪನದಲ್ಲಿ ಸುಣ್ಣದೊಂದಿಗೆ ಬೆಲ್ಲವನ್ನೂ ಕೂಡಿಸುವುದು ಕೆಲವು ಕಡೆಗೆ ಕಂಡುಬರುವುದು. ಈ ಪ್ರಕಾರದ ಮುಖ್ಯ ಬಂಧಕಗಳಲ್ಲದೇ ಇತರ ಬಂಧಕಗಳನ್ನೂ ಭಿತ್ತಿ ತಯಾರಿಕೆಯಲ್ಲಿ ಬಳಸಲು ಶಿಲ್ಪಶಾಸ್ತ್ರಗಳು ಹೇಳಿವೆ. ವಿಷ್ಣುಧರ್ಮೋತ್ತರವು [೬೭] ಜೇನು ಮೇಣ, ಎಣ್ಣೆ, ಮತ್ತು ಹಾಲನ್ನು ಹೇಳಿದ್ದರೆ, ಸಮರಾಂಗಣ ಸೂತ್ರಧಾರ [೬೮] ವು ಸಹಿತ ಜೇನು ಮೇಣ, ಎಣ್ಣೆಯಲ್ಲದೇ ಸಕ್ಕರೆ ಪುಡಿ, ಅಕ್ಕಿಗಂಜಿ ಮತ್ತು ಸಮುದ್ರದ ಉಪ್ಪುಗಳನ್ನು ಭಿತ್ತಿ ತಯಾರಿಕೆಯಲ್ಲಿ ಉಪಯೋಗಿಸಲು ಹೇಳಿದೆ.

**III. ಲೇಪಿಸುವ ಪರಿಕರ :** ಮಿಶ್ರಣ ಪರಿಕರ ಮತ್ತು ಬಂಧಕ ಪರಿಕರಗಳನ್ನು ಉಪಯೋಗಿಸಿ ತಯಾರಿಸಲಾದ ಭಿತ್ತಿ ಲೇಪನವನ್ನು ಲೇಪಿಸಲು ಹಲವು ವಸ್ತುಗಳ ಅವಶ್ಯಕತೆ ಇದೆ. ಹದವಾಗಿ ಕಲಸಿಕೊಂಡ ಇಂತಹ ಮಿಶ್ರಣವನ್ನು ಲೇಪಿಸಲು ಬೇಕಾಗುವ ಪರಿಕರಗಳನ್ನು ಲೇಪಿಸುವ ಪರಿಕರಗಳೆಂದು ವರ್ಗೀಕರಿಸಿಕೊಂಡು ಅಧ್ಯಯನ ಮಾಡಬಹುದಾಗಿದೆ.

ಲೇಪಿಸುವ ಪರಿಕರಗಳಲ್ಲಿ ಈ ಕೆಳಗಿನ ವಸ್ತುಗಳು ಒಳಗೊಳ್ಳುತ್ತವೆ.

೧. ತ್ಯಾಪಿಗಳು

೨. ಪೂರಕೆಗಳು

೩. ಕಾಗದ

ಮಿಶ್ರಣವನ್ನು ತುಂಬಿಕೊಳ್ಳಲು ಬುಟ್ಟಿಗಳ ಅವಶ್ಯಕತೆ ಇದ್ದು ಬುಟ್ಟಿಗಳನ್ನು ಶಿಲ್ಪಶಾಸ್ತ್ರಗಳು ಹೆಸರಿಸಿಲ್ಲ.

**೧. ತ್ಯಾಪಿಗಳು :** ಇವು ಮಿಶ್ರಣ ಲೇಪಿಸಲು ಬಳಸುವ ಪ್ರಮುಖ ಸಾಧನಗಳಾಗಿದ್ದು, ಶಿಲ್ಪಶಾಸ್ತ್ರಗಳಲ್ಲಿ ಹೇಳಿದ ವಿವರಣೆಯ ಪ್ರಕಾರ ಇಂದು ಗೌಂಡಿಗಳು ಸಿಮೆಂಟ್ ಲೇಪಿಸಲು ಬಳಸುವ ತ್ಯಾಪಿಯ ಮಾದರಿಯಲ್ಲೇ ಇರುತ್ತಿದ್ದವು ಎಂದು ತರ್ಕಿಸಬಹುದು. ಶಿಲ್ಪರತ್ನವು [೬೯] ಮಿಶ್ರಣ ಲೇಪಿಸಲು ' ದರ್ವಿ ' ಎಂಬ ಸಾಧನಗಳನ್ನು ಹೇಳಿದ್ದು ಇವುಗಳು ಕಟ್ಟಿಗೆ ಇಲ್ಲವೇ ಕಬ್ಬಿಣದಿಂದ ಮಾಡಿದವುಗಳಾಗಿರಬೇಕು, ನುಣುಪಾದ ಮೈಯನ್ನು ಹೊಂದಿದ್ದು, ಹಿಡಿಕೆಯುಳ್ಳವಾಗಿರಬೇಕು. ಮತ್ತು ಅವಶ್ಯಕತೆಗೆ ತಕ್ಕಂತ ವಿವಿಧ ಅಳತೆ ಮತ್ತು ಶೈಲಿಯಲ್ಲಿರಬೇಕೆಂದು ತಿಳಿಸುತ್ತದೆ.

ಶಿಲ್ಪರತ್ನ ಗ್ರಂಥವನ್ನೇ ಹೆಚ್ಚಾಗಿ ಅನುಸರಿಸಿ ರಚಿಸಲಾದ ' ಸುಧಾಲೇಪವಿಧ ' [೭೦] ಕೃತಿಯಲ್ಲಿ ತ್ಯಾಪಿಗಳು ಚಿಕ್ಕವು, ದೊಡ್ಡವು ಇರಬೇಕಲ್ಲದೇ ಅವಶ್ಯಕತೆಗೆ ಅನುಸಾರವಾಗಿ ವಿವಿಧ ವಿನ್ಯಾಸದಲ್ಲಿ ರಚನೆಯಾಗಿರಬೇಕು. ನುಣುಪು ಮೈಯನ್ನು ಹೊಂದಿದ್ದು ಹಿಡಿಕೆಯುಳ್ಳವಾಗಿರಬೇಕಲ್ಲದೇ ಕಬ್ಬಿಣ, ಕಟ್ಟಿಗೆ, ಸೀಸ, ಮತ್ತು ತವರದಿಂದ ಮಾಡಿದವುಗಳಾಗಿರಬೇಕು ಎಂದು ತಿಳಿಸುತ್ತದೆ. ಮಿಶ್ರಣ ಲೇಪಿಸಲು ಇಂತಹ ಸಾಧನಗಳ ಅವಶ್ಯಕತೆ ಇದ್ದರೂ ಹೆಚ್ಚಿನ ಗ್ರಂಥಗಳು ಇವುಗಳನ್ನು ಹೆಸರಿಸಿಲ್ಲ. ಕರಾವಳಿ ಭಾಗದ ಕಾವಿ ಭಿತ್ತಿ ಚಿತ್ರರಚನೆಯಲ್ಲಿ ಮಿಶ್ರಣ ಲೇಪಿಸಲು ಮತ್ತು ಬೇಡಾದ ಭಾಗವನ್ನು ಕೆರೆದು ತೆಗೆಯಲು ತ್ಯಾಪಿಗಳೇ ಮುಖ್ಯ ಪರಿಕರಗಳಾಗಿವೆ. ಚಿತ್ರ ರಚನಾ ಸಂದರ್ಭದಲ್ಲಿ ಕೆರೆದು ತೆಗೆದ ಭಾಗದಲ್ಲಿ ಬೇಕಾದಷ್ಟು ಪ್ರಮಾಣದ ಮಿಶ್ರಣ ಲೇಪಿಸಲು ತ್ಯಾಪಿಯೇ ಅತ್ಯಂತ ಅನುಕೂಲಕರ ಸಾಧನ. ಚಿತ್ರ

---

೬೭. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೪೦, ಶ್ಲೋಕ ೧ - ೧೧

೬೮. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ, ಅಧ್ಯಾಯ ೭೨, ಶ್ಲೋಕ ೨೪ - ೩೫

೬೯. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೧೫ - ೨೪

೭೦. V. V. Sharma : Sudhalepavidha, Page - 53, 59

ಭಿತ್ತಿಯ ಉಬ್ಬುತಗ್ಗು ಭಾಗಗಳನ್ನು ಸಮವಾಗಿ ಮಾಡಿ ನುಣುಪುಗೊಳಿಸುವುದು, ಚಿತ್ರ ರಚನೆಯ ನಂತರ ಅದರ ಮೇಲೆ ಮೆದುವಾಗಿ ನುಣುಪುಗೊಳಿಸುವುದು ತ್ಯಾಪಿಯಿಂದಲೇ ಎನ್ನುವುದು ಗಮನಾರ್ಹ ಅಂಶ. ಕಾವಿ ಭಿತ್ತಿಚಿತ್ರ ರಚನೆಯಲ್ಲಿ ತ್ಯಾಪಿ ಮತ್ತು ಕಂಟಗಳು ಅನಿವಾರ್ಯ ಪರಿಕರಗಳಾಗಿವೆ. ಕಾವಿ ಚಿತ್ರರಚನಾ ವಿಧಾನದಲ್ಲಿ ಬೇರೆ ಬೇರೆ ಅಳತೆಯ ಮತ್ತು ಶೈಲಿಯ ತ್ಯಾಪಿಗಳು ಬಳಕೆಯಾಗುತ್ತವೆ.

೨. **ಪೊರಕೆಗಳು :** ಜಿಗುಟು ಮಿಶ್ರಣವನ್ನು ತ್ಯಾಪಿಯಂತಹ ಸಾಧನಗಳಿಂದ ಲೇಪಿಸಿದ ನಂತರ ಭಿತ್ತಿಯನ್ನು ನುಣುಪುಗೊಳಿಸಲು ಮಂದವಾದ ಗಂಜಿಯಂತಹ ಮಿಶ್ರಣ ಲೇಪಿಸಲು ಮತ್ತು ಓನ್ನೆಲೆ ಲೇಪಿಸಲು ಪೊರಕೆಯಂತಹ ಸಾಧನಗಳ ಅವಶ್ಯಕತೆ ಇದೆ. ಗೋಡೆಗೆ ಸುಣ್ಣ ಬಣ್ಣ ಲೇಪಿಸಲು ಇಂತಹ ಸಾಧನಗಳನ್ನೇ ಬಳಸುವುದು ಸಾಮಾನ್ಯ. ಮಾರುಕಟ್ಟೆಯಲ್ಲಿ ಈಗ ಇದಕ್ಕಾಗಿ ದೊಡ್ಡ ಪ್ರಮಾಣದ ಕುಂಚಗಳು ಲಭ್ಯವಾಗುತ್ತಿದ್ದು, ಅದಕ್ಕಿಂತ ಪೂರ್ವದಲ್ಲಿ ಪೊರಕೆಯಂತಹ ಸಾಧನಗಳೇ ಮುಖ್ಯವಾಗಿದ್ದವು. ಗ್ರಾಮೀಣ ಪ್ರದೇಶದಲ್ಲಿ ಈಗಲೂ ಸುಣ್ಣ ಲೇಪಿಸಲು ಹುಲ್ಲಿನ ಪೊರಕೆಗಳನ್ನೇ ಬಳಸುತ್ತಾರೆ. ಶಿಲ್ಪರತ್ನವು [೨೧] ಇಂತಹ ಸಾಧನಗಳ ಬಗೆಗೆ ಹೇಳುತ್ತದೆ. ಭಿತ್ತಿಯನ್ನು ನುಣುಪುಗೊಳಿಸುವಾಗ ಮಂದ ಲೇಪವನ್ನು ಪೊರಕೆಯಂತಹ ಸಾಧನಗಳಿಂದ ಲೇಪಿಸಬೇಕು. ಈ ಸಾಧನಗಳು ಬಿರುಸು ಎಳೆಗಳನ್ನು ಹೊಂದಿದವುಗಳಾಗಿದ್ದು, ಕೇತಕಿ ಮತ್ತು ಸಕೋಟಾ ಗಿಡದಿಂದ ಮಾಡಿದವುಗಳಾಗಿರಬೇಕು ಎಂದು ತಿಳಿಸುತ್ತದಲ್ಲದೇ ಓನ್ನೆಲೆ ಲೇಪನಕ್ಕೆ ಮೊದಲು ಭಿತ್ತಿಯನ್ನು ತೊಳೆಯಲು ಬಲಸುವ ಪೊರಕೆಯಂತಹ ಸಾಧನಗಳು ಟೆಂಗಿನ ನಾರಿನಿಂದ ತಯಾರಿಸಲ್ಪಟ್ಟಿರಬೇಕೆಂದು ತಿಳಿಸುತ್ತದೆ. ಶಿಲ್ಪರತ್ನ ಗ್ರಂಥವನ್ನೇ ಆಧಾರವಾಗಿಟ್ಟುಕೊಂಡು ರಚನೆಯಾದ ಸುಧಾಲೇಪ ವಿಧ [೨೨] ಕೃತಿಯಲ್ಲಿ ತುದಿಗಳನ್ನು ಸಮವಾಗಿ ಕತ್ತರಿಸಲಾದ, ಹಿಡಿಕೆಗೆ ಭದ್ರವಾಗಿ ಬಂಧಿಸಿದಂತಹ ಟೆಂಗಿನ ನಾರಿನ ಸಾಧನಗಳನ್ನು ಉಪಯೋಗಿಸಬೇಕೆಂದು ಅವುಗಳ ಸ್ವರೂಪವನ್ನು ಹೇಳಲಾಗಿದೆ.

೩. **ಕಾಗದ :** ಕಾಗದವು ಚಿತ್ರರಚನಾ ಆಧಾರ ಪರಿಕರವಾದರೂ ಕಾವಿ ಭಿತ್ತಿ ಚಿತ್ರರಚನೆಯಲ್ಲಿ ಇದನ್ನು ಗೋಡೆಗೆ ಲೇಪಿಸಲಾಗುವುದರಿಂದ, ಲೇಪಿಸುವ ಪರಿಕರದಲ್ಲಿ ಹೆಸರಿಸಲಾಗಿದೆ. ಚೀನಾ ದೇಶದ 'ತ್ಸಾಯ್ ಲುಪ್' ಎಂಬುವವನು ಕ್ರಿ. ಶ. ೧೦೨ ರಲ್ಲಿ ಕಾಗದವನ್ನು ಕಂಡುಹಿಡಿದನು ಎನ್ನಲಾಗಿದ್ದು, ಭಾರತದಲ್ಲಿ ಅತಿ ಹಳೆಯ ಕಾಗದ ಕ್ರಿ. ಶ. ೧೨೨೦ ರ ಸುಮಾರಿನಲ್ಲಿ ಕಂಡುಬಂದಿದೆ ಎಂಬ ಅಭಿಪ್ರಾಯವಿದೆ. ಮಹಮ್ಮದೀಯರ ಮೂಲಕ ಭಾರತಕ್ಕೆ ಬಂದ ಕಾಗದ ಕ್ರಿ. ಶ. ೧೪ ನೇ ಶತಮಾನದಲ್ಲಿ ಕರ್ನಾಟಕವನ್ನು ಪ್ರವೇಶಿಸಿತು [೨೩] ಎನ್ನುವ ವಿವರಗಳು ತಿಳಿದುಬರುತ್ತವೆ. ಮೊಗಲರ ಆಡಳಿತಾವಧಿಯಲ್ಲಿ ಕಾಗದದ ಮೇಲೆ ಚಿತ್ರರಚನೆ ಹೆಚ್ಚಿನ ಪ್ರೋತ್ಸಾಹ ಪಡೆದುಕೊಂಡಿತ್ತು. ರಾಜಸ್ಥಾನಿ, ಮೊಗಲ್, ಡೆಕ್ಕನ್, ಮೈಸೂರು, ತಂಜಾವೂರು ಶೈಲಿಗಳಂತಹ ಕಿರುರೂಪ ಚಿತ್ರಗಳು ಕಾಗದದ ಮೇಲೆ ರಚನೆಯಾಗಿವೆ. ಕಾಗದದ ಬಳಕೆ ಹೆಚ್ಚಾದಂತೆ ಭಿತ್ತಿ ಚಿತ್ರರಚನೆ ಇಳಿಮುಖವಾಯಿತೆಂದು ಹೇಳಬಹುದು. ಬಿಡಿಚಿತ್ರ ರಚನೆಮಾಡುವ ಕಾಗದವು ಭಿತ್ತಿಚಿತ್ರರಚನೆಯಲ್ಲಿ ಪರಿಕರವಾಗಿ ಬಳಸಲ್ಪಡುವುದು ಕಂಡುಬರುತ್ತದೆ. ಕರಾವಳಿ ಕಾವಿ ಭಿತ್ತಿ ಚಿತ್ರರಚನೆಯಲ್ಲಿ ಕಾಗದವೂ ಒಂದು ಪರಿಕರವಾಗಿದ್ದು ಇಲ್ಲಿ ಚಿತ್ರ ರಚನೆ ಮಾಡಬೇಕಾದಾಗ ಮೊದಲು ಕಾಗದದ ಮೇಲೆ ಸಂಪೂರ್ಣ ರೇಖಾಚಿತ್ರ ಬರೆದುಕೊಂಡು, ಹಸಿಯಾಗಿರುವ ಭಿತ್ತಿಗೆ ಆ ಕಾಗದವನ್ನೂ ಅಂಟಿಸುತ್ತಾರೆ. ನಂತರ ಚೂಪಾದ ಕಂಟದಿಂದ

---

೨೧. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೨೮, ೨೪

೨೨. V. V. Sharma : Sudhalepavidha, Page - 53, 59

೨೩. ಕರೀಗೌಡ ಬೀಚನಹಳ್ಳಿ (ಸಂ.) : ಕರಕುಶಲ ಕಲೆಗಳು (ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ, ೨), ಪುಟ - ೨೬೬

ಕಾಗದದ ಮೇಲೆಯೇ ಚಿತ್ರದ ರೇಖೆಗುಂಟ ಗೊರೆಯಲಾಗುತ್ತದೆ. ಚಿತ್ರ ರಚನೆಯು ಮುಗಿದ ನಂತರ ಭಿತ್ತಿಯು ಒಣಗಿದ ಎಂದು ಖಚಿತಪಡಿಸಿಕೊಂಡು ನೀರು ಚಿಮುಕಿಸಿ ಅಂಟಿಕೊಂಡ ಕಾಗದವನ್ನು ಕಿತ್ತು ತೆಗೆಯುತ್ತಾರೆ.

**೪. ಭಿತ್ತಿ ಚಿತ್ರರಚನಾ ಪರಿಕರ :** ಭಿತ್ತಿ ತಯಾರಿಸಿದ ನಂತರ ಚಿತ್ರರಚನೆ ಪ್ರಾರಂಭ ಮಾಡಬೇಕಾದಾಗ ವರ್ತಿಕಾ, (ಸೀಸದಕಡ್ಡಿ). ಬಣ್ಣ. ಕುಂಚಗಳಂತಹ ಅನೇಕ ವಸ್ತುಗಳು ಬೇಕಾಗುತ್ತಿದ್ದು. ಚಿತ್ರರಚನೆಯಲ್ಲಿ ಬಳಸುವ ಪರಿಕರಗಳನ್ನು ಇಲ್ಲಿ ಭಿತ್ತಿ ಚಿತ್ರರಚನಾ ಪರಿಕರಗಳೆಂದು ವಿಭಾಗಿಸಿಕೊಂಡು ಚರ್ಚಿಸಲಾಗಿದೆ. ಭಿತ್ತಿ ಚಿತ್ರರಚನಾ ಪರಿಕರದಲ್ಲಿ

I. ವರ್ತಿಕಾ (ಸೀಸದ ಕಡ್ಡಿ)
II. ಬಣ್ಣ
III. ಅಂಟುದ್ರಾವಕ
IV. ಬಣ್ಣ ಮಿಶ್ರಗೊಳಿಸುವ ಪಾತ್ರೆ
V. ಕುಂಚ
VI. ಕಂಟ

ಎಂಬುದಾಗಿ ಆರು ಬಗೆಗಳಲ್ಲಿ ವಿಂಗಡಿಸಿಕೊಂಡಿದ್ದು. ಇವುಗಳ ಕುರಿತು ಒಂದೊಂದಾಗಿ ಈ ಕೆಳಗಿನಂತೆ ವಿವರಿಸಬಹುದು.

**I. ವರ್ತಿಕಾ (ಸೀಸದ ಕಡ್ಡಿ, ಕ್ರೇಯಾನ್ ಅಥವಾ ಪೆನ್ಸಿಲ್) :** ಪ್ರಾಚೀನ ಭಿತ್ತಿ ಚಿತ್ರಕಾರರು ತಮ್ಮ ಚಿತ್ರರಚನೆಗೆ ಬೇಕಾಗುವ ಸೀಸದ ಕಡ್ಡಿಗಳನ್ನು ತಾವೇ ತಯಾರಿಸಿಕೊಳ್ಳುತ್ತಿದ್ದರು. ಈ ಸೀಸದ ಕಡ್ಡಿ ತಯಾರಿಸುವ ಪ್ರಕ್ರಿಯೆಯೂ ಚಿತ್ರ ರಚನೆಯ ಒಂದು ಭಾಗವೇ ಆಗಿತ್ತು. ಪ್ರಾಗೈತಿಹಾಸಿಕ ಕಾಲದ ಬಂಡೆ ಚಿತ್ರಕಾರರು ' ವರ್ತಿಕಾ ' (ಸೀಸದ ಕಡ್ಡಿಗಳ) ಹಾಗೆ ಬಣ್ಣದ ಕಲ್ಲುಗಳು. ಮಣ್ಣಿನ ಗಟ್ಟಿಗಳನ್ನೇ ನೇರವಾಗಿ ಉಪಯೋಗಿಸಿದಂತೆಯೇ ಕಟ್ಟಿಗೆ ಸುಟ್ಟ ಇದ್ದಿಲಿನಿಂದಲೂ ರೇಖಾಚಿತ್ರ ಬರೆದಿರುವ [೭೪] ವಿವರಗಳು ದೊರೆಯುತ್ತವೆ. ನಂತರದ ಕಾಲದ ಭಿತ್ತಿಚಿತ್ರ ಕಲಾವಿದರು ಮತ್ತು ಮಧ್ಯಯುಗೀನ ಚಿತ್ರಕಾರರು ತಮ್ಮ ಅವಶ್ಯಕತೆಗೆ ಬೇಕಾದಂತೆ ತಾವೇ ' ವರ್ತಿಕಾ ' ತಯಾರಿಸಿಕೊಳ್ಳುತ್ತಿದ್ದರು. ಭಿತ್ತಿಚಿತ್ರರಚನೆಯ ಪ್ರಾರಂಭಿಕ ಆಕೃತಿಗಳನ್ನು ಇಲ್ಲವೇ ವರ್ಣಕ್ಕೆ ತೊಡಗುವ ಮೊದಲಿನ ರೇಖಾಚಿತ್ರಗಳನ್ನು ಈ ಸೀಸಕಡ್ಡಿಯಿಂದಲೇ ರಚಿಸುತ್ತಿದ್ದರು. [೭೫] ವಿಷ್ಣುಧರ್ಮೋತ್ತರ [೭೬] ಸಮರಾಂಗಣ ಸೂತ್ರಧಾರ, [೭೭] ಮತ್ತು ಮಾನಸೋಲ್ಲಾಸ [೭೮] ಗ್ರಂಥಗಳು ' ವರ್ತಿಕಾ ' ಬಗೆಗೆ ವಿವರವನ್ನು ಕೊಡುತ್ತವೆ. ಶಿಲ್ಪರತ್ನವು [೭೯] ' ಕಿಟ್ಟ ಲೇಖನಿ ' ಎಂದು ಕರೆದಿದೆ. ವಿಷ್ಣುಧರ್ಮೋತ್ತರವು [೮೦] ' ವರ್ತಿಕಾ ' ತಯಾರಿಕೆಯ ಕುರಿತು " ಬಿಳಿ ಖಡುವಿನ ಪುಡಿಯನ್ನು ಮತ್ತು ಕಪ್ಪು ಪುಡಿಯನ್ನು ಮಿಶ್ರಣ ಮಾಡಿ ಗಟ್ಟಿಯಾದ ಕಣಕದ ಹಾಗೆ ನಾದಿಕೊಂಡು ಅದರಿಂದ ಸೀಸದಕಡ್ಡಿಗಳನ್ನು ತಯಾರಿಸಲು ಹೇಳುತ್ತದೆ. " ಆದರೆ ವಿವರವಾದ ಮಾಹಿತಿಯನ್ನು ಈ ವಿಧಾನದಲ್ಲಿ ಅದು ಹೇಳಿಲ್ಲ.

---

೭೪. Jayanth Chakravarthi : Techniques in Indian Mural Painting, Page - ೬೬
೭೫. Jayanth Chakravarthi : Techniques in Indian Mural Painting, Page - ೬೭
೭೬. ಸ್ಟೆಲ್ಲಾ ಕ್ರಾಮ್ರಿಷ್ (ಸಂ.) : ವಿಷ್ಣುಧರ್ಮೋತ್ತರ. ಭಾಗ III. ಅಧ್ಯಾಯ ೪೦, ಶ್ಲೋಕ ೧೩
೭೭. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ. ಅಧ್ಯಾಯ ೭೩, ಶ್ಲೋಕ ೧೨
೭೮. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ. ಭಾಗ II. ಅಧ್ಯಾಯ I. ಶ್ಲೋಕ ೧೪೮
೭೯. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ. ಭಾಗ I. ಅಧ್ಯಾಯ ೪೬. ಶ್ಲೋಕ ೫೩
೮೦. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ. ಭಾಗ III. ಅಧ್ಯಾಯ ೪೬. ಶ್ಲೋಕ ೧೩ - ೧೪

ಸಮರಾಂಗಣ ಸೂತ್ರಧಾರವು[೮೧] 'ವರ್ತಿಕಾ' ತಯಾರಿಕೆಯ ಬಗೆಗೆ ಮಾಹಿತಿ ನೀಡಿದೆ. ಚಟುವಟಿಕೆಯುಳ್ಳ ಭೂಮಿಯ ಮಣ್ಣು. ಇಲ್ಲವೇ ಕಮಲದ ಹೂವಿನ ಕೊಳದ ದಂಡೆಯ ಮಣ್ಣು, ನದಿ ದಂಡೆಯ ಮಣ್ಣು, ಬಾವಿ ದಂಡೆಯ ಬಿಳಿಯ ಮಣ್ಣು. ಅರಣ್ಯ ಪ್ರದೇಶದ ಒಳಗಿನ ಮಣ್ಣು. ಉಪ್ಪಿನಂಶ ಹೊಂದಿದ ಭೂಮಿಯ ಮಣ್ಣು, ದೊಡ್ಡ ಮರದ ಬೇರಿನ ಕೆಳಗಿರುವ ಮಣ್ಣು ಇವುಗಳಲ್ಲಿ ಯಾವುದಾದರೂ ಒಂದು ಮಣ್ಣನ್ನು ಸಂಗ್ರಹಿಸಿ ನಯವಾಗಿ ಮಾಡಿಕೊಳ್ಳಬೇಕು. ಈ ಮಣ್ಣನ್ನು ನಾದಿ ಕಣಕದ ಹಾಗೆ ಮಾಡಿಕೊಳ್ಳಬೇಕು. ಹೀಗೆ ನಾದಲು ಈ ಮಣ್ಣಿಗೆ ಕುದಿಸಿದ ಅಕ್ಕಿಗಂಜಿಯನ್ನು (ಸಸ್ಯಜನ್ಯ ಅಂಟು) ಬೆರೆಸಬೇಕು. ಮಣ್ಣಿಗೆ ಅಕ್ಕಿಗಂಜಿಯನ್ನು ಬೆರೆಸಲು ಕೂಡಾ ಪ್ರಮಾಣವನ್ನು ಸಮರಾಂಗಣ ಸೂತ್ರಧಾರ ಹೇಳಿದೆ. ಅದು ಕಾಲಮಾನಕ್ಕೆ ತಕ್ಕಂತೆ ಬದಲಾಗುತ್ತಿರಬೇಕೆಂದೂ ತಿಳಿಸುತ್ತದೆ. ಬೇಸಿಗೆಯಲ್ಲಿ ೧/೨ ಭಾಗ. ಚಳಿಗಾಲದಲ್ಲಿ ೧/೫ ಭಾಗ. ಮಳೆಗಾಲದಲ್ಲಿ ೧/೪ ಭಾಗ ಮತ್ತು ಶರತ್ಕಾಲದಲ್ಲಿ ೧/೬ ಭಾಗ ಹೀಗೆ ಕಾಲದಿಂದ ಕಾಲಕ್ಕೆ ಬೇರೆ ಬೇರೆ ಪ್ರಮಾಣದಲ್ಲಿ ಅಕ್ಕಿಗಂಜಿಯನ್ನು ಬೆರೆಸಬೇಕಾಗುವುದು. ಈ ರೀತಿ ಪ್ರಮಾಣದಿಂದ ಅಕ್ಕಿಗಂಜಿ ಹಾಕಿಕೊಂಡು ಮಣ್ಣನ್ನು ನಾದಿ ಕಣಕದ ಹಾಗೆ ಮಾಡಿಕೊಂಡು ಅದರಿಂದ ದುಂಡಾದ ಆಕೃತಿಗಳನ್ನು ಕಡ್ಡಿಯಂತೆ (Stick) ಮಾಡಿಕೊಂಡು ಒಣಗಿಸಿ ಉಪಯೋಗಿಸಬೇಕು. ಅಲ್ಲದೇ ಈ ಗ್ರಂಥವು ಸೀಸದ ಕಡ್ಡಿಯನ್ನು ಉಪಯೋಗಿಸಲು ತೊಡಗಿದಾಗ ಅದರ ತುದಿಯನ್ನು ಅಕ್ಕಿಯ ಹಾಗೆ ಇಲ್ಲವೇ ಬಾರ್ಲಿಯ ಕಾಳಿನ ಹಾಗೆ ಮೊನಚಾಗಿ ಮಾಡಿರಬೇಕೆಂದು ತಿಳಿಸುತ್ತದೆ.

ಮಾನಸೋಲ್ಲಾಸವು[೮೨] ಸೀಸದ ಕಡ್ಡಿ ತಯಾರಿಕೆಯ ಬಗ್ಗೆ ವಿವರಣೆ ಒದಗಿಸಿದೆ. " ದೀಪದ ಕಪ್ಪು ಮತ್ತು ಕುದಿಸಿದ ಅಕ್ಕಿಗಂಜಿಯನ್ನು ಒಂದು ಪಾತ್ರೆಯಲ್ಲಿ ಕಲೆಸಿಕೊಂಡು ಈ ಮಿಶ್ರಣದಿಂದ ದೀಪದ ಬತ್ತಿಯ ಆಕಾರಗಳನ್ನು ಮಾಡಿಕೊಳ್ಳಬೇಕು. ಈ ಕಪ್ಪು ಬತ್ತಿಗಳನ್ನೇ ವರ್ತಿಕವೆಂದು ಹೇಳಿದೆ. ಮಾನಸೋಲ್ಲಾಸ ಮತ್ತು ಸಮರಾಂಗಣ ಸೂತ್ರಧಾರಗಳಲ್ಲಿ ಹೇಳಲಾದ ಸೀಸದ ಕಡ್ಡಿ ತಯಾರಿಕೆಯಲ್ಲಿ ಸಮಾನವಾದದ್ದು ಅಕ್ಕಿಗಂಜಿಯಾಗಿದೆ ಎಂಬುದು ಗಮನಾರ್ಹ ಅಂಶವಾಗಿದೆ.

ಶಿಲ್ಪರತ್ನವು[೮೩] ಸೀಸದ ಕಡ್ಡಿಯ ತಯಾರಿಕೆಯ ಕುರಿತು " ಹಳೆಯ ಇಟ್ಟಿಗೆಯ ಪುಡಿ ಮತ್ತು ಒಣಗಿದ ಆಕಳ ಸಗಣಿಯನ್ನು ಒಂದು ಚಿಕ್ಕ ಒಣಕೆಯ ಸಹಾಯದಿಂದ ಕುಟ್ಟಿ ಪುಡಿಮಾಡಬೇಕು. ನಂತರ ಇದಕ್ಕೆ ಸಮಪ್ರಮಾಣದ ತಣ್ಣೀರು ಮತ್ತು ತುಳಸೀ ಎಲೆಯ ರಸವನ್ನು ಬೆರೆಸಬೇಕು. ನಂತರ ಈ ಮಿಶ್ರಣವನ್ನು ಚನ್ನಾಗಿ ಗಟ್ಟಿಯಾಗಿ ನಾದಿಕೊಂಡು ಕಣಕದ ಹಾಗೆ ಮಾಡಿಕೊಳ್ಳಬೇಕು. ಕಣಕ ಒಣಗುತ್ತ ಒಂದು ಸ್ಥಿತಿ ತಲುಪಿದಾಗ ಸೀಸದ ಕಡ್ಡಿಗಳನ್ನು ದುಂಡಗಿನ ಬತ್ತಿಗಳ ಆಕಾರದಲ್ಲಿ ಮಾಡಿಕೊಳ್ಳಬೇಕು. ಇವು ಎರಡೂ ಮೂರು ಇಲ್ಲವೇ ನಾಲ್ಕು ಅಂಗುಲ ಉದ್ದವಿರಬೇಕು " ಎಂದು ತಿಳಿಸುತ್ತದೆ. ಸುಧಾಲೇಪವಿಧ[೮೪] ಗ್ರಂಥದಲ್ಲಿಯೂ ಇದೇ ವಿಧಾನದಿಂದ ಸೀಸದ ಕಡ್ಡಿ ತಯಾರಿಸಲು ಹೇಳಿದೆ. ಚಿತ್ರಣಕ್ಕಾಗಿ ಮೊದಲು ಬಳಸುವ ಸೀಸದ ಕಡ್ಡಿಯನ್ನು 'ತಿಂಡುಕ ವರ್ತಿ', 'ಕಿಟ್ಟವರ್ತಿ' ಎಂದು ಹೇಳಲಾಗಿದ್ದು ಇವುಗಳನ್ನು ಎಚ್ಚರಿಕೆಯಿಂದ ರೆಂಬೆಗಳನ್ನು (Twig) ಸುಟ್ಟು ತಯಾರಿಸಬೇಕು. ದುಂಡನಾದ ಸಿಲಿಂಡರಾಕಾರದ ದಪ್ಪ

---

೮೧. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ. ಅಧ್ಯಾಯ ೭೨, ಶ್ಲೋಕ ೧ - ೯

೮೨. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ. ಭಾಗ II, ಅಧ್ಯಾಯ I, ಶ್ಲೋಕ ೧೪೪

೮೩. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೩೫ - ೩೭

೮೪. V. V. Sharma : Sudhalepavidha, Page - 55, 58

ಕಪ್ಪುಕಡ್ಡಿಯನ್ನು ವರ್ಣಗಟ್ಟಿಗಳ ತರಹ ಅವುಗಳ ಮೈಯನ್ನು ಬಳಸಬೇಕೆಂದೂ [೮೫] ಪ್ರಾಚೀನ ಸೀಸದ ಕಡ್ಡಿಗಳ ಕುರಿತು ವಿವರಗಳು ತಿಳಿದುಬರುತ್ತವೆ. ' ಕಿಟ್ಟ ' ಇದು ದೀಪದ ಕಾಡಿಗೆಯಿಂದ ದುಂಡಾಗಿ ಇಲ್ಲವೇ ನಾಲ್ಕು, ಆರು, ಎಂಟು ಮೈಗಳನ್ನು ಹೊಂದಿದ ಕಡ್ಡಿಗಳಾಗಿ ಮಾಡಲಾಗಿರುತ್ತದೆ. ' ತಿಂಡು ' ಇದು ಬಿದಿರಿನ ಕಡ್ಡಿಯ ಎರಡೂ ಬದಿಗೆ ತಾಮ್ರದಿಂದ ಮಾಡಲಾದ ಶಂಖುವಿನ ಆಕಾರದ ಮೊನೆಗಳನ್ನು ಸಿಕ್ಕಿಸಿ ಮಾಡಲಾದ ಸಾಧನವಾಗಿದ್ದು ಇದರಿಂದ ರೇಖೆ ಎಳೆದಾಗ ಭಿತ್ತಿಯ ಮೇಲೆ ಬಣ್ಣರಹಿತ ರೇಖೆ ಮೂಡುತ್ತದೆ. [೮೬] ಮಾನಸೋಲ್ಲಾಸ [೮೭] ಇದ್ದಿಲು ಪುಡಿ ಮತ್ತು ಕಾಳಿನ ಹಿಟ್ಟು ಬೆರೆಸಿ ಅದಕ್ಕೆ ಮೇಣ ಸೇರಿಸಿ ಕಡ್ಡಿಗಳನ್ನಾಗಿ ಮಾಡಿಕೊಳ್ಳುವುದು ಆ ಕಡ್ಡಿಗಳನ್ನೇ ' ವರ್ತಿಕಾ ' ಎಂದು ಕರೆದು ಅವುಗಳನ್ನು ಚಿತ್ರರಚನೆಯಲ್ಲಿ ಉಪಯೋಗಿಸಲು ತಿಳಿಸುತ್ತದೆ. ಹೀಗೆ ಅನೇಕ ಪ್ರಾಚೀನ ಗ್ರಂಥಗಳು 'ವರ್ತಿಕಾ' ದ ಬಗೆಗ ಅಂದರೆ ಇಂದು ನಾವು ಬಳಸುವ ಸೀಸದ ಕಡ್ಡಿಯ ಬಗೆಗೆ ಮಾಹಿತಿ ಒದಗಿಸುತ್ತವೆ.

**II. ಬಣ್ಣ :** ಭಿತ್ತಿ ಚಿತ್ರಕಲೆಗೆ ಬಳಸುವ ಬಣ್ಣಗಳ ಕುರಿತು ನಮಗೆ ಸಿಗುವ ಲಭ್ಯ ಆಕರಗಳಲ್ಲಿ ಮತ್ತೆ ಶಾಸ್ತ್ರಗ್ರಂಥಗಳಿಗೆ ಮೊರೆ ಹೋಗಬೇಕಾಗಿದೆ. ಅವುಗಳು ಕೊಡುವ ವಿವರಗಳು ಗಮನಾರ್ಹವಾಗಿವೆ. ಬ್ರಹ್ಮನ ಹೊಕ್ಕಳ ಕಮಲದ ದಂಟಿನಿಂದ ಎಳೆಗಳನ್ನು ಪಡೆದು ದೇವಲ ಮಹರ್ಷಿ ಬರುತ್ತಿದ್ದಾಗ, ಎದುರಾದ ಐವರು ರಾಕ್ಷಸರನ್ನು ಕೊಂದನಂತೆ. ಆಗ ಅವರ ಮೈಯಿಂದ ಹಳದಿ. ಕೆಂಪು. ಬಿಳಿ. ಹಸಿರು ಮತ್ತು ಕಪ್ಪು ಬಣ್ಣದ ರಕ್ತ ಬಂದಿತೆಂದೂ, ಅದರಲ್ಲಿ ಬ್ರಹ್ಮ ನೀಡಿದ ಎಳೆಗಳನ್ನು ದೇವಲ ಅದ್ದಿ ಮೊದಲ ಬಾರಿಗೆ ವರ್ಣಯುಕ್ತ ನೂಲನ್ನು ತಯಾರಿಸಿದನೆಂದು [೮೮] ಬಣ್ಣದ ಮೂಲದ ಬಗ್ಗೆ ದೇವಾಂಗ ಜನರಲ್ಲಿ ಪೌರಾಣಿಕ ಕಥೆಯೊಂದು ಪ್ರಚಲಿತದಲ್ಲಿದೆ. ಜಲದಿಂದ ಬಿಳುಪು, ಅಗ್ನಿಯಿಂದ ಕೆಂಪು, ಭೂಮಿಯಿಂದ ಹಳದಿ. ವಾಯುವಿನಿಂದ ಕಪ್ಪು ವರ್ಣಗಳು ಉತ್ಪನ್ನವಾಗಿವೆ. ಬಿಳುಪಿಗೆ ವಿಷ್ಣು, ಕೆಂಪಿಗೆ ಮಹೇಶ್ವರ, ಹಳದಿಗೆ ಗೌರಿದೇವಿ. ಕಪ್ಪುವರ್ಣಕ್ಕೆ ರುದ್ರ ಅಧಿದೇವತೆಯಾಗಿದ್ದಾರೆ ಎಂದು ಕಾಶ್ಯಪ ಶಿಲ್ಪಶಾಸ್ತ್ರ [೮೯] ಹೇಳುತ್ತದೆ. ಇವು ಬಣ್ಣದ ಪೌರಾಣಿಕ ವಿವರಗಳಾದರೆ. ವೈಜ್ಞಾನಿಕ ವರ್ಣಗಳ ಮಹತ್ವವನ್ನು ನೋಡುವುದಾದರೆ, ಸೂರ್ಯನಿಂದ ಹೊರಹೊಮ್ಮುವ ಬೆಳಕು ಒಂದು ಶಕ್ತಿ. ಸೂರ್ಯನ ಬೆಳಕಿನಲ್ಲಿ ನೇರಳೆ, ನೀಲಿ, ಹಸಿರು, ಉದಾ ಹಳದಿ, ಕಿತ್ತಳೆ, ಕೆಂಪು ವರ್ಣಗಳು ಅಡಕವಾಗಿವೆ.

ಬಣ್ಣಗಳು ಮನುಷ್ಯನ ದೈನಂದಿನ ಬದುಕಿನ ಚಟುವಟಿಕೆಗಳಿಗೆ ಹೊಂದಿಕೊಂಡಿರುತ್ತವೆ. ಮಾನವನ ವಿವಿಧ ಅಂಗಾಂಗಗಳ ಮೇಲೆ ವರ್ಣಗಳು ಪ್ರಭಾವ ಬೀರುತ್ತವೆ. ಕೆಂಪು ಬಣ್ಣವು ದೇಹದ ಆ್ಯಡ್ರಿನಲ್ ಗ್ರಂಥಿಗೆ ಸಂಬಂಧಿಸಿದ್ದು, ರಕ್ತದ ಮೇಲೆ ತನ್ನದೇ ಆದ ಪ್ರಭಾವ ಬೀರಿದೆ. ಮನುಷ್ಯನ ದೃಢತೆ, ಪ್ರೀತಿ, ಪ್ರೇಮ ಹಾಗೂ ಸೃಜನಶೀಲತೆಗಳಿಗೆ ಸಂಕೇತವಾಗಿದೆ. ಕಿತ್ತಳೆ ವರ್ಣವು ದೇಹದ ಗುಲ್ಮದ ಮೇಲೆ ಪ್ರಭಾವ ಬೀರಿ ರಕ್ತ ಪರಿಚಲನೆಗೆ ಸಹಾಯ ಮಾಡುತ್ತದೆ. ಹಳದಿ ವರ್ಣವು ದೇಹದ ಪಿತ್ತಜನಕಾಂಗ. ನಾಭಿ. ಮೆದುಳು, ಹಾಗೂ ನರಗಳ ಮೇಲೆ ಪ್ರಭಾವ ಬೀರಿ ಮಾನವನ ಜ್ಞಾನ. ಅರಿವು. ಉಲ್ಲಾಸಗಳನ್ನು ವರ್ಧಿಸಿ ಸೂಕ್ತ ತೀರ್ಮಾನ ತೆಗೆದುಕೊಳ್ಳಲು ಸಹಾಯ ಮಾಡುತ್ತದೆ. ಹಸಿರು ವರ್ಣವು ದೇಹದ ಥೈಮಸ್ ಗ್ರಂಥಿ ಮತ್ತು ಹೃದಯದ ಚಲನೆಯನ್ನು ಹತೋಟಿಯಲ್ಲಿಡಲು ಸಹಾಯ ಮಾಡುತ್ತದೆ.

---

೮೫. C. Sivaramamurti : Chitrasutra of the Vishnudharmottara, Page - 45

೮೬. ಡಾ|| ಅ. ಲ. ನರಸಿಂಹನ್ : ಕರ್ನಾಟಕದ ಭಿತ್ತಿಚಿತ್ರ ಪರಂಪರೆ, ಪುಟ - ೧೪೬

೮೭. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ. ಭಾಗ II. ಅಧ್ಯಾಯ I, ಶ್ಲೋಕ ೧೪೪

೮೮. ಡಾ|| ಅ. ಲ. ನರಸಿಂಹನ್ : ಕರ್ನಾಟಕದ ಭಿತ್ತಿಚಿತ್ರ ಪರಂಪರೆ. ಪುಟ - ೧೩೮

೮೯. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ. ಅಧ್ಯಾಯ ೮೮. ಪುಟ - ೬೫೭

ನೀಲಿ ವರ್ಣವು ದೇಹದ ಕುತ್ತಿಗೆ. ಥೈರಾಯ್ಡ್ ಗ್ರಂಥಿಗಳ ಮೇಲೆ ಪ್ರಭಾವ ಬೀರಿ ದೇಹದ ಉಷ್ಣತೆಯನ್ನು ಸಮತೋಲನದಲ್ಲಿಡಲು ಸಹಕರಿಸುತ್ತದೆ. ನೇರಳೆ ವರ್ಣವು ಶಿರದಲ್ಲಿರುವ ಬ್ರಹ್ಮರಂಧ್ರಕ್ಕೆ ಸಂಬಂಧಿಸಿದ್ದು ಮನಸ್ಸಿನ ಮೇಲೆ ಹತೋಟಿ ಹೊಂದುತ್ತದೆ.

ಮಾನವನ ಜೀವನದ ಜೊತೆ ಬಣ್ಣಗಳು ಹೀಗೆ ಅವಿನಾಭಾವ ಸಂಬಂಧ ಹೊಂದಿದ್ದು ತಿಳಿದುಬರುತ್ತದೆ. ಭಿತ್ತಿಚಿತ್ರಕಲೆಯಲ್ಲಿ ವೈವಿಧ್ಯಮಯವಾದ ಬಣ್ಣಗಳು ಬಳಕೆಗೊಂಡಿದ್ದು ಅವುಗಳನ್ನು ಯಾವ ಮೂಲಗಳಿಂದ ತಯಾರಿಸಿಕೊಳ್ಳಲಾಯಿತು ಎಂಬ ವಿವರಗಳು ಮಹತ್ವಪೂರ್ಣವಾದವುಗಳಾಗಿವೆ. ಭಿತ್ತಿಚಿತ್ರದಲ್ಲಿ ಬಳಕೆಗೊಂಡ ಬಣ್ಣಗಳನ್ನು ಸ್ಥೂಲವಾಗಿ ಐದು ವಿಧದಲ್ಲಿ ವಿಂಗಡಿಸಬಹುದು.

೧. ಖನಿಜಮೂಲ ಬಣ್ಣಗಳು
೨. ಪ್ರಾಣಿಮೂಲ ಬಣ್ಣಗಳು
೩. ಸಸ್ಯಮೂಲ ಬಣ್ಣಗಳು
೪. ಲೋಹಮೂಲ ಬಣ್ಣಗಳು
೫. ರಾಸಾಯನಿಕ ಬಣ್ಣಗಳು

**೧. ಖನಿಜಮೂಲ ಬಣ್ಣಗಳು :** ಭೂಮಿಯಿಂದ ದೊರೆಯುವ ಅಂದರೆ, ಕಲ್ಲು, ಮಣ್ಣುಗಳಿಂದ ಪಡೆಯುವ ಬಣ್ಣಗಳು ಖನಿಜಮೂಲದ ಬಣ್ಣಗಳಾಗಿವೆ. ವಿವಿಧ ರೀತಿಯ ಬಣ್ಣದ ಕಲ್ಲು, ಮಣ್ಣಿನ ಗಟ್ಟಿ, ಕಬ್ಬಿಣದ ಅದಿರುಗಳಂತಹ ಬೇರೆ ಬೇರೆ ಅದಿರುಗಳಿಂದ ಪ್ರಾಚೀನರು ಬಣ್ಣ ತಯಾರಿಸಿಕೊಂಡ ವಿವರಗಳು[೯೦] ತಿಳಿದುಬರುತ್ತವೆ. ಸುಣ್ಣವು ಭಿತ್ತಿಚಿತ್ರಗಳಲ್ಲಿ ಬಳಸುವ ಬಹುಮುಖ್ಯವಾದ ಖನಿಜಮೂಲ ಬಣ್ಣವಾಗಿದೆ. ಕೆಲವು ಬಣ್ಣಗಳು ಸುಣ್ಣ ಪ್ರತಿರೋಧಕ ಗುಣ ಹೊಂದಿದ್ದು ಭಿತ್ತಿಯ ಹಿನ್ನೆಲೆಗೆ ಲೇಪಿಸಿದ ಸುಣ್ಣದ ಮಿಶ್ರಣದಲ್ಲಿ ಬೆರೆಯದೇ ಮೂಲ ಛಾಯೆಯನ್ನು ಉಳಿಸಿಕೊಳ್ಳುತ್ತವೆ. ಅಲ್ಲದೇ ಕೆಲವು ಖನಿಜಮೂಲ ಬಣ್ಣಗಳನ್ನು ಪರಸ್ಪರ ಮಿಶ್ರಣ ಮಾಡಿ ಬಣ್ಣಗಳ ಗಡಸುತನ ಕಡಿಮೆ ಮಾಡಲು ಬರುತ್ತದೆ. ಕೆಂಪು ಖನಿಜಮೂಲ ಬಣ್ಣಕ್ಕೆ ಬಿಳಿ ಖನಿಜಮೂಲ ಬಣ್ಣ ಸೇರಿಸಿದಾಗ ಕೆಂಪುವರ್ಣ ತಿಳಿಯಾಗುತ್ತದೆ. ಹಾಗೇ ಯಾವುದೇ ಖನಿಜಮೂಲ ಬಣ್ಣದಲ್ಲಿ ಖನಿಜಮೂಲ ಕಪ್ಪುಬಣ್ಣ (ಬ್ಲಾಕ್‌ಸಲ್ಫೈಡ್) ಸೇರಿಸಿದಾಗ ಆ ಬಣ್ಣಗಳು ದಟ್ಟವಾಗುತ್ತವೆ. ಇಂತಹ ಕೆಲವು ಗುಣಗಳಿಂದ ಖನಿಜಮೂಲ ಬಣ್ಣಗಳು ಭಿತ್ತಿಚಿತ್ರಗಳಿಗೆ ಹೆಚ್ಚು ಸೂಕ್ತವಾಗಿದ್ದು ಭಿತ್ತಿ ಚಿತ್ರರಚನೆಯಲ್ಲಿ ಇವು ಹೆಚ್ಚಾಗಿ ಬಳಕೆಯಾಗಿವೆ.[೯೧] ಎನ್ನಲಾಗಿದೆ.

ಪ್ರಾಚೀನ ಕಾಲದ ಭಿತ್ತಿಚಿತ್ರಗಳಲ್ಲಿ ಬಳಸುತ್ತಿದ್ದ ಖನಿಜ ಮೂಲದ ಬಣ್ಣಗಳು ಆಕರ್ಸ್, ಸಿನ್ನಾಜ, ಮತ್ತು ಅಂಬರ್ಸ್ ಎಂಬ ಬಗೆಗಳಲ್ಲಿದ್ದಂತಹುಗಳಾಗಿವೆ. ಕಬ್ಬಿಣದ ಭಸ್ಮಗಳೊಡನೆ ಬೆಣಚುಕಲ್ಲಿನ ಖನಿಜಗಳನ್ನು ಕೂಡಿಸಿ 'ಆಕರ್ಸ್' ರೀತಿಯ ಬಣ್ಣಗಳನ್ನು ತಯಾರಿಸುತ್ತಿದ್ದರೆ, ಮ್ಯಾಂಗನೀಜ್ ಭಸ್ಮವನ್ನು ಬೆಣಚುಕಲ್ಲಿನ ಖನಿಜದೊಡನೆ ಸೇರಿಸಿ 'ಸಿನ್ನಾಜ್'. ಹಾಗೂ ಕಬ್ಬಿಣ ಮತ್ತು ಮ್ಯಾಂಗನೀಜ ಭಸ್ಮಗಳೆರಡನ್ನೂ ಕೂಡಿಸಿ 'ಅಂಬರ್ಸ್' ಬಣ್ಣಗಳನ್ನು ತಯಾರಿಸುತ್ತಿದ್ದರೆಂಬ[೯೨] ವಿವರಗಳು ಸಿಗುತ್ತವೆ.

---

೯೦. Jayanth Chakravarthi : Techniques in Indian Mural Painting, Page - ೮೩

೯೧. Jayanth Chakravarthi : Techniques in Indian Mural Painting, Page - ೩೮

೯೨. ಜಿ. ಎ. ಕಲ್ಲೂರ : ಬಣ್ಣಗಳು ಮತ್ತು ಬಣ್ಣ ಹಾಕುವ ಕಲೆ, ಪುಟ - ೧೧

**೨. ಪ್ರಾಣಿಮೂಲ ಬಣ್ಣಗಳು :** ಪ್ರಾಣಿಗಳ ಮೂಲದಿಂದ ನಿರ್ಮಾಣವಾದ ಬಣ್ಣಗಳು ಈ ಗುಂಪಿನವುಗಳಾಗಿವೆ. ಪ್ರಾಗೈತಿಹಾಸಿಕ ಚಿತ್ರಗಳಲ್ಲಿ ಇರುವ ವರ್ಣ ದ್ರವ್ಯವನ್ನು ಹಲವರು ಪರೀಕ್ಷೆಗೊಳಪಡಿಸಿದಾಗ ಅದರಲ್ಲಿ ಪ್ರಾಣಿಗಳ ರಕ್ತದ ಅಂಶವಿರುವುದು ಕಂಡುಬಂದಿದ್ದು. ವರ್ಣಗಳನ್ನು ಪ್ರಾಣಿಗಳ ರಕ್ತದಲ್ಲಿ ಮಿಶ್ರಣ ಮಾಡಿ ಲೇಪಿಸುತ್ತಿದ್ದರು [೯೩] ಎಂದು ನಂಬಲಾಗಿದೆ. ಈ ಆಧಾರದ ಮೇಲಿಂದ ಹೇಳಬಹುದಾದರೆ ಕೆಂಪು ವರ್ಣದ ಉಪಯೋಗದ ಸಂದರ್ಭದಲ್ಲಿ ಕೆಲವುಸಲ ನೇರವಾಗಿ ಪ್ರಾಣಿಗಳ ರಕ್ತವನ್ನೇ ಉಪಯೋಗಿಸಿರುವ ಸಾಧ್ಯತೆಯೂ ಇದೆ.

ಸುಮಾರು ೬೦೦೦ (ಆರುಸಾವಿರ) ವರ್ಷಗಳ ಪೂರ್ವದಲ್ಲಿಯೇ ಮೆಡಿಟರೇನಿಯನ್ ಸಮುದ್ರ ತೀರದ ಜನರು 'ಮುರೆಕ್ಸ್' ಎಂಬ ಪುಟ್ಟ ಮೃದ್ವಂಗಿ ಜಾತಿಯ ಚಿಪ್ಪು ಮೀನುಗಳನ್ನು ಹಿಡಿದು ಹಿಸುಕಿ ಒಂದು ಪಾತ್ರೆಯಲ್ಲಿ ಅವುಗಳ ರಸವನ್ನು ಶೇಖರಿಸುತ್ತಿದ್ದರು. ನಂತರ ಅದನ್ನು ಆರಲು ಬಿಟ್ಟು ಒಣಗಿ ಪುಡಿಯಾದ ನಂತರ ಶೇಖರಿಸಿಟ್ಟುಕೊಂಡು. ತಮಗೆ ಬೇಕಾದ ಯೋಗ್ಯ ಬಂಧಕ (ಅಂಟುದ್ರಾವಕ) ಗಳನ್ನು ಬೆರೆಸಿ [೯೪] ಉಪಯೋಗಿಸುತ್ತಿದ್ದರು. ಇದಕ್ಕೆ ಪರ್ಪಲ್ ವರ್ಣವೆಂದು ಕರೆಯಲಾಗಿದೆ. ದಕ್ಷಿಣ ಅಮೇರಿಕಾದ ಮೆಕ್ಸಿಕೋದಲ್ಲಿ ಲಭ್ಯವಿರುವ ' ಕ್ಯಾಕಸ್‌ಕಾಕ್ಟಿ ' ಎಂಬ ಕೀಟವನ್ನು ಒಣಗಿಸಿ ಕೇಸರಿ ಬಣ್ಣವನ್ನು ಪಡೆಯುತ್ತಿದ್ದರು. ಇದೇ ಕೀಟಗಳನ್ನು ಚನ್ನಾಗಿ ಒಣಗಿಸಿ ಅರೆದು ಪುಡಿಮಾಡಿ. ನೀರಿನಲ್ಲಿ ಕುದಿಸಿದಾಗ ' ಕೋಜಿನೀಲ್ ' ಎಂಬ ಹೆಸರಿನ ಕೇಸರಿ ಬಣ್ಣವನ್ನು ಪಡೆಯುತ್ತಿದ್ದರು. [೯೫]

ಹೀಗೆ ಪ್ರಾಣಿಜನ್ಯ ವರ್ಣಗಳನ್ನು ಪಡೆಯುತ್ತಿದ್ದ ಕೆಲವು ವಿವರಗಳು ದೊರೆಯುತ್ತಿವೆ. ಭಾರತದಲ್ಲಿ ಕರ್ನಾಟಕದಲ್ಲಿ ಇಂತಹ ಹೆಚ್ಚಿನ ವಿವರಗಳು ಲಭ್ಯವಾಗಿಲ್ಲ.

**೩. ಸಸ್ಯಮೂಲ ಬಣ್ಣಗಳು :** ಪ್ರಾಚೀನ ಮಾನವರು ಕೆಲವು ಗಿಡಗಳ ಹೂ. ಎಲೆ. ಹಣ್ಣು. ಬೀಜ. ಕಾಂಡ. ಚಿಗುರೆಲೆ ಮತ್ತು ಬೇರುಗಳಿಂದ ಬಣ್ಣ ತಯಾರಿಸಿಕೊಳ್ಳುತ್ತಿದ್ದರೆಂಬ [೯೬] ವಿವರಗಳು ದೊರೆಯುತ್ತವೆ. ಇಂಡಿಗೋ ಸಸ್ಯದಿಂದ ನೀಲಿ ಬಣ್ಣ. ಬರ್ಚ ಎಂಬ ಗಿಡದ ಎಲೆಗಳಿಂದ ಹಳದೀ ಬಣ್ಣ. ಮ್ಯಾಡರ್ ಎಂಬ ಹಬ್ಬುವ ಬಳ್ಳಿಯ ಬೇರುಗಳಿಂದ ಕೆಂಪು ಬಣ್ಣವನ್ನು ಬಹಳ ಪೂರ್ವದಲ್ಲಿಯೇ ಪಡೆಯುತ್ತಿದ್ದ ಬಗೆಗೆ [೯೭] ತಿಳಿದುಬರುತ್ತದೆ. ಸಸ್ಯ ಮೂಲಗಳಿಂದ ಪಡೆದ ಅನೇಕ ಬಣ್ಣಗಳನ್ನು ಭಿತ್ತಿ ಚಿತ್ರರಚನೆಯಲ್ಲಿ ಬಳಸುತ್ತಿದ್ದರಲ್ಲದೇ. ಖನಿಜ ಮೂಲದ ಬಣ್ಣಗಳಿಗೆ ಹೋಲಿಸಿದರೆ ಇವು ಬೇಗನೆ ಹೊಳಪನ್ನು ಕಳೆದುಕೊಳ್ಳುತ್ತವೆ. ಹಾಗಾಗಿ ಖನಿಜ ಮೂಲದ ಬಣ್ಣಗಳ ತುಲನೆಯಲ್ಲಿ ಇವು ಭಿತ್ತಿಚಿತ್ರಗಳಲ್ಲಿ ಕಡಿಮೆ ಪ್ರಮಾಣದಲ್ಲಿ ಬಳಕೆಯಾಗಿರಬಹುದು [೯೮] ಎಂಬ ಅಂಶಗಳು ತಿಳಿದುಬರುತ್ತವೆ.

**೪. ಲೋಹಮೂಲ ಬಣ್ಣಗಳು :** ಪ್ರಾಚೀನ ಭಿತ್ತಿ ಚಿತ್ರಕಲಾವಿದರು ಖನಿಜಮೂಲದ ವರ್ಣಗಳು. ಸಸ್ಯಸಂಬಂಧಿ ವರ್ಣಗಳು. ಪ್ರಾಣಿಜನ್ಯ ವರ್ಣಗಳು ಹೀಗೆ ಪ್ರಕೃತಿಯಲ್ಲಿ ತಮಗೆ ದೊರಕುತ್ತಿದ್ದ ಸ್ವಾಭಾವಿಕ ವರ್ಣಗಳ ಜೊತೆಗೇ ಅವಶ್ಯಕತೆ ಉಂಟಾದಾಗ ಲೋಹಗಳಿಂದಲೂ ವರ್ಣ ಪಡೆಯುತ್ತಿದ್ದರು. ಲೋಹವನ್ನು ತೆಳುವಾದ ಹಾಳೆಯಾಗಿ

---

೯೩. Yashodhar Mathpal : Prehistoric Rock paintings of Bhimbetka, page - 187
೯೪. ಜಿ. ಎ. ಕಲ್ಲೂರ : ಬಣ್ಣಗಳು ಮತ್ತು ಬಣ್ಣ ಹಾಕುವ ಕಲೆ. ಪುಟ - ೮
೯೫. ಜಿ. ಎ. ಕಲ್ಲೂರ : ಬಣ್ಣಗಳು ಮತ್ತು ಬಣ್ಣ ಹಾಕುವ ಕಲೆ. ಪುಟ - ೯
೯೬. Jayanth Chakravarthi : Techniques in Indian Mural Painting, Page - ೩೭
೯೭. ಜಿ. ಎ. ಕಲ್ಲೂರ : ಬಣ್ಣಗಳು ಮತ್ತು ಬಣ್ಣ ಹಾಕುವ ಕಲೆ. ಪುಟ - ೯
೯೮. Jayanth Chakravarthi : Techniques in Indian Mural Painting, Page - ೩೮

ಮಾಡಿಕೊಂಡು ಅವಶ್ಯವಿದ್ದಲ್ಲಿ ಕತ್ತರಿಸಿ ಅಂಟಿಸುತ್ತಿದ್ದರು. ಇಲ್ಲವೇ ಲೋಹವನ್ನು ಕರಗಿಸಿ ದ್ರವರೂಪವಾಗಿ ಮಾಡಿಕೊಂಡು ಚಿತ್ರಕ್ಕೆ ಲೇಪಿಸಲು ಉಪಯೋಗಿಸುತ್ತಿದ್ದರು[೯೯] ಎಂಬ ವಿವರಗಳು ತಿಳಿದುಬರುತ್ತವೆ. ಪ್ರಾಚೀನರು ವರ್ಣಚಿತ್ರಣಕ್ಕಾಗಿ ಬಂಗಾರ, ಬೆಳ್ಳಿ, ತಾಮ್ರ, ಅಬ್ರಕ, ಸೀಸಗಳಂತಹ ಲೋಹಗಳಿಂದ[೧೦೦] ಬಣ್ಣಗಳನ್ನು ಪಡೆಯುತ್ತಿದ್ದರೆಂದು ಹೇಳಲಾಗಿದೆ.

ವಿಷ್ಣುಧರ್ಮೋತ್ತರ,[೧೦೧] ಮಾನಸೋಲ್ಲಾಸ[೧೦೨] ಮತ್ತು ಶಿಲ್ಪರತ್ನ[೧೦೩] ಗ್ರಂಥಗಳಲ್ಲಿ ಬಂಗಾರದಿಂದ ವರ್ಣ ತಯಾರಿಸುವ ವಿಧಾನ ಹೇಳಿದ್ದು ಸಾಮಾನ್ಯವಾಗಿ ಒಂದೇ ತೆರನಾಗಿದೆ. ಬಂಗಾರವನ್ನು ಮೊದಲು ತೆಳುವಾದ ತಗಡುಗಳಾಗಿ ಮಾಡಿಕೊಳ್ಳಬೇಕು. ಅನಂತರ ಮರಳು ಮತ್ತು ನೀರಿನಿಂದ ಮಿಶ್ರಮಾಡಿ ನಯವಾದ ಗುಂಡಿನಿಂದ ಅರೆಯಬೇಕು. ಈ ಮಿಶ್ರಣ ಮೇಣದಂತಾದಾಗ, ಒಂದು ಗಾಜಿನ ಪಾತ್ರೆಯಲ್ಲಿ ಹಾಕಿ ಕಲಕಬೇಕು. ಇದರಿಂದ ಮರಳು ಮತ್ತು ಕೊಳೆ ತಳದಲ್ಲಿ ಉಳಿದು ಬಂಗಾರದ ಪುಡಿ ಮೇಲೆ ತೇಲುತ್ತದೆ. ಈ ಬಂಗಾರದ ಪುಡಿಯನ್ನು ಸಂಗ್ರಹಿಸಿಕೊಂಡು ವಜ್ರಲೇಪದೊಡನೆ ಬೆರೆಸಿ ಚಿತ್ರರಚನೆಗೆ ಉಪಯೋಗಿಸಬೇಕು ಎಂದು ಹೇಳುತ್ತವೆ. ಶಿವತತ್ವರತ್ನಾಕರವು[೧೦೪] ಶುದ್ಧ ಚಿನ್ನವನ್ನು ಕಲ್ಲಿನ ಮೇಲೆ ಚನ್ನಾಗಿ ಅರೆದು ಒಂದು ಕಂಚಿನ ಪಾತ್ರೆಯಲ್ಲಿ ಹಾಕಿ ಪದೇ ಪದೇ ಕರಗಿಸಬೇಕು. ನೀರಿನಲ್ಲಿ ಆ ಪುಡಿಯನ್ನು ಚನ್ನಾಗಿ ಕದಡಿ ಸ್ವಲ್ಪಹೊತ್ತು ಬಿಟ್ಟನಂತರ ಮೇಲೆ ತೇಲುವ ತೆಳುವಾದ ನೀರನ್ನು ಬಸಿದು ಚೆಲ್ಲಬೇಕು. ಹೀಗೆ ತಳದಲ್ಲಿ ಗಟ್ಟಿಯಾದ ಮಿಶ್ರಣ ಮಾತ್ರ ಉಳಿಯುವವರೆಗೂ ಮಾಡುತ್ತಿರಬೇಕು. ಆ ಮೃದುವಾದ ಚಿನ್ನದ ಮಿಶ್ರಣವನ್ನು ವಜ್ರಲೇಪದೊಡನೆ ಬೆರೆಸಿ ಕುಂಚದ ಸಹಾಯದಿಂದ ಚಿತ್ರಗಳಿಗೆ ಹಚ್ಚಬೇಕು ಎಂದು ತಿಳಿಸುತ್ತದೆ.

**೫. ರಾಸಾಯನಿಕ ಬಣ್ಣಗಳು :** ಕ್ರಿ. ಶ. ೧೯ ನೇ ಶತಮಾನದಿಂದ ಭಿತ್ತಿ ಚಿತ್ರರಚನೆಯಲ್ಲಿ ರಾಸಾಯನಿಕ ಬಣ್ಣಗಳ ಬಳಕೆ ಅಧಿಕಗೊಂಡಿತೆಂದು ಹೇಳಬಹುದು. ಪಾಶ್ಚಾತ್ಯರ ಸಂಪರ್ಕದಿಂದ ರಾಸಾಯನಿಕವಾಗಿ ತಯಾರಿಸಿದ ಜಲವರ್ಣ, ತೈಲವರ್ಣಗಳು ಭಾರತವನ್ನು ಪ್ರವೇಶಿಸಿದವು. ಉತ್ತರ ಕರ್ನಾಟಕದಲ್ಲಿ ಮಹಾಲಿಂಗಪುರದ ಮಠ, ರಾಯಚೂರಿನ ಖಾಜಿನ ಗೌಡರ ವಾಡೆ, ಸಂಕೇಶ್ವರದ ವರ್ತಕರೊಬ್ಬರ ಮನೆ, ಸವಣೂರಿನ ನವಾಬರ ವಾಡೆಯಲ್ಲಿನ ಭಿತ್ತಿ ಚಿತ್ರಗಳು ರಾಸಾಯನಿಕ ಬಣ್ಣಗಳಿಂದ ರಚನೆಯಾಗಿವೆ.

**೬) ಮೂಲ ಬಣ್ಣಗಳು :** ನಾವಿಂದು ಮೂಲ ಬಣ್ಣಗಳೆಂದು ನೀಲಿ, ಕೆಂಪು, ಹಳದಿ ಬಣ್ಣಗಳನ್ನು ಹೆಸರಿಸುತ್ತಿದ್ದು ಪ್ರಾಚೀನ ಭಾರತೀಯರು ಮೂಲ ಬಣ್ಣಗಳೆಂದು ಬಿಳಿ, ಕಪ್ಪು, ಕೆಂಪು, ಹಸಿರು, ಹಳದಿಗಳೆಂಬ ಪಂಚವರ್ಣಗಳನ್ನು ಹೆಸರಿಸಿದ್ದಾರೆ.

---

೯೯. C. Sivaramamurti : Chitrasutra of the Vishnudharmottara, Page - 61

೧೦೦. Jayanth Chakravarthi : Techniques in Indian Mural Painting, Page - ೫೮

೧೦೧. ಸ್ಟೆಲ್ಲಾ ಕ್ರಾಮ್ರಿಷ್ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೪೦, ಶ್ಲೋಕ ೨೪

೧೦೨. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ, ಭಾಗ II, ಅಧ್ಯಾಯ I, ಶ್ಲೋಕ ೧೭೧, ೧೭೭

೧೦೩. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೧೨೬, ೧೩೦

೧೦೪. ಮಲ್ಲೇಪುರಂ ಜಿ. ವೆಂಕಟೇಶ (ಸಂ.) : ಶಿವತತ್ವರತ್ನಾಕರ, ಪುಟ - ೩೫೮

**ಪಂಚವರ್ಣಗಳು :**

ಹರಿತ ಪೀತಾರುಣ ಶ್ವೇತ ಕೃಷ್ಣಕಳೆಂ
ಬುರುತರ ಪಂಚವರ್ಣಗಳಿಂ
ನೆರೆಜಾಣೆ ರಂಗವಲಿಯನಿಕ್ಕಿ [೧೦೫]..........

ವರ್ಣಲೇಪಂ ತತಃ ಕುರ್ಯಾಚ್ಛಿಲ್ಪಿ ಶಾಸ್ತ್ರವಿಚಕ್ಷಣೈಃ
ಶ್ವೇತಂ ಪೀತಂ ತಥಾ ರಕ್ತಂ ಹರಿತಂ ಕೃಷ್ಣ ಮೇವಚ ।

ಪಂಚವರ್ಣಂ ಪೃಥಿವ್ಯಾಧಿ ವರ್ಣನಾಮಧಿದೇವತಾ
ಉತ್ತಮ ಧಾವತಃ ಪ್ರೋಕ್ತಾಃ ಮಧ್ಯಮಾವೃಕ್ಷ ಸಂಬವಂ ॥ [೧೦೬]

ಎಂಬಲ್ಲಿ ಪಂಚವರ್ಣಗಳ ಪ್ರಸ್ತಾಪ ಬರುತ್ತದೆ.

ಕೆಲವು ಕಾವ್ಯಗಳಲ್ಲಿ ಬಿಳಿ. ಕಪ್ಪು. ಕೆಂಪು. ಹಸಿರು. ಹಳದಿ ವರ್ಣಗಳ ಬಗೆಗೆ ಪಂಚವರ್ಣ, ಪಂಚವಣ್ಣಿಗೆ ಎಂಬ ವಿವರಣೆಗಳಿರುವುದು [೧೦೭] ಕಂಡುಬರುತ್ತದೆ. ನಾಗಮಂಡಲ [೧೦೮] ಆಚರಣೆಯಲ್ಲಿ ಪಂಚವರ್ಣಗಳು ಬಳಕೆಯಾಗಿರುವಂತೆಯೇ. ಕೇರಳದ ' ಪಾಂಪನ್ ತುಳ್ಳಾಲ್ ' [೧೦೯] ಎಂಬ ಧಾರ್ಮಿಕ ಆಚರಣೆಯಲ್ಲಿ, ಮತ್ತು ಜೈನ ಆಗಮುಗಳಲ್ಲಿ [೧೧೦] ಬಿಳಿ. ಕಪ್ಪು. ಕೆಂಪು. ಹಳದಿ. ಹಸಿರುಗಳೆಂಬ ಪಂಚವರ್ಣಗಳ ಉಲ್ಲೇಖವಿದೆ. ಪಂಚತಂತ್ರದಲ್ಲಿ [೧೧೧] ಪಂಚವರ್ಣಗಳ ಪ್ರಸ್ತಾಪವಿರುವಂತೆಯೇ ಕೆಲವು ಜನಪದ ಆಚರಣೆ ಮತ್ತು ವಿಧಿ ಕ್ರಿಯೆಗಳಲ್ಲೂ [೧೧೨] ಪಂಚವರ್ಣಗಳನ್ನು ಬಳಸುವ ವಿವರಗಳು ಸಿಗುತ್ತವೆ.

ಶಿಲ್ಪಶಾಸ್ತ್ರಗಳು ಮೂಲವರ್ಣಗಳ ಬಗೆಗೆ ಹೇಳಿವೆ. ಮಾನಸೋಲ್ಲಾಸ. [೧೧೩] ಮತ್ತು ಶಿಲ್ಪರತ್ನ [೧೧೪] ಗ್ರಂಥಗಳು ಮೂಲವರ್ಣ (Primary colour) ಎಂಬುದಕ್ಕೆ ' ಶುದ್ಧ ವರ್ಣ ' ಎಂದು ಕರೆದಿವೆ (ಶುದ್ಧ =Pure). ಇಲ್ಲಿ ಶುದ್ಧ ವರ್ಣವೆಂದರೆ ಯಾವುದೇ ಮತ್ತೊಂದು ವರ್ಣ ಬೆರೆಯದೇ ಇರುವುದು ಎಂಬ ಅರ್ಥದಲ್ಲಿ ಹೇಳಲಾಗಿದೆ. ವಿಷ್ಣುಧರ್ಮೋತ್ತರವು [೧೧೫] ಮೂಲವರ್ಣ ಎಂಬ ಪದವನ್ನೇ ಬಳಸಿದೆ.

ಶ್ವೇತೋ ರಕ್ತಸ್ಥಃ ಪೀತ ಕೃಷ್ಣ ಹರೀತಮೇವಚ ।
ಮೂಲವರ್ಣಾಹ ಸಮ್ಯೆಕಾತಹ ॥

---

೧೦೫. ಡಾ॥ ಬಿ. ವ್ಹಿ. ಶಿರೂರ : ಶ್ರವಣಬೆಳಗೊಳ. ಪುಟ - ೩೩೬
೧೦೬. ಡಾ॥ ಎಸ್. ಸಿ. ಪಾಟೀಲ್ : ಕರ್ನಾಟಕದ ಜನಪದ ಚಿತ್ರಕಲೆ. ಪುಟ - ೨೩೨
೧೦೭. ಕನ್ನಡ ನಿಘಂಟು : (ಕ. ಸಾ. ಪ.). ಪುಟ - ೫೦೪೨
೧೦೮. ಕ. ವೆಂ. ರಾಜಗೋಪಾಲ (ಸಂ.) : ತುಳುವರ ಆಚರಣೆಯಲ್ಲಿ ಕಲಾವಂತಿಕೆ, ಪುಟ - ೨೧
೧೦೯. ಅ. ಲ. ನರಸಿಂಹನ್ : ' ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು ' (ಬೆಂಗಳೂರು ವಿ. ವಿ. ಗೆ ಸಲ್ಲಿಸಿದ ಬೆರಳಚ್ಚು ಮಹಾಪ್ರಬಂಧ), ಪುಟ - ೪೭೬
೧೧೦. U. P. Shah : Aspects of Jain Art and Architecture, Page - 64
೧೧೧. ವಿ. ಎಸ್. ನಾರಾಯಣಶಾಸ್ತ್ರಿ (ಅನು.) : ಪಂಚತಂತ್ರ. ಪುಟ - ೧೪. ಮುನ್ನುಡಿಯಿಂದ
೧೧೨. ವಿ. ವ್ಹಿ. ಪಾಟೀಲ : ಉತ್ತರ ಕರ್ನಾಟಕದ ಜನಪದ ಕಲೆ ಮತ್ತು ವಿಧಿಕ್ರಿಯೆಗಳು. (ಕರ್ನಾಟಕ ವಿ. ವಿ. ಗೆ ಸಲ್ಲಿಸಿದ ಅಪ್ರಕಟಿತ ಮಹಾಪ್ರಬಂಧ). ಪುಟ - ೯೯
೧೧೩. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ. ಭಾಗ II. ಅಧ್ಯಾಯ I. ಶ್ಲೋಕ ೧೫೬
೧೧೪. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ. ಭಾಗ I. ಅಧ್ಯಾಯ ೪೬. ಶ್ಲೋಕ ೨೭
೧೧೫. ಸ್ಟೆಲ್ಲಾ ಕ್ರಾಮ್ರಿಷ್ (ಸಂ.) : ವಿಷ್ಣುಧರ್ಮೋತ್ತರ. ಭಾಗ III. ಅಧ್ಯಾಯ ೨೭. ಶ್ಲೋಕ ೮

ವಿಷ್ಣುಧರ್ಮೋತ್ತರ ಪುರಾಣದಲ್ಲಿ ಮಾತ್ರ ಎರಡು ಗುಂಪು ವರ್ಣಗಳನ್ನು ಮೂಲವರ್ಣಗಳೆಂದು ಹೇಳಲಾಗಿದೆ. ಒಂದು ಕಡೆಗೆ [೧೧೬] ಬಿಳಿ (ಶ್ವೇತ). ಕೆಂಪು (ರಕ್ತ). ಹಳದಿ (ಪೀತ). ಕಪ್ಪು (ಕೃಷ್ಣ) ಮತ್ತು ಹಸಿರು (ಹರೀತ) ವರ್ಣಗಳನ್ನು ಮೂಲವರ್ಣಗಳೆಂದು ಕರೆದರೆ ಇನ್ನೊಂದು ಕಡೆಗೆ [೧೧೭] ಬಿಳಿ, ಹಳದಿ, ಕಪ್ಪು, ನೀಲಿ, ಹಸಿರು ವರ್ಣಗಳನ್ನು ಮೂಲವರ್ಣಗಳೆಂದು ಹೇಳಲಾಗಿದೆ. ಮೇಲೆ ಹೇಳಲಾದ ಎರಡು ಗುಂಪು ಮೂಲವರ್ಣಗಳಲ್ಲಿ ಬಿಳಿ, ಹಳದಿ, ಕಪ್ಪು, ಹಾಗೂ ಹಸಿರು ಎರಡರಲ್ಲೂ ಇವೆ. ಆದರೆ ಮೊದಲ ಗುಂಪಿನಲ್ಲಿದ್ದ ಕೆಂಪು ವರ್ಣಕ್ಕೆ ಬದಲಾಗಿ ಎರಡನೇ ಗುಂಪಿನಲ್ಲಿ ನೀಲಿ ವರ್ಣ ಬಂದಿದೆ. ಒಟ್ಟಾರೆ ಇಲ್ಲಿ ಪಂಚವರ್ಣಗಳ ಪ್ರಸ್ತಾಪ ಎರಡು ಕಡೆಗೆ ಬಂದಿರುವುದು ಗಮನಾರ್ಹ.

ವಿಷ್ಣುಧರ್ಮೋತ್ತರವು ಪಂಚವರ್ಣಗಳನ್ನು ಇಲ್ಲಿ ಮೂಲ ವರ್ಣಗಳೆಂದು ಹೇಳಿದರೆ ಕಾಶ್ಯಪ ಶಿಲ್ಪಶಾಸ್ತ್ರ, [೧೧೮] ಮತ್ತು ಮಾನಸೋಲ್ಲಾಸ [೧೧೯] ಗ್ರಂಥಗಳು ನಾಲ್ಕು ವರ್ಣಗಳನ್ನು ಮೂಲವರ್ಣಗಳೆಂದು ಹೇಳಿದ್ದು ಅವು ಬಿಳಿ, ಕೆಂಪು. ಹಳದಿ. ಕಪ್ಪುಗಳನ್ನು ಹೆಸರಿಸಿವೆ. ಅಪರಾಜಿತ ಪೃಚ್ಛ [೧೨೦] ಗ್ರಂಥವೂ ಇವೇ ನಾಲ್ಕು ಮೂಲವರ್ಣಗಳನ್ನು ಹೇಳುತ್ತದೆ (ಅಧ್ಯಾಯ ೨೨೪. ಶ್ಲೋಕ - ೯). ಮಾನಸೋಲ್ಲಾಸವು [೧೨೧] ಬಿಳಿ, ಕೆಂಪು, ಹಳದಿ, ಕಪ್ಪು ಪ್ರಥಮ ವರ್ಣಗಳ ಜೊತೆಗೇ ಅವುಗಳನ್ನು ಪಡೆಯುತ್ತಿದ್ದ ಮೂಲಗಳನ್ನು ಅದು ಹೇಳಿದೆ. ಬಿಳಿ ವರ್ಣವನ್ನು ಶಂಖದ ಚೂರ್ಣದ ಸುಣ್ಣದಿಂದ (Conch-Shell Lime). ಕೆಂಪನ್ನು ಕೆಂಪು ಲೀಡ್ಸ್‌ದಿಂದ. ರಕ್ತ ಕೆಂಪನ್ನು ಲಾಕ್ಷಾರಸದಿಂದ (ಅರಗು). ಇಟ್ಟಿಗೆ ಕೆಂಪನ್ನು ಆಕರ್ (Ochre) ದಿಂದ. ಹಳದಿಯನ್ನು ಹರಿದಾಳದಿಂದ ಕಪ್ಪನ್ನು ಮಸಿ (Soot) ಯಿಂದ ಪಡೆಯುವ ಕುರಿತು ವಿವರ ನೀಡುತ್ತದೆ.

ಮಾನಸೋಲ್ಲಾಸದಲ್ಲಿ ಗಮನಿಸಬೇಕಾದ ಅಂಶವೆಂದರೆ ಲಾಕ್ಷಾರಸ (Lac) ದಿಂದ ಪಡೆದ ಎಲ್ಲ ವರ್ಣಗಳು ಹಾಗೂ ಸಸ್ಯಮೂಲದಿಂದ ಪಡೆದ ಎಲ್ಲ ವರ್ಣಗಳನ್ನು ಅದು ಪ್ರಥಮ ವರ್ಣ (ಮೂಲವರ್ಣ) ಗಳೆಂದೇ ಪರಿಗಣಿಸಿದಂತೆ ಕಾಣುತ್ತದೆ. ಈ ಕುರಿತು ಹೆಚ್ಚಿನ ವಿವರಗಳು ಕಂಡುಬರುವುದಿಲ್ಲ. ' ಶಿಲ್ಪರತ್ನ ' ಗ್ರಂಥದ [೧೨೨] ಚಿತ್ರಲಕ್ಷಣ ಭಾಗದಲ್ಲಿ ಸಹ ಬಿಳಿ. ಹಳದಿ. ಕೆಂಪು. ಕಪ್ಪು ಮತ್ತು ನೀಲಿ ಎಂದು ಪಂಚವರ್ಣಗಳನ್ನು ಮೂಲವರ್ಣಗಳೆಂದು ಕರೆಯಲಾಗಿದೆ. ಇದರಂತೆ ' ಅಗ್ನಿಪುರಾಣ ' [೧೨೩] ದಲ್ಲೂ ಮೇಲೆ ಹೇಳಿದ ಐದು ವರ್ಣಗಳನ್ನೇ ಮೂಲ ವರ್ಣಗಳೆಂದು ಹೇಳಿದೆ. ಭಾರತೀಯ ಪ್ರಾಚೀನ ಶಿಲ್ಪಶಾಸ್ತ್ರಗಳಲ್ಲಿ ಚರ್ಚೆಗೊಳಗಾದ ಈ ಆರು ವರ್ಣಗಳಾದ ೧. ಕಪ್ಪು, ೨. ಬಿಳಿ, ೩. ಕೆಂಪು, ೪. ಹಳದಿ. ೫. ನೀಲಿ. ೬. ಹಸಿರು ಈ ಎಲ್ಲ ವರ್ಣಗಳು ಸಾಮಾನ್ಯವಾಗಿ ಭಿತ್ತಿಚಿತ್ರಗಳಲ್ಲಿ ಬಳಕೆಯಾಗಿವೆ. [೧೨೪] ಈ ವರ್ಣಗಳನ್ನು ಅವರು ಪಡೆಯುತ್ತಿದ್ದ ರೀತಿ. ಅವುಗಳ ಮೂಲಗಳನ್ನು ತಿಳಿದುಕೊಳ್ಳುವುದು ಮಹತ್ವದ್ದಾಗಿದೆ.

---

೧೧೬. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೨೭, ಶ್ಲೋಕ ೮

೧೧೭. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೪೦, ಶ್ಲೋಕ ೧೬

೧೧೮. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ. ಅಧ್ಯಾಯ ೮೮. ಪುಟ - ೬೫೮

೧೧೯. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ. ಭಾಗ II. ಅಧ್ಯಾಯ I. ಶ್ಲೋಕ ೧೫೬

೧೨೦. ಪಿ. ಎ. ಮಂಕಡ್ (ಸಂ.) : ಅಪರಾಜಿತ ಪೃಚ್ಛ, ಅಧ್ಯಾಯ ೨೨೪, ಶ್ಲೋಕ ೯

೧೨೧. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ. ಭಾಗ II, ಅಧ್ಯಾಯ I, ಶ್ಲೋಕ ೧೫೬ - ೧೫೭

೧೨೨. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I. ಅಧ್ಯಾಯ ೪೬, ಶ್ಲೋಕ ೨೭

೧೨೩. ಪಂಚಾನಂದ ತರ್ಕತೀರ್ಥ : ಅಗ್ನಿಪುರಾಣ. ಅಧ್ಯಾಯ ೩೦. ಶ್ಲೋಕ ೧೮. ಪುಟ - ೧೮೨

೧೨೪. Jayanth Chakravarthi : Techniques in Indian Mural Painting, Page - ೪೫

೧. ಬಿಳಿ ವರ್ಣ (White) : ಬಿಳಿ ವರ್ಣವು ಭಾರತೀಯ ಭಿತ್ತಿಚಿತ್ರ ಇತಿಹಾಸದಲ್ಲಿ ಪ್ರಮುಖಪಾತ್ರ ವಹಿಸಿದೆ. ಬಿಳಿವರ್ಣವು ಸಾಮಾನ್ಯವಾಗಿ ಎಲ್ಲ ಪಂಚವರ್ಣಗಳಲ್ಲಿ ಮಿಶ್ರಣವಾಗಿ ಉಪಯೋಗಿಸಲಾಗಿದೆ. ಖಡು ವರ್ಣಗಳನ್ನು (ಪ್ರಖರ ವರ್ಣ) ತಿಳುವಾಗಿ ಮಾಡಲು. ತೀವ್ರ ಬಿಳುಪಿನ ಭಾಗ (Highlights) ಗುರುತಿಸಲು. ಆಭರಣಗಳ ವಿವರಗಳನ್ನು ಚಿತ್ರಿಸಲು ಹೀಗೆ ಪ್ರತಿಯೊಂದು ಹಂತದಲ್ಲೂ ಬಿಳಿವರ್ಣ ಬಳಕೆಯಾಗಿದೆ.

ಬಿಳಿವರ್ಣವು ಟೆಂಪರಾ (Tempera) ವಿಧಾನದ ಚಿತ್ರಣದಲ್ಲಿ ಬಹಳ ಉಪಯುಕ್ತ ಹಾಗೂ ಅವಶ್ಯಕವಾದ ವರ್ಣವಾಗಿದೆ. ಯಾವುದೇ ವರ್ಣದ ಬಳಕೆಯಲ್ಲಿ ದಟ್ಟತನದಿಂದ ತೆಳುವರ್ಣದ ಕಡೆಗೆ (Dark to Light) ಚಿತ್ರಿಸುವಾಗ ಅಲ್ಲಿ ಬಿಳಿ ವರ್ಣ ಅನಿವಾರ್ಯವಾಗಬೇಕಾಗುತ್ತದೆ. ಬಿಳಿ ಛಾಯೆ (Tone) ಯನ್ನು ಯಾವುದೇ ವರ್ಣಗಳಿಗೆ ಹೆಚ್ಚಿಸುವಲ್ಲಿ ಇದರ ಪಾತ್ರ ಇದ್ದೇ ಇರುತ್ತದೆ. ಟೆಂಪರಾ ಭಿತ್ತಿ ಚಿತ್ರಣ ವಿಧಾನದಲ್ಲಿ ಮೂಲವರ್ಣದ ಬಳಕೆಯ ನಂತರದ ಎಲ್ಲಾ ವರ್ಣಗಳೂ ಬಿಳಿಯಿಂದ ಮಿಶ್ರಣಗೊಂಡಂತಹವು ಆಗಿರುತ್ತವೆ.[೧೨೫] ಭಾರತದ ಮತ್ತು ಕರ್ನಾಟಕದಲ್ಲಿನ ಬಹುಪಾಲು ಭಿತ್ತಿಚಿತ್ರಗಳು ಟೆಂಪರಾ ವಿಧಾನದಲ್ಲೇ ರಚನೆಯಾಗಿರುವುದು ಇಲ್ಲಿ ಗಮನಾರ್ಹ ಅಂಶವಾಗಿದೆ. ಹಾಗೆಯೇ ಭಿತ್ತಿ ಚಿತ್ರಗಳ ಒಟ್ಟಾರೆ ಛಾಯಾಕರಣ (Tonal Value). ಮತ್ತು ವರ್ಣವೈವಿಧ್ಯತೆಯು (Colour Scheme) ಈ ಬಿಳಿ ವರ್ಣದ ಮೇಲೆ ಅವಲಂಬಿತವಾಗಿರುತ್ತದೆ.

ಭಿತ್ತಿಚಿತ್ರಗಳ ರಚನೆಯಲ್ಲಿ ತುಂಬ ಮಹತ್ವದ. ವರ್ಣವಾಗಿರುವುದರಿಂದಲೇ ಶಾಸ್ತ್ರಗ್ರಂಥಗಳು ಮೂಲವರ್ಣಗಳಲ್ಲಿ ' ಬಿಳಿ ' ವರ್ಣವನ್ನು ಗುಂಪಿನ ಮೊದಲ ಸ್ಥಾನದಲ್ಲಿಯೇ ಯಾವಾಗಲೂ ಹೆಸರಿಸುತ್ತ ಬಂದಿವೆ. ಭಾರತೀಯ ಪ್ರಾಚೀನ ಮತ್ತು ಮಧ್ಯಕಾಲೀನ ಶಿಲ್ಪಶಾಸ್ತ್ರ ಗ್ರಂಥಗಳು ಬಿಳಿ ವರ್ಣವನ್ನು ಒಂದು ಶುದ್ಧವಾದ (Pure) ಮತ್ತು ಮಹತ್ವಪೂರ್ಣವಾದ ವರ್ಣವೆಂದೇ ಪರಿಗಣಿಸಿವೆ.

ಭಿತ್ತಿ ಚಿತ್ರಗಳಲ್ಲಿ ಬಿಳಿಯ ವರ್ಣವನ್ನು ಹೀಗೆಯೇ ಬಳಸಿದ್ದಾರೆಂದು ನಿಖರವಾಗಿ ಹೇಳುವುದು ಕಷ್ಟ. ಬಿಳಿಯನ್ನು ನೇರವಾಗಿಯೂ. ಕೆಲವು ಸಲ ಬೇರೆ ವರ್ಣದೊಂದಿಗೆ ಮಿಶ್ರಮಾಡಿಯೂ ಬಳಸಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಹಾಗೆಯೇ ಶಂಖದ ಪುಡಿಯ ಬಿಳಿ (Conch-Shell Lime). ಸುಣ್ಣದ ಬಿಳಿ (Lime-White). ಕೊಲೈನ್ ಬಿಳಿ (Kaolin-White). ಬಿಳಿ ಮಣ್ಣು (White-Clay). ಜಿಪ್ಸಮ್ ಬಿಳಿ (Zink-White). ಮಾರ್ಬಲ್ ಕಲ್ಲಿನ ಬಿಳಿ (Marble-White) ಗಳಿಂದ ತಯಾರಾದ ಬಿಳಿ ವರ್ಣವು ಭಿತ್ತಿಚಿತ್ರಗಳಿಗೆ ತಕ್ಕುದಾಗಿದೆ[೧೨೬] ಎಂದು ಶಿಲ್ಪಶಾಸ್ತ್ರಗಳು ಹೇಳುತ್ತವೆ.

ಮಾನಸೋಲ್ಲಾಸ[೧೨೭] ಮತ್ತು ಶಿಲ್ಪರತ್ನ[೧೨೮] ಗ್ರಂಥಗಳು ಬಿಳಿ ವರ್ಣವನ್ನು ಭಿತ್ತಿ ನಿರ್ಮಾಣ ಹಂತದಲ್ಲಿ ಮುಖ್ಯವಾಗಿ ಬಳಸುವದನ್ನು ತಿಳಿಸುತ್ತವೆ. ಈ ಬಿಳಿಯು ಬಿಳಿಮಣ್ಣು (White-Clay) ಅಥವಾ ಕೊಲೈನ್ ಬಿಳಿ ಇಲ್ಲವೇ ಸುಣ್ಣ (Lime) ದಿಂದ ಬಂದುದಾಗಿರಬೇಕೆಂದು ಅವು ತಿಳಿಸುತ್ತವೆ. ಸಮರಾಂಗಣ ಸೂತ್ರಧಾರವು[೧೨೯] ಬಿಳಿ ಕಲ್ಲಿನ ಪುಡಿಯನ್ನು ವಿಷ್ಣುಧರ್ಮೋತ್ತರವು[೧೩೦] ಶಂಖದ ಪುಡಿಯ ಬಿಳಿಯನ್ನು ಭಿತ್ತಿ ನಿರ್ಮಾಣಕ್ಕಾಗಿ ಬಳಸಲು ಸೂಚಿಸಿವೆ.

---

೧೨೫. Jayanth Chakravarthi : Techniques in Indian Mural Painting, Page - ೪೫

೧೨೬. Jayanth Chakravarthi : Techniques in Indian Mural Painting, Page - ೪೪

೧೨೭. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ. ಭಾಗ II. ಅಧ್ಯಾಯ I. ಶ್ಲೋಕ ೧೩೭ - ೩೮

೧೨೮. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ. ಭಾಗ I. ಅಧ್ಯಾಯ ೪೬. ಶ್ಲೋಕ ೨೮

೧೨೯. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ. ಅಧ್ಯಾಯ ೭೨. ಶ್ಲೋಕ ೩೪

೧೩೦. ಸ್ಟೆಲ್ಲಾ ಕ್ರಾಮ್ರಿಷ್ (ಸಂ.) : ವಿಷ್ಣುಧರ್ಮೋತ್ತರ. ಭಾಗ III. ಅಧ್ಯಾಯ ೪೦. ಶ್ಲೋಕ ೨

ಇವುಗಳನ್ನು ಕೆಲವು ಸಲ ಚಿತ್ರರಚನಾ ಹಂತದಲ್ಲೂ ಉಪಯೋಗಿಸುತ್ತಿದ್ದರೆಂದು ತೋರುತ್ತದೆ. ಯಾಕೆಂದರೆ ಬಿಳಿ ಬಣ್ಣದ ಬಳಕೆ ಚಿತ್ರರಚನೆಯಲ್ಲಿ ಹೇರಳವಾಗಿ ಕಂಡುಬರುತ್ತದೆ.

ಬಿಳಿ ಮಣ್ಣು (White-Clay) ಮತ್ತು ಶಂಖದ ಬಿಳಿ, ಈ ಎರಡೂ ಬಿಳಿಗಳನ್ನು ಭಿತ್ತಿಚಿತ್ರಗಳಲ್ಲಿ ಉಪಯೋಗಿಸಲಾಗಿದೆ. ಇದನ್ನು ಅಜಂತಾ ಹಾಗೂ ದಕ್ಷಿಣ ಭಾರತೀಯ ಭಿತ್ತಿಚಿತ್ರಗಳ ರಾಸಾಯನಿಕ ಪ್ರಯೋಗದಿಂದ [೧೩೧] ಖಚಿತಪಡಿಸಿಕೊಳ್ಳಲಾಗಿದೆ.

ಕಾಶ್ಯಪ ಶಿಲ್ಪಶಾಸ್ತ್ರದ [೧೩೨] 'ವರ್ಣಸಂಸ್ಕಾರ ಲಕ್ಷಣಂ' ಎಂಬ ಅಧ್ಯಾಯದಲ್ಲಿ ಬಿಳಿ ವರ್ಣದ ಅದರ ವೈವಿಧ್ಯತೆಯ ಕುರಿತು ವಿವರಗಳಿವೆ. " ಬಿಳಿ ವರ್ಣದಲ್ಲಿ ಶ್ವೇತ, ಶುಕ್ಲ, ಧವಳ, ಅವಧಾತ ಎಂದು ನಾಲ್ಕು ಬಗೆಗಳಿವೆ. ಶ್ವೇತ ವರ್ಣದಲ್ಲಿ ಮತ್ತೆ ಮುಕ್ತಾಭ, ವರ್ಣಾಭ ಎಂದು ಎರಡು ಬಗೆಗಳಿವೆ. ಶಂಖದ ಬಣ್ಣದೊಂದಿಗೆ ಸಮವಾಗಿರುವ ಬಣ್ಣವನ್ನು ಶುಕ್ಲ ವರ್ಣವೆನ್ನುತ್ತಾರೆ. ಬೆಳ್ಳಿಯ ವರ್ಣದೊಂದಿಗೆ ಸಮಾನವಾದುದನ್ನು ರಜತ ಎಂದೂ, ಹಸುವಿನ ಹಾಲಿನಂತೆ ಬಣ್ಣ ಉಳ್ಳದ್ದನ್ನು ಧವಳ ಎಂದೂ ನಕ್ಷತ್ರದಂತೆ ಬಣ್ಣ ಉಳ್ಳದ್ದನ್ನು 'ಅವಧಾತ' ಎಂದು ಬಿಳಿ ವರ್ಣದ ಕುರಿತು ತಿಳಿಸುತ್ತದೆ. ಅಲ್ಲದೇ ಬಿಳಿ ವರ್ಣದಲ್ಲಿ ಶುಕ್ಲ ಮತ್ತು ವಳಕ್ಷವೆಂದು ಎರಡು ಪ್ರಭೇದಗಳಿದ್ದು ಶಂಖದ ಬಿಳುಪು, ಹಸುವಿನ ಹಾಲಿನ ಬಿಳುಪು, ಇರುವಂತಿಗೆಯ ಬಿಳುಪು, ಶುಕ್ಲವರ್ಣವೆಂದೂ ಮುತ್ತಿನ ಬಿಳುಪು, ಬೆಳದಿಂಗಳಿನ ಬಿಳುಪು, ವಜ್ರದ ಬಿಳುಪುಗಳು ವಳಕ್ಷ ಬಿಳುಪುಗಳಾಗಿವೆ [೧೩೩] ಎನ್ನುವ ವಿವರಗಳೂ ದೊರೆಯುತ್ತವೆ. ಹಾಗೆಯೇ ಹಳದಿ ಛಾಯೆಯ ಬಿಳಿ, ಹಂಸಪಕ್ಷಿಯ ಬಿಳಿ, ಕಮಲದ ಹೂವಿನ ಬಿಳಿ ಎಂದು ಮೂರು ಪ್ರಕಾರದ ಬಿಳಿ ಬಣ್ಣಗಳು ಪ್ರಾಚೀನ ಸಾಹಿತ್ಯ ಕೃತಿಯಲ್ಲಿ ಉಲ್ಲೇಖಿಸಿದ್ದು [೧೩೪] ತಿಳಿಯುತ್ತದೆ. ಹರ್ಷಚರಿತದಲ್ಲಿ [೧೩೫] ಆನೆದಂತದ ಬಿಳಿ, ಹಾಲಿನ ಬಿಳಿ, ಶಂಖದ ಬಿಳಿ ಮತ್ತು ಕೇತಕೀ ಹೂವಿನ ಬಿಳಿ ಎಂದು ನಾಲ್ಕು ಬಗೆಯಲ್ಲಿ ಹೇಳಲಾಗಿದೆ. ಜೊತೆಗೆ ಹಳದೀ ಛಾಯೆಯ ಬಿಳಿಯನ್ನೂ ವಿಶೇಷವಾಗಿ ಗಮನಿಸಿ ಹೇಳುತ್ತದೆ.

ವಿಷ್ಣುಧರ್ಮೋತ್ತರದಲ್ಲಿ [೧೩೬] ಪ್ರಸ್ತಾಪಿತಗೊಂಡ ಮುಖ್ಯ ಬಿಳಿ ವರ್ಣಗಳು : ಬಂಗಾರದ ಬಿಳಿ, ಆನೆಯ ದಂತದ ಬಿಳಿ, ಗಂಧದ ಬಿಳಿ, ಶರದೃತುವಿನ ಮೋಡದ ಬಿಳಿ ಮತ್ತು ಚಂದಿರನ ಬಿಳಿಗಳೆಂದು ಐದು ವಿಧದ ಬಿಳಿ ವರ್ಣಗಳಿವೆ. ಬಿಳಿ ವರ್ಣದಲ್ಲಿ ಪ್ರಾಚೀನ ಭಿತ್ತಿಚಿತ್ರಕಾರರು ಬೇರೆ ಬೇರೆ ಪ್ರಕಾರಗಳನ್ನು ಕಂಡುಕೊಂಡಿರುವುದನ್ನು ಮೇಲಿನ ವಿವರಗಳಿಂದ ತಿಳಿದುಕೊಳ್ಳಬಹುದಾಗಿದೆ.

**೨. ಕಪ್ಪು ವರ್ಣ (Black) :** ಕಪ್ಪು ವರ್ಣವು ಭಾರತೀಯ ಭಿತ್ತಿ ಚಿತ್ರಗಳಲ್ಲಿ ವಿವಿಧ ರೀತಿಯಿಂದ ಉಪಯೋಗಗೊಂಡಿದೆ. ಕಪ್ಪು ಹೊರರೇಖೆಯನ್ನು ಆಕೃತಿಗಳಿಗೆ ಎಳೆಯಲು, ಕೂದಲು ಚಿತ್ರಿಸಲು, ಕಣ್ಣುಗಳನ್ನು ಚಿತ್ರಿಸಲು, ವರ್ಣಗಳನ್ನು ದಟ್ಟಗೊಳಿಸಿಕೊಳ್ಳಲು, ನಕ್ಷೆಗಳನ್ನು ಚಿತ್ರಿಸಲು ಹೀಗೆ ಅನೇಕ ವಿಧದಲ್ಲಿ ಉಪಯೋಗಗೊಂಡಿದೆ. ಕಪ್ಪು ಮಸಿಯಿಂದ

---

೧೩೧. Jayanth Chakravarthi : Techniques in Indian Mural Painting, Page - ೪೫
೧೩೨. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ, ಅಧ್ಯಾಯ ೮೮, ಪುಟ - ೬೫೮
೧೩೩. C. Sivaramamurti : Chitrasutra of the Vishnudharmottara, Page - 51
೧೩೪. C. Sivaramamurti : Chitrasutra of the Vishnudharmottara, Page - 52
೧೩೫. ಎಚ್. ಓಲ್ಡೆನ್ ಬರ್ಗ್ : ಹರ್ಷಚರಿತ, ಪುಟ - ೨೯೩
೧೩೬. C. Sivaramamurti : Chitrasutra of the Vishnudharmottara, Page - 53

(Soot) ಮತ್ತು ಕಾಡಿಗೆ (Carbon) ಯಿಂದ ಕಪ್ಪು ವರ್ಣವನ್ನು ಭಿತ್ತಿ ಚಿತ್ರಕಲಾವಿದರು ಸಾಮಾನ್ಯವಾಗಿ ಪಡೆಯುತ್ತಿದ್ದರೂ ಕಪ್ಪು ಪಾಟೀಕಲ್ಲಿನ ಪುಡಿಯಿಂದ, ಎಲುಬಿನಿಂದ (Bone Black), ಮಾರ್ಸ್‌ಬ್ಲಾಕ್ (ಮಾರ್ಸ್ ಎಂಬ ವಸ್ತುವಿನಿಂದ) ನಿಂದ ಕಪ್ಪು ಪಡೆದು ಉಪಯೋಗಿಸುತ್ತಿದ್ದರು [೧೩೭] ಎಂದು ವಿದ್ವಾಂಸರು ತರ್ಕಿಸುತ್ತಾರೆ. ಮತ್ತು ಕಾರ್ಬನ್ ಅನ್ನು ಕಪ್ಪು ವರ್ಣದ ಸಲುವಾಗಿ ಉಪಯೋಗಿಸಲಾಗಿದೆ [೧೩೮] ಎಂಬ ಅಭಿಪ್ರಾಯವಿದೆ. ಮಾನಸೋಲ್ಲಾಸವು [೧೩೯] ಭಿತ್ತಿ ಚಿತ್ರಗಳಿಗಾಗಿ ಕಪ್ಪು ವರ್ಣವನ್ನು ದೀಪದ ಕಪ್ಪಿನಿಂದ ಪಡೆಯುವ ವಿಧಾನವನ್ನು ತಿಳಿಸಿದರೆ ಶಿಲ್ಪರತ್ನವು [೧೪೦] ಎರಡು ರೀತಿಯಿಂದ ಕಪ್ಪುವರ್ಣವನ್ನು ತಯಾರಿಸುವ ವಿಧಾನಗಳನ್ನು ಹೇಳಿದೆ. ಒಂದು ಮಣ್ಣಿನ ಪಾತ್ರೆಯನ್ನು ತೆಗೆದುಕೊಂಡು ಅದರ ಒಳಗಡೆ ಮೈಗೆ ಆಕಳ ಸಗಣಿಯನ್ನು ಸಾರಿಸಿ ಅದು ಒಣಗಿದ ನಂತರ ಚನ್ನಾಗಿ ಎಣ್ಣೆ ಹಾಕಿ ಒಂದು ದೊಡ್ಡ ದೀಪವನ್ನು ಹತ್ತಿಸಿ ಆ ಪಾತ್ರೆಯನ್ನು ದೀಪದ ಮೇಲೆ ಬೋರಲು ಹಾಕಬೇಕು. ದೀಪದ ಉರಿಯು ದೊಡ್ಡದಾಗಿ ಉರಿಯುತ್ತಿದ್ದು ಅದರ ತುದಿಯಿಂದ ಹೆಚ್ಚು ಪ್ರಮಾಣದ ಕಪ್ಪು ಹೊಗೆ ಬರುತ್ತಿರುವಂತೆ ನೋಡಿಕೊಳ್ಳುತ್ತಿರಬೇಕು. ಸ್ವಲ್ಪ ಸಮಯದ ನಂತರ ದೀಪದ ಮೇಲೆ ಬೋರಲು ಹಾಕಿದ ಮಣ್ಣಿನ ಪಾತ್ರೆಯ ಒಳಬದಿಯಲ್ಲಿ ಕಪ್ಪುಕಾಡಿಗೆ (ಪುಡಿ) ಸಂಗ್ರಹವಾಗಿರುತ್ತದೆ. ಇದನ್ನು ಕೆರೆದು ತೆಗೆದಿಟ್ಟುಕೊಳ್ಳಬೇಕು. ಹೀಗೆ ನಮಗೆ ಬೇಕಾದಷ್ಟು ಕಪ್ಪುಪುಡಿ ದೊರೆಯುವವರೆಗೂ ಮತ್ತೆ ಮತ್ತೆ ಮಣ್ಣಿನ ಪಾತ್ರೆಯನ್ನು ದೀಪದ ಮೇಲೆ ಬೋರಲು ಹಾಕುತ್ತಿರಬೇಕು. ನಂತರ ಸಂಗ್ರಹವಾದ ಈ ಕಪ್ಪು ಪುಡಿಗೆ ' ನೀಮ್ ' ಗಿಡದ ರಸ ಬೆರೆಸಿ ಕಲಸಿ ಉಪಯೋಗಿಸಬೇಕು. ಇದೇ ವಿಧಾನದಿಂದ ಕಪ್ಪುವರ್ಣ ಪಡೆಯುವ ಕುರಿತು ೧೫ ನೇ ಶತಮಾನದ ಇಟಾಲಿಯನ್ ಚಿತ್ರಕಲಾವಿದ ' ಸೆನ್ನಿನೋ ಸೆನ್ನಿನಿ ' [೧೪೧] (Cinnino Cennini) ಕೂಡಾ ಹೇಳುತ್ತಾನೆ.

ಶಿಲ್ಪರತ್ನವು [೧೪೨] ಹೇಳುವ ಇನ್ನೊಂದು ವಿಧಾನವು ಒಂದು ರೀತಿಯ ಕಪ್ಪು ಪಾಟೀಕಲ್ಲನ್ನು ನೀರಿನಲ್ಲಿ ಅರೆದು ಅಥವಾ ತೇಯ್ದು ಮಂದವಾಗಿ ಮಿಶ್ರಣವಾಗುವ ಹಾಗೆ ಮಾಡಿಕೊಳ್ಳಬೇಕು. ನಂತರ ಈ ಮಂದವಾದ ಅರೆದ ಮಿಶ್ರಣಕ್ಕೆ ಬಿಲ್ವಪತ್ರಿ ಕಾಯಿಯ ರಸ ಬೆರೆಸಿ ಚನ್ನಾಗಿ ಕಲಕಬೇಕು. ಆಗ ಅದು ಉಪಯೋಗಕ್ಕೆ ಸಿದ್ಧವಾಗುತ್ತದೆ.

ಭಿತ್ತಿ ಚಿತ್ರ ಕುರಿತು " ಈಗಾಗಲೇ ಮಾಡಲಾಗಿರುವ ಕೆಲವು ರಾಸಾಯನಿಕ ಪ್ರಯೋಗಗಳನ್ನು ಆಧರಿಸಿ ಭಾರತೀಯ ಭಿತ್ತಿಚಿತ್ರಗಳಲ್ಲಿ ಕಾಡಿಗೆ (Carbon) ಇಲ್ಲವೇ ದೀಪದ ಕಪ್ಪು (Soot) or (Lamp Black) ನಿಂದಾದ ಕಪ್ಪು ವರ್ಣವನ್ನೇ ಹೆಚ್ಚಾಗಿ ಉಪಯೋಗಿಸಲಾಗಿದೆ. [೧೪೩] ಎಂದು ವಿದ್ವಾಂಸರು ಹೇಳುತ್ತಾರೆ.

ಕಾಶ್ಯಪ ಶಿಲ್ಪಶಾಸ್ತ್ರವು [೧೪೪] ಕಪ್ಪು ವರ್ಣದಲ್ಲಿ ನೀಲ, ಶ್ಯಾಮಲ, ಕಾಲ, ಕೃಷ್ಣ ಎಂದು ನಾಲ್ಕು ಬಗೆಗಳನ್ನು ತಿಳಿಸುತ್ತ ನೀರು ತುಂಬಿಕೊಂಡಿರುವ ಮೇಘದ ವರ್ಣವನ್ನು ನೀಲವೆಂದೂ, ಕಾಡು ಕಾಗೆಯ ಕಂಠದ ಬಣ್ಣವನ್ನು ಶ್ಯಾಮಲ

---

೧೩೭. Jayanth Chakravarthi : Techniques in Indian Mural Painting, Page - ೪೬

೧೩೮. Jayanth Chakravarthi : Techniques in Indian Mural Painting, Page - ೪೭

೧೩೯. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ, ಭಾಗ II, ಅಧ್ಯಾಯ I, ಶ್ಲೋಕ ೧೫೭

೧೪೦. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೪೭ ರಿಂದ ೫೧

೧೪೧. Christain J. Herringhan : The Book of Cennino Cennini, Page - 21

೧೪೨. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೫೧

೧೪೩. Jayanth Chakravarthi : Techniques in Indian Mural Painting, Page - ೪೭

೧೪೪. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ, ಅಧ್ಯಾಯ ೮೮, ಪುಟ - ೬೫೮

ಎಂದೂ ನವಿಲಿನ ಕಂಠದಂತೆ ಇರುವ ಬಣ್ಣಕ್ಕೆ ಕಾಲ ಎಂದೂ ದುಂಬಿಯ ರೆಕ್ಕೆಯ ಬಣ್ಣದ ಕಪ್ಪನ್ನು ಕೃಷ್ಣವೆಂದೂ ಕರೆದಿವೆ. ವಿಷ್ಣುಧರ್ಮೋತ್ತರ, ಹರ್ಷಚರಿತ, ಕಾದಂಬರಿಗಳಲ್ಲಿ ಹೇಳಲಾಗಿರುವ ಕಪ್ಪು ವರ್ಣಗಳನ್ನು ಸಿ. ಶಿವರಾಮ ಮೂರ್ತಿಯವರು [೧೪೫] ಭಿತ್ತಿ ಚಿತ್ರಕಲೆಯ ಕಪ್ಪು ವರ್ಣ ಹೇಳುವಾಗ ಉಲ್ಲೇಖಿಸುತ್ತಾರೆ :

ತಿಳುವಾದ ಛಾಯೆಯ ಕಪ್ಪು, ಕಾಡು ಕೋಣದ ಕಪ್ಪು, ಗೋಲಾಂಗುಲ (Golangula) ಜಾತಿಯ ಮಂಗನ ಮುಖದ ಕಪ್ಪು, ರಾತ್ರಿ ಹಾರಾಡುವ ಚಕ್ಷ ಹಕ್ಕಿಯ ಕಪ್ಪು, ಕೆಂಪು ಛಾಯೆಯ ಕಪ್ಪು (Reddish Black), ಮುದ್ಗ ಕಾಳಿನ ಕಪ್ಪು, ದುರ್ವ ಎಂಬ ಹುಲ್ಲಿನ ಕಪ್ಪು, ಮಂದವಾದ ಬಿಳಿ ಛಾಯೆಯ ಕಪ್ಪು, ಹಳದಿ ಛಾಯೆಯ ಕಪ್ಪು (Yellowish Dark), ಪ್ರಿಯಂಗು ಬಳ್ಳಿಯ ಕಪ್ಪು, ನೀಲಿ ಕುಮುದ (ಲೈಲಿಹೂ) ಹೂವಿನ ಕಪ್ಪು, ಕೆಂಪು ಕಮಲದ ಹೊಳಪಿನ ಕಪ್ಪು, ಹಾಗೂ ನೀರು ತುಂಬಿದ ಮೋಡದ ಕಪ್ಪು ಎಂಬ ಕಪ್ಪು ವರ್ಣದ ವಿವಿಧ ಛಾಯೆಗಳನ್ನು ಅವರು ಚರ್ಚಿಸುತ್ತಾರೆ. ಇದಕ್ಕೆ ಮೇಲಿನ ಗ್ರಂಥಗಳಲ್ಲಿಯ ವಿವರಗಳೇ ಅವರಿಗೆ ಆಧಾರವಾಗಿವೆ. ಅಲ್ಲದೇ ಶ್ಯಾಮ ಮತ್ತು ಕೃಷ್ಣ ಎಂಬ ಎರಡು ಕಪ್ಪು ವರ್ಣದ ಛಾಯೆಗಳನ್ನು ಹೇಳಿದ್ದು ಹುಲ್ಲಿನ ಛಾಯೆ, ಮತ್ತು ಪಚ್ಚೆ ಹೊಳಪು ಶ್ಯಾಮವೆಂದೂ, ಇಂದ್ರನೀಲ, ಮಣಿಯ ಕಾಂತಿಯು ಕೃಷ್ಣ ಎಂಬ [೧೪೬] ವಿವರಗಳು ಸಿಗುತ್ತವೆ.

ಈ ಎಲ್ಲ ವಿಧಾನಗಳಿಂದ ಕಪ್ಪು ವರ್ಣ ಪಡೆಯುತ್ತಿದ್ದುದು ಒಂದು ವಿಧವಾದರೆ ಗ್ರಾಮೀಣ ಪ್ರದೇಶದ ಜನಪದರು ತಮಗೆ ತಿಳಿದಿರುವಂತಹ ಅನೇಕ ರೀತಿಯ ವಿಧಾನಗಳಿಂದಲೂ ಕಪ್ಪು ವರ್ಣ ಪಡೆಯುತ್ತಿದ್ದರು. ಕರ್ನಾಟಕದ ಅನೇಕ ಭಾಗಗಳಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ವಿವಿಧ ವಿಧಾನಗಳನ್ನು ಅನುಸರಿಸಿ ಕಪ್ಪು ವರ್ಣ ಪಡೆಯುವದನ್ನು [೧೪೭] ಕಾಣಬಹುದು. ಬೆಳಗಾವಿ ಭಾಗದಲ್ಲಿ ಬರಗ – ರಾಗ, ಹೊನಗನ್ನೆ, ಮುರವರಿಕೆ ಮಣೆ, ಅವರೆ, ತುಂಬೆ, ಹಾಗಲಕಾಯಿ ಎಲೆಯ ರಸ, ಚಪ್ಪರದವರೆ ರಸ, ಕಿರುಗೋಣೆ ಸೊಪ್ಪು, ಹಚ್ಚೆಗಿಡದ ಸೊಪ್ಪು ಇತ್ಯಾದಿಗಳಿಂದ ಕಪ್ಪನ್ನು ಪಡೆಯುತ್ತಿದ್ದರು. ಬಿಜಾಪುರ, ಕಲಬುರ್ಗಿ, ಬೀದರ್ ಭಾಗದಲ್ಲಿ : ಮಾಗಿದ ಜೋಳದ ತೆನೆಗಳಲ್ಲಿ ಕಾಡಿಗೆ ಪುಡಿಯನ್ನು ಸಂಗ್ರಹಿಸಿ ಕಪ್ಪು ತಯಾರಿಸುತ್ತಾರೆ. ಧಾರವಾಡ ಭಾಗ ಮತ್ತು ಕಾರವಾರದೆಡೆಗೆ : ಔಡಲ ಎಣ್ಣೆ, ಅರಿಷಿಣ ಪುಡಿ ಮಿಶ್ರಮಾಡಿ ಇದಕ್ಕೆ ದೀಪದ ಕಪ್ಪು ಕಲೆಸಿಕೊಂಡು ಹಸಿರು ಛಾಯೆಯ ಕಪ್ಪು ವರ್ಣ ತಯಾರಿಸುತ್ತಾರೆ. ಬಳ್ಳಾರಿ ಭಾಗದಲ್ಲಿ : ಕಪ್ಪು ಪಡೆಯುವ ವಿಧಾನ ಈ ರೀತಿ ಇದೆ. ಹೊಸ ಗಡಿಗೆಯೊಂದನ್ನು ತೆಗೆದುಕೊಂಡು ಮೇಲಿನ ಕಂಠ ಒಡೆದು ಗಡಿಗೆಯನ್ನು ಕಂಠರಹಿತ ಮಾಡುವರು. ನಂತರ ಹಚ್ಚೆಸೊಪ್ಪು, ಒಣ ಅಂಬರಿಕೆ ಸೊಪ್ಪು, ಅರಿಷಿಣಗಳನ್ನು ಸಮನಾಗಿ ಕೂಡಿಸಿ ಕುಟ್ಟಿ ನೀರು ಬೆರೆಸಿ ಮಂದವಾದ ರಸ ಮಾಡುತ್ತಾರೆ. ಈ ಮಂದವಾದ ರಸವನ್ನು ಕಂಠ ಒಡೆಯಲಾದ ಗಡಿಗೆಯ ಒಳಬದಿಗೆ ಲೇಪಿಸುತ್ತಾರೆ. ನಂತರ ಅರ್ಧಕಿಲೋದಷ್ಟು ಒಳ್ಳೆಣ್ಣೆ, ಔಡಲ ಎಣ್ಣೆಯನ್ನು ಪಣತಿಯಲ್ಲಿ ಹಾಕಿ ಒಂಭತ್ತು ಬತ್ತಿಗಳು ಪಣತಿಯಲ್ಲಿ ಉರಿಯುವಂತೆ ಮಾಡಿ ಅದನ್ನು ರಸ ಲೇಪಿಸಲಾದ ಹೊಸ ಗಡಿಗೆಯಲ್ಲಿ ಇಡುತ್ತಾರೆ. ಗಡಿಗೆಯ ಮೇಲೆ ಮುಚ್ಚಳ ಒಂದನ್ನು ಮುಚ್ಚುತ್ತಾರೆ. ಬತ್ತಿಗಳು ಸಾಕಷ್ಟು ಕುಡಿ ಹೊಮ್ಮುವಂತೆ ಮಾಡಿರುವದರಿಂದ ತಕ್ಕ ಸಮಯದ ನಂತರ ಮುಚ್ಚಳ ತೆಗೆದಾಗ ಹಚ್ಚೆಸೊಪ್ಪು, ಒಣ ಅಂಬರಿಕೆ ಸೊಪ್ಪು, ಅರಿಷಿಣಗಳಿಂದಾದ ರಸವು ದೀಪದ ಕಪ್ಪಿನೊಡನೆ

---

೧೪೫. C. Sivaramamurti : Chitrasutra of the Vishnudharmottara, Page - 59

೧೪೬. C. Sivaramamurti : Chitrasutra of the Vishnudharmottara, Page - 60

೧೪೭. ಇಲ್ಲಿ ಹೇಳಲಾದ ಜನಪದ ಕಲಾಕಾರರ ಕಪ್ಪು ತಯಾರಿಸುವ ವಿಧಾನಗಳು ಡಾ॥ ಎಸ್. ಸಿ. ಪಾಟೀಲರ " ಕರ್ನಾಟಕದ ಜನಪದ ಚಿತ್ರಕಲೆ " ಎಂಬ ಮಹಾಪ್ರಬಂಧವನ್ನು ಆಧರಿಸಿದೆ.

ಬೆರೆತು ಒಳ್ಳೆಯ ಮಂದವಾದ ಕಪ್ಪು ವರ್ಣ ತಯಾರಾಗುತ್ತದೆ. ದಕ್ಷಿಣ ಕರ್ನಾಟಕ ಭಾಗದಲ್ಲಿ : ವೀಳ್ಯೆದೆಲೆಯ ರಸಕ್ಕೆ ಸೆಗಣಿಯನ್ನು ಸೇರಿಸಿ ಪಾತ್ರೆಗೆ ಬಳಿದು ಹರಳೆಣ್ಣೆ ದೀಪಕ್ಕೆ ಹಿಡಿದು ಕಾಡಿಗೆ ತೆಗೆದು ಇದನ್ನೇ ಲೇಪಿಸಿಕೊಂಡು ಉಪಯೋಗಿಸುತ್ತಾರೆ. ಅಂಚರಿಕೆ ಸೊಪ್ಪಿನ ರಸಕ್ಕೆ ಇದ್ದಿಲು ಪುಡಿಯನ್ನು ಬೆರೆಸಿ ಹಸಿರು ಛಾಯೆಯ ಕಪ್ಪುವರ್ಣ ಪಡೆಯುತ್ತಾರೆ.

ಇವುಗಳಲ್ಲದೇ ಕರ್ನಾಟಕದ ಇನ್ನುಳಿದ ಕೆಲವು ಗ್ರಾಮೀಣ ಪ್ರದೇಶಗಳಲ್ಲಿ ಕಪ್ಪು ವರ್ಣ ತಯಾರಿಸುವ ವಿಧಾನಗಳು ಹೀಗಿವೆ. ಅವರೇ ಸೊಪ್ಪು ಮತ್ತು ವೀಳ್ಯೆದೆಲೆ ರಸಗಳನ್ನು ಹಂಚಿಗೆ ತಿಕ್ಕಿ ಹರಳೆಣ್ಣೆ ದೀಪಕ್ಕೆ ಹಿಡಿದು ಅದರಿಂದ ಬಂದ ಕಪ್ಪಿಗೆ ನೀರು ಇಲ್ಲವೆ ಹಾಲು ಸೇರಿಸಿ ಕಲಸಿಕೊಂಡು ಕಪ್ಪು ತಯಾರಿಸಿಕೊಳ್ಳುತ್ತಾರೆ. ಎಳ್ಳೆಣ್ಣೆ ದೀಪದ ಬತ್ತಿಯಿಂದುಂಟಾದ ದಟ್ಟವಾದ ಕಾಡಿಗೆ ಪುಡಿಗೆ ಹಾಲು ಬೆರೆಸಿ ಕಪ್ಪು ವರ್ಣ ತಯಾರಿಸುತ್ತಾರೆ. ಹಾಗಲರಸ ಇಲ್ಲವೇ ಚಪ್ಪರದವರೇ ರಸವನ್ನು ಮಣ್ಣಿನ ಮಡಿಕೆಯಲ್ಲಿ ಹಾಕಿ ಸ್ವಲ್ಪ ಬೆಚ್ಚಗೆ ಕಾಯಿಸಿದರೆ ಜಿಗುಟಾದ, ಲೋಳೆಯಾದ ಕಪ್ಪು ವರ್ಣ ತಯಾರಾಗುತ್ತದೆ. ಕಿರುಗೋಣಿ ಸೊಪ್ಪಿನ ರಸಕ್ಕೆ ಮತ್ತು ನೆಲ್ಲಿ ಸೊಪ್ಪಿನ ರಸಕ್ಕೆ ಎಳ್ಳೆಣ್ಣೆ ದೀಪದ ಕಪ್ಪನ್ನು ಬೆರೆಸಿ ಕಪ್ಪು ವರ್ಣ ತಯಾರಿಸುತ್ತಾರೆ. ತುಂಬೆ ಸೊಪ್ಪಿನ ರಸಕ್ಕೆ ಹಾಲು ಮತ್ತು ಕೊಬ್ಬರಿ ಎಣ್ಣೆ ಬೆರೆಸಿ ಕಪ್ಪುವರ್ಣ ಪಡೆಯುತ್ತಾರೆ. ಶಿವಮೊಗ್ಗದ ಕಡೆಗೆ ಕಾಚು, ಅಳಲೆಕಾಯಿ, ವೀಳ್ಯೆದೆಲೆಯನ್ನು ಸುಟ್ಟು ಕರಕು ಮಾಡಿ, ಅದಕ್ಕೆ ಚಿಮಣಿ ದೀಪದ ಕಪ್ಪು ಸೇರಿಸಿ ಕಪ್ಪುವರ್ಣ ತಯಾರಿಸುತ್ತಾರೆ.

ಇದಲ್ಲದೇ ಮಧ್ಯಪ್ರದೇಶದ ಕೆಲವು ಆದಿವಾಸಿ ಜನರು ಸುಟ್ಟ ಹಾವಿನ ಚರ್ಮದ ಬೂದಿಯನ್ನು ಅಗಸಿ ಎಣ್ಣೆಯಲ್ಲಿ ಬೆರೆಸಿ ಕಪ್ಪು ತಯಾರಿಸುತ್ತಾರೆ. ಮತ್ತು ದೀಪದ ಕಾಡಿಗೆ ಪುಡಿಗೆ ಹಸಿರೆಲೆಗಳ ರಸ ಕಲೆಸಿಯೂ ಪ್ಪು ಪಡೆಯುತ್ತಾರೆ. ಮಧ್ಯ ಭಾರತದ ಕೆಲವು ಬುಡಕಟ್ಟು ಜನರು ಬೀಟೆ ಮರದ ತೊಗಟೆಗೆ ನೀರು ಹಾಗೂ ಅರಿಷಿಣ ಪುಡಿ ಕೂಡಿಸಿ ಕಪ್ಪುವರ್ಣ ತಯಾರಿಸುತ್ತಾರೆ.[೧೪೮] ಇನ್ನೂ ಕೆಲವರು ನೀಲಗಿರಿ ಮರದ ಎಲೆಯ ರಸಕ್ಕೆ ದೀಪದ ಕಪ್ಪನ್ನು ಕೂಡಿಸಿ ತಯಾರಿಸುತ್ತಾರೆ. ಹಾಗೆಯೇ " ಕರ್ನಾಟಕ ಕೆಲವು ಭಾಗಗಳಲ್ಲಿ ನೇಕಾರಿಕೆಯ ಬಣ್ಣಕಾರರು ಕರಿಯ (ಕಪ್ಪು) ಬಣ್ಣವನ್ನು ಮಡ್ಡಿಬೇರು ಮತ್ತು ಮಡ್ಡಿ ತಪ್ಪಲುಗಳಿಂದ[೧೪೯] ತಯಾರಿಸುತ್ತಿದ್ದರು. " ಕಪ್ಪು ಬಣ್ಣದ ಕುರಿತು ಅದರ ತಯಾರಿಕೆಯ ಬಗೆಗೆ ಶಾಸ್ತ್ರಗ್ರಂಥಗಳು ಒಂದು ರೀತಿಯಲ್ಲಿ ವಿವರಣೆ ನೀಡಿದರೆ ಗ್ರಾಮೀಣ ಜನಪದರು ತಮ್ಮ ಪ್ರದೇಶದಲ್ಲಿ ಸಿಗುವ ನೈಸರ್ಗಿಕ ವಸ್ತುಗಳಿಂದ ಕಪ್ಪು ವರ್ಣತಯಾರಿಸುವ ವಿವರಗಳು ಹೇರಳವಾಗಿ ಸಿಗುತ್ತವೆ. ಜನಪದ ಮತ್ತು ಶಿಷ್ಟಪದ ಭಿತ್ತಿ ಚಿತ್ರಕಲೆಯಲ್ಲಿ ಕಪ್ಪುವರ್ಣ ಬಳಕೆ ಹೇರಳವಾಗಿ ಬಳಕೆಯಾಗಿರುವುದು ಅದರ ಅನಿವಾರ್ಯತೆಯನ್ನು ತೋರಿಸುತ್ತದೆ.

**೩. ಕೆಂಪು ವರ್ಣ :** ಕೆಂಪು ವರ್ಣದಲ್ಲಿ ವಿವಿಧ ರೀತಿಯ ವರ್ಣಛಾಯೆಗಳುಳ್ಳ ಕೆಂಪುಗಳನ್ನು ಪ್ರಾಚೀನರು ಉಪಯೋಗಿಸುತ್ತಿದ್ದರು. ಇದು ಒಂದು ಮಹತ್ವದ ವರ್ಣವಾಗಿತ್ತು. " ಪ್ರಾರಂಭಿಕ ಭಿತ್ತಿಚಿತ್ರಗಳಾದ ಬಂಡೆ ಚಿತ್ರಗಳು ಮತ್ತು ಶಿಲಾಶ್ರಯ ಚಿತ್ರಗಳಲ್ಲಿ ಮೊದಲಿಗೆ ಉಪಯೋಗಗೊಂಡ ವರ್ಣ ಈ ಕೆಂಪು ಬಣ್ಣವಾಗಿದೆ. ಅದನ್ನವರು ಸ್ವಾಭಾವಿಕವಾಗಿ ದೊರೆಯುವ ಕಬ್ಬಿಣದ ಆಕ್ಸೈಡ್, ಮ್ಯಾಂಗನೀಜ್ ಹೆಮಟೈಟ್‌ಗಳಂತಹ ಸಂಯುಕ್ತಗಳಿಂದ

---

೧೪೮. ಡಾ॥ ಹೆಚ್. ಎಮ್. ಮಹೇಶ್ವರಯ್ಯ : ಹಚ್ಚೆ - ಒಂದು ಜನಪದ ಕಲೆ. ಪುಟ - ೧೭

೧೪೯. ಡಾ॥ ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ. ಪುಟ - ೧೫೩

ಪಡೆಯುತ್ತಿದ್ದರು. ಇಲ್ಲವೇ ಕೆಂಪು ಮಣ್ಣು, ಕಲ್ಲುಗಳನ್ನೂ ಇದಕ್ಕಾಗಿ ಬಳಸುತ್ತಿದ್ದರು [೧೫೦] ಎಂಬ ವಿವರಗಳು ತಿಳಿದುಬರುತ್ತವೆ. ಭಿತ್ತಿಚಿತ್ರದ ಕ್ರಮವರಿತ ಬೆಳವಣಿಗೆ ತೊಡಗಿದ ನಂತರ ಆ ಮೂಲಗಳಿಂದ ವರ್ಣ ಪಡೆಯುವ ವಿಧಾನಗಳು ಪರಿಷ್ಕರಣೆಗೊಂಡಿರುವಂತಿದೆ. ಕೆಲವು ವಿಧಾನಗಳು ಪ್ರಾಚೀನ ಗ್ರಂಥದಲ್ಲಿ ಇರುವುದು ಕಂಡುಬರುತ್ತದೆ. ಶಿಲ್ಪರತ್ನವು [೧೫೧] ಕೆಂಪನ್ನು ಪಡೆಯುವ ವಿಧಾನವನ್ನು ತಿಳಿಸುತ್ತದೆ. ಗೈರಿಕಾ ಎಂಬ ಕೆಂಪು ಮಣ್ಣಿನ ಗಟ್ಟಿಯನ್ನು ಕಲ್ಲ ಮೇಲೆ ಕುಟ್ಟಿ ಪುಡಿಮಾಡಿ ಸ್ವಚ್ಛ ನೀರಿನೊಡನೆ ಮಿಶ್ರಣ ಮಾಡಿಕೊಂಡು ಒಂದು ದಿನದವರೆಗೆ ಬಸಿಯಲು ಬಿಟ್ಟು ತಳದಲ್ಲಿ ಸಂಗ್ರಹಗೊಂಡ ಮಂದಮಿಶ್ರಣ ತೆಗೆದುಕೊಂಡು ಅದಕ್ಕೆ ವರ್ಣಬಂಧಕ ಬೆರೆಸಿ ಉಪಯೋಗಿಸಬೇಕು ಮತ್ತು ಈ ಅಂಟು (ಬಂಧಕ) ಸಸ್ಯಸಂಬಂಧಿಯಾಗಿರಬೇಕೆನ್ನುತ್ತದೆ.

" ಸೀಸವು ಒಂದು ರೀತಿಯ ಕೆಂಪಿನಿಂದ ಕೂಡಿದ ವಸ್ತುವಾಗಿದ್ದು, ಇದನ್ನು ಸುಮಾರು ೪೮೦ $^{0}$C ನಲ್ಲಿ ಕಾಯಿಸುವ ವಿಧಾನದಿಂದ ಕೆಂಪುವರ್ಣ ಪಡೆಯುತ್ತಿದ್ದರು. " [೧೫೨] " ಹಳದಿ ಬಣ್ಣದ ಕಲ್ಲನ್ನು ಚನ್ನಾಗಿ ಕುಟ್ಟಿ ಪುಡಿಮಾಡಿ ಅದಕ್ಕೆ ಟೆಂಗಿನ ಕಾಯಿಯ ನೀರು ಬೆರೆಸಿ ಬೆಂಕಿಯಲ್ಲಿ ಕಾಯಿಸಿದರೆ ಕೆಂಪುವರ್ಣ ತಯಾರಾಗುವದೆಂದು ಕಾಶ್ಯಪ ಶಿಲ್ಪಶಾಸ್ತ್ರದಲ್ಲಿ [೧೫೩] ಹೇಳಿದೆ.

ಮಾನಸೋಲ್ಲಾಸವು [೧೫೪] ಕೆಂಪನ್ನು ಕೆಂಪು ಮಣ್ಣಿನಿಂದ ತಯಾರಿಸಿಕೊಳ್ಳಲು ಹೇಳಿದೆಯಲ್ಲದೇ ಈ ಕೆಂಪಿನಿಂದಲೇ ಚಿತ್ರದ ಪ್ರಾರಂಭಿಕ ರೇಖೆಗಳನ್ನು ಎಳೆಯಲೂ ಅದರಲ್ಲಿ ತಿಳಿಸಲಾಗಿದೆ. ಪ್ರಾಚೀನ ಶಿಲ್ಪಶಾಸ್ತ್ರಗಳಲ್ಲಿ ಇಟ್ಟಿಗೆಯ ಕೆಂಪು ಎಂಬ ಇನ್ನೊಂದು ಪ್ರಭೇದ ಹೇಳಿದ್ದು ಅದನ್ನು ಪ್ರತಿಶತ ೯೦ ಅಂಶ ಕಬ್ಬಿಣದ ಆಕ್ಸೈಡ್ ತುಂಬಿರುವ ಅದಿರಿನಿಂದ ಪಡೆಯುತ್ತಿದ್ದರು. [೧೫೫] ಇಂದಿನ ದಿನಗಳಲ್ಲಿ ಈ ಕೆಂಪು ಫೆರಸ್ ಸಲ್ಫೇಟ್ (Ferrous Sulphate) ದಿಂದ ತಯಾರಿಸುತ್ತಾರೆ. ಶಿಲ್ಪರತ್ನ ಗ್ರಂಥದಲ್ಲಿ [೧೫೬] ಮೃದು ರಕ್ತ (ತೆಳು ಕೆಂಪು), ಮಧ್ಯ ರಕ್ತ (ಮಧ್ಯಮ ಕೆಂಪು), ಅತಿ ರಕ್ತ (ದಟ್ಟ ಕೆಂಪು) ಎಂಬುದಾಗಿ ಮೂರು ರೀತಿಯ ಕೆಂಪು ಛಾಯೆಗಳನ್ನು ಹೇಳಿದೆ. ಕೆಂಪು ಆಕರ್ ವರ್ಣವು ಭಿತ್ತಿಚಿತ್ರಗಳಲ್ಲಿ ಹೆಚ್ಚಾಗಿ ಬಳಕೆಯಾಗಿದೆ. ಇದನ್ನು ಸ್ವಾಭಾವಿಕವಾದ ಕೆಂಪು ಮಣ್ಣಿನ ಗಟ್ಟಿಗಳಿಂದ ಪಡೆಯುತ್ತಿದ್ದರು. [೧೫೭] ಇದು ಸಿಲಿಕಾಗಳನ್ನು ಹೊಂದಿದ ಖನಿಜವಸ್ತುವಾಗಿದೆ. ಇದರ ರಾಸಾಯನಿಕ ಸೂತ್ರವು $Fe_2O_3$ ಆಗಿದ್ದು, ಇದು ಪ್ರತಿಶತ ೯೫ ರಷ್ಟು ಪ್ರಮಾಣದ ಫೆರಿಕ್ ಆಕ್ಸೈಡ್ (Ferric Oxide) ಹೊಂದಿದ ಖನಿಜವಾಗಿದೆ. ಉತ್ತಮ ಗುಣಮಟ್ಟದ ಕೆಂಪು ವರ್ಣ ಇದಾಗಿರುವುದರಿಂದ ಭಿತ್ತಿಚಿತ್ರಗಳಲ್ಲೆಲ್ಲ ಈ ಕೆಂಪು ಹೆಚ್ಚಾಗಿ ಬಳಕೆಯಾಗಿದೆ ಎನ್ನಬಹುದು.

" ಬಿಳಿ ಸೀಸವನ್ನು ಕೆಲವು ತಾಸುಗಳವರೆಗೆ ಕಾಯಿಸುವದರಿಂದ ಸ್ವಚ್ಛವಾದ ಹೊಳಪುಳ್ಳ ಕೆಂಪುವರ್ಣ ದೊರೆಯುವದು. ಈ ರೀತಿ ದೊರೆತ ಕೆಂಪು ವರ್ಣಕ್ಕೆ ರಾಸಾಯನಿಕವಾಗಿ ಮೈನಿಯಮ್ (Minium) ಎಂದು ಕರೆಯುವರು. ಈ ವರ್ಣ

೧೫೦. Jayanth Chakravarthi : Techniques in Indian Mural Painting, Page - ೪೮
೧೫೧. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೧೧೯
೧೫೨. Jayanth Chakravarthi : Techniques in Indian Mural Painting, Page - ೪೯
೧೫೩. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ, ಅಧ್ಯಾಯ ೮೮, ಪುಟ - ೬೫೯
೧೫೪. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ, ಭಾಗ II, ಅಧ್ಯಾಯ I, ಶ್ಲೋಕ ೧೫೭
೧೫೫. Jayanth Chakravarthi : Techniques in Indian Mural Painting, Page - ೪೯
೧೫೬. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೧೧೭
೧೫೭. Jayanth Chakravarthi : Techniques in Indian Mural Painting, Page - ೫೦

ಬಿಸುಗಡೆಯಾದಾಗ ಅದಕ್ಕೆ ಇನ್ನೂ ಹೆಚ್ಚಿನ ಉಷ್ಣತೆ ಕೊಟ್ಟಾಗ ಅದು ಚಾಕೋಲೇಟ್ (ಕಂದು ಕೆಂಪು - Scarlet Red) ವರ್ಣಕ್ಕೆ ತಿರುಗುವುದು. ಈ ರೀತಿ ಪಡೆದ ಕೆಂಪನ್ನು ಟೆಂಪರಾ ವಿಧಾನದಲ್ಲಿ ಚಿತ್ರಣಕ್ಕೆ ಬಳಸುತ್ತಿದ್ದರು [೧೫೮] ಎಂದು ವಿದ್ವಾಂಸರು ಗುರುತಿಸಿದ್ದಾರೆ. ಜಲವರ್ಣ ಚಿತ್ರಗಳಲ್ಲಿ ಇಂದೂ ಈ ವರ್ಣ ವ್ಯಾಪಕವಾಗಿ ಬಳಕೆಯಾಗುತ್ತಿದೆ.

ಈ ರೀತಿ ಸೀಸದಿಂದ ಪಡೆದ ಕೆಂಪನ್ನು ಮಧ್ಯ ಏಶಿಯಾದ ಟುನ್ ಹಂಗ್ ಭಿತ್ತಿ ಚಿತ್ರಗಳಲ್ಲಿ ಉಪಯೋಗಿಸಲಾಗಿದೆ ಎಂದು [೧೫೯] ತಿಳಿದುಬರುತ್ತದೆ. ಇಟಾಲಿಯನ್ ಚಿತ್ರಕಾರ " ಸೆನ್ನಿನೋ ಸೆನ್ನಿನಿ " ಕ್ರಿ. ಶ. ೧೪೩೭ ರಲ್ಲಿ ರಚಿಸಿದ " A Treatise on Painting " ಕೃತಿಯಲ್ಲಿ ಸೀಸದಿಂದ ಪಡೆದ ಕೆಂಪುವರ್ಣ ಭಿತ್ತಿ ಚಿತ್ರಕ್ಕೆ ಬಳಸುವ ಕುರಿತು [೧೬೦] ವಿವರಣೆ ದೊರೆಯುತ್ತದೆ. ಮಾನಸೋಲ್ಲಾಸ [೧೬೧] ಮತ್ತು ಶಿಲ್ಪರತ್ನ [೧೬೨] ಗ್ರಂಥಗಳಲ್ಲಿ ಲೋಹಿತ (Lohita) ದಿಂದ ಕೆಂಪುವರ್ಣ ಪಡೆಯಲು ಹೇಳಿದ್ದು ಬಹುಶಃ ಈ ಕೆಂಪು ಲೀಡ್ಸ್ ಅಂದರೆ ಸೀಸದಿಂದ ಪಡೆಯುವದೇ ಆಗಿರಬೇಕೆನಿಸುತ್ತದೆ. ಈ ಕುರಿತು ಇನ್ನೂ ಹೆಚ್ಚಿನ ಅಧ್ಯಯನವಾಗಬೇಕಾಗಿದೆ.

ಮ್ಯಾಡರ್ ಎಂಬ ಸಸ್ಯದಿಂದಲೂ ಕೆಂಪುವರ್ಣವನ್ನು ಬಹಳ ಹಿಂದಿನಿಂದಲೂ ಪಡೆಯಲಾಗುತ್ತಿತ್ತು. [೧೬೩] ಮ್ಯಾಡರ್ ಎಂಬ ಸಸ್ಯದ ಬೇರಿನಿಂದ ದೊರೆಯುತ್ತಿದ್ದ ಕೆಂಪು ವರ್ಣಕ್ಕಾಗಿ ಈ ಮ್ಯಾಡರ್ ಸಸ್ಯವನ್ನು ಫ್ರಾನ್ಸ್, ಹಾಲಂಡ್, ಇಟಲಿ. ಟರ್ಕಿ. ಇಜಿಪ್ತ. ಪರ್ಶಿಯಾ ಹಾಗೂ ಭಾರತಗಳಲ್ಲಿ ವಿಪುಲವಾಗಿ ಸಾಗುವಳಿ ಮಾಡುತ್ತಿದ್ದುದು ಪ್ರಾಚೀನ ಕಾಲದಿಂದಲೇ ತಿಳಿದುಬರುತ್ತದೆ. ಕರ್ನಾಟಕದ ಹಲವು ಭಾಗಗಳಲ್ಲಿ ನೇಕಾರರು ಕೆಂಪು ವರ್ಣ ತಯಾರಿಕೆಗಾಗಿ ಡಾಣಿ, ಪಿಸ್ತಾಪಲ್ ಎಂಬ ವಸ್ತುಗಳನ್ನು ಉಪಯೋಗಿಸುವದು [೧೬೪] ಬಹಳ ಹಿಂದಿನಿಂದಲೂ ರೂಢಿಯಲ್ಲಿತ್ತು. ಅನೇಕ ಶಿಲ್ಪಶಾಸ್ತ್ರಗಳಲ್ಲಿ ಇಂಗಳೀಕ (ಹಿಂಗುಳಿಕ) ದಿಂದ ಕೆಂಪುವರ್ಣ ಪಡೆಯುವದರ ಕುರಿತು ಹೇಳಲಾಗಿದೆ. " ಶಿಲ್ಪರತ್ನದ ಪ್ರಕಾರ [೧೬೫] ಇಂಗಳೀಕದಿಂದ ಕೆಂಪನ್ನು ಪಡೆಯುವ ವಿಧಾನವೆಂದರೆ; ಇಂಗಳೀಕವನ್ನು ಚನ್ನಾಗಿ ಕುಟ್ಟಿ ಪುಡಿಮಾಡಿಕೊಂಡು ನೀರಿನೊಂದಿಗೆ ಅದು ಬೆರೆತು ಹೋಗುವಂತೆ ಕಲಕಿ ಅರ್ಧ ದಿನದವರೆಗೂ ನೆನೆಸಬೇಕು. ನಂತರ ಅದಕ್ಕೆ ಬೇವಿನ ಗಿಡದ ಅಂಟನ್ನು ಬೆರೆಸಿ ಉಪಯೋಗಿಸಬೇಕು " ಎಂದು ಹೇಳಿದೆ.

' ಚಿತ್ರಕಲ್ಪಧ್ರುವಮ್ ' ಎಂಬ ಜೈನ ಗ್ರಂಥದಲ್ಲಿ [೧೬೬] ಕೆಂಪನ್ನು ತಯಾರಿಸುವ ವಿಧಾನ ಹೀಗೆ ಹೇಳಿದೆ ; ಇಂಗಳೀಕವನ್ನು ಸಕ್ಕರೆಯ ನೀರಿನಲ್ಲಿ ಇಲ್ಲವೇ ಸುಣ್ಣದ ನೀರಿನಲ್ಲಿ ಸೇರಿಸಿ ಚನ್ನಾಗಿ ರುಬ್ಬಬೇಕು. ಈ ರುಬ್ಬಿದ ಮಿಶ್ರಣವನ್ನು ಕೆಲವು ಸಮಯದವರೆಗೆ ಬಿಟ್ಟನಂತರ ಈ ಮಿಶ್ರಣದಲ್ಲಿಯ ಇಂಗಳೀಕವು ತಳದಲ್ಲಿ ಗಟ್ಟಿಯಾಗಿ ಕುಳಿತುಕೊಳ್ಳುವುದು. ಮೇಲೆ ಒಂದು ರೀತಿಯ ಹಳದಿ ನೀರು ಸಂಗ್ರಹವಾಗುವುದು. ಈ ನೀರನ್ನು ಎಚ್ಚರಿಕೆಯಿಂದ ಬಸಿದು ತೆಗೆಯಬೇಕು. ತಳದಲ್ಲಿ ಸಂಗ್ರಹವಾದ ಇಂಗಳೀಕದ ಮಿಶ್ರಣಕ್ಕೆ ಅಂಟನ್ನು ಸೇರಿಸಿ ಕೆಂಪು ವರ್ಣ

---

೧೫೮. Jayanth Chakravarthi : Techniques in Indian Mural Painting, Page - ೫೦, ೫೧

೧೫೯. Jayanth Chakravarthi : Techniques in Indian Mural Painting, Page - ೫೧

೧೬೦. Christain J. Herringhan : The Book of Cennino Cennini, Page - 87

೧೬೧. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ, ಭಾಗ II. ಅಧ್ಯಾಯ I, ಶ್ಲೋಕ ೧೫೮

೧೬೨. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೧೧೫

೧೬೩. ಜಿ. ಎ. ಕಲ್ಲೂರ : ಬಣ್ಣಗಳು ಮತ್ತು ಬಣ್ಣ ಹಾಕುವ ಕಲೆ, ಪುಟ - ೧೭

೧೬೪. ಡಾ॥ ಎಸ್. ಸಿ. ಪಾಟೀಲ್ : ಕರ್ನಾಟಕದ ಜನಪದ ಚಿತ್ರಕಲೆ, ಪುಟ - ೧೫೩

೧೬೫. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೧೨೦ ರಿಂದ ೧೨೨

೧೬೬. Motichandra : " Jain Miniature Paintings from Western India, " Page - 78

ತಯಾರಿಸಿಕೊಳ್ಳುವ ವಿವರಗಳು ಸಿಗುತ್ತವೆ. ಹಾಗೆಯೇ ಲಾಕ್ಷಾರಸ (ಅರಗು) ದಿಂದಲೂ ಕೆಂಪು ಕಲ್ಲು, ಮಣ್ಣುಗಳಿಂದಲೂ ಕೆಂಪುವರ್ಣ ಪಡೆಯುವುದು [೧೬೭] ತಿಳಿಯಬರುತ್ತದೆ.

ಕಾಶ್ಯಪ ಶಿಲ್ಪಶಾಸ್ತ್ರವು [೧೬೮] ಕೆಂಪು ವರ್ಣದಲ್ಲಿ ಅರುಣ, ರಕ್ತ, ಶೋಣಿತ, ಪಾಟಲ ಎಂದು ನಾಲ್ಕು ಬಗೆಗಳಿವೆ ಎಂದು ಹೇಳುತ್ತ, ಮೊಲದ ರಕ್ತವನ್ನು ಹೋಲುವ ಬಣ್ಣವನ್ನು ಅರುಣವೆಂದು, ದಾಸವಾಳ ಹೂವಿನಂತೆ ಕೆಂಪಾಗಿರುವುದನ್ನು ರಕ್ತವರ್ಣವೆಂತಲೂ, ಮುತ್ತುಗದ ಹೂವಿನಂತೆ ಇರುವ ಕೆಂಪನ್ನು ಶೋಣವೆಂದೂ, ಅರಗಿನ ಕೆಂಪನ್ನು ಪಾಟಲ ಎಂದೂ ವಿವರಣೆ ನೀಡುತ್ತದೆ. ಕೆಂಪು ವರ್ಣದಲ್ಲಿ ಅರುಣ ಮತ್ತು ಶೋಣ ಎಂಬ ಎರಡು ಭೇದಗಳಿವೆ. ಅರುಣ ಎಂದರೆ ಅರುಣೋದಯದಲ್ಲಿ ಕಾಣುವ ಕೆಂಪಾಗಿದ್ದು, ದಾಸವಾಳ ಹೂವಿನ ಕೆಂಪು ಅರುಣ ಎಂಬ ಪ್ರಬೇಧಕ್ಕೆ ಸೇರುತ್ತದೆ. ಶೋಣವೆಂಬುದು ರಕ್ತದ ಕೆಂಪಾಗಿದ್ದು, ಮುಳ್ಳು ಮುತ್ತುಗದ ಹೂವು, ಅಶೋಕ ಕುಸುಮದ ಬಣ್ಣಗಳು ಈ ಗುಂಪಿನಲ್ಲಿ ಸೇರುತ್ತವೆ. [೧೬೯] ಎಂಬ ಕೆಂಪು ವರ್ಣದ ಪ್ರಭೇದಗಳು ಹೇಳಲ್ಪಟ್ಟಿವೆ.

ಹರ್ಷಚರಿತದಲ್ಲಿ [೧೭೦] ಅನೇಕ ಬಗೆಯ ಕೆಂಪು ವರ್ಣಗಳ ಬಗ್ಗೆ ಹೇಳಲಾಗಿದೆ. ಬಂಧುಕ ಹೂವಿನ ಕೆಂಪು, ಕುಂಕುಮದ ಕೆಂಪು, ರಕ್ತದ ಹಾಗೆ ಕೆಂಪಿರುವ ಘಟಕೀ ಹೂಗಳ ಗೊಂಚಲಿನ ಕೆಂಪು, ಸಿಂಧೂರದ ಹಾಗೆ ಕೆಂಪಿರುವ ಮಂದಾರ ಹೂಗಳ ಕೆಂಪು, ಮಂಜಿಷ್ಠ ಕೆಂಪು, ಮುಂಜಾನೆಯ ಸೂರ್ಯ ಪ್ರಕಾಶದ ಹಾಗೆ ಕೆಂಪಿರುವ ಪಿಂಜಾರಾ ಕೆಂಪು, ಬಾತುಕೋಳಿಯ ಕಾಲಿನ ಹಾಗಿರುವ ತಿಳಿಕೆಂಪುಗಳನ್ನು ಇಲ್ಲಿ ಹೇಳಲಾಗಿದೆ. ಹಾಗೆಯೇ ನಸುಗೆಂಪು ವರ್ಣದ (Brown Colour) ಕಂದುವರ್ಣದ ವಿವಿಧ ಪ್ರಭೇದಗಳನ್ನು ಹೇಳಲಾಗಿದ್ದು [೧೭೧] ಗೊರೂಚನ ಕಂದು, ಹಳದಿ ಛಾಯೆಯ ಕಂದು, ಕೆಂಪು ಪಲ್ಮ ಹಣ್ಣಿನ ಕಂದು, ಒಂಟೆಯ ಕೂದಲಿನ ಕಂದು, ಗೋದಿಯ ಕಂದು ಎಂದು ವಿಂಗಡಿಸಿ ಹೇಳಲಾಗಿದೆ. ಹೀಗೆ ಕೆಂಪು ವರ್ಣವು ಪ್ರಾಚೀನ ಕಾಲದಲ್ಲಿಯೂ ಬಳಕೆಗೊಂಡ ಬಗೆಗೆ ಆಯಾ ಕಾಲದ ಗ್ರಂಥಗಳು ವಿವರಣೆ ನೀಡಿವೆ.

**೪. ನೀಲಿ (Blue) :** ನೀಲಿ ವರ್ಣವನ್ನು ಖನಿಜಮೂಲ ಮತ್ತು ಸಸ್ಯಮೂಲ ಎರಡರಿಂದಲೂ ಪಡೆಯುತ್ತಿದ್ದ ಬಗ್ಗೆ ವಿವರಗಳು ಸಿಗುತ್ತವೆ. " ನೀಲಿಯನ್ನು ' ಇಂಡಿಗೋ ಫೆರಾ ' ಎಂಬ ಸಸ್ಯದಿಂದ ಪಡೆಯುತ್ತಿದ್ದುದು ಭಾರತದಲ್ಲಿ ಪ್ರಾಚೀನ ಕಾಲದಲ್ಲೇ ರೂಢಿಯಲ್ಲಿತ್ತು. " [೧೭೨] ಈ ನೀಲಿ ವರ್ಣಕ್ಕೆ ಭಾರತ ಮೊದಲಿನಿಂದಲೂ ಪ್ರಸಿದ್ಧಿ ಪಡೆದಿತ್ತು. ತೀರ ಇತ್ತೀಚಿನವರೆಗೂ ಬೇರೆ ಬೇರೆ ದೇಶಗಳಿಗೆ ಈ ನೀಲಿ ಭಾರತದಿಂದ ರಫ್ತಾಗುತ್ತಿದ್ದುದನ್ನು ಕಾಣುತ್ತೇವೆ.

ಪ್ರಕೃತಿಯಲ್ಲಿ ದೊರೆಯುವ ನೀಲಿಕಲ್ಲು, ಮಣ್ಣುಗಳಿಂದಲೂ ನೀಲಿವರ್ಣ ಪಡೆಯುತ್ತಿದ್ದರು. ಇವುಗಳಲ್ಲಿ ಮುಖ್ಯವಾಗಿ ' ಲ್ಯಾಪೀಜ್ ಲಾಜುಲಿ ' (Lapis Lazuli) ಎಂಬ ಖನಿಜವಸ್ತು ಪ್ರಮುಖವಾಗಿತ್ತು. 'ಪ್ರಾಚೀನ ಶಿಲ್ಪಶಾಸ್ತ್ರಗಳಲ್ಲಿ ಈ ಲ್ಯಾಪೀಜ್ ಲಾಜುಲಿ ಖನಿಜವನ್ನೇ ' ರಾಜಾವರ್ತ ' ವೆಂದು ಕರೆಯಲಾಗಿದೆ [೧೭೩] ಎಂದು ಡಾ॥ ಮೋತಿಚಂದ್ರ ಅವರು ಗುರುತಿಸಿದ್ದಾರೆ. " ಈ ಲ್ಯಾಪೀಜ್ ಲಾಜುಲಿ ಎಂಬ ಹರಳು ರೂಪದ ವರ್ಣದ್ರವ್ಯವನ್ನು

---

೧೬೭. Jayanth Chakravarthi : Techniques in Indian Mural Painting, Page - ೫೦
೧೬೮. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ, ಅಧ್ಯಾಯ ೮೮, ಪುಟ - ೬೫
೧೬೯. C. Sivaramamurti : Chitrasutra of the Vishnudharmottara, Page - 56
೧೭೦. ಎಚ್. ಪಿಲ್ಸಿನ್ ಬರ್ಗ : ಹರ್ಷಚರಿತ, ಪುಟ - ೨೯೭
೧೭೧. C. Sivaramamurti : Chitrasutra of the Vishnudharmottara, Page - 57
೧೭೨. ಜಿ. ಪಿ. ಕಲ್ಲೂರ : ಬಣ್ಣಗಳು ಮತ್ತು ಬಣ್ಣ ಹಾಕುವ ಕಲೆ, ಪುಟ - ೮
೧೭೩. Motichandra : " Jain Miniature Paintings from Western India, " Page - 82

ಪರ್ಶಿಯಾದಿಂದ ಭಾರತಕ್ಕೆ ಆಮದು ಮಾಡಿಕೊಳ್ಳಲಾಗುತ್ತಿತ್ತು " ಎಂದು ಹೇಳುತ್ತ, " ಜರ್ಮನ್‌ದ ವಿಜ್ಞಾನಿ 'ಅಡೂಲ್ಫ್ ವಾನ್' ಎಂಬವ ಮೊದಲಬಾರಿಗೆ ಕೃತಕ ನೀಲಿವರ್ಣ ತಯಾರಿಸಿದ ನಂತರ ಪ್ರಾಚೀನ ಪದ್ಧತಿಯ ವಿಧಾನದಿಂದ ನೀಲಿವರ್ಣ ಪಡೆಯುವುದು ಕಡಿಮೆಯಾಯಿತು " [೧೨೪] ಎಂದು ಅಭಿಪ್ರಾಯ ಪಡಲಾಗಿದೆ. ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ ಜನಪದ ಚಿತ್ರಕಾರರು ನೀಲಿವರ್ಣವನ್ನು ತುಂಬೆಹೂ ಮತ್ತು ಎಲೆಗಳನ್ನು ಬಳಸಿ ತಯಾರಿಸಿಕೊಳ್ಳುತ್ತಿದ್ದ ವಿಧಾನ [೧೨೫] ಹಿಂದಿನಿಂದಲೇ ರೂಢಿಯಲ್ಲಿತ್ತು.

೫. ಹಳದಿ (Yellow) : ಈ ಹಳದಿ ವರ್ಣವನ್ನು ಕಬ್ಬಿಣದ ಆಕ್ಸೈಡ್‌ನ ಬೇರೆ ಬೇರೆ ಹೈಡ್ರೇಟ್ಸ್‌ಗಳಿಂದ ಪಡೆಯುತ್ತಿದ್ದರು. ಈ ವರ್ಣವು ವ್ಯಾಪಕವಾಗಿ ಜಗತ್ತಿನ ತುಂಬ ಎಲ್ಲ ರೀತಿಯ ಭಿತ್ತಿ ಚಿತ್ರಗಳಲ್ಲೂ ಪ್ರಾಚೀನ ಕಾಲದಿಂದಲೂ ಉಪಯೋಗಿಸುತ್ತ ಬಂದಿದೆ. [೧೨೬] ವಿಷ್ಣುಧರ್ಮೋತ್ತರವು [೧೨೭] ಹಳದಿ ವರ್ಣಕ್ಕಾಗಿ ಹರಿದಾಳವನ್ನು ಉಪಯೋಗಿಸಲು ಹೇಳಿದೆ. ಮಾನಸೋಲ್ಲಾಸವೂ [೧೨೮] ಹರಿದಾಳವನ್ನೇ ಹಳದಿಗಾಗಿ ಸೂಚಿಸಿದೆ. ಶಿಲ್ಪರತ್ನವು [೧೨೯] ಹಳದಿ ವರ್ಣವನ್ನು ಪಡೆಯುವ ಒಂದು ವಿಶಿಷ್ಟ ಸಸ್ಯ ಪರ್ವತಗಳಲ್ಲಿ ನದಿಯ ದಂಡೆಗಳಲ್ಲಿ ಮತ್ತು ಇತರ ಕೆಲವು ನಿರ್ದಿಷ್ಟ ಸ್ಥಳಗಳಲ್ಲಿ ಹುಟ್ಟುತ್ತದೆ ಎಂದು ಹೇಳುತ್ತದೆ. ಇದರಿಂದ ಹಳದಿ ವರ್ಣ ತಯಾರಿಸುವ ವಿಧಾನವನ್ನು ಅದು ಹೀಗೆ ಹೇಳುವುದು. ಪರ್ವತ ಪ್ರದೇಶಗಳಲ್ಲಿ. ನದಿ ದಂಡೆಗಳಲ್ಲಿ ಹುಟ್ಟುವ ವಸ್ತುವನ್ನು ಸಂಗ್ರಹಿಸಿ ಶುದ್ಧ ನೀರಿನಿಂದ ತೊಳೆಯಬೇಕು. ನಂತರ ಕಲ್ಲುಮೇಲೆ ಪುಡಿ ಮಾಡಬೇಕು. ಆಮೇಲೆ ಈ ಪುಡಿಯನ್ನು ಸ್ವಚ್ಛವಾದ ನೀರಿನಲ್ಲಿ ಬೆರೆಸಿ ಚನ್ನಾಗಿ ಕಲಕಬೇಕು. ಕೆಲಸಮಯದವರೆಗೆ ಈ ಮಿಶ್ರಣವನ್ನು ಹಾಗೇ ಬಿಡಬೇಕು. ಸ್ವಲ್ಪ ಸಮಯ ಕಳೆದ ನಂತರ ಶುದ್ಧವಾದ ವರ್ಣದ್ರವ್ಯ ಮೇಲೆ ತೇಲುತ್ತಿರುತ್ತದೆ. ಕಶ್ಮಲದಿಂದ ಕೂಡಿದ ಕಚ್ಚಾವಸ್ತು ಪಾತ್ರೆಯ ಕೆಳಗಡೆ ಸಂಗ್ರಹಗೊಂಡಿರುತ್ತದೆ. ನಿಧಾನವಾಗಿ ಈ ಪಾತ್ರೆಯಲ್ಲಿ ಮೇಲೆ ತೇಲುತ್ತಿರುವ ವರ್ಣದ್ರವ್ಯವನ್ನು ಬೇರೆ ಪಾತ್ರೆಗೆ ಬಸಿದುಕೊಳ್ಳಬೇಕು. ಈ ವಿಧಾನವನ್ನು ನಮಗೆ ಬೇಕಾಗುವಷ್ಟು ವರ್ಣದ್ರವ್ಯ ಸಂಗ್ರಹವಾಗುವವರೆಗೂ ಪುನರಾವರ್ತಿಸುತ್ತಿರಬೇಕು. ಈ ರೀತಿ ಸಂಗ್ರಹಗೊಂಡ ಶುದ್ಧವಾದ ವರ್ಣದ್ರವ್ಯವನ್ನು ಮಣ್ಣಿನ ಪಾತ್ರೆಯಲ್ಲಿ ಸಂಗ್ರಹಿಸಿ ಬೇಸಿಗೆಯ ಬಿಸಿಲಿನಲ್ಲಿ ಆರಿಸಲು ಇಡಬೇಕು. ಅದು ಆರಿದ ನಂತರ ತೆಗೆದಿಟ್ಟುಕೊಂಡು ನಮಗೆ ಬೇಕಾದಾಗ ಅಂಟುದ್ರಾವಕ ಬೆರೆಸಿ ಉಪಯೋಗಿಸಬೇಕು. ಎಂದು ಅದು ಹೇಳಿದೆ.

ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ ನೇಕಾರರು ಹಳದಿ ವರ್ಣಕ್ಕೆ ಕಪಿಲ ಬೀಜಗಳನ್ನು ತೀರ ಇತ್ತೀಚಿನವರೆಗೂ ಉಪಯೋಗಿಸುತ್ತಿದ್ದರು. [೧೩೦] ಎಂದು ತಿಳಿದುಬರುತ್ತದೆ. ಕಾಶ್ಯಪ ಶಿಲ್ಪಶಾಸ್ತ್ರದಲ್ಲಿ [೧೩೧] ನಾಲ್ಕು ಬಗೆಯ ಹಳದಿ ವರ್ಣಗಳನ್ನು ಹೇಳಲಾಗಿದೆ. ಸ್ವರ್ಣ. ಪಿಶಂಗ. ಪೀತ. ಹರಿತ. ಬಂಗಾರದಂತೆ ಇರುವ ಅರಿಷಿಣ ಬೇರಿನ ಬಣ್ಣವುಳ್ಳದ್ದು ಹರಿತ ಎಂದೂ. ಅರಿದಾಳದ ಬಣ್ಣದ ಹಳದಿಯನ್ನು ಪೀತ ಎಂದು ಹೇಳಲಾಗಿದೆ. ಅಲ್ಲದೇ ಹಳದಿ ವರ್ಣದಲ್ಲಿ ಇನ್ನೂ ಎರಡು ವಿಧಗಳನ್ನು ಗುರುತಿಸಲಾಗಿದ್ದು. [೧೩೨] ಹರಿತ. ಪೀತ ಎಂದು ಅವುಗಳನ್ನು ಕರೆಯಲಾಗಿದೆ.

---

೧೨೪. Jayanth Chakravarthi : Techniques in Indian Mural Painting, Page - ೫೧
೧೨೫. ಡಾ. ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ. ಪುಟ - ೧೯
೧೨೬. Jayanth Chakravarthi : Techniques in Indian Mural Painting, Page - ೫೦
೧೨೭. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ. ಭಾಗ III. ಅಧ್ಯಾಯ ೪೦. ಶ್ಲೋಕ ೧೬
೧೨೮. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ. ಭಾಗ II. ಅಧ್ಯಾಯ I. ಶ್ಲೋಕ ೧೬೧ - ೧೬೨
೧೨೯. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ. ಭಾಗ I. ಅಧ್ಯಾಯ ೪೬. ಶ್ಲೋಕ ೨೯
೧೩೦. ಡಾ॥ ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ. ಪುಟ - ೧೫೩
೧೩೧. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ. ಅಧ್ಯಾಯ ೮೮. ಪುಟ - ೬೨೯
೧೩೨. C. Sivaramamurti : Chitrasutra of the Vishnudharmottara, Page - 60

ಮಣ್ ಶಿಲೆಯ ಬಣ್ಣವೂ. ಅರಿದಳದ ವರ್ಣವೂ ಹರಿತ ಹಳದಿ ವರ್ಣಕ್ಕೆ ಸೇರಿದರೆ, ಅರಿಷಿಣ ಹಳದಿ ಮತ್ತು ಕುಂಕುಮ ಕೇಸರಿಯ ಹಳದಿ ಛಾಯೆಯು ಪೀತ ಎನ್ನಿಸಿಕೊಳ್ಳುವವು. ಕರ್ನಾಟಕದ ಉತ್ತರ ಭಾಗದಲ್ಲಿನ ಜನಪದ ಚಿತ್ರಕಾರರು ಉರ್ಜಿಕಾಯಿ ಅಥವಾ ಬೆಂಗಾಲಿಕಾಯಿ ಎಂದು ಕರೆಯುವ ಗಿಡದ ಕಾಯಿಯ ರಸ, ಮತ್ತು ಹೂವಿನಿಂದಲೂ ಹಳದಿ ವರ್ಣ ಪಡೆಯುತ್ತಿದ್ದರು. [೧೮೩]

**೬. ಹಸಿರು (Green ) :** ಹಸಿರು ವರ್ಣವನ್ನು ನೀಲಿ ಮತ್ತು ಹಳದಿ ವರ್ಣದ ಮಿಶ್ರಣದಿಂದ ಸಾಮಾನ್ಯವಾಗಿ ಪಡೆಯುತ್ತಿದ್ದರಾದರೂ ಕೆಲವು ಖನಿಜ ವಸ್ತುಗಳಿಂದ. ಕಲ್ಲು-ಮಣ್ಣುಗಳಿಂದ, ವಿವಿಧ ಸಸ್ಯಗಳಿಂದಲೂ ಪಡೆಯುತ್ತಿದ್ದರು ಎಂಬ ವಿವರಗಳು ದೊರೆಯುತ್ತವೆ. ಹಸಿರು ವರ್ಣವನ್ನು ಪಡೆಯುತ್ತಿದ್ದ ಖನಿಜದ ಮೂಲವಸ್ತುಗಳೆಂದರೆ, ಖನಿಜದ ಹರಳು ರೂಪದ ಟೆರ್ರಾವರ್ಟ (Terraverte). ಮಲಚೈಟ್ (Malachite). ವೆರ್ಡ್‌ಮೊಂಟಾನಾ (Verde Montana), ಕ್ರಾಯಿಸೋಕೋಲ್ಲಾ (Chrysocolla) ಮತ್ತು ಅಜುರೈಟ್ (Azurite) ಗಳಾಗಿವೆ [೧೮೪] ಎಂದು ತಿಳಿದುಬರುವುದು. ಈ ಅಜುರೈಟ್ ಎಂಬುದು ಒಂದು ತಾಮ್ರದ ಕಾರ್ಬೋನೇಟ್ ಆಗಿದೆ.

ಉತ್ತರ ಕರ್ನಾಟಕದ ಕೆಲವು ಕಡೆಗೆ ಜನಪದ ಕಲಾವಿದರು ಹಸಿರು ವರ್ಣವನ್ನು ತಯಾರಿಸಲು ಅಳ್ಳಿಕಾಯಿ (ಅರಳೆಕಾಯಿ). ಕಾಕಡಸಿಂಬಿಗಳನ್ನು ಉಪಯೋಗಿಸುತ್ತಾರೆ [೧೮೫] ಎನ್ನಲಾಗಿದೆ. ಹಸಿರು ವರ್ಣದಲ್ಲಿ ವಿವಿಧ ಪ್ರಕಾರಗಳಿದ್ದು ಗಿಳಿಯ ಹಸಿರು. ಪ್ಲಾಂಟೇನ್ ಎಲೆಯ ಹಸಿರು, ಪಚ್ಚೆಯ ಹಸಿರು [೧೮೬] ಎಂಬ ಹಸಿರು ಬಣ್ಣಗಳು ಹೇಳಲ್ಪಟ್ಟಿವೆ. ಒಟ್ಟಾರೆಯಾಗಿ ಪ್ರಾಚೀನರು ಬಿಳಿ. ಕಪ್ಪು. ಕೆಂಪು. ಹಳದಿ. ಹಸಿರು ವರ್ಣಗಳನ್ನು ಮೂಲ ವರ್ಣಗಳೆಂದೂ ಅವುಗಳನ್ನು ಶುದ್ಧ ವರ್ಣಗಳೆಂದು ಕರೆದಿದ್ದಾರೆ. ಅವುಗಳ ತಯಾರಿಕಾ ವಿಧಿ-ವಿಧಾನದ ಪ್ರಕಾರಗಳ ಕುರಿತು ಹೇರಳವಾಗಿ ಶಾಸ್ತ್ರಗ್ರಂಥಗಳೂ ವಿವರಿಸಿವೆ. ಭಿತ್ತಿ ಚಿತ್ರದಲ್ಲಿ ಈ ಎಲ್ಲ ವರ್ಣಗಳು ಅಲ್ಲಲ್ಲಿ ಬಳಕೆಯಾಗಿವೆ. ಇವುಗಳ ಮಿಶ್ರಣ ರೀತಿಯೂ ಕುತೂಹಲಕಾರಿಯಾಗಿರುವುದನ್ನು ಕಾಣುತ್ತೇವೆ.

**೭. ಮಿಶ್ರ ಬಣ್ಣಗಳು :** ಭಾರತೀಯ ಶಿಲ್ಪಶಾಸ್ತ್ರಗಳು ಭಿತ್ತಿ ಚಿತ್ರದ ಮಿಶ್ರ ಬಣ್ಣಗಳ ಬಗ್ಗೆ ಅವುಗಳ ಗುಣಧರ್ಮದ ಬಗ್ಗೆ ಯಾವ ಯಾವ ವರ್ಣ ಕೂಡಿಸಿದರೆ ಯಾವ ವರ್ಣ ಬರುತ್ತದೆ ಎಂಬ ವಿವರಣೆಯನ್ನು ನೀಡಿವೆ. ಮಾನಸೋಲ್ಲಾಸವು [೧೮೭] ಮಿಶ್ರ ವರ್ಣಗಳ ಬಗ್ಗೆ ಹೇಳುತ್ತ ಯಾವ ವರ್ಣದ ಮಿಶ್ರಣದಿಂದ ಯಾವ ವರ್ಣ ಬರುತ್ತದೆ ಎಂಬುದರ ಪಟ್ಟಿಯನ್ನು ಕೊಟ್ಟಿದೆ.

* ಇಂಗಳೀಕದ ಕೆಂಪು ಮತ್ತು ಶಂಖದ ಬಿಳಿ ಕೂಡಿದರೆ ಕೆಂಪುಕಮಲದ ಹೂವಿನ ವರ್ಣ.
* ಲಾಕ್ಷಾರಸದ ಕೆಂಪು ಮತ್ತು ಶಂಖದ ಬಿಳಿ ಸೇರಿಸಿದರೆ ರಸ (Rasa) ಎಂಬ ಗಿಡದ ವರ್ಣವಾಗುವುದು.
* ಮಾಸಲು ಕೆಂಪು ಮತ್ತು ಶಂಖದ ಬಿಳಿ ಸೇರಿಸಿದರೆ ಗೌರವರ್ಣ.
* ಹಳದಿ ಮತ್ತು ಶಂಖದ ಬಿಳಿ ಕೂಡಿದರೆ ಕೋರಸಾ ಎಂಬ ಗಿಡದ ವರ್ಣವಾಗುವುದು.

---

೧೮೩. ಡಾ॥ ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪುಟ - ೧೫೩

೧೮೪. Jayanth Chakravarthi : Techniques in Indian Mural Painting, Page - ೫೩

೧೮೫. ಡಾ॥ ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪುಟ - ೧೫೩

೧೮೬. C. Sivaramamurti : Chitrasutra of the Vishnudharmottara, Page - 57

೧೮೭. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ. ಭಾಗ II, ಅಧ್ಯಾಯ I, ಶ್ಲೋಕ ೧೫೮ - ೧೬೪

* ದೀಪದ ಕಪ್ಪು ಮತ್ತು ಶಂಖದ ಬಿಳಿ ಸೇರಿಸಿದಾಗ ಪಾರಿವಾಳದ ಬೂದುವರ್ಣವಾಗುವುದು.
* ಬೂದು ವರ್ಣ ಮತ್ತು ರಾಜಾವರ್ತ ಸೇರಿಸಿದರೆ ಅತಸೀ ಹೂವಿನ ಬಣ್ಣವಾಗುವುದು.
* ಇಂಡಿಗೋನೀಲಿ ಮತ್ತು ಹಳದಿ ವರ್ಣ ಸೇರಿಸಿದಾಗ ಹಸಿರು ವರ್ಣ ಬರುವುದು.
* ದೀಪದ ಕಪ್ಪು ಮತ್ತು ಮಾಸಲು ಕೆಂಪು ಸೇರಿಸಿದಾಗ ದಟ್ಟಕಂದು ಬಣ್ಣವಾಗುವುದು.
* ಲಾಕ್ಷಾರಸದ ಕೆಂಪು ಮತ್ತು ದೀಪದ ಕಪ್ಪು ಕೂಡಿದಾಗ ಪಾಟಲ ಎಂಬ ಕಂದು ವರ್ಣವಾಗುವುದು.
* ಲಾಕ್ಷಾರಸದ ಕೆಂಪು ಮತ್ತು ನೀಲಿ ಕೂಡಿಸಿದಾಗ ದಟ್ಟ ಮಾವು (Purple) ವರ್ಣವಾಗುವುದು. ಇದು ಜಂಬು ಹಣ್ಣಿನ (ನೀರಲಹಣ್ಣು) ವರ್ಣವಾಗುತ್ತದೆ.

ಭರತನ ನಾಟ್ಯಶಾಸ್ತ್ರವು[೧೮೮] ಮೂಲವರ್ಣಗಳು ಮತ್ತು ಮಿಶ್ರವರ್ಣಗಳ ಕುರಿತು ಚರ್ಚಿಸಿದೆಯಲ್ಲದೇ ಶಿಸ್ತುಬದ್ಧವಾದ ಮೂಲವರ್ಣಗಳ ಮತ್ತು ಮಿಶ್ರವರ್ಣಗಳ ವಿವರ ಕೊಟ್ಟಿದೆ. ಅದರಲ್ಲಿ ಬಿಳಿ, ನೀಲಿ, ಹಳದಿ, ಕೆಂಪು ವರ್ಣಗಳನ್ನು ಮೂಲವರ್ಣಗಳೆಂದು ಹೇಳಿ ಅವುಗಳು ಒಂದನ್ನೊಂದು ಕೂಡಿದಾಗ ಉಂಟಾಗುವ ಮಿಶ್ರವರ್ಣಗಳನ್ನು ಓಗೆ ಹೇಳಿದೆ. ನೀಲಿ ಮತ್ತು ಕೆಂಪು ಸಮಭಾಗದಲ್ಲಿ ಬೇರೆತರೆ ಮಾವ್ (Purple) ವರ್ಣ, ಹಳದಿ ಮತ್ತು ನೀಲಿ ಸಮಭಾಗದಲ್ಲಿ ಬೆರೆಸಿದರೆ ಹಸಿರು ವರ್ಣ ಉಂಟಾಗುವದೆಂದೂ ಮುಂತಾಗಿ ಹೇಳಿದೆ.

ಶಿಲ್ಪರತ್ನವು[೧೮೯] ಮಿಶ್ರವರ್ಣಗಳ ಕುರಿತಾಗಿ ಈ ಕೆಳಗಿನಂತೆ ಮಾಹಿತಿ ಒದಗಿಸಿದೆ.

* ಬಿಳಿವರ್ಣ ಮತ್ತು ಕೆಂಪು ಸೇರಿಸಿದಾಗ ಗೌರವರ್ಣ ಉಂಟಾಗುವುದು.
* ಬಿಳಿ, ದೀಪದ ಕಪ್ಪು, ಮತ್ತು ಹಳದಿ ಈ ಮೂರು ವರ್ಣ ಸೇರಿಸಿದಾಗ ಸಾರ (Sara) ಎಂಬ ಗಿಡದ ಹಳದೀ ಮಿಶ್ರಿತ ಬೂದುವರ್ಣವಾಗುವುದು.
* ಬಿಳಿ ಮತ್ತು ಕಪ್ಪು ಸಮ ಪ್ರಮಾಣದಲ್ಲಿ ಕೂಡಿದಾಗ ಆನೆಯ ಬೂದು ಬಣ್ಣ ಬರುವುದು.
* ಕೆಂಪು ಮತ್ತು ಹಳದಿ ಸಮಪ್ರಮಾಣದಲ್ಲಿ ಸೇರಿಸಿದಾಗ ಬಕುಳದ ಹಣ್ಣಿನ ವರ್ಣವಾಗುವುದು (Orange).
* ಹಳದಿಯು ಬಿಳಿಯ ವರ್ಣದ ಜೊತೆಗೆ ೧/೨ ಭಾಗದಷ್ಟು ಪ್ರಮಾಣದಲ್ಲಿ ಬೆರೆತಾಗ ಹಳದಿ ಮಿಶ್ರಿತ ಬಿಳಿ ವರ್ಣ ಬರುವುದು (ಪಿಂಗಳ ಹಳದಿ).
* ಹಳದಿ ಮತ್ತು ಕಪ್ಪು ವರ್ಣಗಳು ಸಮಪ್ರಮಾಣದಲ್ಲಿ ಬೆರೆತಾಗ ಮನುಷ್ಯನ ದೇಹದ ವರ್ಣವಾಗುವುದು.
* ಹಳದಿ ವರ್ಣವು ಹೆಚ್ಚು ಪ್ರಮಾಣದ ನೀಲಿ ವರ್ಣದೊಂದಿಗೆ ಬೆರೆತಾಗ ಗಿಳಿಯ ರೆಕ್ಕೆಯ ವರ್ಣವಾಗುವುದು.
* ಲಾಕ್ಷಾರಸದ ಕೆಂಪು ಮತ್ತು ಕಪ್ಪು ಬೆರೆತಾಗ ಜಂಭು ಫಲದ ಬಣ್ಣ ಉಂಟಾಗುವುದು.
* ಲಾಕ್ಷಾರಸದ ಕೆಂಪು ಮತ್ತು ಬಿಳಿ ಸಮಪ್ರಮಾಣದಲ್ಲಿ ಬೆರೆತಾಗ ಉಚ್ಚಕುಲದ ಜನರ ವರ್ಣವಾಗುವುದು ಎಂದು ಹೇಳಲಾಗಿದೆ.

---

೧೮೮. ಮನಮೋಹನ ಘೋಷ (ಸಂ.) : ಭರತನ ನಾಟ್ಯಶಾಸ್ತ್ರ, ಭಾಗ I, ಪುಟ - ೧೯೬

೧೮೯. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೧೩೪ - ೧೪೨

* ಕಪ್ಪು ಮತ್ತು ನೀಲಿ ಬೆರೆತಾಗ ಕೂದಲಿನ ವರ್ಣವಾಗುವುದು.
* ನೀಲಿ ಮತ್ತು ಬಿಳಿ ಕೂಡಿಸಿದರೆ ಹೊಗೆಯ ವರ್ಣವಾಗುವುದು.
* ಹಳದಿ ಮತ್ತು ನೀಲಿ ಕೂಡಿಸಿದರೆ ಹಸಿರು ವರ್ಣವಾಗುವುದು.
* ಕೆಂಪು ಮತ್ತು ನೀಲಿ ಕೂಡಿಸಿದರೆ ಮಾವ್ (Purple) ವರ್ಣವಾಗುವುದು ಎಂದು ಬಾಣನ ಕಾದಂಬರಿಯಲ್ಲಿರುವ ಮಿಶ್ರವರ್ಣಗಳ ಬಗೆಗಿನ ವಿವರವನ್ನು ಸಿ. ಶಿವರಾಮ ಮೂರ್ತಿಯವರು [೯೦] ಪ್ರಸ್ತಾಪಿಸುತ್ತಾರೆ.

ಕಾಶ್ಯಪ ಶಿಲ್ಪಶಾಸ್ತ್ರದಲ್ಲಿ [೯೧] ಮಿಶ್ರವರ್ಣಗಳ ಕುರಿತು ಈ ಕೆಳಗಿನ ವಿವರಣೆ ಇದೆ. ಒಂದು ವರ್ಣದೊಂದಿಗೆ ಇನ್ನೊಂದು ವರ್ಣವು ಬೆರೆತು ಬೇರೊಂದು ಪ್ರತ್ಯೇಕವಾದ ವರ್ಣ ಸಿದ್ಧವಾಗುತ್ತದೆ. ಹೀಗೆ ಸಿದ್ಧವಾದ ವರ್ಣವನ್ನು ಸಂಸ್ಕಾರ ವರ್ಣವೆಂದು ಹೇಳುತ್ತದೆ. ಅಲ್ಲದೆ ಸಂಸ್ಕಾರ ವರ್ಣಗಳ ಮಿಶ್ರಣದ ವಿವರ ನೀಡುತ್ತದೆ. "ಬಿಳುಪು ಮತ್ತು ಕೆಂಪು ಸಮಭಾಗದಲ್ಲಿ ಬೆರೆಸಿದರೆ ಗೌರವರ್ಣವಾಗುತ್ತದೆ. ಬಿಳುಪು ಮತ್ತು ಹಳದಿ ಎರಡೂ ಸಮಭಾಗದಲ್ಲಿ ಬೆರೆತಾಗ ರೂಪಗೊಳ್ಳುವ ವರ್ಣ ಕರ್ಪೂರಕ. ಬಿಳುಪು ಮತ್ತು ಕಪ್ಪು ಸಮಭಾಗದಲ್ಲಿ ಸೇರಿದಾಗ ಧೂಮ್ರ ವರ್ಣವಾಗುತ್ತದೆ." ಎಂಬ ವಿವರಣೆಯಿದೆ.

ಬಿಳುಪು. ಕೆಂಪು. ಹಳದಿ ಈ ಮೂರನ್ನೂ ಸಮಪಾಲು ಮಿಶ್ರ ಮಾಡಿದರೆ ಅದರಿಂದ ಬರುವ ವರ್ಣವನ್ನು ಮಿಶ್ರವರ್ಣವೆನ್ನುತ್ತಾರೆ. ಹೀಗೆ ಕೆಂಪು. ಹಳದಿ ಮತ್ತು ಕಪ್ಪು ವರ್ಣವನ್ನು ಮಿಶ್ರವರ್ಣವೆನ್ನುತ್ತಾರೆ. ಹೀಗೆ ಕೆಂಪು, ಹಳದಿ ಮತ್ತು ಕಪ್ಪು ವರ್ಣಗಳನ್ನೂ ಸಮಪಾಲಿನಲ್ಲಿ ಬೆರೆಸಿದರೆ ಉಂಟಾಗುವ ವರ್ಣವನ್ನು ಮಿಶ್ರವರ್ಣವೆಂದೇ ಹೇಳಲಾಗಿದೆ. ಹಳದಿ ಕೆಂಪು ಸಮಭಾಗ ಬೆರೆಸಿದಾಗ ವಕುಳದ (ಹವಳ) ವರ್ಣವೆಂದು, ಹಳದಿ ಒಂದು ಭಾಗಕ್ಕೆ ಎರಡು ಭಾಗದಷ್ಟು ಕೆಂಪು ಸೇರಿಸಿದಾಗ ರಕ್ತವರ್ಣ ಅಥವಾ ಅತೀ ಕೆಂಪು ಎಂದೂ ಇದನ್ನು ಬೆಂಕಿಯ ಕೆನ್ನಾಲಿಗೆಯ ಕೆಂಪು (ಅಗ್ನಿವರ್ಣ) ಎಂದೂ ಹಾಗೇ ಹಳದಿಯ ಎರಡು ಭಾಗಕ್ಕೆ ಒಂದು ಭಾಗ ಬಿಳಿ ಬಣ್ಣವನ್ನು ಕಲೆಸಿದಾಗ ಅದು ಪಿಂಗಳ ವರ್ಣವೆಂತಲೂ. ಎರಡು ವರ್ಣಗಳನ್ನು ಸಮಭಾಗದಲ್ಲಿ ಬೆರೆಸಿದಾಗ ರೂಪುಗೊಳ್ಳುವ ವರ್ಣವನ್ನು ದ್ವಿವರ್ಣ ಎಂದು ಕಾಶ್ಯಪ ಶಿಲ್ಪಶಾಸ್ತ್ರ ವಿವರಣೆ ಕೊಡುತ್ತದೆ. ಅಲ್ಲದೆ ವರ್ಣ ಮಿಶ್ರಣದ ಅನೇಕ ಅಂಶಗಳು ಇಲ್ಲಿ ವ್ಯಕ್ತವಾಗಿವೆ.

"ಕೆಂಪು ಒಂದು ಭಾಗ ಹಳದಿ ಎರಡು ಭಾಗ ಸೇರಿಸಿದಾಗ ಅದು ಗುಡ (ಬೆಲ್ಲ) ವರ್ಣವಾಗುತ್ತದೆ. ಕೆಂಪು ಅರ್ಧಭಾಗ. ಹಳದಿ ಒಂದುಭಾಗ ಸೇರಿಸಿದರೆ ಕಪಿಲ ವರ್ಣವಾಗುತ್ತದೆ. ಬಿಳುಪು ಒಂದು ಭಾಗ ಕೆಂಪು ಕಾಲುಭಾಗ ಕೂಡಿದಾಗ ಅದು ಕರ್ಪೂರದ ವರ್ಣವಾಗುವುದು. ಇದಕ್ಕೇ ನೀಲಿ ವರ್ಣ ಕೂಡಿಸಿದಾಗ ಧಾನ್ಯಾಂಕುರ ವರ್ಣ (ಮೊಳಕೆಯ ಬಣ್ಣ) ಬರುತ್ತದೆ. ಹಸಿರು ಬಣ್ಣಕ್ಕೆ ಅದರ ಪ್ರಮಾಣದ ಅರ್ಧಭಾಗ ಅರಿತಾಳ ಮತ್ತು ಕುಂಕುಮ ವರ್ಣ ಸೇರಿಸಿದರೆ ಪಯಿರಿನ (ಪೈರು) ಹಸಿರು ಬಣ್ಣವಾಗುವುದು. ಕಪ್ಪು ಮತ್ತು ಲಾಕ್ಷಾರಸದ ಕೆಂಪು ಸಮಭಾಗದಲ್ಲಿ ಮಿಶ್ರ ಮಾಡಿದರೆ ಜಂಭು ಫಲದ ವರ್ಣ ರೂಪುಗೊಳ್ಳುತ್ತದೆ. ಜಾಜಿಕಾಯಿ ಮತ್ತು ಲಾಕ್ಷಾರಸ ಸಮಭಾಗದಲ್ಲಿ ಸೇರಿಸಿದರೆ ಲೋಹಿತ ವರ್ಣ ಉಂಟಾಗುತ್ತದೆ. ಕಪ್ಪು ಮತ್ತು ನೀಲಿ ಸಮಭಾಗದಲ್ಲಿ ಸೇರಿದರೆ ಕೂದಲಿನ ವರ್ಣ ಬರುವುದು. ಸಸ್ಯ ಶ್ಯಾಮಲ ವರ್ಣಕ್ಕೆ ರಕ್ತ ವರ್ಣವು ಬೆರೆತರೆ ಮಾಂಜಿಷ್ಠ ವರ್ಣ ಬರುತ್ತದೆ. ಕಪ್ಪು ವರ್ಣಕ್ಕೆ ಅದರ ಎರಡರಷ್ಟು ಹಳದೀ ವರ್ಣ ಬೆರೆಸಿದಾಗ ಮನುಷ್ಯನ ಬಣ್ಣ ಬರುತ್ತದೆ. ಈ ಮನುಷ್ಯ ವರ್ಣಕ್ಕೆ ಕೆಂಪು ವರ್ಣವನ್ನು ಹೆಚ್ಚು ಪ್ರಮಾಣದಲ್ಲಿ ಬೆರೆಸಿದಾಗ ಸಸ್ಯಗಳ ಹಸಿರು ರೂಪುಗೊಳ್ಳುತ್ತದೆ.

---

೯೦. C. Sivaramamurti : Chitrasutra of the Vishnudharmottara, Page - 61

೯೧. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ, ಅಧ್ಯಾಯ ೮೮, ಪುಟ - ೬೫೯

ಬಿಳಿವರ್ಣದಲ್ಲಿ ಅದರ ಭಾಗದ ಅರ್ಧದಷ್ಟು ಕಪ್ಪು, ಕಾಲುಭಾಗದಷ್ಟು ಕೆಂಪು ಬೆರೆಸಿದಾಗ ಮತ್ಸ್ಯ ವರ್ಣ ದೊರೆಯುತ್ತದೆ. ಬಿಳುಪು ಒಂದುಭಾಗ, ಹಳದೀ ಮೂರುಭಾಗ ಬೆರೆತಾಗ ಕಲ್ಹಾರ ಪುಷ್ಪದ ವರ್ಣವಾಗುತ್ತದೆ. ಕಪ್ಪು ಒಂದು ಭಾಗ, ಹಳದಿ ಎರಡು ಭಾಗ ಬೆರೆಸಿದಾಗ ನೀರಿನ ಬಣ್ಣವಾಗುವುದು. ಅರಿತಾಳ ಹಳದಿ ಮತ್ತು ಕಪ್ಪು ಸಮಭಾಗದಲ್ಲಿ ಬೆರೆತಾಗ ಗಿಳಿಹಸಿರು ವರ್ಣ ಉಂಟಾಗುತ್ತದೆ ಎಂಬಂತಹ ವಿವರಗಳನ್ನು ಕಾಶ್ಯಪ ಶಿಲ್ಪಶಾಸ್ತ್ರವು ಹೊಂದಿದೆ.

**ಬಹುಸಾರ ಮತ್ತು ಅಲ್ಪಸಾರ ವರ್ಣ :** ಒಂದು ವರ್ಣದ ಕಡಿಮೆ ಭಾಗದೊಂದಿಗೆ ಬೇರೆವರ್ಣದ ಅಧಿಕ ಭಾಗವನ್ನು ಸೇರಿಸಿದಾಗ ಅದನ್ನು ಬಹುಸಾರವರ್ಣವೆನ್ನುತ್ತಾರೆ. ಅದೇ ವರ್ಣದ ಅಧಿಕ ಭಾಗಕ್ಕೆ ಬೇರೆಯ ವರ್ಣದ ಕಡಿಮೆ ಭಾಗವನ್ನು ಸೇರ್ಪಡೆ ಮಾಡಿ ವರ್ಣವನ್ನು ಪಡೆದಾಗ ಅದನ್ನು ಅಲ್ಪಸಾರ ವರ್ಣ ಎಂದು ಕರೆಯಲಾಗುತ್ತದೆ ಎಂದು ಕಾಶ್ಯಪ ಶಿಲ್ಪಶಾಸ್ತ್ರ [೧೯೨] ತಿಳಿಸುತ್ತದೆ. ಪದ್ಮಸಂಹಿತೆಯ ಚತುರ್ದಶಾಧ್ಯಾಯದಲ್ಲಿಯೂ ವರ್ಣ ಮಿಶ್ರಣದ ಬಗ್ಗೆ ವಿವರ ಸಿಗುತ್ತಿದ್ದು ಅದನ್ನು ಶಿವರಾಮಮೂರ್ತಿಯವರು [೧೯೩] ಪ್ರಸ್ತಾಪಿಸುತ್ತಾರೆ.

ಶುಕ್ಲ ಬಿಳುಪಿನೊಡನೆ ಕೆಂಪುವರ್ಣ ಮಿಶ್ರವಾದರೆ ಬಭ್ರುವರ್ಣ (ಮುಂಗುಸಿಯ ಮುಖದ ಮೇಲಿನ ಬಣ್ಣ) ಎನಿಸುತ್ತದೆ. ಶುಕ್ಲ ಬಿಳಿಯೊಡನೆ ಕಾಷ (ಕಾವಿ) ವರ್ಣ ಮಿಶ್ರವಾದರೆ ಅದು ' ವರ್ಣಕ ' ವೆನಿಸುತ್ತದೆ. ಹಳದಿ ಕಪ್ಪು ಇವುಗಳೊಡನೆ ಕೂಡಿದ ಬಿಳುಪು ' ಕರ್ಬುರ ' ವರ್ಣವೆಂದು ಮಿಶ್ರವರ್ಣಗಳ ಕುರಿತು ವಿವರಣೆ ನೀಡುತ್ತಾರೆ.

**III. ಅಂಟುದ್ರಾವಕ :** ಪ್ರಾಚೀನ ಭಿತ್ತಿ ಚಿತ್ರಕಾರರವು ವರ್ಣ ದ್ರವ್ಯಗಳನ್ನು ಚಿತ್ರಣಕ್ಕಾಗಿ ಉಪಯೋಗಿಸುವಾಗ ಕೆಲವೊಂದು ಅಂಟು ದ್ರಾವಕಗಳಲ್ಲಿ ವರ್ಣಗಳನ್ನು ಮಿಶ್ರಣ ಮಾಡಿಕೊಂಡು ಉಪಯೋಗಿಸುತ್ತಿದ್ದರು. ಈ ಅಂಟುಗಳು ವರ್ಣವು ಉದುರದಂತೆ ಗಟ್ಟಿಯಾಗಿ ಬಂಧಿಸುವ ಕೆಲಸ ಮಾಡುತ್ತವಾದ್ದರಿಂದ ಇವುಗಳಿಗೆ ವರ್ಣಬಂಧಕಗಳು ಎಂದು ಕರೆಯುತ್ತಾರೆ. ವರ್ಣಗಳನ್ನು ಉಪಯೋಗಿಸುವಾಗ ಈ ಅಂಟು ಮಾಧ್ಯಮದಲ್ಲಿ ಮಿಶ್ರಣ ಮಾಡಿಕೊಂಡು ಚಿತ್ರ ರಚಿಸುತ್ತಿದ್ದರಿಂದ ಇವುಗಳಿಗೆ ಮಾಧ್ಯಮಗಳೆಂದೂ (ವರ್ಣಮಾಧ್ಯಮ) ಕರೆಯುತ್ತಾರೆ. ಟೆಂಪರಾ ವಿಧಾನದ ಚಿತ್ರ ರಚನೆಯಲ್ಲಿ ಅಂಟು ಬಹುಮುಖ್ಯವಾದ ಮಾಧ್ಯಮವಾಗಿದೆ. ತೀರಾ ಪ್ರಾಚೀನ ಚಿತ್ರಗಳಾದ ಶಿಲಾಶ್ರಯ ವರ್ಣಚಿತ್ರಗಳಲ್ಲೇ ವಿವಿಧ ರೀತಿಯ ಬಂಧಕಗಳನ್ನು (ಅಂಟುಗಳನ್ನು) ಉಪಯೋಗಿಸಲಾಗಿದೆ ಎಂದು ಅನೇಕ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

" ಬೃಹತ್ ಸಂಹಿತಾ, [೧೯೪] ವಿಷ್ಣುಧರ್ಮೋತ್ತರ, [೧೯೫] ಶಿಲ್ಪರತ್ನ, [೧೯೬] ಮತ್ತು ಮಾನಸೋಲ್ಲಾಸ [೧೯೭] ದಲ್ಲಿ ಬಂಧನಕಾರವನ್ನು ' ಸ್ಥಂಬನ ' ವೆಂದು ಕರೆದು ಇದಕ್ಕಾಗಿ ವಜ್ರಲೇಪ, ವಜ್ರಸಮ್‌ಘಟ, ಅಷ್ಟಬಂಧ, ಬಂಧೋದಕಗಳನ್ನು ಹೇಳಲಾಗಿದೆ. ಇವುಗಳು ಭಿತ್ತಿಯ ಮೇಲೆ ಒನ್ನೆಲೆ ಲೇಪಿಸಲು, ಭಿತ್ತಿ ತಯಾರಿಸಲು, ವರ್ಣಚಿತ್ರ ರಚಿಸಲು ಉಪಯೋಗಿಸಲಾಗುತ್ತಿತ್ತು. ಇವುಗಳನ್ನು ವಿವಿಧ ರೀತಿಯ ಹಣ್ಣು, ಕಾಯಿಗಳು, ಗಿಡಗಳ, ಟೊಂಗೆಗಳಿಂದ

೧೯೨. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ, ಅಧ್ಯಾಯ ೮೮, ಪುಟ - ೬೨೯
೧೯೩. C. Sivaramamurti : Chitrasutra of the Vishnudharmottara, Page - 65
೧೯೪. H. Kern (Trans.) : " The Brihat Samhita, " Page - 185
೧೯೫. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೪೦, ಶ್ಲೋಕ ೨೯
೧೯೬. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೧೩೪ - ೧೩೩
೧೯೭. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ, ಭಾಗ II, ಅಧ್ಯಾಯ I, ಶ್ಲೋಕ ೧೩೬

ಪಡೆಯುತ್ತಿದ್ದರು.[೧೯೮] ಎಂಬ ವಿವರ ದೊರೆಯುತ್ತದೆ. ವಿಷ್ಣುಧರ್ಮೋತ್ತರ ಪುರಾಣದಲ್ಲಿ[೧೯೯] ತುಳಸಿಯ ರಸ, ಘೂನಿಂಬ, ಚಂಪಾ, ಕುಶ ಮತ್ತು ಮೌಲಸಿರಿ ಗಿಡಗಳ ಮತ್ತು ಸಿಂಧೂರ ಗಿಡದ ಹಾಲನ್ನು ವರ್ಣಬಂಧಕವಾಗಿ ಬಳಸಲು ಹೇಳಿದೆ. ವರ್ಣ ಬಂಧಕವಾಗಿ ಪ್ರಾಗೈತಿಹಾಸಿಕ ಚಿತ್ರಕಾರರು ಅನೇಕ ವಸ್ತುಗಳನ್ನು ಬಳಸಿದ್ದಾರೆ. ಆಸ್ಟ್ರೇಲಿಯಾದ ಮೂಲನಿವಾಸಿಗಳು ತತ್ತಿಯ ಹಳದಿ ಲೋಳೆ (Yolk of egg) ಯನ್ನು, ಯುರೋಪಿನಲ್ಲಿನ ಹಿಮಯುಗದ ಜನರು ಪ್ರಾಣಿಗಳ ರಕ್ತ ಮತ್ತು ತತ್ತಿಯ ಬಿಳಿಯ ಲೋಳೆ (Albumen) ಯನ್ನು, ಲೆವಂಟೈನ್ (Levantine) ಜನಾಂಗದವರು ಪ್ರಾಣಿಗಳ ರಕ್ತ, ಜೇನುಮೇಣ ಮತ್ತು ತತ್ತಿಯ ಬಿಳಿ ಲೋಳೆಯನ್ನು ದಕ್ಷಿಣ ಆಫ್ರಿಕಾದ ಪ್ರಾಚೀನ ಬಂಡೇ ಚಿತ್ರಗಳಲ್ಲಿ ಪ್ರಾಣಿಗಳ ಕೊಬ್ಬು (Fat), ಮೂಳೆಯೊಳಗಿನ ಜಿಗುಟಾದ ಪದಾರ್ಥ (Marrow), ಹಾಗೂ ಮೂತ್ರಗಳನ್ನು ವರ್ಣ ಬಂಧಕಗಳಾಗಿ ಬಳಸಿದ್ದಾರೆ.[೨೦೦] ಎಂಬ ವಿವರಗಳು ದೊರೆಯುತ್ತವೆ.

ಪ್ರಾಗೈತಿಹಾಸಿಕ ಜನರು ವರ್ಣಬಂಧಕವಾಗಿ ರಕ್ತವನ್ನು ಹೆಚ್ಚಾಗಿ ಬಳಸಿರದೇ, ಕೆಂಪು ಹೆಮಟೈಟ್, ಮ್ಯಾಂಗನೀಜ್, ಸ್ವಾಭಾವಿಕ ಕಲ್ಲು-ಮಣ್ಣುಗಳನ್ನು ಕುಟ್ಟಿ ಪುಡಿ ಮಾಡಿ, ಇಲ್ಲವೇ ನೀರಿನೊಂದಿಗೆ ತೇಯ್ದು, ಸಸ್ಯಜನ್ಯ ಅಂಟುಗಳಲ್ಲಿ ಕೂಡಿಸಿ ಲೇಪಿಸುತ್ತಿರಬೇಕು. ಇಲ್ಲವೇ ನೀರಿನೊಂದಿಗೆ ತೇಯ್ದುಕೊಂಡ ಮಂದ ಮಿಶ್ರಣವನ್ನು ಹಾಗೆ ಬಳಸುತ್ತಿರಲೂಬಹುದು. ಹಾಗೇ ಎಲುಬುಗಳೊಳಗಿನ ಜಿಗುಟು ಪದಾರ್ಥವನ್ನು ಬಳಸುತ್ತಿದ್ದರೆಂದು ಯಶೋಧರ ಮಠ್‌ಪಾಲ್ ಅವರು[೨೦೧] ಅಭಿಪ್ರಾಯಪಡುತ್ತಾರೆ.

ಭಿತ್ತಿಚಿತ್ರ ರಚನೆಯಲ್ಲಿ ಬಳಸುತ್ತಿದ್ದ ಅಂಟುದ್ರಾವಕಗಳನ್ನು ಅವುಗಳ ದೊರೆಯುವ ಮೂಲಗಳಿಂದ ಮೂರು ವಿಧವಾಗಿ ವಿಂಗಡಿಸಬಹುದು.

೧. ಪ್ರಾಣಿಜನ್ಯ ಅಂಟುದ್ರಾವಕ
೨. ಸಸ್ಯಜನ್ಯ ಅಂಟುದ್ರಾವಕ
೩. ಖನಿಜಜನ್ಯ ಅಂಟುದ್ರಾವಕ

**೧. ಪ್ರಾಣಿಜನ್ಯ ಅಂಟುದ್ರಾವಕ :** ಪ್ರಾಣಿಜನ್ಯ ಅಂಟುದ್ರಾವಕಗಳು ವರ್ಣಚಿತ್ರಣಕ್ಕಾಗಿ ಬಳಸುವುದನ್ನು ಪ್ರಾಗೈತಿಹಾಸಿಕ ಕಾಲದ ಬಂಡೆ ವರ್ಣಚಿತ್ರಗಳಿಂದಲೇ ಗುರುತಿಸಬಹುದಲ್ಲದೇ ಭಾರತೀಯ ಶಿಲ್ಪಶಾಸ್ತ್ರಗಳಲ್ಲಿ ಪ್ರಾಣಿಜನ್ಯ ಅಂಟುಗಳನ್ನು ಪ್ರಾಣಿಗಳ ಚರ್ಮ ಮತ್ತು ಕೋಡುಗಳಿಂದ ಪಡೆಯುವ ವಿವರಗಳು ತಿಳಿಯುತ್ತವೆ. ವಿಷ್ಣುಧರ್ಮೋತ್ತರದಲ್ಲಿ[೨೦೨] ಅಂಟುದ್ರಾವಕಗಳನ್ನು ಗೂಳಿಯ ಕೋಡು, ಮತ್ತು ಕಾಡೆಮ್ಮೆಯ ಕೋಡುಗಳಿಂದ, ಆಡಿನ ಚರ್ಮದಿಂದ, ಮತ್ತು ಕಾಡೆಮ್ಮೆ ಇಲ್ಲವೆ ಆಕಳ ಚರ್ಮದಿಂದಲೂ ಪಡೆಯಲು ತಿಳಿಸಿದೆ. ಇವುಗಳಿಂದ ಪಡೆದ ಅಂಟುದ್ರಾವಕಕ್ಕೆ ನಿಂಬಗಿಡದ (ಮಾರ್ಗೋಸಾಗಿಡ) ಅಂಟನ್ನು ಮತ್ತು ಬೇಲದ ಕಾಯಿಯ ಅಂಟನ್ನು ಬೆರೆಸಿದಾಗ ಟೆಂಪರಾ ವಿಧಾನದ ಭಿತ್ತಿಚಿತ್ರಗಳಿಗೆ ಬಹಳ ಉಪಯುಕ್ತ ಮಾಧ್ಯಮವಾಗುತ್ತದೆ ಎಂದೂ ಅದು ತಿಳಿಸಿದೆ. ಶಿಲ್ಪ

೧೯೮. C. Sivaramamurti : Chitrasutra of the Vishnudharmottara, page - 189
೧೯೯. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೯೨, ಶ್ಲೋಕ ೧೫
೨೦೦. Yashodhar Mathpal : Prehistoric Rock paintings of Bhimbetka, page - 189
೨೦೧. Yashodhar Mathpal : Prehistoric Rock paintings of Bhimbetka, page - 190
೨೦೨. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೯೨, ಶ್ಲೋಕ ೮, ೯

ಶಾಸ್ತ್ರಗಳಲ್ಲಿ ಚರ್ಚಿಸಲಾದ ಈ ಅಂಟುದ್ರಾವಕಕ್ಕೆ ಅವು ವಜ್ರಲೇಪ ಅಥವಾ ವಜ್ರಸರಿ ತಯಾರಿಕೆ ಮತ್ತು ಉಪಯೋಗ ಕುರಿತಾಗಿ ಹಲವು ಶಿಲ್ಪಶಾಸ್ತ್ರಗಳು ಚರ್ಚಿಸಿವೆ. ಪ್ರಾಣಿಮೂಲಗಳಿಂದ ದೊರಕುವ ಅಂಟುದ್ರಾವಕಗಳೆಂದರೆ –

I. ವಜ್ರಲೇಪ ಅಥವಾ ವಜ್ರಸರಿ
II. ಹಾಲಿನಲ್ಲಿರುವ ಸಾರಜನಕ ಪದಾರ್ಥ (ಹಾಲಿನ ಕೆನೆ)
III. ತತ್ತಿಯ ಲೋಳೆ

**I. ವಜ್ರಲೇಪ ಅಥವಾ ವಜ್ರಸರಿ :** ಇದು ಪ್ರಾಣಿಜನ್ಯವಾದ ಸಾವಯುವ ಪದಾರ್ಥವಾಗಿದ್ದು, ಪ್ರಾಣಿಗಳ ಚರ್ಮದಿಂದ ಮತ್ತು ಮೀನದಿಂದಲೂ ತಯಾರಿಸುತ್ತಾರೆ. ವಜ್ರಲೇಪ ತಯಾರಿಸುವ ವಿಧಾನವೆಂದರೆ, ಪ್ರಾಣಿಗಳ ಎಲುಬು, ಚರ್ಮಗಳನ್ನು ಸಾಕಷ್ಟು ಸಮಯದವರೆಗೆ ಕುದಿಸಿದಾಗ ಇವುಗಳಿಂದ ಒಂದು ರೀತಿಯ ಪದಾರ್ಥ ಬಿಡುಗಡೆಯಾಗಿ ಅದು ನೀರಿನ ಮೇಲೆ ತೇಲುವುದು. ಈ ನೀರಮೇಲೆ ಸಂಗ್ರಹಗೊಂಡ ಜಿಡ್ಡು ಪದಾರ್ಥವನ್ನು ಬೇರ್ಪಡಿಸಿ ಆರಿಸಿದಾಗ ಒಂದು ರೀತಿಯ ಮಲಾಮಿನ ಹಾಗೆ ಮಂದವಾದ ಮಿಶ್ರಣದಂತಿರುವ ಇದು ಸ್ವಚ್ಛವಾಗಿ ಮತ್ತು ನುಣುಪಾಗಿರುವುದು. ಇವನ್ನು ಹಾಗೂ ತಳದಲ್ಲಿ ಉಳಿದ ಕಚ್ಚಾವಸ್ತು ಎರಡನ್ನೂ ಭಿತ್ತಿಚಿತ್ರಗಳಲ್ಲಿ ಬಳಸಲಾಗುತ್ತದೆ. ಕುದಿಸಿದಾಗ ನೀರಮೇಲೆ ಸಂಗ್ರಹಗೊಂಡ ಸ್ವಚ್ಛ ಮಂದವಾದ ಮಲಾಮಿನಂತಹ ವಸ್ತುವನ್ನು ' ಜಲಿಟಿನ್ ' ಎಂದು ಪರಿಗಣಿಸಿ ಅವನ್ನು ವರ್ಣಗಳ ಮಿಶ್ರಣದಲ್ಲಿ ಮಾಧ್ಯಮವಾಗಿ ಬಳಸಿದರೆ ತಳದಲ್ಲಿ ಉಳಿದ ಕಚ್ಚಾವಸ್ತುಗಳನ್ನು Glue ಎಂದು ಪರಿಗಣಿಸಿ ಅದನ್ನು ಕೇವಲ ಅಂಟಿಸುವ ಸಾಧನವಾಗಿ ಬಳಸುತ್ತಾರೆ. [೨೦೩] ಎಂಬ ವಿವರಗಳು ತಿಳಿದುಬರುತ್ತವೆ.

ಬಟಾಟೆಯನ್ನು ಬಹಳ ಹೊತ್ತು ಕುದಿಸಿದಾಗ ಒಂದು ರೀತಿಯ ಪಾರದರ್ಶಕ ವಸ್ತು ಬಿಡುಗಡೆಯಾಗುವುದು. ಈ ವಸ್ತುವನ್ನು ವರ್ಣ ದ್ರವ್ಯದೊಡನೆ ಬೆರೆಸಿ ಮಾಧ್ಯಮದ ಹಾಗೆ ಬಳಸಬಹುದು. ಇದನ್ನು ಬಟಾಟೆ ಗ್ಲೂ (ಬಟಾಟೆ ಸರಿ) ಎನ್ನಲಾಗಿದ್ದು. ಟೆಂಪರಾ ಭಿತ್ತಿಚಿತ್ರಗಳಲ್ಲಿ ವಜ್ರಲೇಪದ ಬದಲಾಗಿ ಯಶಸ್ವಿಯಾಗಿ ಉಪಯೋಗಿಸಬಹುದು ಎಂದು ಪ್ರಯೋಗದ ಮೂಲಕ ಹೇಳಿ ಇದನ್ನು ಪ್ರಾಚೀನ ಭಿತ್ತಿಚಿತ್ರಗಳಲ್ಲಿ ಬಳಸಿರುವ ಸಾಧ್ಯತೆ ಇದೆ [೨೦೪] ಎಂದು ವಿದ್ವಾಂಸರು ತರ್ಕಿಸುತ್ತಾರೆ.

ವಜ್ರಸರಿಯು ನೀರಿನೊಂದಿಗೆ ಸರಳವಾಗಿ ಮಿಶ್ರಣವಾಗುತ್ತದೆ. ಅಲ್ಲದೇ ನೀರಿನಂತಹ ಯಾವುದೇ ವಸ್ತುವಿನೊಡನೆಯೂ ಸರಳವಾಗೇ ಮಿಶ್ರಣವಾಗುವುದು. " ಈ ವಜ್ರಸರಿಗೆ ನಾಲ್ಕು ಭಾಗ ಫಾರ್ಮಲಿನ್ ಸಲ್ಯುಸೆನ್ ಅಥವಾ ಸ್ವಲ್ಪ ಪ್ರಮಾಣದ ಮೇಣವನ್ನು ಬೆರೆಸಿದಾಗ ಬೇರೆ ವಸ್ತುವನ್ನು ಕರಗಿಸಿಕೊಳ್ಳುವ ಗುಣವನ್ನು ಕಡಿಮೆ ಮಾಡಿಕೊಳ್ಳುವುದು. ಹಾಗಾದಾಗ ಈ ವಜ್ರಸರಿಯು ತೇವ ನಿರೋಧಕವಾಗಿ ಕೆಲಸ ಮಾಡುತ್ತದೆ. ಎಣ್ಣೆ ಅಥವಾ ಮರದಂಟು ಈ ವಜ್ರಸರಿಗೆ ಕಲೆಸಿದಾಗ ಅದು ಮಾಧ್ಯಮವಾಗಿ ಇನ್ನಷ್ಟು ನುಣುಪು ಮತ್ತು ಗುಣಾತ್ಮಕವಾಗುವುದು. ವಜ್ರಸರಿಗೆ ಮರದಂಟು ಮತ್ತು ತತ್ತಿಯ ಲೋಳೆ (ಹಳದಿ ಲೋಳೆ) ಬೆರೆಸಿದಾಗ ಟೆಂಪರಾ ವಿಧಾನದಲ್ಲಿ ಬಳಸುವ ಶಕ್ತಿಶಾಲಿ ಮಾಧ್ಯಮವಾಗುವುದೆಂಬ [೨೦೫] ವಿವರಗಳು ತಿಳಿದುಬರುತ್ತವೆ. ಹಾಗೇ ವಜ್ರಸರಿ ಸಸ್ಯಜನ್ಯ ಅಂಟು

---

೨೦೩. Jayanth Chakravarthi : Techniques in Indian Mural Painting, Page - ೫೯
೨೦೪. Maria Bazzi : " The Artist's Method and materials, Page - 59
೨೦೫. Jayanth Chakravarthi : Techniques in Indian Mural Painting, Page - ೬೦

ಒಂದಕ್ಕೊಂದು ಬೆರೆಸಿದಾಗ ದೊರಕುವ ಲೇಪನವು (ಮಿಶ್ರಣವು) ಹೆಚ್ಚು ಶಕ್ತಿಶಾಲಿಯಾಗಿ ಅಂಟುವ ಗುಣ ಪಡೆಯುತ್ತದೆ [೨೦೬] ಎಂದು ಹೇಳಲಾಗುತ್ತದೆ.

ವಿಷ್ಣುಧರ್ಮೋತ್ತರವು [೨೦೭] ವಜ್ರಸರಿ ಪಡೆಯುವ ವಿಧಾನ ಕುರಿತು ಹೀಗೆ ಹೇಳಿದೆ :

– ಆದೇ ತಾನೇ ಸಂಗ್ರಹಿಸಿದ ಕೋಣದ ಕೋಡುಗಳನ್ನು ಕುದಿಯುವ ನೀರಿನಲ್ಲಿ ಹಾಕಿ ಕುದಿಸಬೇಕು. ಅವು ಮೆದುವಾಗಿ ಬ್ರೆಡ್‌ನ ಹಾಗೆ ಆಗುವವರೆಗೂ ಕುದಿಸಬೇಕು. ಅವು ಬ್ರೆಡ್‌ನ ಹಾಗೆ ಮೆದುವಾದಾಗ ಅವನ್ನು ತೆಗೆದುಕೊಂಡು ನಾದಿ (ಹಿಚುಕಿ) ಪೇಷ್ಟ (ಕಣಕ) ದ ಹಾಗೆ ಮಾಡಿಕೊಳ್ಳಬೇಕು. ಈ ರೀತಿ ಕಣಕದ ಹಾಗೆ ಮಾಡಿಕೊಂಡ ಮಿಶ್ರಣದಿಂದ ಉದ್ದವಾದ ಸಣ್ಣ ಸಣ್ಣ ಕಡ್ಡಿಗಳಾಗಿ (Stic) ಮಾಡಿಕೊಂಡು ಅವುಗಳನ್ನು ಎಚ್ಚರಿಕೆಯಿಂದ ಒಣಗಿಸಿಟ್ಟುಕೊಳ್ಳಬೇಕು. ಇವುಗಳನ್ನೇ ವಜ್ರಸರಿ, ವಜ್ರಲೇಪವೆಂದು ಕರೆಯುತ್ತಾರೆ. ಇದನ್ನೇ ವರ್ಣಗಳಲ್ಲಿ ಮಾಧ್ಯಮವಾಗಿ ಉಪಯೋಗಿಸಲಾಗುವುದು. ವರ್ಣ ಕಲಸಿಕೊಳ್ಳಲು ಮಾಧ್ಯಮವಾಗಿ ಉಪಯೋಗಿಸಬೇಕಾದಾಗ, ಒಣಗಿದ ಗಟ್ಟಿಯಾದ ಈ ವಜ್ರಸರಿಯನ್ನು ಪುನಃ ಒಂದು ಮಣ್ಣಿನ ಪಾತ್ರೆಯಲ್ಲಿ ಹಾಕಿ ಕುದಿಸಬೇಕು. ಘನವಸ್ತುವಾಗಿದ್ದ ಇದನ್ನು ದ್ರವವಾಗುವವರೆಗೂ ನೀರಿನಲ್ಲಿ ಚನ್ನಾಗಿ ಬೆರೆತುಹೋಗುವಂತೆ ಕುದಿಸಬೇಕು. ದ್ರವರೂಪ ಹೊಂದಿದ ಈ ವಜ್ರಸರಿಯು ವರ್ಣದೊಡನೆ ಬೆರೆಸಲು ಯೋಗ್ಯವಾಗುತ್ತದೆ ಎಂಬ ವಿವರಣೆಗಳೂ ಹೇಳಲ್ಪಟ್ಟಿದೆ.[೨೦೮]

ಶಿಲ್ಪರತ್ನವು [೨೦೯] ವಜ್ರಲೇಪ ತಯಾರಿಕೆಯ ವಿಧಾನವನ್ನು ಹೀಗೆ ಹೇಳಿದೆ–

– ಆದೇ ತಾನೇ ಸಂಗ್ರಹಿಸಿದ ಕೋಣದ ಚರ್ಮವನ್ನು ಕುದಿಯುವ ನೀರಿನಲ್ಲಿ ಹಾಕಿ ಕುದಿಸಬೇಕು. ಈ ಚರ್ಮ ಮೆದುವಾದ ಬ್ರೆಡ್‌ನ ಹಾಗೆ ಆಗುವವರೆಗೂ ಕುದಿಸುತ್ತಿರಬೇಕು. ಈ ಮೆದುವಾದ ಚರ್ಮವನ್ನು ತೆಗೆದುಕೊಂಡು ಕಣಕದ ಹಾಗೆ ನಾದಿ ಆ ಮಿಶ್ರಣದಿಂದ ಸಣ್ಣ ಸಣ್ಣ ಗುಂಡುಗಳಾಗಿ ಮಾಡಿಕೊಂಡು ಸೂರ್ಯನ ಪ್ರಖರ ಬಿಸಿಲಿನಲ್ಲಿ ಒಣಗಿಸಬೇಕು. ಇದನ್ನೇ ವಜ್ರಲೇಪವೆನ್ನುವರು. ವರ್ಣದೊಂದಿಗೆ ಮಿಶ್ರಮಾಡುವಾಗ ಮತ್ತೆ ಈ ಘನರೂಪದ ಗುಂಡುಗಳನ್ನು ದ್ರವರೂಪಕ್ಕೆ ಕುದಿಸಿ ಮಾರ್ಪಡಿಸಬೇಕಾಗುವುದು. ಮಾನಸೋಲ್ಲಾಸ ಮತ್ತು ಶಿಲ್ಪರತ್ನ ಎರಡೂ ಗ್ರಂಥಗಳು ವಜ್ರಲೇಪ ತಯಾರಿಕೆಯ ವಿಧಾನವನ್ನು ಹೇಳಿದ್ದು ಎರಡರಲ್ಲೂ ಅನುಸರಿಸುವ ವಿಧಾನ ಒಂದೇ ಆಗಿದೆ. ಮೆದುವಾದ ವಸ್ತುವನ್ನು ಆಕಾರಕ್ಕೆ ತರುವಾಗ ಮಾತ್ರ ಎರಡೂ ಭಿನ್ನತೆ ತೋರಿವೆ. ಮಾನಸೋಲ್ಲಾಸವು ಕಡ್ಡಿಗಳಾಗಿ ಮಾಡಿಕೊಂಡು ಒಣಗಿಸಬೇಕೆಂದಿದ್ದರೆ. ಶಿಲ್ಪರತ್ನವು ಗುಂಡುಗಳಾಗಿ ಒಣಗಿಸಲು ಹೇಳಿದೆಯಲ್ಲದೇ ಲೇಪನ ಕಾರ್ಯದಲ್ಲೂ ಬಳಸಲು ತಿಳಿಸುತ್ತದೆ.

ವಿಷ್ಣುಧರ್ಮೋತ್ತರವು [೨೧೦] ಪ್ರಾಣಿಜನ್ಯವಾದ ಈ ವಜ್ರಲೇಪದೊಡನೆ ಸಸ್ಯಜನ್ಯವಾದ ಅಂಟನ್ನು ಬೆರೆಸಿದಾಗ ಹೆಚ್ಚು ಶಕ್ತಿಯುತವಾದ ಮಿಶ್ರಣ ಆಗುತ್ತದೆ ಎಂದು ಹೇಳುತ್ತದೆ. ವಜ್ರಲೇಪಕ್ಕೆ ಹೀಗೆ ಬೆರೆಸಲು ಅದು ಬಕುಳದ

---

೨೦೬. Maria Bazzi : " The Artist's Method and materials, Page - 60

೨೦೭. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೯೨, ಶ್ಲೋಕ ೮, ೯

೨೦೮. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ, ಭಾಗ II, ಅಧ್ಯಾಯ I, ಶ್ಲೋಕ ೧೩೬

೨೦೯. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೧೩೧ - ೧೩೩

೨೧೦. ಸ್ಟೆಲ್ಲಾ ಕ್ರಾಮ್ರಿಷ್ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೯೨, ಶ್ಲೋಕ ೮ - ೯

ಅಂಟು ಇಲ್ಲವೇ ಸಿಂಧೂರ ಗಿಡದ ಅಂಟು ಉತ್ತಮವೆಂದು ತಿಳಿಸುತ್ತದೆ. " ಮಾನಸೋಲ್ಲಾಸವು [೨೧೧] ವಜ್ರಲೇಪವನ್ನು ವರ್ಣಮಾಧ್ಯಮವಾಗಿ ಮಾತ್ರವಲ್ಲದೇ ಭಿತ್ತಿ ತಯಾರಿಕೆಯಲ್ಲಿ ಮತ್ತು ಚಿತ್ರರಚನೆಯ ಮೊದಲು ಒನ್ನಲೆ ಲೇಪನಕ್ಕೂ ಉಪಯೋಗಿಸಬೇಕೆಂದು ಹೇಳುತ್ತದೆ. " ಶಿವತತ್ವ ರತ್ನಾಕರವು [೨೧೨] ಹೇಳುವಂತೆ ಹೊಸದಾದ ಎಮ್ಮೆ ಚರ್ಮವನ್ನು ತೆಗೆದುಕೊಂಡು ನೀರಿನಲ್ಲಿ ಚನ್ನಾಗಿ ಕುದಿಸಬೇಕು. ಹೀಗೆ ಬೆಣ್ಣೆಯಂತೆ ಒಂದು ಬಗೆಯ ಅಂಟು ಸಿದ್ಧವಾಗುವವರೆಗೂ ಕುದಿಸಿ. ಅನಂತರ ನಾರಿನಂತೆ ಜಿಗುಟಾದ ಆ ಅಂಟನ್ನು ಸಣ್ಣ ಸರಳುಗಳಿಗೆ ಲೇಪಿಸಿಕೊಂಡು ಅನಂತರ ಅವುಗಳನ್ನು ಗಟ್ಟಿಯಾಗುವವರೆಗೂ ಬಿಸಿಲಿನಲ್ಲಿ ಒಣಗಿಸಬೇಕು. ಇದನ್ನೇ ವಜ್ರಲೇಪ ಎನ್ನುವರು. ಇದನ್ನು ಒಂದು ಮಣ್ಣಿನ ಪಾತ್ರೆಯಲ್ಲಿ ಹಾಕಿ ಚನ್ನಾಗಿ ಕುದಿಸಿದಾಗ ಈ ವಜ್ರಲೇಪವು ಕರಗಿ ಎಲ್ಲ ಬಣ್ಣಗಳಿಗೂ ಬಳಸಬಹುದಾಗಿದೆ ಎಂದು ವಿವರ ನೀಡುತ್ತದೆ.

**II. ಹಾಲಿನಲ್ಲಿರುವ ಸಾರಜನಕ ಪದಾರ್ಥ (ಹಾಲಿನ ಕೆನೆ) :** ಇದು ಹಾಲಿನಲ್ಲಿರುವ ಸಾರಜನಕ ಪದಾರ್ಥ. ಹಾಲನ್ನು ಕೆನೆ ತೆಗೆಯುವ ಮೂಲಕ ಇದನ್ನು ಪಡೆಯಲಾಗುತ್ತದೆ. ಇದು ನೈಟ್ರೋಜನ್ ಎಂಬ ಸಾವಯವ ವಸ್ತುವನ್ನು ಒಳಗೊಂಡಿರುತ್ತದಲ್ಲದೇ "ಕೇಸಿನ್ ಎಂಬ ಈ ಪದಾರ್ಥವು ಸುಣ್ಣದ ನೀರಿನಲ್ಲಿ ಕರಗುತ್ತದೆ. ಮತ್ತು ಘನ ವಸ್ತುವಾದರೂ ಮೆದುವಾಗಿರುತ್ತದೆ." ಇದಕ್ಕೆ ಸ್ವಲ್ಪ ಪ್ರಮಾಣದ ಅಫೀಮಿನ ಎಣ್ಣೆ. ನೀರು ಮತ್ತು ಕೆನೆತೆಗೆಯಲಾದ ಹಾಲನ್ನು ಬೆರೆಸಿದಾಗ ವರ್ಣದ್ರವ್ಯ ಮಿಶ್ರಣ ಮಾಡಲು ಮಾಧ್ಯಮವಾಗಿ ಬಳಕೆಯಾಗುತ್ತದೆ [೨೧೩] ಎಂಬ ವಿವರಗಳು ತಿಳಿದುಬರುತ್ತವೆ. ಹಾಲನ್ನು ಭಿತ್ತಿಚಿತ್ರಗಳಲ್ಲಿ ಉಪಯೋಗಿಸುವ ವಿಧಾನವು ಬಹಳ ಹಳೆಯ ಪದ್ಧತಿಯಾಗಿದ್ದು, " ರೋಮನ್‌ರು ಹಾಲನ್ನು ಭಿತ್ತಿ ನಿರ್ಮಾಣದಲ್ಲಿ ಮತ್ತು ಟೆಂಪರಾ ವಿಧಾನದ ಚಿತ್ರಣಕ್ಕೆ ಬಳಸಿದ್ದಾರಲ್ಲದೇ ಅಮೇರಿಕನ್ ಇಂಡಿಯನ್‌ರು ತಮ್ಮ ಗುಡಿಸಲ ಒಳಗಡೆ ಚಿತ್ರ ರಚಿಸಲು ಮತ್ತು ವರ್ಣದಿಂದ ಅಲಂಕರಿಸಲು ಕಂದು ಬಣ್ಣದ ಜೊತೆಗೆ ಹಾಲನ್ನು ಮಿಶ್ರ ಮಾಡುತ್ತಿದ್ದರು. [೨೧೪] ಎಂಬ ಸಂಗತಿಗಳೂ ಉಲ್ಲೇಖಿಸಲ್ಪಟ್ಟಿವೆ. ಟೆಂಪರಾ ವಿಧಾನದಲ್ಲಿ ಹಾಲನ್ನು ವರ್ಣ ಬೆರೆಸುವ ಮಾಧ್ಯಮವಾಗಿ ಬಳಸುವುದನ್ನು ಭಾರತೀಯ ಶಿಲ್ಪಶಾಸ್ತ್ರಗಳೂ ಹೇಳಿವೆ. ತಿರುಜಸನ್‌ಪುರ ಭಿತ್ತಿಚಿತ್ರಗಳಲ್ಲಿ ಹಾಲಿನ ಕೆನೆಯನ್ನು ಉಪಯೋಗಿಸಿದ್ದನ್ನು ಭಿತ್ತಿಯ ತುಣುಕನ್ನು ಪ್ರಯೋಗಕ್ಕೆ ಒಳಪಡಿಸುವ ಮೂಲಕ [೨೧೫] ಕಂಡುಕೊಳ್ಳಲಾಗಿದೆ.

**III. ತತ್ತಿಯ ಹಳದಿ ಮತ್ತು ಬಿಳಿಯ ಲೋಳೆಗಳು :** ತತ್ತಿಯ ಹಳದಿ ಮತ್ತು ಬಿಳಿಯ ಲೋಳೆಗಳನ್ನು ವರ್ಣಚಿತ್ರ ರಚನೆಯಲ್ಲಿ ಮಾಧ್ಯಮವಾಗಿ ಬಳಸಲಾಗುತ್ತದೆ. " ತತ್ತಿಯ ಬಿಳಿಯ ಲೋಳೆಗೆ (Albumen) ನೀರು, ಕೆಲವು ಹನಿ ವಿನಿಗರ್ ದ್ರಾವಣ. ಮತ್ತು ಸ್ವಲ್ಪ ಪ್ರಮಾಣ ಆ್ಯಸಿಟಿಕ್ ಆ್ಯಸಿಡ್ (Acetic Acid) ನ ಮಂದವಾದ ದ್ರಾವಣವನ್ನು ಬೆರೆಸಿ ಉಪಯೋಗಿಸಿದಾಗ ಉತ್ತಮ ಗುಣಮಟ್ಟದ ವರ್ಣಮಾಧ್ಯಮವಾಗುತ್ತದಲ್ಲದೇ ವರ್ಣ ಭಿತ್ತಿಚಿತ್ರಗಳು ಕ್ರಿಮಿಕೀಟಗಳಿಂದ ಬೇಗ ಹಾಳಾಗದಂತೆ ಪ್ರತಿರೋಧಕವಾಗಿ ಕೆಲಸ ಮಾಡುತ್ತದೆ [೨೧೬] ಎನ್ನುವ ವಿವರಗಳಿವೆ. "ತತ್ತಿಯ

---

೨೧೧. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ, ಭಾಗ II, ಅಧ್ಯಾಯ I, ಶ್ಲೋಕ ೧೩೭ ಮತ್ತು ೧೪೦

೨೧೨. ಮಲ್ಲೇಪುರಂ ಜಿ. ವೆಂಕಟೇಶ (ಸಂ.) : ಶಿವತತ್ವರತ್ನಾಕರ, ಪುಟ - ೩೫೫

೨೧೩. Jayanth Chakravarthi : Techniques in Indian Mural Painting, Page - ೬೦

೨೧೪. Jayanth Chakravarthi : Techniques in Indian Mural Painting, Page - ೬೧

೨೧೫. J. C. Nagapal : ' Mural Paintings in India ', Page - 22

೨೧೬. Jayanth Chakravarthi : Techniques in Indian Mural Painting, Page - ೬೧

ಹಳದಿ ಲೋಳೆಯನ್ನು ನೀರಿನಲ್ಲಿ ಮಿಶ್ರಮಾಡಿ ವರ್ಣಚಿತ್ರಕ್ಕೆ ಉಪಯೋಗಿಸಲು ವಿವಿಧ ವಿಧಾನಗಳಿವೆ. ತತ್ತಿಯ ಹಳದಿ ಲೋಳೆಯೊಂದಿಗೆ ಅದರ ಬಿಳಿಯ ಲೋಳೆಯನ್ನು ಮಿಶ್ರಮಾಡಿ ಹೆಚ್ಚು ಶಕ್ತಿಶಾಲಿಯಾದ ವರ್ಣಮಾಧ್ಯಮವನ್ನು ಪಡೆಯಬಹುದು. ಹಾಗೇ ಕೆಲವು ಸಂದರ್ಭಗಳಲ್ಲಿ ಹಳದಿ ಲೋಳೆಯೊಂದಿಗೆ ಅಂಟು, ವಜ್ರಸರಿ, ಮರದಂಟುಗಳನ್ನು ಮಿಶ್ರ ಮಾಡಿಯೂ ಬಳಸಲಾಗುವುದು. "ತತ್ತಿಯಹಳದಿ ಲೋಳೆಗೆ ವಿನೆಗರ್, ಕೆಲವು ಹನಿ ಲವಂಗ ಎಣ್ಣೆ, ಮತ್ತು ಬೆಂಜೋಟ್ ಸೋಡಾ (Benzoate Soda) ಬೆರೆಸಿದಾಗ ಉತ್ತಮ ವರ್ಣಮಾಧ್ಯಮವಾಗಿ ರೂಪುಗೊಳ್ಳುವುದು.[೨೧೭] ಎಂಬ ವಿವರಗಳು ದೊರೆಯುತ್ತವೆ. ಭಾರತೀಯ ಪ್ರಾಚೀನ ಮತ್ತು ಮಧ್ಯಕಾಲೀನ ಶಿಲ್ಪಶಾಸ್ತ್ರಗಳು ತತ್ತಿಯ ಲೋಳೆಯ ವರ್ಣಮಾಧ್ಯಮದ ಬಗ್ಗೆ ಒಂದೇ ಒಂದು ಶಬ್ದವನ್ನೂ ಕೂಡಾ ಹೇಳಿಲ್ಲ. ಮೊಟ್ಟೆಯ ಸೇವನೆ, ಮಾಂಸಾಹಾರ ಸೇವನೆ ಅಪವಿತ್ರ ಎಂಬ ನಂಬಿಕೆ ಈಗಲೂ ಕೆಲವು ಸಮುದಾಯದಲ್ಲಿದೆ. ಶಿಲ್ಪಶಾಸ್ತ್ರಗಳು ಪವಿತ್ರವಾದ ಗ್ರಂಥಗಳಾಗಿದ್ದು ಅಪವಿತ್ರವಾದ ಇಂತಹ ವಿವರ ಅಲ್ಲಿ ಉಲ್ಲೇಖಗೊಳ್ಳಬಾರದೆಂಬುದು ಕಾರಣವಾಗಿರಬಹುದು.

**೨. ಸಸ್ಯಜನ್ಯ ಅಂಟುದ್ರಾವಕ :** ಪ್ರಾಚೀನ ಶಿಲ್ಪಶಾಸ್ತ್ರಗಳು ಬೇಲದ ಕಾಯಿ, ನಿಂಬ ಗಿಡ (ಮಾರ್ಗೋಸಾ), ಬಕುಳದ ಗಿಡ ಹೀಗೆ ಅನೇಕ ಗಿಡಗಳಿಂದ ಅಂಟುಗಳನ್ನು ಪಡೆಯಲು ತಿಳಿಸಿವೆಯಾದರೂ ಅವುಗಳನ್ನು ಪಡೆಯುವ ವಿಧಾನ ಮತ್ತು ಅವುಗಳನ್ನು ಸೋಸಿ ಸ್ವಚ್ಛಗೊಳಿಸಿಕೊಳ್ಳುವ ಯಾವ ವಿಧಾನಗಳನ್ನೂ ಅವು ತಿಳಿಸಿಲ್ಲ. ಅಂಟುಗಳು ಹೆಚ್ಚಾಗಿ ಗಿಡಗಳ ಬೊಡ್ಡೆಯಲ್ಲಿ ಕಾಂಡದ ಸಂದುಗಳಲ್ಲಿ, ಕಾಯಿಗಳಲ್ಲಿ, ಮರದ ತೊಗಟೆಗಳಲ್ಲಿ ಸಹಜವಾಗಿ ದೊರಕುತ್ತವಾದುದರಿಂದ ಅವುಗಳನ್ನು ಪಡೆಯುವ ವಿಧಾನಗಳನ್ನು ಪ್ರತ್ಯೇಕವಾಗಿ ಹೇಳಿಲ್ಲ ಎನ್ನಬಹುದು. ಹೀಗೆ ದೊರಕಿದ ಹೆಚ್ಚಿನ ಪ್ರಮಾಣದ ಅಂಟುಗಳು ಪಾರದರ್ಶಕವಾಗಿಯೇ ಇರುತ್ತವೆ ಎನ್ನುವುದೂ ಗಮನಿಸಬೇಕು. ವಿಷ್ಣುಧರ್ಮೋತ್ತರವು[೨೧೮] ಬಕುಳದ ಗಿಡದ ಅಂಟು ಮತ್ತು ಸಿಂಧೂರ ಗಿಡದ ಅಂಟು ವರ್ಣಚಿತ್ರಗಳಿಗೆ ಉತ್ತಮ ಮಾಧ್ಯಮಗಳು ಎಂದು ಹೇಳಿದೆ. ಶಿಲ್ಪರತ್ನವು[೨೧೯] ಮಾರ್ಗೋಸಾ ಮತ್ತು ಬೇಲದ ಕಾಯಿಯ ಗಿಡಗಳಿಂದ ಪಡೆದ ಅಂಟು ಉತ್ತಮವೆಂದು ತಿಳಿಸುತ್ತದೆ. ಅಲ್ಲದೇ ನಿಂಬ (ಮಾರ್ಗೋಸಾ) ಗಿಡದ ಅಂಟನ್ನು ಕಪ್ಪುವರ್ಣ (ದೀಪದ ಕಪ್ಪು), ಗೈರಿಕವೆಂಬ ಕೆಂಪುವರ್ಣ, ಸಿಂಧೂರದ ಕೆಂಪುಗಳ ಉಪಯೋಗದಲ್ಲಿ ಬಳಸಬೇಕೆಂದು ಪ್ರತ್ಯೇಕವಾಗಿ ಹೇಳುತ್ತದೆ. ಶ್ಯಾಮವರ್ಣದಂತಹ ನೀಲಿ ವರ್ಣದ ಛಾಯೆ ಹೊಂದಿದ ವರ್ಣಗಳಿಗೆ ಬೇಲದ ಕಾಯಿಯ ಅಂಟನ್ನು ಉಪಯೋಗಿಸಬೇಕು ಎಂದೂ ಹೇಳುತ್ತದೆ.

ಸಸ್ಯಜನ್ಯ ಅಂಟುಗಳ ಉಪಯೋಗವೂ ಕೂಡಾ ಪ್ರಾಗೈತಿಹಾಸಿಕ ಕಾಲದಿಂದಲೇ ರೂಢಿಯಲ್ಲಿತ್ತು ಎಂದು ಊಹಿಸಬಹುದು. " ಹುಲ್ಲನ್ನು ಅರೆದು ಅದರ ರಸದಲ್ಲಿ ಮರದ ಅಂಟನ್ನು ಸೇರಿಸಿ ಚಿತ್ರ ಪೂರ್ತಿಯಾದ ನಂತರ ಅದಕ್ಕೆ ಲೇಪಿಸಿ ಚಿತ್ರ ಹಾಳಾಗದಂತೆ ನಿರೋಧಕವಾಗಿ ಅದನ್ನು ಬಳಸುತ್ತಿದ್ದರು. ಇದರಿಂದ ಕೆಲವು ಕಾಲದವರೆಗೆ ನೀರಿನಿಂದ ಚಿತ್ರಗಳು ತೊಳೆದು ಹೋಗದಂತೆ ಇರುತ್ತಿದ್ದವು[೨೨೦] ಎಂಬ ವಿವರಗಳು ಕಂಡುಬರುತ್ತವೆ.

ಮರಗಳಿಂದ ದೊರೆಯುವ ಅಂಟುಗಳು ಕಾರ್ಬನ್, ಹೈಡ್ರೋಜನ್ ಮತ್ತು ಆಕ್ಸಿಜನ್‌ಗಳಿಂದ ಸಂಯುಕ್ತಗೊಂಡಿದ್ದು ನೀರಿನಲ್ಲಿ ಸರಳವಾಗಿ ಮಿಶ್ರಣವಾಗುವದಿಲ್ಲ. ಆದರೆ ನೆನೆಹಾಕಿದಾಗ ನೀರಿನೊಡನೆ ಚನ್ನಾಗಿ

---

೨೧೭. Jayanth Chakravarthi : Techniques in Indian Mural Painting, Page - ೬೧
೨೧೮. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೪೦, ಶ್ಲೋಕ ೨೯
೨೧೯. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೫೧
೨೨೦. Jayanth Chakravarthi : Techniques in Indian Mural Painting, Page - ೬೫

ಬೆರೆಯುವುದು. ಇವು ಟೆಂಪರಾ ವಿಧಾನದ ಭಿತ್ತಿ ಚಿತ್ರಗಳಿಗೆ ಬಳಸಲು ಉತ್ಕೃಷ್ಟವಾದುದಾಗಿದೆಯಲ್ಲದೇ ಅತೀ ಪ್ರಾಚೀನ ಭಿತ್ತಿ ಚಿತ್ರಗಳಿಗೆ ಇವನ್ನು ಬಳಸಲಾಗಿದ್ದು. ವಜ್ರಸರಿ ಸಂಸ್ಕಾರಗೊಳ್ಳುವ ಮೊದಲು ಇವುಗಳನ್ನು ಚಿತ್ರಣಕ್ಕಾಗಿ ಹೆಚ್ಚಾಗಿ ಬಳಸುತ್ತಿರಬಹುದು [೨೨೧] ಎಂಬ ವಿವರಗಳು ಈ ಅಂಟುಮಾಧ್ಯಮದ ಕುರಿತಾಗಿ ತಿಳಿದುಬರುತ್ತವೆ. ಮರದಿಂದ ಹುಟ್ಟುವ ಅಂಟುಗಳನ್ನು ಕೆಲವು ಸಸ್ಯಗಳಿಂದ ಸ್ವಾಭಾವಿಕವಾಗಿ ಪಡೆಯುವರಲ್ಲದೇ, ಸಸ್ಯಗಳನ್ನು ಕೊಯ್ದು, ಜಜ್ಜಿ, ಅದರಿಂದ ಸೋರುವಿಕೆಯ ಮೂಲಕ ಕೃತಕವಾಗಿಯೂ ಪಡೆಯುವರು [೨೨೨] ಎಂದು ತಿಳಿದುಬರುವುದು.

" ಕಾಶ್ಯಪ ಶಿಲ್ಪಶಾಸ್ತ್ರದಲ್ಲಿ [೨೨೩] ಎಂಟು ವಸ್ತುಗಳ ಮಿಶ್ರಣದಿಂದ ತಯಾರಿಸುವ ಅಷ್ಟಬಂಧ ಎಂಬ ಅಂಟುಲೇಪ ತಯಾರಿಸುವದನ್ನು ಹೇಳಿದೆ. ನಾಲ್ಕುಭಾಗ ಶ್ರೀವೇಷ್ಟಕ (ಸುಗಂಧವಿರುವ ಒಂದು ಬಗೆಯ ರಾಳ), ಮೂರುಭಾಗ ಕುಂದರುಷ್ಕ (ಶಿಲಾರಾಳ). ಐದುಭಾಗ ಗುಗ್ಗಳ. ಒಂದುಭಾಗ ಬೆಲ್ಲ. ಎಂಟುಭಾಗ ಸರ್ಜರಸ (ಸಾಲಮರದ ರಸ), ಮೂರುಭಾಗ ಗೈರಿಕ (ಕಾವಿಕಲ್ಲು) ಇವುಗಳನ್ನು ಚನ್ನಾಗಿ ಪುಡಿಮಾಡಿ ಅದರಲ್ಲಿ ಅವಶ್ಯಕತೆಗೆ ಅನುಸಾರವಾಗಿ ಎಳ್ಳೆಣ್ಣೆ, ತುಪ್ಪ ಬೆರೆಸಿ ಚನ್ನಾಗಿ ಮರ್ದಿಸಬೇಕು. ನಂತರ ಮಣ್ಣಿನ ಪಾತ್ರೆಯಲ್ಲಿರಿಸಿ ತೆಳುವಾದ ಬೆಂಕಿಯಲ್ಲಿ ಕಾಯಿಸಬೇಕು. ಈ ಮಿಶ್ರಣವೇ ಅಷ್ಟಬಂಧವೆಂಬ ಅಂಟುದ್ರಾವಕವಾಗಿದೆ ಎಂದು ಅದು ಹೇಳುತ್ತದೆ. ಹೀಗೆ ವಿವಿಧ ರೀತಿಯ ಪ್ರಾಣಿಜನ್ಯ, ಸಸ್ಯಜನ್ಯ ಅಂಟುಮಾಧ್ಯಮಗಳು ಭಿತ್ತಿ ಚಿತ್ರಕಲೆಯಲ್ಲಿ ಬಳಕೆಯಾದಂತೆಯೇ ಖನಿಜ ಜನ್ಯವಾದ ಅಂಟುಮಾಧ್ಯಮವೂ ಭಿತ್ತಿ ಚಿತ್ರಕಲೆಯಲ್ಲಿ ಬಳಕೆಯಾಗಿರುವುದು ತಿಳಿದುಬರುತ್ತದೆ.

**೩. ಖನಿಜಜನ್ಯ ಅಂಟುದ್ರಾವಕ :** ಭಿತ್ತಿ ಚಿತ್ರಕಲೆಯಲ್ಲಿ ಸುಣ್ಣವನ್ನೂ ವರ್ಣಮಾಧ್ಯಮವಾಗಿ ಬಳಸಿದಂತೆಯೇ ಸುಣ್ಣದ ತಿಳಿನೀರನ್ನು ಅಂಟುದ್ರಾವಕದಂತೆ ಬಳಸಿದ್ದು ತಿಳಿಯುತ್ತದೆ. ಸುಣ್ಣವು ಭೂಮಿಯಲ್ಲಿ ದೊರೆಯುವ ಖನಿಜಾಂಶದಿಂದ ತಯಾರಿಸಿದ ವಸ್ತುವಾಗಿದ್ದರಿಂದ ಇದನ್ನು ಖನಿಜಜನ್ಯ ದ್ರಾವಕ ಎಂದು ಪರಿಗಣಿಸಲಾಗಿದೆ. ಸುಣ್ಣ ಮೂಲದಿಂದ ಬಂದ ವರ್ಣಗಳನ್ನು ಮಾತ್ರ ಸುಣ್ಣದ ನೀರಿನಲ್ಲಿ ಮಿಶ್ರಣ ಮಾಡಿಕೊಂಡು ಬಳಸಲಾಗುತ್ತದೆ. ಪ್ರೆಸ್ಕೋ ಸೆಕ್ಕೋ (ಭಿತ್ತಿ ಒಣಗಿದ ನಂತರ ಚಿತ್ರರಚಿಸುವ ವಿಧಾನ) ವಿಧಾನದಲ್ಲಿ ಈ ರೀತಿಯ ಮಾಧ್ಯಮವನ್ನು ಬಳಸಲಾಗುತ್ತದಲ್ಲದೇ ದಕ್ಷಿಣ ಭಾರತದ ಮಧ್ಯಯುಗೀನ ಭಿತ್ತಿಚಿತ್ರಗಳಲ್ಲಿ ಈ ಸುಣ್ಣ ಮಾಧ್ಯಮದ ಬಂಧಕವು ಬಳಕೆಯಾಗಿದೆ [೨೨೪] ಎಂಬ ಸಂಗತಿಗಳು ತಿಳಿದುಬರುತ್ತವೆ. ಪ್ರಾಚೀನಶಿಲ್ಪ ಶಾಸ್ತ್ರಗಳಲ್ಲಿ ಶಿಲ್ಪರತ್ನ [೨೨೫] ಗ್ರಂಥದಲ್ಲಿ ಮಾತ್ರ ಈ ವಿಧಾನದಿಂದ ಭಿತ್ತಿಚಿತ್ರ ರಚಿಸಲು ಹೇಳಿದ್ದು ಈ ಬಗ್ಗೆ ಹೆಚ್ಚಿನ ವಿವರಣೆಯನ್ನು ಅದು ಕೊಟ್ಟಿಲ್ಲ. ಶಿಷ್ಟ ಪರಂಪರೆಯ ಕಲಾವಿದರು ಇಂತಹ ಅಂಟುಗಳನ್ನು ಬಳಸಿಕೊಂಡಿದ್ದರೆ ಜನಪದ ಕಲಾವಿದರು ತಮಗೆ ತಿಳಿದಂತಹ ವಿಧಾನ, ಮೂಲಗಳಿಂದ ಅಂಟು ಪಡೆದು ಚಿತ್ರಣಕ್ಕಾಗಿ ಬಳಸುತ್ತಾರೆ. ಸಹಜವಾಗಿ ದೊರೆಯುವ ಮರದಂಟು ಜನಪದರಲ್ಲಿ ಬಳಕೆಯಾಗಿದ್ದರೂ ಅದರ ಜೊತೆಗೆ ಸಂದರ್ಭಕ್ಕೆ ತಕ್ಕಂತೆ ಬೇರೆ ಬೇರೆ ಪದಾರ್ಥಗಳನ್ನೂ ಬಳಸುತ್ತಾರೆ. ಉತ್ತರ ಕನ್ನಡ ಜಿಲ್ಲೆಯ ಹಾಲಕ್ಕಿ ಜನಾಂಗದವರು ಅಕ್ಕಿಗಂಜಿ ಬಳಸಿದರೆ, ಕಿನ್ನಾಳ, ಗೋಕಾಕ, ತಾಳಿಕೋಟೆ ಭಾಗದ ಕಟ್ಟಿಗೆ ಮೇಲೆ ಚಿತ್ರ ರಚಿಸುವ ಜನಪದ ಕಲಾವಿದರು

---

೨೨೧. Jayanth Chakravarthi : Techniques in Indian Mural Painting, Page - ೬೦

೨೨೨. Jayanth Chakravarthi : Techniques in Indian Mural Painting, Page - ೬೧

೨೨೩. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ, ಅಧ್ಯಾಯ ೮೫, ಪುಟ - ೬೪೨

೨೨೪. Jayanth Chakravarthi : Techniques in Indian Mural Painting, Page - ೬೦

೨೨೫. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೩೦ - ೩೪

ಹುಣಸೆ ಬೀಜದ ಸರಿ. ರಾಳ. ಮೇಣಗಳನ್ನು ಬಳಸುತ್ತಾರೆ. ಜನಪದ ಭಿತ್ತಿಚಿತ್ರ ಕಲಾವಿದರಲ್ಲಿ ವೈವಿಧ್ಯ ಮೂಲಗಳಿಂದ [೨೨೬] ಅಂಟುಗಳನ್ನು ಚಿತ್ರಕ್ಕಾಗಿ ಪಡೆಯುವ ವಿಧಾನಗಳು ಬಳಕೆಯಲ್ಲಿವೆ.

**IV. ಬಣ್ಣ ಮಿಶ್ರಣ ಮಾಡುವ ತಟ್ಟೆ :** ಪ್ರಾಗೈತಿಹಾಸಿಕ ಮಾನವರು ಬಣ್ಣಗಳನ್ನು ಕಲಸಿಕೊಳ್ಳುವುದಕ್ಕ ಇಂತಹುದೇ ವಸ್ತುವನ್ನು (Colour Palette) ಬಳಸಿಕೊಂಡಿದ್ದರೆಂದು ಹೇಳುವುದು ಕಷ್ಟ. ಆದರೆ ದೊರೆತ ಕೆಲವು ಅವಶೇಷಗಳಿಂದ ಅವರು ವರ್ಣ ಕಲೆಸಿಕೊಳ್ಳುತ್ತಿದ್ದ ವಸ್ತುಗಳನ್ನು ಹೆಸರಿಸಬಹುದು. ಪ್ರಾರಂಭದಲ್ಲಿ ಪ್ರಾಗೈತಿಹಾಸಿಕ ಮಾನವರು ಬಂಡೆಗಳ ತಗ್ಗು ಪ್ರದೇಶದಲ್ಲಿ ಬಣ್ಣ ಮಿಶ್ರಣ ಮಾಡುತ್ತಿದ್ದರೆ, ನಂತರದ ದಿನಗಳಲ್ಲಿ ಬಣ್ಣ ಕಲೆಸಿಕೊಳ್ಳಲು "ಕುಂಬಳಕಾಯಿಯ ಬಳ್ಳಿಯಂತಹ ಎಲೆಗಳನ್ನು ಹೊಂದಿದ ಬಳ್ಳಿಗಳ, ಗಿಡಗಳ ದೊಡ್ಡ ಎಲೆಗಳಿಂದ ದೊನ್ನೆಗಳನ್ನು (ಕಪ್ಪು) ಮಾಡಿಕೊಂಡು ಉಪಯೋಗಿಸಿಕೊಂಡಿದ್ದಾರೆ ಅಲ್ಲದೇ ಬಿದಿರುಗಳ ಟೊಳ್ಳುಗಳು, ಎಲುಬಿನ ಟೊಳ್ಳು ಭಾಗಗಳನ್ನೂ ಬಳಸಿದ್ದು ನಂತರದ ಕಾಲದಲ್ಲಿ ಮಣ್ಣಿನಿಂದ ಸುಟ್ಟು ಮಾಡಿದ ಪಾತ್ರೆಗಳನ್ನು ಬಳಸಿದಂತೆ ತೋರುತ್ತದೆ [೨೨೭] ಎಂಬಂತಹ ವಿವರಗಳು ತಿಳಿದುಬರುತ್ತವೆ. ವರ್ಣ ಲೇಪಿಸಿಕೊಂಡ ಕಾಡೆಮ್ಮೆಯ ಹೆಗಲ ಮೂಳೆಗಳು, ಕೆಲವೆಡೆ ಕಲ್ಲಿನಿಂದ ಕಡೆದಿಟ್ಟುಕೊಂಡ ಅಗಲ ಬಾಯಿಯ ಬಟ್ಟಲುಗಳೂ ಪ್ರಾಚೀನ ನೆಲೆಗಳಲ್ಲಿ ದೊರೆತಿದ್ದು ಇವುಗಳಲ್ಲಿ ಬಣ್ಣ ಕಲೆಸಿಕೊಂಡ ಕುರುಹುಗಳು ಕಂಡುಬಂದಿವೆ [೨೨೮] ಎನ್ನಲಾಗಿದೆ. ಹಾಗೇ ಸೋರೆಕಾಯಿ, ಬಿಲ್ವಪತ್ರಿಕಾಯಿಗಳ ಓಡುಗಳನ್ನು ಬಣ್ಣ ಮಿಶ್ರಮಾಡಿಕೊಳ್ಳುವ ಸಾಧನಗಳಾಗಿ [೨೨೯] ಪ್ರಾಚೀನರು ಬಳಸಿಕೊಂಡಿರುವುದನ್ನೂ ಗುರುತಿಸಲಾಗಿದೆ.

ಶಿಷ್ಟ ಪರಂಪರೆಯ ಕಾಲಕ್ಕಾಗಲೇ ಮಣ್ಣಿನ ಪಾತ್ರೆಗಳು ಬಳಕೆಗೆ ಬಂದಿದ್ದು ಇವುಗಳ ಜೊತೆಗೆ ಲೋಹ ಪಾತ್ರೆಗಳನ್ನೂ ಬಣ್ಣ ಮಿಶ್ರ ಮಾಡಿಕೊಳ್ಳಲು ಬಳಸಿರಬೇಕು. ಜನಪದ ಚಿತ್ರಕಾರರು ಈಗಲೂ ಮಣ್ಣಿನ ಪಾತ್ರೆಗಳನ್ನು ಇದಕ್ಕಾಗಿ ಬಳಸುತ್ತಿರುವುದನ್ನೂ ಗಮನಿಸಬಹುದು. ಜನಪದ ಭಿತ್ತಿಚಿತ್ರ ಕಲಾವಿದರು ಮಣ್ಣಿನ ಪಾತ್ರೆಯನ್ನು ಬಳಸಿದಂತೆಯೇ ಟೆಂಗಿನ ಚಿಪ್ಪುಗಳು. ಲೋಹ ಪಾತ್ರೆಗಲು. ಚೀನಿ ಮಣ್ಣಿನ ಪಾತ್ರೆಗಳು, ಹೀಗೆ ವಿವಿಧ ರೀತಿಯ ವಸ್ತುಗಳನ್ನು ಬಳಸಿದ್ದರೂ ಜನಪದರು ಬಣ್ಣ ಮಿಶ್ರ ಮಾಡಲು ಇದನ್ನೇ ಬಳಸುತ್ತಾರೆಂದು ನಿರ್ದಿಷ್ಟವಾಗಿ ಹೇಳುವಂತಿಲ್ಲ. ತಕ್ಷಣಕ್ಕೆ ಲಭ್ಯವಾದ ಯಾವುದೇ ಯೋಗ್ಯ ವಸ್ತುವನ್ನೂ ಅವರು ಬಳಸುವ ಸಾಧ್ಯತೆ ಇದೆ.

**V. ಕುಂಚ (Brush) :** ನೇಕಾರರು ಎಳೆಗಳನ್ನು ಸ್ವಚ್ಛಗೊಳಿಸಲು ಬಳಸುವ ಸಾಧನಕ್ಕೆ ಕುಂಚ ಎನ್ನಲಾಗಿದ್ದು, ಅದು ತೆಳುವಾದ ಅತೀ ಸೂಕ್ಷ್ಮವಾದ ಕಡ್ಡಿಗಳನ್ನು ಕೂಡಿಸಿ ಕಸಬರಿಗೆಯಂತೆ ಕಟ್ಟಲಾದ ಸಾಧನವಾಗಿರುತ್ತದೆ. ಹಾಗೆಯೇ ನವಿಲು ಗರಿಯ ಕುರ್ಚಿಕೆ. ಚವರಿ. ಚಾಮರಗಳಿಗೂ ಕುಂಚ ಎನ್ನಲಾಗಿದೆ. ಕುಂಚಕ್ಕೆ ಚಿತ್ರ ರಚಿಸುವ ಸಾಧನ ಎಂದು ಹೇಳಿಕೊಡುವ ಉದಾಹರಣೆ ೧೯೫೨ ರಲ್ಲಿ ಪ್ರಯೋಗವಾಗಿದ್ದು, ಕಲಾವಿದನ ಕುಂಚ ಎಂಬ ಪದಪ್ರಯೋಗ ಈ ಶತಮಾನದ ಮಧ್ಯಭಾಗಕ್ಕಿಂತ ಹಿಂದಕ್ಕೆ ಹೋಗಲಾರದು [೨೩೦] ಎಂಬ ವಿವರಗಳು ತಿಳಿದುಬರುತ್ತವೆ. ಉತ್ತರ ಕನ್ನಡ ಜನಪದೀಯರು ಇಂದಿಗೂ ಅಡಕೆ ಗಿಡದ ಸಿಪ್ಪೆಯ ತುದಿಯನ್ನು ಕುಂಚವಾಗಿ ಮಾಡಿಕೊಳ್ಳುತ್ತಾರೆ. ಗರಿ, ಬಿದಿರು

---

೨೨೬. ಜನಪದ ಚಿತ್ರಕಾರರ ವಿವಿಧ ರೀತಿಯ ಅಂಟುಮಾಧ್ಯಮಗಳು ಕುರಿತಾದ ಹೆಚ್ಚಿನ ವಿವರಣೆಗೆ ನೋಡಿ, ಡಾ॥ ಎಸ್. ಸಿ. ಪಾಟೀಲ : ಕರ್ನಾಟಕ ಜನಪದ ಚಿತ್ರಕಲೆ

೨೨೭. Yashodhar Mathpal : Prehistoric Rock paintings of Bhimbetka, page - 189

೨೨೮. ಎಸ್. ಕೆ. ರಾಮಚಂದ್ರರಾವ್ : ಕರ್ನಾಟಕದ ಕಲೆಗಳು, ಸಂಪುಟ ೧, ಪುಟ - ೪೦

೨೨೯. ಡಾ॥ ಶಿವರಾಮ ಕಾರಂತ : ಕರ್ನಾಟಕ ಚಿತ್ರಕಲೆ. ಪುಟ - ೨೧

೨೩೦. ಡಾ॥ ಅ. ಲ. ನರಸಿಂಹನ್ : ಕರ್ನಾಟಕದ ಭಿತ್ತಿಚಿತ್ರ ಪರಂಪರೆ. ಪುಟ - ೧೪೫

ಮತ್ತು ತಾಳೆ ಟೊಂಗೆಯಿಂದ ಕುಂಚಗಳನ್ನು ನಿರ್ಮಿಸುವ ಪದ್ಧತಿ ಇಂದಿಗೂ ಜನಪದರಲ್ಲಿ ಇದೆ. "ಅಮೇರಿಕದ ಆದಿವಾಸಿಗಳು ದೇಹಾಲಂಕಾರಕ್ಕಾಗಿ ಎಳೆಯ ಎಲೆಗಳಿಂದ ಕೂಡಿದ ಟೊಂಗೆಯನ್ನು ಕುಂಚದ ಹಾಗೆ ಉಪಯೋಗಿಸಿ ವರ್ಣ ಬಳಿದುಕೊಳ್ಳುತ್ತಾರಾದರೆ ಅಂಡಮಾನ್ ಬುಡಕಟ್ಟು ಜನಾಂಗದವರಿಗೆ ಬೆರಳುಗಳೇ ಕುಂಚಗಳಾಗಿವೆ. ಮಿಥಿಲಾದ ಜನಪದ ಚಿತ್ರಕಲೆ ಪಟಚಿತ್ರವನ್ನು ರಚಿಸುವುದು ಬಿದಿರು ಕಡ್ಡಿಗಳ ತುದಿಯಿಂದ. [೨೩೧] ಹೀಗೆ ಕುಂಚಗಳ ಸ್ವರೂಪದ ವಿವರಗಳು ತಿಳಿದುಬರುತ್ತವೆ.

ಪ್ರಾಗೈತಿಹಾಸಿಕ ಜನರು ಅನೇಕ ವಿಧದ ಕುಂಚಗಳನ್ನು ತಯಾರಿಸಿಕೊಂಡು ಬಳಸುತ್ತಿರಬಹುದು. ಪ್ರಾಣಿಗಳ ತುಪ್ಪಳುಗಳಿಂದ. ಇಲ್ಲವೇ ಬೇರೆ ಬೇರೆ ಪ್ರಾಣಿಗಳ ಕೂದಲುಗಳಿಂದಲೂ ಕುಂಚಗಳನ್ನು ತಯಾರಿಸಿಕೊಳ್ಳುತ್ತಿದ್ದರು. ಈಗಲೂ ಕೂಡಾ ಕುಂಚ ತಯಾರಿಕೆಗಾಗಿ ಪ್ರಾಣಿಗಳ ಕೂದಲು ಮತ್ತು ತುಪ್ಪಳ ಮುಖ್ಯ ಸಾಮಗ್ರಿಯಾಗಿದ್ದನ್ನು ನೋಡಬಹುದು. ಅಲ್ಲದೇ ಕುಂಚ ತಯಾರಿಕೆಯ ಇವರ ಮತ್ತೊಂದು ವಿಧಾನವೆಂದರೆ ಬಿದಿರು, ಇಲ್ಲವೇ ಗಿಡದ ಟೊಂಗೆಯ ಸಣ್ಣ ತುಂಡು. ಅಥವಾ ಬಳ್ಳಿ. ಬೇರುಗಳನ್ನು ತೆಗೆದುಕೊಂಡು ಅವುಗಳ ಒಂದು ಬದಿಯನ್ನು ಕಲ್ಲಿನಿಂದ ಜಜ್ಜಿ ಎಳೆ ಎಳೆಯಾಗಿ ಮಾಡಿಕೊಂಡು ಕುಂಚಗಳಾಗಿ ಉಪಯೋಗಿಸುತ್ತಿದ್ದರು. ಇದಲ್ಲದೇ ಸಣ್ಣದಾಗಿ ಬೆಳೆದ ಹುಲ್ಲುಗರಿಕೆಯನ್ನೂ ಕಿತ್ತು ಒಟ್ಟಾಗಿ ಕಟ್ಟಿ ಕುಂಚಗಳಿಗಾಗಿ ಉಪಯೋಗಿಸಿರಬಹುದು. ಈ ರೀತಿಯ ಹುಲ್ಲುಗರಿಕೆಯ ಕಸಬರಿಗೆಯನ್ನು ಮನೆಗಳಿಗೆ ಸುಣ್ಣ ಹಚ್ಚಲು ಹಳ್ಳಿಗಾಡಿನಲ್ಲಿ ಈಗಲೂ ಉಪಯೋಗಿಸುತ್ತಿರುವದನ್ನು ಕಾಣಬಹುದು. ಪ್ರಾಗೈತಿಹಾಸಿಕ ಜನರು ಕುಂಚಗಳಿಗಾಗಿ ಉಪಯೋಗಿಸುತ್ತಿದ್ದ ಬಳ್ಳಿ, ಬೇರು, ಗಿಡಗಳಲ್ಲಿ, ಪಾಲಾಶ (Palasha) ಎಂಬ ಗಿಡದ ಬೇರನ್ನು ಹೆಚ್ಚಾಗಿ ಉಪಯೋಗಿಸಿದ್ದಾರೆ. ಕಟ್ಟಿಗೆಯ ತುಂಡನ್ನು ಜಜ್ಜದೇ ಕೆಲವು ಸಲ ಹಾಗೇ ಇದರಿಂದ ನೇರವಾಗಿ ವರ್ಣಲೇಪನ ಮಾಡಿದ ಸಾಧ್ಯತೆಯೂ ಇದೆ. ಕೆಲವು ಸಲ ಈ ಕಟ್ಟಿಗೆ ತುಂಡಿನ ತುದಿಗೆ ಪ್ರಾಣಿಗಳ ಚರ್ಮವನ್ನು ಸುತ್ತಿಯೂ ವರ್ಣ ಲೇಪಿಸಲು ಉಪಯೋಗಿಸುತ್ತಿರಬಹುದು. [೨೩೨] ಹೀಗೆ ಪ್ರಾಗೈತಿಹಾಸಿಕ ಮಾನವರ ಕುಂಚಗಳ ಬಗೆಗೆ ವಿವರಗಳು ತಿಳಿದುಬರುತ್ತವೆ. ಶಿಷ್ಟ ಪರಂಪರೆಯ ಕಾಲದಲ್ಲಿ ಭಿತ್ತಿಚಿತ್ರ ಕಲೆಯಲ್ಲಿ ಕುಂಚಗಳ ತಯಾರಿಕೆ, ಬಳಕೆ ಇನ್ನಷ್ಟು ಮಹತ್ವ ಪಡೆದುಕೊಂಡಿತು.

ತೆಳು ವರ್ಣಗಳಿಗೆ ಬೇರೆ. ದಟ್ಟ ವರ್ಣಗಳಿಗೆ ಬೇರೆ, ಹೀಗೆ ಪ್ರತಿಯೊಂದು ವರ್ಣಗಳಿಗೂ ಬೇರೆಯದೇ ಕುಂಚ ಬಳಸಬೇಕೆಂದೂ ಕಾಲಾಂಜನ ವರ್ತಿಕಾ ಎಂಬುದು ಕಪ್ಪು ವರ್ಣ ಲೇಪನಕ್ಕಾಗಿ ಮಾತ್ರ ಬಳಸಬೇಕಾದ ಕುಂಚವಾಗಿದ್ದರೆ, ಬಿಳಿ ವರ್ಣಕ್ಕೆ ಮಾತ್ರ ಬಳಸುವ ಕುಂಚವು ' ವರ್ಣ ಸುಧಾಕುರ್ಚಕ ' ವಾಗಿದೆ ಎಂಬ ಕುಂಚಗಳ ವಿಧಗಳು ತಿಳಿದುಬರುತ್ತವೆ. ಹಾಗೇ ಕಲಾವಿದರ ಕುಂಚಗಳಿಗೆ ಪ್ರಾಚೀನ ಸಂಸ್ಕೃತ ಬರವಣಿಗೆಗಳಲ್ಲಿ ಕುರ್ಚಕ, ತೂಲಿಕ, ವರ್ತಿಕ ಎಂದು ಹೇಳಲಾಗಿದ್ದು "ಕುರ್ಚಕವು ಗಿಡದ ಟೊಂಗೆಯಿಂದ ಜಜ್ಜಿ ಮಾಡಲಾಗಿರುತ್ತದೆ. ತೂಲಿಕಾ ಇದು ತೂಲದಿಂದ (ಹತ್ತಿಯಿಂದ) ಮಾಡಲ್ಪಟ್ಟಿರುತ್ತದೆ. ವರ್ತಿಕವು ಸುರುಳಿಯಾಗಿ ಗಟ್ಟಿಯಾಗಿ ಸುತ್ತಿದ ಹತ್ತಿಯ ಚೂಪು ತುದಿಯ ತುಂಡು ಆಗಿರುತ್ತದೆ" [೨೩೩] ಎನ್ನುವ ವಿವರಗಳು ಕುಂಚಗಳ ಸ್ವರೂಪ ಮತ್ತು ಅವುಗಳ ಮೂಲಗಳನ್ನು ತಿಳಿಸಿಕೊಡುತ್ತವೆ. "ಮೊಗಲ್ ಮತ್ತು ಅನಂತರದ ಕಾಲದ ಕಲಾವಿದರು ಒಂಟೆ ಕೂದಲು, ಇಣಚಿಯ ಕೂದಲು, ಮುಂಗುಸಿಯ ಕೂದಲು

---

೨೩೧. ಡಾ|| ಅ. ಲ. ನರಸಿಂಹನ್ : ಕರ್ನಾಟಕದ ಭಿತ್ತಿಚಿತ್ರ ಪರಂಪರೆ, ಪುಟ - ೧೪೮

೨೩೨. S. K. Panday : Indian Rock Art, Page - 33

೨೩೩. C. Sivaramamurti : Chitrasutra of the Vishnudharmottara, Page - 191

ಮತ್ತು ಆಡಿನ ಕೂದಲುಗಳಿಂದ ಮಾಡಿದ ಕುಂಚಗಳನ್ನು ಉಪಯೋಗಿಸುತ್ತಿದ್ದರು." [೨೩೪] ಎಂದು ವಿದ್ವಾಂಸರ ಅಭಿಪ್ರಾಯ. "ಕರ್ನಾಟಕದ ಕೆಲವು ಜನಪದ ಕಲಾವಿದರು [೨೩೫] ಕುದುರೆ ಜವೆಗಳಿಂದ, ಬಿದಿರನ್ನು ಜಜ್ಜಿ, ಗುಣಿಕೆ ತುದಿಗೆ ಅರಿವೆ ಸುತ್ತಿ, ಗಲಗಿನ ಚೂಪು ತುದಿ ಬಳಸಿ ಬಣ್ಣ ಲೇಪಿಸುತ್ತಾರೆ " ಎಂಬ ವಿವರಗಳು ತಿಳಿದುಬರುತ್ತವೆ.

ಶಿಲ್ಪಶಾಸ್ತ್ರಗಳು ತೂಲಿಕಾ, ಲೇಖನಿ, ಕುರ್ಚ ಎಂಬ ಶಬ್ದಗಳನ್ನು ಕುಂಚಕ್ಕೆ ಸಂವಾದಿಯಾಗಿ ಬಳಸಿವೆ. ಶಿಲ್ಪರತ್ನವು [೨೩೬] ಕುಂಚಗಳಲ್ಲಿ ಸೂಕ್ಷ್ಮ, ಮಧ್ಯಮ, ವಿಶಾಲ ಎಂಬ ಮೂರು ಪ್ರಭೇದಗಳನ್ನು ಹೇಳಿ ಒಂದು ವರ್ಣದಿಂದ ಒಂದು ವರ್ಣದಲ್ಲಿ ಕುಂಚ ಅದ್ದುವವದರಿಂದ ಆ ವರ್ಣದ ಛಾಯೆಯಲ್ಲಿ ಬದಲಾವಣೆಯಾಗುತ್ತದೆ. ನೀರಿನಲ್ಲಿ ತೊಳೆದು ಎದ್ದಿದಾಗಲೂ ಸ್ವಲ್ಪ ವರ್ಣ ಉಳಿದುಕೊಂಡಿರುತ್ತದೆ. ಆದುದರಿಂದ ಆಯಾ ವರ್ಣಕ್ಕೆ ಬೇರೆ ಬೇರೆಯಾದ ಕುಂಚಗಳನ್ನೇ ಬಳಸಬೇಕೆಂದು ಹೇಳುತ್ತದೆ. ಸಮರಾಂಗಣ ಸೂತ್ರಧಾರವು [೨೩೭] ೧. ಕುರ್ಚ ೨. ಹಸ್ತಕುರ್ಚ ೩. ಭಾಸಕುರ್ಚ ೪. ಕಲ್ಲುಕುರ್ಚ ೫. ವರ್ತನಿ ಕುರ್ಚ ಎಂಬ ಐದು ಬಗೆಯ ಕುಂಚಗಳನ್ನು ಹೇಳಿ, ಇವುಗಳನ್ನು ಯಾವ ಗಿಡಗಳಿಂದ ತಯಾರಿಸಬೇಕೆಂದೂ ಅದು ಹೇಳಿದೆ. ಮೊದಲನೆಯದಾದ ಕುರ್ಚವನ್ನು ಆಲದ ಗಿಡದಿಂದ ಎರಡನೆಯ ಹಸ್ತಕುರ್ಚವನ್ನು ಅಶ್ವತ್ಥ ವೃಕ್ಷದಿಂದ, ಮೂರನೆಯದಾದ ಭಾಸಕುರ್ಚವನ್ನು ಪ್ಲಾಕ್ಷಾ ಮರದಿಂದ, ನಾಲ್ಕನೆಯ ಕಲ್ಲುಕುರ್ಚವನ್ನು ಔದುಂಬರ ಗಿಡದಿಂದ ತಯಾರಿಸಬೇಕೆಂದು, ಐದನೆಯ ವರ್ತನಿಕುರ್ಚವನ್ನು ಪ್ರಾಣಿಗಳ ಕೂದಲುಗಳಿಂದ ನಿರ್ಮಿಸಬೇಕೆಂದು ತಿಳಿಸುತ್ತದೆ. ಅಲ್ಲದೇ ಕುಂಚಗಳನ್ನು ಗಿಡದ ತೊಗಟೆಯಿಂದ, ಕತ್ತೆಯ ಕೂದಲುಗಳಿಂದ, ಹೋರಿಯ ಕಿವಿಯಲ್ಲಿನ ಕೂದಲುಗಳಿಂದ ತಯಾರಿಸಲೂ ತಿಳಿಸುತ್ತದೆ.

ಮಾನಸೋಲ್ಲಾಸವು [೨೩೮] ಕುಂಚಗಳ ಬಗ್ಗೆ ಸ್ಪಷ್ಟ ಚಿತ್ರಣ ಕೊಡುತ್ತದೆ. ಕರುವಿನ ಕಿವಿಯಿಂದ ಪಡೆದುಕೊಂಡ ಕೂದಲುಗಳನ್ನು ಬಿದಿರುಕಡ್ಡಿಯ ತುದಿಗೆ ಅರಗು (ಲಾಕ್ಷಾರಸ) ಇಲ್ಲವೆ ಅಂಟು ಬಳಸಿ ಬಂಧಿಸಬೇಕೆಂದು ಹೇಳಿ ಕುಂಚಗಳಲ್ಲಿ ೧. ಚಪ್ಪಟೆ ಅಥವಾ ಸ್ಥೂಲ ೨. ಮಧ್ಯಮ ೩. ಸೂಕ್ಷ್ಮ ಎಂಬುದಾಗಿ ಮೂರು ಪ್ರಭೇದಗಳಿದ್ದು ಚಪ್ಪಟೆ ಅಥವಾ ಸ್ಥೂಲ ಕುಂಚವನ್ನು ವಿಶಾಲವಾದ ಪ್ರದೇಶಲ್ಲಿ ಬಣ್ಣ ತುಂಬಲು, ಮಧ್ಯಮ ಕುಂಚವನ್ನು ಚಿತ್ರಗಳ ಒಳಭಾಗದಲ್ಲಿ ಬಣ್ಣ ತುಂಬಲು ಹಾಗೂ ಸೂಕ್ಷ್ಮ ಕುಂಚಗಳನ್ನು ಸೂಕ್ಷ್ಮ ಕೆಲಸಗಳಿಗಾಗಿ ಉಪಯೋಗಿಸಬೇಕೆಂದೂ ಅವುಗಳನ್ನು ಬಳಸುವ ರೀತಿಯನ್ನೂ ಹೇಳುತ್ತದೆ.

ಶಿಲ್ಪರತ್ನವು [೨೩೯] ಕುಂಚಗಳ ಬಗೆಗೆ ಈ ಕೆಳಗಿನಂತೆ ವಿವರವಾಗಿ ತಿಳಿಸುತ್ತದೆ. " ಕುಂಚದ ಮುಖಭಾಗದ ಅಳತೆಯ ಎಂಟುಪಟ್ಟು ಅದರ ಹಿಡಿಕೆಯು ಉದ್ದವಾಗಿರಬೇಕು. ಎಂದು ಅಳತೆಯನ್ನು ಹೇಳಿ, ಕುಂಚದ ಹಿಡಿಕೆಯ ಆಕಾರವನ್ನು ಎಂಟು ಕೋನವಾಗಿ (ಅಷ್ಟಕೋನವಾಗಿ) ಇಲ್ಲವೇ ಸಿಲಿಂಡರದ ಆಕಾರದ ಹಾಗೆ ದುಂಡಾಗಿ ರಚಿಸಬೇಕು. ಈ ಕುಂಚದ ಹಿಡಿಕೆಯ ಮೇಲೆ ಬಾರ್ಲಿ ಕಾಳಿನ ಆಕಾರದ ದಿಂಡನ್ನು (ಗೂಟವನ್ನು) ಅರ್ಧ ಅಥವಾ ಒಂದು ಅಂಗುಲ ಮುಖಭಾಗದಿಂದ ಬಿಟ್ಟು ಕೂಡ್ರಿಸಬೇಕು. ಕರುವಿನ ಕಿವಿಯಿಂದ ಪಡೆದ ಕೂದಲುಗಳಿಂದ ಚಪ್ಪಟೆ (ಸ್ಥೂಲ) ಕುಂಚ ನಿರ್ಮಿಸಬೇಕು.

---

೨೩೪. C. Sivaramamurti : Chitrasutra of the Vishnudharmottara, Page - 192
೨೩೫. ಡಾ|| ಎಸ್. ಸಿ. ಪಾಟೀಲ್ : ಕರ್ನಾಟಕದ ಜನಪದ ಚಿತ್ರಕಲೆ, ಪುಟ - ೧೭೭
೨೩೬. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೫೭ - ೫೮
೨೩೭. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ, ಅಧ್ಯಾಯ ೭೩, ಶ್ಲೋಕ ೧೨ ರಿಂದ ೧೪
೨೩೮. ಜಿ. ಕೆ. ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ, ಭಾಗ II, ಅಧ್ಯಾಯ I, ಶ್ಲೋಕ ೧೪೫ - ೪೮
೨೩೯. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೫೩ ರಿಂದ ೫೮

ಅಡಿನ ಹೊಟ್ಟೆಯ ಬುಡದ ಕೂದಲುಗಳನ್ನು ಮತ್ತು ಕಾಡು ಇಲಿಯ ಬಾಲದ ಕೂದಲುಗಳನ್ನು ಸೂಕ್ಷ್ಮ ಕುಂಚಗಳಿಗೆ ಬಳಸಬೇಕು. ಈ ಸೂಕ್ಷ್ಮ ಕುಂಚಗಳು ಎಷ್ಟು ಸೂಕ್ಷ್ಮವಿರಬೇಕೆಂದರೆ ಹುಲ್ಲಿನ ತುದಿಯನ್ನು ಹೋಲುವ ಹಾಗಿರಬೇಕು. ಈ ರೀತಿಯ ಚೂಪು ತುದಿಯನ್ನು ಹೊಂದಿದ ಕೂದಲುಗಳನ್ನು ತೆಗೆದುಕೊಂಡು ಅಷ್ಟಭುಜ ಇಲ್ಲವೇ ದುಂಡಾದ ಬಿದಿಗೆ ಬಾರ್ಲಿ ಕಾಳಿನ ಆಕಾರದ ಗುರ್ತು ಮಾಡಿಕೊಂಡ ಜಾಗದಲ್ಲಿ ಸಿಕ್ಕಿಸಿ, ಅಂಟು ಇಲ್ಲವೇ ಲಾಕ್ಷಾರಸದಿಂದ ಬಂಧಿಸಬೇಕು. ಆಗ ಉತ್ತಮವಾದ ಕುಂಚ ತಯಾರಾಗುವುದು " ಎಂದು ಕುಂಚಗಳ ಸ್ವರೂಪ ಮತ್ತು ತಯಾರಿಕೆಯ ಬಗೆಗೆ ಇದು ವಿವರವಾಗಿ ತಿಳಿಸುತ್ತದೆ. ಶಿವತತ್ವರತ್ನಾಕರದ [೨೪೦] ಪ್ರಕಾರ, ಪುಡಿ ಮಾಡಿದ ಜೇನುಮೇಣದಿಂದ ತವರವನ್ನು ಹಸನು ಮಾಡಿ ಮುಳ್ಳಿನ ರೂಪಕ್ಕೆ ತರಬೇಕು. ಅದಕ್ಕೆ ಬತ್ತಿಯನ್ನು ಸೇರಿಸಿ ಬರೆಯಬೇಕು. ಇದನ್ನು ' ವರ್ತಿಕಾ ' ಎನ್ನುತ್ತಾರೆ. ಕರುವಿನ ಕಿವಿಯಲ್ಲಿ ಬೆಳೆದ ಎಳೆಗೂದಲನ್ನು ತೆಗೆದುಕೊಂಡು ಅರಗಿನ ಸಹಾಯದಿಂದ ಕುಂಚದ ಅಂಚಿನಲ್ಲಿ ಸೇರಿಸಬೇಕು. ಇದನ್ನು ' ಲೇಖನಿ ' ಎನ್ನುತ್ತಾರೆ. ಕಿರುಬೆರಳಿನ ಗಾತ್ರದ ಎರಡು ಭಾಗಗಳನ್ನು ಹೊಂದಿದ ಗಟ್ಟಿಯಾದ ಬಿದಿರಿನ ಕಡ್ಡಿಯನ್ನು ಸಿದ್ಧಗೊಳಿಸಿಕೊಂಡು ಅದರ ಅಂಚಿನಲ್ಲಿ ತಾಮ್ರದಿಂದ ಮಾಡಿದ ಸಣ್ಣಗಾತ್ರದ ಮೊಳೆಯನ್ನು ಜೋಡಿಸಬೇಕು. ಅಗತ್ಯವಿರುವಷ್ಟು ಅದು ಹೊರಗಿರುವಂತೆ ಮಾಡಬೇಕು. ಇಂತಹ ಕುಂಚವನ್ನು ' ಪತ್ರಿ ' ಎಂದು ಕರೆಯುವರು ಎನ್ನುವಂತಹ ವಿವರಗಳನ್ನು ಕುಂಚದ ಬಗೆಗೆ ಇದು ನೀಡುತ್ತದೆ.

ಜನಪದ ಭಿತ್ತಿಚಿತ್ರ ಕಲಾವಿದರು ತಮಗೆ ತಿಳಿದಂತಹ ವಿಧಾನಗಳಿಂದ ಕುಂಚಗಳನ್ನು ನಿರ್ಮಿಸಿಕೊಂಡು ಚಿತ್ರ ಬರೆಯುವುದನ್ನು ಈಗಲೂ ಅಲ್ಲಲ್ಲಿ ನೋಡಬಹುದಾಗಿದೆ. ಮಾರುಕಟ್ಟೆಯಲ್ಲಿ ದೊರೆಯುವ ಆಧುನಿಕ ಕುಂಚಗಳನ್ನು ಬಳಸಲು ಪ್ರಾರಂಭಿಸಿದ್ದರೂ ಜನಪದ ಭಿತ್ತಿಚಿತ್ರ ಕಲಾವಿದರಲ್ಲಿ ಅಲ್ಲಲ್ಲಿ ಇನ್ನೂ ಪ್ರಾಚೀನ ಪರಂಪರೆಯಿಂದ ಬಂದ ಕುಂಚಗಳ ತಯಾರಿಕೆ, ಬಳಕೆಯನ್ನು ಕಾಣಬಹುದು. ಉತ್ತರ ಕರ್ನಾಟಕ ಭಾಗದಲ್ಲಿ ಗುಡಿ ಹುಣ್ಣಿಮೆಯ (ಭಾರತ ಹುಣ್ಣಿಮೆ) ಸಂದರ್ಭದಲ್ಲಿ ರಚಿಸುವ ಚಿತ್ರಗಳಿಗಾಗಿ ವಿವಿಧ ರೀತಿಯ ಕುಂಚಗಳನ್ನು ಬಳಸುತ್ತಾರೆ. ಕಡ್ಡಿಯ ತುದಿಯಿಂದ ನೇರವಾಗಿ ರಚಿಸುವುದು, ಕಡ್ಡಿಯ ತುದಿಗೆ ಹತ್ತಿ ಇಲ್ಲವೇ ಬಟ್ಟೆ ಸುತ್ತುವುದು, ಟೆಂಗಿನ ನಾರನ್ನು ಒಟ್ಟುಗೂಡಿಸಿ ಸಿವುಡಿನಂತೆ ಕಟ್ಟುವುದು, ಟೆಂಗಿನ ನಾರನ್ನು ಇಲ್ಲವೇ ಪುಂಡಿಯ ನಾರನ್ನು ಕಡ್ಡಿಗೆ ಬಂಧಿಸುವುದು, ಹೀಗೆ ತಮಗೆ ತಿಳಿದ ವಿಧಾನಗಳನ್ನು ಕುಂಚ ತಯಾರಿಕೆಯಲ್ಲಿ ಅನುಸರಿಸುತ್ತಾರೆ. ಇವಾವವೂ ಲಭ್ಯವಿಲ್ಲದೇ ಹೋದಾಗ ಬೆರಳಿನಿಂದಲೇ ಚಿತ್ರ ರಚಿಸುವುದು ಕಂಡುಬರುತ್ತದೆ. ದೀಪಾವಳಿ, ಕಾರಹುಣ್ಣಿಮೆಯಲ್ಲಿ ಬರೆಯಲಾಗುವ ಗೋಡೆಚಿತ್ರಗಳಿಗೂ ಹೀಗೆ ತಮಗೆ ತಿಳಿದ ವಿಧಾನಗಳಿಂದ ಕುಂಚ ನಿರ್ಮಿಸಿಕೊಳ್ಳುತ್ತಾರೆ. ಜನಪದರ ಕುಂಚ ನಿರ್ಮಾಣ ವಿಧಾನವನ್ನು [೨೪೧] ನಿರ್ದಿಷ್ಟವಾಗಿ ಹೀಗೆ ಎಂದು ಹೇಳಲು ಬರುವಂತಿಲ್ಲ. ಲಭ್ಯವಸ್ತುಗಳು, ಅವಶ್ಯಕತೆ, ಅಭಿರುಚಿಗಳಿಗನುಸಾರವಾಗಿ ರಚನಾಕಾರನ ತಕ್ಷಣದ ನಿರ್ಧಾರವನ್ನು ಅವಲಂಬಿಸಿರುತ್ತದೆ.

**VI. ಕಂಟಗಳು :** ತಾಳೆಗರಿಯ ಮೇಲೆ ಬರೆಯುವದಕ್ಕೆ ಮುಖ್ಯವಾಗಿ ಬಳಸುತ್ತಿದ್ದ ಕಂಟಗಳು ಕಾವಿಭಿತ್ತಿ ಚಿತ್ರರಚನೆಯಲ್ಲಿಯೂ ಉಪಯೋಗಿಸಲ್ಪಡುತ್ತವೆ. ಕಮ್ಮಾರರು, ಅಕ್ಕಸಾಲಿಗರು, ಅಪರೂಪವಾಗಿ ಶಿಲ್ಪಿಗಳು [೨೪೨]

---

೨೪೦. ಮಲ್ಲೇಪುರಂ ಜಿ. ವೆಂಕಟೇಶ (ಸಂ.) : ಶಿವತತ್ವರತ್ನಾಕರ, ಪುಟ - ೩೫೬

೨೪೧. ಜನಪದ ಭಿತ್ತಿಚಿತ್ರ ರಚನಾಕಾರರ ಕುಂಚ ನಿರ್ಮಾಣ ಬಳಕೆ. ಇವುಗಳ ಹೆಚ್ಚಿನ ವಿವರಗಳಿಗೆ ಡಾ|| ಎಸ್. ಸಿ. ಪಾಟೀಲ ಅವರ " ಕರ್ನಾಟಕದ ಜನಪದ ಚಿತ್ರಕಲೆ " ಗ್ರಂಥ ನೋಡಿರಿ.

೨೪೨. ಡಾ|| ಬಿ. ಕೆ. ಹಿರೇಮಠ : ಕನ್ನಡ ಹಸ್ತಪ್ರತಿಗಳು, ಒಂದು ಅಧ್ಯಯನ, ಪುಟ - ೨೮

ಮತ್ತು ಸಾಲಿಮಠಗಳಲ್ಲಿ [೨೪೩] ಕಂಟಗಳನ್ನು ತಯಾರಿಸುತ್ತಿದ್ದರು ಎಂದು ಹೇಳಲಾಗಿದೆ. ಕಂಟ ಎಂದರೆ ಮುಳ್ಳು. ಇವುಗಳ ತುದಿ ಮುಳ್ಳಿನಂತೆ ತೂಪಾಗಿರುವುದರಿಂದ ಈ ಸಾಧನಕ್ಕೆ ಕಂಟ ಎನ್ನುವ ಹೆಸರು ಬಂದಿದೆ. ಇದರ ಒಂದು ತುದಿ ಚೂಪಾಗಿದ್ದು. ಮತ್ತೊಂದು ತುದಿ ಸಣ್ಣ ಚಾಕುವಿನಂತೆ. ಇಲ್ಲವೇ ಅಲಂಕಾರಿಕ ವಿನ್ಯಾಸದಲ್ಲಿರುತ್ತದೆ. ಚಾಕುವಿನಂತೆ ಹಿಂದಿನ ತುದಿ ಹೊಂದಿದ ಕಂಟಗಳನ್ನೇ ಕಾವಿ ಚಿತ್ರರಚನೆಯಲ್ಲಿ ಹೆಚ್ಚಾಗಿ ಬಳಸಲಾಗುತ್ತದೆ. ಕಾರಣ ಚೂಪಾದ ತುದಿಯಿಂದ ಕೊರೆದ ಗೀರುಗಳಲ್ಲಿನ ಭಿತ್ತಿ ಮಿಶ್ರಣವನ್ನು ಬೇರ್ಪಡಿಸಲು ಇದು ಅನುಕೂಲಕರ. ಕಬ್ಬಿಣ. ಒತ್ತಾಳಿ, ಕಂಚು ಲೋಹಗಳಿಂದ ಕಂಟಗಳನ್ನು ನಿರ್ಮಿಸುತ್ತಿದ್ದ [೨೪೪] ವಿವರಗಳು ದೊರೆಯುತ್ತವೆ. ಚೂಪಾದ ಕಂಟಗಳ ಮೊನೆಗಳನ್ನು ರಕ್ಷಿಸಿಡಲು ಅವುಗಳನ್ನು [೨೪೫] ಬಿದಿರು ಕೊಳವೆಗಳಲ್ಲಿ ಹಾಕಿಡುತ್ತಿದ್ದರು. ನಿರ್ಮಾಣ ಮಾಡುವವನ ಕುಶಲತೆ ಮತ್ತು ಅಭಿರುಚಿಗಳಿಗನುಸಾರವಾಗಿ ಕಂಟಗಳು ವಿವಿಧ ಶೈಲಿ ಮತ್ತು ವಿನ್ಯಾಸದಲ್ಲಿ ರಚನೆಯಾಗಿವೆ. ಕಾವಿಭಿತ್ತಿ ಚಿತ್ರರಚನೆಯಲ್ಲಿ ಹಸಿಯಾದ ಭಿತ್ತಿಯ ಮೇಲೆ ಚಿತ್ರ ಬರೆದ ಕಾಗದವನ್ನು ಅಂಟಿಸಿ ಚೂಪಾದ ಕಂಟದಿಂದ ಗೀರಲಾಗುತ್ತದೆ. ಇಲ್ಲಿ ಕುಂಚದ ಬದಲಾಗಿ ಕಂಟದ ಅವಶ್ಯಕತೆ ಹೆಚ್ಚಾಗಿರುತ್ತದೆ.

ಒಟ್ಟಾರೆಯಾಗಿ ಭಿತ್ತಿ ಚಿತ್ರಕಲೆಯ ಪರಿಕರಗಳು ಆಯಾ ಮಾಧ್ಯಮದ ಅವಶ್ಯಕತೆಯ ಹಿನ್ನೆಲೆಯಲ್ಲಿ ಬೇರೆ ಬೇರೆಯಾಗಿ ಬಳಕೆಗೊಂಡಿರುವುದು ಮೇಲಿನ ವಿವರಣೆಯಿಂದ ತಿಳಿದುಬರುತ್ತದೆ.

---

೨೪೩. ಕರೀಗೌಡ ಬೀಚನಹಳ್ಳಿ (ಸಂ.) : ಕರಕುಶಲ ಕಲೆಗಳು (ಕನ್ನಡ ವಿಶ್ವವಿದ್ಯಾಲಯ. ವಿಶ್ವಕೋಶ. ೨). ಪುಟ - ೨೭೮

೨೪೪. ಡಾ॥ ಬಿ. ಕೆ. ಹಿರೇಮಠ : ಕನ್ನಡ ಹಸ್ತಪ್ರತಿಗಳು. ಒಂದು ಅಧ್ಯಯನ, ಪುಟ - ೨೮

೨೪೫. ಕರೀಗೌಡ ಬೀಚನಹಳ್ಳಿ (ಸಂ.) : ಕರಕುಶಲ ಕಲೆಗಳು (ಕನ್ನಡ ವಿಶ್ವವಿದ್ಯಾಲಯ. ವಿಶ್ವಕೋಶ. ೨). ಪುಟ - ೨೭೮

ಭಿತ್ತಿ ಚಿತ್ರರಚನಾ ವಿಧಾನವನ್ನು ಅಧ್ಯಯನದ ಅನುಕೂಲತೆಗಾಗಿ

ಅ. ಭಿತ್ತಿ ಚಿತ್ರರಚನಾ ಪೂರ್ವಾಂಗ

ಬ. ಭಿತ್ತಿ ಚಿತ್ರರಚನಾ ಉತ್ತರಾಂಗ

ಎಂದು ಎರಡು ವಿಭಾಗವಾಗಿ ವಿಂಗಡಿಸಿಕೊಳ್ಳಲಾಗಿದೆ. ಪೂರ್ವಾಂಗದಲ್ಲಿ ಚಿತ್ರಗಳ ಪ್ರಮಾಣ, ಅಳತೆ ವಿಧಾನ, ಸೂತ್ರಗಳು, ನವಸ್ಥಾನಗಳು, ಚಿತ್ರದ ಷಡಂಗಗಳು ಹೀಗೆ ಚಿತ್ರರಚನೆ ಪೂರ್ವದಲ್ಲಿ ಕಲಾವಿದನು ಗಮನಿಸತಕ್ಕ ಅಂಶಗಳು ಒಳಗೊಳ್ಳುತ್ತವೆ. ಕಲಾವಿದನ ಮಾನಸಿಕ ಸಿದ್ಧತೆ ಇದಾಗಿದ್ದು ಮುಂದಿನ ಉತ್ತರಾಂಗದ ಕ್ರಿಯೆಗೆ ಬುನಾದಿ ಹಾಕುವ ಹಂತವು ಈ ಪೂರ್ವಾಂಗದಲ್ಲಿ ನಡೆಯುತ್ತದೆ. ಉತ್ತರಾಂಗವು ಕ್ರಿಯಾರಂಗವಾಗಿದ್ದು, ಪೂರ್ವಾಂಗದಲ್ಲಿ ಗಮನಿಸಿದಂತಹ ಅಂಶಗಳಿಗೆ ಅನುಗುಣವಾಗಿ ಚಿತ್ರರಚನೆ ಮಾಡುವ ಕ್ರಿಯೆ ಇಲ್ಲಿ ನಡೆಯುತ್ತದೆ. ಭಿತ್ತಿ ಹಸಿ ಇರುವಾಗ ಚಿತ್ರರಚನೆ ಮಾಡುವುದು, ಭಿತ್ತಿ ಒಣಗಿದ ಮೇಲೆ ಚಿತ್ರ ರಚಿಸುವುದು, ಟೆಂಪರಾ ವಿಧಾನದಲ್ಲಿ ಚಿತ್ರ ರಚಿಸುವುದು ಹೀಗೆ ಚಿತ್ರರಚನಾ ವಿಧಾನಗಳು, ಮತ್ತು ಚಿತ್ರರಚನೆಯ ಆರು ಹಂತಗಳು ಈ ಉತ್ತರಾಂಗದಲ್ಲಿ ಒಳಗೊಳ್ಳುತ್ತವೆ. ಇವುಗಳನ್ನು ಒಂದೊಂದಾಗಿ ನೋಡಬಹುದು.

## ಅ. ಭಿತ್ತಿ ಚಿತ್ರರಚನಾ ಪೂರ್ವಾಂಗ :

ಚಿತ್ರವನ್ನು ಯಾವ ಮಾನ ಅಥವಾ ಪ್ರಮಾಣದಲ್ಲಿ ನಿರ್ಮಿಸಬೇಕು. ಮನುಷ್ಯ ಚಿತ್ರಗಳ ಪ್ರಮಾಣವೇನು, ದೇವತಾ ಚಿತ್ರಗಳ ಪ್ರಮಾಣವೇನು, ಸ್ತ್ರೀಯರು, ಮಕ್ಕಳು, ಪ್ರಾಣಿ-ಪಕ್ಷಿಗಳು ಮುಂತಾದ ಚಿತ್ರರಚನೆಯಲ್ಲಿ ಪ್ರಾಚೀನರು ಅನುಸರಿಸುತ್ತಿದ್ದ ಅಳತೆ, ವಿಧಾನ, ಪ್ರಮಾಣ, ತಾಳಮಾನಗಳು ಪ್ರಮುಖವಾಗಿವೆ. ಭಿತ್ತಿಚಿತ್ರಗಳ ತಾಳಮಾನ, ಅಳತೆಗಳ ಬಗ್ಗೆ ಪ್ರಾಚೀನ ಭಿತ್ತಿಚಿತ್ರಗಳಿಂದ ನಮಗೆ ಅಲ್ಪ ಸ್ವಲ್ಪ ವಿವರ ಮಾತ್ರ ತಿಳಿದುಬರುತ್ತದೆ ವಿನಃ ಹೆಚ್ಚಿನ ವಿಷಯ ತಿಳಿದುಬರುವದಿಲ್ಲ. ಈ ಕುರಿತು ಪ್ರಾಚೀನ ಗ್ರಂಥಗಳಿಂದ ಮತ್ತು ಅದಕ್ಕಿಂತ ಹೆಚ್ಚಿನದಾಗಿ ಶಿಲ್ಪಶಾಸ್ತ್ರಗಳಿಂದ ತಿಳಿದುಬರುತ್ತದೆ. ಶಿಲ್ಪಶಾಸ್ತ್ರಗಳು ಚಿತ್ರರಚನೆಯಲ್ಲಿ ಅನುಸರಿಸುವ ತಾಳಮಾನದ ಬಗ್ಗೆ ವಿವರವಾಗಿ ಚರ್ಚಿಸಿವೆ. ಯಾವುದೇ ಚಿತ್ರ ರಚಿಸಬೇಕಾದರೂ ಇಷ್ಟೇ ಅಳತೆಯಲ್ಲಿ ಇಂತಿಷ್ಟೇ ಪ್ರಮಾಣದಲ್ಲಿ ರೂಪಿಸಬೇಕೆಂದು, ಶಿಲ್ಪಶಾಸ್ತ್ರ ಗ್ರಂಥಗಳು ಪ್ರತಿಯೊಂದು ಸೂಕ್ಷ್ಮ ಅಳತೆಯ ಬಗ್ಗೆಯೂ ಚರ್ಚಿಸಿವೆ.

ಚಿತ್ರದ ಹಿನ್ನೆಲೆ ಸ್ಥಳವನ್ನು (Background) ಎಷ್ಟು ಬಿಡಬೇಕು. ಮುನ್ನೆಲೆ ಸ್ಥಳವನ್ನು (Foreground) ಎಷ್ಟು ಬಿಡಬೇಕು. ಯಾವ ಚಿತ್ರ ದೊಡ್ಡದು, ಯಾವ ಚಿತ್ರ ಸಣ್ಣದು ಚಿತ್ರಿಸಬೇಕು ಎಂಬ ಅಂಶಗಳು ಚಿತ್ರದ ವಿಷಯದ ಮೇಲೆ ಅವಲಂಬಿಸಿದಂತೆಯೇ ಕಲಾವಿದನ ಭಾವನಾತ್ಮಕ ನಿರ್ಧಾರ, ಆತನ ಅನುಭವ ಸಂಪತ್ತು ಮತ್ತು

ಪ್ರಬುದ್ಧತೆಗಳನ್ನೂ ಅವಲಂಬಿಸಿರುತ್ತವೆ. ಹೀಗಾಗಿ ಪ್ರಾಚೀನ ಭಿತ್ತಿಚಿತ್ರಗಳಲ್ಲಿ ಎಲ್ಲ ಚಿತ್ರಗಳಲ್ಲೂ ಪ್ರಮಾಣ ಅಥವಾ ತಾಳಮಾನ ಅನುಸರಿಸಿ ಚಿತ್ರಿಸಿದ್ದಾರೆಂದು ಹೇಳಲು ಬರುವಂತಿಲ್ಲ. ಆದರೆ ಅಜಂತಾದಂತಹ ಕೆಲವು ಭಿತ್ತಿಚಿತ್ರಗಳಲ್ಲಿ ಶಿಲ್ಪಶಾಸ್ತ್ರಗಳಲ್ಲಿ ಹೇಳಲಾದ ತಾಳಮಾನ ಕ್ರಮವನ್ನು ಅನುಸರಿಸುವುದು ಕಂಡುಬರುತ್ತದೆ.

**I. ಅಳತೆ :** ಪ್ರಾಚೀನರು ಚಿತ್ರದ ಎತ್ತರ. ಅಗಲ ಮುಂತಾದ ಪ್ರಮಾಣಗಳನ್ನು 'ತಾಳ' ದಿಂದ ಮತ್ತು ಅಂಗುಳ (ಅಂಗುಲ) ದಿಂದ ಗುರುತಿಸುತ್ತಿದ್ದರು. ಅಂಗುಲವೇ ಒಂದು ನಿಶ್ಚಿತ ಮಾನವಾಗಿ ಬಳಕೆಯಲ್ಲಿತ್ತು. ಅಳತೆಗಳು ಅಂಗುಲವನ್ನು ಗುಣಿಸಿದ ಅಥವಾ ಭಾಗಿಸಿದ ಮೊತ್ತದಲ್ಲಿ ಇರುತ್ತಿದ್ದವು.[೧] ಅಂಗುಲಗಳಲ್ಲಿ ಮೂರು ವಿಧಗಳು.[೨]

೧. ಮಾತ್ರಾಂಗುಳ  ೨. ಮಾನಾಂಗುಳ  ೩. ದೇಹಾಂಗುಳ

**೧. ಮಾತ್ರಾಂಗುಳ :** ಇದು ಎಂಟು ಬಾರ್ಲಿ ಕಾಳುಗಳ ಉದ್ದಕ್ಕೆ ಸಮನಾಗಿರುತ್ತದೆ.

**೨. ಮಾನಾಂಗುಳ :** ಇದು ಕಲಾವಿದನ ಅಂದರೆ ಚಿತ್ರರಚನೆಕಾರನ ಬಲಗೈಯ ಮಧ್ಯದ ಬೆರಳಿನ ಮಧ್ಯದ ಪರ್ವದ ಉದ್ದವನ್ನು ಅಥವಾ ಅಗಲವನ್ನು ಒಂದು ಅಂಗುಲವಾಗಿ ಸ್ವೀಕರಿಸುವುದಾಗಿದೆ. ಕಾರಣ ಮಧ್ಯಬೆರಳಿನ ಮಧ್ಯಪರ್ವದ ಉದ್ದ ಮತ್ತು ಅಗಲಗಳು ಸಮನಾಗಿರುತ್ತವೆ.

**೩. ದೇಹಾಂಗುಳ :** ಇದು ಚಿತ್ರದ ಎತ್ತರವನ್ನು ನಿಗದಿಯಾದ ಭಾಗಗಳಲ್ಲಿ ವಿಭಜಿಸಿ ಒಂದು ಭಾಗವನ್ನು ಅಂಗುಳ ಎಂದು ಪರಿಗಣಿಸಲಾಗುತ್ತದೆ.

ನಗ್ನಜಿತ್‌ನ ಚಿತ್ರಲಕ್ಷಣವು[೩] ಅಂಗುಳವನ್ನು ಹೀಗೆ ಗುರುತಿಸಿದೆ, –" ಬಿಸಿಲಿನಲ್ಲಿ ಚಲಿಸುವ ಎಂಟು ಧೂಳು ಕಣಗಳು ಸೇರಿ ಒಂದು ಕೂದಲ ಬಿಂದು. ಎಂಟು ಕೂದಲು ಬಿಂದು ಸೇರಿ ಒಂದು ಹೇನಿನ ಮೊಟ್ಟೆ, ಎಂಟು ಹೇನಿನ ಮೊಟ್ಟೆ ಒಂದು ಹೇನು. ಎಂಟು ಹೇನುಗಳು ಒಂದು ಬಾರ್ಲಿ ಕಾಳು. ಎಂಟು ಬಾರ್ಲಿ ಕಾಳುಗಳು ಸೇರಿ ಒಂದು ಅಂಗುಲ ಎಂದು ಅಳತೆಯನ್ನು ಹೇಳುತ್ತದೆ. ಮಾನಸೋಲ್ಲಾಸವು[೪] ಅಂಗುಲ ಅಳತೆಯನ್ನು " ಎಂಟು ಪರಮಾಣು ಒಂದು ರಸರೇಣು. ಎಂಟು ರಸರೇಣು ಸೇರಿ ಒಂದು ವಾಲಾಗ್ರ, ಎಂಟು ವಾಲಾಗ್ರಗಳು ಒಂದು ಲಿಕ್ಷಾ, ಎಂಟು ಲಿಕ್ಷಾಗಳು ಒಂದು ಯುಕಾ. ಎಂಟು ಯುಕಾಗಳು ಒಂದು ಯವ. ಎಂಟು ಯವಗಳು ಸೇರಿ ಒಂದು ಅಂಗುಲವೆಂದು ಹೇಳುತ್ತದೆ." ಇವರಲ್ಲಿ ಮಾನಾಂಗುಳವು ಕಲಾವಿದನ ಬಲಗೈ ಹಸ್ತದ ಮಧ್ಯಬೆರಳಿನ ಮಧ್ಯದ ಪರ್ವದ ಉದ್ದ ಅಥವಾ ಅಗಲವನ್ನು ಅವಲಂಬಿಸಿರುವುದರಿಂದ ಇದು ಎಲ್ಲ ಕಾಲದಲ್ಲೂ ಒಂದೇ ರೀತಿಯಾಗಿರುವುದಿಲ್ಲ. ಕಲಾವಿದನ ಕೈ ಪ್ರಮಾಣವನ್ನು ಅವಲಂಬಿಸಿ ಹೆಚ್ಚು-ಕಡಿಮೆಯಾಗುತ್ತದೆ. ಈ ರೀತಿ ಅಳತೆಗಳಿಗೆ ಅಂಗುಲವನ್ನು ಮಾನವಾಗಿ ಬಳಸುತ್ತಿದ್ದು ಚಿತ್ರದ ಎತ್ತರ. ಅಗಲಗಳನ್ನು ತಾಳಮಾನದಿಂದ ಗುರುತಿಸುತ್ತಿದ್ದರು. "ತಾಲಮಾನವೆಂದರೆ ತಾಲವನ್ನು ಆಧಾರವಾಗಿರಿಸಿಕೊಂಡಿರುವ ಅಳತೆ ಎಂದರ್ಥ" ಒಂದು ತಾಲಕ್ಕೆ ೧೨ (ಹನ್ನೆರಡು) ಅಂಗುಲಗಳೆಂದು ಅಂಗೀಕರಿಸಲಾಗಿದೆ.[೫] ಸಾಮಾನ್ಯವಾಗಿ ಶಿಲ್ಪಶಾಸ್ತ್ರಗಳಲ್ಲಿ ಹೇಳಿದಂತೆ ಹಸ್ತದ ಮಧ್ಯಬೆರಳು ಮತ್ತು ಅಂಗುಷ್ಠಗಳನ್ನು

---

೧. ಡಾ॥ ಅ. ಲ. ನರಸಿಂಹನ್ : ಕರ್ನಾಟಕ ಭಿತ್ತಿಚಿತ್ರ ಪರಂಪರೆ. ಪುಟ - ೧೦
೨. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ. ಪುಟ - ೩೭೧
೩. B. N. Goswamy, A. I. Dahmen : An Early Document of Indian Art (The Chitralaksana of Nagnajit), Page - 80
೪. ಜಿ. ಕೆ. ಶ್ರೀಗೊಂಡಕರ : ಮಾನಸೋಲ್ಲಾಸ. ಭಾಗ II. ಅಧ್ಯಾಯ I. ಪುಟ - ೧೪೯
೫. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ. ಪುಟ - ೩೭೧

ಹರಡಿದಾಗ ಈ ಎರಡೂ ಬೆರಳುಗಳ ತುದಿಗಳ ಮಧ್ಯ ಇರುವ ದೂರವನ್ನು ' ತಾಲ ' ವೆಂದು ಪರಿಗಣಿಸಲಾಗಿದೆ. ಈ ಉದ್ದವು ಮುಖದ ಗದ್ದದಿಂದ ಕೇಶಾಂತದ ವರೆಗಿನ ಉದ್ದಕ್ಕೆ ಸಮನಾಗಿರುತ್ತದೆ. ಅಲ್ಲದೇ ಅಂಗೈ ಮಣಿಕಟ್ಟಿನ ಅಂಚಿನಿಂದ ಮಧ್ಯಬೆರಳಿನ ತುದಿಯತನಕ ಇರುವ ಉದ್ದವನ್ನು ' ತಾಲ ' ಎಂದು ಸೂಚಿಸಲಾಗುತ್ತದೆ. ಇದು ಮುಖದ ಉದ್ದಕ್ಕೆ ಸಮನಾಗಿರುತ್ತದೆ. ಮೇಲೆ ಹೇಳಲಾದ ಎರಡೂ ರೀತಿಯ ವಿಧಾನದಲ್ಲೂ ಅಳತೆಯು ಮುಖದ ಉದ್ದಕ್ಕೆ ಸಮನಾಗಿರುವುದರಿಂದ ತಾಳಮಾನ ಕ್ರಮದಲ್ಲಿ ಮುಖದ ಅಳತೆಯನ್ನು ಪ್ರಮಾಣವಾಗಿ ಸ್ವೀಕರಿಸಲಾಗಿದೆ. ಆದರೂ ಕೂಡಾ ಎಲ್ಲ ಸಂದರ್ಭಗಳಲ್ಲೂ ' ಮುಖಮಾನ ' ವನ್ನೇ ತಾಲವೆಂದು ಲೆಕ್ಕಿಸುವಂತಿಲ್ಲ. ಕಾರಣ ಪ್ರತಿ ತಾಲಮಾನ ಕ್ರಮದಲ್ಲೂ ಮುಖಮಾನವು ವ್ಯತ್ಯಾಸವಾಗುತ್ತದೆ. ಉದಾಹರಣೆಗೆ ಮಧ್ಯಮ ದಶತಾಳದಲ್ಲಿ ಮುಖದ ಉದ್ದವು ೧೩ ಅಂಗುಲ. ಇಲ್ಲಿ ಒಂದು ಮುಖಮಾನದ ತಾಳದ ಪ್ರಮಾಣವು ೧೩ ಅಂಗುಲವಾಗಿರುತ್ತದೆ. ಚಿತ್ರದ ಒಟ್ಟು ಎತ್ತರವನ್ನು ' ಮುಖಮಾನ ತಾಲ ' ದಿಂದ ಭಾಗಿಸಿದರೆ ೧೨೦ ಅಂಗುಲಗಳಿಗೆ ೯.೨೩ ತಾಲಗಳಾಗುತ್ತವೆ. ಇಲ್ಲಿ ಈ ಅಳತೆಯನ್ನು ಅಶತಾಲ ಎಂದು ಕರೆದರೂ ಇದರಲ್ಲಿರುವುದು ಒಂಬತ್ತು ಮುಖಮಾನಗಳೇ (೯.೨೩ ತಾಲಗಳು) ಹೀಗಿದ್ದಾಗ ಮುಖಮಾನವನ್ನು ತಾಲವೆಂದು ಪರಿಗಣಿಸುವುದು ಆ ಸಂದರ್ಭಕ್ಕೆ ಉಚಿತವಾಗಲಾರದು.

ಇಂತಹ ಕೆಲವು ಸಂದರ್ಭಗಳಲ್ಲಿ ಕಲಾವಿದರು ' ಮುಖಮಾನ ' ತಾಲ. ಇಲ್ಲವೇ ಅಂಗೈನಿಂದ ಗುರುತಿಸುವ ತಾಲಗಳಿಂದ ಬೇರೆಯಾದ ಮತ್ತೊಂದು ವಿಧಾನದಿಂದ ತಾಲಗಳನ್ನು ಲೆಕ್ಕಿಸುತ್ತಿರಬೇಕೆನಿಸುತ್ತದೆ. ಆ ವಿಧಾನವೆಂದರೆ, ಮಾತ್ರಾಂಗುಳ. ಮಾನಾಂಗುಳ. ಇಲ್ಲವೇ ದೇಹಾಂಗುಳ ಈ ಮೂರು ರೀತಿ ಅಂಗುಳಗಳಲ್ಲಿ ಯಾವುದಾದರೂ ಒಂದು ರೀತಿಯಲ್ಲಿ ಅಂಗುಳವನ್ನು ನಿರ್ಧರಿಸಿ ನಂತರ ಆ ರೀತಿಯ ಹನ್ನೆರಡು ಅಂಗುಳಗಳನ್ನು ತಾಲವೆಂದು ಪರಿಗಣಿಸುತ್ತಿದ್ದರು.[೬] ಈ ತಾಲದಿಂದ ಚಿತ್ರದ ಅಳತೆಯನ್ನು ಲೆಕ್ಕಿಸುತ್ತಿದ್ದರು.

ಚಿತ್ರಗಳ ಪ್ರಮಾಣಗಳನ್ನು ಲೆಕ್ಕಿಸಲು ಈ ತಾಲಮಾನ ಕ್ರಮವನ್ನು ಅನುಸರಿಸುತ್ತಿದ್ದರು. ತಾಲಮಾನ ಕ್ರಮಗಳಲ್ಲಿ ಸಾಮಾನ್ಯವಾಗಿ ಏಕತಾಲದಿಂದ ದಶತಾಲದ ವರೆಗೆ ಬಳಕೆಯಲ್ಲಿರುವುದಾದರೂ ರೂಪಮಂಡನ ಮತ್ತು ಅಪರಾಜಿತ ಪೃಚ್ಛಗ್ರಂಥಗಳು ಷೋಡಶ ತಾಲಮಾನ ಕ್ರಮದ ವರೆವಿಗೂ ವಿವರಿಸಿವೆ.[೭] ಪ್ರತಿ ತಾಲಮಾನ ಕ್ರಮದಲ್ಲೂ ಉತ್ತಮ. ಮಧ್ಯಮ, ಅಧಮ (ಕನಿಷ್ಠ) ಎಂಬ ಮೂರು ಬಗೆಗಳಿವೆ. ಪ್ರತಿಯೊಂದು ತಾಲಮಾನಕ್ಕೂ ಇಂತಿಷ್ಟು ಅಂಗುಳಗಳೆಂದು ಅಳತೆಯನ್ನು ನಿರ್ದಿಷ್ಟಪಡಿಸಲಾಗಿದೆ.

ಉದಾಹರಣೆಗೆ : ಉತ್ತಮ ದಶತಾಲಕ್ಕೆ ನೂರಾ ಇಪ್ಪತ್ತನಾಲ್ಕು (೧೨೪) ಅಂಗುಳಗಳು ಮಧ್ಯಮ ದಶತಾಲಕ್ಕೆ ನೂರಾ ಇಪ್ಪತ್ತು (೧೨೦) ಅಂಗುಳಗಳು ಅಧಮ ದಶತಾಲಕ್ಕೆ ನೂರಾ ಹದಿನಾರು (೧೧೬) ಅಂಗುಲಗಳು ಹಾಗೇ ಉತ್ತಮ ನವತಾಲಕ್ಕೆ ಒಂದುನೂರಾ ಹನ್ನೆರಡು ಅಂಗುಲಗಳು, ಮಧ್ಯಮ ನವತಾಲಕ್ಕೆ ನೂರಾ ಎಂಟು ಅಂಗುಲಗಳು. ಅಧಮ ನವತಾಲಕ್ಕೆ ಒಂದುನೂರಾ ನಾಲ್ಕು ಅಂಗುಲಗಳು, ಇದೇ ರೀತಿಯಾಗಿ ತ್ರಿತಾಲದ ವರೆಗೂ ಪ್ರತಿ ತಾಲದಲ್ಲೂ ಉತ್ತಮ. ಮಧ್ಯಮ. ಅಧಮ. ಎಂದು ಬಗೆಗಳಿದ್ದು ಪ್ರತೀ ತಾಲಕ್ಕೂ ನಾಲ್ಕು ಅಂಗುಲಗಳನ್ನು ಕಡಿಮೆ ಮಾಡುತ್ತ ಬಂದರೆ ಆಯಾ ತಾಲದ ಅಳತೆ ಗೊತ್ತಾಗುತ್ತದೆ.

---

೬. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ. ಪುಟ -೩೭೨

೭. – ಅದೇ – ಪುಟ -೩೬೯

**II. ಸೂತ್ರ :** ಚಿತ್ರಗಳ ಎತ್ತರ ಮತ್ತು ಅಗಲಗಳನ್ನು ತಾಲಮಾನ ಕ್ರಮದಲ್ಲಿ ಹೇಳುವಾಗ ಅಡ್ಡಲಾಗಿರುವ ಮತ್ತು ಉದ್ದುದ್ದನಾಗಿರುವ ಕೆಲವು ಸಮಾನಾಂತರ ರೇಖೆಗಳನ್ನು ಕಲ್ಪಿಸಿಕೊಂಡು ಅಳತೆಗಳನ್ನು ಹೇಳಲಾಗುತ್ತದೆ. "ಇವು ಸಾಧಾರಣವಾಗಿ ಕಾಲ್ಪನಿಕ ರೇಖೆಗಳೇ ಆಗಿದ್ದರೂ ಈ ರೇಖೆಗಳು ಚಿತ್ರದಲ್ಲಿ ನಿಶ್ಚಿತವಾದ ಅಂಗ ಅಥವಾ ಸ್ಥಾನದ ಮೂಲಕ ಹಾದುಹೋಗುತ್ತವೆ. ಅಳತೆಗಳನ್ನು ಈ ಕಾಲ್ಪನಿಕ ರೇಖೆಗಳಿಗೆ ಅನ್ವಯಿಸಿ ಹೇಳಲಾಗುತ್ತದೆ. ಆದುದರಿಂದ ಈ ರೇಖೆಗಳನ್ನು ಸೂತ್ರಗಳೆಂದೂ ಕರೆಯಲಾಗುತ್ತದೆ.[೮] ಇವುಗಳಲ್ಲಿ ಅಡ್ಡ ಮತ್ತು ಉದ್ದ ಸೂತ್ರಗಳೆಂದು ಎರಡು ಪ್ರಕಾರಗಳಿವೆ. ಅವುಗಳಲ್ಲಿ ಮತ್ತೆ ಹಲವು ವಿಧಗಳಿವೆ.

**A) ಅಡ್ಡ ಸೂತ್ರಗಳು :** ಇದರಲ್ಲಿ ೧೬ ವಿವಿಧ ಬಗೆಗಳಿವೆ.

**೧) ಉಷ್ಣೀಷ :** ಈ ರೇಖೆಯು ಚಿತ್ರದ ನಡುನೆತ್ತಿಯ ಭಾಗದಲ್ಲಿ ಹಾಯುವದು. ದೇವತಾ ಚಿತ್ರಗಳಲ್ಲಿ ಇದು ಮುಕುಟದಿಂದ ಆವೃತವಾಗಿರುತ್ತದೆ. ಚಿತ್ರದ ಎತ್ತರವನ್ನು ಈ ರೇಖೆಯಿಂದಲೇ ಲೆಕ್ಕಿಸಲಾಗುತ್ತದೆ.

**೨) ಕೇಶಾಂತ :** ಉಷ್ಣೀಷದಿಂದ ಕೆಳಕ್ಕೆ ಹರಡಿಕೊಂಡಿರುವ ತಲೆಗೂದಲ ಅಂಚು. ಇದನ್ನು ಮುಂಗುರುಳು ಎಂದೂ ಕರೆಯುವರು. ಉಷ್ಣೀಷ ಮತ್ತು ಕೇಶಾಂತ ಎರಡೂ ಮುಖದ ಎತ್ತರಕ್ಕೆ ಸೇರುವದಿಲ್ಲ. ಇದನ್ನೇ ಪ್ರತ್ಯೇಕವಾಗಿ ಲೆಕ್ಕಿಸಲಾಗುತ್ತದೆ.

**೩) ಭ್ರೂ ಸೂತ್ರ :** ಈ ಸೂತ್ರವು ಎರಡೂ ಹುಬ್ಬುಗಳ ಮೇಲ್ಭಾಗದಿಂದ ಹಾದುಹೋಗುವ ರೇಖೆ. ಇದು ಕಿವಿಯ ಮೇಲ್ಭಾಗವನ್ನು ಸ್ಪರ್ಶಿಸುತ್ತದೆ.

**೪) ಅಕ್ಷಿ ಸೂತ್ರ :** ಇದು ಕಣ್ಣಿನ ಕೆಳಭಾಗದಿಂದ ಹಾದುಹೋಗುವ ರೇಖೆ. ಇದನ್ನು ನೇತ್ರಾಂತ ಸೂತ್ರ ಎಂದೂ ಕರೆಯುತ್ತಾರೆ.

**೫) ನಾಸಾ ಮೂಲಸೂತ್ರ ಅಥವಾ ನೇತ್ರಮಧ್ಯ ಸೂತ್ರ :** ಇದು ಕಣ್ಣಿನ ಮಧ್ಯಭಾಗದಿಂದ ಹಾದುಹೋಗುವ ರೇಖೆ. ಇದು ಮೂಗಿನ ಪ್ರಾರಂಭದ ಕ್ಷೇತ್ರವೂ ಹೌದು. ಇದನ್ನು ' ಅಕ್ಷ್ಯಂತ ಸೂತ್ರ ' ಎಂದೂ ಕರೆಯಲಾಗಿದೆ.

**೬) ನಾಸಾ ಪುಟಾಂತ ಸೂತ್ರ :** ಇದನ್ನು ನಾಸಾಂತ ಸೂತ್ರ, ಪುಟ ಸೂತ್ರ, ಪುಟಾಂತ ಸೂತ್ರ ಎಂದೂ ಕರೆಯಲಾಗಿದೆ. ಈ ರೇಖೆಯು ಮೂಗಿನ ಕೊನೆಯನ್ನು ಸ್ಪರ್ಶಿಸಿ ಅದರ ಇಕ್ಕೆಲೆಗಳಲ್ಲೂ ಇರುವ ಪುಟ (ಹೊಳ್ಳೆಗಲು) ಗಳನ್ನು ಸ್ಪರ್ಶಿಸುತ್ತದೆ.

**೭) ಹನ್ವಂತ ಸೂತ್ರ :** ಹನು ಎಂದರೆ ಗದ್ದ. ಗದ್ದದ ಕೊನೆಯನ್ನು ಸ್ಪರ್ಶಿಸುತ್ತಾ ಹಾದು ಹೋಗುವ ರೇಖೆ.

**೮) ಗಳ :** ಗದ್ದದ ಕೆಳಭಾಗದಲ್ಲಿರುವ ಮಾಂಸದಿಂದ ತುಂಬಿರುವ ಭಾಗ. ಇದಕ್ಕೆಂದೇ ಪ್ರತ್ಯೇಕ ಸೂತ್ರವಿಲ್ಲ.

**೯) ಹಿಕ್ಕಾ ಸೂತ್ರ :** ಎರಡೂ ಕಡೆಯ ಭುಜಗಳನ್ನು ಸ್ಪರ್ಶಿಸುತ್ತಾ ಕೊರಳಿನ ಮುಂಭಾಗದ, ತಳಭಾಗದ ಕೊನೆಯಲ್ಲಿರುವ ಸಣ್ಣ ತಗ್ಗನ್ನು ಛೇದಿಸುವ ಸೂತ್ರ.

**೧೦) ಸ್ತನ ಸೂತ್ರ :** ಇದನ್ನು ಹೃದಯ ಸೂತ್ರ ಎಂದೂ ಕರೆಯುತ್ತಾರೆ. ಸ್ತನಗಳ ಮಣಿಗಳನ್ನು ಸೇರಿಸುವ ರೇಖೆ ಇದು. ಕೆಲವು ಶಿಲ್ಪಶಾಸ್ತ್ರಗಳು ಸ್ತನಗಳ ತಳಭಾಗವನ್ನು ಸ್ಪರ್ಶಿಸುವ ರೇಖೆ ಇದೆಂದೂ ಹೇಳಿವೆ. ಹಾಗಾದಾಗ ಹೊಟ್ಟೆಯ ಪ್ರಾರಂಭ ಸ್ಥಾನವಾಗುತ್ತದೆ. ಇಲ್ಲಿ ಸ್ತನ ಎಂಬ ಪದವನ್ನು ಉಭಯ ಲಿಂಗಕ್ಕೂ ಅನ್ವಯಿಸುವ ಪದವನ್ನಾಗಿ ಬಳಸಲಾಗುತ್ತದೆ.

---

೮. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ. ಪುಟ -೩೭೫

**೧೧) ನಾಭಿ ಸೂತ್ರ ಅಥವಾ ನಾಭ್ಯಂತ ಸೂತ್ರ :** ಹೊಕ್ಕಳಿನ ಮಧ್ಯಭಾಗದಲ್ಲಿ ಹಾದು ಹೋಗುವ ರೇಖೆ. ಇದನ್ನು 'ಶ್ರೋಣಿ' ಎಂದೂ ಹೇಳುತ್ತಾರೆ. ಇದರ ಕೆಳಭಾಗವನ್ನು ಕಿಬ್ಬೊಟ್ಟೆ ಎನ್ನಲಾಗುತ್ತದೆ.

**೧೨) ಮೇಢ್ರ ಅಥವಾ ಯೋನಿ ಸೂತ್ರ :** ಇದು ಲಿಂಗ ಪ್ರದೇಶದಲ್ಲಿ ಹಾದುಹೋಗುವ ರೇಖೆ. ಇದನ್ನು 'ಮೇಢ್ರಮೂಲ' ಅಥವಾ ಯೋನಿಮೂಲ ಸೂತ್ರವೆಂದೂ ಹೇಳುತ್ತಾರೆ. ಅಂದರೆ ಈ ರೇಖೆಯ ನಂತರವೇ ಜನನೇಂದ್ರಿಯ ಹರಡಿರುತ್ತದೆ. ಈ ಭಾಗದ ಮೇಲಿನ ಸ್ಥಳವನ್ನು ಯೋನಿ / ಲಿಂಗ ಪೀಠವೆಂದು ಕರೆಯುತ್ತಾರೆ. ಈ ಅಳತೆಯು ಉಭಯ ಲಿಂಗಗಳಿಗೂ ಅನ್ವಯಿಸುತ್ತದೆ.

**೧೩) ಊರ್ವ್ವಂತ ಸೂತ್ರ ಅಥವಾ ಜಾನುಮೂರ್ಧ ಸೂತ್ರ :** ತೊಡೆಯ ಭಾಗ ಕೊನೆಗೊಂಡು ಮೊಣಕಾಲು ಪ್ರಾರಂಭವಾಗುವ ಸ್ಥಳದಲ್ಲಿ ಹಾದುಹೋಗುವ ರೇಖೆ.

**೧೪) ಜಾನುವಧ ಅಥವಾ ಜಾನುಸೂತ್ರ :** ಮೊಣಕಾಲಿನ ಅಡಿಭಾಗದಲ್ಲಿ ಹಾದುಹೋಗುವ ರೇಖೆ. ಇದನ್ನು ಜಾನ್ವಂತ ಸೂತ್ರ ಎಂದೂ ಕರೆಯುತ್ತಾರೆ.

**೧೫) ಜಂಘಾ ಸೂತ್ರ ಅಥವಾ ನಳಕಾ ಸೂತ್ರ, ಅಥವಾ ಅಕ್ಷಿಗುಲ್ಫ ಸೂತ್ರ :** ಮುಂಗಾಲು ಪಾದದ ಕೀಲಿನೊಂದಿಗೆ ಸೇರುವ ಸ್ಥಳದಲ್ಲಿರುವ ಮುಂಗಾಲಿನ ಮೂಳೆಯನ್ನು ನಳಕಾ ಎನ್ನುತ್ತಾರೆ. ಅದರ ಕೆಳಭಾಗದಲ್ಲಿ ಅಥವಾ ಪಾದದ ಕೀಲುಗಳ ಇಕ್ಕೆಲಗಳಲ್ಲಿರುವ ಮೂಳೆಯ ಮಣಿಗಳ ಮೂಲಕ ಹಾದು ಹೋಗುವ ರೇಖೆ. ಈ ರೇಖೆಯ ಅಡಿಯಥಲ್ಲಿ ಪಾದ ಇರುತ್ತದೆ. ಮೂಳೆಯ ಮಣಿಗಳನ್ನು ಅಕ್ಷಿಗುಲ್ಫ ಎನ್ನುತ್ತಾರೆ.

**೧೬) ಭೂಮಿ ಸೂತ್ರ :** ಇದು ಚಿತ್ರದ ಪಾದದ ಅಡಿಭಾಗದಲ್ಲಿ ಹಾದುಹೋಗುತ್ತದೆ. ಚಿತ್ರದ ಎತ್ತರವನ್ನು ಲೆಕ್ಕಿಸುವುದು ಈ ಸೂತ್ರದಿಂದ ಪ್ರಾರಂಭಿಸಿ ಉಷ್ಣೀಷದ ಮೇಲ್ಭಾಗದ ತನಕ. ಪಾದದ ಎತ್ತರವನ್ನು ಹೇಳುವಾಗ ಈ ಸೂತ್ರದಿಂದ ಅಕ್ಷಿಗುಲ್ಫದ ಸೂತ್ರದವರೆಗೆ ಇರುವ ಎತ್ತರವನ್ನು ಪರಿಗಣಿಸಲಾಗುತ್ತದೆ. ಚಿತ್ರದ ಎತ್ತರವನ್ನು ತಿಳಿಸಲು ಅಡ್ಡಲಾಗಿ ಹಾದುಹೋಗುವ ಹದಿನಾರು ಸೂತ್ರಗಳಿರುವಂತೆ ಚಿತ್ರದ ಅಗಲದ ಅಳತೆಯನ್ನು ತಿಳಿಯಲು ಸಹಾಯಕವಾಗುವ ಲಂಬವಾದ ಅಥವಾ ಉದ್ದುದ್ದವಾದ ಕಾಲ್ಪನಿಕ ರೇಖೆ (ಸೂತ್ರ) ಗಳನ್ನು ನೋಡೋಣ.

**B) ಉದ್ದ ಸೂತ್ರಗಳು :** ಇದರಲ್ಲಿ ಹತ್ತು ವಿಧಗಳಿರುವುದನ್ನು ಕಾಣುತ್ತೇವೆ.

**೧) ಪೂರ್ವಸೂತ್ರ ಅಥವಾ ಪುರಸೂತ್ರ :** ಇದು ಸರಿಯಾಗಿ ಮನುಷ್ಯಾಕೃತಿಯ ಮಧ್ಯಭಾಗದಲ್ಲಿ ಲಂಬವಾಗಿ ತಲೆಯ ಕೊನೆಯಿಂದ. ಕಿರೀಟವುಳ್ಳ ಚಿತ್ರಗಳಾಗಿದ್ದರೆ ಕಿರೀಟದ ಮೇಲ್ತುದಿಯ ಕೊನೆಯಿಂದ ಭೂಮಿಯ ತನಕ ಎಳೆದಿರುವ ರೇಖೆಯಾಗಿದೆ. ಹಣೆಯ ಮಧ್ಯಭಾಗದಿಂದ. ಹುಬ್ಬುಗಳ ಮಧ್ಯ, ಮೂಗಿನ ತುದಿಯ ಮೂಲಕ, ಕೊರಳಿನ ಮಧ್ಯೆ. ವಕ್ಷಸ್ಥಳದ ಮಧ್ಯಭಾಗ. ಹೊಟ್ಟೆಯ ಮೂಲಕ ಹೊಕ್ಕಳನ್ನು ಹಾದು ಮೇಢ್ರ ಮಧ್ಯದಿಂದ ತೊಡೆಗಳ ಮಧ್ಯೆ ಹಾದು ಭೂ ಸೂತ್ರವನ್ನು ತಲುಪುತ್ತದೆ. ಈ ರೇಖೆಯ ಎರಡೂ ಕಡೆಗಳಲ್ಲಿ ಬರುವ ಇತರ ಲಂಬ ಸೂತ್ರಗಳು ಸಮಾನಾಂತರವಾಗಿ ಪರಸ್ಪರ ಅನುರೂಪತೆಯನ್ನು ಹೊಂದಿರುತ್ತವೆ.

**೨) ಮಧ್ಯಸೂತ್ರ ಅಥವಾ ಕಾಯ ಮಧ್ಯಸೂತ್ರ :** ಇದು ಪೂರ್ವಸೂತ್ರದ ಹಿಂದೆ, ದೇಹದ ಮಧ್ಯಭಾಗದಲ್ಲಿ ಹಾದುಹೋಗುತ್ತದೆ. ಇದನ್ನು ಬ್ರಹ್ಮಸೂತ್ರ ಹಾಗೂ ಶಿವಸೂತ್ರವೆಂದೂ ಕರೆಯುತ್ತಾರೆ. ಇದು ಆಕೃತಿಯ ಮೇಢ್ರ ಮಧ್ಯದಲ್ಲಿ ಅಂತ್ಯಗೊಳ್ಳುತ್ತದೆ. ದೇಹದ ಮಧ್ಯಭಾಗದಲ್ಲಿ ಕೊನೆಗೊಳ್ಳುವುದರಿಂದ ಇದನ್ನು 'ಕಾಯಮಧ್ಯ ಸೂತ್ರ' ಎಂದೂ ಹೇಳುತ್ತಾರೆ.

**೩) ಪುಟಪರ್ಯಂತ ಸೂತ್ರ :** ಮಧ್ಯ ಸೂತ್ರದ ಎರಡೂ ಕಡೆಗಳಲ್ಲೂ (ಎಡ ಮತ್ತು ಬಲ) ಸಮಾನ ದೂರದಲ್ಲಿ ಲಂಬವಾಗಿರುವ ಈ ಸೂತ್ರವು ಮೂಗಿನ ಹೊಳ್ಳೆಗಳ ಪಾರ್ಶ್ವವನ್ನು ಸ್ಪರ್ಶಿಸುತ್ತದೆ. ಈ ಸೂತ್ರವು ಕಣ್ಣಿನ ಒಳಭಾಗದಲ್ಲಿ ಲಂಬವಾಗಿ ಹಾದು ಹೋಗುವದರಿಂದ ಇದನ್ನು ' ದೃಗಂತರಿ ' ಸೂತ್ರ ಎಂದೂ ಕರೆಯುತ್ತಾರೆ.

**೪) ವಕ್ತ್ರಬಾಹ್ಯ ಸೂತ್ರ :** ಬಾಯಿಯ ಅಂಚನ್ನು ಸ್ಪರ್ಶಿಸುತ್ತಾ ಲಂಬವಾಗಿ ಹರಿಯುವ ಸೂತ್ರವಿದು. ಮಧ್ಯಸೂತ್ರದ ಎಡ ಮತ್ತು ಬಲ ಎರಡೂ ಕಡೆಗಳಲ್ಲಿ ಹರಿಯುತ್ತವೆ.

**೫) ನೇತ್ರ ಪರ್ಯಂತ ಸೂತ್ರ :** ಇದು ಕೂಡಾ ಮಧ್ಯ ಸೂತ್ರದ ಎರಡೂ ಕಡೆ (ಎಡ–ಬಲ) ಲಂಬವಾಗಿ ಹರಿಯುತ್ತದೆ. ಈ ಸೂತ್ರ ಎರಡು ಕಣ್ಣುಗಳ ಹೊರ ಅಂಚನ್ನು ಲಂಬಮಾನದಲ್ಲಿ ಸ್ಪರ್ಶಿಸುತ್ತದೆ.

**೬) ಮುಖಪರ್ಯಂತ ಸೂತ್ರ :** ಮುಖದ ಎರಡೂ ಪಕ್ಕಗಳಲ್ಲಿ ಕಿವಿಗಳ ಮೂಲಗಳನ್ನು, ಕೆನ್ನೆಗಳನ್ನು ಸ್ಪರ್ಶಿಸುತ್ತಾ ಲಂಬಮಾನದಲ್ಲಿ ಹಾದುಹೋಗುವ ಸೂತ್ರವಿದು.

**೭) ಕರ್ಣ ಸೂತ್ರ :** ಈ ಸೂತ್ರವು ಮಧ್ಯಸೂತ್ರದ ಎಡ ಮತ್ತು ಬಲಗಳಲ್ಲಿ ಸಮಾನಾಂತರವಾಗಿ ಕಿವಿಗಳ ಹೊರ ಭಾಗವನ್ನು ಸ್ಪರ್ಶಿಸುತ್ತಾ ಲಂಬವಾಗಿ ಹಾದು ಹೋಗುತ್ತವೆ.

**೮) ರಕ್ಷಪರ್ಯಂತ ಸೂತ್ರ :** ಮಧ್ಯಸೂತ್ರದಿಂದ ಸಮಾನ ದೂರದಲ್ಲಿ ಎರಡೂ ಕಡೆಗಳಲ್ಲಿ ಕುಂಕುಳ ಮೂಲಕ ಹಾದು ಹೋಗುವ ಸೂತ್ರ. ಈ ಸೂತ್ರಗಳು ಭುಜದ ಒಳಭಾಗವನ್ನು ಸ್ಪರ್ಶಿಸುತ್ತಾ ಲಂಬವಾಗಿ ಹಾದುಹೋಗುತ್ತವೆ. ಮೇಲಿನ ತೋಳಿನ ಒಳಸೀಮೆಯನ್ನು ಇದು ನಿರ್ದೇಶಿಸುವದರಿಂದ ಇದನ್ನು ' ಅಂತರ್ ಭುಜಾವಧಿ ಸೂತ್ರ ' ಎಂದೂ ಕರೆಯುತ್ತಾರೆ.

**೯) ಬಾಹು ಪರ್ಯಂತ ಸೂತ್ರ ಅಥವಾ ಕಕ್ಷಾಭ್ಯಂತರ ಸೂತ್ರ :** ಭುಜಗಳ ಹೊರಭಾಗಗಳನ್ನು ಮಧ್ಯಸೂತ್ರದಿಂದ ಎಡ ಮತ್ತು ಬಲ ಭಾಗಗಳಲ್ಲಿ ಸಮಾನಾಂತರ ದೂರದಲ್ಲಿ ಸ್ಪರ್ಶಿಸುವ ರೇಖೆಗಳಿವು. ಈ ಲಂಬರೇಖೆಗಳು ಕುಂಕುಳಗಳಿಂದ ಬಾಹುವಿನ ಹೊರಭಾಗವನ್ನು ನಿರ್ದೇಶಿಸುವದರಿಂದ ಇದನ್ನು ಕಕ್ಷಾಭ್ಯಂತರ ಸೂತ್ರವೆನ್ನುತ್ತಾರೆ.

**೧೦) ಪರಭುಜಾವಧಿ ಸೂತ್ರ :** ಈ ಸೂತ್ರವು ತೋಳಿನ ಹಿಂಭಾಗದ ಸೀಮೆಯನ್ನು ಸೂಚಿಸುತ್ತದೆ. ಈ ರೇಖೆಗಳು ಮಧ್ಯಸೂತ್ರದಿಂದ ಸಮಾನ ದೂರದಲ್ಲಿ ಅದರ ಎಡ, ಬಲ ಗಳಲ್ಲಿ ಹರಡಿಕೊಂಡಿರುತ್ತವೆ. ಹೀಗೆ ಚಿತ್ರದ ಮೇಲೆ ಅಡ್ಡಲಾಗಿ ಮತ್ತು ಉದ್ದುದ್ದವಾಗಿ ರೇಖೆಗಳನ್ನು ಕಲ್ಪಿಸಿಕೊಂಡು ಚಿತ್ರದ ಉದ್ದ-ಅಗಲಗಳನ್ನು ಕಲ್ಪಿಸಿಕೊಂಡು ಚಿತ್ರದ ಉದ್ದ-ಅಗಲಗಳನ್ನು ತಾಳಮಾನ ಕ್ರಮದಲ್ಲಿ ಗುರುತಿಸಲಾಗಿದೆ.

**III. ಪ್ರಮಾಣಗಳು :** ಇನ್ನು ಯಾವ ಯಾವ ಚಿತ್ರಗಳನ್ನು ಯಾವಯಾವ ಪ್ರಮಾಣ ಮತ್ತು ಅಳತೆಯಲ್ಲಿ ಚಿತ್ರಿಸಬೇಕು ಎಂದೂ ಸಹ ಶಿಲ್ಪಶಾಸ್ತ್ರಗಳು ಹೇಳಿವೆ. ಕಾಶ್ಯಪ ಶಿಲ್ಪಶಾಸ್ತ್ರವು[೯] ಉತ್ತಮ ದಶತಾಲದಲ್ಲಿ ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಚಿತ್ರಿಸಬೇಕು. ಮಧ್ಯಮ ದಶತಾಲದಲ್ಲಿ ಉಮಾ, ಸರಸ್ವತಿ, ಉಷಾ, ಭೂಮಿ, ದುರ್ಗಾ, ಲಕ್ಷ್ಮೀ, ಸಪ್ತಮಾತೃಕೆಯರು, ಜೇಷ್ಠಾದೇವಿ ಮುಂತಾದ ಸ್ತ್ರೀ ದೇವತೆಗಳನ್ನು ಚಿತ್ರಿಸಬೇಕು. ಅಧಮ (ಕನಿಷ್ಟ) ದಶತಾಲದಲ್ಲಿ ಚಂದ್ರ, ಆದಿತ್ಯ, ಅಶ್ವಿನೀ ದೇವತೆಗಳು, ಋಷಿಗಳು, ಇತರ ಎಲ್ಲಾ ಗ್ರಹ ದೇವತೆಗಳು, ಅಯ್ಯಪ್ಪಸ್ವಾಮಿ, ಸುಬ್ರಹ್ಮಣ್ಯ, ಚಂಡೇಶ್ವರ, ಕ್ಷೇತ್ರಪಾಲಕ, (ಭೈರವ) ಮುಂತಾದ ದೇವತೆಗಳನ್ನು ಚಿತ್ರಿಸಬೇಕು.

---

೯. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ, ಪುಟ - ೨೨೮ - ೭೯

ಅಷ್ಟವಸುಗಳು. ವಿದ್ಯೇಶ್ವರರು. ಅಷ್ಟದಿಕ್ಪಾಲಕರು ಈ ದೇವತೆಗಳನ್ನು ಉತ್ತಮ ನವತಾಲದಲ್ಲಿ ಚಿತ್ರಿಸಬೇಕು. ಯಕ್ಷರು. ಅಪ್ಸರೆಯರು. ಅಸ್ತ್ರಮೂರ್ತಿಗಳು. ಮರುತ್ತುಗಳು. ವಿದ್ಯಾಧರರು ಇತ್ಯಾದಿಗಳನ್ನು ಮಧ್ಯಮ ನವತಾಲದಲ್ಲಿ ಚಿತ್ರಿಸಬೇಕು. ರಾಕ್ಷಸರು. ಸಿದ್ಧರು. ಗಂಧರ್ವರು. ಪಿತೃಗಳು ಮುಂತಾದವರನ್ನು ಕನಿಷ್ಠ ನವತಾಲದಲ್ಲಿ ಚಿತ್ರಿಸಬೇಕು. ಅಷ್ಟತಾಲದಲ್ಲಿ ಮನುಷ್ಯರನ್ನು. ಸಪ್ತತಾಲದಲ್ಲಿ ಸಾಧ್ಯರನ್ನೂ. ಪಿಶಾಚಿಗಳನ್ನೂ ಚಿತ್ರಿಸಬೇಕು. ಷಟ್‌ತಾಲದಲ್ಲಿ ಕುಬ್ಜರನ್ನು, ಗೂನುಬೆನ್ನಿನವರನ್ನು ಚಿತ್ರಿಸಬೇಕು. ಉತ್ತಮ ಪಂಚತಾಲದಲ್ಲಿ ವಿಘ್ನೇಶ್ವರನನ್ನು, ಮಧ್ಯಮ ಮತ್ತು ಅಧಮ ಪಂಚತಾಲಗಳಲ್ಲಿ ಎಲ್ಲಾ ಭೂತಗಣಗಳನ್ನೂ ಚಿತ್ರಿಸಬೇಕು. ನಾಲ್ಕು ತಾಲದಲ್ಲಿ ಬಾಲಕರನ್ನು, ಮೂರು ತಾಲದಲ್ಲಿ ಕಿನ್ನರರನ್ನು. ಎರಡು ತಾಲದಲ್ಲಿ ಕಿಂಪುರುಷರನ್ನೂ. ಒಂದು ತಾಲದಲ್ಲಿ ಕೂರ್ಮವನ್ನೂ ಚಿತ್ರಿಸಬೇಕು ಎಂದು ವಿವರ ನೀಡುತ್ತದೆ. ಪುರುಷ. ಸ್ತ್ರೀ ಮತ್ತು ಪ್ರಾಣಿಗಳ ಚಿತ್ರದ ಪ್ರಮಾಣದ ಬಗ್ಗೆಯೂ ವಿಶೇಷವಾದ ಮಾಹಿತಿಗಳು ಲಭಿಸುತ್ತವೆ.

**೧) ಪುರುಷ ಚಿತ್ರದ ಪ್ರಮಾಣ :** ವಿಷ್ಣುಧರ್ಮೋತ್ತರವು [೧೦] ಸೃಷ್ಟಿಯಲ್ಲಿರುವ ಪುರುಷರನ್ನು ಅವರ ಪ್ರಮಾಣಕ್ಕನುಸಾರವಾಗಿ ಹಂಸ. ಭದ್ರ. ಮಾಲವ್ಯ. ರುಚಿಕ, ಮತ್ತು ಶಶಕ ಎಂದು ಐದು ವಿಧದಲ್ಲಿ ವಿಂಗಡಿಸಿ ಚಿತ್ರಿಸಲು ತಿಳಿಸುತ್ತವೆ. ಅಲ್ಲದೆ ಈ ಐದು ವಿಧದ ಪುರಾಷಾಕೃತಿಯ ಅಳತೆಯನ್ನೂ ಅದು ಹೇಳುತ್ತದೆ– ಹಂಸ-೧೦೮ ಅಂಗುಲಗಳು, ಭದ್ರ-೧೦೬ ಅಂಗುಲಗಳು. ಮಾಲವ್ಯ-೧೦೪ ಅಂಗುಲಗಳು. ರುಚಿಕ-೧೦೦ ಅಂಗುಲಗಳು, ಶಶಕ-೯೦ ಅಂಗುಲಗಳು ಎಂದು ಅಳತೆಯನ್ನೂ ಹೇಳುತ್ತವೆ.

'ಬೃಹತ್ ಸಂಹಿತಾ' ಗ್ರಂಥವೂ [೧೧] ಮಾನವಾಕೃತಿಗಳನ್ನು ವಿಷ್ಣುಧರ್ಮೋತ್ತರದ ಹಾಗೇ ಅದೇ ಹೆಸರಿನಿಂದ ಅಂದರೆ ಹಂಸ. ಭದ್ರ, ಮಾಲವ್ಯ. ರಚಿಕ. ಶಶಕ ಎಂದು ಐದು ಬಗೆಗಳಲ್ಲಿ ವಿಂಗಡಿಸುತ್ತದೆ. ಆದರೆ ಇದು ಅವುಗಳಿಗೆ ಹೇಳುವ ಅಳತೆಯಲ್ಲಿ ವ್ಯತ್ಯಾಸವಿದೆ. ಇದರ ಪ್ರಕಾರ ಹಂಸ-೧೦೮ ಅಂಗುಲಗಳು, ಭದ್ರ-೧೦೫ ಅಂಗುಲಗಳು, ಮಾಲವ್ಯ-೧೦೨ ಅಂಗುಲಗಳು. ರುಚಕ-೯೯ ಅಂಗುಲಗಳು, ಶಶಕ-೯೬ ಅಂಗುಲಗಳು ಎಂದು ಹೇಳಲಾಗಿದೆ. ವಿಷ್ಣುಧರ್ಮೋತ್ತರವು [೧೨] ಮಾನವಾಕೃತಿಯ ಎತ್ತರವು ಅದರ ಅಗಲಕ್ಕೆ ಸಮನಾಗಿರುತ್ತದೆ ಎಂದು ಹೇಳುತ್ತದೆ. ಅಂದರೆ ದೇಹದ ಪೂರ್ಣ ಎತ್ತರವು ಮನುಷ್ಯನು ಎರಡೂ ಕೈಗಳನ್ನು ಪಕ್ಕಕ್ಕೆ ವಿಶಾಲವಾಗಿ ಹರಡಿದಾಗ ಒಂದು ಬೆರಳಿನ ತುದಿಯಿಂದ ಇನ್ನೊಂದು ಕೈಬೆರಳಿನ ತುದಿಯ ತನಕದ ಅಳತೆಗೆ ಸಮನಾಗಿರುತ್ತದೆ.

ವಿಷ್ಣುಧರ್ಮೋತ್ತರವು ಹಂಸ. ಭದ್ರ, ಮಾಲವ್ಯ, ರುಚಕ, ಶಶಕ ಎಂಬ ಪುರುಷಾಕೃತಿಯ ಅಳತೆಗಳು ಎಷ್ಟು ಇರಬೇಕೆಂದು ಹೇಳಿದೆಯಲ್ಲದೇ ಆಯಾ ವಿಧದ ಆಕೃತಿಗಳ ವಿವರವಾದ ಅಳತೆಗಳನ್ನೂ ಅದು ಕೊಟ್ಟಿದೆ. ಅದರ ಪ್ರಕಾರ 'ಹಂಸ' ವಿಧದ ಪುರಾಷಾಕೃತಿಯ ಒಟ್ಟು ಎತ್ತರ-೧೦೮ ಅಂಗುಲಗಳಿರಬೇಕೆಂದು ಹೇಳಿ ವಿವರವಾದ ಅಳತೆಗಳನ್ನು ಹೀಗೆ ಹೇಳಿದೆ– ಮುಖವು ಒಂದು ತಾಳ, ಆಕೃತಿಗೆ ಕಿರೀಟವಿದ್ದರೆ ಹಣೆ ಮತ್ತು ಕಿರೀಟದ ನಡುವಿನ ಅಂತರ ೧/೨ ತಾಲ. ಕುತ್ತಿಗೆ ೧/೩ ತಾಲ. ಎದೆಯ ಎತ್ತರವು ನಾಭಿಯಿಂದ ಒಂದು ತಾಲ. ಮೀನಖಂಡಗಳ ಭಾಗವು ಮೊಣಕಾಲಿನ ವರೆಗೆ ೨೪ ಅಂಗುಲಗಳು. ಮೊಣಕಾಲಿನ ಚಿಪ್ಪುಗಳು ೩ ಅಂಗುಲ. ಪಾದದ ಎತ್ತರವು ೩ ಅಂಗುಲಗಳು, ಅಲ್ಲದೇ ಹಣೆಯ ಎತ್ತರವು ೪ ಅಂಗುಲ. ಅಗಲವು ೮ ಅಂಗುಲವಾಗಿರುವುದು. ಕೆನ್ನೆಗಳ ಅಳತೆಯು ಪ್ರತಿಯೊಂದು

---

೧೦. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೩೫

೧೧. H. Kern : The Brhat Samhita (Trans), Page - 93

೧೨. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೩೫, ಶ್ಲೋಕ ೯

೫ ಅಂಗುಲಗಳು. ಹನು ೪ ಅಂಗುಲ. ಕಿವಿಗಳು ಪ್ರತಿಯೊಂದು ೨ ಅಂಗುಲ ವಿಶಾಲ, ೪ ಅಂಗುಲ ಎತ್ತರವಾಗಿರುವಂತೆ ರಚಿಸಬೇಕೆನ್ನುತ್ತದೆ.

ಮೂಗು ೪ ಅಂಗುಲ ಎತ್ತರ. ೩ ಅಂಗುಲ ಅಗಲ. ಬಾಯಿಯ ಅಗಲವು ೪ ಅಂಗುಲ, ಪ್ರತಿಯೊಂದು ಕಣ್ಣುಗಳು ಒಂದು ಅಂಗುಲ ಎತ್ತರ ೩ ಅಂಗುಲ ಅಗಲ. ಹುಬ್ಬುಗಳು ಒಂದೂವರೆ ಅಂಗುಲ ಅಗಲ ೩ ಅಂಗುಲ ಉದ್ದವಾಗಿರುವಂತೆ ರಚಿಸಬೇಕೆಂದು ವಿವರವಾದ ಅಳತೆಯನ್ನು ಹೇಳಿದೆ. ಇದೇ ಪ್ರಕಾರ ಇನ್ನುಳಿದ ಭದ್ರ, ಮಾಲವ್ಯ, ರುಚಕ, ಶಶಕ ಮುಂತಾದ ಎಲ್ಲ ಪ್ರಕಾರದ ಚಿತ್ರಗಳಿಗೂ ವಿವರವಾದ ಅಳತೆಗಳನ್ನು ಹೇಳಲಾಗಿದೆ.

**೨) ಸ್ತ್ರೀ ಚಿತ್ರದ ಪ್ರಮಾಣ :** ವಿಷ್ಣುಧರ್ಮೋತ್ತರವು ಐದು ವಿಧದ ಪುರುಷರ ಬಗ್ಗೆ ಹೇಳಿದಂತೆಯೇ ಅದಕ್ಕೆ ಪೂರಕವಾಗಿ (ಸಂವಾದಿಯಾಗಿ) ಐದು ವಿಧದ ಸ್ತ್ರೀಯರ ಬಗ್ಗೆಯೂ ಹೇಳಿದೆ. ಆದರೆ ಇಲ್ಲಿ ಆ ಸ್ತ್ರೀಯರ ಪ್ರಕಾರಗಳಾವವು ಎಂಬ ಹೆಸರುಗಳನ್ನು ಕೊಟ್ಟಿಲ್ಲ. ಬಹುಶಃ ಅದು ಕೊಟ್ಟಿರುವ ಐದು ವಿಧದ ಪುರುಷ ಜಾತಿಯ ಹೆಸರುಗಳಿಗೆ ಪೂರಕವಾಗಿ (ಸಂವಾದಿಯಾಗಿ) ಅದೇ ಹೆಸರಿನ ಸ್ತ್ರೀಯರೂ ಇರಬೇಕೆಂದು ಜಯಂತ ಚಕ್ರವರ್ತಿಯವರು [೧೩] ಊಹಿಸುತ್ತಾರೆ. ಅಂದರೆ ಹಂಸ ಜಾತಿಯ ಪುರುಷನಿಗೆ ಸಂವಾದಿಯಾಗಿ ಅದೇ ಜಾತಿಯ ಸ್ತ್ರೀ, ಭದ್ರಜಾತಿಯ ಪುರುಷನಿಗೆ ಅದೇ ಜಾತಿಯ ಸ್ತ್ರೀ. ಹೀಗೆ ಐದೂ ಪುರುಷ ಜಾತಿಗೆ ಅದೇ ಹೆಸರಿನ ಸ್ತ್ರೀ ಜೊತೆ ಇರಬಹುದೆಂದು ಅವರು ತರ್ಕಿಸುತ್ತಾರೆ. ಭಾರತೀಯ ಅನೇಕ ಪ್ರಾಚೀನ ಗ್ರಂಥಗಳಲ್ಲಿ ಪುರುಷ ಜಾತಿಯನ್ನು ವಿವಿಧ ರೀತಿಯಿಂದ ವಿಂಗಡಿಸಿದ್ದು, ಅದಕ್ಕೆ ಪೂರಕವಾಗಿ ಸ್ತ್ರೀ ಜಾತಿಯನ್ನೂ ವಿಂಗಡಿಸಲಾಗಿದೆ.

ವಾತ್ಸಾಯನನ ಕಾಮಸೂತ್ರದಲ್ಲಿ ಪುರುಷರನ್ನು ಸಾಸ, ಉರ್ಸ (ಗೂಳಿ), ಮತ್ತು ಅಶ್ವ ಎಂದು ಮೂರು ವಿಧಗಳಲ್ಲಿ ವಿಂಗಡಿಸಿ ಅದಕ್ಕೆ ಪೂರಕವಾಗಿ ಸ್ತ್ರೀಯರನ್ನು ಅನುಕ್ರಮವಾಗಿ ಮೃಗೀ, ವಡವ, ಹಸ್ತಿನಿ ಎಂಬ ಪ್ರಕಾರಗಳಲ್ಲಿ ವಿಂಗಡಿಸಲಾಗಿದೆ. ಸ್ತ್ರೀಯರ ಚಿತ್ರದ ಅಳತೆ, ಚಿತ್ರವಿಧಾನ ಕುರಿತಂತೆ ಶುಕ್ರನೀತಿಸಾರ [೧೪] ಗ್ರಂಥದಲ್ಲೂ ಹೇಳಲಾಗಿದೆ. ಇಲ್ಲಿ ಸ್ತ್ರೀಯರ ಮೊಲೆಗಳ ದಪ್ಪಳತೆಯು ಐದು ಅಂಗುಲ ಇರಬೇಕು, ಕೈಕಾಲುಗಳು ೭ ತಾಲಗಳಿರಬೇಕು. ಪೂರ್ತಿ ಚಿತ್ರದ ಎತ್ತರವು ೧೨ ಅಂಗುಲ ಅಳತೆ ಹೊಂದಿದ ಮುಖಮಾನದಿಂದ ೭ ತಾಲಗಳನ್ನು ಹೊಂದಿರಬೇಕು ಎಂದು ಮುಂತಾಗಿ ಸ್ತ್ರೀ ಅಳತೆಯನ್ನು ಹೇಳುತ್ತದೆ.

ಮಾನವಾಕೃತಿಯ ಪ್ರಮಾಣ ಮತ್ತು ಅಳತೆಯ ಬಗ್ಗೆ ಹೆಚ್ಚಿನ ವಿವರಣೆ ಮಾನಸೋಲ್ಲಾಸ ಗ್ರಂಥದ ' ತಾಲ ಲಕ್ಷಣ ' ಭಾಗದಲ್ಲಿ (ಶ್ಲೋಕ– ೧೯೩-೨೦೫) ಮತ್ತು ' ಸಾಮಾನ್ಯ ಚಿತ್ರಪ್ರಕ್ರಿಯಾ ' ದಲ್ಲಿ (ಶ್ಲೋಕ– ೨೩೪-೭೮೭) ದೊರೆಯುತ್ತದೆ. ವಿಷ್ಣುಧರ್ಮೋತ್ತರದಲ್ಲಿ [೧೫] ಹೇಳಲಾದ ಐದು ರೀತಿಯ ಪುರುಷ ಜಾತಿಗೆ ಅದೇ ಜಾತಿಯ ಸ್ತ್ರೀಯರನ್ನು ಪೂರಕವಾಗಿ ರಚಿಸುವ ಕುರಿತು ಹೇಳಲಾಗಿದೆ. ಪ್ರತಿಯೊಂದು ಪುರುಷನ ಪಕ್ಕದಲ್ಲಿ ಸ್ತ್ರೀಯರನ್ನು ಚಿತ್ರಿಸಿದಾಗ ಪುರುಷನ ಭುಜದ ವರೆಗೆ ಬರುವಷ್ಟು ಎತ್ತರದಲ್ಲಿ ಮಾತ್ರ ಚಿತ್ರಿಸಬೇಕು. ಅಲ್ಲದೇ ಆಯಾ ಪುರುಷನ ಚಿತ್ರದ ನಡುವಿಗಿಂತ ಸ್ತ್ರೀಯ ನಡುವನ್ನು ಎರಡು ಅಂಗುಲ ಸಣ್ಣದಾಗಿ ರೂಪಿಸಬೇಕು. ಆದರೆ ಸ್ತ್ರೀಯ ನಿತಂಬವನ್ನು

---

೧೩. Jayanth Chakravarthi : Techniques in Indian Mural Painting, Page - 97

೧೪. Beney Kumar Sarkar : (Trns), The Sukranitisara, Page - 179

೧೫. C. Sivaramamurti : Chitrasutra of the Visnudharmottara, Page - 75

ಪುರುಷನ ನಿತಂಬಕ್ಕಿಂತ ನಾಲ್ಕು ಅಂಗುಲ ದೊಡ್ಡದಾಗಿ ಚಿತ್ರಿಸಬೇಕು. ಅಲ್ಲದೇ ಸ್ತ್ರೀ ಸ್ತನಗಳನ್ನು ದುಂಡಾಗಿ ಅತೀ ಸುಂದರವಾಗಿರುವಂತೆ ಚಿತ್ರಿಸಬೇಕು. ಇನ್ನು ವರ್ಣಸಂಸ್ಕಾರದ ಸಮಯದಲ್ಲಿ ಸ್ತ್ರೀ ಚಿತ್ರದ ಹೊಳಪು ಚಂದಿರನ ಹಾಗಿರುವಂತೆ. ಕಣ್ಣುಗಳಲ್ಲಿ ಜೇನು ತುಂಬಿರುವಂತೆ ಚಿತ್ರಿಸಬೇಕು. ತೋಳುಗಳು ಸುಂದರವಾಗಿ ನುಣುಪಾಗಿ ಹಾವುಗಳ ರಾಜ ವಾಸುಕಿಯಂತೆ ಕಂಗೊಳಿಸುವಂತೆ ರಚಿಸಿ ವರ್ಣ ಸಂಸ್ಕಾರ ಮಾಡಬೇಕು. ಸ್ತ್ರೀಯರ ಚಿತ್ರಗಳನ್ನು ಚಿತ್ರಿಸುವಾಗ ಮಾಲವ್ಯ ಜಾತಿಯ ಸ್ತ್ರೀಯರ ಚಿತ್ರಗಳಿಗೆ ಹೆಚ್ಚು ಆಭರಣ ಧರಿಸಿರುವಂತೆ, ಆದರೆ ಕಡಿಮೆ ಪೋಷಾಕು ಇರುವಂತೆ ಚಿತ್ರಿಸಬೇಕು. ಎಂದು ಹೇಳಿದ್ದು ತಿಳಿದುಬರುವುದು.

**೩) ಪ್ರಾಣಿಗಳ ಚಿತ್ರದ ಅಳತೆ :** ಭಿತ್ತಿಚಿತ್ರಗಳಲ್ಲಿ ಪ್ರಾಣಿಗಳನ್ನು ಚಿತ್ರಿಸುವ ಪರಿಪಾಠ ಪ್ರಾಗೈತಿಹಾಸಿಕ ಕಾಲದಲ್ಲೇ ಕಂಡುಬಂದಿದ್ದು. ಚಿತ್ರಕಲೆಯ ಮೊದಲ ಕುರುಹುಗಳೆನಿಸಿರುವ ಪ್ರಾಗೈತಿಹಾಸಿಕ ಮಾನವನ ಬಂಡೆ ಚಿತ್ರಗಳಲ್ಲೇ ಪ್ರಾಣಿಗಳನ್ನು ಚಿತ್ರಿಸಿರುವುದು ಕಂಡುಬಂದಿದೆ. ಮನುಷ್ಯ ಚಿತ್ರಗಳನ್ನು ರಚಿಸುವದಕ್ಕಿಂತ ಮೊದಲು ಮಾನವನು ಪ್ರಾಣಿ ಚಿತ್ರಗಳನ್ನು ರಚಿಸುವವರಲ್ಲೇ ಆಸಕ್ತನಾಗಿದ್ದನು. ಅದಕ್ಕೆ ಆತನ ಪರಿಸರವೂ ಕಾರಣವಾಗಿತ್ತು.

ಪ್ರಾಗೈತಿಹಾಸಿಕ ಬಂಡೆ ಕೊರೆ ಚಿತ್ರಗಳಲ್ಲಿ ಮತ್ತು ಶಿಲಾಶ್ರಯ ವರ್ಣಚಿತ್ರಗಳಲ್ಲಿ ವಿವಿಧ ಪ್ರಾಣಿಗಳು ಕಂಡುಬಂದಿವೆ. ಅಲ್ಲೆಲ್ಲ ಕಲಾವಿದ ಪ್ರಾಣಿಗಳನ್ನು ಅಳತೆ, ಪ್ರಮಾಣಕ್ಕನುಗುಣವಾಗಿ ರಚಿಸಿದ್ದನೆಂದು ನಿಖರವಾಗಿ ಹೇಳಲು ಬರುವಂತಿಲ್ಲ. ಆದರೂ ಪ್ರಾಗೈತಿಹಾಸಿಕ ಬಂಡೆಕೊರೆ ಚಿತ್ರಗಳಲ್ಲಿ ಕಂಡುಬರುವ ಪ್ರಾಣಿಚಿತ್ರಗಳಿಗಿಂತ ಶಿಲಾಶ್ರಯ. ಮತ್ತು ಗುಹಾವರ್ಣಚಿತ್ರಗಳಲ್ಲಿಯ ಪ್ರಾಣಿಚಿತ್ರಗಳು ಪ್ರಮಾಣಬದ್ಧತೆಯಿಂದ ಕೂಡಿದಂತೆ, ನೈಜರೂಪಕ್ಕೆ ಸಮೀಪವಿರುವಂತೆ ಕಂಡುಬರುತ್ತವೆ. ಈ ಸಮಯಕ್ಕಾಗಲೇ ಪ್ರಾಣಿ ಚಿತ್ರಗಳು ನೈಜತೆಯಿಂದ ಕೂಡಿ ಪ್ರಮಾಣಬದ್ಧತೆಯಿಂದ ರಚನೆಗೊಳ್ಳುತ್ತಿದ್ದರೂ ಮನುಷ್ಯ ಚಿತ್ರಗಳು ಮಾತ್ರ ಕಡ್ಡೀ ಚಿತ್ರಗಳಾಗಿಯೇ ಇದ್ದುದನ್ನು ನೋಡಬಹುದು. ಈ ಕಾಲದ ಪ್ರಾಣಿ ಚಿತ್ರಗಳು ಹೀಗೆ ನೈಜತೆಯಿಂದ ಕೂಡಿದ್ದು, ಸುಸಂಬದ್ಧವಾಗಿ ಚಿತ್ರಿಸಿರುವುದನ್ನು ನೋಡಿದರೆ. ಆ ಕಲಾವಿದ ಈ ಪ್ರಾಣಿಗಳ ಚಿತ್ರರಚನೆಗೆ ತನ್ನದೇ ಆದ ಯಾವುದೋ ಅಳತೆ ಪದ್ಧತಿಯನ್ನು ಬಳಸುತ್ತಿರಬೇಕು ಎನಿಸುತ್ತದೆ. ಮನುಷ್ಯನಿಗೆ ಜನಸಂಪರ್ಕ ಹೆಚ್ಚಾದಾಗ ಮನುಷ್ಯ ಮನುಷ್ಯರೊಡನೆ ಹೆಚ್ಚು ಸಮಯ ಕಳೆಯತೊಡಗಿದಾಗ. ಅವರನ್ನು ಹತ್ತಿರದಿಂದ ಹೆಚ್ಚು ಗಮನಿಸುವಂತಾಯಿತು. ಇದರಿಂದ ಮಾನವನ ಮುಖ, ಕೈ-ಕಾಲು. ಮುಂತಾದವುಗಳ ಅಳತೆ. ಪ್ರಮಾಣ ತಿಳಿದುಬಂದು ಚಿತ್ರರಚನೆಯಲ್ಲಿ ಅಳವಡಿಸಿದಂತೆ ಕಾಣುತ್ತದೆ. ಅದೇ ರೀತಿ ಗುಹಾವರ್ಣ ಚಿತ್ರಗಳ ಕಾಲಕ್ಕೆ ಮಾನವನಿಗೆ ಪ್ರಾಣಿ ಬೇಟೆಯೇ ಮುಖ್ಯ ಕಸುಬಾಗಿತ್ತಲ್ಲದೇ. ಪ್ರಾಣಿಗಳೊಡನೆ ನಿಕಟವಾಗಿದ್ದು. ಕೆಲವು ಪ್ರಾಣಿಗಳೊಡನೆ ವೈರ ಸಾಧಿಸುತ್ತ ಮತ್ತೆ ಕೆಲವು ಪ್ರಾಣಿಗಳನ್ನು ಹತೋಟಿಯಲ್ಲಿಟ್ಟುಕೊಂಡು ಬಾಳಲು ಪ್ರಯತ್ನಿಸುವ ಕಾಲವಾಗಿತ್ತು. ಹೀಗಾಗಿ ಪ್ರಾಣಿಗಳನ್ನು ಹತ್ತಿರದಿಂದ ನೋಡುವ, ಗಮನಿಸುವ ಅವಕಾಶ ತಾನೇ ತಾನಾಗಿರುತ್ತಿತ್ತು. ಇದರಿಂದ ಅವುಗಳ ಪ್ರಮಾಣ, ಅಳತೆ, ಹೋಲಿಕೆ, ವ್ಯತ್ಯಾಸಗಳನ್ನು ತಿಳಿದುಕೊಂಡು ಅವುಗಳನ್ನು ಚಿತ್ರ ರಚನೆಯಲ್ಲಿ ಬಳಸಿಕೊಂಡಿದ್ದಾನೆ. ಈ ದೃಷ್ಟಿಯಿಂದ ನೋಡಲಾಗಿ ಮನುಷ್ಯ ಚಿತ್ರಗಳಿಗಿಂತ ಮೊದಲೇ ಪ್ರಾಣಿ ಚಿತ್ರಗಳನ್ನು ಅಳತೆ ಮತ್ತು ಪ್ರಮಾಣಕ್ಕನುಸಾರವಾಗಿ ರಚನೆ ಮಾಡಲಾಗಿದೆ ಎನ್ನಬಹುದು.

ಐತಿಹಾಸಿಕ ಕಾಲದ ಭಿತ್ತಿಚಿತ್ರಗಳಲ್ಲಿ ಅಜಂತೆಯಲ್ಲಿ ಮತ್ತು ಬಾಘ್ ಗುಹೆಗಳಲ್ಲಿ ಕಂಡುಬಂದಿರುವ ಆನೆ ಮತ್ತು ಕುದುರೆ ಚಿತ್ರಗಳು ಅತ್ಯಂತ ಪ್ರಮಾಣಬದ್ಧತೆಯಿಂದ ಕೂಡಿ ಜೀವಕಳೆಯಿಂದ ತುಂಬಿವೆ. ಹಾಗೆಯೇ ಕರ್ನಾಟಕದ

ಅನೇಕ ಭಿತ್ತಿಚಿತ್ರಗಳಲ್ಲೂ ಪ್ರಾಣಿ ಚಿತ್ರಗಳು ಪ್ರಮಾಣಪೂರ್ಣವಾಗಿ ಜೀವಕಳೆಯಿಂದ ಕಂಗೊಳಿಸುತ್ತವೆ. ವಿಜಯನಗರದ ಹಂಪೆಯ ವಿರೂಪಾಕ್ಷ ದೇವಾಲಯದಲ್ಲಿ ರಚಿತವಾದ ಚಿತ್ರಗಳಲ್ಲಿ ಯುದ್ಧ ದೃಶ್ಯಗಳಲ್ಲಿ ಆನೆ, ಕುದುರೆಗಳು ನೈಜತೆಯಿಂದ ಕೂಡಿವೆ. ಅಲ್ಲದೇ ತುಮಕೂರಿನ ಸಮೀಪದ 'ಸಿಬಿ' ಯಲ್ಲಿಯೂ ಅನೇಕ ಪ್ರಾಣಿಚಿತ್ರಗಳು ನೈಜತೆಯಿಂದ ರಚಿತವಾಗಿವೆ. ಇಲ್ಲಿ ಗೂಳಿಗಳು, ಆಕಳುಗಳು, ಎಮ್ಮೆಗಳು, ಆನೆಗಳು, ಜಿಂಕೆಗಳು, ಹುಲಿಗಳು ಮುಂತಾದ ಚಿತ್ರಗಳಿವೆ. ನಿಪ್ಪಾಣಿ ವಾಡೆಯಲ್ಲಿನ ಆಕಳುಗಳು, ನರಗುಂದ ಅರಮನೆಯಲ್ಲಿರುವ ಕುದುರೆಯ ಭಿತ್ತಿಚಿತ್ರಗಳು ನೈಜತೆಯಿಂದ ರಚಿಸಲಾದ ಪ್ರಾಣಿಚಿತ್ರಗಳಾಗಿವೆ.

ಪ್ರಾಣಿಚಿತ್ರಗಳನ್ನು ರಚಿಸುವ ಅಳತೆಯ ಬಗ್ಗೆ ಶಿಲ್ಪಶಾಸ್ತ್ರಗಳಲ್ಲಿ ವಿವರಣೆ ದೊರಕುತ್ತದೆ. ಪ್ರಾಣಿಚಿತ್ರಗಳನ್ನು ರಚಿಸಬೇಕಾದಾಗ ಗ್ರಾಫ (Graph) ಸಹಾಯದಿಂದ ರಚಿಸಬೇಕೆಂದೂ ಆನೆಯ ಚಿತ್ರ ರಚಿಸಬೇಕಾದರೆ ೧೩ ಉದ್ದ ಗೆರೆಗಳು ಮತ್ತು ೧೧ ಅಡ್ಡ ಗೆರೆಗಳನ್ನೆಳೆದು, ೧೨೦ ಚೌರಸಗಳ ರೇಖಾನಕ್ಷೆ ತಯಾರಿಸಿ ರಚಿಸಬೇಕೆಂದು ಮಾನಸೋಲ್ಲಾಸದಲ್ಲಿ [೧೬] ಹೇಳಿದೆ. ಪ್ರಾಣಿಗಳ ಚಿತ್ರಗಳ ಅಳತೆಯನ್ನೂ ಕೂಡಾ ' ತಾಳ ' ಮತ್ತು ಅಂಗುಲಗಳಿಂದಲೇ ಹೇಳಲಾಗಿದೆ. ಕುದುರೆ ಚಿತ್ರದ ಅಳತೆಯನ್ನೂ ಸಹಿತ ಮಾನಸೋಲ್ಲಾಸದಲ್ಲಿ [೧೭] ಹೇಳಿದೆ. ತಾಲ ಮತ್ತು ಅಂಗುಲಗಳಲ್ಲಿ ಹೇಳಲಾದ ಅಳತೆ ವಿಧಾನದಲ್ಲಿ ಕುದುರೆಯ ಮುಖದ ಉದ್ದವು ಮೂರು ತಾಲಗಳು, ಮುಖದ ಮೇಲ್ತುದಿಯ ಕೊನೆಯಿಂದ ಕುತ್ತಿಗೆಯ ಕೆಳಗಿನ ಎಲುಬಿನ ತುದಿಯ ತನಕದ ಅಳತೆ ೪ (ನಾಲ್ಕು) ತಾಲಗಳು ಎಂದು ತಿಳಿದುಬರುತ್ತದೆ.

ಕಾಶ್ಯಪ ಶಿಲ್ಪಶಾಸ್ತ್ರದಲ್ಲಿ [೧೮] ನಂದಿ (ಗೂಳಿ ಅಥವಾ ಎತ್ತು) ಯ ನಿರ್ಮಾಣದಲ್ಲಿ ಅನುಸರಿಸುವ ಅಳತೆಯನ್ನು ಹೇಳಿದೆ. ನಂದಿಯ ಒಟ್ಟು ಎತ್ತರವನ್ನು ಐವತ್ತು ಸಮಭಾಗಗಳನ್ನಾಗಿ ವಿಂಗಡಿಸಿ ಅದರ ಒಂದು ಭಾಗವನ್ನು ಒಂದು ಅಂಗುಲವೆಂದು ಪರಿಗಣಿಸಬೇಕು. ಕಂಠದಿಂದ ಪೃಷ್ಠದ ಅಂತ್ಯದ ವರೆಗೆ ಮೂವತ್ತೆರಡು ಅಂಗುಲ, ತಲೆಯಿಂದ ಕಂಠದ ವರೆಗೆ ಹತ್ತು ಅಂಗುಲ, ಕಂಠದ ಅಗಲ ಎಂಟು ಅಂಗುಲ, ತೊಡೆಯ ಉದ್ದವು ಆರು ಅಂಗುಲ, ಮೊಣಕಾಲಿನ ಅಳತೆ ಎರಡು ಅಂಗುಲ, ಕಾಲಿನ ಗೊರಸಿನ ಅಳತೆ ಎರಡು ಅಂಗುಲ, ಕಿವಿಗಳ ಉದ್ದ ಐದು ಅಂಗುಲ, ಕಣ್ಣಿನ ಅಗಲವು ಎರಡು ಅಂಗುಲವಾಗಿದೆ. ಹೀಗೆ ಪ್ರಾಣಿ ಚಿತ್ರಗಳನ್ನು ಅಳತೆ ಮತ್ತು ಪ್ರಮಾಣಕ್ಕನುಸಾರವಾಗಿಯೇ ರಚಿಸಬೇಕೆಂಬ ವಿವರಗಳಿವೆ.

**IV. ಅಲಂಕಾರಿಕ ನಕ್ಷೆಗಳು (Decorative Motifs) :** ಅಲಂಕಾರಿಕ ನಕ್ಷೆಗಳನ್ನು ಚಿತ್ರಿಸುವ ಸಂಪ್ರದಾಯವನ್ನು ನಾವು ಪ್ರಾಗೈತಿಹಾಸಿಕ ಬಂಡೆ ಚಿತ್ರಗಳಲ್ಲೇ ಗುರುತಿಸಬಹುದು. ಗುರುತಿಸಲಾಗದ ಕೆಲವು ಚಿಹ್ನೆಗಳು, ಮಂಡಲಗಳು, ಪುನರಾವರ್ತಿತ ವಿವಿಧ ಚಿತ್ರಗಳು, ಹೂ, ಎಲೆಗಳನ್ನು, ಹೋಲುವ ರೂಪಗಳು ಮುಂತಾದವು ಪ್ರಾಗೈತಿಹಾಸಿಕ ಮಾನವರು ಅಲಂಕಾರಿಕ ನಕ್ಷೆ ರಚಿಸಲು ಹಾತೊರೆಯುವದನ್ನು ಸೂಚಿಸುತ್ತವೆ.

" ಅಲಂಕಾರಿಕ ನಕ್ಷೆಗಳನ್ನು ಚಿತ್ರಿಸುವ ಕುರಿತಾದ ಮಾಹಿತಿಯು ಶಿಲ್ಪಶಾಸ್ತ್ರಗಳಲ್ಲಿ ಸಾಮಾನ್ಯವಾಗಿ ಕಂಡುಬರುವದಿಲ್ಲ. " ಎನ್ನಲಾಗಿದ್ದು [೧೯] ಅಲಂಕಾರಿಕ ನಕ್ಷೆಗಳಿಗೆ ಯಾವುದೇ ನಿರ್ದಿಷ್ಟವಾದ ಅಳತೆ, ಪ್ರಮಾಣಗಳನ್ನು ಹೇಳಿಲ್ಲವೆನ್ನಬಹುದು. ಆದರೆ ಈ ಅಲಂಕಾರಿಕ ನಕ್ಷೆಗಳನ್ನು ರಚಿಸುವಾಗ, ರಚಿಸಬೇಕಾದ ಸ್ಥಳದ ಅಳತೆಯನ್ನು

---

೧೬. ಜಿ. ಕೆ. ಶ್ರೀಗೊಂಡೇಕರ (ಸಂ.) : ಮಾನಸೋಲ್ಲಾಸ, ಭಾಗ II, ಅಧ್ಯಾಯ I, ಪುಟ - ೧೮೧
೧೭. ಜಿ. ಕೆ. ಶ್ರೀಗೊಂಡೇಕರ (ಸಂ.) : ಮಾನಸೋಲ್ಲಾಸ, ಭಾಗ II, ಅಧ್ಯಾಯ I, ಪುಟ - ೮೩೬
೧೮. ಜಿ. ಜ್ಞಾನಾನಂದ (ಅನು.) : ಕಾಶ್ಯಪ ಶಿಲ್ಪಶಾಸ್ತ್ರ, ಪುಟ - ೨೪
೧೯. Jayanth Chakravarthi : Techniques in Indian Mural Painting, Page - 105

ಅನುಸರಿಸಿಕೊಂಡು. ಆ ಸ್ಥಳದ ವ್ಯಾಪ್ತಿಗೆ ನಕ್ಷೆ ಸರಿಹೊಂದುವಂತೆ ರಚಿಸಬೇಕಾಗುವದು. ಅಲ್ಲದೇ ಆ ಸ್ಥಳದ ವ್ಯಾಪ್ತಿ, ಕಲಾವಿದನ ಅನಿಸಿಕೆ. ಮತ್ತು ವಿಷಯಕ್ಕನುಗುಣವಾಗಿ ಅಲಂಕಾರಿಕ ನಕ್ಷೆಗಳ ಪ್ರಮಾಣ ಮತ್ತು ಅಳತೆಯನ್ನು ನಿರ್ಧರಿಸಬೇಕಾಗುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ಸುಂದರವಾಗಿ ಕಾಣುವಂತೆ, ಆ ಪ್ರದೇಶದ ವ್ಯಾಪ್ತಿಗೆ ನಕ್ಷೆಗಳನ್ನು ಸಂಯೋಜಿಸಿ ಚಿತ್ರಿಸುವುದೇ ಆಗಿದೆ. ಈ ಅರ್ಥದಲ್ಲಿ ಅಲಂಕಾರಿಕ ನಕ್ಷೆಗಳ ರಚನೆಯಲ್ಲಿ ಯಾವುದೇ ಅಳತೆ, ಪ್ರಮಾಣ, ಸಂಯೋಜನೆ. ದೃಷ್ಟಿಗಳನ್ನು ನಿರ್ದಿಷ್ಟವಾಗಿ ಅನುಸರಿಸಲಾಗುವದಿಲ್ಲವೆಂದೇ ಹೇಳಬಹುದಾಗಿದೆ.

ಶಿಲ್ಪಶಾಸ್ತ್ರಗಳಲ್ಲಿ ಸಾಮಾನ್ಯವಾಗಿ ಅಲಂಕಾರಿಕ ನಕ್ಷೆಗಳ ಅಳತೆ. ಪ್ರಮಾಣ. ಚಿತ್ರಿಸುವ ವಿಧಾನ ಮುಂತಾದವುಗಳನ್ನು ಹೇಳದೇ ಇದ್ದರೂ. ತ್ರಿವಿಕ್ರಮನ ' ನಳಚಂಪೂ ' ಮತ್ತು ಭುವನ ದೇವನ ' ಅಪರಾಜಿತಪೃಚ್ಛ ' ಗ್ರಂಥಗಳಲ್ಲಿ ಅಲಂಕಾರಿಕ ನಕ್ಷೆಯ ವಿವಿಧ ರೂಪಗಳನ್ನು ಹೇಳಲಾಗಿದೆ. ಅಲಂಕಾರಿಕ ನಕ್ಷೆಯಲ್ಲಿ ಕಂಟಕ (Thorn), ಮುಳ್ಳಿನ ಕಂಟಿಯ ನಕ್ಷೆ. ಪತ್ರ (Leaf). ಎಲೆಯ ಆಕಾರದ ನಕ್ಷೆ, ಲತಾ (Creeper) ಬಳ್ಳಿಯ ನಕ್ಷೆ ಎಂಬ ಪ್ರಭೇದಗಳನ್ನು ಚಿತ್ರಿಸಬೇಕೆಂದು ' ನಳಚಂಪೂ ' ವಿನಲ್ಲಿ [೨೦] ಹೇಳಿರುವ ಕುರಿತು ಸಿ. ಶಿವರಾಮಮೂರ್ತಿಯವರು ಚರ್ಚಿಸಿದ್ದಾರೆ. ಮೇಲಿನ ಮೂರು ವಿವಿಧ ನಕ್ಷೆಗಳಲ್ಲದೇ ಕಾಲಿಕ (Bud) ಚಿಗುರು, ಶಾಖಾ (Branch) ರೆಂಬೆಗಳು, ತ್ರಿಭಂಗ (Triple bends) ಎಂದರೆ ಮೂರು ರೀತಿಯ ಹೊರಳುವಿಕೆಯಿಂದ ಕೂಡಿದ ನಕ್ಷೆಯ ರೂಪಗಳನ್ನೂ ಚಿತ್ರಿಸುವಂತೆ ಅಲ್ಲಿ ಹೇಳಲಾಗಿದೆ. ಅಲಂಕಾರಿಕ ನಕ್ಷಾ ಚಿತ್ರಣದ ಬಗ್ಗೆ ಹೆಚ್ಚು ಚರ್ಚಿಸಲ್ಪಟ್ಟಿದ್ದು ' ಅಪರಾಜಿತ ಪೃಚ್ಛ ' ಗ್ರಂಥದಲ್ಲಿ. ಈ ಗ್ರಂಥದಲ್ಲಿ ಎರಡು ಅಧ್ಯಾಯಗಳನ್ನೇ [೨೧] ಇದಕ್ಕಾಗಿ ಮೀಸಲಿಡಲಾಗಿದೆ. ಇವರಲ್ಲಿ ಎಲೆಯ ಆಕಾರದ ನಕ್ಷೆಗಳನ್ನು ರೂಪಿಸುವಾಗ ಸಂದರ್ಭಾನುಸಾರವಾಗಿ ನಾಗರ. ವೇಸರ. ದ್ರಾವಿಡ ಮತ್ತು ಕಳಿಂಗ ಎಂಬ ಪ್ರಭೇದಗಳನ್ನು ಅರಿತುಕೊಂಡು ಚಿತ್ರಿಸಬೇಕು ಎಂದು ಹೇಳಿದೆ. ಇವುಗಳಲ್ಲದೇ– ದಿನಪತ್ರ, ಋತುಪತ್ರ, ಜಲಪತ್ರ, ಸ್ಥಳಪತ್ರ, ನರಪತ್ರ, ಗಜಪತ್ರ, ಮೇಘಪತ್ರ, ಅಶ್ವಪತ್ರಗಳೆಂಬ ನಕ್ಷಾಚಿತ್ರಣದ ರೂಪಗಳನ್ನೂ ಹೇಳಲಾಗಿದೆ. ' ದಿನಪತ್ರ ' – ಚಂದಿರನ ಮತ್ತು ಸೂರ್ಯನ ಸ್ಥಾನ ಪಲ್ಲಟಗಳಿಂದುಂಟಾಗುವ ರೂಪಗಳು, ಅಂದರೆ ಬಿದಿಗೆ ಚಂದ್ರ, ತದಿಗೆ ಚಂದ್ರ, ಅರ್ಧಚಂದ್ರ ಹೀಗೆ ಚಂದಿರನ ವಿವಿಧ ರೂಪಗಳು. ಹಾಗೇ ಸೂರ್ಯನ ರೂಪಗಳನ್ನು ನಕ್ಷೆಯಲ್ಲಿ ಚಿತ್ರಿಸುವುದು.

' ಋತುಪತ್ರ ' – ವಿವಿಧ ಋತುಗಳನ್ನು ಪ್ರತಿನಿಧಿಸುವಂತಿರುವ ನಕ್ಷೆಗಳು.

' ಜಲಪತ್ರ ' – ಜಲಸಂಬಂಧೀ ಜೀವಿಗಳನ್ನು ನಕ್ಷಾರೂಪದಲ್ಲಿ ಚಿತ್ರಿಸುವುದು.

' ಸ್ಥಳಪತ್ರ ' – ಭೂಮಿಯ ಮೇಲಿನ ವಸ್ತುಗಳನ್ನು ನಕ್ಷಾರೂಪದಲ್ಲಿ ಚಿತ್ರಿಸುವುದು.

' ನರಪತ್ರ ' – ಮನುಷ್ಯ ರೂಪಗಳನ್ನು ನಕ್ಷೆಗೆ ಅಳವಡಿಸುವುದು.

' ಗಜಪತ್ರ ' – ಆನೆ ಚಿತ್ರಗಳನ್ನುಳ್ಳ ನಕ್ಷಾ ಚಿತ್ರಣ ಮಾಡುವುದು.

' ಮೇಘಪತ್ರ ' – ಮೋಡದ ವಿವಿಧ ರೂಪಗಳನ್ನು ನಕ್ಷಾಚಿತ್ರಣಕ್ಕೆ ಅಳವಡಿಸುವುದು.

' ಅಶ್ವಪತ್ರ ' – ಕುದುರೆಗಳ ರೂಪವನ್ನು ನಕ್ಷಾಚಿತ್ರಣಕ್ಕೆ ಹೊಂದಿಸುವುದು.

---

೨೦. C. Sivaramamurti : Artist's Jotting from the ' Nalachampu of Trivikrama, Page - 217

೨೧. ಪಿ. ಎ. ಮಂಕಡ್ (ಸಂ.) : ಅಪರಾಜಿತ ಪೃಚ್ಛ. ಅಧ್ಯಾಯ ೨೨೭ ಮತ್ತು ೨೨೮

ಈ ಎಂಟು ನಕ್ಷಾರೂಪಗಳಲ್ಲಿ 'ಜಲಪತ್ರ', 'ನರಪತ್ರ' ಮತ್ತು 'ಗಜಪತ್ರ' ಈ ಮೂರರಲ್ಲಿ ಪ್ರತಿಯೊಂದರಲ್ಲೂ ಮತ್ತೆ ಐದೈದು ಭಾಗಗಳನ್ನು [೨೨] ಹೆಸರಿಸಲಾಗಿದೆ. 'ಮೇಘ ಪತ್ರ' ದಲ್ಲಿ ಮತ್ತೆ ಸಂದರ್ಭಕ್ಕನುಸಾರವಾಗಿ ವಿವಿಧ ರೂಪಗಳನ್ನು ಚಿತ್ರಿಸಬೇಕು ಎಂದು ಹೇಳಲಾಗಿದ್ದು, ಆದರೆ 'ಅಶ್ವ ಪತ್ರ' ದಲ್ಲಿ ಯಾವುದೇ ಭಾಗಗಳನ್ನು ಮಾಡಿದಂತೆ ತೋರುವುದಿಲ್ಲ. ' ಜಲಪತ್ರ ' ಎಂಬ ನಕ್ಷೆಯಲ್ಲಿ ಒಳಗೊಳ್ಳುವ ಐದು ವಿಧದ ನಕ್ಷೆಗಳು ಹೀಗಿವೆ–

೧) ಹಂಸ ಪತ್ರ – ಬಾತುಕೋಳಿ, ಹಂಸಪಕ್ಷಿಗಳಂತಹ ನೀರಿನಲ್ಲಿ ವಾಸಮಾಡಬಲ್ಲ ಪಕ್ಷಿಗಳ ನಕ್ಷಾರೂಪ.

೨) ನಕ್ರ ಪತ್ರ – ಮೊಸಳೆಯ ರೂಪದ ನಕ್ಷಾಚಿತ್ರ.

೩) ಮತ್ಸ್ಯ ಪತ್ರ – ಮೀನಿನ ನಕ್ಷೆ.

೪) ಕೂರ್ಮ ಪತ್ರ – ಆಮೆಯ ನಕ್ಷೆ.

೫) ಪ್ಲವಗ ಪತ್ರ – ಕಪ್ಪೆಯ ನಕ್ಷೆ.

ಇವುಗಳಲ್ಲದೇ ಕಂಟಕ (ಮುಳ್ಳುಕಂಟಿಯ ನಕ್ಷಾರೂಪ) ಮತ್ತು ' ಶಾಖಾ ' (Branch) (ಅಂದರೆ ಒಂದೇ ನಕ್ಷೆಯ ರೂಪದಿಂದ ಬೆಳೆಯುವ ವಿವಿಧ ರೂಪಗಳು) ನಕ್ಷೆಗಳ ಬಗ್ಗೆ ಅವುಗಳಲ್ಲಿ ಬರುವ ವಿವಿಧ ನಕ್ಷಾರೂಪಗಳ ಬಗ್ಗೆ ಚರ್ಚಿಸಲಾಗಿದೆ. ' ಕಂಟಕ ' ದಲ್ಲಿ ಮತ್ತೆ ಎಂಟು ವಿಧದ ನಕ್ಷಾರೂಪಗಳನ್ನು ಹೇಳಿದೆ. ಅವುಗಳೆಂದರೆ– ಕಾಲಿ, ಕಾಲಿಕ, ವೈಮಿಶ್ರ, ಚಿತ್ರಕೌಶಲ, ವೈವರ್ತ, ವೈವೃತ್ತ, ಸುಭಂಗ, ಭಂಗಚಿತ್ರಕ. ಇದೇ ರೀತಿ ' ಶಾಖಾ ' ನಕ್ಷೆಯಲ್ಲೂ ವಿವಿಧ ರೂಪಗಳನ್ನು ಹೇಳಲಾಗಿದೆ. [೨೩] ನಕ್ಷೆಯ ಚಿತ್ರಣದ ಕುರಿತಾಗಿ ಅಪರಾಜಿತ ಪೃಚ್ಛದಲ್ಲಿ ದೊರಕುವಷ್ಟು ಮಾಹಿತಿ ಬೇರಾವ ಗ್ರಂಥದಲ್ಲೂ ವಿವರವಾಗಿ ದೊರೆಯುವದಿಲ್ಲವೆಂದೇ ಹೇಳಬಹುದು.

**V. ನವಸ್ಥಾನಗಳು :** ಪ್ರಾಚೀನ ಭಿತ್ತಿಚಿತ್ರ ಕಲಾವಿದರು ಚಿತ್ರರಚನೆ ಮಾಡುವ ಸಂದರ್ಭದಲ್ಲಿ ಚಿತ್ರಗಳ ಅಳತೆ, ಪ್ರಮಾಣಕ್ಕೆ ಕೊಟ್ಟಷ್ಟೇ ಮಹತ್ವವನ್ನು ಚಿತ್ರಗಳ ಹಾವ-ಭಾವ, ಅಂಗವಿನ್ಯಾಸ, ಚಿತ್ರಗಳ ಭಂಗಿಗಳ ಬಗ್ಗೆಯೂ ಕೊಡುತ್ತಿದ್ದರು. ಚಿತ್ರದ ಭಂಗಿ ಹೇಗಿರಬೇಕು, ಅದು ಕುಳಿತಿರಬೇಕೋ, ನಿಂತಿರಬೇಕೋ ಅಥವಾ ಬಾಗಿರಬೇಕೋ ಎಂಬುದಲ್ಲದೇ, ಅದು ಪೂರ್ತಿ ಎದುರಿಗೆ ಕಂಡಂತೆ ಚಿತ್ರಿಸಬೇಕೋ, ಬದಿಯ ನೋಟವನ್ನು ಚಿತ್ರಿಸಬೇಕೋ, ಹಿಂಭಾಗದ ನೋಟ ಚಿತ್ರಿಸಬೇಕೋ, ಸ್ವಲ್ಪವೇ ತಿರುಗಿದ ದೃಶ್ಯ ಚಿತ್ರಿಸಬೇಕೋ ಎಂಬಿತ್ಯಾದಿ ಭಾವಭಂಗಿಗಳನ್ನು ಕಲಾವಿದ ಮೊದಲೇ ನಿರ್ಧರಿಸಿಕೊಂಡು ಚಿತ್ರಿಸಬೇಕಾಗುತ್ತಿತ್ತು. ಚಿತ್ರದ ಈ ರೀತಿಯ ಭಾವಭಂಗಿಗಳನ್ನೇ ಪ್ರಾಚೀನರು 'ಸ್ಥಾನ' ಗಳು ಎಂದು ಕರೆದಿದ್ದಾರೆ. ಚಿತ್ರದ ವಿವಿಧ ರೀತಿಯ ಭಾವಭಂಗಿಗಳು, ಚಿತ್ರಗಳ ಬೇರೆ ಬೇರೆ ದೇಹ ವಿನ್ಯಾಸಗಳ ರಚನೆಯ ಬಗ್ಗೆ ಅಂದರೆ ವಿವಿಧ ಸ್ಥಾನಗಳ ಬಗ್ಗೆ ವಿಷ್ಣುಧರ್ಮೋತ್ತರ, ಸಮರಾಂಗಣ ಸೂತ್ರಧಾರ, ಮಾನಸೋಲ್ಲಾಸ, ಶಿಲ್ಪರತ್ನ ಗ್ರಂಥಗಳು ಮುಖ್ಯವಾಗಿ ಚರ್ಚಿಸಿವೆ. ಅಲ್ಲದೇ ಕೆಲವು ಆಗಮ ಗ್ರಂಥಗಳಲ್ಲೂ ಈ ಬಗ್ಗೆ ಮಾಹಿತಿ ದೊರೆಯುತ್ತದೆ.

ಮೇಲಿನ ಗ್ರಂಥಗಳ ಆಧಾರದಿಂದ ಹೇಳಬಹುದಾದರೆ ಮುಖ್ಯವಾಗಿ ಒಂಬತ್ತು ಸ್ಥಾನಗಳು ಚಿತ್ರರಚನೆಯಲ್ಲಿ ಬಳಕೆಯಲ್ಲಿದ್ದವು. ಅವುಗಳೆಂದರೆ ೧) ರಿಜ್ವಗತ ೨) ಅನ್ರಜು ೩) ಸಾಚೀಕೃತ ಶರೀರ ೪) ಅರ್ಧವಿಲೋಚನ ೫) ಪರ್ಸ್ವಗತ ೬) ಪರವೃತ್ತ ೭) ಪ್ರಸ್ಥಗತ ೮) ಪರೀವೃತ್ತ ೯) ಸಮಾನತ– ಈ ಒಂಬತ್ತು ಸ್ಥಾನಗಳನ್ನೇ ವಿಷ್ಣುಧರ್ಮೋತ್ತರ ಗ್ರಂಥವು ಹೇಳಿದೆ.

---

೨೨. ಈ ಕುರಿತು ಹೆಚ್ಚಿನ ವಿವರಣೆ ' ಅಪರಾಜಿತ ಪೃಚ್ಛ ' ಗ್ರಂಥದ ಅಧ್ಯಾಯ ೨೨೭ ನೋಡಬಹುದು

೨೩. ಈ ವಿಷಯ ಕುರಿತಾಗಿ ಹೆಚ್ಚಿನ ವಿವರಣೆಗೆ ' ಅಪರಾಜಿತ ಪೃಚ್ಛ ' ಗ್ರಂಥದ ಅಧ್ಯಾಯ ೨೨೮ ನ್ನು ನೋಡಿ

' ಸಮರಾಂಗಣ ಸೂತ್ರಧಾರ ' ಗ್ರಂಥದಲ್ಲಿ [೨೪] ಮಾನವಾಕೃತಿಗಳನ್ನು ರೂಪಿಸುವಾಗ ನವಸ್ಥಾನಗಳನ್ನು ಗಮನದಲ್ಲಿಟ್ಟುಕೊಳ್ಳಬೇಕೆಂದು ಹೇಳಿದೆ. ಮಾನಸೋಲ್ಲಾಸ ಮತ್ತು ಶಿಲ್ಪರತ್ನ ಗ್ರಂಥಗಳು ಚಿತ್ರರಚನೆಯಲ್ಲಿ ಮುಖ್ಯವಾಗಿ ಐದು ಸ್ಥಾನಗಳೆಂದು ಹೇಳಿವೆ. ಮಾನಸೋಲ್ಲಾಸವು [೨೫] ಋಜು, ಅರ್ಧ ಋಜು, ಸಾಚಿ, ಅರ್ಧಾಕ್ಷಿ ಮತ್ತು ಭಿತ್ತಿಕ ಎಂಬ ಐದು ಸ್ಥಾನಗಳನ್ನು ಹೇಳಿದರೆ. ಶಿಲ್ಪರತ್ನವು [೨೬] – ಋಜು, ಅರ್ಧ ಋಜು, ಸಾಚಿಕ, ದ್ವ್ಯರ್ಧಾಕ್ಷಿ ಮತ್ತು ಭಿತ್ತಿಕ ಎಂಬ ಐದು ಸ್ಥಾನಗಳನ್ನು ಹೇಳಿದೆ. ಶಿಲ್ಪರತ್ನವು ಮುಖ್ಯವಾದ ಈ ಐದು ಸ್ಥಾನಗಳನ್ನು ಹೇಳಿ ಇನ್ನೂ ನಾಲ್ಕು ' ಪರವೃತ್ತ ' ವಿಧದ ಸ್ಥಾನಗಳನ್ನು ಈ ಐದಕ್ಕೆ ಸೇರಿಸಿ ಒಟ್ಟು ಒಂಭತ್ತು ಸ್ಥಾನಗಳನ್ನು ಅದು ಅನುಮೋದಿಸುತ್ತದೆ. ಇವುಗಳಲ್ಲಿ ಮೊದಲಿನ ಮುಖ್ಯ ಐದು ಸ್ಥಾನಗಳು ಚಿತ್ರದ ಎದುರು ನೋಟಕ್ಕೆ ಸಂಬಂಧ ಪಟ್ಟರೆ, ಇನ್ನುಳಿದ ' ಪರವೃತ್ತ ' ವಿಧದ ನಾಲ್ಕು ಸ್ಥಾನಗಳು ಹಿಂಬದಿಯ ನೋಟಕ್ಕೆ ಸಂಬಂಧಿಸಿದವುಗಳಾಗಿವೆ.

೧) **ರಿಜ್ವಗತ :** ಇದು ಚಿತ್ರದ ಪೂರ್ತಿ ಎದುರು ನೋಟವಾಗಿದ್ದು, (ಅಭಿಮುಖ) ದೇಹದ ಯಾವುದೇ ಅವಯವಗಳು ಈ ಭಂಗಿಯಲ್ಲಿ ಕ್ಷೀಣವಾಗಿ ಕಾಣಲಾರವು. ಮುಖ, ಎದೆ, ಹೊಟ್ಟೆ, ಸೊಂಟ, ಭುಜಗಳು, ತೊಡೆಗಳು ಪೂರ್ತಿಯಾಗಿ ತಮ್ಮ ಎದುರು ನೋಟದಿಂದ ಕಂಡುಬರುವವು. ಇದು ಅತ್ಯಂತ ಸರಳವಾದ ಎದುರು ನೋಟವಾಗಿದೆ. ಈ ನಿಲುವಿನಲ್ಲಿ ಆಕೃತಿ ಇದ್ದಾಗ ಬ್ರಹ್ಮಸೂತ್ರ ಮತ್ತು ಎರಡೂ ಕಡೆಯ ಪಕ್ಷ ಸೂತ್ರಗಳ ನಡುವಿನ ಅಂತರ ಆರು ಅಂಗುಲವಿರುತ್ತದೆ. ನರಗುಂದ ಅರಮನೆಯಲ್ಲಿನ ವೆಂಕಟೇಶ್ವರ ಚಿತ್ರ. ಅಮ್ಮಿನಭಾವಿಯಲ್ಲಿನ ಶಿವನ ಚಿತ್ರ ಮುಂತಾದ ಅನೇಕ ಚಿತ್ರಗಳು ಈ ನಿಲುವಿನಲ್ಲಿವೆ.

೨) **ಅನೃಜು :** ಇದು ಎದುರು ನೋಟದಂತೆ ಕಂಡುಬಂದರೂ ಆಕೃತಿಯು ೮:೪ ರ ಅಳತೆಯಲ್ಲಿ(೬೦°) ಬದಿಗೆ ತಿರುಗಿಕೊಂಡಿರುವದು. ಮೂಗಿನ ಹೊಳ್ಳೆಗಳು ಮತ್ತು ತುಟಿಯ ಅಂಚುಗಳ ಸ್ವಲ್ಪ ಭಾಗ ಕ್ಷಯವಾಗಿ ಕಾಣುವುದು. ಈ ನಿಲುವಿನಲ್ಲಿ ಆಕೃತಿ ಇದ್ದಾಗ ಬ್ರಹ್ಮಸೂತ್ರದಿಂದ ಪಕ್ಷಸೂತ್ರಗಳ ಅಂತರವು ಒಂದು ಕಡೆಗೆ ೮ ಅಂಗುಲ ಇದ್ದರೆ, ಇನ್ನೊಂದು ಕಡೆಗೆ ೪ ಅಂಗುಲವಿರುತ್ತದೆ. ಈ ನಿಲುವಿನಲ್ಲಿ ನರಗುಂದದ ಅರಮನೆಯ ಶಿವನ ಚಿತ್ರ, ಇಲ್ಲಿಯೇ ಇರುವ ರಾಜನೊಬ್ಬನ ಚಿತ್ರಗಳು ರಚಿಸಿವೆ.

೩) **ಸಾಚೀಕೃತ ಶರೀರ :** ಈ ಭಂಗಿಯಲ್ಲಿ ಆಕೃತಿಯು ೧೦:೨ (೩೦°)ರ ಭಂಗಿಯಲ್ಲಿ ಪಕ್ಕಕ್ಕೆ ತಿರುಗಿದ್ದು ನೋಡಲು ಆಕರ್ಷಕವಾಗಿ ಕಾಣುವುದು. ಒಂದು ಬದಿಯ ಹುಬ್ಬು ಮತ್ತು ಹಣೆಯು ಸ್ವಲ್ಪ ಭಾಗಗಳು ಕ್ಷೀಣವಾಗಿ ಕಾಣುವವು. ಮೂಗು ಒಂದು ಬದಿಯಿಂದ ಸಂಪೂರ್ಣ ಕಂಡು ಕ್ಷೀಣವಾದ ಇನ್ನೊಂದು ಬದಿಯ ಮೂಗಿನ ಹೊಳ್ಳೆಯ ಸ್ವಲ್ಪ ಭಾಗ ಮಾತ್ರ ಬರುವದು. ಈ ಭಂಗಿಯು ಮೋಹಕ ಭಂಗಿಗಳಲ್ಲೊಂದಾಗಿದ್ದು, ಅಜಂತೆಯಲ್ಲಿನ ಪದ್ಮಪಾಣಿ ಬುದ್ಧ, ಅವಲೋಕಿತೇಶ್ವರ ಚಿತ್ರಗಳು ಈ ಭಂಗಿಯಲ್ಲಿ ರಚಿಸಿವೆ. ಈ ನಿಲುವಿನಲ್ಲಿ ಆಕೃತಿ ನಿಂತಾಗ ಬ್ರಹ್ಮಸೂತ್ರದಿಂದ ಪಕ್ಷಸೂತ್ರಗಳ ಅಂತರವು ಒಂದು ಕಡೆಗೆ ಹತ್ತು ಅಂಗುಲ ಮತ್ತೊಂದು ಕಡೆಗೆ ಎರಡು ಅಂಗುಲಗಳಾಗಿರುತ್ತದೆ. ಮಹಾಲಿಂಗಪುರದ ಮಠದಲ್ಲಿನ ಶಿವನು ನಂದಿಯ ಮೇಲೆ ಕುಳಿತ ಚಿತ್ರ, ನರಗುಂದದ ಅರಮನೆಯ ನಂದಿಯ ಮೇಲಿನ ಶಿವನ ಚಿತ್ರ ಈ ಭಂಗಿಯಲ್ಲಿವೆ.

---

೨೪. ವಿ. ಎಸ್. ಅಗರವಾಲ್ (ಸಂ.) : ಸಮರಾಂಗಣ ಸೂತ್ರಧಾರ, ಅಧ್ಯಾಯ ೭೯, ಶ್ಲೋಕ ೧-೭

೨೫. ಜಿ. ಕೆ. ಶ್ರೀಗೊಂಡೇಕರ (ಸಂ.) : ಮಾನಸೋಲ್ಲಾಸ, ಭಾಗ II, ಅಧ್ಯಾಯ I, ಶ್ಲೋಕ ೧೭೭ - ೧೯೨

೨೬. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೬೦ - ೧೧೦

**೪) ಅರ್ಧವಿಲೋಚನ ಅಥವಾ ಅದ್ಧೈರ್ಧಾಕ್ಷ :** ಈ ರೀತಿಯ ಚಿತ್ರದಲ್ಲಿ ಒಂದು ಬದಿಯ ಮುಖದ ಹೆಚ್ಚಿನ ಭಾಗವು ಕಾಣಲಾರದು. ಕ್ಷೀಣವಾದ ಮುಖದ ಭಾಗದ ಕಣ್ಣು ಮತ್ತು ಹುಬ್ಬುಗಳು ಅರ್ಧಭಾಗ ಮಾತ್ರ ಕಂಡುಬರುತ್ತವೆ. ಕೆನ್ನೆಯ ಅರ್ಧ ಅಂಗುಲ ಭಾಗವು ಮರೆಯಾಗಿರುತ್ತದೆ. ಮರೆಯಾದ ಭಾಗದ ಕಡೆಗೆ ಗದ್ದವು ಒಂದು ಯವದಷ್ಟು ಮಾತ್ರ ಕಾಣುವುದು. ಎದೆಯ ಒಂದು ಬದಿಯು ಪೂರ್ಣ ಕಂಡರೆ ಇನ್ನೊಂದು ಬದಿಯ ಎದೆಯ ಅರ್ಧಕ್ಕಿಂತ ಹೆಚ್ಚು ಭಾಗ ಮರೆಯಾಗಿರುತ್ತದೆ. ಈ ಭಂಗಿಯನ್ನು (ಸ್ಥಾನ) ಅರ್ಧವಿಲೋಚನ ಎಂದು ಕರೆದಂತೆಯೇ ಅದ್ಧೈರ್ಧಾಕ್ಷ, ಮತ್ತು ಛಾಯಾಗತವ್ ಎನ್ನುವುದಾಗಿಯೂ ಕರೆಯಲಾಗಿದೆ. ಈ ನಿಲುವಿನಲ್ಲಿ ಆಕೃತಿ ರಚಿಸಿದಾಗ ಬ್ರಹ್ಮಸೂತ್ರದಿಂದ ಪಕ್ಷಸೂತ್ರಗಳ ಅಂತರ ಒಂದು ಕಡೆಗೆ ಹನ್ನೊಂದು ಅಂಗುಲ ಇನ್ನೊಂದು ಕಡೆಗೆ ಒಂದು ಅಂಗುಲ ಇರುತ್ತದೆ. ಗುಳೇದಗುಡ್ಡದ ಹೊಸಮನಿಗೌಡರ ಮನೆಯ ಅಂಜನೇಯನ ಚಿತ್ರ, ನಿಪ್ಪಾಣಿ ವಾಡೆಯ ಕೃಷ್ಣನ ಒಂದು ಚಿತ್ರ ಈ ನಿಲುವಿನಲ್ಲಿವೆ.

**೫) ಪಾರ್ಶ್ವಗತ :** ಈ ನಿಲುವು ಚಿತ್ರದ ಸಂಪೂರ್ಣ ಬದಿಯ ನೋಟವಾಗಿದೆ. ಈ ಭಂಗಿಯಲ್ಲಿ ಆಕೃತಿಯ ಒಂದು ಬದಿಯ ಎಲ್ಲ ಅವಯವಗಳೂ ಕಂಡು ಬಂದರೆ ಇನ್ನೊಂದು ಬದಿಯ ಅವಯವಗಳು ಕಾಣುವುದಿಲ್ಲ. ಮುಖದ ಅರ್ಧಭಾಗ. ಮಾತ್ರ ಕಾಣುವದಲ್ಲದೇ. ಮೂಗಿನ ಒಂದು ಬದಿ. ಒಂದು ಕಣ್ಣು, ತುಟಿಯ ಅರ್ಧಭಾಗ, ಗದ್ದದ ಅರ್ಧಭಾಗ. ಹಣೆಯ ಅರ್ಧಭಾಗಗಳು ಮಾತ್ರವೇ ಕಂಡುಬರುತ್ತವೆ. ಈ ನಿಲುವನ್ನು ' ಭಿತ್ತಿಕ ' ಎಂದೂ ಕರೆಯುವರು. ಈ ಸ್ಥಾನದಲ್ಲಿ ಆಕೃತಿ ರಚಿಸಿದಾಗ ಪಕ್ಷಸೂತ್ರವೂ ಬ್ರಹ್ಮಸೂತ್ರದೊಂದಿಗೆ ಬೆರೆತು ಹೋಗಿ ಕೇವಲ ಎರಡು ಪಕ್ಷ ಸೂತ್ರಗಳು ಮಾತ್ರ ಉಳಿದುಕೊಳ್ಳುತ್ತವೆ. ಈ ನಿಲುವಿನಲ್ಲಿ ಅನೇಕ ಚಿತ್ರಗಳು ಉತ್ತರ ಕರ್ನಾಟಕದ ಭಿತ್ತಿಚಿತ್ರಗಳಲ್ಲಿ ಕಂಡುಬರುತ್ತವೆ.

**೬) ಪರಾವೃತ್ತ :** ಇದು ಚಿತ್ರದ ಹಿನ್ನೋಟವನ್ನು ಹೆಚ್ಚಿಗೆ ತೋರಿಸುವಂತಹ ಭಂಗಿಯಾಗಿದೆ. ಮುಖದ ಸ್ವಲ್ಪಭಾಗ, ಕೆನ್ನೆಯ ಒಂದು ಕಡೆಯ ತುಸು ಭಾಗ. ಹಣೆಯ ಅಂಚಿನ ಭಾಗಗಳು ಮಾತ್ರ ಕಂಡುಬರುತ್ತವೆ. ಎದೆ ಭಾಗ, ತೋಳಿನ ಭಾಗಗಳು ೪ ಅಂಗುಲಗಳಷ್ಟು ಮಾತ್ರ ಕಂಡುಬರುತ್ತವೆ.

**೭) ಪ್ರುಸ್ಥಗತ (ಪೃಷ್ಠಾಗತ) :** ಈ ನಿಲುವಿನಲ್ಲಿ ಚಿತ್ರದ ಆಕರ್ಷಕ ಹಿನ್ನೋಟ ಕಂಡುಬರುವುದು. ಈ ಭಂಗಿಯಲ್ಲಿ ಮುಖದ ಹೆಚ್ಚಿನ ಭಾಗ ಕಾಣಲಾರದಂತಾಗಿರುವುದು. ಆದರೂ ಕಣ್ಣಿನ ಕೊನೆಯ ಮೂಲೆಗಳು, ಒಂದು ಬದಿಯ ಕೆನ್ನೆ ಕಂಡುಬರುವವು.[೨೭] ಹೊಟ್ಟೆಯ ಸ್ವಲ್ಪಭಾಗ ಮಾತ್ರ ಕಾಣುವಂತಿರುವುದು. ಬದಾಮಿಯ ವೈಷ್ಣವ ಗುಹೆಯ ನರ್ತಕಿಯ ಚಿತ್ರ ಈ ಭಂಗಿಯಲ್ಲಿದೆ.

**೮) ಪರೀವೃತ್ತ :** ಈ ನಿಲುವಿನಲ್ಲಿ ಆಕೃತಿಯು ಸೊಂಟದಿಂದ ಮೇಲಿನ ಭಾಗ ಹಿಂದೆ ತಿರುಗಿದ್ದರೆ ಸೊಂಟದ ಕೆಳಗಿನ ಭಾಗ ಎದುರು ನೋಟದಂತೆ ಕಾಣುವುದು. ಹಿನ್ನೋಟದ ಭಂಗಿಗಳಲ್ಲಿ ಇದೊಂದು ಆಕರ್ಷಕ ಭಂಗಿಯಾಗಿದೆ. ಮುಖದ ಸ್ವಲ್ಪಭಾಗ ಮಾತ್ರ ಕಂಡುಬರುವುದು. ಅಂದರೆ ಕೆನ್ನೆಯ ಒಂದು ಬದಿಯ ಸ್ವಲ್ಪ ಭಾಗ ಹಣೆಯ ಕೊನೆಯ ಅಂಚುಗಳು ತೀರ ಸ್ವಲ್ಪವಾಗಿ ಕಂಡುಬರುವವು.

---

೨೭. C. Sivaramamurti : Chitrasutra of the Visnudharmottara, Page - 57

೯) **ಸಮಾನಾಂತ :** ಇದು ಚಿತ್ರದ ಸಂಪೂರ್ಣ ಹಿನ್ನೋಟವಾಗಿದೆ. ಎದುರು ನೋಟದಲ್ಲಿ ಕಂಡುಬರುವ ಕಣ್ಣು, ಮೂಗು, ಬಾಯಿ, ಹೊಟ್ಟೆ, ಎದೆ ಮುಂತಾದ ಅವಯವಗಳು ಮರೆಯಾಗಿ, ಆಕೃತಿಯ ಹಿಂದಿನ ಭಾಗಗಳು ಕಾಣುತ್ತವೆ.

**VI. ಕಣ್ಣುಗಳು :** ಭಿತ್ತಿಚಿತ್ರ ಕಲಾವಿದರು ಚಿತ್ರದ ಕಣ್ಣುಗಳನ್ನು ಸಹಿತ ವಿವಿಧ ರೀತಿಯಿಂದ ಸುಂದರವಾಗಿ ಚಿತ್ರಿಸುತ್ತಿದ್ದರು. ಅನೇಕ ತರಹದ ಕಣ್ಣುಗಳು ಚಿತ್ರಿಸುವ ವಿವರಣೆಯು ಶಿಲ್ಪಶಾಸ್ತ್ರಗಳಲ್ಲಿ ದೊರೆಯುತ್ತದೆ. ಚಿತ್ರಗಳ ರೂಪಕ್ಕೆ ಹೊಂದಾಣಿಕೆಯಾಗುವಂತೆ " ಬಿಲ್ಲಿನಾಕಾರದ ಕಣ್ಣುಗಳು, ಅರ್ಧವೃತ್ತಾಕಾರದ ಕಣ್ಣುಗಳು, ಶಂಖಾಕೃತಿಯ ಕಣ್ಣುಗಳನ್ನು ಚಿತ್ರಿಸಬೇಕೆಂದು ಹೇಳಿದೆ. ಅಲ್ಲದೇ ಈ ಕಣ್ಣುಗಳ ತೆರೆದ ಭಾಗದ ಅಳತೆಯು ಎಷ್ಟಿರಬೇಕೆಂದೂ ಹೇಳಲಾಗಿದೆ. ಮೊದಲನೆಯ ಬಿಲ್ಲಿನಾಕಾರದ ಕಣ್ಣುಗಳು ಅಳತೆ ಮೂರು ಯವಗಳು, ಮೀನಿನಾಕಾರದವು ನಾಲ್ಕು ಯವಗಳು. ಕಮಲದ ಹೂವಿನ ಆಕಾರದವು ಆರು ಯವಗಳು. ಅರ್ಧವೃತ್ತಾಕಾರದ ಕಣ್ಣುಗಳು ಒಂಬತ್ತು ಯವಗಳು, ಶಂಖಾಕೃತಿಯ ಕಣ್ಣುಗಳು ಹತ್ತು ಯವಗಳು ತೆರೆದಂತೆ ಚಿತ್ರಿಸಬೇಕು [೨೮] ಎನ್ನುವ ವಿವರಗಳು ತಿಳಿದುಬರುತ್ತವೆ.

**VII. ಕೂದಲುಗಳು :** ಪ್ರಾಚೀನ ಭಿತ್ತಿಚಿತ್ರ ಕಲಾವಿದರು ಚಿತ್ರಗಳಿಗೆ ಅವುಗಳ ವ್ಯಕ್ತಿತ್ವಕ್ಕೆ ತಕ್ಕಂತೆ ತಲೆ ಕೂದಲುಗಳನ್ನು ರಚಿಸುತ್ತಿದ್ದರು. ವಿವಿಧ ಪ್ರಕಾರದ ತಲೆ ಕೂದಲುಗಳನ್ನು ಚಿತ್ರಿಸುವ ಕುರಿತಾಗಿ ಈ ಕೆಳಗಿನ ವಿವರಣೆಗಳು ದೊರಕುತ್ತವೆ.

' ಕುಂತಲ ' ಎಂಬ ಬಗೆಯು ತಲೆಗೂದಲು ನೇರವಾಗಿ ಕೆಳಗಿಳಿದು ತುದಿಯಲ್ಲಿ ಸುರುಳಿಯಾಗಿರುವುದು. ' ದಕ್ಷಿಣಾವರ್ತ ' ರೀತಿಯ ತಲೆಗೂದಲು ಮುಖದ ಬಲಗಡೆಗೆ ಗುಂಗುರಾಗಿ ಸುತ್ತಿಕೊಂಡಿರುವದಾಗಿದೆ. ' ತರಂಗ ' ತಲೆಗೂದಲು ತೆರೆತೆರೆಯಾಗಿ ತರಂಗದಂತೆ ಕಂಗೊಳಿಸುತ್ತಿರುವಂತಿರುತ್ತದೆ. ' ಸಿಂಹಕೇಶರ ' ತಲೆಗೂದಲು ಕೆಳಗಿಳಿದಂತೆ ತಲೆಯ ಸುತ್ತಲೂ ಗುಂಗುರಾಗಿ ಇಳಿಬಿದ್ದಿರುತ್ತದೆ. ' ವರ್ಧರ ' ವಿಧದ ತಲೆಗೂದಲು ಮೇಲ್ಮುಖವಾಗಿ ಸುರುಳಿ ಸುತ್ತಿಕೊಂಡಿರುತ್ತದೆ. ' ಜುಟಾಟಸಾರ ' ತರಹದ ತಲೆಕೂದಲು ತಲೆಯ ಮೇಲೆ ಗಂಟುಕಟ್ಟಿರುವದಾಗಿದೆ. ಇದು ಹೆಚ್ಚಾಗಿ ಋಷಿಮುನಿಗಳ ಲಕ್ಷಣದಲ್ಲಿ ಕಂಡುಬರುವುದು. ಹೀಗೆ ವಿವಿಧ ರೀತಿಯ ತಲೆಗೂದಲುಗಳನ್ನು ಚಿತ್ರಿಸಲು ಮತ್ತು ಅವುಗಳ ಲಕ್ಷಣಗಳನ್ನು [೨೯] ಹೇಳಿದ್ದು ತಿಳಿಯುತ್ತದೆ. ಈ ರೀತಿ ಚಿತ್ರಗಳ ಪ್ರಮಾಣಗಳನ್ನು ನಿಗದಿಗೊಳಿಸಿದ ನಂತರ ಭಿತ್ತಿಚಿತ್ರ ಕಲಾವಿದರು ಚಿತ್ರಕಲೆಯ ಆರು ಅಂಗಗಳಿಗನುಸಾರವಾಗಿ ಚಿತ್ರ ರಚನೆ ಮಾಡುತ್ತಿದ್ದರು.

**VIII. ಚಿತ್ರಕಲೆಯ ಆರು ಅಂಗಗಳು :** ಪ್ರಾಚೀನ ಭಾರತದಲ್ಲಿ ಚಿತ್ರಕಲೆಯ ಕುರಿತಾಗಿ ಪ್ರಾಸ್ತಾವಿಕವಾಗಿ ಕೆಲವು ಸಲ ಚಿತ್ರಕಲೆಯ ವಿಷಯವಾಗಿಯೇ ಅನೇಕ ಗ್ರಂಥಗಳು ರಚನೆಗೊಂಡಿವೆ. ಅಂತಹ ಗ್ರಂಥಗಳಲ್ಲಿ ಚಿತ್ರಕಲೆ ಎಂದರೆ ಹೀಗೆ ಇರಬೇಕು. ಅದರ ಗುಣಲಕ್ಷಣಗಳು ಎಂದರೆ ಇವುಗಳೇ ಎಂದು ನಿರ್ದಿಷ್ಟವಾಗಿ ಹೇಳಿದ ಗ್ರಂಥವೆಂದರೆ ಕ್ರಿ. ಶ. ೩ ನೇ ಶತಮಾನದ ವಾತ್ಸಾಯನನ ಕಾಮಸೂತ್ರವಾಗಿದೆ. ಈ ಕಾಮಸೂತ್ರ ಗ್ರಂಥಕ್ಕೆ ಮತ್ತೆ ಕ್ರಿ. ಶ. ೧೧ ರಿಂದ ೧೨ ನೇ ಶತಮಾನವಲ್ಲಿ ಯಶೋಧರ ಪಂಡಿತನು ಟೀಕೆಯನ್ನು ಬರೆದನು. ಆತನು ಚಿತ್ರಕಲೆಯ ಆರು ಅಂಗಗಳು ಅಥವಾ ಲಕ್ಷಣಗಳನ್ನು ಒಂದು ಶ್ಲೋಕದಲ್ಲಿ ಹೀಗೆ ಕ್ರೋಢೀಕರಿಸಿದ್ದಾನೆ.

ರೂಪಭೇದಾಃ ಪ್ರಮಾಣಾನಿ ಭಾವಲಾವಣ್ಯ ಯೋಜನಮ್ ।
ಸಾದೃಶ್ಯಂ ವರ್ಣಕಾಭಂಗ ಇತಿ ಚಿತ್ರಂ ಷಡಂಗಕಮ್ ॥

ಈ ಮೇಲಿನ ಶ್ಲೋಕವು ಚಿತ್ರಕಲೆಗಿರಬೇಕಾದ ಆರು ಲಕ್ಷಣಗಳನ್ನು ಕುರಿತು ಹೇಳುತ್ತದೆ. ಅವು ಹೀಗಿವೆ–

---

೨೮. C. Sivaramamurti : Chitrasutra of the Visnudharmottara, Page - 57

೨೯. –ಅದೇ– ಪುಟ -೫೩

೧) ರೂಪಭೇದ

೨) ಪ್ರಮಾಣ

೩) ಭಾವ

೪) ಲಾವಣ್ಯ ಯೋಜನ

೫) ಸಾದೃಶ್ಯ

೬) ವರ್ಣಿಕಾಭಂಗ

ಇವುಗಳನ್ನು [೩೦] ಸ್ಥೂಲವಾಗಿ ಇಲ್ಲಿ ಚರ್ಚಿಸಬಹುದಾಗಿದೆ.

**೧) ರೂಪಭೇದ :** ಪ್ರಕೃತಿಯಲ್ಲಿ ನಮ್ಮ ಕಣ್ಣಿಗೆ ಕಾಣುವ ರೂಪಗಳು ನಾನಾ ರೀತಿಯವು. ಮನಸ್ಸಿಗೆ ಹೊಳೆಯುವ ರೂಪಗಳೂ ಹಲವು ವಿಧ. ಇವುಗಳನ್ನು ಚಿತ್ರ ರಚನೆಯಲ್ಲಿ ನಾವು ಅಳವಡಿಸಿಕೊಂಡಾಗ ಪ್ರತಿಯೊಂದು ರೂಪಗಳ ಭೇದಗಳನ್ನು ಅರಿತು ಚಿತ್ರ ರಚಿಸಬೇಕು ಎಂಬುದೇ ಇದರ ಆಶಯವಾಗಿದೆ ಎನಿಸುತ್ತದೆ. ಉದಾಹರಣೆ ಸ್ತ್ರೀ ಚಿತ್ರ – ಪುರುಷ ಚಿತ್ರಕ್ಕೂ ಇರುವ ಭೇದ. ದೇವತಾ ಚಿತ್ರಕ್ಕೂ ಮಾನವ ರೂಪಕ್ಕೂ ಇರುವ ವ್ಯತ್ಯಾಸ ಭೇದಗಳು. ಪಶುಪಕ್ಷಿ ಗಿಡಮರಗಳಲ್ಲಿರುವ ಭೇದಗಳು ಹೀಗೆ ಪ್ರಕೃತಿಯಲ್ಲಿನ ರೂಪಗಳ ಮನನ ಮಾಡಿಕೊಂಡು ಅವುಗಳ ಭೇದಗಳನ್ನು ಅರಿತು ಚಿತ್ರ ರಚಿಸಬಹುದು. ಡಾ|| ಅಬನೀಂದ್ರನಾಥ ಠಾಕೂರರು ' ರೂಪಭೇದ ' ಎನ್ನುವುದಕ್ಕೆ ಜೀವಪೂರ್ಣ ಆಕೃತಿಗಳಿಗೂ ನಿರ್ಜೀವ ಆಕೃತಿಗಳಿಗೂ ಇರುವ ವ್ಯತ್ಯಾಸವೆಂದು ಹೇಳುತ್ತಾರೆ. ಆದರೆ ಭಾರತೀಯ ' ನ್ಯಾಯಮಾರ್ಗ ' ದವರ ಭಾಷಾ ಪರಿಚ್ಛೇದದಲ್ಲಿ " ಚಾಕ್ಷುರಗ್ರಾಹ್ಯಂ ಭವೇದ್ರೂಪಂ ದ್ರವ್ಯಾದಿರೂಪಲಂಭಕಮ್ " ಎಂದು ರೂಪ ವಿವರಣೆ ಇದೆ. ಅಂದರೆ ಲೋಚನ ಗೋಚರವಾದ ಲೋಕದ್ರವ್ಯವೇ ರೂಪ. ರೂಪಗೋಸ್ವಾಮಿಯ ' ಹಾಜ್ವಲ ನೀಲಮಣಿ ' ಯಲ್ಲಿ ರೂಪವನ್ನು ಕುರಿತು " ಅಂಗಾನ್ಯ ಭೂಷಿತಾನ್ಯೇವ ಕೇನಚಿದ್ಭೂಷಣಾದಿನಾಯೇನ ಭೂಷಿತವದ್ ಭಾತಿ ತದ್ರೂಪ ಮಿತಿ ಕಥ್ಯತೇ " – ಶರೀರವು ಅಲಂಕಾರ ಮಾಡಿಕೊಳ್ಳಲ್ಪಡದೇ ಇದ್ದಾಗ್ಯೂ ಯಾವ ಗುಣದಿಂದ ಅದು ಭೂಷಿತವಾದಂತೆ ತೋರುವುದೋ ಅದೇ ರೂಪ. ಪರ್ಸಿಬ್ರೌನರು ರೂಪಭೇದಕ್ಕೆ ಸಮಾನವಾಗಿ ಇಂಗ್ಲೀಷಿನಲ್ಲಿ " The knowledge of appearance " ಎಂದೂ ಭಾಷಾಂತರಿಸಿದ್ದಾರೆ. ಹೀಗೆ ಹಲವು ರೀತಿಯಿಂದ ಇದನ್ನು ಅರ್ಥಯಿಸಿದ್ದರೂ ಕೊನೆಯ ಆಶಯವೆಂದರೆ ಒಂದು ರೂಪಕ್ಕೂ ಇನ್ನೊಂದು ರೂಪಕ್ಕೂ ಇರುವ ಭೇದವೇ ಆಗಿದೆ. ಇದನ್ನು ತಿಳಿದುಕೊಂಡು ಕಲಾವಿದ ಚಿತ್ರ ರಚಿಸಬೇಕು.

**೨) ಪ್ರಮಾಣ :** ಮೊದಲನೆಯದಾದ ರೂಪಭೇದವು ಚಿತ್ರಿಸಬೇಕಾದ ವಸ್ತುವಿನ ರೂಪ ಕುರಿತು ಹೇಳಿದರೆ, ಎರಡನೆಯದಾದ ಈ ಪ್ರಮಾಣ ಆ ವಸ್ತುವಿನ ಪ್ರಮಾಣ ಕುರಿತು ಹೇಳುತ್ತದೆ. ಒಂದು ವಸ್ತುವಿಗೂ ಇನ್ನೊಂದು ವಸ್ತುವಿಗೂ ರೂಪದಲ್ಲಿ ಭೇದವಿದ್ದಂತೆ ಪ್ರಮಾಣದಲ್ಲಿಯೂ ವ್ಯತ್ಯಾಸವಿರುತ್ತದೆ. ಹೀಗೆ ವಸ್ತುವಿನ ಪ್ರಮಾಣ ತಿಳಿದುಕೊಂಡು ಚಿತ್ರ ರಚಿಸುವ ಕ್ರಮ ಇದಾಗಿದೆ. ಅಲ್ಲದೇ ಒಂದೇ ವಸ್ತುವಿನ ಹಲ್ಲವೇ ರೂಪದಲ್ಲಿಯ ವಿವಿಧ ಅಂಗಗಳ ಪ್ರಮಾಣಗಳೂ ವ್ಯತ್ಯಾಸವಾಗಿರುತ್ತವೆ. ಒಂದು ಅಂಗಕ್ಕೂ ಮತ್ತೊಂದು ಅಂಗಕ್ಕೂ ಇರುವ ವ್ಯತ್ಯಾಸ, ಹೋಲಿಕೆ. ಮುಂತಾದವುಗಳನ್ನು ಅರಿತುಕೊಂಡು ರಚಿಸುವುದು. ಚಿತ್ರಿಸಬೇಕಾದ ವಸ್ತುವಿನ ಸೀಮಾ ವ್ಯಾಪ್ತಿ, ಉದ್ದ, ಅಗಲ. ದಪ್ಪಗಳೆಲ್ಲದರ ಕಲ್ಪನೆಗಳೂ ಪ್ರಮಾಣಗಳಲ್ಲೇ ಒಳಗೊಳ್ಳುತ್ತವೆ. ಪ್ರತಿಯೊಂದು ವಸ್ತುಗಳಿಗೂ, ಜೀವ ಜಂತುಗಳಿಗೂ ಅವುಗಳದೇ ಆದ ಪ್ರಮಾಣಗಳಿವೆ. ಪಶು-ಪಕ್ಷಿಗಳು, ಪ್ರಾಣಿಗಳು, ಮನುಷ್ಯರು ಹೀಗೆ ವಿವಿಧ

೩೦. ಡಾ|| ಎಸ್. ಸಿ. ಪಾಟೀಲ : ವರ್ಣ ಸಂಚಯ. ಪುಟ ೮೦

ಪ್ರಮಾಣಗಳನ್ನೊಳಗೊಂಡ ವಸ್ತುಗಳನ್ನು ಚಿತ್ರದಲ್ಲಿ ಅಳವಡಿಸುವಾಗ ಎಚ್ಚರಿಕೆಯಿಂದ ಅರಿತುಕೊಂಡು ಚಿತ್ರಿಸಬೇಕಾಗುವುದು. ಒಬ್ಬ ಮನುಷ್ಯನ ಶಿರಸ್ಸು ಅವನ ಇಡೀ ಎತ್ತರದ ಏಳರ ಒಂದಂಶವಾಗಿರಬಹುದು. ದೇವತೆ ಅಥವಾ ಅತೀ ಮಾನವರನ್ನು. ಧೀರೋದಾತ್ತ ವ್ಯಕ್ತಿಗಳನ್ನು ಚಿತ್ರಿಸುವಾಗ ಶಿರಸ್ಸು ಎಂಟರಲ್ಲಿ ಒಂದಂಶವಾಗಿರಬಹುದು. ಮಗುವಿನಲ್ಲಿ ಈ ಪ್ರಮಾಣ ಐದರಲ್ಲಿ ಒಂದಂಶವಾಗಿರಬಹುದು. ಹೀಗೆ ಚಿತ್ರಿಸಬೇಕಾದ ವಸ್ತು ಇಲ್ಲವೇ ವ್ಯಕ್ತಿಗಳು ಪ್ರಮಾಣ ಕಂಡುಕೊಂಡು ಚಿತ್ರಿಸುವ ವಿಧಾನವೇ ಇದಾಗಿದೆ.

೩) **ಭಾವ :** ಕಲಾವಿದನು ರಚಿಸಿದ ಚಿತ್ರವು ಭಾವವನ್ನು ಅಭಿವ್ಯಕ್ತಗೊಳಿಸಬೇಕೆಂಬುದೇ ಇದರ ಆಶಯ. ಚಿತ್ರವು ಪ್ರಮಾಣಬದ್ಧವಾಗಿದ್ದರಷ್ಟೇ ಸಾಲದು ಅದನ್ನು ನೋಡಿದಾಗ ಭಾವೋತ್ಪನ್ನಗೊಳಿಸುವ ಶಕ್ತಿಯನ್ನು ಕಲಾವಿದ ಅದರಲ್ಲಿ ತುಂಬಬೇಕು. ಹಾಗೇ ವಿಷಯಕ್ಕನುಗುಣವಾಗಿ ಆ ಚಿತ್ರಗಳು ಭಾವವನ್ನು ಉತ್ಪನ್ನಗೊಳಿಸುತ್ತಿರಬೇಕು. ಯಾವುದೋ ಸಂತೋಷ ಸಮಾರಂಭದ ಚಿತ್ರವಾಗಿದ್ದಾಗ ಅಲ್ಲಿನ ಚಿತ್ರಗಳ ಬಾವ ಸಂತೋಷ ಉಂಟುಮಾಡುವಂತಿರಬೇಕು. ಹಾಗೇ ದುಃಖಪೂರ್ಣವಾದ ಘಟನೆ ರಚಿಸಿದಾಗ ಅದಕ್ಕೆ ಅನುಸಾರವಾಗಿಯೇ ಭಾವ ಅಲ್ಲಿರಬೇಕು. ಚಿತ್ರಿಸಿದ ಘಟನೆಗೆ ಅನುಸಾರವಾಗಿ ಭಾವ ಅಲ್ಲಿರದಿದ್ದರೆ ಅದು ಕಲಾವಿದನ ವಿಫಲತೆಯೇ ಸರಿ. ಹಾಗಾಗಿ ಚಿತ್ರರಚನೆಯಲ್ಲಿ ಭಾವಕ್ಕೆ ಮುಖ್ಯ ಸ್ಥಾನವಿದೆ. ನಿರ್ಜೀವ ವಸ್ತುಗಳಿಗೂ. ಸಜೀವ ವಸ್ತುಗಳಿಗೂ ಇರುವ ವ್ಯತ್ಯಾಸ, ನಿದ್ರಾವಶರಾದವರು, ಸತ್ತವರ ನಡುವಿನ ವ್ಯತ್ಯಾಸ ಮುಂತಾದ ಸೂಕ್ಷ್ಮ ಭಾವಗಳನ್ನು ಚಿತ್ರದಲ್ಲಿ ತೋರ್ಪಡಿಸುವುದು ಕೂಡಾ ಆ ವಸ್ತುವಿನಲ್ಲಡಗಿದ ಭಾವವನ್ನು ಹೊರಹಾಕಿದಂತೆಯೇ ಆಗುವುದು. ಚಿತ್ರಗಳು ನೀರಸವಾಗಿರದೇ ವಿಷಯಕ್ಕೆ ಅನುಸಾರವಾಗಿ ಭಾವವನ್ನು ತೋರ್ಪಡಿಸುತ್ತಿರಬೇಕೆಂಬುದೇ ಇದರ ಆಶಯ.

೪) **ಲಾವಣ್ಯ ಯೋಜನೆ :** ಇದು ಚಿತ್ರಕ್ಕೆ ಲಾವಣ್ಯವನ್ನು ಸೇರಿಸುವ ಹಂತವಾಗಿದೆ. ಪ್ರಮಾಣಬದ್ಧವಾಗಿ, ಭಾವನಾತ್ಮಕವಾಗಿ ರಚಿಸಿದ ಚಿತ್ರಕ್ಕೆ ಲಾವಣ್ಯವನ್ನು ತುಂಬುವ ಬಗ್ಗೆ ಇದು ಹೇಳುತ್ತದೆ. ಆಂತರಿಕ ಸೌಂದರ್ಯವಾಗಿ ನಾವು ಭಾವವನ್ನು ಚಿತ್ರಕ್ಕೆ ತುಂಬಿದಾಗ ಬಾಹ್ಯ ಸೌಂದರ್ಯ ಹೆಚ್ಚಿಸಲು ಚಿತ್ರಕ್ಕೆ ಲಾವಣ್ಯವನ್ನು ಕೊಡಬೇಕು. "ಲಾವಣ್ಯವು ಬಾಹ್ಯ ಸೌಂದರ್ಯದ ದರ್ಪಣ, ಸೊಗಸನ್ನು ಸೇರಿಸುವುದು. ಆಕರ್ಷಕವಾಗುವಂತೆ ಅಂದವನ್ನು ತುಂಬುವುದು, ಒಟ್ಟು ಚಿತ್ರಕ್ಕೆ ಸೌಂದರ್ಯವನ್ನು ಯೋಜಿಸುವುದು ಲಾವಣ್ಯ ಯೋಜನೆಯಾಗಿದೆ.[೩೧] ಚಿತ್ರದಲ್ಲಿ ಲಾವಣ್ಯ ಯೋಜನೆಯಿಂದಲೇ ಬಾಹ್ಯ ಸೌಂದರ್ಯಕ್ಕೆ ಕಳೆ ಬರುವುದು. ಭಾವ. ರೂಪ, ಪ್ರಮಾಣಗಳಿಗೆ ಲಾವಣ್ಯವು ದೀಪ್ತಿ ಇದ್ದಂತೆ. ಚಿತ್ರವು ಸೌಂದರ್ಯಮಯವಾಗಿ ಕಂಗೊಳಿಸಲು ಲಾವಣ್ಯವೇ ಮುಖ್ಯ. ಲಾವಣ್ಯ ಯೋಜನೆಯನ್ನು ವಿಷಯಕ್ಕನುಸಾರವಾಗಿಯೇ ಮಾಡಬೇಕಾಗುವುದು.

೫) **ಸಾದೃಶ್ಯ :** ಚಿತ್ರಕಲೆಯಲ್ಲಿ ಸಾದೃಶ್ಯವೆಂದರೆ ಕೇವಲ ಸಾಮಾನ್ಯ ಅರ್ಥದಲ್ಲಿ ಹೇಳುವ ಹೋಲಿಕೆಯಲ್ಲ. ಮೂಲ ವಸ್ತುವಿನೊಡನೆ ಅದರ ಪ್ರತಿಕೃತಿಯನ್ನು ಅಂದರೆ ಚಿತ್ರ ರಚಿಸಿದ ವಸ್ತುವಿನೊಡನೆ ಹೋಲಿಸುವುದೇ ಸಾದೃಶ್ಯವಾಗಿದೆ. ಮನುಷ್ಯ ಚಿತ್ರ ರಚಿಸಿದಾಗ ಪ್ರಕೃತಿಯಲ್ಲಿರುವ ಆತನಿಗೂ ಚಿತ್ರದಲ್ಲಿರುವ ವ್ಯಕ್ತಿಗೂ ಇರುವ ಸಾದೃಶ್ಯ, ಹಾಗೇ ಒಂದು ಆಕಳು. ಆನೆ. ಹುಲಿ, ಮುಂತಾದ ಪ್ರಾಣಿಗಳು-ಪಕ್ಷಿಗಳನ್ನು ರಚಿಸಿದಾಗ ಪ್ರಕೃತಿಯಲ್ಲಿನ ಅವುಗಳ ರೂಪದೊಡನೆ ಚಿತ್ರಿತ ರೂಪಗಳು ಸಾದೃಶ್ಯತೆಯಿಂದ ಕೂಡಿರಬೇಕೆಂಬುದೇ ಇದರ ಅರ್ಥ. ಚಿತ್ರ ವಾಸ್ತವಿಕವೇ ಇರಲಿ, ಕಲ್ಪಿತವೇ

---

೩೧. ಡಾ॥ ಎಸ್. ಸಿ. ಪಾಟೀಲ : ವರ್ಣ ಸಂಚಯ. ಪುಟ ೮೦

ಇರಲಿ ದರ್ಶಕರು ಆ ಚಿತ್ರವನ್ನು ಗುರುತಿಸುವಲ್ಲಿ ತಪ್ಪು ಮಾಡಕೂಡದು. ಕಲಾವಿದ ಏನನ್ನು ಚಿತ್ರಿಸಿದ್ದಾನೆ. ಅದು ಪ್ರಕೃತಿಯ ಯಾವ ವಸ್ತುವಿನ ಸಾದೃಶ್ಯವೆನ್ನುವುದು ನೋಡುಗನಿಗಾಗಬೇಕು. ಕಲಾವಿದನ ಸಾಧನೆಯಿಂದ, ಆತನ ಪರಿಶ್ರಮದಿಂದ ಚಿತ್ರದಲ್ಲಿ ಸಾದೃಶ್ಯತೆ ಸಾಧ್ಯವಾಗುತ್ತದೆ. ಸಾದೃಶ್ಯವೆಂದರೆ ಪ್ರಕೃತಿಯಲ್ಲಿನ ಯಥಾ ವಸ್ತುಗಳು ನಕಲು ಮಾಡುವುದೂ ಅಲ್ಲ. ಕಲಾವಿದನು ವಸ್ತು ಹೇಗಿದೆಯೋ ಹಾಗೆ ಚಿತ್ರಿಸದೇ ವಸ್ತು ಆತನಿಗೆ ಹೇಗೆ ಕಂಡಿತೋ ಹಾಗೆ ಚಿತ್ರಿಸಬೇಕು ಎಂಬರ್ಥವೂ ಇದರಲ್ಲಡಗಿದೆ. " ಸಿದ್ಧಾಂತ ಮುಕ್ತಾವಳಿ " ಯು ವಸ್ತುವಿನಿಂದ ಬೇರೆಯಾಗಿಯೂ ಅದರಲ್ಲೇ ಒಂದೆಂಬಂತೆ ಕಾಣುವ ಧರ್ಮವುಳ್ಳದ್ದೇ ಸಾದೃಶ್ಯವೆಂಬುದಾಗಿ ಹೇಳುತ್ತದೆ. ' ನ್ಯಾಯ ವೈಶೇಷಿಕವು ' ಸಾದೃಶ್ಯಕ್ಕೆ " ತದ್ಭಿನ್ನತೆ ಸತಿ ತದ್ಗತಭೂಯೋ ಧರ್ಮವತಂ " – ಅಂದರೆ, ತನಗಿಂತ ಭಿನ್ನವಾದ ವಿವಿಧ ಸ್ವಭಾವದ ವಸ್ತುಗಳನ್ನು ಒಳಗೊಳ್ಳುವ ಸ್ಥಿತಿ ಎಂಬ ವ್ಯಾಖ್ಯೆಯನ್ನೂ ಕೊಡುತ್ತದೆ. ಕಲಾವಿದನಾದವನು ರೂಪಭೇದ, ಪ್ರಮಾಣ, ಭಾವ, ಲಾವಣ್ಯ ಯೋಜನೆಗಳನ್ನು ಅರಿತು ಚಿತ್ರಿಸಿದಂತೆ ಚಿತ್ರಗಳ ಸಾದೃಶ್ಯತೆಯ ಬಗ್ಗೆಯೂ ಹೆಚ್ಚಿನ ಗಮನ ಕೊಡಬೇಕಾಗುವುದು ಎಂಬುದೇ ಇದರ ತಾತ್ಪರ್ಯ.

**೬) ವರ್ಣಿಕಾ ಭಂಗ :** ವರ್ಣಿಕಾ ಭಂಗವೆಂದರೆ ವರ್ಣ ಸಂಯೋಜನೆ, ವರ್ಣವಿನ್ಯಾಸಗೊಳಿಸುವುದೇ ಆಗಿದೆ. ಚಿತ್ರಕ್ಕೆ ಉಚಿತವಾಗುವಂತೆ, ವಿಷಯಕ್ಕನುಗುಣವಾಗಿ ವರ್ಣ ಸಂಯೋಜನೆ ಮಾಡುವುದು ಅತೀ ಮುಖ್ಯ. ವರ್ಣ ವಿನ್ಯಾಸದಿಂದ ಕತ್ತಲೆ-ಬೆಳಕು, ಉಬ್ಬು-ತಗ್ಗು, ದುಂಡುತನ ತೋರಿಸುವುದು ಆಯಾ ಭಾಗಗಳಿಗೆ ಯೋಗ್ಯ ಬಣ್ಣಗಳನ್ನು ಲೇಪಿಸುವುದು ಈ ಹಂತದಲ್ಲಿ ಮುಖ್ಯವಾಗಿದೆ. ವರ್ಣಗಳು ಭಾವನೆಗಳನ್ನು ಜಾಗ್ರತಗೊಳಿಸುತ್ತವೆ. ಆದುದರಿಂದ ಯಾವ ಭಾವಕ್ಕೆ ಯಾವ ವರ್ಣ ಉಪಯೋಗಿಸಬೇಕು. ಯಾವ ಸನ್ನಿವೇಶದಲ್ಲಿ ಎಂತಹ ವರ್ಣ ಲೇಪಿಸಬೇಕು ಎಂದು ಮುಂತಾಗಿ ತಿಳಿದುಕೊಂಡಿರಬೇಕು. ವರ್ಣವಿನ್ಯಾಸವು ಚಿತ್ರದ ಕಳಶವಿದ್ದಂತೆ. ಪ್ರಮಾಣಬದ್ಧವಾದ ರೂಪದಿಂದ ಕೂಡಿದ ಚಿತ್ರವು ಭಾವೋತ್ಪನ್ನಗೊಳಿಸುತ್ತ ಲಾವಣ್ಯ ಯೋಜನೆಯಿಂದ ಕೂಡಿದ್ದರೂ ವರ್ಣವಿನ್ಯಾಸ ಮಾಡಿದಾಗಲೇ ಅದು ಒಂದು ಪರಿಪೂರ್ಣ ಚಿತ್ರವಾಗುವುದು. ಕಲಾವಿದನಾದವನಿಗೆ ಚಿತ್ರಗಳಿಗೆ ಯೋಗ್ಯ ರೀತಿಯಿಂದ ವರ್ಣವಿನ್ಯಾಸ ಮಾಡಬೇಕಾದರೆ ವರ್ಣಗಳ ಬಗ್ಗೆ ಪೂರ್ಣ ಜ್ಞಾನ ಬೇಕಾಗುವುದು. ಎಷ್ಟು ಪ್ರಮಾಣದಲ್ಲಿ ಯಾವ ಬಣ್ಣವನ್ನು ಹೇಗೆ ಕಲೆಸಿಕೊಂಡರೆ ಎಂತಹ ಬಣ್ಣ ಸಿದ್ಧವಾಗುವುದು. ಪಾರದರ್ಶಕ ವರ್ಣಗಳು, ಅಪಾರದರ್ಶಕ ವರ್ಣಗಳು ಯಾವವು, ಯಾವ ವರ್ಣ ಲೇಪಿಸಿದಾಗ ಯಾವ ಬಣ್ಣವು ಉಂಟಾಗುವುದು. ಒಂದು ವರ್ಣದ ಮೇಲೆ ಮತ್ತೊಂದನ್ನು ಲೇಪಿಸಿದಾಗ ಉಂಟಾಗುವ ಸಮುಚ್ಚಯ, ಪ್ರತಿಕ್ರಿಯೆಗಳಾವವು ಎಂಬ ಇಂತಹ ಹತ್ತು ಹಲವು ವಿಷಯಗಳನ್ನು ಕಲಾವಿದ ತಿಳಿದಿರಬೇಕು.

ಕೆಲವರು ವರ್ಣಿಕಾ ಭಂಗವೆಂದರೆ ವರ್ಣ, ಕುಂಚ, ಮೊದಲಾದವುಗಳ ಸರಿಯಾದ ಬಳಸುವಿಕೆ, ಬಣ್ಣಗಳ ಹೊಂದಾಣಿಕೆ, ವರ್ಣ ವಿನ್ಯಾಸದ ತಂತ್ರ ನೈಪುಣ್ಯವೆಂದೂ ಹೇಳುತ್ತಾರೆ. ಹೀಗೆ ಅಳತೆ, ಪ್ರಮಾಣ, ಭಾವಭಂಗಿಯಿಂದ ಕೂಡಿದ ಚಿತ್ರಕಲೆಯ ಆರು ಅಂಗಲಕ್ಷಣಗಳಿಗನುಸಾರವಾಗಿ ಭಿತ್ತಿ ಚಿತ್ರಕಲಾವಿದರು ಚಿತ್ರ ರಚನೆ ಮಾಡುತ್ತಿದ್ದರು. ಚಿತ್ರರಚನೆ ಮಾಡುವಾಗ ಕಲಾವಿದರು ಹಲವು ವಿಧಾನಗಳನ್ನು ಅನುಸರಿಸುತ್ತಿದ್ದು ಅವುಗಳನ್ನು ಭಿತ್ತಿಚಿತ್ರ ರಚನಾ ವಿಧಾನಗಳೆಂದು ವಿಂಗಡಿಸಿಕೊಂಡು ಅಧ್ಯಯನ ಮಾಡಬಹುದು.

**IX. ಚಿತ್ರದ ದೋಷಗಳು :** ಕಲಾವಿದನಾದವನು ಚಿತ್ರ ರಚಿಸುವ ಮೊದಲು ಅಳತೆ, ಪ್ರಮಾಣ, ಅಂಗಲಕ್ಷಣ, ಮುಂತಾದವುಗಳನ್ನು ಗಮನಿಸಿದಂತೆ ಚಿತ್ರದ ದೋಷಗಳಾವವು ? ಮತ್ತು ಚಿತ್ರದ ಉನ್ನತಿಗಳಾವವು ? ಎಂಬುದನ್ನು

ತಿಳಿದುಕೊಂಡು ಚಿತ್ರ ರಚಿಸಬೇಕೆಂದು ವಿಷ್ಣುಧರ್ಮೋತ್ತರ ಹೇಳುತ್ತದೆ. ಚಿತ್ರದ ದೋಷಗಳನ್ನು ಅದು ಹೀಗೆ ಹೇಳಿದೆ. ಊರ್ಧ್ವವೃಷ್ಟಿ, ಅಧೋದೃಷ್ಟಿ, ತಿರ್ಯಕ್ ದೃಷ್ಟಿಗಳನ್ನು ದೇವತೆಗಳಿಗೆ ಚಿತ್ರಿಸಬಾರದು, ಚಿತ್ರಗಳು ಪ್ರಕೃತಿಯಲ್ಲಿಯ ಅವುಗಳ ನೈಜ ಅಳತೆಗಿಂತ ಚಿಕ್ಕದಾಗಿಯೂ, ಇಲ್ಲವೇ ದೊಡ್ಡದಾಗಿಯೂ ಕಾಣುವಂತೆ ಇರಬಾರದು, ಹೀಗಿದ್ದರೆ ಇವು ಮರಣ, ಶೋಕ, ಧನನಾಶ ಭಯಗಳಿಗೆ ಕಾರಣವಾಗುತ್ತವೆ.[೩೨] ಅಂಡ, ತುಟಿ, ನೇತ್ರಗಳು ಪ್ರಮಾಣಕ್ಕಿಂತ ಹೆಚ್ಚಾಗಿರುವುದು, ಚಿತ್ರಗಳಲ್ಲಿ ಲಕ್ಷಣವಿಲ್ಲದಿರುವುದು, ಮನುಷ್ಯ ಚಿತ್ರದ ರೂಪವು ದೇವತೆಗಳಂತೆ ಕಾಣುವುದು, ದೇವತೆಗಳ ಚಿತ್ರಗಳು ಮನುಷ್ಯರಂತೆ ಕಾಣುವುದು ಚಿತ್ರಗಳ ದೋಷಗಳಾಗಿವೆ.[೩೩] ಅಲ್ಲದೇ ಚಿತ್ರ ರಚಿಸುವಾಗ ಕಲಾವಿದನು ನೆಲೆ ನಿಲ್ಲುವ ಸ್ಥಾನದೋಷ, ವರ್ಣಗಳ ತಪ್ಪು ಮಿಶ್ರಣ, ಏಕಾಗ್ರತೆ ಇಲ್ಲದಿರುವುದು[೩೪] ಚಿತ್ರಗಳ ದೋಷಗಳಾಗಿದ್ದು ಚಿತ್ರ ಕೆಡಲು ಕಾರಣವಾಗುತ್ತವೆ.

**X. ಚಿತ್ರದ ಉನ್ನತಿಗಳು :** ಶೃಂಗಾರ, ಹಾಸ್ಯ, ಶಾಂತ, ರಸಗಳಿಂದ ಕೂಡಿದ ಚಿತ್ರಗಳನ್ನು ಮಾತ್ರ ಮನೆಗಳಲ್ಲಿ ರಚಿಸಬೇಕು. ದೇವಾಲಯ ಹಾಗೂ ಅರಮನೆಯಲ್ಲಿ ಎಲ್ಲ ರಸದಿಂದ ಕೂಡಿದ ಚಿತ್ರಗಳನ್ನೂ ರಚಿಸಬಹುದು.[೩೫] ಲೋಕದಲ್ಲಿ ಪ್ರಸಿದ್ಧವಾದ ವಸ್ತುಗಳನ್ನೇ ಚಿತ್ರಿಸಬೇಕು. ಸಮರ್ಥರಾದ ಶಾಸ್ತ್ರಜ್ಞರಿಂದ ಬರೆಯಲಾದ ಚಿತ್ರವು ಸಂಪತ್ತನ್ನು ಉಂಟುಮಾಡುತ್ತದೆ. ಒಳ್ಳೆಯ ಚಿತ್ರ ಕುತೂಹಲಕ್ಕೆ ಕಾರಣವಾಗುತ್ತದಲ್ಲದೇ ಸಂತೋಷ ಕೊಡುತ್ತದೆ, ಶೂನ್ಯವನ್ನು ಹೋಗಲಾಡಿಸುತ್ತದೆ.[೩೬] ಗಾಳಿಯ ದಿಕ್ಕು, ನೀರಿನ ಅಲೆ, ಮಲಗಿದ ಹಾಗೂ ಮೃತ ಶರೀರದಲ್ಲಿನ ಚೈತನ್ಯದ ವ್ಯತ್ಯಾಸ ಇವುಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸುವವನೇ ಚಿತ್ರಜ್ಞನೆನಿಸುತ್ತಾನೆ.[೩೭] ಪ್ರಶಸ್ತವಾದ, ಗುಣಯುಕ್ತವಾದ ತಿಥಿಯಲ್ಲಿ, ಚಿತ್ರಾನಕ್ಷತ್ರದಲ್ಲಿ ಬಿಳಿಯ ವಸ್ತ್ರವನ್ನು ಧರಿಸಿ ಜಿತೇಂದ್ರಿಯನಾಗಿ, ಬ್ರಾಹ್ಮಣರಿಗೆ ಭೋಜನ ಮಾಡಿಸಿ, ಅವರಿಂದ ಆಶೀರ್ವಾದ ಪಡೆದು, ಚಿತ್ರಜ್ಞರನ್ನೂ, ಗುರುಗಳನ್ನೂ ನಮಸ್ಕರಿಸಿ, ದೇವತಾ ಧ್ಯಾನ ಮಾಡುತ್ತ ಪೂರ್ವಾಭಿಮುಖವಾಗಿ ಕುಳಿತು ಚಿತ್ರ ರಚನೆ ಪ್ರಾರಂಭಿಸಬೇಕು[೩೮] ಇದು ಚಿತ್ರದ ಉನ್ನತಿಗೆ ಸಹಾಯ ಮಾಡುತ್ತದೆ. ಅಲ್ಲದೇ ರೇಖೆ, ವರ್ಣವಿನ್ಯಾಸ, ಅಲಂಕಾರಗಳು ಚಿತ್ರಕ್ಕೆ ಪೂರಕವಾಗಿ ರಚಿತವಾದಾಗ ಈ ಅಂಶಗಳು ಚಿತ್ರದ ಉನ್ನತಿಗೆ ಕಾರಣವಾಗುತ್ತವೆ[೩೯] ಎಂಬ ವಿವರಗಳು ತಿಳಿದುಬರುತ್ತವೆ. ಇದುವರೆಗೆ ಭಿತ್ತಿಚಿತ್ರ ರಚನೆಗಿಂತ ಮೊದಲು ರಚನಾಕಾರನು ತಿಳಿದಿರಬೇಕಾದ ಪ್ರಮುಖ ಅಂಶಗಳನ್ನು ಪೂರ್ವಾಂಗದಲ್ಲಿ ಚರ್ಚಿಸಲಾಯಿತು. ಈ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಭಿತ್ತಿಚಿತ್ರ ರಚನೆಗೆ ತೊಡಗುವ ಕ್ರಿಯಾರಂಗವಾದ ಭಿತ್ತಿಚಿತ್ರ ರಚನೆಯ ಉತ್ತರಾಂಗ ಬಗ್ಗೆ ಈಗ ಚರ್ಚಿಸಬಹುದಾಗಿದೆ.

## ಬ) ಭಿತ್ತಿ ಚಿತ್ರರಚನಾ ಉತ್ತರಾಂಗ

ಭಿತ್ತಿಚಿತ್ರ ರಚನೆಯ ಉತ್ತರಾಂಗದಲ್ಲಿ ೧) ಭಿತ್ತಿಚಿತ್ರ ರಚನಾ ವಿಧಾನ ೨) ಭಿತ್ತಿಚಿತ್ರ ರಚನಾ ಹಂತಗಳೆಂದು ವಿಭಜಿಸಿಕೊಂಡು ವಿವೇಚಿಸಬಹುದಾಗಿದೆ.

---

೩೨. ಸ್ಟೆಲ್ಲಾ ಕ್ರಾಮ್ರಿಷ್ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೩೮, ಶ್ಲೋಕ ೧೩ - ೧೪

೩೩. – ಅದೇ – ಅಧ್ಯಾಯ ೪೧, ಶ್ಲೋಕ ೮

೩೪. – ಅದೇ – ಶ್ಲೋಕ ೧೩

೩೫. – ಅದೇ – ಅಧ್ಯಾಯ ೪೩, ಶ್ಲೋಕ ೧೧, ೧೩

೩೬. – ಅದೇ – ಶ್ಲೋಕ ೨೪ - ೨೫

೩೭. – ಅದೇ – ಶ್ಲೋಕ ೨೮ - ೨೯

೩೮. – ಅದೇ – ಅಧ್ಯಾಯ ೪೦, ಶ್ಲೋಕ ೧೧ - ೧೨

೩೯. – ಅದೇ – ಅಧ್ಯಾಯ ೪೧, ಶ್ಲೋಕ ೧೦

**1. ಭಿತ್ತಿಚಿತ್ರ ರಚನಾ ವಿಧಾನ :** ಭಿತ್ತಿಚಿತ್ರ ರಚನೆಯಲ್ಲಿ ಅನುಸರಿಸುವ ತಾಂತ್ರಿಕ ವಿಧಿ-ವಿಧಾನಗಳಿಂದ ಭಿತ್ತಿಚಿತ್ರ ರಚನಾ ವಿಧಾನವನ್ನು [೪೦] ನಾಲ್ಕು ರೀತಿಯಲ್ಲಿ ವಿಂಗಡಿಸಬಹುದು.

i. ಭಿತ್ತಿ ಹಸಿ ಇರುವಾಗ ಚಿತ್ರ ರಚಿಸುವ ವಿಧಾನ (Fresco-buon)

ii. ಭಿತ್ತಿ ಒಣಗಿದ ನಂತರ ಚಿತ್ರ ರಚಿಸುವ ವಿಧಾನ (Fresco secco)

iii. ಬಣ್ಣದ ಹುಡಿಯನ್ನು ಅಂಟುಮಾಧ್ಯಮದಲ್ಲಿ ಕಲಸಿಕೊಂಡು ಒಣ ಭಿತ್ತಿಯ ಮೇಲೆ ಚಿತ್ರ ರಚಿಸುವ ವಿಧಾನ (Tempera)

iv. ಹಸಿಭಿತ್ತಿಯನ್ನು ಕೊರೆದು ಚಿತ್ರ ರೂಪಿಸುವ ವಿಧಾನ (Sgraffito)

ಈ ಮೇಲಿನ ಪದ್ಧತಿಗಳಲ್ಲಿ ಮೊದಲನೆಯದಾದ ' ಫ್ರೆಸ್ಕೋಬ್ಯುನೋ ' ವಿಧಾನದಲ್ಲಿ ಮತ್ತು ನಾಲ್ಕನೆಯದಾದ ' ಸ್ಗ್ರಾಫಿಟೋ ' ವಿಧಾನದಲ್ಲಿ ಭಿತ್ತಿ ಹಸಿ ಇರುವಾಗ ಚಿತ್ರರಚನೆ ಮಾಡಲಾಗುತ್ತದೆ. ಇವುಗಳ ಬಗ್ಗೆ ಒಂದೊಂದಾಗಿ ಹೀಗೆ ವಿವರಿಸಬಹುದು.

**i. ಭಿತ್ತಿ ಹಸಿ ಇರುವಾಗ ಚಿತ್ರ ರಚಿಸುವ ವಿಧಾನ (Fresco-buon) :** ಈ ವಿಧಾನದಲ್ಲಿ ಹಸಿಗಾರೆಯ ಮೇಲೆ ಚಿತ್ರ ರಚಿಸಲಾಗುತ್ತದೆ. ಈ ತಂತ್ರಗಾರಿಕೆಯು ಕ್ರಿ. ಶ. ೧೩೦೦ ರ ಸುಮಾರಿಗೆ ಇಟಲಿಯಲ್ಲಿ ಮೊದಲಿಗೆ ಬಳಕೆಗೆ ಬಂತು ಹಾಗೂ ಭಾರತದಲ್ಲಿ ಈ ವಿಧಾನವು ಕ್ರಿ. ಶ. ೧೮ ರಿಂದ ೧೯ ನೇ ಶತಮಾನದಲ್ಲಿ ಪರಿಚಯವಾಯಿತು [೪೧] ಎಂದು ತಿಳಿದುಬರುತ್ತದೆ. ಈ ವಿಧಾನದಲ್ಲಿ ಸುಣ್ಣದ ಹಸಿಗಾರೆಯ ಮೇಲೆ ಸುಣ್ಣ ಪ್ರತಿರೋಧಕ ವರ್ಣಗಳನ್ನು ಉಪಯೋಗಿಸಿ ಚಿತ್ರ ರಚಿಸಲಾಗುತ್ತದೆ. ಈ ವಿಧಾನದ ಇನ್ನೊಂದು ಮುಖ್ಯ ಅಂಶವೆಂದರೆ ಹಸಿಗಾರೆಯ ಮೇಲೆ ಚಿತ್ರ ರಚಿಸಬೇಕಾಗಿರುವುದರಿಂದ ಕಲಾವಿದರು ತಮಗೆ ಒಂದು ದಿನದಲ್ಲಿ ಚಿತ್ರರಚನೆ ಸಾಧ್ಯವಾಗುವಷ್ಟು ಮಾತ್ರ ಗಾರೆಯನ್ನು ಲೇಪಿಸಿಕೊಳ್ಳಬೇಕು. ಅಂದರೆ ಆಯಾ ದಿನ ಚಿತ್ರರಚನೆ ಮಾಡಬೇಕಾದ ಭಾಗಕ್ಕೆ ಗಾರೆ ಲೇಪಿಸಿಕೊಂಡು ಆ ಗಾರೆ ಹಸಿ ಇರುವಾಗಲೇ ಚಿತ್ರ ರಚಿಸುವುದು. ಆ ದಿನ ಚಿತ್ರರಚನೆ ಸಾಧ್ಯವಾಗದೇ ಉಳಿದ ಗಾರೆಯ ಭಾಗವನ್ನು ಗೋಡೆಯಿಂದ ಕಿತ್ತು ತೆಗೆಯಲಾಗುತ್ತದೆ. ಮರುದಿನ ಚಿತ್ರಿಸಬೇಕಾದ ಭಾಗಕ್ಕೆ ಮತ್ತೆ ಹಸಿಗಾರೆ ಲೇಪಿಸಿಕೊಂಡು ಅದರ ಮೇಲೆ ಚಿತ್ರರಚನೆ ಮಾಡಬೇಕಾದುದರಿಂದ ಪದೇ ಪದೇ ಗಾರೆ ಲೇಪಿಸಬೇಕಾಗುವುದು. ಇಲ್ಲವೇ ಹಿಂದಿನ ದಿನ ಲೇಪಿಸಿದ ಗಾರೆಯು ಚಿತ್ರರಚನೆಗಾಗಿ ಹಸಿ ಇರುವಂತೆ ನೋಡಿಕೊಳ್ಳಬೇಕಾಗುತ್ತದೆ. ಈ ವಿಧಾನದಿಂದ ಚಿತ್ರರಚನೆ ಮಾಡಿದ ನಂತರ ಗಾರೆಯು (ಭಿತ್ತಿ) ಒಣಗಿದಾಗ ಅದರ ಜೊತೆಗೆ ಚಿತ್ರಗಳು ಒಣಗಿಕೊಂಡು ಭಿತ್ತಿಯ ಆಳಕ್ಕೆ ವರ್ಣವು ಇಳಿದು ಹೋಗಿ, ಅಳಿಸಲಾರದಂತಹ ವರ್ಣಭಿತ್ತಿಚಿತ್ರಗಳು ರಚನೆಯಾಗುವವು. ಈ ವಿಧಾನದಿಂದ ಚಿತ್ರ ರಚಿಸಿದಾಗ ವರ್ಣಚಿತ್ರಗಳು ಚಕ್ಕಳೆ ಎದ್ದು ಉದುರುವುದಾಗಲಿ. ಇಲ್ಲವೇ ಒನ್ನೆಲೆ ಲೇಪನ ಕಿತ್ತುಬಂದು ಚಿತ್ರಗಳು ನಾಶವಾಗದೇ ಹೆಚ್ಚುದಿನ ಉಳಿಯುತ್ತವೆ. ಈ ವಿಧಾನದಲ್ಲಿ ಸುಣ್ಣದ ಭಿತ್ತಿಯನ್ನು ಅನೇಕ ಪದರುಗಳಾಗಿ, ಸುಮಾರು ಅರ್ಧ ಇಂಚಿನಷ್ಟು ಲೇಪಿಸಲಾಗುವುದು. ಇದರ ಮೇಲೆ ಮತ್ತೆ ಸುಣ್ಣದ ತೆಳುವಾದ ಪದರವನ್ನು ಲೇಪಿಸಿ, ಗಟ್ಟಿಯಾದ ಹಾಲಿನಂತಿರುವ ಸುಣ್ಣದ ನೀರನ್ನು ತೆಗೆದುಕೊಂಡು ಹಸಿಯಾಗಿರುವ ಈ ಭಿತ್ತಿಗೆ ಹಲವಾರು ಸಲ ಲೇಪಿಸಬೇಕು. ಹೀಗೆ ಗಟ್ಟಿಯಾದ ಸುಣ್ಣದ ನೀರನ್ನು ಚಿಮುಕಿಸಿದಾಗೊಮ್ಮೆ ಒಂದು ನುಣುಪಾದ ಕಲ್ಲನ್ನು ತೆಗೆದುಕೊಂಡು ಈ ಹಸಿ ಭಿತ್ತಿಯನ್ನು

೪೦. Jayanth Chakravarthi : Techniques in Indian Mural Painting, Page - 13

೪೧. Jayanth Chakravarthi : Techniques in Indian Mural Painting, Page - 14

ಉಜ್ಜಬೇಕು. ಭಿತ್ತಿಯು ನುಣುಪಾಗುವ ತನಕವೂ ಸುಣ್ಣದ ನೀರನ್ನು ಚಿಮುಕಿಸಿ ಉಜ್ಜುವುದನ್ನು ಪುನರಾವರ್ತಿಸುತ್ತಿರಬೇಕು. ಹೀಗೆ ಮಾಡುವುದರಿಂದ ಭಿತ್ತಿಯ ಮೇಲ್ಮೈ ಅತೀ ನುಣುಪಾಗಿ ಗಟ್ಟಿಯಾಗುವುದು. ನಂತರ ಬೇಕಾದ ಛಾಯೆಯ ವರ್ಣದ್ರವ್ಯ ತೆಗೆದುಕೊಂಡು ನೀರು ಮತ್ತು ಅಂಟಿನೊಡನೆ ಇಲ್ಲವೇ ವಜ್ರಸರಿಯೊಡನೆ ಬೆರೆಸಿ ಈ ದ್ರವವನ್ನು ಹಸಿಯಾಗಿರುವ ಭಿತ್ತಿಯ ಮೇಲೆ ಲೇಪಿಸಿ ಮತ್ತೆ ನುಣುಪಾದ ಕಲ್ಲಿನಿಂದ ಉಜ್ಜುತ್ತಿರಬೇಕು. ಈ ವಿಧಾನಕ್ಕಾಗಿ ವರ್ಣದ್ರವ್ಯದೊಡನೆ ಬೆರೆಸಲು ಅಂಟು ಮತ್ತು ವಜ್ರಸರಿಯ ಬದಲಾಗಿ ಸುಣ್ಣದ ನೀರನ್ನೂ ಬಳಸುವದಿದೆ. ಈ ರೀತಿ ವರ್ಣದ್ರವ್ಯ ಲೇಪಿಸಿ ಉಜ್ಜಿ ನುಣುಪುಗೊಳಿಸಿದ ಹಸಿ ಗಾರೆಯ ಮೇಲೆ ಚಿತ್ರ ರಚಿಸಲಾಗುವುದು. ಚಿತ್ರರಚನೆಯು ಮುಗಿದ ನಂತರ ಚಿತ್ರವನ್ನು ಒಳಗೊಂಡಂತೆ ಇಡೀ ಭಿತ್ತಿಯನ್ನು ಮತ್ತೊಮ್ಮೆ ನುಣುಪಾದ ಕಲ್ಲಿನಿಂದ ಉಜ್ಜಬೇಕು. ಕಲ್ಲಿನ ಉಜ್ಜುವಿಕೆಯಿಂದ ಚಿತ್ರದ ವರ್ಣದ್ರವ್ಯವು ಹಿನ್ನೆಲೆಯೊಂದಿಗೆ ಚನ್ನಾಗಿ ಒಂದೇ ಸಲ ಒಣಗಿ ಅಳಿಸಲಾಗದ ಭಿತ್ತಿಚಿತ್ರಗಳು ನಿರ್ಮಾಣವಾಗುತ್ತವೆ[೪೨] ಎಂಬ ವಿವರಣೆಗಳು ದೊರೆಯುತ್ತವೆ. ಫ್ರೆಸ್ಕೋ ಬ್ಯುನೋ ವಿಧಾನವು ವಾತಾವರಣದ ಬಿಸಿ ಹೆಚ್ಚಿರುವ ಭಾರತದಂತಹ ಪ್ರದೇಶಕ್ಕೆ ಹೊಂದಾಣಿಕೆಯಾಗದು. ಲೇಪಿಸಿದ ಗಾರೆಯು ಬೇಗನೇ ಆರುತ್ತ ಬರುವುದರಿಂದ ಗಾರೆಯ ಹಸಿಯನ್ನು ಹೆಚ್ಚು ಹೊತ್ತು ಉಳಿಸಿಕೊಳ್ಳಲು ಆಗದು. ಆದರೂ ಭಾರತದಲ್ಲಿ ಕೆಲವು ಚಿತ್ರಕಾರರು ಈ ವಿಧಾನವನ್ನು ರಾಜಸ್ಥಾನದ ಕೆಲವು ಕಡೆ ಅನುಸರಿಸಿದ್ದಾರೆ[೪೩] ಎನ್ನಲಾಗಿದೆ.

**ii. ಫ್ರೆಸ್ಕೋ-ಸೆಕ್ಕೋ (Fresco-secco) :** " ಈ ವಿಧಾನದಲ್ಲಿ ಭಿತ್ತಿಯು (ಗಾರೆ) ಒಣಗಿದ ನಂತರ ಚಿತ್ರ ರಚಿಸಲಾಗುತ್ತದೆ. ಲೇಪಿಸಿದ ಗಾರೆಯು ಒಣಗಿದ ನಂತರ ಇಡೀ ಗಾರೆಯ ಮೇಲ್ಮೈಯನ್ನು ಸ್ವಚ್ಛವಾಗಿ ನೀರಿನಿಂದ ತೊಳೆದು ಆಮೇಲೆ ಕುದಿಸಿದ ಸುಣ್ಣವನ್ನು ದಪ್ಪನಾಗಿ ಲೇಪಿಸಬೇಕು. ಇದಕ್ಕೆ ಕೆಲವು ಸಲ ಸೂಕ್ಷ್ಮವಾದ ಹೊಳೆಯಲ್ಲಿ ಸಿಗುವ ಉಸುಕನ್ನೂ ಸೇರಿಸಬಹುದು. " ಈ ಸುಣ್ಣ ಲೇಪನವು ಪೂರ್ಣವಾಗಿ ಒಣಗಿದ ನಂತರ ಚಿತ್ರರಚನೆ ಪ್ರಾರಂಭಿಸಲಾಗುವುದು. ಇಲ್ಲಿ ಗಮನಿಸಬೇಕಾದ ಇನ್ನೊಂದು ಮುಖ್ಯ ವಿಷಯವೆಂದರೆ ಚಿತ್ರ ರಚನೆಗೆ ಪೂರ್ವದಲ್ಲಿ ಗಾರೆಯ ಮೈಲ್ಮೈಯನ್ನು ಉಜ್ಜಿ (ಪಾಲಿಸ್ ಮಾಡಿ) ನಯವಾಗಿ ಮಾಡಿಕೊಳ್ಳಬೇಕು. ಇದಕ್ಕಾಗಿ ಸುಣ್ಣ ಮತ್ತು ಸೂಕ್ಷ್ಮ ಮರಳನ್ನೇ ಉಪಯೋಗಿಸಬೇಕು. " ನಂತರ ಸುಣ್ಣದಲ್ಲಿ ಬೆರೆಯುವ ಗುಣವುಳ್ಳ ವರ್ಣಗಳನ್ನು ಸುಣ್ಣದ ತಿಳಿನೀರಿನಲ್ಲಿ ಕಲೆಸಿಕೊಂಡು ಉಪಯೋಗಿಸಬೇಕು. ವರ್ಣಗಳನ್ನು ಹೆಚ್ಚು ಗಡಸು ಮಾಡಬೇಕಾದಾಗ ಮಂದವಾದ ಸುಣ್ಣದ ನೀರನ್ನೇ ಉಪಯೋಗಿಸಬೇಕು. " ಈ ವಿಧಾನದಲ್ಲಿ ವರ್ಣ ಕಲೆಸಿಕೊಳ್ಳಲು ಇನ್ನೊಂದು ವಿಧಾನವು ಪ್ರಚಲಿತದಲ್ಲಿದೆ. ವರ್ಣಗಳನ್ನು ಸುಣ್ಣದ ತಿಳಿನೀರಿನ ಜೊತೆಗೆ ಕಲೆಸಿಕೊಳ್ಳುವಾಗ ಅದಕ್ಕೆ ಅಂಟು ಅಥವಾ ಹಾಲಿನ ಕೆನೆಯನ್ನು ಸೇರಿಸುವದು. ಇದರಿಂದ ವರ್ಣಗಳ ಹೊಳಪು ಮತ್ತು ಅಂಟುವ ಸಾಮರ್ಥ್ಯ ಹೆಚ್ಚಾಗುವುದು. ಈ ವಿಧಾನದಲ್ಲಿ ಬಿರುಸು ಕೂದಲಿನ ಕುಂಚಗಳನ್ನು ಬಳಸಿ ಚಿತ್ರ ರಚಿಸಲಾಗುವುದು.[೪೪] ಎಂಬಂತಹ ವಿವರಣೆಗಳು ಈ ವಿಧಾನದ ಚಿತ್ರ ರಚನೆಯ ಬಗೆಗೆ ತಿಳಿದುಬರುತ್ತವೆ.

**iii. ಟೆಂಪರಾ ವಿಧಾನ (Tempera) :** ಟೆಂಪರಾ ಎಂದರೆ ಕನ್ನಡದಲ್ಲಿ ಹದವಾದ ಮಿಶ್ರಣ ಎಂದಾಗುವುದು. ವರ್ಣಗಳನ್ನು ಉಚಿತ ಅಂಟುದ್ರಾವಕದೊಡನೆ ಹದವಾಗಿ ಮಿಶ್ರಣ ಮಾಡಿ. ಒಣದಾದ ಗಾರೆಯ ಮೇಲೆ ಚಿತ್ರ ರಚಿಸುವ ವಿಧಾನ ಇದಾಗಿದೆ. ಈ ವಿಧಾನದಲ್ಲಿ ವರ್ಣದ ಹುಡಿಗಳನ್ನು ಮಿಶ್ರಣ ಮಾಡಲು ಅನೇಕ ವಿಧದ ಅಂಟು ಮಾಧ್ಯಮಗಳನ್ನು

---

೪೨. J. C. Nagpal : Mural Paintings in India, Page - 17 - 18

೪೩. –ಅದೇ– ಪುಟ -೧೮

೪೪. Jayanth Chakravarthi : Techniques in Indian Mural Painting, Page - 13

ಬಳಸಲಾಗುತ್ತದೆ. ಸಸ್ಯದ ರಸ. ಹಾಲು. ಪ್ರಾಣಿಗಳ ರಕ್ತ, ವಜ್ರ ಸರಿ (Glue), ಅಂಟು (Gum), ಮತ್ತು ತತ್ತಿಯ ಲೋಳೆ ಪದಾರ್ಥ (Yolk of egg) ಗಳನ್ನು ಬಳಸಲಾಗುತ್ತದೆ. ಹೀಗೆ ಬಳಸಿದ ಅಂಟುದ್ರಾವಕದ ಹೆಸರಿನಿಂದ ಈ ಚಿತ್ರಣ ವಿಧಾನವನ್ನು ಕರೆಯಲಾಗುತ್ತದೆ. " ವಜ್ರಸರಿ ಉಪಯೋಗಿದಾಗ Glue-tempera ಎಂದು, ಅಂಟು ಉಪಯೋಗಿಸಿದಾಗ Gum-tempera ಎಂದೂ ತತ್ತಿಯ ಲೋಳೆ ಉಪಯೋಗಿಸಿದಾಗ Egg-tempera ಎಂದೂ [೪೫] ಕರೆಯಲಾಗುತ್ತದೆ. ಈ ಟೆಂಪರಾ ವಿಧಾನದಲ್ಲಿ ಗಾರೆಯ ಮೇಲೆ ಬಿಳಿದಾದ ಮಂದವಾದ ಸುಣ್ಣವನ್ನು ಹಿನ್ನೆಲೆಯಾಗಿ ಲೇಪಿಸಿ ಚಿತ್ರರಚಿಸುವುದು ಸಾಮಾನ್ಯವಾದರೂ, ಕೆಲವು ಕಡೆ ಬಿಳಿ ಹಿನ್ನೆಲೆಗೆ ಬದಲಾದ ವರ್ಣಮಯವಾದ ಹಿನ್ನೆಲೆಯನ್ನೂ ಲೇಪಿಸಿ ಚಿತ್ರಿಸಲಾಗಿದೆ. [೪೬] ಇಂತಹ ಉದಾಹರಣೆಯನ್ನು ಭಾರತದಲ್ಲಿ ಹಿಮಾಚಲ ಪ್ರದೇಶ ಮತ್ತು ಸಿತ್ತ ನಿವಾಸಲ್ ಭಿತ್ತಿಚಿತ್ರಗಳಲ್ಲಿ [೪೭] ಹಾಗೂ ಉತ್ತರ ಕರ್ನಾಟಕದ ಗುಳೇದಗುಡ್ಡದ ಹೊಸಮನಿಗೌಡರ ಮನೆಯಲ್ಲಿ ಮತ್ತು ನಿಪ್ಪಾಣಿಯ ರಾಜವಾಡೆಯ ಭಿತ್ತಿಚಿತ್ರಗಳಲ್ಲಿ ಕಾಣಬಹುದು. " ಭಾರತೀಯ ಭಿತ್ತಿಚಿತ್ರಗಳ ವಿಶಾಲ ಇತಿಹಾಸದಲ್ಲಿ ಅಜಂತೆಯಿಂದ ೧೯ ನೇ ಶತಮಾನದ ವರೆಗಿನ ಹೆಚ್ಚಿನ ಭಿತ್ತಿಚಿತ್ರಗಳು ಟೆಂಪರಾ ವಿಧಾನದಲ್ಲೇ ರಚಿಸಿವೆ " ಎಂದು ಪರಮಶಿವನ್ [೪೮] ಅವರು ಅಭಿಪ್ರಾಯ ಪಡುತ್ತಾರಲ್ಲದೇ ಅವರು ಈ ನಿಟ್ಟಿನಲ್ಲಿ ರಸಾಯನಿಕವಾಗಿ ಪ್ರಯೋಗ ಮಾಡಿ ವಿಶ್ಲೇಷಿಸಿದ್ದಾರೆ.

**iv. ಸ್ಗ್ರಾಫಿಟೋ (Sgraffito) :** ಈ ವಿಧಾನದಲ್ಲಿ ಒಂದು ವರ್ಣದ ಭಿತ್ತಿಯ ಮೇಲೆ ಇನ್ನೊಂದು ವರ್ಣದ ಭಿತ್ತಿಯನ್ನು ಲೇಪಿಸಿ ಅದು ಹಸಿ ಇರುವಾಗ ಮೇಲಿನ ಭಿತ್ತಿಯನ್ನು ಬೇಕಾದ ಆಕಾರಕ್ಕೆ ಕೊರೆದು ತೆಗೆದು ಚಿತ್ರ ಮೂಡಿಸುವದಾಗಿದೆ. [೪೯] ಎಂದು ತಿಳಿದುಬರುತ್ತದೆ. ಈ ವಿಧಾನವು ಕರ್ನಾಟಕ ಕರಾವಳಿ ಪ್ರದೇಶದ ಕಾವಿ ಭಿತ್ತಿಚಿತ್ರ ರಚನಾ ವಿಧಾನವನ್ನು ಹೋಲುತ್ತದೆ. ಕ್ರಿ. ಶ. ೧೩ ನೇ ಶತಮಾನದಲ್ಲಿ ಯುರೋಪಿನಲ್ಲಿ ಈ ವಿಧಾನ ಬಳಕೆಗೆ ಬಂತು [೫೦] ಎನ್ನಲಾಗಿದೆ. ಎರಡು ವರ್ಣದ ಚಿತ್ರಗಳಾಗಿ ಈ ವಿಧಾನದ ಭಿತ್ತಿಚಿತ್ರಗಳು ಕಂಡುಬರುತ್ತವೆ. ಮೇಲಿನ ಭಿತ್ತಿಯಲ್ಲಿರುವ ಚಿತ್ರಗಳು ಒಂದು ವರ್ಣದ್ದಾದರೆ, ಕೊರೆದು ತೆಗೆದ ಸ್ಥಳದಲ್ಲಿ ಕಾಣುವ ಹಿನ್ನೆಲೆಯ ಭಿತ್ತಿಯು ಇನ್ನೊಂದು ವರ್ಣದಲ್ಲಿ ಗೋಚರಿಸುತ್ತದೆ.

ಈ ಮೇಲೆ ಹೇಳಲಾದ ನಾಲ್ಕು ರೀತಿಯ ಭಿತ್ತಿಚಿತ್ರಣ ವಿಧಾನಗಳಲ್ಲಿ ಭಾರತೀಯ ಶಿಲ್ಪಶಾಸ್ತ್ರಗಳು ಕೇವಲ ಎರಡು ರೀತಿಯ ಭಿತ್ತಿಚಿತ್ರ ರಚನಾ ವಿಧಾನಗಳನ್ನು ಹೇಳಿವೆ. ಅವುಗಳೆಂದರೆ, ೧) Tempera ಟೆಂಪರಾ, ೨) ಫ್ರೆಸ್ಕೋ ಸೆಕ್ಕೋ (Fresco-secco). ಭಾರತೀಯ ಪ್ರಾಚೀನ ಮತ್ತು ಮಧ್ಯಯುಗೀನ ಶಿಲ್ಪಶಾಸ್ತ್ರಗಳೆಲ್ಲವೂ ಸ್ಪಷ್ಟವಾಗಿ ಈ ನಿಟ್ಟಿನಲ್ಲಿ ನಿರ್ದೇಶನ ನೀಡುತ್ತವೆ. ಅವುಗಳ ಪ್ರಕಾರ ಚಿತ್ರಗಳನ್ನು ಒಣವಾದ ಗಾರೆಯ (ಭಿತ್ತಿ) ಮೇಲೆ ರಚಿಸಬೇಕೆಂದಿದೆ. ಉದಾಹರಣೆಯಾಗಿ ಹೇಳಬೇಕೆಂದರೆ : ಶಿಲ್ಪರತ್ನ ಗ್ರಂಥದಲ್ಲಿ [೫೧] ಸ್ಪಷ್ಟವಾಗಿ ಹೀಗೆ ಹೇಳಿದೆ. " ಶುಷ್ಕತಸ್ಮೈನ್ ವರ್ಣಲೇಪನಂ. ಕುರ್ಯಾತ್ ಚಿತ್ರಹಮೇವಹಿಃ " ಅಂದರೆ ಗಾರೆಯು ಒಣಗಿದ ನಂತರ ಮಾತ್ರ ವರ್ಣಚಿತ್ರವನ್ನು

೪೫. J. C. Nagpal : Mural Paintings in India, Page - 3
೪೬. Jayanth Chakravarthi : Techniques in Indian Mural Painting, Page - 14
೪೭. J. C. Nagpal : Mural Paintings in India, Page - 3
೪೮. P. Paramasivan : " An investigation " into the Methods of Mural Paintings, JISOA, Vol. 7, Page - 38
೪೯. The new Encyclopedia Britanica, Volume 8, Page - 1093
೫೦. Jayanth Chakravarthi : Techniques in Indian Mural Painting, Page - 14
೫೧. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ. ಭಾಗ I. ಅಧ್ಯಾಯ ೪೬. ಶ್ಲೋಕ ೨೪

೩. ಲೇಖ್ಯಕರ್ಮ – ಸೀಸ ಅಥವಾ ಇದ್ದಲಿನಿಂದ ಚಿತ್ರಗಳ ಹೊರರೇಖೆ ಎಳೆಯುವುದು

೪. ರೇಖಾಕರ್ಮ – ಸೀಸದ ಹೊರರೇಖೆಗಳ ಮೇಲೆ ವರ್ಣದಿಂದ ಮತ್ತೆ ರೇಖೆ ಎಳೆಯುವುದು

೫. ವರ್ಣಕರ್ಮ – ವರ್ಣಲೇಪನ ಮಾಡುವುದು

೬. ವರ್ತನ ಕರ್ಮ – ಚಿತ್ರದ ನೆಳಲು ಬೆಳಕು ತೋರಿಸುವುದು

೭. ಲೇಖನ ಕರ್ಮ – ಕೊನೆಯ ಹಂತದ ಹೊರರೇಖೆ ಎಳೆಯುವುದು

೮. ದ್ವಿಕಕರ್ಮ – ಮುಕ್ತಾಯದ ವರ್ಣಲೇಪನ (Finishing touches)

ಸಮರಾಂಗಣ ಸೂತ್ರಧಾರ ಗ್ರಂಥದಲ್ಲಿ ಹೇಳಲಾದ ಈ ಚಿತ್ರರಚನೆಯ ಹಂತಗಳ ಬಗ್ಗೆ ಆ ಗ್ರಂಥದಲ್ಲಿ ವಿವರವಾಗಿ ಚರ್ಚಿಸಲಾಗಿಲ್ಲ. ಅಲ್ಲದೇ ಬರೀ ಚಿತ್ರರಚನೆಯ ಹಂತಗಳಲ್ಲದೇ ಭೂಮಿಬಂಧನವೆಂಬ ಭಿತ್ತಿ ತಯಾರಿಕೆಯ ಹಂತವೂ ಇಲ್ಲಿ ಬಂದಿದ್ದು ಈ ಬಗ್ಗೆ ಅದು ವಿವರಣೆಯನ್ನು ಕೊಟ್ಟಿಲ್ಲ. ಇಲ್ಲಿನ ಮೊದಲ ಎರಡು ಹಂತಗಳು ಚಿತ್ರರಚನೆಗೆ ಸಂಬಂಧಿಸಿರದೇ ಮೊದಲಿನದು 'ವರ್ತಿಕಾ' ಎಂಬುದು ಸೀಸದ ಕಡ್ಡಿ ತಯಾರಿಕೆಗೆ, ಮತ್ತು ಎರಡನೆಯದು ಭೂಮಿ ಬಂಧನ ಭಿತ್ತಿ ತಯಾರಿಕೆಗೆ ಸಂಬಂಧಿಸಿದೆ. ಭಿತ್ತಿಚಿತ್ರ ರಚನಾಹಂತದ ಕೆಲವು ವಿಷಯಗಳನ್ನು ಅನೇಕ ಗ್ರಂಥಗಳು ಚರ್ಚಿಸಿದ್ದರೂ. ಈ ನಿಟ್ಟಿನಲ್ಲಿ ಮಾನಸೋಲ್ಲಾಸ[೫೫] ಗ್ರಂಥ ಹೆಚ್ಚಿನ ಮಾಹಿತಿ ಕೊಡುತ್ತದೆ. ಮಾನಸೋಲ್ಲಾಸ ಮತ್ತು ಸಮರಾಂಗಣ ಸೂತ್ರಧಾರ ಗ್ರಂಥಗಳು ಚಿತ್ರರಚನೆಯ ಹಂತಗಳ ಬಗ್ಗೆ ಹೆಚ್ಚುಕಡಿಮೆ ಒಂದೇ ರೀತಿಯ ಮಾಹಿತಿಯನ್ನು ಕೊಡುತ್ತವೆ. ಶಿಲ್ಪಶಾಸ್ತ್ರಗಳಲ್ಲಿ ಹೇಳಲಾದ ಮಾಹಿತಿಯನ್ನಾಧರಿಸಿ ಪ್ರಾಚೀನ ಭಿತ್ತಿಚಿತ್ರ ರಚನೆಯಲ್ಲಿ ಅನುಸರಿಸುತ್ತಿದ್ದ ಚಿತ್ರರಚನಾ ಹಂತಗಳನ್ನು ಹೀಗೆ ಹೇಳಬಹುದು. ಭಿತ್ತಿಚಿತ್ರ ರಚನಾಕಾರರು ಚಿತ್ರರಚನೆಯಲ್ಲಿ ಒಟ್ಟು ಮುಖ್ಯವಾದ ಆರು ಹಂತಗಳನ್ನು ಅನುಸರಿಸುತ್ತಿದ್ದು ಅವು ಕೆಳಕಂಡಂತಿವೆ.

೧. ಲೇಖ್ಯ ಕರ್ಮ

೨. ರೇಖಾ ಕರ್ಮ

೩. ವರ್ಣ ಕರ್ಮ

೪. ವರ್ತನ ಕರ್ಮ

೫. ಲೇಖನ ಕರ್ಮ

೬. ದ್ವಿಕ ಕರ್ಮ

**೧. ಲೇಖ್ಯ ಕರ್ಮ :** ಭಿತ್ತಿಯ ಮೇಲೆ ಸೀಸದ ಕಡ್ಡಿ ಇಲ್ಲವೆ ಇದ್ದಿಲಿನಿಂದ ಚಿತ್ರದ ಹೊರ ರೇಖೆಯನ್ನು ಮೊದಲು ರಚಿಸುವ ಹಂತವು ಇದಾಗಿದೆ. ಇದು ಚಿತ್ರರಚನೆಯಲ್ಲಿ ಬಹುಮುಖ್ಯ ಹಂತವಾಗಿದ್ದು ಚಿತ್ರಕಾರನ ಸಾಮರ್ಥ್ಯದ ಪರೀಕ್ಷೆಯಾಗುವುದು ಇಲ್ಲಿಯೇ. ಪ್ರಬುದ್ಧ ಕಲಾವಿದ ಮಾತ್ರ ಚಿತ್ರದ ರೇಖೆಗಳನ್ನು ಸರಾಗವಾಗಿ ಎಳೆಯಬಲ್ಲ. ಚಿತ್ರಕಾರ ಮೊದಲು ತಾನು ಚಿತ್ರ ರಚಿಸಬೇಕಾದ ಭಿತ್ತಿಯ ಮೇಲ್ಮೈಯನ್ನು ಒಮ್ಮೆ ಚೆನ್ನಾಗಿ ವೀಕ್ಷಿಸಿ, ತನ್ನ ಮನದಲ್ಲಿ ಕಲ್ಪಿಸಿಕೊಂಡ ದೃಶ್ಯಸಂಯೋಜನೆಯನ್ನು ಭಿತ್ತಿಯ ಮೇಲೆ ಹೇಗೆ ರಚಿಸಬೇಕು ಎಂದು ಯೋಚಿಸುತ್ತಾನೆ. ಯಾವ ಚಿತ್ರ ಎಲ್ಲಿ ರಚಿಸಬೇಕು, ಚಿತ್ರಗಳ ಹಾವ-ಭಾವ ಹೇಗಿರಬೇಕು, ಇಡೀ ಚಿತ್ರದ ಸಂಯೋಜನೆ ಹೇಗಿರಬೇಕು ಎಂಬಿತ್ಯಾದಿ ವಿಷಯಗಳ ಗುರಿತಾಗಿ ಮೊದಲು ಮನದಲ್ಲಿ ಸ್ಪಷ್ಟಚಿತ್ರ ಮೂಡಿದ ನಂತರವೇ ತನ್ನ ಮನದಲ್ಲಿ ಮೂಡಿದ ಚಿತ್ರವನ್ನು

೫೫. ಜಿ. ಕೆ. ಶ್ರೀಗೊಂಡಕರ (ಸಂ.) : ಮಾನಸೋಲ್ಲಾಸ, ಭಾಗ II, ಅಧ್ಯಾಯ I, ಶ್ಲೋಕ ೧೪೯ - ೧೫೩

ಭಿತ್ತಿಯ ಮೇಲೆ ಸೀಸದ ಕಡ್ಡಿ ಇಲ್ಲವೇ ಇದ್ದಿಲಿನಿಂದ ರಚಿಸಲು ತೊಡಗುತ್ತಾನೆ. ಈ ಹಂತವು ನೇರವಾಗಿ ಮನಸ್ಸಿನ ಜೊತೆಗೆ ಸಂಬಂಧ ಹೊಂದಿದ್ದರಿಂದ ಭಿತ್ತಿ ಚಿತ್ರರಚನೆಯಲ್ಲಿ ಈ ಹಂತವನ್ನು ಮಹತ್ವದ ಹಂತವೆಂದು ಪರಿಗಣಿಸುತ್ತಿದ್ದರು. ಸೀಸದ ಕಡ್ಡಿ ಅಥವಾ ಇದ್ದಿಲಿನಿಂದ ರಚಿಸಿದ ಚಿತ್ರಗಳು ಕಲಾವಿದನ ಅನಿಸಿಕೆಯ ಮೇಲೆ ಮೂಡಿ ಬರದಿದ್ದರೆ ಅವುಗಳನ್ನು ಅಳಿಸಿ ಬೇರೆ ರೇಖೆಗಳನ್ನು ಎಳೆದು ಚಿತ್ರ ರಚಿಸುತ್ತಿದ್ದರು. ಅದಕ್ಕಾಗಿಯೇ ಅಳಿಸಲು ಅನುಕೂಲವಾಗುವಂತೆ ಈ ಪ್ರಥಮ ರೇಖಾ ಚಿತ್ರಗಳನ್ನು ಇದ್ದಿಲು ಅಥವಾ ಸೀಸದ ಕಡ್ಡಿಯಿಂದ ರಚಿಸಲು ಶಿಲ್ಪಶಾಸ್ತ್ರಗಳು ಹೇಳಿವೆ. ವಿಷ್ಣುಧರ್ಮೋತ್ತರ ಗ್ರಂಥವು [೫೬] ಚಿತ್ರದ ಪ್ರಥಮ ರೇಖೆಗಳನ್ನು ಬಿಳಿ ಮತ್ತು ಕಪ್ಪು ವರ್ಣಪುಡಿಗಳಿಂದ ಮಾಡಲಾದ ವರ್ತಿಕದಿಂದ (Crayon) ರಚಿಸಲು ತಿಳಿಸುತ್ತದೆ.

ಮಾನಸೋಲ್ಲಾಸ ಗ್ರಂಥವು [೫೭] ಚಿತ್ರದ ಪ್ರಥಮ ರೇಖೆಗಳನ್ನು ಎಳೆಯುವಾಗ ಬಹಳ ಜಾಗರೂಕತೆಯಿಂದ ಇರಬೇಕೆಂದು ಹೇಳುತ್ತ ಕಲಾವಿದ ತಾನು ರಚಿಸಬೇಕಾದ ಮಾನವಾಕೃತಿ ಇಲ್ಲವೇ ಇತರ ವಸ್ತುಗಳ ಪ್ರಮಾಣವನ್ನು ಎದುರಿಗೆ ಇದ್ದರೆ ನೋಡಿ. ಇಲ್ಲವೇ ಹಿಂದೆ ನೋಡಿದ್ದರ ಕಲ್ಪನೆಯನ್ನು ಮನದಲ್ಲಿ ಮೂಡಿಸಿಕೊಂಡು, ಸ್ಮರಣೆಯಿಂದ ಪ್ರಮಾಣಬದ್ಧವಾಗಿ ರಚಿಸಬೇಕೆಂದು ತಿಳಿಸುತ್ತದೆ. ಈ ಗ್ರಂಥವು ಚಿತ್ರದ ಪ್ರಥಮ ರೇಖೆ ಎಳೆಯುವ ಈ ಹಂತವನ್ನು 'ಆಕಾರ ಮತ್ರಿಕ' ಎಂದು ಗುರುತಿಸುತ್ತದಲ್ಲದೇ ರೇಖೆಗಳನ್ನು 'ತಿಂಡುಕ ಇಲ್ಲವೇ ವರ್ತಿಕ' ದಿಂದ ರಚಿಸಲು ಹೇಳುತ್ತ, ಈ ತಿಂಡುಕಗಳನ್ನು 'ಪಲ್ಮ' ಎಲೆಯನ್ನು ಸುಟ್ಟ ಕಾಡಿಗೆಯಿಂದ ಮಾಡಿರಬೇಕೆಂದು ತಿಳಿಸುತ್ತದೆ. ರಚಿಸಬೇಕಾದ ಚಿತ್ರದ ಮೂರ್ತರೂಪವನ್ನು ಮನದಲ್ಲಿ ಮೊದಲು ಸಾಕ್ಷಾತ್ಕರಿಸಿಕೊಂಡು ನಂತರ ಭಿತ್ತಿಯ ಮೇಲೆ 'ಕಿಟ್ಟ ಲೇಖನಿ' ಯಿಂದ ಚಿತ್ರದ ಮೊದಲ ರೇಖೆಯನ್ನು ರಚಿಸಬೇಕು ಎಂದು ಶಿಲ್ಪರತ್ನವು [೫೮] ಹೇಳುತ್ತದೆ. ಈ ಹಂತದಲ್ಲಿ ಕಲಾವಿದನ ಮನಸ್ಥಿತಿಯ ಬಗ್ಗೆಯೂ ಇದು ಹೇಳುತ್ತ. ಕಲಾವಿದನು ಸಮಚಿತ್ತದಿಂದ ಆರಾಮವಾಗಿ ಕುಳಿತುಕೊಂಡು ತನ್ನನ್ನು ತಾನು ಸಂಯಮಗೊಳಿಸಿಕೊಂಡು ಚಿತ್ರದ ವಿಷಯದ ಬಗ್ಗೆ ಮನಸ್ಸು ಕೇಂದ್ರೀಕರಿಸಿ. ಮನದಲ್ಲಿ ಘಟನೆಯ ಚಿತ್ರವನ್ನು ತಂದುಕೊಂಡು ಮೊದಲು ರೇಖಾಚಿತ್ರಕ್ಕೆ ತೊಡಗಬೇಕೆಂದು ಹೇಳಲಾಗಿದೆ. ಅಲ್ಲದೇ ರೇಖಾಚಿತ್ರವು ತಪ್ಪಾದರೆ ಅದನ್ನು ಹೊಸ ಬಟ್ಟೆಯ ತುಂಡಿನಿಂದ ಅಳಿಸಿತೆಗೆದು ಮತ್ತೊಮ್ಮೆ ರೇಖಾಚಿತ್ರ ಬರೆಯಲೂ ಸೂಚಿಸುತ್ತದೆ. ಶಿಲ್ಪರತ್ನ ಗ್ರಂಥದಲ್ಲಿ ಮೊದಲು ರಚಿಸಿದ ಸೀಸದಕಡ್ಡಿ ಅಥವಾ ಇದ್ದಿಲಿನ ರೇಖಾಚಿತ್ರಗಳನ್ನು ತಪ್ಪಾಗಿದ್ದರೆ ಇಲ್ಲವೇ ಬೇಡಾದ ಭಾಗವನ್ನು ಅಳಿಸಿ ತೆಗೆಯಲು ಹೊಸ ಬಟ್ಟೆಯನ್ನು ಉಪಯೋಗಿಸಲು ಸೂಚಿಸಿದಂತೆ ಸುಧಾಲೇಪ ವಿಧಾನ [೫೯] ಎಂಬ ಗ್ರಂಥದಲ್ಲೂ ಇದನ್ನೇ ಹೇಳಿದೆ. ಹೀಗೆ ಮಹತ್ವಪೂರ್ಣವಾದ ಈ ಹಂತವು ಭಿತ್ತಿಚಿತ್ರ ರಚನೆಯಲ್ಲಿ ಮೊದಲಿನದಾಗಿದೆ.

**೨. ರೇಖಾ ಕರ್ಮ :** ಇದು ಭಿತ್ತಿ ಚಿತ್ರರಚನೆಯಲ್ಲಿ ಎರಡನೆಯ ಹಂತವಾಗಿದೆ. ಸೀಸದ ಕಡ್ಡಿ ಇಲ್ಲವೇ ಇದ್ದಿಲಿನಿಂದ ಪ್ರಥಮ ಹಂತದ ರೇಖಾಚಿತ್ರ ರಚಿಸಿದ ನಂತರ ಅದರಲ್ಲಿರುವ ತಪ್ಪು-ತಡೆಗಳನ್ನು ಸರಿಪಡಿಸಿಕೊಂಡು. ಸೀಸದಕಡ್ಡಿಯಿಂದ

---

೫೬. ಸ್ಟೆಲ್ಲಾ ಕ್ರಾಮ್ರಿಷ್ (ಸಂ.) : ವಿಷ್ಣುಧರ್ಮೋತ್ತರ. ಭಾಗ III, ಅಧ್ಯಾಯ ೪೦, ಶ್ಲೋಕ ೧೩

೫೭. ಜಿ. ಕೆ. ಶ್ರೀಗೊಂಡೇಕರ (ಸಂ.) : ಮಾನಸೋಲ್ಲಾಸ. ಭಾಗ II. ಅಧ್ಯಾಯ I. ಶ್ಲೋಕ ೧೮೧ - ೮೨

೫೮. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ. ಭಾಗ I. ಅಧ್ಯಾಯ ೪೬. ಶ್ಲೋಕ ೩೮

" ಆಲಿಖ್ಯೇತಃ ಕಿಟ್ಟಲೇಖಿನ್ಯಃ ಸುಮುಹುರ್ತೇ ಸುಲಗ್ನೇ ।
ಸ್ವಸ್ಥಚಿತ್ತಃ ಸುಖಾಸೀನಹ ಸ್ಮೃತ್ವ್ವಾ. ಸ್ಮೃತ್ವ್ವಾ ಪುನಃ ಪುನಃ ॥
ಯತ್ರ ಲೇಖ ಘಟ ವಮವ್ ತತ್ರ ತನ್ ನವವಸ್ತ್ರಪಃ ।
ಸಮ್ಮರಿಯ ಸಮ್ಯಗಾಲಿಕ್ಯ ತತ್ದ ಅಕರ್ಮನ್ನಯೇತ್ ॥ "

೫೯. V. V. Sharma : Sudhalepavidhana, Page - 98

ರಚಿಸಿದ ಚಿತ್ರರೇಖೆಯ ಮೇಲೆ ವರ್ಣದಿಂದ ರೇಖೆ ಎಳೆಯುವ ಹಂತ ಇದಾಗಿದೆ. ವರ್ಣದ್ರವ್ಯ ತೆಗೆದುಕೊಂಡು ಕುಂಚ ಉಪಯೋಗಿಸಿ ರೇಖೆಗಳನ್ನು ಎಳೆಯಲಾಗುವ ಈ ಹಂತ ಕಲಾವಿದನ ನಿಪುಣತೆ ತೋರುತ್ತದೆ. ವಿಷ್ಣುಧರ್ಮೋತ್ತರವು[೬೦] ಎರಡನೆಯ ಹಂತವನ್ನು ವರ್ಣದಿಂದ ರೇಖೆ ಎಳೆಯುವ ಹಂತವೆಂದು ಪ್ರತ್ಯೇಕ ಗುರುತಿಸದೇ, ಮೊದಲ ಹಂತದ ಸೀಸದ ಕಡ್ಡಿಯ ರೇಖಾಚಿತ್ರ ರಚನೆ ಮುಗಿದ ನಂತರ ಕುಂಚ ತೆಗೆದುಕೊಂಡು ಚಿತ್ರಕ್ಕೆ ಅವಶ್ಯವಿದ್ದ ಎಲ್ಲ ಭಾಗಗಳಿಗೆ ವರ್ಣವನ್ನು ದಪ್ಪವಾಗಿ ಲೇಪಿಸುತ್ತ ಸಾಗಬೇಕು. ಎಂದು ಸೂಚಿಸುತ್ತದೆ. ಮಾನಸೋಲ್ಲಾಸ ಮತ್ತು ಶಿಲ್ಪರತ್ನ ಗ್ರಂಥಗಳೂ ಚಿತ್ರರಚನೆಯ ಎರಡನೆಯ ಹಂತದ ಬಗ್ಗೆ ಚರ್ಚಿಸಿವೆ. ಮಾನಸೋಲ್ಲಾಸ ಗ್ರಂಥವು[೬೧] ಸೀಸದಕಡ್ಡಿ ಇಲ್ಲವೆ ಇದ್ದಿಲಿನಿಂದ ಪ್ರಥಮ ರೇಖಾಚಿತ್ರ ರಚಿಸಿದ ನಂತರ ವರ್ಣದಲ್ಲಿ ಅದ್ದಲಾರದ ಒಣದಾಗಿರುವ ಕುಂಚ ತೆಗೆದುಕೊಂಡು ಈಗಾಗಲೇ ರಚಿಸಲಾದ ಇದ್ದಿಲಿನ ರೇಖೆಯ ಮೇಲೆ ಎಳೆಯಬೇಕು ಎಂದು ಎರಡನೆಯ ಹಂತವನ್ನು ಹೇಳುತ್ತದೆ. ಬಹುಶಃ ಈ ಕ್ರಮವು ಇದ್ದಿಲಿನ ರೇಖೆಯ ಮೇಲೆ ಕುಳಿತ ಇದ್ದಿಲು ಪುಡಿ ಇಲ್ಲವೆ ಸೀಸದ ಕಡ್ಡಿಯ ಪುಡಿಯನ್ನು ತೆಗೆಯುವುದಾಗಿದೆ. ಹಾಗೂ ಕಪ್ಪಾದ ದಪ್ಪ ಗೆರೆಗಳ ಗಡಸುತನವನ್ನು ಕಳೆದು ರೇಖೆಗಳ ಕುರುಹು ಮಾತ್ರ ಉಳಿಯುವಂತೆ ಮಾಡುವದಾಗಿದೆ. ಅಲ್ಲದೇ ರೇಖೆಗಳಲ್ಲಿ ಕಪ್ಪುಪುಡಿ ಹೆಚ್ಚು ಉಳಿದಾಗ ವರ್ಣಲೇಪನ ಸಂದರ್ಭದಲ್ಲಿ ಕೆಲವು ತೆಳು ವರ್ಣಗಳ ಛಾಯೆಯಲ್ಲಿ ವ್ಯತ್ಯಾಸವಾಗುವ ಸಾಧ್ಯತೆಯೂ ಇದೆ. ಅದಕ್ಕಾಗಿಯೇ ಮಾನಸೋಲ್ಲಾಸವು ಇದ್ದಿಲಿನಿಂದ ಪ್ರಥಮ ರೇಖಾಚಿತ್ರ ರಚಿಸಿದ ನಂತರ ಒಣದಾದ ಕುಂಚದಿಂದ ರೇಖೆಯ ಮೇಲೆ ಎಳೆದು ಆ ಪುಡಿಯನ್ನು ತೆಗೆಯಲು ಹೇಳಿದೆ.

ಎರಡನೆಯ ಹಂತದ ವರ್ಣದಿಂದ ರೇಖೆ ಎಳೆಯುವ ಈ ಹಂತದಲ್ಲಿ ಗೈರಿಕ ಎಂಬ ಕೆಂಪು ವರ್ಣದಿಂದ ರೇಖೆ ಎಳೆಯಬೇಕೆಂದು ಅನೇಕ ಶಿಲ್ಪಶಾಸ್ತ್ರಗಳು ಹೇಳುತ್ತವೆ. ಅಲ್ಲದೇ ಇದಕ್ಕಾಗಿ ಲೇಖನಿ ಎಂಬ ಕುಂಚ ಉಪಯೋಗಿಸಬೇಕೆಂದು ಸೂಚಿಸುತ್ತವೆ. ಆದರೆ ಶಿಲ್ಪರತ್ನ ಗ್ರಂಥವು[೬೨] " ಮೊದಲು ಇದ್ದಿಲಿನಿಂದ ಪ್ರಥಮ ಹಂತದ ರೇಖಾಚಿತ್ರ ಮುಗಿದು ತಪ್ಪು-ತಡೆಗಳನ್ನು ಅಳಿಸಿ ಸರಿಪಡಿಸಿದ ನಂತರ, ಸಾಧಾರಣ ಅಳತೆಯ ಕುಂಚ ತೆಗೆದುಕೊಂಡು ಹಳದಿ ವರ್ಣವನ್ನು ಇದ್ದಲಿನ ರೇಖೆಯನ್ನು ಮಾತ್ರ ಬಿಟ್ಟು ಚಿತ್ರದ ಒಳಭಾಗ ಮತ್ತು ಹೊರಭಾಗಕ್ಕೆ ಸಂಪೂರ್ಣ ಲೇಪಿಸಬೇಕು. ನಂತರ ಇದ್ದಿಲು ರೇಖೆಯನ್ನು ಹೊಸ ಅರಿವೆಯಿಂದ ತಿಕ್ಕಿ ಅಥವಾ ಜಾಡಿಸಿ, ಅಲ್ಲಿರಬಹುದಾದ ಕಪ್ಪು ಪುಡಿಯನ್ನು ತೆಗೆಯಬೇಕು. ಆಮೇಲೆ ಇದ್ದಿಲಿನ ರೇಖೆಗಳ ಮೇಲೆ ಕಂದುಗೆಂಪು ವರ್ಣದಿಂದ ಮತ್ತೊಮ್ಮೆ ಚಿತ್ರಗಳ ರೇಖೆಗಳನ್ನು ಎಳೆಯಬೇಕೆನ್ನುತ್ತದೆ. "

**೩. ವರ್ಣ ಕರ್ಮ :** ಭಿತ್ತಿ ಚಿತ್ರರಚನೆಯಲ್ಲಿ ೩ ನೆಯ ಹಂತ ಇದಾಗಿದೆ. ಕುಂಚದಿಂದ ಚಿತ್ರಗಳ ಹೊರ ರೇಖೆಯನ್ನು ಸಾಮಾನ್ಯವಾಗಿ ಕೆಂಪುವರ್ಣದಿಂದ ಎಳೆದ ನಂತರ ಅಲ್ಲಲ್ಲಿ ಅವಶ್ಯವಿದ್ದಲ್ಲಿ ಬೇಕಾದ ವರ್ಣವನ್ನು ಚಿತ್ರಗಳಿಗೆ ಲೇಪಿಸುವ ಕ್ರಮವಿದಾಗಿದೆ. ವಿಷ್ಣುಧರ್ಮೋತ್ತರವು[೬೩] ವರ್ಣಲೇಪನ ಹಂತದ ಬಗ್ಗೆ ಹೀಗೆ ಹೇಳುತ್ತದೆ. ಉತ್ತಮ ಕಲಾವಿದನಾದವನು ರೇಖಾಚಿತ್ರವನ್ನು ಮೊದಲು ಪೂರ್ತಿಗೊಳಿಸಿ. ಅದು ಪ್ರಮಾಣಬದ್ಧವಾಗಿ ಉತ್ತಮ

---

೬೦. ಸ್ಟೆಲ್ಲಾ ಕ್ರಾಮ್ರಿಷ್ (ಸಂ.) : ವಿಷ್ಣುಧರ್ಮೋತ್ತರ. ಭಾಗ III, ಅಧ್ಯಾಯ ೪೦, ಶ್ಲೋಕ ೧೪

೬೧. ಜಿ. ಕೆ. ಶ್ರೀಗೊಂಡೇಕರ (ಸಂ.) : ಮಾನಸೋಲ್ಲಾಸ. ಭಾಗ II, ಅಧ್ಯಾಯ I, ಶ್ಲೋಕ ೧೪೯ - ೧೫೨

೬೨. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ. ಭಾಗ I. ಅಧ್ಯಾಯ ೪೬. ಶ್ಲೋಕ ೫೮ - ೬೦

೬೩. ಸ್ಟೆಲ್ಲಾ ಕ್ರಾಮ್ರಿಷ್ (ಸಂ.) : ವಿಷ್ಣುಧರ್ಮೋತ್ತರ. ಭಾಗ III, ಅಧ್ಯಾಯ ೪೦, ಶ್ಲೋಕ ೨೪

ಸಂಯೋಜನೆಯಿಂದ ಕೂಡಿರುವಂತೆ ನೋಡಿಕೊಳ್ಳಬೇಕು. ಈ ದಿಸೆಯಲ್ಲಿ ಕಲಾವಿದನಿಗೆ ಮನಸ್ಸಿಗೆ ಒಪ್ಪಿಗೆಯಾದ ನಂತರ ಆ ಚಿತ್ರಕ್ಕೆ ಆತನು ವರ್ಣಲೇಪನ ಕಾರ್ಯ ಮಾಡಬೇಕು ಎಂದಿದೆ. ಈ ವರ್ಣಲೇಪನ ಹಂತವೂ ಹೆಚ್ಚು ಮಹತ್ವದ್ದಾಗಿದ್ದು. ಕಲಾವಿದನ ವರ್ಣಜ್ಞಾನವನ್ನು ವರೆಗೆ ಹಚ್ಚುವ ಘಟ್ಟವಾಗಿದೆ. ಭಿತ್ತಿಚಿತ್ರಕ್ಕೆ ವರ್ಣ ಲೇಪನ ಮಾಡುವ ಕಲಾವಿದನು ಕೆಲವು ಮುಖ್ಯ ಅಂಶಗಳನ್ನು ತಿಳಿದಿರಬೇಕೆಂದು ಶಿಲ್ಪಶಾಸ್ತ್ರಗಳು ಹೇಳುತ್ತವೆ. ಅವುಗಳೆಂದರೆ– ಉತ್ತಮವಾಗಿ ವರ್ಣಗಳನ್ನು ತಯಾರಿಸಿಕೊಂಡು ಅತೀ ದಟ್ಟವಾಗಿ ಇಲ್ಲವೇ ಅತೀ ತೆಳುವಾಗಿ ಲೇಪಿಸದೇ ಚಿತ್ರದ ವಿಷಯಕ್ಕೆ ಹೊಂದುವಂತೆ. ಲೇಪಿಸಿದ ವರ್ಣದಿಂದ ಭಾವೋತ್ಪನ್ನವಾಗುವಂತೆ ಹಿತಮಿತವಾದ ಸಂಯೋಜನೆಯಿಂದ ವರ್ಣ ಲೇಪಿಸಬೇಕು. ಪ್ರತಿಯೊಂದು ವರ್ಣದ ಗಡಸುತನ. ತೆಳುವಾಗುವ ಅದರ ಗುಣಧರ್ಮ ಅರಿತುಕೊಂಡು, ಒಂದರೊಡನೆ ಇನ್ನೊಂದು ವರ್ಣ ಬೆರೆತಾಗ ಉಂಟಾಗುವ ವರ್ಣವೈವಿಧ್ಯದ ಬಗ್ಗೆ ಗಮನ ಕೊಟ್ಟು ವರ್ಣ ಲೇಪಿಸಬೇಕು. ಕಲಾವಿದನಾದವನು ಮೊದಲು ಮನಃಪೂರ್ವಕವಾಗಿ ನಿಸರ್ಗವನ್ನು ಅವಲೋಕಿಸಿ ಸೃಷ್ಟಿಯಲ್ಲಿ ಅಡಗಿರುವ ವರ್ಣವೈವಿಧ್ಯತೆಯನ್ನು ಗುರುತಿಸಿ ನಂತರವೇ ಸೃಷ್ಟಿಯ ಪ್ರತಿಸೃಷ್ಟಿಯಾದ ಚಿತ್ರಕ್ಕೆ ವರ್ಣ ಲೇಪನಕ್ಕೆ ತೊಡಗಬೇಕು. ಪ್ರತಿಯೊಂದು ವರ್ಣಕ್ಕೂ ತನ್ನದೇ ಅರ್ಥವ್ಯಾಪ್ತಿ ಇದ್ದು ಅದನ್ನು ತಿಳಿದುಕೊಳ್ಳಬೇಕು. ಒಂದೊಂದು ವರ್ಣವೂ ಒಂದೊಂದು ರಸಕ್ಕೆ ಭಾವೋತ್ಪನ್ನ ಶಕ್ತಿ ಹೊಂದಿದ್ದು ಯಾವತರದ ಚಿತ್ರಕ್ಕೆ ಯಾವ ವರ್ಣ ಬಳಸಬೇಕು ಎಂದು ವಿಷ್ಣುಧರ್ಮೋತ್ತರ ಗ್ರಂಥದಲ್ಲಿ [೬೪] ಹೇಳಲಾಗಿದೆ. ಈ ಅಂಶ ' ನಾಟ್ಯಶಾಸ್ತ್ರ ' ದಲ್ಲೂ [೬೫] ಹೇಳಿದೆ.

ಮಾನಸೋಲ್ಲಾಸ ಗ್ರಂಥವು [೬೬] ವರ್ಣಲೇಪನ ಹಂತದ ಬಗ್ಗೆ ಹೇಳುತ್ತ– " ರೇಖಾಚಿತ್ರ ರಚನೆಯ ಹಂತ ಮುಗಿದ ನಂತರ ಕುಂಚದಿಂದ ವರ್ಣ ಲೇಪಿಸಬೇಕು. ಹೀಗೆ ವರ್ಣ ಲೇಪಿಸುವಾಗ ಹೊಳಪುಳ್ಳ ವರ್ಣಗಳನ್ನು ಬೆಳಕಿನ ಭಾಗಕ್ಕೆ. ದಟ್ಟ ವರ್ಣಗಳನ್ನು ನೆರಳು ಭಾಗಕ್ಕೆ ಲೇಪಿಸಬೇಕು. ಆದರೂ ಅಕಸ್ಮಾತಾಗಿ ವರ್ಣಲೇಪನವು ಕೆಟ್ಟುಹೋದರೆ, ಇಲ್ಲವೇ ಬೇಡಾದ ಭಾಗದಲ್ಲಿ ವರ್ಣದ್ರವ್ಯ ಅಜಾಗರೂಕತೆಯಿಂದ ಲೇಪಿತವಾದರೆ, ಆ ಬೇಡಾದ ವರ್ಣಲೇಪನ ಭಾಗವನ್ನು ಚೂಪಾದ ಚೂರಿಯಿಂದ (Knife) ಸೂಕ್ಷ್ಮವಾಗಿ ಕೆರೆದು ತೆಗೆಯಬೇಕು. ವರ್ಣದ ಜೊತೆಗೆ ಭಿತ್ತಿಗೆ ಲೇಪಿಸಿದ ಹಿನ್ನೆಲೆ ಲೇಪನವು ಕಿತ್ತು ಬರದಂತೆ ಎಚ್ಚರಿಕೆ ವಹಿಸಬೇಕು. ದುರದೃಷ್ಟವಶಾತ್ (ಅಕಸ್ಮಾತಾಗಿ) ಹಿನ್ನೆಲೆ ಲೇಪನವು ಕಿತ್ತರೆ ಆ ಜಾಗದಲ್ಲಿ ಸಂಬಂಧಪಟ್ಟ ಗಟ್ಟಿಯಾದ ವರ್ಣ ದ್ರವ್ಯವನ್ನು ಲೇಪಿಸಿ ಸರಿಪಡಿಸಬೇಕೆಂದೂ [೬೭] ಗ್ರಂಥ ಹೇಳುತ್ತದೆ. " ಶಿಲ್ಪರತ್ನ ಗ್ರಂಥವು [೬೮] ವರ್ಣಲೇಪನ ಮಾಡಲು ಹೀಗೆ ಹೇಳಿದೆ– ಹಿಂದಿನ ಹಂತದಲ್ಲಿ " ಚಿತ್ರದ ಹೊರಭಾಗ. ಮತ್ತು ಒಳಭಾಗಕ್ಕೆ ಈಗಾಗಲೇ ಹಳದೀ ವರ್ಣ ಲೇಪಿಸಿ ಕೆಂಪು ವರ್ಣದಿಂದ ಚಿತ್ರಗಳ ರೇಖೆ ಎಳೆಯಲಾಗಿದ್ದು. ಆ ಹಳದೀ ವರ್ಣದ ಮೇಲೆಯೇ ಚಪ್ಪಟೆಯಾದ ಕುಂಚದಿಂದ ಚಿತ್ರಕ್ಕೆ ಹೊಂದಾಣಿಕೆಯಾಗುವ ವಿವಿಧ ವರ್ಣಗಳನ್ನು ಲೇಪಿಸಬೇಕು. ನೆರಳು ಭಾಗಕ್ಕೆ ದಟ್ಟವಾಗಿಯೂ, ಬೆಳಕಿನ ಭಾಗಕ್ಕೆ ಪ್ರಕಾಶಮಾನವಾದ ತೆಳುವರ್ಣವನ್ನು ಲೇಪಿಸಬೇಕು " ಎಂದು ವರ್ಣಲೇಪನದ ಕುರಿತಾಗಿ ಹೇಳುತ್ತದೆ.

**೪) ವರ್ತನ ಕ್ರಮ :** ' ವರ್ತನ ' ಎಂಬುದು ಸಂಸ್ಕೃತದ ಪದವಾಗಿದ್ದು ' ವರ್ತನ ಕ್ರಮ ' ಎಂದರೆ ವರ್ತಿಸುವ ರೀತಿ ಎಂದಾಗುವದು. ಅಂದರೆ ಇಲ್ಲಿ ವರ್ಣವು ವರ್ತಿಸುವ ಕ್ರಮ ಅಥವಾ ರೀತಿ ಎಂದು ಅರ್ಥೈಸಬೇಕಾಗುವುದು. ಒಂದೇ

---

೬೪. ಸ್ಟೆಲ್ಲಾ ಕ್ರಾಮ್ರಿಷ್ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಅಧ್ಯಾಯ ೪೦, ಶ್ಲೋಕ ೨೪

೬೫. Manamohan Ghosh (Ed.) : The Natya Sastra, Vol. I, Page - 312

೬೬. ಜಿ. ಕೆ. ಶ್ರೀಗೊಂಡಕರ (ಸಂ.) : ಮಾನಸೋಲ್ಲಾಸ, ಭಾಗ II, ಅಧ್ಯಾಯ I, ಶ್ಲೋಕ ೧೫೩ - ೧೫೫

೬೭. –ಅದೇ– ಶ್ಲೋಕ ೧೬೮ - ೧೭೦

೬೮. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೧೧೧ - ೧೧೫

ವರ್ಣವು ದಪ್ಪವಾಗಿ (ದಟ್ಟವಾಗಿ) ಲೇಪಿಸಿದಾಗ ಒಂದು ರೀತಿ, ತೆಳುವಾಗಿ ಲೇಪಿಸಿದಾಗ ಇನ್ನೊಂದು ರೀತಿಯ ವರ್ಣ ಛಾಯೆಯಿಂದ ಕಂಡುಬರುವುದು. ಒಂದು ವರ್ಣ ಬೇರೆಯ ಇನ್ನೊಂದು ವರ್ಣದೊಂದಿಗೆ ಬೆರೆತಾಗ ಅವೆರಡರ ಮಿಶ್ರಣದಿಂದ ಮತ್ತೊಂದು ವರ್ಣಛಾಯೆ ಉಂಟಾಗುವುದು. ಒಂದು ವರ್ಣದ ಲೇಪನದ ಮೇಲೆ ಮತ್ತೊಂದು ವರ್ಣ ಲೇಪಿಸಿದಾಗ ಬೇರೆಯದೇ ಆದ ಹೊಳಪು ಕಂಡುಬರುವುದು. ಚಿತ್ರಕ್ಕೆ ನೆರಳು-ಬೆಳಕುಗಳನ್ನು ಕೊಡಲು ಆರಂಭಿಸಿದಾಗ, ಇಲ್ಲವೇ ವರ್ಣವೈವಿಧ್ಯತೆಯಿಂದ ಚಿತ್ರದ ಸೌಂದರ್ಯ ಹೆಚ್ಚಿಸುತ್ತ ಹೋದಂತೆ ವರ್ಣಕ್ಕೆ ಕಪ್ಪು-ಬಿಳುಪುಗಳನ್ನು ಸೇರಿಸಿ ವರ್ಣಗಳನ್ನು ದಟ್ಟ ಇಲ್ಲವೇ ತೆಳು ಮಾಡುತ್ತ ಸಾಗಬೇಕಾಗುವುದು. ಕೆಲವು ಸಲ ಒಂದು ವರ್ಣದ ತೆಳು ಛಾಯೆಯ ಮೇಲೆ ಮತ್ತೊಂದು ವರ್ಣದ ದಟ್ಟ ವರ್ಣವನ್ನು ಲೇಪಿಸಬೇಕಾಗಬಹುದು. ಹೀಗೆ ಆಯಾ ಸಂದರ್ಭಗಳಿಗನುಸಾರವಾಗಿ ಆಯಾ ವರ್ಣಗಳು ವರ್ತಿಸುವ ಗುಣ ತಿಳಿದುಕೊಂಡು ಕಲಾವಿದನು ಚಿತ್ರ ರಚಿಸಬೇಕಾಗುವುದು. ಒಂದು ವರ್ಣಕ್ಕೆ ಬಿಳಿವರ್ಣ ಸೇರಿಸಿದಾಗ ಅದರ ವರ್ತನೆ (ಗುಣ), ಕಪ್ಪು ಸೇರಿಸಿದಾಗ, ಹೀಗೆ ವಿವಿಧ ಸಂದರ್ಭಗಳಲ್ಲಿ ವರ್ಣವು ವರ್ತಿಸುವ ಗುಣವನ್ನು ತಿಳಿದುಕೊಂಡಿರಬೇಕಾದುದು ಹೆಚ್ಚು ಮಹತ್ವದ್ದಾಗಿದೆ. ಅದಕ್ಕಗಿಯೇ ಈ ಹಂತವನ್ನು ವರ್ತನ ಕ್ರಮ ಎಂದು ಕರೆಯಲಾಗಿದೆ ಎನಿಸುತ್ತದೆ.

ವರ್ತನ ಕ್ರಮ ಎಂಬುದನ್ನು ಪ್ರಿಯಬಾಲಾ ಶಹಾ ಅವರು[೯] ' ಲೇಪ ವಿಶೇಷ ' ಎಂದು ಅರ್ಥೈಯಿಸಿದ್ದಾರೆ. ಅಂದರೆ ಒಂದು ರೀತಿಯ ' ವಿಶೇಷ ವರ್ಣಲೇಪನ ವಿಧಾನ ' ಎಂಬುದು ಅವರ ಅನಿಸಿಕೆಯಾಗಿದೆ. ಆನಂದ ಕುಮಾರಸ್ವಾಮಿಯವರು[೨೦] ಈ ವರ್ತನ ಕರ್ಮವು ಚಿತ್ರಕ್ಕೆ ನೆರಳು ಅಥವಾ ವರ್ಣ ದಟ್ಟತೆಯನ್ನು ಹೆಚ್ಚಿಸುವದಾಗಿದೆ ಎನ್ನುತ್ತಾರೆ. ಬೆಳಕಿನ ಕಡೆಗೆ ಮುಖ ಮಾಡಿರುವ ಚಿತ್ರದ ಭಾಗವನ್ನು ಪ್ರಕಾಶಮಾನವಾಗಿ ನೆರಳಿನ ಭಾಗವನ್ನು ದಟ್ಟತೆಯಿಂದ ಕೂಡಿದ ಕಪ್ಪು ಮಿಶ್ರಿತ ಭಾಗವಾಗಿ ಚಿತ್ರಿಸುವ ನಾವೀಗ ಅನುಸರಿಸುತ್ತಿರುವ ಸಾಮಾನ್ಯ ವಿಧಾನ ಇದಾಗಿರದೇ, ಚಿತ್ರಕ್ಕೆ ಮತ್ತು ಇಡೀ ಸಂಯೋಜನೆಗೆ ಹೊಂದಿಕೆಯಾಗುವಂತೆ ಆಯ್ದ ಸ್ಥಳಗಳಲ್ಲಿ ನೆರಳು ಮತ್ತು ವರ್ಣದ ದಟ್ಟತೆಯನ್ನು ಹೆಚ್ಚಿಸುವ ಕ್ರಮ ಇದಾಗಿದೆ ಎಂದು ಅವರು ಅಭಿಪ್ರಾಯ ಪಡುತ್ತಾರೆ.

ಭಾರತೀಯ ಪ್ರಾಚೀನ ಚಿತ್ರಗಳನ್ನು ನೋಡಿದಾಗ ಹೆಚ್ಚಿನ ಕೃತಿಗಳಲ್ಲಿ ಕಲಾವಿದರು ನೆರಳು-ಬೆಳಕು ತೋರಿಸುವ ವಿಧಾನವನ್ನು (Shading) ಅನುಸರಿಸಿದ್ದು, ಚಿತ್ರದ ಉದ್ದ-ಅಗಲಗಳನ್ನು ತೋರಿಸಲು ಮಾತ್ರವೇ ಆಗಿದೆ. ಆಳದ ಕಲ್ಪನೆ ಬರುವಂತೆ ಚಿತ್ರದ ದುಂಡುತನವನ್ನು ತೋರಿಸಿಲ್ಲ. ಈ ವರ್ತನ ಕ್ರಮ ಎಂಬ ಹಂತದಲ್ಲಿ ಕಲಾವಿದನಾದವನು ವರ್ಣಗಳ ಗುಣಧರ್ಮವನ್ನು ಸರಿಯಾಗಿ ತಿಳಿದುಕೊಂಡು ಚಿತ್ರದಲ್ಲಿ ದಟ್ಟತೆ ಮತ್ತು ಪ್ರಕಾಶಗಳಂತಹ ತಂತ್ರಗಳನ್ನು ರೂಪಿಸಬೇಕಾಗುವುದು. ಕಲಾವಿದನು ಚಿತ್ರದ ಉನ್ನತ ಭಾಗ ಹಾಗೂ ನಿಮ್ನ ಭಾಗಗಳನ್ನು ವರ್ಣದಿಂದಲೇ ಚಿತ್ರಿಸುವ ಸಾಮರ್ಥ್ಯ ಪಡೆದಿರಬೇಕೆಂದು ವಿಷ್ಣುಧರ್ಮೋತ್ತರದ ಶ್ಲೋಕ ಹೇಳುತ್ತದೆ.

ನಿಮ್ನೋನ್ನತ ವಿಭಾಗಮ್ ಕಾಯ ಕರೋತಿ ಸ ಚಿತ್ರವಿತ್ ॥

ಅನೇಕ ಪ್ರಾಚೀನ ಕೃತಿಗಳಲ್ಲದೇ ಕೆಲವು ಶಿಲ್ಪಶಾಸ್ತ್ರಗಳೂ ಚಿತ್ರಕ್ಕೆ ನೆರಳು-ಬೆಳಕು ತೋರಿಸುವ (Shading) 'ವರ್ತನ ಕ್ರಮ' ಎಂಬ ಈ ಹಂತದ ಬಗ್ಗೆ ಚರ್ಚಿಸಿವೆ.

---

೯. ಪ್ರಿಯಬಾಲಾ ಶಹಾ (ಸಂ.) : ವಿಷ್ಣುಧರ್ಮೋತ್ತರ ಪುರಾಣ, ಭಾಗ III, ಪುಟ ೧೨೭

೨೦. A. K. Coomaraswamy : Vishnudharmottara, Page - 18

ವಿಷ್ಣುಧರ್ಮೋತ್ತರವು [೨೧] ಚಿತ್ರಕ್ಕೆ ೩ ರೀತಿಯ ಶೇಡಿಂಗ್ ಮಾಡುವುದನ್ನು ಹೇಳಿದೆ. ಅವುಗಳು ಹೀಗಿವೆ – ೧) ಪತ್ರ ವರ್ತನ ೨) ಹೈರಿಕ ವರ್ತನ ೩) ಬಿಂದು ವರ್ತನ. ಮೊದಲನೆಯದಾದ ಪತ್ರ ವರ್ತನ ವಿಧಾನದಲ್ಲಿ ರೇಖೆಗಳನ್ನು ಕತ್ತರಿಯಾಗಿ ಒಂದರ ಮೇಲೊಂದು ಎಳೆದು ಎಲೆಯ ಆಕಾರದ ಮೈವಳಿಕೆ ಉಂಟುಮಾಡುವದಾಗಿದೆ. ಎರಡನೆಯದಾದ ಹೈರಿಕ ವರ್ತನವು ನೇರವಾದ ಉದ್ದ ರೇಖೆಗಳನ್ನು ಮಾತ್ರ ಒಂದರ ಪಕ್ಕ ಒಂದನ್ನು ಎಳೆದು ನೆರಳು ತೋರಿಸುವ ಕ್ರಮವಾಗಿದೆ. ಮೂರನೆಯದಾದ ಬಿಂದು ವರ್ತನದಲ್ಲಿ ವರ್ಣಚುಕ್ಕೆ (ಬಿಂದು) ಗಳನ್ನು ಒಂದರ ಪಕ್ಕ ಒಂದು ಇರಿಸಿ ಚಿತ್ರ ರಚಿಸುವ ಕ್ರಮವಾಗಿದೆ.

ಆನಂದ ಕುಮಾರಸ್ವಾಮಿಯವರು [೨೨] ಈ ಮೂರು ವಿಧಾನಗಳನ್ನು ಹೀಗೆ ಅರ್ಥಯಿಸಿದ್ದಾರೆ. ಮೊದಲನೆಯ ಪತ್ರ ವರ್ತನವು ಕತ್ತರಿ ರೇಖೆಗಳಿಂದ ಎಲೆಯ ಆಕಾರದ ಮೈವಳಿಕೆ ಮಾಡುವದಾಗಿದ್ದರೆ, ಎರಡನೆಯದಾದ ಹೈರಿಕ ವರ್ತನವು ಸೂಕ್ಷ್ಮವಾದ ಮೇಲ್ಮುಖ ಚಲನೆ ತೋರಿಸುವ ರೇಖೆಗಳಿಂದ ಮಾಡಲಾದ ವಿನ್ಯಾಸ ಆಗಿದೆ. ಮೂರನೆಯದಾದ ಬಿಂದುಜವು ಯೋಗ್ಯವಾದ ಕುಂಚದಿಂದ ವರ್ಣ ಚುಕ್ಕೆಗಳನ್ನು ಇಡುವದಾಗಿದೆ. ಈ ಮೂರೂ ವಿಧಾನದಲ್ಲಿ ಹೈರಿಕ ವರ್ತನ ಕ್ರಮವನ್ನು ಪ್ರಿಯಬಾಲಾ ಶಹಾ [೨೩] ಅವರು ತೆಳುವಾದ ಪಟ್ಟಿಯಿಂದ ವರ್ಣ ಲೇಪಿಸುವ ವಿಧಾನವಾಗಿದೆ ಎಂದು ಹೇಳುತ್ತಾರೆ. ಯಾಕೆಂದರೆ ಈ ಹಿಂದಿನ ವರ್ಣಲೇಪನ (ವರ್ಣಕರ್ಮ) ಎಂಬ ಹಂತದಲ್ಲಿ ಲೇಪಿಸಿದ ವರ್ಣವು ಚಿತ್ರಕ್ಕೆ ಯೋಗ್ಯವಾಗಿರದೇ ಅತೀ ಹೊಳಪು ಇಲ್ಲವೇ ಅತೀ ಮಬ್ಬಾಗಿದ್ದಾಗ ಹೀಗೆ ತೆಳುವಾದ ಪಟ್ಟಿಯಿಂದ ಮತ್ತೆ ವರ್ಣ ತೆಗೆದುಕೊಂಡು ಮಸುಕಾದ ಭಾಗವನ್ನು ಪ್ರಕಾಶಮಾನವಾಗಿ, ಮತ್ತು ಅವಶ್ಯಕತೆಗಿಂತ ಹೆಚ್ಚಾದ ಪ್ರಕಾಶ ಭಾಗವನ್ನು ಮಸುಕಾಗಿ ಮಾಡಲು ಅನುಕೂಲವಾಗುತ್ತದೆ ಎಂಬುದು ಅವರ ಅಭಿಪ್ರಾಯವಾಗಿದೆ. 'ವರ್ತನ ಕ್ರಮ' ಮತ್ತು ವಿವಿಧ ರೀತಿಯ ನೆರಳು-ಬೆಳಕು (Shading) ರಚಿಸುವ ವಿಧಾನಗಳು ವಿಷ್ಣುಧರ್ಮೋತ್ತರದಲ್ಲಿ ಹೇಳಿದಂತೆ ಮಾನಸೋಲ್ಲಾಸ ಮತ್ತು ಶಿಲ್ಪರತ್ನ ಗ್ರಂಥಗಳಲ್ಲಿ ಹೇಳಿಲ್ಲ. ಆದರೆ ಚಿತ್ರವು ದುಂಡುತನದಿಂದ ಕೂಡಿರುವಂತೆ ರೂಪಿಸಬೇಕೆಂದೂ, ಮತ್ತು ವರ್ಣದ ದಟ್ಟ ಛಾಯೆ, ತೆಳು ಛಾಯೆಗಳನ್ನು ಚಿತ್ರಕ್ಕೆ ಅಳವಡಿಸಬೇಕೆಂದು ಇವೆರಡೂ ಹೇಳುತ್ತವೆ.

ಮಾನಸೋಲ್ಲಾಸ ಗ್ರಂಥದಲ್ಲಿ [೨೪] ಈ ಕುರಿತು ಹೀಗೆ ಹೇಳಿದೆ. " ಚಿತ್ರಕ್ಕೆ ವರ್ಣಲೇಪನ ಹಂತ ಮುಗಿದ ನಂತರ ವರ್ತನ ಕ್ರಮ ಎಂಬ ಈ ಹಂತದಲ್ಲಿ ದಟ್ಟವರ್ಣ ಮತ್ತು ತೆಳುವಾದ (ಪ್ರಕಾಶ) ವರ್ಣಗಳನ್ನು ಬಳಸುತ್ತ ಬರಬೇಕು. ಚಿತ್ರದಲ್ಲಿಯ ಪ್ರಕಾಶಮಾನವಾದ ಭಾಗಕ್ಕೆ ತೆಳುಛಾಯೆಯ ವರ್ಣಗಳನ್ನು ಮತ್ತು ನೆರಳಿನ ಭಾಗಕ್ಕೆ ದಟ್ಟವರ್ಣಗಳನ್ನು ತುಂಬುತ್ತ ಬರಬೇಕು ಎಂದು ಹೇಳುತ್ತದೆ. ಅದು ಮುಂದುವರಿದು ಹೇಳುತ್ತ ಚಿತ್ರವು ಒಂದೇ ವರ್ಣದ ಛಾಯೆಯಿಂದ (Monochrome) ಪೂರ್ತಿಗೊಳಿಸುವುದಾಗಿದ್ದರೆ ಬೆಳಕಿನ ಭಾಗಕ್ಕೆ ಅದೇ ವರ್ಣಕ್ಕೆ ಬಿಳಿಯ ವರ್ಣ ಬೆರೆಸಿ ಲೇಪಿಸುತ್ತ ಸಾಗಬೇಕು. ನೆರಳಿನ ಭಾಗಕ್ಕೆ ಅದೇ ವರ್ಣಕ್ಕೆ ಕಪ್ಪು ವರ್ಣ ಬೆರಸಸಿ ಲೇಪಿಸಬೇಕು ಇಲ್ಲವೇ ಆ ವರ್ಣದ ದಟ್ಟತೆಯನ್ನು ಹೆಚ್ಚಿಸುತ್ತ ಸಾಗಬೇಕು " ಎನ್ನುತ್ತದೆ.

ಶಿಲ್ಪರತ್ನ ಗ್ರಂಥವು [೨೫] ಚಿತ್ರಕ್ಕೆ ಲೇಪಿಸಿದ ವರ್ಣವು ಪ್ರಖರವಾಗಿದ್ದಾಗ ಅದನ್ನು ಕಣ್ಣಿಗೆ ತಂಪಾಗುವಂತೆ ತೆಳು ಛಾಯೆಯ ವರ್ಣವಾಗಿ ಮಾಡಬೇಕೆಂದು ಹೇಳುತ್ತದೆ. ಇದಕ್ಕಾಗಿ ಸ್ವಚ್ಛವಾದ ಚಪ್ಪಟೆ (Flat brush) ಕುಂಚ

---

೨೧. ಸ್ಟೆಲ್ಲಾ ಕ್ರಾಮ್ರಿಷ್ (ಸಂ.) : ವಿಷ್ಣುಧರ್ಮೋತ್ತರ, ಭಾಗ III, ಪುಟ - ೫೨
೨೨. A. K. Coomaraswamy : Vishnudharmottara, Part III, Page - 13
೨೩. ಪ್ರಿಯ ಬಾಲಾಶಹಾ (ಸಂ.) : ವಿಷ್ಣುಧರ್ಮೋತ್ತರ ಪುರಾಣ, ಭಾಗ III, ಪುಟ ೨೮
೨೪. ಜಿ. ಕೆ. ಶ್ರೀಗೊಂಡಕರ (ಸಂ.) : ಮಾನಸೋಲ್ಲಾಸ, ಭಾಗ II, ಅಧ್ಯಾಯ I, ಶ್ಲೋಕ ೧೫೩ - ೧೫೪
೨೫. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ, ಭಾಗ I, ಅಧ್ಯಾಯ ೪೬, ಶ್ಲೋಕ ೧೧೨ - ೧೩

ತೆಗೆದುಕೊಂಡು ಚಿತ್ರದಲ್ಲಿಯ ಪ್ರಖರವಾದ ಭಾಗಕ್ಕೆ ತಂಪು ವರ್ಣಗಳನ್ನು ಈ ಕುಂಚದಿಂದ ಲೇಪಿಸಿ ಚಿತ್ರದಲ್ಲಿ ಮೃದುತನವನ್ನು ತರಬೇಕು. ಹೀಗೆ ಚಿತ್ರವು ಪ್ರಖರವಾಗಿರದೇ ತಂಪಾಗಿ ಮೃದುತನದಿಂದ ಕೂಡಿದಂತೆ ಕಂಡರೆ ನೋಡಲು ಸುಂದರ ಚಿತ್ರವೆನಿಸುತ್ತದೆ ಎನ್ನುತ್ತದೆ.

೫. **ಲೇಖನ ಕರ್ಮ :** ಇದು ಭಿತ್ತಿಚಿತ್ರ ರಚನೆಯಲ್ಲಿ ಐದನೆಯ ಹಂತವಾಗಿದ್ದು ಚಿತ್ರಕ್ಕೆ ಕೊನೆಯ ಹೊರರೇಖೆ ಎಳೆಯುವದಾಗಿದೆ (Final outline). ಇದು ಕೂಡಾ ರೇಖೆಯನ್ನು ಎಳೆಯುವ ಹಂತವಾಗಿರುವದರಿಂದ, ಅಲ್ಲದೇ ಚಿತ್ರಕ್ಕೆ ಮುಕ್ತಾಯದ ರೇಖೆಗಳನ್ನು ಎಳೆಯುವದರಿಂದ. ಆ ರೇಖೆಗಳೇ ಚಿತ್ರದ ಗುಣಮಟ್ಟವನ್ನು ನಿರ್ಧರಿಸುವದರಿಂದ ಕಲಾವಿದನು ಇಲ್ಲಿ ಹೆಚ್ಚು ಎಚ್ಚರಿಕೆ ವಹಿಸಬೇಕಾಗುವುದು. ರೇಖೆಯು ಭಾರತೀಯ ಚಿತ್ರಕಲೆಯ ಅದರಲ್ಲೂ ಭಿತ್ತಿಚಿತ್ರಕಲೆಯ ಒಂದು ಮಹೋನ್ನತ ಅಂಶವೆಂದರೂ ತಪ್ಪಾಗಲಾರದು. ಭಿತ್ತಿಚಿತ್ರಗಳ ರಚನೆಯನ್ನು ರೇಖೆಗಳಿಂದ ಪ್ರಾರಂಭಿಸಿ ಕೊನೆಗೆ ಚಿತ್ರದ ಮುಕ್ತಾಯವನ್ನೂ ಚಿತ್ರಗಳಿಗೆ ಹೊರರೇಖೆ ಎಳೆಯುವ ಮೂಲಕವೇ ಮಾಡಲಾಗುತ್ತಿತ್ತು. ಭಾರತೀಯ ಚಿತ್ರಕಲೆಯಲ್ಲಿನ ರೇಖೆಯ ಮಹತ್ವ ಕಂಡೇ ಅನೇಕ ವಿದ್ವಾಂಸರು ' ರೇಖೆಯು ಭಾರತೀಯ ಚಿತ್ರಕಲೆಯ ಆತ್ಮ ' ಎಂದು ಹೇಳಿರುವರು.

ಚಿತ್ರದ ಮುಕ್ತಾಯಕ್ಕೆ ಹೊರರೇಖೆ ಎಳೆಯುವ ಈ ಕ್ರಮವನ್ನು ಮಾನಸೋಲ್ಲಾಸ ಗ್ರಂಥದಲ್ಲಿ [೨೬] " ಪ್ರಾಥಮಿಕ ಹಂತದ ಚಿತ್ರಣ ಮುಗಿದ ನಂತರ ವರ್ಣಲೇಪನ ಮಾಡಿ. ನೆರಳು-ಬೆಳಕು (Shading) ಅಳವಡಿಸಿ ಆಮೇಲೆ ಚಿತ್ರಕ್ಕೆ ಕಪ್ಪು ವರ್ಣದ ಹೊರರೇಖೆ ಎಳೆಯಬೇಕು. ಈ ಕಪ್ಪು ಹೊರರೇಖೆಯ ಪ್ರಖರತೆಯನ್ನು ಕಡಿಮೆ ಮಾಡಲು ಮತ್ತೆ ಕೆಂಪು ವರ್ಣದ ರೇಖೆಯನ್ನು ಅದರ ಮೇಲೆಯೇ ಎಳೆಯಬೇಕು " ಎಂದಿದೆ. ಶಿಲ್ಪರತ್ನ ಗ್ರಂಥವು [೨೭] ಚಿತ್ರದ ಕೊನೆಗೆ ಎಳೆಯುವ ಹೊರರೇಖೆಯನ್ನು ಕಪ್ಪು ವರ್ಣದಿಂದ ಎಳೆಯಬೇಕೆಂದು ತಿಳಿಸುತ್ತದೆ. ಮಾನಸೋಲ್ಲಾಸ ಗ್ರಂಥದ ಹಾಗೆ ಕಪ್ಪು ವರ್ಣದ ನಂತರ ಇನ್ನಾವುದೇ ವರ್ಣದ ರೇಖೆಯನ್ನು ಎಳೆಯಲು ಇದು ತಿಳಿಸುವದಿಲ್ಲ.

ವಿಷ್ಣುಧರ್ಮೋತ್ತರವು [೨೮] ಚಿತ್ರಕ್ಕೆ ಹೊರರೇಖೆ ಎಳೆಯುವ ಕುರಿತಂತೆ ಮಾನಸೋಲ್ಲಾಸ ಮತ್ತು ಶಿಲ್ಪರತ್ನ ಗ್ರಂಥಗಳಿಗಿಂತಲೂ ಹೆಚ್ಚು ಮಹತ್ವಪೂರ್ಣ ಅಂಶ ಹೇಳುತ್ತದೆ. ಮಾನಸೋಲ್ಲಾಸ ಮತ್ತು ಶಿಲ್ಪರತ್ನ ಗ್ರಂಥಗಳ ಹಾಗೆ ಚಿತ್ರ ಹೊರರೇಖೆ ಎಳೆಯಲು ಯಾವುದೇ ಒಂದು ವರ್ಣ ಇಲ್ಲವೇ ಕಪ್ಪು ವರ್ಣವನ್ನೇ ಉಪಯೋಗಿಸಬೇಕೆಂದು ಈ ಗ್ರಂಥದಲ್ಲಿ ಕಡ್ಡಾಯವಾಗಿ ಹೇಳಿಲ್ಲ. ಬದಲಾಗಿ ಚಿತ್ರಕ್ಕೆ ಯಾವುದೇ ವರ್ಣದ ಹೊರರೇಖೆ ಎಳೆಯಲು ವಿಷ್ಣುಧರ್ಮೋತ್ತರದಲ್ಲಿ ಕಲಾವಿದನಿಗೆ ಸಂಪೂರ್ಣ ಸ್ವಾತಂತ್ರ್ಯ ಕೊಡಲಾಗಿದೆ. ಇಲ್ಲಿ ಕಲಾವಿದ ಚಿತ್ರಕ್ಕೆ ಯೋಗ್ಯವೆನಿಸುವಂತೆ. ಚಿತ್ರದ ಔಚಿತ್ಯಕ್ಕೆ ಧಕ್ಕೆ ಬಾರದಂತೆ. ಕಣ್ಣಿಗೆ ಅತೀ ಪ್ರಖರವಾಗಿ ಕಾಣದಂತೆ, ಮೃದು ವರ್ಣದಿಂದ ಚಿತ್ರದ ಹೊರರೇಖೆ ಎಳೆಯಬೇಕು ಎಂದು ಹೇಳಿದೆಯಲ್ಲದೇ, ಹೊರರೇಖೆ ಎಳೆಯಲು ಕಲಾವಿದ ಯಾವುದೇ ವರ್ಣವನ್ನಾದರೂ ಉಪಯೋಗಿಸಬಹುದು. ಅದು ಕಲಾವಿದನ ಆ ಸಂದರ್ಭದ ಮನೋಭಾವವನ್ನು ಅವಲಂಬಿಸಿರುವದು ಎನ್ನುತ್ತದಲ್ಲದೇ ಕಲಾವಿದನಾದವನು ಹೊರರೇಖೆ ಎಳೆಯಲು ಯಾವುದೇ ವರ್ಣ ಉಪಯೋಗಿಸುವ ಪೂರ್ವದಲ್ಲಿ ಚಿತ್ರಕ್ಕೆ ಅದು ಹೊಂದಾಣಿಕೆಯಾಗುವುದೋ ಇಲ್ಲವೋ ಎಂದು ಸಾರಸಾರ ವಿಚಾರಮಾಡಿ ಮುಂದುವರಿಯಬೇಕು ಎಂದೂ ಹೇಳಲಾಗಿದೆ.

---

೨೬. ಜಿ. ಕೆ. ಶ್ರೀಗೊಂಡೇಕರ (ಸಂ.) : ಮಾನಸೋಲ್ಲಾಸ. ಭಾಗ II. ಅಧ್ಯಾಯ I. ಶ್ಲೋಕ ೧೨೮ - ೨೯
೨೭. ಗಣಪತಿ ಟಿ. ಶಾಸ್ತ್ರಿ (ಸಂ.) : ಶಿಲ್ಪರತ್ನ. ಭಾಗ I. ಅಧ್ಯಾಯ ೪೬. ಶ್ಲೋಕ ೧೧೫
೨೮. ಸ್ಟೆಲ್ಲಾ ಕ್ರಾಮ್ರಿಷ್ (ಸಂ.) : ವಿಷ್ಣುಧರ್ಮೋತ್ತರ. ಭಾಗ III. ಅಧ್ಯಾಯ ೪೧. ಶ್ಲೋಕ ೧೫

ಭಿತ್ತಿಚಿತ್ರಕ್ಕೆ ಹೊರರೇಖೆ ಎಳೆಯುವ ಹಂತವು ಅತೀ ಮಹತ್ವದ ಹಂತವಾಗಿದೆ. ಪ್ರಾಥಮಿಕ ಹಂತದ ಇದ್ದಿಲು, ಮತ್ತು ಕುಂಚದ ವರ್ಣರೇಖೆಗಳ ಚಿತ್ರರಚನೆ ಮುಗಿದ ನಂತರ ವರ್ಣಲೇಪನ ಮಾಡಿದಾಗ ಅನೇಕ ಕಡೆಗೆ ಚಿತ್ರದ ರೇಖೆಗಳು ಮುಚ್ಚಿಹೋಗಿರುತ್ತವೆ. ಲೇಪಿಸಿದ ವರ್ಣವು ಕೆಲವು ಸಾರಿ ಚಿತ್ರದ ಮಿತಿಯನ್ನು ದಾಟಿ ಹೊರ ಹೋಗಿರುತ್ತದೆ. ಅಲ್ಲದೇ ಚಿತ್ರಕ್ಕೆ ನೆರಳು-ಬೆಳಕು (Shading) ಅಳವಡಿಸಿದಾಗಲೂ ಚಿತ್ರದ ರೂಪಗಳು ವ್ಯತ್ಯಸ್ಥಗೊಂಡಿರುತ್ತವೆ. ಈ ಹಂತದಲ್ಲಿ ಚಿತ್ರಕ್ಕೆ ಕೊನೆಯ ಹೊರರೇಖೆ ಎಳೆದು ಚಿತ್ರಗಳಿಗೆ ನಿಶ್ಚಿತ ರೂಪ ಕೊಡುವದಾಗಿದೆ. ಅಜಂತಾ ಭಿತ್ತಿಚಿತ್ರಗಳಲ್ಲಿ ಚಿತ್ರದ ಹೊರರೇಖೆಗಳನ್ನು ಕಂದು ವರ್ಣದಿಂದ ಎಳೆಯಲಾಗಿದೆ. ಬಾದಾಮಿಯಲ್ಲಿನ ಚಿತ್ರಗಳಲ್ಲೂ ಕಂದು ಹೊರರೇಖೆ ಕಾಣಬಹುದು. ಬಾದಾಮಿಯಲ್ಲಿನ ಚಿತ್ರಗಳಲ್ಲಿ ಮೊದಲು ಕಪ್ಪುವರ್ಣದ ಹೊರರೇಖೆ ಎಳೆದು ನಂತರ ಅದರ ಮೇಲೆ ಕಂದುಗೆಂಪು ವರ್ಣದ ರೇಖೆ ಎಳೆಯಲಾಗಿದೆ. ಗುಳೇದಗುಡ್ಡದ ಹೊಸಮನಿಗೌಡರ ಮನೆಯ ಭಿತ್ತಿಚಿತ್ರಗಳಲ್ಲಿ ಕಪ್ಪುಕೆಂಪು ಮಿಶ್ರಿತ ಹೊರರೇಖೆಗಳಿದ್ದರೆ. ರಾಯಚೂರಿನ ಖಾಜಿನಗೌಡರ ಮನೆಯ ಭಿತ್ತಿಚಿತ್ರಗಳಿಗೆ ಕೆಂಪುವರ್ಣದ ರೇಖೆಯ ಮೇಲೆ ಕಪ್ಪು ಹೊರರೇಖೆಗಳನ್ನೂ ಎಳೆಯಲಾಗಿದೆ.

**೬. ದ್ವಿಕ ಕರ್ಮ :** ಇದು ಭಿತ್ತಿಚಿತ್ರ ರಚನೆಯಲ್ಲಿ ೬ ನೆಯದಾದ ಮತ್ತು ಕೊನೆಯ ಹಂತವಾಗಿದೆ. ಇದನ್ನು ಕೊನೆಯ ಲೇಪನ ಅಥವಾ ಮುಕ್ತಾಯದ ಲೇಪನ (Finishing Touches) ದ ಹಂತವೆಂದೂ ಗುರುತಿಸಬಹುದು. ಶಿಲ್ಪಶಾಸ್ತ್ರಗಳಲ್ಲಿ ಹೇಳಲಾದ ' ದ್ವಿಕ ಕರ್ಮ ' ಎಂಬುದನ್ನು ಜಯಂತ ಚಕ್ರವರ್ತಿಯವರು ಯಾವುದನ್ನೇ ಆಗಲಿ ಮತ್ತೊಮ್ಮೆ ಮಾಡುವುದು, ಅಥವಾ ಯಾವುದನ್ನೇ ಆಗಲಿ ಎರಡನೆಯ ಬಾರಿ ಮಾಡುವದಾಗಿದೆ ಎಂದು ಅರ್ಥಯಿಸಿದ್ದಾರೆ.[೭೯] ಭಿತ್ತಿಚಿತ್ರ ರಚನೆಯಲ್ಲಿ ಚಿತ್ರ ಮುಕ್ತಾಯಕ್ಕೆ ಮೊದಲು ಮತ್ತೊಮ್ಮೆ ಅವಶ್ಯವಿದ್ದಲ್ಲಿ ವರ್ಣ ಲೇಪಿಸುವ ಹಂತವಿದಾಗಿದೆ. ಅಂದರೆ ಚಿತ್ರಕ್ಕೆ ಮುಕ್ತಾಯದ ಹೊರರೇಖೆ ಎಳೆದ ನಂತರ ಕಲಾವಿದನು ಮತ್ತೊಮ್ಮೆ ಇಡೀ ಚಿತ್ರವನ್ನು ವೀಕ್ಷಿಸಿ, ಅವಶ್ಯ ಕಂಡುಬಂದಲ್ಲಿ ಹೆಚ್ಚಿನ ಪ್ರಕಾಶ (High light) ಮತ್ತು ದಟ್ಟತೆ (Depth) ಯನ್ನು ಚಿತ್ರಕ್ಕೆ ಕೊಡಬೇಕಾಗುವುದು. ಅಲ್ಲದೇ ಚಿತ್ರದ ಹೊರರೇಖೆಗಳನ್ನು ಚೆನ್ನಾಗಿ ವೀಕ್ಷಿಸಿ ಮಸುಕಾದಲ್ಲಿ ಮತ್ತೊಮ್ಮೆ ಹೊರರೇಖೆಯನ್ನೂ ಈ ಹಂತದಲ್ಲಿ ಎಳೆದು ಚಿತ್ರ ಪೂರ್ತಿಗೊಳಿಸಬೇಕಾಗುತ್ತಿತ್ತು.

ಈ ಹಿಂದಿನ ಹಂತದಲ್ಲಿ ಚಿತ್ರಕ್ಕೆ ಎಳೆಯಲಾದ ಕೊನೆಯ ಹೊರರೇಖೆ (Final outline) ಯ ಕಪ್ಪು ಮತ್ತು ದಟ್ಟತೆಯನ್ನು ಕಡಿಮೆ ಮಾಡಲು ಅದರ ಮೇಲೆ ಇಲ್ಲವೇ ಅದಕ್ಕೆ ತಾಗಿಕೊಂಡಂತೆ ಇನ್ನೊಂದು ತೆಳು ವರ್ಣದ ಹೊರರೇಖೆ ಎಳೆಯಲಾಗುವದೆಂದು ಈ ಹಿಂದೆ ಹೇಳಿದೆಯಷ್ಟೇ. ಹೀಗೆ ಎಳೆಯುವ ತೆಳುವರ್ಣದ ಹೊರರೇಖೆಯೂ ದ್ವಿಕ ಕರ್ಮ (Finishing Touches) ಹಂತದಲ್ಲೇ ಒಳಗೊಳ್ಳುತ್ತದೆ. ಚಿತ್ರ ರಚನೆಯಲ್ಲಿ ಕೊನೆಯದಾದ ದ್ವಿಕ ಕರ್ಮದಲ್ಲಿ ಅತೀ ಪ್ರಕಾಶದ ಭಾಗ (High light) ಮತ್ತು ಅತೀ ದಟ್ಟತೆಯ ಭಾಗಗಳನ್ನು ಅನುಕ್ರಮವಾಗಿ ಬಿಳುಪಿನ ವರ್ಣದಿಂದ ಮತ್ತು ಗಾಢ ವರ್ಣದಿಂದ ಲೇಪಿಸಲಾಗುವುದು. ಭಾರತೀಯ ಚಿತ್ರಕಲೆಯಲ್ಲಿ ಪಾಶ್ಚಾತ್ಯ ಚಿತ್ರಕಲೆಯ ಹಾಗೆ ಅತೀ ಪ್ರಕಾಶದ ಭಾಗ (High light) ಗುರುತಿಸುವ ವಿಧಾನವಿರದೇ ಬೇರೆ ವಿಧಾನದಿಂದ ಭಾರತೀಯ ಭಿತ್ತಿಚಿತ್ರ ಕಲಾವಿದರು ಅತೀ ಪ್ರಕಾಶದ ಭಾಗವನ್ನು ಚಿತ್ರದಲ್ಲಿ ಅಳವಡಿಸುತ್ತಿದ್ದರು.

---

೭೯. Jayanth Chakravarthi : Techniques in Indian Mural Painting, Page - 92

ಪಾಶ್ಚಾತ್ಯ ಚಿತ್ರಗಳಲ್ಲಿ ಅತೀ ಪ್ರಕಾಶದ ಭಾಗವು ಚಿತ್ರಿತ ವಸ್ತುವಿನ ಯಾವುದೇ ಒಂದು ಭಾಗದಲ್ಲಿ ಕೇಂದ್ರೀಕೃತವಾಗಿರುವಂತೆ ಚಿತ್ರಿಸಲಾಗಿರುತ್ತದೆ. ಇದು ಬೆಳಕು ವಸ್ತುವಿನ ಮೇಲೆ ಬೀಳುವ ವೈಜ್ಞಾನಿಕ ಕ್ರಮವನ್ನು ಅನುಸರಿಸಿ ಚಿತ್ರಿಸಲಾಗಿರುತ್ತದೆ. ಅಂದರೆ ಒಂದು ವಸ್ತು ಬೆಳಕಿಗೆ ಒಡ್ಡಿಕೊಂಡಾಗ ಅದರ ಮೇಲೆ ಬೆಳಕು ಒಂದೇ ಪ್ರಮಾಣದಲ್ಲಿ ಬೀಳದೇ. ಬೆಳಕು ಮತ್ತು ಆ ವಸ್ತುವಿನ ಮಧ್ಯ ಉಂಟಾದ ವಿವಿಧ ಕೋನಗಳ ದೆಸೆಯಿಂದಾಗಿ ಹೆಚ್ಚು-ಕಡಿಮೆ ಪ್ರಮಾಣದಲ್ಲಿ ವಸ್ತುವಿನ ಮೇಲೆ ಬೀಳುವುದು. ಇದರಿಂದಾಗಿ ನೆರಳುಗಳಲ್ಲಿ ದಟ್ಟ ನೆರಳು, ಮಧ್ಯ ನೆರಳು, ತೆಳು ನೆರಳುಗಳುಂಟಾದಂತೆ. ಬೆಳಕಿನಲ್ಲಿ ಕೂಡಾ ಮಂದ ಪ್ರಕಾಶ (ಮಂದ ಬೆಳಕಿನ ಭಾಗ), ಬೆಳಕಿನ ಭಾಗ, ಮತ್ತು ಅತೀ ಬೆಳಕಿನ ಭಾಗ ಎಂದು ಪ್ರಭೇದಗಳುಂಟಾಗುತ್ತವೆ. ಈ ತತ್ವವನ್ನು ಅನುಸರಿಸಿಯೇ ಪಾಶ್ಚಾತ್ಯ ಕಲಾವಿದರು ಚಿತ್ರಕ್ಕೆ ಕೊನೆಯಲ್ಲಿ ಅತೀ ಪ್ರಕಾಶದ ಭಾಗ ಮತ್ತು ಅತೀ ದಟ್ಟತೆಯ ಭಾಗವನ್ನು ರಚಿಸುತ್ತಾರೆ.

ಭಾರತೀಯ ಚಿತ್ರಕಾರರು ಅತೀ ಪ್ರಕಾಶ (High lights) ಮತ್ತು ಅತೀ ದಟ್ಟತೆ (Depth) ಯನ್ನು ಚಿತ್ರದಲ್ಲಿ ತಮಗೆ ಬೇಕಾದಂತೆ ಅಥವಾ ತಮ್ಮ ಅನಿಸಿಕೆಯಂತೆ ಚಿತ್ರದ ಯಾವ ಭಾಗದಲ್ಲಿ ಬೇಕಾದರೂ ಚಿತ್ರಿಸುತ್ತಾರೆ. ಚಿತ್ರದ ಒಟ್ಟಂದಕ್ಕೆ ಪೂರಕವಾಗುವಂತೆ ಯಾವ ಭಾಗದಲ್ಲಿ ಬೇಕಾದರೂ ಅತೀ ಬೆಳಕು, ಅತೀ ನೆರಳು ಚಿತ್ರಿಸುತ್ತಾರೆ. ಇದಕ್ಕೆ ಪಾಶ್ಚಾತ್ಯರ ಹಾಗೆ ವೈಜ್ಞಾನಿಕ ವಿಧಾನ ಅನುಸರಿಸದೇ ಚಿತ್ರದ ಒಟ್ಟು ಸೌಂದರ್ಯ ಹೆಚ್ಚಿಸುವ ನಿಟ್ಟಿನಲ್ಲಿ ಭಾರತೀಯ ಕಲಾವಿದರು ಯೋಚಿಸುತ್ತಾರೆ. ಅತೀ ಬೆಳಕನ್ನು ಚಿತ್ರಕ್ಕೆ ಎಲ್ಲಿ ಕೊಟ್ಟರೆ ಚಿತ್ರದ ಸೌಂದರ್ಯ ಹೆಚ್ಚುವದೋ ಎಂಬುದನ್ನು ಆಯಾ ಸಂದರ್ಭಕ್ಕೆ ಯೋಜಿಸಿ ಕಾರ್ಯ ಪ್ರವೃತ್ತರಾಗುತ್ತಾರೆ. ಅದರಂತೆ ಅತೀ ಪ್ರಕಾಶ (Highlights) ವನ್ನು ಆಭರಣಕ್ಕೆ ಕೊಡಬಹುದು. ಇಲ್ಲವೆ ಮುಖ್ಯ ವ್ಯಕ್ತಿಯ ಚಿತ್ರವಾಗಿದ್ದರೆ ಮುಖವನ್ನು ಅತ್ಯಂತ ಪ್ರಕಾಶಮಾನವಾಗಿ ಚಿತ್ರಿಸಬಹುದು. ದೈವೀ ಸಂಬಂಧಿ ಚಿತ್ರವಾಗಿದ್ದರೆ ದೇವರ ಚಿತ್ರವನ್ನು ಮಾತ್ರ ಅತ್ಯಂತ ಪ್ರಕಾಶಮಾನವಾಗಿ ಚಿತ್ರಿಸಬಹುದು. ಹೀಗೆ ಯಾವ ವಸ್ತುವನ್ನು ಚಿತ್ರದಲ್ಲಿ ಮುಖ್ಯವಾಗಿ ತೋರಿಸಬೇಕೆಂದು ಕಲಾವಿದನಿಗೆ ಅನುಸುವದೋ ಆ ಭಾಗವನ್ನು ಅತ್ಯಂತ ಪ್ರಕಾಶಮಾನವಾಗಿ ತೋರಿಸಬಹುದು. ಇಲ್ಲವೇ ಚಿತ್ರ ಸಂಯೋಜನೆಯ ಒಟ್ಟು ಸೌಂದರ್ಯದ ದೃಷ್ಟಿಯಿಂದ ಎಲ್ಲಿ ಬೇಕಾದರೂ ಅತೀ ಪ್ರಕಾಶ ಭಾಗವನ್ನು ಗುರುತಿಸಬಹುದು. ಹೀಗೆಯೇ ಅತೀ ದಟ್ಟತೆಯ ಭಾಗವನ್ನೂ ಭಾರತೀಯ ಕಲಾವಿದ ಚಿತ್ರ ಸೌಂದರ್ಯದ ವರ್ಧನೆಗೆ ಸಹಾಯವಾಗುವಂತೆ ಯೋಚಿಸಿ ಯಾವುದೇ ಭಾಗದಲ್ಲಿ ರಚಿಸುತ್ತಿದ್ದನು. ಭಾರತೀಯ ಭಿತ್ತಿಚಿತ್ರಗಳನ್ನು ನೋಡಿದಾಗ ಈ ವಿಷಯ ಮನದಟ್ಟಾಗುವುದು.

ಉತ್ತರ ಕರ್ನಾಟಕದಲ್ಲಿ ರಚನೆಯಾದ ಭಿತ್ತಿಚಿತ್ರಕಲೆಯನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆ ನಾಲ್ಕುರೀತಿಯಲ್ಲಿ ವಿಂಗಡಿಸಿಕೊಂಡು ವಿಶ್ಲೇಷಿಸಬಹುದಾಗಿದೆ. **೧. ಪ್ರಾಗೈತಿಹಾಸಿಕ ಭಿತ್ತಿ ಚಿತ್ರಕಲೆ ೨. ಜನಪದ ಭಿತ್ತಿ ಚಿತ್ರಕಲೆ ೩. ಶಿಷ್ಟಪದ ಭಿತ್ತಿ ಚಿತ್ರಕಲೆ ೪. ಸಮ್ಮಿಶ್ರ ಭಿತ್ತಿಚಿತ್ರಕಲೆ**

## ೧. ಪ್ರಾಗೈತಿಹಾಸಿಕ ಭಿತ್ತಿ ಚಿತ್ರಕಲೆ

ಅತ್ಯಂತ ಹಿಂದೆ ಮಾನವ ಪ್ರಕೃತಿಯೊಡನೆ ಒಂದಾಗಿ ಬಾಳುತ್ತಿರುವಾಗ ಪ್ರಾಣಿಸದೃಶ ಜೀವನದಿಂದ ಬೇರ್ಪಡುವ ಹಂತದಲ್ಲಿ ವಿಕಸಿಸುತ್ತಿರುವ ಆತನ ಮನಸ್ಸು ನಿಸರ್ಗದಲ್ಲಿನ ಚಲುವಿನ ಕಡೆ ಹರಿಯಿತು. ನಿಸರ್ಗದ ವಿವಿಧರೂಪ. ಘಟನಾವಳಿಗಳಿಂದ ಪ್ರೇರಿತವಾದ ಆತನ ಮನಸ್ಸು ಅಭಿವ್ಯಕ್ತಿ ರೂಪದಲ್ಲಿ ಅವುಗಳನ್ನು ಹೊರಗೆಡಹಿತು. ಇಂತಹ ಅಭಿವ್ಯಕ್ತಿರೂಪಗಳಲ್ಲಿ ಆತ ಬಂಡೆಯ ಮೇಲೆ ಚಿತ್ರರಚನೆ ಮಾಡಿರುವುದೂ ಮುಖ್ಯವಾಗಿದೆ. ಹೀಗೆ ಪ್ರಾಗೈತಿಹಾಸಿಕ ಕಾಲದ ಈ ಚಿತ್ರಗಳನ್ನು ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳೆಂದು ವಿಂಗಡಿಸಿಕೊಂಡು ವಿವರಿಸಲಾಗಿದೆ. ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳ ಸ್ವರೂಪ. ರಚನಾತಂತ್ರ. ಅವುಗಳ ವಿಧಗಳು ಮುಂದಿನ ಜನಪದ ಮತ್ತು ಶಿಷ್ಟಪದ ಭಿತ್ತಿಚಿತ್ರಕಲೆಗೆ ತಹಳದಿಯ ರೂಪದಲ್ಲಿದ್ದು ಅವುಗಳ ಕುರಿತು ಸ್ಥೂಲವಾಗಿ ಈ ಕೆಳಗಿನಂತೆ ವಿವರಿಸಬಹುದು :

**I. ಸ್ವರೂಪ :** ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಶಿಲಾಗುಹೆಗಳಲ್ಲಿ, ಶಿಲಾಶ್ರಯಗಳಲ್ಲಿ ಮತ್ತು ಬಯಲು ಬಂಡೆಗಳ ಮೇಲೆ ರಚನೆಯಾಗಿರುತ್ತವೆ. ಪ್ರಾಗೈತಿಹಾಸಿಕ ಮಾನವರು ಗವಿಯ ಮುಂದಿನ ಭಾಗಗಳಲ್ಲಿ ವಾಸಿಸುತ್ತಿದ್ದಂತೆ ನಿದರ್ಶನಗಳು ದೊರೆತಿದ್ದು. ಚಿತ್ರಗಳು ಅವರ ವಾಸದ ನೆಲೆಯಿಂದ ದೂರದಲ್ಲಿ ಇಲ್ಲವೇ ತೀರಾ ಹಿಂಭಾಗದಲ್ಲಿ ಅಥವಾ ಮೇಲ್ಭಾಗದಲ್ಲಿ. ಸುಲಭವಾಗಿ ತಲುಪಲಾರದ ಸ್ಥಳದಲ್ಲಿ ರಚನೆಯಾಗಿವೆ.[೧] ಫ್ರಾನ್ಸ್‌ದೇಶದ ಫಾಂಟ್-ಡಿ-ಗಾವಮ್ ಗವಿಯಲ್ಲಿ ಸುಮಾರು ಅರ್ಧದಾರಿ ಕ್ರಮಿಸಿದನಂತರ ಚಿತ್ರಗಳು ಕಂಡುಬರುತ್ತವೆ. ಕಂಬರೆಲ್ ಎಂಬ ಗವಿಯು ೭೨೦ ಅಡಿಗಳಷ್ಟು ಉದ್ದವಿದ್ದು ಚಿತ್ರಗಳು ರಚನೆಯಾಗಿದ್ದು ೩೫೦ ಅಡಿಗಳಷ್ಟು ಒಳಭಾಗದಲ್ಲಿ. ಸ್ಪೇನಿನ 'ಲಾಪಸೇಗಾ' ಗುಹೆಯಲ್ಲಿ ಚಿತ್ರಗಳಿರುವ ಪ್ರದೇಶ ತಲುಪಬೇಕಾದರೆ ನದಿಯ ದಂಡೆಯ ಮೇಲೆ ೫೦೦ ಅಡಿಗಳಷ್ಟು ಕಡಿದಾದ ಗುಡ್ಡ ಹತ್ತಿ ಒಬ್ಬರು ಮಾತ್ರ ನುಸುಳಬಹುದಾದ ಕಿಂಡಿಯಿಂದ ಒಳಜಾರಿಹೋಗಬೇಕು. 'ಟುಕ್-ಡ-ಆಡುಬ್' ಗವಿಯಲ್ಲಿನ ಚಿತ್ರಗಳು ನದಿಯೊಂದರಲ್ಲಿ ಸುಮಾರು ೨೪೦ ಅಡಿಗಳಷ್ಟು ಪ್ರಮಾಣಮಾಡಿದಾಗ ಕಂಡುಬರುತ್ತವೆ. ಫ್ರಾನ್ಸಿನ 'ನೋವೋ' ಗವಿಯಲ್ಲಿನ ಚಿತ್ರಗಳನ್ನು ತಲುಪಲು ಗುಹೆಯ ಒಳಗಿರುವ ಸರೋವರವನ್ನು

೧. ಪಿ. ಆರ್. ತಿಪ್ಪೇಸ್ವಾಮಿ (ಸಂ) : ಚಿತ್ರಕಲಾ ಪ್ರಪಂಚ, ಪುಟ ೧೪

# ೧. ಪ್ರಾಗೈತಿಹಾಸಿಕ ಭಿತ್ತಿ ಚಿತ್ರಕಲೆ



ದಾಟಿಕೊಂಡು ಹೋಗಬೇಕು.[೨] ಕರ್ನಾಟಕದ ಹಿರೇಬೆನಕಲ್ಲಿನ ೧೧ ನೇ ಗವಿಯು ಬೆಟ್ಟಸಾಲಿನಲ್ಲಿ ಅತೀ ಎತ್ತರದಲ್ಲಿದ್ದು ಅದನ್ನು ತಲುಪುವುದು ಪ್ರಯಾಸದ ಕೆಲಸ. ಹಾಗೇ ಕುರುಗೋಡಿನ ೪ ನೇ ಗವಿಯನ್ನು ಪ್ರವೇಶಿಸಲು ೩ ಮೀ. ಎತ್ತರದ ಕಡಿದಾದ. ಇಕ್ಕಟ್ಟಾದ ಬಂಡೆಯಲ್ಲಿ[೩] ತೆವಳಿಕೊಂಡು ಸಾಗಬೇಕು. ಇಂತಹ ದುರ್ಗಮವಾದ ಗುಹೆಗಳ ಒಳಗೋಡೆ ಮತ್ತು ಮೇಲ್ಛಾವಣಿಗಳಲ್ಲಿ ಚಿತ್ರಗಳು ರಚನೆಯಾದಂತೆಯೇ ಗುಹೆಯ ಹೊರಭಾಗವಲ್ಲಿ. ಶಿಲಾಶ್ರಯದ ಚಾಚುಭಾಗದ ಒಳಮೈಯಲ್ಲಿ. ಬಯಲು ಬಂಡೆಗಳ ಮೇಲೆ ಸಹಿತ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ರಚನೆಯಾಗಿದ್ದು ಕಂಡಬರುವುದು. ಫ್ರಾನ್ಸ್ ದೇಶದ ಡಾರ್ಡೋನ್ ಪ್ರದೇಶದ 'ನಯಾಕ್ಸ್' ಗುಹೆಯಲ್ಲಿ ವರ್ಣ ಚಿತ್ರಗಳು ಗುಹೆಯ ಬಾಯಿಂದ ೫೫ ಯಾರ್ಡನಷ್ಟು ದೂರದಲ್ಲಿವೆ. ಇಲ್ಲಿಯೇ ಇನ್ನೂ ಕೆಲವು ಚಿತ್ರಗಳು ೧೨೦೦ ಯಾರ್ಡಗಳ ಅಂತರದಲ್ಲಿಯೂ ರಚಿಸಿವೆ. ಭಾರತದ ಮಧ್ಯಪ್ರದೇಶದ ಭಿಂಬೇಟ್ಕಾ ಪ್ರದೇಶವಲ್ಲಿ[೪] ಶಿಲಾಶ್ರಯಗಳ ಚಾಚು ಭಾಗದ ಒಳಮೈಯಲ್ಲಿ ಚಿತ್ರಗಳು ಕಂಡುಬರುತ್ತವೆ.

ಬಾಗಲಕೋಟ ಜಿಲ್ಲೆಯ ಬಾದಾಮಿ ಉತ್ತರಕ್ಕಿರುವ ಶಿಡ್ಲಫಡಿಯಲ್ಲಿ ಸ್ವಾಭಾವಿಕವಾಗಿ ಕೊರಕಲುಬಿದ್ದ ಕಮಾನಿನಂತಹ ಕಲ್ಲಿನ ಬಾಗಿಲಿನ ಮೇಲೆ ಚಿತ್ರಿಗಳು ರಚಿಸಲ್ಪಟ್ಟಿವೆ. ಇಲ್ಲಿಯೇ ಇರುವ ಸೀತಿಡೋಣಿಯಲ್ಲಿ ಬೃಹತ್ ಶಿಲೆಯ ಮೇಲೆ ನೆಲದಿಂದ ಎರಡು ಮೀಟರ್ ಎತ್ತರದಲ್ಲಿ ಚಿತ್ರಗಳು ಕಂಡುಬರುತ್ತವೆ. ರಾಮದುರ್ಗ ಸಮೀಪವಿರುವ ಮೇಗುಂಡೇಶ್ವರ ದೇವಾಲಯದ ಬಳಿಯಲ್ಲಿನ ಗುಡ್ಡದಲ್ಲಿ ಬೆಟ್ಟದಿಂದ ಹೊರಚಾಚಿದ ಶಿಲೆಯ ಕೆಳಭಾಗದ ಒಳಮೈಯಲ್ಲಿ ಚಿತ್ರಗಳಿವೆ. ಬಾದಾಮಿಯ ರಂಗನಾಥ ಬೆಟ್ಟದ ಚಿತ್ರಗಳು ಗುಡ್ಡದಲ್ಲಿನ ಬೃಹತ್ತಾದ ಶಿಲೆಯೊಂದರ ತೆರೆದ ಭಾಗದಲ್ಲಿವೆ. ಬಾದಾಮಿಯ ಹತ್ತಿರ ಇತ್ತೀಚೆಗೆ ಹೊಸದಾಗಿ ಶೋಧವಾದ ಸುಮಾರು ೯ ರಿಂದ ೧೦ ಸ್ಥಳಗಳಲ್ಲಿನ ಚಿತ್ರಗಳು ಬೃಹತ್ ಬಂಡೆಯ ಆಸರೆಯಲ್ಲಿವೆ. ಕುಟಕನಕೇರಿಯಲ್ಲಿಯೂ ಬಂಡೆಯ ಹೊರಮೈಯಲ್ಲಿಯೇ ಚಿತ್ರರಚನೆಯಾಗಿವೆ. ಹಂಪಿಯ ವಿರೂಪಾಕ್ಷ ದೇವಾಲಯದ ಹಿಂಭಾಗದಲ್ಲಿ ಒಂದಕ್ಕೊಂದು ಅಂಟಿಕೊಂಡ ಬೃಹತ್ ಬಂಡೆಗಳ ಒಳಮೈಯಲ್ಲಿ ವರ್ಣಚಿತ್ರಗಳಿವೆ. ಹಾಗೇ ಹಂಪಿಯ ವಿಠಲ ದೇವಾಲಯದ ಸಮೀಪವಿರುವ ಮುಸಲಯ್ಯನಗುಡ್ಡ ಪ್ರದೇಶದಲ್ಲಿ ಒಂದರ ಮೇಲೊಂದು ಕುಳಿತ ದೊಡ್ಡಬಂಡೆಯ ಮೇಲೆ ೩೦ ಅಡಿಗಳಷ್ಟು ಮೇಲಿನ ಭಾಗದಲ್ಲಿ ಚಿತ್ರಗಳು ರಚಿಸಲ್ಪಟ್ಟಿವೆ. ಆನೆಗೊಂದಿಯ ಘಟ್ಟಿಕೋಟೆ ಎಂಬ ಪ್ರದೇಶದಲ್ಲಿ ಸಾಲಾಗಿರುವ ಬಂಡೆಗಳ ಪೊಟರೆಗಳಲ್ಲಿ ಚಿತ್ರರಚನೆಮಾಡಲಾಗಿದೆ. ನದೀಸಮೀಪಕ್ಕೆ ಹೊಂದಿಕೊಂಡಿರುವ ಒಂದು ಬೃಹತ್ತಾದ ಬಂಡೆಯ ಇಳಿಜಾರಿನಲ್ಲಿ ಚಿತ್ರರಚಿಸಿದ್ದು[೫] ಕಂಡುಬರುತ್ತದೆ. ಆನೆಗೊಂದಿಯಿಂದ ಪಂಪಾಸರೋವರಕ್ಕೆ ಹೋಗುವ ದಾರಿಯಲ್ಲಿ ಸ್ಥಳೀಯರು 'ಒನಕೆ ಕಿಂಡಿ' ಎಂದು ಕರೆಯುವ ಸ್ಥಳವಿದೆ. ಇಲ್ಲಿ ಸುತ್ತಲೂ ತುಂಬಿರುವ ಕಲ್ಲುರಾಶಿಗಳಲ್ಲಿ ಗುಹೆಗಳು ನಿರ್ಮಾಣವಾಗಿದ್ದು ಆ ಶಿಲಾಗುಹೆಗಳ ಬಾಗಿಲಿನ ಮೇಲ್ಭಾಗದ ಚಾಚುಭಾಗಗಳಲ್ಲಿ ಮತ್ತು ಬಾಗಿಲಿನ ಎಡಬಲಗಳಲ್ಲಿರುವ ಬಂಡೆಗಳ ತೆರೆದ ಮೈಯಲ್ಲಿ[೬] ವರ್ಣಚಿತ್ರಗಳನ್ನು ರಚಿಸಲಾಗಿದೆ. ಕನ್ನಡ ವಿಶ್ವವಿದ್ಯಾಲಯದ ಆವರಣದಲ್ಲಿ ಬಯಲು ಬಂಡೆಗಳ ಮೇಲೆ ಚಿತ್ರಗಳು ರಚಿಸಲ್ಪಟ್ಟಿದ್ದರೆ,

---

೨. ಪಿ. ಆರ್. ತಿಪ್ಪೇಸ್ವಾಮಿ (ಸಂ) : ಚಿತ್ರಕಲಾ ಪ್ರಪಂಚ. ಪುಟ ೧೬
೩. ಡಾ. ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ. ಪುಟ ೧೬
೪. Yashodhar Mathpal : Prehistotic Rock Paintings of Bhimbetks, Page 9
೫. ಚೆಲುವರಾಜು : ಹಂಪಿಯ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು. ಪುಟ ೧೨
೬. ಚಲುವರಾಜು : ಹಂಪಿಯ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು. ಪುಟ ೧೪

ಹಂಪಿಯಲ್ಲಿನ ಬರಮದೇವರ ಗುಂಡು ಎಂದು ಕರೆಯಲ್ಪಡುವ ಸ್ಥಳದಲ್ಲಿನ ಚಿತ್ರಗಳು ಸ್ವಲ್ಪವೇ ಓಂಜರಿದ ಅರ್ಧಗೋಲಾಕೃತಿಯ ಬಂಡೆಯ ಒಳಮೈಯಲ್ಲಿ[೭] ಕಂಡುಬರುತ್ತವೆ. ಅದೇ ರೀತಿಯಾಗಿ ಜಮಖಂಡಿಯ ಕುಳ್ಳೊಳ್ಳಿ ಮತ್ತು ನೂರಾಳಘಡಿಯ ಚಿತ್ರಗಳು ಬಂಡೆಯಾಸರೆಯಲ್ಲಿ ರಚಿಸಿವೆ. ದಕ್ಷಿಣ ಕನ್ನಡ ಜಿಲ್ಲೆಯಗಾವಳಿಯಲ್ಲಿ ಬಯಲಿನಲ್ಲಿರುವ ಗುಂಡುಕಲ್ಲೊಂದರ ಮೇಲೆ ಗೂಳಿಯ ಚಿತ್ರಗಳನ್ನು ಕೊರೆಯಲಾಗಿದೆ. ಕೊಪ್ಪಳದ ಗುಡ್ಡಗಳಲ್ಲಿ[೮] ಶಿಲಾಗುಹೆಗಳಲ್ಲಿ ಚಿತ್ರಗಳಿರುವಂತೆಯೇ ಬೃಹತ್ ಬಂಡೆಯ ತೆರೆದ ಹೊರಮೈಯಲ್ಲಿಯೂ ಚಿತ್ರಗಳು ಕಂಡುಬರುತ್ತವೆ. ರಾಯಚೂರಿನ ಕಲ್ಲೂರಿನಲ್ಲಿ ಗುಡ್ಡಕ್ಕೆ ಹೊಂದಿಕೊಂಡಿರುವ ಬೃಹತ್ ಬಂಡೆಯ ಹೊರಮೈಯಲ್ಲಿ ಚಿತ್ರಗಳು ರಚಿಸಲ್ಪಟ್ಟಿದ್ದು. ಹೊಸಪೇಟೆ ತಾಲೂಕಿನ ಹಳಕುಂಡಿಯಲ್ಲಿ ಬಂಡೆಗಲ್ಲುಗಳ ರಾಶಿಯಲ್ಲಿ ಅವುಗಳ ಹೊರಭಿತ್ತಿಯಲ್ಲಿ ಚಿತ್ರಗಳು ಕೆತ್ತಲ್ಪಟ್ಟಿವೆ ಹೀಗೆ ಪ್ರಾಗೈತಿಹಾಸಕಾಲದ ಭಿತ್ತಿಚಿತ್ರಗಳು ವಿವಿಧ ಸ್ವರೂಪದ ನೆಲೆಗಳಲ್ಲಿ ರಚನೆಯಾಗಿದ್ದು ತಿಳಿದುಬರುವುದು.

ಗುಹೆಗಳ ಒಳಭಾಗ. ಶಿಲಾಶ್ರಯ ತಾಣಗಳಲ್ಲಿ ರಚನೆಯಾದ ವರ್ಣಚಿತ್ರಗಳಲ್ಲಿ ಪ್ರಾಣಿಗಳ, ಮನುಷ್ಯರ ಮತ್ತು ವಿಚಿತ್ರವಾದ ರೇಖಾಚಿತ್ರಗಳಿರುತ್ತವೆ. ಜೊತೆಗೆ ಕೆಲವು ಗವಿಗಳಲ್ಲಿ ಸಮೂಹನೃತ್ಯ, ಪ್ರಾಣಿಗಳ ಸಾಲು, ಮನುಷ್ಯರ ಜೊಡಿಗಳು ರಚನೆಯಾಗಿರುತ್ತವೆ. ಹಿರೇಬೆನಕಲ್ ಗುಹೆಗಳಲ್ಲಿ ಗೂಳಿಚಿತ್ರಗಳು. ಜಿಂಕೆ ಚಿತ್ರಗಳು ಇರುವಂತೆ ಕೈ ಕೈಹಿಡಿದುಕೊಂಡ ಮನುಷ್ಯರ ಸಾಲು ಚಿತ್ರಗಳಿವೆ. ವೆಂಕಟಾಪುರ, ಮಲ್ಲಾಪುರಗಳಲ್ಲಿ ಮತ್ತು ಹಂಪೆಯಲ್ಲಿ ವಿಚಿತ್ರವಾಗಿ ಮೈಮೇಲೆ ರೇಖಾಕೃತಿಯ ಚಿತ್ರಗಳಿಂದ ಅಲಂಕರಿಸಿದ ಮಾನವರ ಚಿತ್ರಗಳಿವೆ. ಬಾದಾಮಿಯ ರಂಗನಾಥನ ಬೆಟ್ಟದಲ್ಲಿನ ಶಿಲಾಶ್ರಯದಲ್ಲಿ ವಿಚಿತ್ರವಾದ ಮುಖವಾಡ ಧರಿಸಿದ ಕಡ್ಡಿಮಾನವರ ಚಿತ್ರಗಳು. ಕಾಡುಹಂದಿಯ ಚಿತ್ರಗಳು ಕಂಡುಬಂದರೆ. ಸಮೀಪದ ಕುಟಕನಕೇರಿಯ ಗುಡ್ಡಗಳಲ್ಲಿ ಸಹಿತ ಬಿಲ್ಲುಬಾಣ ಹಿಡಿದುಕೊಂಡ ಮುಖವಾಡದ ಮನುಷ್ಯರ ಚಿತ್ರಗಳಿವೆ. ಹಂಪೆಯ ವಿರೂಪಾಕ್ಷ ದೇವಾಲಯದ ಹಿಂಭಾಗದ ಜೋಡುಬಂಡೆಗಳ ಒಳಮೈಯಲ್ಲಿ ಗೂಳಿ. ಜಿಂಕೆಗಳ ಗುಂಪು ಹಾಗೂ ಮಾನವರ ಚಿತ್ರಗಳಿವೆ. ಆನೆಗೊಂದಿಯಿಂದ ಪಂಪಾಸರೋವರಕ್ಕೆ ಹೋಗುವವಮಾರ್ಗದಲ್ಲಿರುವ ಒನಕೆ ಕಿಂಡಿ ಎಂಬ ಸ್ಥಳದಲ್ಲಿನ ಶಿಲಾಗುಹೆಗಳಲ್ಲಿ ಗೂಳಿಗಳು. ಜಿಂಕೆಗಳು. ಸಾಲಾದ ಮನುಷ್ಯರ ಚಿತ್ರಗಳು ಮಂಡಲಗಳ ಚಿತ್ತಾರ ಕಂಡುಬರುತ್ತವೆ. ಅಲ್ಲದೇ ಇಲ್ಲಿನ ಚಾಚುಬಂಡೆಯ ಒಳಮೈಯಲ್ಲಿ ಸಮಾಧಿ ಸ್ಥಳವನ್ನು ಸೂಚಿಸುವ ಶವಸಂಸ್ಕಾರದ ಚಿತ್ರವಿದೆ. ಇದೇ ತರನಾದ ಚಿತ್ರವು ಚಿಕ್ಕರಾಮಾಪುರದ ಬಂಡೆಯೊಂದರಲ್ಲಿಯೂ ಕಂಡಬರುತ್ತದೆ.

ಹೀಗೆ ವಿವಿಧ ರೀತಿಯ ಪ್ರಾಣಿಪಕ್ಷಿಗಳು. ವಿಚಿತ್ರ ರೇಖಾಕೃತಿಗಳು ಇಂತಹ ಗುಹೆ ಮತ್ತು ಶಿಲಾಶ್ರಯಗಳಲ್ಲಿ ರಚನೆಯಾಗಿದ್ದು ಕಂಡುಬರುತ್ತದೆ. ಈ ವರ್ಣ ಚಿತ್ರಗಳು ಹೆಚ್ಚಿನ ಸಂದರ್ಭದಲ್ಲಿ ಕೇವಲ ಬಾಹ್ಯ ರೇಖೆಗಳಿಂದ ಚಿತ್ರಿತವಾಗಿದ್ದರೂ ಕೆಲವು ಸಲ ಬಾಹ್ಯ ರೇಖೆಗಳ ಒಳಭಾಗವನ್ನು ಬಣ್ಣದಿಂದ ತುಂಬಲಾಗಿದೆ. ಗಂಗಾವತಿ ತಾಲೂಕಿನ ಮಲ್ಲಾಪುರ. ಆನೆಗೊಂದಿ. ಚಿಕ್ಕರಾಮಾಪುರ. ವೆಂಕಟಾಪುರ, ತಿಮ್ಮಲಾಪುರ, ನಾರಾಯಣಪುರ, ಕೊಪ್ಪಳದಗುಡ್ಡಗಳಲ್ಲಿನ ಶಿಲಾಶ್ರಯ ಚಿತ್ರಗಳು. ಐಹೊಳೆ. ಬಾದಾಮಿಯಲ್ಲಿನ ರಂಗನಾಥ ಬೆಟ್ಟದ ಚಿತ್ರಗಳು,

---

೭. ಡಾ. ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ. ಪುಟ ೨೫

೮. ಬಿ. ಸಿ. ಪಾಟೀಲ : ಕೊಪ್ಪಳ. ಸಾಂಸ್ಕೃತಿಕ ಪರಂಪರೆ. ಪುಟ ೧೧೫

ಪಂಪಿಯ ಬರಮ ದೇವರ ಗುಂಡು. ಸುಗ್ರೀವಗುಹೆಯ ಚಿತ್ರಗಳು ಬಾಹ್ಯರೇಖೆಗಳಿಂದ ಚಿತ್ರಿಸಿದ್ದರೆ ಹಿರೇಬೆನಕಲ್‌ಗುಹೆಯ ಕೆಲವು ಚಿತ್ರಗಳು. ಆನೆಗೊಂದಿಯ ಸಮೀಪದ ಒನಕೆ ಕಿಂಡಿಯಲ್ಲಿನ ಚಿತ್ರಗಳು, ಬಾದಾಮಿಯ ಸಮೀಪದ ಅರೆಗುಡ್ಡ ಹೀರೇಗುಡ್ಡದ ಕೆಲವು ಚಿತ್ರಗಳಲ್ಲಿ ಬಾಹ್ಯರೇಖೆಯ ಒಳಗೆ ಬಣ್ಣ ತುಂಬಲಾಗಿದೆ.

ಈ ಗುಹಾವರ್ಣ ಚಿತ್ರಗಳು ನಿರ್ದಿಷ್ಟ ಗಾತ್ರದವಿರುವುದಿಲ್ಲ. ಚಿಕ್ಕವು ದೊಡ್ಡವು ಹೀಗೆ ವಿವಿಧ ಗಾತ್ರದವಿರುತ್ತವೆ. ಗಂಗಾವತಿ ತಾಲೂಕು ನಾರಾಯಣಪುರದ ಒಂದು ಬಂಡೆ ಚಿತ್ರವು ೪ ಮೀಟರ್ ನಷ್ಟು ಎತ್ತರವಾಗಿದೆ. ಗುಹೆ ಮತ್ತು ಶಿಲಾಶ್ರಯದಲ್ಲಿ ರಚಿಸಿದ ವರ್ಣಚಿತ್ರಗಳು ಒಂದು ಸ್ಥಳದಲ್ಲಿ ಒಂದು ಎರಡು ಅಥವಾ ಹಲವಾರು ಇರಬಹುದು. ಒಂದೇ ಗುಹೆಗಳಲ್ಲಿ ಒಂದು ಕಾಲದಲ್ಲಿ ರಚಿತವಾದ ಚಿತ್ರಗಳ ಮೇಲೆಯೇ ಮತ್ತೊಬ್ಬರು ಅವುಗಳನ್ನು ಅಳಿಸದೇ ಅದರ ಮೇಲೆ ಚಿತ್ರ ರಚಿಸಿದ್ದಾರೆ. ಕೆಲವು ಸಂದರ್ಭಗಳಲ್ಲಿ ಈ ಚಿತ್ರಗಳು ಒಂದರೊಡನೊಂದು ಬೆರೆತುಕೊಂಡು ಚಿತ್ರಗಳನ್ನು ಸ್ಪಷ್ಟವಾಗಿ ಗುರುತಿಸುವಲ್ಲಿ ಸಂದಿಗ್ಧತೆ ಉಂಟುಮಾಡುತ್ತವೆ. ಪ್ರಾಗೈತಿಹಾಸಿಕ ಭಿತ್ತಿಚಿತ್ರಕಾರರು ತಮ್ಮ ಚಿತ್ರಗಳಿಗೆ ಬಂಡೆಯ ಸಮತಟ್ಟಾಗಿರುವ ಮೈಯನ್ನೇ ಬಳಸಿಕೊಂಡಿರುವುದು ಸಾಮಾನ್ಯವಾದರೂ ಕೆಲವು ವೇಳೆ ಬಂಡೆಯ ಮೇಲಿರುವ ಉಬ್ಬುತಗ್ಗುಗಳನ್ನು ದೇಹದ ವಿವಿಧ ಭಾಗಗಳಾದ ನಿತಂಬಗಳು. ಎದೆಯ ಉಬ್ಬುಭಾಗಗಳಿಗೆ ಹೊಂದಿಸಿಕೊಂಡಿದ್ದಾರೆ. ಅಲ್ಲದೇ ಮೊಣಕಾಲು ಮೊಣಕೈ ಭಾಗಕ್ಕೆ ಕಲ್ಲಿನ ಉಬ್ಬುಗಳು ಸಹಜವಾಗಿ ಬರುವಂತೆ ಸಂಯೋಜಿಸಿ ಚಿತ್ರಿಸಿದ್ದಾರೆ. ಬಂಡೆಯ ಮೇಲಿನ ತಗ್ಗುಗಳು, ಕುಳಿಗಳನ್ನು ಚಿತ್ರಿತ ಪ್ರಾಣಿಗಳಿಗೆ ಗಾಯವಾದಂತೆ ಬಳಸಿಕೊಂಡು ಚಿತ್ರರಚನೆ ಮಾಡಿದ್ದಾರೆ[೯] ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳಲ್ಲಿ ಚಿತ್ರಗಳ ಸಂದರ್ಭ ಸ್ಥಳ ನಿರ್ದೇಶನವಿಲ್ಲ. ಚಿತ್ರಗಳ ಮುನ್ನೆಲೆ ಹಿನ್ನೆಲೆಗಳನ್ನು ವ್ಯಕ್ತಪಡಿಸುವ ಭೂರೇಖೆ (Ground line) ಯಂತಹ ಕಾಲ್ಪನಿಕ ರೇಖೆಗಳಿಲ್ಲ. ಆದರೂ ಈ ಚಿತ್ರಗಳು ತೇಲಾಡುತ್ತಿವೆ ಎಂಬ ಭ್ರಮೆಬಾರದಂತೆ ಸಂಯೋಜನೆಗೊಳಿಸಿ ಚಿತ್ರಿಸಿದ್ದಾರೆ. ಈ ರೀತಿಯಲ್ಲಿ ಗುಹೆ ಮತ್ತು ಶಿಲಾಶ್ರಯಗಳ ವರ್ಣಚಿತ್ರಗಳ ಸ್ವರೂಪವಿದ್ದರೆ, ಬಯಲು ಬಂಡೆಗಳಲ್ಲಿ ರಚನೆಯಾಗಿರುವ ಕೆಲವು ಚಿತ್ರಗಳು ಸ್ವರೂಪದಲ್ಲಿ ಭಿನ್ನವಾಗಿವೆ. ದೊಡ್ಡ ದೊಡ್ಡ ಬಂಡೆಗಳ ರಾಶಿಯಂತಿರುವ ಬೆಟ್ಟಸಮೂಹದಲ್ಲಿನ ಬಂಡೆಗಳಲ್ಲಿ ಇಲ್ಲವೆ ಬಯಲಲ್ಲಿ ಇರುವ ಬೃಹತ್ ಬಂಡೆಗಳ ಮೇಲೆ ಕುಟ್ಟಿ, ಕೊರೆದು ರಚನೆಮಾಡಿದ ರೇಖಾಕೃತಿಗಳಿರುತ್ತವೆ. ಈ ಚಿತ್ರಗಳು ಸಹಿತ ಒಂದು ಬಂಡೆಯ ಮೇಲೆ ಒಂದು ಇಲ್ಲವೇ ಹಲವಾರು ಚಿತ್ರಗಳಿರಬಹುದು. ಕನ್ನಡ ವಿಶ್ವವಿದ್ಯಾಲಯದ ಆವರಣದಲ್ಲಿ ಶಿಲ್ಪಕಲಾ ಶಾಲೆ ಇದ್ದ ಗುಡ್ಡದ ಹಿಂದೆ ಒಂದೇ ಬಂಡೆಯಲ್ಲಿ ಏಳೆಂಟು ಗೂಳಿಗಳು. ಬಸವನಹುಳುಗಳು ಚಿತ್ರಿತವಾಗಿವೆ. ಇಲ್ಲಿಯೇ ಗಿರಿಸೀಮೆಯಲ್ಲಿನ ಒಂದು ಬಂಡೆಯಲ್ಲಿಯೂ ಪ್ರಾಣಿಚಿತ್ರಗಳು ಮನುಷ್ಯ ಚಿತ್ರಗಳು ಕಂಡುಬರುತ್ತವೆ. ಈ ರೀತಿಯಾಗಿ ಪ್ರಾಗೈತಿಹಾಸಿಕ ಭಿತ್ತಿಚಿತ್ರಕಲೆಯ ನೆಲೆ ಮತ್ತು ಚಿತ್ರಸ್ವರೂಪಗಳಿರುವುದು ತಿಳಿದು ಬರುತ್ತದೆ.

**II. ಪ್ರಾಗೈತಿಹಾಸಿಕ ಬಂಡೆ ಭಿತ್ತಿ ಚಿತ್ರಗಳ ಶೋಧನೆ :** ಬೆಟ್ಟಗಳ ದುರ್ಗಮವಾದ ಗುಹೆಗಳಲ್ಲಿ, ಶಿಲಾಶ್ರಯಗಳ ಪೊಟರೆಗಳಲ್ಲಿದ್ದಂತಹ ಈ ಅಪೂರ್ವ ಕಲಾಕೃತಿಗಳ ಶೋಧನೆಯು ಕ್ರಿ. ಶ. ೧೮ ನೇ ಶತಮಾನದಿಂದ ಈಚೆಗೆ ಆಗತೊಡಗಿಕೊಂಡಿತು.

---

೯. Yashodhar Mathpal : Prehistoric Rock Paintings of Bhimbetka, Page 10

**ಜಗತ್ತಿನಲ್ಲಿ** : ವಿಶ್ವದಲ್ಲಿಯೇ[೧೦] ಪ್ರಾಚೀನ ಬಂಡೆ ಚಿತ್ರಗಳ ಶೋಧನೆಯಲ್ಲಿ ಮೊದಲ ಹೆಜ್ಜೆ ಹಾಕಿದವರು ಆಸ್ಟ್ರೇಲಿಯಾದ 'ಸರ್ ಜಾರ್ಜಗ್ರೇ' ಅವರು. ಸಿಡ್ನಿಯಲ್ಲಿನ ವರ್ಣಚಿತ್ರಗವಿಗಳನ್ನು ಅವರು ಕ್ರಿ. ಶ. ೧೮೩೭ ರಲ್ಲಿ ಪತ್ತೆಹಚ್ಚಿದರು. ೧೮೭೯ ರಲ್ಲಿ ಸ್ಪೇನ್ ದೇಶದ 'ಸಾವ್‌ತೋಲಾ'ನ ಅಲ್ತಮೀರ್ ಗುಹೆಯ ಶೋಧನೆಯು ಈ ನಿಟ್ಟಿನಲ್ಲಿ ಮತ್ತೊಂದು ಗಮನಾರ್ಹ ಕೊಡುಗೆಯಾಗಿದೆ. ಡಾರ್ಡೋನ್ ಪ್ರದೇಶದ 'ಲೆಸ್‌ಐಜೆಸ್'ನ ಬಳಿ ಇರುವ ಲಾವೌತೇ ಗುಹೆಯಲ್ಲಿನ ಕೊರೆಚಿತ್ರಗಳನ್ನು ಮತ್ತು ವರ್ಣ ಚಿತ್ರಗಳನ್ನು ಈ. ರೈವ್ಹರ್, ಎಂಬಾತ ೧೮೯೫ ರಲ್ಲಿ ಕಂಡುಹಿಡಿದನು. ಎಲ್. ಕ್ಯಾಪ್ಟನ್. ಡಿ. ಪೆರೋನಿ ಮತ್ತು ಎಚ್. ಬ್ರುಯೆಲ್ ಅವರುಗಳು ೧೯೦೧ ರಲ್ಲಿ ಲೆಸ್‌ಕಾಂಬ್ರೆಲ್ಲಾ ಮತ್ತು 'ಫಾಂಟ್-ಡಿ-ಗಾಮಾ' ಗುಹೆಗಳನ್ನು ಶೋಧಿಸಿ ಅಲ್ಲಿನ ಚಿತ್ರಗಳನ್ನು ಬೆಳಕಿಗೆ ತಂದರು. ಲೆಸ್‌ಕಾಂಬ್ರೆಲ್ಲಾ ಮತ್ತು ಫಾಂಟ್-ಡಿ-ಗಾಮಾ ಗುಹೆಗಳ ಶೋಧನೆಯಲ್ಲಿ ಪಾಲ್ಗೊಂಡಿದ್ದ ಡಿ. ಪೆರೋನಿ ಅವರು ಎರಡು ವರ್ಷಗಳ ತರುವಾಯ ೧೯೦೩ ರಲ್ಲಿ ಡಾರ್ಡೋನ್ ಪ್ರದೇಶದ 'ಬೆರ್ನಿಫಾಲ್' ಮತ್ತು 'ತೇಯ್‌ಜಾಟ್' ಗುಹೆಗಳ ಕೊರೆಚಿತ್ರಗಳನ್ನು ಕಂಡುಹಿಡಿದರು. ಎಲ್‌ಕ್ಯಾಸ್ಟಿಲೋ, ಕೋವಾಲನಸ್, ಲಾಹಾಜಾ ಮತ್ತು ನಯಾಕ್ಸ್ ಗುಹೆಗಳ ಚಿತ್ರಗಳು ೧೯೦೬ ರಲ್ಲಿ ಹೊರಜಗತ್ತಿಗೆ ತಿಳಿದುಬಂದವು.

ಹಿಮಯುಗಕ್ಕೆ ಸೇರಿದ್ದೆಂದು ನಂಬಲಾಗಿರುವ ಇಟಲಿಯ 'ರಾಮನೆಲ್ಲಿ' ಗುಹೆಯು ೧೯೦೪ ರಲ್ಲಿ ಕಂಡು ಹಿಡಿಯಲಾಯಿತು. ಲೇವಾಂಜೋ ಎಂಬ ನಡುಗಡ್ಡೆಯಲ್ಲಿ ೧೯೧೪ ರಲ್ಲಿ ಮತ್ತೊಂದು ಚಿತ್ರಗಳಿರುವ ಗುಹೆಯು ಕಂಡುಬಂದಿತು. ಕೌಂಟ್‌ಬಿಗಾನ್ ಮತ್ತು ಅವನ ಮಗ ಕೂಡಿ ೧೯೧೨ ರಿಂದ ೧೯೧೪ ರ ಅವಧಿಯಲ್ಲಿ 'ಲೆಸ್‌ಟ್ರಾಯಿಸ್ ಫ್ರೆರಸ್' ಮತ್ತು 'ಟಕ್-ಡಿ-ಅಡೋಬರ್ಟ್' ಗುಹೆಗಳ ಚಿತ್ರಗಳನ್ನು ಬೆಳಕಿಗೆ ತಂದರು. ಲಾಸೆಕ್ಸ್ ಗುಹೆಯು ೧೯೪೦ ರಲ್ಲಿ ಶೋಧವಾಯಿತು. ಆಫ್ರಿಕಾದ ಬಂಡೆ ಚಿತ್ರಗಳ ಬಗ್ಗೆ ಮೊದಲಿಗೆ ವಿಷಯತಿಳಿದದ್ದು ೧೯೨೧ ರಲ್ಲಿ ಜಿ.ಬಿ.ಎಮ್. ಫ್ಲೇಮಂಡ್‌ರ ಪ್ರಕಟಣೆಯಿಂದ. ದಕ್ಷಿಣ ಮಗ್ರೇಬ ಮತ್ತು ಟುನೇಷಿಯಾ ಬಂಡೆಚಿತ್ರಗಳನ್ನು ಗಾರ್ಡೆಲ್ ಅವರು ಬೆಳಕಿಗೆ ತಂದರು. ಅವುಗಳನ್ನು ೧೯೨೬ ರಲ್ಲಿ ಎಚ್. ಬ್ರುಯೆಲ್, ಡುರಾಂಡ್ ಮತ್ತು ಲಾಡೆನ್ ಅವರುಗಳು ಅಭ್ಯಸಿಸಿ ವಿವರಗಳನ್ನು ಪ್ರಕಟಿಸಿದರು. ಸಹರಾ ಪ್ರದೇಶದಲ್ಲಿನ ಬಂಡೆ ಕೊರೆಚಿತ್ರಗಳ ಬಗ್ಗೆ ೧೯೨೫ ರಲ್ಲಿ ಎಲ್. ಫ್ರೊಬೇನಿಯಸ್ ಮತ್ತು ಎಚ್. ಓಬರ್‌ಮೈರ್ ಅವರು ಅಭ್ಯಸಿಸಿ ಅವುಗಳ ಶೈಲಿ ಮತ್ತು ತಂತ್ರಗಾರಿಕೆಯ ಬಗ್ಗೆ ಟಿಪ್ಪಣಿಗಳನ್ನು ಬರೆದರು. ೧೯೫೪ ರಲ್ಲಿ ಬ್ರುಯೆಲ್ ಮತ್ತು ಎಚ್. ಲೋಟೆ ಅವರು 'ಟಾಸಿಲಿ ಅಜರ್' ಪ್ರಾಂತದಲ್ಲಿನ ಬಂಡೆ ಚಿತ್ರಗಳ ಬಗ್ಗೆ ವಿವರವಾಗಿ ಬರೆದು ಪ್ರಕಟಿಸಿದರು. ಜಿ. ಸ್ಟೇನ್‌ಪೋರ್ಟ್ ಅವರು ೧೯೧೨ ರಲ್ಲಿ ಲಿಬಿಯಾ ಮತ್ತು ನಮೀಬಿಯಾದಲ್ಲಿನ ಬಂಡೆ ಚಿತ್ರಗಳ ಬಗ್ಗೆ ಅಭ್ಯಾಸಮಾಡಿ ಅವುಗಳ ಕುರಿತಾಗಿ ಬರೆದು ಪ್ರಕಟಿಸಿದರು.

೧೯೨೬ ರಲ್ಲಿ ಜೆ. ಮೊರ್‌ಗನ್ ಮತ್ತು ೧೯೨೮ ರಲ್ಲಿ ಬ್ರುಯೆಲ್ ಅವರು, ಮುಂದೆ ೧೯೩೦ ರಿಂದ ೧೯೩೫ ರ ವರೆಗಿನ ಅವಧಿಯಲ್ಲಿ ಅನೇಕ ವಿದ್ವಾಂಸರು ಇಜಿಪ್ತ ಮತ್ತು ಲಿಬಿಯಾದಲ್ಲಿನ ಪ್ರಾಗೈತಿಹಾಸ ಬಂಡೆಚಿತ್ರಗಳ ಬಗ್ಗೆ ಬೆಳಕುಚೆಲ್ಲಿದರು. ೧೯೩೮ ರಲ್ಲಿ ಎಚ್. ಎ. ವಿಂಕ್ಲರ್ ಅವರು ಇವೇ ಬಂಡೆ ಚಿತ್ರಗಳ ಬಗ್ಗೆ ವಿಸ್ತ್ರತವಾಗಿ ಬರೆದರು. ಆಫ್ರಿಕಾ ಖಂಡವೂ ಪ್ರಾಗೈತಿಹಾಸಕಾಲದ ಬಂಡೆ ಚಿತ್ರಗಳ ಸಂಪದ್ಭರಿತ ಪ್ರದೇಶವಾಗಿದೆ.

---

೧೦. ಹೆಚ್ಚಿನ ವಿವರಗಳಿಗೆ ನೋಡಿರಿ : Yashodhar Mathpal : Prehistoric Rock Paintings of Bhimbetka

ರೊಡೇಷಿಯಾ ಬಂಡೆ ವರ್ಣಚಿತ್ರಗಳ ಬಗ್ಗೆ ಮೊಟ್ಟಮೊದಲಿಗೆ ಎ. ಜೆ. ಸಿ. ಮೊಲಾನಿಯಾಕ್ಸ್ ಎಂಬವರು ೧೮೯೯ ರಲ್ಲಿ ವಿವರಗಳನ್ನು ಪ್ರಕಟಿಸಿದರು. ಇದೇ ಪ್ರದೇಶದ ಇನ್ನೂ ಹೆಚ್ಚಿನ ಬಂಡೆಚಿತ್ರಗಳ ಬಗ್ಗೆ ಎಫ್. ಐಲ್ಸ್, ಎಫ್. ಡಬ್ಲ್ಯೂಜಿ. ಬೌನ್. ಎಫ್. ವೈಟ್. ಎಫ್. ಪಿ. ಮೆನ್ನಲ್. ಈ. ಸಿ. ಚುಬ್ಬ, ಮತ್ತು ಎ. ಈ. ಜೈಲಿ ಅವರುಗಳು ೧೮೯೯ ರಿಂದ ೧೯೧೨ ರ ವರೆಗಿನ ಅವಧಿಯಲ್ಲಿ ದಾಖಲಿಸಿದರು. ಇದೇ ರೊಡೇಷಿಯಾ ಪ್ರದೇಶದ ಬಂಡೆಚಿತ್ರಗಳನ್ನು ೧೯೧೨ ರಲ್ಲಿ ಧ. ಎನ್. ಹಾಲ್. ಎಲ್. ಫ್ರೊಬೇನಿಯಸ್ ಮತ್ತು ಎಲ್. ಕ್ರಿಪ್ಸ್ ಅವರು ಪ್ರತಿಕೃತಿ ಮಾಡಿದರು. ಗೂಡಾಲ್ ಮತ್ತು ಮಿಸ್ ಡಿ. ಬ್ಲೀಕ್ ಅವರುಗಳು ಕೂಡಿಕೊಂಡು ಆಫ್ರಿಕಾ ಬಂಡೆ ಚಿತ್ರಕಲೆಯ ಬಗ್ಗೆ ಉತ್ತಮವಾದ ಸಂಗ್ರಾಹ್ಯ ಚಿತ್ರಸಂಪುಟವನ್ನು ಹೊರತಂದಿದ್ದಾರೆ. ಎಮ್. ಸಿ. ಬರಕಿಟ್ ಅವರು ದಕ್ಷಿಣ ರೊಡೇಷಿಯಾ ಪ್ರಾಂತ್ಯಕ್ಕೆ ತೆರಳಿ ಮತ್ತೊಮ್ಮೆ ೧೯೨೭ ರಲ್ಲಿ ಅಲ್ಲಿನ ಬಂಡೆ ಚಿತ್ರಗಳನ್ನು ದಾಖಲಿಸಿದ್ದಾರೆ.

ಪಿ. ಡಿ. ಕರವಾಲ್ ಅವರು ಮೋಝಾಂಬಿಕ್‌ದಲ್ಲಿನ 'ಸೆರೆಉಂಬಾ' ಪ್ರದೇಶದಲ್ಲಿನ ಬಂಡೆ ಚಿತ್ರಗಳ ಬಗ್ಗೆ ೧೯೫೨ ರಲ್ಲಿ ಪರಿಚಯಿಸಿದರು. ೧೯೪೫ ರ ಈಚೆಗಂತೂ 'ದಕ್ಷಿಣ ಆಫ್ರಿಕನ್ ಆರ್ಕಿಯಾಲಜಿ' ಯವರು ಪ್ರಕಟಿಸುವ ಪ್ರತಿಯೊಂದು ವರದಿಯಲ್ಲೂ ಒಂದಿಲ್ಲೊಂದು ಹೊಸಬಂಡೆ ಚಿತ್ರ ನೆಲೆಗಳು ಆಫ್ರಿಕಾದಲ್ಲಿ ಪ್ರಕಟವಾದ ಬಗ್ಗೆ ವಿವರಣೆ ಇದ್ದೇ ಇರುತ್ತದೆ. ಆಫ್ರಿಕಾದ ಬಂಡೆ ಚಿತ್ರಗಳ ಬಗ್ಗೆ ಈ. ಹೋಲ್ಮ್ ಅವರು ಆಳವಾಗಿ ಅಧ್ಯಯನ ಮಾಡಿದ್ದಾರೆ. ಆಫ್ರಿಕಾದ ಬಂಡೆ ಚಿತ್ರಗಳ ಬಗ್ಗೆ ಎಚ್. ಕೋಟ್ ಅವರು ೧೯೪೬ ರಲ್ಲಿ ಅಧ್ಯಯನ ಕೈಕೊಂಡು ಅವುಗಳ ಪ್ರತಿತೆಗೆಯುವುದು, ಫೋಟೋಗ್ರಾಫ್ ಮಾಡುವುದು, ಅಲ್ಲದೇ ಸ್ಕೆಚ್ಚಿಂಗ್ ಮಾಡಿಕೊಂಡು. ಅವುಗಳ ಪ್ರಮಾಣ ವರ್ಣವಿನ್ಯಾಸ. ಶೈಲಿ, ರೂಪಗಳು, ವಸ್ತುವಿಷಯಗಳು ಮುಂತಾದ ವಿವರಗಳೊಂದಿಗೆ ಕೂಲಂಕಷವಾಗಿ ವಿಶ್ಲೇಷಿಸಿದ್ದಾರೆ. ೧೯೪೭ ರಲ್ಲಿ ಕೋಟ್ ಅವರೇ ಈ ಪ್ರದೇಶದಲ್ಲಿ ೧೮೬೮ ರಲ್ಲಿ ಗ್ರೇ ಅವರು ವರದಿ ಮಾಡಿದ್ದ ಚಿತ್ರಗಳ ಗುಹೆಗಳನ್ನು ಮತ್ತೊಮ್ಮೆ ಗುರುತಿಸಿದರು. ಜೆ. ಬ್ರಾಡ್‌ಷಾ ಅವರು ಉತ್ತರ ಕಿಂಬರ್ಲೆ ಪ್ರದೇಶದಲ್ಲಿ ಅತ್ಯಂತ ಸೂಕ್ಷ್ಮಾತಿಸೂಕ್ಷ್ಮ ಚಿತ್ರವನ್ನು ಬಂಡೆ ಚಿತ್ರಗಳಲ್ಲಿ ಇದ್ದುದನ್ನು ಕಂಡು ೧೮೯೨ ರಲ್ಲಿ ವರದಿಮಾಡಿದರು. ಜಿ. ಹಿಲ್ ಎಂಬುವವರು ಇನ್ನೊಂದು ಇದೇ ರೀತಿಯ ಸೂಕ್ಷ್ಮ ಚಿತ್ರವನ್ನು ಬಂಡೇ ಚಿತ್ರಗಳಲ್ಲಿ ಕಿಂಬರ್ಲೆ ಪ್ರದೇಶದಲ್ಲಿಯೇ ೧೯೧೦ ರಲ್ಲಿ ಕಂಡುಹಿಡಿದದ್ದು ತಿಳಿದುಬರುವುದು. ಉತ್ತರ ಕಿಂಬರ್ಲೆ ಮತ್ತು ಉತ್ತರ ಆಸ್ಟ್ರೇಲಿಯಾದ ಹೆಚ್ಚಿನ ಬಂಡೆಚಿತ್ರಗಳ ಬಗ್ಗೆ ಎ. ಈ. ವಾರ್ಮ್ಸ ಅವರು ೧೯೫೫ ರಲ್ಲಿ ವರದಿಮಾಡಿದರು.

ಹೀಗೆ ಪ್ರಪಂಚದಾದ್ಯಂತ ಅಲ್ಲಲ್ಲಿ ಪ್ರಾಗೈತಿಹಾಸಿಕ ಬಂಡೆ ಚಿತ್ರಗಳು ಶೋಧನೆಯಾಗುತ್ತಲೆ ಇವೆ. ಆಲ್ಪ್ಸ ಪರ್ವತ ಪ್ರದೇಶ. ಸ್ಕಾಂಡೇನಿವಿಯಾ. ಸೈಬಿರಿಯಾ. ಓಮನ್, ಉತ್ತರ ಅಮೇರಿಕಾ, ದಕ್ಷಿಣ ಅಮೇರಿಕಾ, ಉತ್ತರ ಟೋಕಿಂಗ್. ನ್ಯೂಗಿನಿ. ಫಿಜಿನಡುಗಡ್ಡೆ. ಜರ್ಮನಿ, ಇಂಗ್ಲಂಡ್, ಜಪಾನ್ ಮುಂತಾದ ಪ್ರದೇಶಗಳಲ್ಲಿಯೂ ಬಂಡೆ ಚಿತ್ರಗಳು ಶೋಧನೆಯಾಗಿವೆ. ಜೊತೆಗೆ ಇವುಗಳ ವೈಜ್ಞಾನಿಕ ಅಧ್ಯಯನವೂ ನಡೆಯುತ್ತಿದೆ. ಬಂಡೆ ಚಿತ್ರಗಳು ಪ್ರಾಚೀನ ಜನರ ನಂಬಿಕೆ. ಭಾವನೆ, ಜೀವನಗಳನ್ನು ಪ್ರತಿಬಿಂಬಿಸುವ 'ದೃಶ್ಯಸ್ಮಾರಕ'ಗಳೆಂದು ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಅರಿಯಲಾಗಿದೆ. ಇವುಗಳ ಶೋಧನೆ, ಅಧ್ಯಯನ, ಪ್ರಕಟಣೆ, ಮತ್ತು ರಕ್ಷಣೆಗೋಸ್ಕರ ೧೯೬೪ ರಲ್ಲಿ ಇಟಲಿಯ 'ಕಸದಿಪೊಂಟ್' ಎಂಬಲ್ಲಿ 'ಸೆಂಟ್ರೋ ಕಮ್ಯುನೋ ದಿಸ್ಟಡಿ ಪ್ರಿ ಹಿಸ್ಟಾರಿಕ್ ವವೆಲ್ಕಮೇನಿಕ್ ಎಂಬ ಸಂಸ್ಥೆಯನ್ನು ತೆರೆಯಲಾಯಿತು. ಈ ಸಂಸ್ಥೆಯು 'ವಾಲ್ಕಮೋನಿಕ್' ಬೆಟ್ಟದಲ್ಲಿಯ ಸುಮಾರು ೧.೩೦,೦೦೦

(ಒಂದು ಲಕ್ಷ ಮೂವತ್ತು ಸಾವಿರ) ಬಂಡೆ ಚಿತ್ರಗಳನ್ನು ಶೋಧಿಸಿ, ವಿಶ್ಲೇಷಿಸಿ ಪ್ರಕಟಿಸಿದೆ. ಸಾಂಸ್ಕೃತಿಕ ಸ್ಮಾರಕಗಳು ಮತ್ತು ನೆಲೆಗಳಿಗೆ ಸಂಬಂಧಪಟ್ಟ ಅಂತರ್‌ರಾಷ್ಟ್ರೀಯ ಪರಿಷತ್ತು ಗವಿ ಮತ್ತು ಬಂಡೆಚಿತ್ರಗಳ ಶೋಧನೆ ಅಧ್ಯಯನ ಮತ್ತು ರಕ್ಷಣೆಗೆ ಸಂಬಂಧಪಟ್ಟಂತೆ ೧೯೮೦ ರಲ್ಲಿ ಒಂದು ಅಂತರ್‌ರಾಷ್ಟ್ರೀಯ ಸಮಿತಿಯನ್ನು ರಚಿಸಿತು. ಈ ಅಂತರ್‌ರಾಷ್ಟ್ರೀಯ ಸಮಿತಿಯು ಸದ್ಯಕ್ಕೆ ಪ್ರಪಂಚದ ನಾನಾ ಭಾಗಗಳಲ್ಲಿ ಬಂಡೆ ಚಿತ್ರಕಲೆಯ ಅಧ್ಯಯನ ಕೈಕೊಂಡಿರುವ ತಜ್ಞರ ಮತ್ತು ಅವರ ಸಂಶೋಧನೆಯ ಬಗೆಗೆ ವಿಷಯಗಳನ್ನು ಸಂಗ್ರಹಿಸುತ್ತಿದೆ. ಇವಲ್ಲದೇ ವಿಶ್ವಶೈಕ್ಷಣಿಕ, ವೈಜ್ಞಾನಿಕ ಮತ್ತು ಸಾಂಸ್ಕೃತಿಕ ವಿಭಾಗವು ಬಂಡೆ ಚಿತ್ರಕಲೆಯ ಅಧ್ಯಯನ ಹಾಗೂ ರಕ್ಷಣೆ ವಿಷಯದಲ್ಲಿ ಆಸಕ್ತಿವಹಿಸಿ, ಆಫ್ರಿಕಾ, ಅಮೇರಿಕಾ, ಏಷ್ಯಾ ಮತ್ತು ಯುರೋಪ್ ಖಂಡಗಳಲ್ಲಿಯ ಮಹತ್ವದ ಚಿತ್ರಕಲೆಯ ನೆಲೆಗಳನ್ನು ವಿಶ್ವದ ಆಸ್ತಿ ಎಂದು ಘೋಷಿಸಿ ಅವುಗಳ ರಕ್ಷಣೆಯ ಹೊಣೆಯನ್ನು ಹೊತ್ತುಕೊಂಡಿದೆ. ಹೀಗೆ ಪ್ರಾಗೈತಿಹಾಸ ಬಂಡೆಚಿತ್ರಗಳ ಶೋಧನೆ ಮತ್ತು ಅಧ್ಯಯನವು ಇಂದು ಅಂತರ್‌ರಾಷ್ಟ್ರೀಯ ಗಮನವನ್ನು ಸೆಳೆದ ಮಹತ್ವದ ವಿಷಯವಾಗಿದೆ[೧೧] ಎನ್ನುವಂತಹ ವಿವರಗಳು ತಿಳಿದುಬರುತ್ತವೆ.

**ಭಾರತದಲ್ಲಿ** : ಭಾರತದಲ್ಲಿ ಪ್ರಾಗೈತಿಹಾಸ ಭಿತ್ತಿ ಚಿತ್ರಗಳ ಶೋಧನೆಯು ಕ್ರಿ. ಶ. ೧೮೮೦ ರಲ್ಲಿಯೇ ಪ್ರಾರಂಭವಾಯಿತು. 'ಹರ್ಬರ್ಟ್ಸನ್ ನಾಕ್ಸ್' ಎಂಬವರು ಬಳ್ಳಾರಿಯ ಸಮೀಪದ ಕುಪ್ಪಗಲ್ಲಿನ ಗುಡ್ಡದಲ್ಲಿ ಬಂಡೆಗಳ ಮೇಲೆ ಕುಟ್ಟಿದ ಮತ್ತು ಗೀರಿ ರಚಿಸಿದ ಚಿತ್ರಗಳನ್ನು ನೋಡಿ, ಅವುಗಳ ಛಾಯಾಚಿತ್ರ ತೆಗೆದು 'ರಾಬರ್ಟ ಬ್ರೂಸ್‌ಫೂಟ್' ಅವರಿಗೆ ಕಳುಹಿಸಿದರು. ಮುಂದೆ ಬ್ರೂಸ್‌ಫೂಟ್ ಅವರು ೧೯೧೬ ರಲ್ಲಿ ಪ್ರಕಟಿಸಿದ 'ದಿ ಫುಟ್ ಕಲೆಕ್ಷನ್ ಆಫ್ ಇಂಡಿಯನ್ ಪ್ರಿಹಿಸ್ಟಾರಿಕ್ ಆ್ಯಂಡ್ ಪ್ರೋಟೋ ಹಿಸ್ಟಾರಿಕ್ ಆ್ಯಂಟಿಕ್ವಿಟೀಸ್'ದಲ್ಲಿ ಇವುಗಳ ವಿವರಣೆ ಇದೆ[೧೨] ಎಂಬುದಾಗಿ ತಿಳಿದುಬರುವುದು. ಮಧ್ಯಭಾರತದಲ್ಲಿ ೧೮೮೩ ರಲ್ಲಿ 'ಅರ್ಚಿಬಾಲ್ಡಕಾರ್ಲೈಲ್[೧೩] ಮತ್ತು 'ಜಾನ್‌ಕಾಕಬರ್ನ್'[೧೪] ಅವರುಗಳು ಮಧ್ಯಪ್ರದೇಶದ ಮಿರ್ಜಾಪುರ ಸಮೀಪದ ವಿಂಧ್ಯಪರ್ವತದ ಸಾಲಿನಲ್ಲಿರುವ ಕೈಮೂರ್ ಬೆಟ್ಟಗಳ ಶಿಲಾಶ್ರಯ ವರ್ಣಚಿತ್ರಗಳನ್ನು ಕಂಡುಹಿಡಿದು ಪ್ರಕಟಿಸಿದರು. ಕಾಕ್‌ಬರ್ನ್ ಅವರು[೧೫] ಇದೇ ಅವಧಿಯಲ್ಲಿ ಮಿರ್ಜಾಪುರ ಜಿಲ್ಲೆಯಲ್ಲಿನ ವಿಜಯಫುರ್ ಕೋಟೆಯ ಸಮೀಪದ 'ಘೋರ್‌ಮಾಂಗರ್' ಶಿಲಾಶ್ರಯದಲ್ಲಿನ ಚಿತ್ರಗಳನ್ನು ಪತ್ತೆಮಾಡಿದರು. ಭಾರತದಲ್ಲಿ ಬಂಡೆ ಮೇಲೆ ಗೀರಿ ಮೂಡಿಸಿದ ಚಿತ್ರಗಳನ್ನು ಮೊದಲಬಾರಿ ಕೇರಳದ ಕೋಝಿಕೋಡ್ ಜಿಲ್ಲೆಯ ಎಡಕಲ್ಲುಗುಡ್ಡದ ಗುಹೆಗಳಲ್ಲಿ ಎಫ್. ಫಾವ್‌ಕೆಟ್ ಅವರು[೧೬] ೧೯೦೧ ರಲ್ಲಿ ಪತ್ತೇ ಮಾಡಿದರು. ಮುಂದೆ ೧೯೦೭ ರಲ್ಲಿ 'ಸಿ. ಎ. ಸಿಲ್‌ಬೆರಾಡ್' ಅವರು[೧೭] ಬಂಡಾಜಿಲ್ಲೆಯ ಚಿತ್ರಗಳನ್ನು ಕುರಿತಾಗಿ ಪ್ರಕಟಿಸಿದರು. ಮಧ್ಯಪ್ರದೇಶದ ರಾಯಫುರ್ ಜಿಲ್ಲೆಯ ಸಿಂಗನಪುರ

---

೧೧. ಡಾ. ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಪುಟ ೭

೧೨. ಡಾ. ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಪುಟ ೮

೧೩. Archibald carlleyle : Cave paintings of Kaimur range, Journal of the Royal Asiatic Society of Bengal, 1899

೧೪. John Cockburn : Cave Drawings of Kaimur Range, Journal of the Royal Asiatic Society of Bengal, 1899

೧೫. John Cockburm : "On the recent existence of Rhinoceros in Ganga Valley" Journal of the Royal Asiatic Society of Bangal, 1883

೧೬. F. Fawcett : " Notes on Rock Carving in the Edakal cave", Indian Antiquary, 1901, 30

೧೭. C. A. Silberarrd : Rock Drawing of the Banda District, Journal of the Royal Asiatic Society of Bengal, 1907, Page 567-700

ಶಿಲಾಶ್ರಯದ ಚಿತ್ರಗಳನ್ನು 'ಸಿ. ಡಬ್ಲ್ಯೂ. ಆ್ಯಂಡರ್‌ಸನ್' ಅವರು[೧೮] ಶೋಧಿಸಿದರಲ್ಲದೇ ಇವರು ಈ ತಾಣಗಳಿಗೆ ೧೯೧೦ ರಿಂದ ೧೯೧೪ ರ ವರೆಗಿನ ಅವಧಿಯಲ್ಲಿ ನಾಲ್ಕುಬಾರಿ ಭೇಟಿ ನೀಡಿದರು. ಹೊಷಂಗಾಬಾದ್ ಸಮೀಪವಿರುವ ಆದಮ್‌ಘರ್ ಶಿಲಾಶ್ರಯ ಚಿತ್ರಗಳ ಗುಂಪುಗಳನ್ನು 'ಮನೋರಂಜನ್ ಘೋಷ್' ಅವರು[೧೯] ೧೯೩೨ ರಲ್ಲಿ ಬೆಳಕಿಗೆ ತಂದರು. ಇವರೇ ಮಿರ್ಜಾಪುರ ಮತ್ತು ರಾಯಘರ್ ಶಿಲಾಶ್ರಯ ಚಿತ್ರಗಳ ಬಗ್ಗೆಯೂ ಅಧ್ಯಯನ ಮಾಡಿದ್ದಾರೆ. ಭಾರತದಲ್ಲಿ ಬಂಡೆಯಮೇಲೆ ಕೊರೆದು ಮೂಡಿಸಿದ ಚಿತ್ರಗಳನ್ನು ಮೊದಲಬಾರಿಗೆ ಒರಿಸ್ಸಾದ ಸಂಬಲ್‌ಪುರ ಜಿಲ್ಲೆಯ 'ವಿಕ್ರಮ್ ಕೋಲ್ಸ್' ಎಂಬಲ್ಲಿ ಕೆ. ಪಿ. ಜಯಸ್ವಾಲ್ ಅವರು ೧೯೩೩ ರಲ್ಲಿ ಕಂಡುಹಿಡಿದರು[೨೦] ಎಂಬುದಾಗಿ ತಿಳಿದುಬರುವುದು. ಮಧ್ಯಪ್ರದೇಶದ ಮಹದೇವಬೆಟ್ಟದಲ್ಲಿನ ಪಚ್ಮಮರಿಯಲ್ಲಿಯ ಶಿಲಾಶ್ರಯ ವರ್ಣಚಿತ್ರಗಳನ್ನು ಡಿ. ಎಚ್. ಗಾರ್ಡನ್ ಅವರು[೨೧] ಅಧ್ಯಯನ ಮಾಡಿದರು. ಇವರು ಭಾರತದ ಪ್ರಾಗೈತಿಹಾಸ ಶಿಲಾಶ್ರಯ ಭಿತ್ತಿಚಿತ್ರಗಳ ಬಗ್ಗೆ ಭಾರತ ಮತ್ತು ವಿದೇಶದ ಅನೇಕ ಪತ್ರಿಕೆಗಳಲ್ಲಿ ಹಲವಾರು ಲೇಖನಗಳನ್ನೂ ಬರೆದಿದ್ದಾರೆ. ವಿ. ಎಸ್. ವಾಕಣಕರ್ ಅವರು ಭಾರತೀಯ ಪ್ರಾಗೈತಿಹಾಸ ಶಿಲಾಶ್ರಯ ಚಿತ್ರಗಳ ಅಧ್ಯಯನ ಕ್ಷೇತ್ರಕ್ಕೆ ಅಮೂಲ್ಯ ಕಾಣಿಕೆ ಕೊಟ್ಟಿದ್ದಾರೆ. ಈ ಕ್ಷೇತ್ರದ ಇವರ ಸಾಧನೆಗಾಗಿ ಭಾರತ ಸರಕಾರವು ಇವರಿಗೆ 'ಪದ್ಮಶ್ರೀ' ಪ್ರಶಸ್ತಿಯನ್ನು ಕೊಡಮಾಡಿದೆ. ಭಿಂಬೇಟ್ಕಾ ಪ್ರದೇಶದಲ್ಲಿ ಕೂಲಂಕಷವಾಗಿ ಅನ್ವೇಷಣೆಮಾಡಿದ ವಾಕಣಕರ್ ಅವರು ಸುಮಾರು ಐದುನೂರು ಶಿಲಾಶ್ರಯಗಳಲ್ಲಿ ಚಿತ್ರಗಳಿರುವುದನ್ನು ಗುರುತಿಸಿದರು. ಹಾಗೆಯೇ ಭಾರತದ ಉದ್ದಗಲಕ್ಕೂ ಸಂಚರಿಸುತ್ತ ಬಂಡೆ ಚಿತ್ರಗಳ ನೆಲೆಗಳನ್ನು ಅರಸುತ್ತ ಬಾದಾಮಿ ಪ್ರದೇಶದವರೆಗೂ ಬಂದು ಇಲ್ಲಿಯೂ ಕೆಲವು ಚಿತ್ರಗಳನ್ನು ಶೋಧಿಸಿದರು. ಅವರು ಹೀಗೆ ಸಂಗ್ರಹಿಸಿದ ಬಂಡೆ ಚಿತ್ರಗಳ ವಿಷಯವಾಗಿ 'ಪೇಂಟೆಡ್ ರಾಕ್ ಶೆಲ್ಟರ್ಸ್ ಆಫ್ ಇಂಡಿಯಾ' ಎಂಬ[೨೨] ಪಿಹೆಚ್.ಡಿ. ಮಹಾಪ್ರಬಂಧವನ್ನು ಬರೆದರು. ಅದೇ ರೀತಿ ಆರ್. ಕೆ. ವರ್ಮಾ[೨೩] ಎಸ್. ಕೆ. ಪಾಂಡೇ[೨೪] ಎಫ್. ಆರ್. ಅಲಚಿನ್,[೨೫] ಮತ್ತು ಜೆ. ಜಾಕೋಬ್‌ಸನ್[೨೬] ಅವರುಗಳೂ ಸಹಿತ ಭಾರತೀಯ ಶಿಲಾಶ್ರಯ ಚಿತ್ರಕಲೆಯಬಗೆಗೆ ಸಂಶೋಧನಾ ಪ್ರಬಂಧಗಳನ್ನು ರಚಿಸಿದ್ದಾರೆ.

---

೧೮. C. W. Anderson : Rock Paintings in Singhanpur, Journal of the Bihar and Orissa Research Society, IV, No. 2, 1918, Page 298,306

೧೯. Manoranjan Ghosh : Memoirs of Archaeological Survey of India, V. 24, 1934.

೨೦. Yashodhar Mathapal : Prehistoric Rock paintings of Bhimbetka, Page 9

೨೧. D. H. Gordon : Rock Paintings of the Mahadeo Hills, Indian Arts and Letters, 10 No. 1, 1936

೨೨. V. S. Wakankar : "Painted Rock-shelters of India, (Ph.D. Thesis), Pune University Pune 1972

೨೩. R. K. Verma : Stone Age Cultures of Mirzapur (D.Phil Thesis) Allahabad Univesity, 1964

೨೪. S. K. Pandey : Indian Rock Art

೨೫. F. R. Allchin : "Development of early cultures in Raichur districr of Hyderabad, (Ph.D. Thesis) London, 1954

೨೬. J. Jacobson : Michrolithic context in the vindhya Hills of central India, (Ph. D. Thesis) columbia University, 1970

ಶಂಕರ್ ತಿವಾರಿ ಅವರು[೨೭] ಭೋಪಾಲ್ ಸುತ್ತಲಿನ ಪ್ರದೇಶದಲ್ಲಿ ಅನೇಕ ಶಿಲಾಶ್ರಯ ಚಿತ್ರಗಳನ್ನು ಪತ್ತೆಮಾಡಿ ಅಭ್ಯಸಿಸಿದ್ದಾರೆ. 'ಇರ್ವಿನ್‌ನ್ಯೂ ಮೇಯರ್'[೨೮] ಭಾರತದ ಶಿಲಾಶ್ರಯ ಚಿತ್ರಗಳ ಕುರಿತಾಗಿ ತೌಲನಿಕವಾಗಿ ಚರ್ಚಿಸಿ ಮೌಲಿಕವಾದ ಕೃತಿ ರಚಿಸಿದ್ದಾರೆ. ಯಶೋಧರ ಮತಪಾಲ್ ಅವರು ಭೂಪಾಲ್ ಸಮೀಪದ 'ಪತನಿ-ಕಿ-ಪಹಾರಿ' ಎಂಬ ಬೆಟ್ಟಸಾಲಿನಲ್ಲಿ[೨೯] ಶಿಲಾಶ್ರಯ ವರ್ಣಚಿತ್ರಗಳನ್ನು ಕಂಡುಹಿಡಿದರಲ್ಲದೇ ಭಿಂಬೇಟ್ಕಾ ಪ್ರದೇಶದ ಪ್ರಾಗೈತಿಹಾಸಿಕ ಶಿಲಾಶ್ರಯ ಚಿತ್ರಗಳ ಬಗೆಗೆ ಸಂಶೋಧನಾ ಕೃತಿ[೩೦] ರಚಿಸಿದ್ದಾರೆ. ವಾಕಣಕರ್ ಮತ್ತು ರಾಬರ್ಟಬ್ರೂಕ್ಸ್ ಅವರು ಕೂಡಿಕೊಂಡು[೩೧] 'ಸ್ಟೋನ್‌ಏಜ್ ಪೇಂಟಿಂಗ್ ಇನ್ ಇಂಡಿಯಾ' ಮತ್ತು 'ಇಂಡಿಯನ್ ರಾಕ್ ಪೇಂಟಿಂಗ್ಸ್' ಎಂಬ ಕೃತಿಗಳನ್ನು ರಚಿಸಿದ್ದು, ಇವು ಭಾರತೀಯ ಪ್ರಾಗೈತಿಹಾಸ ಶಿಲಾಶ್ರಯ ಚಿತ್ರಗಳ ಬಗೆಗೆ ತೌಲನಿಕವಾದ ವಿವರಗಳನ್ನು ಒದಗಿಸಿಕೊಡುತ್ತವೆ. ಆಂಧ್ರಪ್ರದೇಶದಲ್ಲಿ ಇದುವರೆಗೂ ಶೋಧಿಸಲಾದ ಚಿತ್ರಗಳ ಕುರಿತಾಗಿ ಶ್ರೀ ಚಂದ್ರಮೌಳಿಯವರು ಸಂಶೋಧನ ಪ್ರಬಂಧವನ್ನು ರಚಿಸಿದ್ದಾರೆ ಎಂದು ತಿಳಿದುಬರುವುದು. ಇಂತಹ ಕೃತಿಗಳಲ್ಲದೇ ದೆಹಲಿಯ 'ಇಂದಿರಾಗಾಂಧಿ ನ್ಯಾಷನಲ್ ಸೆಂಟರ್ ಫಾರ್ ದಿ ಆರ್ಟ್ಸ್' ಎಂಬ ಸಂಸ್ಥೆಯು ಭಾರತದಲ್ಲಿಯ ಪ್ರಾಗೈತಿಹಾಸ ಬಂಡೆಚಿತ್ರಗಳ ವಿಶೇಷ ಅಧ್ಯಯನ ಕೈಗೊಂಡಿದೆ. ಅಲ್ಲದೇ ಭಾರತದಲ್ಲಿ ಇಂತಹ ಅಧ್ಯಯನ. ಶೋಧನೆಗಳನ್ನು ಒಂದೆಡೆಯಲ್ಲಿ ಚರ್ಚಿಸಲು 'ರಾಕ್ ಆರ್ಟ್ಸ್ ಸೊಸೈಟಿ ಆಫ್ ಇಂಡಿಯಾ' ಮತ್ತು 'ಇಂಡಿಯನ್ ರಾಕ್ ಆರ್ಟ್ಸ್ ರಿಸರ್ಚ ಅಸೋಶಿಯೇಷನ್, ಸಗರ' ಎಂಬ ಎರಡು ಸಂಸ್ಥೆಗಳು ಹುಟ್ಟಿಕೊಂಡಿವೆ. ಇವುಗಳಲ್ಲಿ ಮೊದಲನೆಯದು 'ಪುರಕಲಾ' ಎಂಬ ನಿಯತಕಾಲಿಕೆಯನ್ನು ಪ್ರಕಟಿಸುತ್ತಿದೆ.

**ಕರ್ನಾಟಕದಲ್ಲಿ :** ಕರ್ನಾಟಕದಲ್ಲಿ ಲಿಯೋನಾರ್ಡಮನ್ ಅವರ ಶೋಧನೆಯ ನಂತರ ೧೯೪೦ ರ ಸುಮಾರಿಗೆ ಆಗಿನ ಹೈದರಾಬಾದ್ ಸಂಸ್ಥಾನದ ಪುರಾತತ್ವ ಸರ್ವೇಕ್ಷಣ ಮತ್ತು ಭೂವಿಜ್ಞಾನ ವಿಭಾಗಗಳು ಮಸ್ಕಿ, ಕಲ್ಲೂರು. ಬಲಚಕ್ರ, ಮತ್ತು ಅತನೂರು ಎಂಬಲ್ಲಿನ ಕುಟ್ಟಿದ, ಗೀರಿದ ರೇಖಾಚಿತ್ರಗಳು ಮತ್ತು ಗವಿವರ್ಣ ಚಿತ್ರಗಳನ್ನು ಕುರಿತು ತಮ್ಮ ವಾರ್ಷಿಕ ವರದಿಗಳಲ್ಲಿ ಪ್ರಕಟಿಸಿವೆ. ಹಿಂದಿನ ಮುಂಬೈ ಸರ್ಕಾರದ ಕನ್ನಡ ಸಂಶೋಧನ ಸಂಸ್ಥೆಯು ಕುಳ್ಳೊಳ್ಳಿ (ಜಮಖಂಡಿ ತಾಲೂಕು)ಯಲ್ಲಿನ ಕುಟ್ಟಿದ, ಗೀರಿದ ಚಿತ್ರಗಳನ್ನು ೧೯೫೧ ರಲ್ಲಿ ಪ್ರಕಟಿಸಿತು. ಕೆಂಬ್ರಿಡ್ಜ ವಿಶ್ವವಿದ್ಯಾಲಯದ ಡಾ. ಅಲ್ಚಿನ್ ದಂಪತಿಗಳು ಪಿಕ್ಕಿಹಾಳ್‌ದಲ್ಲಿ ಈ ತರಹದ ಬಂಡೆಚಿತ್ರಗಳನ್ನು ಕಂಡುಹಿಡಿದರು.

ಸಂಗನಕಲ್ಲು. ಬೆಳಗಲ್ಲು ಕುರುಗೋಡು, ಅಪ್ಪಯ್ಯನ ಹಳ್ಳಿ ಮತ್ತು ಮಲ್ಲಾಪುರಗಳಲ್ಲಿಯ ಬಂಡೆಚಿತ್ರಗಳನ್ನು ಈಚಿನ ಎರಡು ದಶಕಗಳಲ್ಲಿ ಡಾ. ಎಂ. ಎಸ್. ನಾಗರಾಜರಾವ್, ಮತ್ತು ರು. ಮ. ಷಡಕ್ಷರಯ್ಯ ಮೊದಲಾದವರು

---

೨೭. i) Shankar Tiwari : Rock Paintings at Chiklod, Prachya Pratibha, Bhopal, V. No. 2, 1975, Page 30
ii) Shankar Tiwari : Jaora the shelter of the Largest Rock Painting in India, Prachya Pratibha, Bhopal V. No. 2, 1975, Page 93-96
iii) Shankar Tiwari : Painted Rock Shelters of 'S-Belt' and the Chalcolithic cultures of Betwa Source region, Prachya Pratibha, V, No. 2, Bhopal 1976
iv) Shankar Tiwari : Excavation at Bhimbetka, A erassessment, Rock Art in India, 1984

೨೮. E. Neumayer : "Prehistoric Indian Rock Paintings, Oxford University Press, 1983

೨೯. Yashodhar Mathpal : Patani Ki Pahari, Pre-historic Art. Site, National Herald, Lucknow, May 22, 1977.

೩೦. Yashodhar Mathpal : Prehistori Rock Paintings of Bhimbetka, Abhinava Publications, New Delhi, 1984

೩೧. i) V. S. Wakankar, R. R. Brooks : Stone age Painting in India, D. P. Taraporevala Sons & Co, Bombay, 1976.
ii) V. S. Wakankar, R. R. Brooks : Indian Rock Paintings, Smithsonian Institute, Washington D. C. 1974

ಶೋಧಿಸಿದರು. ಲಿಯೋನಾರ್ಡಮನ್ ಅವರು ಹಿಂದೆ ಹಿರೆಬೆನಕಲ್‌ನಲ್ಲಿ ಶೋಧಿಸಿದ ಚಿತ್ರಗಳ ನೆಲೆಗಳನ್ನು ಪುನಃ ಗುರುತಿಸುವ ಸಂದರ್ಭದಲ್ಲಿ ಅ. ಸುಂದರ ಅವರು ಅದೇ ಪ್ರದೇಶದಲ್ಲಿ ಮತ್ತೆ ಎಂಟು ಸ್ಥಳಗಳಲ್ಲಿ ಬಂಡೆ ಚಿತ್ರಗಳನ್ನು ಶೋಧಿಸಿದರು.

ಅ. ಸುಂದರ ಅವರು ೧೯೭೪ ರಲ್ಲಿ ಮತ್ತೆ ಅನ್ವೇಷಣೆ ಕಾರ್ಯ ಕೈಗೊಂಡಾಗ ಉತ್ತರ ಕರ್ನಾಟಕದ ಅನೇಕ ಸ್ಥಳಗಳಲ್ಲಿ ಬಂಡೆ ಚಿತ್ರಗಳನ್ನು ಶೋಧಿಸಿದರು. ಇವುಗಳಲ್ಲಿ ರಾಮದುರ್ಗ, ಬಾದಾಮಿ, ಹೊಸಮಹಾಕೂಟ, ಐಹೊಳಿ. ಕೊಪ್ಪಳ. ಬಿಳಿಭಾವಿ. ಮಲ್ಲಾಪುರ. ಆನೆಗೊಂದಿ. ತಿಮ್ಮಲಾಪುರ, ನಾರಾಯಣಪುರ, ಬಂಡಿಹಲಾಪುರ, ಹಾಸ್ಕಿ. ಬೈಲಮರ್ಚಡ. ತಾವರಗೆರೆ. ಕುರಗೋಡು. ಹಳಕುಂಡಿ, ಹಂಪಿ, ಬ್ರಹ್ಮಗಿರಿ, ಜಟ್ಟಿಂಗರಾಮೇಶ್ವರ, ಚಿತ್ರದುರ್ಗ. ಚಂದ್ರವಳ್ಳಿ, ಜೋಳ್. ಹೊಳಲೂರು. ಮುಂತಾದ ಸ್ಥಳಗಳಲ್ಲಿನ ಚಿತ್ರಗಳು[೩೨] ಮುಖ್ಯವಾಗಿವೆ. ಚಿತ್ರದುರ್ಗದ ಎಚ್. ಶ್ರೀಶೈಲ ಆರಾಧ್ಯ ಅವರು ಚಿತ್ರದುರ್ಗ, ಚಂದ್ರವಳ್ಳಿ ಮತ್ತು ಬ್ರಹ್ಮಗಿರಿ ಸುತ್ತಮುತ್ತ ಕೆಲವು ಬಂಡೆ ಚಿತ್ರಗಳನ್ನು ಕುರಿತಾಗಿ ತಮ್ಮ ಸಂಶೋಧನೆಯನ್ನು ಹಾದಿಯಲ್ಲಿ ಎಂಬ ಪುಸ್ತಕದಲ್ಲಿ ಬರೆದಿದ್ದಾರೆ. ಈ ಪ್ರದೇಶದಲ್ಲಿ ಸಂಶೋಧನೆಯನ್ನು ಮುಂದುವರಿಸಿದ ಹಂಪಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರವಿಭಾಗದ ಶ್ರೀ ಲಕ್ಷ್ಮಣ ತೆಲಗಾವಿ ಅವರು ಆ ಕುರಿತಾಗಿ ಅಧ್ಯಯನ ಮಾಡುತ್ತಿದ್ದಾರೆ. ಕುಂದಾಪುರದ ಹತ್ತಿರವಿರುವ ಗಾವಳಿ ಎಂಬಲ್ಲಿನ ಬಯಲುಬಂಡೆ ಚಿತ್ರಗಳನ್ನು ವಸಂತ ಶೆಟ್ಟಿಯವರು ಶೋಧಿಸಿದ್ದಾರೆ. ಸೋಂದಾದಲ್ಲಿನ ಶ್ರೀ ಸ್ವರ್ಣವಲ್ಲಿ ಮಠದ ಹತ್ತಿರದ ಕುಟ್ಟಿದ ಚಿತ್ರಗಳ ಸಂಕಲನವನ್ನು ಎಚ್. ಆರ್. ರಘುನಾಥ ಭಟ್ಟರು ಶೋಧಿಸಿದ್ದಾರೆ. ಸಿದ್ಧನಕೊಳ್ಳದಲ್ಲಿ ಚರ್ಟಕಲ್ಲಿನ ಮೇಲೆ ಕೊರೆದ ಸೂಕ್ಷ್ಮ ಶಿಲಾಯುಗ ಕಾಲದ್ದೆಂದು ನಂಬಲಾಗಿರುವ ರೇಖಾಕೃತಿಯನ್ನು ಡಾ. ಎಸ್. ವಿ. ಪಾಡಿಗಾರ್ ಗುರುತಿಸಿದ್ದಾರೆ.

ಇತ್ತೀಚೆಗೆ ಕುಷ್ಟಗಿ ತಾಲೂಕಿನ ತಾವರಗೇರಾದಲ್ಲಿ ಸುಮಾರು ೭ ಸ್ಥಳಗಳಲ್ಲಿ ಶಿಲಾಶ್ರಯ ವರ್ಣಚಿತ್ರಗಳನ್ನು ವಿಲಾಸ್ ಮ. ಜೋಗುಳ್ ಎಂಬುವರು ಕಂಡುಹಿದಿದ್ದಾರೆ. ದೊಡ್ಡ ಬಳ್ಳಾಪುರ ತಾಲೂಕಿನ ಸಾಸಲು ಎಂಬ ಗ್ರಾಮದ ಬಳಿ ಜೆ. ವಿಶ್ವನಾಥ ಮತ್ತು ಎಂ. ಜಿ. ಮಂಜುನಾಥ ಎಂಬವರು ಬಂಡೆಯ ಮೇಲೆ ಕುಟ್ಟಿರಚಿಸಲ್ಪಟ್ಟ ಬೃಹತ್ ಶಿಲಾಯುಗದ ಚಿತ್ರಗಳನ್ನು ಶೋಧಿಸಿದ್ದಾರೆ. ಕನಕಪುರ ತಾಲೂಕಿನ ಹಲಸೂರು ಸಮೀಪದ 'ಸೂಳೇಕಲ್ ಮಠ' ಎಂಬಲ್ಲಿ ಶಿಲಾಗುಹೆಗಳ ವರ್ಣಚಿತ್ರಗಳನ್ನು ಬೆಂಗಳೂರಿನ ಮುತ್ತುರಾಜ್ ಎಂಬವರು ಬೆಳಕಿಗೆ ತಂದಿದ್ದಾರೆ. ಕೊಪ್ಪಳದ ಕೆಲವು ಶಿಲಾಶ್ರಯ ವರ್ಣಚಿತ್ರಗಳನ್ನು ಚಿತ್ರದುರ್ಗದ ಟಿ. ಶಂಭುಲಿಂಗಪ್ಪ ಅವರು ಶೋಧಿಸಿದ್ದಾರೆ.

ಪ್ರಾಗೈತಿಹಾಸಿಕ ಬಂಡೆ ಭಿತ್ತಿಚಿತ್ರಗಳು ಆಕಸ್ಮಿಕವಾಗಿಯೂ ಇನ್ನೂ ಶೋಧವಾಗುತ್ತಲೇ ಇವೆ. ಒಂದು ವರ್ಷದ ಹಿಂದೆ ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಆವರಣದ ಸ್ವಚ್ಛತಾಕಾರ್ಯ ಕೈಕೊಂಡಾಗ ಅದೇ ವಿಶ್ವವಿದ್ಯಾಲಯದ ಶಿಲ್ಪಕಲಾ ವಿಭಾಗದ ಮುಖ್ಯಸ್ಥರಾದ ಡಾ. ಎಸ್. ಸಿ. ಪಾಟೀಲ ಅವರು ಬಂಡೆಯ ಮೇಲೆ ಆಕಸ್ಮಿಕವಾಗಿ ಕೆಲವು ಕುಟ್ಟು ಚಿತ್ರಗಳನ್ನು ಕಂಡರು. ಅದೇ ಜಾಡುಹಿಡಿದು ನೂರುಗಜಗಳ ಅಂತರದಲ್ಲಿ ಸುತ್ತಾಡಿದಾಗ ಇನ್ನೂ ಒಂದೆರಡು ಕುಟ್ಟುಚಿತ್ರಗಳು ಕಂಡುಬಂದವು. ಇದೇ ಆವರಣದ ಗಿರಿಸೀಮೆಯಲ್ಲಿ ಈಗಾಗಲೇ ಕೊರೆದು ರಚಿಸಿದ ಚಿತ್ರಗಳನ್ನು ಕಂಡುಹಿಡಿಯಲಾಗಿತ್ತು. ಮುಂದೆ ಈ ಶಿಲ್ಪಕಲಾ ವಿಭಾಗವು

---

೩೨. ಹೆಚ್ಚಿನ ವಿವರಗಳಿಗೆ ನೋಡಿರಿ : ಡಾ. ಅ. ಸುಂದರ : ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ. ಪುಟ ೧೦-೧೨

ಬಾದಾಮಿಯ ಬನಶಂಕರಿಗೆ ಸ್ಥಳಾಂತರಗೊಂಡಾಗ ಅಲ್ಲಿಯೂ ಶೋಧನಾಕಾರ್ಯ ಮುಂದುವರೆಸಿದ ಡಾ. ಎಸ್. ಸಿ. ಪಾಟೀಲರು ಬಾದಾಮಿಯ ಸುತ್ತಲಿನ ಪರಿಸರದಲ್ಲಿ ಅವರ ಸಂಗಡಿಗರೊಂದಿಗೆ ಸುಮಾರು ೧೫ ಕಡೆಗೆ ಹೊಸದಾಗಿ ಚಿತ್ರಗಳನೆಲೆಗಳನ್ನು ಇತ್ತೀಚೆಗೆ ಶೋಧಿಸಿದ್ದಾರೆ. ಇನ್ನೂ ಇಂತಹ ನೆಲೆಗಳು ಶೋಧವಾಗುತ್ತಲೆ ಇವೆ. ಉತ್ತರ ಕನರ್ಾಟಕ ಪ್ರಾಗೈತಿಹಾಸಿಕ ಕಲೆಯ ಮಹತ್ವದ ಕಣಜವಾಗಿದೆ.

ಹೀಗೆ ಕರ್ನಾಟಕದಲ್ಲಿಯೂ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳ ಕುರಿತಾಗಿ ಶೋಧನೆ, ಅಧ್ಯಯನ, ಆಸಕ್ತಿಗಳು ಕ್ರಮೇಣ ಹೆಚ್ಚುತ್ತಿದ್ದರೂ ಉತ್ತರ ಭಾರತಕ್ಕೆ ಹೋಲಿಸಿದರೆ ನಮ್ಮಲ್ಲಿ ಆ ಕುರಿತಾಗಿ ಇನ್ನೂ ಪ್ರಯತ್ನಗಳು ತೀರ್ವವಾಗಬೇಕೆಂದೇ ಹೇಳಬೇಕಾಗುತ್ತದೆ.

**III. ತಂತ್ರಗಾರಿಕೆ :** ಪ್ರಾಗೈತಿಹಾಸಿಕ ಭಿತ್ತಿಚಿತ್ರರಚನಾಕಾರನು ತನಗೆ ತಿಳಿದ ವಿಧಾನಗಳಿಂದ ಬಣ್ಣ, ಕುಂಚ, ಉಳಿ. ಅಂಟುಮಾಧ್ಯಮಗಳಂತಹ ಪರಿಕರಗಳನ್ನು ತಯಾರಿಸಿಕೊಂಡು ಚಿತ್ರರಚನೆ ಮಾಡಿದ್ದಾನೆ. ಸ್ವಾಭಾವಿಕವಾಗಿ ದೊರೆಯುತ್ತಿದ್ದ ಮಣ್ಣಿನ ಗಟ್ಟಿಗಳಿಂದ ಬಣ್ಣ, ಗಿಡದ ಟೊಂಗೆ ಪ್ರಾಣಿಗಳ ಕೂದಲುಗಳಿಂದ ಕುಂಚ, ರಕ್ತದಿಂದ ಅಂಟುಮಾಧ್ಯಮ. ಕಲ್ಲಿನಿಂದ ಚೂಪಾದ ಸಾಧನ ತಯಾರಿಸಿಕೊಂಡು ತನ್ನ ಚಿತ್ರರಚನೆಯ ತಂತ್ರಗಾರಿಕೆಯನ್ನು ಪೂರೈಸಿಕೊಂಡಿದ್ದಾನೆ ಎಂದು ವಿದ್ವಾಂಸರು ಗುರುತಿಸುತ್ತಾರೆ. ಈ ಹಿನ್ನೆಲೆಯಲ್ಲಿ ಪ್ರಾಗೈತಿಹಾಸಿಕ ಭಿತ್ತಿ ಚಿತ್ರರಚನೆಯ ತಂತ್ರಗಾರಿಕೆಯಲ್ಲಿ ಒಳಗೊಳ್ಳುವ ಅಂಶಗಳನ್ನು ಈ ಕೆಳಗಿನಂತೆ ವಿಂಗಡಿಸಿಕೊಳ್ಳಬಹುದು.

೧. ಭಿತ್ತಿ
೨. ಚೂಪಾದ ಸಾಧನ
೩. ಬಣ್ಣ
೪. ಅಂಟುಮಾಧ್ಯಮ
೫. ಬಣ್ಣಮಿಶ್ರಗೊಳಿಸುವ ಬಟ್ಟಲು
೬. ಕುಂಚ
೭. ಬಣ್ಣ ಲೇಪನ ವಿಧಾನ

೧. **ಭಿತ್ತಿ :** ಪ್ರಾಗೈತಿಹಾಸಿಕ ಚಿತ್ರಗಳು ಬಂಡೆಯ ಮೇಲೆ, ಬಂಡೆಯಾಸರೆಯಲ್ಲಿ ರಚನೆಯಾಗಿದ್ದು ಬಂಡೆಗಳ ಮೈ ಚಿತ್ರರಚನಾ ಭಿತ್ತಿಯಾಗಿದ್ದು ಇಲ್ಲಿ ಕಂಡುಬರುತ್ತದೆ. ಬಂಡೆಗಳ ಮೈಮೇಲೆ ನೇರವಾಗಿ ಚಿತ್ರರಚನೆಮಾಡಿದ್ದು ಅಧಿಕವಾಗಿದ್ದು. ಬಂಡೆಯ ಮೇಲೆ ಯಾವುದೇ ಮಿಶ್ರಣ ಲೇಪನಮಾಡಿ ಪ್ರತ್ಯೇಕ ಭಿತ್ತಿಯನ್ನು ರೂಪಿಸಿರುವುದು ಕಡಿಮೆ. ಚಿತ್ರರಚನೆಯ ಭಿತ್ತಿಯಾಗಿ ಬಳಸಿಕೊಂಡ ಬಂಡೆಯ ಮೈಗಳು ವಿವಿಧ ವಿನ್ಯಾಸದಲ್ಲಿರುವುದು ಕಂಡುಬರುವುದು. ಹಂಪಿಯ ಬರಮದೇವರ ಗುಂಡದ ಹತ್ತಿರದ ಚಿತ್ರಗಳು ಅರ್ಧಚಂದ್ರಾಕೃತಿಯ ಟೊಳ್ಳುಭಾಗದ ಬಂಡೆಯ ಒಳಗೆ ಚಿತ್ರಿಸಿದ್ದರೆ, ಆನೆಗೊಂದಿಯ ಸಮೀಪದ ಒನಕೆ ಕಿಂಡಿಯಲ್ಲಿನ ಕೆಲವು ಚಿತ್ರಗಳು ಗುಹೆಯಬಾಗಿಲಲ್ಲಿ ಚಾಚಿಕೊಂಡ ಕಲ್ಲಿನ ಕೆಳಭಾಗದಲ್ಲಿ ರಚನೆಯಾಗಿವೆ. ಬಾದಾಮಿಯಲ್ಲಿನ ರಂಗನಾಥ ಗುಡ್ಡದ ಚಿತ್ರಗಳು ಬೃಹತ್ ಬಂಡೆಯೊಂದರ ನುಣುಪಾದ, ಸಮತಟ್ಟಾಗಿರುವ, ತಗ್ಗು ಪ್ರದೇಶದಲ್ಲಿ ರಚನೆಯಾಗಿದ್ದರೆ, ಕನ್ನಡ ವಿಶ್ವವಿದ್ಯಾಲಯದ ಆವರಣದಲ್ಲಿ ಪೂರ್ವಕ್ಕಿರುವ ಕೋಡುಗಲ್ಲೊಂದರ ಮೇಲೆ ಬಾಗಿಕೊಂಡಂತಿರುವ ಭಾಗದಲ್ಲಿ ಚಿತ್ರವಿದೆ. ಹೀಗೆ

ಪ್ರಾಗೈತಿಹಾಸಿಕ ಚಿತ್ರರಚನೆಯ ಭಿತ್ತಿಗಳು ವೈವಿಧ್ಯತೆಯಿಂದ ಕೂಡಿರುವುದು ಕಂಡುಬರುತ್ತದೆ. ಈ ರೀತಿಯ ಭಿತ್ತಿಯಲ್ಲಿ ಪ್ರಾಗೈತಿಹಾಸಿಕ ಮಾನವರು ಚೂಪಾದ ಸಾಧನಬಳಸಿ, ಬಣ್ಣಕುಂಚಗಳನ್ನು ಬಳಸಿ ಚಿತ್ರರಚನೆ ಮಾಡಿದ್ದಾರೆ.

೨. **ಚೂಪಾದ ಸಾಧನ :** ಬಂಡೆಗಳ ಮೇಲೆ ಪ್ರಾಗೈತಿಹಾಸಿಕ ಮಾನವರು ಕೊರೆದು ರಚಿಸಿದ ಮತ್ತು ಏಕಪ್ರಕಾರವಾಗಿ ಕುಟ್ಟಿರಚಿಸಿದ ಚಿತ್ರಗಳು ಕಂಡುಬಂದಿದ್ದು. ಇವುಗಳನ್ನು ರಚಿಸಲು ಅವರು ಚೂಪಾದ ಸಾಧನ ಬಳಸಿರಬಹುದೆಂದು ಅಭಿಪ್ರಾಯಪಡಲಾಗಿದೆ. ಇದಕ್ಕಾಗಿ ಅವರು ಹರಿತ ಮೊನೆಯುಳ್ಳ ಕಲ್ಲಿನ ಚಕ್ಕೆ (Burin)ಯನ್ನು ಪ್ರಾಣಿಗಳ ಮೂಳೆಯ ಟೊಳ್ಳು ಭಾಗದಲ್ಲಿ ಸಿಕ್ಕಿಸಿ ಭದ್ರಪಡಿಸಿ ಹಿಡಿಯಲು ಅನುಕೂಲವಾಗುವಂತಹ ಸಾಧನ ತಯಾರಿಸಿಕೊಂಡಿರಬಹುದು. ಇಲ್ಲವೇ ಚೂಪುತುದಿಯಿರುವ ಹಿಂದೆ ಮೊಂಡವಾಗಿದ್ದು ಹಿಡಿಯಲು ಅನುಕೂಲವಾಗಿರುವ ಉದ್ದನೆಯ ಕಲ್ಲು ತುಂಡಿನಿಂದ ಕುಟ್ಟಿ. ಕೊರೆದು ಚಿತ್ರಗಳನ್ನು ರಚಿಸಿರಬಹುದು[೩೩] ಎನ್ನಲಾಗುತ್ತದೆ. ಕಬ್ಬಿಣ ಯುಗಕ್ಕೆ ಬಂದಾಗ ಚೂಪಾದ ಶಿಲೆಯ ಬದಲಾಗಿ ಲೋಹದ ಉಳಿಯನ್ನೂ ಬಳಸಿದಂತೆ ತೋರುತ್ತದೆ. ಮೊದಲು ಬೇಕಾದ ಆಕಾರವನ್ನು ಬಂಡೆಯ ಮೇಲೆ ತೆಳುವಾದ ರೇಖೆಯಿಂದ ಮೂಡಿಸಿ ನಂತರ ಆ ರೇಖೆಗುಂಟ ಇಂತಹ ಚೂಪಾದ ಸಾಧನಗಳಿಂದ ಏಕಪ್ರಕಾರವಾಗಿ ಕುಟ್ಟುತ್ತ ಇಲ್ಲವೇ ಆಳವಾಗಿ ಕೊರೆದು ಚಿತ್ರಗಳನ್ನು ರಚಿಸಿರುವಂತೆ[೩೪] ಕಂಡುಬರುತ್ತದೆ ಎನ್ನುವ ಮಾತು ಯೋಗ್ಯವೆನಿಸುತ್ತದೆ. ಹೀಗೆ ಚೂಪಾದ ಸಾಧನದಿಂದ ಕುಟ್ಟಿಕೊರೆದು ರಚಿಸಿದ ಬಂಡೆಯ ಮೇಲಿನ ಭಿತ್ತಿಚಿತ್ರಗಳು ಕರ್ನಾಟಕದಲ್ಲಿ ಬಾಗಲಕೋಟ ಜಿಲ್ಲೆಯ ಜಮಖಂಡಿ ತಾಲೂಕಿನ ಕುಳ್ಳೊಳ್ಳಿಯಲ್ಲಿ. ಬೆಳಗಾಂವ ಜಿಲ್ಲೆಯ ಸೌದತ್ತಿ ತಾಲೂಕಿನ ನವಿಲುತೀರ್ಥ, ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲೂಕಿನ ಬೋಳೆ, ಚಿತ್ರದುರ್ಗ ಪ್ರದೇಶ, ಕೊಪ್ಪಳ, ಶಿವಮೊಗ್ಗ ಜಿಲ್ಲೆಯ ಹೊಳಲೂರು, ಬಳ್ಳಾರಿ ಜಿಲ್ಲೆಯ ಕುಪ್ಪಗಲ್, ಅಪ್ಪಯ್ಯನಹಳ್ಳಿ, ಸಂಗನಕಲ್, ಕುರಗೋಡು, ಹಳಕುಂಡಿ. ಬೆಳಗಲ್. ರಾಜಾಪುರ. ಬೈರನಾಯಕನಹಳ್ಳಿ, ರಾಯಚೂರು ಜಿಲ್ಲೆಯ ಮಸ್ಕಿ, ಪಿಕ್ಕಿಹಾಳ, ತಾವರಗೆರೆ, ಹಿಲ್ಲಮರಾಯನಗುಡ್ಡ, ಕಲ್ಲೂರುಗಳಲ್ಲಿ ಕಂಡುಬರುತ್ತವೆ.

೩. ಬಣ್ಣ : ಪ್ರಾಗೈತಿಹಾಸಕಾಲದ ಮಾನವನು ಬಂಡೆಗಳ ಮೇಲೆ ಚೂಪಾದ ಸಾಧನದಿಂದ ಕುಟ್ಟಿ ಗೀರಿ, ಕೊರೆದು ಚಿತ್ರರಚಿಸಿದಂತೆಯೇ. ಸ್ವಾಭಾವಿಕವಾಗಿ ಪ್ರಕೃತಿಯಲ್ಲಿ ದೊರೆಯುತ್ತಿದ್ದ ವಸ್ತುಗಳಿಂದ ಬಣ್ಣಗಳನ್ನು ತಯಾರಿಸಿಕೊಂಡು ಆ ಬಣ್ಣದಿಂದಲೂ ಚಿತ್ರರಚನೆ ಮಾಡಿದ್ದಾನೆ. ಇದಕ್ಕಾಗಿ ಆತ ಕಬ್ಬಿಣದ ಅದಿರುಗಳು ಇಂಗಾಲಪೂರಿತ ಧಾತುಗಳು. ಸುದ್ದೆ ಮಣ್ಣು ಎಂದು ಕರೆಯುವ ಬಿಳಿ ಮಣ್ಣಿನಗಟ್ಟಿ ಹುರಿಮಂಜಿನಂತಹ ಸ್ವಾಭಾವಿಕ ಕೆಮ್ಮಣ್ಣಿನಗಟ್ಟಿಗಳಿಂದ ಹಾಗೂ ಕೆಲವು ವನಸ್ಪತಿಗಳಿಂದ ವರ್ಣಪಡೆದು[೩೫] ಉಪಯೋಗಿಸಿರಬೇಕು ಎಂಬ ವಿಚಾರಗಳಿವೆ. ಪ್ರಾಗೈತಿಹಾಸಿಕ ಬಂಡೆವರ್ಣಚಿತ್ರಗಳಲ್ಲಿ ಉಪಯೋಗಿಸಲಾದ ವರ್ಣಗಳು ಸಾಮಾನ್ಯವಾಗಿ ಖನಿಜ ಮೂಲದವುಗಳಾಗಿವೆ(Minerals)ಯಲ್ಲದೇ ಈ ಖನಿಜಮೂಲ ವರ್ಣಗಳಲ್ಲೇ ಅತೀ ಹೆಚ್ಚು ಬಳಕೆಯಾದ

೩೩. ಡಾ. ಅ. ಸುಂದರ : ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ, ಪುಟ ೧

೩೪. ಡಾ. ಎಸ್. ಸಿ. ಪಾಟೀಲ್ : ಕರ್ನಾಟಕದ ಜನಪದ ಚಿತ್ರಕಲೆ, ಪುಟ ೪೫

೩೫. ಹೆಚ್ಚಿನ ವಿವರಗಳಿಗೆ ನೋಡಿರಿ : ಪ್ರಬುದ್ಧ ಕರ್ನಾಟಕ. (ಸಂಪುಟ ೨೩ : ೩. ೮. ೧೯೪೩) 'ಪ್ರಾಚೀನ ಚಿತ್ರಕಲೆ' ಶ್ರೀ ಬಿ. ವಿ. ಕೆ. ಶಾಸ್ತ್ರಿ

ವರ್ಣವೆಂದರೆ "ರೆಡ್‌ಹೆಮಟೈಟ್". "ಈ ರೆಡ್ ಹೆಮಟೈಟ್‌ನಿಂದ ಪಡೆಯಲಾದ ಕೆಂಪು ವರ್ಣವನ್ನೇ ತೆಳು, ದಟ್ಟ, ಹೀಗೆ ವಿವಿಧ ರೀತಿಯ ಛಾಯೆಗಳ ಬದಲಾವಣೆಯೊಂದಿಗೆ ಉಪಯೋಗಿಸಲಾಗಿದೆ. ಅಲ್ಲದೇ ರೆಡ್ ಹೆಮಟೈಟ್‌ನಿಂದ ಕೆಂಪುವರ್ಣ ತಯಾರಿಸಿ ಉಪಯೋಗಿಸುವುದನ್ನು ಪ್ರಾರಂಭದ ಅಚೂಲಿಯನ್ (Acheulian) ಕಾಲದಲ್ಲಿ ವಾಸವಾಗಿದ್ದ ಆಫ್ರಿಕ. ಯುರೋಪ್. ಮತ್ತು ಭಾರತದ ನಿವಾಸಿಗಳು ಅದಾಗಲೇ ತಿಳಿದಿದ್ದರು." ಹಾಗೇ ಯುರೋಪದ ಪ್ರಾಚೀನ ಮೌಸ್ಟೇರಿಯನ್ ಮಾನವರೂ ರೆಡ್ ಹೆಮಟೈಟ್‌ನಿಂದ ಕೆಂಪುವರ್ಣ ತಯಾರಿಸುವ ವಿಧಾನ ಬಲ್ಲವರಾಗಿದ್ದರಲ್ಲದೇ ಚಿತ್ರಗಳ ರಚನೆಯಲ್ಲಿ ಇದನ್ನು ಬಳಸಿರುವುದು[೩೬] ಕಂಡುಬರುತ್ತದೆ.

ಭಾರತದಲ್ಲಿ ಮೆಸೋಲಿಥಿಕ್ ಕೊನೆಯ ಹಂತದ ನಂತರ ಕಂಡುಬರುವ ಸರಿಸುಮಾರು ಎಲ್ಲ ಪ್ರಾಗೈತಿಹಾಸಿಕ ತಾಣ (ನೆಲೆ)ಗಳಲ್ಲಿ ಹೆಮಟೈಟ್ ವರ್ಣ ಕಂಡುಬಂದಿದೆ. ಜಿ. ಆರ್. ಶರ್ಮ ಅವರು[೩೭] ಮಿರ್ಜಾಪೂರ ಭಾಗದಲ್ಲಿ ಮೆಸೋಲಿಥಿಕ್ ಕಾಲದ ಸಮಾಧಿಗಳಲ್ಲಿ ರೆಡ್ ಹೆಮಟೈಟ್ ಪತ್ತೆ ಹಚ್ಚಿದರು. ಹೆಚ್. ಡಿ. ಸಂಕಾಲಿಯಾ ಅವರು[೩೮] ಗುಜರಾತದ ಲಂಗ್ನಂಜ್ (Langhnaj) ಭಾಗದ ಮೆಸೋಲಿಥಿಕ್ ನೆಲೆಗಳಲ್ಲಿ ನುಣುಪಾಗಿ ತಿಕ್ಕಲ್ಪಟ್ಟ ಹೆಮಟೈಟ್ ತುಣುಕುಗಳನ್ನು ಪತ್ತೆ ಮಾಡಿದರು. ವಿ. ಎನ್. ಮಿಶ್ರಾ ಅವರು[೩೯] ರಾಜಸ್ಥಾನದ ಬಾಗೋರ್ (Bagor) ಎಂಬ ಮೆಸೋಲಿಥಿಕ್ ನೆಲೆಯಲ್ಲಿ ಗೈರಿಕ (ಗೌರು) ಎಂಬ ಹೆಮಟೈಟ್ ವರ್ಣವನ್ನು ಸಂಗ್ರಹಿಸಿದರು. ಕರ್ನಾಟಕದಲ್ಲಿನ ಸುರಪುರ ತಾಲೂಕಿನ ಹುಣಸಗಿಯಲ್ಲಿ ನಡೆಸಿದ ಉತ್ಖನನದಲ್ಲಿ ಹಳೇ ಶಿಲಾಯುಗ ಕಾಲದ ನಿವೇಶನಗಳಲ್ಲಿ ಹೊಂದಿಸಿಟ್ಟ ಕೆಮ್ಮಣ್ಣಿನ ಗಟ್ಟಿಗಳು ದೊರೆತಿವೆ. ಇವುಗಳನ್ನು ಅವರು ವರ್ಣತಯಾರಿಕೆಗಾಗಿ ಬಳಸುತ್ತಿದ್ದರೆಂದು[೪೦] ವಿದ್ವಾಂಸರ ಅಭಿಪ್ರಾಯ. ವಾಕಣ್‌ಕರ ಅವರು[೪೧] ಚಂಬಲ್ ಕಣಿವೆಯ ಪ್ರದೇಶದಲ್ಲಿನ ಉತ್ಖನನದಲ್ಲಿ ಹೆಮಟೈಟ್ ವರ್ಣದ ತುಂಡಗಳು. ವರ್ಣ ಕಲೆಸುವ ಕಲ್ಲಿನ ಪ್ಯಾಲೇಟ್ (Colour Palette)ಗಳನ್ನು ಪತ್ತೆ ಮಾಡಿದರು. ಇವರೇ ಭಿಂಬೆಟ್ಕಾದಲ್ಲಿನ ಶೋಧನೆಯಲ್ಲಿ ಹಳದಿ ಆಕರ್ಸ್ (Yellow Ochre), ಟೆರ್ರಾವರ್ಟ (Terravert) ಎಂಬ ಮ್ಯಾಂಗನೀಜ್ ಸಂಯುಕ್ತವರ್ಣಗಳನ್ನು ಗುರುತಿಸಿ ಅವುಗಳನ್ನು ಪ್ರಾಗೈತಿಹಾಸಿಕ ಜನರು ಚಿತ್ರರಚನೆಗೆ ಬಳಸಿದ್ದಾರೆ ಎಂದು ಅಭಿಪ್ರಾಯಪಟ್ಟಿದ್ದಾರೆ. "ಆಕರ್ ವರ್ಣವನ್ನೂ ಪ್ರಾಗೈತಿಹಾಸಿಕ ಮಾನವರು ಚಿತ್ರಗಳಿಗಾಗಿ ಬಳಸುತ್ತಿದ್ದರು. ಎಂಬುದಕ್ಕೆ ಮೆಗಾಲಿಥಿಕ್ ಕಾಲದ ಸಮಾಧಿಗಳಲ್ಲಿ ದೊರೆತ ಅವರ ಪಾತ್ರೆಗಳ ಮೇಲೆ ಆಕರ್ ವರ್ಣದಿಂದ ಬಿಡಿಸಿದ ಚಿತ್ರಗಳು ಕಂಡುಬಂದಿವೆಯಲ್ಲದೇ ಇದೇ ಆಕರ್ ವರ್ಣವನ್ನು ಅವರು ಬಂಡೆಚಿತ್ರಗಳಲ್ಲೂ[೪೨] ಬಳಸಿದ್ದಾರೆ" ಎಂಬ ಅಭಿಪ್ರಾಯವಿದೆ.

ಚಾಲಕೋಲಿಥಿಕ್ ಕಾಲದ ಜನರೂ ಆಕರ್ ವರ್ಣಗಳನ್ನು ಮುಖ್ಯವಾಗಿ ಬಳಸುತ್ತಿದ್ದರು. ಅವರ ಬಂಡೆಚಿತ್ರಗಳು ಮತ್ತು ಪಾತ್ರೆ ಮೇಲಿನ ಚಿತ್ರಗಳು ಇದಕ್ಕೆ ಪುಷ್ಠಿ ನೀಡುತ್ತವೆ[೪೩] ಎಂಬ ಅವುಗಳ ಕುರಿತು

---

೩೬. Yashodhar Mathpal : Prehistoric Rock Paintings of Bhimbetka, Page 9

೩೭. G. R. Sharma : Painting Materials from the burials, Page 94

೩೮. H. D. Sankalia : Pre-historic Art in India, Page 198

೩೯. V. N. Mishra : Pre-historic Man and his Art in Central India, Page 14

೪೦. ಡಾ. ಆ. ಸುಂದರ (ಸಂ) : ಕರ್ನಾಟಕ ಚರಿತ್ರೆ (ಸಂಪುಟ ೧), ಪುಟ ೧೩೭

೪೧. V. S. Wakankar : Rock Paintings of the chambal Region, Paper presented at the All India History Congress, 1956, Page 12

೪೨. Yashodhar Mathpali Pre-historic Rock Paingtings of Bhimbettka, Page 10

೪೩. S. K. Panday : Indian Rock Art, Page 30

ಅಧ್ಯಯನ ಮಾಡಿದ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. "ಭಾರತದಲ್ಲಿನ ಹೆಚ್ಚಿನ ಶಿಲಾಶ್ರಯ ತಾಣಗಳಲ್ಲಿ ಉತ್ಖನನ ಮಾಡಿದಾಗ ಆಕರ್ ವರ್ಣದ ಗಟ್ಟಿಗಳು ದೊರೆತಿವೆ. ಬಾದಾಮಿಬಳಿಯ ಇತಿಹಾಸ ಕಾಲಕ್ಕೆ ಸಂಬಂಧಿಸಿದ ಶಿಲಾಶ್ರಯ ಚಿತ್ರಗಳನ್ನು ಮೊದಲಿಗೆ ಹಳದಿ ಆಕರ್ ಬಣ್ಣವನ್ನು ಬಂಡೆಗೆ ಲೇಪಿಸಿ ನಂತರ ಕೆಮ್ಮಣ್ಣಿನಿಂದ ಚಿತ್ರರಚಿಸಲಾಗಿದೆ. ಇಂದಿಗೂ ಆಕರ್ ಮಣ್ಣಿನ ಗಟ್ಟಿಗಳನ್ನು ಸ್ವಾಭಾವಿಕವಾಗಿ ಸಂಗ್ರಹಿಸಿ ಹಳ್ಳಿಗಾಡಿನಲ್ಲಿ ಮನೆಗಳ ಗೋಡೆಗೆ ವರ್ಣಲೇಪಿಸಲು ಉಪಯೋಗಿಸುತ್ತಾರೆ. ಅಲ್ಲದೇ ವರ್ಣ ಸಂಬಂಧೀ ಇತರ ಕೆಲಸಗಳಿಗೆ ಇಂದಿಗೂ ಬಳಕೆಯಾಗುತ್ತದೆ. ಈ ಆಕರ್ಸ್‌ಗಳು ಮಣ್ಣಿನೊಂದಿಗೆ ಕಬ್ಬಿಣದ (ಭಸ್ಮ) ಆಕ್ಸೈಡ್‌ಗಳ ಮಿಶ್ರಣಗಳಾಗಿವೆ. ಆಕರ್ಸ್‌ಗಳು ಚಾಕೋಲೇಟ್‌ವರ್ಣದಿಂದ ತಿಳಿಕೆಂಪುವರೆಗಿನ ಅನೇಕ ಛಾಯೆಯ ಕೆಂಪುಗಳಲ್ಲಿ. ಮತ್ತು ಕಿತ್ತಳೆ (Orange) ವರ್ಣದಿಂದ ಹಳದಿಯ ವಿವಿಧ ಛಾಯೆಗಳಲ್ಲಿ ಲಭ್ಯವಾಗುತ್ತವೆ.

ಇವುಗಳಲ್ಲದೇ ಪ್ರಾಗೈತಿಹಾಸಿಕ ಬಂಡೆ ಚಿತ್ರಕಾರರು ಸುಣ್ಣ , ಮ್ಯಾಂಗನೀಜ್ ಸಂಯುಕ್ತಗಳು (Manganese Oxides), ವಿವಿಧವರ್ಣ ಕಲ್ಲು ಮಣ್ಣುಗಳನ್ನು. ಬಿಳಿಕಡುವಿನ (White chalk) ವರ್ಣಗಳನ್ನು ಬಳಸಿದ್ದಾರೆ. ಮ್ಯಾಂಗನೀಜ ಸಂಯುಕ್ತಗಳಲ್ಲೇ ನೀಲಿಕಪ್ಪು (ಕಪ್ಪು ನೀಲಿ) ಛಾಯೆಹೊಂದಿದ ಮತ್ತು ಕಡುಕೆಂಪು ಛಾಯೆಹೊಂದಿದ ವರ್ಣಗಟ್ಟಿಗಳನ್ನು ಹೆಚ್ಚಾಗಿ ಬಳಸಲಾಗಿದೆ. ಅಲ್ಲದೇ ಕಟ್ಟಿಗೆ ಸುಟ್ಟು ತಯಾರಿಸಲಾದ ಇದ್ದಿಲುಗಳಿಂದ. ಕಪ್ಪು ಕಲ್ಲಿನಿಂದ ಮತ್ತು ಸುಟ್ಟ ಎಲುಬುಗಳಿಂದ ತಯಾರಿಸಿದ ಇದ್ದಿಲಿನಿಂದ ಕಪ್ಪು ತಯಾರಿಸಿಕೊಳ್ಳುತ್ತಿದ್ದರು. ಇದಲ್ಲದೇ ಅನೇಕ ವಿಧದ ಸಸ್ಯ ಸಂಬಂಧೀ ವರ್ಣಗಳನ್ನು ಪ್ರಾಗೈತಿಹಾಸಿಕ ಜನರು ಚಿತ್ರರಚನೆಗಾಗಿ[೪೪] ಉಪಯೋಗಿಸಿದ್ದಾರೆ ಎಂಬ ವಿವರಗಳು ತಳಿಯುತ್ತವೆ. ಈರೀತಿ ಸಂಗ್ರಹಿಸಿದ ವರ್ಣಮೂಲಗಳಿಂದ ಅವರು ಯಾವ ರೀತಿಯಲ್ಲಿ ವರ್ಣ ತಯಾರಿಸಿಕೊಳ್ಳುತ್ತಿದ್ದರು ಎಂಬ ಬಗ್ಗೆ ನಿಖರವಾಗಿ ತಿಳಿದುಬರುವುದಿಲ್ಲ. ಆದರೆ ಕೆಲವು ವಿದ್ವಾಂಸರು ಆ ಬಗ್ಗೆ ತರ್ಕಿಸಿದ್ದಾರೆ. ಪ್ರಾಗೈತಿಹಾಸಿಕ ಮಾನವರು ಬಣ್ಣದ ಗಟ್ಟಿಗಳನ್ನು ಕಲ್ಲಿನ ತಗ್ಗಾದ ಪ್ರದೇಶದಲ್ಲಿ ಇಟ್ಟು ಕುಟ್ಟಿಪುಡಿಮಾಡಿ ಅದಕ್ಕೆ ಬಂಧಕವನ್ನು ಬೆರೆಸಿ ಉಪಯೋಗಿಸುತ್ತಿದ್ದರು. ಮತ್ತು ಬಣ್ಣದಗಟ್ಟಿಗಳನ್ನು ಕಲ್ಲಿನ ಮೇಲೆ ನೀರಿನೊಡನೆ ಗಂಧದಂತೆ ತೇಯ್ದು ಮಂದವಾಗಿ ಮಾಡಿಕೊಂಡು ಅದಕ್ಕೆ ವಿವಿಧ ಬಗೆಯ ಬಂಧಕ ಅಥವಾ ಅಂಟುಮಾಧ್ಯಮಗಳನ್ನು ಬೆರೆಸಿ ಉಪಯೋಗಿಸುತ್ತಿರಬೇಕು[೪೫] ಎಂದು ಅಭಿಪ್ರಾಯಪಡಲಾಗಿದೆ.

೪. **ಅಂಟುಮಾಧ್ಯಮ :** ಚಿತ್ರರಚನೆಗಾಗಿ ಬಣ್ಣತಯಾರಿಸಿಕೊಳ್ಳುವಾಗ ಅದು ಭದ್ರವಾಗಿ ಅಂಟಿಕೊಳ್ಳಲು, ಮತ್ತು ಹೆಚ್ಚುದಿನ ಬಾಳಿಕೆಬರಲು ಯೋಗ್ಯವಾದ ಅಂಟುಮಾಧ್ಯದಲ್ಲಿ ಬೆರೆಸಿಕೊಳ್ಳುವುದು ಬಹುಮುಖ್ಯವಿಚಾರ. ಪ್ರಾಗೈತಿಹಾಸಿಕ ಭಿತ್ತಿಚಿತ್ರ ಕಲಾವಿದನು ವರ್ಣತಯಾರಿಕೆಯಲ್ಲಿ ಇಂತಹುದೇ ಅಂಟುಮಾಧ್ಯಮ ಬಳಸಿದ್ದಾನೆಂದು ಹೇಳಲು ಬರುವಂತಿಲ್ಲ. ಕೆಲವು ವಿದ್ವಾಂಸರು ಈ ನಿಟ್ಟಿನಲ್ಲಿ ಪ್ರಯತ್ನನಡೆಸಿ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಆಸ್ಟ್ರೇಲಿಯಾದ ಪ್ರಾಚೀನಬಂಡೆಚಿತ್ರಗಳಲ್ಲಿ ತತ್ತಿಯೊಳಗಿನ ಹಳದಿ ಲೋಳೆ (Yolk of egg)ಯನ್ನು ವರ್ಣಬಂಧಕವಾಗಿ ಉಪಯೋಗಿಸಿದ್ದರೆ. ಯುರೋಪಿನ ಹಿಮಯುಗದ ಬಂಡೆಚಿತ್ರಗಳ ರಚನೆಗಾಗಿ ಪ್ರಾಣಿಗಳ ರಕ್ತ, ತತ್ತಿಯಬಿಳಿಯ

೪೪. S. K. Panday : Indian Rock Art, Page 31
೪೫. S. K. Panday : Indian Rock Art, Page 32

ಲ್ಲೋಳಿಗಳನ್ನು ವರ್ಣಬಂಧಕವಾಗಿ ಬಳಸಿದ್ದಾರೆ ಎಂಬುದಾಗಿ ಅಭಿಪ್ರಾಯಗಳಿವೆ. ಅಲ್ಲದೇ ಜೇನುಮೇಣ, ಸಸ್ಯಮೂಲದ ಅಂಟುಗಳನ್ನೂ ಸಹಿತ ಪ್ರಾಗೈತಿಹಾಸ ಕಾಲದ ಜನರು ಬಣ್ಣ ಬೆರಕೆಮಾಡಲು ಅಂಟುಮಾಧ್ಯಮವಾಗಿ ಉಪಯೋಗಿಸಿರುವುದನ್ನು[೪೬] ವಿದ್ವಾಂಸರು ಗುರುತಿಸುತ್ತಾರೆ.

ಸೌತ್ ಆಫ್ರಿಕಾದ ಪ್ರಾಚೀನ ಬಂಡೆಚಿತ್ರಗಳ ರಚನೆಗಾಗಿ ವರ್ಣತಯಾರಿಕೆಯಲ್ಲಿ ಎಲುಬಿನೊಳಗಿನ ಜಿಗುಟುಪದಾರ್ಥ (Marrow) ಕೊಬ್ಬು (Fat) ಮತ್ತು ಪ್ರಾಣಿಗಳ ಮೂತ್ರ ಇವುಗಳನ್ನು ಬಳಸಿರುವ ಸಾಧ್ಯತೆ ಇದೆ. ಎನ್ನುವುದರ ಜೊತೆಗೇ ಪ್ರಾಣಿಗಳ ರಕ್ತವನ್ನು ವರ್ಣಮಾಧ್ಯಮವಾಗಿ ಬಳಸಿರಲಾರರು ಎನ್ನುವ[೪೭] ವಿಚಾರವೂ ಇದೆ. ವರ್ಣಮಾಧ್ಯಮವಾಗಿ ರಕ್ತಬಳಸಿರದೇ ಹೆಮಟೈಟ್ ಕುಟ್ಟಿಪುಡಿಮಾಡಿ ಇಲ್ಲವೇ ಹಾಗೇ ನೀರಿನೊಡನೆ ಇಲ್ಲವೇ ಎಲುಬಿನೊಳಗಿನ ಜಿಗುಟು ಪದಾರ್ಥದೊಡನೆ ಬೆರೆಸಿ ಉಪಯೋಗಿಸಿರಬೇಕು[೪೮] ಎಂಬುದೂ ಒಂದು ಊಹೆಯಾಗಿದೆ. ಕಾಕ್‌ಬರ್ನ್ ಅವರ ಪ್ರಕಾರ[೪೯] ಕೆಂಪುಹೆಮಟೈಟ್‌ನ್ನು ಪ್ರಾಣಿಗಳ ಕೊಬ್ಬಿನೊಂದಿಗೆ ಬೆರೆಸಿ ಉಪಯೋಗಿಸಲಾಗಿದೆ. ವಾಕಣ್‌ಕರ ಮತ್ತು ಬ್ರೂಕ್ಸ್[೫೦] ಅವರ ಪ್ರಕಾರ ಖನಿಜ ಮೂಲ ವರ್ಣಪುಡಿಯನ್ನು ನೀರನಲ್ಲಿ ಕಲೆಸಿಕೊಂಡು ಉಪಯೋಗಿಸಲಾಗಿದೆ. ಹೀಗೆ ವಿವಿಧ ಅಭಿಪ್ರಾಯಗಳು ಪ್ರಾಗೈತಿಹಾಸಿಕ ಭಿತ್ತಿಚಿತ್ರ ಕಲೆಯ ವರ್ಣತಯಾರಿಕೆಯ ಅಂಟುಮಾಧ್ಯಮದ ಕುರಿತಾಗಿ ಇದ್ದುದು ತಿಳಿದು ಬರುವುದು.

**೫. ಬಣ್ಣ ಮಿಶ್ರಗೊಳಿಸುವ ಬಟ್ಟಲು :** ಕುಟ್ಟಿಪುಡಿಮಾಡಿಕೊಂಡ ಇಲ್ಲವೇ ಮಂದವಾಗಿ ತೇಯ್ದುಕೊಂಡ ವರ್ಣವನ್ನು ಬಂಧಕದೊಡನೆ ಚನ್ನಾಗಿ ಬೆರಕೆಮಾಡಲು ಬಟ್ಟಲುಗಳಂತಹ ಸಾಧನದ ಅವಶ್ಯಕತೆಗಾಗಿ ಪ್ರಾಗೈತಿಹಾಸಿಕ ಜನರು ವಿವಿಧ ರೀತಿಯಲ್ಲಿ ವಸ್ತುಗಳನ್ನು ಬಳಸಿರಬಹುದು. ಪ್ರಾರಂಭದಲ್ಲಿ ಬಂಡೆಗಳ ತಗ್ಗು ಪ್ರದೇಶದಲ್ಲಿ ವರ್ಣಗಳನ್ನು ಬೆರಕೆಮಾಡಿಕೊಂಡಿದ್ದಂತೆ[೫೧] ನಂತರದಲ್ಲಿ ಅದಕ್ಕಾಗಿ ಪ್ರತ್ಯೇಕ ವಸ್ತುಗಳನ್ನು ಬಳಸಿರುವ ಸಾಧ್ಯತೆ ಇದೆ. ವಾಕಣ್‌ಕರ್ ಅವರು[೫೨] ಚಂಬಲ್‌ಕಣಿವೆ ಪ್ರದೇಶದಲ್ಲಿನ ಉತ್ಖನನದಲ್ಲಿ ಕಲ್ಲಿನಲ್ಲಿ ಕಟೆದು ರೂಪಿಸಿದ ವರ್ಣಕಲೆಸಿಕೊಂಡ ಪಾತ್ರೆಗಳನ್ನು ಪತ್ತೆ ಮಾಡಿದರು. ನಂತರದಲ್ಲಿ ಎಲೆಯ ದೊಣ್ಣೆಗಳು, ಎಲುಬಿನ ಟೊಳ್ಳುಗಳು, ಸೋರೆಕಾಯಿ, ಬಿಲ್ವಪತ್ರಿಕಾಯಿಯಂತಹ ಜಾತಿಯ ಕಾಯಿಗಳು ಬಳಕೆಯಾಗಿರುವುದು ಕಂಡುಬರುತ್ತದೆ. ಇವುಗಳ ಕುರಿತು ಈಗಾಗಲೇ ಭಿತ್ತಿಚಿತ್ರ ಪರಿಕರಗಳು ಎಂಬ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಒಟ್ಟಿನಲ್ಲಿ ಪ್ರಾಗೈತಿಹಾಸಿಕ ಕಲಾವಿದರು ತಮ್ಮ ಅನುಕೂಲಕ್ಕೆ ತಕ್ಕಂತೆ ಲಭ್ಯವಾದ ವಸ್ತುಗಳನ್ನು ಬಣ್ಣ ಬೆರಕೆಮಾಡಿಕೊಳ್ಳಲು ಬಳಸಿಕೊಂಡಿರಬಹುದಾದ ಸಾಧ್ಯತೆಗಳಿವೆ.

**೬. ಕುಂಚ :** ಅಂಟುಮಾಧ್ಯಮ ಬೆರಕೆಮಾಡಿಕೊಂಡು ತಯಾರಿಸಲಾದ ಬಣ್ಣವನ್ನು ಲೇಪಿಸಲು ಪ್ರಾಗೈತಿಹಾಸಿಕ ಮಾನವರು ಕುಂಚವಾಗಿ ಭಿನ್ನಭಿನ್ನಸಾಧನಗಳನ್ನಾಗಿ ಬಳಸಿರುವ ಕುರಿತು ವಿದ್ವಾಂಸರು ತರ್ಕಿಸಿದ್ದಾರೆ.

---

೪೬. Yashodhar Mathpali Pre-histori Rock Paingtings of Bhimbettka, Page 11
೪೭. Yashodhar Mathpali Pre-histori Rock Paingtings of Bhimbettka, Page 12
೪೮. Yashodhar Mathpali Pre-histori Rock Paingtings of Bhimbettka, Page 12
೪೯. J. Cockburn : "On the reccnt existence of Rhinoceros in Gangavally", J. A. S. B. V. Part I, No. I, 1883, Page 88
೫೦. V. S. Wakankar, R. R. Brooks : Stoneage Painting in India, Page 179
೫೧. S. K. Panday : Indian Rock Art, Page 35
೫೨. V. S. Wakankar : Rock Paintings of the chambal Region, Paper delivered at the All India History Congress, 1956. Page 12

ಪ್ರಾಗೈತಿಹಾಸಿಕ ಕಾಲದ ಚಿತ್ರಕಾರರ ಕುಂಚಗಳ ಬಗೆಗೆ ಸಹ ಈಗಾಗಲೇ ಪರಿಕರಗಳು ಎನ್ನುವ ವಿಭಾಗದಲ್ಲಿ ಚರ್ಚಿಸಲಾಗಿದ್ದು ಇಲ್ಲಿ ಸ್ಥೂಲವಾಗಿ ವಿವರಿಸಲಾಗಿದೆ. ಗಿಡದ ಟೊಂಗೆಯನ್ನು ಜಜ್ಜಿ ಅದರ ತುದಿಯನ್ನು ಎಳೆಎಳೆಯಾಗಿ ಮಾಡಿಕೊಂಡು ಮತ್ತು ಕಟ್ಟಿಗೆ ತುಂಡಿಗೆ ಪ್ರಾಣಿಗಳ ಚರ್ಮಸುತ್ತಿ ಅದರಿಂದ ಬಣ್ಣಲೇಪಿಸರಬಹುದೆಂದು ಎಸ್. ಕೆ. ಪಾಂಡೇ ಅವರು[೫೩] ತರ್ಕಿಸಿದರೆ. ಕೆಲವು ಸಸ್ಯಗಳಲ್ಲಿ ಅಡಕವಾಗಿರುವ ನಾರು ಪದಾರ್ಥವನ್ನು ಬೇರ್ಪಡಿಸಿ ಅದರಿಂದ ಕುಂಚಗಳನ್ನು ರೂಪಿಸಿಕೊಂಡಿರಬಹುದೆಂಬುದು ಕಾಕ್‌ಬರ್ನ್ ಅವರ[೫೪] ಅಭಿಪ್ರಾಯವಾಗಿದೆ. ಪುಂಡಿ ಸಸ್ಯಗಳಿಂದ. ನೀರಿನಲ್ಲಿ ಬೆಳೆದ 'ಅಪು'ನಿಂದ ಗ್ರಾಮೀಣರು ನಾರುತೆಗೆಯುವುದು ಇಂದಿಗೂ ಕಂಡುಬರುವುದು. ಪರ್ಸಿಬ್ರೌನ್ ಅವರು[೫೫] ಬಿದಿರು ಇಲ್ಲವೆ 'ಆಪು'ವಿನಿಂದ ಮಾಡಲಾದ ಕುಂಚಗಳನ್ನು ಪ್ರಾಗಿತಿಹಾಸ ಕಲಾವಿದರು ಬಳಸಿರಬಹುದೆಂದು ಹೇಳಿದರೆ. ವಾಕಣ್‌ಕರ್ ಅವರೂ[೫೬] ಸಹಿತ ಗಿಡದ ಟೊಂಗೆಯನ್ನು ಜಜ್ಜಿ ರೂಪಿಸಲಾದ ಕುಂಚದಿಂದ ಚಿತ್ರ ಬರೆದಿರಬಹುದೆಂದು ಹೇಳುತ್ತಾರೆ. ಅ. ಸುಂದರ ಅವರು[೫೭] ಇದರ ಜೊತೆಗೆ ಪ್ರಾಣಿಗಳ ಕೂದಲುಗಳನ್ನು ಒಟ್ಟುಗೂಡಿಸಿ ಕಟ್ಟಿ ಮಾಡಿದ ಕುಂಚಗಳನ್ನು ಚಿತ್ರರಚನೆಗೆ ಬಳಸಿರಬಹುದೆಂದು ಊಹಿಸುತ್ತಾರೆ. ಹೀಗೆ ಹಲವು ಅಭಿಪ್ರಾಯಗಳು ಇದ್ದು ಆಯಾ ಸಂದರ್ಭಕ್ಕನುಸಾರವಾಗಿ ತಕ್ಷಣಕ್ಕೆ ಲಭ್ಯವಾದ ವಸ್ತುಗಳಿಂದ ಕುಂಚಗಳನ್ನು ರೂಪಿಸಿಕೊಂಡಿರಬಹುದು. ಇವೆಲ್ಲವುಗಳ ಜೊತೆಗೆ ಕೈಯಿಂದಲೂ ವರ್ಣಲೇಪನ ಮಾಡಿದ ಗುರುತುಗಳು ಕಂಡುಬರುತ್ತವೆ.

೭. **ಬಣ್ಣಲೇಪನ ವಿಧಾನ :** ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳಲ್ಲಿ ಬಣ್ಣವನ್ನು ಲೇಪನಮಾಡಿದ ರೀತಿಗಳನ್ನು ಎಸ್. ಕೆ. ಪಾಂಡೆಯವರು[೫೮] ಈ ಕೆಳಗಿನಂತೆ ಗುರುತಿಸುತ್ತಾರೆ. ಮೊದಲನೆಯದಾಗಿ ಬಣ್ಣದ ಗಟ್ಟಿಗಳನ್ನು ಕ್ರೇಯಾನ್ ಹಾಗೆ ಉಪಯೋಗಿಸಿ. ರೇಖಾಚಿತ್ರ ರಚಿಸಿದ್ದಾರೆ. ಕೆಲವು ಸಲ ಈ ಬಣ್ಣದ ಗಟ್ಟಿಗಳ ಮೈಯನ್ನೇ ಚಿತ್ರಗಳ ಒಳಭಾಗಕ್ಕೆ ಉಜ್ಜಿ ವರ್ಣಲೇಪಿಸಲಾಗಿದೆ. ಇಂತಹ ಚಿತ್ರಗಳು ಮಧ್ಯಭಾರತದಲ್ಲಿ ಕಂಡುಬರುತ್ತವೆ. ಎಂದು ಅವರು ತಿಳಿಸುತ್ತಾರೆ. ಗಂಗಾವತಿ ತಾಲೂಕಿನ ವೆಂಕಟಾಪುರದ ಗುಹಾ ಚಿತ್ರಗಳಲ್ಲಿ ಕೈ ಕೈಹಿಡಿದುಕೊಂಡು ಕುಣಿಯುತ್ತತಿರುವ ಮಾನವರ ಆಕೃತಿಗಳ ಕೆಳಭಾಗದಲ್ಲಿ ಕೆಲವು ಚಿತ್ರಗಳು ಸೂಕ್ಷ್ಮವಾದ ರೇಖೆಯಲ್ಲಿ ಮಸುಕಾಗಿ ಕಂಡುಬರುತ್ತಿದ್ದು ಅವು ಈ ತೆರನಾದ ವಿಧಾನದಿಂದ ರಚನೆಯಾಗಿರಬಹುದಾಗಿದೆ. ಎರಡನೆಯದಾಗಿ ವರ್ಣಗಳನ್ನು ಮಂದವಾಗಿ ಕಲೆಸಿಕೊಂಡು ಅಂಗೈಯಿಂದ. ಬೆರಳುಗಳಿಂದ ಲೇಪಿಸಲಾಗಿದೆ. ರಾಯಚೂರು ಜಿಲ್ಲೆಯ ತಿಮ್ಮಲಾಪುರ, ಬಳ್ಳಾರಿ ಜಿಲ್ಲೆಯ ಕುರುಗೋಡಿನಲ್ಲಿ[೫೯] ಕೈಯಿಂದ ವರ್ಣ ಲೇಪಿಸಿದ ಲಕ್ಷಣಗಳು ಕಂಡುಬರುತ್ತವೆ. ಮೂರನೆಯದಾಗಿ ವರ್ಣಗಳನ್ನು ದ್ರವರೂಪವಾಗಿ ಕಲಿಸಿಕೊಂಡು ವಿವಿಧ ರೀತಿಯ ಕುಂಚಗಳಿಂದ ಲೇಪಿಸುತ್ತಿದ್ದರು. ಇಂತಹ ಚಿತ್ರಗಳು ಸಾಮಾನ್ಯವಾಗಿ ಎಲ್ಲ ಕಡೆಗೆ ಕಂಡುಬಂದಿವೆ. ನಾಲ್ಕನೆಯದಾಗಿ ವರ್ಣದ್ರವವನ್ನು ಬಾಯಿಯಲ್ಲಿ ಹಾಕಿಕೊಂಡು ಊದಿ ಇಲ್ಲವೇ ಇನ್ನಾವುದೇ ರೀತಿಯಿಂದ ಸಿಡಿಸಿ ಚಿತ್ರರಚನೆಮಾಡಲಾಗಿದೆ. ಇಂತಹ ಚಿತ್ರಗಳು

---

೫೩. S. K. Panday : Indian Rock Art, Page 31

೫೪. J. Cockburn : On the recent existence of Rhinoceros in Ganga Valley J.A.S.B.V. Part I, No. I, 1883 Page 89

೫೫. Percy Brown : Indian Painting, Page 120

೫೬. V. S. Wakankar : Painted Rock shelters of India, Page 103

೫೭. ಡಾ. ಅ. ಸುಂದರ : ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ, ಪುಟ ೧

೫೮. S. K. Panday : Indian Rock Art, Page 35

೫೯. ಡಾ. ಅ. ಸುಂದರ : ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ, ಪುಟ ೧೭

ಮಧ್ಯಭಾರತದಲ್ಲಿ[೬೦] ಕಂಡುಬರುತ್ತವೆ. ಇವುಗಳಲ್ಲದೇ ಕೆಲವು ಕಡೆಗಳಲ್ಲಿ ಮೊದಲಿಗೆ ಚಿತ್ರಗಳ ಹೊರರೇಖೆಯನ್ನು ಹಾಕಿಕೊಂಡು ಒಳಭಾಗದಲ್ಲಿ ಅಂಟು ಪದಾರ್ಥವನ್ನು ಲೇಪಿಸಿ ಅದು ಹಸಿ ಇರುವಾಗಲೇ ಅದರ ಮೇಲೆ ಒಣದಾದ ಬಣ್ಣದ ಪುಡಿಯನ್ನು ಒತ್ತುತ್ತಿದ್ದರು. ಈ ರೀತಿಯ ಚಿತ್ರಗಳು ಭಾರತದ ಅನೇಕ ಶಿಲಾಶ್ರಯ ತಾಣಗಳಲ್ಲಿ ಕಂಡುಬರುತ್ತವೆ ಎಂದು ಪಾಂಡೆ ಅವರು ಹೇಳುತ್ತಾರೆ. ಹಿರೇಬೆನಕಲ್ಲಿನ ೫ ನೇ ಗುಹೆಯಲ್ಲಿ ಒಬ್ಬ ಮನುಷ್ಯನ ಚಿತ್ರವು ದ್ವಿವರ್ಣದಲ್ಲಿದ್ದು ಅದು ಈ ತೆರನಾದ ತಂತ್ರದಿಂದ ರಚಿಸಿರಬಹುದು. ಇವುಗಳಲ್ಲದೆ ಟೊಳ್ಳಾದ ಮೂಳೆಯೊಳಗೆ ಬಣ್ಣವನ್ನು ತುಂಬಿ ಬಂಡೆಯಲ್ಲಿ ಕೊರೆದ ರೇಖೆಗಳಲ್ಲಿ ಇಳಿಸುತ್ತಿದ್ದ ವಿಧಾನವನ್ನು[೬೧] ಅನುಸರಿಸಿರಬಹುದೆಂದು ಹೇಳಲಾಗುತ್ತದೆ. ಇಂತಹ ವಿಧಾನಗಳಿಂದ ರಚನೆಮಾಡಿದ ಚಿತ್ರಗಳಲ್ಲದೇ ಕೆಲವು ಕಡೆಗೆ ಅಚ್ಚು ತಂತ್ರದಿಂದ ರಚನೆಮಾಡಿರಬಹುದಾದ ಚಿತ್ರಗಳೂ ಕಂಡುಬರುತ್ತವೆ ಹಿರೇಬೆನಕಲ್ ಗುಡ್ಡದ ಗುಹೆಗಳಲ್ಲಿ ಕಂಡುಬರುವ ಜಿಂಕೆಯ ಚಿತ್ರಗಳು ಅಳತೆ. ವಿನ್ಯಾಸ, ಶೈಲಿ ಹೀಗೆ ಪ್ರತಿಯೊಂದು ಅಂಶಗಳಲ್ಲೂ ಒಂದೇ ತೆರನಾಗಿದ್ದುದನ್ನು ಕಾಣಬಹುದು. ಇವುಗಳನ್ನು ಪ್ರಾಣಿಗಳ ಚರ್ಮ ಇಲ್ಲವೇ ಗಿಡದ ತೊಗಟೆಯಲ್ಲಿ ಮೊದಲಿಗೆ ಚಿತ್ರಿಸಿ ಚಿತ್ರದ ಭಾಗವನ್ನು ಕತ್ತರಿಸಿಕೊಂಡು ಅದನ್ನು ಬಂಡೆಯ ಮೇಲಿಟ್ಟು ಕತ್ತರಿಸಿದ ಭಾಗಕ್ಕೆ ಬಣ್ಣ ತುಂಬಿ ರಚಿಸಲಾಗಿರಬಹುದೆಂಬ[೬೨] ಅಭಿಪ್ರಾಯವಿದೆ.

**IV. ಪ್ರಾಗೈತಿಹಾಸಿಕ ಭಿತ್ತಿಚಿತ್ರಕಲೆಯ ವಿಧಗಳು :** ಈ ರೀತಿಯಲ್ಲಿ ಶೋಧಗೊಂಡ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳನ್ನು ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಈ ಕೆಳಗಿನಂತೆ ಎರಡು ವಿಧದಲ್ಲಿ ವಿಂಗಡಿಸಬಹುದಾಗಿದೆ.

೧. ವರ್ಣ ಚಿತ್ರಗಳು
೨. ವರ್ಣರಹಿತ ಚಿತ್ರಗಳು

೧. **ವರ್ಣ ಚಿತ್ರಗಳು :** ವರ್ಣ ಚಿತ್ರಗಳು ಗುಹೆಗಳ ಒಳಭಾಗದಲ್ಲಿ ಬಂಡೆಯಾಸರೆಯಲ್ಲಿ, ಬೃಹತ್ ಬಂಡೆಗಳ ತೆರೆದ ಮೈಯಲ್ಲಿ ರಚನೆಯಾಗಿರುತ್ತವೆ. ಈ ಬಗೆಗೆ ಅವುಗಳ ಸ್ವರೂಪ ಹೇಳುವಾಗ ಅವು ಎಲ್ಲೆಲ್ಲಿ ರಚನೆಯಾಗಿವೆ ಎಂಬ ಬಗೆ ಈಗಾಗಲೇ ಹೇಳಿದೆ. ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಹೆಚ್ಚಾಗಿ ನಸುಕೆಂಪು ಬಣ್ಣದಲ್ಲೇ ಇದ್ದರೂ ಅದರ ಜೊತೆಗೆ ಬಿಳಿ, ಕಪ್ಪು, ಹಳದಿ, ಹಸಿರು ಬಣ್ಣಗಳಿಂದ ರಚನೆಯಾದ ಚಿತ್ರಗಳೂ ಕಂಡುಬರುತ್ತವೆ[೬೩]. ಹಸಿರು ಬಣ್ಣದ ಚಿತ್ರಗಳು ಕರ್ನಾಟಕದಲ್ಲಿ ಬಹುಶಃ ಎಲ್ಲಿಯೂ ಕಂಡುಬಂದಿಲ್ಲ. ಮಧ್ಯಭಾರತದ ಪ್ರಾಗೈತಿಹಾಸಿಕ ನೆಲೆಗಳಲ್ಲಿ ಈ ಬಗೆಯ ಚಿತ್ರಗಳಿವೆ. ಕಂದು ವರ್ಣದ ಚಿತ್ರಗಳು ಕರ್ನಾಟಕದಲ್ಲಿ ಬಾದಾಮಿ ಬಳಿಯ ಶಿಡ್ಲಫಡಿ, ಜಮಖಂಡಿ ಸಮೀಪದ ನೂರಾಳಾಫಡಿ, ಗಂಗಾವತಿ ತಾಲೂಕಿನ ತಿಮ್ಮಲಾಪುರ, ಚಿತ್ರದುರ್ಗ ಮತ್ತು ಬ್ರಹ್ಮಗಿರಿಯಲ್ಲಿನ ಚಿತ್ರಗಳು ಬಿಳಿಬಣ್ಣದಲ್ಲಿವೆ. ಮಸುಕು ಹಳದಿ ಬಣ್ಣದ ಚಿತ್ರಗಳು ಬಾದಾಮಿಯ ಉತ್ತರ ಬೆಟ್ಟದ ೩ ನೇ ಗುಹೆಯಲ್ಲಿ ಮತ್ತು ಹಂಪಿಯ ಬರಮದೇವರ ಕಲ್ಲಿನ ಗುಂಡದಲ್ಲಿ ರಚನೆಯಾಗಿವೆ. ಕಪ್ಪು ಬಣ್ಣದ ಚಿತ್ರಗಳು

---

೬೦. S. K. Panday : Indian Rock Art, Page 35
೬೧. ಎಸ್. ಕೆ. ರಾಮಚಂದ್ರರಾವ್ : ಕರ್ನಾಟಕ ಕಲೆಗಳು (ಸಂಪುಟ ೧), ಪುಟ ೪೩
೬೨. ಡಾ. ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಪುಟ ೧೭
೬೩. S. K. Panday : Indian Rock Art, Page 30

ಹಿರೇಬೆನಕಲ್ ಭಾಗದಲ್ಲಿ ಕಂಡುಬಂದಂತೆ. ಇತ್ತೀಚೆಗೆ ಡಾ. ಎಸ್. ಸಿ. ಪಾಟೀಲ ಅವರು ಬಾದಾಮಿ ಪರಿಸರದಲ್ಲಿ ಶೋಧಿಸಿದ ಕೆಲವು ನೆಲೆಗಳಲ್ಲಿಯೂ ಕಂಡುಬಂದಿವೆ.

ಈ ರೀತಿಯಲ್ಲಿ ವಿವಿಧ ಬಣ್ಣದಲ್ಲಿ ರಚನೆಯಾದ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಮುಖ್ಯವಾಗಿ ಎರಡು ಬಗೆಯಲ್ಲಿ ಇರುವುದು ಕಂಡುಬರುತ್ತದೆ. ಅವುಗಳನ್ನು ಸ್ಥೂಲವಾಗಿ ಈ ಕೆಳಗಿನಂತೆ ವಿಂಗಡಿಸಬಹುದು :

I. ರೇಖಾ ಚಿತ್ರಗಳು

II. ನೆರಳು ಚಿತ್ರಗಳು

**I. ರೇಖಾ ಚಿತ್ರಗಳು :** ವರ್ಣಚಿತ್ರಗಳಲ್ಲಿ ಸಹಿತ ರೇಖಾ ಪ್ರಧಾನವಾದ ಚಿತ್ರಗಳು ಕಂಡುಬಂದಿವೆ. ವರ್ಣದಿಂದ ಎಳೆದ ರೇಖೆಗಳೆ ಇಲ್ಲಿ ಚಿತ್ರದ ಸ್ವರೂಪವನ್ನು ತೋರಿಸುತ್ತಿದ್ದು ಚಿತ್ರದ ಅಗಲ, ಉದ್ದ, ದಪ್ಪಳತೆಯನ್ನು ಬಿಂಬಿಸುವ ಚಪ್ಪಟೆ ವರ್ಣಲೇಪನವಿರುವದಿಲ್ಲ. ವರ್ಣದಿಂದ ರಚಿಸಿದ ರೇಖಾಚಿತ್ರಗಳು ಕರ್ನಾಟಕದ ಹಲವು ನೆಲೆಗಳಲ್ಲಿ ಕಂಡುಬಂದಿವೆ. ಬಾದಾಮಿಯ ರಂಗನಾಥ ಬೆಟ್ಟದಲ್ಲಿ, ಬಾದಾಮಿ ಪರಿಸರದಲ್ಲಿ ಡಾ. ಎಸ್. ಸಿ. ಪಾಟೀಲರು ಹೊಸದಾಗಿ ಶೋಧಿಸಿದ ಕೆಲವು ನೆಲೆಗಳಲ್ಲಿ, ಕುಟಕನಕೇರಿಯ ಅರೆಗುಡ್ಡ ಹಿರೆಗುಡ್ಡಗಳಲ್ಲಿ, ಗಂಗಾವತಿ ತಾಲೂಕು ಹಿರೇಬೆನಕಲ್. ಮಲ್ಲಾಪುರ. ವೆಂಕಟಾಪುರ. ಚಿಕ್ಕರಾಮಾಪುರ. ಬಿಳಿಭಾವಿ. ಆನೆಗೊಂದಿ, ತಿಮ್ಮಲಾಪುರ. ನಾರಾಯಣಪುರ. ಬಂಡಿಹರ್ಲಾಪುರ, ಕೊಪ್ಪಳದ ಗುಡ್ಡಗಳಲ್ಲಿ, ಬಳ್ಳಾರಿ ಜಿಲ್ಲೆಯ ಕುರಗೋಡು, ಸಂಗನಕಲ್. ಹಂಪಿಗಳಲ್ಲಿ ವರ್ಣದಿಂದ ರಚಿಸಿದ ರೇಖಾಪ್ರಧಾನ ಚಿತ್ರಗಳು ಕಂಡುಬರುತ್ತವೆ.

**II. ನೆರಳು ಚಿತ್ರಗಳು :** ವರ್ಣದಿಂದ ರಚಿಸಿದ ರೇಖಾ ಪ್ರಧಾನ ಚಿತ್ರಗಳಂತೆಯೇ ವರ್ಣದಿಂದ ರಚಿಸಿದ ನೆರಳು ಚಿತ್ರಗಳೂ ಕಂಡುಬರುತ್ತವೆ. ಇಂತಹ ಚಿತ್ರಗಳಲ್ಲಿ ರೇಖೆಯಿಂದ ಮೊದಲು ಚಿತ್ರರಚನೆಮಾಡಿ ನಂತರ ಚಿತ್ರದ ಒಳಭಾಗಕ್ಕೆ ಚಪ್ಪಟೆಯಾಗಿ ವರ್ಣಲೇಪಿಸಲಾಗಿರುತ್ತದೆ. ಈ ಚಿತ್ರಗಳು ಆಯಾ ವಸ್ತು ಇಲ್ಲವೇ ಪ್ರಾಣಿಪಕ್ಷಿಗಳ ನೆರಳಿನಂತೆ ಚಪ್ಪಟೆಯಾಗಿರುವ ಸ್ವರೂಪದಲ್ಲಿರುವದರಿಂದ ಇವುಗಳನ್ನು ವರ್ಣದಿಂದ ರಚಿಸಿದ ನೆರಳು ಚಿತ್ರಗಳೆಂದು ಪರಿಗಣಿಸಬಹುದಾಗಿದೆ. ಇಂತಹ ನೆರಳು ಚಿತ್ರಗಳು ಕರ್ನಾಟಕದಲ್ಲಿ ಅನೇಕ ಭಾಗಗಳಲ್ಲಿ ಕಂಡುಬಂದಿವೆ. ಗಂಗಾವತಿ ತಾಲೂಕಿನ ಹಿರೇಬೆನಕಲ್, ಚಿಕ್ಕರಾಮಾಪುರ, ಆನೆಗೊಂದಿಯ ಬಳಿಯಲ್ಲಿನ ಒನಕೆ ಕಿಂಡಿ ಎಂಬಲ್ಲಿ. ಮಲ್ಲಾಪುರ. ವೆಂಕಟಾಪುರ, ಲಿಂಗಸುಗೂರು ಸಮೀಪದ ಪಿಕ್ಕಿಹಾಳ, ತಾವರಗೆರೆ, ಹಂಪಿಯ ಪರಿಸರದಲ್ಲಿ. ಸಮೀಪವೇ ಇರುವ ಕನ್ನಡ ವಿಶ್ವವಿದ್ಯಾಲಯದ ಆವರಣದಲ್ಲಿನ ಕೋಡುಗಲ್ಲೊಂದರ ಮೇಲೆ, ಬಾದಾಮಿಯ ಪರಿಸರದಲ್ಲಿ. ಸಮೀಪದ ಕುಟಕನಕೇರಿಯ ಗುಡ್ಡಗಳಲ್ಲಿ, ಈ ಪರಿಸರದಲ್ಲಿ ಹೊಸದಾಗಿ ಶೋಧಿಸಲಾದ ಕೆಲವು ನೆಲೆಗಳಲ್ಲಿ ನೆರಳು ಚಿತ್ರಗಳು ಕಂಡುಬರುತ್ತವೆ.

**೨. ವರ್ಣರಹಿತ ಚಿತ್ರಗಳು :** ಪ್ರಾಗೈತಿಹಾಸಿಕ ಮಾನವರು ವರ್ಣದಿಂದ ಬಂಡೆಗಳ ಮೇಲೆ ಚಿತ್ರರಚನೆ ಮಾಡಿದಂತೆಯೇ. ಯಾವುದೇ ವರ್ಣ ಉಪಯೋಗಿಸದೇ ಚೂಪಾದ ಸಾಧನದಿಂದ ಬಂಡೆ ಮೇಲೆ ಕುಟ್ಟಿ. ಗೀರಿ ಚಿತ್ರ ಮೂಡಿಸಿದ್ದಾರೆ. ಬಂಡೆಯ ಮೇಲೆ ರಚನೆಯಾದ ಈ ವರ್ಣರಹಿತ ಚಿತ್ರಗಳು ರೇಖಾ ಪ್ರಧಾನವಾಗಿರುವುದೇ ಅಧಿಕವಾದರೂ ಕೆಲವು ನೆಲೆಗಳಲ್ಲಿ ರೇಖಾಕೃತಿಯ ಚಿತ್ರಗಳನ್ನು ರಚನೆಮಾಡಿ ಅವುಗಳ ಒಳಭಾಗದಲ್ಲಿ ಏಕಪ್ರಕಾರವಾಗಿ ಕುಟ್ಟಿ ಆ ಚಿತ್ರ ಬಂಡೆಯಿಂದ ಪ್ರತ್ಯೇಕವಾಗಿ ಕಾಣುವಂತೆ ಮಾಡಲಾಗಿರುತ್ತದೆ. ಇವು ನೋಡಲು ವರ್ಣದಿಂದ

ರಚಿಸಿದ ನೆರಳು ಚಿತ್ರದ ಸ್ವರೂಪದಲ್ಲಿರುತ್ತವೆ. ಹೀಗೆ ಚಿತ್ರದ ಒಳಭಾಗವನ್ನು ಕುಟ್ಟಿ ರಚಿಸಿದ ಚಪ್ಪಟೆ ಚಿತ್ರಗಳು ರಾಯಚೂರು ಜಿಲ್ಲೆಯ ಕಲ್ಲೂರಿನ ಎಮ್ಮಿಗುಡ್ಡ. ಮಸ್ಕಿ. ಪಿಕ್ಕಿಹಾಳ, ಭಿಲ್ಲಮರಾಯನಗುಡ್ಡ, ಬಳ್ಳಾರಿ ಜಿಲ್ಲೆಯ ಸಂಗನಕಲ್. ಕುರುಗೋಡು. ಕುಪ್ಪಗಲ್‌ಗಳಲ್ಲಿ ಕಂಡುಬಂದಿವೆ. ವರ್ಣರಹಿತ ಚಿತ್ರಗಳು ಹೆಚ್ಚಾಗಿ ಬಂಡೆಗಳ ರಾಶಿಯಂತಿರುವ ಗುಡ್ಡಗಳಲ್ಲಿ. ಬಯಲಿನಲ್ಲಿರುವ ಬಂಡೆಗಳ ಹೊರಮೈಯಲ್ಲಿ ರಚನೆಯಾಗಿರುವುದೇ ಅಧಿಕ. ವರ್ಣಚಿತ್ರದ ಹಾಗೆ ಗುಹೆಗಳಲ್ಲಿ. ಶಿಲಾಶ್ರಯದಂತಹ ಮರೆಯಾದ ಭಾಗದಲ್ಲಿ ಇವು ರಚನೆಯಾಗಿರುವುದು ಕಡಿಮೆ. ಈ ವರ್ಣರಹಿತ ಚಿತ್ರಗಳನ್ನು ಅವುಗಳ ರಚನಾ ಸ್ವರೂಪ ಆಧರಿಸಿ ಈ ಕೆಳಗಿನಂತೆ ಎರಡು ಬಗೆಯಲ್ಲಿ ವಿಂಗಡಿಸಬಹುದು.

I. ಕುಟ್ಟಿದ ಚಿತ್ರಗಳು

II. ಕೊರೆದ ಚಿತ್ರಗಳು

**I. ಕುಟ್ಟಿದ ಚಿತ್ರಗಳು :** ಬಂಡೆಯ ಮೇಲೆ ಚೂಪಾದ ಸಾಧನದಿಂದ ಕುಟ್ಟಿರಚಿಸಿರುವುದರಿಂದ ಈ ಪ್ರಕಾರದ ಚಿತ್ರಗಳನ್ನು ಕುಟ್ಟು ಚಿತ್ರಗಳೆಂದು ಕರೆಯುತ್ತಾರೆ. ಮೊದಲಿಗೆ ಬಂಡೆಯ ಮೇಲೆ ಕಲ್ಲಿನ ತುಂಡು ಇಲ್ಲವೇ ಮಣ್ಣಿನ ಗಟ್ಟಿಯಿಂದ ರೇಖಾಕೃತಿ ಮೂಡಿಸಿಕೊಂಡು ಆ ರೇಖೆಗುಂಟ ಚೂಪಾದ ಸಾಧನದಿಂದ ಒತ್ತೊತ್ತಾಗಿರುವಂತೆ ನಿರಂತರವಾಗಿ ಕುಟ್ಟಿ ಚಿತ್ರಗಳನ್ನು ರಚನೆಮಾಡಿರುವಂತೆ ಕಂಡುಬರುತ್ತದೆ. ಬಂಡೆಯ ಮೇಲೆ ಕುಟ್ಟಿರಚಿಸಿದ ಚಿತ್ರಗಳು ಬಳ್ಳಾರಿ ಜಿಲ್ಲೆಯ ಕುರಗೋಡು. ಹಳಕುಂಡಿ. ಸಂಗನಕಲ್, ಹಂಪಿ. ಕುಪ್ಪಗಲ್, ಬೆಳಗಲ್ ರಾಚೂರು ಜಿಲ್ಲೆಯ ಕಲ್ಲೂರು. ಮಸ್ಕಿ, ಪಿಕ್ಕಿಹಾಳ, ಭಿಲ್ಲಮರಾಯನಗುಡ್ಡ, ಬಾದಾಮಿಯ ಸಮೀಪದ ಹಿರೇಗುಡ್ಡ. ಕನ್ನಡ ವಿಶ್ವವಿದ್ಯಾಲಯದ ಆವರಣದಲ್ಲಿ ಶಿಲ್ಪಕಲಾಶಾಲೆಯ ಹಿಂದಿನ ಗುಡ್ಡದಲ್ಲಿ ಕಂಡುಬಂದಿವೆ.

**II. ಕೊರೆದ ಚಿತ್ರಗಳು :** ಕುಟ್ಟಿ ರಚನೆಮಾಡಿದ ಚಿತ್ರಗಳಲ್ಲಿ ಮೊದಲಿಗೆ ಬಂಡೆಯ ಮೇಲೆ ರೇಖಾಕೃತಿ ಮೂಡಿಸಿಕೊಳ್ಳುವಂತೆ, ಕೊರೆದ ಚಿತ್ರರಚನೆಗೂ ಮೊದಲು ಬಂಡೆಯ ಮೇಲೆ ರೇಖಾಕೃತಿ ಮೂಡಿಸಿಕೊಂಡು ಅದರ ಮೇಲೆ ಚೂಪಾದ ಸಾಧನದಿಂದ ಆಳವಾಗಿ ಕೊರೆದು ಚಿತ್ರರಚಿಸಲಾಗಿರುತ್ತದೆ. ಹೀಗೆ ಕೊರೆದು ರಚಿಸಿದ ಚಿತ್ರಗಳು ಉತ್ತರ ಕನ್ನಡ ಜಿಲ್ಲೆಯ ಬೋಳೆಯಲ್ಲಿ, ಬಿಜಾಪುರ ಜಿಲ್ಲೆಯ ಜಮಖಂಡಿ ಸಮೀಪದ ಕುಳ್ಳೊಳ್ಳಿ, ಬೆಳಗಾಂವ ಜಿಲ್ಲೆಯ ಸೌದತ್ತಿ ತಾಲೂಕಿನ ನವಿಲುತೀರ್ಥ, ಚಿತ್ರದುರ್ಗ, ಬ್ರಹ್ಮಗಿರಿ, ಬಳ್ಳಾರಿ ಜಿಲ್ಲೆಯ ಕುಪ್ಪಗಲ್. ಹಳಕುಂಡಿ. ರಾಯಚೂರು ಜಿಲ್ಲೆಯ ತಾವರಗೆರೆ, ಭಿಲ್ಲಮರಾಯನಗುಡ್ಡ, ಕೊಪ್ಪಳ, ಹಂಪಿ ಕನ್ನಡ ವಿಶ್ವವಿದ್ಯಾಲಯದ ಆವರಣದ ಗಿರಿಸೀಮೆಯಲ್ಲಿ ಕಂಡುಬರುತ್ತವೆ.

**V. ಪ್ರಾಗೈತಿಹಾಸಿಕ ಭಿತ್ತಿಚ್ರಿಕಲೆಯ ನೆಲೆಗಳು :** ಉತ್ತರ ಕರ್ನಾಟಕದಲ್ಲಿ ಪ್ರಾಗಿತಿಹಾಸ ಕಾಲದ ಜನಪದ ಭಿತ್ತಿಚಿತ್ರಗಳು ಬಾಗಲಕೋಟ. ಬಳ್ಳಾರಿ. ಕೊಪ್ಪಳ. ರಾಯಚೂರು. ಬೆಳಗಾಂವ. ಧಾರವಾಡ. ಉತ್ತರ ಕನ್ನಡ, ಗುಲಬರ್ಗಾ ಜಿಲ್ಲೆಗಳಲ್ಲಿ ಕಂಡುಬಂದಿವೆ. ಬಾಲಗಕೋಟ್. ಬಳ್ಳಾರಿ. ಕೊಪ್ಪಳ. ರಾಯಚೂರು ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಚಿತ್ರಗಳು ಇದ್ದರೆ ಬೆಳಗಾಂವ. ಉತ್ತರ ಕನ್ನಡ, ಗುಲಬರ್ಗಾ, ಧಾರವಾಡ ಜಿಲ್ಲೆಗಳಲ್ಲಿ ಕಡಿಮೆ ಸಂಖ್ಯೆಯಲ್ಲಿ ಸಿಕ್ಕಿವೆ. ಬಾಗಲಕೋಟ ಜಿಲ್ಲೆಯ ಬದಾಮಿ. ಐಹೊಳೆ ಪ್ರದೇಶದಲ್ಲಿ ಅತ್ಯಂತ ಪ್ರಾಚೀನ ಚಿತ್ರಗಳು ರಚಿಸಿವೆ ಎಂದು ವಿದ್ವಾಂಸರ ಅಭಿಪ್ರಾಯ. ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನಲ್ಲಿ ಅತೀ

ಹೆಚ್ಚಿನ ವರ್ಣಚಿತ್ರಗಳು ರಚನೆಯಾಗಿವೆ. ಧಾರವಾಡ. ಗುಲಬರ್ಗಾ ಜಿಲ್ಲೆಗಳಲ್ಲಿ ಕೇವಲ ಒಂದೊಂದು ನೆಲೆಗಳು ಮಾತ್ರ ಇದುವರೆಗೆ ಪತ್ತೆಯಾಗಿವೆ. ಹೀಗೆ ಉತ್ತರ ಕರ್ನಾಟಕದಲ್ಲಿ ಕಂಡುಬಂದಿರುವ ಪ್ರಾಗಿತಿಹಾಸಕಾಲದ ಜನಪದ ಭಿತ್ತಿಚಿತ್ರಗಳ ನೆಲೆಗಳನ್ನು ಜಿಲ್ಲಾವಾರು ಕ್ರಮದಲ್ಲಿ ಸಂಕ್ಷಿಪ್ತದಲ್ಲಿ ಈ ಕೆಳಗಿನಂತೆ ಹೇಳಬಹುದು :

ಬಾಗಲಕೋಟ ಜಿಲ್ಲೆಯಲ್ಲಿ ಜಮಖಂಡಿ ತಾಲೂಕಿನ ಕುಳ್ಳೊಳ್ಳಿ, ಗೊಂಬೆಗುಡ್ಡ, ಮತ್ತು ನೂರಾಳಫಡಿಯಲ್ಲಿ ಕೊರೆದ ಮತ್ತು ವರ್ಣದಿಂದ ರಚಿಸಿದ ಚಿತ್ರಗಳಿವೆ. ಬಾದಾಮಿ ತಾಲೂಕಿನಲ್ಲಿ ಬಾದಾಮಿ, ಸಿಡಿಲಫಡಿ, ಸೀತಿಡೋಣಿ. ಕುಟಕನಕೇರಿಯಲ್ಲಿ ವರ್ಣಚಿತ್ರಗಳಿದ್ದರೆ, ಹುನಗುಂದ ತಾಲೂಕಿನಲ್ಲಿ ಐಹೊಳೆಯಲ್ಲಿ ಗುಹಾವರ್ಣ ಚಿತ್ರಗಳು ಕಂಡುಬರುತ್ತವೆ. ಕೊಪ್ಪಳ ಜಿಲ್ಲೆಯಲ್ಲಿ ಅದೇ ಊರಿನ ಗುಡ್ಡದಲ್ಲಿರುವ ಗವಿಮಠ, ಪಶ್ಚಿಮಬೆಟ್ಟ, ಪಾಂಡವರ ವಟ್ಲು. ಮಳೇಮಲ್ಲೇಶ್ವರಗುಡ್ಡ. ಗುಮ್ಮಣ್ಣನಗವಿಗಳಲ್ಲಿ ವರ್ಣಚಿತ್ರಗಳು ರಚನೆಯಾಗಿವೆ. ಕುಷ್ಟಗಿ ತಾಲೂಕಿನಲ್ಲಿ ತಾವರೆಗೆ. ಗಂಗಾವತಿ ತಾಲೂಕಿನಲ್ಲಿ ನಾರಾಯಣಪುರ, ತಿಮ್ಮಲಾಪುರ, ವೆಂಕಟಾಪುರ, ಮಲ್ಲಾಪುರ, ಚಿಕ್ಕರಾಮಾಪುರ. ಅಂಜನಹಳ್ಳಿ. ಬಂಡಿಹರ್ಲಾಪುರ. ಬಿಳಿಭಾವಿ. ಹಿರೇಬೆನಕಲ್, ಆನೆಗೊಂದಿಗಳಲ್ಲಿ ಚಿತ್ರಗಳಿವೆ ಇವುಗಳಲ್ಲಿ ಹಿರೇಬೆನಕಲ್ ಮತ್ತು ಆನೆಗೊಂದಿ ಪ್ರದೇಶದಲ್ಲಿ ಹೆಚ್ಚಿನ ಚಿತ್ರಗಳು ಕಂಡುಬರುತ್ತವೆ.

ಬಳ್ಳಾರಿ ಜಿಲ್ಲೆಯಲ್ಲಿ ಬಳ್ಳಾರಿ ತಾಲೂಕಿನ ಕುಪ್ಪಗಲ್ಲು, ಸಂಗನಕಲ್ಲು, ಅಪ್ಪಯ್ಯನಹಳ್ಳಿ, ಬೆಳಗಲ್, ಕುರಗೋಡುಗಳಲ್ಲಿ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಕಂಡುಬರುತ್ತವೆ. ಹೊಸಪೇಟೆ ತಾಲೂಕಿನ ಹಂಪೆ, ಕಮಲಾಪುರ, ಹಳಕುಂಡಿಗಳಲ್ಲಿ ಚಿತ್ರಗಳಿದ್ದು. ಇವುಗಳಲ್ಲಿ ಹಂಪೆ ಹಳಕುಂಡಿಗಳಲ್ಲಿ ಹೆಚ್ಚಿನ ಚಿತ್ರಗಳು ರಚನೆಯಾಗಿವೆ. ಸಿರಗುಪ್ಪ ತಾಲೂಕಿನಲ್ಲಿ ತೆಕ್ಕಲಕೋಟೆ. ಸೊಂಡೂರು ತಾಲೂಕಿನಲ್ಲಿ ರಾಜಾಪುರ ಬೈರನಾಯಕನಹಳ್ಳಿಗಳಲ್ಲಿ ಚಿತ್ರಗಳು ಕಂಡುಬಂದಿವೆ. ರಾಯಚೂರು ಜಿಲ್ಲೆಯಲ್ಲಿ ಲಿಂಗಸುಗೂರು ತಾಲೂಕಿನ ಭಿಲ್ಲಮರಾಯನಗುಡ್ಡ, ಪಿಕ್ಕಿಹಾಳ, ಮಸ್ಕಿಗಳಲ್ಲಿ ಮತ್ತು ರಾಯಚೂರು ತಾಲೂಕಿನ ಆತನೂರು. ಸಿರವಾರ. ಕಲ್ಲೂರುಗಳಲ್ಲಿ ಪ್ರಾಗಿತಿಹಾಸ ಭಿತ್ತಿಚಿತ್ರಗಳು ರಚಿಸಿವೆ. ಬೆಳಗಾಂವ ಜಿಲ್ಲೆಯಲ್ಲಿ ರಾಮದುರ್ಗ ತಾಲೂಕಿನ ಮೇಗುಂಡೇಶ್ವರ ಸವದತ್ತಿ ತಾಲೂಕಿನ ನವಿಲುತೀರ್ಥದಲ್ಲಿ ಚಿತ್ರಗಳಿದ್ದರೆ, ಧಾರವಾಡ ಜಿಲ್ಲೆಯಲ್ಲಿ ಮುಂಡರಗಿ ತಾಲೂಕಿನ ನೀಲಗುಂದಲ್ಲಿ ಚಿತ್ರಗಳು ಕಂಡುಬರುತ್ತವೆ.

ಉತ್ತರ ಕನ್ನಡ ಜಿಲ್ಲೆಯಲ್ಲಿ ಸಿರ್ಸಿ ತಾಲೂಕಿನ ಸೋಂದಾ, ಅಂಕೋಲಾ ತಾಲೂಕಿನ ಬೋಳೆಯಲ್ಲಿ ಪ್ರಾಗೈತಿಹಾಸಿಕ ಕಾಲದ ವರ್ಣರಹಿತ ಗೀರು ಚಿತ್ರಗಳು ಕಂಡುಬಂದಿವೆ. ಈ ಮೇಲೆ ಹೇಳಲಾದ ನೆಲೆಗಳಲ್ಲಿನ ಚಿತ್ರಗಳ ಕುರಿತಾಗಿ ಈಗಾಗಲೇ ಅಧ್ಯಯನ ನಡೆದಿರುವುದರಿಂದ[೬೪] ಅವುಗಳ ಬಗೆಗಿನ ಹೆಚ್ಚಿನ ವಿವರಣೆಯನ್ನು ಇಲ್ಲಿ ಮಾಡಲಾಗಿಲ್ಲ. ಇತ್ತೀಚೆಗೆ ಬಾದಾಮಿ* ಪರಿಸರದ ಕೆಲವು ನೆಲೆಗಳಲ್ಲಿ ಹೊಸದಾಗಿ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಶೋಧವಾಗಿದ್ದು ಅವುಗಳು ಈ ಕೆಳಗಿನಂತಿವೆ.

**ಬಾದಾಮಿ ಪ್ರದೇಶ :** ಕೊನ್ನೂರ ಗವಿ : ಇಲ್ಲಿನ ಒಂದು ಗವಿಯ ಭಿತ್ತಿನಲ್ಲಿ ಕೆಂಪುಬಣ್ಣದ ಮನುಷ್ಯರ ಚಿತ್ರಗಳು. ಗುರುತಿಸಲಾಗದ ವಿವಿಧ ಆಕಾರಗಳು ಇವೆ. ಅಲ್ಲದೇ ಮೇಲೆ ಕೊರೆದು ರಚಿಸಲಾದ ಐತಿಹಾಸಿಕ ಕಾಲದ ಗಣಪತಿಯ ಚಿತ್ರವೂ ಇಲ್ಲಿದೆ.

---

೬೪. ಹೆಚ್ಚಿನ ವಿವರಣೆಗಳಿಗೆ ನೋಡಿರಿ : ಡಾ. ಅ. ಸುಂದರ : ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ ಮತ್ತು ಡಾ. ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ

* ಡಾ. ಎಸ್. ಸಿ. ಪಾಟೀಲ, ಆನಂದ ಪೂಜಾರ ಮತ್ತು ಎಮ್. ಆಯ್. ಬಾರಾವಿಲಿ ಅವರು ಶೋಧಿಸಿದ್ದಾರೆ.

**ಕಳ್ಳರ ಫಡಿ :** ಇಲ್ಲಿನ ಕಲ್ಲಾಸರೆಯ ಒಳಭಾಗದಲ್ಲಿ ಕೆಂಪುಬಣ್ಣದಿಂದ ರಚಿತವಾದ ಬಲೆಯ ವಿನ್ಯಾಸದ ಚಿತ್ರಗಳಿವೆ. ಇಲ್ಲಿಂದ ಪಶ್ಚಿಮಕ್ಕೆ ಇನ್ನೊಂದು ಕಲ್ಲಾಸರೆಯಲ್ಲಿ ಕೆಂಪುಬಣ್ಣದ ಮನುಷ್ಯಾಕಾರದ ಚಿತ್ರಗಳಿವೆ.

**ಗುಡ್ಡದ ರಂಗನಾಥ :** ಇಲ್ಲಿನ ದೇವಾಲಯದ ಎದುರಿಗೆ ಬಲಗಡೆಯಲ್ಲಿ ಸ್ವಲ್ಪದೂರ ಸಾಗಿದರೆ ಸಿಗುವ ಒಂದು ಬೃಹತ್ ಶಿಲೆಯ ಕೆಳಭಾಗದಲ್ಲಿ ಬಿಳಿಬಣ್ಣದಿಂದ ರಚನೆಯಾದ ಮನುಷ್ಯನ ಚಿತ್ರವಿದೆ.

**ಮಾಲಗಿತ್ತಿ ಶಿವಾಲಯದ ಎದುರಿಗೆ :** ಕೆಳಗಿನ ಭಾಗದ ಗುಡ್ಡದಲ್ಲಿ ಒಂದು ಕಲ್ಲಾಸರೆಯಲ್ಲಿ ಮನುಷ್ಯರ, ಪ್ರಾಣಿಗಳ, ಮತ್ತು ಬೇಟೆಗಾರರ ಚಿತ್ರಗಳಿವೆ. ಅಲ್ಲದೇ ಬಲೆಯ ವಿನ್ಯಾಸಗಳೂ ಇಲ್ಲಿ ರಚಿಸಿವೆ.

**ಕೆ. ಇ. ಬಿ. ಹಿಂದುಗಡೆ :** ಇಲ್ಲಿನ ಕೆ. ಇ. ಬಿ. ಕಛೇರಿಯ ಹಿಂದುಗಡೆಗೆ ಉತ್ತರ ದಿಕ್ಕಿನಲ್ಲಿ ಕಲ್ಲಾಸರೆಯಲ್ಲಿ ಜಿಂಕೆಗಳ ಸಮೂಹ, ಚಿರತೆಯ ಚಿತ್ರಗಳಿವೆ.

**ವಸ್ತುಸಂಗ್ರಹಾಲಯದ ಪೂರ್ವಕ್ಕೆ :** ವಸ್ತುಸಂಗ್ರಹಾಲದ ಪೂರ್ವದಿಕ್ಕಿನಿಂದ ಉತ್ತರ ದಿಕ್ಕಿಗೆ ಸಾಗಿದರೆ ಸಿಗುವ ದೊಡ್ಡ ಶಿಲಾಶ್ರಯದಲ್ಲಿ ಕೆಂಪುಬಣ್ಣದ ಮಾನವರ ಚಿತ್ರಗಳು, ಬಿಳಿಯಬಣ್ಣದ ಬಲೆಯಾಕಾರದ ಚಿತ್ರಗಳು ಕಂಡುಬರುತ್ತವೆ.

**ಜೇನು ಫಡಿ :** ಸೀತಿಡೋಣಿಯ ಹತ್ತಿರ ಎತ್ತರದಲ್ಲಿರುವ ಬಂಡೆಯಲ್ಲಿ ಬೃಹತ್ತಾದ ಜೇನು ಹುಟ್ಟುಗಳು ಸದಾಕಾಲ ಇರುತ್ತವೆ. ಹಾಗಾಗಿ ಇದನ್ನು ಜೇನುಫಡಿ ಎನ್ನುವರು. ಇಲ್ಲಿ ಕೆಂಪು ಬಣ್ಣದ ದೊಡ್ಡದಾದ ಬಲೆಯ ಚಿತ್ರರಚನೆಯಿದೆ.

**ನೀರಿನ ದೋಣಿ :** ಸೀತಿಡೋಣಿ ನೀರಿರುವ ಸ್ಥಳದಲ್ಲಿ ಬಿಳಿಯ ಬಣ್ಣದ ಚಿತ್ರವಿದೆ. ಇಲ್ಲಿಂದ ೨ ಕಿ. ಮಿ. ಅಂತರದಲ್ಲಿ ಮತ್ತೊಂದು ಶಿಲೆಯಮೇಲೆ ಬಿಳಿಬಣ್ಣದ ಮನುಷ್ಯರು ಮತ್ತು ಈಟಿಯನ್ನು ಹೋಲುವ ಆಯುಧಗಳ ಚಿತ್ರಗಳಿವೆ. ಸಮೀಪದ ಮತ್ತೊಂದು ಬಂಡೆಯಲ್ಲಿ ಕೆಂಪುಬಣ್ಣದ ಪ್ರಾಣಿ ಹಾಗೂ ಮನುಷ್ಯ ಚಿತ್ರಗಳಿವೆ.

**ಕುಟಕನಕೇರಿ ಪ್ರದೇಶ :** ಇಲ್ಲಿನ ಆನೆಫಡಿಯಿಂದ ಉತ್ತರಕ್ಕೆ ಎಡಗಡೆ ಎತ್ತರದ ಬಂಡೆಯ ಕೆಳಗಡೆಗೆ ಕೆಂಪುಬಣ್ಣದಿಂದ ರಚಿಸಿದ ಮನುಷ್ಯ ಚಿತ್ರಗಳು ಮತ್ತು ಬಲೆಯ ವಿನ್ಯಾಸಗಳು ಇವೆ. ಇಲ್ಲಿಯೇ ಮತ್ತೊಂದು ಕಡೆಗೆ ಹಳದಿ ಬಣ್ಣದಿಂದ ಚಿತ್ರಿಸಿದ ಆಕೃತಿಗಳಿವೆ. ಇವೆರಡೂ ಚಿತ್ರಗಳಲ್ಲದೇ ರೈತರು ಪೂಜಿಸುತ್ತಿರುವ ಒಂದು ಬಂಡೆಯ ಮೇಲಿನ ಭಾಗದಲ್ಲಿ ಕೆಂಪು, ಬಿಳಿ ಬಣ್ಣದ ಮನುಷ್ಯ ಮತ್ತು ಪ್ರಾಣಿಚಿತ್ರಗಳು ಕಂಡುಬರುತ್ತವೆ. ಗೂಡಿನ ಹನುಮಪ್ಪ ಎಂದು ಕರೆಯಲಾಗುವ ಸ್ಥಳದಲ್ಲಿನ ಒಂದು ಬಂಡೆಯಲ್ಲಿ ಕೆಂಪು, ಕರಿ, ಮತ್ತ ಬಿಳಿ ಬಣ್ಣದ ಮಾನವಾಕಾರಗಳು, ಪ್ರಾಣಿಚಿತ್ರಗಳು ಮತ್ತು ಬಲೆಯಂತಹ ವಿನ್ಯಾಸದ ಚಿತ್ರಗಳಿವೆ. ಮುಖ್ಯರಸ್ತೆಯಿಂದ ೨ ಕಿ. ಮಿ. ಅಂತರದಲ್ಲಿ ಎಡಭಾಗಕ್ಕೆ ಒಂದು ಕಲ್ಲಾಸರೆಯಲ್ಲಿ ಈ ಬಂಡೆಯಿಂದ ಪೂರ್ವಕ್ಕೆ ಇರುವ ಮತ್ತೊಂದು ಬಂಡೆಯಲ್ಲಿ ಹಾಗೂ ಹನುಮಪ್ಪನ ಗುಡಿ ಎಂದು ಕರೆಯುವ ಪ್ರದೇಶದಲ್ಲಿ ಚಿತ್ರಗಳು ಕಂಡುಬರುತ್ತವೆ. ಇವು ಕೆಂಪು, ಬಿಳಿ, ಬಣ್ಣಗಳಲ್ಲಿವೆ.

VI. **ವಸ್ತುವಿಷಯ :** ಉತ್ತರ ಕರ್ನಾಟಕದ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳನ್ನು ಪರಿಶೀಲಿಸಿದಾಗ ಈ ಕೆಳಗಿನಂತೆ ಅವುಗಳನ್ನು ವಿಂಗಡಿಸಬಹುದಾಗಿದೆ :

ಇಲ್ಲಿಯೇ ಸಮೀನದ ಒನಕೆ ಕಿಂಡಿ ಪ್ರದೇಶದಲ್ಲಿ ಬಿಲ್ಲು ಬಾಣ, ಈಟಿಗಳನ್ನು ಬಳಸಿ ಬೇಟೆಯಲ್ಲಿ ತೊಡಗಿದ ಚಿತ್ರಗಳು ರಚಿಸಿವೆ. ಕೊಪ್ಪಳದ ಗುಡ್ಡದಲ್ಲಿ ಅಶೋಕನ ಶಿಲಾಶಾಸನದ ಪಕ್ಕದಲ್ಲಿರುವ ಒಂದು ಶಿಲಾಶ್ರಯದಲ್ಲಿ ಬೇಟೆಯ ಚಿತ್ರವಿದ್ದು ಇಲ್ಲಿ ಒಬ್ಬನು ಬಿಲ್ಲಿನಿಂದ ಬಾಣವನ್ನು ಪ್ರಾಣಿಗಳ ಕಡೆಗೆ ಬಿಟ್ಟಿದ್ದು ಅದು ಪ್ರಾಣಿಗಳ ಕಡೆಗೆ ಸಾಗುತ್ತಿದೆ. ಇನ್ನೊಬ್ಬ ಬೇಟೆಗಾರ ಬಿಲ್ಲಿಗೆ ಬಾಣವನ್ನು ಹೂಡಿ ಬಿಡಲು ಸಿದ್ಧನಾಗಿದ್ದಾನೆ. ಪ್ರಾಣಿಗಳು ಅಂಜಿಕೆಯಿಂದ ದಿಕ್ಕೆಟ್ಟು ಓಡುತ್ತಿವೆ. ಲಿಂಗಸುಗೂರು ತಾಲೂಕಿನ ತಾವರಗೆರೆಯಲ್ಲಿನ ಒಂದು ಕಲ್ಲಾಸರೆಯಲ್ಲಿ ಇಬ್ಬರು ಮನುಷ್ಯರು ಹೆಗಲ ಮೇಲೆ ಕೋಲೊಂದನ್ನು ಹೊತ್ತುಕೊಂಡು ನಡೆಯುತ್ತಿದ್ದು ಅದಕ್ಕೆ ಬೇಟೆಯಾಡಿದ ಪ್ರಾಣಿಯನ್ನು ತಲೆಕೆಳಗಾಗಿ ಕಟ್ಟಿ ಒಯ್ಯುತ್ತಿದ್ದಾರೆ. ತಾವರಗೆರೆಯಲ್ಲಿಯೇ ಇರುವ ಗಾಣಗಿತ್ತಿ ಗುಡ್ಡದ ಕಲ್ಲಾಸರೆಯಲ್ಲಿ ಒಂದು ಕಡೆಗೆ ಇಬ್ಬರು ಬೇಟೆಗಾರರು ಇದ್ದು ಒಬ್ಬನು ಬಿಲ್ಲಿಗೆ ಬಾಣಹೂಡಿ ಪ್ರಾಣಿಗೆ ಹೊಡಿಯುತ್ತಿದ್ದಾನೆ. ಇನ್ನೊಬ್ಬ ತನ್ನ ಎಡಭಾಗದ ಹೆಗಲಮೇಲೆ ಆಯುಧವನ್ನು ಹೊತ್ತುಕೊಂಡು ಬಲಗೈಯಲ್ಲಿ ಬೇಟೆಯಾಡಿದ ಪ್ರಾಣಿಯನ್ನು ಎಳೆಯುತ್ತ ನಡೆದಿದ್ದಾನೆ. ಹೊಸಪೇಟೆ ತಾಲೂಕಿನ ಹಳಕುಂಡಿಯಲ್ಲಿ ಜಿಂಕೆಗೆ ಬೆನ್ನಲ್ಲಿ ಬಾಣನಾಟಿದಂತೆ ಚಿತ್ರಿಸಿದೆ. ಬಾಣದಿಂದ ಚುಚ್ಚಲ್ಪಟ್ಟ ಜಿಂಕೆಯ ಚಿತ್ರವು ರಾಯಚೂರು ಜಿಲ್ಲೆಯ ಅತನೂರುನಲ್ಲಿಯೂ ರಚನೆಯಾಗಿದೆ. ಹೀಗೆ ವಿವಿಧ ಬಗೆಯಲ್ಲಿರುವ ಬೇಟೆಯ ಚಿತ್ರಗಳು ಅವರ ಬೇಟೆಯ ವಿಧಾನ ತಿಳಿಸುವುದರ ಜೊತೆಗೆ ಅವರ ಆಹಾರ ಭರಣದ ನೋಟವನ್ನು ಪ್ರತಿಬಿಂಬಿಸುತ್ತವೆ.

**II. ಕುಣಿತದ ಚಿತ್ರಗಳು :** ಬೇಟೆಯ ಚಿತ್ರಗಳನ್ನು ಬಿಟ್ಟರೆ ಮತ್ತೆ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳಲ್ಲಿ ಹೆಚ್ಚಾಗಿ ಕಂಡುಬರುವ ಚಿತ್ರಗಳು ಕುಣಿತದ ಚಿತ್ರಗಳಾಗಿವೆ. ಪುರುಷರು, ಸ್ತ್ರೀಯರು, ಕೆಲವು ಸಲ ಮಕ್ಕಳೂ ಇಂತಹ ಕುಣಿತಗಳಲ್ಲಿ ಪಾಲ್ಗೊಳ್ಳುತ್ತಿರುಬಹುದು. ಬಹುಶ ಇವು ಆ ಕಾಲದ ದೈವಿಕಸಂಬಂಧೀ ಆಚರಣೆಯ ನೃತ್ಯಗಳಾಗಿರಬಹುದು. ಒಬ್ಬರಿಗೊಬ್ಬರು ಕೈ ಕೈ ಹಿಡಿದುಕೊಂಡು ಕುಣಿಯುತ್ತಿರುವ ಚಿತ್ರಗಳೇ ಹೆಚ್ಚಾಗಿವೆ. ಇಂತಹ ನೃತ್ಯಪ್ರಕಾರವು ಈಗಲೂ ಛತ್ತಿಸ್‌ಘರ್, ಬಸ್ತರ್, ಸಂತಾಲ್ ಭಾಗದ ಅರಣ್ಯವಾಸಿ ಬುಡಕಟ್ಟು ಜನಾಂಗದವರಲ್ಲಿ ಪ್ರಚಲಿತದಲ್ಲಿದೆ[೬೭] ಎಂದು ತಿಳಿದುಬರುವುದು. ಕೆಲವು ಕುಣಿತದ ಚಿತ್ರಗಳಲ್ಲಿ ಮುಖವಾಡ ಧರಿಸಿದ ಮನುಷ್ಯರೂ ಇದ್ದಾರೆ.[೬೮] ಇವರು ತಂಡದನಾಯಕ ಇಲ್ಲವೆ ಮಾಂತ್ರಿಕ ಮುಖಂಡನಿರಬೇಕು ಅಥವಾ ಪ್ರಾಣಿಗಳ ಮುಖವಾಡ ಧರಿಸಿ ಬೇಟೆಯಲ್ಲಿ ತೊಡಗಿದವರಾಗಿರಬೇಕು. ಎಂಬುದಾಗಿ ಅಭಿಪ್ರಾಯ ಪಡಲಾಗಿದೆ.

ಇಂತಹ ವಿವಿಧ ಕುಣಿತದ ಚಿತ್ರಗಳು ಉತ್ತರ ಕರ್ನಾಟಕ ಭಾಗದಲ್ಲಿ ಕಂಡುಬಂದಿವೆ. ಬಾದಾಮಿಯ ಸಮೀಪದ ಅರೆಗುಡ್ಡ ಹಿರೇಗುಡ್ಡಗಳಲ್ಲಿ ಮುಖವಾಡಧರಿಸಿ ಕುಣಿಯುತ್ತಿದ್ದಾರೆ. ಕೊಪ್ಪಳದ ಗುಡ್ಡದಲ್ಲಿ ಪಾಂಡವರ ಮಟ್ಟು ಎಂದು ಕರೆಯುವ ಸ್ಥಳದಲ್ಲಿ ಸಮೂಹಕುಣಿತದ ಚಿತ್ರವಿದ್ದು, ಒಬ್ಬರಿಗೊಬ್ಬರು ಕೈ ಕೈ ಹಿಡಿದುಕೊಂಡು ಕಾಲನ್ನು ಅಗಲಿಸಿ ಕುಣಿಯುತ್ತಿದ್ದಾರೆ. ಕೆಲವರ ಕೈಯಲ್ಲಿ ಆಯುಧಗಳನ್ನೂ ಚಿತ್ರಿಸಿದೆ. ಲಿಂಗಸುಗೂರು ತಾಲೂಕು ತಾವರಗೆರೆಯಲ್ಲಿನ ಗಾಣಗಿತ್ತಿ ಗುಡ್ಡದಲ್ಲಿನ ಒಂದುಕಡೆಗೆ ಇಬ್ಬರು ವ್ಯಕ್ತಿಗಳು ಕೈ ಮೇಲೆತ್ತಿಕೊಂಡು ಕುಣಿಯುತ್ತಿರುವ ಚಿತ್ರವಿದೆ. ಗಂಗಾವತಿ ತಾಲೂಕು ವೆಂಕಟಾಪುರದಲ್ಲಿ ಸಾಲುಕುಣಿತದ ಮಾನವರ ಚಿತ್ರಗಳಿವೆ. ಕೈ ಕೈ ಹಿಡಿದುಕೊಂಡ

೬೭. S. K. Panday : Indian Rock Art, Page 201

೬೮. S. K. Panday : Indian Rock Art, Page 202

ಇಲ್ಲಿಯೇ ಸಮೀಪದ ಒನಕೆ ಕಿಂಡಿ ಪ್ರದೇಶದಲ್ಲಿ ಬಿಲ್ಲು ಬಾಣ, ಈಟಿಗಳನ್ನು ಬಳಸಿ ಬೇಟೆಯಲ್ಲಿ ತೊಡಗಿದ ಚಿತ್ರಗಳು ರಚಿಸಿವೆ. ಕೊಪ್ಪಳದ ಗುಡ್ಡದಲ್ಲಿ ಅಶೋಕನ ಶಿಲಾಶಾಸನದ ಪಕ್ಕದಲ್ಲಿರುವ ಒಂದು ಶಿಲಾಶ್ರಯದಲ್ಲಿ ಬೇಟೆಯ ಚಿತ್ರವಿದ್ದು ಇಲ್ಲಿ ಒಬ್ಬನು ಬಿಲ್ಲಿನಿಂದ ಬಾಣವನ್ನು ಪ್ರಾಣಿಗಳ ಕಡೆಗೆ ಬಿಟ್ಟಿದ್ದು ಅದು ಪ್ರಾಣಿಗಳ ಕಡೆಗೆ ಸಾಗುತ್ತಿದೆ. ಇನ್ನೊಬ್ಬ ಬೇಟೆಗಾರ ಬಿಲ್ಲಿಗೆ ಬಾಣವನ್ನು ಹೂಡಿ ಬಿಡಲು ಸಿದ್ಧನಾಗಿದ್ದಾನೆ. ಪ್ರಾಣಿಗಳು ಅಂಜಿಕೆಯಿಂದ ದಿಕ್ಕೆಟ್ಟು ಓಡುತ್ತಿವೆ. ಲಿಂಗಸುಗೂರು ತಾಲೂಕಿನ ತಾವರಗೆರೆಯಲ್ಲಿನ ಒಂದು ಕಲ್ಲಾಸರೆಯಲ್ಲಿ ಇಬ್ಬರು ಮನುಷ್ಯರು ಹೆಗಲ ಮೇಲೆ ಕೋಲೊಂದನ್ನು ಹೊತ್ತುಕೊಂಡು ನಡೆಯುತ್ತಿದ್ದು ಅದಕ್ಕೆ ಬೇಟೆಯಾಡಿದ ಪ್ರಾಣಿಯನ್ನು ತಲೆಕೆಳಗಾಗಿ ಕಟ್ಟಿ ಒಯ್ಯುತ್ತಿದ್ದಾರೆ. ತಾವರಗೆರೆಯಲ್ಲಿಯೇ ಇರುವ ಗಾಣಗಿತ್ತಿ ಗುಡ್ಡದ ಕಲ್ಲಾಸರೆಯಲ್ಲಿ ಒಂದು ಕಡೆಗೆ ಇಬ್ಬರು ಬೇಟೆಗಾರರು ಇದ್ದು ಒಬ್ಬನು ಬಿಲ್ಲಿಗೆ ಬಾಣಹೂಡಿ ಪ್ರಾಣಿಗೆ ಹೊಡಿಯುತ್ತಿದ್ದಾನೆ. ಇನ್ನೊಬ್ಬ ತನ್ನ ಎಡಭಾಗದ ಹೆಗಲಮೇಲೆ ಆಯುಧವನ್ನು ಹೊತ್ತುಕೊಂಡು ಬಲಗೈಯಲ್ಲಿ ಬೇಟೆಯಾಡಿದ ಪ್ರಾಣಿಯನ್ನು ಎಳೆಯುತ್ತ ನಡೆದಿದ್ದಾನೆ. ಹೊಸಪೇಟೆ ತಾಲೂಕಿನ ಹಳಕುಂಡಿಯಲ್ಲಿ ಜಿಂಕೆಗೆ ಬೆನ್ನಲ್ಲಿ ಬಾಣನಾಟಿದಂತೆ ಚಿತ್ರಿಸಿದೆ. ಬಾಣದಿಂದ ಚುಚ್ಚಲ್ಪಟ್ಟ ಜಿಂಕೆಯ ಚಿತ್ರವು ರಾಯಚೂರು ಜಿಲ್ಲೆಯ ಅತನೂರಿನಲ್ಲಿಯೂ ರಚನೆಯಾಗಿದೆ. ಹೀಗೆ ವಿವಿಧ ಬಗೆಯಲ್ಲಿರುವ ಬೇಟೆಯ ಚಿತ್ರಗಳು ಅವರ ಬೇಟೆಯ ವಿಧಾನ ತಿಳಿಸುವುದರ ಜೊತೆಗೆ ಅವರ ಆಹಾರ ಭರಣದ ನೋಟವನ್ನು ಪ್ರತಿಬಿಂಬಿಸುತ್ತವೆ.

**II. ಕುಣಿತದ ಚಿತ್ರಗಳು :** ಬೇಟೆಯ ಚಿತ್ರಗಳನ್ನು ಬಿಟ್ಟರೆ ಮತ್ತೆ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳಲ್ಲಿ ಹೆಚ್ಚಾಗಿ ಕಂಡುಬರುವ ಚಿತ್ರಗಳು ಕುಣಿತದ ಚಿತ್ರಗಳಾಗಿವೆ. ಪುರುಷರು, ಸ್ತ್ರೀಯರು, ಕೆಲವು ಸಲ ಮಕ್ಕಳೂ ಇಂತಹ ಕುಣಿತಗಳಲ್ಲಿ ಪಾಲ್ಗೊಳ್ಳುತ್ತಿರುಬಹುದು. ಬಹುಶ ಇವು ಆ ಕಾಲದ ದೈವಿಕಸಂಬಂಧೀ ಆಚರಣೆಯ ನೃತ್ಯಗಳಾಗಿರಬಹುದು. ಒಬ್ಬರಿಗೊಬ್ಬರು ಕೈ ಕೈ ಹಿಡಿದುಕೊಂಡು ಕುಣಿಯುತ್ತಿರುವ ಚಿತ್ರಗಳೇ ಹೆಚ್ಚಾಗಿವೆ. ಇಂತಹ ನೃತ್ಯಪ್ರಕಾರವು ಈಗಲೂ ಛತ್ತಿಸ್‌ಘರ್, ಬಸ್ತರ್, ಸಂತಾಲ್ ಭಾಗದ ಅರಣ್ಯವಾಸಿ ಬುಡಕಟ್ಟು ಜನಾಂಗದವರಲ್ಲಿ ಪ್ರಚಲಿತದಲ್ಲಿದೆ[೬೭] ಎಂದು ತಿಳಿದುಬರುವುದು. ಕೆಲವು ಕುಣಿತದ ಚಿತ್ರಗಳಲ್ಲಿ ಮುಖವಾಡ ಧರಿಸಿದ ಮನುಷ್ಯರೂ ಇದ್ದಾರೆ.[೬೮] ಇವರು ತಂಡದನಾಯಕ ಇಲ್ಲವೆ ಮಾಂತ್ರಿಕ ಮುಖಂಡನಿರಬೇಕು ಅಥವಾ ಪ್ರಾಣಿಗಳ ಮುಖವಾಡ ಧರಿಸಿ ಬೇಟೆಯಲ್ಲಿ ತೊಡಗಿದವರಾಗಿರಬೇಕು. ಎಂಬುದಾಗಿ ಅಭಿಪ್ರಾಯ ಪಡಲಾಗಿದೆ.

ಇಂತಹ ವಿವಿಧ ಕುಣಿತದ ಚಿತ್ರಗಳು ಉತ್ತರ ಕರ್ನಾಟಕ ಭಾಗದಲ್ಲಿ ಕಂಡುಬಂದಿವೆ. ಬಾದಾಮಿಯ ಸಮೀಪದ ಅರೆಗುಡ್ಡ ಹಿರೇಗುಡ್ಡಗಳಲ್ಲಿ ಮುಖವಾಡಧರಿಸಿ ಕುಣಿಯುತ್ತಿದ್ದಾರೆ. ಕೊಪ್ಪಳದ ಗುಡ್ಡದಲ್ಲಿ ಪಾಂಡವರ ಪಟ್ಟು ಎಂದು ಕರೆಯುವ ಸ್ಥಳದಲ್ಲಿ ಸಮೂಹಕುಣಿತದ ಚಿತ್ರವಿದ್ದು, ಒಬ್ಬರಿಗೊಬ್ಬರು ಕೈ ಕೈ ಹಿಡಿದುಕೊಂಡು ಕಾಲನ್ನು ಅಗಲಿಸಿ ಕುಣಿಯುತ್ತಿದ್ದಾರೆ. ಕೆಲವರ ಕೈಯಲ್ಲಿ ಆಯುಧಗಳನ್ನೂ ಚಿತ್ರಿಸಿದೆ. ಲಿಂಗಸುಗೂರು ತಾಲೂಕು ತಾವರಗೆರೆಯಲ್ಲಿನ ಗಾಣಗಿತ್ತಿ ಗುಡ್ಡದಲ್ಲಿನ ಒಂದುಕಡೆಗೆ ಇಬ್ಬರು ವ್ಯಕ್ತಿಗಳು ಕೈ ಮೇಲೆತ್ತಿಕೊಂಡು ಕುಣಿಯುತ್ತಿರುವ ಚಿತ್ರವಿದೆ. ಗಂಗಾವತಿ ತಾಲೂಕು ವೆಂಕಟಾಪುರದಲ್ಲಿ ಸಾಲುಕುಣಿತದ ಮಾನವರ ಚಿತ್ರಗಳಿವೆ. ಕೈ ಕೈ ಹಿಡಿದುಕೊಂಡ

---

೬೭. S. K. Panday : Indian Rock Art, Page 201
೬೮. S. K. Panday : Indian Rock Art, Page 202

ಸ್ತ್ರೀಪುರುಷರು ತಮ್ಮ ಮಕ್ಕಳು ಮರಿಗಳೊಂದಿಗೆ ಕುಣಿಯುತ್ತಿದ್ದಾರೆ. ಕೆಲವು ಚಿತ್ರಗಳಲ್ಲಿ ತಲೆಯಮೇಲೆ ವೈವಿಧ್ಯ ಅಲಂಕಾರಿಕ ವಿನ್ಯಾಸಗಳಿವೆ. ಒಬ್ಬನ ತಲೆಯಮೇಲೆ ಸೂರ್ಯಕಿರಣಗಳನ್ನು ಸೂಚಿಸುವಂತೆ ರೇಖೆ ಎಳೆದ ವಿನ್ಯಾಸವಿದ್ದರೆ ಮತ್ತೊಂದು ವ್ಯಕ್ತಿ ಅಡ್ಡಲಾಗಿ ಪಟ್ಟಿಯಂತಿರುವ ತಲೆಯುಡುಗೆ ಧರಿಸಿದ್ದಾನೆ. ನೃತ್ಯದಲ್ಲಿ ತೊಡಗಿದ ಮಾನವಾಕೃತಿಗಳೆಲ್ಲ ಕಾಲನ್ನು ಅಗಲಿಸಿವೆ. ಇದು ಕುಣಿತದ ವೇಗವನ್ನು ತೋರಿಸುವ ಕ್ರಮವಾದಂತಿದೆ. ಗಂಗಾವತಿ ತಾಲೂಕಿನ ಮಲ್ಲಾಪುರದಲ್ಲಿಯೂ ಕುಣಿತದ ಚಿತ್ರಗಳಿವೆ. ಕಾಲನ್ನು ಅಗಲಿಸಿದಂತೆ ಕೈಗಳನ್ನು ಮೇಲಕ್ಕೆತ್ತಿ ಚಿತ್ರಿಸಿರುವುದಲ್ಲದೇ ಮೈಯನ್ನು ಬಳುಕಿದಂತೆ ಚಿತ್ರಿಸಲಾಗಿದೆ.

ಹಿರೇಬೆನಕಲ್ ಗುಹೆಗಳಲ್ಲಿ ವೈವಿಧ್ಯಕುಣಿತದ ಚಿತ್ರಗಳು ರಚಿಸಿವೆ. ಒಂದನೆಯ ಗವಿಯಲ್ಲಿ ಸಾಲಾಗಿ ಕೈ ಕೈ ಹಿಡಿದು ಕುಣಿಯುತ್ತಿರುವ ವ್ಯಕ್ತಿಗಳಿದ್ದಾರೆ. ಒಟ್ಟು ೨೭ ಜನರು ಒಂದೇ ಸಾಲಿನಲ್ಲಿ ಕುಣಿಯುತ್ತಿದ್ದು ಬಲಗಡೆಯ ವ್ಯಕ್ತಿ ಅತೀ ಇನ್ನೊಂದು ಕಡೆಗೆ ಅರ್ಧಚಂದ್ರಾಕೃತಿಯ ಒಂದುಗರೆಯ ಮೇಲೆ ೧೨ ಜನರು ನಿಂತು ಕುಣಿಯುತ್ತಿದ್ದಾರೆ. ಬಳ್ಳಾರಿ ಜಿಲ್ಲೆಯ ಹಂಪಿಯಲ್ಲಿ ಬರಮದೇವರ ಗುಂಡು ಎಂಬ ಸ್ಥಳದಲ್ಲಿನ ಚಿತ್ರದಲ್ಲಿ ನಾಲ್ಕು ವ್ಯಕ್ತಿಗಳು ಸಾಲಾಗಿ ಕುಣಿಯುತ್ತಿದ್ದಾರೆ. ಇಲ್ಲಿ ಕೈಕಾಲುಗಳ ಚಲನೆಯಲ್ಲದೇ ದೇಹವನ್ನು ಡೊಂಕಿಸಿ ರಚನೆಮಾಡಿದ್ದು ಕುಣಿತದ ವೇಗ, ಚಲನವಲನಗಳನ್ನು ಸಾಂಕೇತಿಸಲಾಗಿದೆ. ಗಂಗಾವತಿ ತಾಲೂಕಿನ ಮಲ್ಲಾಪುರದಲ್ಲಿ ಸ್ತ್ರೀಯರು ಕುಣಿತದಲ್ಲಿ ತೊಡಗಿರುವ ಚಿತ್ರಗಳಿವೆ. ಸ್ತ್ರೀಯರ ಸ್ತನಗಳು, ಗುಪ್ತಾಂಗ, ತಲೆಗೂದಲುಗಳನ್ನು ಇಲ್ಲಿ ಚಿತ್ರಿಸಿತೋರಿಸಲಾಗಿದೆ. ಈ ರೀತಿಯ ವೈವಿಧ್ಯ ಕುಣಿತದ ದೃಶ್ಯಗಳು ಅವರ ಧಾರ್ಮಿಕ ಆಚರಣೆಗೆ ಸಂಬಂಧಿಸಿದಂತೆಯೋ, ಯಶಸ್ಸಿನ ನಂತರ ಸಾಮೂಹಿಕವಾಗಿ ಕುಣಿಯುತ್ತಿರುವ ಚಿತ್ರಗಳೂ ಆಗಿರಬಹುದು. ಕೆಲವು ಚಿತ್ರಗಳಲ್ಲಿ ಪ್ರಾಣಿಗಳ ಮುಖವಾದ ಕಂಡುಬಂದಿದ್ದು ಅದು ಬಹುಶ ಕೊಂದಪ್ರಾಣಿಯದಾಗಿರಬಹುದು.[೮೯] ಎಂಬಂತಹ ವಿವರಣೆಗಳು ಕುಣಿತದ ಚಿತ್ರದ ಬಗೆಗೆ ಹೇಳಲಾಗಿದೆ.

**III. ತಾಂತ್ರಿಕ ಚಿತ್ರಗಳು :** ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳಲ್ಲಿ ಕೆಲವು ಮಾನವಾಕೃತಿಗಳು ಮೈ ಮೇಲೆ ರೇಖೆಗಳನ್ನು ಬರೆದುಕೊಂಡಿದ್ದಂತೆ. ಚಿತ್ರಿತವಾಗಿದ್ದು ಇವುಗಳು ತಾಂತ್ರಿಕಸಂಬಂಧಿ ಚಿತ್ರಗಳೆಂದು ವಿದ್ವಾಂಸರು[೨೦] ತರ್ಕಿಸಿದ್ದಾರೆ. ಒಬ್ಬ ಮನುಷ್ಯ ಅಥವಾ ಪ್ರಾಣಿಯ ಛಾಯಾ ಚಿತ್ರವನ್ನು ತೆಗೆದು ಮಂತ್ರಿಸಿದರೆ ಅವನು ಅಥವಾ ಅದು ತನ್ನ ವಶವಾಗುವುದೆಂಬ ನಂಬಿಕೆ ಪುರಾತನಕಾಲದಿಂದ ಇದ್ದು, ಪ್ರಾಗೈತಿಹಾಸಿಕ ಜನರು ಇಂತಹ ನಂಬಿಕೆಗಳಿಂದ ಮಾಂತ್ರಿಕ ಕಟ್ಟಳೆ ನಡೆಸುವ ಕಾಲದಲ್ಲಿ ಅವುಗಳ ಅಂಗವಾಗಿ ರೂಪಿಸಿದ ಚಿತ್ರಗಳಿರಬಹುದೆಂದು ಊಹಿಸಲಾಗಿದೆ. ಉತ್ತರ ಕರ್ನಾಟಕದ ಭಾಗದಲ್ಲಿ ಕಂಡುಬರುವ ಪ್ರಾಗೈತಿಹಾಸಿಕ ನೆಲೆಗಳಲ್ಲಿ ಕೆಲವು ಕಡೆಗೆ ತಾಂತ್ರಿಕ ಸಂಬಂಧಿ ಚಿತ್ರಗಳು ರಚನೆಯಾಗಿವೆ. ಬಾದಾಮಿ ಸಮೀಪದ ಕುಟಕನಕೇರಿಯಲ್ಲಿ ಮುಖವಾಡ ಧರಿಸಿದ ವ್ಯಕ್ತಿಗಳ ಚಿತ್ರಗಳಿದ್ದು ಅವರ ಮೈ ತುಂಬ ರೇಖಾಕೃತಿಯನ್ನು ಬರೆಯಲಾಗಿದೆ. ಕಾಲನ್ನು ಅಗಲಿಸಿ ನಿಂತ ಈ ವ್ಯಕ್ತಿಗಳು ಯಾವುದೊ ಧಾರ್ಮಿಕ ಕ್ರಿಯೆಯಲ್ಲಿ ನಿರತವಾದಂತಿದೆ. ಬದಾಮಿಯಲ್ಲಿನ ರಂಗನಾಥ ಬೆಟ್ಟದ ಚಿತ್ರಗಳಲ್ಲಿಯೂ ವ್ಯಕ್ತಿಗಳ ಮೈಮೇಲೆ ರೇಖೆಗಳನ್ನು ರಚಿಸಲಾಗಿದ್ದು ವಿಚಿತ್ರ ಮುಖವಾಡ ಧರಿಸಿದ್ದಲ್ಲದೇ ಕೈಯಲ್ಲಿ ಮಂತ್ರದಂಡ ಹಿಡಿದು

೮೯. S. K. Panday : Indian Rock Art, Page 39
೨೦. ಡಾ. ಅ. ಸುಂದರ : ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ, ಪುಟ ೧೯

ಅಭಿಮಂತ್ರಿಸುವ ಕ್ರಿಯೆಯಲ್ಲಿ ತೊಡಗಿದಂತಿದೆ. ಲಿಂಗಸುಗೂರು ತಾಲೂಕಿನ ತಾವರಗೇರಾದಲ್ಲಿರುವ ಚಿತ್ರದಲ್ಲಿ ನೀಳದೇಹದ ವ್ಯಕ್ತಿಯೊಬ್ಬ ಕೈಯಲ್ಲಿ ದಂಡ ಹಿಡಿದುಕೊಂಡು ನಿಂತಿದ್ದು ಆತನ ಎದುರಿಗೆ ಮೈ ಮೇಲೆ ರೇಖೆಗಳನ್ನು ಬರೆದುಕೊಂಡ ವ್ಯಕ್ತಿಯ ಚಿತ್ರವಿದೆ. ಇದರ ಪಕ್ಕದಲ್ಲಿಯೇ ಇನ್ನೊಂದು ಕಡೆಗೆ ವ್ಯಕ್ತಿಯೊಬ್ಬ ಪೀಠ ಒಂದರ ಮೇಲೆ ನಿಂತು ಮೇಲಕ್ಕೆ ಕೈಗಳೆರಡನ್ನೂ ಎತ್ತಿಕೊಂಡಿರುವ ಚಿತ್ರವಿದ್ದು ಇದು ಬಹುಶ ಮಾಂತ್ರಿಕ ವಿಧಿಯನ್ನು ಸೂಚಿಸುತ್ತಿರಬೇಕು. ಗಂಗಾವತಿ ತಾಲೂಕಿನ ಮಲ್ಲಾಪುರದಲ್ಲಿ ಮೈ ಮೇಲೆ ರೇಖೆಗಳಿರುವ ವ್ಯಕ್ತಿಗಳು ಕಾಲನ್ನು ಅಗಲಿಸಿ ನಿಂತುಕೊಂಡು ಯಾವುದೋ ಮಾಂತ್ರಿಕ ವಿಧಿಯಲ್ಲಿ ತೊಡಗಿದಂತೆ ಕಂಡುಬರುತ್ತದೆ. ಇಂತಹುದೇ ಚಿತ್ರಗಳು ಹಿರೇಬೆನಕಲ್, ಮತ್ತು ಹಂಪಿಯಲ್ಲಿ ಕಂಡುಬರುತ್ತವೆ. ಗಂಗಾವತಿ ತಾಲೂಕಿನ ಚಿಕ್ಕರಾಮಾಪುರದಲ್ಲಿ ಸುಮಾರು ೨ ಮೀಟರ್ ಎತ್ತರವಾಗಿರುವ ಮನುಷ್ಯನಿಗೆ ದುಂಡುತಲೆ ಚಿತ್ರಿಸಿದ್ದು ಅದುಕೂಡಾ ತಾಂತ್ರಿಕ ವಿಧಿಯಚಿತ್ರವಾಗಿದೆ. ಈ ರೀತಿಯ ಚಿತ್ರಗಳೆಲ್ಲ ಜನವಾಸದಿಂದ ದೂರವಿರುವ ಗುಹೆಗಳಲ್ಲಿ ರಚನೆಯಾಗಿರುವುದರಿಂದ ಇವುಗಳು ತಾಂತ್ರಿಕ ಸಾಧನೆಯ ಚಿತ್ರಗಳಾಗಿರಬಹುದೆಂಬ[೨೧] ವಿದ್ವಾಂಸರ ಅಭಿಪ್ರಾಯವು ಸತ್ಯಕ್ಕೆ ಸರಿ ಎಂದು ಒಪ್ಪಬಹುದು.

**IV. ಇತರ ಚಿತ್ರಗಳು :** ಪ್ರಾಗೈತಿಹಾಸಿಕ ಭಿತ್ತಿ ಚಿತ್ರಗಳಲ್ಲಿ ಮುಖ್ಯವಾಗಿ ಕಂಡುಬರುವ ಬೇಟೆಸಂಬಂಧಿ ಚಿತ್ರಗಳು. ಕುಣಿತದ ಚಿತ್ರ, ತಾಂತ್ರಿಕ ಸಂಬಂಧಿ ಚಿತ್ರಗಳಲ್ಲದೇ ಕೆಲವು ಮಂಡಲದಂತಹ ರಚನೆಗಳೂ ಕಂಡುಬಂದಿವೆ. ಇಂತಹ ವಿಚಿತ್ರಮಂಡಲ ಚಿತ್ರಗಳು ಕೆಲವು ವರ್ಣದಿಂದ ರಚಿಸಿದ್ದರೆ, ಇನ್ನು ಕೆಲವು ವರ್ಣರಹಿತವಾಗಿ ಚೂಪಾದ ಸಾಧನದಿಂದ ಕುಟ್ಟಿ ಗೀರಿ ರಚಿಸಲ್ಪಟ್ಟಿವೆ. ಆನೆಗೊಂದಿಯ ಬಳಿಯ ಒನಕೆ ಕಿಂಡಿ ಎಂಬಲ್ಲಿ ವರ್ಣದಿಂದ ರಚಿಸಿದ ಮಂಡಲ ಚಿತ್ರಗಳಿದ್ದರೆ. ಬೆಳಗಾಂವ ಜಿಲ್ಲೆಯ ನವಿಲುತೀರ್ಥ, ಉತ್ತರಕನ್ನಡ ಜಿಲ್ಲೆಯ ಗಾವಳಿ, ಗುಡ್ನಾಪುರಗಳಲ್ಲಿ ವರ್ಣರಹಿತ ಮಂಡಲ ಚಿತ್ರಗಳಿವೆ. ನವಿಲುತೀರ್ಥದಲ್ಲಿ ಆರುಗಂಟಿನ ರೇಖಾಚಿತ್ರವಿದ್ದು ಮೇಲೆ ಮೂರು, ಕೆಳಗೆ ಮೂರು ಗಂಟುಗಳನ್ನು ಹೊಂದಿದೆ. ಒಂದೊಂದು ಗಂಟಿನ ಒಳಗೂ ಚಿಕ್ಕ ಚಿಕ್ಕ ವೃತ್ತಗಳನ್ನು ರಚಿಸಲಾಗಿದೆ. ಸಿರ್ಸಿ ಸಮೀಪದ ಗುಡ್ನಾಪುರದಲ್ಲಿರುವ ಚಿತ್ರದಲ್ಲಿ ನಾಲ್ಕುಗಂಟಿನ ಮಂಡಲಾಕೃತಿ ಇದ್ದು ಪ್ರತಿಯೊಂದು ಗಂಟಿನ ಒಳಭಾಗದಲ್ಲೂ ಚುಕ್ಕೆಯನ್ನು ಇಡಲಾಗಿದೆ. ಇದರ ಮೇಲ್ಭಾಗದಲ್ಲಿ ಒಂಭತ್ತು ಚುಕ್ಕೆಗಳ ರೇಖಾಕೃತಿ ಇದೆ. ಕುಂದಾಪುರ ತಾಲೂಕಿನ ಗಾವಳಿಯಲ್ಲಿನ ಗಂಟಿನ ಮಂಡಲವು ಗೂಳಿಯ ಕಾಲಿಗೆ ಸೇರಿಸಿದಂತೆ ರಚನೆಯಾಗಿದೆ. ಚಿಕ್ಕರಾಮಾಪುರದ ಮೊದಲನೆಯ ಗವಿಯಲ್ಲಿ ನಾಲ್ಕುಗಂಟಿನ ಎರಡು ಮಂಡಲಗಳು ಒಂಬತ್ತು ಗಂಟಿನ ಒಂದು ಮಂಡಲ ಚಿತ್ರರಚಿಸಿವೆ. ಹಿರೇಬೆನಕಲ್ ನಾಲ್ಕನೆಯ ಗುಹೆಯಲ್ಲಿಯೂ ಸಹಿತ ಒಂಭತ್ತು ಗಂಟಿನ ಒಂದು ಮಂಡಲ ಚಿತ್ರವಿದೆ. ಇದರಲ್ಲಿ ರೇಖೆಯ ತುದಿಗಳನ್ನು ಸೇರಿಸುವಲ್ಲಿ ತೋರಣದಂತೆ ಆಕೃತಿ ರಚಿಸಲಾಗಿದೆ. ಗಂಗಾವತಿ ತಾಲೂಕಿನ ಬಿಳಿಭಾವಿಯಲ್ಲಿ ಎರಡು ಮಂಡಲಾಕೃತಿಗಳಿದ್ದು ಒಂದು ಗುಣಾಕಾರ ಚಿಹ್ನೆಯಂತೆ ಇದ್ದರೆ. ಅದರ ಎರಡೂ ಬದಿಯ ರೇಖೆಗಳು ತುದಿಯಲ್ಲಿ ಬಾಗಿಸಲ್ಪಟ್ಟು ಕೂಡಿಕೊಂಡಿವೆ. ಇವು ನೋಡಲು ನಾಗಬಂಧದಂತೆ ಕಾಣಿಸುತ್ತವೆ. ಇಲ್ಲಿರುವ ಇನ್ನೊಂದು ಮಂಡಲ ಚಿತ್ರ ಮೂರು ವೃತ್ತಗಳನ್ನು ಹೊಂದಿದ್ದು, ಒಂದರೊಳಗೊಂದು ರಚಿಸಿರುವ ಇವುಗಳಲ್ಲಿ ಹೊರಗಿನ ವೃತ್ತಕ್ಕೆ ಸೂರ್ಯ ಕಿರಣಗಳಂತೆ ರೇಖೆಗಳನ್ನು ಎಳೆಯಲಾಗಿದೆ.

---

೨೧. ಪಿ. ಆರ್. ತಿಪ್ಪೇಸ್ವಾಮಿ (ಸಂ) : ಚಿತ್ರಕಲಾ ಪ್ರಪಂಚ. ಪುಟ ೧೭

ಆನೆಗೊಂದಿಯ ಸಮೀಪದ ಒನಕೆ ಕಿಂಡಿಯಲ್ಲಿಯ ಮಂಡಲವು ಅಪರೂಪವಾದ ಚಿತ್ರವಾಗಿದ್ದು.[೨೨] ವಿನ್ಯಾಸದಲ್ಲಿ ಸಮಾಧಿಯನ್ನು ಸಂಕೇತಿಸುವಂತಿದೆ. ಇದೇ ತೆರನಾದ ಸ್ವರೂಪವು ಚಿಕ್ಕರಾಮಾಪುರದ ಮಂಡಲ ಚಿತ್ರದಲ್ಲಿಯೂ ಕಂಡುಬರುವುದು. ಇದಲ್ಲದೇ ಒನಕೆ ಕಿಂಡಿಯಲ್ಲಿ ನಾಲ್ಕು ಗಂಟಿನ ಚೌಕವನ್ನು ರಚಿಸಿ ಅದರಲ್ಲಿ ಇಬ್ಬರು ವ್ಯಕ್ತಿಗಳನ್ನು ರಚಿಸಿದ್ದಾರೆ. ಅಲ್ಲಿಯೇ ಸಮೀಪದಲ್ಲಿ ಸ್ವಸ್ತಿಕವನ್ನು ಹೋಲುವಂತಹ ರೇಖಾಕೃತಿ, ಆಯಾತಕೃತಿಗಳು ರಚಿಸಿವೆ. ಇಂತಹ ಮಂಡಲಗಳು ಬಹುಶ ಧಾರ್ಮಿಕ ವಿಧಿಗೆ ಸಂಬಂಧಿಸಿರಬಹುದೆಂದು ಅ. ಸುಂದರ ಅವರು ಅಭಿಪ್ರಾಯ ಪಡುತ್ತಾರೆ. ಈ ಮಂಡಲ ಚಿತ್ರಗಳಲ್ಲಿ ಹೆಚ್ಚಿನವುಗಳು ಹಾವುಗಳು ಒಂದಕ್ಕೊಂದು ಹೆಣೆದುಕೊಂಡ ನಾಗಬಂಧದಂತೆ ಕಂಡುಬರುವುದರಿಂದ ಇವು ನಾಗಾರಾಧನೆಗೆ ಸಂಬಂಧಿಸಿದವುಗಳಾಗಿರಬೇಕು. ಈ ಕುರಿತು ಇನ್ನೂ ಹೆಚ್ಚಿನ ಅಧ್ಯಯನಗಳಾಗಬೇಕಿದೆ.

ಉತ್ತರ ಕರ್ನಾಟಕದ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳ ಪರಿಶೀಲನೆಯಿಂದ ಈ ಕೆಳಗಿನ ಅಂಶಗಳು ಕಂಡುಬರುತ್ತವೆ. ವರ್ಣ ಚಿತ್ರಗಳು ಮತ್ತು ವರ್ಣರಹಿತ ಚಿತ್ರಗಳಲ್ಲಿ ವರ್ಣಚಿತ್ರಗಳು ಬದಾಮಿ, ರಾಮದುರ್ಗ, ಐಹೊಳೆ, ಹಿರೇಬೆನಕಲ್, ಕೊಪ್ಪಳ, ಹಂಪಿ ಪ್ರದೇಶದಲ್ಲಿ ಅತಿಹೆಚ್ಚು ಕಂಡುಬಂದರೆ, ವರ್ಣರಹಿತ ಚಿತ್ರಗಳಾದ ಕುಟ್ಟಿ ಕೊರೆದು ರಚಿಸಿದ ಚಿತ್ರಗಳು ಭಿಲ್ಲಮರಾಯನಗುಡ್ಡ, ಪಿಕ್ಕಿಹಾಳ, ತಾವರಗೆರೆ, ಕುರುಗೋಡು, ಮಸ್ಕಿ, ಹಳಕುಂಡಿ, ಬೆಳಗಲ್ಲುಗಳಲ್ಲಿ ಹೆಚ್ಚಾಗಿ ಕಂಡು ಬರುತ್ತವೆ. ವರ್ಣಚಿತ್ರಗಳು ಗುಹೆಯಲ್ಲಿ ಶಿಲಾಶ್ರಯದ ಒಳಮೈಯಲ್ಲಿ ರಚನೆಯಾದಂತೆಯೇ ಬಂಡೆಗಳ ಹೊರಮೈಗಳಲ್ಲೂ ರಚನೆಯಾಗಿದ್ದು ಕಂಡುಬರುವುದು. ಆದರೆ ಕುಟ್ಟಿಕೊರೆದು ರಚಿಸಿದ ವರ್ಣರಹಿತ ಚಿತ್ರಗಳು ಬಯಲು ಬಂಡೆಗಳಲ್ಲಿ ಮಾತ್ರ ಕಂಡುಬರುತ್ತವೆ. ವರ್ಣಚಿತ್ರಗಳಿಗೂ ವರ್ಣರಹಿತ ಚಿತ್ರಗಳಿಗೂ ವಿನ್ಯಾಸದಲ್ಲಿ ಶೈಲಿಯಲ್ಲಿ ಭಿನ್ನತೆ ಕಂಡುಬರುವುದು. ವರ್ಣಚಿತ್ರಗಳಲ್ಲಿ ಹೆಚ್ಚಿನ ವೈವಿಧ್ಯತೆ ಇದ್ದರೆ, ವರ್ಣರಹಿತ ಚಿತ್ರಗಳಲ್ಲಿ ಗೂಳಿ, ಜಿಂಕೆಗಳು, ಮಾನವರ ಚಿತ್ರಗಳು ಹೆಚ್ಚಾಗಿ ಕಂಡುಬರುತ್ತವೆ. ಬೇಟೆಯ ಚಿತ್ರಗಳಲ್ಲಿ ಒಬ್ಬ ವ್ಯಕ್ತಿ ಬೇಟೆಯಾಡುವುದಲ್ಲದೇ ಹಲವರು ಕೂಡಿಗುಂಪಾಗಿ ಬೇಟೆಯಲ್ಲಿ ತೊಡಗಿರುವ ಚಿತ್ರಗಳು ಇದ್ದು ಅವರ ಜೀವನ ವಿಧಾನ ತೋರಿಸುತ್ತದೆ. ಆಹಾರ ಸಂಗ್ರಹಣೆಗೆ ಗುಂಪುಗಳಲ್ಲಿ ತೆರಳುತ್ತಿದ್ದಂತೆ ಅವಶ್ಯಕತೆ ಬಿದ್ದಾಗ ಇಲ್ಲವೇ ಗುಂಪಿನ ಜನರೊಂದಿಗೆ ವಿರಸಬಂದಾಗ ಒಬ್ಬನೇ ಬೇಟೆಯಾಡಿ ಆಹಾರ ಸಂಗ್ರಹಿಸುತ್ತಿರಬಹುದು. ಆದರೆ ಕುಣಿತ ಚಿತ್ರಗಳಲ್ಲಿ ಒಬ್ಬನೇ ವ್ಯಕ್ತಿ ಚಿತ್ರಿಸಿದ್ದು ಕಂಡುಬರುವುದಿಲ್ಲ. ಇಬ್ಬರು, ಮೂವರು, ನಾಲ್ವರಿಂದ ಹಿಡಿದು ಸುಮಾರು ೨೭ ಜನರು ಕುಣಿತದಲ್ಲಿ ತೊಡಗಿರುವ ಚಿತ್ರಗಳು ಕಂಡುಬರುತ್ತಿವೆ. ಇವು ಅವರ ಧಾರ್ಮಿಕ ವಿಧಿ, ಮನರಂಜನೆ, ತೋರುಸುವುದರೊಂದಿಗೆ ಅವರ ಸಾಂಘಿಕ ಜೀವನವನ್ನು ಪ್ರತಿಬಿಂಬಿಸುತ್ತವೆ ಎನ್ನಬಹುದು.

ಕೆಲವು ಕಡೆಗೆ ಕಂಡುಬಂದಂತಹ ರೇಖಾಕೃತಿಗಳು ಮಂಡಲದಂತಹ ಚಿತ್ರಗಳ ರಚನೆಯಲ್ಲಿ ಜ್ಯಾಮಿತಿಕ ಉಪಕರಣ ಬಳಸಿರಬಹುದು. ಇದಕ್ಕಾಗಿ ಕಟ್ಟಿಗೆಯ ನೇರವಾದ ತುಂಡು, ಅರ್ಧವೃತ್ತಾಕಾರವಾಗಿರುವ ಪ್ರಾಣಿಗಳ ಕೋಡುಗಳಂತಹ ವಸ್ತುಗಳನ್ನು ಬಳಸಿರಬಹುದು. ಉತ್ತರ ಕರ್ನಾಟಕದ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳಲ್ಲಿ ಚಪ್ಪಟೆಯಾಗಿ ವರ್ಣಲೇಪಿಸಿದ ನೆರಳು ಚಿತ್ರಗಳಿಗಿಂತ ರೇಖಾಪ್ರಧಾನವಾದ ಚಿತ್ರಗಳೇ ಹೆಚ್ಚಾಗಿ ಕಂಡುಬಂದಿವೆ.

---

೨೨. ಚೆಲುವರಾಜು : ಹಂಪಿಯ ಸ್ಮಾರಕಗಳಲ್ಲಿ ಜನಪದಿಯ ಅಂಶಗಳು, ಪುಟ ೧೪




ಬಾದಾಮಿ : ಸೂಕ್ಷ್ಮ ಶಿಲಾಯುಗದ (ಸು.ಕ್ರಿ.ಪೂ 5,000–3,000) ವಿವಿಧ ಪ್ರಕಾರಗಳ ಸ್ತ್ರೀ-ಪುರುಷರ ಪ್ರಾಣಿಗಳ ವರ್ಣ ಚಿತ್ರಗಳು.




ವಿಕ್ಕಿಹಾಳ : ಪ್ರಾಣಿಗಳ ಸಾಲು ಶಿಲಾ ತಾಮ್ರಯುಗ.




ಚಿಕ್ಕಿಹಾಳ : ಶಿಲಾತಾಮ್ರಯುಗ




(ಸು.ಕ್ರಿ.ಪೂ. 800-300)

ಹಿರೆಬೆನಕಲ್: 1ನೇ ಗವಿ ವರ್ಣಚಿತ್ರಗಳು




ತೆಕ್ಕಲಕೋಟೆಯ ಚಿತ್ರಗಳು.



ಬಾದಾಮಿಯ ರಂಗನಾಥ ಗುಡ್ಡದ ಬಂಡೆಗಲ್ಲಿನ ವರ್ಣಚಿತ್ರಗಳು



ಕೃಪೆ. ಡಾ. ಶೀಲಕಾಂತ ಪತ್ತಾರ

ಬಾದಾಮಿಯ ಸಿಡಿಲಫಡಿಯ ಬಿಳಿ ವರ್ಣ ಚಿತ್ರಗಳು



ಕೃಪೆ. ಡಾ. ಶೀಲಕಾಂತ ಪತ್ತಾರ.

ಸಿಡಿಲಫಡಿ ಎದುರಿನ ಬಂಡೆಯ ಮೇಲಿನ ಬಿಳಿ ವರ್ಣಚಿತ್ರಗಳು



ಪ್ರಾಗೈತಿಹಾಸಿಕ ವರ್ಣಚಿತ್ರ. ಕೊಪ್ಪಳ



ಪ್ರಾಗೈತಿಹಾಸಿಕ ವರ್ಣಚಿತ್ರ, ಕೊಪ್ಪಳ.



ಪ್ರಾಗೈತಿಹಾಸಿಕ ವರ್ಣಚಿತ್ರ ಹಿರೇಬೆನಕಲ್



ಪ್ರಾಗೈತಿಹಾಸಿಕ ವರ್ಣಚಿತ್ರ, ಬಾದಾಮಿ



ಪ್ರಾಗೈತಿಹಾಸಿಕ ಕುಟ್ಟುಚಿತ್ರ, ಕಪ್ಪಡ ಬಿ.ಬಿ. ಹಂಡಿ



ಪ್ರಾಗೈತಿಹಾಸಿಕ ವರ್ಣಚಿತ್ರ ಬಾದಾಮಿ.



ಪ್ರಾಗೈತಿಹಾಸಿಕ ವರ್ಣಚಿತ್ರ, ಬಾದಾಮಿ



ಪ್ರಾಗೈತಿಹಾಸಿಕ ವರ್ಣಚಿತ್ರ ಬಾದಾಮಿ

ಹಾಗೆಯೇ ಕುಟ್ಟಿಕೊರೆದು ರಚಿಸಿದ ವರ್ಣರಹಿತ ಚಿತ್ರಗಳಲ್ಲೂ ರೇಖಾ ಚಿತ್ರಗಳೇ ಅಧಿಕವಾಗಿವೆ. ರೇಖೆ ಎಂದರೆ ಒಂದು ಕಲ್ಪನೆ. ಒಂದು ವಸ್ತು ಮುಗಿಯುತ್ತದೆ. ಇನ್ನೊಂದು ಪ್ರಾರಂಭವಾಗುತ್ತದೆ. ಅವೆರಡರ ನಡುವಿನ ಎಲ್ಲೆಯೇ ರೇಖೆಯಂತೆ ಭ್ರಮೆ ಉಂಟುಮಾಡುತ್ತದೆ. ಎಂಬ ವಿವರ[೨೩] ರೇಖೆಯ ಬಗೆಗೆ ಇದ್ದರೂ ಪ್ರಾಗೈತಿಹಾಸಿಕ ಮಾನವರ ರೇಖಾಚಿತ್ರಗಳು ಇದಕ್ಕಿಂತ ಹೆಚ್ಚಿನ ಅಂತಸತ್ವವನ್ನು ಹೊಂದಿವೆ. ಈ ರೇಖಾಚಿತ್ರಗಳು ಕೇವಲ ವಸ್ತುಗಳ ಪ್ರತ್ಯೇಕತೆಯ ಎಲ್ಲೆಯನ್ನು ತೋರುವಷ್ಟಕ್ಕೇ ಸೀಮಿತಗೊಂಡಿಲ್ಲ. ಇದಕ್ಕೂ ಮೀರಿದ ಸತ್ವಗುಣ ಇವುಗಳಲ್ಲಿಡಗಿದೆ. ವಸ್ತುವಿಗೆ ಸೂಚ್ಯರೀತಿಯಲ್ಲಿ ಖಚಿತತೆಕೊಡುವುದರ ಜೊತೆಗೇ ಅವುಗಳಲ್ಲಿರುವ ಅಂತರ್ಗತ ಚೈತನ್ಯವನ್ನು ಹೊರಹೊಮ್ಮಿಸಲು ಪ್ರಾಗೈತಿಹಾಸಿಕ ಮಾನವ ಪ್ರಯತ್ನಿಸಿದ್ದಾನೆ. ಎನ್ನಬಹುದು. ಮೈತುಂಬರೇಖೆ ಬರೆದುಕೊಂಡಿರುವ ಮಾಂತ್ರಿಕ ಮನುಷ್ಯರ ರೇಖಾ ಚಿತ್ರಗಳು. ಹಳಕುಂಡಿ, ಕುಪ್ಪಗಲ್ಲ, ಮಸ್ಕಿ, ಪಿಕ್ಕಿಹಾಳಗಳಲ್ಲಿನ ಜಿಂಕೆ. ಗೂಳಿ ಚಿತ್ರಗಳು ಜೀವಕಳೆಯಿಂದ ಕೂಡಿ ಅಂತರ್ಗತ ಭಾವ ಬಿಂಬಿಸುತ್ತವೆ. ಈ ರೇಖಾಕೃತಿಗಳು ಪ್ರಾಗೈತಿಹಾಸಿಕ ಮಾನವನ ಮಾಂತ್ರಿಕ ಸಂಬಂಧೀ ರಚನೆಗಳೇ ಆದರೂ ರಚನಾಕಾರನ ಮನಸ್ಸಿನಲ್ಲಿ ತುಡಿಯುತ್ತಿರುವ ಭ್ರಾಮಕ ಅಭಿವ್ಯಕ್ತಿಗಳಿಗೆ ರೂಪುಕೊಡುವ ಪ್ರಯತ್ನಗಳೇ ಆಗಿವೆ. ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳಲ್ಲಿ ಕಂಡುಬಂದಂತಹ ತಾಂತ್ರಿಕ ಸಂಬಂಧಿ ಚಿತ್ರಗಳು, ಧಾರ್ಮಿಕ ಆಚರಣೆಯ ಚಿತ್ರಗಳು ಮುಂದೆ ಮಾನವ ಒಂದೆಡೆ ನೆಲೆನಿಂತು ವಾಸಿಸಲು ಪ್ರಾರಂಭಿಸಿದ ಬಳಿಕ ರಚನೆಯಾದ ಜನಪದ ಭಿತ್ತಿಚಿತ್ರಕಲೆಗೆ ತಳಹದಿಯಾದವು. ಪ್ರಾಗೈತಿಹಾಸಿಕ ಚಿತ್ರಗಳು ಆ ಜನರ ಭಾವಾಭಿವ್ಯಕ್ತಿ, ಸೌಂದರ್ಯೋಪಾಸನೆ, ಧಾರ್ಮಿಕ ವಿಧಿಗಳ ಹಿನ್ನೆಲೆಯಲ್ಲಿ ರಚನೆಯಾದಂತೆಯೇ ರೂಪುಗೊಳ್ಳದ ಕಾಲದಲ್ಲಿ ರಚನೆಯಾದ ಈ ಚಿತ್ರಗಳು ಆ ಜನರು ಬರೆಸಿದ ಶಾಸನಗಳಾಗಿವೆ. ಐತಿಹಾಸಿಕ ಕಾಲದಲ್ಲಿ ಜನರು ತಮ್ಮ ಸಾಧನೆಗಳನ್ನು ತಿಳಿಸಲು ಶಿಲೆಯಮೇಲೆ ಬರವಣಿಗೆಯಮೂಲಕ ಶಾಸನಕೊರೆಸಿದ್ದರೆ ಬರವಣಿಗೆ ರೂಪುಗೊಳ್ಳದ ಪ್ರಾಗೈತಿಹಾಸಿಕ ಕಾಲದ ಜನರು ಶಿಲೆಯ ಮೇಲೆ ತಮ್ಮ ಕಾಲದ ವಿವರಗಳನ್ನು ಚಿತ್ರದ ಮೂಲಕ ಅಭಿವ್ಯಕ್ತಿಗೊಳಿಸಿದ್ದಾರೆ.

## ೨. ಜನಪದ ಭಿತ್ತಿ ಚಿತ್ರಕಲೆ

ಪ್ರಾಗೈತಿಹಾಸಿಕ ಕಾಲದ ಬಂಡೆಯ ಮೇಲೆ ರಚನೆಯಾದ ಭಿತ್ತಿ ಚಿತ್ರಕಲೆಯ ಮುಂದುವರಿಕೆ ಜನಪದ ಭಿತ್ತಿ ಚಿತ್ರಕಲೆ ಎನ್ನಬಹುದು. ಗುಡ್ಡಗಾಡಿನಲ್ಲಿ ವಾಸವಾಗಿದ್ದ ಪ್ರಾಗೈತಿಹಾಸಿಕ ಮಾನವರು ದುರ್ಗಮಗುಹೆಗಳಲ್ಲಿ ತಾಂತ್ರಿಕ ಚಿತ್ರಗಳನ್ನು ರಚಿಸಿದರೆ. ಗುಡ್ಡಬೆಟ್ಟದ ನೆಲೆಗಳನ್ನು ತ್ಯಜಿಸಿ ಬಯಲು ಪ್ರದೇಶದಲ್ಲಿ ನೆಲೆನಿಂತ ಜನಪದರು ತಮ್ಮ ವಾಸಕ್ಕಾಗಿ ಕಟ್ಟಿಕೊಂಡ ನಿವಾಸಗಳು. ದೇವಾಲಯಗಳು ಮತ್ತು ಇತರ ಕಟ್ಟಡಗಳಲ್ಲಿ ಆಚರಣೆಯ ಹಿನ್ನೆಲೆಯ ಚಿತ್ರಗಳನ್ನು ರಚಿಸಲು ಪ್ರಾರಂಭಿಸಿದರು. ಪ್ರಾಗಿತಿಹಾಸ ಕಾಲದ ತಾಂತ್ರಿಕ ಚಿತ್ರಗಳು ಗುಹೆಯಂತಹ ಗುಪ್ತ ನೆಲೆಗಳಲ್ಲಿ ಕಂಡುಬಂದರೆ, ಜನಪದರ ಆಚರಣೆಯ ಚಿತ್ರಗಳು ಜನಸಮುದಾಯದ ಸಮಷ್ಟಿ ರೂಪವಾಗಿ ಜನರ ಮಧ್ಯೆ ರೂಪಿತಗೊಂಡವು. ಜನಸಾಮಾನ್ಯರ ಬದುಕೇ ಆಗಿರುವ ಜನಪದ ಭಿತ್ತಿ ಚಿತ್ರಗಳ ಸ್ವರೂಪ ಲಕ್ಷಣಗಳನ್ನು ಈ ಕೆಳಗಿನಂತೆ ಸ್ಥೂಲವಾಗಿ ವಿವರಿಸಬಹುದು.

---

೨೩. ಬಿ. ವಿ. ಕೆ. ಶಾಸ್ತ್ರೀ (ಸಂ) : ರೇಖಾಚಿತ್ರ. ಪುಟ ೧


೨. ಜನಪದ ಭಿತ್ತಿ ಚಿತ್ರಕಲೆ
I) ಮನೆಯ ಗೋಡೆಯ ಚಿತ್ರವಿನ್ಯಾಸಗಳು
II) ದೇವಸ್ಥಾನ ಅಲಂಕರಿಸುವ ಚಿತ್ರವಿನ್ಯಾಸಗಳು
III) ಮದುವೆ ಮುಂಜಿವೆಯಂತಹ ಶುಭಸಮಾರಂಭಗಳಲ್ಲಿ ಗೋಡೆ ಮೇಲೆ ಬರೆಯುವ ಚಿತ್ರವಿನ್ಯಾಸಗಳು
IV) ಜಗಲಿಯ ಮೇಲಿನ ಚಿತ್ರವಿನ್ಯಾಸಗಳು
1) ಮನೆಯ ಒಳ ಗೋಡೆಯ ಚಿತ್ರವಿನ್ಯಾಸಗಳು
2) ಮನೆಯ ಹೊರ ಗೋಡೆಯ ಚಿತ್ರವಿನ್ಯಾಸಗಳು
I) ಗೋಡೆಗೆ ಬಣ್ಣದ ಪಟ್ಟಿಗಳನ್ನೆಳೆಯುವುದು
II) ಗೋಡೆಯ ಕೆಳಭಾಗಕ್ಕೆ ಕಪ್ಪು ವರ್ಣ ಲೇಪಿಸುವುದು
III) ಮಾಡುಗಳಿಗೆ ಅಲಂಕಾರ ವಿನ್ಯಾಸ ಮಾಡುವುದು
IV) ಮನೆಯ ಜಂತಿ. ತೊಲೆಗಳಿಗೆ ಅಲಂಕಾರ ವಿನ್ಯಾಸ ಮಾಡುವುದು
I) ವರ್ಣದ ಜೋರು ಬಿಡುವುದು
II) ಚುಕ್ಕೆಗಳನ್ನು ಇಡುವುದು
III) ಅಧಿಕ ಸ್ವಸ್ತಿಕ ಚಿಹ್ನೆಗಳನ್ನು ಬರೆಯುವುದು
IV) ಹಸ್ತದ ಗುರುತು ಮಾಡುವುದು
V) ಶೀಗಿ ಚಿತ್ರ ಬರೆಯುವುದು
VI) ಜಗಲಿಯ ಮೇಲಿನ ಚಿತ್ರವಿನ್ಯಾಸಗಳು
1) ಬಾಗಿಲಿನ ಮೇಲ್ಭಾಗ ಹಾಗೂ ಅಕ್ಕಪಕ್ಕದಲ್ಲಿ ಮೋಳಿಗೆ ಚಿತ್ರ ಬರೆಯುವುದು
2) ಬಾಗಿಲಿನ ಸುತ್ತಲೂ ಪಾಂಡವರ ಚಿತ್ರ ಬರೆಯುವುದು
3) ಬಾಗಿಲಿನ ಬದಿಗಳಲ್ಲಿ ತೇರಿನಾಕೃತಿ ರಚಿಸುವುದು
4) ಬಾಗಿಲ ಬದಿಯ ಗೋಡೆಯಲ್ಲಿ ಬೆಳದಿಂಗಳ ಚಿತ್ರ ಬರೆಯುವುದು
V) ತುಳಸೀ ಕಟ್ಟೆಯ ಮೇಲಿನ ಚಿತ್ರವಿನ್ಯಾಸಗಳು
VI) ಗರಡಿ ಮನೆಯ ಮೇಲಿನ ಚಿತ್ರವಿನ್ಯಾಸಗಳು
VII) ಸಮಾಧಿ ಅಥವಾ ಗದ್ದಿಗೆ ಮೇಲಿನ ಚಿತ್ರವಿನ್ಯಾಸಗಳು
VIII) ಶಿಲಾಶ್ರಯಗಳಲ್ಲಿ ರಚಿಸಿದ ಚಿತ್ರವಿನ್ಯಾಸಗಳು

ನಿರ್ದಿಷ್ಟ ಪ್ರಮಾಣವಿರದ, ಲಕ್ಷಣ ಮುಕ್ತವಾದ ಅಥವಾ ತಮಗೆ ಅಂದ-ಚೆಂದ ಕಂಡಂತೆ ಸಹಜವಾಗಿ ರಚನೆಯಾದ ಭಿತ್ತಿ ಚಿತ್ರಕಲೆ ಜನಪದ ಭಿತ್ತಿ ಚಿತ್ರಕಲೆಯಾಗಿದೆ.[೨೪] ಯಾವುದೇ ಶಾಸ್ತ್ರ ನಿಯಗಳ ಅರಿವಿಲ್ಲದೇ ಜೀವನದಲ್ಲಿ ತಾವು ಕಂಡುಂಡ ಅನುಭವಗಳಿಗೆ ತಕ್ಷಣದಲ್ಲಿ ಅಭಿವ್ಯಕ್ತಿಯ ರೂಪಕೊಡುವುದು ಇಲ್ಲಿದೆ. ಶಿಷ್ಟಪದ ಚಿತ್ರಕಾರರಂತೆ ಇಂತಹುದೇ ಪರಿಕರ ಬಳಸಬೇಕೆಂಬ ನಿಯಮವಿಲ್ಲದೇ ಸಂದರ್ಭಕ್ಕೆ ಲಭ್ಯವಾಗುವ ಸ್ಥಳೀಯ ವಸ್ತುಗಳಿಂದಲೇ ತಮ್ಮ ಕಲಾ ಪರಿಕರಗಳನ್ನು ರೂಪಿಸಿ ಚಿತ್ರಿಸುವುದು ಇಲ್ಲಿ ಕಂಡುಬರುತ್ತದೆ.

ಪೋಷಕನ ಇಚ್ಛೆಗನುಸಾರವಾಗಿ ಬೇಕೆಂದಾಗ ರಚನೆಯಾಗದೇ ನಿರ್ದಿಷ್ಟ ಆಚರಣೆಯ ಸಂದರ್ಭದಲ್ಲಿ ಮಾತ್ರ ರಚನೆಯಾಗುತ್ತದೆ. ಕುಡುಪಾದ ಪ್ರಖರ ವರ್ಣಗಳ ಲೇಪನ, ನಿರ್ದಿಷ್ಟ ಪ್ರಮಾಣವಿರದ ಆಕಾರಗಳು, ದಪ್ಪನಾದ, ಗಡುಸಾದ ರೇಖೆಗಳು, ಸಹಜತೆ, ಮುಗ್ಧತೆಗಳು ಇಲ್ಲಿ ಕಂಡುಬರುತ್ತವೆ. ಶಿಷ್ಟಪದ ಸಂಪ್ರದಾಯದಂತೆ ಗುರು-ಶಿಷ್ಯ ಸಂಬಂಧದಿಂದ ಈ ಕಲೆ ಕಲಿಸಲ್ಪಡದೇ ತಂದೆ-ತಾಯಿಗಳಿಂದ ಮಕ್ಕಳಿಗೆ ವಂಶಪರಂಪರೆಯಾಗಿ ಹರಿದು ಬರುವ ಮೂಲಕ ತನ್ನ ಬೆಳವಣಿಗೆಯನ್ನು ಕಂಡುಕೊಳ್ಳುತ್ತದೆ. ಸಾಮಾನ್ಯ ಜನತೆಯ ಧಾರ್ಮಿಕ ಜೀವನ, ಸಾಮಾಜಿಕ ಜೀವನ, ದೈನಂದಿನ ಬದುಕು, ಸುತ್ತಲ ಪರಿಸರ ಹೀಗೆ ಅವರ ಸಂಸ್ಕೃತಿಯೇ ಇಲ್ಲಿ ಚಿತ್ರರೂಪದಲ್ಲಿ ಒಡಮೂಡಿರುತ್ತದೆ. ಅಲ್ಲದೇ ಸಂಪ್ರದಾಯ ನಿಷ್ಠವಾಗಿ ಸಾಂಕೇತಿಕವಾದ ಸರಳ ರೂಪದಲ್ಲಿ ಜನಪದ ಭಿತ್ತಿ ಚಿತ್ರಕಲೆ ಇರುತ್ತದೆ. ಈ ಕಲೆಯು ಸೀಮಿತ ಅವಧಿಯವರೆಗೆ ಉಳಿದುಬರುತ್ತದಲ್ಲದೇ, ನಿರ್ದಿಷ್ಟಪಡಿಸಿದ ಆಚರಣೆಯ ಸಂದರ್ಭದಲ್ಲಿ ಪುನಃ ಪುನಃ ರಚನೆಯಾಗುತ್ತದೆ. ಈ ಕಲೆಯಲ್ಲಿ ವಂಶಪರಂಪರೆಯಾಗಿ ಬಂದ ಚಿತ್ರಶೈಲಿಯೇ ಪ್ರಮುಖವಾಗುತ್ತದೆ. ಇಂತಹ ಲಕ್ಷಣಗಳಿಗನುಸಾರವಾಗಿ ಜನಪದ ಭಿತ್ತಿ ಚಿತ್ರಕಲೆಯನ್ನು ವರ್ಗೀಕರಿಸಿಕೊಂಡು ಅದನ್ನು ಇಲ್ಲಿ ವಿವೇಚಿಸಲಾಗಿದೆ. ಒಂದು ಕಡೆ ರಾಜಮಹಾರಾಜರು, ಪ್ರತಿಷ್ಠಿತರು, ಮಠಮಾನ್ಯಗಳ ಆಶ್ರಯದಲ್ಲಿ ಶಿಷ್ಟ ಭಿತ್ತಿ ಚಿತ್ರಕಲೆ ಬೆಳೆಯುತ್ತಿದ್ದರೆ, ಅದಕ್ಕೆ ಸಂವಾದಿಯಾಗಿಯೇ ಮೊದಲಿನಿಂದಲೂ ಗ್ರಾಮೀಣ ಪ್ರದೇಶದಲ್ಲಿ ಶಿಷ್ಟ ಪರಂಪರೆಗಿಂತ ಭಿನ್ನವಾದ ವಿಧಾನ ಮತ್ತು ಶೈಲಿಗಳಲ್ಲಿ ಭಿತ್ತಿಚಿತ್ರಕಲೆ ಬೆಳೆದು ಬಂದಿದೆ.

"ಹೊರಗಿನ ಯಾವುದೇ ಪ್ರಭಾವವಿಲ್ಲದೇ, ಶಿಕ್ಷಣ, ತರಬೇತಿ ಇಲ್ಲದೇ ನಮ್ಮ ಗ್ರಾಮೀಣ ಜನರು ಹಾಡು ಕಟ್ಟಬಲ್ಲರು, ಹಾಡು ಹಾಡಬಲ್ಲರು. ವೇಷ ತೊಡಬಲ್ಲರು, ಹೆಜ್ಜೆ ಹಾಕಬಲ್ಲರು, ವಾದ್ಯ ನುಡಿಸಬಲ್ಲರು. ಹಾಗೇ ಚಿತ್ರಕೂಡ ರಚಿಸಬಲ್ಲರು. ತನ್ನ ಸುತ್ತ ದಿನನಿತ್ಯದ ಬದುಕಿನಲ್ಲಿ ಕಂಡುಬರುವ ವಸ್ತು ವಿಶೇಷಗಳನ್ನೇ ಕುರಿತು ಹಾಡು ಕಟ್ಟಿ ಹಾಡಿದಂತೆ ಅವುಗಳ ಚಿತ್ರಗಳನ್ನೇ ಬರೆದು,[೨೫] ಆ ಮೂಲಕ ತನ್ನ ಮನಸ್ಸಿನ ಭಾವನೆ ಕಲ್ಪನೆಗಳಿಗೆ ಒಂದು ರೂಪ ಕೊಡುವ ಯತ್ನವನ್ನು ಗ್ರಾಮೀಣ ಜನ ಮಾಡಿದರು." ಗ್ರಾಮೀಣ ಜನರು ಬದುಕನ್ನು ಪ್ರೀತಿಸಿದವರು. ತಾವು ಮಾಡುವದೆಲ್ಲವೂ ಸುಂದರವಾಗಿ, ಚೆನ್ನಾಗಿ ಕಾಣಬೇಕೆಂದು ಅವರ ಅಭಿಲಾಷೆ. ಪ್ರತಿಯೊಂದಕ್ಕೂ ಒಪ್ಪ, ಓರಣ ಮತ್ತು ಅಂದವನ್ನು ತಂದುಕೊಡುವ ಯತ್ನವನ್ನು ಮಾಡಿದರು. ಈ ಹಿನ್ನೆಲೆಯಲ್ಲಿ ಹಬ್ಬ-ಹರಿದಿನ, ದೇವರ ಉತ್ಸವ, ಜಾತ್ರೆ, ಕೆಲವೊಂದು ನೇಮ-ನಿಯಮ, ವ್ರತ, ಪೂಜೆ, ಮದುವೆ, ಮುಂಜಿವೆ ಮುಂತಾದ ಸಂದರ್ಭಗಳಲ್ಲಿ ವಿಶೇಷ ರಂಗೋಲಿ ಹಾಕುವಂತೆ, ಇಂತಹ ಸಂದರ್ಭಗಳಲ್ಲಿ ಗೋಡೆಯ ಮೇಲೆ ವಿವಿಧ ರೀತಿಯ ಚಿತ್ರ ಮತ್ತು ಚಿತ್ತಾರಗಳನ್ನು ಬರೆಯುವ ಸಂಪ್ರದಾಯವನ್ನು ಗ್ರಾಮೀಣ ಜನರು ರೂಢಿಸಿಕೊಂಡಿದ್ದಾರೆ. ಭಾರತದ ಉದ್ದಗಲಕ್ಕೂ ಇಂತಹ ಜನಪದ ಭಿತ್ತಿ ಚಿತ್ರಗಳನ್ನು ಕಾಣಬಹುದು.

---

೨೪. ಹೆಚ್ಚಿನ ವಿವರಗಳಿಗೆ ನೋಡಿರಿ : ಡಾ. ಎಸ್. ಸಿ. ಪಾಟೀಲ್, ಕರ್ನಾಟಕ ಜನಪದ ಚಿತ್ರಕಲೆ, ಪುಟ ೨೦ ರಿಂದ ೨೩

೨೫. ಸುಧಾ, ಯುಗಾದಿ ವಿಶೇಷಾಂಕ : ೧೯೯೯, ಪುಟ ೨೧೧, ಅದ್ಭುತರಮ್ಯಗೋಡೆ ಚಿತ್ತಾರಗಳು, ನಾ. ಡಿಸೋಜ

**ಅಲ್ಪನಾ :** ಬಂಗಾಳ ಪ್ರದೇಶದಲ್ಲಿ ಹಬ್ಬ-ಹರಿದಿನ, ಶುಭ ಸಮಾರಂಭಗಳಲ್ಲಿ ಅಲ್ಲಿನ ಮಹಿಳೆಯರು ಸುಣ್ಣದ ನೀರು ಮತ್ತು ಬಣ್ಣದ ಮಣ್ಣುಗಳಿಂದ ರೇಖಾ ಚಿತ್ರಗಳನ್ನು ಮನೆಯ ನೆಲ ಮತ್ತು ಗೋಡೆಗಳ ಮೇಲೆ ರಚಿಸುತ್ತಾರೆ. ಈ ಒಂದು ಕಲಾ ಪ್ರಕಾರಕ್ಕೆ ' ಅಲ್ಪನಾ ' ಎಂದು ಕರೆಯುತ್ತಾರೆ. ಇಲ್ಲಿನ ಮಹಿಳೆಯರು ತಾವು ಆಚರಿಸು ಅನೇಕ ವ್ರತ-ಉಪವಾಸಗಳ ಅಂಗವಾಗಿಯೂ ' ಅಲ್ಪನಾ ' ಚಿತ್ರಗಳನ್ನು ಗೋಡೆಗಳ ಮೇಲೆ ಬರೆಯುತ್ತಾರೆ.

**ಅರಿಪನಾ :** ಬಿಹಾರದ ಮಹಿಳೆಯರು ಶುಭ ಸಮಾರಂಭಗಳಲ್ಲಿ ಬರೆಯುವ ಗೋಡೆ ಚಿತ್ರಗಳಿಗೆ ' ಅರಿಪನಾ ' ಎಂದು ಕರೆಯುತ್ತಾರೆ.[೭೬] ಬಂಗಾಳದ ಅಲ್ಪನಾಗಳಂತೆಯೇ ಇದ್ದರೂ ಅರಿಪನಾ ಚಿತ್ರಗಳು ದಪ್ಪ ವರ್ಣಗಳಿಂದ ಕೂಡಿದ್ದು ಇನ್ನಷ್ಟು ರೇಖಾಬದ್ಧವಾಗಿರುತ್ತವೆ.

**ಮಂಡನಾ :** ಮಧ್ಯಪ್ರದೇಶದ ಗ್ರಾಮೀಣ ಜನರು ರಚಿಸುವ ಗೋಡೆ ಚಿತ್ರಗಳ ಕಲಾ ಪ್ರಕಾರಕ್ಕೆ ' ಮಂಡನಾ ' ಎಂದು ಹೇಳುತ್ತಾರೆ. ಬಿಳಿಸುಣ್ಣದಿಂದ ಎಳೆದ ರೇಖೆಗಳ ಪಕ್ಕದಲ್ಲೇ ಗೆರು ಎಂಬ ಕೆಂಪು ಮಿಶ್ರಿತ ಬಣ್ಣದ ರೇಖೆಗಳನ್ನು ಎಳೆಯುವ ಈ ಚಿತ್ರ ಪ್ರಕಾರದಲ್ಲಿ ಸನ್ನಿವೇಶಕ್ಕೆ ತಕ್ಕಂತೆ ಚಿತ್ರದ ವಸ್ತುವಿಷಯ ಆಕಾರಗಳು ಬದಲಾಗುತ್ತವೆ.

**ಮಧುಬನಿ :** ಬಿಹಾರದ ಉತ್ತರ ಭಾಗದಲ್ಲಿನ ಮಹಿಳೆಯರು ಕೆಲವು ಪ್ರಮುಖ ಸಮಾರಂಭಗಳಲ್ಲಿ ತಮ್ಮ ಮನೆಯ ಗೋಡೆಗಳ ಮೇಲೆ ಚಿತ್ರ ಬರೆದು ಅಲಂಕರಿಸುತ್ತಾರೆ. ಈ ಕಲಾಪ್ರಕಾರವನ್ನು ' ಮಧುಬನಿ ' ಎಂದು ಕರೆಯುತ್ತಾರೆ. ಉಪನಯನ ಸಮಾರಂಭ ಮನೆಗಳಿಗೆ ಹಾಗೂ ದೇವರ ಮನೆಗೆ ಸುಣ್ಣ-ಬಣ್ಣ ಬಳಿದಾದ ಮೇಲೆ ಏಕಾದಶಿ, ಚಂದ್ರ ಚತುರ್ಥಿ, ಹಬ್ಬಗಳಲ್ಲಿ, ವಿವಾಹ, ನಿಶ್ಚಿತಾರ್ಥ ಸಂದರ್ಭಗಳಲ್ಲಿ ಗಂಡು-ಹೆಣ್ಣುಗಳ ಮೊದಲ ಸಮಾಗಮದ ' ಕೋಭರ್ ಘರ್ ' ಎಂದು ಕರೆಯುವ ಪ್ರಸ್ತದ ರಾತ್ರಿ, ಹೀಗೆ ವಿವಿಧ ಸಂದರ್ಭಗಳಲ್ಲಿ ಮನೆಯ ಗೋಡೆಗಳ ಮೇಲೆ ಮಧುಬನಿ ಚಿತ್ರ ಬರೆದು ಅಲಂಕರಿಸುತ್ತಾರೆ. ಬಹಳ ಸಂಕೀರ್ಣವಾದ ಈ ಮಧುಬನಿ ಚಿತ್ರಗಳಲ್ಲಿ ತಮ್ಮ ಸುತ್ತಲಿನ ಬದುಕಿನ ವಸ್ತುವಿಷಯಗಳು, ಘಟನೆಗಳೇ ಅಲ್ಲದೆ ಶಿವ, ಪಾರ್ವತಿ, ಕೃಷ್ಣ ಮುಂತಾದ ಪೌರಾಣಿಕ ದೇವತೆಗಳ ಚಿತ್ರಗಳನ್ನು ರಚಿಸುತ್ತಾರೆ.[೭೭] "ಪ್ರಸ್ತದ ಕೋಣೆಯ ಗೋಡೆಯಲ್ಲಿ ಬರೆಯಲಾಗುವ ಚಿತ್ರಗಳಲ್ಲಿ ಹರಿಯುವ ನೀರು, ಮೀನು, ಹೂ ಬಿಟ್ಟಿರುವ ಮರ ಮುಂತಾದ ಚಿತ್ರಗಳು ಪ್ರಮುಖವಾಗಿವೆ. ಇಂತಹ ಚಿತ್ರಗಳು ಸಂತಾನ ಸಮೃದ್ಧಿಯ ಪ್ರತೀಕಗಳಲ್ಲದೇ, ವಧು-ವರರ ನಾಳಿನ ಬದುಕು ಒಳಿತಾಗಲೆಂಬ ಸಂಕೇತವನ್ನೂ ಹೊಂದಿವೆ ಎಂದು ಅವರಲ್ಲಿ ನಂಬಿಕೆ ಇದೆ. "

**ವಾರ್ಲಿ ಕಲೆ :** ಮಹಾರಾಷ್ಟ್ರದ ' ಗಾಂಜಾಡ್ ' ಆದಿವಾಸಿಗಳು ತಮ್ಮ ಮದುವೆ, ಧಾರ್ಮಿಕ ಶುಭ ಸಮಾರಂಭಗಳು ಮುಂತಾದ ಸಂದರ್ಭಗಳಲ್ಲಿ ತಮ್ಮ ಗುಡಿಸಲಿನ ಗೋಡೆಗಳಿಗೆ ವೈವಿಧ್ಯಮಯ ಚಿತ್ರಾಲಂಕಾರ ಮಾಡುತ್ತಾರೆ. ಗಾಂಜಾಡ್ ಪ್ರದೇಶದ ವಾರಿಲಿ ಆದಿವಾಸಿ ಜನಾಂಗದವರು ಬರೆಯುವ ಈ ಗೋಡೆ ಚಿತ್ರ ಕಲಾ ಪ್ರಕಾರಕ್ಕೆ ' ವಾರ್ಲಿ ' ಕಲೆ ಎಂದು ಹೇಳುತ್ತಾರೆ. ವಾರ್ಲಿ ಆದಿವಾಸಿಗಳು ಗೋಡೆ ಚಿತ್ರ ರಚಿಸುವ ವಿಧಾನವೆಂದರೆ, ತಮ್ಮ ಗುಡಿಸಲಿನ ಬಿದಿರಿನ ಗೋಡೆಗಳಿಗೆ ಸಗಣಿ, ಜೇಡಿ ಮಣ್ಣನ್ನು ಕಲೆಸಿ ಲೇಪಿಸುವುದು. ಅದರ ಮೇಲೆ ಹುರಿಮಂಜಿನಂಥ ಕೆಂಪು ಮಣ್ಣನ್ನು ನೀರಲ್ಲಿ ಕಲೆಸಿಕೊಂಡು ಮಂದವಾದ ಮಿಶ್ರಣ ಲೇಪಿಸಿ ನುಣುಪಾಗಿ ಮಾಡಿಕೊಳ್ಳುವುದು. ಆಮೇಲೆ ಅಕ್ಕಿಯನ್ನು ನೆನೆಹಾಕಿ ರುಬ್ಬಿದ ಬಿಳಿ ಅಕ್ಕಿಹಿಟ್ಟಿನಿಂದ ಚಿತ್ರ ಬರೆಯುವುದು. ಚಿತ್ರ ಬರೆಯಲು ಅವರು ವಿವಿಧ ಆಕಾರದಲ್ಲಿ ಚೂಪಾಗಿ

---

೭೬. ಬಾಬುರಾವ್ ಸಾದ್ವೇಲ್ಕರ್ : ಸಂತ, ಕಲಾವಿದ, ಶುಭರಾಯರು, ಪುಟ - ೧೧

೭೭. ಸುಧಾ, ಯುಗಾದಿ ವಿಶೇಷಾಂಕ : ೧೯೯೯, ಪುಟ ೨೧೨, ಅದ್ಭುತರಮ್ಯಗೋಡೆ ಚಿತ್ತಾರಗಳು, ನಾ. ಡಿಸೋಜ

ಕತ್ತರಿಸಿದ ಬಿದಿರು ಕಡ್ಡಿಗಳನ್ನೇ ಬಳಸುತ್ತಾರೆ. ಇವರ ಚಿತ್ರ ಸಂಯೋಜನೆಯ ರೀತಿ ಎಂದರೆ ವಿವಿಧ ಆಕಾರದ ಮಂಡಲಗಳು ಮತ್ತು ಚೌಕಗಳನ್ನು ನಿರ್ಮಿಸಿಕೊಂಡು [೭೮] ಅವುಗಳಲ್ಲಿ ಚಿತ್ರಗಳನ್ನು ರಚಿಸುತ್ತಾರೆ. ವಸ್ತುವಿಷಯಗಳಲ್ಲಿ ದೇವತೆಗಳ ಮತ್ತು ಅತಿಮಾನುಷ ಶಕ್ತಿಗಳ ಚಿತ್ರಗಳೇ ಇದ್ದರೂ ತಮ್ಮ ಸುತ್ತಲಿನ ವಸ್ತು ವೈವಿಧ್ಯಗಳನ್ನೂ ಕಾಣಬಹುದು.

ಗುಜರಾತ್ ರಾಜ್ಯದ 'ರಥವಾ' ಜನಾಂಗದವರು ನಿರ್ದಿಷ್ಟ ಶುಭಸಂದರ್ಭದಲ್ಲಿ ತಮ್ಮ ಮನೆಗಳಲ್ಲಿ ಗೋಡೆ ತುಂಬ ಬಹುವರ್ಣದ ಚಿತ್ರಗಳನ್ನು ಬರೆದು ಪೂಜಿಸುತ್ತಾರೆ. ಈ ಚಿತ್ರಗಳು ಪ್ರಖರ ವರ್ಣಗಳಿಂದ ಕೂಡಿದ್ದು ನೋಡಲು ಆಕರ್ಷಕವಾಗಿರುತ್ತವೆ. " ರಾಜಸ್ಥಾನ. ಹರಿಯಾಣ, ಉತ್ತರ ಪ್ರದೇಶ ರಾಜ್ಯಗಳಲ್ಲಿ ನವರಾತ್ರಿ ಸಂದರ್ಭದಲ್ಲಿ ಗೋಡೆ ಮೇಲೆ 'ಸಾಂಜಿದೇವಿ' ಯ ಚಿತ್ರ ಬರೆಯುತ್ತಾರೆ. ಮಣ್ಣಿನ ಗೋಡೆಯ ಮೇಲೆ ಬರೆಯುವ ಸಾಂಜಿದೇವಿ ಚಿತ್ರದ ಜೊತೆಗೇ ಹಲವಾರು ನಕ್ಷೆಗಳು. ಸೂರ್ಯ. ಚಂದ್ರ. ಮರ, ಗಿಡ. ಬಳ್ಳಿ. ನವಿಲು ಇತ್ಯಾದಿ ಚಿತ್ರಗಳನ್ನೂ ಬಣ್ಣಗಳಿಂದ ಅಲಂಕಾರಯುಕ್ತವಾಗಿ ಬರೆಯುತ್ತಾರೆ. [೭೯] ಈ ಚಿತ್ರ ರಚಿಸಿದ ಗೋಡೆಯ ಮುಂದೆ ಮನೆಮಂದಿಯೆಲ್ಲ ಹಾಡಿ ಕುಣಿಯುತ್ತಾರೆ. ಈ ಚಿತ್ರಗಳನ್ನು [೮೦] ಹದಿನೈದು ದಿನಗಳ ವರೆಗೂ ಬರೆಯುತ್ತಾರೆ. ಮಧ್ಯಪ್ರದೇಶ. ಕಚ್, ಪಂಜಾಬು ಗಳಲ್ಲಿನ ಕೆಲವು ಗುಡ್ಡಗಾಡು ಜನಾಂಗದವರು ಬಣ್ಣ ಬಣ್ಣದ ಮಣ್ಣಿನಿಂದ ಗೋಡೆಯನ್ನು ಅಣಿಗೊಳಿಸಿ ಅದರ ಮೇಲೆ ಚಿತ್ರಗಳನ್ನು ಬರೆಯುತ್ತಾರೆ.

ಕರ್ನಾಟಕದಲ್ಲೂ ಈ ಬಗೆಯ ಜನಪದ ಭಿತ್ತಿಚಿತ್ರಗಳನ್ನು ಕಾಣಬಹುದಾಗಿದೆ. ಉತ್ತರ ಕನ್ನಡ ಜಿಲ್ಲೆಯ ಕುಣಬಿಗಳು. ಗೊಂಡರು. ನಾಮಧಾರಿಗಳು. ಮೊಗವೀರರು, ಹಾಲಕ್ಕಿ ಜನಾಂಗದವರು ಶುಭಸಮಾರಂಭಗಳಲ್ಲಿ ಗೋಡೆ ಚಿತ್ರಗಳನ್ನು ರಚಿಸುತ್ತಾರೆ. ಕರ್ನಾಟಕದ ಉತ್ತರ ಭಾಗದ ಪ್ರದೇಶಗಳಾದ ಗುಲಬರ್ಗಾ, ಬೀದರ್, ಬೆಳಗಾಂವ, ಬಿಜಾಪುರ, ಬಾಗಲಕೋಟೆ. ಧಾರವಾಡ. ಗದಗ ಮುಂತಾದ ಜಿಲ್ಲೆಗಳ ವ್ಯಾಪ್ತಿಯಲ್ಲಿಯೂ ಗ್ರಾಮೀಣ ಜನರ ರಚನೆಯ ಜನಪದ ಗೋಡೆ ಚಿತ್ರ-ಚಿತ್ತಾರಗಳನ್ನು ಕಾಣಬಹುದು. ಮದುವೆ-ಮುಂಜಿವೆ. ಹಬ್ಬ-ಹರಿದಿನ, ಜಾತ್ರೆ-ಉತ್ಸವ, ಮುಂತಾದ ಶುಭ ದಿನಗಳಲ್ಲಿ ಈ ಭಾಗದ ಜನರೂ ಗೋಡೆಚಿತ್ರಗಳನ್ನು ಬರೆಯುವ ಉತ್ಕೃಷ್ಟ ಪರಂಪರೆಯನ್ನು ಹೊಂದಿದ್ದಾರೆ. ಮದುವೆಯಲ್ಲಿ ವಧು-ವರರನ್ನು ಕೂಡ್ರಿಸುವ ಗೋಡೆಯ ಹಿಂದೆ ಹಸೆ ಚಿತ್ರವನ್ನು ಬರೆಯುವ ಪದ್ಧತಿ ಈ ಭಾಗದಲ್ಲೂ ಇದೆ. ಆದರೆ ಅದು ಇತ್ತೀಚೆಗೆ ಮರೆಯಾಗುತ್ತಿದೆ. ಇದಲ್ಲದೇ ಗುಡಿಹುಣ್ಣಿಮೆಯಲ್ಲಿ (ಭಾರತ ಹುಣ್ಣಿಮೆ) ಮನೆಯ ಮುಂಬಾಗಿಲ ಗೋಡೆಯ ಮೇಲೆ ಬೆಳದಿಂಗಳ ಚಿತ್ರ ಬರೆಯುವುದು. ಕಾರಹುಣ್ಣಿಮೆಯಲ್ಲಿ ಮನೆ ಬಾಗಿಲು ಮತ್ತು ದನದ ಕೊಟ್ಟಿಗೆಯಲ್ಲಿನ ಗೋಡೆಗೆ ಹೋಳಿಗೆ ಚಿತ್ರ ಬರೆಯುವುದು, ದೀಪಾವಳಿಯ ಸಂದರ್ಭದಲ್ಲಿ ಪಾಂಡವರ ಚಿತ್ರ ಬರೆಯುವುದು. ಗೋಕುಲಾಷ್ಟಮಿ ದಿನದಂದು ಹೆಜ್ಜೆ ಚಿತ್ರ ಬರೆಯುವುದು, ಇಲ್ಲವೇ ಪಟ್ಟಿ ಎಳೆಯುವುದು. ಮನೆಯನ್ನು ಸುಣ್ಣ-ಬಣ್ಣಗಳಿಂದ ಅಲಂಕರಿಸಿದಾಗ ಸ್ವಸ್ತಿಕ, ಹಸ್ತ ಮುಂತಾದ ಚಿತ್ರ ಬರೆಯುವುದು. ಹೀಗೆ ವೈವಿಧ್ಯ ಬಗೆಯ ಗೋಡೆ ಚಿತ್ರಗಳನ್ನು ಬರೆಯುವುದನ್ನು ಈ ಭಾಗದ ಗ್ರಾಮೀಣ ಜನರು ರೂಢಿಸಿಕೊಂಡು ಬಂದಿದ್ದಾರೆ. ಹೀಗೆ ವಿವಿಧ ಆಚರಣೆ ನಿರ್ಧಿಷ್ಟ ಸಮಯಗಳಲ್ಲಿ ರಚನೆಯಾಗುವ ಉತ್ತರ ಕರ್ನಾಟಕದ ಜನಪದ ಭಿತ್ತಿ ಚಿತ್ರಕಲೆಯನ್ನು ಮುಖ್ಯವಾಗಿ ಈ ಕೆಳಗಿನಂತೆ ವಿಂಗಡಿಸಿಕೊಂಡು ವಿವರಿಸಬಹುದು.

---

೭೮. ಬಾಬುರಾವ್ ಸಾದ್ವೇಲ್ಕರ್ : ಸಂತ, ಕಲಾವಿದ, ಶುಭರಾಯರು. ಪುಟ - ೧೨

೭೯. ಸುಧಾ. ಯುಗಾದಿ ವಿಶೇಷಾಂಕ : ೧೯೯೯. ಪುಟ ೨೧೨. ಅದ್ಭುತರಮ್ಯಗೋಡೆ ಚಿತ್ತಾರಗಳು. ನಾ. ಡಿಸೋಜ

೮೦. ಕರೀಗೌಡ ಬೀಚನಹಳ್ಳಿ (ಸಂ.) : ಕರಕುಶಲ ಕಲೆಗಳು (ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ - ೨). ಪುಟ ೧೪೪

I. ಮನೆ ಗೋಡೆಯ ಚಿತ್ರ ವಿನ್ಯಾಸಗಳು

II. ದೇವಸ್ಥಾನ ಅಲಂಕರಿಸುವ ಚಿತ್ರ ವಿನ್ಯಾಸಗಳು

III. ಮದುವೆ-ಮುಂಜವೆಯಂತಹ ಶುಭ ಸಮಾರಂಭಗಳಲ್ಲಿ ಗೋಡೆಯ ಮೇಲೆ ಬರೆಯುವ ಚಿತ್ರ ವಿನ್ಯಾಸಗಳು

IV. ಜಗಲಿಯ ಮೇಲಿನ ಚಿತ್ರ ವಿನ್ಯಾಸಗಳು

V. ತುಳಸೀ ಕಟ್ಟೆಯ ಮೇಲಿನ ಚಿತ್ರ ವಿನ್ಯಾಸಗಳು

VI. ಗರಡಿ ಮನೆಯ ಮೇಲಿನ ಚಿತ್ರ ವಿನ್ಯಾಸಗಳು

VII. ಸಮಾಧಿ ಅಥವಾ ಗದ್ದಿಗೆ ಮೇಲಿನ ಚಿತ್ರ ವಿನ್ಯಾಸಗಳು

VIII. ಶಿಲಾಶ್ರಯಗಳಲ್ಲಿ ರಚಿಸಿದ ಜನಪದ ಚಿತ್ರ ವಿನ್ಯಾಸಗಳು

ಮೇಲಿನ ವಿಂಗಡನೆಯನ್ನು ಅನುಸರಿಸಿ ಜನಪದ ಚಿತ್ರಕಲೆಯನ್ನು ಈಗಾಗಲೇ ಅಧ್ಯಯನ ಮಾಡಲಾಗಿದ್ದರೂ[೮೧] ಸಹಿತ ನಮ್ಮ ಈ ಅಧ್ಯಯನಕ್ಕೆ ಅವುಗಳು ಅನಿವಾರ್ಯವಾಗಿದ್ದು ಅವುಗಳ ಸ್ಥೂಲ ರೂಪಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದ್ದು ಜೊತೆಗೆ ಕೆಲವು ಹೊಸ ವಿಷಯಗಳೂ ಈ ವಿಂಗಡನೆಯಲ್ಲಿ ಹೇಳಲ್ಪಟ್ಟಿವೆ. ಇವುಗಳನ್ನು ಕುರಿತು ಒಂದೊಂದಾಗಿ ಈ ರೀತಿ ವಿವರಿಸಬಹುದು.

**I. ಮನೆ ಗೋಡೆಯ ಚಿತ್ರ ವಿನ್ಯಾಸಗಳು**

ಮಾನವನಿಗೆ ತಾನು ವಾಸಿಸುವ ಮನೆ ಗೋಡೆಗಳನ್ನು ಚಿತ್ರ ಚಿತ್ತಾರಗಳಿಂದ ಶೃಂಗರಿಸುವ ಹಂಬಲ ಅತ್ಯಂತ ಪುರಾತನ ಕಾಲದಿಂದಲೇ ಇದೆ. ಆದಿಮಾನವನು ವಾಸ ಮಾಡಿದ ಶಿಲಾಗುಹೆಗಳು, ಶಿಲಾಶ್ರಯ ತಾಣಗಳು ಆತನ ವಾಸದ ಮನೆಗಳೇ ಆಗಿದ್ದು ಅವುಗಳನ್ನು ಆತ ವರ್ಣಚಿತ್ರಗಳಿಂದ ಅಲಂಕರಿಸಿದ್ದು ಕಂಡುಬರುತ್ತದೆ. ಉತ್ತರ ಕರ್ನಾಟಕದ ಜನರು ಹಬ್ಬ, ಹುಣ್ಣಿಮೆ, ಜಾತ್ರೆ, ಉತ್ಸವ, ಮದುವೆಯಂತಹ ವಿಶೇಷ ಸಂದರ್ಭಗಳಲ್ಲಿ ತಮ್ಮ ಮನೆ ಗೋಡೆಗಳನ್ನು ಚಿತ್ರ-ಚಿತ್ತಾರಗಳಿಂದ ಅಲಂಕರಿಸುತ್ತಾರೆ. ಹೀಗೆ ಬರೆಯುವ ಗೋಡೆಚಿತ್ರಗಳನ್ನು –

೧. ಮನೆಯ ಒಳಗೋಡೆಯ ಚಿತ್ರ ವಿನ್ಯಾಸಗಳು

೨. ಮನೆಯ ಹೊರ ಗೋಡೆಯ ಚಿತ್ರ ವಿನ್ಯಾಸಗಳು

ಎಂಬುದಾಗಿ ಎರಡು ವಿಧದಲ್ಲಿ ಹೇಳಬಹುದು.

೧. **ಮನೆಯ ಒಳಗೋಡೆಯ ಚಿತ್ರ ವಿನ್ಯಾಸಗಳು :** ಮನೆಯ ಹೊರಗೋಡೆಗಳನ್ನು ಅಲಂಕಾರ ಮಾಡಿದಂತೆ ಒಳಭಾಗದ ಗೋಡೆ, ಮಾಡುಗಳು, ಜಂತಿ, ತೊಲೆಗಳನ್ನು ವಿಶೇಷವಾಗಿ ಅಲಂಕಾರ ಮಾಡಿರುತ್ತಾರೆ. " ಮನೆಯ ಹೊರಬದಿಯ ಅಲಂಕಾರ ವಿನ್ಯಾಸಗಳಿಗಿಂತ ಒಳಬದಿಯ ಚಿತ್ರವಿನ್ಯಾಸಗಳು ಹೆಚ್ಚು ವೈವಿಧ್ಯತೆಯಿಂದ ಹಾಗೂ ಕಲಾತ್ಮಕತೆಗಳಿಂದ ಕೂಡಿರುತ್ತವೆ. " ಮನೆ ಒಳಬದಿಯ ಚಿತ್ರವಿನ್ಯಾಸಗಳನ್ನು ಹೀಗೆ ವಿಂಗಡಿಸಿ ಹೇಳಬಹುದು–

I. ಗೋಡೆಗಳಿಗೆ ಬಣ್ಣದ ಪಟ್ಟಿಗಳನ್ನೆಳೆಯುವುದು

II. ಗೋಡೆಯ ಕೆಳಭಾಗಕ್ಕೆ ಕಪ್ಪು ವರ್ಣ ಲೇಪಿಸುವುದು

---

೮೧. ಹೆಚ್ಚಿನ ವಿವರಗಳಿಗೆ ನೋಡಿರಿ : ಡಾ. ಎಸ್. ಸಿ. ಪಾಟೀಲ, ಕರ್ನಾಟಕ ಜನಪದ ಚಿತ್ರಕಲೆ

III. ಮಾಡು ಅಥವಾ ಗೂಡುಗಳಿಗೆ ಅಲಂಕಾರ ವಿನ್ಯಾಸ ಮಾಡುವುದು

IV. ಮನೆಯ ಜಂತಿ, ತೊಲೆಗಳಿಗೆ ಅಲಂಕಾರ ವಿನ್ಯಾಸ ಮಾಡುವುದು

**I. ಗೋಡೆಗಳಿಗೆ ಬಣ್ಣದ ಪಟ್ಟಿಗಳನ್ನೆಳೆಯುವುದು :** ಮನೆಯ ಒಳಗೋಡೆಗಳನ್ನು ಕೇವಲ ಸುಣ್ಣ, ಕೆಮ್ಮಣ್ಣು, ಜೇಡಿ ಮಣ್ಣುಗಳಿಂದ ಸಾರಿಸಿ ತೃಪ್ತರಾಗದ ಜನಪದರು ಸಾರಿಸಿದ ಅಂತಹ ಗೋಡೆಗಳ ಅಂದವನ್ನು ಇನ್ನಷ್ಟು ಹೆಚ್ಚಿಸಲು ಕೆಂಪು. ಹಸಿರು. ನೀಲಿ. ಹಳದಿ. ಕಂದು ಮುಂತಾದ ವರ್ಣಗಳಿಂದ ಅಡ್ಡ ಪಟ್ಟಿಗಳನ್ನು ಎಳೆಯುತ್ತಾರೆ. ಇಂತಹ ಪಟ್ಟಿಗಳನ್ನು ಎಳೆಯುವ ವಿಧಾನದಲ್ಲಿ ವೈವಿಧ್ಯತೆ ಇದ್ದು. ಗೋಡೆಯಲ್ಲಿ ಅಡ್ಡವಾಗಿಯೂ ಕಿಟಕಿ ಬಾಗಿಲುಗಳ ಒಳಭಾಗದಲ್ಲಿ ಮತ್ತು ಮಾಡುಗಳು ಬಂದಲ್ಲಿ ಉದ್ದುದ್ದವಾಗಿಯೂ ಎಳೆಯಲಾಗುತ್ತದೆ. ದಾರ ಹಿಡಿದುಕೊಂಡು ಸಮಾನಾಂತರವಾಗಿರುವ ಎರಡು ರೇಖೆಗಳನ್ನು ದಪ್ಪನಾಗಿ ಎಳೆದುಕೊಂಡು. ಆ ಎರಡು ರೇಖೆಗಳ ನಡುವಿನ ಭಾಗವನ್ನು ಸಂಪೂರ್ಣವಾಗಿ ವರ್ಣದಿಂದ ತುಂಬಿಸುತ್ತಾರೆ. ಆಮೇಲೆ ಈ ವರ್ಣ ಪಟ್ಟಿಯ ಮೇಲ್ಭಾಗದಲ್ಲಿ ಕೆಲವರು ಈ ನಡುವಿನ ಭಾಗದಲ್ಲಿ ವಿವಿಧ ರೀತಿಯ ಹೂ-ಬಳ್ಳಿಯ ಚಿತ್ರವನ್ನು ರಚಿಸುತ್ತಾರೆ. ಆಮೇಲೆ ಈ ವರ್ಣ ಪಟ್ಟಿಯ ಮೇಲ್ಭಾಗದಲ್ಲಿ ಉದ್ದಕ್ಕೂ ಅಲ್ಲಲ್ಲಿ ನಿರ್ದಿಷ್ಟ ಅಂತರದಲ್ಲಿ ಹೂ ಗಿಡಗಳಿಂದ ತುಂಬಿದ ಹೂ ಕುಂಡಗಳನ್ನು, ಹೂವಿನ ಗಿಡಗಳನ್ನು ವೈವಿಧ್ಯಮಯವಾಗಿ ರಚಿಸುತ್ತಾರೆ. ಗೋಡೆಯ ಪ್ರಶಸ್ತವಾದ ಭಾಗದಲ್ಲಿ ಕೆಲವರು ನಿಸರ್ಗ ದೃಶ್ಯಗಳನ್ನು ಬರೆಯುತ್ತಾರೆ. ಹೂ ಕುಂಡಗಳ ಮಧ್ಯದಲ್ಲಿ ಅಲ್ಲಲ್ಲಿ ಒಂದರಂತೆ ಸ್ವಸ್ತಿಕ ಚಿಹ್ನೆ. ಓಂ ಗಳನ್ನು ಬರೆಯುತ್ತಾರೆ.

**II. ಗೋಡೆಯ ಕೆಳಭಾಗಕ್ಕೆ ಕಪ್ಪು ವರ್ಣ ಲೇಪಿಸುವುದು :** ವರ್ಣ ಪಟ್ಟಿಗಳನ್ನೆಳೆದು ಒಳಗೋಡೆಯನ್ನು ಅಲಂಕರಿಸುವುದು ಒಂದು ಬಗೆಯಾದರೆ. ಕೆಲವರು ನೆಲದಿಂದ ಸ್ವಲ್ಪ ಸುಮಾರು ಎರಡು-ಮೂರು ಫೂಟುಗಳ ಅಂತರದವರೆಗೆ ಕಪ್ಪು ಬಣ್ಣವನ್ನು ಲೇಪಿಸುತ್ತಾರೆ. ಈ ರೀತಿಯ ಅಲಂಕಾರ ಎರಡು ರೀತಿಯ ಉದ್ದೇಶಗಳನ್ನು ಹೊಂದಿರುತ್ತದೆ. ಒಂದು : ಸುಣ್ಣದ ಗೋಡೆಯ ಕೆಳಗಿನ ಭಾಗ ಕಪ್ಪು ವರ್ಣದಿಂದ ಕೂಡಿ ಮನೆಯು ಸುಂದರವಾಗಿ ಕಾಣಿಸುತ್ತದೆ. ಇನ್ನೊಂದು ; ಮನೆಯ ಕೆಳಭಾಗದ ಗೋಡೆಗಲು ಯಾವಾಗಲೂ ಬಹುಬೇಗ ಹೊಲಸಾಗುತ್ತವೆ. ಕಪ್ಪು ಬಣ್ಣದ ಈ ಭಾಗವು ಹೊಲಸಾದಂತೆ ಕಂಡುಬರುವುದಿಲ್ಲ ಎಂಬ ಕಾರಣಕ್ಕೂ ಈ ರೀತಿಯ ಕಪ್ಪು ವರ್ಣದ ಪಟ್ಟಿಯನ್ನೂ ವಿನ್ಯಾಸಗೊಳಿಸಲು ಕಾರಣವಾಗಿರುತ್ತದೆ.

**III. ಮಾಡು ಅಥವಾ ಗೂಡುಗಳಿಗೆ ಅಲಂಕಾರ ವಿನ್ಯಾಸ ಮಾಡುವುದು :** ಮನೆಯ ಒಳಭಾಗದಲ್ಲಿರುವ ಗೂಡು. ಮಾಡುಗಳಿಗೆ ವಿಶೇಷ ರೀತಿಯ ಅಲಂಕಾರ ಮಾಡುತ್ತಾರೆ. ಅದರಲ್ಲೂ ಗಣಪತಿಯ ಮಾಡು ಇನ್ನುಳಿದ ಮಾಡುಗಳಿಗಿಂತ ಭಿನ್ನವಾಗಿರುತ್ತದಲ್ಲದೇ ಇದಕ್ಕೆ ಹೆಚ್ಚಿನ ಆಸಕ್ತಿಯಿಂದ ಅಲಂಕಾರ ಮಾಡುತ್ತಾರೆ. ಮಾಡುಗಳಿಗೆ ಅಲಂಕಾರ ಮಾಡುವ ಚಿತ್ರ ವಿನ್ಯಾಸಗಳೆಂದರೆ. ಮಾಡುಗಳ ಸುತ್ತಲೂ ಬಣ್ಣ ಬಣ್ಣದ ಪಟ್ಟಿಗಳನ್ನೆಳೆಯುವುದು, ಆ ಪಟ್ಟಿಗಳ ಒಳಭಾಗವನ್ನು ವರ್ಣದಿಂದ ತುಂಬಿಸುವುದು ಇಲ್ಲವೇ ಹೂ-ಬಳ್ಳಿಗಳನ್ನು ಚಿತ್ರಿಸುವುದು. ದಾರದಿಂದ ಸಣ್ಣದಾದ ಗೆರೆಗಳನ್ನು ಮಾಡದ ಸುತ್ತಲೂ ಮೂಡಿಸಿ, ಆ ಗೆರೆಗುಂಟ ಹೂ. ಎಲೆ, ಬಳ್ಳಿಗಳು, ವರ್ತುಳ, ತ್ರಿಕೋನ, ಚೌಕ ಮೊದಲಾದ ಜ್ಯಾಮಿತಿಕ ಆಕಾರಗಳು. ವಿವಿಧ ರೀತಿಯ ಸುಳುವಿನ ಚಿತ್ರಗಳನ್ನು ರಚಿಸುತ್ತಾರೆ. ಇನ್ನೂ ಕೆಲವರು ಮಾಡದ ಎಡ ಬಲಗಳಲ್ಲಿ ಮೇಲ್ಭಾಗದಲ್ಲಿ ಹೀಗೆ ಸುತ್ತಲೂ ನಿರ್ದಿಷ್ಟ ಸ್ಥಳಗಳಲ್ಲಿ ನವಿಲು, ಬಾತುಕೋಳಿ, ನಿಸರ್ಗ ದೃಶ್ಯ ರಚಿಸುತ್ತಾರಲ್ಲದೇ. ಹಲವು ಸಂದರ್ಭಗಳಲ್ಲಿ ಸ್ವಸ್ತಿಕ. ಓಂ. ಶ್ರೀ ಮತ್ತು ಶುಭ-ಲಾಭ ಗಳನ್ನು ಬರೆದು ಅಲಂಕಾರ ಮಾಡುತ್ತಾರೆ.

**IV. ಮನೆಯ ಜಂತಿ, ತೊಲೆಗಳಿಗೆ ಅಲಂಕಾರ ವಿನ್ಯಾಸ ಮಾಡುವುದು :** ಗುಲಬರ್ಗಾ, ವಿಜಾಪುರ ಭಾಗದಲ್ಲಿ ಹುಡುಗಿಯರು ಮೈನೆರೆದಾಗ ಶ್ರೀಗಂಧದ ಕೊರಡನ್ನು ತಿಕ್ಕಿ ತೆಗೆದ ದ್ರವ್ಯವನ್ನು ಅಂಗೈಗಳಿಗೆ ಹಚ್ಚಿಕೊಂಡು ಮನೆಯ ಜಂತಿಯ ತೊಲೆಗಳಿಗೆ ಲೇಪಿಸುತ್ತಾರೆ. ಮನೆಯ ಮುತ್ತೈದೆಯರೂ ಮನೆಗೆ ಒಳ್ಳೆಯದಾಗಲೆಂದು ಹಾರೈಸಿ ಹೀಗೆ ಗಂಧದ ಕೈಯನ್ನು ತೊಲೆಗಳಿಗೆ ಲೇಪಿಸುತ್ತಾರೆ. ಸಾಮಾನ್ಯವಾಗಿ ಹೊಗೆಯಿಂದ ಕಪ್ಪು ವರ್ಣಕ್ಕೆ ತಿರುಗಿದ ತೊಲೆಗಳಿಗೆ ಈ ಹಳದಿ ವರ್ಣದ ಹಸ್ತದ ವಿನ್ಯಾಸ ಸುಂದರವಾಗಿ ಕಾಣುತ್ತದೆ.

ವಿಜಾಪುರ. ಬಾಗಲಕೋಟೆ ಜಿಲ್ಲೆಗಳ ವ್ಯಾಪ್ತಿಯಲ್ಲಿ ತುಂಡು ಕಟ್ಟಿಗೆಗಳಿಂದ ನಿರ್ಮಿಸಿದ ಜಂತಿಯ ಮನೆಗಳು ಸರ್ವೇ ಸಾಮಾನ್ಯ. ಈ ಜಂತಿಯಲ್ಲಿ ಇಲಿಗಳು ಸೇರಿಕೊಳ್ಳುವುದು ಹೆಚ್ಚು. ಕೆಲವು ಸಲ ಈ ಇಲಿಗಳನ್ನು ಹಿಡಿಯಲು ಹಾವುಗಳು ಬರುವುದೂ ಉಂಟು. ಹಾವುಗಳು ಮೇಲಿಂದ ಮೇಲೆ ಬಂದು ಮನೆಯವರಿಗೆ ತೊಂದರೆ ಅತಿಯಾದಾಗ, ಮನೆಯವರು ಯಾರಾದರೂ ಒಬ್ಬರು. ಇಲ್ಲವೇ ಕೈಯಲ್ಲಿ ಗರುಡ ರೇಖೆ ಇದೆ ಎಂದು ಹೇಳಲಾಗುವವರಿಂದ, ಅಥವಾ ಮಾಂತ್ರಿಕರಿಂದ ಮನೆಯ ತೊಲೆಗಳಿಗೆ ಸುಣ್ಣದಿಂದ, ಅಥವಾ ಬೇರಾವುದೇ ಎದ್ದು ಕಾಣುವ ವರ್ಣದಿಂದ ಹಾವುಗಳ ಚಿತ್ರ ಬರೆಯಿಸಿ. ಪಕ್ಕದಲ್ಲಿ ' ಆಸ್ತಿಕ ಮುನಿ ಆಣೆ '. ' ಆಸ್ತಿಕಮುನಿ ಕಾಲಭೈರವ ' ಎಂದು ಬರೆಯುತ್ತಾರೆ. ಹೀಗೆ ಬರೆಯುವವರಿಂದ ಮನೆಯಲ್ಲಿ ಹಾವುಗಳ ಕಾಟ ಕಡಿಮೆಯಾಗುತ್ತದೆ ಎಂದೂ ನಂಬಿಕೆ ಇದೆ. ಈ ರೀತಿಯ ಹಾವಿನ ಚಿತ್ರ. ಬರಹಗಳನ್ನು ಬಹಳ ಕಾಲದವರೆಗೂ ಜಂತಿಯ ತೊಲೆಗಳಲ್ಲಿ ಹಾಗೆಯೇ ಉಳಿಸಿಕೊಂಡಿರುತ್ತಾರೆ. ಕೆಲವು ಊರುಗಳಲ್ಲಿ ಹಾವಿನ ಚಿತ್ರದ ಜೊತೆಗೇ ಗರುಡ ಅಥವಾ ಹದ್ದನ್ನೂ ಚಿತ್ರಿಸುವುದಾಗಿ ಜನ ಹೇಳುತ್ತಾರೆ.

**೧. ಮನೆಯ ಹೊರಗೋಡೆಯ ಚಿತ್ರ ವಿನ್ಯಾಸಗಳು :** ವಿಶೇಷ ದಿನಗಳಲ್ಲಿ ಮನೆಯ ಒಳಭಾಗವನ್ನು ಶೃಂಗರಿಸಿದಂತೆಯೇ ಹೊರ ಭಾಗವನ್ನೂ ವೈವಿಧ್ಯಮಯವಾದ ಚಿತ್ರ ವಿನ್ಯಾಸಗಳಿಂದ ಅಲಂಕರಿಸುತ್ತಾರೆ. ಹೊರಗೋಡೆಯ ಚಿತ್ರ ವಿನ್ಯಾಸಗಳನ್ನು ಈ ರೀತಿಯಲ್ಲಿ ವಿಂಗಡಿಸಬಹುದು.

I. ವರ್ಣದ ಜೋರು ಬಿಡುವುದು
II. ಚುಕ್ಕೆಗಳನ್ನು ಇಡುವುದು
III. ಅಧಿಕ. ಸ್ವಸ್ತಿಕ ಮುಂತಾದ ಚಿಹ್ನೆಗಳನ್ನು ಬರೆಯುವುದು
IV. ಹಸ್ತದ ಗುರುತು ಮಾಡುವುದು
V. ಶೀಗಿ ಚಿತ್ರ ರಚಿಸುವುದು
VI. ಬಾಗಿಲು ಸುತ್ತ ಚಿತ್ರ ವಿನ್ಯಾಸ ಮಾಡುವುದು

***I. ವರ್ಣದ ಜೋರು ಬಿಡುವುದು :*** ಹಬ್ಬ. ಮದುವೆಯಂತಹ ಮಂಗಲ ಪ್ರಸಂಗಗಳಲ್ಲಿ ಮನೆಯನ್ನು ಅಲಂಕಾರಗೊಳಿಸುವ ಸಂದರ್ಭದಲ್ಲಿ ಮನೆಯ ಹೊರಗೋಡೆಯನ್ನು ಸುಣ್ಣ-ಬಣ್ಣಗಳಿಂದ ಸಾರಿಸಿ ನಂತರ ಬೇರೊಂದು ವರ್ಣದಿಂದ ಜೋರು ಬಿಡುತ್ತಾರೆ, ಇಲ್ಲವೇ ಪಟ್ಟೆಗಳನ್ನು ಎಳೆಯುತ್ತಾರೆ. ಅಂದರೆ ಸುಣ್ಣದಂತಹ ಬಿಳಿಯನ್ನು ಗೋಡೆಗೆ ಸಾರಿಸಿದ್ದರೆ. ಕೆಂಪು ಹುರಿಮಂಜಿನಿಂದ. ಜೋರು ಬಿಡುವುದು, ಕೆಮ್ಮಣ್ಣು ಸಾರಿಸಿದ್ದರೆ ಸುಣ್ಣದಿಂದ ಜೋರು ಬಿಡುವುದು. ಹೀಗೆ ಜೋರುಬಿಟ್ಟ ಪಟ್ಟೆಗಳು ಎದ್ದು ಕಾಣುವಂತೆ ಮಾಡುತ್ತಾರೆ. ಗೋಡೆಯ ಮೇಲ್ಭಾಗದ ಕುಂಬಿಯಿಂದ ಕೆಳಮುಖವಾಗಿ ವರ್ಣವನ್ನು ಸಹಜವಾಗಿ ಹರಿಯಬಿಡಲಾಗುತ್ತದೆ. ಕೆಳಮುಖವಾಗಿ ಹರಿಯುವ ಬಣ್ಣವು ವಿವಿಧ

ಸಣ್ಣ ದೊಡ್ಡ ಟಿಸಿಲುಗಳಾಗಿ ಹರಿದು ಆಕರ್ಷಕ ಚಿತ್ತಾರಗಳನ್ನು ಉಂಟುಮಾಡುತ್ತದೆ. ಹೀಗೆ ವರ್ಣ ಜೋರು ಬಿಡುವುದು ಬಿಜಾಪುರ, ಬಾಗಲಕೋಟ, ಗುಲಬರ್ಗಾ ಭಾಗಗಳಲ್ಲಿ ಹೆಚ್ಚಾಗಿದೆ. ಈ ಭಾಗದಲ್ಲಿ ಕೆಲವು ಮುಸ್ಲೀಮರು ತಮ್ಮ ಮನೆಗಳಿಗೆ ಹೀಗೆ ಜೋರು ಬಿಡುವ ಬದಲಾಗಿ ಸುಣ್ಣದಲ್ಲಿ ಕಸಬರಿಗೆ ಅದ್ದಿ ಗೋಡೆಗೆ ಎರಚುತ್ತಾರೆ. ಕೆಮ್ಮಣ್ಣಿನ ಗೋಡೆಗೆ ಸುಣ್ಣವನ್ನೂ, ಸುಣ್ಣದ ಗೋಡೆಗೆ ಕೆಮ್ಮಣ್ಣನ್ನು ಕಸಬರಿಗೆಯಿಂದ ಎರಚುತ್ತಾರೆ. ಬಿರುಸಿನಿಂದ ಗೋಡೆಗೆ ವರ್ಣ ಎರಚುವ ಈ ಕ್ರಿಯೆಯಲ್ಲಿ ಸಣ್ಣ-ದೊಡ್ಡ ಚುಕ್ಕೆಗಳು ನಿರ್ಮಾಣವಾಗುತ್ತವಲ್ಲದೇ ಸಹಜವಾದ ಕೆಲವು ವಿಚಿತ್ರ ವಿನ್ಯಾಸಗಳೂ ರೂಪುತಾಳುತ್ತವೆ. ಇದರಿಂದಾಗಿ ಇಡೀ ಗೋಡೆಯು ಒಂದು ಚಿತ್ರಕಲಾಕೃತಿಯಾಗಿ ಕಂಡುಬರುತ್ತದೆ.

***II. ಚುಕ್ಕೆಗಳನ್ನು ಇಡುವುದು :*** ಹೊಸದಾಗಿ ಮನೆಯನ್ನು ಕಟ್ಟಿ ಸುಣ್ಣ-ಬಣ್ಣ ಮಾಡಿಸಿದಾಗ, ಇಲ್ಲವೆ ಮನೆಯನ್ನು ಸಾರಿಸಿದಾಗೊಮ್ಮೆ ಮನೆಯ ಹೊರಗೋಡೆಗೆ ಸುತ್ತಲೂ ಕೈಗೆಟುಕುವಷ್ಟು ಎತ್ತರದಲ್ಲಿ ಹುರಿಮಂಜು ಮತ್ತು ಸುಣ್ಣದ ಚುಕ್ಕೆಗಳನ್ನು ಇಡುತ್ತಾರೆ. ಇಲ್ಲಿ ಸುಣ್ಣ ಹುರಿಮಂಜುಗಳನ್ನು ಪ್ರತ್ಯೇಕ ಗಡಿಗೆಗಳಲ್ಲಿ ಹದವಾಗಿ ಕಲೆಸಿಕೊಂಡು ಸಣ್ಣ ಅರಿವೆ ತುಂಡನ್ನು ಉಂಡೆಮಾಡಿ ಅದರಿಂದ ಚುಕ್ಕೆಗಳನ್ನು ಇಡುತ್ತಾರೆ.

***III. ಅಧಿಕ, ಸ್ವಸ್ತಿಕ ಮುಂತಾದ ಚಿಹ್ನೆಗಳನ್ನು ಬರೆಯುವುದು :*** ವಿಜಾಪುರ, ಕಲಬುರ್ಗಿ, ಬಾಗಲಕೋಟೆ ಜಿಲ್ಲೆಗಳ ವ್ಯಾಪ್ತಿಯಲ್ಲಿ ಮನೆಯ ಗೋಡೆಗಳಿಗೆ ಚುಕ್ಕೆಗಳನ್ನಿಡುವ ಸಂಪ್ರದಾಯ ಹೆಚ್ಚಾಗಿ ಕಂಡುಬಂದರೆ, ಧಾರವಾಡ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ ಮನೆಯನ್ನು ಸಾರಿಸಿದಾಗ ಹೊರಗೋಡೆಯ ಸುತ್ತಲೂ ಸ್ವಸ್ತಿಕ ಇಲ್ಲವೆ ಅಧಿಕ ಚಿಹ್ನೆಗಳನ್ನು ಬರೆಯುತ್ತಾರೆ. ಇದಕ್ಕಾಗಿ ಸುಣ್ಣ ಹುರಿಮಂಜುಗಳನ್ನು ಬಳಸುತ್ತಾರೆ. ಹೀಗೆ ಬರೆಯಲು ಗ್ರಾಮೀಣರು ಟೆಂಗಿನ ನಾರನ್ನು ಒಟ್ಟುಗೂಡಿಸಿಕೊಂಡು ಕುಂಚದಂತೆ ಉಪಯೋಗಿಸುತ್ತಾರೆ. ಇಲ್ಲವೇ ಕಟ್ಟಿಗೆ ತುದಿಗೆ ಅರಿವೆಯನ್ನು ಸುತ್ತಿ, ಅಥವಾ ಪುಂಡೀ ಕಡ್ಡಿಯನ್ನು ಜಜ್ಜಿ ಅದರಲ್ಲಿನ ನಾರನ್ನು ಕುಂಚವಾಗಿ ಬಳಸುತ್ತಾರೆ. ಸ್ವಸ್ತಿಕ, ಅಧಿಕ ಚಿಹ್ನೆಗಳು ಶುಭದಾಯಕವೆಂದು ಜನಪದರ ನಂಬಿಕೆ.

***IV. ಹಸ್ತದ ಗುರುತು ಮಾಡುವುದು :*** ಹೊಸದಾಗಿ ನಿರ್ಮಿಸಿದ ಮನೆಯ ಗೋಡೆಗಳಿಗೆ, ಇಲ್ಲವೇ ಸುಣ್ಣ-ಬಣ್ಣಗಳಿಂದ ಸಾರಿಸಿದ ಮನೆ ಗೋಡೆಗಳಿಗೆ ಹೊರಭಾಗದಲ್ಲಿ ಮತ್ತು ಒಳಭಾಗದಲ್ಲಿ ಹೀಗೆ ಎರಡೂ ಬದಿಯ ಗೋಡೆಗಳಿಗೂ ಹಸ್ತವನ್ನು ಸುಣ್ಣ-ಬಣ್ಣಗಳಲ್ಲಿ ಅದ್ದಿ ಒತ್ತಿ ಮೂಡಿಸುತ್ತಾರೆ. ಮನೆಯ ಹೆಣ್ಣುಮಕ್ಕಳು ಹೀಗೆ ಹಸ್ತವನ್ನು ಮೂಡಿಸಬಹುದು, ಅದರಿಂದ ತವರು ಮನೆಗೆ ಶುಭವಾಗುವದೆಂಬ ನಂಬಿಕೆ ಇದೆ. ಗೋಡೆಯ ಒಂದು ತುದಿಯಿಂದ ಇನ್ನೊಂದು ತುದಿಯವರೆಗೆ ಅಡ್ಡಡ್ಡವಾಗಿ ದಾರ ಹಿಡಿದು ಅದರ ಗುಂಟ ಹಸ್ತವನ್ನು ಮೂಡಿಸುತ್ತಾ ಹೋಗುತ್ತಾರೆ. ಎರಡು ವರ್ಣದಲ್ಲಿ ಮೂಡಿಸುವ ಈ ಹಸ್ತದ ಗುರುತುಗಳು ಒಂದೇ ನೇರದಲ್ಲಿ ಇರುವುದರಿಂದ ಅಂದವಾಗಿ ಕಾಣಿಸುತ್ತವೆ.

***V. ಶೀಗಿ ಚಿತ್ರ ರಚಿಸುವುದು :*** ಉತ್ತರ ಕರ್ನಾಟಕದ ಇಂತಹ ವೈವಿಧ್ಯ ಜನಪದ ಭಿತ್ತಿ ಚಿತ್ರಗಳಲ್ಲೇ ವಿಶೇಷವಾಗಿರುವ ಶೀಗಿ ಚಿತ್ರಗಳು ಬೀದರ್ ಜಿಲ್ಲೆಯಲ್ಲಿ ಕಂಡುಬರುತ್ತವೆ. ಬೀದರ್ ಜಿಲ್ಲೆಗೆ ಮಾತ್ರ ಸೀಮಿತವಾದ ಈ ಶೀಗಿ ಚಿತ್ರಗಳು ಬೇರೆ ಜಿಲ್ಲೆಯಲ್ಲಿ ಕಂಡುಬರುವುದಿಲ್ಲ. ಶೀಗಿ ಹುಣ್ಣಿಮೆ ಆರು ಅಥವಾ ಏಳು ದಿನ ಇದ್ದಾಗ ಮಹಾನವಮಿಯಿಂದ ಈ ಶೀಗಿ ಬರೆಯುವ ಆಚರಣೆ ಪ್ರಾರಂಭವಾಗಿ[೮೨] ಶೀಗಿ ಹುಣ್ಣಿಮೆಯ ದಿವಸ

೮೨. ಹೆಚ್ಚಿನ ವಿವರಗಳಿಗೆ ನೋಡಿರಿ : ರಾಜೇಂದ್ರ ಯರನಾಳೆ, ಶೀಗಿ ಹಾಡುಗಳು

ಮುಕ್ತಾಯವಾಗುತ್ತದೆ. ಪ್ರತಿ ದಿವಸವೂ ಬಾಗಿಲ ಹೊರಭಾಗದ ಗೋಡೆಯ ಮೇಲೆ ದಿನಕ್ಕೊಂದು ರೀತಿಯ ಚಿತ್ರ ಬರೆದು ಶೀಗಿ ಆಡುತ್ತಾರೆ.

*ಒಂದನೆಯ ದಿನದ ಚಿತ್ರ :* ಮೊದಲ ದಿನ ಚುಕ್ಕಿ, ಚಂದ್ರ, ಸೂರ್ಯನ ಚಿತ್ರಗಳನ್ನು ಬರೆಯುತ್ತಾರೆ. ಭೂಮಿ ಹುಟ್ಟಿದ ಮೇಲೆ ಈ ಬ್ರಹ್ಮಾಂಡದಲ್ಲಿ ಮೊದಲು ಕಾಣಿಸಿಕೊಂಡವು ಇವೇ ಆಗಿದ್ದರಿಂದ ಇವುಗಳನ್ನು ಮೊದಲು ಬರೆಯುವುದು ಎಂಬುದು ಹಳ್ಳಿಗರ ಮುಗ್ಧ ಕಲ್ಪನೆಯಾಗಿದೆ.

*ಎರಡನೆಯ ದಿನದ ಚಿತ್ರ :* ಗಂಗಿ-ಗೌರಿ ಯರ ವಿನ್ಯಾಸ ಬರೆಯಲಾಗುವುದು. ಸೂರ್ಯ-ಚಂದ್ರರ ನಂತರ ಶಿವ ಹಾಗೂ ಆತನ ಪತ್ನಿಯರಾದ ಗಂಗಿ-ಗೌರಿಯರ ಮಕ್ಕಳೇ ನಾವೆಲ್ಲ ಎನ್ನುವ ನಂಬುಗೆಯಿಂದ ಗಂಗಿ-ಗೌರಿಯರ ಚಿತ್ರ ಬರೆದು ಅವರನ್ನು ಸ್ಮರಿಸುತ್ತಾರೆ.

*ಮೂರನೆಯ ದಿನದ ಚಿತ್ರ :* ಮೂರನೇ ದಿವಸ ಚೌಕಾಕಾರದ ಭಾರಂಭಾಯಿ-ಬಾಳೆ ಗಿಡ ಮತ್ತು ಕುಂಬಳ ಹೂವಿನ ಚಿತ್ರಗಳನ್ನು ರಚಿಸುತ್ತಾರೆ.

*ನಾಲ್ಕನೆಯ ದಿನದ ಚಿತ್ರ :* ನಾಲ್ಕನೆಯ ದಿನ ಕಬ್ಬಿನಗಳು (ಕಬ್ಬಿನ ಜಿಲ್ಲೆ), ಅದನ್ನು ಕಾಯಲು ಒಬ್ಬ ಮನುಷ್ಯ, ಮತ್ತು ಬಾಳೆಗಿಡದ ಚಿತ್ರ ಬರೆಯುತ್ತಾರೆ. ಮೂರು ಮತ್ತು ನಾಲ್ಕನೆಯ ದಿನ ಇದೇ ಚಿತ್ರ ಬರೆಯಬೇಕೆಂಬ ಖಡ್ಡಾಯ ನಿಯಮವಿಲ್ಲ. ಮೂರನೇ ದಿನದ ಚಿತ್ರ ನಾಲ್ಕನೇ ದಿನಕ್ಕೂ ನಾಲ್ಕನೇ ದಿನದ ಚಿತ್ರ ಮೂರನೇ ದಿನಕ್ಕೂ ವ್ಯತ್ಯಾಸಗೊಳ್ಳಬಹುದು. ಅಥವಾ ಬೇರೆ ಚಿತ್ರಗಳನ್ನೂ ಬರೆಯಬಹುದು. ಆದರೆ ಒಂದು, ಎರಡು, ಆರನೇ ದಿವಸ ಇಂತಹ ಚಿತ್ರಗಳನ್ನೇ ಬರೆಯಬೇಕೆಂದು ನಿಯಮವಿದೆ.

*ಐದನೆಯ ದಿನದ ಚಿತ್ರ :* ಐದನೆಯ ದಿನ ಹನುಮಂತ ದೇವರು ಮತ್ತು ಹೂಗಳು, ಇಲ್ಲವೇ ಅಡಕಲಗಡಗಿ, ವಸ್ತುಗಳನ್ನಿಡುವ ಚೀಲ(ಭರಚೀಲ)ದ ಚಿತ್ರಗಳನ್ನು ಬರೆಯುತ್ತಾರೆ.

*ಆರನೆಯ ದಿನದ ಚಿತ್ರ :* ಆರನೇ ದಿನ ಏಳು ಸುತ್ತಿನ ಕ್ವಾಟಿ(ಕೋಟೆ)ಯ ಚಿತ್ರವನ್ನು ಖಡ್ಡಾಯವಾಗಿ ಬರೆಯುತ್ತಾರೆ. ಮಹಾಭಾರತದ ಚಕ್ರವ್ಯೂಹದ ಕಲ್ಪನೆಯಲ್ಲದೇ, ದೇವರನ್ನು ಸಾಕ್ಷಾತ್ಕರಿಸಿಕೊಳ್ಳಲು ಕೋಟೆಯ ಹಾಗೆ ಸುತ್ತಿಕೊಂಡ ಬಂಧನಗಳನ್ನು ಕಳಚಿಕೊಳ್ಳಬೇಕು ಎಂಬ ಮುಗ್ಧ ಕಲ್ಪನೆಯ ಸಂಕೇತವಾಗಿ ಇದನ್ನು ಬರೆಯುತ್ತಾರೆ.

*ಏಳನೆಯ ದಿನದ ಚಿತ್ರ :* ಇದುವರೆಗಿನ ಆರು ದಿನಗಳೂ ಗೋಡೆಯ ಮೇಲೆ ಆಕಳ ಸೆಗಣಿಯಿಂದ ಚಿತ್ರ ವಿನ್ಯಾಸ ಬರೆದು ಅವರಲ್ಲಿ ಹೂಗಳನ್ನು ಚುಚ್ಚಿ ಅಲಂಕರಿಸುತ್ತಾರೆ. ಈ ಆರೂ ದಿನದ ಚಿತ್ರಗಳನ್ನು ಸಂಜೆಯಲ್ಲಿ ಬರೆಯುತ್ತಾರೆ. ಆದರೆ ಏಳನೆಯ ದಿನ ಹಗಲಿನಲ್ಲಿಯೇ ಚಿತ್ರಗಳನ್ನು ಬರೆಯುತ್ತಾರೆ. ಇದುವರೆಗೆ ಆರು ದಿನವೂ ಸಗಣಿಯಿಂದ ಚಿತ್ರವಿನ್ಯಾಸ ಬರೆದ ಗೋಡೆಯನ್ನು ಚೆನ್ನಾಗಿ ಸಾರಿಸಿ ಸುಣ್ಣ ಬಳಿದು ಚಿತ್ರ ಬರೆಯಲು ಅಣಿಗೊಳಿಸುತ್ತಾರೆ. ಸುಣ್ಣ ಸಾರಿಸಿದ ಗೋಡೆಯ ಮೇಲೆ ಸುಣ್ಣ, ಜಾಜ, ಹುರಿಮಂಜು, ಎಲೆಗಳನ್ನು ಹಿಂಡಿದ ಹಸಿರು ಬಣ್ಣಗಳಿಂದ ಚಿತ್ರ ರಚಿಸುತ್ತಾರೆ.

ಏಳನೆಯ ದಿನದ ಚಿತ್ರಗಳೆಂದರೆ ಇದುವರೆಗೂ ಆರು ದಿನವೂ ರಚಿಸಿದ ಚುಕ್ಕಿಚಂದ್ರ, ಭಾರಂಭಾಯಿ-ಬಾಳೆಗಿಡ, ಕಬ್ಬಿನಗಳ-ಮನುಷ್ಯ, ಏಳುಸುತ್ತಿನ ಕ್ವಾಟಿ ಮುಂತಾದ ಎಲ್ಲ ಚಿತ್ರಗಳನ್ನೂ ಒಟ್ಟಿಗೇ ಬರೆಯುತ್ತಾರೆ. ಆರೂ ದಿನಗಳು ಸೆಗಣಿಯಿಂದ ಚಿತ್ರ ವಿನ್ಯಾಸ ಬರೆದರೆ, ಏಳನೆಯ ದಿನ ಬಣ್ಣಗಳಿಂದ ಚಿತ್ರ ಬರೆಯುವುದು ವಿಶಿಷ್ಟವಾಗಿದೆ. ಶೀಗಿ ಚಿತ್ರ

ಬರೆಯುವ ಆಚರಣೆಯ ಸಂದರ್ಭದಲ್ಲಿ ಹಾಡುಗಳನ್ನು ಹಾಡುವುದು ಪ್ರಮುಖವಾದ ಅಂಶವಾಗಿದೆ. ಈ ಹಾಡುಗಳಲ್ಲಿ ದೇವರು. ದೈವ. ಸ್ಥಳ ಹಿರಿಮೆ. ಇತಿಹಾಸ. ನಂಬಿಕೆಗಳು. ನಿತ್ಯ ಜೀವನದ ವಿವರಣೆಗಳು ವ್ಯಕ್ತಗೊಳ್ಳುತ್ತವೆ. ಸ್ತ್ರೀಯರೇ ಈ ಶೀಗಿ ಚಿತ್ರಗಳನ್ನು ಬರೆಯುತ್ತಾರೆಂಬುದು ಗಮನಾರ್ಹ. ಇದೊಂದೇ ಅಲ್ಲದೇ ಉತ್ತರ ಕರ್ನಾಟಕದ ಹೆಚ್ಚಿನ ಜನಪದ ಭಿತ್ತಿ ಚಿತ್ರಗಳು ಮಹಿಳೆಯರಿಂದಲೇ ರಚನೆಯಾಗುತ್ತವೆ ಎಂಬುದೂ ಅಷ್ಟೇ ಸತ್ಯವಾದುದು. ಬೀದರ್ ಜಿಲ್ಲೆಗೆ ಸೀಮಿತವಾದ ಶೀಗಿ ಚಿತ್ರಗಳ [೮೩] ಆಚರಣೆ ಉತ್ತರ ಕರ್ನಾಟಕ ಜನಪದ ಭಿತ್ತಿ ಚಿತ್ರಗಳಲ್ಲಿ ವಿಶಿಷ್ಟವಾಗಿದೆ.

***VI. ಬಾಗಿಲು ಸುತ್ತ ಚಿತ್ರ ವಿನ್ಯಾಸ ಮಾಡುವುದು :*** ಮನೆಯ ಪ್ರಮುಖ ಆಕರ್ಷಣೆ ಬಾಗಿಲು. ಬಾಗಿಲನ್ನು ನೋಡಿಯೇ ಆ ಮನೆಯ ಸ್ಥಿತಿ-ಗತಿಗಳನ್ನು ಅಳೆಯುವ ರೂಢಿ ಇದೆ. ಮನೆಯ ಬಾಗಿಲ ಹೊರಭಾಗದ ಸುತ್ತಲೂ ವೈವಿಧ್ಯ ಚಿತ್ರ ವಿನ್ಯಾಸಗಳಿಂದ ಅಲಂಕರಿಸುವ ಸಂಪ್ರದಾಯ ಉತ್ತರ ಕರ್ನಾಟಕದಲ್ಲಿ ಪ್ರಚಲಿತವಲ್ಲಿದೆ. ಅದನ್ನು ಈ ಕೆಳಗಿನಂತೆ ವಿಂಗಡಿಸಿ ಹೇಳಬಹುದು.

೧. ಬಾಗಿಲಿನ ಮೇಲ್ಭಾಗ ಹಾಗೂ ಅಕ್ಕ-ಪಕ್ಕದಲ್ಲಿ ಹೋಳಿಗೆ ಚಿತ್ರ ಬರೆಯುವುದು
೨. ಬಾಗಿಲಿನ ಸುತ್ತಲೂ ಪಾಂಡವರ ಚಿತ್ರ ಬರೆಯುವುದು
೩. ಬಾಗಿಲ ಬದಿಯಲ್ಲಿ ತೇರಿನಾಕೃತಿ ರಚಿಸುವುದು
೪. ಬಾಗಿಲ ಬದಿ ಗೋಡೆಯಲ್ಲಿ ಬೆಳದಿಂಗಳ ಚಿತ್ರ ಬರೆಯುವುದು

*೧. ಬಾಗಿಲಿನ ಮೇಲ್ಭಾಗ ಹಾಗೂ ಅಕ್ಕ-ಪಕ್ಕದಲ್ಲಿ ಹೋಳಿಗೆ ಚಿತ್ರ ಬರೆಯುವುದು :* ವಿಜಾಪುರ, ಬಾಗಲಕೋಟೆ ಜಿಲ್ಲೆಗಳಲ್ಲಿ ಕಾರಹುಣ್ಣಿಮೆ ಸಂದರ್ಭದಲ್ಲಿ ಬಾಗಿಲಿನ ಎಡ-ಬಲಗಳಲ್ಲಿ ಹಾಗೂ ಮೇಲ್ಭಾಗದಲ್ಲಿ ಹೋಳಿಗೆಯ ಚಿತ್ರ ಬರೆಯುತ್ತಾರೆ. ಬಿಳಿ ಗೋಡೆಯಾಗಿದ್ದರೆ ಹುರಿಮಂಜಿ(ಕೆಂಪು)ನಿಂದ ಕೆಮ್ಮಣ್ಣಿನ ಗೋಡೆ, ಇಲ್ಲವೇ ಸೆಗಣಿ ಸಾರಿಸಿದ ಗೋಡೆಯಾಗಿದ್ದರೆ ಸುಣ್ಣದಿಂದ ಚಿತ್ರ ರಚಿಸುತ್ತಾರೆ. ಹದವಾಗಿ ಕಲೆಸಿಕೊಂಡ ಸುಣ್ಣ ಇಲ್ಲವೇ ಕೆಮ್ಮಣ್ಣಿನಲ್ಲಿ ಬೆರಳನ್ನು ಅದ್ದಿ ಇಲ್ಲವೇ ಅರಿವೆ ಸುತ್ತಿದ ಕಡ್ಡಿಯನ್ನು ಅದ್ದಿ ಚುಕ್ಕೆಗಳನ್ನು ಒಂದರ ನಂತರ ಒಂದು ಸಾಲಾಗಿ ಇಡುತ್ತ ದುಂಡಾಗಿ ಹೋಳಿಗೆಯ ಹಾಗೇ ರಚಿಸುತ್ತಾರೆ.

*೨. ಬಾಗಿಲಿನ ಸುತ್ತಲೂ ಪಾಂಡವರ ಚಿತ್ರ ಬರೆಯುವುದು :* ಬಾಗಿಲ ಮೇಲ್ಭಾಗದಲ್ಲಿ ಚಿತ್ರಿಸುವ ಪಾಂಡವರ ಚಿತ್ರಗಳು ಮನುಷ್ಯಾಕೃತಿ ಹೊಂದಿರದೇ ಸಾಂಕೇತಿಕತೆಯಿಂದ ಕೂಡಿದ್ದು ಊರಿನಿಂದ ಊರಿಗೆ. ಓಣಿಯಿಂದ ಓಣಿಗೆ. ಮನೆಯಿಂದ ಮನೆಗೆ ಭಿನ್ನವಾಗಿರುತ್ತವೆ. ಕೆಲವರು ಬಾಗಿಲ ಮೇಲೆ ತ್ರಿಕೋನಾಕೃತಿಯ ಮೂರು ಚಿತ್ರಗಳನ್ನು ಮಧ್ಯದಲ್ಲಿ ಬರೆದು ಇನ್ನೆರಡು ತ್ರಿಕೋನಗಳನ್ನು ಬಾಗಿಲ ಮೇಲ್ಭಾಗದ ಎರಡೂ ಮೂಲೆಗಳಿಗೆ ಚಿತ್ರಿಸುತ್ತಾರೆ. ಇವುಗಳನ್ನು ಬಳ್ಳಿಯಾಕಾರದ ನಕ್ಷೆಯಿಂದ ಅಲಂಕರಿಸುತ್ತಾರೆ. ಬೆಳಗಾವಿ ಜಿಲ್ಲೆಯಲ್ಲಿ ಹೆಚ್ಚಾಗಿ ಅದರಲ್ಲೂ ಬೈಲಹೊಂಗಲ ಪ್ರದೇಶದಲ್ಲಿ ಬಾಗಿಲಿನ ಮೇಲ್ಭಾಗದಲ್ಲಿ ಸರಿಯಾಗಿ ಮಧ್ಯಭಾಗದಲ್ಲಿ ಬರುವಂತೆ ಐದು ತ್ರಿಕೋನಾಕೃತಿಗಳನ್ನು ಒಂದೇ ಕಡೆಗೆ ರಚಿಸಿ ಬಳ್ಳಿ ನಕ್ಷೆಯಿಂದ ಅಂದ ಕೊಡುತ್ತಾರೆ. ಮತ್ತೆ ಕೆಲವರು ಬಾಗಿಲಿನ ನಾಲ್ಕೂ ಮೂಲೆಗಳಿಗೆ ಒಂದೊಂದು ತ್ರಿಕೋನಾಕೃತಿ ರಚಿಸಿ. ಬಾಗಿಲ ಮೇಲ್ಭಾಗದಲ್ಲಿ ಸರಿಯಾಗಿ ಮಧ್ಯದಲ್ಲಿ ಬರುವಂತೆ ಇನ್ನೊಂದು ಆಕೃತಿ ರಚಿಸುತ್ತಾರೆ. ಇಲ್ಲಿಯೂ ಹೂ-ಬಳ್ಳಿಯ ನಕ್ಷೆಯಿಂದ ಅಲಂಕರಿಸಲಾಗುತ್ತದೆ. ಕೆಲವು ಭಾಗಗಳಲ್ಲಿ ಪಾಂಡವರ ಸಂಕೇತದ ತ್ರಿಕೋನಾಕೃತಿಯ ಜೊತೆಗೇ ಹೂತುಂಬಿದ ಗೊಂಚಲು. ತೆನೆಯಾಕಾರದ ಚಿತ್ರಗಳನ್ನೂ ಚಿತ್ರಿಸುತ್ತಾರೆ.

---

೮೩. ಹೆಚ್ಚಿನ ವಿವರಗಳಿಗೆ ನೋಡಿರಿ : ರಾಜೇಂದ್ರ ಯರನಾಳೆ. ಶೀಗಿ ಹಾಡುಗಳು

*೨. ಬಾಗಿಲ ಬದಿಯಲ್ಲಿ ತೇರಿನಾಕೃತಿ ರಚಿಸುವುದು :* ಧಾರವಾಡ, ಬೆಳಗಾವಿ ಜಿಲ್ಲೆಗಳಲ್ಲಿ ಬಾಗಿಲಿನ ಅಕ್ಕ-ಪಕ್ಕದ ಗೋಡೆಗಳಲ್ಲಿ ತೇರಿನಾಕೃತಿಯ ಚಿತ್ರ ರಚಿಸುವುದು ಕಂಡುಬರುತ್ತದೆ. ಗೋಡೆಯನ್ನು ಸಾರಿಸಿದಾಗೊಮ್ಮೆ ಈ ಚಿತ್ರ ಬರೆಯುವದಾಗಿ ಹೇಳುತ್ತಾರೆ. ಇಲ್ಲಿ ತೇರಿನ ಜೊತೆಯಾಗಿ ಮಾನವಾಕೃತಿಗಳು, ಹಾವು, ಚೇಳು, ಸುರ್ಯ, ಚಂದ್ರ, ವಾಲಗದವರು ಮುಂತಾದ ಚಿತ್ರಗಳನ್ನು ಬರೆಯುತ್ತಾರೆ. ಇಲ್ಲಿಯ ಮನುಷ್ಯಾಕೃತಿಗಳು ನೈಜವಾಗಿರದೇ, ದೇಹವು ಗುಣಾಕಾರ ಚಿಹ್ನೆಯಂತಿದ್ದು, ಕೈಕಾಲುಗಳು ಕಡ್ಡಿಯಂತಿರುತ್ತವೆ.

*೩. ಬಾಗಿಲ ಬದಿ ಗೋಡೆಯಲ್ಲಿ ಬೆಳದಿಂಗಳ ಚಿತ್ರ ಬರೆಯುವುದು :* ಗುಡಿ ಹುಣ್ಣಿಮೆ(ಭಾರತ ಹುಣ್ಣಿಮೆ) ಸಂದರ್ಭದಲ್ಲಿ ಐದು ದಿನಗಳ ಕಾಲ ವಿವಿಧ ವಿನ್ಯಾಸದ ಬೆಳದಿಂಗಳ ಚಿತ್ರಗಳನ್ನು ಸುಣ್ಣ, ಕೆಮ್ಮಣ್ಣಿನಿಂದ ಬರೆದು ಪೂಜಿಸುತ್ತಾರೆ. ಮನೆಯ ಹೊರಬಾಗಿಲಿನ ಎರಡೂ ಬದಿಗೂ ಗೋಡೆಯ ಮೇಲೆ ಬೆಳದಿಂಗಳ ಚಿತ್ರ ಬರೆಯುತ್ತಾರೆ. ಒಂದನೆಯ ದಿನ ಬಟ್ಟಲು(ಗಂಗಾಳ). ಎರಡನೆಯ ದಿನ ತಳಕು ಬಟ್ಟಲು ಇಲ್ಲವೇ ಅಧಿಕ ಚಿಹ್ನೆಯನ್ನು ಹೋಲುವ ಕೊಳಲು ಭಾವಿ. ಮೂರನೆಯ ದಿನ ಎಲೆ-ಬಳ್ಳಿ ಇಲ್ಲವೇ ರಾಮನ ತೊಟ್ಟಿಲು, ನಾಲ್ಕನೆಯ ದಿನ ಹುಚ್ಚಯ್ಯ, ಐದನೆಯ ದಿನ ತೇರಿನ ಚಿತ್ರ ಬರೆಯುತ್ತಾರೆ. ಈ ಬಗೆಯ ಚಿತ್ರಗಳನ್ನು ತೊಗರಿ ಕಡ್ಡಿಯನ್ನು ಸುಣ್ಣದಲ್ಲಿ ಅದ್ದಿ ಇಲ್ಲವೇ ಬೆರಳಿನಿಂದಲೂ ಚುಕ್ಕೆಗಳನ್ನು ಇಟ್ಟು ರಚಿಸುತ್ತಾರೆ. ಈ ಚಿತ್ರಗಳ ಜೊತೆಜೊತೆಯಾಗಿಯೇ ಸೂರ್ಯ, ಚಂದ್ರ, ಈಶ್ವರ, ಹಾವು, ಚೇಳು, ಸ್ವಸ್ತಿಕ ಮುಂತಾದ ಚಿತ್ರಗಳನ್ನೂ ಬರೆಯಲಾಗುತ್ತದೆ.

**II. ದೇವಸ್ಥಾನ ಅಲಂಕರಿಸುವ ಚಿತ್ರ ವಿನ್ಯಾಸಗಳು**

ದೇವರ ಉತ್ಸವ, ಜಾತ್ರೆ ಮುಂತಾದ ವಿಶೇಷ ಸಂದರ್ಭಗಳಲ್ಲಿ ಉತ್ತರ ಕರ್ನಾಟಕದ ಎಲ್ಲಾ ಗ್ರಾಮೀಣ ಭಾಗಗಳಲ್ಲಿ ಸಾಮಾನ್ಯವಾಗಿ ದೇವಾಲಯಗಳನ್ನು ವರ್ಣಚಿತ್ರ, ಚಿತ್ತಾರಗಳನ್ನು ಬರೆದು ಅಲಂಕರಿಸುತ್ತಾರೆ. ಸುಣ್ಣ-ಬಣ್ಣಗಳಿಂದ ಸಾರಿಸಿದ ಗೋಡೆಗಳ ಮೇಲೆ ಆಯಾ ದೇವರ ಪೌರಾಣಿಕ ಕಥೆಗಳ ಸನ್ನಿವೇಶಗಳು, ದೇವಾನುದೇವತೆಗಳು, ಆಂಜನೇಯ, ಹಾವು, ನವಿಲು, ಹುಲಿ, ಸಿಂಹ, ಪಲ್ಲಕ್ಕಿ, ಹೂ-ಬಳ್ಳಿಗಳು, ಅಡ್ಡ-ಉದ್ದ ಪಟ್ಟೆಗಳು, ಸಾಲಾಗಿ ಚುಕ್ಕೆಗಳು, ಜ್ಯಾಮಿತಿಕ ಆಕಾರಗಳು, ವಿವಿಧ ಸುಳುವುಗಳು, ಸ್ವಸ್ತಿಕ, ಶ್ರೀ, ಓಂ ನಂತಹ ಸಂಕೇತಗಳ ಚಿತ್ರಗಳನ್ನು ಬರೆದು ಅಲಂಕರಿಸುತ್ತಾರೆ. ದೇವಾಲಯದ ಮುಖ್ಯ ಗೋಡೆಗಳಲ್ಲದೇ ಕೆಲವು ಸಲ ವರಾಂಡದ ಗೋಡೆ, ಆವರಣದ ಕಟ್ಟೆ, ಗೋಪುರ, ಶಿಖರಗಳನ್ನು ಚಿತ್ತಾರದಿಂದ ಅಲಂಕರಿಸಲಾಗುತ್ತದೆ. ಇದಕ್ಕಾಗಿ ಕೆಂಪು ಹುರಿಮಂಜು, ಸುಣ್ಣ ಮತ್ತು ಪ್ರಖರ ವರ್ಣಗಳನ್ನು ಬಳಸುತ್ತಾರೆ. ಮತ್ತೆ ಕೆಲವು ಸಲ ದೊಡ್ಡ ದೊಡ್ಡ ಬಂಡೆಗಳನ್ನೇ ದೇವರೆಂದು ಪೂಜಿಸುತ್ತಾರೆ. ಈ ಬಂಡೆಗಳಿಗೆ ಮತ್ತು ಸುತ್ತಮುತ್ತಲಿನ ಎರಡುಮೂರು ಬಂಡೆಗಳಿಗೆ ಸುಣ್ಣ ಮತ್ತು ಕೆಮ್ಮಣ್ಣಿನಿಂದ ಉದ್ದುದ್ದ ಹಾಗೂ ಅಡ್ಡಡ್ಡವಾಗಿ ಆಕರ್ಷಕವಾಗಿ ಪಟ್ಟೆಗಳನ್ನೆಳೆಯುತ್ತಾರೆ. ಇಂತಹ ಪಟ್ಟೆಗಳನ್ನು ಮತ್ತು ವೃತ್ತಗಳನ್ನು ಹೊಲದಲ್ಲಿ ಗಿಡದ ಬುಡದಲ್ಲಿರುವ ಐದು ಕಲ್ಲುಗಳಿಗೂ ಬರೆದು ಪಾಂಡವರೆಂದು ಪೂಜಿಸುತ್ತಾರೆ.

**III. ಮದುವೆ-ಮುಂಜಿವೆಯಂತಹ ಶುಭ ಸಮಾರಂಭಗಳಲ್ಲಿ ಗೋಡೆಯ ಮೇಲೆ ಬರೆಯುವ ಚಿತ್ರ ವಿನ್ಯಾಸಗಳು :**

ಉತ್ತರ ಕನ್ನಡ ಜಿಲ್ಲೆಯ ಹಾಲಕ್ಕಿ ಜನಾಂಗದವರು ತಮ್ಮ ಮದುವೆ ಸಮಾರಂಭದಲ್ಲಿ ವಧು-ವರರು ಕೂಡ್ರುವ ಸ್ಥಳದ ಹಿಂದಿನ ಗೋಡೆಮೇಲೆ ವಿಶೇಷವಾದ ಚಿತ್ರ ಚಿತ್ತಾರಗಳನ್ನು ಬರೆದು ಅಂದಗೊಳಿಸುತ್ತಾರೆ. ಇದೇ ಪದ್ಧತಿಯು ಉತ್ತರ ಕರ್ನಾಟಕದ ಇನ್ನುಳಿದ ಭಾಗಗಳಾದ ಬಿಜಾಪುರ, ಬಾಗಲಕೋಟೆ, ಗುಲಬರ್ಗಾ ಮುಂತಾದ ಜಿಲ್ಲೆಗಳ

ಭಾಗದಲ್ಲೂ ಪ್ರಚಲಿತದಲ್ಲಿದೆ. ಆದರೆ ಈ ಭಾಗದ ಚಿತ್ರಗಳು ಹಾಲಕ್ಕಿ ಜನಾಂಗದವರ ಹಾಗೆ ವೈವಿಧ್ಯತೆ, ಕಲಾತ್ಮಕತೆಯಿಂದ ಕೂಡಿರುವುದಿಲ್ಲ. ಈ ಭಾಗದ ಚಿತ್ರಗಳಲ್ಲಿ ದೇವರ ಜಗಲಿ, ಈಶ್ವರ, ಬಾಸಿಂಗ, ಸ್ವಸ್ತಿಕ, ಓಂ, ಶ್ರೀ. ಶುಭ-ಲಾಭ ಕೆಲವು ಸಲ ವಧು-ವರರು. ಅಡ್ಡ-ಉದ್ದ ರೇಖೆ ಪಟ್ಟಿಗಳು, ಹೂ-ಬಳ್ಳಿಯ ನಕ್ಷೆಗಳು, ಸೂರ್ಯ-ಚಂದ್ರರ ಚಿತ್ರಗಳು. ತುಂಬಿದ ಕಳಸ ತಂಬಿಗೆಯ ಚಿತ್ರ ಮುಖ್ಯವಾಗಿರುತ್ತವೆ. ಇದಕ್ಕಾಗಿ ಹುರಿಮಂಜನ್ನು ಹೆಚ್ಚಾಗಿ ಬಳಸುತ್ತಾರಾದರೂ ಕೆಲವು ಸಂದರ್ಭದಲ್ಲಿ ಸುಣ್ಣ. ನೀಲಿ. ಕೆಂಪು. ಹಳದಿ. ಹಸಿರು ಮುಂತಾದ ವರ್ಣಗಳನ್ನು ಉಪಯೋಗಿಸುತ್ತಾರೆ.

ಮಲೆನಾಡ ಗ್ರಾಮೀಣ ಪ್ರದೇಶದಲ್ಲಿ ಮದುವೆ ಮುಂತಾದ ಶುಭ ಸಮಾರಂಭಗಳಲ್ಲಿ ಬರೆಯುವ ಗೋಡೆ ಚಿತ್ರಗಳನ್ನು ' ಹಸೆ ' ಎಂದು ಕರೆಯುತ್ತಾರೆ.[೮೪] ಈ ಹಸೆ ಚಿತ್ರಗಳಲ್ಲಿ ಬಿಳಿಹಸೆ, ಕಪ್ಪುಹಸೆ, ಕೆಂಪುಹಸೆ ಎಂದು ಮೂರು ಪ್ರಕಾರದ ವರ್ಣಚಿತ್ರಗಳಿವೆ. ಉತ್ತರ ಕನ್ನಡ ಜಿಲ್ಲೆಯ ಸಿದ್ಧಾಪುರ ತಾಲೂಕಿನ ವ್ಯಾಪ್ತಿ ಅದರ ಸುತ್ತಮುತ್ತ ಬಿಳಿಹಸೆ ಚಿತ್ರಗಳು ಕಂಡುಬಂದರೆ. ಸೊರಬ ತಾಲೂಕಿನ ಗಡಿಯ ಅಂಚಿಗೆ ಹೊಂದಿಕೊಂಡಂತೆ ಕರಿ ಮತ್ತು ಕೆಂಪು ಹಸೆ ಚಿತ್ರಗಳು ಕಂಡುಬರುತ್ತವೆ. ಬಿಳಿಹಸೆ ಬರೆಯುವ ವಿಧಾನವೆಂದರೆ. ಗೋಡೆಗೆ ಸೆಗಣಿ ಸಾರಿಸಿ ಅದರ ಮೇಲೆ ಕೆಮ್ಮಣ್ಣು ಲೇಪಿಸಿ, ಕೆಮ್ಮಣ್ಣಿನ ಮೇಲೆ ಅಕ್ಕಿಹಿಟ್ಟಿನ ಗಂಜಿಯಿಂದ ಚಿತ್ರ ಬರೆಯುತ್ತಾರೆ. ಇದಕ್ಕಾಗಿ ಅಕ್ಕಿಯನ್ನು ಮೂರು ಅಥವಾ ನಾಲ್ಕು ದಿವಸ ನೀರಲ್ಲಿ ನೆನೆಹಾಕಿ ಅವು ಚೆನ್ನಾಗಿ ನೆನೆದ ನಂತರ ರುಬ್ಬಿಕೊಂಡು ಅಕ್ಕಿಯ ಮಂದ ದ್ರಾವಣ ತಯಾರಿಸಿಕೊಂಡು ಅದರಿಂದ ಚಿತ್ರಿಸುವರು.

ಕಪ್ಪುಹಸೆಯನ್ನು ಬರೆಯುವವರು ನೆರೆಗುಳಿಭತ್ತ. ಕೆಸುಭತ್ತ, ಅಥವಾ ಕೆರೆಭತ್ತವನ್ನು ಕುಟ್ಟಿ ಹೊಟ್ಟು ತೆಗೆದು ಕಪ್ಪಾಗುವಂತೆ ಹುರಿದು ೩-೪ ದಿನ ನೀರಲ್ಲಿ ನೆನೆ ಹಾಕುವರು. ಅದು ಚೆನ್ನಾಗಿ ನೆನೆದಾಗ ರುಬ್ಬಿಕೊಂಡು ಅದಕ್ಕೆ ಗೇರುಕಾಯಿ ಹಾಕಿ ಕುದಿಸುತ್ತಾರೆ. ಇದರಿಂದ ದ್ರಾವಣವು ಇನ್ನಷ್ಟು ಕಪ್ಪಾಗುತ್ತದೆ. ಈ ಕಪ್ಪು ದ್ರಾವಣವನ್ನು ತೆಗೆದುಕೊಂಡು ಬಿಳಿ ಜೇಡಿಮಣ್ಣು ಲೇಪಿಸಿದ ಗೋಡೆಯ ಮೇಲೆ ಚಿತ್ರ ಬರೆಯುತ್ತಾರೆ. ಕೆಂಪುಹಸೆ ಬರೆಯುವವರು ಬಿಳಿ ಜೇಡಿಮಣ್ಣು ಲೇಪಿಸಿದ ಗೋಡೆಯ ಮೇಲೆ ಹುರಿಮಂಜಿನಂತಹ ಕೆಮ್ಮಣ್ಣಿನಿಂದ ದ್ರಾವಣ ತಯಾರಿಸಿಕೊಂಡು ಚಿತ್ರ ಬರೆಯುತ್ತಾರೆ.

ಈ ಹಸೆಗೋಡೆ ಚಿತ್ರಗಳಲ್ಲದೇ ದೀವರು ತಮ್ಮ ಮನೆ. ಗುಡಿಸಲುಗಳ ಒಳ-ಹೊರ ಗೋಡೆಗಲು. ಕಿಟಕಿ ಬಾಗಿಲುಗಳನ್ನೂ ಚಿತ್ರಗಳಿಂದ ಅಲಂಕರಿಸುತ್ತಾರೆ. ಬಾಗಿಲ ಚೌಕಟ್ಟಿನ ಸುತ್ತ ಒಂದು ಕಣ್ಣಿನ ಚಿತ್ತಾರ, ಎರಡು ಕಣ್ಣಿನ ಚಿತ್ತಾರ. ಮೂರು ಕಣ್ಣಿನ ಚಿತ್ತಾರ. ಅರ್ಧ ಕಣ್ಣಿನ ಚಿತ್ತಾರ, ಬಸವನಪಾದ, ಅಡಿಕೆ ಹೂ, ಹಕ್ಕಿ ಹಾಗೂ ಗಿಡಗಳನ್ನು ಬರೆಯುತ್ತಾರೆ. ಇವೇ ಚಿತ್ರಗಳನ್ನು ಕಿಟಕಿ ಚೌಕಟ್ಟಿಗೂ ರಚಿಸುತ್ತಾರೆ. ಮನೆಯ ಗೋಡೆಯ ಮೇಲೆ ಇತರ ಚಿತ್ರ ಚಿತ್ತಾರಗಳ ಜೊತೆಯಲ್ಲಿ ಅತ್ಯಂತ ಪ್ರಧಾನವಾಗಿ ಕಾಣುವಂತೆ ತೇರಿನ ಚಿತ್ರವನ್ನು ಬರೆಯುತ್ತಾರೆ. ಹೀಗೆ ಮನೆಯ ಅಲಂಕಾರಕ್ಕಾಗಿ ಇವರು ಹಳದಿ ವರ್ಣವನ್ನು ಉಪಯೋಗಿಸುತ್ತಿದ್ದು ಅದನ್ನು ಮಲೆನಾಡಿನಲ್ಲಿ ಸಾಮಾನ್ಯವಾಗಿ ಬೆಳೆಯುವ ' ಗುರಗಿ ' ಮರದಿಂದ ಪಡೆಯುತ್ತಾರೆ.

---

೮೪. ಸುಧಾ. ಯುಗಾದಿ ವಿಶೇಷಾಂಕ : ೧೯೯೯. ಪುಟ ೨೧೦ - ೨೧೮. ಅದ್ಭುತರಮ್ಯಗೋಡೆ ಚಿತ್ತಾರಗಳು. ನಾ. ಡಿಸೋಜ

ದಿವರ ಜನಾಂಗದವರು ತಮ್ಮ ಮಕ್ಕಳ ಜವುಳ ತೆಗೆಸುವ ಕಾರ್ಯಕ್ರಮದಲ್ಲಿ ಮಗುವನ್ನು ಗೋಡೆಯೊಂದರ ಸಮೀಪ ಕುಳ್ಳಿರಿಸಿ ಮಗುವಿನ ಹಿಂದಿನ ಗೋಡೆಯ ಮೇಲೆ ತುಳಸಿಗಿಡ, ಸೂರ್ಯ, ಚಂದ್ರರ ಚಿತ್ರಗಳನ್ನು ಬರೆಯುತ್ತಾರೆ. ಇದಕ್ಕೆ ವಂಕಿಗಿಡ ಬರೆಯುವದು ಎನ್ನುತ್ತಾರೆ. ದೀಪಾವಳಿ ಸಮಯದಲ್ಲಿ ಈ ಜನಾಂಗದವರು ತಮ್ಮ ಹಟ್ಟಿಯಲ್ಲಿ 'ಹೆಜ್ಜೆ' ಎಂಬ ಚಿತ್ರವನ್ನು ಬರೆಯುತ್ತಾರೆ. ಇದನ್ನು ಜೇಡಿ ಮಣ್ಣು ಸಾರಿಸಿ ಕೆಮ್ಮಣ್ಣಿನಿಂದ, ಇಲ್ಲವೇ ಸಗಣಿ ಕೆಮ್ಮಣ್ಣು ಸಾರಿಸಿ ಅದರ ಮೇಲೆ ಸುಣ್ಣದಿಂದ ಬರೆಯುತ್ತಾರೆ.

ಕಾನ ದೀವರು ಮತ್ತು ಮೊಗವೀರ ಜನಾಂಗದವರು ತಮ್ಮ ಮದುವೆ ಸಂದರ್ಭದಲ್ಲಿ ವಧುವರರನ್ನು ಕೂಡ್ರಿಸುವ ಸ್ಥಳದ ಹಿಂಬದಿಯ ಗೋಡೆಯ ಮೇಲೆ ಚಿತ್ರಗಳನ್ನು ಬರೆಯುತ್ತಾರೆ. ಚಿತ್ರ ಬರೆಯುವ ಈ ಕಾರ್ಯಕ್ರಮವನ್ನು ' ಹಸಗರು ' ಎಂದು ಕರೆಯುತ್ತಾರೆ. ಗೋಡೆಗೆ ಜೇಡಿ ಮಣ್ಣಿನ ಲೇಪನ ಮಾಡಿ ಮಧ್ಯದಲ್ಲಿ ತುಳಸಿಕಟ್ಟೆ ರಚಿಸಿ ಅದರ ಎಡಬಲದಲ್ಲಿ ದಂಡೆ ಧರಿಸಿದ ವಧು, ಬಾಸಿಂಗ ಧರಿಸಿದ ' ವರ ' ನ ಚಿತ್ರ ಬರೆಯುತ್ತಾರೆ. ಇವರ ಮುಂಚೆ ಬಾಚಣಿಕೆ, ಬೀಸಣಿಕೆ, ಕನ್ನಡಿಯಂತಹ ಸೌಂದರ್ಯ ಸಾಧನಗಳನ್ನೂ ಚಿತ್ರಿಸುತ್ತಾರೆ. ಹಾಲಕ್ಕಿ ಜನಾಂಗ, ಕುಣಬಿಗಳು ಕೂಡಾ ಮದುವೆಯಲ್ಲಿ ಈ ರೀತಿಯಲ್ಲಿ ಗೋಡೆಚಿತ್ರ ರಚಿಸುವ ಪದ್ಧತಿಯನ್ನು ಅನುಸರಿಸುತ್ತಿದ್ದು ಅವರು ' ಬಾಸಿಂಗ ಹಲಿ ' ಎಂದು ಇದನ್ನು ಕರೆಯುತ್ತಾರೆ, ಇಲ್ಲೂ ವಧು-ವರರು, ಬಾಸಿಂಗ, ದಂಡೆ, ಕೂಡ್ರುವ ಮಣೆ ಮುಂತಾದ ಚಿತ್ರಗಳಿರುತ್ತವೆ.

ಶಿವಮೊಗ್ಗ ಜಿಲ್ಲೆಯ ' ದೀವರ ' ಜನಾಂಗದವರು ಶುಭಸಮಾರಂಭ, ವ್ರತ ನಿಯಮಾದಿ ಆಚರಣೆಗಳಲ್ಲಿ ವೈವಿಧ್ಯ ಚಿತ್ರ, ಚಿತ್ತಾರಗಳನ್ನು ಬರೆಯುವ ಸಂಪ್ರದಾಯವನ್ನು ಬೆಳೆಸಿಕೊಂಡು ಬಂದಿದ್ದಾರೆ. ಮದುವೆಯಲ್ಲಿ ' ಹಸೆ ' ಗೋಡೆಚಿತ್ರ ಬರೆಯುವುದು, ಭೂಮಿ ಹುಣ್ಣಿಮೆಯಲ್ಲಿ ಮಣ್ಣಿನ ಬುಟ್ಟಿಯ ಮೇಲೆ (ಬಿದಿರು ಬುಟ್ಟಿಗೆ ಮಣ್ಣು ಲೇಪಿಸಿ) ಚಿತ್ರ ಬರೆಯುವುದು, ತಮ್ಮ ಮನೆ, ಬಾಗಿಲು, ಕಿಟಕಿಗಳಿಗೆ ಚಿತ್ತಾರ ಬರೆಯುವುದು, ಇವರ ಚಿತ್ರ ಸಂಪ್ರದಾಯದಲ್ಲಿ ಸೇರಿವೆ.

## IV. ಜಗಲಿಯ ಮೇಲಿನ ಚಿತ್ರ ವಿನ್ಯಾಸಗಳು

ಉತ್ತರ ಕರ್ನಾಟಕದಲ್ಲಿ ಸಾಮಾನ್ಯವಾಗಿ ಮನೆಗಳಲ್ಲಿ ದೇವರ ಜಗಲಿಗಳಿರುತ್ತವೆ. ಈ ಜಗಲಿಯ ಗೋಡೆಗಳನ್ನು ಚಿತ್ರ ಬರೆಯುವ ಮೂಲಕ ಅಲಂಕರಿಸುವ ಸಂಪ್ರದಾಯವಿದೆ. ಸಾಮಾನ್ಯವಾಗಿ ಇಲ್ಲಿ ಇಷ್ಟದೈವ, ಮನೆದೇವರು, ಲಕ್ಷ್ಮೀ, ಸರಸ್ವತಿ, ಶಿವ, ಪಾರ್ವತಿ, ಈಶ್ವರಲಿಂಗ, ನಂದಿ, ಸೂರ್ಯ, ಚಂದ್ರ, ನವಿಲು, ಮುಂತಾದ ಚಿತ್ರಗಳಿರುತ್ತವಲ್ಲದೇ ಶ್ರೀ, ಸ್ವಸ್ತಿಕ, ಶುಭ-ಲಾಭ, ಓಂ ದಂತಹ ಸಾಂಕೇತಿಕ ಚಿಹ್ನೆ, ಬರವಣಿಗೆಗಳೂ ರಚಿಸಿರುತ್ತವೆ. ಇಂತಹ ಚಿತ್ರಗಳನ್ನು ಹಳ್ಳಿಗಳಲ್ಲಿ ಹುರಿಮಂಜಿನಿಂದ ಹೆಚ್ಚಾಗಿ ಬರೆಯುವರಾದರೂ, ಇನ್ನುಳಿದ ಕಡೆಗಳಲ್ಲಿ ಬಣ್ಣದ ಪುಡಿಗಳನ್ನು ನೀರು ಮತ್ತು ಅಂಟಿನಲ್ಲಿ ಕಲೆಸಿ ಚಿತ್ರ ರಚಿಸುತ್ತಾರೆ.

## V. ತುಳಸೀಕಟ್ಟೆಯ ಮೇಲಿನ ಚಿತ್ರ ವಿನ್ಯಾಸಗಳು

ಭಾರತೀಯರಿಗೆ ' ತುಳಸಿ ' ಪವಿತ್ರವಾದ ಗಿಡ. ಹೀಗಾಗಿ ಮನೆಯಲ್ಲಿ ತುಳಸಿ ಕಟ್ಟೆಯ ನಿರ್ಮಾಣ ಮಾಡಿ, ಈ ಗಿಡವನ್ನು ನೆಟ್ಟು ಪೂಜಿಸುತ್ತಾರೆ. ಕಾರ್ತಿಕ ಮಾಸ, ಶುಕ್ಲಪಕ್ಷದ ದ್ವಾದಶಿ ದಿವಸ ' ತುಳಸಿ ಲಗ್ನ ' ಆಚರಿಸುತ್ತಾರೆ. ಈ ಸಂದರ್ಭದಲ್ಲಿ ತುಳಸಿಕಟ್ಟೆಯನ್ನು ಸುಂದರವಾಗಿ ಬಣ್ಣದಿಂದ ಅಲಂಕರಿಸುತ್ತಾರೆ. ಬ್ರಹ್ಮ, ವಿಷ್ಣು, ಮಹೇಶ್ವರರ ಸಂಕೇತಗಳನ್ನೂ, ಶಂಖ, ಚಕ್ರ, ತ್ರಿಶೂಲ, ಪಾದ, ಕಮಲ ಹೂವಿನ ಚಿತ್ರಗಳನ್ನೂ, ಹೂ-ಬಳ್ಳಿಯ ನಕ್ಷೆಯನ್ನೂ ಬರೆದು ಅಲಂಕರಿಸುತ್ತಾರೆ. ತುಳಸಿ ಕಟ್ಟೆಯ ಅಲಂಕಾರದಲ್ಲಿ ಹೂ-ಬಳ್ಳಿ ನಕ್ಷೆ, ವಿವಿಧ ಸುಳುವುಗಳ ರಚನೆ ಪ್ರಮುಖವಾಗಿವೆ.

ಅಡ್ಡಕ್ಕೂ-ಉದ್ದಕ್ಕೂ ಪಟ್ಟಿಗಳನ್ನು ಎಳೆದು ಅವುಗಳಲ್ಲಿ ಇಂತಹ ನಕ್ಷೆಗಳನ್ನು ರಚಿಸುತ್ತಾರೆ. ಇವುಗಳಲ್ಲದೇ ಸ್ವಸ್ತಿಕ, ಶ್ರೀ, ಓಂ ಮುಂತಾದ ಸಂಕೇತಗಳನ್ನೂ ಬಿಡಿಸುತ್ತಾರೆ.

## VI. ಗರಡಿ ಮನೆಯ ಮೇಲಿನ ಚಿತ್ರ ವಿನ್ಯಾಸಗಳು

ಹಿಂದಿನ ಕಾಲದಲ್ಲಿ ಪ್ರತಿ ಊರಿನಲ್ಲಿ ಓಣಿಗೊಂದರಂತೆ ಗರಡಿ ಮನೆಗಳಿರುತ್ತಿದ್ದವು. ಇಂದು ಅವುಗಳ ಅಸ್ತಿತ್ವವೇ ಇಲ್ಲವಾಗುತ್ತಿದೆ. ಆದರೂ ಇನ್ನೂ ಕೆಲವು ಹಳ್ಳಿಗಳಲ್ಲಿ ಅಲ್ಲೊಂದು ಇಲ್ಲೊಂದು ಬೆರಳೆಣಿಕೆಯ ಗರಡಿ ಮನೆಗಳು ಉಳಿದುಕೊಂಡು ಬಂದಿವೆ. ಓಣಿಯ ಹುಡುಗರು, ಯುವಕರು, ವ್ಯಾಮ, ಕುಸ್ತಿ ಮೊದಲಾದ ಕರಸರತ್ತು ಮಾಡಿ ಗಟ್ಟಿಮುಟ್ಟಾಗಲಿ ಎಂಬುದಕ್ಕಾಗಿ ಇವುಗಲ ನಿರ್ಮಾಣವಾಗಿರುವಂತೆಯೇ ಆಗ ಕುಸ್ತಿ, ವ್ಯಾಯಾಮ, ಶಕ್ತಿ ಪ್ರದರ್ಶನಗಳು ಪ್ರಮುಖ ಕ್ರೀಡೆಗಳಾಗಿದ್ದು ಅವುಗಳಿಗೆ ಸ್ಪರ್ಧೆಗಳನ್ನು ಏರ್ಪಡಿಸುತ್ತಿದ್ದರು. ಈ ಗರಡಿ ಮನೆಯಲ್ಲಿ ಅವುಗಳಗೆ ತರಬೇತಿಯನ್ನು ಕೊಡಲಾಗುತ್ತಿತ್ತು.

ಪ್ರತಿ ಗರಡಿಯ ಮನೆಯ ಯುವಕರೆಲ್ಲ ನಿರ್ದಿಷ್ಟಪಡಿಸಿದ ದಿನದಂದು ತಾವು ಕಲಿತ ವಿದ್ಯೆಗಳನ್ನು ಸಾರ್ವಜನಿಕರ ಮುಂದೆ ದ್ರದರ್ಶಿಸುತ್ತಾರೆ. ಈ ಸಂದರ್ಭದಲ್ಲಿ ಉತ್ಸವ, ಮೆರವಣಿಗೆ ಮುಂತಾದವುಗಳನ್ನು ಮಾಡುತ್ತಾರೆ. ಅದರಂಗವಾಗಿ ತಾವು ಕಲಿತ ಗರಡಿ ಮನೆಗಳನ್ನು ಸುಣ್ಣ, ಬಣ್ಣದಿಂದ ಅಲಂಕರಿಸುತ್ತಾರೆ. ಗರಡಿಮನೆಯ ಗೋಡೆಗಳಿಗೆ ಕೆಮ್ಮಣ್ಣು, ಸುಣ್ಣಗಳನ್ನು ಸಾರಿಸಿ ಅದರ ಮೇಲೆ ಚಿತ್ರಗಳನ್ನು ಬರೆಯುತ್ತಾರೆ. ಹಳ್ಳಿ ಪ್ರದೇಶದಲ್ಲಿ ಸುಣ್ಣದ ಗೋಡೆಗೆ ಹುರಿಮಂಜಿನಿಂದ. ಕೆಮ್ಮಣ್ಣಿನ ಗೋಡೆಗೆ ಸುಣ್ಣದಿಂದ ಚಿತ್ರ ಬರೆಯುವುದು ಸಾಮಾನ್ಯವಾದರೂ ಕೆಲವು ಪ್ರದೇಶಗಳಲ್ಲಿ ಸುಣ್ಣದ ಗೋಡೆಗೆ ನೀಲಿ, ಕೆಂಪು, ಕಂದು, ಹಸಿರು, ಹಳದಿ ಮುಂತಾದ ವರ್ಣಪುಡಿಗಳನ್ನು ನೀರು ಮತ್ತು ಅಂಟಿನಲ್ಲಿ ಬೆರೆಸಿ ಚಿತ್ರಿಸುತ್ತಾರೆ. ಇಲ್ಲಿ ಮುಖ್ಯವಾಗಿ ಹನುಮಂತ, ಭೀಮ, ಜಟ್ಟಿಗಳ ಕಾದಾಟ, ಜಟ್ಟಿಗಳು ವಿವಿಧ ರೀತಿಯ ವ್ಯಾಯಾಮದಲ್ಲಿ ತೊಡಗಿರುವುದು. ವ್ಯಾಯಾಮ ಪರಿಕರಗಳಾದ ಲೋಡು, ಗಧೆ, ಕಲ್ಲು, ಕತ್ತಿ, ಢಾಲು ವಸ್ತುಗಳ ಚಿತ್ರಗಳಿರುತ್ತವೆ. ಗರಡಿ ಮನೆಯ ಬಾಗಿಲನ್ನು ಹೂ-ಬಳ್ಳಿ ನಕ್ಷೆಗಳಿಂದ ಅಲಂಕರಿಸಿರುತ್ತಾರೆ.

## VII. ಸಮಾಧಿ ಅಥವಾ ಗದ್ದಿಗೆ ಮೇಲಿನ ಚಿತ್ರ ವಿನ್ಯಾಸಗಳು

ಮೃತ ವ್ಯಕ್ತಿಗಳ ಸ್ಮರಣಾರ್ಥವಾಗಿ ನಿರ್ಮಿಸಿದ ಕಟ್ಟೆಗಳೇ ಗದ್ದಿಗೆ ಅಥವಾ ಸಮಾಧಿಗಳು. ಇವುಗಳನ್ನು ಚಿಕ್ಕ ಚಿಕ್ಕ ಕಟ್ಟೆಗಳಂತೆ, ನಿರ್ಮಿಸಿ ಮೇಲೆ ಕಲ್ಲು ಚಪ್ಪಡಿ ಹೊದಿಸುತ್ತಾರೆ. ಎದುರಿನ ಭಾಗಕ್ಕೆ ಎತ್ತರವಾದ ಕಲ್ಲು ನಿಲ್ಲಿಸುವದಿದೆ. ಇನ್ನು ಕೆಲವು ಸಂದರ್ಭದಲ್ಲಿ ದೊಡ್ಡ ದೊಡ್ಡ ಕಲ್ಲು ಚಪ್ಪಡಿಗಳನ್ನೇ ಹುಗಿದು ಸಮಾಧಿ ನಿರ್ಮಿಸುತ್ತಾರೆ. ಇವು ಒಂದೇ ತೆರನಾಗಿರದೇ ವೈವಿಧ್ಯಮಯವಾಗಿ ರಚನೆಯಾಗಿರುತ್ತವೆ. ಇಂತಹ ಸಮಾಧಿಕಟ್ಟೆ ಅಥವಾ ಗದ್ದಿಗೆಗಳನ್ನು ಕೆಲವು ಸಂದರ್ಭದಲ್ಲಿ ಅಲಂಕಾರಗೊಳಿಸುತ್ತಾರೆ. ಸಮಾಧಿಗಳನ್ನು ಚಿತ್ರಗಳಿಂದ ಅಲಂಕರಿಸುವುದು ಅತ್ಯಂತ ಪುರಾತನ ಕಾಲದಿಂದಲೇ ಬೆಳೆದು ಬಂದಿದೆ. ಪ್ರಾಚೀನ ಇಜಿಪ್ತಿನಲ್ಲಿ ಸಮಾಧಿಗಳನ್ನು ವರ್ಣಚಿತ್ರಗಳಿಂದ ಅಲಂಕರಿಸುವ ಪರಾಕಾಷ್ಠೆಯನ್ನು ಕಾಣಬಹುದು. ಅಲ್ಲಿನ ಪಿರ್ಯಾಮಿಡ್‌ಗಳಲ್ಲಿ ವರ್ಣಚಿತ್ರಗಳು ಕಂಡುಬಂದಿದ್ದು, ಈ ಪಿರ್ಯಾಮಿಡ್‌ಗಳು ಮೃತರ ಸ್ಮಾರಕಗಳೇ ಆಗಿವೆ. ಸಮಾಧಿ ಕಟ್ಟೆಗಳನ್ನು ಮೃತವ್ಯಕ್ತಿಗಳ ಕಳೇಬರವನ್ನು ಹುಗಿದ ಇಲ್ಲವೇ ದಹನ ಮಾಡಿದ ಸ್ಥಳಗಳಲ್ಲಿ, ಸ್ಮಶಾನಗಳಲ್ಲಿ, ತಮ್ಮ ಹೊಲ, ತೋಟಗಳಲ್ಲಿ ನಿರ್ಮಿಸುತ್ತಾರೆ. ಸಮಾಧಿಗಳ ಅಲಂಕರಣಗಳಲ್ಲಿ ಹೆಚ್ಚಿನ ವೈವಿಧ್ಯವೇನೂ ಇರದಿದ್ದರೂ, ಉದ್ದ-ಅಡ್ಡ ಪಟ್ಟಿಗಳನ್ನೇ ಕಲಾತ್ಮಕವಾಗಿ

ಸಂಯೋಜನೆಗೊಳಿಸಿ ವರ್ಣದಿಂದ ಬರೆಯುತ್ತಾರೆ. ಈ ಪಟ್ಟಿಗಳಲ್ಲದೇ ಒಂದರೊಳಗೊಂದು ಸೇರುವಂತೆ ವೃತ್ತವನ್ನು ಬಿಡಿಸಿ ಬರೆಯುತ್ತಾರೆ. ಇದಕ್ಕಾಗಿ ಹೆಚ್ಚಿನ ಸಂದರ್ಭದಲ್ಲಿ ಸುಣ್ಣ, ಹುರಿಮಂಜನ್ನೇ ಬಳಸುತ್ತಾರೆ.

**VIII. ಶಿಲಾಶ್ರಯಗಳಲ್ಲಿ ರಚಿಸಿದ ಜನಪದ ಚಿತ್ರ ವಿನ್ಯಾಸಗಳು**

ಮನೆ, ದೇವಾಲಯ, ಗರಡಿಮನೆ, ತುಳಸಿ ಕಟ್ಟೆ, ಸಮಾಧಿ ಹೀಗೆ ವಿವಿಧ ಕಟ್ಟಡಗಳಲ್ಲಿ ಜನಪದ ಚಿತ್ರಗಳು ಕಂಡುಬಂದಂತೆ ಗುಡ್ಡಗಳಲ್ಲಿನ ಬೃಹತ್ ಬಂಡೆಗಳ ಮೇಲೂ ಜನಪದ ಭಿತ್ತಿ ಚಿತ್ರಗಳು ರಚನೆಯಾಗಿವೆ. ಬಂಡೆಯ ಮೇಲೆ ರಚನೆಯಾದ ಈ ಜನಪದ ಭಿತ್ತಿ ಚಿತ್ರಗಳು ಚೂಪಾದ ಉಳಿಯಂತಹ ಸಾಧನದಿಂದ ಕೊರೆದು ರಚಿಸಲಾದಂತೆಯೇ ಕೆಮ್ಮಣ್ಣು, ಸುಣ್ಣಗಳಂತಹ ಬಣ್ಣಗಳಿಂದಲೂ ರಚಿಸಲ್ಪಟ್ಟಿವೆ. ಇಂತಹ ಬಂಡೆಯ ಮೇಲೆ ರಚನೆಯಾದ ಜನಪದ ಭಿತ್ತಿಚಿತ್ರಗಳು ಗದಗ ತಾಲೂಕಿನ ಮುಳಗುಂದದ ಸಮೀಪದ ಚಿಂಚಲಿ ಪ್ರದೇಶದ ಗುಡ್ಡದಲ್ಲಿ, ಕೊಪ್ಪಳದ ಗುಡ್ಡದಲ್ಲಿರುವ ಗುಮ್ಮಣ್ಣನ ಗವಿಯಲ್ಲಿ, ಬಾದಾಮಿಯ ಉತ್ತರ ಕೋಟೆಯ ಬಂಡೆಯಲ್ಲಿ, ಇದೇ ತಾಲೂಕಿನ ಚಿಕ್ಕಮುಚ್ಚಳಗುಡ್ಡದಲ್ಲಿ, ಕೆರೂರದಲ್ಲಿ, ಹುಲಿಗೆಮ್ಮನಕೊಳ್ಳ ಮತ್ತು ಸಿದ್ಧನಕೊಳ್ಳ, ಗುಲಬರ್ಗಾ ಜಿಲ್ಲೆಯ ಯಾದಗಿರಿ ತಾಲೂಕಿನ ಬಲಚಕ್ರ, ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕು ತಿಮ್ಮಲಾಪುರ, ಬಂಡಿಹರ್ಲಾಪುರ, ಹೊಸಪೇಟೆ ತಾಲೂಕಿನ ಹಳಕುಂಡಿಯಲ್ಲಿ ಕಂಡುಬಂದಿವೆ. ಗದಗ ತಾಲೂಕಿನ ಮುಳಗುಂದ ಸಮೀಪದ ಚಿಂಚಲಿ ಪ್ರದೇಶದ ಗುಡ್ಡದಲ್ಲಿ ಗ್ರಾನೈಟ್ ಬಂಡೆಗಳ ಮೇಲೆ ನಂದೀಮುಖ, ಲಜ್ಜಾಗೌರಿ, ವೀರಭದ್ರರ ಚಿತ್ರಗಳು ರಚಿಸಲ್ಪಟ್ಟಿವೆ.[೮೫] ಇಲ್ಲಿ ಬಂಡೆಯ ಮೇಲೆ ಚೂಪಾದ ಲೋಹದ ಉಳಿಯನ್ನು ಬಳಸಿ ರೇಖೆಗಳನ್ನು ಕೊರೆದು ಚಿತ್ರಸಲಾಗಿದ್ದು ಚಿತ್ರಗಳ ಒಳಭಾಗವನ್ನು ತಿಕ್ಕಿ ನುಣುಪುಗೊಳಿಸಲಾಗಿದೆ. ಇಲ್ಲಿರುವ ಚಿತ್ರಗಳು ಈ ರೀತಿ ಇವೆ. ಅಗಲವಾದ ಹಾಸುಬಂಡೆಯೊಂದರ ಮೇಲೆ ನಗ್ನವಾಗಿರುವ ಲಜ್ಜಾಗೌರಿಯ ಚಿತ್ರವನ್ನು ಕೊರೆಯಲಾಗಿದ್ದು, ರೇಖೆಗಳಿಗೆ ಸುಣ್ಣ, ಕೆಮ್ಮಣ್ಣು ಲೇಪಿಸಲಾಗಿದೆ. ಗುಪ್ತಾಂಗವನ್ನು ಬಂಡೆಯ ನೈಸರ್ಗಿಕ ರಂಧ್ರಕ್ಕೆ ಸಮೀಕರಿಸಿ ರಚನೆ ಮಾಡಲಾಗಿದೆ. ಆಕೆಯ ಒಂದು ಕೈಯಲ್ಲಿ ಕಮಲದ ಮೊಗ್ಗು ಇದ್ದು ಕೈಗಳಲ್ಲಿ, ಕಾಲಲ್ಲಿ ಆಭರಣಗಳಿವೆ. ತಲೆಯ ಮೇಲೆ ಜಟೆಯಂತಹ ಮುಕುಟವಿದೆ. ಸಮೀಪದ ಇನ್ನೊಂದು ಕಡೆಗೆ ಮುಖದ ಎರಡು ಚಿತ್ರಗಳಿದ್ದರೆ, ಮತ್ತೊಂದು ಕಡೆಗೆ ಮುಖ ಹಾಗೂ ಒಬ್ಬ ವ್ಯಕ್ತಿಯ ಚಿತ್ರವಿದೆ. ಇನ್ನೊಂದು ಹಾಸುಬಂಡೆಯಲ್ಲಿ ಮನುಷ್ಯನ ಎತ್ತರದಲ್ಲಿರುವ ವೀರಭದ್ರನ ಚಿತ್ರವಿದ್ದು ಉಗ್ರರೂಪದಿಂದ ಚಿತ್ರಿಸಿದೆ. ಈ ಚಿತ್ರಗಳಿರುವ ಕೆಳಭಾಗದ ಬಂಡೆಯಲ್ಲಿ ಜೋಡು ಪಾದ, ಜೋಡು ಕತ್ತಿಗಳನ್ನು ಚಿತ್ರಿಸಿವೆ. ಇವುಗಳಿಗಿಂತ ಸ್ವಲ್ಪ ದೂರದಲ್ಲಿ ನಂದಿ ಮುಖದ ಚಿತ್ರ ಕೊರೆಯಲಾಗಿದೆ.

ಕೊಪ್ಪಳದ ಗುಡ್ಡದಲ್ಲಿ ಮಳೆ ಮಲ್ಲೇಶ್ವರ ರದೇವಾಲಯ ಸಮೀಪದಲ್ಲಿರುವ ಗುಮ್ಮಣ್ಣನ ಗವಿ ಎಂದು ಕರೆಯುಲಾಗುವ ಶಿಲಾಗುಹೆಯಲ್ಲಿ ಜನಪದ ಶೈಲಿಯ ಭಿತ್ತಿಚಿತ್ರಗಳಿದ್ದು, ಈಶ್ವರ ಮತ್ತು ನಂದಿಯ ಚಿತ್ರಗಳು ವರ್ಣದಿಂದ ರಚಿಸಲ್ಪಟ್ಟಿವೆ. ಕೆಮ್ಮಣ್ಣು, ಸುಣ್ಣದಿಂದ ರಚಿಸಿದ ಚಿತ್ರಗಳ ರೇಖೆಗಳು ದಪ್ಪನಾಗಿವೆ.

ಬಾದಾಮಿಯ ಉತ್ತರ ಕೋಟೆಯಲ್ಲಿನ ಬೃಹತ್ ಬಂಡೆಯೊಂದರಲ್ಲಿ ಉಳಿಯಂತಹ ಸಾಧನದಿಂದ ಕೊರೆದು ರೂಪಿಸಿದ ಆಂಜನೇಯನ ಚಿತ್ರವಿದೆ. ಜನಪದ ಶೈಲಿಯಲ್ಲಿರುವ ಈ ಚಿತ್ರದಲ್ಲಿ ಆಂಜನೇಯನ ಬಾಲವು ಮೇಲೆ ಬಂದು ತಲೆಯ ಮೇಲೆ ಬಾಗಿಕೊಂಡಿದೆ. ಬದಿಯ ನೋಟದಲ್ಲಿರುವ ಆಂಜನೇಯನ ಈ ಚಿತ್ರದಲ್ಲಿ ಆತನ ಆಯುಧ

---

೮೫. ಸಂಯುಕ್ತ ಕರ್ನಾಟಕ ದಿನಪತ್ರಿಕೆ : ದಿನಾಂಕ ೧೧-೩-೨೦೦೦, ಪುಟ - ೨

ಗಧೆಯೂ ಚಿತ್ರಿಸಿದೆ. ಅರ್ಧ ತೊಡೆ ಮುಚ್ಚುವಂತಹ ಚಡ್ಡಿಯನ್ನು ಹನುಮಂತನಿಗೆ ಚಿತ್ರಿಸಿದ್ದು ಮಾಂಸಖಂಡಗಳಿಂದ ದೇಹ ಬಲಿಷ್ಠವಾದಂತೆ ಇದೆ.

ಬಾದಾಮಿ ತಾಲೂಕಿನ ಕೆರೂರಿನಲ್ಲಿ ಒಂದು ಬಂಡೆಯ ಮೇಲೆ ಜನಪದ ಚಿತ್ರಗಳು ರಚಿಸಲ್ಪಟ್ಟಿವೆ. ಊರಿನ ಪಶ್ಚಿಮ ದಿಕ್ಕಿನಲ್ಲಿರುವ ಕೆರೆಯ ದಂಡೆಗೆ ಹೊಂದಿಕೊಂಡಿರುವ ಹೊಲ ಒಂದರ ಬದುವಿನಲ್ಲಿರುವ ಕಲ್ಲೊಂದರ ಮೇಲೆ ಚೂಪಾದ ಉಳಿಯಂತಹ ಸಾಧನದಿಂದ ಕುಟ್ಟಿ ರಚಿಸಲಾದ ಈ ಚಿತ್ರಗಳು ರೇಖಾ ಪ್ರಧಾನವಾಗಿವೆ. ಈ ಚಿತ್ರದಲ್ಲಿ ಎಡಬಲದಲ್ಲಿ ಇಬ್ಬರು ವ್ಯಕ್ತಿಗಳು ಕೈಮುಗಿದುಕೊಂಡು ಪದ್ಮಾಸನದಲ್ಲಿ ಕುಳಿತಿದ್ದಾರೆ. ಇಬ್ಬರೂ ಒಂದೇ ಭಂಗಿಯಲ್ಲಿದ್ದು ತಲೆಯ ಮೇಲೆ ಕಿರೀಟಗಳಿವೆ. ಇಬ್ಬರ ಮಧ್ಯೆ ಮೇಲ್ಗಡೆಯಲ್ಲಿ ಹೂವಿನಂತಹ ನಕ್ಷೆಯೊಂದನ್ನು ಕೆತ್ತಿದ್ದಾರೆ. ಇವರ ಸುತ್ತಲೂ ಜೋಡು ಗೆರೆಗಳ ಮಂಟಪವನ್ನು ರಚಿಸಿದೆ. ಈ ಮಂಟಪವು ಮೇಲಿನ ಭಾಗದಲ್ಲಿ ಶಿಖರದ ವಿನ್ಯಾಸ ಹೊಂದಿದೆ. ಇಬ್ಬರ ಮಧ್ಯ ಕೆಳಭಾಗದಲ್ಲಿ ವಿಚಿತ್ರವಾದ ಮಂಡಲಾಕಾರದ ಚಿತ್ರವು ರಚಿಸಿದೆ. ಈ ಚಿತ್ರದ ಸಮೀಪವೇ ಈಶ್ವರ ದೇವಸ್ಥಾನವಿದೆ. ಅದಕ್ಕೂ ಮೊದಲು ಇಲ್ಲಿ ಈಶ್ವರ ದೇವಾಲಯದ ಎದುರಿನ ಬಯಲಲ್ಲಿ ಸ್ಮಶಾನಭೂಮಿ ಇತ್ತೆಂದು ಹಿರಿಯರು ಹೇಳುತ್ತಾರೆ. ಬಹುಶಃ ಈ ಚಿತ್ರ ಈಶ್ವರನನ್ನು ಕುರಿತು ಧ್ಯಾನದಲ್ಲಿ ತೊಡಗಿದ್ದನ್ನು ಸೂಚಿಸುತ್ತಿರಬಹುದು, ಇಲ್ಲವೇ ತಾಂತ್ರಿಕ ವಿಧಿಯನ್ನು ಪ್ರತಿನಿಧಿಸುತ್ತಿರಬಹುದು. ಪ್ರಾಚೀನತೆಯ ದೃಷ್ಟಿಯಿಂದ ಇದು ಸುಮಾರು ನಾಲ್ಕುನೂರು ವರ್ಷಗಳ ಹಿಂದಿನದಿರಬಹುದಾಗಿದೆ ಎಂಬುದು ಸ್ಥಳೀಯರ ಹೇಳಿಕೆಯಾಗಿದೆ.

ಬದಾಮಿ ಸಮೀಪದ ಹಿರೇಮುಚ್ಚಳಗುಡ್ಡ ಗ್ರಾಮದ ಬಳಿಯಲ್ಲಿನ ಗುಡ್ಡದಲ್ಲಿಯೂ ಸಹಿತ ಕೊರೆದು ಚಿತ್ರಿಸಿದ ಆಂಜನೇಯನ ಚಿತ್ರವಿದೆ. ಇದೇ ತಾಲೂಕಿನ ಹುಲಿಗೆಮ್ಮನ ಕೊಳ್ಳದಲ್ಲಿ ಬಂಡೆಯೊಂದರ ಮೇಲೆ ಆಂಜನೇಯನ ಚಿತ್ರವನ್ನು ಕೊರೆದು ರೂಪಿಸಲಾಗಿದೆ. ರೇಖಾಪ್ರಧಾನವಾದ ಈ ಚಿತ್ರದಲ್ಲಿ ಆತನ ಕಿರೀಟ, ಗಧೆಗಳು ಆಕರ್ಷಕವಾಗಿ ಮೂಡಿಬಂದಿವೆ. ಬಾದಾಮಿ ತಾಲೂಕಿನ ಹುಲಿಗೆಮ್ಮನ ಕೊಳ್ಳಕ್ಕೆ ಸಮೀಪವಾಗಿರುವ ಸಿದ್ಧನಕೊಳ್ಳದಲ್ಲಿ ಬಂಡೆಯೊಂದರ ಮೇಲೆ ಲಜ್ಜಾಗೌರಿಯ ಚಿತ್ರವನ್ನು ಚಿತ್ರಿಸಿದೆ. ರೇಖಾಪ್ರಧಾನವಾದ ಈ ಚಿತ್ರವು ಚೂಪಾದ ಉಳಿಯಂತಹ ಸಾಧನದಿಂದ ಕೊರೆದು ರಚಿಸಲಾಗಿದೆ. ಗುಲಬರ್ಗಾ ಜಿಲ್ಲೆಯ ಯಾದಗಿರಿ ತಾಲೂಕಿನ ಬಲಚಕ್ರ ಎಂಬಲ್ಲಿ ಬಂಡೆಯ ಮೇಲೆ ಬಿಳಿ ಸುಣ್ಣದಿಂದ ರಚಿಸಿದ ಕೆಲವು ಚಿತ್ರಗಳು ಕಂಡುಬರುತ್ತವೆ. ಇಲ್ಲಿರುವ ಬಾದಾಮಿ ಚಾಲುಕ್ಯ ಕಾಲದ ಚಿತ್ರಗಳ ಜೊತೆಗೆ ಬೆರೆತುಕೊಂಡ ಈ ಚಿತ್ರಗಳಲ್ಲಿ ಮನುಷ್ಯರು, ಪ್ರಾಣಿಗಳು ಹಾಗೂ ಕೈ ಅಚ್ಚುಗಳು ಕಂಡುಬರುತ್ತವೆ.

ಗಂಗಾವತಿ ತಾಲೂಕು ತಿಮ್ಮಲಾಪುರದಲ್ಲಿ ಬೃಹತ್ ಬಂಡೆಯ ಮೇಲೆ ಕೆಮ್ಮಣ್ಣು ಹಾಗೂ ಸುಣ್ಣಗಳನ್ನು ಬಳಸಿ ಮನುಷ್ಯರ ಚಿತ್ರಗಳನ್ನು ಬರೆದಿದ್ದಾರೆ.[೮೬] ಇದೇ ತಾಲೂಕಿನ ಬಂಡಿಹರ್ಲಾಪುರದಲ್ಲಿ ಬಂಡೆಯ ಮೇಲೆ ಸುಣ್ಣದಿಂದ ಮನುಷ್ಯರು, ಮಂಗಗಳು, ಹುಲಿ ಹಾಗೂ ಆಕಳಿನ ಚಿತ್ರ ರಚಿಸಿದ್ದಾರೆ. ಎರಡು ಮಂಗಗಳು ಒಂದರ ಹಿಂದೆ ಒಂದು ಹೋಗುತ್ತಿದ್ದು ಇನ್ನೊಂದು ತುದಿಗೆ ಹುಲಿಯನ್ನು ಚಿತ್ರಿಸಿದ ಇವುಗಳ ಮಧ್ಯದಲ್ಲಿ ಮನುಷ್ಯರು, ಆಕಳು ಗುಂಪಾಗಿ ಚಿತ್ರಿಸಿವೆ. ಹೊಸಪೇಟೆ ತಾಲೂಕಿನ ಹಳಕುಂಡಿಯಲ್ಲಿ ಬಯಲಿನಲ್ಲಿರುವ ಬಂಡೆಗಳ ಮೇಲೆ ಜನಪದ ಶೈಲಿಯ ಚಿತ್ರಗಳು ರಚನೆಯಾಗಿದ್ದು,[೮೭] ಇವು ಉಳಿಯಂತಹ ಸಾಧನದಿಂದ ಕುಟ್ಟಿ ರಚಿಸಲಾಗಿದೆ. ಒಂದು ಬಂಡೆಯಲ್ಲಿ ಗೂಳಿಯನ್ನು

---

೮೬. ಡಾ. ಅ. ಸುಂದರ : ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ. ಪುಟ - ೧೦೫

೮೭. ಡಾ. ಅ. ಸುಂದರ : ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ. ಪುಟ - ೩೯

## ಉತ್ತರ ಕರ್ನಾಟಕದ ಬೆಳದಿಂಗಳ ರಂಗೋಲಿ ಚಿತ್ರಗಳು



ಗುಡಿಹುಣ್ಣಿಮೆಯ ಮೊದಲ ದಿನದ ಬೆಳದಿಂಗಳ ಚಿತ್ರ



ಗುಡಿಹುಣ್ಣಿಮೆಯ ಮೂರನೆಯ ದಿನದ ಬೆಳದಿಂಗಳ ಚಿತ್ರ



ಗುಡಿಹುಣ್ಣಿಮೆಯ ಎರಡನೆಯ ದಿನದ ಬೆಳದಿಂಗಳ ಚಿತ್ರ



ಗುಡಿಹುಣ್ಣಿಮೆಯ ನಾಲ್ಕನೆಯ ದಿನದ ಬೆಳದಿಂಗಳ ಚಿತ್ರ



ಗುಡಿಹುಣ್ಣಿಮೆಯ ಐದನೆಯ ದಿನದ ಬೆಳದಿಂಗಳ ಚಿತ್ರ

ಕೃಪೆ: ಡಾ. ಎಲ್. ಬಿ. ಪಾಟೀಲ

# ಹೊರಬದಿಯ ಗೋಡೆಯ ಅಲಂಕರಣ ಚಿತ್ರಗಳು




1




2




3




4




5




6




7




8

ಕೃತಿ. ಡಾ. ಎಸ್. ಪಿ. ಪಾಟೀಲ



ಅಂಗಳದ ಹಸೆ



ಗೋಡೆಯ ಮೇಲಿನ ಹಸೆ



ತುಳಸೀ ಕಟ್ಟೆಯ ಮುಂದಿನ ಹಸೆ



ಸುಗ್ಗಿ ಕುಣಿತಕ್ಕೆ.



ಮದುವೆ ಕಾಲಕ್ಕೆ









ತೊಟ್ಟಿಲ ಸಮಾರಂಭಕ್ಕೆ

ಹಾಲಕ್ಕಿಗಳು ಬರೆಯುವ ಹಲ ಚಿತ್ರಗಳು

ಚಿತ್ರಕಲೆ : ಶ್ರೀ ಸಂತೋಷ ಕುಮಾರ ಗುಲ್ವಾಡಿ

ಕೃಪೆ. ಡಾ. ಎನ್. ಆರ್. ನಾಯಕ



ಹುಣಸಿಯ ಗೋಡೆ ಮೇಲೆ ಬರೆದ ಬೆಳದಿಂಗಳ ಚಿತ್ರ.

ಚಿತ್ರಿಸಿದ್ದು. ಇದರ ದೇಹವನ್ನು ಪೂರ್ತಿಯಾಗಿ ಕುಟ್ಟಿ ವಿನ್ಯಾಸಗೊಳಿಸಲಾಗಿದೆ. ಚೌಕಾದ ದೇಹವನ್ನು ಹೊಂದಿದ ಗೂಳಿಯು ಚಲಿಸುತ್ತಿರುವಂತಿದೆ. ಇನ್ನೊಂದು ಬಂಡೆಯಲ್ಲಿ ನೇರ ಕೋಡಿನ ಗೂಳಿಯ ಚಿತ್ರವಿದ್ದು ಅದರ ಮೇಲೆ ವ್ಯಕ್ತಿಯೊಬ್ಬನನ್ನು ಕುಳಿತಿರುವಂತೆ ರಚಿಸಲಾಗಿದೆ. ಮೂರನೆಯ ಬಂಡೆಯಲ್ಲಿ ಓಡುತ್ತಿರುವ ಕುದುರೆಯನ್ನು ಚಿತ್ರಿಸಿದ್ದು, ರೇಖೆಗಳು ಚಲನೆಯಿಂದ ಕೂಡಿವೆ. ಕುದುರೆಗೆ ಮುಂದಿನ ಎರಡೂ ಕಾಲುಗಳನ್ನು ಚಿತ್ರಿಸಿದ್ದರೆ ಹಿಂಭಾಗದಲ್ಲಿ ಒಂದೇ ಕಾಲು ಚಿತ್ರಿಸಿದೆ. ಕುದುರೆಯ ಹಿಂದೆ ಸಾಲಾದ ಮನುಷ್ಯರ ಚಿತ್ರಗಳಿದ್ದು ಕೆಲವರ ಕೈಗಳಲ್ಲಿ ಕೋಲುಗಳು ಚಿತ್ರಿಸಿವೆ. ನಾಲ್ಕನೆಯ ಬಂಡೆಯಲ್ಲಿ ನಗ್ನವಾಗಿರುವ ಮನುಷ್ಯನ ಚಿತ್ರವಿದ್ದು, ಒಂದು ಕೈಯನ್ನು ಬೆರಳುಗಳ ಸಹಿತ ವಿವರವಾಗಿ ಚಿತ್ರಿಸಿದ್ದರೆ. ಇನ್ನೊಂದು ಕೈ ಅಪೂರ್ಣವಾಗಿದೆ. ಮನುಷ್ಯನಿಂದ ದೂರದಲ್ಲಿ ಹಿಂಭಾಗದಲ್ಲಿ ಜಿಂಕೆಗಳು ಚಿತ್ರಿಸಿವೆ. ಐದನೆಯ ಬಂಡೆಯಲ್ಲಿ ಆಂಜನೇಯನ ಚಿತ್ರವಿದ್ದು ಇದೂ ಕೂಡಾ ಕಟ್ಟುತಂತ್ರದಿಂದ ರೇಖಾಪ್ರಧಾನವಾಗಿ ರಚಿಸಿದೆ. ಇಲ್ಲಿ ಆಂಜನೇಯನಿಗೆ ಕಿರೀಟ ಚಿತ್ರಿಸಿಲ್ಲ. ಎಡಗೈಯನ್ನು ಟೊಂಕದ ಮೇಲೆ ಇಟ್ಟಿದ್ದು, ಬಲಗೈಯನ್ನು ಮೇಲಕ್ಕೆ ಎತ್ತಿದ್ದಾನೆ. ಅರ್ಧತೊಡೆ ಮುಚ್ಚುವ ಚಡ್ಡಿಯನ್ನು ಚಿತ್ರಿಸಿದ್ದು, ಕೈ, ಕೊರಳು, ಕಾಲುಗಳಿಗೆ ಆಭರಣಗಳಿವೆ. ಬಾಲವು ತಲೆಯ ಮೇಲಿಂದ ಹಾಯ್ದು ಮುಖದ ಮುಂದೆ ಬಂದಿದೆ.

ಜನಪದ ಭಿತ್ತಿ ಚಿತ್ರಕಲೆಯ ಪರಿಶೀಲನೆಯಿಂದ ಈ ಕೆಳಗಿನ ಅಂಶಗಳನ್ನು ಗುರುತಿಸಬಹುದು. ಪ್ರಮುಖವಾಗಿ ಆಚರಣೆಯ ಹಿನ್ನೆಲೆಯಲ್ಲಿ ರಚನೆಯಾಗುವ ಜನಪದ ಭಿತ್ತಿ ಚಿತ್ರಕಲೆಯು ನಿರ್ದಿಷ್ಟ ಸಮಯದಲ್ಲಿ ರಚನೆಯಾಗುತ್ತದೆ. ಜನಪದ ಕಲಾವಿದರು ತಮ್ಮ ಚಿತ್ರಗಳಿಗಾಗಿ ವಸ್ತುವಿಷಯಗಳನ್ನು ತಮ್ಮ ಸುತ್ತಲಿನ ಪರಿಸರ, ನಿತ್ಯ ಜೀವನಗಳಿಂದ ಆಯ್ದುಕೊಳ್ಳುತ್ತಾರೆ. ಜನಪದ ಭಿತ್ತಿ ಚಿತ್ರಕಲಾವಿದರ ಚಿತ್ರ ವಿನ್ಯಾಸಗಳನ್ನು ಮೂರು ಬಗೆಯಲ್ಲಿ ವಿಂಗಡಿಸಬಹುದು. ಮೊದಲನೆಯದು ಸುತ್ತಲಿನ ನಿಸರ್ಗ, ಎರಡನೆಯದು ತಮ್ಮ ವೃತ್ತಿವ್ಯವಸಾಯ, ಮೂರನೆಯದು ತಾವು ಧರಿಸುವ ವಸ್ತ್ರಾಭರಣಗಳನ್ನು ಆಧರಿಸಿ ಅವರ ಚಿತ್ರವಿನ್ಯಾಸಗಳು ರೂಪುಗೊಂಡಿವೆ. ಜನಪದ ಭಿತ್ತಿ ಚಿತ್ರಗಳು ಜನಪದರ ಅಭಿರುಚಿ, ಕಲಾಭಿವ್ಯಕ್ತಿ ಪ್ರತೀಕವಾಗಿವೆಯಲ್ಲದೇ ಅವರ ಜೀವನಾನುಭವದ ವಿವರಗಳನ್ನು ಇವುಗಳಲ್ಲಿ ಕಾಣಬಹುದಾಗಿದೆ. ತಾವು ಕಂಡುಂಡದ್ದನ್ನೇ ಚಿತ್ರಗಳ ಚೌಕಟ್ಟಿನೊಳಗೆ ತಂದು ಅವುಗಳನ್ನು ಒಂದು ಉದ್ದೇಶಕ್ಕಾಗಿ ಬಳಸಿಕೊಳ್ಳುವ ಇಂತಹ ಚಿತ್ರಗಳ ಹಿಂದೆ ಗ್ರಾಮೀಣ ಜನರ ಮುಗ್ಧ ಮನಸ್ಸಿದೆ. ಜನಪದ ಭಿತ್ತಿ ಚಿತ್ರಗಳಲ್ಲಿ ಗ್ರಾಮೀಣರ ಆಸಕ್ತಿ ಶ್ರದ್ಧೆಗಳನ್ನು ಕಾಣುವಂತೆ ಭಾವ ತೀವ್ರತೆ, ಕಲಾವಂತಿಕೆಯನ್ನೂ ಗುರುತಿಸಬಹುದು. ಜನಪದ ಭಿತ್ತಿ ಚಿತ್ರಕಲೆಯಲ್ಲಿರುವ ಈ ಪ್ರಮುಖ ಅಂಶಗಳೇ ಶಿಷ್ಟಪದ ಭಿತ್ತಿಚಿತ್ರಕಲೆ ರೂಪುಗೊಳ್ಳುವಲ್ಲಿ ಹಿನ್ನೆಲೆಯಾಗಿ ನಿಂತವು.

## ೩. ಶಿಷ್ಟಪದ ಭಿತ್ತಿ ಚಿತ್ರಕಲೆ

ಚಿತ್ರವನ್ನು ಹೀಗೆಯೇ ರಚನೆ ಮಾಡಬೇಕು, ಚಿತ್ರಗಳ ಪ್ರಮಾಣ ಇಷ್ಟೇ ಇರಬೇಕು, ಈ ಚಿತ್ರಗಳಿಗೆ ಇದೇ ಬಣ್ಣಲೇಪಿಸಬೇಕು, ದೇವರ ಚಿತ್ರಹೀಗಿರಬೇಕು, ಮನುಷ್ಯರ ಚಿತ್ರ ಹೀಗಿರಬೇಕು, ಪುರುಷರ ಚಿತ್ರಗಳ ಅಳತೆ, ಸ್ತ್ರೀ ಚಿತ್ರಗಳ ಅಳತೆ, ಪ್ರಾಣಿಚಿತ್ರಗಳ ಅಳತೆ, ಅವುಗಳನ್ನು ಯಾವ ಭಂಗಿಯಲ್ಲಿ ನಿರೂಪಿಸಬೇಕು ಎನ್ನುವಂತಹ ಅನೇಕ ವಿಧಿ ವಿಧಾನಗಳು ಚಿತ್ರರಚನೆಯಲ್ಲಿ ಬೆಳೆದು ಬಂದವು. ಈ ರೀತಿಯಾಗಿ ಒಂದು ಮಾರ್ಗ ಅನುಸರಿಸಿ ರಚನೆಯಾದ ಭಿತ್ತಿ ಚಿತ್ರಕಲೆಯನ್ನು ಶಿಷ್ಟಪದ ಭಿತ್ತಿ ಚಿತ್ರಕಲೆ ಎಂದು ಗುರುತಿಸಲಾಗಿದೆ. ಲಕ್ಷಣಯುಕ್ತವಾದ, ಪ್ರಮಾಣಬದ್ಧವಾದ,


೩. ಶಿಷ್ಟಪದ ಭಿತ್ತಿಚಿತ್ರಕಲೆ
I) ಗುಹೆಗಳಲ್ಲಿರುವ ಭಿತ್ತಿ ಚಿತ್ರಕಲೆ
ಸ್ವಾಭಾವಿಕ ಗುಹೆಗಳಲ್ಲಿನ ಭಿತ್ತಿ ಚಿತ್ರಕಲೆ
I) ಬಾದಾಮಿ
II) ಪೈಲಮರ್ಕೋಡ್
III) ಬಲಚಕ್ರ
IV) ಮಸ್ಕಿ
ಮಾನವನಿರ್ಮಿತ ಗುಹೆಗಳಲ್ಲಿನ ಭಿತ್ತಿಚಿತ್ರಕಲೆ
I) ಐಹೊಳೆ ರಾವಣಫಡಿ ಗುಡಿ
II) ಬಾದಾಮಿಯ ವೈಷ್ಣವ ಗುಡಿ
II) ದೇವಾಲಯಗಳ್ಲಿರುವ ಭಿತ್ತಿ ಚಿತ್ರಕಲೆ
1) ವಿರೂಪಾಕ್ಷೇಶ್ವರ ದೇವಾಲಯ ಹಂಪಿ
2) ವಿಠಲದೇವಾಲಯ ಹಂಪಿ
3) ಕನಕಾಚಲಪತಿದೇವಾಲಯ ಕನಕಗಿರಿ
4) ವೆಂಕಟೇಶ್ವರ ದೇವಾಲಯ ನರಗುಂದ
5) ಯಲ್ಲಮ್ಮ ದೇವಾಲಯ ಉಪ್ಪಿನ ಬೆಟಗೇರಿ
6) ಶ್ರೀರಾಮ ದೇವಾಲಯ ಬಿ.ಕೆ. ವಕ್ಕಿ
III) ಅರಮನೆಯಲ್ಲಿರುವ ಭಿತ್ತಿ ಚಿತ್ರಕಲೆ
1) ರಂಗೀನ್‌ಮಹಲ್ ಬೀದರ್
2) ಅಸರ್‌ಮಹಲ್ ಬಿಜಾಪುರ್
3) ಬೇಸಿಗೆ ಅರಮನೆ ಕುಮಟಗಿ
4) ನರಗುಂದದ ಅರಮನೆ
5) ರಾಜವಾಡೆ ನಿಪ್ಪಾಣಿ
6) ನಿಪ್ಪಾಣಿಕರ್‌ವಾಡೆ ಅಥಣಿ
7) ನಾಯಕರ ಅರಮನೆ ಸುರಪುರ
8) ನವಾಬರ ವಾಡೆ ಸವಣೂರು
9) ರಾಮದುರ್ಗದ ವಾಡೆ
IV) ಮಸೀದೆಗಳಲ್ಲಿರುವ ಭಿತ್ತಿ ಚಿತ್ರಕಲೆ
1) ತಾಜುದ್ದೀನ ಫಿರೋಜನ ಸಮಾಧಿ ಗುಲಬರ್ಗಾ
2) ಬಂದೇನವಾಜ್ ದರ್ಗಾ ಗುಲಬರ್ಗಾ
3) ಶಹಾಕಮಾಲ್ ಮುಜಾರ್ರದನ ದರ್ಗಾ ಗುಲಬರ್ಗಾ
4) ಬಹಾಮೀ ಸಮಾಧಿಗಳು ಅಷ್ಟೂರ
V) ಮಠಗಳಲ್ಲಿರುವ ಭಿತ್ತಿ ಚಿತ್ರಕಲೆ
1) ಆನೆಗುಂದಿಯ ಮುಷ್ಟಪ್ಪಯ್ಯಮಠ
2) ಅಥಣಿಯ ಗಚ್ಚಿನಮಠ
3) ಅಮ್ಮಿನಭಾವಿಯ ಪಂಚಗೃಹ ಹಿರೇಮಠ
4) ಮಹಾಲಿಂಗಪುರದ ಮಹಾಲಿಂಗೇಶ್ವರಮಠ
5) ಸುರಪುರದ ವಿರಕ್ತಮಠ
6) ಸುರಪುರದ ಅಣ್ಣಯ್ಯನಮಠ
VI) ಚರ್ಚುಗಳಲ್ಲಿರುವ ಭಿತ್ತಿ ಚಿತ್ರಕಲೆ
1) ಸೆಂಟ್‌ಮೇರಿ ಚರ್ಚ ಬೆಳಗಾವಿ
2) ಸೆಂಟ್ ಕ್ಸೇವಿಯರ್ ಚರ್ಚ ಬೆಳಗಾವಿ
VII) ಮನೆಗಳಲ್ಲಿರುವ ಭಿತ್ತಿ ಚಿತ್ರಕಲೆ
1) ಗುಳೇದಗುಡ್ಡದ ಮೊಸಮಾನಿಗೌಡರ ಮನೆ
2) ರಾಯಚೂರಿನ ಖಾಜನಗೌಡರ ಮನೆ
3) ನರಗುಂದದ ಗುಂಡಪ್ಪ ದೇಸಾಯಿಯವರಮನೆ
4) ಸಂಕೇಶ್ವರದ ಮಮದಾಪುರರ ಮನೆ

ನಾಗರಿಕವರ್ಗದ ಭಿತ್ತಿ ಚಿತ್ರಕಲೆಯೇ ಈ ಶಿಷ್ಟಪದ ಭಿತ್ತಿಚಿತ್ರಕಲೆಯಾಗಿದೆ. ಹದವಾದ, ಹಿತಮಿತವಾದ ಔಚಿತ್ಯಪೂರ್ಣವಾದ ವರ್ಣಲೇಪನ. ಸೂಕ್ಷ್ಮವಾದ ರೇಖೆಗಳ ರಚನೆ, ನಯಗಾರಿಕೆ, ಕೃತಕತೆ, ಸಂಕೀರ್ಣ ನಿಷ್ಟವಾಗಿರುವ ಕ್ಲಿಷ್ಟತೆಗಳು ಶಿಷ್ಟಪದ ಭಿತ್ತಿಚಿತ್ರಕಲೆಯಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಇಂತಹ ಅಂಶಗಳ ಹಿನ್ನೆಲೆಯಲ್ಲಿ[೮೮] ರಚನೆಯಾದ ಶಿಷ್ಟಪದ ಭಿತ್ತಿ ಚಿತ್ರಕಲೆ ಉತ್ತರ ಕರ್ನಾಟಕ ಪ್ರದೇಶದ ಉದ್ದಕ್ಕೂ ವ್ಯಾಪಿಸಿಕೊಂಡಿದೆ. ಹೀಗೆ ವ್ಯಾಪಿಸಿಕೊಂಡ ಶಿಷ್ಟಪದ ಭಿತ್ತಿಚಿತ್ರ ಕಲೆಯು, ಗುಹೆ, ಅರಮನೆ, ದೇವಾಲಯ, ಮಸೀದಿ, ಮಠಮಾನ್ಯಗಳು, ಚರ್ಚು, ಮನೆಗಳಲ್ಲಿ ಹೀಗೆ ಬೇರೆ ಬೇರೆ ಸ್ಥಳಗಳಲ್ಲಿ ಕಂಡುಬರುತ್ತವೆ.

ಈ ರೀತಿ ಬೇರೆ ಬೇರೆ ಸ್ಥಳಗಳಲ್ಲಿ ರಚನೆಯಾಗಿರುವ ಉತ್ತರ ಕರ್ನಾಟಕದ ಶಿಷ್ಟಪದ ಭಿತ್ತಿಚಿತ್ರಕಲೆಯನ್ನು ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಈ ಕೆಳಗಿನಂತೆ ವಿಂಗಡಿಸಿಕೊಂಡು ವಿವರಿಸಬಹುದಾಗಿದೆ.

I. ಗುಹೆಗಳಲ್ಲಿರುವ ಭಿತ್ತಿ ಚಿತ್ರಕಲೆ
II. ದೇವಾಲಯಗಳಲ್ಲಿರುವ ಭಿತ್ತಿ ಚಿತ್ರಕಲೆ
III. ಅರಮನೆಗಳಲ್ಲಿರುವ ಭಿತ್ತಿ ಚಿತ್ರಕಲೆ
IV. ಮಸೀದೆಗಳು ಮತ್ತು ಸಮಾಧಿಭವನಗಳಲ್ಲಿರುವ ಭಿತ್ತಿಚಿತ್ರಕಲೆ
V. ಮಠಗಳಲ್ಲಿರುವ ಭಿತ್ತಿ ಚಿತ್ರಕಲೆ
VI. ಚರ್ಚುಗಳಲ್ಲಿರುವ ಭಿತ್ತಿ ಚಿತ್ರಕಲೆ
VII. ಮನೆಗಳಲ್ಲಿರುವ ಭಿತ್ತಿ ಚಿತ್ರಕಲೆ

## I. ಗುಹೆಗಳಲ್ಲಿರುವ ಭಿತ್ತಿ ಚಿತ್ರಕಲೆ

ಗುಹೆಗಳಲ್ಲಿ ರಚನೆಯಾಗಿರುವ ಶಿಷ್ಟಪದ ಭಿತ್ತಿ ಚಿತ್ರಕಲೆಯನ್ನು ಎರಡು ರೀತಿಯಲ್ಲಿ ವಿಂಗಡಿಸಿಕೊಳ್ಳಬಹುದು. ೧. ಸ್ವಾಭಾವಿಕ ಗುಹೆಗಳಲ್ಲಿ ರಚನೆಯಾದ ಭಿತ್ತಿ ಚಿತ್ರಕಲೆ, ೨. ಮಾನವ ನಿರ್ಮಿತ ಗುಹೆಗಳಲ್ಲಿ ರಚನೆಯಾದ ಭಿತ್ತಿ ಚಿತ್ರಕಲೆ.




೮೮. ಹೆಚ್ಚಿನ ವಿವರಗಳಿಗೆ ನೋಡಿ : ಡಾ. ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪುಟ ೨೦, ೨೩

### ೧. ಸ್ವಾಭಾವಿಕ ಗುಹೆಗಳಲ್ಲಿ ರಚನೆಯಾದ ಭಿತ್ತಿ ಚಿತ್ರಕಲೆ :

ನೈಸರ್ಗಿಕವಾಗಿ ನಿರ್ಮಿತವಾದ ಶಿಲಾಗುಹೆ. ಶಿಲಾಶ್ರಯಗಳನ್ನು ಇಲ್ಲಿ ಸ್ವಾಭಾವಿಕ ಗುಹೆಗಳೆಂದು ಪರಿಗಣಿಸಿ ಅಲ್ಲಿ ರಚನೆಯಾಗಿರುವ ಶಿಷ್ಟಪರಂಪರೆಯ ಭಿತ್ತಿಚಿತ್ರಕಲೆಯನ್ನು ಕುರಿತು ಚರ್ಚಿಸಲಾಗಿದೆ.

ವರ್ಣ ಭಿತ್ತಿ ಚಿತ್ರಕಲೆಯ ಅತ್ಯಂತ ಪುರಾತನ ನಿದರ್ಶನಗಳು ಇಂತಹ ಸ್ವಾಭಾವಿಕ ಶಿಲಾಗುಹೆಗಳಲ್ಲೇ ಕಂಡುಬಂದಿವೆ. ಸ್ಪೇನ್. ಫ್ರಾನ್ಸ್. ಆಫ್ರಿಕಾ. ಭಾರತ ಮುಂತಾದ ದೇಶಗಳಲ್ಲಿ ಸ್ವಾಭಾವಿಕ ಗುಹೆಗಳಲ್ಲಿ ರಚನೆಯಾದ ಪ್ರಾಗೈತಿಹಾಸಿಕ ಕಾಲದ ಚಿತ್ರಗಳು ಕಂಡುಬಂದಿವೆ. ವರ್ಣ ಭಿತ್ತಿ ಚಿತ್ರರಚನೆಗೆ ಮಾನವ ಕಂಡುಕೊಂಡ ಮೊದಲ ಸುರಕ್ಷಿತ ನೆಲೆ ಎಂದರೆ ಸ್ವಾಭಾವಿಕವಾಗಿ ನಿರ್ಮಿತವಾದ ಶಿಲಾಗುಹೆ ಅಥವಾ ಶಿಲಾಶ್ರಯ ತಾಣವೇ ಆಗಿದೆ. ಉತ್ತರ ಕರ್ನಾಟಕ ಭಾಗದಲ್ಲಿಯೂ ಸ್ವಾಭಾವಿಕಗುಹೆಗಳಲ್ಲಿ ರಚನೆಯಾದ ಪ್ರಾಗಿತಿಹಾಸ ಕಾಲದ ವರ್ಣಚಿತ್ರಗಳಿದ್ದು ಈ ಪ್ರಾಗೈತಿಹಾಸಿಕ ಚಿತ್ರಗಳಲ್ಲದೇ ಇತಿಹಾಸಕಾಲದಲ್ಲಿಯೂ ಸ್ವಾಭಾವಿಕಗುಹೆಗಳಲ್ಲಿ ಶಿಷ್ಟಸಂಪ್ರದಾಯದ ಭಿತ್ತಿಚಿತ್ರಗಳನ್ನು ರಚಿಸಲಾಗಿದೆ. ಬಿಹಾರದ ಗಯಾ ಜಿಲ್ಲೆಯ ಬಾರಾಬರ್ ಬೆಟ್ಟದಲ್ಲಿ, ಮಧ್ಯಪ್ರದೇಶದ ರಾಮಘಡ್‌ದ ಬೆಟ್ಟದಲ್ಲಿರುವ ಕೆಲವು ಗುಹೆಗಳಲ್ಲಿ.[೮೯] ಓರಿಸ್ಸಾ ರಾಜ್ಯದ ಕೇಂಜಹಾರ್ ಜಿಲ್ಲೆಯ ಸೀತಾಭಿಂಜ್[೯೦] ಎಂಬಲ್ಲಿ ಸ್ವಾಭಾವಿಕ ಗುಹೆಯಲ್ಲಿ ಶಿಷ್ಟ ಸಂಪ್ರದಾಯದ ಚಿತ್ರಗಳು ಕಂಡು ಬರುತ್ತವೆ. ಅದೇ ರೀತಿ ಉತ್ತರ ಕರ್ನಾಟಕದ ಬದಾಮಿ. ಕುಟನಕೇರಿ ಮಾನ್ವಿ, ಯಾದಗಿರಿಗಳಲ್ಲಿ ಸ್ವಾಭಾವಿಕ ಗುಹೆಗಳಲ್ಲಿ ಶಿಷ್ಟಪದ ಭಿತ್ತಿಚಿತ್ರಗಳು ರಚನೆಯಾಗಿದ್ದು ಅವುಗಳನ್ನು ಈ ಕೆಳಗಿನಂತೆ ವಿವರಿಸಬಹುದಾಗಿದೆ.

### I. ಬಾದಾಮಿಯ ಶಿಲಾಶ್ರಯ ಚಿತ್ರಗಳು :

**ಅ. ಬಾದಾಮಿಯ ಉತ್ತರಕೋಟೆಯ ಶಿಲಾಶ್ರಯ ಚಿತ್ರಗಳು :** ಬಾದಾಮಿಯ ಉತ್ತರ ಬೆಟ್ಟದಲ್ಲಿ 'ಸಾಬರ ಫಡಿ ಎಂದು ಕರೆಯಲಾಗುವ ಸ್ಥಳದಿಂದ ಪೂರ್ವಕ್ಕೆ ಸ್ವಲ್ಪದೂರದಲ್ಲಿ ಎತ್ತರವಾದ ಬೃಹತ್ ಶಿಲೆಯೊಂದಿದೆ. ಅದರ ಮೇಲೆ ಇತಿಹಾಸಕಾಲದ ವರ್ಣ ಭಿತ್ತಿಚಿತ್ರಗಳಿದ್ದು, ಇವುಗಳನ್ನು ಅ. ಸುಂದರ ಅವರು[೯೧] ಶೋಧಿಸಿದ್ದಾರೆ. ಇಲ್ಲಿ ಮೊದಲು ಬಂಡೆಗೆ ಹಳದಿ ಮಿಶ್ರಿತ ಹಿನ್ನೆಲೆಕೊಟ್ಟು ನಂತರ ಅದರ ಮೇಲೆ ಕೆಂಪು ಬಣ್ಣದಿಂದ ಚಿತ್ರ ಬಿಡಿಸಲಾಗಿದೆ.[೯೨] ಹಿನ್ನೆಲೆಗೆ ದಪ್ಪವಾದ ಭಿತ್ತಿಯ ಪದರು ನಿರ್ಮಿಸದೇ ಜಿಗುಟು ಮಣ್ಣಿನ ತೆಳುವಾದ ಪದರ ಲೇಪಿಸಿ ಅದಕ್ಕೆ ಹಳದಿವರ್ಣದ ಹಿನ್ನೆಲೆ ಲೇಪನಮಾಡಿ ಚಿತ್ರಿಸಲಾಗಿದೆ. ಚಿತ್ರಿತವಾದ ಒಟ್ಟು ಸ್ಥಳವು ೨.೨೦ X ೧ ಮೀ ವಿಸ್ತೀರ್ಣದಲ್ಲಿ ವ್ಯಾಪಿಸಿದೆ. ಈ ಚಿತ್ರದಲ್ಲಿ ಮಹಿಳೆಯರ ಆಕೃತಿಗಳು ಚಿತ್ರಿತಗೊಂಡಿದ್ದು ಗಮನಾರ್ಹ ಅಂಶ. ಒಬ್ಬಳು ಗಣ್ಯಸ್ತ್ರೀಯಂತೆ ಕಾಣುವ ಮಹಿಳೆ ಮಧ್ಯದಲ್ಲಿ ಕುಳಿತಿದ್ದು ಅವಳ ಬಲಬದಿಗೆ ಇಬ್ಬರು ನಿಂತಿದ್ದಾರೆ. ಇನ್ನೂ ಮೂವರು ಸ್ತ್ರೀಯರು ಕಮಲ ಪುಷ್ಪ ಹಿಡಿದುಕೊಂಡು ಎದುರಿಗೆ ನಿಂತಿದ್ದಾರೆ.[೯೩] ಮಧ್ಯದಲ್ಲಿ ಕುಳಿತವಳು ಗಣ್ಯಸ್ತ್ರೀಯಾಗಿದ್ದು ಉಳಿದವರು ಆಕೆಯ ಸಖಿಯರಂತೆ ಕಂಡುಬರುತ್ತಾರೆ. ಅವಳ ಬಲಬದಿಗೆ ನಿಂತಿರುವವರು ಪರಿಚಾರಿಕೆಯರು, ಎದರು ಕಮಲ ಪುಷ್ಪ ಹಿಡಿದವರು ಆಕೆಯ ಸಖಿಯರೆಂದು ಹೇಳಬಹುದು. ರಾಣಿಯು ಪರಿಚಾರಿಕೆ ಮತ್ತು ಸಖಿಯರಿಂದ ಸೇವೆ ಪಡೆಯುತ್ತಿರುವ ಚಿತ್ರ

---

೮೯. T. N. Ramachandran : Jain Momuments and Palacess of First Class Importence, Page 31

೯೦. Marg : Vol. VIII, No. 4, Sept, 1955, Page 63

೯೧. ಡಾ. ಅ. ಸುಂದರ (ಸಂ.) : ಚಾಲುಕ್ಯಶ್ರೀ. (ವಿಶಿಷ್ಟ ವರ್ಣಚಿತ್ರಕಲೆಯ ಆಗರ ಬಾದಾಮಿ) ಪುಟ ೧೧೫

೯೨. ಡಾ. ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ. ಪುಟ ೨೭

೯೩. ಡಾ. ಶೀಲಾಕಾಂತ ಪತ್ತಾರ : ಬಾದಾಮಿ : ಸಾಂಸ್ಕೃತಿಕ ಅಧ್ಯಯನ. ಪುಟ ೧೯೩



ಕೃಪೆ. ಡಾ. ಶೀಲಕಾಂತ ಪತ್ತಾರ

ಬಾದಾಮಿಯ ಉತ್ತರ ಕೋಟೆಯ ಶಿಲಾಶ್ರಯ ವರ್ಣಚಿತ್ರ

ಬಾದಾಮಿಯ ೩ ನೇ ವೈಷ್ಣವಗುಹೆಯಲ್ಲಿಯೂ ರಚನೆಯಾಗಿದೆ. ಇಲ್ಲಿನ ಸ್ತ್ರೀಯರೆಲ್ಲ ಹಿತಮಿತವಾಗಿ ಆಭರಣಗಳನ್ನು ಧರಿಸಿದ್ದು ವೈಷ್ಣವಗುಹೆಯ ಸ್ತ್ರೀ ಚಿತ್ರಗಳನ್ನು ನೆನಪಿಸುತ್ತವೆ. ವೈಷ್ಣವ ಗುಹಾಲಯದ ಹಾಗೆ ರಾಜ'ಪರಿವಾರದ ಚಿತ್ರವಾಗಿದ್ದರೆ ಇದು ರಾಣಿಯ ಅಂತಪುರದ ಚಿತ್ರವನ್ನು ಬಿಂಬಿಸುತ್ತದೆ. ಎನ್ನಬಹುದು. ಇಲ್ಲಿ ಪುರುಷ ಚಿತ್ರಗಳು ಇರದೇ ಬರೀ ಸ್ತ್ರೀ ಚಿತ್ರಗಳಿರುವುದರಿಂದ ಈ ಮಾತಿಗೆ ಇನ್ನಷ್ಟು ಪುಷ್ಟಿ ದೊರೆತಂತಾಗುವುದು. ಈ ಚಿತ್ರವು ಬಹುಶ ಬಾದಾಮಿಯ ವಿಷ್ಣುಗುಹೆಯ ವರ್ಣ ಚಿತ್ರಗಳಿಗಿಂತ ಮೊದಲಿನದಾಗಿದೆ. ಚಿತ್ರಗಳ ಶೈಲಿ, ಭಿತ್ತಿ ಸಿದ್ಧತಾ ವಿಧಾನ ಇವುಗಳನ್ನು ನೋಡಿದರೆ ಇವು ಚಾಲುಕ್ಯರ ಪ್ರಾರಂಭಿಕ ಭಿತ್ತಿಚಿತ್ರಗಳಾಗಿರುವ ಸಾಧ್ಯತೆಗಳಿವೆ. ಭಿತ್ತಿ ಸಿದ್ಧತೆಯಲ್ಲಿ ವಿಷ್ಣುಗುಹಾಲಯದ ಚಿತ್ರಗಳ ಭಿತ್ತಿ ದಪ್ಪವಾಗಿದ್ದರೆ ಇದು ತೆಳವಾದ ಜಿಗುಟು ಮಣ್ಣಿನ ಲೇಪನವಾಗಿದೆ. ಚಿತ್ರಗಳ ರೇಖಾಲಾಲಿತ್ಯವು ವೈಷ್ಣವ ಗುಹೆಯಲ್ಲಿ ಪ್ರಬುದ್ಧವಾಗಿದ್ದರೆ ಇಲ್ಲಿ ಪ್ರಾರಂಭಿಕ ಹಂತದಲ್ಲಿದೆ. ವೈಷ್ಣವ ಗುಹೆಯ ಚಿತ್ರಗಳು ಬಹುವರ್ಣದಲ್ಲಿದ್ದರೆ. ಇವು ಕೇವಲ ಕೆಂಪುಬಣ್ಣದ ಹೊರರೇಖೆಯಲ್ಲಿ ಮಾತ್ರ ರಚನೆಯಾಗಿವೆ. ಈ ಎಲ್ಲ ಅಂಶಗಳು ಚಿತ್ರದ ಪ್ರಾರಂಭಿಕ ಹಂತವನ್ನು ತೋರಿಸುತ್ತಿದ್ದು ಇವು ವೈಷ್ಣವ ಗುಹೆಯ ಚಿತ್ರಗಳಿಗಿಂತ ಮೊದಲಿನವು ಎನ್ನುವುದಕ್ಕೆ ಈ ಪೂರಕ ಸಂಗತಿಗಳನ್ನೊದಗಿಸಿಕೊಡುತ್ತವೆ.

**ಬ. ಶಿಲಾಶ್ರಯದಲ್ಲಿ ಮತ್ತೊಂದು ಗಣ್ಯ ಸ್ತ್ರೀಯ ಚತ್ರ :** ಮೇಲೆ ಹೇಳಲಾದ ಗಣ್ಯ ಸ್ತ್ರೀಯರ ಚಿತ್ರದ ಪಕ್ಕದಲ್ಲಿಯೇ ಇನ್ನೊಂದು ಶಿಲಾಶ್ರಯದಲ್ಲಿ ಡಾ. ಶೀಲಾಕಾಂತ ಪತ್ತಾರ ಅವರು[೯೪] ಅದೇ ಶೈಲಿಯಲ್ಲಿರುವ ವರ್ಣ ಚಿತ್ರವನ್ನು ಪತ್ತೆಮಾಡಿದ್ದು ಅದು ಕೈಯಲ್ಲಿ ಕಮಲ ಪುಷ್ಪಹಿಡಿದ ಗಣ್ಯಸ್ತ್ರೀಯದ್ದಾಗಿದೆ. ಇದು ಕೂಡಾ ರಾಣಿಯ ಅಂತಪುರ ಒಂದರ ಸಂಯೋಜನಾ ಚಿತ್ರವಾಗಿರಬಹುದು. ಆದರೆ ಸ್ತ್ರೀ ಚಿತ್ರಮಾತ್ರ ಉಳಿದುಕೊಂಡಿದೆ. ಹಿಂದಿನ ಚಿತ್ರದಂತೆ ಇಲ್ಲಿಯೂ ಬಂಡೆಗೆ ಹಳದಿ ಮಿಶ್ರಿತ ಲೇಪನಮಾಡಿ ಕೆಂಪುಬಣ್ಣದಲ್ಲಿ ಚಿತ್ರ ರಚಿಸಲಾಗಿದೆ. ಇಲ್ಲಿನ ಚಲುವೆಯು ಹಿಡಿದ ಕಮಲಪುಷ್ಪ ಆಕೆಯ ಮುಖಕ್ಕಿಂತ ದೊಡ್ಡದಾಗಿದೆ. ಕಿವಿಯಲ್ಲಿ ನೇತಾಡುತ್ತಿರುವ ಕುಂಡಲಗಳು ಕಿವಿಗಿಂತ ದೊಡ್ಡದಾಗಿವೆ. ಕೊರಳಲ್ಲಿ ದುಂಡಾದ ಕಾಸಿನ ಸರ ಕಂಗೊಳಿಸುತ್ತಿದೆ. ನಡುವಿನಲ್ಲಿರುವ ಪಟ್ಟಿಯು ಬಾದಾಮಿ ಶಿಲ್ಪಗಳನ್ನು ಹೋಲುತ್ತದೆ. ಈ ಸ್ತ್ರೀಯ ಕೈ ಬೆರಳುಗಳು ಹಿಂದಿನ ಗಣ್ಯ ಸ್ತ್ರೀಯರಂತೆ ಪ್ರಮಾಣ ಮೀರಿ ಉದ್ದವಾಗಿವೆ. ಇವೆರಡೂ ಚಿತ್ರಗಳನ್ನು ಒಬ್ಬನೇ ಕಲಾವಿದ ರಚಿಸಿರಬಹುದು[೯೫] ಎನ್ನುವ ಮಾತಿನಲ್ಲಿ ಸತ್ಯಾಂಶವಿದೆ.

**ಕ. ಮಾಲಗಿತ್ತಿ ಶಿವಾಲಯದ ಮುಂದಿರುವ ಬತೇರಿಯ ಕೆಳಗಿನ ಗುಹೆಯ ಚಿತ್ರ :** ಮಾಲಗಿತ್ತಿ ಶಿವಾಲಯದ ಮುಂದಿರುವ ಕೋಟೆಯ ಬತೇರಿಯ ಕೆಳಭಾಗದಲ್ಲಿ ಬೃಹತ್ತಾದ ಕಲ್ಲು ಬಂಡೆಯೊಂದು ಚಾಚಿಕೊಂಡಿದೆ. ಅದರ ಕೆಳಭಾಗದ ಒಳಮೈ ಸ್ವಾಭಾವಿಕ ಗುಹೆಯಂತೆ ಕಾಣುತ್ತಿದ್ದು ಅಲ್ಲಿ ಬಂಡೆಯ ಮೇಲೆ ವರ್ಣಚಿತ್ರಗಳನ್ನು ರಚಿಸಲಾಗಿದೆ. ಈ ಚಿತ್ರಗಳು ವಿಜಯನಗರ ಕಾಲದ್ದೆಂದು ಡಾ. ಶೀಲಾಕಾಂತ ಪತ್ತಾರ್[೯೬] ಊಹಿಸುತ್ತಾರೆ. ಆದರೆ ಅದಕ್ಕೆ ಹೆಚ್ಚಿನ ಪುರಾವೆಗಳು ದೊರೆಯುವುದಿಲ್ಲ. ಬಹುಶ ಈ ಚಿತ್ರವೂ ಕೂಡಾ ಚಾಲುಕ್ಯರ ಪ್ರಾರಂಭಿಕ ಹಂತದ ಚಿತ್ರವಾಗಿದ್ದು ವೈಷ್ಣವ ಗುಹೆಯ ಚಿತ್ರಗಳಿಗಿಂತ ಮೊದಲಿನದಾಗಿದೆ ಎನ್ನಬಹುದು. ಈ ಹಿಂದೆ ವಿವರಿಸಿದ ಎರಡು ಚಿತ್ರಗಳಂತೆಯೇ ಇಲ್ಲಿಯು ಅಂತಹದೇ ರಚನಾವಿಧಾನ ಅನುಸರಿಸಲಾಗಿದೆ. ಬಂಡೆಗೆ ಮೊದಲು ತೆಳುಹಳದಿ ಹಿನ್ನೆಲೆ ಲೇಪನಕೊಟ್ಟು ಅದರ ಮೇಲೆ ಕೆಂಪು ಬಣ್ಣದಿಂದ ಚಿತ್ರ ರಚನೆಮಾಡಲಾಗಿದೆ. ಬಹುಶ ಚಾಲುಕ್ಯರ ಮೊದಲಿನ ಭಿತ್ತಿ ಚಿತ್ರಗಳು ಇದೇ ತಂತ್ರದಲ್ಲಿ ರಚನೆಯಾಗಿವೆ.

---

೯೪. ಇತಿಹಾಸ ದರ್ಶನ (ಸಂಪುಟ ೧೩) : ಪುಟ ೧೧೭-೧೯. ಮತ್ತೆರಡು ಚಲುಕ್ಯವರ್ಣ ಚಿತ್ರಗಳ ಶೋಧ. ಶೀಲಾಕಾಂತ ಪತ್ತಾರ

೯೫. ಡಾ. ಶೀಲಾಕಾಂತ ಪತ್ತಾರ : ಬಾದಾಮಿ : ಸಾಂಸ್ಕೃತಿಕ ಅಧ್ಯಯನ. ಪುಟ ೧೯೩

೯೬. ಡಾ. ಶೀಲಾಕಾಂತ ಪತ್ತಾರ : ಬಾದಾಮಿ : ಸಾಂಸ್ಕೃತಿಕ ಅಧ್ಯಯನ. ಪುಟ ೨೦೧

ಇಲ್ಲಿ ಹಿನ್ನೆಲೆಯ ಹಳದಿವರ್ಣದ ಮೇಲೆ ಕೆಂಪು ಬಣ್ಣದಿಂದ ಸೈನಿಕರ ಚಿತ್ರಗಳನ್ನು ರಚಿಸಲಾಗಿದ್ದು, ಇವರು ಕೈಯಲ್ಲಿ ಖಡ್ಗ ಗುರಾಣಿಗಳನ್ನು ಹಿಡಿದು ಕಾದಾಡುತ್ತಿದ್ದಾರೆ. ಹೀಗೆ ಹಳದಿ ಹಿನ್ನಲೆಯಲ್ಲಿ ಕೆಂಪು ವರ್ಣದಿಂದ ರಚಿಸಿದ ಚಿತ್ರಗಳು ವೈಷ್ಣವ ಗುಹೆಯ ಚಿತ್ರಗಳಿಗಿಂತ ಮೊದಲು ಎಂದರೆ ಒಂದನೇ ಪುಲಕೇಶಿಯ ಕಾಲದಲ್ಲಿ ರಚನೆಯಾಗಿರಬಹುದಾಗಿದೆ.

**ಡ. ಕುಟಕನಕೇರಿಯ ಶಿಲಾಶ್ರಯ ಚಿತ್ರ :** ಬಾದಾಮಿಯಿಂದ ಗುಳೇದಗುಡ್ಡಕ್ಕೆ ಹೋಗುವ ದಾರಿಯಲ್ಲಿರುವ ಕುಟಕನಕೇರಿಯಲ್ಲಿ ಬೃಹತ್ ಬಂಡೆಯ ಶಿಲಾಶ್ರಯದಲ್ಲಿ ಇತ್ತೀಚೆಗೆ ಡಾ. ಎಸ್. ಸಿ. ಪಾಟೀಲ * ಮತ್ತು ಅವರ ಸ್ನೇಹಿತರು ಇತಿಹಾಸಕಾಲದ ವರ್ಣಚಿತ್ರ ನೆಲೆಯನ್ನು ಪತ್ತೆ ಮಾಡಿದ್ದು, ಅದರಲ್ಲಿ ಯುದ್ಧ ಸೈನಿಕರ ಚಿತ್ರಗಳಿವೆ. ಇಲ್ಲಿಯೂ ಮೊದಲು ಬಂಡೆಗೆ ತೆಳುವಾದ ಹಳದಿ ಲೇಪನವನ್ನು ಕೊಟ್ಟು ನಂತರ ಕೆಂಪು ಬಣ್ಣದಿಂದ ಚಿತ್ರ ರಚಿಸಲಾಗಿದೆ. ಕೈಗಳಲ್ಲಿ ಖಡ್ಗ, ಗುರಾಣಿಗಳನ್ನು ಹಿಡಿದುಕೊಂಡ ನಾಲ್ಕು ಜನ ಸೈನಿಕರು ಪರಸ್ಪರ ಕಾದಾಡುತ್ತಿದ್ದಾರೆ. ನಾಲ್ಕು ಜನರಲ್ಲಿ ಇಬ್ಬರು ಬಲಗಡೆಗೆ, ಇಬ್ಬರು ಎಡಗಡೆಗೆ ನಿಂತು ಆಕ್ರಮಣ ಮಾಡುತ್ತಿದ್ದಾರೆ. ಬಲಗಡೆಯ ಇಬ್ಬರು ವ್ಯಕ್ತಿಗಳ ರೂಪಗಳು ಅಸ್ಪಷ್ಟವಾಗಿವೆ. ಮತ್ತು ಪ್ರಮಾಣಬದ್ಧವಾಗಿಲ್ಲ. ಎಡಗಡೆಯ ವ್ಯಕ್ತಿಗಳ ರೂಪಗಳು ಸ್ಪಷ್ಟವಾಗಿವೆಯಲ್ಲದೆ ಪ್ರಮಾಣಬದ್ಧ ವಿನ್ಯಾಸದಲ್ಲಿವೆ. ಎಲ್ಲ ವ್ಯಕ್ತಿಗಳ ತಲೆಯ ಮೇಲೂ ತುರುಬಿನಂತಹ ಶಿರಸ್ತ್ರಾಣವಿದೆ. ಕೆಂಪು ಬಣ್ಣದಿಂದ ರಚಿಸಿದ ಚಿತ್ರಗಳಿಗೆ ಕಪ್ಪು ಬಣ್ಣದ ಹೊರ ರೇಖೆಗಳನ್ನು ರಚಿಸಿದೆ. ಇವು ರೇಖಾಕೃತಿಗಳಾಗಿರದೇ ಚಪ್ಪಟೆಯಾಗಿ ಬಣ್ಣತುಂಬಿದ ನೆರಳು ಚಿತ್ರಗಳಾಗಿವೆ. ಚಿತ್ರಗಳ ಒಳಭಾಗವನ್ನು ಕೆಂಪು ಬಣ್ಣದಿಂದ ತುಂಬಿದ್ದು ಕಪ್ಪು ಹೊರ ರೇಖೆ ಎಳೆಯಲಾಗಿದೆ. ಮೊದಲು ಹಿನ್ನಲೆಯಾಗಿ ಹಳದಿ ಲೇಪನ ಕೊಟ್ಟು ಅದರ ಮೇಲೆ ಕೆಂಪು ಬಣ್ಣದಿಂದ ರಚಿಸಿದ ಈ ಚಿತ್ರಗಳು ಸಹಿತ ಬಾದಾಮಿ ಚಾಲುಕ್ಯರ ಪ್ರಾರಂಭಿಕ ರಚನೆಗಳಾಗಿವೆ ಎನ್ನಬಹುದು. ಇದೇ ರೀತಿಯಲ್ಲಿ ರಚನೆಯಾದ ಇದೇ ಶೈಲಿಯನ್ನು ಹೋಲುವ ಯುದ್ಧ ಸೈನಿಕರ ಚಿತ್ರಗಳು ಈ ಮೊದಲೇ ಬಾದಾಮಿಯ ಉತ್ತರ ಕೋಟೆಯ ಶಿಲಾಶ್ರಯ ಒಂದರಲ್ಲಿ ಕಂಡುಹಿಡಿಯಲಾಗಿದ್ದು. ಅವುಗಳನ್ನು ಹಿಂದೆ ವಿವರಿಸಿದೆ. ಅದೇ ಶೈಲಿ, ವಸ್ತುವಿಷಯಗಳನ್ನು ಈ ಕುಟಕನಕೇರಿಯ ಚಿತ್ರಗಳೂ ಹೊಂದಿವೆ.

**II. ಬೈಲ ಮರ್ಚೇಡಿನ ಗುಹಾಚಿತ್ರ :** ರಾಯಚೂರು ಜಿಲ್ಲೆ ಮಾನ್ವಿ ತಾಲೂಕಿಗೆ ಸೇರಿದ ಒಂದುಸಣ್ಣ ಹಳ್ಳಿಯಾದ ಬೈಲಮರ್ಚೇಡದ ನೈರುತ್ಯಕ್ಕಿರುವ ಗುಡ್ಡಪ್ರದೇಶದಲ್ಲಿ, ಸ್ಥಳೀಯವಾಗಿ ಕಾಟಮಯ್ಯನಗುಂಡು ಎಂದು ಕರೆಯುವ ಒಂದು ಬೃಹತ್ ಶಿಲೆಯ ಚಾಚುಭಾಗದ ಒಳಮೈಯಲ್ಲಿ ಇತಿಹಾಸಕಾಲದ ವರ್ಣಚಿತ್ರಗಳು ಕಂಡುಬಂದಿವೆ. ಇಲ್ಲಿಯೂ ಬಾದಾಮಿಯ ಗುಹೆಗಳಂತೆ ಮೊದಲು ಬಂಡೆಗೆ ತೆಳುವಾದ ಹಳದಿ ಲೇಪನಕೊಟ್ಟು ಅದರ ಮೇಲೆ ಕೆಂಪು ಬಣ್ಣದಿಂದ ಚಿತ್ರಗಳನ್ನು ರಚಿಸಲಾಗಿದೆ. ಇಲ್ಲಿನ ಚಿತ್ರಗಳು ಎರಡು ಗುಂಪಿನಲ್ಲಿದ್ದು, ಮೊದಲನೆಯ ಗುಂಪಿನಲ್ಲಿ ಕುದುರೆ ಸವಾರರು ಮತ್ತು ಗೂಳಿಯ ಚಿತ್ರಗಳಿವೆ. ಒಬ್ಬ ಕುದುರೆ ಸವಾರನು ಎಡಗೈಯಲ್ಲಿ ಈಟಿಯನ್ನು ಹಿಡಿದುಕೊಂಡಿದ್ದು ಇನ್ನೊಂದು ಕೈಯಿಂದ ಕುದುರೆಯ ಕಡಿವಾಣವನ್ನು ಹಿಡಿದಿದ್ದಾನೆ. ತಲೆಗೆ ರಕ್ಷಣಾಕವಚ ಧರಿಸಿದ್ದು, ಇದು ಪೇಟದಂತೆ ಇದೆ. ಇದೇ ತರಹದ ಜೋಡಿ ಕುದುರೆ ಸವಾರರು ಪರಸ್ಪರ ಕಾದಾಡುತ್ತಿದ್ದು ಅವರ ಮಧ್ಯದಿಂದ ಎತ್ತರವಾದ ಇಣಿಯನ್ನು ಹೊಂದಿದ ಎರಡು ದನಗಳು ಓಡುತ್ತವೆ. ಮತ್ತೊಂದು ಗುಂಪಿನಲ್ಲಿ ಇಬ್ಬರು ಕುದುರೆ ಸವಾರರು ಕೈಗಳಲ್ಲಿ ಈಟಿ ಮತ್ತು ಕತ್ತಿಗಳನ್ನು ಹಿಡಿದುಕೊಂಡಿದ್ದು, ಇವರ ಮುಂದೆ, ಮಧ್ಯದಲ್ಲಿ ದನಗಳು ಗುಂಪುಗುಂಪಾಗಿ ಓಡುತ್ತಿವೆ. ಈ ದೃಶ್ಯ ಆಗಿನ ಕಾಲದಲ್ಲಿ ನಡೆಯುತ್ತಿದ್ದ ಗೋಗ್ರಹಣ ವಿಷಯ ನಿರೂಪಣೆ ಇರಬಹುದು ಎಂದು ಡಾ. ಅ. ಸುಂದರ ಅವರು[೯೭] ಅಭಿಪ್ರಾಯ

---

* ಡಾ. ಎಸ್. ಸಿ. ಪಾಟೀಲ ಮತ್ತು ಸಂಗಡಿಗರಾದ ಶ್ರೀ ಆನಂದ ಪೂಜಾರ, ಎಮ್. ಆಯ್. ಬಾರಾವಲಿ, ಬಾದಾಮಿ – ದಿನಾಂಕ ೫-೧೧-೨೦೦೦

೯೭. ಡಾ. ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಪುಟ ೫೮

ಪಡುತ್ತಾರೆ. ಇವೆರಡೂ ಗುಂಪು ಚಿತ್ರಗಳ ಬಲಬದಿಗೆ ಸ್ವಲ್ಪದೂರದಲ್ಲಿ ಮತ್ತೊಂದು ಬಂಡೆಯಮೇಲೆ ಅಂಗೈಗಳನ್ನು ಬಣ್ಣದಲ್ಲಿ ಅದ್ದಿ ಮೂಡಿಸಲಾದ ಅಚ್ಚು ಚಿತ್ರಗಳಿವೆ. ಕುದುರೆ ಸವಾರರ ಅದರಲ್ಲೂ ಕಾದಾಟದ ಚಿತ್ರಗಳು ೧೪ ರಿಂದ ೧೬ ನೇ ಶತಮಾನದ ವಿಜಯನಗರ ಶೈಲಿಯ ಸಾಲುಟ್ಟಿಕೆಗಳಲ್ಲಿಯ ಈ ತರಹದ ಶಿಲ್ಪಗಳಿಗೆ ಹೋಲುತ್ತವೆ. ಶೈಲಿ ಹಾಗೂ ಪಕ್ಕದಲ್ಲಿಯ ಮಧ್ಯಯುಗೀನ ಜನವಾಸ್ತವ್ಯದ ನೆಲೆಯನ್ನು ಗಮನಿಸಿದಾಗ ಈ ಚಿತ್ರಗಳು ಸ್ವಲ್ಪ ಹೆಚ್ಚು ಕಡಿಮೆ ಅದೇ ಕಾಲದ್ದೆಂದು ಹೇಳಬಹುದು ಎಂದು ಅ. ಸುಂದರ ಅವರು[೯೮] ಅಭಿಪ್ರಾಯ ಪಡುತ್ತಾರೆ. ಆದರೆ ಚಿತ್ರರಚನಾ ವಿಧಾನ ನೋಡಿದಾಗ. ಮೊದಲು ಬಂಡೆಗೆ ಹಳದಿಮಿಶ್ರಿತ ಜಿಗುಟು ಮಣ್ಣು ಲೇಪಿಸಿ ಅದರ ಮೇಲೆ ಕೆಂಪು ಬಣ್ಣದಿಂದ ಚಿತ್ರ ರಚನೆಮಾಡಿದ್ದು ಕಂಡುಬರುವುದು. ಇಂತಹ ಹಳದಿಲೇಪನದ ಮೇಲೆ ಕೆಂಪು ಬಣ್ಣದಿಂದ ಚಿತ್ರರಚನೆ ಮಾಡಿರುವುದು ಬಾದಾಮಿಯ ಚಾಲುಕ್ಯ ಪೂರ್ವದ ಚಿತ್ರಗಳಲ್ಲಿಯೂ ಕಂಡುಬರುವುದು. ಅಲ್ಲದೇ ಬಾದಾಮಿಯ ಸುತ್ತಲಿನ ಸ್ವಾಭಾವಿಕ ಗುಹೆಗಳಲ್ಲಿ ಹೀಗೆ ಹಳದಿ ಲೇಪನಮಾಡಿ ಕೆಂಬಣ್ಣದಿಂದ ಚಿತ್ರರಚಿಸಿದ ನಾಲ್ಕೈದು ಉದಾಹರಣೆ ದೊರೆಯುತ್ತವೆ. ಈಗಾಗಲೇ ಹೇಳಲಾಗಿರುವ ಉತ್ತರ ಬೆಟ್ಟದ ಎರಡು, ಮಾಲಗಿತ್ತಿ ದೇವಾಲಯದ ಎದುರಿನ ಒಂದು ಗುಹೆಯಲ್ಲದೇ ಇತ್ತೀಚೆಗೆ ಡಾ. ಎಸ್. ಸಿ. ಪಾಟೀಲ್[೯೯] ಅವರು ಕುಟಕನಕೇರಿ ಸಮೀಪ ಮತ್ತೊಂದು ಯುದ್ಧ ಸೈನಿಕರ ಸಮೂಹದ ಗುಹಾಚಿತ್ರವನ್ನು ಪತ್ತೆಮಾಡಿದ್ದು. ಅಲ್ಲಿಯೂ ಹಳದಿ ಹಿನ್ನೆಲೆ ಲೇಪನವ ಮೇಲೆ ಕೆಂಪು ಬಣ್ಣದಿಂದ ಸೈನಿಕರ ಚಿತ್ರಬಿಡಿಸಲಾಗಿದೆ. ಹಾಗಾಗಿ ಹಳದಿ ಲೇಪನದ ಮೇಲೆ ಕೆಂಪು ಬಣ್ಣದಿಂದ ಬರೆದ ಸ್ವಾಭಾವಿಕ ಗುಹೆಯ ಭಿತ್ತಿಚಿತ್ರಗಳು ಬಹುಶ ಚಾಲುಕ್ಯರ ಪ್ರಾರಂಭಿಕ ಕಾಲದ ಚಿತ್ರಗಳಾಗಿರುವ ಸಾಧ್ಯತೆಗಳಿವೆ. ಈ ಕುರಿತು ಇನ್ನೂ ಹೆಚ್ಚಿನ ಅಧ್ಯಯನ ನಡೆಯಬೇಕಾಗಿದೆ.

**III. ಬಲಚಕ್ರದ ಗುಹಾಚಿತ್ರ :** ಗುಲಬರ್ಗಾ ಜಿಲ್ಲೆ ಯಾದಗಿರಿ ತಾಲೂಕಿನ ಬಲಚಕ್ರ ಎಂಬಲ್ಲಿನ ಗುಡ್ಡದಲ್ಲಿ ಒಂದು ವಿಸ್ತಾರವಾದ ಬಂಡೆಯ ಬಾಗಿದ ಒಳಮೈಯಲ್ಲಿ[೧೦೦] ಇತಿಹಾಸ ಕಾಲದ ವರ್ಣಚಿತ್ರಗಳಿವೆ. ಕೆಂಪು ವರ್ಣದಲ್ಲಿ ರಚಿಸಲಾದ ಈ ಚಿತ್ರಗಳನ್ನು ಚಾಲುಕ್ಯ ಮತ್ತು ಚಾಲುಕ್ಯ ನಂತರ ಹೀಗೆ ಎರಡು ಕಾಲಮಾನಗಳಿಗೆ ಸೇರಿದವುಗಳೆಂದು ಅ. ಸುಂದರ ಅವರು ವಿಂಗಡಿಸುತ್ತಾರೆ. ಇಲ್ಲಿ ಮನುಷ್ಯ ಚಿತ್ರಗಳು, ಪ್ರಾಣಿಚಿತ್ರಗಳು, ಕಮಲದ ಹೂ, ಹಾಗೂ ಕೆಲವು ಅಸ್ಪಷ್ಟ ರೇಖಾಕೃತಿಗಳಿವೆ. ಇಲ್ಲಿನ ಕೆಲವು ಮನುಷ್ಯ ಚಿತ್ರಗಳಲ್ಲಿ ಚೌಕವಾದ ಮುಖ, ಆಯತಾಕಾರದ ದೇಹ ಅದರೊಳಗೆ ವಜ್ರಾಕೃತಿಯ ರೇಖಾಚಿತ್ರ ಕಂಡುಬರುವುದು ಇದು ಬಹುಶ ಶರೀರದ ಅಂಗರಚನಾ ಶಾಸ್ತ್ರವನ್ನು ಪ್ರತಿನಿಧಿಸುವ ಸಾಂಕೇತಿಕ ಚ್ರಿವಾಗಿರಬಹುದು. ವಜ್ರಾಕೃತಿಯಲ್ಲಿ ಚಿತ್ರಸಿರುವ ರೇಖಾ ಚಿತ್ರವು ದೇಹದಲ್ಲಿನ ಬೆನ್ನುಹುರಿಯ ಎಲುಬಿನ ವಿನ್ಯಾಸವಲ್ಲಿದೆ ಎನ್ನುವುದು ಗಮನಾರ್ಹ ಅಂಶ. ಆಯತಾಕಾರದ ದೇಹಕ್ಕೆ ದಪ್ಪನಾದ ಕೈಕಾಲುಗಳು ರಚಿಸಿದ್ದು ಇವು ನೈಜತೆಯನ್ನು ಬಿಂಬಿಸುತ್ತವೆ. ಮತ್ತೆ ಕೆಲವು ಮನುಷ್ಯ ಚಿತ್ರಗಳನ್ನು ದಪ್ಪನಾದ ರೇಖೆಯಿಂದ ಕಡ್ಡಿಮಾನವರ ಹಾಗೆ ರಚಿಸಿದ್ದು. ತಲೆಯನ್ನು ಗುಂಡಾಗಿ ರಚಿಸಲಾಗಿದೆ. ಪ್ರಾಣಿಚಿತ್ರಗಳಲ್ಲೂ ಮೈತುಂಬ ರೇಖಾ ಚಿತ್ರ ಬಿಡಿಸಿದ್ದು ದೇಹದ ಅಂಗರಚನಾ ವಿನ್ಯಾಸವನ್ನು ಸಾಂಕೇತಿಸುತ್ತಿರಬಹುದು. ಕೆಲವು ಮನುಷ್ಯ ಚಿತ್ರಗಳಲ್ಲಿ ಮರ್ಮಾಂಗವನ್ನು ತೋರಿಸಿದ್ದು ಅವು ದೃಢವಾದ ತೊಡೆಗಳನ್ನು ಹೊಂದಿದ್ದು ಆಕಾರದಲ್ಲಿ ಕುಳ್ಳವಾಗಿವೆ. ಮತ್ತೆ ಕೆಲವು ಚಿತ್ರಗಳು ಬದಿಯ ನೋಟ

---

೯೮. ಡಾ. ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ. ಪುಟ ೨೯

೯೯. ಡಾ. ಎಸ್. ಸಿ. ಪಾಟೀಲ ಮತ್ತು ಆನಂದ ಪೂಜಾರ. ಎಮ್. ಆಯ್. ಬರಾವಲಿ : ಇತಿಹಾಸಕಾಲದ ಅಪೂರ್ವ ವರ್ಣ ಚಿತ್ರಗಳು ಅಪ್ರಕಟಿತ ಲೇಖನದ ಸಹಾಯವನ್ನು ಕೃತಜ್ಞತೆಯಿಂದ ಪಡೆಯಲಾಗಿದೆ.

೧೦೦. ಡಾ. ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ. ಪುಟ ೨೯

ತೋರಿಸುತ್ತಿದ್ದು ಕಾಲಿನ ಪಾದಗಳನ್ನು ಮತ್ತು ಅಂಗೈಗಳನ್ನು ಚಿತ್ರಿಸಿಲ್ಲ. ಇನ್ನೊಂದು ಬಗೆಯಲ್ಲಿರುವ ಮನುಷ್ಯರ ಚಿತ್ರಗಳು ಉಬ್ಬಿದ ಹೊಟ್ಟೆಯಲ್ಲಿದ್ದು ಕೈಗಳೆರಡನ್ನೂ ಮೇಲಕ್ಕೆತ್ತಿಕೊಂಡು ನಿಂತಿವೆ. ಪ್ರಾಣಿಚಿತ್ರಗಳಲ್ಲಿ ಗಬ್ಬದ ಹಸು, ಕವಲು ಕೋಡಿನ ಜಿಂಕೆ, ಕೊಬ್ಬಿದಂತಿರುವ ಹಂದಿಯರೂಪಗಳು ನೈಜತೆಯ ಚಿತ್ರಗಳಾಗಿವೆ. ಹಂದಿಯ ಮೈಮೇಲೆ ರೇಖಾಕೃತಿಯ ವಿನ್ಯಾಸಗಳಿವೆ. ಇವುಗಳನ್ನುಳಿದ ರೇಖಾಚಿತ್ರಗಳಲ್ಲಿ ಪರಸ್ಪರ ಛೇದಿಸಿದ ಅಧಿಕ ಚಿಹ್ನೆಯಂತಿರುವ ವಿನ್ಯಾಸ, ಆಯತ, ಚೌಕಗಳು, ಕೋನಾಕೃತಿಯ ನಕ್ಷೆಗಳು, ಒಂದೇ ಕೋಲಿಗೆ ಎರಡೂ ಕಡೆಗೆ ಕಟ್ಟಲಾದ ಬಾವುಟದ ಚಿತ್ರಗಳು ಇಲ್ಲಿವೆ. ಇಲ್ಲಿನ ಕೆಲವು ಚಿತ್ರಗಳು ಚಾಲುಕ್ಯಪೂರ್ವ ಮತ್ತು ಚಾಲುಕ್ಯ ಕಾಲದವುಗಳು[೧೦೧] ಎನ್ನುವ ಅಭಿಪ್ರಾಯ ಹೆಚ್ಚು ಯೋಗ್ಯವೆನ್ನಬಹುದು.

**IV. ಮಾನ್ವಿಯ ಗುಹಾ ಚಿತ್ರ :** ರಾಯಚೂರು ಜಿಲ್ಲೆಯ ತಾಲೂಕು ಕೇಂದ್ರವಾದ ಮಾನ್ವಿಯ ಊರಿನ ಪಶ್ಚಿಮಕ್ಕೆ ರಂಗೋಲಿ ಗುಹೆ ಎಂದು ಕರೆಯುವ ನೈಸರ್ಗಿಕ ಶಿಲಾಶ್ರಯದಲ್ಲಿ[೧೦೨] ವರ್ಣಚಿತ್ರಗಳಿವೆ. ಮೊದಲು ಬಂಡೆಗೆ ಬಿಳಿಬಣ್ಣವನ್ನು ಲೇಪಿಸಿ ಅದರ ಮೇಲೆ ಕೆಂಪು ಬಣ್ಣದಿಂದ ಚಿತ್ರಗಳನ್ನು ರಚಿಸಲಾಗಿದೆ. ಉದ್ದವಾದ ಪಟ್ಟಿಕೆಯನ್ನು ಮಾಡಿಕೊಂಡು ಅದರಲ್ಲಿ ಸಾಲಾಗಿ ಚಿತ್ರಗಳನ್ನು ಬರೆದಿದ್ದಾರೆ. ಚಿತ್ರಗಳು ಅತ್ಯಂತ ಮಸುಕಾಗಿರುವುದರಿಂದ ಚಿತ್ರದ ವಸ್ತು ವಿಷಯವನ್ನು ಗುರುತಿಸಲು ತೊಂದರೆಯಾಗುತ್ತದೆ. ಪೌರಾಣಿಕ ಕಥಾನಕಗಳಿಗೆ ಸಂಬಂಧಿಸಿದ ಚಿತ್ರಗಳಾಗಿದ್ದು ವಿಜಯನಗರ ಕಾಲಕ್ಕೆ ಸೇರುತ್ತವೆ[೧೦೩] ಎನ್ನುವ ಅಭಿಪ್ರಾಯವಿದ್ದರೂ ಮೆರವಣಿಗೆಯೊಂದರ ದೃಶ್ಯಗಳಾಗಿವೆ.

ಈ ರೀತಿಯಲ್ಲಿ ಸ್ವಾಭಾವಿಕ ಗುಹೆಗಳಲ್ಲಿ ಕಂಡುಬರುವ ಶಿಷ್ಟ ಸಂಪ್ರದಾಯದ ಭಿತ್ತಿಚಿತ್ರಗಳು ಮುಂದಿನ ಮಾನವ ನಿರ್ಮಿತ ಕೊರೆದ ಗುಹಾ ಭಿತ್ತಿ ಚಿತ್ರಗಳಿಗೆ ಪ್ರಯೋಗಾಲಯಗಳಾಗಿದ್ದವು ಎನ್ನಬಹುದು. ಕೊರೆದ ಗುಹಾಲಯಗಳಲ್ಲಿ ಭಿತ್ತಿ ಚಿತ್ರರಚನೆ ಮಾಡುವ ಪೂರ್ವದಲ್ಲಿ ಕಲಾವಿದರು ಮೊದಲು ಇಂತಹ ಸ್ವಾಭಾವಿಕ ಗುಹೆಯಲ್ಲಿ ಪ್ರಯೋಗ ಮಾಡಿ ಅದರ ಪರಿಣಾಮವನ್ನು ಕಂಡುಕೊಂಡು ನಂತರ ಕೊರೆದ ಗುಹೆಗಳಲ್ಲಿಚಿತ್ರಿಸಿರುವ ಸಾಧ್ಯತೆಯನ್ನೂ ತಳ್ಳಿಹಾಕುವಂತಿಲ್ಲ. ವಿಷ್ಣು ಧರ್ಮೋತ್ತರ ಗ್ರಂಥವು ಭಿತ್ತಿ ಚಿತ್ರರಚನೆಗೆ ತೊಡಗಿದಾಗ ಭಿತ್ತಿ ನಿರ್ಮಿಸುವುದು, ರೇಖಾ ಚಿತ್ರರಚಿಸುವುದು, ವರ್ಣ ಲೇಪನ, ಹೊರರೇಖೆ ಎಳೆಯುವುದು ಇಂತಹ ಎಲ್ಲ ಕ್ರಮಗಳನ್ನು ಮೊದಲು ಬೇರೆ ಕಡೆಗೆ ಪ್ರಯೋಗಮಾಡಿ ಅದು ಸರಿಕಂಡಲ್ಲಿ ಮಾತ್ರ ಮುಖ್ಯ ಭಿತ್ತಿಯಲ್ಲಿ ರಚಿಸಬೇಕೆಂದು ತಿಳಿಸುತ್ತದೆ. ಭಿತ್ತಿ ಚಿತ್ರರಚಿಸುವ ಸ್ಥಳದ ಪಕ್ಕದಲ್ಲಿ ಇನ್ನೊಂದು ಪ್ರಯೋಗಾರ್ಥ ಭಿತ್ತಿಯನ್ನು ಲೇಪಿಸಿಕೊಂಡು ಅದರಲ್ಲಿ ಮೊದಲು ಎಲ್ಲವನ್ನೂ ಪರೀಕ್ಷಿಸಬೇಕೆಂದು ಹೇಳುತ್ತದೆ. ಹಾಗಾಗಿ ಶಿಷ್ಟ ಪರಂಪರೆಯ ಭಿತ್ತಿ ಚಿತ್ರಗಳ ಪ್ರಯೋಗಾರ್ಥ ರಚನೆಗಳೆಂದೂ ಇವುಗಳನ್ನು ಪರಿಗಣಿಸಬಹುದಾಗಿದೆ. ಬಾದಾಮಿ ಸುತ್ತಲಿನ ಗುಡ್ಡಗಳಲ್ಲಿಯ ಶಿಷ್ಟಚಿತ್ರಗಳು ಚಾಲುಕ್ಯರ, ಮತ್ತು ಗಂಗಾವತಿ, ಮಾನ್ವಿ, ರಾಯಚೂರು ಭಾಗದ ಗುಡ್ಡಗಳ ಶಿಷ್ಟ ಪರಂಪರೆಯ ಚಿತ್ರಗಳು ವಿಜಯನಗರ ಕಾಲದ ಪ್ರಯೋಗಾರ್ಥ ರಚನೆಗಳೆಂದು ಹೇಳಬಹುದಾಗಿದೆ. ಈ ನಿಟ್ಟಿನಲ್ಲಿ ಇನ್ನೂ ಹೆಚ್ಚಿನ ಅಧ್ಯಯನವಾಗಬೇಕು.

ಸ್ವಾಭಾವಿಕ ಗುಹೆಯಲ್ಲಿ ರಚನೆಯಾದ ಶಿಷ್ಟ ಭಿತ್ತಿಚಿತ್ರಗಳಲ್ಲಿ ಬಾದಾಮಿಯಲ್ಲಿ ರಾಣಿಯರು, ಯುದ್ಧ ಸೈನಿಕರು, ಕುಟಕನಕೇರಿಯಲ್ಲಿ ಯುದ್ಧ ಸೈನಿಕರು, ಬೈಲಮರ್ಚೇಡಿನಲ್ಲಿ ಕುದುರೆ ಸವಾರರು (ಸೈನಿಕರು), ದನಗಳು, ಮಾನ್ವಿಯಲ್ಲಿ

೧೦೧. ಡಾ. ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಪುಟ ೩೭

೧೦೨. ಡಾ. ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಪುಟ ೩೭

೧೦೩. ಡಾ. ಅ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಪುಟ ೩೭

ಮೆರವಣಿಗೆ ದೃಶ್ಯ ಬಲಚಕ್ರದಲ್ಲಿ ಮಾನವಾಕೃತಿಗಳು ಮತ್ತು ಪ್ರಾಣಿಗಳು ಕಂಡುಬಂದಿದ್ದು ಹೆಚ್ಚಿನ ವೈವಿಧ್ಯತೆ ಇಲ್ಲ. ರಚನಾ ವಿಧಾನದಲ್ಲಿಯೂ ತೆಳುವಾದ ಭಿತ್ತಿ ಲೇಪಿಸಿ, ತೆಳುಹಿನ್ನಲೆ ಕೊಟ್ಟು ರಚಿಸಿದಂತಹ ಸರಳ ವಿಧಾನ ಅನುಸರಿಸಿದೆ. ಇಂತಹ ಕೆಲವು ಅಂಶಗಳಿಂದ ಇವು ಪ್ರಯೋಗಾರ್ಥ ರಚನೆಗಳೆಂದು ಹೇಳಬಹುದು. ಈ ಸ್ವಾಭಿವಿಕ ಗುಹಾ ಭಿತ್ತಿ ಚಿತ್ರಗಳಲ್ಲಿ ಚಿತ್ರಗಳನ್ನು ಸಂಯೋಜನೆಗೊಳಪಡಿಸುವ ಪ್ರಯತ್ನ ಕಾಣಬಹುದು. ಆದರೆ ಹಿನ್ನೆಲೆಯಲ್ಲಿ ಪೂರಕವಾದ ಸ್ಥಳನಿರ್ದೇಶನದ ಪರಿಕಲ್ಪನೆ ಇಲ್ಲಿಲ್ಲ. ಮುಂದಿನ ಮಾನವ ನಿರ್ಮಿತ ಗುಹಾಭಿತ್ತಿ ಚಿತ್ರಗಳಿಗೆ ಇವು ತಳಹದಿಯಾಗಿವೆ.

### ೨. ಮಾನವ ನಿರ್ಮಿತ ಗುಹೆಗಳಲ್ಲಿರುವ ಭಿತ್ತಿ ಚಿತ್ರಕಲೆ

ಏಕ ಶಿಲೆಯಲ್ಲಿ ಕೊರೆದು ನಿರ್ಮಿಸಿದ ಗುಹೆಗಳನ್ನು ಮಾನವ ನಿರ್ಮಿತ ಗುಹೆಗಳೆಂದು ಇಲ್ಲಿ ಪರಿಗಣಿಸಿದೆ. ಭಾರತದಂತೆ ಚೀನಾ. ಜಪಾನ್. ಬರ್ಮಾ. ಶ್ರೀಲಂಕಾ. ಅಫಘಾನಿಸ್ತಾನ. ತುರ್ಕಸ್ಥಾನ ಮೊದಲಾದ ದೇಶಗಳಲ್ಲಿ ಶಿಷ್ಟ ಪರಂಪರೆಯ ಭಿತ್ತಿ ಚಿತ್ರಕಲೆಯ ಮೊದಲ ನಿದರ್ಶನಗಳು ಮಾನವ ನಿರ್ಮಿತ ಕೊರೆದ ಗುಹೆಗಳಲ್ಲೇ ಕಂಡುಬಂದಿವೆ. ಸ್ವಾಭಾವಿಕ ಗುಹೆ. ಶಿಲಾಶ್ರಯ ತಾಣಗಳಲ್ಲಿ ಭಿತ್ತಿ ಚಿತ್ರರಚನೆ ಮಾಡುತ್ತಿದ್ದ ಮಾನವ ಇತಿಹಾಸ ಪ್ರಾರಂಭಕಾಲಕ್ಕೆ ಬಂದಂತೆ ಇವುಗಳ ಜೊತೆಗೇ ಕಲ್ಲಿನಲ್ಲಿ ಕೊರೆದು ನಿರ್ಮಿಸಿದ ಗುಹೆಗಳಲ್ಲೂ ಚಿತ್ರರಚನೆ ಪ್ರಾರಂಭಿಸಿದನು. ಇತಿಹಾಸಕಾಲದಲ್ಲೂ ಸ್ವಾಭಾವಿಕ ಗುಹೆಗಳಲ್ಲಿ ಚಿತ್ರರಚನೆ ನಡೆದಿದ್ದರೂ ಅದರ ಪ್ರಮಾಣ ಕಡಿಮೆ ಎನ್ನಬಹುದು. ಮಾನವನು ಶಿಲಾಶ್ರಯ ತಾಣಗಳು. ಶಿಲಾಗುಹೆಗಳ ವಾಸವನ್ನು ಬಿಟ್ಟು ಬಯಲು ಪ್ರದೇಶಕ್ಕೆ ಬಂದು ನೆಲೆಸಿದಾಗ ಆತನ ಜೀವನ ವಿಧಾನವೂ ಬದಲಾಯಿತು. ಅದಕ್ಕನುಗುಣವಾಗಿ ಚಿತ್ರರಚನಾ ನೆಲೆಗಳನ್ನು ಆಯ್ದುಕೊಳ್ಳುವ ಹವ್ಯಾಸದಲ್ಲಿಯೂ ಬದಲಾವಣೆ ಕಂಡಿತು.

ಇತಿಹಾಸ ಪ್ರಾರಂಭಕಾಲಕ್ಕೆ ಬಂದಂತೆ ಚಿತ್ರರಚನಾ ವಿಧಿವಿದಾನಗಳಲ್ಲಿ ಶಾಸ್ತ್ರೀಯ ಪದ್ಧತಿಗಳು ಬೆಳೆದುಬಂದಂತೆ ಚಿತ್ರರಚನೆಗಾಗಿ ನೆಲೆಗಳನ್ನು ಆಯ್ದುಕೊಳ್ಳುವ ಕ್ರಮದಲ್ಲಿ ಬದಲಾವಣೆ ಉಂಟಾಯಿತು. ಎನ್ನಬಹುದು. ಈ ಮೊದಲು ಸ್ವಾಭಾವಿಕವಾಗಿರುವ ಶಿಲಾಗುಹೆಗಳು ಮತ್ತು ಶಿಲಾಶ್ರಯ ತಾಣಗಳನ್ನು ಚಿತ್ರರಚನೆಗಾಗಿ ಬಳಸಿಕೊಳ್ಳುತ್ತಿದ್ದರೆ ಈ ಘಂತದಲ್ಲಿ ಬೃಹತ್ ಬಂಡೆಗಳನ್ನು ಅಥವಾ ಏಕಶಿಲಾ ಬೆಟ್ಟಗಳನ್ನು ಕೊರೆದು ಗುಹೆಗಳಾಗಿ ಮಾರ್ಪಡಿಸಿಕೊಂಡು ಅವುಗಳಲ್ಲಿ ಚಿತ್ರರಚನೆಯನ್ನು ಪ್ರಾರಂಭಿಸಿದರು. ಈ ಸಮಯಕ್ಕೆ ರಾಜವಂಶಗಳು ಧಾರ್ಮಿಕ ಪಂಗಡಗಳು ಹುಟ್ಟಿಕೊಂಡಿದ್ದು. ತಾವು ಅನುಸರಿಸುತ್ತಿದ್ದ ಧರ್ಮ ಪ್ರಚಾರಾರ್ಥವಾಗಿ ಭಿತ್ತಿತ್ರಕಲೆಯನ್ನು ಬಳಸಿಕೊಂಡರು. ಅದಕ್ಕಾಗಿ ಅವರು ಇಂತಹ ಕಲ್ಲಿನಲ್ಲಿ ಕೊರೆದ ಗುಹೆಗಳನ್ನು ಆಯ್ದುಕೊಂಡರು.

ಬೌದ್ಧರು ಚೈತ್ಯವಿಹಾರಗಳಾಗಿಯೂ. ಹಿಂದೂಗಳು ದೇವಾಲಯಗಳಾಗಿಯೂ, ಜೈನರು ಬಸದಿಗಳಾಗಿಯೂ ಇಂತಹ ಕೊರೆದ ಗುಹೆಗಳನ್ನು ನಿರ್ಮಿಸಿ ಅವುಗಳಲ್ಲಿ ಚಿತ್ರಬರೆಸಿದರು. ಈ ಕಾಲಕ್ಕಾಗಲೇ ಭಿತ್ತಿ ಚಿತ್ರರಚನಾ ಪ್ರಕ್ರಿಯೆಯಲ್ಲಿ ಆಧಾರಕ್ಕೆ (ಬಂಡೆಗೆ) ಮಿಶ್ರಣ ಲೇಪಿಸಿ ಅದರ ಮೇಲೆ ಚಿತ್ರರಚಿಸುವ ವಿಧಾನ ಬೆಳೆದು ಬಂದಿತ್ತು ಎಂಬುದು ಅನೇಕ ಪ್ರಾಚೀನ ಕೊರೆದ ಗುಹಾ ಚಿತ್ರಗಳನ್ನು ನೋಡಿ ಹೇಳಬಹುದಾಗಿದೆ. ಮಿಶ್ರಣ ಲೇಪಿಸಲು ಸ್ವಾಭಾವಿಕ ಬಂಡೆಗಿಂತ. ಬಂಡೆಯನ್ನು ಕೊರೆದ ಸಮತಟ್ಟಾದ ಮೇಲ್ಮೈಯು ಹೆಚ್ಚು ಅನುಕೂಲಕರವಾಗಿರುವುದು ಮಾತ್ರವಲ್ಲದೇ ಮಿಶ್ರಣವನ್ನು (ಭಿತ್ತಿ) ಸಮತಟ್ಟಾಗಿ ಲೇಪಿಸಿದ ನಂತರ ಅದರ ಮೇಲೆ ಪ್ರಾರಂಭಿಕ ರೇಖಾಚಿತ್ರ ರಚನೆ, ವರ್ಣವಿನ್ಯಾಸ. ನಂತರದ ಹೊರರೇಖೆ ಎಳೆಯುವುದು ಹೀಗೆ ಚಿತ್ರರಚನೆಯ ಎಲ್ಲ ಪ್ರಕ್ರಿಯೆಗಳು ಸರಾಗವಾಗಿ ಸುಲಲಿತವಾಗಿ

ನಡೆಯುತ್ತವೆ ಎಂಬುವುದೂ ಮತ್ತೊಂದು ಕಾರಣವಾಗಿರಬಹುದು. ಅದಾಗಲೇ ಧಾರ್ಮಿಕ ಸ್ವರೂಪವನ್ನು ಪಡೆದುಕೊಂಡಿದ್ದ ಭಿತ್ತಿಚಿತ್ರಕಲೆ ಧಾರ್ಮಿಕ ಚಟುವಟಿಕೆಯ ಸ್ಥಾನಗಳಾಗಿದ್ದ ಇಂತಹ ಗುಹಾಲಯಗಳಲ್ಲೇ ಪ್ರಮುಖವಾಗಿ ರಚನೆಗೊಳ್ಳತೊಡಗಿದ್ದುದೂ ಒಂದು ಅಂಶ. ಹೀಗೆ ಹಲವು ಕಾರಣಗಳಿಂದಾಗಿ ಬಂಡೆಯಲ್ಲಿ ಕೊರೆದ ಗುಹೆಗಳಲ್ಲಿ ಭಿತ್ತಿ ಚಿತ್ರರಚನೆ ಹೆಚ್ಚು ಒಲವು ಗಳಿಸಿಕೊಂಡಿತು. ಬಂಡೆಯಲ್ಲಿ ಕೊರೆದ ಗುಹಾಲಯಗಳಲ್ಲಿ ರಚನೆಯಾದ ಪ್ರಾಚೀನ ಭಿತ್ತಿಚಿತ್ರಗಳು ಪ್ರಪಂಚದ ಅನೇಕ ಕಡೆಗಳಲ್ಲಿ ಕಂಡುಬಂದಿವೆ. ಅವುಗಳಲ್ಲಿ ಶ್ರೀಲಂಕಾದ ಸಿಗೇರಿಯಾ, ಜಪಾನಿನ ಹೊರ್ಯುಜಿ, ಚೀನಾದ ಟುನ್‌ಹಂಗ್, ಅಫಘಾನಿಸ್ತಾನದ ಬಾಮಿಯಾನ್, ತುರ್ಕಸ್ಥಾನದ ದಂಡನ್ ಉಲಿಕ್, ಜರ್ಮಾ ದೇಶದ ನಾರಿಖಿತ್ ಮತ್ತು ಕೊಂಡ್ವಗಿ[೧೦೪] ಮುಂತಾದ ಸ್ಥಳಗಳಲ್ಲಿನ ಭಿತ್ತಿ ಚಿತ್ರಗಳು ಪ್ರಮುಖವಾಗಿವೆ. ಭಾರತದ ಅಜಂತಾ, ಎಲ್ಲೋರಾ, ಸಿತ್ತನಿವಾಸಲ್, ಎಲಿಫೆಂಟಾ, ಬಾಘ್, ಮುಂತಾದ ಕಡೆಗಳಲ್ಲಿ ಕಲ್ಲಿನಲ್ಲಿ ಕೊರೆದ ಗುಹಾಲಯಗಳಲ್ಲಿ ಭಿತ್ತಿ ಚಿತ್ರಗಳು ಕಂಡುಬಂದಿವೆ. ಭಾರತದಲ್ಲಿ ಶಾಸ್ತ್ರೀಯ ವಿಧಾನದ (ಶಿಷ್ಟಪರಂಪರೆಯ) ಅತ್ಯಂತ ಪ್ರಾಚೀನ ಭಿತ್ತಿಚಿತ್ರಗಳು ಕೊರೆದ ಗುಹೆಗಳಲ್ಲೇ ಕಂಡುಬಂದಿವೆ. ಕ್ರಿ. ಪೂ. ೨ ನೇ ಶತಮಾನದಷ್ಟು ಪೂರ್ವದಲ್ಲೇ ಅಜಂತಾವಲ್ಲಿನ ಕೊರೆದ ಗುಹೆಗಳಲ್ಲಿ ಚಿತ್ರರಚನೆ ನಡೆಯುತ್ತಿತ್ತೆಂದು ವಿದ್ವಾಂಸರು ತರ್ಕಿಸಿದ್ದಾರೆ.

ಹಾಗೆಯೇ ಕರ್ನಾಟಕದಲ್ಲೂ ಶಾಸ್ತ್ರೀಯ ವಿಧಾನದ (ಶಿಷ್ಟಪರಂಪರೆಯ) ಭಿತ್ತಿ ಚಿತ್ರಗಳು ಬದಾಮಿ ಮತ್ತು ಐಹೊಳೆಯ ಕೊರೆದ ಗುಹೆಗಳಲ್ಲಿ ಕಂಡುಬಂದಿವೆ. ಚಾಲುಕ್ಯರ ಕಾಲದಲ್ಲಿ ಈ ಶಿಲಾಗುಹೆಗಳನ್ನು ಕೊರೆದು ಅದರಲ್ಲಿ ಚಿತ್ರ ರಚಿಸಲಾಗಿದೆ. ಬದಾಮಿಯ ವೈಷ್ಣವ ಗುಹೆಯಲ್ಲಿ ಅಲ್ಪಸ್ವಲ್ಪ ಚಿತ್ರಗಳು ಉಳಿದಿದ್ದರೆ ಐಹೊಳೆಯ ರಾವಣಫಡಿ ಗುಹೆಯ ಚಿತ್ರಗಳು ಸಂಪೂರ್ಣ ಅಳಿಸಿಹೋಗಿ ಬಣ್ಣದ ಲೇಪನದ ಕುರುಹುಗಳನ್ನು ಮಾತ್ರ ಊಹಿಸಬಹುದಾಗಿದೆ.

ಉತ್ತರ ಕರ್ನಾಟಕದ ಕೊರೆದ ಗುಹಾಲಯದಲ್ಲಿ ಕಂಡುಬರುವ ಭಿತ್ತಿಚಿತ್ರ ನೆಲೆಗಳು :

I. ಐಹೊಳೆಯ ರಾವಣಫಡಿ ಗುಹಾಲಯ

II. ಬಾದಾಮಿಯ ವೈಷ್ಣವ ಗುಹಾಲಯ

**I. ಐಹೊಳೆಯ ರಾವಣಫಡಿ ಗುಹಾಲಯ :** ಬಾದಾಮಿಯ ಉತ್ತರ ಬೆಟ್ಟದಲ್ಲಿರುವ ಶಿಲಾಶ್ರಯವರ್ಣ ಚಿತ್ರಗಳ ರಚನೆಯ ಮುಂದುವರಿಕೆಯಾಗಿ ಮತ್ತು ಮಾಲಗಿತ್ತಿ ಶಿವಾಲಯದ ಮುಂದಿನ ಬತೇರಿಯ ಕೆಳಗಿರುವ ಶಿಲಾಶ್ರಯ ವರ್ಣಚಿತ್ರದ ಪರಿಷ್ಕೃತ ರೂಪವಾಗಿ ಐಹೊಳೆಯ ರಾವಣಫಡಿ ಗುಹಾಲಯದಲ್ಲಿ ಭಿತ್ತಿ ಚಿತ್ರಗಳು ಕಂಡುಬರುತ್ತವೆ. ರಾವಣಫಡಿ ಗುಹಾಲಯದ ಭಿತ್ತಿ ಚಿತ್ರಗಳ ಬಗೆಗೆ ಜೆ. ಸಿ. ನಾಗಪಾಲ ಅವರು[೧೦೫] ಸೂಚನೆ ಕೊಡುತ್ತಾರಾದರೂ ಚಿತ್ರಗಳ ವಸ್ತುವಿಷಯವನ್ನು ಸರಿಯಾಗಿ ಗುರುತಿಸದೇ ಕೆಲವು ಹಾರುತ್ತಿರುವ ಆಕೃತಿಗಳು ಮಸುಕಾಗಿ ಕಂಡುಬರುತ್ತವೆ ಎಂದು ಹೇಳುತ್ತಾರೆ. ಮುಂದೆ ಇವುಗಳನ್ನು ಮತ್ತೆ ಸರಿಯಾಗಿ ಗುರುತಿಸಿದ ಶೀಲಾಕಾಂತ ಪತ್ತಾರ ಅವರು[೧೦೬] ಇದೊಂದು ಯುದ್ಧದ ದೃಶ್ಯವಾಗಿದ್ದು ಸೈನಿಕರ ಚಿತ್ರಗಳು ಇಲ್ಲಿವೆ ಎಂದು ವಿವರಿಸುತ್ತಾರೆ. ರಾವಣಫಡಿ ಗುಹೆಯು ಕ್ರಿ. ಶ. ೬ ನೇ ಶತಮಾನದ ಮಧ್ಯಕಾಲದಲ್ಲಿ ರಚನೆಯಾಗಿ ಭಿತ್ತಿಚಿತ್ರಗಳೂ ಅದೇ ಸಮಯದಲ್ಲಿ ಬರೆಸಲ್ಪಟ್ಟವು[೧೦೭] ಎನ್ನುವ ಮಾತು

---

೧೦೪. Yashodhar Mathpal : Prehistoric Rock Paintings of Bhimbetka, Page 9

೧೦೫. J. C. Nagpal : Mural Paintings in India, Page 114

೧೦೬. ಇತಿಹಾಸ ದರ್ಶನ : (ಸಂಪುಟ ೧೩). ಪುಟ ೧೧೭. ೧೯. ಮತ್ತೆರಡು ಚಾಲುಕ್ಯವರ್ಣ ಚಿತ್ರಗಳ ಶೋಧ. ಶೀಲಾಕಾಂತ ಪತ್ತಾರ

೧೦೭. ಶೀಲಾಕಾಂತ ಪತ್ತಾರ : ಬದಾಮಿ, ಸಾಂಸ್ಕೃತಿ ಅಧ್ಯಯನ. ಪುಟ ೧೯೬

ನಿಜವೆನಿಸುತ್ತದೆ. ಹಾಗಾದಾಗ ಇವು ಬಾದಾಮಿಯ ವೈಷ್ಣವಗುಹೆಯ ಭಿತ್ತಿಚಿತ್ರಗಳಿಗಿಂತ ಸುಮಾರು ೨೫ ರಿಂದ ೩೫ ವರ್ಷಗಳಷ್ಟು ಪುರಾತನವಾದವುಗಳೆಂದು ಹೇಳಬಹುದು. ಅಂದರೆ ಕೆರೋಲ್ ರ್‍ಯಾಡ್‌ಕ್ಲಿಪ್ ಅವರ ಅಭಿಪ್ರಾಯದಂತೆ ಈ ಗುಹಾಲಯ ಕ್ರಿ. ಶ. ೫೪೫-೫೫ ರಲ್ಲಿ ರಚನೆಯಾಗಿದ್ದು.[೧೦೮] ಚಿತ್ರಗಳೂ ಅದೇ ವೇಳೆಯಲ್ಲಿ ರಚಿಸಿರುವ ಸಾಧ್ಯತೆಗಳಿವೆ. ರಾವಣಫಡಿ ಗುಹೆಯ ಛತ್ತಿನಲ್ಲಿ ಚಿತ್ರಗಳಿದ್ದು ೦.೮೧ ಮೀಟರ್ X ೨.೧ಮೀಟರ್ ವಿಸ್ತೀರ್ಣದಲ್ಲಿ ಚಿತ್ರಗಳು ರಚನೆಯಾಗಿದ್ದಂತೆ ಕಂಡುಬರುತ್ತದೆ. ಆದರೆ ಚಿತ್ರಗಳು ಬಹುಪಾಲು ಹಾಳಾಗಿವೆ. ಚಿತ್ರರಚನೆಗಿಂತ ಮೊದಲು ಮೇಲ್ಛಾವಣಿಗೆ ೦.೨ ಮಿ. ಮಿ. ದಪ್ಪಳತೆಯ ಭಿತ್ತಿಯ ಪದರ ಲೇಪಿಸಲಾಗಿದ್ದು ಅದರ ಮೇಲೆ ಚಿತ್ರಬಿಡಿಸಿದ್ದಾರೆ. ಚಿತ್ರದ ಅಂಚುಭಾಗವನ್ನು ಹೂಬಳ್ಳಿಯ ನಕ್ಷೆಯಿಂದ ಶೃಂಗರಿಸಲಾಗಿದ್ದು ಭಿತ್ತಿ ಚಿತ್ರದ ಚೌಕಟ್ಟನ್ನು ಹೂ ಬಳ್ಳಿಯಿಂದ ವ್ಯವಸ್ಥಿತವಾಗಿ ಅಲಂಕರಿಸಿದ ಮೊದಲ ಉದಾಹರಣೆ ಕರ್ನಾಟಕದ ಐತಿಹಾಸಿಕ ಚಿತ್ರಗಳಲ್ಲಿ ಇದು ಮೊದಲಿನದು ಎನ್ನಬಹುದು. ಇದೇ ಪರಂಪರೆ ಮುಂದೆ ಬೆಳೆದುಕೊಂಡು ಬಂದು ಸಾಮಾನ್ಯವಾಗಿ ಭಿತ್ತಿ ಚಿತ್ರಗಳ ಅಂಚುಗಳೆಲ್ಲ ಹೂಬಳ್ಳಿ ನಕ್ಷೆಯಿಂದ ಕಂಗೊಳಿಸಿವೆ. ಚಿತ್ರದಲ್ಲಿ ಅಸ್ಪಷ್ಟವಾಗಿ ಕಂಡುಬರುವ ವ್ಯಕ್ತಿಗಳು ಯುದ್ಧನಿರತ ಸೈನಿಕರು ಎನ್ನುವುದನ್ನು ಶೀಲಾಕಾಂತ ಪತ್ತಾರ ಅವರು ಸರಿಯಾಗಿ ಗುರುತಿಸಿದ್ದಾರೆ. ಮೇಲ್ಛಾವಣಿಯ ಬಲಭಾಗದಲ್ಲಿ ಸೈನಿಕನೊಬ್ಬ ಯುದ್ಧನಿರತನಾಗಿದ್ದು. ಆತನ ಮೇಲ್ಭಾಗದಲ್ಲಿ ಮತ್ತೊಬ್ಬ ಯೋಧ ಈಟಿಯನ್ನು ಹಿಡಿದು ತಿವಿಯುತ್ತಿರುವಂತೆ ತೋರುತ್ತದೆ. ಎಡಭಾಗದಲ್ಲಿ ಇನ್ನೊಬ್ಬ ವ್ಯಕ್ತಿ ಲೋಹಜಾಲಕವನ್ನು ಧರಿಸಿ ಎಡಗೈಯಲ್ಲಿ ಗುರಾಣಿಯನ್ನು ಹಿಡಿದಿದ್ದಾನೆ. ಮಧ್ಯದಲ್ಲಿ ವ್ಯಕ್ತಿಯ ಚಡ್ಡಿಯಂತಹ ಅಧೋವಸ್ತ್ರ ಧರಿಸಿದ್ದು ಅದಕ್ಕೆ ವಸ್ತ್ರವನ್ನು ಕಟಿಬಂಧವಾಗಿ ಬಿಗಿದುಕೊಂಡಿದ್ದಾನೆ. ಮೇಲ್ಭಾಗದಲ್ಲಿ ಎದೆಯ ಭಾಗಕ್ಕೆ ಕುಪ್ಪುಸದಂತಹ ಕವಚ ತೊಟ್ಟಿದ್ದು ಬಹುಶ ಇದು ಕಬ್ಬಿಣದ್ದಾಗಿರಬಹುದು.

ಯೋಧನ ವಸ್ತ್ರಗಳು ಕೆಂಪುಮಿಶ್ರಿತ ಕಂದುಬಣ್ಣದಲ್ಲಿದ್ದು ಮೈ ಬಣ್ಣ ನಸುಹಳದಿಯಾಗಿದೆ. ಚಿತ್ರಗಳ ಮೂಲ ವರ್ಣ ವೈವಿಧ್ಯವು ಕಾಲಾಂತರದಲ್ಲಿ ಬೇರೆಯಾಗಿರುವ ಸಾಧ್ಯತೆಯೂ ಇದೆ. ಎಡಗಡೆಗೆ ಇರುವ ಯೋಧನ ಮೈ ಬಣ್ಣವು ದಟ್ಟನೀಲಿವರ್ಣದಲ್ಲಿದೆ. ರಾವಣಫಡಿಯ ಭಿತ್ತಿ ಚಿತ್ರಗಳು ಮೊದಲನೇ ಪುಲಕೇಶಿಯ ಕಾಲದಲ್ಲಿ ರಚಿಸಿವೆ ಎಂದು[೧೦೯] ಅಲ್ಲಿರುವ ಒಂದು ಶಾಸನದ ಆಧಾರದಿಂದ ಊಹಿಸಲಾಗಿದೆ. ಈ ಊಹೆಗೆ ಇನ್ನಷ್ಟು ಗಟ್ಟಿಆಧಾರಗಳು ಬೇಕೆನಿಸುತ್ತದೆ.

ಚಾಲುಕ್ಯರ ಪ್ರಾರಂಭಿಕ ಕಾಲದ ಭಿತ್ತಿಚಿತ್ರಗಳಾದ ಉತ್ತರ ಬೆಟ್ಟದ ಶಿಲಾಶ್ರಯದ ಭಿತ್ತಿಚಿತ್ರಗಳಲ್ಲಿ ಚಿತ್ರಗಳನ್ನು ಸಂಯೋಜನೆಗೊಳಪಡಿಸುವ ಪ್ರಯತ್ನ ಕಾಣಬಹುದು. ಗಣ್ಯಸ್ತ್ರೀಯರ ಚಿತ್ರಗಳಲ್ಲಿ ಅಂತಹ ಹೊಳುಹು ಕಂಡುಬರುವುದು. ಅಲ್ಲದೇ ಇಲ್ಲಿ ಚಿತ್ರಗಳಿಗೆ ಇಲ್ಲೇ ಇವೆ ಎಂಬಂತಹ ಸ್ಥಾನ ನಿರ್ದೇಶನವಿಲ್ಲದೇ ಚಿತ್ರಗಳನ್ನು ಮಾತ್ರ ಗಮನವಿಟ್ಟು ರಚಿಸಲಾಗಿದೆ. ಇಂತಹ ಕೆಲವು ಸಮಸ್ಯೆಗಳಿಗೆ ರಾವಣಫಡಿಯ ಭಿತ್ತಿಚಿತ್ರದಲ್ಲಿ ಚಾಲುಕ್ಯ ಕಲಾವಿದರು ಉತ್ತರ ಕಂಡುಕೊಳ್ಳುವಲ್ಲಿ ಸಫಲರಾಗಿದ್ದಾರೆ. ಇಲ್ಲಿ ಚಿತ್ರಗಳನ್ನು ಒಂದು ಸಂಯೋಜನಾ ಕೃತಿ ಎಂದು ಪರಿಗಣಿಸಿ ಸುತ್ತಲೂ ಹೂವಿನ ನಕ್ಷೆಯ ಅಂಚನ್ನು ಹಾಕಿರುವುದು ಗಮನಾರ್ಹ ಅಂಶವಾಗಿದೆ. ಅಲ್ಲದೇ ಇಲ್ಲಿ ಮೊದಲಿನ ಕೆಂಪು ಹಳದಿ ವರ್ಣಗಳ ಜೊತೆಗೆ ನೀಲಿ, ಹಸಿರುಗಳು ಹೆಚ್ಚಾಗಿ ಬಳಕೆಗೊಂಡಿವೆ.

---

೧೦೮. ಡಾ. ಅ. ಸುಂದರ (ಸಂ.) : ಕರ್ನಾಟಕ ಚರಿತ್ರೆ (ಸಂಪುಟ೧). ಪುಟ ೫೦೧

೧೦೯. ಇತಿಹಾಸ ದರ್ಶನ : (ಸಂಪುಟ ೧೩). ಪುಟ ೧೧೭-೧೯. ಮತ್ತೆರಡು ಚಾಲುಕ್ಯ ವರ್ಣಚಿತ್ರಗಳ ಶೋಧ. ಶೀಲಾಕಾಂತ ಪತ್ತಾರ.



ಐಹೊಳೆಯ ರಾವಣಫಡಿಯ ವರ್ಣಚಿತ್ರ ಕೃಪೆ. ಡಾ. ಶೀಲಕಾಂತ ಪತ್ತಾರ.

**II. ಬಾದಾಮಿಯ ವೈಷ್ಣವ ಗುಹಾಲಯ :** ಕ್ರಿ. ಶ. ೫೭೮ ರಲ್ಲಿ ಮಂಗಳೇಶನ ಕಾಲದಲ್ಲಿ ರಚನೆಯಾದ ಬಾದಾಮಿಯ ವೈಷ್ಣವ ಗುಹೆಯ ಭಿತ್ತಿಚಿತ್ರಗಳನ್ನು ಕುರಿತಾಗಿ ಹಲವರು ಅಧ್ಯಯನ ಮಾಡಿದ್ದಾರೆ. ಇವುಗಳ ಬಗೆಗೆ ವಿವರವಾಗಿ ಮೊದಲು ಬರೆದವರು ಸ್ಟೆಲ್ಲಾಕ್ರಾಮ್ರಿಷ್[೧೧೦] ಎಂಬ ಪಾಶ್ಚಾತ್ಯ ಮಹಿಳೆ. ಚಿತ್ರದ ವರ್ಣಗಾರಿಕೆ, ವಸ್ತುವಿಷಯಗಳನ್ನು ಕುರಿತಂತೆ ವಿವರಗಳನ್ನು ನೀಡಿದ್ದಾಳೆ. ಇದಲ್ಲದೇ ಕ್ರಿ. ಶ. ೧೮೧೮ ರಲ್ಲಿಯೇ ಈ ಚಿತ್ರಗಳ ವಿಷಯವಾಗಿ 'ಥಾಮಸ್ ಮನ್ರೋ' ಹೇಳಿದ್ದನ್ನು ಕ್ರಿ. ಶ. ೧೮೫೦ ರಲ್ಲಿ ಜಾನ್‌ವಿಲ್ಸನ್[೧೧೧] ಉಲ್ಲೇಖಿಸುತ್ತಾರೆ. ಮತ್ತೆ ಕ್ರಿ. ಶ. ೧೮೭೪ ರಲ್ಲಿ ಜೇಮ್ಸ ಬರ್ಜಸ್[೧೧೨] ಅವರು ಇವುಗಳನ್ನು ಪರಿವೀಕ್ಷಣೆ ಮಾಡಿ ವರದಿಯೊಂದನ್ನು ನೀಡುತ್ತಾರೆ. ಅದರಲ್ಲಿ ಇಲ್ಲಿಯ ಚಿತ್ರಗಳ ವಿಷಯ. ಅವುಗಳು ಹಾಳಾದ ಸ್ಥಿತಿ. ಅಲ್ಲಿನ ಶಿಲ್ಪಗಳಿಗೆ ಬಣ್ಣ ಲೇಪಿಸಿರುವುದು, ತಿಳಿಸಿದ್ದಾರೆ. ನಂತರ ೧೯೫೯ ರಲ್ಲಿ ಸಿ. ಶಿವರಾಮಮೂರ್ತಿಯವರು[೧೧೩] ವೈಷ್ಣವಗುಹೆಯ ಈ ಚಿತ್ರಗಳ ಬಗೆಗೆ ವಿವರವಾಗಿ ಬರೆದಿದ್ದು ಚಿತ್ರಗಳ ವಸ್ತು ವಿಷಯ. ಬಣ್ಣಗಾರಿಕೆಯನ್ನು ಕುರಿತಂತೆ ಮಾಹಿತಿ ನೀಡುತ್ತಾರೆ. ಕ್ರಿ. ಶ. ೧೯೬೮ ರಲ್ಲಿ ಪ್ರಕಟವಾದ ಬಿಜಾಪೂರ ಜಿಲ್ಲಾ ಗೆಜೆಟಿಯರ್‌ದಲ್ಲಿ[೧೧೪] ಈ ವೈಷ್ಣವ ಗುಹೆಯಲ್ಲಿ ಶೈವಧರ್ಮಕ್ಕೆ ಸಂಬಂಧಿಸಿದ ಚಿತ್ರಗಳಿವೆ. ಶಿವಪಾರ್ವತಿಯ ಚಿತ್ರ ಇಲ್ಲಿ ಸುಂದರವಾಗಿದೆ ಎಂದು ಹೇಳಿದೆ. ಆದರೆ ಇಲ್ಲಿ ಚಿತ್ರದ ವಸ್ತುವಿಷಯವನ್ನು ಗುರುತಿಸವಲ್ಲಿ ತಪ್ಪಾಗಿದೆ ಎನ್ನಬಹುದು. ಡಾ. ಶಿವರಾಮ ಕಾರಂತ ಅವರು[೧೧೫] ಈ ಚಿತ್ರಗಳ ವಸ್ತುವಿಷಯ, ವರ್ಣಗಾರಿಕೆ. ಚಿತ್ರಶೈಲಿಗಳ ಕುರಿತಾಗಿ ಚರ್ಚಿಸಿದ್ದು. ಇವು ಅಜಂತಾದಂತೆ ಉತ್ತಮ ಮಟ್ಟದವುಗಳಲ್ಲ ಎಂದು ಹೇಳುತ್ತಾರೆ. ಕ್ರಿ. ಶ. ೧೯೭೮ ರಲ್ಲಿ ಎಮ್. ಎಸ್. ನಾಗರಾಜರಾವ್ ಅವರು[೧೧೬] ಈ ಚಿತ್ರಗಳ ಬಗ್ಗೆ ಬರೆಯುತ್ತ ಒಂದು ಕಾಲದಲ್ಲಿ ಇಡೀ ಗುಹೆ ವರ್ಣಚಿತ್ರಗಳಿಂದ ಮತ್ತು ವರ್ಣದಿಂದ ಅಲಂಕರಿಸಲ್ಪಟ್ಟಿತ್ತು ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಕ್ರಿ. ಶ. ೧೯೮೨ ರಲ್ಲಿ ಚಾಲುಕ್ಯ ಶ್ರೀಯಲ್ಲಿ ಲೇಖನ ಬರೆದ ಡಾ.ಅ. ಸುಂದರ ಅವರು[೧೧೭] ಈ ಚಿತ್ರಗಳ ವಾಸ್ತುವಿಷಯಗಳ ಬಗೆಗೆ ಗಮನ ಸೆಳೆಯುತ್ತಾರೆ. ಡಾ. ಸಿಂದಗಿ ರಾಜಶೇಖರ ಅವರು[೧೧೮] ಚಾಲುಕ್ಯರ ಕಲೆ ಮತ್ತು ವಾಸುಶಿಲ್ಪವನ್ನು ಹೇಳುವಾಗ ಈ ಚಿತ್ರಗಳ ಬಗೆಗೆ ವಿವರಣೆ ಕೊಡುತ್ತಾರೆ. ಆಮೇಲೆ ಡಾ. ಎಸ್. ಸಿ. ಪಾಟೀಲ ಅವರು[೧೧೯] ಜನಪದ ಭಿತ್ತಿಚಿತ್ರ ಕಲೆಯ ಬಗೆಗೆ ಅಧ್ಯಯನ ಮಾಡುವಾಗ ಇವುಗಳನ್ನು ಸಾಂದರ್ಭಿಕವಾಗಿ ನೋಡಿದ್ದಾರೆ. ಡಾ. ಅ. ಲ. ನರಸಿಂಹನ್ ಅವರು[೧೨೦] ಈ ಚಿತ್ರಗಳನ್ನು ತಮ್ಮ ಅಧ್ಯಯನದಲ್ಲಿ ಹೆಸರಿಸಿದ್ದಾರೆ. ಇತ್ತೀಚೆಗೆ ಡಾ. ಶೀಲಾಕಾಂತ ಪತ್ತಾರ ಅವರು[೧೨೧] ವೈಷ್ಣವ ಗುಹೆಯ ಈ ಚಿತ್ರಗಳನ್ನು ಕುರಿತಂತೆ ಮತ್ತೊಮ್ಮೆ ಚರ್ಚೆಗೊಳಪಡಿಸಿದ್ದಾರೆ. ಇವುಗಳಲ್ಲದೇ ಸಾಮಾನ್ಯವಾಗಿ ಭಾರತ ಮತ್ತು ಕರ್ನಾಟಕದ ಪ್ರಾಚೀನ ಚಿತ್ರ ಪರಂಪರೆಯನ್ನು ಹೇಳುವ

---

೧೧೦. Stella Kramrisha : Paintings at Badami, J.I.S.O.A. Vol. IV, Page 57, 61

೧೧೧. John Willson : Ancient Remains of Western India, Page 26

೧೧೨. James Burgess : A.S.I. Report, (1874, Janurary to May), Page 20

೧೧೩. C. Sivaramamurti : Western Chalukya Painting at Badami (Lalitakala No. 5), Page 49,58

೧೧೪. Bijapur District Gezetteer (1968), Page 98

೧೧೫. ಡಾ. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪುಟ ೨೪, ೩೬

೧೧೬. M. S. Nagraj Rao : The Chalukya of Badami, Page 312

೧೧೭. ಡಾ. ಅ. ಸುಂದರ (ಸಂ) : ಚಾಲುಕ್ಯಶ್ರೀ, ಪುಟ ೧೨೦, ೧೨೨

೧೧೮. ಡಾ. ಸಿಂದಗಿ ರಾಜಶೇಖರ : ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಪುಟ ೧೧೪

೧೧೯. ಡಾ. ಎಸ್. ಸಿ. ಪಾಟೀಲ : ಕರ್ನಾಟಕದ ಜಪದದ ಚಿತ್ರಕಲೆ, ಪುಟ ೪೭

೧೨೦. ಡಾ. ಅ. ಲ. ನರಸಿಂಹನ್ : ಕರ್ನಾಟಕದ ಭಿತ್ತಿಚಿತ್ರ ಪರಂಪರೆ, ಪುಟ ೧೯೪

೧೨೧. ಡಾ. ಶೀಲಾಕಾಂತ ಪತ್ತಾರ : ಬಾದಾಮಿ, ಸಾಂಸ್ಕೃತಿಕ ಅಧ್ಯಯನ ಪುಟ ೧೯೬, ೧೯೮

ಪ್ರತಿಯೊಬ್ಬರೂ ವೈಷ್ಣವ ಗುಹೆಯ ಈ ಚಿತ್ರಗಳನ್ನು ಸಹಜವಾಗಿ ಪ್ರಸ್ತಾಪಿಸುತ್ತ ಬಂದಿದ್ದಾರೆ. ವರ್ಣ ಚಿತ್ರಗಳನ್ನು ರಚಿಸಲಾಗಿರುವ ಗುಹೆಯು ಗರ್ಭಗುಡಿ. ಮಂಟಪ ಮತ್ತು ಮೊಗಸಾಲೆಗಳನ್ನು ಹೊಂದಿದೆ. ಮಂಟಪದ ಹಿಂದಣ ಗೋಡೆಯನ್ನು ಕೊರೆದು ಗರ್ಭಗೃಹ ನಿರ್ಮಿಸಲಾಗಿದೆ. ಗುಹೆಯ ಮುಂಭಾಗದಲ್ಲಿ ಕಂಬ ಮತ್ತು ಅರ್ಧ ಕಂಬಗಳನ್ನು ಕೆತ್ತಲಾಗಿದೆ. ಗುಹೆಯ ಮೇಲ್ಛಾವಣಿಯ ಹೊರಚಾಚಿದ ಬಾಗುಭಾಗದಲ್ಲಿ ಭಿತ್ತಿ ಚಿತ್ರಗಳು ಕಂಡುಬಂದಿವೆ. ಆದರೆ ಇಂದು ಭಿತ್ತಿಚಿತ್ರಗಳು ಇಲ್ಲಿ ಉಳಿದಿಲ್ಲ ಗುರುತಿಸಲಾಗದಂತೆ ನಾಶವಾಗಿಹೋಗಿವೆ. ಅವುಗಳನ್ನು ಪ್ರತಿಮಾಡಿಟ್ಟ ಅಹಿವಾಸಿತಂಡದವರು ಮತ್ತು ಶ್ರೀ ಮಿಣಜಿಗಿಯವರ ಪ್ರತಿಕೃತಿಗಳಿಂದ ಅವುಗಳ ಬಗ್ಗೆ ತಿಳಿಯಬಹುದು. ಧಾರವಾಡದ ಇತಿಹಾಸ ಸಂಶೋಧನಾ ಸಂಸ್ಥೆಯಲ್ಲಿ ಮಿಣಜಿಗಿಯವರು ಪ್ರತಿಮಾಡಿಟ್ಟ ಕೃತಿಗಳು ಮತ್ತು ಧಾರವಾಡದ ಶ್ರೀನಗರದಲ್ಲಿರುವ ಶಿಲ್ಪಿ ಡಿ. ಎಚ್. ಕುಲಕರ್ಣಿಯವರ ವೈಯಕ್ತಿಕ ಸಂಗ್ರಹದಲ್ಲಿ ಈ ಪ್ರತಿಕೃತಿಗಳು ಈಗ ಸಿಗುತ್ತವೆ.

ಬಾದಾಮಿಯ ೩ ನೇ ಗುಹೆಯ ಮೇಲ್ಛಾವಣಿಯ ಚಾಚು ಭಾಗದಲ್ಲಿ ಮಾತ್ರ ವರ್ಣಚಿತ್ರಗಳು ಕಂಡುಬಂದಿದ್ದು, ಮಂಗಳೇಶನ ಕಾಲದಲ್ಲಿ ಈ ಇಡೀ ಗುಹೆಯನ್ನು ವರ್ಣದಿಂದ. ಮತ್ತು ವರ್ಣ ಚಿತ್ರಗಳಿಂದ ಅಲಂಕರಿಸಲಾಗಿತ್ತು ಎಂದು ಸಿ. ಶಿವರಾಮ ಮೂರ್ತಿಯವರು[೧೨೨] ಅಭಿಪ್ರಾಯಪಡುತ್ತಾರೆ. ಬಾದಾಮಿಯ ಚಿತ್ರಗಳು ಹಿಂದೂ ಸಂಪ್ರದಾಯಕ್ಕೆ ಸಂಬಂಧಪಟ್ಟಂತೆ ಇದುವರೆಗೆ ಕಂಡುಬಂದ ಅತೀ ಪುರಾತನ ಭಿತ್ತಿಚಿತ್ರಗಳಾಗಿವೆ. ಚಿತ್ರಗಳು ಇಲ್ಲಿ ಉದ್ದವಾದ ಪಟ್ಟಿಕೆಯಲ್ಲಿ ರಚನೆಯಾಗಿವೆ. ಹಾಗೆಯೇ ಚಿತ್ರಗಳಲ್ಲಿ ಮುಖ್ಯವಾಗಿರುವ ದೃಶ್ಯವೆಂದರೆ, ಒಂದು ಚಿತ್ರದಲ್ಲಿ ಅರಮನೆಯ ದೃಶ್ಯವೊಂದಿದ್ದು. ಮಧ್ಯಭಾಗದಲ್ಲಿರುವ ವ್ಯಕ್ತಿಯು ಸುಂದರವಾದ ಆಸನದ ಮೇಲೆ ಕುಳಿತಿದ್ದಾನಲ್ಲದೇ ಎರಡೂ ಕಾಲುಗಳನ್ನು ಸಣ್ಣದಾದ ಆಸನದ ಮೇಲೆ ಇಟ್ಟಿದ್ದಾನೆ. ಈತನ ಮುಖವು ನಾಶವಾಗಿದ್ದು ಕಿರೀಟವು ಸುಂದರವಾಗಿ ಕಾಣುತ್ತದೆ. ಈ ಮುಖ್ಯ ವ್ಯಕ್ತಿಯು ತನ್ನ ಎದುರಿನಲ್ಲಿ ನಡೆಯುತ್ತಿರುವ ನೃತ್ಯ ಸಂಗೀತ ಕಾರ್ಯಕ್ರಮವನ್ನು ತದೇಕ ಚಿತ್ತದಿಂದ ವೀಕ್ಷಿಸುತ್ತಿರುವಂತಿದೆ. ಈ ನೃತ್ಯಸಂಗೀತ ಕಾರ್ಯಕ್ರಮವನ್ನು ಮೇಲಿನ ಬಾಲ್ಕನಿಯಲ್ಲಿ ನಿಂತು ಹಲವಾರು ಜನರು ವೀಕ್ಷಿಸುತ್ತಿದ್ದಾರೆ. ಮಧ್ಯದಲ್ಲಿ ಆಸನದಲ್ಲಿ ವ್ಯಕ್ತಿಯು ಕೊರಳಲ್ಲಿ ಹಾರ ಪದಕಗಳನ್ನು ಧರಿಸಿದ್ದು ಯಜ್ಞೋಪವಿತ ಇರುವುದು.

ರಾಜನಂತೆ ಕಾಣುವ ಈ ವ್ಯಕ್ತಿಯ ಪಾದದ ಬಳಿಯಲ್ಲಿ ಹಲವಾರು ಗಣ್ಯವ್ಯಕ್ತಿಗಳು ಕುಳಿತಿದ್ದಾರೆ. ಈತನ ಸುತ್ತ ಅನೇಕ ಸೇವಕರು ಪರಿಚಾರಕರು, ಛತ್ರಚಾಮರ ಹಿಡಿದವರು ನೆರೆದಿದ್ದಾರೆ. ಎಡಬದಿಗೆ ವಾದ್ಯವೃಂದದವರಿದ್ದು ಅಲ್ಲಿ ಒಬ್ಬಳು ಸ್ತ್ರೀ ಮತ್ತು ಒಬ್ಬ ಪುರುಷ ನೃತ್ಯಮಾಡುತ್ತಿದ್ದಾರೆ. ಈ ಚಿತ್ರದಲ್ಲಿಯೇ ಒಂದು ಬದಿಗೆ ರಾಜ ಪರಿವಾರದವರು ನೃತ್ಯ ವೀಕ್ಷಿಸಲು ಕಂಬಗಳನ್ನು ಹೊಂದಿದ ಮಂಟಪದಲ್ಲಿ ತೆಳು ಪರದೆಯೊಂದನ್ನು ಕಟ್ಟಿ ಮರೆಮಾಡಲಾಗಿದೆ. ಇದು ಇಂದ್ರನ ವೈಜಯಂತ ಅರಮನೆಯಲ್ಲಿನ ದೃಶ್ಯವಾಗಿರಬಹುದು. ಆ ನೃತ್ಯವು ಭರತ ಅಥವಾ ತಂಡು ಮತ್ತು ಊರ್ವಶಿಯರ ನಾಟ್ಯವಾಗಿರಬಹುದು[೧೨೩]ಎಂದು ಹೇಳಲಾಗಿದೆ. ಇಲ್ಲಿ ವಿದ್ವಾಂಸರ ಅಭಿಪ್ರಾಯಗಳನ್ನು ಕ್ರೋಢೀಕರಿಸಿ[೧೨೪] ಶೀಲಾಕಾಂತ ಪತ್ತಾರ ಅವರು ಇದು ರಾಜನ ಆಸ್ಥಾನದ ದೃಶ್ಯವಾಗಿದೆ ಎಂದು ಹೇಳಿರುವುದು ಹೆಚ್ಚು ಯೋಗ್ಯವಾಗಿದೆ. ಈ ಚಿತ್ರದ ಮೂಲಕ ಆಗಿನ ಕಾಲದ ರಾಜ ದರ್ಬಾರದಲ್ಲಿನ ದೃಶ್ಯ, ನೃತ್ಯಸಂಗೀತದ ಪರಿಯನ್ನು

೧೨೨. C. Sivarama Murti : Vijayanagara Paintings, Page 11

೧೨೩. C. Sivarama Murti : Western Chalukaya Pintings at Badami, Page 52

೧೨೪. ಡಾ. ಶೀಲಾಕಾಂತ ಪತ್ತಾರ : ಬಾದಾಮಿ, ಸಾಂಸ್ಕೃತಿಕ ಅಧ್ಯಯನ, ಪುಟ ೧೯೭

ತಿಳಿದುಕೊಳ್ಳಲು ಈ ಚಿತ್ರ ಸಹಕಾರಿಯಾಗಿದೆ. ರಾಜನ ಆಸ್ಥಾನದಲ್ಲಿ ನಡೆಯುತ್ತಿದ್ದ ನೃತ್ಯಸಂಗೀತ ಕಾರ್ಯಕ್ರಮಗಳ ಆಗಿನ ಒಂದು ಹೊಳಹನ್ನು ಇಲ್ಲಿ ಕಾಣಬಹುದು. ಸಂಪ್ರದಾಯ ಬದ್ಧವಾಗಿ ಅದುವರೆಗೆ ನಡೆದುಕೊಂಡು ಬಂದ ಚಿತ್ರಣ ಪದ್ಧತಿಯಲ್ಲಿ ಕೆಲವು ಮಾರ್ಪಾಡುಗಳೊಂದಿಗೆ ನವ್ಯತೆಯ ಕಡೆಗೆ ಮೊದಲು ಹೊರಳಿದವರು ಚಾಲುಕ್ಯರ ಕಾಲದ ಕಲಾವಿದರು. ಈ ಹಿಂದೆ ಬರೀ ದೇವರ ಚಿತ್ರಗಳು ದೈವಾಂಶ ಸಂಭೂತ ಬುದ್ಧ ಭಗವಾನ್ ಅವರಂತಹ ದೈವಿಕ ಸಂಬಂಧೀ ಚಿತ್ರಗಳನ್ನು ಹೆಚ್ಚಾಗಿ ರಚಿಸುವ ಪರಂಪರೆ ರೂಢಿಯಲ್ಲಿತ್ತು. ಆದರೆ ಚಾಲುಕ್ಯರ ಕಾಲಕ್ಕೆ ದೇವತೆಗಳ ಚಿತ್ರಗಳ ಬದಲಿಗೆ ರಾಜರ ಆಸ್ಥಾನದ ಚಿತ್ರಗಳನ್ನು ರಚಿಸುವ ಪ್ರವೃತ್ತಿಯೂ ಬೆಳೆಯಿತು. ಅಜಂತಾದಲ್ಲಿಯೇ ಎರಡನೇ ಪುಲಕೇಶಿಯ ಆಸ್ಥಾನದ ದೃಶ್ಯವನ್ನು ರಚಿಸಿದ್ದು ಕಾಣಬಹುದು. ಆದುದರಿಂದ ಇಂದ್ರ, ಶಿವ, ಮುಂತಾದ ದೇವರುಗಳ ಸಭೆಯ ಚಿತ್ರವಿದಾಗಿರದೇ ಸಮಕಾಲೀನವಾದ ಅಥವಾ ತಮ್ಮ ವಂಶದ ರಾಜನೊಬ್ಬನ ಆಸ್ಥಾನ ದೃಶ್ಯವಿದಾಗಿರಬಹುದು ಎಂಬುದು ಹೆಚ್ಚು ಸಮಂಜಸವೆನಿಸುತ್ತದೆ.

ಇನ್ನೊಂದು ಚಿತ್ರವೂ ರಾಜನೊಬ್ಬನ ಒಡ್ಡೋಲಗವಾಗಿದ್ದು ರಾಜ ಮತ್ತು ರಾಣಿ ಜೊತೆಯಾಗಿ ಸುಂದರವಾದ ಆಸನಗಳಲ್ಲಿ ಕುಳಿತಿದ್ದಾರೆ. ಮುಂದುಗಡೆ ಪರಿವಾರದವರು, ಸೇವಕ ಸೇವಕಿಯರು ತಮ್ಮ ಕಾರ್ಯದಲ್ಲಿ ನಿರತರಾಗಿದ್ದಾರೆ. ಹಿಂದುಗಡೆ ಎತ್ತರದಲ್ಲಿ ಇಂದ್ರನು ಕಾಣಿಸಿಕೊಂಡು ದೊರೆಯನ್ನು ಹರಸುತ್ತಿರುವಂತೆ ಚಿತ್ರಿತವಾಗಿದೆ. ಇಲ್ಲಿ ಚಿತ್ರಿತವಾದ ರಾಜನು ಸುಖಾಸೀನನಾಗಿ ಕುಳಿತಿದ್ದು ಬಲಗಾಲು ಚಿಕ್ಕ ಪೀಠದ ಒಂದರ ಮೇಲೆ ಇಡಲಾಗಿದೆ. ಎಡಗಾಲನ್ನು ಮೇಲೆತ್ತಿ ಎಡಕೈಯನ್ನು ಮೊಣಕಾಲಮೇಲೆ ಇಳಿಬಿಟ್ಟುಕೊಂಡಿದ್ದಾನೆ. ಒಟ್ಟು ಭಂಗಿ ಗಂಭೀರತೆಯಿಂದ ಸುಖಾಸೀನನಾಗಿ ಕುಳಿತಿದ್ದನ್ನು ತೋರುವುದು. ಬಲಗೈಮೇಲೆ ಯಜ್ಞೋಪವಿತ ತೂಗುತ್ತಿದೆ. ತಲೆಯಮೇಲೆ ಉದ್ದನೇಯ ಕಿರಿಟ ಧರಿಸಿದ್ದಾನೆ. ಈ ರಾಜನ ಬಲಗಡೆಗೆ ಕೆಳಭಾಗದಲ್ಲಿ ನೆಲದ ಮೇಲೆ ಅನೇಕ ಜನ ಕುಳಿತಿದ್ದಾರೆ. ರಾಜನ ಎಡಭಾಗದಲ್ಲಿ ರಾಣಿಯು ಮತ್ತೊಂದು ಆಸನದಲ್ಲಿ ಕುಳಿತಿದ್ದು ಪರಿಚಾರಿಕೆಯರು ಅವಳ ಸೇವೆಯಲ್ಲಿ ತೊಡಗಿದ್ದಾರೆ. ಒಬ್ಬಳು ಪಾದಗಳನ್ನು ಅಲಂಕರಿಸುತ್ತಿದ್ದರೆ ಇನ್ನೊಬ್ಬಳು ಲೇಪನ ಕಾರ್ಯದಲ್ಲಿ ಸಹಾಯಮಾಡುತ್ತಿದ್ದಾಳೆ. ರಾಣಿಯುಕುಳಿತ ಪೀಠವು ಆಸನಕ್ಕಿಂತ ಕೆಳಭಾಗದಲ್ಲಿದೆ. ರಾಣಿಯು ಎಡಗೈಯನ್ನು ಮಡಚಿದ ಎಡಕಾಲಿನ ತೊಡೆಯಮೇಲೆ ಇಟ್ಟು ಬಲಗೈಯನ್ನು ಹಿಂದಕ್ಕೆ ಚಾಚಿ ಅದರ ಮೇಲೆ ಭಾರಹಾಕಿ ಕುಳಿತಿದ್ದಾಳೆ ಕಿವಿಯಲ್ಲಿ ಪತ್ರಕುಂಡಲ ಧರಿಸಿರುವ ಇವಳ ಹಣೆಯಲ್ಲಿ ಮುಂಗುರುಳು ಆಡುತ್ತಿದ್ದು ತೆಳುವಾದ ವಸ್ತ್ರವನ್ನು ತೊಡೆಗೆ ಅಂಟಿಕೊಂಡಂತೆ ಧರಿಸಿದ್ದಾಳೆ. ಚಿತ್ರದಲ್ಲಿನ ವಾಸ್ತುವಿನ್ಯಾಸ ಅರಮನೆಯ ಒಳಕೋಣೆಯೊಂದರ ದೃಶ್ಯವನ್ನು ಸೂಚಿಸುತ್ತದೆ. ಈ ದೃಶ್ಯದಲ್ಲಿರುವ ಸೇನಾಪತಿಗಳು ಅಥವಾ ಕಾವಲು ಭಟರಲ್ಲಿ ಒಬ್ಬ ಗೌರವರ್ಣದವನು ಇನ್ನೊಬ್ಬ ಶ್ಯಾಮಲ ವರ್ಣದವನಿದ್ದಾನೆ. ಮತ್ತಿಬ್ಬರು ನೀಲಿ, ಹಸಿರು ವರ್ಣದವರಾಗಿದ್ದಾರೆ. ಈ ಚಿತ್ರವು ರಾಜ ವೈಭವವನ್ನು ತೋರಿಸುವ ಚಿತ್ರವಾಗಿದ್ದು ಇದಲ್ಲಿ ಚಿತ್ರಿಸಿರುವ ರಾಜ ರಾಣಿಯರು ಕೀರ್ತಿವರ್ಮ ಮತ್ತು ಆತನ ರಾಣಿ ಅವರ ಪರಿವಾರದವರಾಗಿದ್ದಾರೆ ಎಂದು ಶಿವರಾಮ ಮೂರ್ತಿಯವರು ತರ್ಕಿಸುತ್ತಾರೆ. ಇಲ್ಲಿನ ಇನ್ನೆರಡು ಮುಖ್ಯ ಚಿತ್ರಗಳೆಂದರೆ ಗಗನದಲ್ಲಿ ಹಾರುತ್ತಿರುವ ವಿದ್ಯಾಧರ ದಂಪತಿಗಳದಾಗಿವೆ. ಒಂದು ಚಿತ್ರದಲ್ಲಿ ಒಬ್ಬರು ಇನ್ನೊಬ್ಬರ ಕೊರಳು ಅಪ್ಪಿ ಹಿಡಿದು ಹಾರುತ್ತಿದ್ದರೆ, ಇನ್ನೊಂದರಲ್ಲಿ ವಿದ್ಯಾಧರನೊಬ್ಬನು ವೀಣೆಯನ್ನು ನುಡಿಸುತ್ತಿದ್ದಾನೆ. ಇದರಲ್ಲಿ ಗಂಡಸರ ಮೈಬಣ್ಣವನ್ನು ಕಪ್ಪು ಮಿಶ್ರಿತಬಿಳಿವರ್ಣದಲ್ಲಿ ಚಿತ್ರಿಸಿದ್ದರೆ ಸ್ತ್ರೀಯರನ್ನು ಹಸಿರು, ನೀಲಿ ವರ್ಣಗಳಿಂದ ಚಿತ್ರಿಸಿದೆ. ಬಾದಾಮಿಯ ವೈಷ್ಣವಗುಹೆಯ ಭಿತ್ತಿಚಿತ್ರಗಳು ಉತ್ತಮ ಸಂಯೋಜನಾ ಕೃತಿಗಳಾಗಿವೆ. ಹಿಂದಿನ ಪ್ರಾರಂಭಿಕ ಕೃತಿಗಳಾದ ಉತ್ತರ ಬೆಟ್ಟದ ಶಿಲಾಶ್ರಯ ಚಿತ್ರಗಳು,

ರಾವಣಫಡಿಯ ಗುಹಾಚಿತ್ರಗಳಿಗಿಂತ ಇಲ್ಲಿನ ಕೃತಿಗಳಲ್ಲಿ ಯೋಜನಾಬದ್ಧ ಸಂಯೋಜನೆ ಕಂಡುಬರುವುದು. ರಾಜನು ನೃತ್ಯ ವಿಕ್ಷಿಸುತ್ತಿರುವ ದೃಶ್ಯದಲ್ಲಿ ನೃತ್ಯಗಾರರು ಎದುರಿನಲ್ಲಿ ನಾಟ್ಯವಾಡುತ್ತಿದ್ದಿರೆ, ಕೆಳಗಡೆ ನೆಲದಮೇಲೆ ಕೆಲವು ವ್ಯಕ್ತಿಗಳು ಕುಳಿತುಕೊಂಡಿದ್ದಾರೆ. ರಾಜನ ಹಿಂದುಗಡೆ ಮತ್ತಷ್ಟು ವ್ಯಕ್ತಿಗಳು ಸಾಲಾಗಿನಿಂತಿದ್ದು ಅದರಲ್ಲಿ ಪರಿಚಾರಕರು ಪ್ರೇಕ್ಷಕರು ಇದ್ದಾರೆ. ಬಲಮೂಲೆಯಲ್ಲಿ ವಾದ್ಯಗಾರರಿದ್ದರೆ ಮೇಲಿನ ಮಹಡಿಯ ಬಾಲ್ಕನಿಯಿಂದ ರಾಜಪರಿವಾರದ ಸ್ತ್ರೀಯರು ನೃತ್ಯವಿಕ್ಷಿಸುತ್ತಿದ್ದಾರೆ. ಹೀಗೆ ಹಲವು ವ್ಯಕ್ತಿಗಳಿಂದ ತುಂಬಿದ ಈ ಚಿತ್ರವು ಒಂದು ಜನ ಸಮೂಹದಂತೆ ಕಂಡುಬಂದರೂ ಕಲಾವಿದನು ಚಿತ್ರ ಸಂಯೋಜನೆಗೊಳಿಸುವಲ್ಲಿ ತೋರಿದ ಚಾಣಾಕ್ಷತೆಯಿಂದ ಇಡೀ ಚಿತ್ರ ಒಂದು ವಿಷಯಕ್ಕೆ ಸಂಬಂಧಿಸಿದ ಕೃತಿಯಾಗಿ ನಮ್ಮನ್ನು ಸೆಳೆಯುವಲ್ಲಿ ಸಫಲವಾಗಿದೆ. ಅದೇ ರೀತಿಯಾಗಿ ಪಕ್ಕದಲ್ಲಿರುವ ಇನ್ನೊಂದು ರಾಜದರ್ಬಾರದ ದೃಶ್ಯದಲ್ಲಿಯೂ ರಾಜರಾಣಿ, ಪರಿವಾರದವರು, ಸೇವಕಿಯರು ಹೀಗೆ ಅನೇಕ ಜನ ಅವರವರ ಕೆಲಸದಲ್ಲಿ ತೊಡಗಿಕೊಂಡಿದ್ದರೂ ಇಡೀ ಚಿತ್ರಕೃತಿಯನ್ನು ಒಂದು ಸೂತ್ರದಲ್ಲಿ ಬಂಧಿಸುವಲ್ಲಿ ಕಲಾವಿದನ ಸಂಯೋಜನಾ ಚತುರತೆ ಹೊರಹೊಮ್ಮಿದೆ. ಮುಖ್ಯಚಿತ್ರವನ್ನು ದೊಡ್ಡದಾಗಿಯೂ ಉಳಿದ ಚಿತ್ರಗಳನ್ನು ಚಿಕ್ಕದಾಗಿಯೂ ಇಲ್ಲಿ ರಚಿಸಿದ್ದು. ಶಿಲ್ಪಶಾಸ್ತ್ರಗಳ ನಿರ್ದೇಶನ ಅನುಸರಿಸಿದಂತೆ ಇದೆ. ಬಾದಾಮಿಯ ವೈಷ್ಣವಗುಹೆಯ ಚಿತ್ರಗಳಲ್ಲಿ ಗಮನಾರ್ಹ ಅಂಶವೆಂದರೆ ಚಾಲುಕ್ಯರ ಈ ಹಿಂದಿನ ಚಿತ್ರಗಳಲ್ಲಿ ಸ್ಥಾನ ನಿರ್ದೇಶನವಿರದೇ ಇದ್ದುದು. ಆದರೆ ಇಲ್ಲಿ ಅರಮನೆಯ ಒಳಾಂಗಣವನ್ನು ಭವ್ಯವಾಗಿ ಸಂಯೋಜಿಸಿರುವುದಾಗಿದೆ. ಕಂಬಗಳು, ಕಮಾನುಗಳು, ಕ್ಲಿಪ್‌ಗೆ ಅಳವಡಿಸಿದ ಪರದೆಗಳು. ಮಹಡಿಯ ಬಾಲ್ಕನಿಗಳು.. ಕಿಟಕಿ, ಬಾಗಿಲುಗಳು, ಅದಕ್ಕೆ ಅಳವಡಿಸಿದ ಕದಗಳು, ಸಿಂಹಾಸನ ಮತು ಇತರ ಪೀಠಗಳು ಆ ಕಾಲದ ಅರಮನೆಯ ಒಳಾಂಗಣದೃಶ್ಯವನ್ನು ನಮಗೆ ತಿಳಿಸಿಕೊಡುತ್ತವೆ. ಚಾಲುಕ್ಯಕಲಾವಿದರು ಇಲ್ಲಿ ಬರೀ ಆಕೃತಿಗಳ ಸಂಯೋಜನೆ ಮತ್ತು ಸ್ಥಳಹೊಂದಾಣಿಕೆಗೆ ಮಹತ್ವ ಕೊಟ್ಟಿರದೇ ವರ್ಣ ಸಂಯೋಜನೆಯಲ್ಲಿಯೂ ನೈಜವಾದ ಮೈಬಣ್ಣವನ್ನು ಬಳಸಿರುವುದು ವರ್ಣಸಂಯೋಜನೆಯ ಸಾಮರಸ್ಯ ಕಾಯ್ದುಕೊಳ್ಳುವ ಪ್ರಯತ್ನವೇ ಆಗಿದೆ ಎನ್ನಬಹುದು. ಹಾಗೇ ಎಡಭಾಗ ಬಲಭಾಗ, ಮೇಲ್ಬಾಗ, ಕೆಳಭಾಗ ಹೀಗೆ ಚಿತ್ರದ ನಾಲ್ಕೂ ನಿಟ್ಟಿನ ವರ್ಣ ಲೇಪನದಲ್ಲಿ ಸಂಯೋಜನಾ ಬದ್ದತೆ ಕಂಡುಬರುವುದು.

**ಬಾದಾಮಿ ಭಿತ್ತಿ ಚಿತ್ರದ ಲಕ್ಷಣಗಳು :**

* ಇಲ್ಲಿಯ ಚಿತ್ರಗಳಲ್ಲಿ ಆಕೃತಿಗಳು ನೀಳವಾಗಿದ್ದು, ಕೆನ್ನೆ, ಗಲ್ಲ, ತುಟಿ, ಸ್ತನಗಳು, ಕಣ್ಣುಗಳನ್ನು ಉತ್ಪ್ರೇಕ್ಷಿಸಿ ತೋರಿಸಲಾಗಿದೆ.
* ಮುಖಗಳ ಆಕಾರದಲ್ಲಿ ದುಂಡು ಹಾಗೂ ಅಂಡಾಕಾರಗಳು ಪ್ರಧಾನವಾಗಿವೆ.
* ಒಂದೇ ವರ್ಣದ ಎರಡು ಮೂರು ಛಾಯೆಗಳನ್ನು ಬಳಸಿದ್ದು ಹೆಚ್ಚು ಕಂಡುಬರುವದಿಲ್ಲ. ಬದಲಾಗಿ ಪ್ರತಿ ಭಾಗಕ್ಕೂ ಬೇರೆ ಬೇರೆ ವರ್ಣಬಳಸಲಾಗಿದೆ.
* ದಪ್ಪನಾದ ಹೊರ ರೇಖೆಗಳನ್ನು ಚಿತ್ರಕ್ಕೆ ಎಳೆಯಲಾಗಿಲ್ಲ ಅತ್ಯಂತ ಸೂಕ್ಷ್ಮವಾದ ಬಾಹ್ಯರೇಖೆಗಳೇ ಚಿತ್ರಗಳ ಒಟ್ಟು ರೂಪವನ್ನು ತೋರಿಸುತ್ತವೆ.
* ಮನುಷ್ಯ ಚಿತ್ರಗಳಲ್ಲಿ ಆಕೃತಿಗಳಿಗೆ ವಾಸ್ತವಿಕ ಮೈ ಬಣ್ಣವನ್ನು ಲೇಪಿಸದೇ ನೀಲಿ, ಹಸಿರು, ಕಂದು ಹಾಗೂ ತಿಳಿ ಕೆಂಪು ವರ್ಣಗಳನ್ನು ಲೇಪಿಸಿ ಚಿತ್ರದ ಒಟ್ಟು ವರ್ಣ ಸಾಮರಸ್ಯವನ್ನು ಉಜ್ವಲಗೊಳಿಸಲಾಗಿದೆ.



ಮಾಲಗಿತ್ತಿ ಶಿವಾಲಯದ ಕೆಳಗಿನ ಶಿಲಾಶ್ರಯ ಚಿತ್ರ ಬಾದಾಮಿ (ಇತಿಹಾಸಕಾಲ)



ಕುಟಕನಕೇರಿ ಶಿಲಾಶ್ರಯ ಕುಟಕನಕೇರಿ



ರಾವಣಫಡಿ ಗುಹಾಲಯ ಐಹೊಳೆ



ಬೈಲಮರ್ಚೇಡದ ಶಿಲಾಶ್ರಯ ಚಿತ್ರ, (ಇತಿಹಾಸ ಕಾಲ)

* ಸಮೂಹ ಚಿತ್ರಗಳಲ್ಲಿ ಆಕೃತಿಗಳ ಒಟ್ಟು ಸಂಯೋಜನೆಯು (Composition) ಅಜಂತಾಗಿಂತ ಭಿನ್ನವಾದ ಮಾರ್ಗ ಅನುಸರಿಸಿದ್ದನ್ನು ಕಾಣಬಹುದು.
* ಬದಾಮಿಯ ಚಿತ್ರಗಳು ಆಗಲೇ ರೂಢಿ ಸ್ಥಾಪಿಸಿದ್ದ ಸಂಪ್ರದಾಯ ಬದ್ಧ ಚಿತ್ರಗಳ ಗುಣವಿಶೇಷಗಳನ್ನು ನಿರಾಕರಿಸಿ ಹೊಸ ಸಾಧ್ಯತೆಗಳ ಕಡೆಗೆ ತುಡಿಯುತ್ತಿರುವ ಕಲಾವಿನ ಮನಸ್ಥಿತಿಯನ್ನು ತೋರ್ಪಡಿಸುತ್ತವೆ.
* ಸೂಕ್ಷ್ಮವಾದ ಹೊರರೇಖೆಗಳು. ಚಪ್ಪಟೆ ವರ್ಣಲೇಪನ. ಶೈಲೀಕೃತ ಅಂಗಾಂಗಗಳ ರಚನೆಯನ್ನು ಇಲ್ಲಿ ಕಾಣಬಹುದು.

ಮಾನವ ನಿರ್ಮಿತ ಗುಹೆಗಳಲ್ಲಿ ರಚನೆಯಾಗಿರುವ ಭಿತ್ತಿ ಚಿತ್ರಗಳಲ್ಲಿ ತಾಂತ್ರಿಕ ದೃಷ್ಟಿಯಿಂದ ಗಮನಾರ್ಹ ಅಂಗಳೆಂದರೆ ಹಿಂದೆ ನೋಡಿದ ಸ್ವಾಭಾವಿಕ ಗುಹೆಗಳಲ್ಲಿ ತೆಳುವಾದ ಒನ್ನೆಲೆ ಲೇಪನದ ಮೇಲೆ ಚಿತ್ರಗಳನ್ನು ರಚಿಸಿದ್ದರೆ, ಇಲ್ಲಿ ದಪ್ಪನಾದ ಭಿತ್ತಿಯ ಪದರು ಲೇಪಿಸಿ ಚಿತ್ರರಚಿಸಲಾಗಿದೆ. ಸ್ವಾಭಾವಿಕ ಗುಹೆಯಲ್ಲಿ ಹಳದಿ ಮತ್ತು ಕೆಂಪು ಅಪರೂಪವಾಗಿ ಬಿಳಿ ವರ್ಣಗಳು ಬಳಕೆಯಾಗಿದ್ದರೆ, ಕೊರೆದ ಗುಹಾಲಯಗಳಲ್ಲಿ ಹಳದಿ, ಕೆಂಪು ವರ್ಣದ ಜೊತೆ ನೀಲಿ. ಹಸಿರು. ಕಪ್ಪು. ಬಿಳಿ ಹೀಗೆ ವಿವಿಧ ವರ್ಣಗಳು ಬಳಕೆಯಾಗಿವೆ. ಸ್ವಾಭಾವಿಕ ಗುಹೆಗಳಲ್ಲಿ ಆಕೃತಿಗಳನ್ನು ಮಾತ್ರ ರಚಿಸಿದ್ದು ಹಿನ್ನೆಲೆ ಮುನ್ನೆಲೆಯಲ್ಲಿ ಬರುವ ದೃಶ್ಯ ಸಂಯೋಜನೆ, ಹಾಗೂ ವಸ್ತುಗಳನ್ನು ಚಿತ್ರಿಸಿಲ್ಲ. ಮಾನವ ನಿರ್ಮಿತ ಗುಹೆಗಳಲ್ಲಿ ಆಕೃತಿಗಳ ಉತ್ತಮ ಸಂಯೋಜನೆ ಇದೆಯಲ್ಲದೇ ಹಿನ್ನೆಲೆ ಮುನ್ನೆಲೆಯಲ್ಲಿ ಪೂರಕವಾದ ದೃಶ್ಯ ಸಂಯೋಜನೆ ಮತ್ತು ವಸ್ತುಗಳು ಚಿತ್ರಿಸಿವೆ. ಅಜಂತಾದಲ್ಲಿ ಕೊರೆದ ಗುಹಾಲಯಗಳಲ್ಲಿ ರಚನೆಯಾದ ಚಿತ್ರಗಳಲ್ಲಿ ಉತ್ತಮ ಹಿನ್ನೆಲೆ ದೃಶ್ಯದ ಸಂಯೋಜನೆ ಕಂಡುಬರುವಂತೆಯೇ ಬಾದಾಮಿ ವೈಷ್ಣವಗುಹೆಯಲ್ಲಿನ ಚಿತ್ರಗಳಲ್ಲಿ ಅತ್ಯಂತ ಜಾಣಾಕ್ಷತನದಿಂದ ಸಂಯೋಜನೆಗೊಳಿಸಿದ ಅರಮನೆಯ ಒಳಗಾಂಗಣ ದೃಶ್ಯಗಳಿವೆ. ವರ್ಣ ವಿನ್ಯಾಸ, ರೇಖಾ ಲಾಲಿತ್ಯ, ಚಿತ್ರಗಳ ಹಾವಭಾವ. ನಿಲುವು ಭಂಗಿಗಳು. ಪ್ರಮಾಣಬದ್ಧತೆಗಳಂತಹ ವಿವರಗಳು ಕೊರೆದ ಗುಹಾಲಯಗಳಲ್ಲಿನ ಚಿತ್ರಗಳಲ್ಲಿ ಕಂಡುಬಂದರೆ ಹಿಂದಿನ ಸ್ವಾಭಾವಿಕ ಗುಹೆಗಳ ಚಿತ್ರಗಳಲ್ಲಿ ಇವು ಗೌಣವಾಗಿವೆ.

## II. ದೇವಾಲಯಗಳಲ್ಲಿರುವ ಭಿತ್ತಿ ಚಿತ್ರಕಲೆ

ಕೊರೆದ ಗುಹಾಲಯಗಳನ್ನು ಭಿತ್ತಿಚಿತ್ರಗಳಿಂದ ಅಲಂಕರಿಸಿದಂತೆ ಕಟ್ಟಲ್ಪಟ್ಟ ದೇವಾಲಯಗಳನ್ನು ಭಿತ್ತಿಚಿತ್ರಗಳಿಂದ ಅಲಂಕರಿಸುವ ಸಂಪ್ರದಾಯ ಮುಂದುವರೆಯಿತು. ದೇವಾಲಯಗಳನ್ನು ವರ್ಣಭಿತ್ತಿ ಚಿತ್ರಗಳಿಂದ ಅಲಂಕರಿಸುವ ಪದ್ಧತಿಯು ಇಂದಿನವರೆಗೂ ಉಳಿದುಕೊಂಡು ಬಂದಿದೆ. ಭಾರತದ ಉದ್ದಗಲಕ್ಕೂ ಅನೇಕ ದೇವಾಲಯಗಳನ್ನು ಭಿತ್ತಿಚಿತ್ರಗಳಿಂದ ಅಲಂಕರಿಸಿದಂತೆ ಕರ್ನಾಟಕದಲ್ಲೂ ಹಲವಾರು ದೇವಾಲಯಗಳು ಭಿತ್ತಿಚಿತ್ರಗಳಿಂದ ಅಲಂಕರಿಸಲ್ಪಟ್ಟಿವೆ. ಮುಡುಕುತೊರೆಯ ಮಲ್ಲಿಕಾರ್ಜುನ ದೇವಾಲಯ, ಮೈಸೂರಿನ ಪ್ರಸನ್ನ ವೆಂಕಟರಮಣ ದೇವಾಲಯ. ಚಾಮರಾಜನಗರದ ಚಾಮರಾಜೇಶ್ವರ, ಹರದನ ಹಳ್ಳಿಯ ದಿವ್ಯಲಿಂಗೇಶ್ವರ, ಕುಲಗಾಣ ಬಸವೇಶ್ವರ, ಬೆಟ್ಟದಪುರ ಸಿಡ್ಲಮಲ್ಲಿಕಾರ್ಜುನ. ಚುಂಚಕಟ್ಟೆಯ ಶ್ರೀರಾಮ, ಬ್ರಹ್ಮಾವರದ ಪಾಂಡುರಂಗ, ಹಿರಿಯೂರು ತೇರುಮಲ್ಲೇಶ್ವರ ಮುಂತಾದ ಇನ್ನೂ ಅನೇಕ ದೇವಾಲಯಗಳನ್ನು ಹೆಸರಿಸಬಹುದು. ಅದೇ ರೀತಿ ಉತ್ತರ ಕರ್ನಾಟಕದಲ್ಲೂ ಅನೇಕ ದೇವಾಲಯಗಳನ್ನು ಭಿತ್ತಿ ಚಿತ್ರಗಳಿಂದ ಅಲಂಕರಿಸಲಾಗಿದೆ. ಉತ್ತರ ಕರ್ನಾಟಕದಲ್ಲಿ ಪ್ರಾಚೀನ



ದೇವಾಲಯಗಳಲ್ಲಿರುವ ಭಿತ್ತಿಚಿತ್ರಕಲೆ
1) ವಿರೂಪಾಕ್ಷ ದೇವಾಲಯ ಹಂಪಿ
2)ವಿಠಲ ದೇವಾಲಯ ಹಂಪಿ
3) ಕನಕಾಚಲಪತಿ ದೇವಾಲಯ ಕನಕಗಿರಿ
4) ವೆಂಕಟೇಶ್ವರ ದೇವಾಲಯ ನರಗುಂದ
5) ಶ್ರೀರಾಮದೇವಾಲಯ ಬಿ. ಕೆ. ಹಳ್ಳಿ
6) ಎಲ್ಲಮ್ಮದೇವಾಲಯ ಉಪ್ಪಿನಬೇಟಗೇರಿ
I) ವಿರುಪಾಕ್ಷ ಮಂಟಪದ ಚಿತ್ರಗಳು
II) ನಾಗಮಂಟಪದ ಚಿತ್ರಗಳು
I) ಕಲ್ಯಾಣ ಮಂಟಪದ ಚಿತ್ರಗಳು
II) ಕಲ್ಲಿನರಥದ ಮೇಲಿನ ವಿನ್ಯಾಸಗಳು
1 ಮೇಲ್ಛಾವಣಿಯ ಚಿತ್ರಗಳು
2 ತೊಲೆಯ ಮೇಲಿನ ಚಿತ್ರಗಳು
1) ಐತಿಹಾಸಿಕ ಚಿತ್ರಗಳು
2) ಧಾರ್ಮಿಕ ಚಿತ್ರಗಳು
1 ವಿದ್ಯಾರಣ್ಯ ಮೆರವಣಿಗೆ
2 ಯುದ್ಧದ ದೃಶ್ಯ
3 ಮೆರವಣಿಗೆ ದೃಶ್ಯ
1 ಬ್ರಾಹ್ಮಣ ಪಂಡಿತರು
2 ದ್ರೌಪದಿಸ್ವಯಂವರ
3 ತ್ರಿಪುರ ಸಂಹಾರ
4 ಪಾರ್ವತಿ ಕಲ್ಯಾಣ
5 ಅಷ್ಟದಿಕ್ಪಾಲರು
6 ವಿರುಪಾಕ್ಷದೇವರ ಚಿತ್ರ
7 ಸೀತಾಸ್ವಯಂವ
8 ವಿಷ್ಣುವಿನ ದಶಾವತಾರ
9 ಶಿವಪಾರ್ವತಿ ವಿವಾಹ
1 ಪಶ್ಚಿಮ ದಿಕ್ಕಿನ ತೊಲೆ ಚಿತ್ರಗಳು
2 ಉತ್ತರ ದಿಕ್ಕಿನ ತೊಲೆಯ ಚಿತ್ರಗಳು
3 ದಕ್ಷಿಣ ದಿಕ್ಕಿನ ತೊಲೆಯ ಚಿತ್ರಗಳು

ಭಿತ್ತಿ ಚಿತ್ರಗಳಿರುವ ದೇವಾಲಯಗಳೆಂದರೆ. ೧. ವಿರೂಪಾಕ್ಷೇಶ್ವರ ದೇವಾಲಯ ಹಂಪಿ. ೨. ವಿಠ್ಠಲದೇವಾಲಯ ಹಂಪಿ, ೩. ಕನಕಾಚಲಪತಿ ದೇವಾಲಯ ಕನಕಗಿರಿ. ೪. ವೆಂಕಟೇಶ್ವರ ದೇವಾಲಯ ನರಗುಂದ. ೫. ಎಲ್ಲಮ್ಮ ದೇವಾಲಯ, ಉಪ್ಪಿನ ಬೆಟಗೇರಿ. ೬. ಶ್ರೀರಾಮ ದೇವಾಲಯ ಬಿ. ಕೆ. ಹಳ್ಳಿ,.

**೧. ವಿರೂಪಾಕ್ಷೇಶ್ವರ ದೇವಾಲಯ, ಹಂಪಿ :** ಬಳ್ಳಾರಿ ಜಿಲ್ಲೆಯ ಹೊಸಪೇಟೆಯಿಂದ ಸುಮಾರು ೧೨ ಕಿ.ಮಿ. ಗಳ ಅಂತರದಲ್ಲಿ ತುಂಗಭದ್ರಾನದಿಯ ದಂಡೆಯ ಮೇಲೆ ಇರುವ ಹಂಪಿಯು ಹಿಂದೆ ವಿಜಯನಗರ ರಾಜಧಾನಿಯಾಗಿ ಮೆರೆದಸ್ಥಳ. ಇಲ್ಲಿನ ವಿರೂಪಾಕ್ಷ ದೇವಾಲಯದಲ್ಲಿ ಭಿತ್ತಿ ಚಿತ್ರಕಲೆ ರಚನೆಯಾಗಿದ್ದು ವಿಜಯನಗರ ಕಾಲದ ಭಿತ್ತಿಚಿತ್ರಗಳಿವೆ. ವಿರೂಪಾಕ್ಷ ದೇವಾಲಯದಲ್ಲಿ ಗರ್ಭಗೃಹದ ಎದುರಿನ ಮಂಟಪದಲ್ಲಿ ಮತ್ತು ಪಕ್ಕದ ನಾಗಪ್ರತಿಮೆಯ ಬಳಿಯಲ್ಲಿ ಚಿತ್ರಗಳು ರಚನೆಯಾಗಿದ್ದು ಈ ದೇವಾಲಯದ ಭಿತ್ತಿ ಚಿತ್ರಗಳನ್ನು ಸ್ಥೂಲವಾಗಿ ಎರಡು ರೀತಿಯಲ್ಲಿ ವಿಂಗಡಿಸಬಹುದು :

I. ವಿರೂಪಾಕ್ಷ ಮಂಟಪದ ಚಿತ್ರಗಳು

II. ನಾಗಮಂಟಪದ ಚಿತ್ರಗಳು.

**I. ವಿರೂಪಾಕ್ಷ ಮಂಟಪದ ಚಿತ್ರಗಳು :** ವಿರೂಪಾಕ್ಷ ದೇವಾಲಯದ ಮಂಟಪದಲ್ಲಿರುವ ಈ ಭಿತ್ತಿ ಚಿತ್ರಗಳ ಬಗೆಗೆ ೧೯೩೬ ರಲ್ಲಿ ಮೊದಲು ಜನರ ಗಮನ ಸೆಳೆದವರು ಎಸ್. ಪರಮಶಿವನ್ ಅವರು[೧೨೫] ನಂತರ ೧೯೪೬ ರಲ್ಲಿ ಸಿ. ಟಿ. ಯಂ. ಕೊಟ್ರಯ್ಯನವರು[೧೨೬] ಈ ಚಿತ್ರಗಳ ವಸ್ತುವಿಷಯ, ವರ್ಣಗಾರಿಕೆ, ಚಿತ್ರಗಳ ರಚನಾ ಕಾಲಗಳ ಬಗೆಗೆ ಚರ್ಚಿಸಿದ್ದಾರೆ. ಕರ್ನಾಟಕದ ಚಿತ್ರಕಲೆಯ ಬಗೆಗೆ ಹೇಳುವಾಗ ಡಾ. ಶಿವರಾಮ ಕಾರಂತ ಅವರು[೧೨೭] ಈ ಚಿತ್ರಗಳ ವಿಷಯವಾಗಿ ಬರೆದಿದ್ದಾರೆ. ಪಿ. ಶ್ರೀನಿವಾಸಾಚಾರ್ ಅವರ ವಿಜಯನಗರ ಪೇಂಟಿಂಗ್ಸ್ ಎಂಬ ಕೃತಿಯು ಇವುಗಳನ್ನು ಕುರಿತು ಹೇಳುತ್ತದೆ[೧೨೮] ಸಿ. ಶಿವರಾಮ ಮೂರ್ತಿಯವರು ಬರೆದ ಲೇಖನಗಳನ್ನು ಒಟ್ಟುಗೂಡಿಸಿ ಪುಸ್ತಕ ಒಂದನ್ನು ತರಲಾಗಿದ್ದು[೧೨೯] ಅದರಲ್ಲಿ ಇವುಗಳ ವಿವರವಿದೆ ಡಾ. ಸಿಂದಗಿ ರಾಜಶೇಖರ ಅವರು[೧೩೦] ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ ಕುರಿತು ಹೇಳುವಾಗ ಈ ಚಿತ್ರಗಳ ವಿಷಯ ಹೇಳುತ್ತ ಇವುಗಳ ರಚನಾಕಾಲದ ಬಗ್ಗೆ ಚರ್ಚಿಸಿದ್ದಾರೆ. ಡಾ. ಎಸ್. ಸಿ. ಪಾಟೀಲ ಅವರು[೧೩೧] ಜನಪದ ಚಿತ್ರಕಲೆಯ ಬಗ್ಗೆ ಅಧ್ಯಯನ ಮಾಡುವಾಗ ಸಾಂದರ್ಭಿಕವಾಗಿ ಈ ಚಿತ್ರಗಳನ್ನು ವಿವರಿಸಿದ್ದಾರೆ. ಅ. ಲ. ನರಸಿಂಹನ್ ಅವರು[೧೩೨] ಕರ್ನಾಟಕ ಚಿತ್ರಕಲೆಯ ಸಾಂಸ್ಕೃತಿಕ ಅಧ್ಯಯನ ಸಂದರ್ಭದಲ್ಲಿ ಇವುಗಳನ್ನು ಹೆಸರಿಸಿದ್ದಾರೆ. ಇವುಗಳಲ್ಲದೇ ಇತ್ತೀಚೆಗೆ ಚಲುವರಾಜು ಅವರು[೧೩೩] ಹಂಪಿಯ ಸ್ಮಾರಕಗಳಲ್ಲಿ ಜನಾನಪದೀಯ ಅಂಶಗಳನ್ನು ಕುರಿತು ಹೇಳುವಾಗ ಈ ಚಿತ್ರಗಳನ್ನು ಪ್ರಸ್ತಾಪಿಸಿದ್ದಾರೆ.

---

೧೨೫. S. Paramasivan : The Vijayanagera Paintings, Vijayanagara Sexcentenary Commemoration Volume, Page 86, 98

೧೨೬. C. T. M. Kotraiah : Vijayanagara Paintings at Virupaksha Temple Hampi, Q.J.M.S. Page 228, 37

೧೨೭. ಡಾ. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪುಟ ೫೮, ೬೧

೧೨೮. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ : ಜೂನ್ ೧೯೭೯, ಪುಟ ೨೯, ಕರ್ನಾಟಕ ಇತಿಹಾಸದಲ್ಲಿ ಸಂಶೋಧನೆ ಆದದ್ದು, ಆಗಬೇಕಾದದ್ದು, ಸೂರ್ಯನಾಥ ಕಾಮತ್

೧೨೯. C. Sivarama Murti : Vijayanagara Paintings, Delhi 1985

೧೩೦. ಡಾ. ಸಿಂದಗಿ ರಾಜಶೇಖರ : ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ

೧೩೧. ಡಾ. ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ ಪುಟ ೪೮

೧೩೨. ಅ. ಲ. ನರಸಿಂಹನ್ : ಕರ್ನಾಟಕ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು (ಬೆಂಗಳೂರು ವಿ. ವಿ. ಗೆ ಸಲ್ಲಿಸಿದ ಪಿ.ಹೆಚ್‌ಡಿ. ಬೆರಳಚ್ಚು ಮಹಾಪ್ರಬಂಧ) ಪುಟ ೫೨೭, ೩೮

೧೩೩. ಚೆಲುವರಾಜು : ಹಂಪಿಯಸ್ಮಾರಕಗಳಲ್ಲಿ ಜನಪದೀಯ ಅಂಶಗಳು, ಪುಟ ೩೫, ೩೮

*ರಚನೆಯ ಕಾಲ :* ವಿರುಪಾಕ್ಷ ದೇವಾಲಯದ ಭಿತ್ತಿಚಿತ್ರಗಳ ಕಾಲ ವಿಚಾರವಾಗಿ ಅನೇಕರು ಚರ್ಚಿಸಿದ್ದಾರೆ. ವೀರಮಾನಪ್ಪ ಒಡೆಯನ ಕಾಲದ ಮಂಟಪದಲ್ಲಿ ಚಿತ್ರಗಳು ಇರುವುದರಿಂದ ಮಂಟಪದ ಕಾಲವಾದ ಕ್ರಿ. ಶ. ೧೩೪೭ ರಲ್ಲಿಯೇ ಚಿತ್ರಗಳನ್ನು ಬರೆಸಲಾಗಿದೆ ಎಂದು ಸಾಲೆತ್ತೊರೆಯವರು[೧೩೪] ಊಹಿಸುತ್ತಾರೆ. ಕೃಷ್ಣದೇವರಾಯ ಕ್ರಿ. ಶ. ೧೫೦೯ ರಲ್ಲಿ ಕಟ್ಟಿಸಿದ ಮಂಟಪದಲ್ಲಿ ಚಿತ್ರಗಳು ಇರುವುದರಿಂದ ಇವು ಆತನ ಆಡಳಿತ ಕಾಲದಲ್ಲಿ ಅಂದರೆ ಕ್ರಿ. ಶ. ೧೫೦೯ ರಿಂದ ೧೫೩೦ ರ ನಡುವೆ ರಚನೆಯಾಗಿವೆ ಎಂದು ಸಿ. ಟಿ. ಎಂ. ಕೊಟ್ರಯ್ಯನವರು ಹೇಳುತ್ತಾರೆ.[೧೩೫] ಆದರೆ ಇಲ್ಲಿಯ ಚಿತ್ರಗಳ ರಚನೆಗೆ ಅಂಕಣಗಳಾಗಿ ಪಟ್ಟಿಕೆಗಳನ್ನು ರೂಪಿಸಿರುವುದು. ಮೇಲ್ಭಾಗದಲ್ಲಿ ಚಿತ್ರಗಳಿರದ ಸ್ಥಳದಲ್ಲಿ ತೆಂಗಿನಮರದ ಚಿತ್ರಗಳಿರುವುದು ಅವು ೧೬ ನೇ ಶತಮಾನಕ್ಕೆ ಮೊದಲು ಭಿತ್ತಿ ಚಿತ್ರಗಳಲ್ಲಿ ಕಾಣಿಸಿಕೊಳ್ಳದೇ ಇರುವುದು, ಆಂಧ್ರದ ಹೊಳಲಗುಂದಿಯ ೧೮ ನೇ ಶತಮಾನದ ಚಿತ್ರಗಳು ಇಲ್ಲಿಂದ ಪ್ರಭಾವಿತವಾಗಿರುವ ಹಿನ್ನೆಲೆಯನ್ನು ಈ ಚಿತ್ರಗಳು ಕ್ರಿ. ಶ. ೧೭ ನೇ ಶತಮಾನದ ಮೊದಲ ಭಾಗದಲ್ಲಿ ರಚನೆಯಾಗಿವೆ ಎಂದು ಎಸ್. ರಾಜಶೇಖರ್ ಅವರು[೧೩೬] ಅಭಿಪ್ರಾಯಪಡುತ್ತಾರೆ. ಇದೇ ವಾದವನ್ನು ಅ. ಲ. ನರಸಿಂಹನ್[೧೩೭] ಅವರೂ ಒಪ್ಪುತ್ತಾರೆ.

ವಿದ್ವಾಂಸರ ಈ ತೆರನಾದ ಅಭಿಪ್ರಾಯಗಳಲ್ಲಿ ಸಿ.ಟಿ.ಎಂ. ಕೊಟ್ರಯ್ಯನವರು ಹೇಳುವಂತೆ ಕೃಷ್ಣದೇವರಾಯನ ಕಾಲದಲ್ಲೇ ಈ ಚಿತ್ರಗಳು ರಚನೆಯಾಗಿವೆ ಎನ್ನುವುದು ಹೆಚ್ಚು ಯೋಗ್ಯವೆನಿಸುತ್ತದೆ. ಇದಕ್ಕೆ ಪೂರಕವಾಗಿ ಇನ್ನೂ ಕೆಲವು ಸಂಗತಿಗಳನ್ನು ಹೇಳುವುದಾದರೆ ಕೃಷ್ಣದೇವರಾಯ ಕಟ್ಟಿಸಿದ ಮಂಟಪದಲ್ಲಿ ಚಿತ್ರಗಳು ರಚನೆಯಾಗಿವೆ ಎನ್ನುವುದು ಅಷ್ಟೇ ಬಲವಾದ ಕಾರಣವಲ್ಲ. ಎಸ್. ರಾಜಶೇಖರ ಅವರು ಇಲ್ಲಿನ ಚಿತ್ರಗಳಲ್ಲಿ ಚಿತ್ರಣಕ್ಕಾಗಿ ಅಂಕಣಗಳನ್ನು ಮಾಡಿಕೊಂಡಿದ್ದು, ಚಿತ್ರಗಳ ಮೇಲ್ಭಾಗದಲ್ಲಿ ತೋರಣಗಳ ವಿನ್ಯಾಸವಿರುವುದು ಅದರ ಎಡಬಲಗಳಲ್ಲಿ ಟೆಂಗಿನ ಮರದ ಚಿತ್ರವಿರುವುದು ಇಂತಹ ಲಕ್ಷಣಗಳಿಂದ ಇವು ಕೃಷ್ಣದೇವರಾಯನ ಕಾಲದ ರಚನೆಗಳಲ್ಲ ಎನ್ನುತ್ತಾರೆ. ಇದೇ ವಾದವನ್ನೇ ಒಪ್ಪುವ ಅ. ಲ. ನರಸಿಂಹನ್ ಪೂರಕವಾಗಿ ಇಲ್ಲಿನ ಯುದ್ಧದಲ್ಲಿ ಕೋವಿಗಳನ್ನು ಹಿಡಿದವರು ಮುಸ್ಲಿಂ ಶೈಲಿಯ ಉಡುಪು ಧರಿಸಿದವರೂ ಚಿತ್ರದಲ್ಲಿ ಕಂಡುಬರುತ್ತಾರೆ. ಹಾಗಾಗಿ ಈ ಚಿತ್ರಗಳು ೧೭ ನೇ ಶತಮಾನದ ಪ್ರಾರಂಭದಲ್ಲಿ ರಚನೆಯಾಗಿವೆ ಎನ್ನುತ್ತಾರೆ. ಆದರೆ ಸೂಕ್ಷ್ಮವಾಗಿ ಗಮನಿಸಿದಾಗ ಚಿತ್ರಗಳಲ್ಲಿನ ಇಂತಹ ವಿವರಗಳೇ ನಮಗೆ ಚಿತ್ರಗಳ ರಚನಾ ಕಾಲವನ್ನು ನಿರ್ಧರಿಸುವಲ್ಲಿ ಸಹಾಯ ಮಾಡುತ್ತವೆ. ಚಿತ್ರಗಳಲ್ಲಿ ಮೇಲ್ಭಾಗದಲ್ಲಿನ ತೋರಣಗಳ ವಿನ್ಯಾಸವು ವಿಜಯನಗರ ಶೈಲಿಯ ರಾಯಗೋಪುರಗಳನ್ನು ಹೋಲುತ್ತವೆ. ಇಂತಹ ರಾಯಗೋಪುರಗಳನ್ನು ಕೃಷ್ಣದೇವರಾಯನ ಕಾಲಕ್ಕೆ ಅನೇಕ ಸ್ಥಳಗಳ ದೇವಾಲಯಗಳಲ್ಲಿ ಕಟ್ಟಿಸಲಾಯಿತು ಎಂಬುದು ಇತಿಹಾಸದಿಂದ ತಿಳಿದುಬರವುದು ದೇವಾಲಯ ನಿರ್ಮಾಣದಲ್ಲಿ ವಿಶಿಷ್ಟವೆನಿಸುವ ಇಂತಹ ರಾಯಗೋಪುರಗಳನ್ನು ಆತನ ಕಾಲದಲ್ಲಿ ಚಿತ್ರರನೆಯಲ್ಲಿಯೂ ವಿನ್ಯಾಸಗೊಳಿಸಿರುವ ಸಾಧ್ಯತೆಗಳಿವೆ.

ಈ ಗೋಪುರದ ವಿನ್ಯಾಸದಲ್ಲಿರುವ ಆಕೃತಿಯ ಎಡಬಲಗಳಲ್ಲಿರುವ ಟೆಂಗಿನ ಮರಗಳು ಕಲಾವಿದನ ಸುತ್ತಲಿನ ಪರಿಸರದ ವಿಕ್ಷಣೆಯ ಪ್ರತಿಬಿಂಬಗಳಾಗಿವೆ ಎನ್ನಬಹುದು. ಕೃಷ್ಣದೇವರಾಯನ ಕಾಲದಲ್ಲಿ ಮತ್ತು ಅದಕ್ಕಿಂತ ಹಿಂದಿನ

---

೧೩೪. R. N. Saletore : Vijayanagara Art, Page 220

೧೩೫. C. T. M. Kotraiah : Vijayanagara Paintings at Virupaksha Temple Hampi, Q.J.M.S. II, Jan 1959, Page 231-32

೧೩೬. ಡಾ. ಸಿಂದಗಿ ರಾಜಶೇಖರ : ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಪುಟ ೨೦೨ - ೨೦೩

೧೩೭. ಅ.ಲ. ನರಸಿಂಹನ್ : ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, (ಬೆಂಗಳೂರು ವಿ.ವಿ.ಗೆ. ಸಲ್ಲಿಸಿದ ಪಿ.ಹೆಚ್‌ಡಿ. ಮಹಾಪ್ರಬಂಧದ ಬೆರಳಚ್ಚು ಪ್ರತಿ) ಪುಟ ೫೬೪

ದಿನಗಳಲ್ಲಿ ರಾಜಧಾನಿಗೆ ಭೇಟಿನೀಡಿದ ಪ್ರವಾಸಿಗರೆಲ್ಲ ರಾಜಧಾನಿಯನ್ನು ವರ್ಣಿಸುವಾಗ ಇಲ್ಲಿನ ಟೆಂಗಿನ ತೋಪುಗಳನ್ನು ವಿವರಿಸುತ್ತಾ ಅರಮನೆಯ ಸನಿಹದಲ್ಲಿ ದೇವಾಲಯದ ಬಳಿಯ ತೋಟದಲ್ಲಿ ಭತ್ತದಗದ್ದೆಗಳಲ್ಲಿ, ಉದ್ಯಾನಗಳಲ್ಲಿ ಟೆಂಗಿನ ಮರಗಳು ತುಂಬಿಕೊಂಡಿವೆ[೧೩೮] ಎಂದು ಹೇಳುತ್ತಾರೆ. ಹೀಗೆ ರಾಜಧಾನಿಯ ತುಂಬ ಇರುವ ಟೆಂಗಿನ ಮರಗಳ ಪ್ರಭಾವ ಕಲಾವಿದನ ಆ ಕಾಲದ ಭಾವನಾತ್ಮಕ ಕ್ರಿಯೆಗೆ ವಸ್ತುವಾಗಿದ್ದು, ಸಹಜವಾಗಿದೆ. ಇಲ್ಲಿನ ಯುದ್ಧ ಚಿತ್ರದಲ್ಲಿ ಫಿರಂಗಿ. ಕೋವಿಗಳು ಬಳಕೆಯಾಗಿವೆ ಅವು ಕ್ರಿ. ಶ. ೧೬ ನೇ ಶತಮಾನಕ್ಕಿಂತ ಮೊದಲು ಯುದ್ಧಗಳಲ್ಲಿ ಕಂಡುಬರುವುದಿಲ್ಲ ಮುಸ್ಲಿವೇಷತೊಟ್ಟ ಜನರೂ ಇಲ್ಲಿರುವುದು ಇವು ೧೬ ನೇ ಶತಮಾನದ ಚಿತ್ರಗಳಾಗಿವೆ ಎಂದು ಅ. ಲ. ನರಸಿಂಹನ್ ಅವರೂ ಒಪ್ಪುತ್ತಾರೆ. ಆದರೆ ಕೃಷ್ಣದೇವರಾಯನ ಕಾಲಕ್ಕೆ ನಡೆದ ರಾಯಚೂರು ಮೇಲಿನ ದಂಡಯಾತ್ರೆಯ ಕಾಲಕ್ಕೆ ತೋಪುಗಳು ಬಳಕೆಯಾಗಿದ್ದವು[೧೩೯] ಎಂದು ತಿಳಿದುಬರುವುದು. ಅಲ್ಲದೇ ರಾಯಚೂರಿನ ಯುದ್ಧದಲ್ಲಿ ಪೋರ್ಚುಗೀಜ ನಾಯಕ ಕ್ರಿಸ್ಟೋವಾಓದ ಫಿಗೈರೆಡೊ ಮತ್ತು ಅವನ ಇಪ್ಪತ್ತು ಜನ ಸಂಗಡಿಗರು ಕೋವಿಗಳನ್ನು ಬಳಸಿ ಹೆಚ್ಚಿನ ಸಹಾಯವನ್ನು ಕೃಷ್ಣದೇವರಾಯನಿಗೆ ಮಾಡಿದರು.[೧೪೦] ಪೋರ್ಚುಗೀಜರ ಕೋವಿಗಳ ಬಳಕೆಯಿಂದ ಕೋಟೆಯು ಬಲುಬೇಗನೇ ಕೃಷ್ಣದೇವರಾಯನ ಹಿಡಿತಕ್ಕೆ ಬಂದಿತೆಂದು, ಈ ಬಗೆಯ ಸಹಾಯಕ್ಕಾಗಿ ಅವರನ್ನು ರಾಯನು ಅಭಿನಂದಿಸುತ್ತಾನೆ. ಕೃಷ್ಣದೇವರಾಯನ ಆಪ್ತಸೇವೆಯಲ್ಲಿ ಮುಸ್ಲಿಮರೂ ಇದ್ದು, ರಾಯಚೂರಿನ ಯುದ್ಧದಲ್ಲಿ ಮೊದಲಿಗೆ ಮಾರ್ಗತೋರಲು ತನ್ನ ಬಳಿ ಇದ್ದ ಮುಸ್ಲಿಂ ಸೇವಕರನ್ನೇ ಕಳಿಸಿದನು ಎಂದು ಪ್ರತ್ಯಕ್ಷದರ್ಶಿಯಾದ ನ್ಯೂನಿಜ್[೧೪೧] ಹೇಳುತ್ತಾನೆ. ಇದರಿಂದ ಕೃಷ್ಣದೇವರಾಯನ ಕಾಲದಲ್ಲೇ ಅನೇಕ ಮುಸ್ಲಿಂ ಸೇವಕ, ಸೈನಿಕರು ಇದ್ದುದಾಗಿ ತಿಳಿಯುತ್ತದೆ. ಹಾಗಾಗಿ ಈ ಚಿತ್ರಗಳು ಕೃಷ್ಣದೇವರಾಯನ ಕಾಲದ ರಚನೆಗಳೇ ಎನ್ನುವುದು ಹೆಚ್ಚು ಸಮಂಜಸವಾಗಿದೆ. ಕೃಷ್ಣದೇವರಾಯನು ತನ್ನ ರಾಯಚೂರು ವಿಜಯದನಂತರ ರಾಜಧಾನಿಯಲ್ಲಿ ದೊಡ್ಡ ಉತ್ಸವ ಆಚರಿಸಿದನೆಂದು[೧೪೨] ಉಲ್ಲೇಖವಿದ್ದು ಆ ಸಮಯದಲ್ಲಿಯೇ ತಾನು ಈ ಮೊದಲು ಕ್ರಿ. ಶ. ೧೫೧೯ ರಲ್ಲಿ ಕಟ್ಟಿಸಿದ್ದ ಮಂಟಪದಲ್ಲಿ ಚಿತ್ರಬರೆಸಿರಬಹುದೆಂದು ಊಹಿಸಲು ಅವಕಾಶವಿದೆ. ಹಿಂದೆ ಉದಯಗಿರಿ, ಕೊಂಡವೀಡು, ಕಾಟೂರ್‌ಗಳ ಮೇಲಿನ ವಿಜಯದ ನಂತರ ಕೃಷ್ಣದೇವಾಲಯ, ಹಜಾರರಾಮಸ್ವಾಮಿದೇವಾಯಲಗಳನ್ನು ಕಟ್ಟಿಸಿದಂತೆ, ರಾಯಚೂರಿನ ವಿಜಯದ ನಂತರ ಸ್ಮರಣಾರ್ಥವಾಗಿ ವಿರೂಪಾಕ್ಷ ದೇವಾಲಯದ ಭಿತ್ತಿ ಚಿತ್ರಗಳನ್ನು ಬರೆಸಿರುವ ಸಾಧ್ಯತೆ ಇದೆ. ಇಲ್ಲಿನ ಯುದ್ಧ ಚಿತ್ರದಲ್ಲಿ ರಾಯಚೂರು ಮುತ್ತಿಗೆಯಲ್ಲಿ ಆತನಿಗೆ ಸಹಾಯಮಾಡಿದ ಪೋರ್ತುಗೀಜರು, ಅವರು ಬಳಸಿದ ಕೋವಿಗಳು, ಆತನ ಆಪ್ತ ಮುಸ್ಲಿಂ ಸೇವಕರು ಚಿತ್ರಿತರಾಗಿದ್ದಾರೆ. ಇಲ್ಲಿನ ಯುದ್ಧರಥದ ಮೇಲ್ಭಾಗದ ಕಳಶವೂ ಸಹಿತ ವಿಜಯನಗರ ಶೈಲಿಯ ರಾಯಗೋಪುರದಂತೆ ಇರುವುದನ್ನುಗಮನಿಸಬಹುದು. ಇಲ್ಲಿನ ಯುದ್ಧ ಚಿತ್ರದಲ್ಲಿ ತನಗೆ ಸಹಾಯಮಾಡಿದ ಪೋರ್ತುಗೀಜ ಸೈನಿಕರನ್ನು ಚಿತ್ರಿಸಿರುವುದು ಯೋಗ್ಯವಾಗಿದೆ. ರಾಯಚೂರು ಯುದ್ಧವು ಕ್ರಿ. ಶ: ೧೫೨೦ ರಲ್ಲಿ ಸಂಭವಿಸಿದ್ದು, ವಿಜಯ ಪಡೆದುಕೊಂಡ ಕೃಷ್ಣದೇವರಾಯನು ರಾಜಧಾನಿಗೆ ಹಿಂತಿರುಗಿ ಉತ್ಸವ ಆಚರಣೆ ಮಾಡಿದನು. ಹಾಗಾಗಿ ಇಲ್ಲಿನ ಚಿತ್ರಗಳೂ ಸಹಿತ ಇದೇ ಕಾಲದಲ್ಲಿ ಅಂದರೆ ಕ್ರಿ. ಶ. ೧೫೨೦ ರ ಕೊನೆಯಲ್ಲಿ ರಚನೆಯಾಗಿವೆ ಎಂದು

---

೧೩೮. ಸದಾನಂದ ಕನವಳ್ಳಿ (ಅನು) : ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಪುಟ ೨೭೨, ೨೭೪, ೨೭೫

೧೩೯. ಸದಾನಂದ ಕನವಳ್ಳಿ (ಅನು) : ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಪುಟ ೧೫೦

೧೪೦. ಸದಾನಂದ ಕನವಳ್ಳಿ (ಅನು) : ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಪುಟ ೧೫೨

೧೪೧. ಸದಾನಂದ ಕನವಳ್ಳಿ (ಅನು) : ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಪುಟ ೩೪೯

೧೪೨. ಸದಾನಂದ ಕನವಳ್ಳಿ (ಅನು) : ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಪುಟ ೩೪೯

ಹೇಳಬಹುದಾಗಿದೆ. ಇಲ್ಲಿನ ಯುದ್ಧ ಚಿತ್ರದ ಮೇಲ್ಭಾಗದಲ್ಲಿ ಒಂದು ಚಿಕ್ಕ ಉದ್ದಪಟ್ಟಿಯಲ್ಲಿ ಮೆರವಣಿಗೆಯ ದೃಶ್ಯ ಚಿತ್ರಿಸಲಾಗಿದ್ದು ಅದು ಯುದ್ಧದ ವಿಜಯೋತ್ಸವವನ್ನೇ ಪ್ರತಿನಿಧಿಸುವಂತಿದೆ. ಇಂತಹ ಹಲವು ಕಾರಣಗಳಿಂದ ಈ ಚಿತ್ರಗಳು ರಾಯಚೂರು ಮೇಲಿನ ವಿಜಯದ ನೆನಪಿಗಾಗಿ ಕೃಷ್ಣದೇವರಾಯನಿಂದ ಕ್ರಿ. ಶ. ೧೫೨೦ ರಲ್ಲಿ ಬರೆಸಲ್ಪಟ್ಟವು ಎಂದು ಹೇಳುವುದು ಹೆಚ್ಚು ಯೋಗ್ಯವೆನಿಸುತ್ತದೆ.

ಇಲ್ಲಿ ಚಿತ್ರಗಳು ಮಹಾಕಾವ್ಯಗಳು ಮತ್ತು ಶೈವಪುರಾಣಗಳನ್ನು ಮುಖ್ಯವಾಗಿ ಅವಲಬಿಸಿವೆ. ಇವುಗಳಲ್ಲದೇ ಇತರ ದೇವಾನುದೇವತೆಗಳು. ಅಷ್ಟದಿಕ್ಪಾಲಕರು ಮತ್ತು ಯುದ್ಧ ದೃಶ್ಯಗಳನ್ನು ಒಳಗೊಂಡಿವೆ ಇಲ್ಲಿಯ ಚಿತ್ರಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಬಹುದು. ಮೊದಲನೆಯದನ್ನು ಮೇಲ್ಛಾವಣಿಯ ಚಿತ್ರಗಳು, ಎರಡನೆಯ ಗುಂಪನ್ನು ತೊಲೆಗಳ ಮೇಲೆ ರಚಿಸಿದ ಚಿತ್ರಗಳೆಂದು ಪರಿಗಣಿಸಬಹುದು. ಮೊದಲನೆಯ ಗುಂಪಿನ ಮೇಲ್ಛಾವಣಿಯಲ್ಲಿ ದೊಡ್ಡ ದೊಡ್ಡ ಪಟ್ಟಿಕೆಗಳನ್ನಾಗಿ ಮಾಡಿಕೊಂಡು ಅವುಗಳಲ್ಲಿ ಮಹಾಕಾವ್ಯಗಳು ಮತ್ತು ಶೈವಪುರಾಣಗಳಿಂದ ಆಯ್ದ ಘಟನೆಗಳನ್ನು ರಚಿಸಲಾಗಿದೆ. ಎರಡನೆಯ ಗುಂಪಿನ ಚಿತ್ರಗಳಲ್ಲಿ ತೊಲೆಗಳ ಮೇಲೆ ಚಿಕ್ಕ ಚಿಕ್ಕ ಪಟ್ಟಿಕೆಗಳನ್ನು ಮಾಡಿಕೊಂಡು ಚಿತ್ರರಚಿಸಿದ್ದು. ಹೆಚ್ಚಾಗಿ ಏಕವ್ಯಕ್ತಿ ಚಿತ್ರಗಳನ್ನು ಹೊಂದಿವೆ. ಈ ಪ್ರಕಾರದ ಚಿತ್ರಗಳಲ್ಲಿ ಮುನಿಗಳು, ಪ್ರಾಣಿಗಳು. ಪಕ್ಷಿಗಳು. ವಾದ್ಯಗಾರರು. ಮತ್ತು ಪ್ರಾರ್ಥಿಸುತ್ತಿರುವವರು ಮುಂತಾದ ಚಿತ್ರಗಳಿವೆ. ಇಂತಹ ಚಿಕ್ಕ ಪ್ರಮಾಣದ ಚಿತ್ರಗಳು ಒಟ್ಟು ೬೭ ಪಟ್ಟಿಕೆಗಳಲ್ಲಿವೆ. ಚಿಕ್ಕ ಪ್ರಮಾಣದ ಚಿತ್ರಗಳನ್ನು ಬರೀ ತೊಲೆಯ ಮೇಲೆ ಅಷ್ಟೇ ಅಲ್ಲದೇ ಮೇಲ್ಛಾವಣಿಯಲ್ಲಿ ಕೂಡಾ ದೊಡ್ಡ ದೊಡ್ಡ ಚಿತ್ರಪಟ್ಟಿಕೆಯಮಧ್ಯದಲ್ಲಿ ಅಲ್ಲಲ್ಲಿ ಚಿಕ್ಕಚಿಕ್ಕ ಪಟ್ಟಿಕೆಗಳನ್ನು ರಚಿಸಿ ಚಿತ್ರರಚಿಸಲಾಗಿದೆ. ದೊಡ್ಡ ಪಟ್ಟಿಕೆಯ ಚಿತ್ರಗಳಲ್ಲಿ ವಿದ್ಯಾರಣ್ಯರ ಮೆರವಣಿಗೆ ದೃಶ್ಯಯುದ್ಧ ಒಂದರ ದೃಶ್ಯ, ದ್ರೌಪದೀ ಸ್ವಾಯಂವರ ದೃಶ್ಯ, ತ್ರಿಪುರ ಸಂಹಾರ. ಶಿವಪಾರ್ವತಿ ಕಲ್ಯಾಣ (ಮನ್ಮಥ ವಿಜಯ), ದೃಶ್ಯಗಳಿವೆ. ಹಂಪೆಯ ವಿರೂಪಾಕ್ಷ ಮಂಟಪದ ಭಿತ್ತಿಚಿತ್ರಗಳನ್ನು ಅವು ರಚನೆಯಾದ ಸ್ಥಳಗಳನ್ನಾಧರಿಸಿ ಈ ಕೆಳಗಿನಂತೆ ಎರಡು ರೀತಿಯಲ್ಲಿ ವಿಂಗಡಿಸಬಹುದಾಗಿದೆ.

I. ಮೇಲ್ಛಾವಣಿಯ ಚಿತ್ರಗಳು.

II. ತೊಲೆಯ ಮೇಲೆ ರಚಿಸಿದ ಚಿತ್ರಗಳು.

**I. ಮೇಲ್ಛಾವಣಿಯ ಚಿತ್ರಗಳು :** ಮೇಲ್ಛಾವಣಿಯಲ್ಲಿ ದೊಡ್ಡ ದೊಡ್ಡ ಪಟ್ಟಿಕೆಗಳನ್ನು, ಹಾಗೂ ಅಲ್ಲಲ್ಲಿ ಪೂರಕವಾದ ಚಿಕ್ಕ ಪಟ್ಟಿಕೆಗಳನ್ನು ರೂಪಿಸಿಕೊಂಡು ಅವುಗಳಲ್ಲಿ ಚಿತ್ರರಚನೆ ಮಾಡಲಾಗಿದೆ. ಮೇಲ್ಛಾವಣಿಯ ಈ ಚಿತ್ರಗಳನ್ನು ಅಧ್ಯಯನದ ಅನುಕೂಲಕ್ಕಾಗಿ ವಿಷಯಾಧಾರಿತವಾಗಿ ಮತ್ತೆ ಕೆಳಗಿನಂತೆ ಎರಡು ರೀತಿಯಲ್ಲಿ ವಿಂಗಡಿಸಬಹುದು.

I. ಐತಿಹಾಸಿಕ ಚಿತ್ರಗಳು

II. ಧಾರ್ಮಿಕ ಚಿತ್ರಗಳು.

***I. ಐತಿಹಾಸಿಕ ಚಿತ್ರಗಳು :*** ಇಲ್ಲಿನ ಐತಿಹಾಸಿಕ ಚಿತ್ರಗಳಲ್ಲಿ ವಿದ್ಯಾರಣ್ಯರ ಮೆರವಣಿಗೆಯ ಚಿತ್ರ, ಯುದ್ಧ ಒಂದರ ದೃಶ್ಯ ಮತ್ತು ಇನ್ನೊಂದು ವಾದ್ಯಗಾರರಿರುವ ಗುಂಪುಚಿತ್ರವನ್ನು ಸೇರಿಸಬಹುದು ಅವುಗಳನ್ನು ಒಂದೊಂದಾಗಿ ಓಗೆ ವಿವರಿಸಬಹುದು.

*೧. ವಿದ್ಯಾರಣ್ಯರ ಮೆರವಣಿಗೆಯ ಚಿತ್ರ :* ಮಂಟಪವನ್ನು ಪೂರ್ವ ದಿಕ್ಕಿನಿಂದ ಪ್ರವೇಶಿಸಿದಾಗ ಕಾಣುವ ಮೊದಲ ಪಟ್ಟಿಕೆಯಲ್ಲಿ ವಿದ್ಯಾರಣ್ಯರ ಮೆರಣವಣಿಗೆ ದೃಶ್ಯ ಪ್ರಮುಖವಾಗಿ ಕಂಡುಬರುತ್ತದೆ. ಪಲ್ಲಕ್ಕಿಯಲ್ಲಿ ಕುಳಿತ ಯತಿಯೊಬ್ಬರನ್ನು ಮೆರವಣಿಗೆಯಲ್ಲಿ ಕರೆದೊಯ್ಯುತ್ತಿದ್ದು ಅವರ ಹಿಂದೆ ಮುಂದೆ ಬಿರುದು ಬಾವಲಿಗಳನ್ನು ಛತ್ರ ಚಾಮರಗಳನ್ನು ಹಿಡಿದುಕೊಂಡ ಅನೇಕ ಜನರು. ಆನೆ, ಕುದುರೆ, ವಾದ್ಯಕಾರರು ಬರುತ್ತಿದ್ದಾರೆ. ತೀರ ಹಿಂದುಗಡೆಗೆ ಅಂಬಾರಿ ಹೊತ್ತುಕೊಂಡು ಆನೆಯೊಂದು ಗಂಭೀರವಾಗಿ ಬರುತ್ತಲಿದೆ. ಇಲ್ಲಿನ ಹೆಚ್ಚಿನ ಎಲ್ಲ ಚಿತ್ರಗಳೂ ಬದಿಯ ನೋಟದಲ್ಲಿವೆ. ಒಬ್ಬರ ಹಿಂದೆ ಒಬ್ಬರು ಸಾಲಾಗಿ ಜನರನ್ನು ಚಿತ್ರಿಸಿದಾಗ್ಯೂ ಹಿಂದಿನ ಜನರು ಸ್ಪಷ್ಟವಾಗಿ ಕಾಣಲೆಂದು ಅವರನ್ನು ಮುಂದಿನವರಿಗಿಂತ ಎತ್ತರದಲ್ಲಿ ಚಿತ್ರಿಸಿದ್ದಾರೆ. ಈ ಚಿತ್ರದ ಬಗ್ಗೆ ಹಲವು ಭಿನ್ನಾಭಿಪ್ರಾಯವಿದ್ದು ವಿದ್ಯಾರಣ್ಯರು ಅಲ್ಲ. ಅದು ಕ್ರಿಯಾಶಕ್ತಿ ಪಂಡಿತರನ್ನು ಪ್ರತಿನಿಧಿಸುತ್ತದೆ ಎಂದು ಕೆಲವರು ವಾದಿಸುತ್ತಾರೆ. ಏನೇ ಆದರೂ ಅದು ಆ ಕಾಲದ ಒಬ್ಬ ಪ್ರಸಿದ್ಧ ರಾಜಪುರೋಹಿತರ ಚಿತ್ರವಾಗಿದೆ.

*೨. ಯುದ್ಧದ ದೃಶ್ಯ :* ಎರಡನೆಯ ಪಟ್ಟಿಕೆಯಲ್ಲಿ ಯುದ್ಧ ಒಂದರ ದೃಶ್ಯವಿದೆ. ಈ ಯುದ್ಧದೃಶ್ಯವನ್ನು ಒಂದು ದೊಡ್ಡದಾದ ಪಟ್ಟಿಕೆಯಲ್ಲಿ ಚೌಕಗಳನ್ನು ಮಾಡಿಕೊಂಡು ಅದರಲ್ಲಿ ಭಾಗಗಳನ್ನಾಗಿ ಮಾಡಿಕೊಂಡು ರಚಿಸಲಾಗಿದೆ. ಮೊದಲ ಚೌಕದಲ್ಲಿ ಮೂರು ರಥಗಳಿದ್ದು ಅದರಲ್ಲಿ ಎರಡು ರಥಗಳನ್ನು ಕುದುರೆಗಳು ಎಳೆಯುತ್ತಿದ್ದರೆ, ಮಧ್ಯದ ಒಂದು ರಥವನ್ನು ಕುದುರೆಗಳು ಎಳೆಯುತ್ತಿವೆ. ಈ ಚಿತ್ರದಲ್ಲಿ ಮೊದಲ ರಥದ ಕುದುರೆಗಳು ಅತ್ಯಂತ ಮಸುಕಾಗಿವೆ. ಮೂರು ರಥಗಳಲ್ಲಿ ಅತ್ಯಂತ ಹಿಂದಿನ ರಥವು ಸುಂದರವಾಗಿದೆ. ಮೊದಲ ರಥದ ಮೇಲಿನ ಭಾಗದಲ್ಲಿ ಇರುವ ಸ್ಥಳದಲ್ಲಿ ಒಬ್ಬ ಯೋಧ ಓಡುತ್ತಿರುವಂತೆ ಇದ್ದು ಆತ ಕತ್ತಿ ಗುರಾಣಿ ಹಿಡಿದಿದ್ದಾನೆ. ಈತ ಬರೀ ಲಂಗೋಟಿಯೊಂದನ್ನು ತೊಟ್ಟಿದ್ದು ತಲೆಗೆ ಅರಿವೆಯೊಂದನ್ನು ಸುತ್ತಿಕೊಂಡಿದ್ದಾನೆ. ವಿಜಯನಗರ ಸೈನ್ಯದಲ್ಲಿ ಹೀಗೆ ಬರೀ ಮೈಯಿಂದ ಇದ್ದು ಲಂಗೋಟಿಯೊಂದನ್ನು ಮಾತ್ರ ಸುತ್ತಿಕೊಂಡ ಅನೇಕ ಸೈನಿಕರೂ ಇದ್ದರೆಂದು ವಿದೇಶಿ ಪ್ರವಾಸಿಗರು ಬರೆದಿಟ್ಟಿದ್ದಾರೆ. ಮೂರನೆಯ ರಥದ ಮೇಲಿನ ಭಾಗದಲ್ಲಿ ಇನ್ನೊಬ್ಬ ಯೋಧನಿದ್ದು ಆತ ಪೋರ್ತುಗೀಜ ಉಡುಪಿನಲ್ಲಿದ್ದು ಹೆಗಲಿಗೆ ಕೋವಿ (ಬಂದೂಕು)ಯೊಂದನ್ನು ಏರಿಸಿಕೊಂಡಿದ್ದಾನೆ. ಮಧ್ಯದ ರಥದ ಮೇಲಿನ ಭಾಗದಲ್ಲಿರುವ ಯೋಧ ಬಲಗೈಯಲ್ಲಿ ಖಡ್ಗ ಹಿಡಿದುಕೊಂಡಿದ್ದಾನೆ.

ಪಕ್ಕದಲ್ಲಿರುವ ಇನ್ನೊಂದು ಚೌಕದಲ್ಲಿಯೂ ಮೂರು ರಥಗಳಿದ್ದು ಇವು ಮೊದಲು ಚೌಕದಲ್ಲಿನ ರಥಗಳಿಗಿಂತ ಹೆಚ್ಚು ಸುಂದರವಾಗಿವೆ. ಈ ಮೂರು ರಥಗಳಲ್ಲಿ ಎರಡು ಆನೆಯಿಂದ ಎಳೆಯಲ್ಪಟ್ಟರೆ ಒಂದು ಕುದುರೆಯಿಂದ ಎಳೆಯಲ್ಪಡುತ್ತಿದೆ. ಈ ಮೂರು ರಥಗಳು ಮೇಲೆ ಕಳಶವನ್ನು ಹೊಂದಿವೆ. ಪ್ರತಿಯೊಂದು ರಥವೂ ಜೋಡಿಕಳಶಗಳನ್ನು ಹೊಂದಿವೆ. ಪ್ರತಿಯೊಂದು ರಥದಲ್ಲಿಯೂ ಇಬ್ಬರು ವ್ಯಕ್ತಿಗಳಿದ್ದು, ಒಬ್ಬ ಸಾರಥಿ ಮತ್ತು ಒಬ್ಬ ಯುದ್ಧಾಳುಗಳನ್ನು ಹೊಂದಿವೆ. ರಥಗಳಿರುವ ಮೇಲ್ಭಾಗದಲ್ಲಿ ಖಾಲೀ ಸ್ಥಳದಲ್ಲಿ ಸೈನಿಕರು, ಆನೆ ಕುದುರೆಗಳ ದಂಡು ಯುದ್ಧದಲ್ಲಿ ನಿರತವಾಗಿವೆ. ಒಂದುಕಡೆಗೆ ಮೂರು ಜನ ಇನ್ನೊಂದು ಕಡೆಗೆ ೪ ಜನ ಪೋರ್ತುಗೀಜ ಯೋಧರು ಬಂದೂಕು ಹೆಗಲೇರಿಸಿ ನಡೆಯುತ್ತಿದ್ದಾರೆ. ಈ ಬಂದೂಕು (ಕೋವಿ)ಗಳು ಮುಂದೆ ಬಾನೆಟ್ ಹೊಂದಿವೆ. ಈ ಪೋರ್ತುಗೀಜ ಯೋಧರ ಚಿತ್ರಗಳು ರಾಯಚೂರು ಕದನದಲ್ಲಿ ಕೃಷ್ಣದೇವರಾಯನಿಗೆ ಸಹಾಯಮಾಡಿದ ಕ್ರಿಸ್ಟಾವೋದ ಫಿಗೈರೊಡೆ ಹಾಗೂ ಆತನ ಸಂಗಡಿಗರನ್ನು ಪ್ರತಿನಿಧಿಸುತ್ತಿರಬಹುದು.

ಮೂರನೆಯ ಚೌರಸದಲ್ಲಿಯೂ ಮೂರು ರಥಗಳಿದ್ದು ಅವುಗಳಲ್ಲಿ ಒಂದು ಆನೆಯಿಂದ ಇನ್ನೆರಡು ಕುದುರೆಯಿಂದ ಎಳೆಯಲ್ಪಡುತ್ತವೆ. ಈ ರಥಗಳೂ ಎರಡನೆಯ ಚೌರಸದಲ್ಲಿನ ರಥಗಳ ಹಾಗೆ ಸುಂದರವಾಗಿದ್ದು ಮೇಲ್ಭಾಗದಲ್ಲಿ ಜೋಡಿಕಳಸ ಹೊಂದಿವೆ. ಈ ರಥಗಳಲ್ಲಿ ಪ್ರತಿಯೊಂದರಲ್ಲಿ ಮೂರು ಜನಗಳಿದ್ದಾರೆ. ಸಾರಥಿ, ರಾಜ, ಅಥವಾ ಯುದ್ಧಾಳು ಇನ್ನೊಬ್ಬ ಸೇವಕನಂತಿರುವ ವ್ಯಕ್ತಿ ಕುಳಿತುಕೊಂಡಿದ್ದಾನೆ. ಕಳಶಗಳು ವಿಜಯನಗರ ಶೈಲಿಯ ದೇವಾಲಯಗೋಪುರಗಳಂತೆಯೇ ಇವೆ. ಈ ರಥಗಳ ಮೇಲ್ಭಾಗದಲ್ಲೂ ಸೈನಿಕರು ಆನೆ ಕುದುರೆಗಳು ಯುದ್ಧ ನಿರತವಾಗಿವೆ. ಈ ಮೂರು ಚೌಕಗಳಲ್ಲಿರುವ ಯುದ್ಧ ಸಂಬಂಧಿ ಚಿತ್ರಗಳು ಬಹುಶ ಕೃಷ್ಣದೇವರಾಯನ ರಾಯಚೂರು ಮುತ್ತಿಗೆಯನ್ನು ಪ್ರತಿನಿಧಿಸುತ್ತಿರಬೇಕು. ಇಲ್ಲಿ ರಚಿಸಿರುವ ಪೋರ್ತುಗೀಜ, ಮುಸ್ಲಿಂ, ಹಿಂದೂ ಸೈನಿಕರು, ಅವರು ಹೊಂದಿರುವ ಆಯುಧಗಳೂ, ವೇಷಭೂಷಣಗಳೂ ವೈವಿಧ್ಯಮಯವಾಗಿವೆ.

*೩. ಮೆರವಣಿಗೆಯ ದೃಶ್ಯ :* ದೇವಾಲಯದ ಪ್ರವೇಶದ್ವಾರದ ಕಡೆಯಿಂದ ಏಳನೆಯ ಪಟ್ಟಿಕೆಯಲ್ಲಿ ಮತ್ತೊಂದು ಮೆರವಣಿಗೆ ದೃಶ್ಯವಿದ್ದು ಇದರಲ್ಲಿ ಚಿಕ್ಕ ಪ್ರಮಾಣದ ಚಿತ್ರಗಳಿವೆ. ನಗಾರಿ ಬಾರಿಸುವವರು. ಕೊಂಬು ಕಹಳೆಗಳನ್ನು ಊದುತ್ತಿರುವವರು. ಹೀಗೆ ಅನೇಕ ವಾದ್ಯಗಾರರಲ್ಲದೇ ಕೆಲವು ಸೈನಿಕರೂ ಇಲ್ಲಿ ಚಿತ್ರಿತಗೊಂಡಿದ್ದಾರೆ. ಹಾಗಾಗಿ ಇದು ರಣಘೋಷದೊಂದಿಗೆ ಯುದ್ಧಕ್ಕೆ ಹೊರಟ ದೃಶ್ಯವಾಗಿರಬಹುದು ಇಲ್ಲವೇ ಯುದ್ಧವನ್ನು ಗೆದ್ದ ವಿಜಯೋತ್ಸವದ ಮೆರವಣಿಗೆಯಾಗಿರುವ ಸಾಧ್ಯತೆ ಇದೆ.

***II. ಧಾರ್ಮಿಕ ಚಿತ್ರಗಳು :*** ಮೇಲ್ಛಾವಣಿಯಲ್ಲಿ ರಚಿಸಿರುವ ಧಾರ್ಮಿಕ ಚಿತ್ರಗಳಲ್ಲಿ ಬ್ರಾಹ್ಮಣ ಪಂಡಿತರ ಚಿತ್ರ. ದ್ರೌಪದಿ ಸ್ವಯಂವರ. ತ್ರಿಪುರ ಸಂಹಾರ. ಪಾರ್ವತಿ ಕಲ್ಯಾಣ. (ಮನ್ಮಥ ವಿಜಯ), ಅಷ್ಟದಿಕ್ಪಾಲಕರು, ವಿರೂಪಾಕ್ಷದೇವರು. ಸೀತಾಸ್ವಯಂವರ, ವಿಷ್ಣುವಿನ ದಶಾವತಾರಗಳು. ಶಿವಪಾರ್ವತಿ ವಿವಾಹ ಚಿತ್ರಗಳು ಒಳಗೊಳ್ಳುತ್ತಿದ್ದು ಅವುಗಳನ್ನು ಕುರಿತು ಒಂದೊಂದಾಗಿ ನೋಡಬಹುದು.

*೧. ಬ್ರಾಹ್ಮಣ ಪಂಡಿತರ ಚಿತ್ರ :* ಈ ಪಟ್ಟಿಕೆಯು ಚಿಕ್ಕದಾಗಿದ್ದು ಇದರಲ್ಲಿ ಬ್ರಾಹ್ಮಣ ಪಂಡಿತರನ್ನು ಚಿತ್ರಿಸಲಾಗಿದೆ. ಈ ಪಂಡಿತರಲ್ಲಿ ಕೆಲವರು ಉದ್ದವಾದ ಚಂಡಿಕೆಬಿಟ್ಟು ಅವುಗಳನ್ನು ಗಂಟು ಹಾಕಿಕೊಂಡಿದ್ದರೆ, ಇನ್ನುಕೆಲವರು ಬಕ್ಕ ತಲೆಗೆ ಅರಿವೆಯನ್ನು ಹೊದ್ದುಕೊಂಡಿದ್ದಾರೆ. ಇವರೆಲ್ಲರೂ ಪದ್ಮಾಸನ ಹಾಕಿ ಕುಳಿತುಕೊಂಡಿದ್ದು ಕೆಲವರು ಯೋಗ ಮುದ್ರೆಯಲ್ಲಿದ್ದರೆ ಇನ್ನುಕೆಲವರು ಉಪದೇಶ ಭಂಗಿಯಲ್ಲಿದ್ದು ಪರಸ್ಪರ ಸಂಭಾಷಣೆಯಲ್ಲಿದ್ದಾರೆ. ವಿಜಯನಗರ ಚರಿತ್ರೆಯಲ್ಲಿ ಗಮನಾರ್ಹ ಪಾತ್ರವಹಿಸಿದ ಶೃಂಗೇರಿ ಮಠದ ಧಾರ್ಮಿಕ ಹಿನ್ನೆಲೆಯಲ್ಲಿ ಇವು ರಚನೆಯಾಗಿರಬಹುದು.

*೨. ದ್ರೌಪದಿ ಸ್ವಯಂವರ :* ಈ ಪಟ್ಟಿಕೆಯಲ್ಲಿ ದ್ರೌಪದೀ ಸ್ವಂಯವರದ ಚಿತ್ರವಿದೆ ಈ ಚಿತ್ರವನ್ನೂ ಮೂರು ಚೌಕಗಳಲ್ಲಿ ವಿಭಾಗಿಸಿ ರಚನೆಮಾಡಲಾಗಿದೆ. ಮೊದಲ ಚೌಕದಲ್ಲಿ ಅರ್ಜುನನು ಮೀನಿನ ಪ್ರತಿಬಿಂಬವನ್ನು ಎಣ್ಣೆಯಲ್ಲಿ ನೋಡಿ ಬಾಣಬಿಡುತ್ತಿರುವನು. ಎರಡನೆಯ ಚೌಕದಲ್ಲಿ ದ್ರೌಪದಿ ಅರ್ಜುನರು ಜೊತೆಗಿದ್ದು ಸ್ವಯಂವರ ನಡೆಯುತ್ತಿದೆ. ಮೂರನೆಯದರಲ್ಲಿ ಆಮಂತ್ರಿತ ಗಣ್ಯರು, ಋಷಿಮುನಿಗಳು, ರಾಜಪರಿವಾರದವರು, ಮುಂತಾದವರ ಚಿತ್ರಗಳಿವೆ. ಸಂಯೋಜನೆಯ ದೃಷ್ಟಿಯಿಂದ ಈ ಚಿತ್ರ ಅತ್ಯಂತ ಸುಂದರವಾಗಿದ್ದು ಮತ್ಸ್ಯ ಛೇದನ ಮಾಡುತ್ತಿರುವ ಅರ್ಜುನನು ಕಿರೀಟ ಧರಿಸಿದ್ದು. ಅರ್ಧಚಂದ್ರಾಕೃತಿಯ ಪಾತ್ರೆಯಲ್ಲಿ ಮೇಲೆ ಕಟ್ಟಲಾಗಿರುವ ಮೀನಿನ ಪ್ರತಿಬಿಂಬವನ್ನು ನೋಡಿ ಬಾಣಬಿಡುತ್ತಿದ್ದಾನೆ. ಆತನ ಮೈಬಣ್ಣ ಕೆಂಪಾಗಿದ್ದು ಕೈಕಾಲು ಮುಖಗಳ ವರ್ಣಛಾಯೆಯಲ್ಲಿ ವ್ಯತ್ಯಾಸ ಕಂಡುಬರುತ್ತದೆ.

ದ್ರೌಪದಿಯು ಗಾಢವರ್ಣದ ಜರತಾರಿ ಅಂಚುಳ್ಳ ಸೀರೆಯನ್ನು ಕಚ್ಚೆಹಾಕಿ ಉಟ್ಟಿದ್ದಾಳೆ. ಬಲಗಡೆಗಿರುವ ವ್ಯಕ್ತಿಯ ಕೈಯಲ್ಲಿ ಗಧೆಯಂತಹ ದಂಡವಿದೆ. ಆತನ ಬಲಕ್ಕೆ ಇನ್ನೊಬ್ಬ ವ್ಯಕ್ತಿ ಇದ್ದು ಈ ಇಬ್ಬರೂ ತೊಡೆಗಂಟುವಂತೆ ಪಂಚೆ ಉಟ್ಟಿದ್ದಾರೆ. ಸೊಂಟದಿಂದ ಕೆಳಕ್ಕೆ ಕುಚ್ಚುಹಾಯ್ದಿದೆ. ಹೆಗಲಿನ ಉತ್ತರೀಯವು ಮೊಣಕಾಲ ಕೆಳಗಿನವರೆಗೆ ಇಳಿಬಿದ್ದಿದೆ. ತುದಿಗಳು ಗಾಳಿಗೆ ಹಾರುಡುತ್ತಿವೆ. ವರ್ಣವಿನ್ಯಾಸ ಆಕರ್ಷಕವಾಗಿದೆ.

೩. *ತ್ರಿಪುರ ಸಂಹಾರ ಶಿವನ ಚಿತ್ರ :* ಈ ಪಟ್ಟಿಕೆಯಲ್ಲಿ ಮೂರು ದೊಡ್ಡ ಚೌರಸಗಳನ್ನು ರಚಿಸಿ ಅದರಲ್ಲಿ ತ್ರಿಪುರ ಸಂಹಾರ ಶಿವನ ದೃಶ್ಯವನ್ನೂ ಮಧ್ಯದ ಚೌಕಬಿಟ್ಟು ಮುಂದಿನ ಚೌಕದಲ್ಲಿ ಮನ್ಮಥವಿಜಯ ದೃಶ್ಯವನ್ನೂ (ಪಾರ್ವತೀ ಕಲ್ಯಾಣ) ರಚಿಸಲಾಗಿದೆ. ತ್ರಿಪುರ ಸಂಹಾರ ಶಿವನ ಚಿತ್ರವು ಒಂದು ಅತ್ಯಂತ ಆಕರ್ಷಕ ಚಿತ್ರವಾಗಿದ್ದು ಇಲ್ಲಿ ಶಿವನು ರಥದಲ್ಲಿ ಕುಳಿತು ತ್ರಿಪುರ ಸಂಹಾರಕ್ಕಾಗಿ ಧಾವಿಸುತ್ತಿದ್ದಾನೆ. ಸೂರ್ಯ ಚಂದ್ರರೇ ಅವನ ರಥದ ಗಾಲಿಗಳಾಗಿದ್ದಾರೆ. ಬ್ರಹ್ಮನು ರಥದ ಸಾರಥಿಯಾಗಿದ್ದಾನೆ. ಶಿವ ಸಂಹರಿಸಲು ಹೊರಟ ಮೂರು ಪುರಗಳೂ ಮೂರು ವೃತ್ತಗಳಲ್ಲಿ ರಚನೆಯಾಗಿವೆ. ಈ ಮೂರೂ ವೃತ್ತಗಳನ್ನು ಅವುಗಳ ಒಂದು ಬದಿಗೆ ಕಿಂಡಿಮಾಡಿ ಆಧಾರ ಒಂದರಿಂದ ಒಟ್ಟಿಗೆ ಬಂಧಿಸಿದಂತೆ ಇದೆ. ಈ ಪುರಗಳ ವೃತ್ತಗಳಲ್ಲಿ ಒಂದರಲ್ಲಿ ವಿಷ್ಣು ನಗ್ನನಾಗಿ ನಿಂತಿದ್ದು ಆತನ ಎಡಬಲಗಳಲ್ಲಿ ಇಬ್ಬರು ಕನ್ಯೆಯರು ಆತನ ಸೇವೆಯಲ್ಲಿ ತೊಡಗಿದ್ದಾರೆ. ಇನ್ನೊಂದು ವೃತ್ತದಲ್ಲಿ ಕೆಂಪು ಹಳದಿ ವರ್ಣದ ಇಬ್ಬರು ರಾಕ್ಷಸರು ಪರಸ್ಪರ ಕತ್ತಿಢಾಲು ಹಿಡಿದುಕೊಂಡು ಕಾದುತ್ತಿದ್ದಾರೆ. ಮತ್ತೊಂದರಲ್ಲಿಯೂ ಕಂದು ವರ್ಣದ ಮತ್ತು ಕಪ್ಪು ವರ್ಣದ ರಾಕ್ಷಸರಿಬ್ಬರು ಕತ್ತಿಢಾಲು ಹಿಡಿದುಕೊಂಡು ಕಾದಾಡುತ್ತಿದ್ದಾರೆ. ತ್ರಿಪುರಗಳನ್ನು ಸೂಚಿಸುವ ಮೂರು ವೃತ್ತಗಳ ಸುತ್ತಲೂ ಪಕ್ಷಿಗಳು. ಪ್ರಾಣಿಗಳು. ಹಾವುಗಳು. ಮೀನುಗಳಂತಹ ವಿವಿಧ ಜೀವ ಸಂಕಲುಗಳು ರಚನೆಯಾಗಿವೆ. ಬಹುಶ ಮೂರು ಪುರಗಳು ಸೃಷ್ಟಿಯಲ್ಲಿ ತೇಲುತ್ತಿರುವ ಸಂಕೇತವಿದಾಗಿರಬಹುದು. ಹಿನ್ನೆಲೆಯಲ್ಲಿ ಕೆಂಪುವರ್ಣಬಳಸಿದ್ದರೆ ವೃತ್ತಗಳ ಒಳಭಾಗಕ್ಕೆ ತೆಳು ನೀಲಿ ಹಿನ್ನೆಲೆ ವರ್ಣ ಬಳಸಲಾಗಿದೆ. ಚಿತ್ರಗಳಿಗೆ ಕಪ್ಪು ಹೊರರೇಖೆ ಎಳೆಯಲಾಗಿದೆ. ತ್ರಿಪುರ ಸಂಹಾರ ದೃಶ್ಯಗಳು ಕರ್ನಾಟಕದ ಅನೇಕ ಸ್ಥಳಗಳಲ್ಲಿನ ಭಿತ್ತಿಚಿತ್ರಗಳಲ್ಲಿದ್ದು ಉತ್ತರ ಕರ್ನಾಟಕದಲ್ಲಿ ಧಾರವಾಡದ ಬಳಿಯ ಅಮ್ಮಿನಭಾವಿಯಲ್ಲೂ ಇದೆ.

೪. *ಪಾರ್ವತಿ ಕಲ್ಯಾಣ (ಮನ್ಮಥ ವಿಜಯ) :* ಇನ್ನೊಂದು ಚೌಕದಲ್ಲಿ ಶಿವಪಾರ್ವತಿಯರ ಮದುವೆಯ ದೃಶ್ಯ ಮನ್ಮಥನು ಶಿವನಿಗೆ ಬಾಣಬಿಡುವ ದೃಶ್ಯಗಳು ಚಿತ್ರಿತವಾಗಿವೆ. ಸ್ಥಳ ಪುರಾಣದ ಪ್ರಕಾರ ದಕ್ಷಯಜ್ಞದ ನಂತರ ಶಿವನು ವೈರಾಗ್ಯ ಮೂರ್ತಿಯಾಗಿ ಇಲ್ಲಿನ ಹೇಮಕೂಟದಲ್ಲಿಯೇ ತಪಸ್ಸಿನಲ್ಲಿ ನಿರತನಾಗಿದ್ದನಂತೆ. ದಾಕ್ಷಾಯಣಿಯು ಪಂಪಾಂಬಿಕೆಯಾಗಿ ಮರಳಿಹುಟ್ಟಿ ಶಿವನಿಗಾಗಿ ಕಾಯುತ್ತಿದ್ದಳು. ಮನ್ಮಥನು ಬಾಣದ ನೆರವಿನಿಂದ ಶಿವನು ವೈರಾಗ್ಯಬಿಟ್ಟು ಪಂಪಾಂಬಿಕೆಯಲ್ಲಿ ಅನುರಕ್ತನಾಗಿ ಅವಳನ್ನು ಮದುವೆಯಾದನು ಎಂದು ಪುರಾಣ ಹೇಳುತ್ತದೆ. ಮನ್ಮಥನು ಶಿವನಿಗೆ ಕಾಮಬಾಣ ಹೊಡೆಯುತ್ತಿರುವ ದೃಶ್ಯವು ಸುಂದರವಾಗಿದ್ದು ಮನ್ಮಥನು ರಥದ ಮೇಲೆ ಇದ್ದಾನೆ. ಬಾಣವು ಹೂಗಳಿಂದ ಕೂಡಿದ್ದು, ಬಿಲ್ಲು ಕಮಲದ ಹೂವಿನ ದೇಟಿನಿಂದ ಮಾಡಲಾಗಿದೆ. ರಥವನ್ನು ಗಿಳಿಗಳು ಎಳೆಯುತ್ತಿರುವಂತೆ ರಚಿಸಲಾಗಿದೆ. ಇಂತಹುದೇ ಮನ್ಮಥನವಿಜಯ ದೃಶ್ಯ ಅಮ್ಮಿನಭಾವಿಯ ಹಿರೇಮಠದಲ್ಲೂ ರಚನೆಯಾಗಿದೆ. ಅಲ್ಲಿಯೂ ಮನ್ಮಥ ಗಿಳಿಗಳಿಂದ ಎಳೆಯಲ್ಪಟ್ಟ ರಥದಲ್ಲಿ ನಿಂತು ಶಿವನಿಗೆ ಬಾಣಬಿಡುತ್ತಿದ್ದಾನೆ. ಆತನ ಬಿಲ್ಲು ಕಬ್ಬಿನ ಜಲ್ಲೆಯಿಂದ ಮಾಡಲಾಗಿದೆ. ಹಂಪೆಯ ಈ ಚಿತ್ರದಲ್ಲಿ ಮನ್ಮಥ ಬಾಣಬಿಡುತ್ತಿರುವ ಚೌಕದ ಪಕ್ಕದ ಚೌಕದಲ್ಲಿ ಶಿವಪಾರ್ವತಿಯರು

ಬ್ರಹ್ಮನ ಸಮ್ಮುಖದಲ್ಲಿ ಮದುವೆಯಾಗುತ್ತಿರುವ ದೃಶ್ಯವಿದ್ದು ಇಡೀ ವಾತಾವರಣ ಉಲ್ಲಾಸದಿಂದ ಕೂಡಿದೆ ಎಂಬಂತೆ ಭಾಸವಾಗುತ್ತದೆ. ವಿಷ್ಣು. ಗಣೇಶ. ನಂದಿ. ವೀರಭದ್ರ, ತುಂಬುರ. ಅಷ್ಟದಿಕ್ಪಾಲಕರು, ಅಲ್ಲದೇ ಇನ್ನುಳಿದ ದೇವತೆಗಳು, ಸಿದ್ಧರು. ಕಿನ್ನರರು. ಕಿಂಪುರಷರು ಇಲ್ಲಿ ಉಪಸ್ಥಿತರಿದ್ದಾರೆ. ಶಿವಗಣಗಳು ಉಲ್ಲಾಸದಿಂದ ಡೋಲು, ತಾಳ, ಸನಾದಿ, ಮುಂತಾದ ಅನೇಕ ವಾದ್ಯಗಳನ್ನು ಬಾರಿಸುತ್ತಿದ್ದಾರೆ.

*೫. ಅಷ್ಟದಿಕ್ಪಾಲಕರ ಚಿತ್ರ :* ಈ ಚಿಕ್ಕಪಟ್ಟಿಕೆಯಲ್ಲಿ ಅಷ್ಟದಿಕ್ಪಾಲಕರ ಚಿತ್ರಗಳಿದ್ದು ಒಟ್ಟು ಎಂಟು ಚಿತ್ರಗಳಿವೆ. ಪ್ರತಿಯೊಬ್ಬರನ್ನೂ ಒಂದೊಂದು ಚೌಕಗಳಲ್ಲಿ ತಮ್ಮ ತಮ್ಮ ವಾಹನಗಳೊಂದಿಗೆ ಚಿತ್ರಿಸಲಾಗಿದೆ. ಎತ್ತು, ಕುದುರೆ, ಟಗರು. (ಮೇಷ) ಮನುಷ್ಯ. ಕೋಣ. ಆನೆ ಶರಭ ಮುಂತಾದವು ಇಲ್ಲಿ ವಾಹನಗಳಾಗಿವೆ.

*೬. ವಿರೂಪಾಕ್ಷ ದೇವರ ಚಿತ್ರ :* ಈ ಚಿಕ್ಕ ಪಟ್ಟಿಕೆಯಲ್ಲಿ ವಿರೂಪಾಕ್ಷ ದೇವರಿಗೆ ಪೂಜೆ ಮಾಡುತ್ತಿರುವ ದೃಶ್ಯವಿದೆ. ಇಲ್ಲಿ ವಿರೂಪಾಕ್ಷಸ್ವಾಮಿಯ ಎದುರುಗಡೆಗೆ ನಂದಿಯ ಮುಖವೂ ಇದೆ. ಇದರ ಪಕ್ಕದ ಇನ್ನೊಂದು ಚಿಕ್ಕ ಪಟ್ಟಿಕೆಯಲ್ಲಿ. ಗೋಪಿಕಾಸ್ತ್ರೀಯರ ವಸ್ತ್ರಾಪಹರಣ ದೃಶ್ಯವಿದೆ. ಕೃಷ್ಣನು ಗೋಪಿಕೆಯರ ವಸ್ತ್ರಗಳನ್ನು ಅಪಹರಿಸಿ ಗಿಡದ ಮೇಲೆ ಕುಳಿತು ಕೊಳಲು ಊದುತ್ತಿದ್ದಾನೆ. ಸ್ತ್ರೀಯರೆಲ್ಲ ಮರದ ಸುತ್ತಲೂ ನೆರೆದಿದ್ದು ತಮ್ಮ ಬಟ್ಟೆಗಳಿಗಾಗಿ ಆತನನ್ನು ಬೇಡಿಕೊಳ್ಳುತ್ತಿದ್ದಾರೆ.

*೭. ಸೀತಾಸ್ವಯಂವರ ದೃಶ್ಯ :* ಈ ಪಟ್ಟಿಕೆಯಲ್ಲಿ ರಾಮನು ಶಿವಧನಸ್ಸು ಹೆದೆ ಏರಿಸಿ ಮುರಿಯುತ್ತಿರುವುದು, ಸೀತಾರಾಮರ ಕಲ್ಯಾಣ. ದೃಶ್ಯಗಳಿವೆ. ಸೀತಾಸ್ವಯಂವರಕ್ಕೆ ಅನೇಕ ಗಣ್ಯರು, ರಾಜಮಹಾರಾಜನರು ಆಗಮಿಸಿದ್ದಾರೆ. ಅಲ್ಲದೇ ಋಷಿಮುನಿಗಳು ರಾಜಪರಿವಾರದವರು ಅಲ್ಲಿ ಚಿತ್ರಿತರಾಗಿದ್ದಾರೆ. ಸೀತೆ ರಾಮನಿಗೆ ಮಾಲೆ ಹಾಕುವುದು, ನಂತರ ಮದುವೆ ಸಮಾರಂಭದಲ್ಲಿ ಋಷಿಮುನಿಗಳು ಆಶೀರ್ವಾದ ಮಾಡುತ್ತಿದ್ದಾರೆ.

*೮. ವಿಷ್ಣುವಿನ ದಶಾವತಾರಗಳು :* ಇನ್ನೊಂದು ಪಟ್ಟಿಕೆಯಲ್ಲಿ ವಿಷ್ಣುವಿನ ಹತ್ತು ಅವತಾರಗಳನ್ನು ಚಿತ್ರಿಸಿದ್ದಾರೆ. ಇವೆಲ್ಲವೂ ಬದಿಯ ನೋಟಗಳನ್ನು ಹೊಂದಿವೆ. ಆದರೆ ನರಸಿಂಹ ಅವತಾರದಲ್ಲಿ ಕಟಿಯ ಕೆಳಭಾಗ ಬದಿಯನೋಟ ತೋರಿಸುತ್ತಿದ್ದರೂ ಮೇಲಿನಭಾಗ ಸಂಪೂರ್ಣ ಇದಿರು ನೋಟದ್ದಾಗಿ ಚಿತ್ರಿಸಲಾಗಿದೆ. ನರಸಿಂಹನ ಉಗ್ರವಾದ ಸಿಂಹ ಮುಖವನ್ನು ತೋರಿಸುವುದಕ್ಕಾಗಿ ಮೇಲ್ಭಾಗವನ್ನು ಎದುರಾಗಿ ಚಿತ್ರಿಸಿರಬೇಕು.

*೯. ಶಿವ ಪಾರ್ವತಿಯರ ವಿವಾಹ :* ಇಲ್ಲಿನ ಮತ್ತೊಂದು ಪಟ್ಟಿಕೆಯಲ್ಲಿ ಶಿವ ಪಾರ್ವತಿಯರ ವಿವಾಹದ ಮತ್ತೊಂದು ಚಿತ್ರವಿದೆ. ಚತುರ್ಭುಜನಾದ ಶಿವನು ಇಲ್ಲಿ ಮಗ್ಗುಲುನೋಟದಲ್ಲಿದ್ದಾನೆ. ಮುಂದಿನ ಆತನ ಎರಡು ಕೈಗಳನ್ನೂ ಎದುರಿಗೆ ನಿಂತ ಪಾರ್ವತಿ ದೇವೀಯು ಹಿಡಿದುಕೊಂಡಿದ್ದಾಳೆ. ಶಿವನ ಹಿಂದಿನ ಒಂದು ಕೈಯಲ್ಲಿ ಮೃಗ ಸಂಕೇತವಿದೆ. ಶಿವನಿಗೆ ಎದುರಾಗಿ ಪಾರ್ವತಿಯ ಪಕ್ಕದಲ್ಲಿ ಶ್ರೀದೇವಿ ಭೂದೇವಿಯರು ಸಾಲಂಕೃತರಾಗಿ ಕಿರೀಟಧರಿಸಿ ನಿಂತಿದ್ದಾರೆ. ಶಿವನ ಬೆಂಗಡೆಯಲ್ಲಿ ವಿಷ್ಣುವು ನಿಂತಿದ್ದಾನೆ. ಪಕ್ಕದ ಚೌಕದಲ್ಲಿ ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರ ಚಿತ್ರಗಳಿವೆ. ಈ ಮುಖ್ಯ ಚಿತ್ರಗಳಲ್ಲದೇ ಮೇಲ್ಛಾವಣಿಯ ಸುತ್ತಲೂ ಇರುವ ತೊಲೆಗಳಲ್ಲಿ ಚಿಕ್ಕ ಚಿಕ್ಕ ಪ್ರಮಾಣದ ಚಿತ್ರಗಳಿವೆ. ಇವುಗಳಲ್ಲಿ ಋಷಿಮುನಿಗಳು, ದೇವತೆಗಳು, ಗಂಧರ್ವರು, ಯಕ್ಷ-ಯಕ್ಷಿಯರು, ಕಾಲ್ಪನಿಕ ಪ್ರಾಣಿಗಳು. ಪೌರಾಣಿಕ ಪ್ರಾಣಿಗಳು ಐರಾವತ, ಉಚ್ಛೈಶ್ರವಸ್, ಕಾಮಧೇನು, ಶರಭ ಮುಂತಾದ ಪ್ರಾಣಿಗಳು ಚಿತ್ರಿತವಾಗಿವೆ.

***II. ತೊಲೆಯ ಮೇಲಿನ ಚಿತ್ರಗಳು :*** ಮೇಲ್ಛಾವಣಿಯಲ್ಲಿ ದೊಡ್ಡ ಪಟ್ಟಿಕೆಗಳಲ್ಲಿ ಚಿತ್ರಗಳಿದ್ದಂತೆ ಬದಿಯಲ್ಲಿನ ತೊಲೆಗಳಲ್ಲಿಯೂ ಚಿಕ್ಕಪ್ರಮಾಣದ ಚಿತ್ರಗಳನ್ನು ರಚಿಸಲಾಗಿದೆ. ಒಟ್ಟು ಮೂರು ತೊಲೆಗಳಲ್ಲಿ ಚಿತ್ರಗಳಿದ್ದು ಅವುಗಳನ್ನು ಈ ಕೆಳಗಿನಂತೆ ಮೂರು ರೀತಿಯಲ್ಲಿ ವಿಂಗಡಿಸಬಹುದು.

I. ಪಶ್ಚಿಮ ದಿಕ್ಕಿನ ತೊಲೆಯ ಚಿತ್ರಗಳು
II. ಉತ್ತರ ದಿಕ್ಕಿನ ತೊಲೆಯ ಚಿತ್ರಗಳು
III. ದಕ್ಷಿಣ ದಿಕ್ಕಿನ ತೊಲೆಯ ಚಿತ್ರಗಳು

*I. ಪಶ್ಚಿಮ ದಿಕ್ಕಿನ ತೊಲೆಯ ಚಿತ್ರಗಳು :* ವಿರೂಪಾಕ್ಷ ದೇವರ ಗರ್ಭಗೃಹದ ಕಡೆಗಿರುವ ಈ ತೊಲೆಯಲ್ಲಿ, ಮಧ್ಯದ ಚಿತ್ರವು ಗರ್ಭಗೃಹದಲ್ಲಿನ ವಿರೂಪಾಕ್ಷ ದೇವರ ಮುಖವಾಡದ ಪ್ರತಿರೂಪದಂತೆಯೇ ಇದೆ. ಇದರ ಎಡಬಲಗಳಲ್ಲಿ ನಂದಿ. ಪೂಜಾರಿಗಳು. ಇತರ ದೇವತೆಗಳು, ಋಷಿಮುನಿಗಳ ಚಿತ್ರಗಳಿದ್ದು, ಒಟ್ಟು ಹದಿನೆಂಟು ಚಿತ್ರಗಳಿವೆ.

*II. ಉತ್ತರ ದಿಕ್ಕಿನ ತೊಲೆಯ ಚಿತ್ರಗಳು :* ಗರ್ಭಗೃಹದ ಎಡಕ್ಕಿರುವ ಈ ತೊಲೆಯಲ್ಲಿ ಒಟ್ಟು ಇಪ್ಪತ್ತನಾಲ್ಕು ಚಿತ್ರಗಳಿದ್ದು. ಪಶ್ಚಿಮ ದಿಕ್ಕಿನ ತೊಲೆಯ ಚಿತ್ರಗಳಿಗಿಂತ ಸ್ವಲ್ಪ ದೊಡ್ಡ ಪ್ರಮಾಣದಲ್ಲಿವೆ. ನಾಲ್ಕು ಮುಖದ ನಂದಿಯು ಶಿವಲಿಂಗಕ್ಕೆ ಹಾಲು ಕರೆಯುತ್ತಿರುವುದು. ಶರಭ. ಐರಾವತ. ಉಚ್ಚೈಶ್ರವಷ್, ಕಾಮಧೇನು. ವಿಷ್ಣುಮಹಿಮೆ ಸಾರುವ ಚಿತ್ರಗಳು. ಕಾರ್ತಿಕೇಯ, ಶಿವಗಣಗಳು ಮತ್ತು ಇತರ ದೇವತೆಗಳ ಚಿತ್ರಗಳಿವೆ.

*III. ದಕ್ಷಿಣ ದಿಕ್ಕಿನ ತೊಲೆಯ ಚಿತ್ರಗಳು :* ಗರ್ಭಗೃಹದ ಬಲಕ್ಕಿರುವ ಈ ತೊಲೆಯಲ್ಲಿ ಆನೆ ಮತ್ತು ಮತ್ತು ಆಕಳು ಸಂಯುಕ್ತಗೊಂಡ ಚಮತ್ಕಾರೀ ಚಿತ್ರವಿದೆ. ಇಂತಹ ಚಿತ್ರ ಉತ್ತರ ಕರ್ನಾಟಕದ ಅನೇಕ ಕಡೆಗಳಲ್ಲಿ ಕಂಡುಬರುತ್ತದೆ. ಇದಲ್ಲದೇ ಶೇಷಶಯನ ವಿಷ್ಣು, ಗಣಪತಿ, ಋಷಿಮುನಿಗಳು, ಇತರ ದೇವತಾ ಪುರುಷರ ಒಟ್ಟು ಇಪ್ಪತ್ತನಾಲ್ಕು ಚಿತ್ರಗಳನ್ನು ಈ ತೊಲೆಯಲ್ಲಿ ರಚಿಸಲಾಗಿದೆ. ವಿರೂಪಾಕ್ಷ ದೇವಾಲಯದ ಮೇಲ್ಛಾವಣಿಯಲ್ಲಿ ಪ್ರಮಾಣ ಬದ್ಧವಾಗಿ ಪಟ್ಟಿಕೆಗಳನ್ನು ಮಾಡಿಕೊಂಡು ಚಿತ್ರರಚಿಸಲಾಗಿದೆ. ಮೊದಲಿಗೆ ದೊಡ್ಡವು ಅನಂತರ ಅವುಗಳಿಗಿಂತ ಚಿಕ್ಕವು ನಂತರ ಇನ್ನೂ ಚಿಕ್ಕವು ಹೀಗೆ ಇಳಿಕೆ ಕ್ರಮದಲ್ಲಿ ಪಟ್ಟಿಕೆಗಳನ್ನು ಮಾಡಿಕೊಳ್ಳಲಾಗಿದೆ. ಒಟ್ಟು ಐದು ದೊಡ್ಡ ಪಟ್ಟಿಕೆಗಳಲ್ಲಿ ಚಿತ್ರಗಳಿದ್ದರೆ ಅದಕ್ಕಿಂತ ಚಿಕ್ಕವು ಮತ್ತೆ ಮೂರು ಪಟ್ಟಿಕೆಗಳಲ್ಲಿವೆ. ಮತ್ತೆ ಅದರ ತಲೆಯ ಮೇಲೆ ಅದಕ್ಕಿಂತ ಚಿಕ್ಕವು ಇವೆ. ಕೆಲವು ದೊಡ್ಡ ಚಿತ್ರ ಪಟ್ಟಿಕೆಗಳ ಮೇಲೆ ಚಿಕ್ಕ ಪ್ರಮಾಣದ ಮನುಷ್ಯಾಕೃತಿಗಳನ್ನು ಬರೆದಿದ್ದರೆ ಇನ್ನು ಕೆಲವು ದೊಡ್ಡ ಚಿತ್ರ ಪಟ್ಟಿಕೆಗಳ ಮೇಲೆ ವಿಜಯನಗರ ಶೈಲಿಯ ರಾಯಗೋಪುರದ ಮಾದರಿಗಳನ್ನು ಬರೆದು ಅದರ ಅಕ್ಕಪಕ್ಕ ಟೆಂಗಿನ ಮರಗಳನ್ನು ಬರೆಯಲಾಗಿದೆ.

ಈ ಹೊತ್ತಿಗೆ ಭಿತ್ತಿ ಚಿತ್ರಕಲೆಯ ಸಂಯೋಜನಾದೃಷ್ಟಿ, ವರ್ಣವಿನ್ಯಾಸ, ಚಿತ್ರಗಳ ಶೈಲಿ. ರೇಖಾಲಾಲಿತ್ಯ ಇವುಗಳಲ್ಲಿ ಹಲವು ಮಾರ್ಪಾಡುಗಳು ಆಗಿದ್ದು ಕಂಡು ಬರುವುದು. ದೇವಾಲಯಗಳ ನಿರ್ಮಾಣದಲ್ಲಿ ವಿಜಯನಗರದವರು ಹೇಗೆ ಪೆಚ್ಚುಗಾರಿಕೆಯನ್ನು ಮೆರೆದರೋ ಹಾಗೇ ಭಿತ್ತಿಚಿತ್ರರಚನೆಯಲ್ಲಿಯೂ ಪ್ರಬುದ್ಧತೆಯನ್ನು ಸಾಧಿಸಿದ್ದರು. ಆದರೆ ಗಮನಾರ್ಹ ಅಂಶವೆಂದರೆ ಬಾದಾಮಿಯ ಭಿತ್ತಿಚಿತ್ರದಲ್ಲಿ ಹಿನ್ನೆಲೆಯಲ್ಲಿ ಒಳಾಂಗಣದೃಶ್ಯ ಸಂಯೋಜಿಸಿದ್ದರೆ. ಹಂಪೆಯ ಚಿತ್ರಗಳಲ್ಲಿ ಕಟ್ಟಡದ ಹೊರಾಂಗಣದ ದೃಶ್ಯ ನಿರೂಪಿಸಲಾಗಿದೆ. ಹಿನ್ನೆಲೆಯಲ್ಲಿ ದೇವಾಲಯ. ಮಂಟಪಗಳು. ಮತ್ತು ಗುಡ್ಡಬೆಟ್ಟಗಳನ್ನು ರಚಿಸಿ ಸ್ಥಳ ನಿರ್ದೇಶನ ಮಾಡಲಾಗಿದೆ. ಚಿತ್ರಗಳಲ್ಲಿ ಆಕೃತಿಗಳು

ಹೆಚ್ಚಾಗಿ ನಿಂತಿರುವಂತೆ ಸಂಯೋಜಿಸಿರುವುದಲ್ಲದೇ, ಪ್ರಮುಖ ಆಕೃತಿಯನ್ನು ದೊಡ್ಡದಾಗಿ ನಿರೂಪಿಸುವ ಕ್ರಮವನ್ನು ಈ ಹೊತ್ತಿಗೆ ಕೈ ಬಿಟ್ಟಂತೆ ಕಾಣುತ್ತದೆ. ವರ್ಣವಿನ್ಯಾಸದಲ್ಲಿ ಹಿನ್ನೆಲೆಯ ಬಣ್ಣವನ್ನು ಅತ್ಯಂತ ಗಡುಸಾಗಿ ಲೇಪಿಸಿರುವುದು, ಅದರಲ್ಲಿ ಕೆಂಪುಬಣ್ಣವನ್ನು ಹೆಚ್ಚಾಗಿ ಬಳಸಿರುವುದು ಕಂಡಬರುತ್ತದೆ.

ಬಾದಾಮಿಯ ಚಿತ್ರಗಳಲ್ಲಿ ಬೇರೆ ಬೇರೆ ಚಿತ್ರಗಳಿಗಾಗಿ ಪ್ರತ್ಯೇಕವಾಗಿ ಪಟ್ಟಿಕೆಗಳನ್ನು ಮಾಡಿಕೊಂಡಿರದೇ ಒಂದೇ ಸಾಲಿನಲ್ಲಿ ಚಿತ್ರಗಳನ್ನು ರಚಿಸಿ. ಕಂಬಗಳು ಇಲ್ಲವೇ ಮಂಟಪಗಳಂತಹ ವಿನ್ಯಾಸದಿಂದ ಪ್ರತಿಯೊಂದು ವಿಷಯದ ಚಿತ್ರಗಳನ್ನು ಪ್ರತ್ಯೇಕಿಸಲಾಗಿದೆ. ಆದರೆ ಹಂಪೆಯಲ್ಲಿ ಒಂದೊಂದು ವಿಷಯಕ್ಕೆ ಒಂದೊಂದು ಪಟ್ಟಿಕೆಗಳಲ್ಲದೇ ಪ್ರತ್ಯೇಕವಾದ ಚೌಕ, ಆಯತಗಳಂತಹ ವಿನ್ಯಾಸಗಳನ್ನು ಬಳಸಿಕೊಳ್ಳಲಾಗಿದೆ. ಅಲ್ಲದೇ ಒಂದು ಚಿತ್ರದ ಪಟ್ಟಿಕೆಯಮೇಲೆ ಮತ್ತೆ ಸಣ್ಣದಾಗುತ್ತ ಹೋಗುವ ಉಪ ಪಟ್ಟಿಕೆಗಳನ್ನು ಸಂಯೋಜಿಸಿದ್ದು ಇವುಗಳಲ್ಲಿ ಮಂಟಪಗಳು, ದೇವಾಲಯ, ಗೋಪುರಗಳು. ಟೆಂಗಿನ ಮರಗಳನ್ನು ರಚಿಸಲಾಗಿದೆ. ಹೀಗೆ ಪಟ್ಟಿಕೆಗಳನ್ನು ಮಾಡಿಕೊಂಡಂತಹ ವಿನ್ಯಾಸ ಮತ್ತು ಚಿತ್ರಗಳ ಹಿನ್ನೆಲೆಯಲ್ಲಿ ರಚಿಸಲಾದ ದೇವಾಲಯದ ಗೋಪುರಗಳು, ವಿಜಯನಗರ ಶೈಲಿಯ ರಾಯಗೋಪುರ ಗಳ ವಿನ್ಯಾಸವನ್ನು ನೆನಪಿಸುತ್ತವೆ. ದೇವಾಲಯಗಳ ನಿರ್ಮಾಣದಲ್ಲಿ ರಂಗಮಂಟಪ, ಕಲ್ಯಾಣಮಂಟಪ, ಪುಷ್ಕರಣಿ, ಸುತ್ತಲಿನ ಪೌಳಿಗಳು ಹೀಗೆ ಅನೇಕ ಹೆಚ್ಚಿನ ಭಾಗಗಳನ್ನು ಅಳವಡಿಸಿದಂತೆ. ಚಿತ್ರರಚನೆಯ ಸಂಯೋಜನೆಯಲ್ಲಿಯೂ ಅಕ್ಕಪಕ್ಕ, ಮೇಲೆ ಕೆಳಗೆ ಉಪಪಟ್ಟಿಕೆಗಳನ್ನು ರಚಿಸಿ ಅದೇ ಮಾರ್ಗ ಅನುಸರಿಸಿದ್ದಾರೆ ಎನ್ನಬಹುದು.

**II. ನಾಗಮಂಟಪದ ಚಿತ್ರಗಳು :** ವಿರೂಪಾಕ್ಷ ದೇವಾಲಯದ ಎಡಭಾಗದಲ್ಲಿ ಚಿಕ್ಕದಾದ ನಾಗದೇವಾಲಯವಿದ್ದು ಅಲ್ಲಿ ಲೋಹದ ನಾಗಪ್ರತಿಮೆ ಇದೆ. ಈ ನಾಗ ದೇವಾಲಯದ ಮೇಲ್ಭಾಗದಲ್ಲಿನ ಛಾವಣಿಯಲ್ಲಿ ಮತ್ತು ನಾಗದೇವರ ಮೂರ್ತಿ ಇರುವ ಮಾಡದ (ಗೂಡು) ಎಡ ಬಲ ಗೋಡೆಗಳ ಮೇಲೆ ವರ್ಣ ಭಿತ್ತಿ ಚಿತ್ರಗಳು ಕಂಡುಬರುತ್ತವೆ. ಇವು ಶೈಲಿಯಲ್ಲಿ ಪಕ್ಕದ ವಿರೂಪಾಕ್ಷ ದೇವಾಲಯದ ಛಾವಣಿ ಚಿತ್ರಗಳಿಗೆ ಹೋಲಿಕೆ ಯಾಗದಿದ್ದರೂ ಕೆಲವು ಲಕ್ಷಣಗಳಲ್ಲಿ ಅವುಗಳನ್ನು ಸಮೀಪಿಸುತ್ತವೆ. ಈ ಚಿತ್ರಗಳು ಬಹುಶ ಮೂಲ ಚಿತ್ರಗಳಾಗಿರದೇ ಮೂಲ ಚಿತ್ರಗಳ ಮೇಲೆ ತಿದ್ದಿದ ಇಲ್ಲವೇ ಮೂಲ ಚಿತ್ರಗಳ ಮೇಲೆ ತೆಳುವಾಗಿ ಸುಣ್ಣ ಸಾರಿಸಿ ಬೇರೆಯದೇ ಚಿತ್ರಗಳನ್ನು ಬರೆದಂತೆ ಕಂಡು ಬರುತ್ತದೆ. ಚಿತ್ರದ ಭಿತ್ತಿಯು ಉದುರಿಬಿದ್ದ ಕಡೆಗೆ ಅಲ್ಲಲ್ಲಿ ಹಿಂದಿನ ಮೂಲಚಿತ್ರದ ವರ್ಣ ಉಳಿಕೆ ಕಂಡುಬರುತ್ತದೆ. ಈಗ ಇಲ್ಲಿ ಮುಖ್ಯವಾಗಿ ಕಡುನೀಲಿ ಬೂದುವರ್ಣಗಳು ಕಂಡುಬರುತ್ತಿದ್ದು ಅದು ಉದುರಿದ ಜಾಗದಲ್ಲಿ ವಿರೂಪಾಕ್ಷ ದೇವಾಲಯದ ಮೇಲ್ಛಾವಣಿಯ ಚಿತ್ರಗಳಲ್ಲಿರುವಂತಹ ವರ್ಣ ವಿನ್ಯಾಸವೇ ಕಂಡಬುರುವುದನ್ನು ಸೂಕ್ಷ್ಮವಾಗಿ ಗಮನಿಸಬಹುದು. ಹಾಗಾಗಿ ಇಲ್ಲಿನ ಮೂಲ ಚಿತ್ರಗಳು ಕೂಡಾ ವಿರಾಪಾಕ್ಷ ದೇವಾಲಯದ ಚಿತ್ರಗಳು ರಚನೆಯಾದ ಸಂದರ್ಭದಲ್ಲೇ ರಚನೆಯಾಗಿದ್ದು. ನಂತರದಲ್ಲಿ ಅವುಗಳ ಮೇಲೆ ಪ್ರತಿಚಿತ್ರಣ ಮಾಡಲಾಗಿದೆ.

ನಾಗಮಂಟಪದ ನಾಗಪ್ರತಿಮೆಯ ಬಳಿ ಇರುವ ಭಿತ್ತಿಚಿತ್ರಗಳನ್ನು ವಿಷಯಕ್ಕನುಸಾರವಾಗಿ ಕೆಳಗಿನಂತೆ ಎರಡು ವಿಧದಲ್ಲಿ ವಿಂಗಡಿಸಬಹುದು. ೧. ಧಾರ್ಮಿಕ ಚಿತ್ರಗಳು, ೨. ಧಾರ್ಮಿಕೇತರ ಚಿತ್ರಗಳು.

೧. **ಧಾರ್ಮಿಕ ಚಿತ್ರಗಳು :** ಧಾರ್ಮಿಕ ಚಿತ್ರಗಳಲ್ಲಿ ಮತ್ತೆ ನಾಲ್ಕು ಪ್ರಕಾರದ ಚಿತ್ರಗಳನ್ನಾಗಿ ವಿಂಗಡಿಸಬಹುದು.

I. ದೇವಿಯ ಚಿತ್ರಗಳು

II. ವಿಷ್ಣುವಿನ ಚಿತ್ರಗಳು

III. ಋಷಿಮುನಿಗಳ ಚಿತ್ರಗಳು

IV. ಯಕ್ಷಬಾಲಕರು

***I. ದೇವಿಯ ಚಿತ್ರಗಳು :*** ಇಲ್ಲಿ ಮೇಲ್ಛಾವಣಿಯಲ್ಲಿ ಸಾಲಾಗಿ ಪಟ್ಟಿಕೆಗಳನ್ನು ಮಾಡಿಕೊಂಡು ಚಿತ್ರರಚಿಸಲಾಗಿದೆ. ಒಂದನೆಯ ಪಟ್ಟಿಯಲ್ಲಿ ಬಲಗಡೆಯಿಂದ ಮೊದಲನೆಯ ಚಿತ್ರ ಶಕ್ತಿದೇವತೆಯದಾಗಿದೆ. ದೇವಿಯು ತನ್ನ ವಿವಿಧ ಕೈಗಳಲ್ಲಿ ಬಗೆಬಗೆಯ ಆಯುಧಗಳನ್ನು ಹಿಡಿದಿದ್ದಾಳೆ. ಕೆಂಪು ಹಿನ್ನೆಲೆವರ್ಣದ ಮೇಲೆ ಚಿತ್ರರಚಿಸಲಾಗಿದ್ದು ದೇವಿಯ ಮೈಬಣ್ಣ ಬಿಳಿಮಿಶ್ರಿತ ತಿಳಿ ಕೆಂಪು ವರ್ಣದಲ್ಲಿದೆ. ಇದರ ಪಕ್ಕದ ಇನ್ನೊಂದು ಚಿತ್ರವೂ ದೇವಿಯ ಮಹಾತ್ಮೆ ಸಾರುವ ಆಕೆಯ ಇನ್ನೊಂದು ರೂಪವೇ ಆಗಿದ್ದು ಇಲ್ಲಿ ದೇವಿ ನಾಲ್ಕು ಕೈಗಳನ್ನು ಹೊಂದಿದ್ದು ಹಸಿರು ಸೀರೆ ಉಟ್ಟುಕೊಂಡಿದ್ದಾಳೆ. ಕ್ರಮವಾಗಿ ಮೂರು. ನಾಲ್ಕು. ಐದು. ಆರು ಹಾಗೂ ಏಳನೆಯ ಚಿತ್ರಗಳು ಅತ್ಯಂತ ಮಸುಕಾಗಿದ್ದು, ನಾಶದ ಹಾದಿಯಲ್ಲಿವೆ. ಮುಖ. ವೇಷಭೂಷಣ ಯಾವುದೂ ಸ್ಪಷ್ಟವಾಗಿ ಗೋಚರವಾಗುವುದಿಲ್ಲ. ಆದರೆ ಆರು ಮತ್ತು ಏಳನೆಯ ಚಿತ್ರಗಳು ಮತ್ತೆ ದೇವಿಯ ರೂಪಗಳೇ ಆಗಿವೆ. ತೆಳುಹಸಿರು ಮತ್ತು ಕಡುಹಸಿರು ಬಣ್ಣದ ಸೀರೆ ಕಂಡು ಬರುತ್ತದೆ. ಈ ಎಲ್ಲ ಚಿತ್ರಗಳ ಹಿನ್ನೆಲೆವರ್ಣ ಕೆಂಪಿನಿಂದ ಕೂಡಿದೆ.

***II. ವಿಷ್ಣುವಿನ ಚಿತ್ರಗಳು :*** ಎರಡನೆಯ ಸಾಲಿನಲ್ಲಿ ಬಲಗಡೆಗೆ ಒಂದು ಚಿತ್ರವಿದ್ದು ಅದು ಸಂಪೂರ್ಣ ನಾಶವಾಗಿದೆ. ಎರಡನೆಯ ಚಿತ್ರ ಉಗ್ರನರಸಿಂಹನದಾಗಿದೆ. ನರಸಿಂಹನು ನೀಲಿ ಧೋತರ ಉಟ್ಟು ಹಳದಿ ಮೈಬಣ್ಣದಿಂದ ಚಿತ್ರಿತನಾಗಿದ್ದಾನೆ. ಆತನ ನಾಲ್ಕು ಕೈಗಳಲ್ಲಿ ಹಿಂದಿನ ಎರಡು ಕೈಗಳಲ್ಲಿ ಶಂಖಚಕ್ರಗಳಿವೆ. ಆತನ ಅಕ್ಕಪಕ್ಕದಲ್ಲಿ ಇಬ್ಬರು ಸ್ತ್ರೀಯರು ನೃತ್ಯಮಾಡುತ್ತಿದ್ದಾರೆ. ಈ ಸಾಲಿನಲ್ಲಿ ಒಟ್ಟು ಹತ್ತು ಚಿತ್ರಗಳಿದ್ದು ಎಲ್ಲವೂ ವಿಷ್ಣುವಿಗೆ ಸಂಬಂಧಿಸಿವೆ. ವಿಷ್ಣುವಿನ ದಶಾವತಾರ ದೃಶ್ಯಗಳನ್ನು ಇವು ಪ್ರತಿಬಿಂಬಿಸುತ್ತವೆ. ಮತ್ಸ್ಯಾವತಾರ ವರಾಹ ಅವತಾರದ ಚಿತ್ರಗಳು ಉಳಿದ ಚಿತ್ರಗಳಿಗಿಂತ ಸುಂದರವಾಗಿ ಚಿತ್ರಿಸಲ್ಪಟ್ಟಿವೆ. ಇಲ್ಲಿಯ ಹಿನ್ನೆಲೆ ವರ್ಣವು ಕಿತ್ತುಬಂದು ಹಿಂದಿರುವ ಮೂಲಚಿತ್ರದ ವರ್ಣ ವಿನ್ಯಾಸ ಗೋಚರಿಸುತ್ತದೆ.

***III. ಋಷಿಮುನಿಗಳ ಚಿತ್ರಗಳು :*** ಮೇಲ್ಛಾವಣಿಯ ಮಧ್ಯದಲ್ಲಿ ಒಂದು ಅಲಂಕಾರಿಕ ವೃತ್ತವನ್ನು ರಚಿಸಿಲಾಗಿದ್ದು ಅದರ ಸುತ್ತಲೂ ಅಲ್ಲಲ್ಲಿ ಕೆಲವು ಋಷಿಮುನಿಗಳ ಚಿತ್ರಗಳನ್ನು ಚಿತ್ರಿಸಲಾಗಿದೆ. ದೊಡ್ಡ ಪಟ್ಟಿಕೆಗಳ ನಡುವೆ ಅಂತರ ಇರುವ ಸ್ಥಳದಲ್ಲಿ ಸಣ್ಣ ಪಟ್ಟಿಕೆಗಳನ್ನು ರಚಿಸಿದ್ದು ಅದರಲ್ಲಿಯೂ ಅಲ್ಲಲ್ಲಿ ಋಷಿಮುನಿಗಳ ಚಿತ್ರಗಳಿವೆ. ಋಷಿಮುನಿಗಳು ತಪಸ್ಸಿನಲ್ಲಿ ಕುಳಿತ ಧ್ಯಾನಮುದ್ರೆಯ ರೂಪಗಳಲ್ಲಿ ರಚನೆಯಾಗಿದ್ದಾರೆ.

***IV. ಯಕ್ಷ ಬಾಲಕರು :*** ನಾಗಪ್ರತಿಮೆ ಇರುವ ಮಾಡಿನ ಮೇಲ್ಭಾಗದಲ್ಲಿ ಹೂ ಮಾಲೆ ಹಿಡಿದುಕೊಂಡಿರುವ ರೆಕ್ಕೆಯುಳ್ಳ ಹಾರುತ್ತಿರುವ ಯಕ್ಷ ಬಾಲಕರನ್ನು ಚಿತ್ರಿಸಲಾಗಿದೆ. ಅಲ್ಲದೇ ಮಾಡದ ಬದಿಗಳಲ್ಲಿ ಚಾಮರ ಬೀಸುತ್ತಿರುವ ಇಬ್ಬರು ಸ್ತ್ರೀಯರ ಚಿತ್ರಗಳನ್ನೂ ಚಿತ್ರಿಸಿದೆ.

**೨. ಧಾರ್ಮಿಕೇತರ ಚಿತ್ರಗಳು :** ಧಾರ್ಮಿಕೇತರ ಚಿತ್ರಗಳಲ್ಲಿ ಎಲೆಬಳ್ಳಿಗಳು, ಹೂವಿನ ನಕ್ಷೆಗಳು, ಹೂಗಿಡಗಳನ್ನು ಹೊಂದಿದ ಕುಂಡಗಳು ಒಳಗೊಳ್ಳುತ್ತವೆ. ಇವು ಅಲ್ಲಲ್ಲಿ ಚಿತ್ರಗಳಿಗೆ ಪೂರಕವಾಗಿ ಮತ್ತು ಚಿತ್ರಗಳ

ಬದಿಯಲ್ಲಿನ ಅಂಚುಗಳಲ್ಲಿ ಚೌಕಟ್ಟಿನ ರೂಪದಲ್ಲಿ ಚಿತ್ರಿಸಿವೆ. ಛಾವಣಿಯ ಮಧ್ಯಭಾಗದಲ್ಲಿ ರಚಿಸಿದ ವೃತ್ತಾಕಾರದ ಅಲಂಕಾರಿಕ ನಕ್ಷೆಯು ಸುಂದರವಾಗಿದೆ. ಇದನ್ನು ಮಧ್ಯಕೇಂದ್ರವಾಗಿಟ್ಟುಕೊಂಡು ಇರತ ಚಿತ್ರಗಳ ಸುತ್ತಲೂ ಚದುರಿದಂತೆ ವಿನ್ಯಾಸಗೊಳಿಸಲಾಗಿದೆ.

**೨. ವಿಠ್ಠಲ ದೇವಾಲಯ, ಹಂಪಿ :** ಹಂಪೆಯ ವಿರೂಪಕ್ಷ ದೇವಾಲಯವು ಭಿತ್ತಿಚಿತ್ರಗಳಿಂದ ಅಲಂಕೃತವಾದಂತೆ ಇಲ್ಲಿನ ವಿಠ್ಠಲ ದೇವಾಲಯದಲ್ಲಿಯೂ ಭಿತ್ತಿ ಚಿತ್ರಗಳನ್ನು ರಚಿಸಿ ದೇವಾಲಯವನ್ನು ಅಂದಗೊಳಿಸಲಾಗಿತ್ತೆಂದು ತಿಳಿದುಬರುವುದು. ಅದಕ್ಕೆ ಸಾಕ್ಷಿ ಎಂಬಂತೆ ಈ ದೇವಾಲಯದ ಆವಣದಲ್ಲಿರುವ ಕಲ್ಯಾಣ ಮಂಟಪದಲ್ಲಿ ಮತ್ತು ಕಲ್ಲಿನ ರಥದಮೇಲೆ ಬಣ್ಣದ ಉಳಿಕೆಗಳು ಕಂಡುಬಂದಿದ್ದು. ಇವುಗಳಲ್ಲಿ ಒಂದೆ ವರ್ಣಭಿತ್ತಿ ಚಿತ್ರಗಳು ರಚನೆಯಾಗಿದ್ದವೆಂದು ಹೇಳಲು ಆಧಾರಗಳೆನಿಸುತ್ತವೆ. ವಿಠ್ಠಲ ದೇವಾಲಯದ ಭಿತ್ತಿಚಿತ್ರಗಳನ್ನು ಈ ಕೆಳಗಿನಂತೆ ಎರಡು ರೀತಿಯಲ್ಲಿ ವಿಂಗಡಿಸಬಹುದು.

I. ಕಲ್ಯಾಣ ಮಂಟಪದ ಚಿತ್ರಗಳು

II. ಕಲ್ಲಿನ ರಥದ ಚಿತ್ರಗಳು.

**I. ಕಲ್ಯಾಣ ಮಂಟಪದ ಚಿತ್ರಗಳು :** ವಿಠ್ಠಲ ದೇವಾಲಯದ ಆಗ್ನೇಯ ದಿಕ್ಕಿನಲ್ಲಿರುವ ಶಿಲಾಮಂಟಪವು ಅನೇಕ ಕಂಬಗಳಿಂದಾಗಿದ್ದು ಇದನ್ನು ಕಲ್ಯಾಣ ಮಂಟಪವೆಂದು ಕರೆಯಲಾಗುತ್ತಿದೆ. ಒಂದೆ ಇದನ್ನು ಡೋಲೋತ್ಸವಕ್ಕೆ ಬಳಸುತ್ತಿದ್ದು ಇದನ್ನು ಕ್ರಿ. ಶ. ೧೫೫೪ ರಲ್ಲಿ ನಿರ್ಮಿಸಲಾಯಿತೆಂದು[೧೮೩] ತಿಳಿದು ಬರುತ್ತದೆ. ಈ ಮಂಟಪದ ಛಾವಣಿಯು ವರ್ಣಚಿತ್ರಗಳಿಂದ ಕೂಡಿತ್ತೆಂಬುದಕ್ಕೆ ಸಾಕ್ಷಿಯಾಗಿ ಇಂದಿಗೂ ಛಾವಣಿಯಲ್ಲಿ ಬಣ್ಣದ ಉಳಿಕೆಗಳು ಕಂಡುಬರುತ್ತವೆ. ಸೂಕ್ಷ್ಮವಾಗಿ ಗಮನಿಸಿದಾಗ ಛಾವಣಿಯಲ್ಲಿ ಅಲ್ಲಲ್ಲಿ ಕೆಂಪು. ನೀಲಿ. ಹಸಿರು. ನಸುಗೆಂಪು ಬಣ್ಣದ ತುಣುಕುಗಳು ಗೋಚರಿಸುತ್ತವೆ. ಈ ಮಂಟಪವೂ ಕೂಡಾ ಭಿತ್ತಿ ಚಿತ್ರಗಳಿಂದ ಅಲಂಕೃತವಾಗಿತ್ತೆಂದು ಹೇಳಬಹುದು.

**II. ಕಲ್ಲಿನ ರಥದ ಚಿತ್ರಗಳು :** ವಿಠ್ಠಲ ದೇವಾಲಯ ಎದುರಿಗಿರುವ ಕಲ್ಲಿನ ರಥವು ಅತ್ಯಂತ ಸುಂದರವಾದ ರಚನೆಯಾಗಿದೆ. ಈ ರಥಕ್ಕೆ ಅಳವಡಿಸಿದ ಕಲ್ಲಿನ ಚಕ್ರಗಳು ತಿರುಗಿತ್ತವೆ. ಮೊದಲು ಈ ರಥದ ಮೇಲೆ ಗಚ್ಚುಗಾರೆ, ಇಟ್ಟಿಗೆಗಳಿಂದ ಕಟ್ಟಲ್ಪಟ್ಟ ಶಿಖರವಿದ್ದು ಅದು ಈಗ ಬಿದ್ದುಹೋಗಿದೆ. ಈ ಕಲ್ಲಿನ ರಥವನ್ನು ಮೊದಲು ವರ್ಣ ಚಿತ್ರಗಳಿಂದ ಅಲಂಕರಿಸಿದ್ದಂತೆ ಕಂಡುಬರುತ್ತದೆ. ಆದರೆ ವಾತಾವರಣಕ್ಕೆ ಸಂಪೂರ್ಣವಾಗಿ ತೆರೆದು ಕೊಂಡಿರುವುದರಿಂದ ವರ್ಣ ವಿನ್ಯಾಸ ಬೇಗನೆ ಹಾಳಾದಂತೆ ತೋರುತ್ತದೆ. ಆದರೂ ಈ ರಥದ ಮಂಟಪದ ಹಾಗಿರುವ ಕಮಾನುಗಳಲ್ಲಿ, ಉದ್ದವಾದ ಪಟ್ಟಿಕೆಗಳಲ್ಲಿ ಅಲ್ಲಲ್ಲಿ ವರ್ಣದ ಉಳಿಕೆಗಳು ಕಂಡುಬರುತ್ತವೆ. ಒಂದೇ ನೋಟಕ್ಕೆ ಇವುಗೋಚರಿಸದೇ ನಿಧಾನವಾಗಿ ಪರೀಕ್ಷಿಸಿ ನೋಡಿದಾಗ ಹೂಬಳ್ಳಿಯ ನಕ್ಷಾರೂಪಗಳು ಜ್ಯಾಮಿತಿಕ ರೂಪದ ನಕ್ಷೆಗಳು ಕಂಡುಬರುತ್ತವೆ. ವಿಠ್ಠಲ ದೇವಾಲಯಕ್ಕೆ ಎದುರಾಗಿರುವ ಗ್ರಂಥದ ಭಾಗದಲ್ಲಿ ಹೂಬ್ಬಳ್ಳಿಯ ನಕ್ಷೆಗಳು ಇನ್ನೂ ಅಲ್ಪಸ್ವಲ್ಪ ಉಳಿದು ಕೊಂಡಿವೆ ಹಸಿರು. ಕೆಂಪು. ನೀಲಿ. ಕಂದುಗೆಂಪು ವರ್ಣದ ತುಣುಕುಗಳು ಇಲ್ಲಿ ಗೋಚರಿಸುತ್ತವೆ. ಇದರಿಂದ ಇಡೀ ಕಲ್ಲಿನ ರಥವು ವರ್ಣದಿಂದ ರಚಿಸಿದ ಹೂಬಳ್ಳಿಯ ನಕ್ಷಾಚಿತ್ರಗಳಿಂದ ಅಲಂಕರಿಸಲಾಗಿತ್ತು ಎಂದು ಹೇಳಬಹುದಾಗಿದೆ. ಕಲ್ಲಿನ ರಥದ ಮೇಲೆ ವರ್ಣಚಿತ್ರಗಳಿದ್ದುದರ ಬಗ್ಗೆ ಇದುವರೆಗೆ ಉಲ್ಲೇಖಗಳು ಕಂಡು ಬಂದಂತಿಲ್ಲ.

೧೮೩. ಪ್ರಜಾವಾಣಿ ದಿನಪತ್ರಿಕೆ ಪುಟ ೩ ಭಾನುವಾರ ೨ ನೇ ಏಪ್ರಿಲ್. ೨೦೦೦ ಸುಂದರ ಶೈಲಿಯ ವಿಜಯ ವಿಠ್ಠಲ ದೇವಾಲಯ

**೩. ಕನಕಾಚಲ ಲಕ್ಷ್ಮೀನರಸಿಂಹ ದೇವಾಲಯ, ಕನಕಗಿರಿ :** ಕನಕಗಿರಿಯು ಕೊಪ್ಪಳ ಜಿಲ್ಲೆಯಲ್ಲಿ ಗಂಗಾವತಿಯಿಂದ ವಾಯುವ್ಯಕ್ಕೆ ೨೦ ಕಿ. ಮಿ. ಅಂತರದಲ್ಲಿ ಲಿಂಗಸೂರು ರಸ್ತೆಯಲ್ಲಿದೆ. ಪ್ರಚಲಿತದಲ್ಲಿರುವ ಸ್ಥಳೀಯ ಕತೆಯೊಂದರ ಪ್ರಕಾರ 'ಕನಕ' ಎಂಬ ಹೆಸರಿನ ಮುನಿಯೋರ್ವನು ಈ ಸ್ಥಳದಲ್ಲಿ ತಪಗೈದು ಬಂಗಾರದ ಮಳೆ ತರಿಸಿದ ಕಾರಣ ಈ ಸ್ಥಳಕ್ಕೆ ಕನಕಗಿರಿ ಎಂದು ಹೆಸರಾಯಿತು ಎನ್ನಲಾಗುತ್ತದೆ. ಕನಕಗಿರಿಯು ಕ್ರಿ. ಶ. ೧೫ ರಿಂದ ೧೮ ನೇ ಶತಮಾನದ ಅವಧಿಯಲ್ಲಿ ವಿಜಯನಗರ ಮತ್ತು ಬಿಜಾಪುರ ರಾಜ್ಯಗಳ ಅಧೀನ ಪಾಳೇಗಾರಿಕೆಯ ರಾಜ್ಯವಾಗಿತ್ತು. ಕನಕಗಿರಿಯಲ್ಲಿ ಗುಜ್ಜಲವಂಶದ ನಾಯಕರು ಆಡಳಿತ ನಡೆಸಿದ್ದು, ಕೆಲವಡಿ ಉಡಚನಾಯಕನು (ಕ್ರಿ. ಶ. ೧೫೩೩ - ೧೫೭೮) ಕನಕಾಚಲ ಲಕ್ಷ್ಮೀನರಸಿಂಹ ದೇವಾಲಯವನ್ನು ತನ್ನ ಆಳ್ವಿಕೆಯಲ್ಲಿ ವಿಸ್ತರಿಸಿ ಕಟ್ಟಿಸಿದನು. ಆಗ ಆತ ಕಟ್ಟಿಸಿದ ರಂಗಮಂಟಪ ಮತ್ತು ಪ್ರಧಾನ ದ್ವಾರದ ಗೋಪುರದಲ್ಲಿ ಭಿತ್ತಿಚಿತ್ರಗಳನ್ನು[೧೪] ಬರೆಸಿದ್ದಾನೆ ಎಂದು ತಿಳಿದುಬರುವುದು. ಕನಕಾಚಲ ಲಕ್ಷ್ಮೀನರಸಿಂಹ ದೇವಾಲಯದ ಭಿತ್ತಿಚಿತ್ರಗಳನ್ನು ರಚನೆಯಾದ ಸ್ಥಳಗಳನ್ನಾಧರಿಸಿ ಎರಡು ರೀತಿಯಲ್ಲಿ ವಿಂಗಡಿಸಬಹುದು. (I) ರಂಗಮಂಟಪದ ಚಿತ್ರಗಳು, (II) ಪ್ರಧಾನ ಗೋಪುರದ ಚಿತ್ರಗಳು. ಈ ದೇವಾಲಯದ ಪ್ರಧಾನ ಗೋಪುರದ ಛತ್ತಿನಲ್ಲಿರುವ (ದ್ವಾರಮಂಟಪ) ಚಿತ್ರಗಳು ಅಲ್ಲಲ್ಲಿ ಹಾಳಾಗಿದ್ದು, ರಂಗಮಂಟಪದಲ್ಲಿನ ಚಿತ್ರಗಳು ಬಹಳಷ್ಟು ನಶಿಸಿ ಹೋಗಿವೆ.

**I. ರಂಗಮಂಟಪದಲ್ಲಿನ ಚಿತ್ರಗಳು :** ದೇವಾಲಯದ ಅತ್ಯಂತ ವಿಶಾಲವಾದ ಮತ್ತು ಆಕರ್ಷಕವಾದ ಭಾಗವೆಂದರೆ ಈ ರಂಗಮಂಟಪವೇ ಆಗಿದೆ. ಇದರ ವಿಸ್ತಾರ ೫೪ ಅಡಿ ಉದ್ದ ೩೬ ಅಡಿ ಅಗಲವಾಗಿದ್ದು ಸ್ತಂಭಗಳಿಂದ ಕೂಡಿದ ತೆರೆದ ಮಂಟಪವಾಗಿದೆ. ಈ ಮಂಟಪದ ಛತ್ತಿನಲ್ಲಿ ವರ್ಣಚಿತ್ರಗಳನ್ನು ರಚಿಸಲಾಗಿದ್ದು ಅವು ಸಂಪೂರ್ಣ ಹಾಳಾಗಿದ್ದು ಗುರುತಿಸಲು ಆಗದ ಹಾಗೆ ಬರೀ ವರ್ಣ ಉಳಿಕೆಗಳು ಮಾತ್ರ ಉಳಿದುಬಂದಿವೆ. ಇಲ್ಲಿನ ಈ ರಂಗಮಂಟಪದ ಛತ್ತು ಸಮತಟ್ಟಾಗಿದ್ದು ಮಧ್ಯದಲ್ಲಿ ಕಮಲಾಕೃತಿಯ ನಕ್ಷೆಯನ್ನು ನಿರ್ಮಿಸಲಾಗಿದ್ದು ಅದರ ನಡುವೆ ಭುವನೇಶ್ವರಿ ಇದೆ. ಅದರ ಸುತ್ತಲೂ ವರ್ಣ ಚಿತ್ರಗಳನ್ನು ರಚಿಸಲಾಗಿದೆ. ನಾಶವಾದ ಚಿತ್ರಗಳ ಬಣ್ಣಗಳ ಉಳಿಕೆಗಳಲ್ಲಿ ಇಂದು ಮರದ ಮೇಲೆ ಆಡುತ್ತಿರುವ ಬಾಲಕನ ಚಿತ್ರವನ್ನು ಮಾತ್ರ ಅಸ್ಪಷ್ಟವಾಗಿ ಗುರುತಿಸಬಹುದು. ಇದು ಬಹುಶ ಕೃಷ್ಣನು ತನ್ನ ಬಾಲ್ಯದಿನಗಳಲ್ಲಿ ಗೋಪಾಲಕರೊಡನೆ ಆಡುತ್ತಿರುವ ಮರಕೋತಿ ಆಟವನ್ನು ಸೂಚಿಸುತ್ತಿರಬಹುದು.

**II. ಪ್ರಧಾನ ಗೋಪುರದ (ದ್ವಾರ ಮಂಟಪ) ವರ್ಣ ಚಿತ್ರಗಳು :** ಪ್ರಧಾನ ಗೋಪುರದ ಮೇಲ್ಚಾವಣಿಯಲ್ಲಿ ಮೂರು ಅಂಕಣಗಳಾಗಿ ವಿಂಗಡಿಸಲಾಗಿದ್ದು ಆ ಮೂರೂ ಭಾಗಗಳಲ್ಲಿ ವರ್ಣ ಚಿತ್ರಗಳನ್ನು ರಚಿಸಲಾಗಿದೆ. ಒಟ್ಟು ಮೇಲ್ಚಾವಣಿಯು ಆಯತಾಕಾರದಲ್ಲಿದ್ದು, ಚಿತ್ರಗಳನ್ನು ಆಯತ ಮತ್ತು ಚೌಕಗಳಲ್ಲಿ ಸಂಯೋಜಿಸಲಾಗಿದೆ. ಒಟ್ಟು ಚಿತ್ರಣವಾದ ಪ್ರದೇಶ ಚಚ್ಚೌಕವಾಗಿದ್ದು ಒಂದರೊಳೊಂದು ಸೇರುವಂತೆ ನಾಲ್ಕು ಪಟ್ಟಿಕೆಗಳನ್ನು ಮಾಡಿ ಚಿತ್ರರಚನೆ ಮಾಡಿದ್ದಾರೆ. ನುಡವಿನ ಅಂಕಣದ ಮಧ್ಯ ಭಾಗದಲ್ಲಿ ವೃತ್ತ ಭಾಗವಿದ್ದು ಅದರ ನಡುವೆ ಬಾಲಕೃಷ್ಣನ ಚಿತ್ರವಿದೆ ಈ ಬಾಲಕೃಷ್ಣನು ನಗ್ನನಾಗಿದ್ದು ಬಲಗಾಲನ್ನು ಕೆಳಗೆ ಇಳಿಬಿಟ್ಟು ಎಡಗಾಲನ್ನು ಮೇಲಕ್ಕೆತ್ತಿ ಆ ಕಾಲಿನ ಹೆಬ್ಬೆರಳನ್ನು ಬಾಯಲ್ಲಿ ಇಟ್ಟುಕೊಂಡಿದ್ದಾನೆ. ಬಲಗೈಯಿಂದ ಕಾಲನ್ನು ಎತ್ತಿಹಿಡಿದಿದ್ದಾನೆ. ಬಾಲಕೃಷ್ಣನಿರುವ ವೃತ್ತದ ಸುತ್ತಲೂ ಕಮಲದ ದಳಗಳನ್ನು ಚಿತ್ರಿಸಲಾಗಿದೆ. ಚಿತ್ರಗಳ ಹೊರ ಚೌಕಟ್ಟುಗಳಿಗೆ ಪಟ್ಟಿಕೆಗಳನ್ನು ರಚಿಸಿ ಅವುಗಳಲ್ಲಿ ಅಲಂಕಾರಿಕ

---

೧೪. ಪಿ. ಶರಣಬಸಪ್ಪ : ಕನಕಗಿರಿ ಪ್ರದೇಶದ ಮೂರ್ತಿಶಿಲ್ಪ. (ಕರ್ನಾಟಕ ವಿ.ವಿ.ಗೆ ಸಲ್ಲಿಸಿದ ಎಂ.ಫಿಲ್. ಲಘು ಶೋಧ ಪ್ರಬಂಧ ಬೆರಳಚ್ಚು ಪ್ರತಿ) ಪುಟ ೫೮

ನಕ್ಷೆಗಳನ್ನು ರಚಿಸಲಾಗಿದೆ. ಹೆಚ್ಚಿನ ನಕ್ಷೆಗಳು ಪುನರಾವರ್ತಿತವಾಗಿವೆ. ಎಡಭಾಗದ ಅಂಕಣದಲ್ಲಿರುವ ಚಿತ್ರಗಳು ಹೆಚ್ಚು ಹಾಸಿಗೊಂಡಿವೆ. ಈ ಅಂಕಣದಲ್ಲಿ ಅನೇಕ ಚೌಕುಗಳನ್ನು ರಚಿಸಿ ಅದರಲ್ಲಿ ಅನೇಕ ವಿಷಯದ ಚಿತ್ರಗಳನ್ನು ರಚಿಸಲಾಗಿದೆ. ಇಲ್ಲಿನ ಚಿತ್ರಗಳಲ್ಲಿ ಮುಖ್ಯವಾಗಿ ಗಿಳಿಯ ಮೇಲೆ ಕುಳಿತ ಇಬ್ಬರು ಸ್ತ್ರೀಯರು ಎದುರುಬದುರಾಗಿ ಕಾದಾಡುತ್ತಿರುವ ದೃಶ್ಯವಿದ್ದು ಈ ಸ್ತ್ರೀಯರು ಕೈಯಲ್ಲಿ ಚಕ್ರ ಮತ್ತು ಬಿಲ್ಲು ಬಾಣಗಳನ್ನು ಹಿಡಿದಿದ್ದಾರೆ. ಇನ್ನೊಂದು ಚಿತ್ರದಲ್ಲಿ ರತಿಮನ್ಮಥರ ಚಿತ್ರವಿದ್ದು ಶೃಂಗಾರ ಕೇಳಿಯಲ್ಲಿ ತೊಡಗಿದ್ದಾರೆ. ಮತ್ತೊಂದು ಭಾಗದಲ್ಲಿ ವಿಷ್ಣುವಿನ ದಶಾವತಾರ ಚಿತ್ರಗಳಾದ ಮತ್ಸ್ಯಾವತಾರ. ಕೂರ್ಮಾವತಾರ. ವರಾಹವತಾರ. ನರಸಿಂಹವತಾರ. ವಾಮನಾವತಾರ ಮುಂತಾದ ಚಿತ್ರಗಳಿವೆ. ಮತ್ತೊಂದು ಕಡೆಗೆ ಮಿಥುನ ಕ್ರಿಯೆಯಲ್ಲಿ (ಶೃಂಗಾರ) ನಿರತ ಗಂಡು ಹೆಣ್ಣು ಜೋಡಿಗಳ ಚಿತ್ರಗಳಿವೆ. ಒಟ್ಟು ಚಿತ್ರರಚನೆಯ ಚೌಕಭಾಗದ ನಾಲ್ಕು ಮೂಲೆಗಳಲ್ಲಿ ಸಿಂಹದ ಚಿತ್ರಗಳಿವೆ. ಎಡ ಅಂಕಣದ ಚಿತ್ರಗಳಲ್ಲಿ ಯಾವುದೇ ವ್ಯಕ್ತಿಚಿತ್ರಗಳಿರದೇ ಅಲಂಕಾರಿಕ ನಕ್ಷಾ ವಿನ್ಯಾಸಗಳಿವೆ. ಮೇಲ್ಚಾವಣಿಯ ಛತ್ತಿನಲ್ಲಿಯ ಚಿತ್ರಗಳು ಇವಾದರೆ ತೊಲೆಗಳ ಮೇಲೆ ರಚಿಸಿದ ವರ್ಣಚಿತ್ರಗಳಲ್ಲಿ ವೃತ್ತಾಕಾರವಾಗಿ ಸಂಯೋಜನೆಗೊಳಿಸಿ ರಚಿಸಲಾದ ಕಮಲದಹೂಗಳು, ಮೀನು, ಹಾವು. ಕಪ್ಪೆ. ಹಂಸಗಳು. ಅಲ್ಲದೇ ನೃತ್ಯಗಾರ್ತಿಯರ ಚಿತ್ರಗಳ ಸಾಲುಗಳನ್ನು ಇಲ್ಲಿನ ತೊಲೆಯಮೇಲೆ ಕಾಣಬಹುದು. ವಿಜಯನಗರ ಅರಸರ ಮಾಂಡಲೀಕರಾಗಿ ಕನಕಗಿರಿಯಲ್ಲಿ ಆಡಳತ ನಡೆಸಿದ ಗುಜ್ಜಲ ವಂಶದ ನಾಯಕರ ಮೇಲೆ ತಮ್ಮ ಸಾರ್ವಭೌಮ ಪ್ರಭುಗಳ ವಾಸ್ತುನಿರ್ಮಾಣ ಚಟುವಟಿಕೆಗಳು ಪರಿಣಾಮ ಬೀರಿದಂತೆ ಇವರ ಚಿತ್ರಕಲೆಯ ಮೇಲೂ ಅವರ ಪ್ರಭಾವ ಕಾಣಬಹುದು.

**ಕನಕಗಿರಿ ವರ್ಣ ಚಿತ್ರಗಳ ಲಕ್ಷಣಗಳು :**

* ವರ್ಣ ಚಿತ್ರರಚನೆಯಲ್ಲಿ ಸಾಮಾನ್ಯವಾಗಿ ಬಿಳಿ. ಕಪ್ಪು. ಬೂದು ತಿಳಿಹಳದಿ, ಬಣ್ಣಗಳನ್ನು ಹೆಚ್ಚಾಗಿ ಬಳಸಲಾಗಿದೆ.
* ವ್ಯಕ್ತಿ ಮತ್ತು ಪ್ರಾಣಿಗಳ ಕಣ್ಣುಗಳನ್ನು ದೊಡ್ಡದಾಗಿ ಚಿತ್ರಿಸಲಾಗಿದೆ. ಮುಖ ಪ್ರಮಾಣಕ್ಕೆ ಹೋಲಿಸಿದಾಗ ಮುಖದಲ್ಲಿ ಕಣ್ಣುಗಳೇ ಪ್ರಧಾನವಾಗಿ ಕಂಡುಬರುತ್ತವೆ.
* ವಿಷ್ಣುವಿನ ದಶಾವತಾರದ ಚಿತ್ರಗಳಲ್ಲಿ ಎಲ್ಲಕಡೆಗೂ ಮೂರು ನಾಮಗಳನ್ನು ಚಿತ್ರಿಸಿದ್ದು ಕಾಣುತ್ತೇವೆ.
* ಪ್ರತಿಯೊಂದು ಪ್ರತ್ಯೇಕ ದೃಶ್ಯಗಳನ್ನು ಬೇರೆಯದೇ ಆದ ಚೌಕಭಾಗದಲ್ಲಿ ಚಿತ್ರಿಸಲಾಗಿದೆ. ಎಲ್ಲ ದೃಶ್ಯಗಳೂ (ಚಿತ್ರಗಳೂ) ಚೌಕದ ಒಳಗೆ ರಚಿಸಿವೆ.
* ಛತ್ತಿನ ಪ್ರತಿ ಅಂಕಣದ ಮಧ್ಯಭಾಗದಲ್ಲಿ ವೃತ್ತದಲ್ಲಿ ಬಾಲಕೃಷ್ಣನ ಚಿತ್ರರಚಿಸಲಾಗಿದೆ. ಸುತ್ತಲಿನ ಪಟ್ಟಿಗಳಲ್ಲಿ ಲತೆ. ಹೂಬಳ್ಳಿ. ಮುಂತಾದ ಅಲಂಕಾರಿಕ ಆಕೃತಿಗಳಿರುತ್ತವೆ.

**೪. ವೆಂಕಟೇಶ್ವರ ದೇವಾಲಯ, ನರಗುಂದ :** ನರಗುಂದ ಕೋಟೆಯ ಒಳ ಆವಣದಲ್ಲಿರುವ ವೆಂಕಟೇಶ್ವರ ದೇವಾಲಯವು ಈ ಸಂಸ್ಥಾನದ ಮೊದಲ ದೊರೆ ರಾಮರಾವ್‌ನ ಕಾಲದಲ್ಲಿ ಕ್ರಿ. ಶ. ೧೭೨೦ ರಲ್ಲಿ ಕಟ್ಟಿಸಿ ಅದರಲ್ಲಿ ಭಿತ್ತಿ ಚಿತ್ರಗಳನ್ನು ಬರೆಸಲಾಯಿತು[೧೯೫] ಎಂದು ತಿಳಿದುಬರುವುದು. ಬಹುಶ ಹಿಂದೆ ಈ ದೇವಾಲಯದ ಒಳಗೋಡೆಗಳು ಭಿತ್ತಿ ಚಿತ್ರಗಳಿಂದ ಅಲಂಕರಿಸಲ್ಪಟ್ಟಿರಬೇಕು. ಸುಮಾರು ಮೂವತ್ತು ವರ್ಷಗಳ ಹಿಂದೆ ಇಲ್ಲಿಗೆ ಭೇಟಿ ನೀಡಿದ

---

೧೯೫. ವೆಂಕಟ ರಂಗೋ ಕಟ್ಟಿ : ಧಾರವಾಡ ಜಿಲ್ಲಾ ಗೆಝೆಟೀಯರ್ (೧೮೮೭), ಪುಟ ೨೦೭

ಡಾ. ಶಿವರಾಮ ಕಾರಂತ ಅವರು[೧೪೬] ಹಳೆಗಾಲದ ಭಿತ್ತಿಚಿತ್ರಗಳು ಈ ದೇವಾಲಯದ ಗರ್ಭಗುಡಿಯ ಎದುರಿನ ಗೋಡೆಯಲ್ಲಿ ಮತ್ತು ದೇವಾಲಯದ ಎರಡನೆಯ ಮಹಡಿಯಲ್ಲಿ ಕಂಡುಬರುತ್ತವೆ ಎಂದು ಹೇಳುತ್ತಾರೆ. ಆದರೆ ಅಲ್ಲಿ ಹಳೆಗಾಲದ ಎಲ್ಲ ಭಿತ್ತಿಚಿತ್ರಗಳನ್ನು ನಾಶಪಡಿಸಲಾಗಿದ್ದು, ಗರ್ಭಗೃಹದ ಬಾಗಿಲಿನ ಮೇಲೆ ಮಾತ್ರ ಕೆಲವು ಚಿತ್ರಗಳು ಉಳಿದಿವೆ. ಆದರೆ ಇವುಗಳೂ ಮೂಲ ರೂಪದಲ್ಲಿರದೇ ತಿದ್ದುಪಡಿ ಮಾಡಲಾಗಿದೆ. ಉಳಿದಿರುವ ಚಿತ್ರಗಳಲ್ಲಿ ವಿಷ್ಣುವಿನ ದಶಾವತಾರದ ಚಿತ್ರಗಳಿವೆ. ಬಲಗೋಡೆಯಲ್ಲಿ ಐದು ಎಡಗೋಡೆಯಲ್ಲಿ ಐದು ಅವತಾರಗಳ ಚಿತ್ರಗಳನ್ನು ವೃತ್ತಾಕಾರದ ಸ್ಥಳವಿನ್ಯಾಸದಲ್ಲಿ ರಚಿಸಲಾಗಿದೆ. ಚಿತ್ರಗಳು ಹೆಚ್ಚಿನ ಪ್ರಮಾಣದಲ್ಲಿ ನಾಶವಾಗಿದ್ದು ವಿವರಗಳನ್ನು ಗುರುತಿಸಲು ತೊಂದರೆಯಾಗುತ್ತದೆ.

**೫. ಎಲ್ಲಮ್ಮ ದೇವಾಲಯ, ಉಪ್ಪಿನ ಬೆಟಗೇರಿ :** ಧಾರವಾಡ ತಾಲೂಕಿನ ಉಪ್ಪಿನ ಬೆಟಗೇರಿಯು ಧಾರವಾಡದಿಂದ ಬೈಲಹೊಂಗಲ ರಸ್ತೆಯಲ್ಲಿ ೨೧ ಕಿ. ಮಿ. ದೂರದಲ್ಲಿದೆ. ಈ ಊರಲ್ಲಿ ಸುಮಾರೂ ೧೫೦ ರಿಂದ ೨೦೦ ವರ್ಷಗಳಷ್ಟು ಹಳೆಯದಾದ ಯಲ್ಲಮ್ಮ ದೇವಸ್ಥಾನ ಒಂದಿದ್ದು ಅದರಲ್ಲಿ ಭಿತ್ತಿಚಿತ್ರಗಳು ಕಂಡುಬಂದಿವೆ. ಈ ದೇವಾಲಯವು ಈಗ ಸಂಪೂರ್ಣವಾಗಿ ಬಿದ್ದುಹೋಗಿ ಶಿಥಿಲಾವಸ್ಥೆಯಲ್ಲಿದ್ದು ಗರ್ಭಗುಡಿ ಮಾತ್ರ ಉಳಿದುಕೊಂಡಿದೆ. ಬಿದ್ದಿರುವ ದೇವಾಲಯದ ಜಂತಿಯಲ್ಲಿರುವ ಕಟ್ಟಿಗೆಯ ತೊಲೆ ಮತ್ತು ಹಲಗೆಗಳ ಮೇಲೆ ವರ್ಣಭಿತ್ತಿ ಚಿತ್ರಗಳು ಅತ್ಯಂತ ಮಸುಕಾಗಿ ಕಂಡುಬರುತ್ತವೆ. ಈ ಬಿದ್ದಂತಹ ದೇವಾಲಯದ ಭಾಗಕ್ಕೆ ಯಾವ ರಕ್ಷಣೆಯೂ ಇರದ್ದರಿಂದ ಈ ಭಿತ್ತಿ ಚಿತ್ರಗಳೂ ಬಿಸಿಲುಮಳೆಯಲ್ಲಿ ಅನಾಥವಾಗಿ ಬಿದ್ದು ಕೊಂಡಿದ್ದರಿಂದ ಪೂರ್ತಿಯಾಗಿ ನಶಿಸಿಹೋಗಿವೆ. ಫೋಟೋ ತೆಗೆದರೂ ಸ್ಪಷ್ಟವಾಗಿ ಮೂಡಲಾರದ ಹಂತದಲ್ಲಿವೆ. ಬರೀ ಚಿತ್ರಗಳು ಇದ್ದಿರಬಹುದಾದ ಕುರುಹುಗಳು ಮಾತ್ರ ಅಲಲ್ಲಿ ಕಾಣುತ್ತವೆ. ಈ ಕಟ್ಟಿಗೆಯ ಮೇಲಿನ ಚಿತ್ರಗಳಲ್ಲಿ ನವಿಲುಗಳು, ವಿವಿಧ ಪ್ರಾಣಿ ಪಕ್ಷಿಗಳು, ತಳಕುಹಾಕಿಕೊಂಡಿರುವ ಹಾವುಗಳು, ಭೂಮಿಯ ಆಕೃತಿಯ ನಕ್ಷೆಗಳು, ವಿವಿಧ ಸುಳುವುಗಳು ಪ್ರಮುಖವಾಗಿ ಕಂಡುಬರುತ್ತವೆ. ಗೋಡೆಯಲ್ಲೂ ಚಿತ್ರಗಳು ಇದ್ದುವೆಂದು ಅಲ್ಲಿಯ ಸ್ಥಳೀಯ ಜನರು ಹೇಳುತ್ತಾರೆ. ಚಿತ್ರಗಳಿದ್ದಿರಬಹುದಾದ ಕುರುಹುಗಳಿವೆ.

**೬. ಶ್ರೀರಾಮದೇವಾಲಯ, ಬುಜೂರ ಕಂಚನಹಳ್ಳಿ :** ಉತ್ತರ ಕನ್ನಡ ಜಿಲ್ಲೆಯ ಹಳಿಯಾಳ ತಾಲೂಕಿಗೆ ಸೇರಿದ ಬುಜೂರ ಕಂಚನಹಳ್ಳಿಯು ಹಳಿಯಾಳದಿಂದ ೩ ಕಿ.ಮಿ.ಗಳ ಅಂತರದಲ್ಲಿದೆ. ಈ ಗ್ರಾಮದ ಹೊರವಲಯದಲ್ಲಿರುವ ಶ್ರೀರಾಮ ಮಂದಿರದಲ್ಲಿ ವರ್ಣ ಭಿತ್ತಿಚಿತ್ರಗಳು ಕಂಡು ಬಂದಿವೆ. ಈ ದೇವಾಲಯವು ಬಯಲು ನಾಡಿನ ಕಲ್ಲಿನಲ್ಲಿ ನಿರ್ಮಿಸಿದ ದೇವಾಲಯಗಳ ಮಾದರಿಯಲ್ಲಿರದೇ ಮಲೆನಾಡ ಭಾಗದ ಕಪ್ಪು ಹಂಚುಗಳನ್ನು ಹೊದಿಸಿದ ಕಟ್ಟಡವಾಗಿದೆ. ದೇವಾಲಯವು ಚಚ್ಚೌಕವಾದ ತಳಪಾಯದ ಮೇಲೆ ನಿರ್ಮಿಸಿದ್ದು, ಪ್ರತಿಯೊಂದು ಬದಿಯ ಅಳತೆ ೨೦' ಫೂಟುಗಳಾಗಿದೆ. ನಾಲ್ಕೂ ದಿಕ್ಕಿಗೆ ಪ್ರತಿಯೊಂದು ದಿಕ್ಕಿನಲ್ಲಿ ೮ ಕಂಬಗಳಂತೆ ೩೨ ಕಟ್ಟಿಗೆಯ ಕಂಬಗಳನ್ನು ನಿಲ್ಲಿಸಿ ಅದರ ಮೇಲೆ ಮೇಲ್ಛಾವಣಿ ಹೊದಿಸಲಾಗಿದೆ. ದೇವಾಲಯದ ಸುತ್ತಲೂ ಪ್ರದಕ್ಷಿಣಾಪಥವನ್ನು ನಿರ್ಮಿಸಿದ್ದು ಈ ಪ್ರದಕ್ಷಿಣಾಪಥಕ್ಕೆ ಎತ್ತರವಾದ ಕಟ್ಟೆ ಇದೆ. ಚಿತ್ರಗಳನ್ನು ನೋಡುತ್ತಾ ಸಾಗಲು ಅನುಕೂಲ ಕಲ್ಪಿಸಿದ್ದಾರೆ. ದೇವಾಲಯದ ನಾಲ್ಕೂ ಬದಿಯ ಹೊರಗೋಡೆಗಳು, ಒಳಭಾಗದ ಗೋಡೆಗಳು, ಛಾವಣಿಗೆ ಹೊಂದಿಕೊಂಡಿರುವ ಮರದ ತೊಲೆಗಳು, ಬಾಗಿಲ ಮೇಲಿನ ಮರದ ಫಲಕಗಳು, ಬಾಗಿಲ ತೋಳುಗಳಲ್ಲಿ

೧೪೬. ಡಾ. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪುಟ ೯೪


ಶ್ರೀರಾಮ ದೇವಾಲಯ, ಬುಜೂರ ಕಂಚನಹಳ್ಳಿ
I) ಹೊರ ಭಾಗದ ಚಿತ್ರಗಳು
II) ಒಳ ಭಾಗದ ಚಿತ್ರಗಳು
III) ಆಸರೆ ಗೋಡೆಯ ಚಿತ್ರಗಳು
1) ಉತ್ತರ ಗೋಡೆಯ ಚಿತ್ರಗಳು
2) ಪಶ್ಚಿಮ ಗೋಡೆಯ ಚಿತ್ರಗಳು
3) ದಕ್ಷಿಣ ಗೋಡೆಯ ಚಿತ್ರಗಳು
4) ಪೂರ್ವ ಗೋಡೆಯ ಚಿತ್ರಗಳು
I) ಒಂದನೇ ಪಟ್ಟಿಕೆಯ ಚಿತ್ರಗಳು
1) ಮಹಿಷಾಸುರ ಮರ್ಧಿನಿ
2) ಪಂಚಮುಖದ ಆಂಜನೇಯ
3) ಕೃಷ್ಣನ ವಿಶ್ವರೂಪ ದರ್ಶನ
II) ಎರಡನೇ ಪಟ್ಟಿಕೆಯ ಚಿತ್ರಗಳು
1) ಶ್ರವಣಕುಮಾರನ ಚಿತ್ರ
2) ವಶಿಷ್ಠ ಮುನಿಗಳ ಚಿತ್ರ
3) ಯಾಗದ ಚಿತ್ರ
4) ಶೇಷಶಯನ ವಿಷ್ಣು
5) ರಾಮ-ಲಕ್ಷ್ಮಣರ ಜನನ
6) ವಿಶ್ವಾಮಿತ್ರ ಮುನಿ ರಾಮ-ಲಕ್ಷ್ಮಣರನ್ನು ಅರಣ್ಯಕ್ಕೆ ಕರೆದೊಯ್ಯುತ್ತಿರುವುದು
7) ತಾಟಕಿಯ ಸಂಹಾರ
8) ಸುಬಾಹು ಮಾರೀಚರ ವಧೆ
9) ಅಹಲ್ಯಾ ಶಾಪ ವಿಮೋಚನೆ
10) ಸೀತಾ ಸ್ವಯಂವರ
11) ಜನಕರಾಜನ ಉಡುಗೊರೆಯೊಂದಿಗೆ ಅಯೋಧ್ಯೆಗೆ ಪ್ರಯಾಣ
12) ಗಣಪತಿ. ಸರಸ್ವತಿಯರ ಚಿತ್ರ
13) ರಾವಣನ ಚಿತ್ರಗಳು
III) ಮೂರನೇ ಪಟ್ಟಿಕೆಯ ಚಿತ್ರಗಳು
1) ರಾಣಿಯರು ರಥದಲ್ಲಿ ಹೊರಟಿರುವುದು
2) ಕುದುರೆ ಮೇಲೆ ಹೊರಟ ರಾಜ
3) ರಾಮನ ಪಟ್ಟಾಭಿಷೇಕ
IV) ನಾಲ್ಕನೇ ಪಟ್ಟಿಕೆಯ ಚಿತ್ರಗಳು
1) ಕದನ ದೃಶ್ಯ
2) ಮೆರವಣಿಗೆಯ ದೃಶ್ಯಗಳು
3) ರಾಮ-ರಾವಣರ ಯುದ್ಧ ದೃಶ್ಯಗಳು
I) ಬೇಟೆಯ ಚಿತ್ರಗಳು
I) ಹುಲಿಯು ಘೇಂಡಾಮೃಗವನ್ನು ಕೊಲ್ಲುತ್ತಿರುವುದು
II) ಕೋಣಗಳ ಕಾದಾಟ
III) ಜಿಂಕೆಯ ಚಿತ್ರ
IV) ಬೇಟೆಯ ಮೆರವಣಿಗೆ
I) ಇತರ ಚಿತ್ರಗಳು
I) ಲಿಂಗಪೂಜೆಯ ಚಿತ್ರ
II) ರಾಜರಾಣಿಯರ ಚಿತ್ರ

# ಪಶ್ಚಿಮ ಗೋಡೆಯ ಚಿತ್ರಗಳು

## I) ಒಂದನೆಯ ಪಟ್ಟಿಕೆಯ ಚಿತ್ರಗಳು

## II) ಎರಡನೆಯ ಪಟ್ಟಿಕೆಯ ಚಿತ್ರಗಳು

1) ರಾವಣನು ಸೀತೆಯನ್ನು ಅಪಹರಿಸಿದ್ದು
2) ಜಟಾಯುವಿನ ಹೋರಾಟ
3) ಜಟಾಯುವಿನ ಮರಣ
4) ಕಬಂಧನೆಂಬ ರಾಕ್ಷಸನ ಸಂಹಾರ
5) ಶಬರಿಯನ್ನು ಭೇಟಿ ಮಾಡಿದ್ದು
6) ಸುಗ್ರೀವನು ರಾಮ-ಲಕ್ಷ್ಮಣರನ್ನು ಕಂಡದ್ದು
7) ಆಂಜನೇಯನು ರಾಮ-ಲಕ್ಷ್ಮಣರನ್ನು ಭೇಟಿಯಾಗಿದ್ದು
8) ರಾಮ-ಸುಗ್ರೀವರ ಸ್ನೇಹ
9) ಸುಗ್ರೀವನು ರಾಮನ ಶಕ್ತಿಯನ್ನು ಮನಗಾಣುವುದು
10) ವಾಲಿ-ಸುಗ್ರೀವರ ಕಾಳಗ. ವಾಲಿಯ ಸಂಹಾರ
11) ಸುಗ್ರೀವನ ಪಟ್ಟಾಭಿಷೇಕ

## III) ಮೂರನೆಯ ಪಟ್ಟಿಕೆಯ ಚಿತ್ರಗಳು

1) ಸಂಪಾತಿ ಎಂಬ ಪಕ್ಷಿಯಿಂದ ಸೀತೆಯ ಇರುವಿಕೆ ತಿಳಿದದ್ದು
2) ಆಂಜನೇಯನು ಸುರಸೆಯನ್ನು ಜಯಿಸಿದ್ದು
3) ಆಂಜನೇಯ ಲಂಕೆಯಲ್ಲಿ ಸೀತೆಯನ್ನು ಹುಡುಕಿದ್ದು
4) ಆಂಜನೇಯನು ಸೀತೆಯನ್ನು ಕಂಡು ರಾಮ ಮುದ್ರಿಕೆಯನ್ನು ಕೊಟ್ಟಿದ್ದು
5) ಆಂಜನೇಯ ಅಶೋಕವನವನ್ನು ಧ್ವಂಸ ಮಾಡಿದ್ದು
6) ಆಂಜನೇಯನು ಕಿಂಕರರೆಂಬ ರಾಕ್ಷಸರನ್ನು ಕೊಂದದ್ದು
7) ಅಕ್ಷಯಕುಮಾರನ ಮರಣ
8) ಇಂದ್ರಜಿತನು ಆಂಜನೇಯನ್ನು ಬ್ರಹ್ಮಾಸ್ತ್ರದಿಂದ ಬಂಧಿಸಿದ್ದು
9) ಕಪಿಗಳು ಲಂಕೆಗೆ ಸೇತುವೆ ನಿರ್ಮಿಸಿದ್ದು
10) ರಾವಣ-ಸುಗ್ರೀವರ ಯುದ್ಧ
11) ಅಂಗದನ ರಾಯಭಾರ

## IV) ನಾಲ್ಕನೇ ಪಟ್ಟಿಕೆಯ ಚಿತ್ರಗಳು

# ದಕ್ಷಿಣ ಗೋಡೆಯ ಚಿತ್ರಗಳು

**I) ಒಂದನೆಯ ಪಟ್ಟಿಕೆಯ ಚಿತ್ರಗಳು**

**II) ಎರಡನೆಯ ಪಟ್ಟಿಕೆಯ ಚಿತ್ರಗಳು**

1) ರಾಮ-ಲಕ್ಷ್ಮಣರು ರಾವಣನನ್ನು ಸಂಹರಿಸುತ್ತಿರುವುದು
2) ಕೃಷ್ಣನು ರುಕ್ಮಿಣಿಯ ಸಂಗಡ ಕುಳಿತಿರುವುದು
3) ಕೃಷ್ಣನು ರುಕ್ಮಿಣಿಯನ್ನು ಅಪಹರಿಸಿಕೊಂಡು ಹೋಗುತ್ತಿರುವುದು
4) ರಾಣಿಯರೊಂದಿಗೆ ಸಿಂಹಾಸನದಲ್ಲಿ ಕುಳಿತ ರಾಜ
5) ಆಂಜನೇಯ ಗರುಡರ ಯುದ್ಧ ಚಿತ್ರ
6) ಕೃಷ್ಣನ ತುಲಾಭಾರ
7) ಜಾಂಬವತಿ ಕಲ್ಯಾಣ
8) ಕೃಷ್ಣನ ವಿನೋದಗಳು
9) ಯುದ್ಧದ ದೃಶ್ಯ
10) ಪಂಚನಾರೀ ತುರಗ
11) ನವನಾರೀ ಕುಂಜರದ ಆನೆ
12) ಪಂಚನಾರೀ ಪಲ್ಲಕ್ಕಿ

**III) ಮೂರನೆಯ ಪಟ್ಟಿಕೆಯ ಚಿತ್ರಗಳು**

1) ಶೇಷಶಯನ ವಿಷ್ಣು
2) ವಾಸುದೇವ-ದೇವಕಿಯರ ಬಂಧನ
3) ದೇವಕಿಯ ಮಕ್ಕಳನ್ನು ಕಂಸ ಕೊಲ್ಲುವುದು
4) ಕೃಷ್ಣನಿಗೆ ನಂದಗೋಪನು ಜಾತಕರ್ಮ ಮಾಡಿಸುವುದು
5) ಕೃಷ್ಣನು ರಾಕ್ಷಸರನ್ನು ಕೊಲ್ಲುತ್ತಿರುವ ದೃಶ್ಯ
6) ಕಾಳಿಂಗಮರ್ದನ ಕೃಷ್ಣ
7) ಗೋವರ್ಧನ ಗಿರಿಧಾರಿ
8) ಕೃಷ್ಣ-ಬಲರಾಮರ ಮಥುರಾ ಪ್ರವೇಶ
9) ಕೃಷ್ಣನಿಂದ ಕಂಸನ ವಧೆ

**IV) ನಾಲ್ಕನೇ ಪಟ್ಟಿಕೆಯ ಚಿತ್ರಗಳು**

1) ಪಂಚಮುಖದ ಆಂಜನೇಯ ಚಿತ್ರ

# II. ಒಳಭಾಗದ ಚಿತ್ರಗಳು

## 1) ಗೋಡೆಯ ಮೇಲಿನ ಚಿತ್ರಗಳು

### I) ಪಶ್ಚಿಮ ಗೋಡೆಯ ಚಿತ್ರಗಳು

1) ಏಕಮುಖಿದ ಶಿವನ ಚಿತ್ರ
2) ಪಂಚಮುಖಿದ ಶಿವನ ಚಿತ್ರ

### II) ದಕ್ಷಿಣ ಗೋಡೆಯ ಚಿತ್ರಗಳು

1) ಮೆರವಣಿಗೆಯ ದೃಶ್ಯ
2) ವಾಲ್ಮೀಕಿ ಮುನಿಯ ಚಿತ್ರ

### III) ಉತ್ತರ ಗೋಡೆಯ ಚಿತ್ರಗಳು

1) ಶೇಷಶಯನ ವಿಷ್ಣು
2) ಯೋಗಪಟ್ಟದಲ್ಲಿರುವ ಮುನಿ

## 2) ಮರದ ಫಲಕದ ಮೇಲಿನ ಚಿತ್ರಗಳು

### I) ಒಳಭಾಗದ ಚಿತ್ರಗಳು

1) ಸಮುದ್ರಮಂಥನ ದೃಶ್ಯ
2) ದಶಾವತಾರ ಚಿತ್ರಗಳು
3) ಪರಿವಾರ ದೇವತೆಗಳು
4) ಅಲಂಕಾರಿಕ ಗಿಡಗಳು
5) ಹೂ-ಬಳ್ಳಿಯ ಪಕ್ಷಿಗಳು

### II) ಹೊರಭಾಗದ ಚಿತ್ರಗಳು

1) ಲಿಂಗಪೂಜೆಯ ಚಿತ್ರ
2) ಪೇಶ್ವೆ ದೊರೆಯ ಬೇಟೆ ಮೆರವಣಿಗೆ
3) ಬ್ರಿಟೀಷ್ ಅಧಿಕಾರಿಗಳ ಬೇಟೆಯ ಚಿತ್ರ
4) ಮಂಗಗಳು
5) ಕಾವಲುಗಾರರು
6) ಆಕಳನ್ನು ಕೊಲ್ಲುತ್ತಿರುವ ಹುಲಿ
7) ಆನೆಯ ಮತ್ತು ನಂದಿಯ ಸಂಯೋಜನ ಚಿತ್ರ
8) ಹುಲಿ ಬೇಟೆಯ ಚಿತ್ರ

ಚಿತ್ರಗಳಿವೆ. ಅಲ್ಲದೇ ಮೇಲ್ಛಾವಣಿಗೆ ಹೊಂದಿಕೊಂಡಿರುವಂತೆ ಸುತ್ತಲೂ ಮಣ್ಣಿನ ಆಸರೆ ಗೋಡೆ ಕಟ್ಟಲಾಗಿದ್ದು ಅವರ ಮೇಲೆಯೂ ಚಿತ್ರಗಳನ್ನು ರಚನೆ ಮಾಡಲಾಗಿದೆ. ಮುಖ್ಯವಾಗಿ ರಾಮಾಯಣ ಕಥೆಗೆ ಸಂಬಂಧಿಸಿದ ಚಿತ್ರಗಳಿದ್ದರೂ ಅಲ್ಲಲ್ಲಿ ಇತರ ವಿಷಯಗಳ ಚಿತ್ರಗಳೂ ರಚನೆಯಾಗಿವೆ.

ಈ ಅಪರೂಪದ ದೇವಾಲಯದ ವರ್ಣಚಿತ್ರಗಳ ಬಗ್ಗೆ ಮೊದಲು ಶೋಧಿಸಿ ಅಧ್ಯಯನ ಮಾಡಿದವರು ಡಾ. ಎಸ್. ಸಿ. ಪಾಟೀಲರು* 'ಅವರು ಇಲ್ಲಿಯ ಭಿತ್ತಿ ಚಿತ್ರಗಳ ಕಾಲಮಾನದ ಬಗ್ಗೆ ನರಗುಂದ, ಅಮ್ಮಿನಭಾವಿ, ನಿಪ್ಪಾಣಿ. ಗುಳೇದಗುಡ್ಡದ ಭಿತ್ತಿಚಿತ್ರಗಳನ್ನು ತೌಲನಿಕವಾಗಿ ವಿಶ್ಲೇಷಿಸಿ ಹದಿನೆಂಟನೆಯ ಶತಮಾನಕ್ಕೆ ಸೇರಿದ ಜನಪದ ಮತ್ತು ಶಿಷ್ಟಪದ ಶೈಲಿಗಳ ಅಪೂರ್ವ ಸಂಗಮದ ಭಿತ್ತಿ ಚಿತ್ರಗಳು ಇಲ್ಲಿವೆ' ಎಂಬ ಅಭಿಪ್ರಾಯ ಹೆಚ್ಚು ಸೂಕ್ತವಾದುದಾಗಿದೆ.

ಈ ದೇವಾಲಯದ ಚಿತ್ರಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆ ವಿಂಗಡಿಸಿಕೊಂಡು ವಿವರಿಸಬಹುದು.

I. ಹೊರಭಾಗದ ಚಿತ್ರಗಳು

II. ಒಳಭಾಗದ ಚಿತ್ರಗಳು

III. ಆಸರೆ ಗೋಡೆಯ ಚಿತ್ರಗಳು

**I. ಹೊರಭಾಗದ ಚಿತ್ರಗಳು :** ದೇವಾಲಯದ ಸುತ್ತಲೂ ಇರುವ ಗೋಡೆಯ ಹೊರಮೈಯಲ್ಲಿ ರಚನೆಯಾಗಿರುವ ಚಿತ್ರಗಳನ್ನು ಇಲ್ಲಿ ಹೊರಭಾಗದ ಚಿತ್ರಗಳೆಂದು ಪರಿಗಣಿಸಲಾಗಿದೆ. ಸುತ್ತಲೂ ಇರುವ ಗೋಡೆಯಲ್ಲಿ ಒಂದೇ ಅಳತೆಯ ಒಂದೇ ತೆರನಾದ ಪಟ್ಟಿಕೆಗಳನ್ನು ರೂಪಿಸಿಕೊಂಡು ಚಿತ್ರ ಬರೆಯಲಾಗಿದೆ. ಪ್ರತಿಯೊಂದು ಗೋಡೆಯಲ್ಲಿಯೂ ನಾಲ್ಕು ದೊಡ್ಡ ಪಟ್ಟಿಕೆಗಳನ್ನು ಮಾಡಿಕೊಂಡು ಅದರೊಳಗೆ ಮತ್ತೆ ಚಿಕ್ಕ ಚಿಕ್ಕ ಆಯತಾಕಾರದ ಚೌಕಗಳನ್ನು ರೂಪಿಸಿಕೊಂಡು ಚಿತ್ರ ರಚಿಸಿದ್ದಾರೆ. ಪ್ರತಿಯೊಂದು ಗೋಡೆಯಲ್ಲಿರುವ ನಾಲ್ಕು ದೊಡ್ಡ ಪಟ್ಟಿಕೆಗಳಲ್ಲಿ ಅವುಗಳ ಮಧ್ಯದಲ್ಲಿರುವ ಎರಡು ದೊಡ್ಡ ಪಟ್ಟಿಕೆಗಳು ೭'×೫' ಪೂಟುಗಳ ಅಳತೆಯಲ್ಲಿದ್ದರೆ ಅಕ್ಕಪಕ್ಕಗಳಲ್ಲಿರುವ ಇದಕ್ಕಿಂತ ಚಿಕ್ಕದಾದ ಪಟ್ಟಿಕೆಗಳು ೫'×೨ ೧/೨' ಅಳತೆಯನ್ನು ಹೊಂದಿವೆ.ಈ ಚಿತ್ರ ಪಟ್ಟಿಕೆಗಳನ್ನು ಮೇಲಿನ ಭಾಗ ಕೆಳಗಿನ ಭಾಗವೆಂದು ವಿಭಾಗಿಸಿ ರಚಿಸಿದ್ದು ಮಧ್ಯದಲ್ಲಿ ೬' ಇಂಚುಗಳ ಅಗಲಳತೆ ಹೊಂದಿದ ಉದ್ದ ಪಟ್ಟಿಕೆಯನ್ನು ರೂಪಿಸಿ ಅದರಲ್ಲಿ ನೀರು, ನೀರಿನಲ್ಲಿರುವ ಮೀನು ಏಡಿ, ಹಾವು, ಆಮೆ, ಕಪ್ಪೆ. ತಿಮಿಂಗಿಲಗಳಂತಹ ಜಲಚರಗಳನ್ನು ಚಿತ್ರಿಸಿದ್ದಾರೆ. ಈ ಉದ್ದನಾದ ಪಟ್ಟಿಯು ಪ್ರತಿಯೊಂದು ದಿಕ್ಕಿನ ಗೋಡೆಯಲ್ಲಿಯೂ ಒಂದೇ ರೀತಿಯಲ್ಲಿ ಕಂಡು ಬರುತ್ತದೆ. ೭'×೫' ಪೂಟು ಅಳತೆಯ ಪಟ್ಟಿಕೆಗಳಲ್ಲಿ ರೂಪಿಸಿಕೊಂಡ ಚಿಕ್ಕ ಚೌಕಗಳು ೧'×೧.೫'ಗಳಿಂದ ೧ ಪೂಟು ಅಗಲ ೩.೫ ಇಂಚು ಎತ್ತರದ ಅಳತೆಯಲ್ಲಿವೆ. ಈ ರೀತಿಯಲ್ಲಿ ಸ್ಥಳ ವಿಭಜಿಸಿಕೊಂಡು ರಚಿಸಲ್ಪಟ್ಟ ಹೊರ ಭಾಗದ ಚಿತ್ರಗಳನ್ನು ಈ ಕೆಳಗಿನಂತೆ ವಿಭಾಗಿಸಿ ವಿವರಿಸಬಹುದು.

---

* ಡಾ. ಎಸ್. ಸಿ. ಪಾಟೀಲ ಅವರು ಈ ದೇವಾಲಯದ ಅಪ್ರಕಟಿತ ವಿಷಯವನ್ನು ನನ್ನ ಅಧ್ಯಯನಕ್ಕೆ ಬಳಸಿಕೊಳ್ಳಲು ಅವಕಾಶ ಒದಗಿಸಿಕೊಟ್ಟದ್ದಕ್ಕೆ ಕೃತಜ್ಞತೆಗಳು

೧. ಉತ್ತರ ಗೋಡೆಯ ಚಿತ್ರಗಳು

೨. ಪಶ್ಚಿಮ ಗೋಡೆಯ ಚಿತ್ರಗಳು

೩. ದಕ್ಷಿಣ ಗೋಡೆಯ ಚಿತ್ರಗಳು

೪. ಪೂರ್ವ ಗೋಡೆಯ ಚಿತ್ರಗಳು

***೧. ಉತ್ತರ ಗೋಡೆಯ ಚಿತ್ರಗಳು :*** ಉತ್ತರ ಗೋಡೆಯಲ್ಲಿ ನಾಲ್ಕು ಪಟ್ಟಿಕೆಗಳಲ್ಲಿ ಚಿತ್ರಗಳಿದ್ದು ಅವುಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು.

I. ಒಂದನೇ ಪಟ್ಟಿಕೆಯ ಚಿತ್ರಗಳು

II. ಎರಡನೇ ಪಟ್ಟಿಕೆಯ ಚಿತ್ರಗಳು

III. ಮೂರನೇ ಪಟ್ಟಿಕೆಯ ಚಿತ್ರಗಳು

IV. ನಾಲ್ಕನೇ ಪಟ್ಟಿಕೆಯ ಚಿತ್ರಗಳು

*I. ಒಂದನೇ ಪಟ್ಟಿಕೆಯ ಚಿತ್ರಗಳು :* ಈ ಪಟ್ಟಿಕೆಯು ೫' × ೨.೫' ಫೂಟುಗಳ ಅಳತೆಯಲ್ಲಿದ್ದು ಇದರಲ್ಲಿ ಮಹಿಷಾಸುರಮರ್ದಿನಿ, ಪಂಚಮುಖದ ಆಂಜನೇಯ, ಕೃಷ್ಣನ ವಿಶ್ವರೂಪ ದರ್ಶನ ಚಿತ್ರಗಳು ರಚನೆಯಾಗಿವೆ. ಅವುಗಳನ್ನು ಒಂದೊಂದಾಗಿ ಇಲ್ಲಿ ವಿವೇಚಿಸಬಹುದಾಗಿದೆ.

೧. ಮಹಿಷಾಸುರಮರ್ದಿನಿ : ಈ ಚಿತ್ರದಲ್ಲಿ ದೇವಿಯು ಮಹಿಷಾಸುರನನ್ನು ಸಂಹರಿಸುತ್ತಿರುವಂತೆ ಚಿತ್ರಿಸಿದೆ. ಮಹಿಷರೂಪಿಯಾದ ದಾನವನನ್ನು ಕಾಲಲ್ಲಿ ಮೆಟ್ಟಿ ನಿಂತ ದೇವಿಯು ಒಂದು ಕೈಯಿಂದ ಆತನ ಜುಟ್ಟು ಹಿಡಿದು, ಈಟಿಯಿಂದ ತಿವಿದು ಕೊಲ್ಲುತ್ತಿದ್ದಾಳೆ. ರಾಕ್ಷಸನ ಮಹಿಷಮುಖವು ತುಂಡಾಗಿ ದೂರ ಬಿದ್ದಿದ್ದು, ಅದರಿಂದ ರಕ್ತ ತೊಟ್ಟಿಕ್ಕುತ್ತಿದೆ. ಹತ್ತು ಕೈಗಳನ್ನು ಹೊಂದಿದ ದೇವಿಯ ಕೈಗಳಲ್ಲಿ ಶಂಖ, ಚಕ್ರ, ತ್ರಿಶೂಲ, ಖಡ್ಗ, ಈಟಿ ಹೀಗೆ ವಿವಿಧ ಆಯುಧಗಳಿವೆ. ಕಿರೀಟವು ಭುಜದವರೆಗೂ ವ್ಯಾಪಿಸಿದೆ. ಬಿಳಿ ಬಣ್ಣದ ಹಸಿರು ಚುಕ್ಕೆಗಳ ಹಳದಿ ಧಡಿಯನ್ನು ಹೊಂದಿದ ಸೀರೆ ಉಟ್ಟಕೊಂಡ ದೇವಿ ಹಸಿರು ಕುಪ್ಪಸ ಧರಿಸಿದ್ದಾಳೆ. ಆದರೆ ಕುಪ್ಪಸದ ಹಸಿರು ವರ್ಣ ಕಿತ್ತು ಹೋಗಿದೆ. ದೇವಿಯ ಮೂಗಿನಲ್ಲಿರುವ ನತ್ತು ಮುಖದ ಸೌಂದರ್ಯವನ್ನು ಹೆಚ್ಚಿಸಿದ್ದರೂ ಆಕೆಗೆ ರಚಿಸಿರುವ ಕೋರೆ ಹಲ್ಲುಗಳು ಭೀಕರ ರೂಪವನ್ನು ಪ್ರತಿನಿಧಿಸುತ್ತವೆ. ದೇವಿಯ ಬಲಗಡೆಗೆ ಮಹಿಳೆಯೊಬ್ಬಳು ಚಾಮರ ಬೀಸುತ್ತಿದ್ದರೆ, ಎಡಭಾಗದಲ್ಲಿ ಪುರುಷನೊಬ್ಬ ಧೂಪಾರತಿ ಬೆಳಗುತ್ತಿದ್ದಾನೆ. ಚಿತ್ರದ ಹಿನ್ನಲೆ ವರ್ಣ ಕೆಂಪಾಗಿದ್ದು, ರೇಖೆಗಳು ಶಕ್ತಿಯುತವಾಗಿವೆ. ಕಮಾನಿನಾಕಾರದಲ್ಲಿರುವ ಈ ಚಿತ್ರ ಉತ್ತಮ ಸಂಯೋಜನೆಯಿಂದ ಕೂಡಿದೆ.

೨. ಪಂಚಮುಖದ ಆಂಜನೇಯ : ಈ ಚಿತ್ರದಲ್ಲಿ ಆಂಜನೇಯನಿಗೆ ಪಂಚಮುಖಗಳನ್ನು ಚಿತ್ರಿಸಿದೆ. ಎದುರಿನ ಮುಖ ನರಸಿಂಹನದಾಗಿದ್ದರೆ ಬಲಬದಿಗೆ ಗರುಡ, ಎಡಬದಿಗೆ ಆಂಜನೆಯನ ಮುಖ ಚಿತ್ರಿಸಿದೆ. ತಲೆಯ ಮೇಲೆ ಬಿಳಿ ಹಾಗೂ ಕೆಂಪು ಬಣ್ಣದ ಎರಡು ಕುದುರೆಯ ಮುಖಗಳಿವೆ. ಹತ್ತು ಕೈಗಳನ್ನು ಹೊಂದಿದ ಆಂಜನೇಯನು ಬಿಲ್ಲು, ಬಾಣ, ಗಧೆ, ಚಕ್ರ ತ್ರಿಶೂಲ, ಖಡ್ಗ, ಢಾಲು ಹೀಗೆ ವಿವಿಧ ಆಯುಧಗಳನ್ನು ಧರಿಸಿದ್ ದಾನೆ. ಬಾಲವು ತಲೆಯ ಮೇಲಿನಿಂದ ಬಾಗಿಕೊಂಡು ಎಡ ಭಾಗದಲ್ಲಿ ಸುರುಳಿಯಾಗಿ ಚಾಚಿಕೊಂಡಿದೆ.

ನರಸಿಂಹ. ಆಂಜನೆಯ. ಗರುಡ ಈ ಎಲ್ಲ ಶಕ್ತಿಗಳು ಶ್ರೀ ಹರಿಯ ಲೀಲಾ ವಿನೋದಗಳು ಎನ್ನುವ ಸಾಂಕೇತಿಕ ಚಿತ್ರಣ ಇದರಲ್ಲಿ ವ್ಯಕ್ತಗೊಂಡಿದೆ. ಬಲಬದಿಗೆ ಒಬ್ಬ ಮಹಿಳೆ ಆರತಿ ಬೆಳಗುತ್ತಿದ್ದು ಎಡಗಡೆಗೆ ಪುರುಷನೊಬ್ಬ ಧೂಪಾರತಿ ಬೆಳಗುತ್ತಿದ್ದಾನೆ. ಚಿತ್ರದ ಹಿನ್ನೆಲೆ ಕೆಂಪುವರ್ಣದಿಂದ ಕೂಡಿದೆ.

೩. ಕೃಷ್ಣನ ವಿಶ್ವರೂಪ ದರ್ಶನ : ಈ ಚಿತ್ರದಲ್ಲಿ ಕೃಷ್ಣನು ನವಿಲನ್ನು ಹೋಲುವ ವಿಚಿತ್ರ ಪಕ್ಷಿಯ ಮೇಲೆ ಕುಳಿತಿದ್ದಾನೆ. ಈ ವಿಚಿತ್ರ ಪಕ್ಷಿಯ ದೇಹವು ಹಲವು ಮಾನವಾಕೃತಿಯ ಸಂಯೋಜನೆಯಿಂದ ರಚಿಸಲ್ಪಟ್ಟಿದೆ. ನವಿಲಿನ ದೇಹಕ್ಕೆ ಹೊಂದುವಂತೆ ವಿವಿಧ ವಿನ್ಯಾಸದಲ್ಲಿ ಸ್ತ್ರೀಯರ ಆಕೃತಿಗಳನ್ನು ಒಟ್ಟುಗೂಡಿಸಿ ಪಕ್ಷಿಯ ದೇಹವನ್ನು ರೂಪಿಸಲಾಗಿದೆ. ಅದರ ಮೇಲೆ ನಾಲ್ಕು ಕೈಗಳನ್ನು ಹೊಂದಿದ ಕೃಷ್ಣನು ಕುಳಿತುಕೊಂಡಿದ್ದಾನೆ. ಕೃಷ್ಣನ ಎದುರು ಭಾಗದಲ್ಲಿ ಚಿಕ್ಕದಾದ ಮಾನವಾಕೃತಿಯೊಂದು ರಚಿಸಿದ್ದು ಅದು ಸಂಪೂರ್ಣ ನಾಶವಾಗಿದೆ. ಎದುರಿಗೆ ಚಿತ್ರಿಸಿದ ಚಿಕ್ಕ ವ್ಯಕ್ತಿ ಚಿತ್ರವು ಅರ್ಜುನನದಾಗಿದ್ದು. ಈ ಚಿತ್ರವು ಕೃಷ್ಣನು ಅರ್ಜುನನಿಗೆ ವಿಶ್ವರೂಪದರ್ಶನ ಮಾಡಿಸುವ ಸಾಂಕೇತಿಕ ಅರ್ಥದಲ್ಲಿ ರೂಪಿತವಾಗಿದೆ. ಇದೇ ರೀತಿಯ ಚಿತ್ರ ಅಮ್ಮಿನಭಾವಿಯ ಹಿರೇಮಠದಲ್ಲಿಯೂ ರಚನೆಯಾಗಿದೆ. ಅಲ್ಲಿ ಪಕ್ಷಿರೂಪದ ಮೃಗವೊಂದರ ಮೇಲೆ ಕೃಷ್ಣನು ನಿಂತಿದ್ದಾನೆ. ಎದುರಿಗೆ ಅರ್ಜುನನು ನೆಲದ ಮೇಲಿದ್ದಾನೆ. ಇಲ್ಲಿಯೂ ಅರ್ಜುನನು ನೆಲದ ಮೇಲೆ ಚಿತ್ರಿಸಿದ್ದು ಕೃಷ್ಣನು ವಿಚಿತ್ರ ಪಕ್ಷಿಯ ಮೇಲೆ ಇದ್ದಾನೆ. ಈ ಚಿತ್ರದ ಹೆಚ್ಚಿನ ಭಾಗವು ನಾಶವಾಗಿದೆ.

***II. ಎರಡನೆಯ ಪಟ್ಟಿಕೆಯ ಚಿತ್ರಗಳು :*** ಎರಡನೆಯ ಈ ಪಟ್ಟಿಕೆಯು ೭'×೫' ಪೂಟುಗಳ ಅಳತೆಯಲ್ಲಿದ್ದು ಅದರಲ್ಲಿ ಮತ್ತೆ ೧'×೧.೫' ಪೂಟುಗಳ ಚಿಕ್ಕ ಚಾಕಗಳನ್ನು ಮಾಡಿಕೊಂಡು ಚಿತ್ರ ರಚನೆ ಮಾಡಲಾಗಿದೆ. ಈ ಪಟ್ಟಿಕೆಯನ್ನು ಮಧ್ಯಭಾಗದಲ್ಲಿ ೭' ಇಂಚಿನ ಉದ್ದ ಪಟ್ಟಿಕೆಯಿಂದ ವಿಭಾಗಿಸಿದ್ದು ಮೇಲಿನ ಭಾಗದಲ್ಲಿ ೨೨ ಚಿತ್ರಗಳು. ಕೆಳಗಿನ ಭಾಗದಲ್ಲಿ ೨೨ ಚಿತ್ರಗಳಿವೆ. ಎಲ್ಲ ಚಿತ್ರಗಳೂ ಸ್ಪಷ್ಟವಾಗಿ ಕಂಡು ಬರದೇ ಕೆಲವು ಚಿತ್ರಗಳು ಹಾಳಾಗಿವೆ. ಇಡೀ ದೇವಾಲಯದ ಸುತ್ತಲೂ ರಾಮಾಯಣ ಕಥೆಯನ್ನು ಧಾರಾವಾಹಿಯ ಹಾಗೆ ರಚನೆ ಮಾಡಲಾಗಿದ್ದು. ಕಥಾಸಾರಾಂಶದ ಮೊದಲ ದೃಶ್ಯಗಳು ಇದೇ ಪಟ್ಟಿಕೆಯಿಂದ ಪ್ರಾರಂಭವಾಗಿವೆ. ಶ್ರವಣಕುಮಾರನ ಕಥೆಯಿಂದ ರಾಮಾಯಣ ಕಥಾ ಸಂದರ್ಭವನ್ನು ಪ್ರಾರಂಭಿಸಲಾಗಿದೆ.

೧. ಶ್ರವಣಕುಮಾರನ ಚಿತ್ರ : ಮೊದಲನೆಯ ಅಂಕಣದಲ್ಲಿ ಶ್ರವಣಕುಮಾರನು ತನ್ನ ಕುರುಡು ವೃದ್ಧ ತಂದೆತಾಯಿಗಳನ್ನು ತಕ್ಕಡಿಯಲ್ಲಿ ಹೊತ್ತುಕೊಂಡು ತೀರ್ಥಯಾತ್ರೆಗೆ ಹೊರಟಿರುವ ದೃಶ್ಯವಿದೆ. ತೀರ್ಥಯಾತ್ರೆಯ ಸಂದರ್ಭದಲ್ಲಿ ತಂದೆತಾಯಿಗಳಿಗೆ ಬಾಯಾರಿಕೆಯಾಗಲು ಅವರಿಗಾಗಿ ನೀರು ತರಲು ಹೋಗುತ್ತಾನೆ. ನೀರು ತರಲು ಹೋಗುವಾಗ ತಂದೆತಾಯಿಗಳು ಕುಳಿತ ತಕ್ಕಡಿಯನ್ನು ಗಿಡದ ಮೇಲೆ ಸಿಕ್ಕಿಸಿ ಹೋಗುತ್ತಾನೆ. ದೂರದಲ್ಲಿಯ ಒಂದು ಕೊಳದಲ್ಲಿ ಬಿಂದಿಗೆಯಿಂದ ಶ್ರವಣಕುಮಾರನು ನೀರು ತುಂಬುವಾಗ ಅಲ್ಲಿಗೆ ಬೇಟೆಗೆ ಬಂದಿದ್ದ ದಶರಥನು ನೀರು ತುಂಬುವ ಶಬ್ದವನ್ನು ಆಲಿಸಿ ಯಾವುದೋ ಮೃಗ ನೀರು ಕುಡಿಯುತ್ತಿದೆ ಎಂದು ಭಾವಿಸಿ ಗಿಡದ ಮರೆಯಿಂದ ಬಾಣ ಬಿಡುತ್ತಾನೆ. ಬಾಣ ತಾಗಿ ಶ್ರವಣಕುಮಾರನು ಅಸು ನೀಗುತ್ತಾನೆ. ಆತ ಸಾಯುವಾಗ ದಶರಥನಿಗೆ ನೀನು ಕೊನೆಗಾಲದಲ್ಲಿ ಮಕ್ಕಳಿಂದ ದೂರವಾಗಿ ಮರಣ ಹೊಂದು ಎಂದು ಶಾಪ ಕೊಡುತ್ತಾನೆ. ಚಿತ್ರದಲ್ಲಿ ವೃದ್ಧ ತಂದೆ ತಾಯಿಗಳು ತೀರ್ಥಯಾತ್ರೆಗೆ ಹೋಗಲು ಬಯಸುವುದು. ಶ್ರವಣನು ತಕ್ಕಡಿಯಂತಹ

ಸಾಧನದಲ್ಲಿ ಅವರನ್ನು ಕುಳ್ಳಿರಿಸಿಕೊಂಡು ಹೋಗುವುದು. ನೀರು ತರಲು ಹೋಗುವಾಗ ತಕ್ಕಡಿಯನ್ನು ಗಿಡದ ಮೇಲೆ ಸಿಕ್ಕಿಸುವುದು, ಕೊಳದಲ್ಲಿ ಬಿಂದಿಗೆಯಿಂದ ನೀರು ತುಂಬುವುದು ಗಿಡದ ಮರೆಯಲ್ಲಿ ನಿಂತ ದಶರಥನು ಶ್ರವಣನಿಗೆ ಬಾಣ ಬಿಡುವುದು ತುಂಬ ಕಲಾತ್ಮಕವಾಗಿ ರಚನೆಯಾಗಿದೆ.

೨. ವಸಿಷ್ಠ ಮುನಿಗಳ ಚಿತ್ರ : ಮತ್ತೊಂದು ಅಂಕಣದಲ್ಲಿ ರಾಜಧಾನಿಗೆ ಬರುತ್ತಲಿರುವ ವಸಿಷ್ಠ ಮುನಿಗಳನ್ನು ಸಕಲ ರಾಜ ಮರ್ಯಾದೆಯಿಂದ ವಾದ್ಯಸಮೇತ ಕರೆತರಲಾಗುತ್ತಿದೆ. ಮಕ್ಕಳಿಲ್ಲದ ದಶರಥ ಮಹಾರಾಜನಿಗೆ ವಸಿಷ್ಠ ಮುನಿಗಳು ಪುತ್ರಕಾಮೇಷ್ಟಿಯಾಗ ಮಾಡಲು ಸಲಹೆ ಮಾಡುತ್ತಾರೆ. ಚಿತ್ರದಲ್ಲಿ ವಾದ್ಯಗಾರರು ಸ್ತ್ರೀ-ಪುರುಷರು ವಸಿಷ್ಠ ಮುನಿಗಳನ್ನು ಕರೆದು ತರುತ್ತಿದ್ದಾರೆ.

೩. ಯಾಗದ ಚಿತ್ರ : ಕೆಳಗಿನ ಮತ್ತೊಂದು ಕಾನೆಯಲ್ಲಿ ದಶರಥ ಮಹಾರಾಜನು ಪುತ್ರಕಾಮೇಷ್ಟಿಯಾಗವನ್ನು ಮಾಡುತ್ತಿರುವ ಚಿತ್ರವಿದೆ. ಋಷಿಮುನಿಗಳು ಯಜ್ಞಕುಂಡದ ಸುತ್ತಲೂ ಕುಳಿತು ಯಾಗದಲ್ಲಿ ನಿರತರಾಗಿದ್ದು, ದಶರಥ ಮತ್ತು ಆತನ ಮೂವರು ಪತ್ನಿಯರು ಕೈಮುಗಿದು ನಿಂತಿದ್ದಾರೆ. ಯಜ್ಞದಿಂದ ದೊರೆತ ಫಲವನ್ನು ಮುನಿಯು ದಶರಥನಿಗೆ ಕೊಡುತ್ತಿರುವಂತೆ ಚಿತ್ರಿಸಿದೆ. ÷ಲ್ಲಿಯೇ ದಶರಥನ ಮೂವರು ಹೆಂಡತಿಯರೂ ನಿಂತಿದ್ದಾರೆ.

೪. ಶೇಷಶಯನ ವಿಷ್ಣು : ಇದರ ಕೆಳಗಿರುವ ಚಿತ್ರದಲ್ಲಿ ಶೇಷಶಯನ ವಿಷ್ಣುವು ಚಿತ್ರಿತನಾಗಿದ್ದು ಆತನ ಪಕ್ಕದಲ್ಲಿ ಶ್ರೀದೇವಿ-ಭೂದೇವಿಯರು ಸೇವೆ ಮಾಡುತ್ತಿದ್ದಾರೆ. ಎದುರಿಗೆ ದೇವತೆಗಳು, ಋಷಿಮುನಿಗಳು ನಿಂತು ರಾಕ್ಷಸರಿಂದ ಯಜ್ಞಯಾಗಾದಿಗಳು, ದೇವತಾ ಕಾರ್ಯಗಳು ನಡೆಯದೇ ತೊಂದರೆಯಾಗಿದೆ ಎಂದು ಬಿನ್ನವಿಸುತ್ತಿದ್ದಾರೆ. ನಾರಾಯಣನು ಅವರ ಕೋರಿಕೆ ಮನ್ನಿಸಿ ರಾಮಾವತಾರದಿಂದ ಹುಟ್ಟಿ ರಾಕ್ಷಸ ಹಾವಳಿ ಕಡಿಮೆ ಮಾಡುವುದಾಗಿ ಅಭಯ ಕೊಡುತ್ತಿದ್ದಾನೆ. ಆದಿಶೇಷ ಸರ್ಪವು ಐದು ಹೆಡೆಗಳನ್ನು ಹೊಂದಿದ್ದು ಬಿಳಿ ಮಿಶ್ರಿತ ಹಳದಿ ವರ್ಣದಲ್ಲಿದೆ. ನಾರಾಯಣನ ಎದುರಿಗೆ ನಿಂತ ವ್ಯಕ್ತಿಗಳು ಉದ್ದ ತೋಲಿನ ಅಂಗಿ, ಪಂಚೆಯುಟ್ಟುಕೊಂಡಿದ್ದಾರಲ್ಲದೇ ಕೆಲವರು ನಡುವಿಗೆ ಶಲ್ಯ ಕಟ್ಟಿಕೊಂಡಿದ್ದಾರೆ.

೫. ರಾಮಲಕ್ಷ್ಮಣರ ಜನನ : ಕೌಶಲ್ಯದೇವಿಯಿಂದ ಶ್ರೀರಾಮನೂ, ಸುಮಿತ್ರಾದೇವಿಯ ಹೊಟ್ಟೆಯಿಂದ ಲಕ್ಷ್ಮಣ-ಶತ್ರುಘ್ನರೂ, ಕೈಕೇಯಿಯ ಮಡಿಲಲ್ಲಿ ಭರತನೂ ಜನ್ಮ ತಾಳುತ್ತಾರೆ. ಇಲ್ಲಿನ ಚಿತ್ರದಲ್ಲಿ ಕೌಸಲ್ಯದೇವಿಯು ರಾಮನನ್ನು ಸುಮಿತ್ರಾದೇವಿಯು ಲಕ್ಷ್ಮಣ-ಶತ್ರುಘ್ನರನ್ನು ತೊಡೆಯ ಮೇಲೆ ಮಲಗಿಸಿಕೊಂಡಿದ್ದಾರೆ. ಋಷಿಮುನಿಗಳು ಬಂದು ಆಶೀರ್ವಾದ ಮಾಡುತ್ತಿದ್ದಾರೆ.

೬. ವಿಶ್ವಾಮಿತ್ರ ಮುನಿಯು ರಾಮ-ಲಕ್ಷ್ಮಣರನ್ನು ಅರಣ್ಯಕ್ಕೆ ಕರೆದೊಯ್ಯುತ್ತಿರುವುದು : ಆಶ್ರಮದಲ್ಲಿ ತಾವು ಮಾಡುತ್ತಿರುವ ಯಜ್ಞಕ್ಕೆ ರಾಕ್ಷಸರಿಂದ ತೊಂದರೆಯಾಗುವುದನ್ನು ತಿಳಿಸಿ ರಾಮ-ಲಕ್ಷ್ಮಣರನ್ನು ರಾಕ್ಷಸರ ಸಂಹಾರ ಮಾಡಲು ಕರೆದೊಯ್ಯುತ್ತಿರುವ ಚಿತ್ರವಿದಾಗಿದೆ. ರಾಮ-ಲಕ್ಷ್ಮಣರನ್ನು ಕಳಿಸಲು ದಶರಥರಾಜ ಆತನ ಮಡದಿ ಹಿಂಜರಿದಾಗ ಮುನಿಯು ಅವರಿಗೆ ತಿಳಿಹೇಳಿ ಒಪ್ಪಿಸುತ್ತಿದ್ದಾನೆ. ಮುಂದಿನ ಅಂಕಣದಲ್ಲಿ ರಾಮ-ಲಕ್ಷ್ಮಣರನ್ನು ಕರೆದುಕೊಂಡು ಹೊರಟಿರುವ ಚಿತ್ರವಿದೆ.

೭. ತಾಟಕಿಯ ಸಂಹಾರ : ವಿಶ್ವಾಮಿತ್ರರ ಸಂಗಡ ಹೊರಟ ರಾಮ-ಲಕ್ಷ್ಮಣರು ದಾರಿಯಲ್ಲಿ ಮುನಿಯಿಂದ ಉಪದೇಶ ಪಡೆಯುತ್ತ ಸಾಗುತ್ತಿದ್ದಾಗ ಒಮ್ಮೆಲೇ ಎದುರಾದ ತಾಟಕಿ ಎಂಬ ಭಯಂಕರ ರಾಕ್ಷಸಿಯು ಇವರನ್ನು ಅಡ್ಡಗಟ್ಟಲು ಮುನಿಯು ರಾಕ್ಷಸಿಯನ್ನು ಸಂಹರಿಸಲು ರಾಮನಿಗೆ ಆಜ್ಞಾಪಿಸುತ್ತಾನೆ. ಇಲ್ಲಿನ ಚಿತ್ರದಲ್ಲಿ ರಾಮನು ಬಾಣ ಬಿಟ್ಟು ರಾಕ್ಷಸಿಯನ್ನು ಕೊಲ್ಲುತ್ತಿದ್ದಾನೆ. ರಾಮನು ತಲೆಯ ಮೇಲೆ ಕಿರೀಟ ಧರಿಸಿದ್ದು, ಉದ್ದ ತೋಳಿನ ಕೆಂಪು ಬಣ್ಣದ ಕಪ್ಪು ಗೀರಿನ ಅಂಗಿ ತೊಟ್ಟು ಬಿಳಿ ಪಂಚೆ ಉಟ್ಟುಕೊಂಡಿದ್ದಾನೆ. ಹಸಿರು ಮೈಬಣ್ಣದಲ್ಲಿ ಚಿತ್ರಿಸಿರುವ ರಾಮನು ರಾಕ್ಷಸಿಗೆ ಅತ್ಯಂತ ಹತ್ತಿರವಾಗಿ ಚಿತ್ರಿಸಲ್ಪಟ್ಟಿದ್ದಾನೆ. ತಾಟಕಿಯು ಹಳದಿ ಬಣ್ಣದ ಸೀರೆ ಉಟ್ಟು ಕೆಂಪು ಬಣ್ಣದ ಕುಪ್ಪಸ ಧರಿಸಿದ್ದಾಳೆ. ರಾಮನ ಬಾಣದ ಪ್ರಹಾರದಿಂದ ಕಿರುಚುತ್ತ ಒಂದಕ್ಕ ಬೀಳುತ್ತಿದ್ದಾಳೆ.

೮. ಸುಬಾಹು ಮಾರೀಚರ ವಧೆ : ಆಶ್ರಮಕ್ಕೆ ರಾಮ-ಲಕ್ಷ್ಮಣರನ್ನು ಕರೆದುಕೊಂಡು ಬಂದ ವಿಶ್ವಾಮಿತ್ರ ಮುನಿಗಳು ಯಾಗ ಪ್ರಾರಂಭಿಸುತ್ತಾರೆ. ಅದನ್ನು ಕೆಡಿಸಲು ಬಂದ ಸುಬಾಹು ಮಾರೀಚರೆಂಬ ರಾಕ್ಷಸರನ್ನು ರಾಮ-ಲಕ್ಷ್ಮಣರು ಹಿಂದಕ್ಕೆ ಅಟ್ಟುವರು. ರಾಮ-ಲಕ್ಷ್ಮಣರ ಬಾಣದ ಪ್ರಹಾರಕ್ಕೆ ಸುಬಾಹು ಸಮುದ್ರದಲ್ಲಿ ಬಿದ್ದರೆ. ಮಾರೀಚನು ಲಂಕೆಗೆ ಎಸೆಯಲ್ಪಟ್ಟನು. ಇಲ್ಲಿ ಮಂಟಪದಂತಹ ಸ್ಥಳದಲ್ಲಿ ಮುನಿಗಳು ಯಜ್ಞ ಮಾಡುತ್ತಿದ್ದು. ರಾಮ-ಲಕ್ಷ್ಮಣರು ರಾಕ್ಷಸರನ್ನು ಹೊಡೆದಟ್ಟುತ್ತಿರುವ ದೃಶ್ಯ ಚಿತ್ರಿಸಲ್ಪಟ್ಟಿದೆ.

೯. ಅಹಲ್ಯಾ ಶಾಪವಿಮೋಚನೆ : ಮಿಥಿಲಾ ನಗರದಲ್ಲಿ ಜನಕ ಮಹಾರಾಜನು ಸೀತಾದೇವಿಯ ಸ್ವಯಂವರ ಏರ್ಪಡಿಸಿದ ಸುದ್ದಿ ತಿಳಿದ ವಿಶ್ವಾಮಿತ್ರ ಮುನಿಗಳು ರಾಮ-ಲಕ್ಷ್ಮಣರನ್ನು ಅಲ್ಲಿಗೆ ಕರೆದುಕೊಂಡು ಹೊರಟಾಗ ದಾರಿಯಲ್ಲಿ ಶಾಪದಿಂದ ಕಲ್ಲಾಗಿ ಬಿದ್ದುಕೊಂಡಿದ್ದ ಗೌತಮ ಋಷಿಯ ಪತ್ನಿ ಅಹಲ್ಯಾದೇವಿಯನ್ನು ರಾಮನು ಪಾದ ಸ್ಪರ್ಶ ಮಾಡಿ ವಿಮೋಚನೆಗೊಳಿಸುತ್ತಾನೆ. ಚಿತ್ರದಲ್ಲಿ ಶಾಪ ವಿಮೋಚನೆಗೊಂಡ ಅಹಲ್ಯೆಯು ಶ್ರೀರಾಮನಿಗೆ ಮತ್ತು ವಿಶ್ವಾಮಿತ್ರನಿಗೆ ನಮಿಸುತ್ತಿದ್ದಾಳೆ. ಆಕೆಯು ಕಲ್ಲಾಗಿ ಬಿದ್ದಿರುವ ಸ್ಥಳವನ್ನು ಒಂದು ಚೌಕಾಕಾರದ ವಿನ್ಯಾಸದಿಂದ ಚಿತ್ರಿಸಲಾಗಿದೆ.

೧೦. ಸೀತಾ ಸ್ವಯಂವರ : ಮಿಥಿಲಾ ನಗರದಲ್ಲಿ ಬಂದ ರಾಮ-ಲಕ್ಷ್ಮಣರು ಸೀತಾಸ್ವಯಂವರದಲ್ಲಿ ಭಾಗವಹಿಸುತ್ತಾರೆ. ಶಿವಧನಸ್ಸು ಹೆದೆ ಏರಿಸಲು ವಿಫಲರಾದ ಎಲ್ಲ ರಾಜರೂ ಹಿಂದೆ ಸರಿಯುತ್ತಾರೆ. ಲಂಕಾಧೀಶ್ವರ ರಾವಣನೂ ಸ್ವಯಂವರದಲ್ಲಿ ಶಿವಧನಸ್ಸು ಎತ್ತಲು ವಿಫಲನಾಗಿ ಕೆಳಗುರುಳಿ ಬೀಳುತ್ತಾನೆ. ಇಲ್ಲಿ ರಾವಣನು ವಿಫಲನಾಗಿ ಕೆಳಗುರುಳಿ ಬಿದ್ದಿದ್ದು ಸಭಿಕರು ನಗುತ್ತಿದ್ದಾರೆ. ಋಷಿಗಳ ಸಮ್ಮುಖದಲ್ಲಿ ರಾಮನು ಶಿವಧನಸ್ಸನ್ನು ಯಶಸ್ವಿಯಾಗಿ ಹೆದೆ ಏರಿಸಿ ಬಾಣ ಹೂಡುತ್ತಿದ್ದಾನೆ. ನಾಲ್ಕೂ ಕಡೆಗೆ ಒಬ್ಬೊಬ್ಬ ವ್ಯಕ್ತಿಗಳನ್ನು ಚಿತ್ರಿಸಿ ಸುತ್ತಲೂ ಜನ ನೆರೆದಿದ್ದಾರೆ ಎಂಬುದಾಗಿ ಸಾಂಕೇತಿಸಲಾಗಿದೆ. ರಾಮನು ಹಳದಿ ಬಣ್ಣದ ಉದ್ದ ತೋಳಿನ ಅಂಗಿ ತೊಟ್ಟಿದ್ದು ಕೆಂಪು ಬಣ್ಣದ ಪಂಚೆ ಉಟ್ಟಿದ್ದಾನೆ. ಕೆಳಗೆ ಬಿದ್ದಿರುವ ರಾವಣನು ಹಳದಿ ಮಿಶ್ರಿತ ಬಿಳಿಬಣ್ಣದ ಅಂಗಿ ಧರಿಸಿದ್ದು ಅದರಲ್ಲಿ ಚುಕ್ಕಿಯಂತಹ ನಕ್ಷೆ ಇದೆ. ಮೇಲ್ಭಾಗದಲ್ಲಿ ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತ ಸೀತಾದೇವಿಯು ಸ್ವಯಂವರವನ್ನು ವೀಕ್ಷಿಸುತ್ತಿದ್ದು ವಿಜಯಿಯಾದವರಿಗೆ ಹೂಮಾಲೆ ಹಾಕಲು ಸಿದ್ಧಳಾಗಿದ್ದಾಳೆ. ಕೆಳಭಾಗದ ಅಂಕಣದಲ್ಲಿ ರಾಮ-ಸೀತೆಯರ ಮದುವೆ ನಡೆಯುತ್ತಿದ್ದು ಋಷಿಮುನಿಗಳು, ಮಹಿಳೆಯರು ಕೈ ಎತ್ತಿ ಹರಸುತ್ತಿದ್ದಾರೆ.

೧೧. ಜನಕರಾಜನ ಉಡುಗೊರೆಗಳೊಂದಿಗೆ ಅಯೋಧ್ಯೆಗೆ ಪ್ರಯಾಣ : ರಾಮ-ಸೀತೆಯರ ಮದುವೆ ವೈಭವದಿಂದ ನೆರವೇರಿದ ನಂತರ ಜನಕ ಮಹಾರಾಜನು ಮಗಳನ್ನು ಕಳಿಸುವಾಗ ಗೋವುಗಳು, ಗಜ, ತುರಗ ಸಮೇತ ಅನೇಕ ಕೊಡುಗೆಗಳನ್ನು ಕೊಟ್ಟು ರಥದಲ್ಲಿ ಕಳಿಸುತ್ತಾನೆ. ಇಲ್ಲಿ ರಥದಲ್ಲಿ ಕುಳಿತು ಹೊರಟ ರಾಮ-ಲಕ್ಷ್ಮಣರು. ಮುನಿಗಳು. ಮುಂದೆ ಗೋವುಗಳು ಸೈನಿಕರು ಹೊರಟಿರುವಂತೆ ಚಿತ್ರಿಸಿದೆ. ತೀರಾ ಮುಂದೆ ವಾದ್ಯಗಾರರು ವಾದ್ಯ ನುಡಿಸುತ್ತ ಸಾಗಿದ್ದಾರೆ.

೧೨. ಗಣಪತಿ-ಸರಸ್ವತಿಯ ಚಿತ್ರ : ಈ ಪಟ್ಟಿಕೆಯ ಕೆಳಭಾಗದಲ್ಲಿ ೨೨ ಚಿತ್ರಗಳಿದ್ದು ಅವು ಗುರುತಿಸಲಾಗದಂತೆ ನಾಶವಾಗಿವೆ. ಅವುಗಳಲ್ಲಿ ಒಂದು ಅಂಕಣದಲ್ಲಿ ಗಣಪತಿ-ಸರಸ್ವತಿಯರ ಚಿತ್ರ ರಚಿಸಿದೆ. ಈ ಅಂಕಣದಲ್ಲಿ ಬಲಗಡೆಗೆ ಗಣಪತಿ ಇದ್ದರೆ ಎಡಗಡೆಗೆ ಸರಸ್ವತಿಯನ್ನು ಚಿತ್ರಿಸಲಾಗಿದೆ. ಕಿರೀಟಧಾರಿಯಾದ ಗಣಪತಿಯು ಪೀಠದ ಮೇಲೆ ಕುಳಿತಿದ್ದು ತಿಳಿ ನೀಲಿ ಬಣ್ಣದ ಉದ್ದ ತೋಳಿನ ಪೇಶ್ವೆ ಶೈಲಿಯ ಅಂಗಿ ಧರಿಸಿದ್ದಾನೆ. ನವಿಲಿನ ಮೇಲಿರುವ ಸರಸ್ವತಿಯು ವೀಣಾಪಾಣಿಯಾಗಿದ್ದು ಶ್ವೇತ ಬಣ್ಣದ ಸೀರೆ ಉಟ್ಟಿದ್ದಾಳೆ. ವಿದ್ಯಾದೇವತೆಗಳೆನಿಸಿದ ಗಣಪತಿ-ಸರಸ್ವತಿಯರನ್ನು ಹೀಗೆ ಜೊತೆಯಾಗಿ ಚಿತ್ರಿಸಿದ್ದು ಉತ್ತರ ಕರ್ನಾಟಕದಲ್ಲಿ ಅಮ್ಮಿನಭಾವಿಯ ಹಿರೇಮಠ, ಮಹಾಲಿಂಗಪುರದ ಮಹಾಲಿಂಗೇಶ್ವರಮಠ. ಗುಳೇದಗುಡ್ಡದ ಹೊಸಮನಿ ಗೌಡರ ಮನೆಗಳಲ್ಲಿ ಕಂಡು ಬರುತ್ತದೆ.

೧೩. ರಾವಣನ ಚಿತ್ರಗಳು : ಉಳಿದಂತೆ ಈ ಪಟ್ಟಿಕೆಯಲ್ಲಿ ರಾವಣನ ತಪಸ್ಸು ಆತನ ದಿಗ್ವಿಜಯ ಯಾತ್ರೆಗಳನ್ನು ಚಿತ್ರಿಸಿದೆ. ರಾವಣನು ವೈಶ್ರವಣನನ್ನು ಓಡಿಸಿ ಲಂಕೆಯನ್ನು ಆಕ್ರಮಿಸಿದ್ದು, ಮಂಡೋದರಿಯನ್ನು ಮದುವೆಯಾಗಿದ್ದು. ರಾವಣನು ಮರುತ್ತರನನ್ನು ಜಯಿಸಿದ್ದು, ಅರಣ್ಯಕನನ್ನು ಕೊಂದು ಶಾಪ ಪಡೆದದ್ದು, ಯಮನೊಡನೆ ಯುದ್ಧ ಮಾಡಿದ್ದು. ಕಾಲಕೇಯರೆಂಬ ದೈತ್ಯರನ್ನು ಜಯಿಸಿದ್ದು. ಇಂದ್ರನ ಮೇಲೆ ಯುದ್ಧ ಮಾಡಿದ್ದು. ಸಹಸ್ರಾರ್ಜುನನ ಸಂಗಡ ಯುದ್ಧ ಮಾಡಿ ಪರಾಜಯ ಹೊಂದಿದ್ದು ಹೀಗೆ ಒಟ್ಟು ೨೨ ಅಂಕಣಗಳಲ್ಲಿ ಈ ಕೆಳಭಾಗದಲ್ಲಿ ಚಿತ್ರಗಳಿದ್ದು ಅಸ್ಪಷ್ಟವಾಗಿವೆ. ಕೆಳಭಾಗದಲ್ಲಿರುವುದರಿಂದ ಹೆಚ್ಚಿಗೆ ಹಾನಿಗೊಳಗಾಗಿವೆ.

*III. ಮೂರನೆಯ ಪಟ್ಟಿಕೆ :* ಮೂರನೆಯ ಪಟ್ಟಿಕೆಯೂ ಸಹಿತ ೭'×೫' ಅಳತೆಯಲ್ಲಿದ್ದು ಮೇಲ್ಭಾಗದಲ್ಲಿ ೨೪ ಚಿತ್ರಗಳಿದ್ದರೆ ಕೆಳಭಾಗದಲ್ಲಿ ೨೮ ಚಿತ್ರಗಳಿವೆ. ಮೇಲಿನ ಭಾಗದ ಚಿತ್ರಗಳು ಬಹುಶಃ ಈ ದೇವಾಲಯದ ಪೋಷಕರಿಗೆ ಸಂಬಂಧಿಸಿದವುಗಳಾಗಿವೆ. ೨೪ ಚಿಕ್ಕ ಚಿಕ್ಕ ಅಂಕಣಗಳಲ್ಲಿ ಪೋಷಕ ದೊರೆಗಳ ಅವರ ರಾಣಿಯರ, ಪರಿವಾರದ ವಿವಿಧ ವಿಷಯದ ಚಿತ್ರಗಳಿವೆ. ಈ ದೇವಾಲಯವು ಬಹುಶಃ ಮರಾಠ ಪೇಶ್ವೆಗಳ ಕಾಲದ್ದಾಗಿರಬಹುದು ಇಲ್ಲವೇ ಚಿತ್ರಗಳನ್ನು ಅವರ ಕಾಲಕ್ಕೆ ಬರೆಸಿರಬಹುದು ಹಾಗಾಗಿ ಇಲ್ಲಿನ ಎಲ್ಲ ಚಿತ್ರಗಳಲ್ಲಿ ಮರಾಠ ಪೇಶ್ವೆಗಳ ವೇಷಭೂಷಣ ಕಂಡುರುತ್ತದೆ.

೧. ರಾಣಿಯರು ರಥದಲ್ಲಿ ಹೊರಟಿರುವುದು : ಇಬ್ಬರು ಸ್ತ್ರೀಯರು ರಥದಲ್ಲಿ ಕುಳಿತು ಹೊರಟಿದ್ದು ರಥವು ಕುದುರೆಯಿಂದ ಎಳೆಯಲ್ಪಡುತ್ತಿದೆ. ಮುಂದೆ ಇಬ್ಬರು ಯೋಧರು ಖಡ್ಗ ಹಿಡಿದು ಹೊರಟಿದ್ದರೆ ಅವರಿಗಿಂತ ಮುಂದಾಗಿ ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತ ರಾಜನಿದ್ದಾನೆ. ಆನೆಯ ಮುಂದೆಯೂ ಇಬ್ಬರು ಸೈನಿಕರು ಆಯುಧ ಸಮೇತ ಹೊರಟಿದ್ದಾರೆ. ಇದರ ಕೆಳ ಬಾಗದ ಅಂಕಣದಲ್ಲಿಯೂ ಇಂತಹದೇ ಮೆರವಣಿಗೆ ದೃಶ್ಯವಿದೆ. ಇವುಗಳ ಕೆಳಗೆ ಇನ್ನೆರಡು ಇಂತಹದೇ ಮೆರವಣಿಗೆಯ ದೃಶ್ಯಗಳಿದ್ದು ಅದರಲ್ಲಿಯೂ ಮುಂದೆ

ಇಬ್ಬರು ಸೈನಿಕರು ಅವರ ಹಿಂದೆ ಆನೆಯ ಮೇಲೆ ಅಂಬಾರಿಯಲ್ಲಿ ರಾಜ, ಆನೆಯ ಹಿಂದುಗಡೆ ಮತ್ತೆ ಇಬ್ಬರು ಸೈನಿಕರು. ತೀರ ಹಿಂದುಗಡೆ ರಥದಲ್ಲಿ ಇಬ್ಬರು ರಾಣಿಯರು ಹೀಗೆ ಪ್ರತಿಯೊಂದು ಒಂದೇ ತೆರನಾಗಿರುವ ನಾಲ್ಕು ಮೆರವಣಿಗೆ ದೃಶ್ಯಗಳಿವೆ. ಮೇಲಿನ ಎರಡರಲ್ಲಿ ನೀಲಿ ಬಣ್ಣದ ಆನೆಗಳಿದ್ದರೆ ಕೆಳಗಿನ ಆನೆ ಕಂದು ಬಣ್ಣದಲ್ಲಿ ಮಧ್ಯದ ಮೆರವಣಿಗೆಯ ಆನೆ ಬಿಳಿ ಬಣ್ಣದಲ್ಲಿದೆ. ರಥದಲ್ಲಿ ಇಬ್ಬರು ಸ್ತ್ರೀಯರು ಕುಳಿತು ಮೆರವಣಿಗೆ ಹೊರಟಿರುವ ಇನ್ನೂ ನಾಲ್ಕು ಚಿತ್ರಗಳಿವೆ.

೨. ಕುದುರೆ ಮೇಲೆ ಹೊರಟ ರಾಜ : ಪೇಶ್ವೆ ಶೈಲಿಯ ವಸ್ತ್ರವಿನ್ಯಾಸದಲ್ಲಿರುವ ರಾಜನೊಬ್ಬನು ಕುದುರೆಯ ಮೇಲೆ ಹೊರಟಿದ್ದಾನೆ. ಆತನ ಮುಂದೆ ವಾದ್ಯಗಾರರು ಖಡ್ಗ ಹಿಡಿದ ವ್ಯಕ್ತಿ ಹೊರಟಿದ್ದಾರೆ. ಇಂತಹ ಆರು ಚಿತ್ರಗಳಿವೆ. ಅವುಗಳಲ್ಲಿ ಕುದುರೆ ಮತ್ತು ಜನರ ವೇಷಭೂಷಣ ಅವುಗಳಲ್ಲಿನ ಬಣ್ಣಗಳು ಮಾತ್ರ ಬದಲಾಗಿವೆ. ವಾದ್ಯಗಾರರಲ್ಲಿ ತಾಳ. ಡೋಲು. ತುತ್ತೂರಿ ಬಾರಿಸುವವರಿದ್ದಾರೆ. ಇನ್ನೊಂದು ಕಡೆಗೆ ಪಲ್ಲಕ್ಕಿಯಲ್ಲಿ ಇಬ್ಬರು ಸ್ತ್ರೀಯರನ್ನು ಕುಳ್ಳಿರಿಸಿಕೊಂಡು ಹೊರಟಿದ್ದಾರೆ. ಮುಂದೆ ಪುರೋಹಿತರು, ಋಷಿಮುನಿಗಳು ಇದ್ದು ಪಲ್ಲಕ್ಕಿಯನ್ನು ಇಬ್ಬರು ವ್ಯಕ್ತಿಗಳು ಹೊತ್ತುಕೊಂಡಿದ್ದಾರೆ. ಇನ್ನೊಂದು ಕಡೆಗೆ ಮುನಿಯೊಬ್ಬ ರಾಜಕುಮಾರರಿಗೆ ಅಸ್ತ್ರವಿದ್ಯೆ ಹೇಳಿಕೊಡುತ್ತಿರುವ ಚಿತ್ರವಿದೆ. ಮತ್ತೊಂದು ಕಡೆಗೆ ಯಜ್ಞದ ದೃಶ್ಯವಿದ್ದು ಅದರಲ್ಲಿ ರಾಜರಾಣಿಯರು ಪಾಲ್ಗೊಂಡಿದ್ದಾರೆ. ಹೀಗೆ ಈ ಪಟ್ಟಿಕೆಯ ಮೇಲ್ಭಾಗದಲ್ಲಿ ಪೋಷಕರಾಜರಿಗೆ ಸಂಬಂಧಿಸಿದ ಚಿತ್ರಗಳಿವೆ.

೩. ರಾಮನ ಪಟ್ಟಾಭಿಷೇಕ : ಕೆಳಭಾಗದಲ್ಲಿ ಮಧ್ಯದಲ್ಲಿ ರಾಮನು ಸೀತೆಯೊಡನೆ ಸಿಂಹಾಸನದ ಮೇಲೆ ಕುಳಿತ ದೃಶ್ಯವಿದೆ ಬಲಭಾಗದಲ್ಲಿ ಲಕ್ಷ್ಮಣ-ಭರತ ಕೈ ಮುಗಿದುಕೊಂಡು ನಿಂತಿದ್ದರೆ, ಎಡಭಾಗದಲ್ಲಿ ಶತ್ರುಘ್ನ ನಿಂತಿದ್ದಾನೆ. ಕೆಳಗಡೆಗೆ ಆಂಜನೇಯ ಮತ್ತು ಇತರ ವಾನರರು ರಾಮನ ಸೇವೆಯಲ್ಲಿ ತೊಡಗಿದ್ದಾರೆ. ಉಳಿದಂತೆ ಈ ಮುಖ್ಯ ಚಿತ್ರದ ಸುತ್ತಲೂ ಹರಡಿಕೊಂಡಂತೆ ರಾಮ-ರಾವಣರ ಯುದ್ಧ ಮತ್ತು ಯುದ್ಧ ಮುಗಿಸಿ ಆತ ಮರಳಿ ಅಯೋಧ್ಯೆಗೆ ಬರುವ ಚಿತ್ರಗಳನ್ನು ರಚನೆ ಮಾಡಲಾಗಿದೆ. ಚಿತ್ರಗಳು ನಾಶವಾಗಿದ್ದು ಗುರುತಿಸಲು ಕಷ್ಟವಾಗುತ್ತದೆ.

*IV. ನಾಲ್ಕನೆಯ ಪಟ್ಟಿಕೆ :* ನಾಲ್ಕನೆಯ ಪಟ್ಟಿಕೆಯು ಗೋಡೆಯ ಕೊನೆಯಲ್ಲಿದ್ದು ಮೊದಲ ಪಟ್ಟಿಕೆಯಂತೆ ೫' × ೨.೫' ಅಳತೆ ಹೊಂದಿದೆ. ಇದರಲ್ಲಿ ಮೇಲ್ಭಾಗದಲ್ಲಿ ೮, ಕೆಳಭಾಗದಲ್ಲಿ ೮ ಅಂಕಣಗಳನ್ನು ಮಾಡಿಕೊಂಡು ಚಿತ್ರ ರಚಿಸಿದ್ದಾರೆ.

೧. ಕದನದ ದೃಶ್ಯ : ಮೇಲಿನ ಅಂಕಣದಲ್ಲಿ ಇಬ್ಬರು ವ್ಯಕ್ತಿಗಳು ಯುದ್ಧ ಮಾಡುತ್ತಿರುವ ಚಿತ್ರವಿದೆ. ಇಬ್ಬರೂ ಬಿಲ್ಲು-ಬಾಣಗಳಿಂದ ಯುದ್ಧ ಮಾಡುತ್ತಿದ್ದಾರೆ. ಬಲಗಡೆಗೆ ಇರುವ ವ್ಯಕ್ತಿಯು ನೀಲಿ ವರ್ಣದ ಅಂಗಿ ತೊಟ್ಟು ಬಿಳಿ ಧೋತರ ಉಟ್ಟಿದ್ದರೆ ಎಡಗಡೆಯ ವ್ಯಕ್ತಿ ಹಳದಿ ಧೋತರ ಉಟ್ಟು ಕಂದು ಬಣ್ಣದ ಅಂಗಿ ಧರಿಸಿದ್ದಾನೆ. ಇಬ್ಬರೂ ಬಿಟ್ಟ ಬಾಣಗಳು ಚಿತ್ರದಲ್ಲಿ ತುಂಬಿಕೊಂಡಿವೆ.

೨. ಮೆರವಣಿಗೆಯ ದೃಶ್ಯಗಳು : ಪಕ್ಕದ ಇನ್ನೊಂದು ಚಿತ್ರದಲ್ಲಿ ಎರಡು ಮೇಣೆ(ಪಲ್ಲಕ್ಕಿ)ಯಲ್ಲಿ ರಾಣಿಯರನ್ನು ಕುಳ್ಳಿರಿಸಿಕೊಂಡು ಹೊರಟಿದ್ದಾರೆ. ಮುಂದಿನ ಮೇಣೆಯಲ್ಲಿ ಇಬ್ಬರು ರಾಣಿಯರು. ಹಿಂದಿನ

ಮೇಣೆಯಲ್ಲಿ ಇಬ್ಬರು ರಾಣಿಯರಿದ್ದಾರೆ. ಒಂದೊಂದು ಮೇಣೆಯನ್ನು ಇಬ್ಬರು ವ್ಯಕ್ತಿಗಳು ಹೊತ್ತುಕೊಂಡಿದ್ದಾರೆ. ಮೆರವಣಿಗೆಯ ದೃಶ್ಯ ಒಂದರಲ್ಲಿ ಮುಂದೆ ಮೂವರು ವ್ಯಕ್ತಿಗಳು ವಾದ್ಯ ನುಡಿಸುತ್ತ ಸಾಗುತ್ತಿದ್ದರೆ, ಅವರ ಹಿಂದೆ ಆನೆಯ ಮೇಲೆ ರಾಜಪೋಷಾಕಿನಲ್ಲಿರುವ ವ್ಯಕ್ತಿ ಕುಳಿತಿದ್ದಾನೆ. ಆನೆಯ ಹಿಂದೆ ಮತ್ತೆ ಇಬ್ಬರು ಸೈನಿಕರು ಆಯುಧ ಹಿಡಿದು ನಡೆದಿದ್ದರೆ ಅವರ ಹಿಂದೆ ಕುದುರೆಯ ಮೇಲೆ ಮತ್ತೊಬ್ಬ ವ್ಯಕ್ತಿ ಕುಳಿತಿದ್ದಾನೆ. ಈ ಬಿಳಿ ಕುದುರೆಯ ಹಿಂದೆ ಮತ್ತೆ ಇಬ್ಬರು ರಾಜಭಟರು ಹಿಂಬಾಲಿಸಿದ್ದರೆ. ಅವರ ಹಿಂದೆ ಮತ್ತೊಂದು ಕುದುರೆಯ ಮೇಲೆ ಖಡ್ಗ ಹಿಡಿದ ವ್ಯಕ್ತಿ ಕುಳಿತಿದ್ದಾನೆ. ಈ ರೀತಿ ಉದ್ದ ಸಾಲಿನಲ್ಲಿ ಮೆರವಣಿಗೆ ಹೊರಟಿದೆ. ಇದರ ಕೆಳಗೆ ಋಷಿ ಮುನಿಗಳಿಗೆ ನಮಿಸುತ್ತಿರುವ ವ್ಯಕ್ತಿಗಳು ಚಿತ್ರಿತರಾಗಿದ್ದಾರೆ. ಬಲಗಡೆಗೆ ಋಷಿಮುನಿಗಳು ಯಜ್ಞ ಮಾಡುತ್ತಿದ್ದು ಇಬ್ಬರು ವ್ಯಕ್ತಿಗಳು ರಾಜ ಉಡುಗೆಯಲ್ಲಿದ್ದಾರೆ.

೩. ರಾಮ-ರಾವಣರ ಯುದ್ಧ ದೃಶ್ಯಗಳು : ಕೆಳಭಾಗದ ಚಿತ್ರಗಳಲ್ಲಿ ರಾಮಾಯಣ ದೃಶ್ಯಗಳು ರಚಿಸಿವೆ. ಒಂದರಲ್ಲಿ ರಾಮ-ಲಕ್ಷ್ಮಣ. ಸುಗ್ರೀವ. ಹನುಮಂತ ನಿಂತಿದ್ದರೆ ಸ್ತ್ರೀಯೊಬ್ಬಳು ರಾಮನ ಕಾಲಿಗೆ ನಮಸ್ಕರಿಸುತ್ತಿದ್ದಾಳೆ. ಇನ್ನೊಂದು ಚಿತ್ರದಲ್ಲಿ ರಾವಣ. ಕುಂಭಕರ್ಣ. ಇಂದ್ರಜಿತ ಇದ್ದರೆ. ಕೆಳಗಿನ ಅಂಕಣದಲ್ಲಿ ಲಕ್ಷ್ಮಣ-ರಾವಣರು ಎದುರಾಗಿ ಯುದ್ಧದಲ್ಲಿ ತೊಡಗಿದ್ದಾರೆ. ರಾವಣನ ರಥದ ಹಿಂದೆ ರಾಕ್ಷಸ ಸೈನ್ಯವಿದ್ದರೆ, ಲಕ್ಷ್ಮಣನ ಸೈನ್ಯದ ಹಿಂದೆ ಅಂಗದ ಸುಗ್ರೀವ ಮೊದಲಾದ ವಾನರರು ಇದ್ದಾರೆ. ಇದರ ಕೆಳಗಿರುವ ಅಂಕಣದಲ್ಲಿ ರಾಮ-ರಾವಣರ ಯುದ್ಧ ಚಿತ್ರಿಸಿದೆ. ರಾವಣ. ರಾಮ ಇಬ್ಬರೂ ನೆಲದ ಮೇಲೆ ನಿಂತೇ ಯುದ್ಧ ಮಾಡುತ್ತಿದ್ದಾರೆ. ರಾವಣನ ಸೈನ್ಯದಲ್ಲಿ ಆನೆಗಳು ಹಿಂಡು ಹಿಂಡಾಗಿ ನುಗ್ಗುತ್ತಿವೆ. ರಾಮನ ಕಡೆಯ ವಾನರ ಸೈನಿಕರು ರಾವಣನ ಹೊಡೆತದಿಂದ ಹತರಾಗಿ ಬಿದ್ದಿದ್ದಾರೆ. ಇದರ ಕೆಳಗಿರುವ ಚಿತ್ರವು ರಾಮ-ರಾವಣರ ಯುದ್ಧದ ನಂತರ ವಿಭಿಷಣನಿಗೆ ಪಟ್ಟಾಭಿಷೇಕ ಮಾಡುತ್ತಿರುವುದಾಗಿದೆ ಇದು ನಾಶವಾಗಿದ್ದು ವಿವರ ತಿಳಿಯುವುದಿಲ್ಲ.

**೨. ಪಶ್ಚಿಮ ಗೋಡೆಯ ಚಿತ್ರಗಳು :** ಪಶ್ಚಿಮ ಗೋಡೆಯಲ್ಲಿಯೂ ೪ ಪಟ್ಟಿಕೆಗಳಲ್ಲಿ ಚಿತ್ರಗಳಿದ್ದು ಮಧ್ಯದಲ್ಲಿ ಎರಡು ದೊಡ್ಡ ಪಟ್ಟಿಕೆಗಳು ಅಕ್ಕಪಕ್ಕದಲ್ಲಿ ಅದಕ್ಕಿಂತ ಚಿಕ್ಕ ಪಟ್ಟಿಕೆಗಳಿವೆ. ಉತ್ತರ ಗೋಡೆಯ ಚಿತ್ರಗಳನ್ನು ಸಹಿತ ಈ ಕೆಳಗಿನಂತೆ ವಿಂಗಡಿಸಿ ವಿಶ್ಲೇಷಿಸಬಹುದು.

I. ಒಂದನೆಯ ಪಟ್ಟಿಕೆಯ ಚಿತ್ರಗಳು

II. ಎರಡನೆಯ ಪಟ್ಟಿಕೆಯ ಚಿತ್ರಗಳು

III. ಮೂರನೆಯ ಪಟ್ಟಿಕೆಯ ಚಿತ್ರಗಳು

IV. ನಾಲ್ಕನೆಯ ಪಟ್ಟಿಕೆಯ ಚಿತ್ರಗಳು

*I. ಒಂದನೆಯ ಪಟ್ಟಿಕೆಯ ಚಿತ್ರಗಳು :* ಪಶ್ಚಿಮ ಗೋಡೆಯಲ್ಲಿ ಎಡಗಡೆಯಿಂದ ಬಲಕ್ಕೆ ಅಂದರೆ ಉತ್ತರದಿಂದ ದಕ್ಷಿಣಕ್ಕಿರುವಂತೆ ಮೊದಲನೆಯದು ಎಂದು ಇಲ್ಲಿ ಪರಿಗಣಿಸಿದೆ. ಈ ಮೊದಲ ಪಟ್ಟಿಕೆಯು ೫' × ೨.೫' ಅಳತೆಯಲ್ಲಿದ್ದು ಅದರಲ್ಲಿ ಮೇಲ್ಭಾಗದಲ್ಲಿ ೮ ಕೆಳಭಾಗದಲ್ಲಿ ೮ ಚಿತ್ರಗಳನ್ನು ರಚಿಸಿದೆ. ಮೇಲ್ಭಾಗದಲ್ಲಿ ರಾಮ-ಲಕ್ಷ್ಮಣ-ಸೀತೆಯರು ಅರಣ್ಯ ವಾಸದಲ್ಲಿರುವುದು. ರಾಕ್ಷಸರನ್ನು ಸಂಹರಿಸುತ್ತಿರುವುದು ಚಿತ್ರಿಸಿದೆ.

ಒಂದು ಚಿತ್ರದಲ್ಲಿ ಗಿಡದ ಕೆಳಗೆ ಮುನಿಯೊಬ್ಬ ಕುಳಿತಿದ್ದು ರಾಮ-ಲಕ್ಷ್ಮಣ-ಸೀತೆಯರು ಆತನಿಗೆ ಕೈಮುಗಿದು ನಮಿಸುತ್ತಿದ್ದಾರೆ. ಪಕ್ಕದ ಚಿತ್ರದಲ್ಲಿ ಮುನಿಗಳೊಂದಿಗೆ ಸಂಭಾಷಣೆಯಲ್ಲಿ ತೊಡಗಿದ್ದಾರೆ. ಅದರ ಕೆಳಗಿನ ಅಂಕಣದಲ್ಲಿ ಲಕ್ಷ್ಮಣನು ರಾಕ್ಷಸರನ್ನು ಸಂಹರಿಸುತ್ತಿದ್ದರೆ ರಾಮ-ಸೀತೆಯರು ಜೊತೆಯಾಗಿ ಸಂಭಾಷಣೆಯಲ್ಲಿ ನಿರತರಾಗಿದ್ದಾರೆ. ಕೆಳಭಾಗದ ೮ ಚಿತ್ರಗಳಲ್ಲಿ ಹೆಚ್ಚಿನವುಗಳು ನಾಶವಾಗಿ ಹೋಗಿವೆ. ಅಲ್ಪಸ್ವಲ್ಪ ಕಾಣುವ ಚಿತ್ರಗಳಲ್ಲಿ ರಾಮಾಯಣದ ಯುದ್ಧ ಕಾಂಡದ ದೃಶ್ಯಗಳಿವೆ. ಆನೆ-ಕುದುರೆಗಳೊಂದಿಗೆ ಏರಿ ಬರುತ್ತಿರುವ ರಾಕ್ಷಸ ಸೈನ್ಯದ ಮೇಲೆ ವಾನರ ವೀರರು ಗುಡ್ಡಗಳನ್ನೇ ತಂದು ಎಸೆಯುತ್ತಿದ್ದಾರೆ. ಕೆಳಗಿನ ಇನ್ನೊಂದು ಚಿತ್ರದಲ್ಲಿ ರಾವಣ ಹಾಗೂ ರಾಮ-ಲಕ್ಷ್ಮಣರಿಗೆ ಯುದ್ಧ ನಡೆದಿದೆ. ರಾವಣನು ರಥದಲ್ಲಿದ್ದಾನಲ್ಲದೇ ಆತನ ಕಡೆಗೆ ಇನ್ನೂ ಎರಡು ರಥಗಳು ಚಿತ್ರಿಸಿವೆ. ಆದರೆ ರಾಮ-ಲಕ್ಷ್ಮಣರು ನೆಲದಲ್ಲಿ ನಿಂತು ಯುದ್ಧದಲ್ಲಿ ತೊಡಗಿದ್ದು ಬೆಂಗಾವಲಿಗೆ ಹನುಮಂತ. ಅಂಗದ. ಸುಗ್ರೀವ ಮೊದಲಾದ ವಾನರರಿದ್ದಾರೆ. ಉಳಿದಂತೆ ಹೆಚ್ಚಿನ ಭಾಗ ನಾಶವಾಗಿದೆ.

*II. ಎರಡನೆಯ ಪಟ್ಟಿಕೆಯ ಚಿತ್ರಗಳು :* ಈ ಪಟ್ಟಿಕೆಯು ೭'×೪' ಫೂಟು ಅಳತೆಯಲ್ಲಿದೆ. ಮೇಲ್ಭಾಗದಲ್ಲಿ ೨೪ ಅಂಕಣಗಳನ್ನಾಗಿ ಮಾಡಿಕೊಂಡು ಚಿತ್ರಿಸಿದ್ದಾರೆ. ಕೆಳಭಾಗವು ಪೂರ್ತಿ ಹಾಳಾಗಿದೆ. ಈ ಪಟ್ಟಿಕೆಯು ಪೂರ್ತಿಯಾಗಿ ರಾಮಾಯಣದ ಕಿಷ್ಕಿಂಧಾ ಕಾಂಡವನ್ನು ಆಧರಿಸಿ ರಚನೆಯಾಗಿದೆ. ರಾವಣನು ಸೀತೆಯನ್ನು ಅಪಹರಿಸಿದ್ದು. ಜಟಾಯು ತಡೆದದ್ದು. ರಾಮ-ಸುಗ್ರೀವರ ಗೆಳೆತನ ವಾಲಿ ಸಂಹಾರ ಹೀಗೆ ಕಿಷ್ಕಿಂಧಾ ಕಾಂಡದ ವಿಷಯಗಳು ಈ ಪಟ್ಟಿಕೆಯಲ್ಲಿ ರಚಿಸಿವೆ.

೧. ರಾವಣನು ಸೀತೆಯನ್ನು ಅಪಹರಿಸಿದುದು : ಸನ್ಯಾಸಿ ವೇಷದಲ್ಲಿ ಬಂದು ಮೋಸದಿಂದ ಸೀತೆಯನ್ನು ಅಪಹರಿಸಿದ ರಾವಣನು ನಂತರ ತನ್ನ ನಿಜ ರೂಪದಿಂದ ಪುಷ್ಪಕ ವಿಮಾನದಲ್ಲಿ ಹೊತ್ತೊಯ್ಯುತ್ತಾನೆ. ಇಲ್ಲಿ ಕುದುರೆಯಿಂದ ಎಳೆಯಲ್ಪಟ್ಟ ರಥದಲ್ಲಿ ಸೀತೆಯನ್ನು ಅಪಹರಿಸಿಕೊಂಡು ಹೋಗುತ್ತಿದ್ದಾನೆ. ರಥದಲ್ಲಿ ಸಾರಥಿಯೂ ಇದ್ದು. ಹಿಂದೆ ಸೀತೆ ಮತ್ತು ರಾವಣ ಕುಳಿತಿದ್ದಾರೆ. ರಾವಣನನ್ನು ಜಟಾಯು ಅಡ್ಡಗಟ್ಟಿದೆ.

೨. ಜಟಾಯುವಿನ ಹೋರಾಟ : ರಾವಣನು ಸೀತಾದೇವಿಯನ್ನು ಅಪಹರಿಸಿಕೊಂಡು ಹೋಗುತ್ತಿರುವಾಗ ಜಟಾಯು ತನ್ನ ರೆಕ್ಕೆಗಳಿಂದ, ಕೊಕ್ಕಿನಿಂದ, ಕಾಲುಗಳಿಂದಲೂ ದಾಳಿ ಮಾಡಿ ರಾವಣನ ಕುದುರೆ, ರಥ, ಪತಾಕೆ ಎಲ್ಲವನ್ನು ನಾಶ ಮಾಡುತ್ತಾನೆ. ಕೊನೆಗೆ ಕೋಪಗೊಂಡ ರಾವಣನು ತನ್ನ ಖಡ್ಗದಿಂದ ಜಟಾಯುವಿನ ರೆಕ್ಕೆಗಳನ್ನು ಕತ್ತರಿಸಿ ಅದರ ಶಕ್ತಿಗುಂದಿಸಿ ಹೊರಟು ಹೋಗುತ್ತಾನೆ. ಇಲ್ಲಿನ ಚಿತ್ರದಲ್ಲಿ ರಾವಣನ ರಥಕ್ಕೆ ಅಡ್ಡವಾಗಿ ಜಟಾಯು ಬಂದು ತಡೆಯುತ್ತಿದೆ. ರಥ, ಕುದುರೆ ಎಲ್ಲವನ್ನೂ ಕಳೆದುಕೊಂಡ ರಾವಣನು ನೆಲದ ಮೇಲೆ ನಿಂತುಕೊಂಡೇ ಜಟಾಯುವಿನ ರೆಕ್ಕೆ ಕತ್ತರಿಸಿ ಹಾಕುತ್ತಿದ್ದಾನೆ. ಜಟಾಯು ಪಕ್ಷಿಯು ರಾವಣನಿಗಿಂತ ದೊಡ್ಡ ಪ್ರಮಾಣದಲ್ಲಿ ರಚಿಸಿದೆ.

೩. ಜಟಾಯುವಿನ ಮರಣ : ಸೀತೆಯನ್ನು ರಾವಣ ಅಪಹರಿಸಿದ ನಂತರ ಚಿಂತಾಕ್ರಾಂತರಾದ ರಾಮ-ಲಕ್ಷ್ಮಣರು ದಿಕ್ಕು ಕಾಣದೆ ತಿರುಗುತ್ತಿರಲು ದಾರಿಯಲ್ಲಿ ಅರೆಜೀವವಾಗಿಬಿದ್ದ ಜಟಾಯುವನ್ನು ಕಾಣುತ್ತಾರೆ. ಜಟಾಯು ಸೀತೆಯ ಅಪಹರಣದ ವಿಷಯ ತಿಳಿಸಿ ಪ್ರಾಣ ಬಿಡುತ್ತದೆ. ಚಿತ್ರದಲ್ಲಿ ರಾಮಲಕ್ಷ್ಮಣರು ನಡೆದು ಬರುತ್ತಿದ್ದು ಜಟಾಯು ದಾರಿಯಲ್ಲಿ ಬಿದ್ದುಕೊಂಡಿದೆ.

೪. ಕಬಂಧನೆಂಬ ರಾಕ್ಷಸನ ಸಂಹಾರ : ಜಟಾಯುವಿನಿಂದ ವಿಷಯ ತಿಳಿದ ರಾಮ-ಲಕ್ಷ್ಮಣರು ದಕ್ಷಿಣ ದಿಕ್ಕಿಗೆ ಪ್ರಯಾಣ ಬೆಳೆಸುತ್ತಾರೆ. ದಾರಿಯಲ್ಲಿ ಕಬಂಧನೆಂಬ ರಾಕ್ಷಸನು ಹುಲಿ ರೂಪದಿಂದ ಅವರನ್ನು ತಡೆಯುತ್ತಾನೆ. ರಾಮ-ಲಕ್ಷ್ಮಣರು ಆತನನ್ನು ಸಂಹರಿಸಿ ಮುಂದೆ ಹೋಗುತ್ತಾರೆ. ಚಿತ್ರದಲ್ಲಿ ಹುಲಿಯು ದೊಡ್ಡದಾಗಿ ಬಾಯಿ ತೆರೆದುಕೊಂಡು ನುಗ್ಗಿ ಬರುತ್ತಿದೆ. ರಾಮ-ಲಕ್ಷ್ಮಣರು ಇಲ್ಲಿಯೂ ಕಿರೀಟ ಧರಿಸಿದ್ದು ಉದ್ದ ತೋಳಿನ ಅಂಗಿ, ಧೋತರ ಉಟ್ಟುಕೊಂಡಿದ್ದಾರೆ.

೫. ಶಬರಿಯನ್ನು ಭೇಟಿ ಮಾಡಿದ್ದು : ಕಬಂಧ ರಾಕ್ಷಸನನ್ನು ಸಂಹರಿಸಿ ಮುಂದೆ ಸಾಗುತ್ತಿರುವಾಗ ಶಬರಿ ಎಂಬ ಭಕ್ತಳಿಂದ ರಾಮ-ಲಕ್ಷ್ಮಣರು ಆದರ ಆತಿಥ್ಯವನ್ನು ಪಡೆಯುತ್ತಾರೆ. ತನ್ನ ಆಶ್ರಮದಲ್ಲಿದ್ದ ಬೋರೆ ಹಣ್ಣುಗಳನ್ನೇ ಅವರಿಗೆ ತಿನ್ನಲು ಕೊಡುತ್ತಾಳೆ. ಈ ಚಿತ್ರದಲ್ಲಿ ಗಿಡಗಳ ಬುಡದಲ್ಲಿರುವ ಶಬರಿಯು ರಾಮ-ಲಕ್ಷ್ಮಣರನ್ನು ಬರ ಮಾಡಿಕೊಳ್ಳುತ್ತಿರುವಂತೆ ಚಿತ್ರಿಸಿದೆ.

೬. ಸುಗ್ರೀವನು ರಾಮ-ಲಕ್ಷ್ಮಣರನ್ನು ಕಂಡದ್ದು : ಶಬರಿಯ ಆತಿಥ್ಯದಿಂದ ಸಂಪ್ರೀತರಾದ ರಾಮ-ಲಕ್ಷ್ಮಣರಿಗೆ ಶಬರಿಯು ಋಷ್ಯಮೂಕ ಪರ್ವತಕ್ಕೆ ಹೋಗಿ ಸುಗ್ರೀವನ ಸ್ನೇಹ ಮಾಡಿರೆಂದು ಹೇಳುತ್ತಾಳೆ. ಅದರಂತೆ ಋಷ್ಯಮೂಕ ಪರ್ವತಕ್ಕೆ ಬಂದ ರಾಮ-ಲಕ್ಷ್ಮಣರು ಸೀತೆಯ ಅಪಹರಣದಿಂದ ವ್ಯಾಕುಲ ಚಿತ್ತರಾಗಿ ತಿರುಗುತ್ತಿರುವರು. ವಾಲಿಯ ಭಯದಿಂದ ಭೀತನಾದ ಸುಗ್ರೀವನು ಋಷ್ಯಮೂಕ ಪರ್ವತದ ಮೇಲೆ ತನ್ನ ಸಂಗಡಿಗರೊಂದಿಗೆ ಕಾಲ ಕಳೆಯುತ್ತಿದ್ದಾಗ ರಾಮ-ಲಕ್ಷ್ಮಣರು ಆತನ ಕಣ್ಣಿಗೆ ಬೀಳುತ್ತಾರೆ. ಚಿತ್ರದಲ್ಲಿ ಪರ್ವತದ ಮೇಲೆ ಬೀಡು ಬಿಟ್ಟ ಸುಗ್ರೀವ ಮತ್ತು ಆತನ ಸಂಗಡಿಗರಾದ ಇತರ ವಾನರರು ಪರ್ವತದ ಬಂಡೆಗಳ ಮೇಲೆ ಕುಳಿತಿದ್ದಾರೆ. ಕೆಳಗೆ ರಾಮ-ಲಕ್ಷ್ಮಣರು ತಿರುಗಾಡುತ್ತಿದ್ದಾರೆ.

೭. ಆಂಜನೇಯ ರಾಮ-ಲಕ್ಷ್ಮಣರನ್ನು ಕಂಡದ್ದು : ರಾಮಲಕ್ಷ್ಮಣರನ್ನು ಕಂಡ ಸುಗ್ರೀವನು ವಾಲಿಯ ಕಡೆಯಿಂದ ಪ್ರೇರಿತರಾಗಿ ಬಂದ ವೇಷಧಾರಿಗಳು ಎಂದು ತಿಳಿದು, ಹನುಮಂತನನ್ನು ಕರೆದು ಅವರಾರೆಂದು ತಿಳಿದು ಬಾ ಎನಲು ಆಂಜನೇಯನು ನಿಧಾನವಾಗಿ ತೆರಳಿ ಅವರನ್ನು ವಿಚಾರಿಸಿ ನಿಜ ವಿಷಯ ತಿಳಿದು ಅವರೀರ್ವರ ದಿವ್ಯ ಪ್ರಭೆಯನ್ನು ಕಂಡು ಶಿರಬಾಗಿ ನಮಿಸುತ್ತಾನೆ. ಚಿತ್ರದಲ್ಲಿ ಗಿಡದ ಬುಡದಲ್ಲಿ ಲಕ್ಷ್ಮಣನ ತೊಡೆಯ ಮೇಲೆ ತಲೆ ಇಟ್ಟು ರಾಮನು ಮಲಗಿಕೊಂಡಿದ್ದು. ಹನುಮಂತನು ಚಿಕ್ಕ ರೂಪದಿಂದ ಮರದಲ್ಲಿ ಅಡಗಿ ಕುಳಿತು ಅವರ ಚಲನವಲನ ವೀಕ್ಷಿಸುತ್ತಿದ್ದಾನೆ. ಕೆಳಗಿನ ಅಂಕಣದಲ್ಲಿ ಅವರಿಂದ ನಿಜ ತಿಳಿದು ರಾಮನ ಪಾದಗಳಿಗೆ ಶಿರಬಾಗಿ ನಮಿಸುತ್ತಿದ್ದಾನೆ.

೮. ರಾಮ-ಸುಗ್ರೀವರ ಸ್ನೇಹ : ರಾಮಲಕ್ಷ್ಮಣರಿಂದ ಅವರ ವಿಷಯ ತಿಳಿದ ಆಂಜನೇಯನು ಅವರನ್ನು ಸುಗ್ರೀವನ ಬಳಿಗೆ ಕರೆದೊಯ್ಯುತ್ತಾನೆ. ಅಲ್ಲಿ ಸುಗ್ರೀವನಿಗೂ ರಾಮ-ಲಕ್ಷ್ಮಣರಿಗೂ ಸ್ನೇಹವುಂಟಾಗುತ್ತದೆ. ಚಿತ್ರದಲ್ಲಿ ಆಂಜನೇಯನು ರಾಮ-ಲಕ್ಷ್ಮಣರನ್ನು ಕರೆತಂದಿದ್ದು ಸುಗ್ರೀವ ಮತ್ತು ಇತರ ವಾನರರು ಆದರದಿಂದ ಬರಮಾಡಿಕೊಳ್ಳುತ್ತಿದ್ದಾರೆ. ಅವರಿಗೆ ಕೈಮುಗಿದು ನಮಿಸಿ ಸುಗ್ರೀವನು ತನ್ನ ವೃತ್ತಾಂತ ಹೇಳುತ್ತಿರುವುದು ಚಿತ್ರಿಸಲ್ಪಟ್ಟಿದೆ.

೯. ಸುಗ್ರೀವನು ರಾಮನ ಶಕ್ತಿಯನ್ನು ಮನಗಾಣುವುದು : ಸುಗ್ರೀವನು ವಾಲಿಯಿಂದ ತನಗಾದ ಅನ್ಯಾಯವನ್ನು ರಾಮ-ಲಕ್ಷ್ಮಣರಿಗೆ ಹೇಳಿ. ವಾಲಿಯನ್ನು ಸಂಹರಿಸಲು ಸಹಾಯ ಮಾಡಬೇಕೆಂದು ಕೇಳುತ್ತಾನೆ. ಅದಕ್ಕೆ ರಾಮನು ಒಪ್ಪಿದಾಗ ಸುಗ್ರೀವನಿಗೆ ರಾಮನು ಬಲಶಾಲಿಯಾದ ವಾಲಿಯನ್ನು ಸಂಹರಿಸಬಲ್ಲನೇ? ಎಂಬ ಅನುಮಾನ ಉಂಟಾಗಿ ರಾಮನ ಶಕ್ತಿ ಪರೀಕ್ಷೆಗೆ ತೊಡಗುತ್ತಾನೆ. ವಾಲಿಯಿಂದ ಸಂಹರಿಸಲ್ಪಟ್ಟ ದುಂಧುಭಿ ಎಂಬ ರಾಕ್ಷಸನ ಕಳೇಬರವು ಪರ್ವತಾಕಾರವಾಗಿ ಬಿದ್ದುಕೊಂಡಿದೆ ಅದನ್ನು ಬರೀ ಪಾದದಿಂದ ಹೊರಳಿಸು ಎಂದು ರಾಮನಿಗೆ ಸುಗ್ರೀವ ಹೇಳಿದಾಗ. ರಾಮನು ತನ್ನ ಎಡ ಪಾದದಿಂದ ದುಂದುಭಿಯ ಶವವನ್ನು ಒದೆದಾಗ ಯೋಜನಗಳ ದೂರ ಹೋಗಿ ಬೀಳುತ್ತದೆ. ಚಿತ್ರದಲ್ಲಿ ರಾಮನು ಎಡಪಾದದಿಂದ ದುಂದುಭಿಯ ಶವವನ್ನು ಒದೆಯುತ್ತಿರುವುದನ್ನು ಲಕ್ಷ್ಮಣನು ಹಿಂದೆ ನಿಂತು ವೀಕ್ಷಿಸುತ್ತಿದ್ದಾನೆ. ಇನ್ನೊಂದು ಅಂಕಣದಲ್ಲಿ ಸುಗ್ರೀವನು ತೋರಿಸಿದ ಸಾಲಾದ ಏಳು ತಾಳ ವೃಕ್ಷಗಳನ್ನು ಒಂದೇ ಬಾಣದಿಂದ ರಾಮನು ಛೇದಿಸುತ್ತಿರುವ ದೃಶ್ಯವಿದೆ. ಇಲ್ಲಿಯೂ ಲಕ್ಷ್ಮಣನು ಹಿಂದೆ ನಿಂತು ವೀಕ್ಷಿಸುತ್ತಿದ್ದಾನೆ.

೧೦. ವಾಲಿ-ಸುಗ್ರೀವರ ಕಾಳಗ. ವಾಲಿಯ ಸಂಹಾರ : ಸುಗ್ರೀವನು ರಾಮನ ಸಲಹೆಯಂತೆ ವಾಲಿಯನ್ನು ಕಾಳಗಕ್ಕೆ ಕರೆಯುವುದು. ವಾಲಿ-ಸುಗ್ರೀವರು ಹೋರಾಡುವಾಗ ರಾಮನು ಮರೆಯಲ್ಲಿ ನಿಂತು ಬಾಣ ಪ್ರಯೋಗಿಸುವುದು ಚಿತ್ರಿಸಲಾಗಿದೆ. ವಾಲಿ-ಸುಗ್ರೀವರು ಕಾದಾಡುತ್ತಿರುವಾಗ ಇಬ್ಬರ ರೂಪವೂ ಒಂದೇ ತೆರನಾಗಿ ಕಂಡು ರಾಮನಿಗೆ ವಾಲಿಯನ್ನು ಗುರುತಿಸಿ ಬಾಣ ಪ್ರಯೋಗಿಸಲು ಆಗದೇ ಸುಗ್ರೀವನನ್ನು ತಿರುಗಿ ಕರೆದು ಗುರುತಿಗಾಗಿ ಕೊರಳಲ್ಲಿ ಸಸ್ಯಗಳ ಬಳ್ಳಿಯಿಂದ ಮಾಡಿದ ಮಾಲೆ ಹಾಕಿ ಕಳಿಸುತ್ತಾನೆ. ಇಲ್ಲಿನ ಚಿತ್ರದಲ್ಲಿ ಸುಗ್ರೀವನ ಕೊರಳಲ್ಲಿ ದಪ್ಪನಾದ ಬಳ್ಳಿಯ ಮಾಲೆ ಇದೆ. ವಾಲಿ ಸುಗ್ರೀವ ಇಬ್ಬರೂ ನೀಲಿ ಬಣ್ಣದಲ್ಲಿದ್ದು, ರಾಮನು ಹಸಿರು ಬಣ್ಣದಲ್ಲಿ ಚಿತ್ರಿಸಿದ್ದಾನೆ. ವಾಲಿ ಸುಗ್ರೀವರ ಕಾಳಗದಲ್ಲಿ ಮರೆಯಲ್ಲಿ ನಿಂತು ಬಾಣ ಬಿಡುತ್ತಿರುವ ರಾಮನ ಕಾಲಿನ ಹತ್ತಿರ ಚಿಕ್ಕದಾಗಿ ಆಂಜನೇಯನು ಚಿತ್ರಿಸಲ್ಪಟ್ಟಿದ್ದಾನೆ. ಮುಂದಿನ ಅಂಕಣದಲ್ಲಿ ವಾಲಿಯು ರಾಮ ಬಾಣದಿಂದ ಕೆಳಗುರುಳಿ ಬಿದ್ದಿದ್ದು, ಸುಗ್ರೀವನು ಸಾಯುತ್ತಿರುವ ವಾಲಿಯ ತಲೆಯನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡಿದ್ದಾನೆ. ಪಕ್ಕದಲ್ಲಿ ವಾಲಿಯ ಮಗ ಅಂಗದ ಮಡದಿ ತಾರಾ ಪ್ರಲಾಪಿಸುತ್ತಿದ್ದಾರೆ.

೧೧. ಸುಗ್ರೀವನ ಪಟ್ಟಾಭಿಷೇಕ : ವಾಲಿಯ ಮರಣದ ನಂತರ ಆತನ ಕಳೇಬರವನ್ನು ಅಂತ್ಯ ಸಂಸ್ಕಾರಗೊಳಿಸುತ್ತಿರುವುದು ಮತ್ತು ಸುಗ್ರೀವನಿಗೆ ಪಟ್ಟಾಭಿಷೇಕ ಮಾಡುತ್ತಿರುವುದು ಚಿತ್ರಿಸಿದೆ. ವಾಲಿಯ ಅಂತ್ಯ ಸಂಸ್ಕಾರದ ದೃಶ್ಯದಲ್ಲಿ ಆತನ ಕಳೇಬರವನ್ನು ಹಳದಿ ಬಣ್ಣದ ಒಂದು ವೃತ್ತದಲ್ಲಿ ಇರುವಂತೆ ಚಿತ್ರಿಸಿ ದಹನ ಕ್ರಿಯೆಯನ್ನು ಸಾಂಕೇತಿಸಲಾಗಿದೆ. ಚಿತೆಯ ಪಕ್ಕದಲ್ಲಿ ಅಂಗದ, ಸುಗ್ರೀವ, ತಾರಾ ನಿಂತಿದ್ದರೆ ಸ್ವಲ್ಪ ದೂರದಲ್ಲಿ ರಾಮ-ಲಕ್ಷ್ಮಣ-ಆಂಜನೇಯ ಚಿತ್ರಿಸಲ್ಪಟ್ಟಿದ್ದಾರೆ. ಸುಗ್ರೀವನ ಪಟ್ಟಾಭಿಷೇಕದ ಅಂಕಣದಲ್ಲಿ ಮಂಟಪದ ಆಕಾರದಲ್ಲಿರುವ ಸಿಂಹಾಸನದಲ್ಲಿ ಸುಗ್ರೀವ ಕುಳಿತಿದ್ದು ಪಕ್ಕದಲ್ಲಿ ಅಂಗದ, ತಾರಾ, ಲಕ್ಷ್ಮಣ ನಿಂತುಕೊಂಡಿದ್ದಾರೆ.

ಈ ಪಟ್ಟಿಕೆಯ ಕೆಳಭಾಗವು ಸಂಪೂರ್ಣ ನಾಶವಾಗಿದ್ದು ಅಲ್ಲಿ ರಾಮಾಯಣದ ಯುದ್ಧ ದೃಶ್ಯಗಳು ಅಲ್ಪಸ್ವಲ್ಪ ತುಂಡು ತುಂಡಾಗಿ ಗೋಚರಿಸುತ್ತಿವೆ. ಸಂಪೂರ್ಣ ಭಿತ್ತಿ ಭಾಗವನ್ನೇ ಇಲ್ಲಿ ಕರೆದು ತೆಗೆಯಲಾಗಿದೆ. ಮಸುಕಾಗಿರುವ ಒಂದು ಅಂಕಣದಲ್ಲಿ ನಾಲ್ಕು ಜನ ವಾನರರು ಇದ್ದು ರಾಮನನ್ನು ಹನುಮಂತನು ಹೆಗಲ

ಮೇಲೆ ಹೊತ್ತುಕೊಂಡಿದ್ದಾನೆ. ಮತ್ತೊಂದು ಅಂಕಣದಲ್ಲಿ ಐರಾವಣ-ಮೈರಾವಣರೆಂಬ ಮಾಯಾವಿ ರಾಕ್ಷಸರಿಂದ ಯುದ್ಧದಲ್ಲಿ ಮೂರ್ಛೆ ಹೋದ ರಾಮಲಕ್ಷ್ಮಣರನ್ನು ಆ ಮಾಯಾವಿಗಳು ಯಜ್ಞ ಬಲಿ ಕೊಡಲು ತೆಗೆದುಕೊಂಡು ಹೋಗದಂತೆ ಆಂಜನೇಯನು ಬಾಲದಿಂದ ಕೋಟೆ ಕಟ್ಟಿ ರಕ್ಷಿಸುತ್ತಿದ್ದಾನೆ. ಹನುಮಂತನ ಬಾಲದ ಕೋಟೆಯಲ್ಲಿ ರಾಮಲಕ್ಷ್ಮಣರು ಚಿತ್ರಿಸಿದ್ದು ಸುತ್ತಲೂ ವಾನರರು ಕಾಯುತ್ತ ನಿಂತಿದ್ದಾರೆ.

*III. ಮೂರನೆಯ ಪಟ್ಟಿಕೆಯ ಚಿತ್ರಗಳು :* ಈ ಪಟ್ಟಿಕೆಯು ೭'×೫' ಪೂಟು ಅಳತೆಯಲ್ಲಿದ್ದು ಮೇಲಿನ ಭಾಗದಲ್ಲಿ ೨೪ ಕೆಳಗಿನ ಭಾಗದಲ್ಲಿ ೨೪ ಚಿತ್ರಗಳಿವೆ. ಈ ಚಿಕ್ಕ ಅಂಕಣಗಳು ೧ ಪೂಟು ಅಗಲ ೬ ಇಂಚು ಎತ್ತರದ ಆಯತಾಕಾರದಲ್ಲಿವೆ. ಮೇಲ್ಭಾಗದಲ್ಲಿ ಕೆಲವು ಚಿತ್ರ ಅಂಕಣಗಳನ್ನು ಭಿತ್ತಿ ಸಮೇತವಾಗಿ ಕಿತ್ತು ತೆಗೆಯಲಾಗಿದೆ. ಈ ಭಾಗದಲ್ಲಿ ವಾನರರು ಸೀತೆಯನ್ನು ಹುಡುಕಲು ಹೊರಟಿರುವುದು, ಆಂಜನೇಯನು ಅಶೋಕವನವನ್ನು ಹಾಳು ಮಾಡುವುದು. ಇಂದ್ರಜಿತುವಿನಿಂದ ಬಂಧಿತನಾಗುವುದು ಹೀಗೆ ಸುಂದರಕಾಂಡದ ದೃಶ್ಯಗಳು ಇಲ್ಲಿ ರಚನೆಯಾಗಿವೆ.

೧. ಸಂಪಾತಿ ಎಂಬ ಪಕ್ಷಿಯಿಂದ ಸೀತೆಯ ಇರುವಿಕೆ ತಿಳಿದದ್ದು : ವಾನರರಿಗೆ ಸೀತೆಯ ಇರುವಿಕೆ ತಿಳಿಯದೇ ಚಿಂತಾಕ್ರಾಂತರಾಗಿ ಮಹೇಂದ್ರ ಪರ್ವತದಲ್ಲಿ ಕುಳಿತು ತಮ್ಮ ತಮ್ಮಲ್ಲೇ ರಾಮ. ಲಕ್ಷ್ಮಣ, ಸೀತೆ, ಜಟಾಯು ಇವರ ವಿಷಯ ಚರ್ಚಿಸುತ್ತಿರುತ್ತಾರೆ. ಆಗ ಜಟಾಯುವಿನ ಸೋದರನಾದ ಸಂಪಾತಿಯು ಜಟಾಯುವಿನ ವಿಷಯವಾಗಿ ವಾನರರನ್ನು ಕೇಳಲು ವಾನರರು ರಾವಣನು ಜಟಾಯುವನ್ನು ಕೊಂದದ್ದು, ಸೀತೆಯನ್ನು ಅಪಹರಿಸಿದ್ದು, ತಾವು ಆಕೆಯನ್ನು ಹುಡುಕಲು ಬಂದದ್ದು ಹೇಳುತ್ತಾರೆ. ಆಗ ಸಂಪಾತಿಯು ತನ್ನ ಹಾಗೂ ಜಟಾಯುವಿನ ವೃತ್ತಾಂತ ಹೇಳುತ್ತದಲ್ಲದೇ ತನ್ನ ದಿವ್ಯ ಶಕ್ತಿಯಿಂದ ಸೀತೆಯು ದಕ್ಷಿಣ ದಿಕ್ಕಿನಲ್ಲಿರುವ ಲಂಕಾ ನಗರಿಯಲ್ಲಿದ್ದಾಳೆ ಎಂಬುದಾಗಿ ಹೇಳುತ್ತದೆ. ಚಿತ್ರದಲ್ಲಿ ಸಂಪಾತಿಯು ವಾನರರಿಗೆ ಸೀತೆಯ ಇರುವಿಕೆ ತಿಳಿಸುತ್ತಿದ್ದು ಅವರು ಅದಕ್ಕೆ ಕೈ ಮುಗಿದು ನಮಿಸುತ್ತಿದ್ದಾರೆ. ಇನ್ನೂ ಕೆಲವು ವಾನರರು ಮಹೇಂದ್ರ ಪರ್ವತದಲ್ಲಿ ಇದ್ದಾರೆ. ಪರ್ವತವನ್ನು ಹಸಿರು. ಕಂದು, ಹಳದಿ ವರ್ಣದ ಗುಂಡಾಕೃತಿಯನ್ನು ಚಿತ್ರಿಸುವ ಮೂಲಕ ಸಾಂಕೇತಿಸಿದ್ದಾರೆ.

೨. ಆಂಜನೇಯನು ಸುರಸೆಯನ್ನು ಜಯಿಸಿದ್ದು : ಲಂಕಾ ಪಟ್ಟಣಕ್ಕೆ ಹಾರಿ ಹೋಗುತ್ತಿರುವಾಗ ದಾರಿಯಲ್ಲಿ ಸುರಸೆ ಎಂಬ ರಾಕ್ಷಸಿಯು ಅಡ್ಡಗಟ್ಟಿ ಬಾಯಿ ತೆರೆದು ಹನುಮಂತನನ್ನು ನುಂಗಲು ದೊಡ್ಡದಾಗಿ ಬಾಯಿ ತೆರೆದಾಗ ಆಂಜನೇಯನು ಚಿಕ್ಕ ರೂಪದಿಂದ ಆಕೆಯ ಬಾಯಲ್ಲಿ ಪ್ರವೇಶಿಸಿ ಹೊರಬರುತ್ತಾನೆ. ಚಿತ್ರದಲ್ಲಿ ರಾಕ್ಷಸಿಯು ಅಗಲ ಬಾಯಿ ತೆರೆದು ಆಂಜನೇಯನಿಗೆ ಅಡ್ಡಗಟ್ಟಿದ್ದು, ಆಂಜನೇಯನು ತಾನು ರಾಮ ಕಾರ್ಯಕ್ಕೆ ಹೊರಟಿದ್ದು ತನಗೆ ತೊಂದರೆ ಕೊಡಬಾರದೆಂದು ಬಿನ್ನವಿಸಿಕೊಳ್ಳುತ್ತಿದ್ದಾನೆ. ರಾಕ್ಷಸಿಯು ಕೆಂಪು ಬಣ್ಣದ ಸೀರೆ ಉಟ್ಟಿದ್ದು ಹಸಿರು ಕುಪ್ಪಸ ಧರಿಸಿದ್ದಾಳೆ.

೩. ಆಂಜನೇಯನು ಲಂಕೆಯಲ್ಲಿ ಸೀತೆಯನ್ನು ಹುಡುಕಿದ್ದು : ಲಂಕೆಯನ್ನು ಪ್ರವೇಶಿಸಿದ ಆಂಜನೇಯನು ಬೇರೆ ಬೇರೆ ಸ್ಥಳಗಳಲ್ಲಿ ಸೀತೆಯನ್ನು ಹುಡುಕುತ್ತಿರುವ ದೃಶ್ಯಗಳು ಚಿಕ್ಕ ಅಂಕಣಗಳಲ್ಲಿ ರಚನೆಯಾಗಿವೆ. ಕುಂಭಕರ್ಣನ ಮನೆಯನ್ನು ಹುಡುಕುವುದು, ಇಂದ್ರಜಿತ ಮೊದಲಾದ ರಾವಣಪುತ್ರರ ಭವನಗಳನ್ನು ಹುಡುಕುತ್ತಿರುವುದು ಚಿತ್ರಿಸಿದೆ. ರಾವಣನ ಭವನದಲ್ಲಿ ಆನೆ, ಕುದುರೆ. ವರಾಹ ಮೊದಲಾದ ಮೃಗಗಳು. ಭಕ್ಷ್ಯ ಭೋಜ್ಯಗಳು, ಲೇಹ್ಯ

ಲೇಪನಗಳು ತುಂಬಿಕೊಂಡಿರುವುದನ್ನು ಆಂಜನೇಯ ಕಾಣುತ್ತಾನೆ. ಚಿತ್ರದಲ್ಲಿ ಈ ವಿವರ ಚಿತ್ರಿಸಿದೆ. ಮತ್ತೆ ಆಂಜನೇಯನು ಪುಷ್ಪಕ ವಿಮಾನದಲ್ಲಿ ಪ್ರವೇಶಿಸಿ ಸೀತೆಯನ್ನು ಹುಡುಕುತ್ತಾನೆ. ಅದರಲ್ಲಿ ಕೆಲವರು ಸ್ತ್ರೀ-ಪುರುಷರು ವಸ್ತ್ರಹೀನರಾಗಿ ಪರಸ್ಪರ ಆಲಿಂಗನದಲ್ಲಿ ಮಲಗಿರುವುದು, ಸಂಜಾತ ಕರ್ಮರಾಗಿ ನಾನಾ ವಿಧವಾಗಿ ಮಲಗಿ ನಿದ್ರಿಸುತ್ತಿರುವ ದೃಶ್ಯಗಳನ್ನು ನೋಡುತ್ತಿರುವಂತೆ ಚಿತ್ರಿಸಿದೆ. ನಂತರ ರಾವಣನ ಅಂತಃಪುರವನ್ನು ಪ್ರವೇಶಿಸಿ ಅಲ್ಲಿ ಹಂಸತೂಲಿಕಾ ತಲ್ಪದ ಮೇಲೆ ಮಲಗಿರುವ ರಾವಣನನ್ನು ನೋಡಿ ಅಲ್ಲಿಯೂ ಸೀತೆ ಇಲ್ಲದ್ದು ತಿಳಿದು ಆಂಜನೇಯನು ಚಿಂತಾಕ್ರಾಂತನಾಗುತ್ತಾನೆ. ಚಿತ್ರದಲ್ಲಿ ರಾವಣನು ಹಂಸತೂಲಿಕಾ ಮಂಚದ ಮೇಲೆ ಮಲಗಿದ್ದರೆ. ಆಂಜನೇಯನು ಮೇಲೆ ಚಿಕ್ಕ ರೂಪದಲ್ಲಿ ಮರೆಯಾಗಿ ಕುಳಿತು ನೋಡುತ್ತಿದ್ದಾನೆ. ಆಂಜನೇಯನು ಸೀತೆಯನ್ನು ಲಂಕಾನಗರಿಯಲ್ಲಿ ಹುಡುಕುತ್ತಿರುವ ಪ್ರತಿಯೊಂದು ದೃಶ್ಯದಲ್ಲಿಯೂ ಮೇಲ್ಭಾಗದಲ್ಲಿ ಚಿಕ್ಕದಾಗಿ ಇಣಿಕಿ ನೋಡುತ್ತಿರುವಂತೆ ಚಿತ್ರಿಸಲ್ಪಟ್ಟಿದ್ದಾನೆ. ಅರಮನೆಯಲ್ಲಿ ಎಲ್ಲಿಯೂ ಸೀತಾದೇವಿ ಕಾಣದೇ ಹೋಗಲು ಅಶೋಕವನಕ್ಕೆ ಹಾರಿ ಹೋಗುತ್ತಾನೆ.

೪. ಆಂಜನೇಯನು ಸೀತೆಯನ್ನು ಕಂಡು ರಾಮ ಮುದ್ರಿಕೆಯನ್ನು ಕೊಟ್ಟಿದ್ದು : ಅಶೋಕವನದಲ್ಲಿ ಸೀತೆಯನ್ನು ಕಂಡ ಆಂಜನೇಯನು ಗಿಡದಿಂದ ಕೆಳಗಿಳಿದು ಬಂದು ತನ್ನ ವೃತ್ತಾಂತ ಹೇಳುತ್ತಿರುವುದು. ಸೀತೆಗೆ ನಮಸ್ಕರಿಸುತ್ತಿರುವುದು ಒಂದು ಅಂಕಣದಲ್ಲಿ ಚಿತ್ರಿಸಿದ್ದರೆ. ಇನ್ನೊಂದು ಅಂಕಣದಲ್ಲಿ ಸೀತಾದೇವಿಗೆ ರಾಮ ಮುದ್ರಿಕೆಯನ್ನು ಕೊಟ್ಟು ಅವಳಿಂದ ಚೂಡಾಮಣಿಯನ್ನು ಪಡೆಯುತ್ತಿರುವುದು ಚಿತ್ರಿಸಿದೆ. ಗಿಡದ ಬುಡದಲ್ಲಿ ಅಲಂಕಾರಿಕವಾಗಿರುವ ಕಟ್ಟೆಯಲ್ಲಿ ಕುಳಿತಿರುವ ಸೀತಾದೇವಿಯು ಒಂದು ಕಡೆಗೆ ಕೆಂಪು ಸೀರೆ ಉಟ್ಟುಕೊಂಡಿದ್ದರೆ ಇನ್ನೊಂದು ಕಡೆಗೆ ಬಿಳಿ ಸೀರೆ ಉಟ್ಟಂತೆ ಚಿತ್ರಿಸಲ್ಪಟ್ಟಿದೆ. ಹಾಗೆಯೇ ಆಂಜನೇಯನಿಗೂ ಸಹಿತ ಒಂದು ಕಡೆಗೆ ಕಂದು ಚಡ್ಡಿ ಇನ್ನೊಂದು ಕಡೆಗೆ ಬಿಳಿ ಚಡ್ಡಿ ಚಿತ್ರಿಸಲಾಗಿದೆ.

೫. ಆಂಜನೇಯನು ಅಶೋಕವನವನ್ನು ಧ್ವಂಸ ಮಾಡಿದ್ದು : ಸೀತಾದೇವಿಗೆ ನಮಿಸಿ ಆಂಜನೇಯನು ತಿರುಗಿ ಹೊರಡುವ ಮೊದಲು ರಾವಣನಿಗೆ ತನ್ನ ಶಕ್ತಿ ಪರಿಚಯಿಸಬೇಕೆಂದು ಅಶೋಕವನವನ್ನು ಹಾಳು ಮಾಡುತ್ತಾನೆ. ವೃಕ್ಷಗಳನ್ನು ಕೀಳುತ್ತಾ ಅವುಗಳಲ್ಲಿಯ ಹಣ್ಣುಗಳನ್ನು ಹರಿಯುತ್ತ ಪ್ರಾಸಾದಗಳನ್ನು ತಳ್ಳುತ್ತ ಮನ ಬಂದಂತೆ ವನವನ್ನು ಹಾಳುಗೆಡುವುತ್ತಾನೆ. ಆಂಜನೇಯನು ವೃಕ್ಷಗಳನ್ನು ಕೀಳುತ್ತಿರುವುದು ಮರಗಳಿಂದ ಹಣ್ಣುಗಳನ್ನು ಉದುರಿಸುತ್ತಿರುವುದು ಚಿತ್ರಿಸಲಾಗಿದೆ. ಮರಗಳಿಂದ ಹಣ್ಣುಗಳು ರಾಶಿ ರಾಶಿಯಾಗಿ ಬೀಳುತ್ತಿವೆ. ಅದರಲ್ಲಿ ಕೆಲವು ಹಣ್ಣುಗಳನ್ನು ಆಂಜನೇಯ ತಿನ್ನುತ್ತಿದ್ದಾನೆ. ಗಿಡಗಳು ಹಸಿರಾಗಿದ್ದು ಅದರ ಬೊಡ್ಡೆಗಳು ಮತ್ತು ಹಣ್ಣುಗಳು ಹಳದಿ ವರ್ಣದಿಂದ ಚಿತ್ರಿಸಿವೆ. ಆಂಜನೇಯ ನೀಲವರ್ಣದಲ್ಲಿದ್ದಾನೆ. ಹೆಚ್ಚಿನ ವರ್ಣವೈವಿಧ್ಯ ಕಂಡು ಬರದಿದ್ದರೂ ಆಕರ್ಷಕವಾಗಿ ಕಾಣುತ್ತವೆ. ಹಿನ್ನೆಲೆ ವರ್ಣ ಕೆಂಪಿನಿಂದ ಕೂಡಿದೆ.

೬. ಆಂಜನೇಯನು ಕಿಂಕರರೆಂಬ ರಾಕ್ಷಸರನ್ನು ಕೊಂದದ್ದು : ಆಂಜನೇಯನು ಅಶೋಕವನವನ್ನು ಹಾಳು ಮಾಡುತ್ತಿರುವ ಸುದ್ದಿಯನ್ನು ತಿಳಿದ ರಾವಣನು ಆತನನ್ನು ಹಿಡಿದು ತರಲು ಕಿಂಕರರೆಂಬ ರಾಕ್ಷಸರನ್ನು ಕಳಿಸುತ್ತಾನೆ. ಅವರು ರಥದಲ್ಲಿ ಆನೆ-ಕುದುರೆಗಳ ಮೇಲೆ ಸೈನ್ಯ ಸಮೇತರಾಗಿ ಬಂದು ಆಂಜನೇಯನನ್ನು ಬಂಧಿಸಲು ತೊಡಗುತ್ತಾರೆ. ಅದು ಸಾಧ್ಯವಾಗದೇ ಆಂಜನೇಯನ ಜೊತೆ ಯುದ್ಧ ಮಾಡಿ ಹತರಾಗುತ್ತಾರೆ.

ಚಿತ್ರದಲ್ಲಿ ಆಂಜನೇಯನ ಪ್ರಹಾರದಿಂದ ತತ್ತರಿಸಿದ ಕಿಂಕರ ರಾಕ್ಷಸರು ಚೆಲ್ಲಾಪಿಲ್ಲಿಯಾಗಿ ಬಿದ್ದು ಮರಣ ಹೊಂದಿದ್ದಾರಲ್ಲದೇ ಆನೆ. ಕುದುರೆಗಳೂ ಹತವಾಗಿವೆ. ಕಿಂಕರ ರಾಕ್ಷಸರು ಹತರಾದ ನಂತರ ರಾವಣನು ವಿರೂಪಾಕ್ಷ. ಯುಪಾಕ್ಷ. ದುರ್ಧರ. ಪ್ರಘ. ಭಾಸಕರ್ಣರೆಂಬ ರಾಕ್ಷಸರನ್ನು ಆಂಜನೇಯನ ಬಳಿಗೆ ಕಳಿಸುತ್ತಾನೆ. ಅವರೂ ಸಹಿತ ಆಂಜನೇಯನ ಪ್ರಹಾರಗಳಿಂದ ಮರಣ ಹೊಂದುತ್ತಾರೆ. ಚಿತ್ರದಲ್ಲಿ ಸಾಲಾದ ಅಂಕಣದಲ್ಲಿ ಈ ರಾಕ್ಷಸರರನ್ನು ಆಂಜನೇಯನು ಸಂಹರಿಸುತ್ತಿರುವ ದೃಶ್ಯಗಳಿವೆ.

೭. ಅಕ್ಷಯಕುಮಾರನ ಮರಣ : ವೀರಾಧಿವೀರ ರಾಕ್ಷಸರೆಲ್ಲ ಹತರಾದಾಗ ರಾವಣನು ತನ್ನ ಕಿರಿಯ ಮಗ ಅಕ್ಷಯನನ್ನು ಆಂಜನೇಯನ ಬಳಿಗೆ ಕಳಿಸುತ್ತಾನೆ. ರಥಾರೂಢನಾಗಿ ಆಂಜನೇಯನೊಂದಿಗೆ ಯುದ್ಧಕ್ಕೆ ನಿಂತ ಅಕ್ಷಯ ಕುಮಾರನ ರಥ-ಕುದುರೆಗಳನ್ನು ಆಂಜನೇಯನು ನಾಶ ಮಾಡಿದಾಗ ಪಾದಾಚಾರಿಯಾಗಿಯೇ ಆಂಜನೇಯನ ಮೇಲೆ ಪ್ರಹಾರ ಮಾಡುತ್ತಾನೆ. ಚಿತ್ರದಲ್ಲಿ ಆಂಜನೇಯನನ್ನು ಪಾದಾಚಾರಿಯಾಗಿಯೇ ಅಕ್ಷಯಕುಮಾರನು ಎದುರಿಸುತ್ತಿದ್ದಾನೆ. ಕೊನೆಗೆ ಆಂಜನೇಯನ ಪದಾಘಾತದಿಂದ ರಾವಣ ಪುತ್ರನು ಹತನಾಗುತ್ತಿರುವ ದೃಶ್ಯವಿದೆ. ರಾಕ್ಷಸನಾದ ಅಕ್ಷಯಕುಮಾರನನ್ನು ದೊಡ್ಡದಾಗಿ ಆಂಜನೇಯನನ್ನು ಚಿಕ್ಕದಾಗಿ ಚಿತ್ರಿಸಲಾಗಿದೆ. ಇಲ್ಲಿ ಎಲ್ಲ ಕಡೆಗೂ ರಾಕ್ಷಸರನ್ನು ದೊಡ್ಡದಾಗಿ ಆಂಜನೇಯನನ್ನು ಚಿಕ್ಕದಾಗಿ ಚಿತ್ರಿಸಲಾಗಿದೆ.

೮. ಇಂದ್ರಜಿತುವು ಆಂಜನೇಯನನ್ನು ಬ್ರಹ್ಮಾಸ್ತ್ರದಿಂದ ಬಂಧಿಸಿದ್ದು : ಅನೇಕ ರಾಕ್ಷಸವೀರರು, ಮಗನಾದ ಅಕ್ಷಯಕುಮಾರ ಹತರಾದ ನಂತರ ರಾವಣನು ಪರಮವೀರನಾದ ಇಂದ್ರಜಿತುವನ್ನು ಕಳಿಸುತ್ತಾನೆ. ಸ್ವಲ್ಪ ಸಮಯದವರೆಗೆ ಹೋರಾಡಿದ ಇಂದ್ರಜಿತುವು ಈತನು ಅಸಾಮಾನ್ಯ ಶೂರನೆಂದು ಬ್ರಹ್ಮಾಸ್ತ್ರ ಪ್ರಯೋಗಿಸಿ ಆಂಜನೇಯನನ್ನು ಬಂಧಿಸುತ್ತಾನೆ. ಚಿತ್ರದಲ್ಲಿ ಇಂದ್ರಜಿತುವಿನ ಬ್ರಹ್ಮಾಸ್ತ್ರದಿಂದ ಬಂಧಿಸಲ್ಪಟ್ಟ ಆಂಜನೇಯ, ಪಕ್ಕದಲ್ಲಿ ಇಂದ್ರಜಿತು ಇದ್ದಾರೆ. ಆಂಜನೇಯನಿಗೆ ಬಂಧಿಸಲ್ಪಟ್ಟಿರುವ ಪಾಶವನ್ನು ಗುಂಡು ಗುಂಡಾದ ವಿನ್ಯಾಸದಿಂದ ಚಿತ್ರಿಸಿದೆ.

೯. ಕಪಿಗಳು ಲಂಕೆಗೆ ಸೇತುವೆಯನ್ನು ನಿರ್ಮಿಸಿದ್ದು : ಚಿತ್ರಪಟ್ಟಿಕೆಯನ್ನು ವಿಭಾಗಿಸುವ ಮಧ್ಯದ ಉದ್ದನಾದ ಅಂಕಣದಲ್ಲಿ ಕಪಿಗಳು ಸಮುದ್ರಕ್ಕೆ ಸೇತುವೆಯನ್ನು ಕಟ್ಟುವ ದೃಶ್ಯ ಚಿತ್ರಿತವಾಗಿದೆ. ಕಪಿಗಳು ಗುಡ್ಡ ಪರ್ವತವನ್ನು ತಂದು ಕೊಡಲು ನಳನು ಅವುಗಳನ್ನು ಹೊಂದಿಸುತ್ತ ಸೇತುವೆ ಕಟ್ಟುತ್ತಿದ್ದಾನೆ. ಸೇತುವೆ ಕಟ್ಟುವ ಕೆಲಸವಲ್ಲಿ ಅಳಿಲೊಂದು ಪಾಲ್ಗೊಂಡಿದ್ದು ಅದೂ ಸಹಿತ ಚಿಕ್ಕ ಚಿಕ್ಕ ಕಲ್ಲುಗಳನ್ನು ತಂದು ಕೊಡುತ್ತಿದೆ. ಸೇತುವೆ ಕಟ್ಟಲು ಅನೇಕ ಬೃಹತ್ ಬಂಡೆಗಳನ್ನು ಹಾಕಿದರೂ ಅವುಗಳೆಲ್ಲ ಮುಳುಗಿ ಹೋಗುತ್ತಿದ್ದು ಇದರಿಂದ ಕಂಗಾಲಾದ ವಾನರರು ಚಿಂತಿಸುತ್ತಿರಲು ರಾಮನಾಮದ ಮಹಿಮೆಯನ್ನು ತಿಳಿದುಕೊಂಡ ನಳನು ಸೇತುವೆಗೆ ಬಳಸುವ ಪ್ರತಿಯೊಂದು ಕಲ್ಲುಗಳ ಮೇಲೆಯೂ 'ರಾಮ' ಎಂಬ ಅಕ್ಷರ ಬರೆದು ನೀರಿಗೆ ಹಾಕುತ್ತಾನೆ. ಆಗ ಕಲ್ಲುಗಳು ಮುಳುಗದೇ ತೇಲುತ್ತ ನಿಂತು ಅದರಿಂದ ಸೇತುವೆಯು ಬೇಗ ಮುಗಿಯಿತು ಎಂದು ರಾಮಾಯಣದಲ್ಲಿ ಹೇಳಲ್ಪಟ್ಟಿದೆ. ಈ ಚಿತ್ರದಲ್ಲಿಯೂ ನಳನು ಪ್ರತಿಯೊಂದು ಕಲ್ಲುಗಳಿಗೆ 'ರಾಮ' ಎಂಬ ಅಕ್ಷರಗಳನ್ನು ಬರೆದು ಅವುಗಳನ್ನು ಹೊಂದಿಸುತ್ತಿದ್ದಾನೆ. ಕಲ್ಲುಗಳು ಚೌಕಾಕಾರವಾಗಿದ್ದು, ಕಂದು, ಹಳದಿ, ಕೆಂಪು, ಹಸಿರು, ದಟ್ಟ ನೀಲಿ ಹೀಗೆ ವಿವಿಧ ಬಣ್ಣಗಳಲ್ಲಿವೆ. ಸಮುದ್ರದಲ್ಲಿ ಮೀನು. ಹಾವು, ಏಡಿ, ಆಮೆಗಳಂತಹ ಜಲಚರಗಳಿವೆಯಲ್ಲದೇ

ಮೀನುಗಳನ್ನು ತಿನ್ನಲು ಕೊಕ್ಕರೆಯು ಕುಳಿತಂತೆ ಚಿತ್ರಿಸಿದೆ. ಈ ಪಟ್ಟಿಕೆಯ ಕೆಳಗಿನ ಭಾಗದಲ್ಲಿಯ ಎಲ್ಲ ಚಿತ್ರಗಳು ಯುದ್ಧಕಾಂಡಕ್ಕೆ ಸಂಬಂಧಿಸಿವೆ. ಸೇತುವೆಯನ್ನು ಕಟ್ಟಿ ಲಂಕೆಯನ್ನು ಪ್ರವೇಶಿಸಿದ ಕಪಿ ಸೈನ್ಯವು ರಾವಣನ ಸೈನ್ಯದ ಜೊತೆ ಯುದ್ಧ ಮಾಡುವ ವಿವಿಧ ದೃಶ್ಯಗಳು ಇಲ್ಲಿ ಚಿತ್ರಿಸಿವೆ.

೧೦. ರಾವಣ ಸುಗ್ರೀವರ ಯುದ್ಧ : ರಾಮ-ಲಕ್ಷ್ಮಣರ ಸಮೇತ ವಾನರ ಸೈನ್ಯವು ಲಂಕೆಯಲ್ಲಿ 'ಸುವೇಲಾದ್ರಿ' ಎಂಬ ಪರ್ವತದಲ್ಲಿ ಬೀಡು ಬಿಟ್ಟಿರುವಾಗ ಅದರ ತುದಿಯಲ್ಲಿ ನಿಂತು ಲಂಕೆಯಲ್ಲಿ ನಡೆಯುವ ಚಟುವಟಿಕೆಗಳನ್ನು ವಾನರ ಸೈನ್ಯ. ರಾಮ-ಲಕ್ಷ್ಮಣರು ವೀಕ್ಷಿಸುತ್ತಲಿರುತ್ತಾರೆ. ಸುಗ್ರೀವನು ಪರ್ವತದ ಮೇಲಿನಿಂದ ರಾವಣನನ್ನು ನೋಡಿ ಅಲ್ಲಿಂದಲೇ ಲಂಘಿಸಿ ನೇರವಾಗಿ ಮೇಲೇರಗಿ ಯುದ್ಧ ಮಾಡುತ್ತಾನೆ. ಸುಗ್ರೀವನು ಮೇಲೆ ಹಾರಿ ರಾವಣನ ಹತ್ತೂ ತಲೆಯ ಕಿರೀಟಗಳು ಕೆಳಕ್ಕುರುಳುವಂತೆ ಹೊಡೆಯುತ್ತಿರಲು ರಾವಣನು ಕೋಪ ತಾಳಿ ಸುಗ್ರೀವನನ್ನು ಹೊಡೆಯುತ್ತಾನೆ. ಸುಗ್ರೀವನು ಪುನಃ ಮೇಲಕ್ಕೆ ಹಾರಿ ರಾವಣನನ್ನು ಹೊಡೆಯುತ್ತ ತನ್ನ ಚೂಪಾದ ಉಗುರುಗಳಿಂದ ಪರಚಿ ಗಾಯ ಮಾಡುತ್ತಾನೆ. ಇಲ್ಲಿ ಸುಗ್ರೀವನು ಮೇಲೆ ಹಾರಿ ರಾವಣನನ್ನು ಹೊಡೆದಿದ್ದು ಆತನ ತಲೆಯ ಮೇಲಿರುವ ಕಿರೀಟಗಳೆಲ್ಲ ಚೆಲ್ಲಾಪಿಲ್ಲಿಯಾಗಿ ಬೀಳುತ್ತಿವೆ. ರಾವಣನ ಕಾವಲು ಭಟರೂ ಸಹಿತ ಸುಗ್ರೀವನ ಏಟಿನಿಂದ ಕೆಳಗುರುಳಿ ಬಿದ್ದಿದ್ದಾರೆ. ಇನ್ನೊಂದು ಕಡೆಗೆ ರಾವಣನನ್ನು ಕೈಯಿಂದ ಎಳೆದಾಡಿ ಪರಚಿ ಗಾಯಗೊಳಿಸುತ್ತಿದ್ದಾನೆ. ರಾವಣನು ಉದ್ದ ತೋಳಿನ ಅಂಗಿಯನ್ನು ಧರಿಸಿದ್ದು ನಡಕ್ಕೆ ಉತ್ತರೀಯವನ್ನು ಕಟ್ಟಿಕೊಂಡಿದ್ದಾನೆ. ರಾವಣನ ಆಕಾರ ದೊಡ್ಡದಾಗಿಯೂ ಸುಗ್ರೀವನ ಆಕಾರ ಚಿಕ್ಕದಾಗಿಯೂ ಚಿತ್ರಿಸಿದೆ.

೧೧. ಅಂಗದನ ರಾಯಭಾರ : ಶ್ರೀರಾಮನು ಅಂಗದನನ್ನು ರಾವಣನ ಹತ್ತಿರ ರಾಯಭಾರಿಯಾಗಿ ಕಳಿಸಿ ಶರಣಾಗತನಾಗಲು ತಿಳಿಸುತ್ತಾನೆ. ರಾಯಭಾರಿಯಾಗಿ ಬಂದ ಅಂಗದನು ಈ ವಿಷಯ ತಿಳಿಸಿದಾಗ ಕೋಪಾವಿಷ್ಟನಾದ ರಾವಣನು ಅಂಗದನನ್ನು ಶಿಕ್ಷಿಸಲು ಮುಂದಾದಾಗ ಆತ ಮೇಲಕ್ಕೆ ಹಾರಿ ರಾವಣನ ತಲೆಯ ಕಿರೀಟಗಳು ಉರುಳುವಂತೆ ಹೊಡೆಯುತ್ತಾನೆ. ಇಲ್ಲಿ ಅಂಗದನು ಚಿಕ್ಕದಾಗಿ ರಾವಣನು ದೊಡ್ಡದಾಗಿ ಚಿತ್ರಿಸಿದೆ. ರಾವಣನು ಅಂಗದನ ಪ್ರಹಾರಕ್ಕೆ ಅಂಜಿ ಓಡಿ ಹೋದಾಗ ಇಂದ್ರಜಿತುವು ರಾಕ್ಷಸ ಸೈನಿಕರಿಗೆ ಅಂಗದನನ್ನು ಹೊಡೆಯಿರಿ ಎನಲು ಅವರು ಅಂಗದನ ಮೇಲೆ ಬಿದ್ದಾಗ ಆತ ಅವರನ್ನೆಲ್ಲ ಹೊಡೆದು ಕೊಲ್ಲುತ್ತಾನೆ. ಇಂದ್ರಜಿತುವು ತಾನೇ ಅಂಗದನ ಮೇಲೆ ಬಿದ್ದಾಗ ಆತ ಅವರನ್ನೆಲ್ಲ ಹೊಡೆದು ಕೊಲ್ಲುತ್ತಾನೆ. ಇಂದ್ರಜಿತುವು ತಾನೇ ಅಂಗದನನ್ನು ಎದುರಿಸಲು ಅಂಗದನ ಮುಷ್ಟಿ ಪ್ರಹಾರಗಳಿಂದ ತತ್ತರಿಸಿದ ಇಂದ್ರಜಿತು ಓಡಿ ಹೋಗುತ್ತಾನೆ. ಇಲ್ಲಿ ಅಂಗದನು ರಾಕ್ಷಸ ವೀರರನ್ನು ಕೊಲ್ಲುತ್ತಿರುವುದು. ಇಂದ್ರಜಿತುವನ್ನು ಮುಷ್ಟಿಯಿಂದ ಗುದ್ದುತ್ತಿರುವುದು ಚಿತ್ರಿಸಿದೆ. ಉಳಿದಂತೆ ಈ ಕೆಳಭಾಗದ ಚಿತ್ರಗಳ ಬಣ್ಣ ಉದುರಿ ಹೋಗಿದ್ದು ಚಿತ್ರಗಳು ಸ್ಪಷ್ಟವಾಗಿ ಕಂಡು ಬರುವುದಿಲ್ಲ. ಚಿತ್ರಗಳು ಕೆಳಭಾಗದಲ್ಲಿರುವುದರಿಂದ ಗೀಚಿ ನಾಶ ಮಾಡಲಾಗಿದೆ. ಈ ಚಿತ್ರಗಳು ರಾಮ ರಾವಣರ ಯುದ್ಧಕ್ಕೆ ಸಂಬಂಧಿಸಿದ್ದು ಧೂಮ್ರಾಕ್ಷನು ಕಪಿ ಸೇನೆಯ ಮೇಲೆ ಯುದ್ಧ ಮಾಡುತ್ತಿರುವುದು. ನೀಲನು ಪ್ರಹಸ್ತನನ್ನು ಕೊಂದು ರಾವಣನ ಜೊತೆ ಯುದ್ಧದಲ್ಲಿ ತೊಡಗಿರುವುದು. ರಾವಣ-ಲಕ್ಷ್ಮಣರ ಯುದ್ಧ, ರಾಮ-ರಾವಣರ ಯುದ್ಧ, ಕುಂಭಕರ್ಣನ ಘೋರ ಯುದ್ಧ. ಅತಿಕಾಯನು ವಾನರ ಸೇನೆಯನ್ನು ಮುತ್ತಿರುವುದು, ಇಂದ್ರಜಿತುವಿನ ಯುದ್ಧ ಹೀಗೆ ಯುದ್ಧ ಚಿತ್ರಗಳಿವೆ. ಕೆಲವು ಕಡೆ ರಾಮ-ಲಕ್ಷ್ಮಣರು ವಾನರರ ಬೆನ್ನ ಮೇಲೆ ಕುಳಿತುಕೊಂಡು ಯುದ್ಧದಲ್ಲಿ ತೊಡಗಿದ್ದಾರೆ.

ಕುಂಭಕರ್ಣನ ಯುದ್ಧದಲ್ಲಿ ಕುಂಭಕರ್ಣನು ಬೃಹದಾಕಾರವಾಗಿ ಚಿತ್ರಿಸಿದ್ದು ರಾಮ-ಲಕ್ಷ್ಮಣರ ಬಾಣಗಳು ಆತನ ಮೇಲೆ ಮಳೆಯಂತೆ ಸುರಿಯುತ್ತಿವೆ. ರಾವಣನು ಐದು ಕುದುರೆಗಳಿಂದ ಎಳೆಯಲ್ಪಟ್ಟ ರಥದಲ್ಲಿ ಕುಳಿತಿದ್ದು, ಹತ್ತು ತಲೆಗಳನ್ನು ಹೊಂದಿದ್ದಾನೆ. ಆತನಿಗೆ ಎದುರಾಗಿರುವ ರಾಮ-ಲಕ್ಷ್ಮಣರು ಪಾದಚಾರಿಗಳಾಗಿಯೇ ಯುದ್ಧ ಮಾಡುತ್ತಿದ್ದಾರೆ. ಇಂದ್ರಜಿತುವಿನ ಯುದ್ಧ ದೃಶ್ಯದಲ್ಲಿ, ಇಂದ್ರಜಿತುವಿನ ನಾಗಪಾಶ ಅಸ್ತ್ರದಿಂದ ರಾಮ-ಲಕ್ಷ್ಮಣರು ಮೂರ್ಛಿತರಾಗಿದ್ದಾರೆ. ರಾಮ-ಲಕ್ಷ್ಮಣರ ಬಾಣದ ಹೊಡೆತದಿಂದ ಕುಂಭಕರ್ಣನು ಪರ್ವತದಂತೆ ಉರುಳಿ ಬಿದ್ದಿದ್ದಾನೆ. ಮತ್ತೆ ಕೆಲವು ಕಡೆ ವಾನರರ ದಾಳಿಯಿಂದ ಆನೆಗಳು, ರಥಗಳು, ಕುದುರೆಗಳು ಜಜ್ಜಲ್ಪಟ್ಟಿವೆ.

*IV. ನಾಲ್ಕನೆಯ ಪಟ್ಟಿಕೆಯ ಚಿತ್ರಗಳು :* ಪಶ್ಚಿಮ ಗೋಡೆಯ ನಾಲ್ಕನೆಯ ಚಿತ್ರ ಪಟ್ಟಿಕೆಯು ೫' × ೨.೫' ಅಳತೆಯಲ್ಲಿದ್ದು ಉಳಿದ ಕಡೆಯಂತೆ ಇಲ್ಲಿಯೂ ಪಟ್ಟಿಕೆಯನ್ನು ಮಧ್ಯದಲ್ಲಿ ವಿಭಾಗಿಸಿ ಮೇಲೆ ಕೆಳಗೆ ಚಿತ್ರಗಳನ್ನು ರಚಿಸಿದ್ದಾರೆ. ಮೇಲಿನ ಭಾಗದಲ್ಲಿ ಎರಡು ಅಲಂಕಾರಿಕ ಮಂಟಪಗಳು ಎದುರು ಬದುರಾಗಿದ್ದ ಅವುಗಳಲ್ಲಿ ಒಂದರಲ್ಲಿ ಒಬ್ಬ, ಇನ್ನೊಂದರಲ್ಲಿ ಇಬ್ಬರು ಋಷಿ ಮುನಿಗಳು ಕುಳಿತಿದ್ದು ಅವರ ಎದುರಿಗೆ ಇಬ್ಬರು ಸ್ತ್ರೀಯರು ಜೊತೆಯಾಗಿ ಗಿಡದ ಬುಡದಲ್ಲಿ ನಿಂತುಕೊಂಡಿದ್ದಾರೆ. ಮೇಲಿನ ಭಾಗದಲ್ಲಿ ಕಾಮಧೇನು ಚಿತ್ರಿಸಿದೆ. ಋಷಿಮುನಿಗಳು ಕುಳಿತ ಮಂಟಪದ ಮೇಲಿನ ಕಳಶದಂತಹ ವಿನ್ಯಾಸದಲ್ಲಿ ಬಾಗಿದ ಕಮಾನಿನಂತಹ ಚಿಕ್ಕ ಆಕೃತಿಗಳಿದ್ದು ಅವುಗಳಿಗೆ ಹಸಿರು, ಕೆಂಪು, ಹಳದಿ, ನೀಲಿ ಹೀಗೆ ವಿವಿಧ ವರ್ಣಗಳನ್ನು ಲೇಪಿಸಲಾಗಿದೆ. ಮಂಟಪದ ಮೇಲಿನ ಇಂತಹದೇ ವಿನ್ಯಾಸವು ಮಹಾಲಿಂಗಪುರದ ಮಠದಲ್ಲಿಯೂ ರಚನೆಯಾಗಿದೆ. ಈ ಚಿತ್ರದ ಕೆಳಭಾಗದಲ್ಲಿ ಮಂಟಪ ಒಂದರಲ್ಲಿ ತಾಯಿ ತನ್ನ ಮಗುವಿಗೆ ಮೊಲೆ ಕುಡಿಸುತ್ತಲಿದ್ದಾಳೆ. ಮಂಟಪದ ಎದುರಿಗೆ ಸ್ವಲ್ಪ ದೂರದಲ್ಲಿಯೇ ಕಿರೀಟ ಧರಿಸಿದ ವ್ಯಕ್ತಿಯೊಬ್ಬ ಇನ್ನೊಬ್ಬ ವ್ಯಕ್ತಿಯನ್ನು ಬಾಣ ಹೊಡೆದು ಕೊಲ್ಲುತ್ತಿದ್ದಾನೆ. ಮಂಟಪದ ಬಲಭಾಗಕ್ಕೆ ತೆಂಗಿನ ಗಿಡವಿದ್ದರೆ ಎಡಬದಿಗೆ ಮತ್ತೊಂದು ವೃಕ್ಷವಿದೆ. ಈ ಚಿತ್ರದ ಕೆಳಗಿನ ಇನ್ನೊಂದು ಚಿತ್ರದಲ್ಲಿ ಮಂಟಪ ಒಂದರಲ್ಲಿ ನಾಲ್ಕು ಕೈಗಳನ್ನು ಹೊಂದಿದ ದೇವಿಯು ಕುಳಿತಿದ್ದು ಕೈಯಲ್ಲಿ ಆಯುಧ ಹಿಡಿದಿದ್ದಾಳೆ. ಅವಳು ಕುಳಿತ ಮಂಟಪದ ಬಲಕ್ಕೆ ಒಬ್ಬ ಸ್ತ್ರೀ ಎಡಕ್ಕೆ ಪುರುಷನೊಬ್ಬ ಪೂಜೆಯಲ್ಲಿ ನಿರತರಾಗಿದ್ದಾರೆ. ಇದು ಬಹುಶಃ ದೇವಾಲಯವನ್ನು ಪ್ರತಿನಿಧಿಸುವ ಚಿತ್ರವಾಗಿರಬಹುದು. ಪಕ್ಕದಲ್ಲಿ ಕಂದು ಮತ್ತು ಬಿಳಿ ಸೀರೆ ಉಟ್ಟುಕೊಂಡ ಇಬ್ಬರು ಸ್ತ್ರೀಯರು ಹೊರಟಿದ್ದು ಒಬ್ಬಳು ಕೈಯಲ್ಲಿ ಫಲಪುಷ್ಪಗಳಿಂದ ತುಂಬಿದ ಆರತಿ ತಟ್ಟೆಯನ್ನು ಹಿಡಿದುಕೊಂಡಿದ್ದಾಳೆ. ಇನ್ನೊಬ್ಬಳು ತಲೆಯ ಮೇಲೆ ಬುಟ್ಟಿ ಹೊತ್ತುಕೊಂಡು ನಡೆಯುತ್ತಿದ್ದಾಳೆ. ಅವರ ಎದುರಿಗೆ ಕಿರೀಟಧಾರಿಯಾದ ವ್ಯಕ್ತಿಯೊಬ್ಬ ಬರುತ್ತಿದ್ದು ಸ್ತ್ರೀಯರು ಆತನೊಡನೆ ಸಂಭಾಷಣೆಯಲ್ಲಿ ತೊಡಗಿದ್ದಾರೆ.

ಪಟ್ಟಿಕೆಯ ಕೆಳಭಾಗದಲ್ಲಿ ಅಲಂಕಾರಿಕವಾದ ಪ್ರಭಾವಳಿಯಲ್ಲಿ ದೇವಿಯ ಚಿತ್ರವನ್ನು ರಚಿಸಲಾಗಿದೆ. ಇದು ಕೆಳಭಾಗದಲ್ಲಿರುವುದರಿಂದ ಹೆಚ್ಚಿನ ಹಾನಿ ಸಂಭವಿಸಿದ್ದು ಚಿತ್ರದ ವಿವರಗಳು ತಿಳಿದು ಬರುವದಿಲ್ಲ. ಎಂಟು ಕೈಗಳನ್ನು ಹೊಂದಿದ ದೇವಿಯು ಪ್ರತಿಯೊಂದು ಕೈಗಳಲ್ಲೂ ಆಯುಧ ಧರಿಸಿದ್ದಾಳೆ. ದೇವಿಯ ಮೈಬಣ್ಣವು ದಟ್ಟ ಹಸಿರುವರ್ಣದಿಂದ ರೂಪಿಸಿದ್ದು ಭೀಕರತೆಯನ್ನು ತಂದಿದೆ. ಕಡುನೀಲಿ ವರ್ಣದ ಸೀರೆಯಲ್ಲಿ ಬಿಳಿಯ ಚುಕ್ಕೆಗಳಿರುವ ಸೀರೆಯನ್ನು ಚಿತ್ರಿಸಿದ್ದು ಅದು ಬಣ್ಣ ಉದುರಿ ಹಾಳಾಗಿದೆ. ದೇವಿಯ ಸುತ್ತಲೂ ಇರುವ ಪ್ರಭಾವಳಿಯಲ್ಲಿ ಮೇಷ, ವೃಷಭ, ಸಿಂಹ, ವೃಶ್ಚಿಕ ಹೀಗೆ ದ್ವಾದಶ ರಾಶಿಗಳನ್ನು ಚಿತ್ರಣ ಮಾಡಲಾಗಿದೆ. ದ್ವಾದಶ ರಾಶಿಗಳ ಚಿತ್ರಣವು ನರಗುಂದದ ಅರಮನೆಯ ಚಿತ್ರದಲ್ಲೂ ಕಂಡು ಬರುತ್ತದೆ.

೩. **ದಕ್ಷಿಣ ಗೋಡೆಯ ಚಿತ್ರಗಳು :** ದಕ್ಷಿಣ ಗೋಡೆಯಲ್ಲಿಯೂ ಉಳಿದ ಕಡೆಗಳಂತೆ ನಾಲ್ಕು ಪಟ್ಟಿಕೆಗಳಲ್ಲಿ ಚಿತ್ರಗಳನ್ನು ರಚಿಸಿದ್ದು ಇವುಗಳನ್ನು ಸಹಿತ ಈ ಕೆಳಗಿನಂತೆ ವಿಂಗಡಿಸಿಕೊಂಡು ವಿವರಿಸಬಹುದು.

I. ಒಂದನೆಯ ಪಟ್ಟಿಕೆಯ ಚಿತ್ರಗಳು

II. ಎರಡನೆಯ ಪಟ್ಟಿಕೆಯ ಚಿತ್ರಗಳು

III. ಮೂರನೆಯ ಪಟ್ಟಿಕೆಯ ಚಿತ್ರಗಳು

IV. ನಾಲ್ಕನೆಯ ಪಟ್ಟಿಕೆಯ ಚಿತ್ರಗಳು

*I. ಒಂದನೆಯ ಪಟ್ಟಿಕೆಯ ಚಿತ್ರಗಳು :* ಪಶ್ಚಿಮದಿಂದ ಪೂರ್ವದ ಕಡೆಗೆ ಇರುವಂತೆ ಒಂದನೆಯ ಪಟ್ಟಿಕೆಯು ೫'×೨.೫' ಪೂಟು ಅಳತೆಯಲ್ಲಿದೆ. ಮಧ್ಯದಲ್ಲಿ ಪಟ್ಟಿಕೆಯನ್ನು ವಿಭಾಗಿಸಿ ಮೇಲೆ ಮೂರು ಕೆಳಗೆ ಮೂರು ವಿಷಯದ ಚಿತ್ರಗಳನ್ನು ಬರೆದಿದ್ದಾರೆ. ಮೇಲಿನ ಭಾಗದಲ್ಲಿ ಕೃಷ್ಣನ ಜೀವನದ ಚಿತ್ರಗಳಿವೆ.

೧. ಕೃಷ್ಣನು ರುಕ್ಮಿಣಿ, ಸತ್ಯಭಾಮೆಯರೊಡನೆ ಕುಳಿತಿರುವುದು : ಈ ಚಿತ್ರದಲ್ಲಿ ಉದ್ದವಾದ ಒಂದು ಪೀಠದಲ್ಲಿ ಕೃಷ್ಣನು ತನ್ನ ಮಡದಿಯರಾದ ರುಕ್ಮಿಣಿ-ಸತ್ಯಭಾಮೆಯರ ಜೊತೆಗೆ ಕುಳಿತು ಸಂಭಾಷಣೆಯಲ್ಲಿ ತೊಡಗಿರುವಂತೆ ಚಿತ್ರಿಸಿದೆ. ಕೃಷ್ಣನಿಗೆ ನಾಲ್ಕು ಕೈಗಳನ್ನು ರಚಿಸಿ ನೀಲಿ ಮೈ ಬಣ್ಣ ಲೇಪಿಸಲಾಗಿದೆ. ಪಂಚೆಯನ್ನು ಹಳದೀ ವರ್ಣದಿಂದ ಚಿತ್ರಿಸಿದೆ. ರುಕ್ಮಿಣಿ-ಸತ್ಯಭಾಮೆಯರು ಕೆಂಪು, ಹಸಿರು ಸೀರೆ ಉಟ್ಟುಕೊಂಡು ಕಡು ನೀಲಿ, ಕಂದು ವರ್ಣದ ಕುಪ್ಪಸ ತೊಟ್ಟಿದ್ದಾರೆ. ಇಬ್ಬರೂ ಮೂಗಿನಲ್ಲಿ ಮೂಗುತಿ ಧರಿಸಿದ್ದು, ತಲೆ ತುಂಬ ಸೆರಗು ಹೊದೆದುಕೊಂಡಿದ್ದಾರೆ. ಇದರ ಕೆಳಗೆ ಇರುವ ಚಿತ್ರದಲ್ಲಿ ಬಾಲಕೃಷ್ಣನ ತುಂಟಾಟಗಳನ್ನು ತಾಳಲಾರದೇ ನಂದಗೋಕುಲದ ಪುರಜನರು ನಂದಗೋಪ ಯಶೋಧೆಯರಿಗೆ ದೂರನ್ನು ಹೇಳುತ್ತಿದ್ದಾರೆ. ಸಾಲಾಗಿ ಬಂದ ಪುರಜನರು ತಮ್ಮ ಒಡೆಯನಾದ ನಂದಗೋಪನೆದುರಿಗೆ ಕೈ ಮುಗಿದು ಬಿನ್ನವಿಸಿಕೊಳ್ಳುತ್ತಿದ್ದಾರೆ. ಪಕ್ಕದಲ್ಲಿ ಯಶೋದೆಯೂ ನಿಂತುಕೊಂಡು ದೂರನ್ನು ಆಲಿಸುತ್ತಿದ್ದಾಳೆ. ಈ ಚಿತ್ರದ ಕೆಳಗಿರುವ ಇನ್ನೊಂದು ಚಿತ್ರದಲ್ಲಿ ಎಡಗಡೆಗೆ ಇಬ್ಬರು ಋಷಿಮುನಿಗಳು ಬಲಗಡೆಗೆ ಇಬ್ಬರು ಭಟ್ಟರು ಕುಳಿತು ಯಜ್ಞ ಮಾಡುತ್ತಿದ್ದಾರೆ. ಹೋಮಕುಂಡದಿಂದ ಅಗ್ನಿಯು ಜ್ವಲಿಸುತ್ತಿದ್ದು ಭಟ್ಟರು, ಋಷಿಮುನಿಗಳು ಹೋಮಕ್ಕೆ ಹವಿಸ್ಸು ಅರ್ಪಿಸುತ್ತಿದ್ದಾರೆ. ಹೋಮಕುಂಡವನ್ನು ಅಲಂಕಾರಿಕ ವಿನ್ಯಾಸದಲ್ಲಿ ರಚಿಸಲಾಗಿದೆ. ಹೂಕುಂಡ ಮಾದರಿಯ ಪಾತ್ರೆಯಂತೆ ಇರುವ ಹೋಮಕುಂಡದ ಮೇಲೆ ಗೆರೆಗಳಿಂದ ನಕ್ಷೆಗಳನ್ನು ರಚಿಸಲಾಗಿದೆ. ಈ ಚಿತ್ರ ಪಟ್ಟಿಕೆಯ ಕೆಳಭಾಗದ ಚಿತ್ರಗಳು ಹಾಳಾಗಿದ್ದು ಹೆಚ್ಚಿನ ವಿವರಗಳು ತಿಳಿಯುವುದಿಲ್ಲ. ಕೃಷ್ಣನು ಮಡದಿಯೊಡನೆ ಕುಳಿತಿರುವುದು, ಯಮುನಾ ತೀರದಲ್ಲಿ ಗೋವುಗಳು, ಗೋಪಾಲಕರು ಮತ್ತು ಗೋಪಿಕಾಸ್ತ್ರೀಯರ ಜೊತೆಗೆ ಕೃಷ್ಣ ವಿಹರಿಸುತ್ತಿರುವುದು ಇಲ್ಲಿ ಚಿತ್ರಿಸಿದೆ. ಚಿತ್ರಕ್ಕೆ ರೂಪಿಸಿರುವ ಅಲಂಕಾರಿಕ ಮಂಟಪದ ಸುತ್ತಲೂ ಕಮಾನುಗಳಲ್ಲಿ ಹೂಬಳ್ಳಿಯ ನಕ್ಷೆ ರಚಿಸಲ್ಪಟ್ಟಿದೆ.

*II. ಎರಡನೆಯ ಪಟ್ಟಿಕೆಯ ಚಿತ್ರಗಳು :* ಈ ಪಟ್ಟಿಕೆಯು ೭'×೫' ಅಳತೆಯಲ್ಲಿದ್ದು ಮಧ್ಯದಲ್ಲಿ ಪಟ್ಟಿಕೆಯನ್ನು ವಿಭಾಗಿಸಿ ಮೇಲೆ ೧೬, ಕೆಳಗೆ ೧೮ ಚಿತ್ರಗಳನ್ನು ರಚಿಸಲಾಗಿದೆ. ಈ ಪಟ್ಟಿಕೆಯಲ್ಲಿ ರಾಮ ಮತ್ತು ಕೃಷ್ಣ ಕಥೆಗೆ ಸಂಬಂಧಿಸಿದ ಚಿತ್ರಗಳಿವೆ. ಅಲ್ಲಲ್ಲಿ ಮಧ್ಯದ ಒಂದೊಂದು ಅಂಕಣದಲ್ಲಿ ಈ ಭಿತ್ತಿ ಚಿತ್ರಗಳ ಪೋಷಕ ದೊರೆಗಳ ಚಿತ್ರಗಳೂ ರಚನೆಯಾಗಿವೆ.

*೧. ರಾಮ-ಲಕ್ಷ್ಮಣರು ರಾವಣನನ್ನು ಸಂಹರಿಸುತ್ತಿರುವುದು :* ಈ ಪಟ್ಟಿಕೆಯಲ್ಲಿಯೂ ಸಹಿತ ರಾಮ-ಲಕ್ಷ್ಮಣರು ರಾವಣನೊಡನೆ ಹೋರಾಡುತ್ತಿರುವ ಚಿತ್ರ ರಚನೆ ಮಾಡಲಾಗಿದೆ. ಬೃಹದಾಕಾರದಲ್ಲಿ ಚಿತ್ರಿಸಿದ ರಾವಣನಿಗೆ ಇಪ್ಪತ್ತು ಕೈಗಳನ್ನು ರಚರಿಸಲಾಗಿದೆ. ರಾಮನು ರಾವಣನ ಮೇಲೆ ಬಾಣದ ಮಳೆಯನ್ನೇ ಸುರಿಸಿದ್ದರೆ, ಲಕ್ಷ್ಮಣನು ಖಡ್ಗದಂತಹ ಆಯುಧದಿಂದ ಪ್ರಹಾರ ಮಾಡುತ್ತಿದ್ದಾನೆ. ರಾಮನ ಬಾಣ ಪ್ರಹಾರದಿಂದ ರಾವಣನು ಕಿರುಚಿಕೊಂಡು ಹಿಂದಕ್ಕೆ ಬೀಳುತ್ತಿದ್ದಾನೆ. ರಾವಣನ ಚಿತ್ರವನ್ನು ಕೆತ್ತಿ ತೆಗೆದು ನಾಶಪಡಿಸಲಾಗಿದೆ.

*೨. ಕೃಷ್ಣನು ರುಕ್ಮಿಣಿಯ ಸಂಗಡ ಕುಳಿತಿರುವುದು :* ಈ ಚಿತ್ರದಲ್ಲಿ ನಾಲ್ಕು ಕೈಗಳನ್ನು ಹೊಂದಿದ ನೀಲಮೇಘ ಶ್ಯಾಮನಾದ ಕೃಷ್ಣ ಶಂಖ ಚಕ್ರಗಳನ್ನು ಧರಿಸಿದ್ದಾನೆ. ಪೀಠದ ಮೇಲೆ ರುಕ್ಮಿಣಿಯ ಹೆಗಲ ಮೇಲೆ ಕೈ ಹಾಕಿಕೊಂಡು ಕುಳಿತಿರುವ ಕೃಷ್ಣನು ಅವಳೊಂದಿಗೆ ಸಂಭಾಷಣೆಯಲ್ಲಿ ತೊಡಗಿದ್ದಾನೆ. ಎಡಬಲಗಳಲ್ಲಿ ಇಬ್ಬರು ಸ್ತ್ರೀಯರು ಛತ್ರಚಾಮರ ಹಿಡಿದಿದ್ದರೆ, ಮುಂದಿರುವ ಇನ್ನೊಬ್ಬ ಸ್ತ್ರೀ ಆರತಿಯನ್ನು ಬೆಳಗುತ್ತಿದ್ದಾಳೆ. ಈ ಸ್ತ್ರೀಯರು ನೀಲಿ. ಬಿಳಿ. ಹಸಿರು ಬಣ್ಣದ ಸೀರೆಗಳನ್ನು ಉಟ್ಟುಕೊಂಡಿದ್ದು ನಕ್ಷೆ ಇರುವ ಕುಪ್ಪಸಗಳನ್ನು ತೊಟ್ಟುಕೊಂಡಿದ್ದಾರೆ.

*೩. ಕೃಷ್ಣನು ರುಕ್ಮಿಣಿಯನ್ನು ಅಪಹರಿಸಿಕೊಂಡು ಹೋಗುತ್ತಿರುವುದು :* ವಿದರ್ಭ ರಾಜ್ಯದ ದೊರೆಯಾದ ಭೀಷ್ಮಕರಾಜನ ಮಗಳಾಗಿ ಹುಟ್ಟಿದ ರುಕ್ಮಿಣಿಯು ಶ್ರೀಕೃಷ್ಣನನ್ನು ಗಂಡನಾಗಿ ಪಡೆಯಲು ಬಯಸುತ್ತಿರುತ್ತಾಳೆ. ಇದನ್ನು ತಿಳಿದ ಕೃಷ್ಣನು ಉಪಾಯವಾಗಿ ರುಕ್ಮಿಣಿಯನ್ನು ಅಪಹರಿಸಿಕೊಂಡು ರಥದಲ್ಲಿ ಹೋಗುತ್ತಿರುವಾಗ ಅವಳ ಅಣ್ಣನಾದ ರುಕ್ಮಾಂಗದನು ರಥವನ್ನು ಅಡ್ಡಗಟ್ಟಿ ಕೃಷ್ಣನೊಡನೆ ಯುದ್ಧ ಮಾಡುತ್ತಾನೆ. ಕೊನೆಗೆ ಕೃಷ್ಣನಿಂದ ಸೋತು ಓಡುತ್ತಾನೆ. ಚಿತ್ರದಲ್ಲಿ ಕೃಷ್ಣನ ರಥದಲ್ಲಿ ರುಕ್ಮಿಣಿಯು ಕುಳಿತಿದ್ದು ಕೃಷ್ಣನು ಎದುರು ಬಂದ ರುಕ್ಮಾಂಗದನೊಂದಿಗೆ ಯುದ್ಧ ಮಾಡುತ್ತಿದ್ದಾನೆ. ರಥದ ಸುತ್ತಲೂ ರುಕ್ಮಾಂಗದನ ಸೈನಿಕರು ಕೃಷ್ಣನನ್ನು ಮುತ್ತಿದ್ದಾರೆ. ಬಿಳಿಯ ಕುದುರೆಗಳಿಂದ ಎಳೆಯಲ್ಪಟ್ಟ ಕೃಷ್ಣನ ರಥದಲ್ಲಿ ಸಾರಥಿಯೂ ಇದ್ದಾನೆ.

*೪. ರಾಣಿಯೊಂದಿಗೆ ಸಿಂಹಾಸನದಲ್ಲಿ ಕುಳಿತ ರಾಜ :* ಕಿರೀಟ ಧರಿಸಿದ ರಾಜನೋರ್ವನು ತನ್ನ ರಾಣಿಯ ಜೊತೆ ಸಿಂಹಾಸನದಲ್ಲಿ ಕುಳಿತಿದ್ದಾನೆ. ಎಡಬಲಗಳಲ್ಲಿ ನಾಲ್ವರು ಸ್ತ್ರೀಯರು ಛತ್ರಚಾಮರ ಹಿಡಿದು ನಿಂತಿದ್ದಾರೆ. ಇನ್ನೊಂದು ಅಂಕಣದಲ್ಲಿ ಮಂಟಪದಂತಿರುವ ಪೀಠದಲ್ಲಿ ರಾಜರಾಣಿಯರು ಕುಳಿತಿದ್ದು ನಾಲ್ವರು ಸ್ತ್ರೀಯರು ಛತ್ರಚಾಮರ ಹಿಡಿದಿದ್ದಾರೆ. ಮತ್ತೊಂದು ಇಂತಹ ಮಂಟಪದಲ್ಲಿ ಜೊತೆಯಾಗಿ ರಾಜರಾಣಿಯರು ಕುಳಿತಿದ್ದು ಇಲ್ಲಿ ಪುರುಷ ಸೇವಕರು ಸೇವೆಯಲ್ಲಿ ತೊಡಗಿದ್ದಾರೆ. ಮೇಲ್ಭಾಗದಲ್ಲಿ ಇಬ್ಬರು ಪುರುಷರು ಛತ್ರಚಾಮರ ಹಿಡಿದಿದ್ದರೆ. ಕೆಳಭಾಗದಲ್ಲಿ ಇನ್ನಿಬ್ಬರು ಪುರುಷರು ಕೈ ಮುಗಿದುಕೊಂಡು ನಿಂತಿದ್ದಾರೆ. ಇನ್ನೊಂದು ಅಂಕಣದಲ್ಲಿ ರಾಜನು ತನ್ನ ಮಡದಿಯನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡ ಚಿತ್ರವಿದೆ. ಹಿಂದೆ ಸೇವಕಿಯೊಬ್ಬಳು ಚಾಮರ ಬೀಸುತ್ತಿದ್ದಾಳೆ. ಮಧ್ಯದಲ್ಲಿರುವ ಮತ್ತೊಂದು ಅಂಕಣದಲ್ಲಿ ರಾಜರಾಣಿಯರು ಕುಳಿತಿದ್ದು ಎಡಬಲಗಳಲ್ಲಿ ಇಬ್ಬರು ಪುರುಷರು ಛತ್ರಚಾಮರ ಹಿಡಿದುಕೊಂಡಿದ್ದಾರೆ. ರಾಜರಾಣಿಯರು ಸಿಂಹಾಸನದ ಮೇಲೆ ಹೀಗೆ ಜೊತೆಯಾಗಿ ಕುಳಿತಿರುವ ಹಲವು ಚಿತ್ರಗಳಿವೆ.

*೫. ಆಂಜನೇಯ ಗರುಡರ ಯುದ್ಧದ ದೃಶ್ಯ :* ಆಂಜನೇಯ ಮತ್ತು ಗರುಡರು ಖಡ್ಗ, ಗುರಾಣಿ ಹಿಡಿದು ಹೋರಾಡುತ್ತಿದ್ದು ಆಂಜನೇಯನ ಪ್ರಹಾರಗಳಿಂದ ಗರುಡನು ಕೆಳಗುರುಳಿ ಬಿದ್ದಿದ್ದಾನೆ. ಬೆನ್ನಿಗೆ ರೆಕ್ಕೆಗಳನ್ನು ಹೊಂದಿದ ಗರುಡನ ಮೈಬಣ್ಣ ಹಳದಿಯಾಗಿದೆ. ಹದ್ದಿನ ಕೊಕ್ಕಿನಂತಿರುವ ಆತನ ಮೂಗು ಮುಂದೆ ಚಾಚಿಕೊಂಡಿದೆ. ಆಂಜನೇಯನು ನೀಲವರ್ಣದಲ್ಲಿದ್ದು ತಲೆಯ ಮೇಲೆ ಕಿರೀಟ ಧರಿಸಿದ್ದಾನೆ.

*೬. ಕೃಷ್ಣನ ತುಲಾಭಾರ :* ಕೃಷ್ಣನ ಸಮವಾದ ಭಾರದ ಸಂಪತ್ತನ್ನು ನಾರದ ಮುನಿಗೆ ಕೊಡಬೇಕೆಂದು ಸತ್ಯಭಾಮೆಯು ಒಂದು ತಕ್ಕಡಿಯಲ್ಲಿ ಕೃಷ್ಣನನ್ನು ಕುಳ್ಳಿರಿಸಿ ಇನ್ನೊಂದು ಕಡೆಗೆ ತನ್ನಲ್ಲಿರುವ ಆಭರಣವನ್ನೆಲ್ಲ ಹಾಕಿದರೂ ಕೃಷ್ಣನ ಭಾರಕ್ಕೆ ಸಮನಾಗುವುದಿಲ್ಲ. ಆಗ ರುಕ್ಮಿಣಿಯು ಬಂದು ಭಕ್ತಿಯಿಂದ ಒಂದು ತುಳಸೀದಳವನ್ನು ತಕ್ಕಡಿಯಲ್ಲಿ ಹಾಕಲು ಕೃಷ್ಣನ ತೂಕಕ್ಕೆ ಸಮನಾಗುತ್ತದೆ. ಇಲ್ಲಿ ತಕ್ಕಡಿಯಲ್ಲಿ ಒಂದು ಕಡೆಗೆ ಸತ್ಯಭಾಮೆಯು ತನ್ನೆಲ್ಲ ಆಭರಣ ಸಂಪತ್ತು ಹಾಕಿದ್ದರೂ. ಕೃಷ್ಣನ ಸಮತೂಕ ಬಂದಿಲ್ಲ. ಎಡ ಭಾಗದಲ್ಲಿ ನಾರದ ಮಹರ್ಷಿ ನಿಂತಿದ್ದು ಆತನ ಪಕ್ಕದಲ್ಲಿ ರುಕ್ಮಿಣಿದೇವಿ ಕೈಯಲ್ಲಿ ತುಳಸೀದಳ ಹಿಡಿದುಕೊಂಡು ನಿಂತಿದ್ದಾಳೆ. ಸತ್ಯಭಾಮೆಯು ಬಿಳಿ ಸೀರೆ. ರುಕ್ಮಿಣಿಯು ಕಡು ಹಸಿರು ಬಣ್ಣದ ಸೀರೆ ಉಟ್ಟುಕೊಂಡಿದ್ದಾರೆ. ಚಿತ್ರದಲ್ಲಿ ಕೃಷ್ಣನಿರುವ ತಕ್ಕಡಿಯ ಭಾಗವನ್ನು ಕೆರೆದು ನಾಶಪಡಿಸಲಾಗಿದೆ. ಪಟ್ಟಿಕೆಯ ಕೆಳಭಾಗದಲ್ಲಿ ಕೃಷ್ಣನಿಗೆ ಸಂಬಂಧಿಸಿದ ಚಿತ್ರಗಳು ರಚನೆಯಾಗಿವೆ.

*೭. ಜಾಂಬವತಿ ಕಲ್ಯಾಣ :* ಶ್ರೀಕೃಷ್ಣನು ಜಾಂಬವಂತನನ್ನು ಸೋಲಿಸಿ ಶ್ಯಮಂತಕಮಣಿಯನ್ನು ತರುವಾಗ ಜಾಂಬವತಿಯನ್ನು ಜೊತೆಗೆ ಕರೆತಂದು ವಿವಾಹವಾಗುತ್ತಿರುವ ದೃಶ್ಯ ಚಿತ್ರಿಸಿದೆ. ಕೃಷ್ಣನ ಜೊತೆಗೆ ಆತನ ತೊಡೆಯ ಮೇಲೆ ಜಾಂಬವತಿ ಕುಳಿತಿದ್ದು ಬಲಭಾಗದಲ್ಲಿ ಕರಡಿವೇಷದ ಸ್ತ್ರೀ ಆರತಿ ಬೆಳಗುತ್ತಿದ್ದಾಳೆ. ಎಡಭಾಗಕ್ಕೆ ನಾರದ ಮುನಿಗಳು ಇದ್ದು ಕೆಳಗೆ ಕರಡೀಮುಖದ ಪುರುಷರು ವಾದ್ಯ ಬಾರಿಸುತ್ತಿದ್ದಾರೆ. ಪಕ್ಕದಲ್ಲಿ ಇನ್ನೂ ಇಬ್ಬರು ಕರಡೀಮುಖದ ಸ್ತ್ರೀಯರು ಪೀಠದ ಮೇಲೆ ಕುಳಿತುಕೊಂಡಿದ್ದಾರೆ. ಈ ದೃಶ್ಯದಲ್ಲಿ ಕೃಷ್ಣ ನಾರದರನ್ನುಳಿದು ಉಳಿದೆಲ್ಲ ಸ್ತ್ರೀ-ಪುರುಷರು ಕರಡೀಮುಖದವರಾಗಿ ಚಿತ್ರಿತರಾಗಿದ್ದಾರೆ.

*೮. ಕೃಷ್ಣನ ವಿನೋದಗಳು :* ಯಮುನಾ ತೀರದಲ್ಲಿ ಗೋಪಿಕಾ ಸ್ತ್ರೀಯರೊಡನೆ ಕೃಷ್ಣ ಆಡುತ್ತಿರುವ ಒಂದು ದೃಶ್ಯದಲ್ಲಿ ಅಲ್ಲಲ್ಲಿ ಗಿಡ-ಮರಗಳು ಬೆಳೆದಿವೆ. ದೂರದಲ್ಲಿ ಗಿಡದ ಬುಡದಲ್ಲಿ ಕೃಷ್ಣನು ಕೊಳಲನ್ನೂದುತ್ತ ನಿಂತುಕೊಂಡಿದ್ದು, ಗೋಪಿಕಾಸ್ತ್ರೀಯರು ಮೈಮರೆತು ಪರವಶರಾಗಿದ್ದಾರೆ. ಕೃಷ್ಣನ ಎಡಗಡೆಗೆ ಒಬ್ಬ ಗೋಪಾಲಕನೂ ಚಿತ್ರಿಸಲ್ಪಟ್ಟಿದ್ದಾನೆ. ಮತ್ತೊಂದು ದೃಶ್ಯದಲ್ಲಿ ಗೋವುಗಳನ್ನು ಮೇಯಿಸುತ್ತಿರುವ ಗೋಪಾಲಕರು ಪರಸ್ಪರ ಮಾತನಾಡುತ್ತಿದ್ದಾರೆ. ಗೋವುಗಳು ದೂರದಲ್ಲಿ ಮೇಯುತ್ತಿವೆ. ಗೋಪಾಲಕರು ತಲೆಯ ಮೇಲೆ ಕುಲಾವಿಗಳನ್ನು ಹಾಕಿಕೊಂಡಿದ್ದಾರೆ. ಗೋಪಾಲಕರು ಹೀಗೆ ತಲೆಯ ಮೇಲೆ ಕುಲಾವಿ ಹಾಕಿಕೊಂಡಿದ್ದು ಅಮ್ಮಿನಭಾವಿಯ ಹಿರೇಮಠ. ನಿಪ್ಪಾಣಿಯ ರಾಜವಾಡೆ. ಗುಳೇದಗುಡ್ಡದ ಹೊಸಮನಿ ಗೌಡರ ಮನೆ, ರಾಯಚೂರಿನ ಖಾಜಿನ ಗೌಡರ ಮನೆಯಲ್ಲಿನ ಚಿತ್ರಗಳಲ್ಲಿ ಕಂಡು ಬರುತ್ತದೆ. ಇನ್ನೊಂದು ಚಿತ್ರದಲ್ಲಿ ಕೃಷ್ಣನು ಮಧ್ಯದಲ್ಲಿ ಚಿತ್ರಿಸಿದ್ದು ಆತನ ಎಡಬಲಗಳಲ್ಲಿ ಇಬ್ಬರು ಗೋಪಿಕಾ ಸ್ತ್ರೀಯರು ನಿಂತುಕೊಂಡಿದ್ದಾರೆ. ಇನ್ನೊಂದು ಅಂಕಣದಲ್ಲಿ ರುಕ್ಮಿಣಿ ಸಮೇತನಾಗಿ ಕೃಷ್ಣನು ಸಿಂಹಾಸನದಲ್ಲಿ ಕುಳಿತಿದ್ದು ಮಹಿಳೆಯರು ಛತ್ರಚಾಮರ ಹಿಡಿದಿದ್ದಾರಲ್ಲದೇ ಆರತಿಯನ್ನೂ ಬೆಳಗುತ್ತಿದ್ದಾರೆ. ಕೆಳಗಡೆಗೆ ಸಾಲಾಗಿ ಮಹಿಳೆಯರು ನಿಂತುಕೊಂಡಿದ್ದಾರೆ.

*೯. ಯಜ್ಞದ ದೃಶ್ಯ :* ಇಬ್ಬರು ಋಷಿಗಳು. ಇಬ್ಬರು ಭಟ್ಟರು ಯಜ್ಞಕುಂಡದ ಸುತ್ತಲೂ ಕುಳಿತುಕೊಂಡು ಯಜ್ಞ ನೆರವೇರಿಸುತ್ತಿರುವ ಈ ಚಿತ್ರದಲ್ಲಿ ಯಜ್ಞ ಕಟ್ಟೆಯನ್ನು ಒಂದು ಬುಟ್ಟಿಯ ಹಾಗೆ ಚಿತ್ರಿಸಿದ್ದು, ಅದರ ಸುತ್ತಲೂ ವೃತ್ತಾಕಾರದ ವಿನ್ಯಾಸವನ್ನು ರಚಿಸಿದೆ. ಯಜ್ಞದಲ್ಲಿ ತೊಡಗಿದವರು ಹೋಮಕುಂಡಕ್ಕೆ ಹವಿಸ್ಸು ಅರ್ಪಿಸುತ್ತಿದ್ದು ಮೇಲ್ಭಾಗದಲ್ಲಿ ಮಗು ಕೃಷ್ಣನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡ ಯಶೋಧೆ ಮತ್ತು ನಂದಗೋಪ ಕುಳಿತಿದ್ದಾರೆ. ಇದು ಕೃಷ್ಣನು ತಮಗೆ ದೊರೆತ ಸಂತೋಷದಲ್ಲಿ ನಂದಗೋಪ ಮಹಾರಾಜನು ಮಾಡಿಸುತ್ತಿರುವ ಯಜ್ಞವಾಗಿರಬಹುದು. ಚಿತ್ರಗಳು ಕೆಳಭಾಗದಲ್ಲಿರುವುದರಿಂದ ಗೀಚಿ ಭಿತ್ತಿಯನ್ನು ಹಾಳು ಮಾಡಲಾಗಿದೆ. ಹೆಚ್ಚಿನ ವಿವರಗಳು ತಿಳಿದುಬರುವುದಿಲ್ಲ.

*೧೦. ಪಂಚನಾರೀ ತುರಗ :* ಈ ಚಿತ್ರದಲ್ಲಿ ಐದು ಜನ ಸ್ತ್ರೀಯರಿಂದ ರೂಪಿತವಾದ ಕುದುರೆಯ ಮೇಲೆ ಕೃಷ್ಣನು ಕುಳಿತಿದ್ದಾನೆ. ಕುದುರೆಯ ದೇಹ. ಕೈಕಾಲುಗಳು ಹೀಗೆ ಪ್ರತಿಯೊಂದು ಭಾಗವೂ ಸ್ತ್ರೀಯರ ವಿವಿಧ ವಿನ್ಯಾಸಗಳಿಂದಲೇ ರೂಪಿತವಾಗಿದೆ. ಮೇಲೆ ಕುಳಿತ ಕೃಷ್ಣನು ನಾಲ್ಕು ಕೈಗಳನ್ನು ಹೊಂದಿದ್ದು ಶಂಖ-ಚಕ್ರಗಳನ್ನು ಹಿಡಿದಿದ್ದಾನೆ. ಹಿನ್ನೆಲೆಯಲ್ಲಿ ಬೃಹತ್ ಗಿಡಗಳು ಬೆಳೆದಿವೆ.

*೧೧. ನವನಾರೀ ಕುಂಜರದ ಆನೆ :* ಈ ಚಿತ್ರದಲ್ಲಿ ಒಂಬತ್ತು ಜನ ಸ್ತ್ರೀಯರಿಂದ ರೂಪಿತವಾದ ಆನೆಯ ಮೇಲೆ ಕೃಷ್ಣನು ಕುಳಿತಿದ್ದಾನೆ. ಇಲ್ಲಿಯೂ ಆನೆಯ ದೇಹದ ಪ್ರತಿಯೊಂದು ಭಾಗದ ವಿನ್ಯಾಸವನ್ನು ಸ್ತ್ರೀಯರ ವಿವಿಧ ಭಂಗಿಗಳಿಂದಲೇ ನಿರೂಪಿಸಲಾಗಿದ್ದು, ಕಲಾವಿದನ ಚತುರತೆಯನ್ನು ಬಿಂಬಿಸುತ್ತದೆ. ಆನೆಯ ಪ್ರತಿಯೊಂದು ಕಾಲಿನಲ್ಲಿ ಒಬ್ಬೊಬ್ಬರು. ಸೊಂಡಿಯಲ್ಲಿ ಒಬ್ಬಳು. ಉಳಿದ ಹೊಟ್ಟೆ ಬೆನ್ನಿನ ಭಾಗದಲ್ಲಿ ನಾಲ್ವರು, ಹೀಗೆ ಒಂಭತ್ತು ಸ್ತ್ರೀಯರಿದ್ದಾರೆ. ಆನೆಯ ಮೇಲೆ ಕುಳಿತ ಕೃಷ್ಣನಿಗೆ ಛತ್ರಚಾಮರ ಹಿಡಿದಿರುವುದಕ್ಕಾಗಿ ಆನೆಯ ದೇಹ ಅಂಗವಾಗಿರುವ ಸ್ತ್ರೀಯರ ಕೈಗಳನ್ನೇ ಚಮತ್ಕಾರಿಕವಾಗಿ ಚಿತ್ರಿಸಲಾಗಿದೆ.

*೧೨. ಪಂಚನಾರೀ ಪಲ್ಲಕ್ಕಿ :* ಈ ಚಿತ್ರದಲ್ಲಿ ಐದು ಜನ ಸ್ತ್ರೀಯರಿಂದ ರೂಪಿತವಾದ ಪಲ್ಲಕ್ಕಿಯಲ್ಲಿ ಕೃಷ್ಣನು ಕುಳಿತಿದ್ದಾನೆ. ಸ್ತ್ರೀಯರಿಂದ ರೂಪಿತವಾದ ಪಲ್ಲಕ್ಕಿಯನ್ನು ಸ್ತ್ರೀಯರೇ ಹೊತ್ತುಕೊಂಡಿದ್ದಾರೆ. ಪಲ್ಲಕ್ಕಿಯ ತಳಭಾಗಕ್ಕೆ ಒಬ್ಬಳು ಸ್ತ್ರೀ ಕಾಲು ಚಾಚಿದಂತೆ ಚಿತ್ರಿಸಿದ್ದು ಅವಳ ಕಾಲುಗಳೇ ಪಲ್ಲಕ್ಕಿಯ ತಳಗಳಾಗಿದ್ದು ಅವುಗಳ ಮೇಲೆ ಕೃಷ್ಣ ಕುಳಿತಿದ್ದಾನೆ. ಎಡಬಲದಲ್ಲಿ ಇಬ್ಬರು ಸ್ತ್ರೀಯರು ಪಲ್ಲಕ್ಕಿಯ ಅಂಚುಗಳಾಗಿದ್ದರೆ ಇನ್ನಿಬ್ಬರು ಸ್ತ್ರೀಯರು ಪಲ್ಲಕ್ಕಿಯ ಮೇಲಿನ ಬಾಗಿದ ಕಮಾನು ರೂಪ ತಾಳಿದ್ದಾರೆ. ಕಮಾನು ರೂಪ ತಾಳಿದ ಸ್ತ್ರೀಯರ ಕಾಲುಗಳೇ ಪಲ್ಲಕ್ಕಿಯನ್ನು ಹೊರುವ ಕೋಲುಗಳಾಗಿವೆ. ಈ ರೀತಿಯ ಸ್ತ್ರೀಯರಿಂದ ರೂಪಿತವಾದ ನವನಾರೀ ಕುಂಜರದ ಆನೆ. ಪಂಚನಾರೀ ತುರಗದಂತಹ ಚಿತ್ರಗಳು ಹಂಪಿಯ ಬಿಳಿಯ ಆನೆಗೊಂದಿಯ ಹುಚ್ಚಪ್ಪಯ್ಯ ಮಠದಲ್ಲಿಯೂ ರಚನೆಯಾಗಿದ್ದು ಅವು ಈಗ ಸಂಪೂರ್ಣ ನಾಶವಾಗಿವೆ. ಇಂತಹ ಚಿತ್ರಗಳಲ್ಲಿ ಕಲಾವಿದನ ಕುಶಲತೆ ಕಂಡುಬರುತ್ತದೆ.

*III. ಮೂರನೆಯ ಪಟ್ಟಿಕೆಯ ಚಿತ್ರಗಳು :* ಈ ಪಟ್ಟಿಕೆಯು ೭' × ೫' ಅಳತೆಯಲ್ಲಿದ್ದು ಮಧ್ಯಭಾಗದಲ್ಲಿ ಪಟ್ಟಿಕೆಯನ್ನು ವಿಭಾಗಿಸಿ ಮೇಲೆ ೧೬ ಕೆಳಗೆ ೨೨ ಚಿತ್ರಗಳನ್ನು ರಚಿಸಲಾಗಿದೆ. ಈ ಪಟ್ಟಿಕೆಯಲ್ಲಿ ಪ್ರಮುಖವಾಗಿ ಕೃಷ್ಣ ಕಥೆಗೆ ಸಂಬಂಧಿಸಿದ ಚಿತ್ರಗಳು ರಚನೆಯಾಗಿವೆ.

೧. ಶೇಷಶಯನ ವಿಷ್ಣು : ಈ ಚಿತ್ರದಲ್ಲಿ ಋಷಿಮುನಿಗಳು, ಬ್ರಹ್ಮಾದಿ ದೇವತೆಗಳು ಬಂದು ಶೇಷಶಯನ ವಿಷ್ಣುವಿನ ಬಳಿ ಕೈ ಮುಗಿದು ನಿಂತಿದ್ದಾರೆ. ಲೋಕದಲ್ಲಿ ರಾಕ್ಷಸರ ಹಾವಳಿ ಹೆಚ್ಚಾಗಿ ಕಂಟಕಪ್ರಾಯರಾಗಿದ್ದಾರೆ. ಅವರಿಂದ ಯಜ್ಞಯಾಗಾದಿಗಳು, ಪೂಜೆಪುನಸ್ಕಾರಗಳು ನಡೆಯದೇ ನಾಶವಾಗುತ್ತವೆ. ಅವರನ್ನು ಸಂಹರಿಸಿ ಲೋಕವನ್ನು ಉದ್ಧರಿಸು ಎಂದು ಬೇಡಿಕೊಳ್ಳುತ್ತಿದ್ದಾರೆ. ಅವರ ಕೋರಿಕೆಗೆ ಸಮ್ಮತಿಸಿದ ನಾರಾಯಣನು ಕೃಷ್ಣನಾಗಿ ಹುಟ್ಟಿ ರಾಕ್ಷಸ ಸಂಹಾರ ಮಾಡುತ್ತೇನೆ ಎಂದು ಅಭಯ ನೀಡುತ್ತಿದ್ದಾನೆ. ಚಿತ್ರದ ಹೆಚ್ಚಿನ ಭಾಗ ನಾಶವಾಗಿದೆ.

೨. ವಸುದೇವ ದೇವಕಿಯರ ಬಂಧನ : ಕಂಸನು ತನ್ನ ತಂಗಿ ದೇವಕಿಗೂ, ವಸುದೇವನಿಗೂ ಮದುವೆ ಮಾಡಿ ಅತ್ಯುತ್ಸಾಹದಿಂದ ರಥದಲ್ಲಿ ಮೆರವಣಿಗೆ ಮಾಡಿಕೊಂಡು ಬರುತ್ತಿದ್ದಾಗ ಆಕಾಶದಲ್ಲಿ ಅಶರೀರವಾಣಿಯುಂಟಾಗಿ ಕಂಸನನ್ನು ಕೊಲ್ಲುವ ಮಗು ದೇವಕಿಯ ಹೊಟ್ಟೆಯಲ್ಲಿ ಹುಟ್ಟುತ್ತದೆ ಎಂದು ಹೇಳುತ್ತದೆ. ಇದರಿಂದ ಕೋಪಗೊಂಡ ಕಂಸನು ತನ್ನ ತಂಗಿಯನ್ನು ಕೊಲ್ಲಲು ಹೋಗುತ್ತಾನೆ. ಆಗ ನಾರದರು ಪ್ರತ್ಯಕ್ಷರಾಗಿ ತಂಗಿಯನ್ನು ಕೊಂದು ಪಾಪ ಕಟ್ಟಿಕೊಳ್ಳಬೇಡವೆಂದು ಹೇಳಿದಾಗ, ಮದುವೆಯಾದ ತಂಗಿ ದೇವಕಿ ಮತ್ತು ಆಕೆಯ ಗಂಡ ವಸುದೇವ ಇಬ್ಬರನ್ನು ಸೆರೆಯಲ್ಲಿಡುತ್ತಾನೆ. ಮದುವೆ ಮೆರವಣಿಗೆಯಲ್ಲಿರುವ ರಥವು ತಿರುಗಿ ಅರಮನೆಗೆ ಬರದೇ ಕಾರಾಗೃಹಕ್ಕೆ ತೆರಳುತ್ತದೆ. ಇಲ್ಲಿ ಆಕಾಶದಲ್ಲಿ ಅಶರೀರವಾಣಿಯುಂಟಾಗಿ ಕಂಸನಿಗೆ ಎಚ್ಚರಿಸುತ್ತಿದ್ದು, ವಸುದೇವ ದೇವಕಿಯರು ಕುಳಿತ ರಥವನ್ನು ಕಾವಲು ಭಟರ ಬೆಂಗಾವಲಿನಲ್ಲಿ ಸೆರೆಮನೆಗೆ ಕಳಿಸುತ್ತಿರುವಂತೆ ಚಿತ್ರಿಸಿದೆ. ರಥವನ್ನು ಬಿಳಿಯ ಕುದುರೆಗಳು ಎಳೆಯುತ್ತಿದ್ದು ಕಾವಲು ಭಟರು ಈಟಿ, ಖಡ್ಗ ಹಿಡಿದುಕೊಂಡಿದ್ದಾರೆ. ಅಶರೀರವಾಣಿಯ ಸಂಕೇತವಾಗಿ ಆಕಾಶದಲ್ಲಿ ಹಸಿರು ವರ್ಣದಲ್ಲಿ ಒಂದು ಚಿಕ್ಕ ಆಕೃತಿಯನ್ನು ಚಿತ್ರಿಸಲಾಗಿದೆ.

೩. ದೇವಕಿಯ ಮಕ್ಕಳನ್ನು ಕಂಸನು ಕೊಲ್ಲುವುದು : ದೇವಕಿಯ ಹೊಟ್ಟೆಯಿಂದ ಹುಟ್ಟಿದ ಮಗುವಿನಿಂದ ತನಗೆ ಮರಣವಿದೆ ಎಂದು ತಿಳಿದು ದೇವಕಿಗೆ ಹುಟ್ಟಿದ ಎಳೆ ಹಸುಗೂಸುಗಳನ್ನು ಕಾಲು ಹಿಡಿದು ಗೋಡೆಗೆ ಬಡಿದು ಕೊಲ್ಲುತ್ತ ಹೋಗುತ್ತಾನೆ. ಹೀಗೆ ಆರು ಮಕ್ಕಳನ್ನು ಕೊಲ್ಲುತ್ತಾನೆ. ಚಿತ್ರದಲ್ಲಿ ಕಾರಾಗೃಹದ ಸುತ್ತಲೂ ಸಶಸ್ತ್ರ ಕಾವಲುಗಾರರು ಕಾಯುತ್ತಿದ್ದು ಕಂಸನು ಎಳೆಯ ಮಗುವನ್ನು ಕಾಲು ಹಿಡಿದು ಗೋಡೆಗೆ ಅಪ್ಪಳಿಸುತ್ತಿದ್ದಾನೆ. ಹೀಗೆ ಕಂಸನು ಮಕ್ಕಳನ್ನು ಕೊಲ್ಲುತ್ತಿರುವ ಮೂರು ಚಿತ್ರಗಳಿವೆ. ಒಂದು ಕಡೆಗೆ ವಸುದೇವನು ಕೂಸನ್ನು ಕೊಲ್ಲಬೇಡವೆಂದು ಬೇಡಿಕೊಳ್ಳುತ್ತಿದ್ದು ಕಂಸನು ನಿರ್ದಯದಿಂದ ಹಸುಗೂಸು ಕೊಲ್ಲುತ್ತಿದ್ದಾನೆ. ಮತ್ತೊಂದು ಕಡೆಗೆ ಖಡ್ಗದಿಂದ ಹಸುಗೂಸಿನ ರುಂಡ ಕತ್ತರಿಸುತ್ತಿದ್ದಾನೆ. ಇಲ್ಲಿ ವಸುದೇವ-ದೇವಕಿ ಇಬ್ಬರೂ ಮಗುವನ್ನು ಕೊಲ್ಲಬೇಡವೆಂದು ಕಂಸನದಲ್ಲಿ ಬೇಡಿಕೊಳ್ಳುತ್ತಿದ್ದಾರೆ.

೪. ಕೃಷ್ಣನಿಗೆ ನಂದಗೋಪನು ಜಾತಕರ್ಮ ಮಾಡಿಸಿದ್ದು : ನಂದಗೋಕುಲವನ್ನು ಸೇರಿದ ಕೃಷ್ಣನನ್ನು ತಮ್ಮ ಮಗುವೆ ಎಂದು ಭಾವಿಸಿದ ನಂದಗೋಪ ಯಶೋದೆಯರು ಕೃಷ್ಣನಿಗೆ ಜಾತಕರ್ಮ, ನಾಮಕರಣಾದಿಗಳನ್ನು ಮಾಡಿಸುತ್ತಿರುವ ದೃಶ್ಯ ಚಿತ್ರಿಸಿದೆ. ಗರ್ಗ ಮುನಿಯು ಕೃಷ್ಣನಿಗೆ ನಾಮಕರಣ ಮಾಡುತ್ತಿದ್ದು, ಇತರ ಋಷಿಮುನಿಗಳು ಕೃಷ್ಣನಿಗೆ ಆಶೀರ್ವದಿಸುತ್ತಿದ್ದಾರೆ. ಮಗು ಕೃಷ್ಣನು ತಾಯಿ ಯಶೋಧೆಯ ತೊಡೆಯ ಮೇಲೆ ಮಲಗಿದ್ದಾನೆ. ಬಳಿಯಲ್ಲೇ ನಂದಗೋಪನೂ ಜೊತೆಯಾಗಿ ಕುಳಿತಿದ್ದು ಎಡಭಾಗದಲ್ಲಿ ಋಷಿಮುನಿಗಳ ಸಮೂಹ ನೆರೆದಿದೆ.

ಇನ್ನೊಂದು ಕಡೆಗೆ ಆಕಾಶ ಮಾರ್ಗದಲ್ಲಿ ನವಿಲಿನ ಮೇಲೆ ಕುಳಿತ ಸರಸ್ವತಿ. ಬ್ರಹ್ಮದೇವ ಚಿತ್ರಿತರಾಗಿದ್ದು ಮಗು ಕೃಷ್ಣನನ್ನು ಹರಸುತ್ತಿದ್ದಾರೆ.

೫. ಕೃಷ್ಣನು ರಾಕ್ಷಸರನ್ನು ಕೊಲ್ಲುತ್ತಿರುವ ದೃಶ್ಯ : ಕೃಷ್ಣನು ಆನಂದದಿಂದ ಗೋಕುಲದಲ್ಲಿ ಬೆಳೆಯುತ್ತಿರಲು, ಆತನನ್ನು ಸಂಹರಿಸಲು ಕಂಸನು ಅನೇಕ ರಾಕ್ಷಸರನ್ನು ಕಳಿಸುತ್ತಾನೆ. ಬಲರಾಮ ಕೃಷ್ಣರಿಬ್ಬರೂ ರಾಕ್ಷಸರನ್ನು ಕೊಂದು ಹಾಕುತ್ತಾರೆ. ಕೃಷ್ಣನು ಶಕಟಾಸುರನನ್ನು ಕೊಂದದ್ದು ತೃಣಾವರ್ತನನ್ನು ನಿರ್ಮೂಲ ಮಾಡಿದ್ದು, ವತ್ಸಾಸುರ ಬಕಾಸುರರ ವಧೆ ಮಾಡಿದ್ದು. ಪ್ರಲಂಬನ ಸಂಹಾರ. ಅಘಾಸುರನ ಸಂಹಾರ ಮಾಡಿದ್ದು, ಧೇನುಕನೆಂಬ ರಾಕ್ಷಸನನ್ನು ಸಂಹರಿಸಿದ ಚಿತ್ರಗಳು ಇಲ್ಲಿ ರಚನೆಯಾಗಿವೆ. ಚಿತ್ರಗಳು ಹೆಚ್ಚು ಹಾನಿಗೊಂಡಿರುವುದರಿಂದ ವಿವರಗಳು ತಿಳಿದು ಬರುವುದಿಲ್ಲ.

೬. ಕಾಳಿಂಗ ಮರ್ದನ ಕೃಷ್ಣ : ಈ ಚಿತ್ರದಲ್ಲಿ ಕೃಷ್ಣನು ಮರದ ಮೇಲಿಂದ ನದಿಯ ಮಡುವಿಗೆ ಧುಮುಕುತ್ತಿರುವುದು. ನದಿಯಲ್ಲಿ ಕಾಳಿಂಗ ಸರ್ಪವನ್ನು ಮರ್ದನ ಮಾಡುತ್ತಿರುವುದು ಚಿತ್ರಿಸಿದೆ. ನಾಲ್ಕು ಕೈಗಳನ್ನು ಹೊಂದಿದ ಕೃಷ್ಣನು ಸರ್ಪದ ಬಾಲ ಹಿಡಿದು. ಇನ್ನೊಂದು ಕೈಯಿಂದ ಅದರ ಹೆಡೆ ಹಿಡಿದು ಕಾಲಿನಿಂದ ಮೆಟ್ಟಿ ನಿಂತಿದ್ದಾನೆ. ಇಬ್ಬರು ಸ್ತ್ರೀಯರು ನದಿಯಲ್ಲಿ ನಿಂತುಕೊಂಡೇ ಆರತಿ ಬೆಳಗುತ್ತಿದ್ದಾರೆ. ನದಿಯಲ್ಲಿ ಮೀನು, ಏಡಿ. ಹಾವು. ಆಮೆಗಳಂತಹ ಜಲಚರಗಳಿವೆ. ಉತ್ತರ ಕರ್ನಾಟಕದ ಇತರೆಡೆಗಳಲ್ಲಿ ರಚನೆಯಾದ ಕಾಳಿಂಗಮರ್ದನನ ದೃಶ್ಯಕ್ಕಿಂತ ಇದು ಭಿನ್ನ ಶೈಲಿಯಲ್ಲಿ ರಚನೆಯಾಗಿದೆ. ಕೃಷ್ಣನು ಕಾಳಿಂಗ ಮರ್ದನ ಮಾಡುತ್ತಿರುವ ದೃಶ್ಯವನ್ನು ನದಿಯ ದಂಡೆಯ ಮೇಲೆ ನಿಂತು ನೋಡುತ್ತಿರುವ ಸ್ತ್ರೀ-ಪುರುಷರನ್ನು ಕೆಳಗಿನ ಬೇರೊಂದು ಅಂಕಣದಲ್ಲಿ ರಚಿಸಲಾಗಿದೆ.

೭. ಗೋವರ್ಧನಗಿರಿಧಾರಿ : ಈ ಚಿತ್ರದಲ್ಲಿ ಕೃಷ್ಣನು ತನ್ನ ಎಡಗೈ ಕಿರುಬೆರಳಿಂದ ಗೋವರ್ಧನಗಿರಿಯನ್ನು ಎತ್ತಿದ್ದು. ಅದರ ಕೆಳಗಡೆ ಗೋವುಗಳು. ಗೋಪಾಲಕರು. ಸ್ತ್ರೀ-ಪುರುಷರಾದಿಯಾಗಿ ಸಮಸ್ತ ಜನರು ಆಸರೆ ಪಡೆದಿದ್ದಾರೆ. ಪರ್ವತವು ಕಾಮನ ಬಿಲ್ಲಿನ ಹಾಗೆ ಬಾಗಿದ್ದು ಹಗ್ಗದ ಮುರಿಗೆಯ ವಿನ್ಯಾಸದಲ್ಲಿದೆ. ಉತ್ತರ ಕರ್ನಾಟಕದ ಇತರೆಡೆಯಲ್ಲಿ ರಚನೆಯಾದ ಗೋವರ್ಧನಗಿರಿಧಾರಿ ಕೃಷ್ಣನ ಚಿತ್ರಗಳಿಗಿಂತ ಇದು ಭಿನ್ನವಾಗಿರುವ ಶೈಲಿಯಲ್ಲಿ ರಚನೆಯಾಗಿದೆ. ಉತ್ತರ ಕನ್ನಡ ಜಿಲ್ಲೆಯ ಕಾವಿ ಭಿತ್ತಿ ಚಿತ್ರಕಲೆಯಲ್ಲಿ ಈ ವಿಷಯ ಹೆಚ್ಚಾಗಿ ರಚನೆಯಾಗಿದ್ದರೂ ಪರ್ವತದ ವಿನ್ಯಾಸ ಇಲ್ಲಿನ ಹಾಗೆ ಎಲ್ಲಿಯೂ ರಚಿಸಿಲ್ಲ.

೮. ಕೃಷ್ಣ-ಬಲರಾಮರ ಮಥುರಾ ಪ್ರವೇಶ : ಕೃಷ್ಣ-ಬಲರಾಮರನ್ನು ತನ್ನೆಡೆಗೆ ಕರೆಸಿಕೊಂಡು ಸಂಹಾರ ಮಾಡಬೇಕೆಂದು ಬಯಸಿದ ಕಂಸನು ಅಕ್ರೂರನನ್ನು ಕಳುಹಿಸಲು ರಥದಲ್ಲಿ ಕೃಷ್ಣ ಬಲರಾಬರಿಬ್ಬರನ್ನು ಕರೆದುಕೊಂಡು ಬರುತ್ತಿರುವುದು. ಸ್ತ್ರೀ-ಪುರುಷರಾದಿಯಾಗಿ ಪುರಜನರು ನೋಡುತ್ತಿರುವುದು ಚಿತ್ರಿಸಿದೆ. ರಥವು ಕುದುರೆಯಿಂದ ಎಳೆಯಲ್ಪಟ್ಟಿದ್ದು ಮೇಲೆ ಕಳಶವನ್ನು ಹೊಂದಿದೆ. ಚಿತ್ರದಲ್ಲಿನ ಪುರಜನರು ವಿವಿಧ ಬಣ್ಣಗಳ ನಕ್ಷೆಗಳಿಂದ ಕೂಡಿದ ವಸ್ತ್ರಗಳನ್ನು ವಿವಿಧ ವಿನ್ಯಾಸಗಳಿಂದ ಕೂಡಿದ ಆಭರಣಗಳನ್ನು ಧರಿಸಿದ್ದಾರೆ. ಬಣ್ಣ ಉದುರಿ ಚಿತ್ರ ಹಾಳಾಗಿದ್ದು ಹೆಚ್ಚಿನ ವಿವರ ತಿಳಿದು ಬರುವುದಿಲ್ಲ.

೯. ಕೃಷ್ಣನಿಂದ ಕಂಸನ ವಧೆ : ಮಥುರಾಪುರವನ್ನು ಪ್ರವೇಶಿಸಿದ ಕೃಷ್ಣ-ಬಲರಾಮರು ಕಂಸನನ್ನು ಕೊಲ್ಲುತ್ತಾರೆ. ಈ ಭಾಗವು ಹೆಚ್ಚಿನ ಹಾನಿಗೊಳಗಾಗಿರುವುದರಿಂದ ಇಡಿಯಾದ ಚಿತ್ರರಚನೆಗಳು ಕಂಡುಬರುದೇ ತುಂಡು ತುಂಡು ಬಣ್ಣದ ಉಳಿಕೆಗಳು ಕಂಡುಬರುತ್ತವೆ. ಈ ಭಾಗದಲ್ಲಿ ಕೃಷ್ಣನು ರಜಕನೆಂಬ ರಾಕ್ಷಸನನ್ನು ಕೊಲ್ಲುತ್ತಿರುವುದು. ಕಂಸನ ಮಲ್ಲರಂಗಶಾಲೆಯ ಬಾಗಿಲ್ಲಿ ಕಟ್ಟಿದ್ದ ಕುವಲಯಾ ಎಂಬ ಆನೆಯನ್ನು ಕೊಲ್ಲುತ್ತಿರುವುದು. ಚಾಣೂರಮಲ್ಲ. ಮುಷ್ಟಿಕಾಸುರರೆಂಬ ರಾಕ್ಷಸವೀರರನ್ನು ಕೊಲ್ಲುತ್ತಿರುವುದು ರಚನೆಯಾಗಿದೆ. ನಂತರವಲ್ಲಿ ಸಿಂಹಾಸನಾಧೀಶನಗಿರುವ ಕಂಸನನ್ನು ಕೆಳಗುರುಳಿಸಿ ಕೊಲ್ಲುತ್ತಿರುವ ದೃಶ್ಯವಿದೆ.

*IV. ನಾಲ್ಕನೆಯ ಪಟ್ಟಿಕೆಯ ಚಿತ್ರಗಳು :* ಈ ಪಟ್ಟಿಕೆಯು ೫' × ೨.೫' ಅಳತೆಯಲ್ಲಿದ್ದು ಮಧ್ಯದಲ್ಲಿ ವಿಭಾಗಿಸಿ ಮೇಲಿನ ಭಾಗದಲ್ಲಿ ಒಂದು ಕೆಳಗಿನ ಭಾಗದಲ್ಲಿ ಒಂದು ಚಿತ್ರಗಳನ್ನು ರಚಿಸಿದ್ದಾರೆ. ಮೇಲಿನ ಭಾಗದಲ್ಲಿ ನವಗ್ರಹದ ಚಿತ್ರವಿದ್ದರೆ ಕೆಳಭಾಗದಲ್ಲಿ ಆಂಜನೇಯನ ಚಿತ್ರವಿದೆ.

೧. ನವಗ್ರಹದ ಚಿತ್ರಗಳು : ಇಲ್ಲಿ ಚೌಕಬಂದನ್ನು ರಚಿಸಿಕೊಂಡು ಅದರೊಳಗೆ ಇನ್ನೊಂದು ಚಿಕ್ಕಚೌಕ ರೂಪಿಸಿ ಒಳಭಾಗದಲ್ಲಿ ಆಯತ. ಚೌಕ. ತ್ರಿಕೋನ. ವೃತ್ತಗಳನ್ನು ಮಾಡಿಕೊಂಡು ಅದರಲ್ಲಿ ಇಂದ್ರ, ಅಶ್ವಿನೀದೇವತೆಗಳು. ಅಗ್ನಿ. ಪಿತೃದೇವತೆಗಳು. ಯಮ. ರೋಹಿಣಿ. ನಿರ್ಯತಿ. ವರುಣ. ವಾಯು. ರುದ್ರ, ಚಂದ್ರ(ಸೋಮ). ಕಾರ್ತಿಕೇಯ. ಕುಬೇರ. ಕ್ಷೇತ್ರಪಾಲ. ಈಶಾನ. ಆದಿತ್ಯ ರಲ್ಲದೇ ಗಣಪತಿ. ಕಾಳಿಮಾತೆಯರನ್ನು ಚಿತ್ರಿಸಲಾಗಿದೆ. ಆಯಾಪರಿವಾರ ದೇವತೆಗಳು ತಮ್ಮ ತಮ್ಮ ವಾಹನಗಳೊಂದಗೆ ಚಿತ್ರಿತರಾಗಿದ್ದಾರೆ. ಚಿತ್ರಗಳ ಮಧ್ಯದಲ್ಲಿ ಅಲ್ಲಲ್ಲಿ ಹೂಬಳ್ಳಿಯ ನಕ್ಷೆಯನ್ನು ರಚಿಸಲಾಗಿದೆ. ಚೌರಸವನ್ನು ರಚಿಸಿದ್ದು, ಅದರೊಳಗೆ ಅಂಕಣಗಳನ್ನು ರೂಪಿಸಿಕೊಂಡಿದ್ದು. ಆಯಾದಿಕ್ಕುಗಳಲ್ಲಿ ಸಂಬಂಧಿಸಿದ ಪರಿವಾರ ದೇವತೆಗಳನ್ನು ಚಿತ್ರಿಸಿದ್ದು ಶಾಸ್ತ್ರಪದ್ಧತಿಯನ್ನು ಅನುಸರಿಸಲಾಗಿದೆ.

೨. ಪಂಚಮುಖದ ಆಂಜನೇಯನ ಚಿತ್ರ : ಮಂಟಪದ ವಿನ್ಯಾಸದಲ್ಲಿ ಚಿತ್ರವನ್ನು ಇಲ್ಲಿ ರಚಿಸಲಾಗಿದ್ದು, ಐದು ಮುಖಗಳನ್ನು ಚಿತ್ರಿಸಲಾಗಿದೆ. ಚಿತ್ರದ ಹೆಚ್ಚಿನಭಾಗ ನಾಶವಾಗಿದ್ದು ಮೂರುಮುಖಗಳು ಮಾತ್ರ ಉಳಿದುಕೊಂಡಿವೆ. ಆಂಜನೇಯನ ಎಲ್ಲ ಐದೂ ತಲೆಗಳ ಮೇಲೂ ಕಿರಿಟಗಳನ್ನು ಚಿತ್ರಿಸಿದ್ದು ಆ ಕಿರೀಟ ಭಾಗದಲ್ಲಿ ಉಪಯೋಗಿಸಲಾದ ಬಂಗಾರ. ಬೆಳ್ಳಿಯ ಅಂಶಗಳನ್ನು ಕಿತ್ತುಕೊಳ್ಳಲು ಕೆರೆದು ನಾಶಪಡಿಸಲಾಗಿದೆ. ಎರಡಗೈಯಲ್ಲಿ ರಾಕ್ಷಸನ ಜುಟ್ಟು ಹಿಡಿದು ಆತನನ್ನು ಸಂಹರಿಸುತ್ತಿರುವ ಆಂಜನೇಯನು ಭೀಕರವಾಗಿ ಕಂಡುಬರುತ್ತಾನೆ. ಬಾಲವು ತಲೆಯ ಮೇಲಿನಿಂದ ಹಾಯ್ದು ಮುಂಭಾಗದಲ್ಲಿ ಇಳಿದಿದ್ದು ಅದಕ್ಕೆ ಗಂಟೆ ಕಟ್ಟಲಾಗಿದೆ. ರಾಕ್ಷಸನನ್ನು ಕಾಲಿನಿಂದ ಮೆಟ್ಟಿನಿಂತ ಆಂಜನೇಯನ ಸುತ್ತಲೂ ಅಲಂಕಾರಿಕ ಮಂಟಪ ವಿನ್ಯಾಸರಚಿಸಿ ಅದರಲ್ಲಿ ಹೂಬಳ್ಳಿಯ ನಕ್ಷೆ ರಚಿಸಿದೆ. ಕಾಲಿನ ಕೆಳಗೆ ಬಿದ್ದರುವ ರಾಕ್ಷಸನು ಸ್ವಲ್ಪವೂ ಕಾಣದಂತೆ ಆಭಾಗದ ವರ್ಣವು ಉದುರಿಹೋಗಿದೆ.

**೪. ಪೂರ್ವಗೋಡೆಯ ಚಿತ್ರಗಳು :** ಪೂರ್ವಭಾಗದಲ್ಲಿ ದೇವಾಲಯದ ಪ್ರವೇಶದ್ವಾರವಿದ್ದು, ಮುಂಭಾಗವು ತೆರೆದ ಮಂಟಪವಾಗಿದೆ. ತೆರೆದ ಮಂಟಪದ ಎಡಬಲದಲ್ಲಿನ ಗೋಡೆಯ ಚಾಚುಭಾಗದಲ್ಲಿ ಚಿತ್ರಗಳಿವೆ. ಇವುಗಳನ್ನೇ ಪೂರ್ವಗೋಡೆಯ ಚಿತ್ರಗಳೆಂದು ಇಲ್ಲಿ ಪರಿಗಣಿಸಿದೆ. ಪೂರ್ವಭಾಗದಲ್ಲಿ ಎಡಬಲಗಳಲ್ಲಿ ಗೋಡೆಯ

ಚಾಚುಭಾಗದಲ್ಲಿ ಪಟ್ಟಿಕೆಗಳನ್ನು ಮಾಡಿಕೆಕೊಂಡು ಚಿತ್ರರಚಿಸಲಾಗಿದೆ. ಈ ಚಿತ್ರಪಟ್ಟಿಕೆಯು ೫'×೨.೫' ಅಳತೆಯಲ್ಲಿದ್ದು ಮಧ್ಯದಲ್ಲಿ ಪಟ್ಟಿಕೆ ವಿಭಾಗಿಸಿ ಮೇಲೊಂದು ಕೆಳಗೊಂದು ಚಿತ್ರರಚಿಸಿದ್ದಾರೆ. ಮೇಲಿನ ಭಾಗದಲ್ಲಿ ಕಾಮಧೇನುವಿನ ಚಿತ್ರವಿದ್ದರೆ ಕೆಳಭಾಗದಲ್ಲಿ ಜಯವಿಜಯರ ಚಿತ್ರಗಳಿವೆ. ಕಾಮಧೇನು ಅಲಂಕಾರಿಕ ಪೀಠದ ಮೇಲೆ ಇರುವ ಈಶ್ವರಲಿಂಗಕ್ಕೆ ಹಾಲೆರೆಯುತ್ತಲಿದೆ. ಕೆಳಭಾಗದಲ್ಲಿರುವ ಜಯವಿಜಯರ ಚಿತ್ರಗಳು ಸಂಪೂರ್ಣನಾಶವಾಗಿವೆ. ಜಯವಿಜಯರ ಚಿತ್ರಗಳಲ್ಲಿ ಕಿರೀಟ, ಆಭರಣಗಳಿಗೆ ಬಂಗಾರ, ಬೆಳ್ಳಿಯನ್ನೇ ಬಳಸಲಾಗಿದ್ದು, ಬೆಳ್ಳಿಯ ಲೇಪನ ಇನ್ನೂ ಉಳಿದುಕೊಂಡಿದೆ. ಎರಡೂ ಬದಿಗೂ ಒಂದೇ ರೀತಿಯ ಚಿತ್ರಗಳಿವೆ.

**II. ಒಳಭಾಗದ ಚಿತ್ರಗಳು :** ದೇವಾಲಯದ ಒಳಭಾಗದಲ್ಲಿ ಗೋಡೆಯಮೇಲೆ, ಮರದ ಬಾಗಿಲಿನ ಮೇಲೆ, ಕಂಬಗಳ ಮೇಲೆ, ಮೇಲ್ಛಾವಣಿಗೆ ಅಳವಡಿಸಿದ ಮರದ ತೊಲೆಗಳ ಮೇಲೆ ಹೀಗೆ ವಿವಿಧ ಸ್ಥಳಗಳಲ್ಲಿ ಚಿತ್ರಗಳನ್ನು ರಚನೆಮಾಡಲಾಗಿದ್ದು, ಅಧ್ಯಯನ ಅನುಕೂಲಕ್ಕಾಗಿ ಒಳಭಾಗದ ಚಿತ್ರಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು.

೧. ಗೋಡೆಯ ಮೇಲಿನ ಚಿತ್ರಗಳು

೨. ಮರದ ಫಲಕರ ಮೇಲಿನ ಚಿತ್ರಗಳು

***೧. ಗೋಡೆಯ ಮೇಲಿನ ಚಿತ್ರಗಳು :*** ದೇವಾಲಯದ ಹೊರಭಾಗದ ಚಿತ್ರಗಳು ಕಿರುರೂಪಶೈಲಿಯ ಚಿತ್ರಗಳಾಗಿದ್ದರೆ ಒಳಭಾಗದ ಗೋಡೆಯ ಚಿತ್ರಗಳು ದೊಡ್ಡ ಪ್ರಮಾಣದ ಚಿತ್ರಗಳಾಗಿವೆ. ಇವುಗಳನ್ನು ಮತ್ತೆ ಈ ಕೆಳಗಿನಂತೆ ವಿಂಗಡಿಸಬಹುದು :

I. ಪಶ್ಚಿಮ ಗೋಡೆಯ ಚಿತ್ರಗಳು

II. ದಕ್ಷಿಣ ಗೋಡೆಯ ಚಿತ್ರಗಳು

III. ಉತ್ತರ ಗೋಡೆಯ ಚಿತ್ರಗಳು



*I. ಪಶ್ಚಿಮ ಗೋಡೆಯ ಚಿತ್ರಗಳು :* ದೇವಾಲಯದ ಗರ್ಭಗೃಹಕ್ಕೆ ಹೊಂದಿಕೊಂಡಿರುವ ಪಶ್ಚಿಮ ದಿಕ್ಕಿನ ಗೋಡೆಯಲ್ಲಿ ಎರಡು ದೊಡ್ಡ ಪಟ್ಟಿಕೆಗಳನ್ನು ರೂಪಿಸಿ ಅದರಲ್ಲಿ ಚಿತ್ರರಚಿಸಿದ್ದಾರೆ. ಈ ಚಿತ್ರಪಟ್ಟಿಕೆಗಳು ೩'×೨.೫' ಪೂಟುಗಳ ಅಳತೆಯಲ್ಲಿವೆ. ಬಲಭಾಗದಲ್ಲಿ ಏಕಮುಖದ ಶಿವನ ಚಿತ್ರವಿದ್ದರೆ ಎಡಭಾಗದಲ್ಲಿ ಪಂಚಮುಖದ ಶಿವನ ಚಿತ್ರವಿದೆ.

೧. ಏಕಮುಖದ ಶಿವನ ಚಿತ್ರ : ಗರ್ಭಗೃಹದ ಬಲಕ್ಕಿರುವ ಚಿತ್ರಪಟ್ಟಿಕೆಯಲ್ಲಿ ಈ ದೃಶ್ಯ ಚಿತ್ರಿಸಿದ್ದು ಇಲ್ಲಿ ಶಿವನು ನಂದಿಯಮೇಲೆ ಕುಳಿತಿದ್ದಾನೆ. ಆತನ ತೊಡೆಯ ಮೇಲೆ ಚಿಕ್ಕರೂಪಿನಿಂದಿರುವ ಪಾರ್ವತಿಯೂ ಚಿತ್ರಿಸಿದ್ದು, ಉಳಿದ ಶಿವಗಣಗಳು ಛತ್ರಚಾಮರ ಹಿಡಿದಕೊಂಡಿದ್ದಾರಲ್ಲದೇ ವಾದ್ಯಗಳನ್ನೂ ಬಾರಿಸುತ್ತಿದ್ದಾರೆ. ಮೇಲ್ಭಾಗದಲ್ಲಿ ದೇವತೆಗಳ ಸಮೂಹ ಪುಷ್ಪವೃಷ್ಠಿಯನ್ನು ಸುರಿಸುತ್ತಿದ್ದಾರೆ. ಬಣ್ಣ ಉದುರಿ, ಭಿತ್ತಿಹಾಳಾಗಿ ಚಿತ್ರದ ಅಧಿಕಭಾಗ ಹಾನಿಗೊಂಡಿರುವುದರಿಂದ ಹೆಚ್ಚಿನ ವಿವರಗಳು ತಿಳಿಯುವುದಿಲ್ಲ.

೨. ಪಂಚಮುಖದ ಶಿವ : ಇಲ್ಲಿ ಶಿವನು ಪಾರ್ವತಿ ಸಮೇತನಾಗಿ ಕೈಲಾಸಪರ್ವತದಲ್ಲಿ ಕುಳಿತಿದ್ದಾನೆ. ಶಿವನಿಗೆ ಐದುಮುಖಗಳನ್ನು ಚಿತ್ರಿಸಲಾಗಿದ್ದು ಎಲ್ಲ ಮುಖಗಳಿಗೂ ತಲೆಯ ಮೇಲೆ ಕೀರಿಟವಿದೆ. ಮಧ್ಯದ ತಲೆಯಿಂದ ಗಂಗೆ ಧುಮುಕುತ್ತಿದ್ದಾಳೆ. ಶಿವನಿಗೆ ಹತ್ತುಕೈಗಳನ್ನು ಚಿತ್ರಿಸಿದ್ದು ಪ್ರತಿಯೊಂದು ಕೈಗಳಲ್ಲೂ ಆಯುಧಗಳಿವೆ.

ಶಿವನ ಈ ಒಡ್ಡೋಲಗದಲ್ಲಿ ಬಲಗಡೆಗೆ ನಂದಿ, ಭೃಂಗಿ, ವೀರಭದ್ರರಿದ್ದರೆ ಎಡಗಡೆಗೆ ನಾರದ, ತುಂಬುರರಿದ್ದಾರೆ. ಮೇಲ್ಭಾಗದಲ್ಲಿ ಬಾಲವುಳ್ಳ, ಹಾರುತ್ತಿರುವಯಕ್ಷ ಕನ್ಯೆಯರು ಶಿವನಿಗೆ ಆರತಿ ಬೆಳಗುತ್ತಿದ್ದಾರೆ. ಈ ಚಿತ್ರದಲ್ಲಿ ಶಿವನ ಎಲ್ಲ ಮುಖಗಳಿಗೂ ಗಡ್ಡಮೀಸೆಗಳನ್ನು ಚಿತ್ರಿಸಿದ್ದು ಶಿವನ ಇದೇ ತೆರನಾದ ರೂಪವು ಉತ್ತರ ಕನ್ನಡ ಜಿಲ್ಲೆಯ ಕುಮಟಾದ ಮಹಾಲಸಾನಾರಾಯಣಿ ದೇವಾಲಯದ ಗೋಡೆಯಲ್ಲಿ ಕಾವಿ ಭಿತ್ತಿಚಿತ್ರದಲ್ಲಿಯೂ ರಚನೆಯಾಗಿದೆ.

*II. ದಕ್ಷಿಣ ಗೋಡೆಯ ಚಿತ್ರಗಳು :* ದಕ್ಷಿಣ ಗೋಡೆಯಲ್ಲಿ ಮೆರವಣಿಗೆ ದೃಶ್ಯ ಮತ್ತು ವಾಲ್ಮೀಕಿ ಮುನಿಯ ಚಿತ್ರ ರಚಿಸಲ್ಪಟ್ಟಿವೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಬಹುದು :

೧. ಮೆರವಣಿಗೆ ದೃಶ್ಯ : ಈ ಚಿತ್ರ ಪಟ್ಟಿಕೆಯು ೫'×೨' ಫೂಟುಗಳ ಅಳತೆಯಲ್ಲಿದ್ದು ಹಲವಾರು ಜನರು ಸಾಲಾಗಿ ಮೆರವಣಿಗೆ ಹೊರಟಿರುವುದು ಚಿತ್ರಿಸಿದೆ. ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು ಮೆರವಣಿಗೆ ಹೊರಟಿರುವ ಪೇಶ್ವೆದೊರೆಯ ಚಿತ್ರವಿದೆ. ಮೆರವಣಿಗೆಯ ಉದ್ದಸಾಲಿನಲ್ಲಿ ತೀರಮುಂದೆ ರಾಜಭಟರು, ಅವರ ಹಿಂದೆ ವಾದ್ಯಗಾರರು, ಅವರ ಹಿಂದೆ ಕುದುರೆ ಮೇಲೆ ಕುಳಿತ ಸೈನಿಕರು, ಆಸ್ಥಾನದ ಪ್ರಮುಖರು, ರಾಜದಂಡ ಹಿಡಿದುಕೊಂಡ ವ್ಯಕ್ತಿಗಳು. ಅವರ ಹಿಂದೆ ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತ ಪೇಶ್ವೆ ಶೈಲಿಯ ಉಡುಪುಧರಿಸಿದ ರಾಜ. ಆನೆಯ ಹಿಂದೆ ಛತ್ರಚಾಮರ ಹಿಡಿದ ಸೈನಿಕರು ಹೀಗೆ ಒಂದುಗೊತ್ತಾದ ಕ್ರಮದಲ್ಲಿ ಮೆರವಣಿಗೆ ಹೊರಟಂತೆ ಚಿತ್ರಿಸಲಾಗಿದೆ. ಇಲ್ಲಿಯೂ ಚಿತ್ರದ ಹೆಚ್ಚಿನ ಭಾಗನಾಶವಾಗಿದೆ.

೨. ವಾಲ್ಮೀಕಿ ಮುನಿಯ ಚಿತ್ರ : ಈ ಚಿತ್ರ ಪಟ್ಟಿಕೆಯ ೫'×೨.೫' ಅಳತೆಯಲಿದ್ದು ಮಧ್ಯದಲ್ಲಿ ವಿಭಾಗಿಸಿಕೊಂಡು ಮೇಲ್ಭಾಗದಲ್ಲಿ ವಾಲ್ಮೀಕಿ ಋಷಿಯ ಚಿತ್ರ ಕೆಳಭಾಗದಲ್ಲಿ ಆಂಜನೇಯನ ಚಿತ್ರಬರೆಯಲಾಗಿದೆ. ವಾಲ್ಮೀಕಿ ಮುನಿಯು ಪದ್ಮಾಸನದಲ್ಲಿ ಕುಳಿತಿದ್ದು ಬಲಗೈಯಲ್ಲಿ ರುದ್ರಾಕ್ಷಿಮಾಲೆ, ಎಡಗೈಯಲ್ಲಿ ಮರಾಠಿ ಭಾಷೆಯಲ್ಲಿ ಬರೆಯಲಾದ ಹಸ್ತಪ್ರತಿಯನ್ನು ಹಿಡಿದುಕೊಂಡಿರುವನು. ಬಹುಶಃ ಇದು ವಾಲ್ಮೀಕಿಯ ರಾಮಾಯಣ ರಚನೆಯನ್ನು ಪ್ರತಿನಿಧಿಸುತ್ತಿರಬೇಕು. ಮುನಿಯ ಮೈಬಣ್ಣ, ಪಂಚೆಯ ಬಣ್ಣ ಉದುರಿದ್ದರೂ ಆತ ಹಣೆಗೆ ಲೇಪಿಸಿಕೊಂಡ ನಾಮ ಮತ್ತು ಕುಂಕುಮಗಳು ಇನ್ನೂಸ್ಪಷ್ಟವಾಗಿವೆ. ಮುನಿಯ ಜಟೆ ಮತ್ತು ಗಡ್ಡ ಮೀಸೆಯ ಕೂದಲು ಬಿಳಿಯಾಗಿದ್ದು ಸೂಕ್ಷ್ಮವಾದ ರೇಖಾವಿನ್ಯಾಸದಿಂದ ರಚಿಸಿವೆ. ಕೆಳಭಾಗದಲ್ಲಿರುವ ಆಂಜನೇಯನ ಚಿತ್ರವು ಸಂಪೂರ್ಣನಾಶವಾಗಿದ್ದು ಯಾವುದೇ .ವಿವರಗಳು ತಿಳಿಯುವದಿಲ್ಲ.

*III. ಉತ್ತರ ಗೋಡೆಯ ಚಿತ್ರಗಳು :* ಉತ್ತರಗೋಡೆಯಲ್ಲಿ ಶೇಷಶಯನ ವಿಷ್ಣು ಮತ್ತು ಯೋಗ ಪಟ್ಟದಲ್ಲಿರುವ ಮುನಿಯ ಚಿತ್ರಗಳು ರಚನೆಯಾಗಿವೆ. ಅವುಗಳನ್ನು ಹೀಗೆ ವಿವರಿಸಹುದು.

೧. ಶೇಷಶಯನ ವಿಷ್ಣು : ಈ ಚಿತ್ರಪಟ್ಟಿಕೆಯು ೫'×೨' ಫೂಟುಗಳ ಆಯತಾಕಾರದಲ್ಲಿದ್ದು ಅದರಲ್ಲಿ ಶೇಷಶಯನ ವಿಷ್ಣುವಿನ ಚಿತ್ರರಚನೆಯಾಗಿದೆ. ಐದು ಹೆಡೆಗಳನ್ನು ಹೊಂದಿದ ಆದಿಶೇಷನ ಮೇಲೆ ನಾರಾಯಣನು ಪವಡಿಸಿದ್ದು. ಆತನ ಕಾಲುಗಳ ಬಳಿಯಲ್ಲಿ ಶ್ರೀದೇವಿ ಭೂದೇವಿಯರು ಸೇವೆಯಲ್ಲಿ ತೊಡಗಿದ್ದಾರೆ. ವಿಷ್ಣುವಿನ ನಾಭಿಯಿಂದ ಹುಟ್ಟಿದ ಕಮಲಪುಷ್ಪದಲ್ಲಿ ಬ್ರಹ್ಮನು ಚಿತ್ರಿಸಿದ್ದು. ಮೇಲ್ಭಾಗದಲ್ಲಿ ದೇವಕನ್ಯೆಯರು ವಿಷ್ಣುವಿಗೆ

ಹೂಗಳನ್ನು ಚೆಲ್ಲುತ್ತಿದ್ದಾರೆ. ವಿಷ್ಣುವಿನ ಎದುರು ಭಾಗದಲ್ಲಿ ದೇವತೆಗಳು ನಿಂತಿರುವಂತೆ ಚಿತ್ರಿಸಿದೆ. ಈ ದೇವತೆಗಳನ್ನು ಅಟ್ಟಣಿಗೆಯಂತಹ ಕವಲು ಪೀಠದ ಮೇಲೆ ಚಿತ್ರಿಸಲಾಗಿದ್ದು ಕಲಾವಿದನ ಕಲ್ಪನಾವಿಲಾಸವನ್ನು ಬಿಂಬಿಸುತ್ತದೆ. ಚಿತ್ರಪಟ್ಟಿಕೆಯ ಎಡಬಲಗಳಲ್ಲಿ ಅಲಂಕಾರಿಕ ಗಿಡಗಳನ್ನು ಚಿತ್ರಿಸಿದ್ದು, ಹೂಬಳ್ಳಿಯ ನಕ್ಷೆಯನ್ನು ಚಿತ್ರದ ಅಂಚಿಗೆ ರೂಪಿಸಲಾಗಿದೆ. ಶೇಷಶಯನ ವಿಷ್ಣುವಿನ ಸ್ವಲ್ಪ ಇದೇ ವಿನ್ಯಾಸವನ್ನು ಹೋಲುವ ಚಿತ್ರ ನರಗುಂದದ ಅರಮನೆಯಲ್ಲಿಯೂ ರಚಿಸಿದೆ. ಅಲ್ಲಿಯ ಚಿತ್ರಗಳೂ ಮರಾಠ ಪ್ರಭಾವದಿಂದ ಪ್ರೇರಿತವಾಗಿವೆ ಎನ್ನುವುದು ಇಲ್ಲಿ ಗಮನಾರ್ಹವಾಗಿದೆ.

೨. ಯೋಗಪಟ್ಟದಲ್ಲಿರುವ ಮುನಿಯ ಚಿತ್ರ : ಈ ಚಿತ್ರಪಟ್ಟಿಕೆಯು ೫' × ೨.೫' ಫೂಟು ಅಳತೆಯಲ್ಲಿದ್ದು ಮಧ್ಯದಲ್ಲಿ ವಿಭಾಗಿಸಿ ಮೇಲಿನಭಾಗದಲ್ಲಿ ಮುನಿಯ ಚಿತ್ರ ಕೆಳಗಿನ ಭಾಗದಲ್ಲಿ ಗರುಡನ ಚಿತ್ರ ರಚಿಸಲಾಗಿದೆ. ಮುನಿಯು ಎರಡೂ ಕಾಲುಗಳನ್ನು ಜೋಡಿಸಿಕೊಂಡು ಕತ್ತರಿಯ ವಿನ್ಯಾಸದಲ್ಲಿ ಇಟ್ಟುಕೊಂಡು ಅವುಗಳಿಗೆ ಹಗ್ಗ ಬಿಗಿದುಕೊಂಡು ಯೋಗಪಟ್ಟದಲ್ಲಿ ಕುಳಿತಿದ್ದಾನೆ. ತಪಸ್ಸು, ಉಪವಾಸಾದಿಗಳಿಂದ ದೇಹ ಕ್ಷೀಣವಾಗಿದ್ದರೂ ಕಣ್ಣುಗಳು ಕಾಂತಿಯಿಂದ ಕೂಡಿರುವಂತೆ ಚಿತ್ರಿಸಲ್ಪಟ್ಟಿದ್ದಾನೆ. ಕೊರಳಲ್ಲಿ, ಕೈಗಳಲ್ಲಿ, ಜಟೆಯಲ್ಲಿ ರುದ್ರಾಕ್ಷಿ ಮಾಲೆ ಧರಿಸಿದ್ದಾನೆ. ಮುನಿಯು ಹುಲಿಚರ್ಮದ ಮೇಲೆ ಕುಳಿತಿದ್ದು ಪಕ್ಕದಲ್ಲಿ ಆತನ ಕಮಂಡಲು ಆರಣಿಗಳು ಇಡಲ್ಪಟ್ಟಿವೆ. ಮುನಿಗಳು ಹೀಗೆ ಹಗ್ಗಸುತ್ತಿಕೊಂಡು ಯೋಗಪಟ್ಟದಲ್ಲಿರುವ ಚಿತ್ರಗಳು ಮಹಾಲಿಂಗಪುರದ ಮಹಾಲಿಂಗೇಶ್ವರ ಮಠದಲ್ಲಿಯೂ ರಚನೆಯಾಗಿವೆ. ಮುನಿಯ ಚಿತ್ರದ ಕೆಳಭಾಗದಲ್ಲಿ ಇಲ್ಲಿ ಗರುಡನ ಚಿತ್ರ ರಚನೆ ಮಾಡಿದ್ದು ಅದು ಸಂಪೂರ್ಣನಾಶವಾಗಿದೆ. ಗರುಡನ ಚಿತ್ರದ ಕಿರೀಟ, ಆಭರಣಗಳಿಗೆ ಬೆಳ್ಳಿಯನ್ನು ಬಳಸಲಾಗಿದ್ದು ವರ್ಣ ಉದುರಿಹೋದರೂ ಬೆಳ್ಳಿಯ ಲೇಪನ ಇನ್ನೂ ಉಳಿದುಕೊಂಡಿದೆ.

## ೨. ಮರದ ಫಲಕದ ಮೇಲಿನ ಚಿತ್ರಗಳು

ಮರದ ಫಲಕ ಮೇಲಿನ ಚಿತ್ರಗಳು ದೇವಾಲಯದ ಒಳಭಾಗದಲ್ಲಿ ಮತ್ತು ತೆರೆದ ಮಂಟಪದ ಹೊರಭಾಗದ ಜಂತಿಯ ತೊಲೆಗಳಲ್ಲಿಕಂಡುಬರುವುದರಿಂದ ಇವುಗಳನ್ನು ಸಹಿತ ಈ ಕೆಳಗಿನಂತೆ ವಿಂಗಡಿಸಿ ವಿವರಿಸಬಹುದು :

I. ಒಳಭಾಗದ ಚಿತ್ರಗಳು

II. ಹೊರಭಾಗದ ಚಿತ್ರಗಳು

**I. ಒಳಭಾಗದ ಚಿತ್ರಗಳು :** ಒಳಭಾಗದಲ್ಲಿ ಮರ ಮಾಧ್ಯಮದ ಮೇಲೆ ರಚಿಸಿದ ಚಿತ್ರಗಳೆಂದರೆ ಸಮುದ್ರ ಮಂಥನದೃಶ್ಯ. ದಶಾವತಾರಚಿತ್ರಗಳು. ಪರಿವಾರ ದೇವತೆಗಳ ಚಿತ್ರಗಳು. ಅಲಂಕಾರಿಕಗಿಡ ಮತ್ತು ಹೂಬಳ್ಳಿಯ ನಕ್ಷೆಗಳು. ಅವುಗಳನ್ನು ಒಂದೊಂದಾಗಿ ನೋಡಬಹುದು.

೧. ಸಮುದ್ರ ಮಂಥನ ದೃಶ್ಯ : ಗರ್ಭಗೃಹದ ಮೇಲ್ಭಾಗದ ಅಡ್ಡತೊಲೆಯ ಮೇಲೆ ಈ ಚಿತ್ರ ರಚನೆಯಾಗಿದೆ. ಚಿತ್ರರಚನೆಯಾದ ತೊಲೆಯ ಭಾಗವು ನಾಲ್ಕೂವರೆ ಫೂಟು ಉದ್ದ ೮ ಇಂಚು ಅಗಲವಾಗಿದೆ. ಕೆಂಪುವರ್ಣದ ಹಿನ್ನೆಲೆಯಲ್ಲಿ ಸಮುದ್ರಮಂಥನ ದೃಶ್ಯರಚಿಸಿದ್ದು, ಇದರಲ್ಲಿ ದೇವತೆಗಳು ಮತ್ತು ರಾಕ್ಷಸರು ಕೂಡಿಕೊಂಡು ವಾಸುಕಿ ಎಂಬ ಸರ್ಪವನ್ನು ಹಗ್ಗ ಮಾಡಿ, ಮಂದಾರ ಪರ್ವತವನ್ನೇ ಕಡಗೋಲು ಮಾಡಿಕೊಂಡು ಸಮುದ್ರವನ್ನು ಮಂಥನ ಮಾಡುತ್ತಿದ್ದಾರೆ. ಸಮುದ್ರಮಂಥನದಿಂದ ಉದ್ಭವಿಸಿದ ಕಾಮಧೇನು. ಉಚ್ಚೈಶ್ರವಸ್.

ಐರಾವತ. ಮಹಾಲಕ್ಷ್ಮೀ, ಶಂಖ, ಚಕ್ರಗಳಾದಿಯಾಗಿ ಇತರ ವಸ್ತುಗಳನ್ನೂ ಚಿತ್ರಿಸಿದೆ. ದೇವತೆಗಳ ಕಡೆಗೆ ಏಳುಜನರನ್ನು ಚಿತ್ರಿಸಿದ್ದು ಅವರು ಹಡೆಯ ಭಾಗವನ್ನು ಹಿಡಿದಿದ್ದಾರೆ. ಬಾಲದಕಡೆಗಿರುವ ದಾನವರು ಸಹಿತ ಏಳು ಜನರಿದ್ದು ದಷ್ಟಪುಷ್ಟವಾಗಿದ್ದಾರೆ. ಪರ್ವತವು ಸಮುದ್ರದಲ್ಲಿ ಮುಳುಗಿ ಹೋಗಲು ಶ್ರೀಹರಿಯು ಆಮೆಯ ರೂಪದಿಂದ ಅದನ್ನು ಎತ್ತಿಹಿಡಿದಿದ್ದು. ಆಮೆ ಹಳದಿಬಣ್ಣದಲ್ಲಿ ಚಿತ್ರಿಸಿದೆ. ಇಲ್ಲಿ ಪರ್ವತವನ್ನು ಒಂದು ಬೃಹದಾಕಾರದ ಗಿಡವನ್ನು ಚಿತ್ರಿಸಿ ಸಂಕೇತಿಸಲಾಗಿದ್ದು. ಕರ್ನಾಟಕದ ಇತರೆಡೆಯ ಸಮುದ್ರಮಂಥನ ದೃಶ್ಯಗಳಿಗಿಂತ ಭಿನ್ನವಾಗಿದೆ. ಸಮುದ್ರ ನೀರಿನಲ್ಲಿ ಕೆಳಗೆ ಮೀನು ಹಾವು. ಏಡಿ. ಕಪ್ಪೆಗಳಂತಹ ಜಲಚರಗಳನ್ನು ಚಿತ್ರಿಸಿದೆ. ಸಮುದ್ರಮಂಥನದಿಂದ ಉದ್ಭವಿಸಿದ ಅಮೃತ ಕಲಶಕ್ಕಾಗಿ ದೇವತೆಗಳು ಮತ್ತು ದಾನವರಲ್ಲಿ ಕಲಹವೇರ್ಪಟ್ಟಾಗ ಅಸುರನೊಬ್ಬ ಅದನ್ನು ಕಿತ್ತುಕೊಂಡು ಓಡುತ್ತಾನೆ. ಶ್ರೀ ಹರಿಯು ಮೋಹಿನಿ ರೂಪತಾಳಿ ಅಮೃತವನ್ನು ದಾನವರಿಂದ ಉಪಾಯವಾಗಿ ಪಡೆದುಕೊಂಡು ದೇವತೆಗಳನ್ನು ಸಾಲಾಗಿಕುಳ್ಳಿರಿಸಿ ಅಮೃತವನ್ನು ಹಂಚುತ್ತಾನೆ. ಆ ಸಾಲಿನಲ್ಲಿ ದಾನವನೂ ವೇಷಮರೆಸಿಕೊಂಡು ಕುಳಿತು ಅಮೃತ ಪಡೆಯುತ್ತಾನೆ. ಇದನ್ನು ತಿಳಿದ ವಿಷ್ಣು ತನ್ನ ಚಕ್ರದಿಂದ ಆತನನ್ನು ಸಂಹರಿಸುತ್ತಾನೆ. ಇಲ್ಲಿನ ಚಿತ್ರದಲ್ಲಿ ಮೇಲ್ಭಾಗದಲ್ಲಿ ದೇವತೆಗಳು ದಾನವರು ಸಾಲಾಗಿ ಅಮೃತ ಪಡೆಯಲು ಕುಳಿತುಕೊಂಡಿದ್ದಾರೆ. ಅಮೃತಕಲಶವನ್ನು ಹಿಡಿದ ಮೋಹಿನಿಯು ಸೌಟುಹಿಡಿದು ಅಮೃತ ಹಂಚಲು ಅಣಿಯಾಗಿದ್ದಾಳೆ. ವರ್ಣವಿನ್ಯಾಸ. ರೇಖಾಲಾಲಿತ್ಯ. ಆಕೃತಿಗಳ ಪ್ರಮಾಣಬದ್ಧತೆಯಿಂದ ಇದೊಂದು ಉತ್ತಮ ಚಿತ್ರವೆನ್ನಬಹುದು.

೨. ದಶಾವತಾರ ಚಿತ್ರಗಳು : ಸಮುದ್ರ ಮಂಥನ ದೃಶ್ಯದ ಎಡಬಲಗಳಲ್ಲಿನ ತೊಲೆಗಳಲ್ಲಿ ದಶಾವತಾರ ದೃಶ್ಯವನ್ನು ಚಿತ್ರಿಸಲಾಗಿದೆ. ಬಲಭಾಗದ ತೊಲೆಯಮೇಲೆ ಐದು ಎಡಭಾಗದ ತೊಲೆಯ ಮೇಲೆ ಐದು ಅವತಾರದ ಚಿತ್ರಗಳನ್ನು ಚಿತ್ರಿಸಿದ್ದಾರೆ. ೮ ಇಂಚು ಎತ್ತರ ೧೦ ಇಂಚು ಅಗಲವಾಗಿರುವ ಕಮಾನಿನಂತಹ ಆಕಾರಗಳನ್ನು ರೂಪಿಸಿಕೊಂಡು ಅದರಲ್ಲಿ ಚಿತ್ರರಚನೆ ಮಾಡಿದ್ದಾರೆ. ಬಲಭಾಗದಲ್ಲಿ ಮತ್ಸ್ಯ, ಕೂರ್ಮ. ವರಾಹ, ನರಸಿಂಹ ಹಾಗೂ ವಾಮನ ಅವತಾರಗಳಿದ್ದರೆ. ಎಡಭಾಗದಲ್ಲಿ ಪರುಶುರಾಮ, ರಾಮ, ಕೃಷ್ಣ, ಬೌದ್ಧ ಹಾಗೂ ಕಲ್ಕಿ ಅವತಾರದ ಚಿತ್ರಗಳಿವೆ. ಮತ್ಸ್ಯ ಅವತಾರದಲ್ಲಿ ಮೀನಿನ ರೂಪದಲ್ಲಿರುವ ವಿಷ್ಣುವು ರಾಕ್ಷಸನನ್ನು ಸಂಹರಿಸುತ್ತಿದ್ದಾನೆ. ವಿಷ್ಣುವಿನ ರೂಪವು ಸೊಂಟದ ಕೆಳಗಿನ ಭಾಗ ಮತ್ಸ್ಯರೂಪದಲ್ಲಿದ್ದರೆ, ಸೊಂಟದ ಮೇಲ್ಭಾಗವೆಲ್ಲ ಮಾನವರೂಪದಲ್ಲಿದೆ. ಕಿರೀಟಧಾರಿಯಾಗಿ ನಾಲ್ಕು ಕೈಗಳನ್ನು ಹೊಂದಿದ ವಿಷ್ಣುವು ರಾಕ್ಷಸನ ಜುಟ್ಟುಹಿಡಿದು ಕತ್ತಿಯಿಂದ ಆತನ ಸಂಹಾರಮಾಡುತ್ತಿದ್ದಾನೆ. ಇಲ್ಲಿ ವಿಷ್ಣುವಿಗೆ ನೀಲವಾದ ಮೈಬಣ್ಣವಿರದೇ ಕೆಂಪು ಮಿಶ್ರಿತ ಹಳದಿವರ್ಣವಿದೆ. ಕೂರ್ಮಾವತಾರದಲ್ಲಿಯೂ ಸೊಂಟದ ಕೆಳಗಿನ ಭಾಗ ಕೂರ್ಮರೂಪದಲ್ಲಿದೆ. ಜುಟ್ಟು ಹಿಡಿದು ಖಡ್ಗದಿಂದ ರಾಕ್ಷಸನನ್ನು ಸಂಹರಸುತ್ತಿರುವ ವಿಷ್ಣುವು ಗೌರವರ್ಣದಿಂದ ಕೂಡಿದ್ದಾನೆ. ಮತ್ಸ್ಯಾವತಾರದಲ್ಲಿ ಸ್ವಲ್ಪದಪ್ಪನಾದ ಮೀಸೆಗಳಿದ್ದರೆ, ಕೂರ್ಮಾವತತಾರದಲ್ಲಿನ ವಿಷ್ಣುವಿಗೆ ಅದಕ್ಕಿಂತ ತುಸುವೇ ತೆಳುವಾದ ಮೀಸೆಗಳಿವೆ. ಇಲ್ಲಿ ಮತ್ಸ್ಯವತಾರಿ ವಿಷ್ಣು, ಸಂಹರಿಸಲ್ಪಡುತ್ತಿರುವ ರಾಕ್ಷಸನಲ್ಲದೇ ದೂರದಲ್ಲಿ ಒಬ್ಬ ಸ್ತ್ರೀ ಆರತಿ ಬೆಳಗುತ್ತಿರುವಂತೆ ಚಿತ್ರಿಸಿದೆ. ವರಾಹಅವಾರತದಲ್ಲಿ ದೇಹವೆಲ್ಲ ಮಾನವನಾಕಾರವಿದ್ದು ಮುಖವು ವರಾಹ ರೂಪಿನಿಂದ ಕೂಡಿದೆ. ಇಲ್ಲಿಯೂ ರಾಕ್ಷಸನನ್ನು ಕಾಲಿನಿಂದ ಮೆಟ್ಟಿ ಆತನ ಜುಟ್ಟು ಹಿಡಿದು ಸಂಹರಿಸುತ್ತರುವಂತೆ ಚಿತ್ರಿಸಿದೆ. ದಟ್ಟ ಹಸಿರು ವರ್ಣದ ಧೋತರವನ್ನು ವರಾಹನಿಗೆ ಚಿತ್ರಿಸಿದ್ದು ಅದರಲ್ಲಿ ನಕ್ಷೆಯ ವಿನ್ಯಾಸಗಳಿವೆ. ನರಸಿಂಹ

ಅವತಾರದಲ್ಲಿ ಕಂಬವನ್ನು ಸೀಳಿಬಂದ ನರಸಿಂಹನು ಹಿರಣ್ಯಕಶ್ಯಪನನ್ನು ಹೊಟ್ಟೆಬಗಿದು ಕೊಲ್ಲುತ್ತಿದ್ದಾನೆ. ಸೀಳಿದ ಕಂಬದ ವಿನ್ಯಾಸವು ನರಸಿಂಹನ ಹಿಂಭಾಗದಲ್ಲಿರದೇ ಆತನ ಬಗಲಲ್ಲಿ ಹಾಯ್ದು ಮುಂದೆ ಚಾಚಿಕೊಂಡಿದೆ. ಸೀಳಿದ ಕಂಬದ ಸಣ್ಣ ತುಂಡುಗಳಲ್ಲೇ ನಕ್ಷಾವಿನ್ಯಾಸವನ್ನು ರಚಿಸಿದ್ದಾರೆ. ನರಸಿಂಹನ ಬಾಯಿ, ಮೈಕೈಗಳಿಗೆಲ್ಲ ರಕ್ತ ಮೆತ್ತಿಕೊಂಡಿದ್ದು, ಹಿರಣ್ಯಕಶ್ಯಪನ ಸೀಳಿದ ಹೊಟ್ಟೆಯಿಂದ ಧಾರಾಕಾರವಾಗಿ ರಕ್ತ ಹರಿಯುತ್ತಿದೆ.

ವಾಮನಾವತಾರದಲ್ಲಿ ಪ್ರಧಾನವಾಗಿರುವಂತೆ ವಾಮನ ಮೂರ್ತಿಯನ್ನೇ ಚಿತ್ರಿಸಿದ್ದು, ಬಲಿಚಕ್ರವರ್ತಿಯನ್ನು ಕೇವಲ ಮುಖಮಾತ್ರ ಚಿತ್ರಿಸಿ ಸಾಂಕೇತಿಸಿದೆ. ಹಸಿರು ಪಂಚೆ, ಕೆಂಪು ವಸ್ತ್ರ ತಲೆಯಲ್ಲಿ ಚಿತ್ರಿಸಿರುವುದು ವಿರುದ್ಧವರ್ಣಗಳಾದರೂ ಹಿನ್ನೆಲೆಯ ಕೆಂಪುವರ್ಣದಿಂದಾಗಿ ವರ್ಣಸಾಮರಸ್ಯ ಉಂಟಾಗಿದೆ. ಎಡಗೈಯಲ್ಲಿ ಕಮಂಡಲ, ಬಲಗೈಯಲ್ಲಿ ಛತ್ರಿಯನ್ನು ಹಿಡಿದ ವಾಮನನು ಕಾಲಿನಿಂದ ಬಲಿಯನ್ನು ಪಾತಾಳಕ್ಕೆ ತುಳಿಯುತ್ತಿದ್ದಾನೆ. ಒಂದು ಚೌಕಾದ ವಿನ್ಯಾಸ ರೂಪಿಸಿ ಅದರಲ್ಲಿ ಬಲಿಚಕ್ರವರ್ತಿಯ ತಲೆಯನ್ನು ಚಿತ್ರಿಸಲಾಗಿದೆ. ಆಕಾಶದಲ್ಲಿ ಕೆಂಪುಬಣ್ಣದ ಸೂರ್ಯನು ಚಿತ್ರಿತನಾಗಿದ್ದಾನೆ. ಪರಶುರಾಮ ಅವತಾರದಲ್ಲಿ ಸಹಸ್ರಾರ್ಜುನನ ಚಿತ್ರವನ್ನು ಚಿಕ್ಕದಾಗಿ ಪರಶುರಾಮನ ಚಿತ್ರವನ್ನು ದೊಡ್ಡದಾಗಿ ಬರೆಯಲಾಗಿದೆ. ಇಲ್ಲಿ ಸಹಸ್ರಾರ್ಜುನನಿಗೆ ನಾಲ್ಕು ಕೈಗಳನ್ನು ಚಿತ್ರಿಸಿದ್ದು ಪರಶುರಾಮನಿಗೆ ಎರಡು ಕೈಗಳಿವೆ. ಕೊಡಲಿಯು ಪರಶುರಾಮನ ಆಯುಧವಾಗಿದ್ದು ಅದರಿಂದಲೇ ಸಹಸ್ರಾರ್ಜುನನನ್ನು ಸಂಹರಿಸುತ್ತಿದ್ದಾನೆ. ರಾಮಾವತಾರದಲ್ಲಿ ದಟ್ಟ ನೀಲವರ್ಣದ ರಾಮನನ್ನು ದೊಡ್ಡದಾಗಿಯೂ ಹತ್ತುತಲೆಯ ರಾವಣನನ್ನು ಚಿಕ್ಕದಾಗಿಯೂ ಚಿತ್ರಿಸಿದೆ. ತಲೆಯಮೇಲೆ ಕಿರೀಟಧರಿಸಿದ ರಾಮನು ಕಂದುಬಣ್ಣದ ಗೆರೆಗಳ ನಕ್ಷೆಇರುವ ಉದ್ದತೋಳಿನ ಅಂಗಿ ಧರಿಸಿದ್ದಾನೆ. ತೆಳುಹಳದಿ ಬಣ್ಣದ ಪಂಚೆ ಉಟ್ಟುಕೊಂಡಿದ್ದು ಅದೇ ವರ್ಣದ ವಸ್ತ್ರವನ್ನು ನಡುವಿಗೆ ಕಟ್ಟಿದ್ದಾನೆ. ರಾಮನಿಂದ ಸಂಹರಿಸಲ್ಪಡುತ್ತಿರುವ ರಾವಣನು ಇಪ್ಪತ್ತು ತೋಳುಗಳನ್ನು ಹೊಂದಿದ್ದು ಅವುಗಳಲ್ಲಿ ಆಯುಧಗಳನ್ನು ಹಿಡಿದಿದ್ದಾನೆ. ಕೃಷ್ಣಾವತಾರದಲ್ಲಿ ಕೊಳಲು ನುಡಿಸುತ್ತಿರುವಂತೆಯೇ ಕೃಷ್ಣನು ರಾಕ್ಷಸನ ಸಂಹಾರದಲ್ಲಿಯೂ ತೊಡಗಿದ್ದಾನೆ. ರಾಕ್ಷಸನ ಜುಟ್ಟುಹಿಡಿದು ಎಳೆಯುತ್ತಿರುವ ಕೃಷ್ಣನಿಗೆ ರಾಕ್ಷಸನಿಗಿಂತ ದಪ್ಪನಾದ ಮೀಸೆ ಚಿತ್ರಿಸಲಾಗಿದೆ. ಬೌದ್ಧಾವತಾರದಲ್ಲಿ ಪದ್ಮಾಸನದಲ್ಲಿ ಕುಳಿತ ಬುದ್ಧನು ಕೈಗಳನ್ನು ಮುಂದಿಟ್ಟುಕೊಂಡು ಕುಳಿತಿದ್ದಾನೆ. ಅಲಂಕಾರಯುಕ್ತವಾದ ಪೀಠದ ಮೇಲೆ ಬುದ್ಧ ಚಿತ್ರಿಸಲ್ಪಟ್ಟಿದ್ದು ಆತನ ಹಿಂದೆ ಆನಿಕೆಯದಿಂಬು ಚಿತ್ರಿಸಿದೆ. ಬುದ್ಧನ ಅಕ್ಕಪಕ್ಕದಲ್ಲಿ ಚಾಮರ ಬೀಸುವ ಸ್ತ್ರೀಯರು ಚಿತ್ರಿತರಾಗಿದ್ದಾರೆ. ಉತ್ತರ ಕರ್ನಾಟಕದ ಉಳಿದೆಡೆಯ ಬೌದ್ಧಾವತಾರ ಚಿತ್ರಗಳಿಗಿಂತ ಇದು ಭಿನ್ನ ಶೈಲಿಯಲ್ಲಿದೆ. ಕಲ್ಕಿ ಅವತಾರದಲ್ಲಿ ಕುದುರೆಯ ಮೇಲೆ ಕೊಡೆಯನ್ನು ಕಟ್ಟಿ ಅದನ್ನು ಹಗ್ಗಹಿಡಿದು ನಡೆಸುತ್ತಿರುವಂತೆ ಚಿತ್ರಿಸಿದೆ. ಕುದುರೆಯ ಆಕಾರ, ಪ್ರಮಾಣಗಳು, ಅದರ ರೇಖಾವಿನ್ಯಾಸಗಳು ಉತ್ತಮವಾಗಿವೆ. ಈ ದಶಾವತಾರ ಚಿತ್ರಗಳು ಇದೇ ಜಿಲ್ಲೆಯಲ್ಲಿಯ ಕಾವಿ ಚಿತ್ರಗಳ ದಶಾವತಾರ ಚಿತ್ರಗಳಿಗಿಂತ ಬೇರೆ ವಿನ್ಯಾಸದಲ್ಲಿ ಚಿತ್ರಿಸಲ್ಪಟ್ಟಿವೆ.

೩. ಪರಿವಾರ ದೇವತೆಗಳ ಚಿತ್ರಗಳು : ಉತ್ತರ ಭಾಗದ ತೊಲೆಯ ಮೇಲೆ ಪರಿವಾರ ದೇವತೆಗಳನ್ನು ಚಿತ್ರಿಸಿದೆ. ದಶಾವತಾರ ಚಿತ್ರಗಳನ್ನು ರಚಿಸಿದಂತಹ ಮಂಟಪದಂತಹ ವಿನ್ಯಾಸಗಳಲ್ಲೇ ಈ ಚಿತ್ರಗಳೂ ರಚಿಸಿವೆ. ಆನೆಯ ಮೇಲೆ ಕುಳಿತ ದೇವತಾಪುರುಷ, ಆನೆ, ಸಿಂಹ, ಹುಲಿ, ಜಿರತೆಗಳು ಸಂಯುಕ್ತಗೊಂಡ ವಿಚಿತ್ರ ಪ್ರಾಣಿಯಮೇಲೆ ಕುಳಿತ ದೇವತಾ ಪುರುಷ, ಟಗರಿನ ಮೇಲೆ ಕುಳಿತ ಎರಡುಮುಖ ಹೊಂದಿದ ದೇವತಾಪುರುಷ,

ಮನುಷ್ಯನ ಮೇಲೆ ಕುಳಿತ ದೇವತಾಪುರುಷ. ನಂದಿಯ ಮೇಲೆ ಕುಳಿತ ದೇವತಾಪುರುಷ ಕುದುರೆಯ ಮೇಲೆ ಕುಳಿತ ದೇವತಾಪುರುಷ. ಚಿತ್ರಗಳು ಇಲ್ಲಿ ರಚಿಸಿವೆ. ಇಂತಹ ದೇವತಾಪುರುಷರ ಚಿತ್ರಗಳು ಸಿರ್ಸಿಯ ಮಾರಿಕಾಂಬಾ ದೇವಾಲಯ. ಮತ್ತು ಹೊನ್ನಾವರದ ಶ್ರೀ ರಾಮಮಂದಿರದಲ್ಲಿ ಕಾವಿ ಭಿತ್ತಿಚಿತ್ರಗಳಲ್ಲಿಯೂ ಕಂಡುಬರುತ್ತವೆ. ಈ ಸಾಲಿನಲ್ಲಿ ಈ ದೇವತಾ ಚಿತ್ರಗಳಲ್ಲದೇ ಹಾವನ್ನು ನುಂಗುತ್ತಿರುವ ನವಿಲು, ವಿಚಿತ್ರಪಕ್ಷಿಯ ಚಿತ್ರಗಳೂ ಕಂಡುಬರುತ್ತವೆ.

೪. ಅಲಂಕಾರಿಕ ಗಿಡದ ಚಿತ್ರಗಳು : ದೇವಾಲಯದಲ್ಲಿರುವ ಕಟ್ಟಿಗೆಯ ಕಂಬಗಳ ಮೇಲೆ ಕಂಬದುದ್ದಕ್ಕೂ ಎತ್ತರವಾದ ಅಲಂಕಾರಿಕ ಗಿಡದ ಚಿತ್ರಗಳನ್ನು ಬರೆಯಲಾಗಿದೆ. ಈ ಗಿಡಗಳ ಸ್ವರೂಪ ಜ್ಯಾಮಿತಿಕ ರೂಪದಲ್ಲಿದ್ದರೆ ಅದರೊಳಗಿನ ಎಲೆಯ ವಿನ್ಯಾಸ ನೈಜಶೈಲಿಯಲ್ಲಿದೆ. ಮೇಲಕ್ಕೆ ಹೋದಂತೆ ಚೂಪಾಗುತ್ತ ಸಾಗುವ ಗಿಡದ ತುದಿಯು ಬಾಗಿಕೊಂಡಿದ್ದು ತುದಿಯಲ್ಲಿ ಹೂಗೊಂಚಲು ಚಿತ್ರಿಸಲಾಗಿದೆ. ಕಾಂಡದ ಎಡಬಗಲಗಳಲ್ಲಿ ಸಾಲಾಗಿ ಎಲೆಗಳನ್ನು ರಚಿಸಲಾಗಿದ್ದು. ಇಡಿ ಗಿಡವು ಸಹಿತ ಒಂದು ಎಲೆಯ ರೂಪದಲ್ಲಿದೆ. ಎಡಬಲಗಳಲ್ಲಿನ ಕಂಬಗಳಲ್ಲಿ ಇಂತಹ ಗಿಡಗಳಿದ್ದು ಒಂದು ಗಿಡದ ತುದಿಯಲ್ಲಿ ಗಿಳಿಯನ್ನು ಚಿತ್ರಿಸಲಾಗಿದೆ.

೫. ಹೂಬಳ್ಳಿಯ ನಕ್ಷೆಗಳು : ಬಾಗಿಲಿನ ಸುತ್ತಲೂ ಇರುವ ಪಟ್ಟಿಕೆಗಳು, ಬಾಗಿಲಿನ ಮೇಲ್ಭಾಗದ ಸಮುದ್ರಮಂಥನ ಚಿತ್ರದ ಕೆಳಭಗಾದ ತೊಲೆ. ದಶಾವತಾರ. ಪರಿವಾರದೇವತೆಗಳ ಚಿತ್ರಗಳಿರುವ ಕೆಳಭಾಗದ ತೊಲೆಗಳು. ಮತ್ತು ಚಿತ್ರಪಟ್ಟಿಕೆಯ ಅಂಚುಗಳಿಗೆ ಹೂ ಬಳ್ಳಿಯ ನಕ್ಷೆಗಳನ್ನು ಚಿತ್ರಿಸಿದೆ. ಚಿತ್ರದ ಅಂಚುಗಳಿಗೆ ಚಿಕ್ಕಪ್ರಮಾಣದ ನಕ್ಷೆಗಳಿದ್ದರೆ. ತೊಲೆಯ ಭಾಗದಲ್ಲಿರುವ ಹೂಬ್ಬಳ್ಳಿಯ ನಕ್ಷೆಗಳು ದೊಡ್ಡ ಪ್ರಮಾಣದಲ್ಲಿದ್ದು, ನೈಜ ಶೈಲಿಯಲ್ಲಿವೆ. ಕೆಂಪು ಹೂಗಳು. ಹಸಿರು ಎಲೆಗಳು. ಚಿತ್ರಿಸಲ್ಪಟ್ಟಿರುವುದು ಇಲ್ಲಿ ಹೆಚ್ಚಾಗಿದೆ. ಮುಖ್ಯಚಿತ್ರಗಳ ಹಿನ್ನೆಲೆ ಕೆಂಪುವರ್ಣದಿಂದ ಕೂಡಿದ್ದರೆ ಹೂಬಳ್ಳಿಯ ನಕ್ಷೆಯು ಹಳದಿ ವರ್ಣದ ಹಿನ್ನೆಲೆಯಿಂದ ರಚಿಸಿದೆ.

**II. ಹೊರಭಾಗದ ಚಿತ್ರಗಳು :** ಹೊರಭಾಗದಲ್ಲಿನ ತೊಲೆಯ ಮೇಲೆ ಲಿಂಗಪೂಜೆ, ಪೇಶ್ವೆದೊರೆಯ ಬೇಟೆಯ ಮೆರವಣಿಗೆ. ಬ್ರಿಟಿಷ್ ಅಧಿಕಾರಿಯ ಬೇಟೆಯ ಸನ್ನಿವೇಶಗಳು, ಮಂಗಗಳು, ದ್ವಾರಪಾಲಕರು, ಆಕಳನ್ನು ಕೊಂದು ತಿನ್ನುತ್ತಿರುವ ಹುಲಿಗಳು. ಆನೆ ಮತ್ತು ನಂದಿ ಸಂಯುಕ್ತಗೊಂಡ ಚಮತ್ಕಾರೀ ಚಿತ್ರಗಳು ರಚನೆಯಾಗಿವೆ. ಅವುಗಳನ್ನು ಒಂದೊಂದಾಗಿ ಹೀಗೆ ವಿವರಿಸಬಹುದು.

೧. ಲಿಂಗಪೂಜೆಯ ಚಿತ್ರ : ದೇವಾಲಯದ ಪ್ರವೇಶದ್ವಾರದ ಮೇಲಿನ ಭಾಗದ ತೊಲೆಯ ಮೇಲೆ ಈ ಚಿತ್ರವಿದೆ. ನಾಲ್ಕುವರೆ ಫೂಟು ಉದ್ದ ೮ ಇಂಚುಗಳ ಎತ್ತರದ ಸ್ಥಳವಿನ್ಯಾಸದಲ್ಲಿ ಈ ಚಿತ್ರರಚಿಸಿದೆ. ಮಧ್ಯದಲ್ಲಿ ಕಂಬಗಳನ್ನು ಹೊಂದಿದ ತೆರೆದ ಮಂಟಪದಲ್ಲಿ ಈಶ್ವರಲಿಂಗವನ್ನು ಚಿತ್ರಿಸಲಾಗಿದ್ದು, ಲಿಂಗದ ಮೇಲ್ಭಾಗವನ್ನು ಮನುಷ್ಯ ಮುಖದ ವಿನ್ಯಾಸದಲ್ಲಿ ರೂಪಿಸಿದೆ. ಲಿಂಗಕ್ಕೆ ಕಣ್ಣು ಮೂಗು. ಮೀಸೆ. ಬಾಯಿಗಳನ್ನಲ್ಲದೇ ಕೈಗಳನ್ನು ಚಿತ್ರಿಸಲಾಗಿದೆ. ಲಿಂಗದ ಮೇಲೆ ಬಿಳಿಯ ಹೂಮಾಲೆ ನೇತಾಡುತ್ತಿದೆ. ಲಿಂಗವಿರುವ ಮಂಟಪದ ಮೇಲೆ ಕಳಶವನ್ನು ಚಿತ್ರಿಸಿದೆ. ಅದರ ಕಂಬಗಳು ನೇರವಾಗಿರದೇ ಅಲಂಕಾರ ವಿನ್ಯಾಸದಲ್ಲಿವೆ. ಲಿಂಗಮಂಟಪದ ಎಡಭಾಗದಲ್ಲಿ ಒಂದೊಂದು ದೀಪದ ಸಮೆಗಳನ್ನು ಹಚ್ಚಿ ಇಡಲಾಗಿದೆ. ಸಮೆಗಳ ಪಕ್ಕದಲ್ಲಿ ಇಬ್ಬರು ಚಂಡಿಕೆ ಬಿಟ್ಟ ಪೂಜಾರಿಗಳು ಪೂಜಾನಿರತರಾಗಿದ್ದಾರೆ. ಬಲಗಡೆಯ ಪೂಜಾರಿ ಜಾಗಟೆ ಬಾರಿಸುತ್ತಿದ್ದರೆ, ಎಡಗಡೆಯ ಪೂಜಾರಿ ಧೂಪಾರತಿ

ಬೆಳಗುತ್ತ ಗಂಟೆ ಬಾರಿಸುತ್ತಿದ್ದಾನೆ. ಪೂಜಾರಿಗಳ ಹಿಂದೆ ನಂದಿಗಳು ಕುಳಿತಿವೆ. ಬಲಬದಿಯ ನಂದಿನ ಹಿಂಭಾಗದಲ್ಲಿರುವ ಇನ್ನೊಬ್ಬ ವ್ಯಕ್ತಿ ನಗಾರಿ ಬಾರಿಸುತ್ತಿದ್ದರೆ ಎಡಭಾಗದ ನಂದಿಯ ಹಿಂದಿನ ಮನುಷ್ಯ ಕಹಳೆಯೂದುತ್ತಿದ್ದಾನೆ. ಪೂಜೆ ಮಾಡುತ್ತಿರುವ ಪೂಜಾರಿಗಳು ಪಂಚೆಉಟ್ಟು ಹೆಗಲಲ್ಲಿ ಶಾಲುಹೊದ್ದುಕೊಂಡಿದ್ದಾರೆ. ನಗಾರಿಬಾರಿಸುತ್ತಿರುವ ವ್ಯಕ್ತಿ ಮತ್ತು ಕಹಳೆ ಊದುತ್ತಿರುವ ವ್ಯಕ್ತಿಗಳು ಪೇಶ್ವೆಶೈಲಿಯ ಟೊಪ್ಪಿಗೆ ಧರಿಸಿದ್ದಾರೆ. ಚಿತ್ರದ ರೇಖಾವಿನ್ಯಾಸ ಉತ್ತಮವಾಗಿದ್ದು. ನೀಲಿ. ಬಿಳಿ. ಕಪ್ಪು. ಹಸಿರು ಹೀಗೆ ಸೀಮಿತ ವರ್ಣಗಳು ಬಳಕೆಗೊಂಡಿವೆ. ಹಿನ್ನೆಲೆಯು ಕೆಂಪುವರ್ಣದಿಂದ ಕೂಡಿದೆ.

೨. ಪೇಶ್ವೆದೊರೆಯ ಬೇಟೆಯ ಮೆರವಣಿಗೆ : ಈ ಚಿತ್ರವು ಪ್ರವೇಶದ್ವಾರದ ಬಲಭಾಗದ ತೊಲೆಯ ಮೇಲೆ ರಚಿಸಿದ್ದು. ನಾಲ್ಕೂವರೆ ಫೂಟು ಉದ್ದ ೮ ಇಂಚು ಎತ್ತರ ಹೊಂದಿದೆ. ಇಲ್ಲಿ ಪೇಶ್ವೆದೊರೆಯು ಮೇಣೆಯಲ್ಲಿ ಕುಳಿತು ಬೇಟೆಗೆ ಹೊರಟಿದ್ದು. ಆತನ ಬೇಟೆಯ ಮೆರವಣಿಗೆಯಲ್ಲಿ ಅನೇಕ ಜನರು, ಪ್ರಾಣಿಗಳು ಚಿತ್ರಿಸಿವೆ. ತೀರ ಮುಂದಿನ ಭಾಗದಲ್ಲಿ ಆನೆ ಅದರಮೇಲೆ ಇಬ್ಬರು ವ್ಯಕ್ತಿಗಳಿದ್ದಾರೆ. ಆನೆಯ ಹಿಂದೆ ಇಬ್ಬರು ಕುದುರೆಸವಾರರಿದ್ದು, ಒಂದು ಬಿಳಿಕುದುರೆ ಇನ್ನೊಂದು ತಿಳಿನೀಲಿವರ್ಣದ ಕುದುರೆಯಾಗಿದೆ. ಇಬ್ಬರೂ ಕೈಗಳಲ್ಲಿ ಉದ್ದವಾದ ಭಲ್ಲೆಗಳನ್ನು ಹಿಡಿದಿದ್ದಾರೆ ಕುದುರೆಗಳ ಪಕ್ಕದಲ್ಲಿಯೇ ಗಿಡ್ಡಾಗಿರುವ ಬೇಟೆನಾಯಿಯೊಂದು ಓಡುತ್ತ ಹಿಂಬಾಲಿಸುತ್ತಿದೆ. ಕುದುರೆಗಳ ಹಿಂದೆ ಇಬ್ಬರು ಸೈನಿಕರಿದ್ದು ಒಬ್ಬನು ಪೇಶ್ವೆಶೈಲಿಯ ಟೊಪ್ಪಿಗೆ ಧರಿಸಿದ್ದರೆ, ಇನ್ನೊಬ್ಬ ಪಾಶ್ಚಾತ್ಯಶೈಲಿಯ ಹ್ಯಾಟು ಹೊಂದಿದ್ದಾನೆ. ಇಬ್ಬರ ಕೈಗಳಲ್ಲಿಯೂ ಚೂಪಾದ ಭರ್ಚಿಯಂತಹ ಕಟ್ಟಿಗೆಯ ತುದಿಗೆ ಬಂಧಿಸಲ್ಪಟ್ಟ ಆಯುಧಗಳಿವೆ. ಇವರ ಕಾಲಸಂದಿಯಲ್ಲಿ ಇನ್ನೊಂದು ಕಂದುಬಣ್ಣದ ಬೇಟೆನಾಯಿ ಹೊರಟಿದೆ. ಈ ಸೈನಿಕರ ಹಿಂದೆ ಪೇಶ್ವೆದೊರೆ ಮೇನೆಯಲ್ಲಿ ಕುಳಿತು ಬರುತ್ತಿದ್ದಾನೆ. ಮೇನೆಯನ್ನು ನಾಲ್ವರು ವ್ಯಕ್ತಿಗಳು ಹೊತ್ತುಕೊಂಡಿದ್ದಾರೆ. ಮೇನೆಯಲ್ಲಿನ ಪೇಶ್ವೆದೊರೆಯು ಮೆತ್ತನೆಯ ಲೋಡಿಗೆ ಒರಗಿಕೊಂಡು ಆರಾಮವಾಗಿ ಕುಳಿತಿದ್ದಾನೆ. ಮೇನೆಯು ಕೆಳಗೆ ಕಾಲುಗಳನ್ನು ಹೊಂದಿದ್ದು ಮೇಲೆ ಉಬ್ಬಿರುವ ಛಾವಣಿಯನ್ನು ಹೊಂದಿದೆ. ಈ ಮೇನೆಯು ಸೂಕ್ಷ್ಮವಿವರಗಳಿಂದ ಚಿತ್ರಿಸಿದ್ದು. ಹಿಂದಿನ ಕಾಲದ ಮೇನೆಗಳ ಸ್ವರೂಪವನ್ನು ಇಲ್ಲಿ ತಿಳಿದುಕೊಳ್ಳಬಹುದಾಗಿದೆ. ದೊರೆಯ ಮೇನೆಯ ಹಿಂಭಾಗದಲ್ಲಿ ಮತ್ತಿಬ್ಬರು ಸೈನಿಕರಿದ್ದು ಅವರು ಖಡ್ಗಢಾಲುಗಳನ್ನು ಹಿಡಿದಿದ್ದಾರೆ. ಇವರು ಮುಸ್ಲಿಮರಂತೆ ಕಾಣುತ್ತಿದ್ದು ಪೇಶ್ವೆ ಸೈನ್ಯದಲ್ಲಿದ್ದ ಮುಸ್ಲಿಂ ಸೈನಿಕರಾಗಿರಬಹುದು. ಇವರ ಹಿಂದುಗಡೆ ಮತ್ತೊಬ್ಬ ಕುದುರೆಸವಾರನಿದ್ದು ಆತನೂ ಕೈಯಲ್ಲಿ ಖಡ್ಗಹಿಡಿದಿದ್ದಾನೆ. ನಸುಕಂದುಬಣ್ಣದ ಕುದುರೆಯ ಮೇಲೆ ಅಲ್ಲಲ್ಲಿ ಬಿಳಿಮಚ್ಚೆಗಳಿವೆ. ಈ ಕುದುರೆಸವಾರನ ಹಿಂದೆ ಮತ್ತೊಂದು ಬೇಟೆನಾಯಿ ಬೊಗಳುತ್ತಸಾಗಿದೆ. ಈ ಚಿತ್ರದಲ್ಲಿ ಯಾವ ವ್ಯಕ್ತಿಯ ಕೈಯಲ್ಲೂ ಕೋವಿಯಂತಹ ಆಯುಧವಿಲ್ಲ ಎಂಬುದು ಗಮನಾರ್ಹ.

೩. ಬ್ರಿಟೀಷ ಅಧಿಕಾರಿಗಳ ಬೇಟೆಯ ಚಿತ್ರ : ಪ್ರವೇಶ ದ್ವಾರದ ಎಡಭಾಗದ ತೊಲೆಯ ಮೇಲೆ ರಚಿಸಿರುವ ಈ ಚಿತ್ರವು ನಾಲ್ಕೂವರೆ ಫೂಟು ಉದ್ದ, ೮ ಇಂಚು ಎತ್ತರವಾಗಿದೆ. ಇಬ್ಬರು ಬ್ರಿಟೀಷ್ ಅಧಿಕಾರಿಗಳು ತಮ್ಮ ಸೈನಿಕರ ಜೊತೆಯಾಗಿ ಬೇಟೆಗೆ ಹೊರಟಿದ್ದಾರೆ. ಒಟ್ಟು ಎಂಟು ಜನ ಬ್ರಿಟೀಷ ಸೈನಿಕರು ಸಾಲಾಗಿ ಹೋಗುತ್ತಿದ್ದು ಸಾಲಿನ ಮಧ್ಯದಲ್ಲಿ ಇಬ್ಬರು ಕುದುರೆ ಮೇಲೆ ಕುಳಿತ ಅಧಿಕಾರಿಗಳೂ ಇದ್ದಾರೆ. ಸಾಲಾಗಿ ಹೋಗುತ್ತಿರುವ ಬ್ರಿಟೀಷ್ ಸೈನಿಕರೆಲ್ಲ ಒಂದೇ ಸಮವಸ್ತ್ರ ಧರಿಸಿ. ಒಂದೇ ವಿಧವಾದ ಆಯುಧ

ಹಿಡಿದಿದ್ದಾರೆ. ನಸುಕಂದು ಬಣ್ಣದ ಅಂಗಿ. ತಿಳಿನೀಲಿವರ್ಣದ ಪ್ಯಾಂಟು. ತಲೆಯಲ್ಲಿ ಕಪ್ಪು ಹ್ಯಾಟುಗಳನ್ನು ಧರಿಸಿದ ಸೈನಿಕರೆಲ್ಲ ಕೋವಿಗಳನ್ನು ಹಿಡಿದಿದ್ದಾರೆ. ಕೋವಿಗಳ ಮುಂದಿರುವ ಚೂಪಾದ ಬಾನೆಟ್ ಬಾಣದ ವಿನ್ಯಾಸದಲ್ಲಿದೆ. ಎಲ್ಲರೂ ಬೆನ್ನಿಗೆ ಚೀಲಗಳನ್ನು ಏರಿಸಿದ್ದಾರಲ್ಲದೇ ಬಗಲಲ್ಲಿ ನೀರಿನ ಚೀಲಗಳನ್ನು ಹಾಕಿಕೊಂಡಿದ್ದಾರೆ. ಬ್ರಿಟೀಷರು ಬೇಟೆಗೆ ಹೊರಡುವಾಗ ಸ್ಥಳೀಯ ವ್ಯಕ್ತಿಯನ್ನೂ ಸಹಾಯಕ್ಕೆ ಕರೆದುಕೊಂಡು ಹೊರಟಿದ್ದು. ಆತ ಶಿರಾಮುಂದುಗಡೆಗೆ ಬಡಿಗೆಯನ್ನು ಹಿಡಿದುಕೊಂಡ ತಲೆಯ ಮೇಲೆ ಕಂಬಳಿಯನ್ನು ಹೊದ್ದುಕೊಂಡು ದಾರಿ ತೋರಿಸುತ್ತ ನಡೆದಿದ್ದಾನೆ. ಬೇಟೆಯಲ್ಲಿ ಸಿಕ್ಕ ಕೆಲವು ಪಕ್ಷಿಗಳನ್ನೂ ಈತ ತಲೆಯ ಮೇಲೆ ಹೊತ್ತುಕೊಂಡಿದ್ದಾನೆ. ಕುದುರೆಯ ಮೇಲಿರುವ ಅಧಿಕಾರಿಗಳೂ ಸಹಿತ ಕೋವಿಗಳನ್ನು ಹಿಡಿದುಕೊಂಡಿದ್ದಾರೆ. ಇಲ್ಲಿ ಕೋವಿಯನ್ನು ಹೊರತುಪಡಿಸಿ ಖಡ್ಗ, ಈಟಿ, ಗಳಂತಹ ಆಯುಧಗಳು ರಚನೆಯಾಗಿಲ್ಲ.

೪. ಮಂಗಗಳು : ಮೇಲ್ಭಾಗದ ಎರಡು ತೊಲೆಗಳ ತುದಿಯಲ್ಲಿ ಮಂಗಗಳು ಚಿತ್ರಿಸಿವೆ. ೮×೫ ಇಂಚುಗಳ ಅಳತೆಯಲ್ಲಿ ರಚಿಸಿದ ಈ ಚಿತ್ರಗಳ ಹಿನ್ನೆಲೆಯು ಕೆಂಪಿನಿಂದ ಕೂಡಿದೆ. ಮಂಗಗಳು ನೀಲವರ್ಣದಿಂದ ಚಿತ್ರಿಸಿದ್ದು ಎರಡೂ ಮಂಗಗಳು ಮರಿಗಳನ್ನು ಎತ್ತಿಕೊಂಡಿವೆ.

೫. ಕಾವಲುಗಾರರು : ಮಂಗಗಳ ಚಿತ್ರಗಳಿರುವ ತೊಲೆಯ ಕೆಳಭಾಗದಲ್ಲಿ ಕಾವಲುಗಾರರ ಎರಡು ಚಿತ್ರಗಳಿವೆ. ಉದ್ದತೋಳಿನ, ಕಪ್ಪು ಬಣ್ಣದ, ಬಿಳಿಗೆರೆಗಳಿರುವ ಕಸೆ ಅಂಗಿ ತೊಟ್ಟುಕೊಂಡಿರುವ ಕಾವಲುಗಾರರು ಪಾದದವರೆಗೂ ಇರುವ ಅಧೋವಸ್ತ್ರ ಧರಿಸಿದ್ದಾರೆ. ನಡುವಿಗೆ ಶಾಲು ಕಟ್ಟಿ, ತಲೆಯ ಮೇಲೆ ಹ್ಯಾಟಿನಂತಹ ಟೊಪ್ಪಿಗೆ ಧರಿಸಿದ ಇವರು ಕೈಯಲ್ಲಿ ಉದ್ದನಾದ ಕೋಲುಹಿಡಿದುಕೊಂಡು ಕಾಲು ಕತ್ತರಿಮಾಡಿಕೊಂಡು ನಿಂತಿದ್ದಾರೆ.

೬. ಆಕಳನ್ನು ಕೊಲ್ಲುತ್ತಿರುವ ಹುಲಿ : ದೇವಾಲಯದ ಗೋಡೆಗೆ ಅಂಟಿಕೊಂಡಿರುವ ತೊಲೆಯ ತುದಿಯಭಾಗದಲ್ಲಿ, ಎರಡೂ ಕಡೆಗೆ ಒಂದೇ ತೆರನಾಗಿರುವ ಆಕಳನ್ನು ಕೊಂದು ತಿನ್ನುತ್ತಿರುವ ಹುಲಿಯ ಚಿತ್ರಗಳಿವೆ. ಈ ಹುಲಿಯ ಚಿತ್ರಗಳು ೧೨"×೮" ಅಳತೆಯಲ್ಲಿವೆ. ಹಳದಿ ಮೈಬಣ್ಣದ ಹುಲಿಯ ಮೈಮೇಲೆ ಕೆಂಬಣ್ಣದ ಪಟ್ಟಿಗಳಿವೆ. ತನ್ನಮುಂಗಾಲುಗಳ ಉಗುರುಗಳಿಂದ ಆಕಳನ್ನು ಕೊಚ್ಚಿಹಾಕಿದ ಹುಳಿಯು ಅದರ ಮಾಂಸವನ್ನು ಬಗೆದು ತಿನ್ನುತ್ತಿರುವ ದೃಶ್ಯ ಭೀಕರತೆ ಉಂಟುಮಾಡುತ್ತದೆ. ಆಕಳ ದೇಹದಿಂದ ಹರಿದ ರಕ್ತ ಮಡುಗಟ್ಟಿದಂತೆ ಚಿತ್ರಿಸಲಾಗಿದೆ.

೭. ಆನೆ ಮತ್ತು ನಂದಿಯ ಸಂಯೋಜನ ಚಿತ್ರ : ಮತ್ತೊಂದು ತೊಲೆಯ ತುದಿಯಲ್ಲಿ ಈ ಚಿತ್ರವಿದ್ದು ಇದು ಕೂಡಾ ಹುಲಿಯ ಚಿತ್ರಪಟ್ಟಿಕೆಯ ಅಳತೆಯನ್ನೆ ಹೊಂದಿದೆ. ಈ ಚಿತ್ರದಲ್ಲಿ ಎದುರುಬದುರಾಗಿರುವ ಆನೆ ಮತ್ತು ನಂದಿಗಳಿದ್ದು ಅವುಗಳ ಮುಖವನ್ನು ಸಂಯುಕ್ತಗೊಳಿಸಿ ಒಂದಾಗಿ ರಚಿಸಲಾಗಿದೆ. ಒಂದು ಕಡೆಯಿಂದ ನೋಡಿದರೆ ಆನೆಮುಖ ಇನ್ನೊಂದು ಕಡೆಯಿಂದ ನೋಡಿದರೆ ನಂದಿಯ ಮುಖ ಕಾಣಿಸುವ ಈ ಸಂಯುಕ್ತ ರೂಪವು ಹಿಂದಿನ ದಿನಗಳಲ್ಲಿ ಹೆಚ್ಚಿನ ಆಕರ್ಷಣೆಯಾಗಿದ್ದಂತೆ ತೋರುತ್ತದೆ. ಆನೆ ನಂದಿ ಸಂಯುಕ್ತಗೊಂಡ ಈ ರೂಪವು ಬರೀ ಭಿತ್ತಿಚಿತ್ರಗಳಲ್ಲಿ ಮಾತ್ರ ಕಂಡುಬರದೇ, ಶಿಲ್ಪಗಳಲ್ಲಿಯೂ ರಚನೆಯಾಗಿದೆ. ಭಿತ್ತಿಚಿತ್ರಗಳಲ್ಲಿ ಇಲ್ಲಿ ಮಾತ್ರವಲ್ಲದೇ ನರಗುಂದ ಅರಮನೆ, ಹಂಪಿಯ ವಿರೂಪಾಕ್ಷ ದೇವಾಲಯ, ಹೊನ್ನಾವರದ ರಾಮದೇವಾಲಯದ ಕಾವಿ ಚಿತ್ರದಲ್ಲಿ ಕಂಡುಬರುತ್ತದೆ. ಶಿಲ್ಪಗಳಲ್ಲಿ ಹಂಪಿಯ ವಿಠಲದೇವಾಲಯದ ಎಡಭಾಗದ ಗೋಡೆಯಲ್ಲಿ,

ಸುರಪುರದ ವೇಣುಗೋಪಾಲ ದೇವಾಲಯದ ಒಳಭಾಗದ ಗೋಡೆಯಲ್ಲಿ ರಚನೆಯಾಗಿದೆ. ಇಲ್ಲಿನ ಚಿತ್ರದಲ್ಲಿ ಆನೆಯ ಮೇಲೆ ಒಬ್ಬದೇವತಾ ಪುರುಷ ಕುಳಿತಿದ್ದು ನಂದಿಯ ಮೇಲೆ ಮತ್ತೊಬ್ಬ ದೇವತಾ ಪುರುಷ ಕುಳಿತಿದ್ದು ಪರಸ್ಪರ ಕಾದಾಡುತ್ತಿದ್ದಾರೆ. ನಂದಿಯ ಮೇಲೆ ಕುಳಿತ ವ್ಯಕ್ತಿ ಕೈಯಲ್ಲಿ ತ್ರಿಶೂಲ, ಢಮರುಗ ಹಿಡಿದಿದ್ದು ಶಿವನಂತೆ ಕಂಡುಬರುತ್ತಾನೆ. ಆನೆಯ ಮೇಲಿನ ವ್ಯಕ್ತಿ ಗಧೆ ಮತ್ತು ಈಟಿಯನ್ನು ಹಿಡಿದುಕೊಂಡು ದಾಳಿಗೆ ತೊಡಗಿದ್ದಾನೆ. ಇಂತಹ ರೂಪಚಿತ್ರಣವು ಹಸ್ತಪ್ರತಿಗಳ ವರ್ಣಚಿತ್ರಣದಲ್ಲಿಯೂ ಕಂಡುಬರುವುದು ಇಲ್ಲಿ ಸ್ಮರಿಸಿಕೊಳ್ಳಬಹುದು.

೮. ಹುಲಿಬೇಟೆಯ ಚಿತ್ರ : ಹೊರಭಾಗದ ಮತ್ತೊಂದು ತೊಲೆಯ ತುದಿಯಲ್ಲಿ ವ್ಯಕ್ತಿಯೊಬ್ಬ ಹುಲಿಬೇಟೆಯಾಡುತ್ತಿರುವ ಚಿತ್ರವಿದೆ. ಇಲ್ಲಿ ಹುಲಿಯು ದೊಡ್ಡದಾಗಿ ಬೇಟೆಯಾಡುತ್ತಿರುವ ವ್ಯಕ್ತಿ ಚಿಕ್ಕದಾಗಿ ಚಿತ್ರಿಸಲ್ಪಟ್ಟಿದೆ. ಇಲ್ಲಿ ಹುಲಿಬೇಟೆಗೆ ಕೋವಿಯನ್ನು ಬಳಸಲಾಗಿದ್ದು, ಕೋವಿಯನ್ನು ಸರಿಯಾಗಿ ಗುರಿಯಿಟ್ಟು ಹೊಡೆಯುವ ಕ್ರಮವನ್ನು ಇಲ್ಲಿ ಸಾಂಕೇತಿಸಲಾಗಿದೆ. ಕೋವಿಯ ಮುಂಭಾಗವನ್ನು ಆಸರೆಗಾಗಿ ಕತ್ತರಿಯಾಕಾರದ ಕವಲಿನಲ್ಲಿ ನಿಲ್ಲಿಸಲಾಗಿದ್ದು. ಅದು ಕೋವಿಯು ಅಲುಗದಂತೆ ನಿಲ್ಲಿಸುವ ಕ್ರಮವಾಗಿದೆ. ಇಲ್ಲಿಯ ಹುಲಿಯ ಚಿತ್ರದ ಮೇಲೆ ಕೆಂಪು, ಕಪ್ಪು, ಪಟ್ಟೆಗಳಿವೆ.

**III. ಆಸರೆ ಗೋಡೆಯ ಚಿತ್ರಗಳು :** ದೇವಾಲಯದ ಮೇಲ್ಛಾವಣಿಗೆ ಹೊಂದಿಕೊಂಡಂತೆ ಆಸರೆಗೋಡೆಯನ್ನು ನಿರ್ಮಿಸಲಾಗಿದ್ದು. ಈ ಗೋಡೆಯ ಹೊರಮೈಯಲ್ಲಿ ಸುತ್ತಲೂ ಚಿತ್ರಗಳನ್ನು ರಚಿಸಲಾಗಿದೆ. ಈ ಆಸರೆ ಗೋಡೆಯನ್ನು ಮಣ್ಣಿನಿಂದ ನಿರ್ಮಿಸಲಾಗಿದ್ದು. ಮಣ್ಣಿನ ಭಿತ್ತಿಯ ಮೇಲೆಯೇ ಚಿತ್ರಗಳನ್ನು ರಚನೆ ಮಾಡಲಾಗಿದೆ. ದೇವಾಲಯದ ಉಳಿದೆಲ್ಲಿ ಭಾಗದ ಚಿತ್ರಗಳಿಗಿಂತ ಈ ಮಣ್ಣಿನ ಗೋಡೆಯ ಚಿತ್ರಗಳು ದೊಡ್ಡ ಪ್ರಮಾಣದಲ್ಲಿವೆ. ಈ ಮಣ್ಣಿನ ಆಸರೆ ಗಡೆಯು 2½ ಪೂಟುಗಳ ಎತ್ತರವಿದ್ದು ಚಿತ್ರಗಳು ಅದೇ ಎತ್ತರದಲ್ಲಿವೆ. ಇಲ್ಲಿ ಮುಖ್ಯವಾಗಿ ಬೇಟೆಯ ದೃಶ್ಯಗಳಿದ್ದರೂ ದೇವಾಲಯದ ಎಡಭಾಗದಲ್ಲಿ ಇತರ ವಿಷಯಗಳಿಗೆ ಸಂಬಂಧಿಸಿದ ಚಿತ್ರಗಳಗೂ ರಚನೆಯಾಗಿವೆ. ಇವುಗಳನ್ನು ಅಧ್ಯಯನದ ಅನುಕೂಲಕ್ಕಾ ಈ ಕೆಳಗಿನಂತೆ ವಿಂಗಡಿಸಬಹುದಾಗಿದೆ :

I. ಬೇಟೆಯ ಚಿತ್ರಗಳು

II. ಇತರ ಚಿತ್ರಗಳು

***I. ಬೇಟೆಯ ಚಿತ್ರಗಳು :*** ಇದರಲ್ಲಿ ಪ್ರಾಣಿಗಳು ಒಂದನ್ನೊಂದು ಬೇಟೆಯಾಡುತ್ತಿರುವುದು, ಕಾದಾಡುತ್ತಿರುವುದು. ಮಾನವರು ಪ್ರಾಣಿಗಳ ಬೇಟೆಯಾಡುತ್ತಿರುವುದು, ಬೇಟೆಗೆ ಹೊರಟಿರುವುದು ಹೀಗೆ ಬೇಟೆ ಮತ್ತು ಕಾಡು ಪ್ರಾಣಿಗಳಿಗೆ ಸಂಬಂಧಿಸಿದ ಚಿತ್ರಗಳನ್ನು ಈ ಗುಂಪಿನಲ್ಲಿ ತೆಗೆದುಕೊಳ್ಳಲಾಗಿದೆ. ಈ ಭಾಗದ ಚಿತ್ರಗಳು ಮಣ್ಣಿನ ಮಾಧ್ಯಮದಲ್ಲಿ ಮೇಲೆ ರಚನೆಯಾಗಿದ್ದರಿಂದ ಬೇಗ ಹಾಳಾಗಿವೆ. ಉಳಿದಿರುವ ಚಿತ್ರಗಳನ್ನು ಈ ರೀತಿಯಾಗಿ ವಿವರಿಸಬಹುದು.

೧. ಹುಲಿಯು ಘೇಂಡಾಮೃಗವನ್ನು ಕೊಲ್ಲುತ್ತಿರುವುದು : ಬಲಭಾಗದ ಗೋಡೆಯಲ್ಲಿರುವ ಈ ಚಿತ್ರದಲ್ಲಿ ಹುಲಿಯೊಂದು ಘೇಂಡಾಮೃಗವನ್ನು ಕೊಲ್ಲುತ್ತಿರುವಂತೆ ಚಿತ್ರಿಸಿದೆ. ನೀಲ ವರ್ಣದಲ್ಲಿರುವ ಬಲಿಷ್ಟವಾದ ಘೇಂಡಾಮೃಗದ ಬೆನ್ನಮೇಲೆ ಹಾರಿದ ಹುಲಿ ತನ್ನ ಪಂಜುಗಳಿಂದ ಚುಚ್ಚಿ ಹಿಡಿದಿದೆ. ಹುಲಿಯು ನೈಜ ಶೈಲಿಯಲ್ಲಿರದೇ ಅಲಂಕಾರಿಕ ವಿನ್ಯಾಸಲದಲ್ಲಿ ಚಿತ್ರಣಗೊಂಡಿದೆ. ಈ ಹುಲಿಯ ಚಿತ್ರಣದಲ್ಲಿ ಮೂರು ಮೃಗಗಳ ಅಂಶಗಳು

ಸಮ್ಮಿಳಿತಗೊಂಡಿದೆ. ಸಿಂಹದ ಮುಖ, ಹುಲಿಯ ದೇಹವಿದ್ದರೆ ಚಿರತೆಯ ಕಾಲುಗಳು ಇದಕ್ಕಿವೆ. ಓನ್ನೆಲೆ ವರ್ಣವು ನಸುಕೆಂಪಾಗಿದೆ.

೨. ಕೋಣಗಳ ಕಾದಾಟ : ಬಲಗೋಡೆಯಲ್ಲಿರುವ ಈ ಚಿತ್ರದಲ್ಲಿ ಎರಡು ಬಲಿಷ್ಠಕೋಣಗಳು ಹೋರಾಡುತ್ತಿವೆ. ಒಂದು ಕೋಣಕಪ್ಪು ಬಣ್ಣದಲ್ಲಿದ್ದರೆ, ಇನ್ನೊಂದು ಕಂದು ಬಣ್ಣದಲ್ಲಿದೆ. ಇವುಗಳ ಕಾದಾಟವನ್ನು ಬಿಡಿಸಲು ವ್ಯಕ್ತಿಯೊಬ್ಬ ಬಡಿಗೆ ಹಿಡಿದುಕೊಂಡು ದೂರದಿಂದ ಓಡಿಬರುತ್ತಿದ್ದಾನೆ. ಕಪ್ಪುಕೋಣಕ್ಕೆ ಮೂಗುದಾರ, ಕೊರಳಲ್ಲಿ ಹಗ್ಗಗಂಟೆಗಳನ್ನು ಕಟ್ಟಲಾಗಿದ್ದರೆ, ನಸುಕಂದು ಬಣ್ಣದ ಕೋಣಕ್ಕೆ ಕೊರಳಲ್ಲಿ ಹಗ್ಗಮಾತ್ರವಿದೆ. ಬಡಿಗೆ ಹಿಡಿದುಕೊಂಡು ಓಡಿಬರುತ್ತಿರುವ ವ್ಯಕ್ತಿ ಕಚ್ಚೆಯಹಾಗಿರುವ ವಸ್ತ್ರವನ್ನು ಮಾತ್ರ ಧರಿಸಿದ್ದು ಉಳಿದಂತೆ ಬರಿಮೈಯಲ್ಲಿದ್ದಾನೆ.

೩. ಜಿಂಕೆಯ ಚಿತ್ರ : ಬಲಗೋಡೆಯಲ್ಲಿಯೇ ಇರುವ ಜಿಂಕೆಯ ಚಿತ್ರವು ಆಕರ್ಷಕವಾಗಿದೆ. ತನ್ನನ್ನು ಬೆನ್ನಟ್ಟಿಕೊಂಡು ಬಂದ ಬೇಟೆಗಾರರಿಂದ ಬೆದರಿನಿಂತ ಜಿಂಕೆ ಹಿಂದಕ್ಕೆ ತಿರಗಿನೋಡುತ್ತಿದೆ. ಜಿಂಕೆಯನ್ನು ನಸುಕಂದು ಬಣ್ಣದಿಂದ ಚಿತ್ರಿಸಿದ್ದರೂ ಸಂಪೂರ್ಣವಾಗಿ ಅದೇ ಬಣ್ಣವನ್ನು ಚಪ್ಪಟೆಯಾಗಿ ಲೇಪಿಸದೆ, ನೆರಳು ಬೆಳಕಿನ ವಿನ್ಯಾಸದಲ್ಲಿ ದೇಹದ ವಿವಿಧ ಭಾಗಗಳಲ್ಲಿ ಪಟ್ಟಿಗಳಾಗಿ ಲೇಪಿಸಲಾಗಿದೆ.

೪. ಬೇಟೆಯ ಮೆರವಣಿಗೆ : ಪೇಶ್ವೆದೊರೆಯೊಬ್ಬ ಬೇಟೆಗೆ ಹೊರಟಿರುವ ಚಿತ್ರಣ ಇಲ್ಲಿದೆ. ಪೇಶ್ವೆದೊರೆಯು ಮೇನೆಯಲ್ಲಿ ಕುಳಿತು ಬೇಟೆಗೆ ಹೊರಟಿದ್ದರೆ, ಸೈನಿಕರು, ಸೇವಕರು, ಪರಿವಾರದವು ಜೊತೆಗಿದ್ದಾರೆ. ಪೇಶ್ವೆದೊರೆಯು ಬೇಟೆಗೆ ಹೊರಟಿರುವ ಇಂತಹುದೇ ಚಿತ್ರಣ ಕಟ್ಟಿಗೆಯ ತೊಲೆಯ ಮೇಲೆಯೂ ಇದೆ. ಅದನ್ನು ಈಗಾಗಲೇ ವಿವರಿಸಲಾಗಿದೆ. ಎರಡೂ ದೃಶ್ಯಗಳೂ ಒಂದೇ ತೆರನಾಗಿದ್ದು, ಕಟ್ಟಿಗೆ ತೊಲೆಯ ಮೇಲಿನ ಚಿತ್ರಣವು ಚಿಕ್ಕಪ್ರಮಾಣದಲ್ಲಿದ್ದರೆ, ಅದೇ ಚಿತ್ರಣವು ಇಲ್ಲಿ ದೊಡ್ಡಪ್ರಮಾಣದಲ್ಲಿ ಚಿತ್ರಿಸಿದೆ. ಈ ಬೇಟೆಮೆರವಣಿಗೆ ದೃಶ್ಯವು ಹಿಂಭಾಗದ ಗೋಡೆಯಿಂದ ಪ್ರಾರಂಭಿಸಿ ಎಡಭಾಗದ ಗೋಡೆಯವರೆಗೂ ಮುಂದುವರೆದಿದೆ. ಇಲ್ಲಿಯೂ ತೊಲೆಯ ಚಿತ್ರದಂತೆಯೇ ತೀರ ಮುಂದೆ ಆನೆಗಳು, ಅದರಹಿಂದೆ ಇಬ್ಬರು ಕುದುರೆ ಸವಾರರು, ನಂತರ ಅನುಕ್ರಮವಾಗಿ ಇಬ್ಬರು ಸೈನಿಕರು. ಅವರ ಹಿಂದೆ ಮೇಣೆಯಲ್ಲಿ ಕುಳಿತುಬರುತ್ತಿರುವ ಪೇಶ್ವೆದೊರೆ, ಮತ್ತಿಬ್ಬರು ಸೈನಿಕರು. ಅವರ ಹಿಂದೆ ಕುದುರೆ ಮೇಲೆ ಕುಳಿತ ಸೈನಿಕರು ಚಿತ್ರಿತರಾಗಿದ್ದಾರೆ. ಮಧ್ಯದಲ್ಲಿ ಅಲ್ಲಲ್ಲಿ ಬೇಟೆನಾಯಿಗಳೂ ಚಿತ್ರಣಗೊಂಡಿವೆ.

***II. ಇತರ ಚಿತ್ರಗಳು :*** ಬೇಟೆ ಮತ್ತು ಪ್ರಾಣಿಗಳನ್ನು ಹೊರತುಪಡಿಸಿ ಇತರ ಚಿತ್ರಗಳೂ ಆಸರೆಗೋಡೆಯಲ್ಲಿ ರಚಿಸಿವೆ ಅವುಗಳು ಈ ಕೆಳಗಿನಂತಿವೆ :

೧. ಲಿಂಗಪೂಜೆಯ ಚಿತ್ರ : ದೇಲವಾಲಯದ ಎಡಭಾಗದಲ್ಲಿರುವ ಈ ಚಿತ್ರದಲ್ಲಿ ಇಬ್ಬರು ವ್ಯಕ್ತಿಗಳು ಲಿಂಗಪೂಜೆಯಲ್ಲಿ ತೊಡಗಿದ್ದಾರೆ. ಲಿಂಗವನ್ನು ಪೀಠವೊಂದರಮೇಲೆ ಸ್ಥಾಪಿಸಲಾಗಿದ್ದು ಲಿಂಗದ ಮೇಲ್ಭಾಗವನ್ನು ಮನುಷ್ಯ ಮುಖದಂತೆ ಚಿತ್ರಿಸಿದೆ. ಲಿಂಗದ ತಲೆಗೆ ಕಣ್ಣುಗಳು, ಮೂಗು, ಬಾಯಿಗಳಲ್ಲದೆ ಮೀಸೆಯನ್ನೂ ರಚಿಸಲಾಗಿದೆ. ಪೂಜೆಯಲ್ಲಿ ನಿರತ ವ್ಯಕ್ತಿಚಿತ್ರಗಳು ನಾಶವಾಗಿವೆ.

೨. ರಾಜರಾಣಿಯರ ಚಿತ್ರ : ಪೇಶ್ವೆ ರಾಜನೊಬ್ಬ ತನ್ನ ರಾಣಿಯೊಂದಿಗೆ ಕುಳಿತು ಚರ್ಚಿಸುತ್ತಿರುವ ದೃಶ್ಯಇದಾಗಿದೆ. ದೊರೆಯು ತಲೆಗೆ ಪೇಶ್ವೆಶೈಲಿಯ ಪೇಟಾ ಧರಿಸಿದ್ದು, ಉದ್ದತೋಳಿನ ಅಂಗಿ ತೊಟ್ಟುಕೊಂಡಿದ್ದಾನೆ. ರಾಣಿಯು ಹಸಿರುಬಣ್ಣದ ಸೀರೆ ಉಟ್ಟುಕೊಂಡು ತಲೆಯ ಮೇಲೆ ಸೆರಗು ಹೊದ್ದುಕೊಂಡಿದ್ದಾಳೆ. ಈ ದೇವಾಲಯದ ಎಲ್ಲ ಸ್ತ್ರೀ ಚಿತ್ರಗಳೂ ತಲೆಯ ಮೇಲೆ ಸೆರಗು ಹೊದ್ದುಕೊಂಡಿರುವಂತೆ ಚಿತ್ರಿಸಲಾಗಿದೆ. ಇದೇ ತೆರನಾಗಿರುವ ಸ್ತ್ರೀ ಚಿತ್ರಗಳು ನಿಪ್ಪಾಣಿಯ ರಾಜವಾಡೆಯಲ್ಲಿಯೂ ಕಂಡುಬರುತ್ತವೆ. ಇಲ್ಲಿ ರಾಜರಾಣಿಯರ ಚಿತ್ರಗಳ ಅಕ್ಕಪಕ್ಕದಲ್ಲಿ ಇನ್ನೂ ಒಂದೆರಡು ಆಕೃತಿಗಳು ಇದ್ದು ತೀರಾ ಮಸುಕಾಗಿವೆ.

ಈ ಮೇಲೆ ಹೇಳಲಾದ ಬುಜುರ ಕಂಚನ ಹಳ್ಳಿಯ ರಾಮದೇವಾಲಯದ ಚಿತ್ರಗಳನ್ನು ಕುರಿತು ಈ ಕೆಳಗಿನ ಕೆಲವು ಅಂಶಗಳನ್ನು ಹೇಳಬಹುದಾಗಿದೆ. ಈ ದೇವಾಲಯದಲ್ಲಿ ಮರ, ಗಾರೆ, ಮಣ್ಣ ಮಾಧ್ಯಮದ ಮೇಲೆ ಚಿತ್ರಗಳು ರಚನೆಯಾಗಿವೆ. ದೇವಾಲಯದ ಒಳಭಾಗ ಹೊರಭಾಗದಲ್ಲಿನ ಪ್ರತಿಗೋಡೆಯಲ್ಲಿ ಚಿತ್ರಗಳಿವೆ. ಹೊರಭಾಗದ ದೇವಾಲಯದ ಒಳಭಾಗ ಕಿರುರೂಪ ಶೈಲಿಯಲ್ಲಿದ್ದರೆ, ಒಳಭಾಗದ ಚಿತ್ರಗಳು ದೊಡ್ಡ ಪ್ರಮಾಣದಲ್ಲಿವೆ. ಆಸರೆಗೋಡೆಯ ಚಿತ್ರಗಳು ಇವೆಲ್ಲವುಗಳಿಗಿಂತ ದೊಡ್ಡದಾಗಿವೆ. ಹೊರಭಾಗದ ಗೋಡೆಯಲ್ಲಿ ಮತ್ತು ಮರದ ತೊಲೆಗಳ ಮೇಲಿನ ಚಿತ್ರಗಳಿಗಾಗಿ ಚಿಕ್ಕ ಅಂಕಣಗಳನ್ನು ರೂಪಿಸಿಕೊಂಡಿದ್ದರೆ, ಒಳಗೋಡೆಯ ಚಿತ್ರಗಳಿಗೆ ದೊಡ್ಡ ಅಂಕಣಗಳನ್ನು ಬಳಸಿಕೊಳ್ಳಲಾಗಿದೆ. ಚಿತ್ರಗಳ ಶೈಲಿಯಲ್ಲಿ, ರಚನಾಕ್ರಮದಲ್ಲಿ ಭಿನ್ನತೆ ಕಂಡುಬರುತ್ತಿರುವುದರಿಂದ ಒಬ್ಬನಲ್ಲದೇ ಅನೇಕ ಕಲಾವಿದರು ಇಲ್ಲಿ ಕೆಲಸ ಮಾಡಿರುವ ಸಾಧ್ಯತೆ ಇದೆ. ಸ್ತ್ರೀ ಚಿತ್ರಗಳೆಲ್ಲ ತಲೆಯ ಮೇಲೆ ಸೆರಗುಹೊದ್ದುಕೊಂಡಿರುವಂತೆ ಚಿತ್ರಿಸಿದ್ದರೆ, ಪುರುಷ ಚಿತ್ರಗಳು ಪೇಶ್ವೆಶೈಲಿಯ ಟೊಪಿ ಧರಿಸಿದಂತೆ ಇವೆ. ಇಲ್ಲಿನ ಕೆಲವು ಚಿತ್ರಗಳಿಗೆ ನರಗುಂದ ಅರಮನೆ, ಮತ್ತು ನಿಪ್ಪಾಣಿ ರಾಜವಾಡೆಯ ಚಿತ್ರಗಳು ಹೋಲಿಕೆಯಾಗುತ್ತಿದ್ದು ಈ ಚಿತ್ರಗಳು ಮರಾಠರಿಂದ ರಚನೆಯಾಗಿವೆ ಎನ್ನುವುದಕ್ಕೆ ಇನ್ನಷ್ಟು ಬಲವಾದ ಕಾರಣಗಳಾಗಿವೆ. "ಈ ದೇವಾಲಯದ ಚಿತ್ರಗಳಲ್ಲಿ ಪ್ರತಿಯೊಂದು ವಿಭಾಗದಲ್ಲಿ ಮರಾಠಾ ಪೇಶ್ವೆಗಳ ಶೈಲಿ ಒಡಮೂಡಿದ್ದು ಚಿತ್ರಗಳು ಮರಾಠ ಪೇಶ್ವೆಗಳಿಂದ ಪೋಷಿಸಲ್ಪಟ್ಟಿವೆ" ಎಂಬ ಡಾ. ಎಸ್. ಸಿ. ಪಾಟೀಲರ ಅಭಿಪ್ರಾಯ ಸರಿಯೆನಿಸುತ್ತದೆ. ಈ ದೇವಾಲಯದ ಭಿತ್ತಿಚಿತ್ರಗಳ ಬಗ್ಗೆ ಇನ್ನೂ ಸೂಕ್ಷ್ಮವಾಗಿ ಮತ್ತು ತೌಲನಿಕವಾಗಿ ಅಧ್ಯಯನ ಮಾಡಬಹುದಾಗಿದೆ. ಮೂರುನೂರಕ್ಕೂ ಹೆಚ್ಚು ವರ್ಣಚಿತ್ರಗಳು ಇಲ್ಲಿದ್ದು ಇದುವೇ ಒಂದು ಪ್ರತ್ಯೇಕ ಅಧ್ಯಯನದ ವ್ಯಾಪ್ತಿಯನ್ನು ಹೊಂದಿದೆ. ಇಲ್ಲಿ ಸ್ಥೂಲವಾಗಿ ಈ ದೇವಾಲಯವನ್ನು ಅಧ್ಯಯಕ್ಕೆ ಒಳಪಡಿಸಲಾಗಿದೆ.

ದೇವಾಲಯಗಳಲ್ಲಿ ರಚನೆಯಾದ ಭಿತ್ತಿಚಿತ್ರಕಲೆಯಲ್ಲಿ ಹೆಚ್ಚಾಗಿ ದೇವಾಲಯವುಯಾವ ದೇವರಿಗೆ ಸಂಬಂಧಿಸಿದೆಯೋ ಆ ದೇವರ ಮಹಿಮೆಯನ್ನು ಸಾರುವ ಚಿತ್ರಗಳೇ ಅಧಿಕವಾಗಿರುವುದು ವಾಡಿಕೆ. ಅದರ ಜೊತೆಗೇ ಇತರ ದೇವತೆಗಳ ಚಿತ್ರಗಳನ್ನೂ ಇಲ್ಲಿ ರಚಿಸಲಾಗಿದೆ. ದೇವಾಲಯಗಳು ಕೇವಲ ಪೂಜಾಸ್ಥಾನಗಳಾಗಿರದೇ ಸಾಂಸ್ಕೃತಿಕ ಕೇಂದ್ರಗಳಾಗಿ ನ್ಯಾಯಸ್ಥಾನಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ಅಲ್ಲದೇ ಅವು ಸಾಮಾಜಿಕ ಚಟುವಟಿಕೆಗಳ ಕೇಂದ್ರಗಳಾಗಿದ್ದವು. ದೇವಾಲಯಗಳು ಜನತೆಯ ಧರ್ಮಪ್ರಜ್ಞೆಯ ನೆಲೆಯಾಗಿದ್ದವು. ಮತ್ತು ಜನರ ಮನಸ್ಸನ್ನು ಪ್ರಾಪಂಚಿಕತೆಯಿಂದ ಪಾರಮಾರ್ಥಿಕದೆಡೆಗೆ ತಿರುಗಿಸುವ ಬದಲಾವಣೆಯ ನೆಲೆಗಳಾಗಿ, ಧಾರ್ಮಿಕ ವಿದ್ಯಾಕೇಂದ್ರಗಳಾಗಿದ್ದಂತೆ, ಜನರ ಗಾಯನ ನರ್ತನಗಳಂತಹ ಕಾರ್ಯಕ್ರಮಗಳಿಗೆ ವೇದಿಕೆಳಾಗಿದ್ದವು. ಇಲ್ಲಿ ಗಂಡಸರು, ಹೆಂಗಸರು, ಯುವಕರು, ಮಕ್ಕಳು, ಮುದುಕರು, ಶ್ರೀಮಂತರು, ಬಡವರು ಎಲ್ಲರೂ ಒಂದೆಡೆಸೇರಿ

ಉತ್ಸವಾಚರಣೆಗಳನ್ನು ನಡೆಸಿ ಆ ಮೂಲಕ ಸಮನ್ವಯ ಸಾಧಿಸುವ ಕೇಂದ್ರಗಳಾಗಿದ್ದವು ಹಾಗಾಗಿ ಜನರ ಜೀವನದಲ್ಲಿ ದೇವಾಲಯಗಳ ಪಾತ್ರ ಬಹುಮುಖ್ಯವಾಗಿತ್ತು.[೧೪೭] ಹೀಗೆ ಹಲವು ಕಾರಣಗಳಿಂದಾಗಿ ಮಹತ್ವ ಪಡೆದುಕೊಂಡಿದ್ದ ದೇವಾಲಯಗಳಲ್ಲಿ ಆ ದೇವರಿಗೆ ಸಂಬಂಧಿಸಿದ ಚಿತ್ರಗಳಲ್ಲದೇ ಇತರ ದೇವತೆಗಳ ಚಿತ್ರಗಳನ್ನು ರಚಿಸಿ ಸಮನ್ವಯ ತರಲಾಗಿರುತ್ತದೆ. ಹಂಪಿಯ ವಿರೂಪಾಕ್ಷ ದೇವರ ದೇವಾಲಯವು ಶಿವನಿಗೆ ಸಂಬಂಧಿಸಿದ್ದು ಅದರಲ್ಲಿ ಶಿವನ ಮಹಿಮೆಯನ್ನು ತೋರುವ ಚಿತ್ರಗಳಲ್ಲದೇ. ವಿಷ್ಣುವಿನ ಪಾರಮ್ಯವನ್ನು ತೋರಿಸುವ ದಶಾವತಾರ ಚಿತ್ರಗಳು, ರಾಮನು ಶಿವಧನಸ್ಸು ಮುರಿಯುತ್ತಿರುವುದು. ಕೃಷ್ಣ ಲೀಲೆಯ ದೃಶ್ಯಗಳು ರಚನೆಯಾಗಿವೆ. ಅಲ್ಲದೇ ಬ್ರಹ್ಮದೇವ, ಸರಸ್ವತಿ, ಗಣಪತಿ. ಕಾರ್ತಿಕೇಯ. ಇಂದ್ರ. ಅಗ್ನಿ. ವಾಯು. ವರುಣ. ಯಮ. ದುರ್ಗೆ. ಗಂಧರ್ವರು ಹೀಗೆ ವಿವಿಧ ದೇವತಾಚಿತ್ರಗಳೂ ಇಲ್ಲಿ ರಚಿಸಿವೆ. ದೇವಾಲಯಗಳಲ್ಲಿ ರಚನೆಯಾದ ಭಿತ್ತಿ ಚಿತ್ರಗಳಲ್ಲಿ ಗರ್ಭಗೃಹದಲ್ಲಿ ಪ್ರತಿಷ್ಠಾಪಿತವಾದ ಮೂರ್ತಿಯ ಪ್ರತಿರೂಪದ ಚಿತ್ರವನ್ನು ಒಂದು ಕಡೆಗೆ ಸಾಂಕೇತಿಕವಾಗಿ ಚಿತ್ರಿಸಲಾಗಿರುತ್ತದೆ. ಹಂಪೆಯ ವಿರೂಪಾಕ್ಷ ದೇವಾಲಯದ ಮೇಲ್ಛಾವಣಿಯಲ್ಲಿ ಗರ್ಭಗೃಹದ ಎದುರಿನ ತೊಲೆಯ ಮೇಲೆ ವಿರೂಪಾಕ್ಷ ದೇವಾಲಯದ ಮೂರ್ತಿಯ ಪ್ರತಿರೂಪದ ಚಿತ್ರಣವಿದೆ. ಹಳಿಯಾಳ ಬುಜುರಕಂಚನ ಹಳ್ಳಿಯ ರಾಮದೇವಾಲಯದಲ್ಲಿ ಗರ್ಭಗೃಹದ ಬಾಗಿಲಿನ ಎದುರಿನ ಪಟ್ಟಿಕೆಯಲ್ಲಿ ಶಿವಲಿಂಗವನ್ನು ಪೂಜಿಸುವ ಚಿತ್ರವಿದ್ದು ಈ ದೇವಾಲಯವು ಮೂಲದಲ್ಲಿ ಶಿವದೇವಾಲಯವಾಗಿರಬಹುದೆಂಬ ಅನುಮಾನ ಕಾಡುತ್ತದೆ. ಅಲ್ಲದೇ ಒಳಗಿನ ಗರ್ಭಗೃಹದಲ್ಲಿನ ಪೀಠದ ಮೇಲಿರುವ ರಾಮಲಕ್ಷ್ಮಣ ಸೀತೆಯರ ಮೂರ್ತಿಗಳು ತಳಪೀಠಕ್ಕೆ ಭದ್ರಪಡಿಸಿದಂತೆ ಇರದೇ ಬೇರೆಕಡೆಯಿಂದ ತಂದು ಪ್ರತಿಷ್ಠಾಪಿಸಿದಂತೆ ಇವೆ. ದೇವಾಲಯದ ಎದುರಿನ ಭಾಗದಲ್ಲಿ ನಂದಿಪೀಠವಿರುವಲ್ಲಿಯೂ ಬೇರೆ ಮೂರ್ತಿಗಳನ್ನು ಇಡಲಾಗಿದೆ. ದೇವಾಲಯದ ಗರ್ಭಗೃಹ ಮೇಲೆ ಇರುವ ಇನ್ನೊಂದು ಶಿವಲಿಂಗದ ಚಿತ್ರ ಮತ್ತು ಅದರ ಕೆಳಗಿದ್ದ ಬರವಣಿಗೆಯಯ್ನು ಅಳಿಸಿಹಾಕಲಾಗಿದೆ. ಬಹುಶ ಆ ಬರವಣಿಗೆ ದೇವಾಲಯದ ಬಗ್ಗೆ ಮಾಹಿತಿ ಕೊಡಬಹುದಿತ್ತು ಎನಿಸುತ್ತದೆ. ದೇವಾಲಯಗಳಲ್ಲಿ ಧಾರ್ಮಿಕ ಚಿತ್ರಗಳಲ್ಲದೇ ಲೌಕಿಕ ವಿಷಯಗಳಿಗೆ ಸಂಬಂಧಿಸಿದ ಚಿತ್ರಗಳೂ ರಚನೆಯಾಗಿರುವುದು ನೋಡಬಹುದು.

ಆಯಾ ದೇವಾಲಯಗಳ ಭಿತ್ತಿ ಚಿತ್ರರಚನೆಗೆ ಪ್ರೋತ್ಸಾಹ ಕೊಟ್ಟ ರಾಜ, ಇಲ್ಲವೇ ಸಂಸ್ಥಾನಿಕರುಗಳ ಬೇಟೆಯ ದೃಶ್ಯಗಳು. ಅವರ ಮೆರವಣಿಗೆ. ಉತ್ಸವಗಳು. ಯುದ್ಧ ಘಟನೆಗಳು ಚಿತ್ರಿಸಿರುತ್ತವೆ. ಹಂಪೆಯ ವಿರೂಪಕ್ಷ ದೇವಾಲಯದಲ್ಲಿ ವಿಜಯನಗರ ದೊರೆಗಳು ಗೌರವಿಸುತ್ತಿದ್ದ ವಿದ್ಯಾರಣ್ಯ ಸ್ವಾಮಿಗಳ ಮೆರವಣಿಗೆ ರಾಜಮರ್ಯಾದೆಯಲ್ಲಿ ಹೊರಟಂತೆ ಚಿತ್ರಿಸಿದೆ. ಹಳಿಯಾಳದ ಬುಜುರಕುಂಚನ ಹಳ್ಳಿಯ ರಾಮದೇವಾಲಯದಲ್ಲಿ ದೇವಾಲಯವನ್ನು ಸ್ಥಾಪಿಸಿದ ಅಥವಾ ಆ ಭಿತ್ತಿ ಚಿತ್ರಗಳ ರಚನೆಗೆ ಕಾರಣನಾದ ಪೇಶ್ವೆದೊರೆಯೊಬ್ಬನು ಮೇಣೆಯಲ್ಲಿ ಕುಳಿತು ಬೇಟೆನಾಯಿಗಳೊಂದಿಗೆ ಬೇಟೆಗೆ ಹೊರಟದೃಶ್ಯವೂ, ಹೊರಭಾಗದ ಗೋಡೆಯಲ್ಲಿ ಅವರ ಯುದ್ಧದ ಘಟನೆಗಳೂ ಚಿತ್ರಿಸಿವೆ. ಹಾಗೆಯೇ ಹಂಪೆಯ ವಿರೂಪಾಕ್ಷ ದೇವಾಯಲದಲ್ಲಿ ಯುದ್ಧದೃಶ್ಯವನ್ನು ಎರಡು ಪಟ್ಟಿಕೆಗಳಲ್ಲಿ ಚಿತ್ರಿಸಿದ್ದು. ಅಲ್ಲಲ್ಲಿ ಬೇಟೆದೃಶ್ಯಗಳೂ ಕಂಡುಬರುತ್ತವೆ. ಹೀಗೆ ಆ ದೇವಾಲಯಕ್ಕೆ ಪ್ರೋತ್ಸಾಹಕೊಟ್ಟ ದೊರೆಗಳ, ಸಂಸ್ಥಾನಿಕರುಗಳಂತಹವರ ಸಾಮಾಜಿಕ ವಿವರಗಳೂ ದೇವಾಲಯದಲ್ಲಿ ಚಿತ್ರಣಗೊಂಡಿರುತ್ತವೆ. ದೇವಾಲಯಗಳಲ್ಲಿ ರಚನೆಯಾದ ಭಿತ್ತಿ ಚಿತ್ರಗಳು ಸರ್ವಧರ್ಮ ಸಮನ್ವಯ ಭಾವನೆಯನ್ನು ಬಿಂಬಿಸುವಂತೆಯೇ ಸಾಮಾಜಿಕ, ರಾಜಕೀಯ ಸಾಂಸ್ಕೃತಿಕ ವಿವರಗಳನ್ನು ಬಿಚ್ಚಿಕೊಡುವ ಮೂಲಗಳೂ ಆಗಿವೆ ಎನ್ನುವುದರಲ್ಲಿ ಅನುಮಾನವಿಲ್ಲ.

---

೧೪೭. ಪ್ರೊ. ಬಿ. ಷೇಕ್‌ಅಲಿ (ಸಂ) : ಕರ್ನಾಟಕ ಚರಿತ್ರೆ (ಸಂಪುಟ ೪), ಪುಟ ೨೪೭



ತ್ರಿಪುರ ಸಂಹಾರ ದೃಶ್ಯ.

ವಿರೂಪಾಕ್ಷೇಶ್ವರ ದೇವಾಲಯ

ಹಂಪಿ



ಗಿರಿಜಾ ಕಲ್ಯಾಣ. ದೃಶ್ಯ.



ಯುದ್ಧದ ದೃಶ್ಯ.



ತ್ರಿಪುರಸಂಹಾರ ಚಿತ್ರದ ರಾಕ್ಷಸರು (ಹಂಪಿ).



ವೆಂಕಟೇಶ್ವರ ದೇವಾಲಯ ನರಗುಂದ

ಶ್ರೀರಾಮ ದೇವಾಲಯ ಬಿ. ಕೆ. ಹಳ್ಳಿ



ಕೃಷ್ಣನು ರುಕ್ಮಿಣಿಯನ್ನು ಕದ್ದೊಯ್ಯುತ್ತಿರುವುದು.



ನವನಾರೀ ಕುಂಜರದ ಆನೆ.



ರಾಜ ಮೆರವಣಿಗೆಯ ಸೈನಿಕರು (ಬಿ.ಕೆ. ಹಳ್ಳಿ)



ಯೋಗಪಟ್ಟದಲ್ಲಿರುವ ಮುನಿ. (ಬಿ.ಕೆ. ಹಳ್ಳಿ)



ಕುಬೇರ (ಬಿ.ಕೆ. ಹಳ್ಳಿ)



ಸಮುದ್ರ ಮಂಥನದ ರಾಕ್ಷಸರು (ಬ.ಕೆ.ಹಳ್ಳಿ)



ಘೇಂಡಾ ಮೃಗವನ್ನು ಕೊಲ್ಲುತ್ತಿರುವ ಹುಲಿ.(ಬಿ.ಕೆ.ಹಳ್ಳಿ)



ಪಂಚಮುಖದ ಶಿವ (ಬಿ.ಕೆ.ಹಳ್ಳಿ)



ದಕ್ಷಿಣಗೋಡೆಯ ಚಿತ್ರಪಟ್ಟಿಕೆ. (ಬಿ.ಕೆ.ಹಳ್ಳಿ)



ದ್ವಾರಪಾಲಕ (ಬಿ.ಕೆ.ಹಳ್ಳಿ)

### III. ಅರಮನೆಗಳಲ್ಲಿರುವ ಭಿತ್ತಿ ಚಿತ್ರಕಲೆ :

ಕಲಾಸಕ್ತ ರಾಜರುಗಳು ತಮ್ಮ ಅರಮನೆಗಳಲ್ಲಿ ಹಾಗೂ ತಾವು ವಾಸಿಸುವ ಇತರ ಸ್ಥಳಗಳಲ್ಲಿ ಭಿತ್ತಿಚಿತ್ರಗಳನ್ನು ಬರೆಸಿ ಅವುಗಳನ್ನು ಅಲಂಕರಿಸುತ್ತ ಬಂದಿದ್ದಾರೆ. ಅರಮನೆಗಳನ್ನು ಭಿತ್ತಿಚಿತ್ರಗಳಿಂದ ಅಲಂಕರಿಸುವುದು ಭಾರತದಲ್ಲಿ ರಾಮಾಯಣ, ಮಹಾಭಾರತಗಳ ಕಾಲದಿಂದಲೇ[೧೬೮] ಪ್ರಚಲಿತದಲ್ಲಿತ್ತು ಎಂದು ಹೇಳಲಾಗಿದೆ. ಭಾರತದಲ್ಲಿ ಅನೇಕ ಪ್ರಾಚೀನ ಅರಮನೆಗಳು ಭಿತ್ತಿಚಿತ್ರಗಳಿಂದ ಶೃಂಗರಿಸಲ್ಪಟ್ಟಿವೆ. ಮೊದಲಿನ ಅರಮನೆಗಳು ಮರಗಳಿಂದ ನಿರ್ಮಿಸಲ್ಪಡುತ್ತಿದ್ದು ಅವು ನಾಶವಾಗಿರುವುದು ಸರ್ವವಿದಿತ. ಆದರೆ ಕ್ರಿ. ಶ. ೧೫ ನೇ ಶತಮಾನದ ನಂತರದ ಅರಮನೆಗಳು ಭಾರತದ ತುಂಬ ಅಲ್ಲಲ್ಲಿ ಕಂಡುಬರುತ್ತಿದ್ದು ಅವುಗಳಲ್ಲಿ ಹಲವು ಭಿತ್ತಿಚಿತ್ರಗಳಿಂದ ಅಲಂಕರಿಸಲ್ಪಟ್ಟಿವೆ. ಕ್ರಿ. ಶ. ೧೫ ನೇ ಶತಮಾನದಲ್ಲಿ ನಿರ್ಮಿಸಲ್ಪಟ್ಟ ರಾಜಸ್ಥಾನದ ಕೋಟಾಜಿಲ್ಲೆಯ ಇಂದರ್‌ಘರ್ ಅರಮನೆ, ಕರೌಲೀ ತಾಲೂಕಿನ ಮಹಾರಾಜಾ ಗೋಪಾಲಲಾಲ್‌ನ ಅರಮನೆ.[೧೬೯] ಇದೇ ಅವಧಿಯ ರಾಜಸ್ಥಾನದ ನಾಗೂರ್ ಕೋಟೆಯಲ್ಲಿರುವ ಬದಲ್‌ಮಹಲ್, ಹವಾಮಹಲ್.[೧೭೦] ಮಧ್ಯಪ್ರದೇಶದ ಗ್ವಾಲಿಯರ್‌ನಲ್ಲಿರುವ ಮಾನಸಿಂಗನ ಅರಮನೆ, ಕ್ರಿ. ಶ. ೧೬ ನೇ ಶತಮಾನದಲ್ಲಿ ನಿರ್ಮಿಸಿದ ಧಾರ್ ಜಿಲ್ಲೆಯ ಮಾಂಡುವಿನಲ್ಲಿರುವ ಗಢಶಹಾನ ಅರಮನೆಗಳಲ್ಲಿ[೧೭೧] ಭಿತ್ತಿ ಚಿತ್ರಗಳು ರಚನೆಯಾಗಿವೆ. ಕೇರಳದ ಮಟ್ಟಂಚೇರಿ ಅರಮನೆಯು ಕ್ರಿ. ಶ. ೧೬ ನೇ ಶತಮಾನದಲ್ಲಿ ನಿರ್ಮಿಸಿದ್ದು ಅಲ್ಲಿಯೂ ವೈವಿಧ್ಯ ಭಿತ್ತಿಚಿತ್ರಗಳಿವೆ. ವಿಜಯನಗರ ರಾಜಧಾನಿ ಹಂಪೆಯಲ್ಲಿದ್ದ ಅರಮನೆಯು ಮಹೋನ್ನತ ಭಿತ್ತಿಚಿತ್ರಗಳಿಂದ ಅಲಂಕರಿಸಲ್ಪಟ್ಟಿತ್ತು ಎಂದು ವಿದೇಶಿ ಪ್ರವಾಸಿಗರು ಪ್ರತ್ಯಕ್ಷಕಂಡು ಬರೆದಿಟ್ಟಿದ್ದಾರೆ. ಅದೇ ರೀತಿ ಉತ್ತರ ಕರ್ನಾಟಕ ಪ್ರದೇಶದಲ್ಲಿಯೂ ಅನೇಕ ಅರಮನೆಗಳು ರಾಜವಾಡೆಗಳು ಭಿತ್ತಿಚಿತ್ರಗಳಂದ ಅಲಂಕರಿಸಲ್ಪಟ್ಟಿದ್ದು ಅವು ಈ ಕೆಳಗಿನಂತಿವೆ :

೧. ರಂಗೀನ್ ಮಹಲ್, ಬೀದರ್
೨. ಆಸರ್ ಮಹಲ್, ಬಿಜಾಪುರ
೩. ಬೇಸಿಗೆ ಅರಮನೆ, ಕುಮಟಗಿ
೪. ನರಗುಂದದ ಅರಮನೆ
೫. ನಿಪ್ಪಾಣಿಯ ರಾಜವಾಡೆ
೬. ಅಥಣಿಯ ನಿಪ್ಪಾಣಿಕರ್ ವಾಡೆ
೭. ಸುರಪುರದ ಅರಮನೆ
೮. ಸವಣೂರಿನ ನವಾಬರ ವಾಡೆ
೯. ರಾಮದುರ್ಗದ ವಾಡೆ

**೧. ರಂಗೀನ್ ಮಹಲ್ ಬೀದರ್ :** ಕರ್ನಾಟಕ ಉತ್ತರದ ಕೊನೆಯಲ್ಲಿರುವ ಬೀದರ್ ನಗದಲ್ಲಿ ಬಹಮನಿ ಸಾಮ್ರಾಟರ ಆಳ್ವಿಕೆಯ ಕಾಲದಲ್ಲಿ ರಾಜಮಹಲುಗಳು, ಸಮಾಧಿ ಭವನಗಳನ್ನು ಕಟ್ಟಿಸಿ ಅವುಗಳನ್ನು ಚಿತ್ರಗಳಿಂದ ಅಲಂಕರಿಸಲಾಗಿದೆ.

---

೧೬೮. ಡಾ. ಶಿವರಾಮ ಕಾರಂತ : ಭಾರತೀಯ ಚಿತ್ರಕಲೆ, ಪುಟ ೩೨
೧೬೯. J. C. Nagpal : Mural Painting in India, Page 133
೧೭೦. R.A. Agarwal : Marwar Murals, Page 84
೧೭೧. J. C. Nagpal : Mural Painting in India, Page 89

# ಅರಮನೆಗಳಲ್ಲಿರುವ ಭಿತ್ತಿಚಿತ್ರಕಲೆ

- **ರಂಗೀನ್ ಮಹಲ್ ಬೀದರ್**
- **ಅಸರ್ ಮಹಲ್ ಬಿಜಾಪುರ**
  - 1) ಗೋಡೆಯ ಮೇಲ್ಭಾಗದ ಚಿತ್ರಗಳು
  - 2) ಗೋಡೆಯ ಕೆಳಭಾಗದ ಚಿತ್ರಗಳು
  - 3) ಮಾಡುಗಳಲ್ಲಿನ ಚಿತ್ರಗಳು
- **ಬೇಸಿಗೆ ಅರಮನೆ ಕುಮಟಗಿ**
- **ನರಗುಂದದ ಅರಮನೆ**
  - **ಧಾರ್ಮಿಕ ಚಿತ್ರಗಳು**
    - 1 ಶೇಷಶಯನ ವಿಷ್ಣು
    - 2 ರಾಮಾಯಣದೃಶ್ಯ (ಸೀತಾಸ್ವಯಂವರ)
    - 3 ವರಾಹ ಅವತಾರ
    - 4 ತಾಟಕಿಯ ವಧೆ
    - 5 ವಿಠಲನ ಚಿತ್ರ
    - 6 ಕೃಷ್ಣಲೀಲೆಯ ಚಿತ್ರ
    - 7 ಸಮುದ್ರ ಮಂಥನ
    - 8 ಋಷಿಗಳು
    - 9 ಪಶುಪತಿಯ ಚಿತ್ರ
    - 10 ಗಣಪತಿಯ ಚಿತ್ರ
    - 11 ಕಾರ್ತಿಕೇಯನ ಚಿತ್ರ
    - 12 ಜಯವಿಜಯರ ಚಿತ್ರ
    - 13 ದೇವತೆ ಚಿತ್ರ
    - 14 ದ್ವಾದಶ ರಾಣಿಗಳ ಚಿತ್ರ
    - 15 ಕಾಮಧೇನುಗಳು
    - 16 ಶರಭದ ಚಿತ್ರ
  - **ಧಾರ್ಮಿಕೇತರ ಚಿತ್ರಗಳು**
    - 2 ರಾಜರಾಣಿಯರು
    - 2 ರಾಜರಾಣಿ ಮಗುವಿನೊಂದಿಗೆ
    - 3 ಯುದ್ಧ ದೃಶ್ಯ
    - 4 ನರ್ತಕಿಯರು ಚಿತ್ರಗಳು
    - 5 ಈಜುಕನ್ಯೆಯರು
    - 6 ಅಲಂಕಾರಿಕ ಗಿಡಗಳು
- **ರಾಜವಾಡೆ ನಿಪ್ಪಾಣಿ**
  - **ಒಳಕೋಣೆಯ ಚಿತ್ರಗಳು**
    - 1 ಕೃಷ್ಣನು ಮಡದಿಯರೊಡನೆ
    - 2 ಸರಸದಲ್ಲಿರುವುದು
    - 3 ವಸಂತೋತ್ಸವ ದೃಶ್ಯ
    - 4 ಕೃಷ್ಣನ ಸರಸದ ಚಿತ್ರ
    - 5 ಯಜ್ಞದ ಚಿತ್ರ
    - 6 ಪುತ್ರೋತ್ಸವ
    - 7 ಕೃಷ್ಣನು ಸಖಿಯರೊಂದಿಗೆ ಸಲ್ಲಾಪದಲ್ಲಿರುವುದು
  - **ಹೊರಚಾವಡಿಯ ಚಿತ್ರಗಳು**
    - ದೊಡ್ಡ ಮಾಡುಗಳಲ್ಲಿಯ ಚಿತ್ರಗಳು
      - 1 ಬಕಾಸುರವಧೆ
      - 2 ನಾಟ್ಯಶಾಲೆಯ ದೃಶ್ಯ
      - 3 ಯಾಗದ ದೃಶ್ಯ
      - 4 ಮಹಿಷಾಸುರ ಮರ್ದಿನಿ
      - 5 ಸಂತನ ಚಿತ್ರ
      - 6 ಕೃಷ್ಣ ಮತ್ತು ಗೋಪಿಯರು
      - 7 ಗೋಪಬಾಕರು
    - ಚಿಕ್ಕಮಾಡುಗಳಲ್ಲಿಯ ಚಿತ್ರಗಳು
      - 1 ಇಬ್ಬರು ರಾಜಕುಮಾರಿಯರ ಚಿತ್ರಗಳು
      - 2 ಕೃಷ್ಣನು ಮಡದಿಯನ್ನು ಶೃಂಗರಿಸುವುದು
      - 3 ಕೃಷ್ಣನ ರಾಸಲೀಲೆಗಳು
      - 4 ಕೃಷ್ಣ ಸತ್ಯಭಾಮೆಯರು
      - 5 ಶಿವಪಾರ್ವತಿಯರು
      - 6 ಶಿವಭಕ್ತನ ಚಿತ್ರ
      - 7 ಮೂಕುಂದನ ಚಿತ್ರ
      - 8 ಮಹಿಳೆಯರು ಚಿತ್ರಗಳು
      - 9 ಶಿವಲಿಂಗದ ಚಿತ್ರ
      - 10 ಪೂಜಾರಿಗಳ ಚಿತ್ರ
      - 11 ಅಲಂಕಾರಿಕ ಹೂವಿನ ಚಿತ್ರ
      - 12 ದೇವಿಯ ಚಿತ್ರ
      - 13 ತಂಬೂರಿನುಡಿಸುವ ವ್ಯಕ್ತಿ
      - 14 ಅಲಂಕಾರಿಕ ಗಿಡಗಳು
      - 15 ಕಮಲದ ಹೂವುಗಳು
      - 16 ನರಸಿಂಹನ ಚಿತ್ರ
      - 17 ಆರತಿ ಬೆಳಗುತ್ತಿರುವ ಸ್ತ್ರೀಯರು
      - 18 ದುರ್ಗಾದೇವಿ ಚಿತ್ರ
      - 19 ಪೂಜಾರಿ ಚಿತ್ರ
- **ನಿಪ್ಪಾಣಿಕರ್ ವಾಡೆ ಅಥಣಿ**
- **ನಾಯಕರ ಅರಮನೆ ಸುರಪುರ**
- **ನವಾಬರ ವಾಡೆ ಸವಣೂರು**
- **ರಾಮದುರ್ಗ ವಾಡೆ**

ಅಂತಹ ಒಂದು ಮುಖ್ಯ ಕಟ್ಟಡ ರಂಗೀನ್ ಮಹಲ್ ಅರಮನೆಯಾಗಿದೆ. ರಂಗೀನ್ ಮಹಲಿನ ಅರ್ಥ, ಬಣ್ಣದ ಅರಮನೆ. ರಂಗೀನ್ ಮಹಲ್ ಕಟ್ಟಡವು ಬೀದರಿನ ಕೋಟೆಯಲ್ಲಿದ್ದು ಇದನ್ನು ಮಹಮ್ಮದ ಷಾ ಬಹಮನಿ ಕಾಲಕ್ಕೆ (ಕ್ರಿ. ಶ. ೧೪-೨೯-೩೨) ಕಟ್ಟಲಾಯಿತು. ಮೊದಲು ಬೇರೆಕಡೆಗಿದ್ದ ಅರಮನೆಯನ್ನು ಮಹಮ್ಮದ್ ಷಾನು ಕೋಟೆ ಆವರಣದ ಒಳಗೇ ಕಟ್ಟಿಸಿದನೆಂದು ತಿಳಿದುಬರುತ್ತದೆ. ಈ ರಂಗೀನ್ ಮಹಲ್ ಅರಮನೆಯ ದಕ್ಷಿಣಭಾಗವನ್ನು ಕ್ರಿ. ಶ. ೧೫೪೨-೮೦ ರ ಸುಮಾರಿನಲ್ಲಿ ಅಲೀಬರೀದನು ಪುನಃ ದುರಸ್ಥಿಗೊಳಿಸಿ, ಕೆಲವು ಹೊಸ ಭಾಗಗಳನ್ನು ಸೇರ್ಪಡೆ ಮಾಡಿದನು. ಇಲ್ಲಿರುವ ಕಟ್ಟಿಗೆ ಫಲಕದ ಮೇಲಿನ ಸುಳಿವುಗಳು, ನಕ್ಷೆಗಳು, ಮೊಜಾಯಿಕ್ ಮಾದರಿಯ ಬಣ್ಣದ ಕಲ್ಲುಗಳನ್ನು ಅಂಟಿಸಿ ರಚಿಸಿದ ನಕ್ಷೆಗಳು ಈತನ ಕಾಲದವುಗಳೇ ಆಗಿವೆ.

ಬ್ರಿಟೀಷರ ಆಳ್ವಿಕೆಯ ಸಂದರ್ಭದಲ್ಲಿ ಬೀದರ್ ಭಾಗವನ್ನು ಆಳುತ್ತಿದ್ದ ನಿಜಾಮರ ಕಾಲದಲ್ಲಿ ಈ ರಂಗೀನ್ ಮಹಲ್ ಕಟ್ಟಡವು ಮೊದಲದರ್ಜೆಯ ತಾಲೂಕು ಕೋರ್ಟು ಆಗಿತ್ತು. ನಿಜಾಮರ ಅವಧಿಯಲ್ಲೂ ಹೊರಭಾಗದ ಕೆವು ವರಾಂಡದ ಗೋಡೆಗಳನ್ನು ಇದಕ್ಕೆ ಸೇರಿಸಲಾಯಿತು. ರಂಗೀನ್ ಮಹಲ್ ನಲ್ಲಿಯ ವರ್ಣಚಿತ್ರಗಳು ಹೂಬಳ್ಳಿಯ ನಕ್ಷಾ ಚಿತ್ರಗಳಾಗಿವೆ. ರಂಗೀನ್ ಮಹಲ್ ಅರಮನೆಯ ಒಳಗೋಡೆಗಳಲ್ಲಿ, ಬಾಗಿಲು ಚೌಕಟ್ಟು ಮತ್ತು ವಿಶಾಲವಾದ ಕಮಾನುಗಳಲ್ಲಿ ಭಿತ್ತಿಚಿತ್ರಗಳಿವೆ. ಇಲ್ಲಿನ ಚಿತ್ರಗಳಲ್ಲಿ ಜ್ಯಾಮಿತಿಕ, ಅಲಂಕಾರಿಕ ನಕ್ಷಾಚಿತ್ರಗಳಿವೆ. ಹೂಬಳ್ಳಿಯ ನಕ್ಷೆಗಳನ್ನು ಅಲಂಕಾರಿಕ ರೀತಿಯಲ್ಲಿ ಇಲ್ಲಿ ರಚಿಸಲಾಗಿದ್ದು. ನೀಲಿ, ಕೆಂಪು, ಕಪ್ಪು, ವರ್ಣಗಳನ್ನು ಇಲ್ಲಿ ಮುಖ್ಯವಾಗಿ ಬಳಸಲಾಗಿದೆ. ಇಲ್ಲಿನ ಎಲ್ಲ ಭಾಗದಲ್ಲೂ ಹೂಬಳ್ಳಿಯ ಅಲಂಕಾರಿಕ ನಕ್ಷೆಯ ಚಿತ್ರಗಳನ್ನು ಬಿಟ್ಟರೆ ಬೇರಾವ ವಿಧದ ಚಿತ್ರಗಳೂ ಇಲ್ಲ. ಈ ವರ್ಣ ಚಿತ್ರಗಳಲ್ಲದೇ ಗೋಡೆಗೆ ಸೂಡು ಬಿಲ್ಲೆಗಳನ್ನು (ವಿವಿಧ ವರ್ಣದ ಕಲ್ಲಿನ ಚಿಕ್ಕ ತುಂಡುಗಳು) ಅಂಟಿಸಿ ಹೂಬಳ್ಳಿಯ ನಕ್ಷೆಗಳನ್ನ ರಚಿಸಲಾಗಿದೆ. ಈ ಚಿತ್ರಗಳಲ್ಲಿ ಹಿಂದೂ ಮುಸ್ಲಿಂ ಶೈಲಿಗಳ ಸಮ್ಮಿಳಿತವನ್ನು ಗುರುತಿಸಬಹುದು. ಇಲ್ಲಿನ ವರ್ಣ ಚಿತ್ರಗಳಿಂದಲೇ ಇದಕ್ಕೆ ರಂಗೀನ್ ಮಹಲ್ ಎಂಬ ಹೆಸರು ಬಂದಿದೆ.

**೨. ಅಸರ್ ಮಹಲ್ ಬಿಜಾಪುರ :** ಬಿಜಾಪುರ ನಗರದಲ್ಲಿರುವ ಅಸರ್ ಮಹಲ್ ಕಟ್ಟಡವು ಸುಲ್ತಾನ್ ಮಹಮ್ಮದ್ ಆದಿಲ್‌ಷಾನಿಂದ ಕ್ರಿ. ಶ. ೧೬೪೬ ರಲ್ಲಿ ನಿರ್ಮಿಸಿ ಅದರಲ್ಲಿ ಭಿತ್ತಿಚಿತ್ರಗಳನ್ನು ಬರೆಸಲಾಯಿತು. ಮೊದಲಿಗೆ ಇದು ಸುಲ್ತಾನರ ದರ್ಬಾರ್ ಹಾಲ್ ಆಗಿದ್ದು ಮೆಕ್ಕಾದಿಂದ ಪ್ರವಾದಿ ಮಹಮ್ಮದರ ಕೂದಲನ್ನು ಇಲ್ಲಿ ತಂದಿರಿಸಿದನಂತರ ಇದೊಂದು ಪವಿತ್ರ ಸ್ಥಳವೆಂದು ಪರಿಭಾವಿಸಲಾಯಿತು. ಅಸರ್ ಮಹಲ್ ಎರಡು ಅಂತಸ್ತುಗಳುಳ್ಳ ವಿಶಾಲವಾದ ಕಟ್ಟಡವಾಗಿದ್ದು ಮೇಲಿನ ಮಹಡಿಯಲ್ಲಿನ ಎರಡು ಕೋಣೆಗಳಲ್ಲಿ ಮತ್ತು ಹಜಾರದಲ್ಲಿ ಭಿತ್ತಿಚಿತ್ರಗಳು ರಚನೆಯಾಗಿವೆ. ಇಲ್ಲಿನ ಭಿತ್ತಿಚಿತ್ರಗಳನ್ನು ಅಧ್ಯಯನದ ಅನುಕೂಲಕ್ಕೆಂದು ಮೂರು ರೀತಿಯಲ್ಲಿ ವಿಂಗಡಿಸಿಕೊಂಡು ವಿವರಿಸಬಹುದಾಗಿದೆ.

I. ಗೋಡೆಯ ಮೇಲ್ಭಾಗದ ಚಿತ್ರಗಳು

II. ಗೋಡೆಯ ಕೆಳಭಾಗದ ಚಿತ್ರಗಳು

III. ಮಾಡುಗಳಲ್ಲಿನ ಚಿತ್ರಗಳು

***I. ಗೋಡೆಯ ಮೇಲ್ಭಾಗದ ಚಿತ್ರಗಳು :*** ಕೋಣೆಗಳ ನಾಲ್ಕೂ ಬದಿಯ ಗೋಡೆಗಳಲ್ಲಿಯೂ ನೆಲದಿಂದ ಸುಮಾರು ೪ ಫೂಟುಗಳ ಅಂತರವನ್ನು ಬಿಟ್ಟು ಮೇಲ್ಭಾಗದ ಇಡೀ ಗೋಡೆಯನ್ನು ಒಂದೇ ಹಿನ್ನೆಲೆ ಬಣ್ಣದಿಂದ ಲೇಪನಮಾಡಿ ಹೂ. ಎಲೆ. ಹಣ್ಣು, ಕಾಯಿಗಳಿಂದ ತುಂಬಿದ ಬಳ್ಳಿಯ ನಕ್ಷೆಯನ್ನು ರಚನೆಮಾಡಲಾಗಿದೆ. ಈ ಬಳ್ಳಿಯು

ನೀಲಿವರ್ಣದಲ್ಲಿದೆ. ಅಲ್ಪಸ್ವಲ್ಪ ಭಿನ್ನತೆಯಿಂದ ಎಲ್ಲ ಬದಿಯ ಗೋಡೆಗಳಲ್ಲೂ ಒಂದೇ ಶೈಲಿಯ ಬಳ್ಳಿಯ ಚಿತ್ರಣವೇ ಇದೆ. ಹೆಚ್ಚಿನ ವೈವಿಧ್ಯತೆ ಕಂಡುಬರುವುದಿಲ್ಲ.

***II. ಗೋಡೆಯ ಕೆಳಭಾಗದ ಚಿತ್ರಗಳು :*** ಇಲ್ಲಿನ ಪ್ರತಿಯೊಂದು ಗೋಡೆಯಲ್ಲಿಯೂ ಕೆಳಭಾಗದಲ್ಲಿ ಸುಮಾರು ೪ ಫೂಟು ಸ್ಥಳಬಿಟ್ಟು ಮೇಲೆ ಹೂ ಬಳ್ಳಿನಕ್ಷೆ ರಚಿಸಿದ್ದರೆ. ಕೆಳಭಾಗದಲ್ಲಿ ಸುಮಾರು ೪ ಫೂಟು ಸ್ಥಳದಲ್ಲಿ ಸಾಲಾಗಿ ವ್ಯಕ್ತಿ ಚಿತ್ರಗಳನ್ನು ರಚಿಸಲಾಗಿದೆ. ಈ ವ್ಯಕ್ತಿ ಚಿತ್ರಗಳು ಕೆಳಭಾಗದಲ್ಲಿದ್ದು ಸಹಜವಾಗಿ ಕೈಗೆ ತಾಗುವುರಿಂದ ಅತ್ಯಂತ ಹೆಚ್ಚಿನ ಹಾನಿ ಸಂಭವಿಸಿದೆ. ಚಿತ್ರಗಳಿಗೆ ಬಂಗಾರದ ವರ್ಣ ಬಳಸಿರುವುದರಿಂದ ಅವುಗಳನ್ನು ಅಳಿಸುವ ಪ್ರಯತ್ನ ಇನ್ನೂ ತೀವ್ರವಾಗಿದೆ. ಈ ಚಿತ್ರಗಳು ಗುರುತಿಸಲು ಆಗದಷ್ಟು ಹಾನಿಗೊಳಗಾಗಿದ್ದು ಒಂದೆರಡು ಅಸ್ಪಷ್ಟ ಚಿತ್ರಗಳು ಮಾತ್ರ ಉಳಿದುಕೊಂಡಿವೆ ಅವುಗಳನ್ನು ಹೀಗೆ ವಿವರಸಬಹುದು. ವ್ಯಕ್ತಿ ಚಿತ್ರಗಳಲ್ಲಿರುವ ಒಂದು ಚಿತ್ರವು ಮಹಮ್ಮದ್ ಆದಿಲ್‌ಷಾ ಮತ್ತು ಅವನ ಪ್ರೇಯಸಿ ರಂಭಾ ಎಂಬುವವಳದಾಗಿದೆ ಎಂದು ಶಿವರಾಂ ಕಾರಂತ ಅವರು[೧೮೨] ಊಹಿಸುತ್ತಾರೆ. ಅವರು ನೋಡಿದ ಸಮಯದಲ್ಲಿ ರಂಭೆಯ ಚಿತ್ರದ ಮುಖವನ್ನೆಲ್ಲ ಕೆರೆದು ತೆಗೆಯಲಾಗಿತ್ತು ಎಂದಿದ್ದಾರೆ. ಆದರೆ ಇಂದು ಅವಳ ಪಕ್ಕದಲ್ಲಿರುವ ಮಹಮ್ಮದನ ಚಿತ್ರದ ಮುಖವನ್ನೂ ಕೆರೆದಿದ್ದಾರಲ್ಲದೇ ಅಸರ್ ಮಹಲಿನಲ್ಲಿರುವ ಎಲ್ಲ ವ್ಯಕ್ತಿಚಿತ್ರಗಳ ಮುಖಗಳನ್ನೂ ಅಳಿಸಲಾಗಿದೆ. ಆದರೆ ಹೂಬಳ್ಳಿಯ ಚಿತ್ರಗಳಿಗಾಗಲಿ ಅಥವಾ ವ್ಯಕ್ತಿಗಳ ಮುಖವನ್ನುಳಿದ ಇನ್ನಾವುದೇ ಭಾಗಕ್ಕಾಗಲಿ ಯಾವುದೇ ಹಾನಿಯಾಗಿಲ್ಲ. ಇಲ್ಲಿನ ಇನ್ನೊಂದು ಚಿತ್ರದಲ್ಲಿ ಮಗುವನ್ನು ತೂಗುತ್ತಿರುವ ಇಲ್ಲವೇ ನಾಮಕರಣದಲ್ಲಿ ತೊಡಗಿರುವ ಮಹಿಳೆಯರ ಚಿತ್ರವೊಂದಿದೆ. ಮಹಿಳೆಯರು ಬೆಲೆಬಾಳುವ ವಸ್ತ್ರಾಭರಣಗಳನ್ನು ಧರಿಸಿ ಉನ್ನತ ವರ್ಗಕ್ಕೆ ಸೇರಿದ ಸ್ತ್ರೀಯರಂತೆ ಕಾಣುತ್ತಾರೆ. ಮಗುವಿಗೆ ಕಾಲಲ್ಲಿ ಗೆಜ್ಜೆ, ಕೈಯಲ್ಲಿ ಕಂಕಣ ಮುಂತಾದ ಆಭರಣಗಳನ್ನು ಚಿತ್ರಿಸಲಾಗಿದೆ. ಬಟ್ಟೆಯ ನೀರಿಗೆಗಳು, ಚಿತ್ರದ ನೆಳಲು ಬೆಳಕುವಿಧಾನ, ಒಟ್ಟು ಚಿತ್ರ ಶೈಲಿಗಮನಿಸಿದಾಗ ಯುರೋಪಿನ ಚಿತ್ರಕಾರರಿಂದ ರಚನೆಯಾಗಿರಬೇಕೆಂದು ಹೇಳಬಹುದು ಕಾರಣ ಆ ಹೊತ್ತಿಗಾಗಲೇ ಬಿಜಾಪುರ ಸುಲ್ತಾನರಿಗೆ ಗೋವಾ ಮೂಲಕ ಯುರೋಪಿಯನ್‌ರ ಸಂಪರ್ಕ ಹೆಚ್ಚಾಗಿ ದೊರೆಯುತ್ತಲಿತ್ತು.

ಇವುಗಳಲ್ಲದೇ ತೆಳುವಾದ ಪಾರದರ್ಶಕವೆನಿಸುವಂತಹ ಉಡುಪನ್ನು ಧರಿಸಿದ ವ್ಯಕ್ತಿಯೊಬ್ಬ ಕುಳಿತು ಏನೋ ಕೆಲಸದಲ್ಲಿ ಮಗ್ನನಾಗಿರುವಂತಿದೆ. ಇನ್ನಿಬ್ಬರು ವ್ಯಕ್ತಿಗಳು ಚಿಕ್ಕದಾದ ಆಸನ ಒಂದರ ಮೇಲೆ ಕುಳಿತಿದ್ದಾರೆ. ಮತ್ತೊಂದರಲ್ಲಿ ವ್ಯಕ್ತಿಯೋರ್ವ ಕೊಳಲನ್ನು ನುಡಿಸುತ್ತಿದ್ದಾನೆ. ಹೀಗೆ ವ್ಯಕ್ತಿ ಚಿತ್ರಗಳಲ್ಲಿ ಧಾರ್ಮಿಕ, ಲೌಕಿಕ, ಮತ್ತು ಐತಿಹಾಸಿಕ ಘಟನೆಗಳಿಗೆ ಸಂಬಂಧ ಪಟ್ಟಂತೆ ಚಿತ್ರಗಳಿರುವುದನ್ನು ಗಮನಿಸಬಹುದು. ಆದರೆ ಚಿತ್ರದ ಮುಖ, ಅಂಗಾಂಗಗಳನ್ನು ಕೆರೆದು ತೆಗೆದಿದ್ದರಿಂದ ಯಾರು ಯಾವ ಕೆಸಲದಲ್ಲಿ ನಿರತರಾಗಿದ್ದಾರೆ. ಯಾವ ಚಿತ್ರ ಯಾವ ಘಟನೆಗೆ ಸಂಬಂಧಿಸಿದ್ದು ಎಂದು ತಿಳಿಯುವಲ್ಲಿ ತೊಂದರೆಯಾಗುತ್ತದೆ.

ವ್ಯಕ್ತಿಚಿತ್ರಗಳು, ಹೂಬಳ್ಳಿಯ ಅಲಂಕಾರಿಕ ಚಿತ್ರಗಳಲ್ಲದೇ ಅಲ್ಲಲ್ಲಿ ವಿವಿಧ ವರ್ಣ ನಮೂನೆಗಳನ್ನು (Patterms) ಸಂಯೋಜನೆಗೊಳಿಸಲಾಗಿದೆ. ಇಲ್ಲಿನ ಚಿತ್ರಗಳಲ್ಲಿ ನೀಲಿವರ್ಣವೇ ಅಧಿಕವಾಗಿ ಬಳಕೆಗೊಂಡಿದೆ. ಇಲ್ಲಿ ಬಳಕೆಗೊಂಡ ಮುಖ್ಯ ವರ್ಣಗಳೆಂದರೆ, ನೀಲಿ, ಕೆಂಪು, ಹಳದಿ, ದೀಪದ ಕಪ್ಪು, ಮುಖ್ಯವಾಗಿವೆ. ಈ ಚಿತ್ರಗಳು ಟೆಂಪರಾ ವಿಧಾನದಿಂದ ರಚಿಸಿದ್ದು. ದಪ್ಪನಾದ ಗಾರೆಯ ಭಿತ್ತಿಯ ಮೇಲೆ ಸುಣ್ಣದ ಹಿನ್ನೆಲೆ ಲೇಪನ ಬಳಿದು ಚಿತ್ರಿಸಲಾಗಿದೆ. ವರ್ಣ ದ್ರವ್ಯಲೇಪನದ

---

೧೮೨. ಡಾ. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪುಟ ೭೧

ದಪ್ಪಳತೆಯು .೩ ಮಿ. ಮಿ. ದಪ್ಪವಿದೆ. ಚಿತ್ರಣಗೊಂಡ ಒಟ್ಟು ಸ್ಥಳ ೨೫೦೦ ಫೂಟುಗಳ ಸುತ್ತಳತೆ ಹೊಂದಿದೆ. ವ್ಯಕ್ತಿ ಚಿತ್ರಗಳಲ್ಲಿ ಯುರೋಪಿಯನ್ ಪ್ರಭಾವ ಗುರುತಿಸಿದರೂ ಸೂಕ್ಷ್ಮವಾಗಿ ಗಮನಿಸಿದಾಗ ಸ್ಥಳೀಯ ಕಿರುರೂಪ ಚಿತ್ರಗಳ ಲಕ್ಷಣಗಳನ್ನೂ ನೋಡಬಹುದಾಗಿದೆ. ಭಾರತೀಯ ಕಲಾವಿದರ ಕೃತಿಗಳಲ್ಲಿರುವ ಚಿತ್ರಗಳ ಆಂತರಿಕ ಅಭಿವ್ಯಕ್ತಿ, ಚಿತ್ರಗಳನ್ನು ನೋಡಿದಾಗ ಉಂಟಾಗುವ ಭಾವನಾತ್ಮಕ ತಾದ್ಯಾತ್ಮತೆ. ಶಕ್ತಿಶಾಲಿ ಜೀವಂತ ರೇಖೆಗಳು, ನೈಜರೂಪಣವನ್ನು ಅಲ್ಲಗಳೆಯುವ ಪ್ರವೃತ್ತಿ ಮುಂತಾದ ಮುಖ್ಯಲಕ್ಷಣಗಳು ಅಸರ್ ಮಹಲ್ ಚಿತ್ರಗಳಲ್ಲಿ ಕಂಡು ಬರುವದಿಲ್ಲವಾದ ಕಾರಣ ವಿದೇಶಿ ಚಿತ್ರಗಾರನೊಬ್ಬ ಇವುಗಳನ್ನು ರಚಿಸಿರಬಹುದು.

***III. ಮಾಡುಗಳಲ್ಲಿನ ಚಿತ್ರಗಳು :*** ಗೋಡೆಯಲ್ಲಿ ಅಲ್ಲಲ್ಲಿ ಇರುವ ಮಾಡುಗಳಲ್ಲಿ ಹೂ ಕುಂಡಗಳನ್ನು ರಚಿಸಲಾಗಿದೆ. ಇಲ್ಲಿನ ಚಿತ್ರಗಳಲ್ಲೇ ಇವು ಉತ್ತಮವೆನಿಸುತ್ತವೆ. ಪ್ರತಿಯೊಂದು ಮಾಡುಗಳಲ್ಲಿ ಭಿನ್ನ ಭಿನ್ನ ಶೈಲಿಯ ಹೂಕುಂಡಗಳನ್ನು ಚಿತ್ರಿಸಿದ್ದು ಈ ಕುಂಡಗಳು ಸುಳುವುಗಳು, ಜ್ಯಾಮತಿಕ ರೂಪಗಳಿಂದ ಅಲಂಕರಿಸಿವೆ. ಕುಂಡದಲ್ಲಿನ ಗಿಡಗಳಲ್ಲಿ ಎಲೆಗಳು. ವಿವಿಧ ಬಗೆಯ ಹೂಗಳು ತುಂಬಿಕೊಂಡಿದ್ದು ವರ್ಣ ಲೇಪನದಲ್ಲಿಯೂ ವೈವಿಧ್ಯತೆ ಇದೆ. ಮಾಡುಗಳಲ್ಲಿನ ಚಿತ್ರಗಳಲ್ಲದೇ ಮಾಡುಗಳ ಅಂಚಿಗೆ ನಕ್ಷಾ ಚಿತ್ರಣವಿದೆ. ಮಾಡುಗಳ ಚಿತ್ರಣದಲ್ಲಿ ಹೂಕುಂಡಗಳಿಗೆ, ಅಂಚಿನ ನಕ್ಷೆಗಳಿಗೆ. ಕೆಲವು ಹೂಗಳಿಗೆ ಎಲೆಗಳಿಗೆ ಬಂಗಾರ ಮತ್ತು ಬೆಳ್ಳಿಯ ವರ್ಣಗಳನ್ನು ಬಳಸಲಾಗಿದೆ. ಗೋಡೆಯ ಮಧ್ಯಭಾಗದಲ್ಲಿನ ಮಾಡುಗಳಲ್ಲದೇ ಮೇಲ್ಛಾವಣಿಗೆ ಹೊಂದಿಕೊಂಡಿರುವ ಗೋಡೆಯ ಭಾಗದಲ್ಲಿ ಸಾಲಾಗಿ ಕಮಾನಿನಂತೆ ಮಾಡುಗಳನ್ನು ರಚಿಸಲಾಗಿದ್ದು ಅಲ್ಲಿಯೂ ಹೂ ಕುಂಡಗಳ ಚಿತ್ರ ರಚಿಸಲಾಗಿದೆ.

ಬಿಜಾಪುರದ ಅರಸು ಪರಿವಾರದ ಇನ್ನೊಂದು ನಿವಾಸಸ್ಥಳ 'ಸಾತ್ ಮಂಜಿಲ್'ದ ಮೇಲಿನ ಅಂತಸ್ತುಗಳಲ್ಲಿಯ ಕೋಠಡಿಗಳ ಗೋಡೆಗಳು ವರ್ಣಚಿತ್ರಗಳಿಂದ ಅಲಂಕೃತವಾಗಿದ್ದುವೆಂದು ಹೇಳಲಾಗುತ್ತಿದೆ. ಆದರೆ ಈಗ ವರ್ಣದ ಚಿತ್ರದ ಯಾವ ಅವಶೇಷಗಳು ಉಳಿದಿಲ್ಲ. ಈಗ ಹಿಂದೆ ೫೦-೬೦ ವರ್ಷಗಳ ಹಿಂದೆ ಅಲ್ಲಿಯ ಚಿತ್ರಗಳನ್ನು ನೋಡಿರುವುದಾಗಿ ಅನೇಕ ಜನರು ಅಭಿಪ್ರಾಯ ಪಡುತ್ತಾರೆ.

**ಚಿತ್ರಗಳ ಪ್ರಮುಖ ಲಕ್ಷಣಗಳು :**

* ಹೂಬಳ್ಳಿಯ ಚಿತ್ರಗಳಲ್ಲಿ ನೀಲಿವರ್ಣವನ್ನು ಅಧಿಕವಾಗಿ ಬಳಸಿದ್ದರೆ ವ್ಯಕ್ತಿ ಚಿತ್ರಗಳಲ್ಲಿ ಕೆಂಪು ವರ್ಣವನ್ನು ಹೆಚ್ಚಾಗಿ ಬಳಸಲಾಗಿದೆ.
* ಪ್ರತಿಗೋಡೆಯಲ್ಲಿ ನೆಲದಿಂದ ೪ ಅಥವಾ ೫ ಫೂಟು ಅಂತರದ ಒಳಗೆ ವ್ಯಕ್ತಿ ಚಿತ್ರಗಳನ್ನು ರಚಿಸಲಾಗಿದೆ.
* ವ್ಯಕ್ತಿ ಚಿತ್ರಗಳು ದಷ್ಟಪುಷ್ಟವಾದ ದುಂಡಾದ ಮೈಕಟ್ಟನ್ನು ಹೊಂದಿವೆಯಲ್ಲದೇ ಪಾರದರ್ಶಕವಾದ ವಿವಿಧ ನಕ್ಷೆಗಳಿಂದ ಕೂಡಿದ ಸುಂದರ ಉಡುಪುಗಳನ್ನು ರಚಿಸಲಾಗಿದೆ.
* ಹೂ ಗಿಡಗಳುಳ್ಳ ಕುಂಡಗಳನ್ನು ಮಾಡುಗಳಲ್ಲಿ ರಚಿಸಿ. ಹೂ ಬಳ್ಳಿಯನ್ನು ಗೋಡೆಯ ಮೇಲೆ ರಚಿಸಲಾಗಿದೆ.

**೩. ಬೇಸಿಗೆ ಅರಮನೆ ಕುಮಟಗಿ :** ವಿಜಾಪುರ ನಗರದಿಂದ ಸುಮಾರು ೨೫ ಕಿ. ಮಿ. ದೂರದಲ್ಲಿ ಪೂರ್ವಕ್ಕೆ ಸಿಂದಗಿ ಮಾರ್ಗದಲ್ಲಿರುವ ಕುಮಟಗಿಯು ಒಂದು ಸಣ್ಣ ಹಳ್ಳಿಯಾಗಿದೆ. ಈ ಸ್ಥಳವು ಬಿಜಾಪುರ ಸುಲ್ತಾನರ ಬೇಸಿಗೆಯ ತಂಗುದಾಣವಾಗಿತ್ತಲ್ಲದೇ, ಯುರೋಪಿಯನ್ ಗಣ್ಯವ್ಯಕ್ತಿಗಳು ರಾಜಧಾನಿಗೆ ಭೇಟಿಕೊಟ್ಟಾಗ ಇಲ್ಲಿಯೇ ತಂಗುವ ವ್ಯವಸ್ಥೆ

ಮಾಡಲಾಗುತ್ತಿತ್ತು. ಹಾಗಾಗಿ ಇಲ್ಲಿ ಸುಂದರ ಕೊಳಗಳು, ಮಂಟಪಗಳು, ಭವನಗಳು, ಬುರುಜುಗಳು ಮುಂತಾದ ಕಟ್ಟಡಗಳನ್ನು ಕಟ್ಟಲಾಗಿತ್ತು. ಇವುಗಳಲ್ಲಿ ಕೆಲವು ಕಟ್ಟಡಗಳನ್ನು ವರ್ಣ ಚಿತ್ರಗಳಿಂದ ಅಲಂಕರಿಸಲಾಗಿದೆ. ೧೬ ನೇ ಶತಮಾನದಲ್ಲಿ ಇಬ್ರಾಹಿಂ ಆದಿಲ್ ಷಾಹನಿಂದ ರಚಿತವಾದ ಇಲ್ಲಿನ ಒಂದು ಕಮಾನುಗಳುಳ್ಳ ಮಹಲಿನಲ್ಲಿ ವರ್ಣಭಿತ್ತಿಚಿತ್ರಗಳು ಕಂಡುಬಂದಿವೆ. ಈ ಮಹಲು ಒಳಭಾಗದಲ್ಲಿ ಕಮಾನಿನಂತಿರುವ ಗೋಡೆಗಳನ್ನು ಹೊಂದಿದ್ದು, ಕಮಾನುಗಳ ಮೇಲೆಯೇ ಮೇಲ್ಛಾವಣಿಯು ನಿರ್ಮಿಸಿದೆ. ಈ ಕಟ್ಟಡದ ಒಳಗಿನ ಕಮಾನು ಗೋಡೆಗಳಿಗೆಲ್ಲ ಮತ್ತು ಮೇಲ್ಛಾವಣಿಯ ಎಲ್ಲ ಭಾಗದಲ್ಲಿ ವರ್ಣ ಚಿತ್ರಗಳಿಂದ ಅಲಂಕರಿಸಲಾಗಿತ್ತು. ಒಳಭಾಗದ ಯಾವದೇ ಚಿಕ್ಕ ಸ್ಥಳವನ್ನೂ ಬಿಡದೇ ವರ್ಣ ಚಿತ್ರಗಳಿಂದ ಅಲಂಕರಿಸಲಾಗಿದ್ದ ಈ ಮಹಲಿನಲ್ಲಿ ಇಂದು ಎಲ್ಲ ಚಿತ್ರಗಳೂ ನಾಶವಾಗಿ ಕೇವಲ ಸಂತನೊಬ್ಬ ರಾಜನೊಡನೆ ವಿಚಾರ ವಿನಿಮಯ ನಡೆಸುತ್ತಿರುವ ಚಿತ್ರಮಾತ್ರ ಮಸುಕಾಗಿ ಉಳಿದಿದೆ. ಇದು ಬಿಟ್ಟರೆ ಅಲ್ಲಲ್ಲಿ ಪ್ರಾಣ ಪಕ್ಷಿಗಳು, ಹೂ ಬಳ್ಳಿ ಮತ್ತು ಅಲಂಕಾರಿಕ ನಕ್ಷೆಗಳು ಅಲ್ಪ ಸ್ವಲ್ಪ ತಮ್ಮ ಇರುವನ್ನು ತೋರಿಸುತ್ತವೆ. ಉಳಿದಂತೆ ಮೇಲ್ಛಾವಣಿ ಸೇರಿದಂತೆ ಎಲ್ಲ ಭಾಗದಲ್ಲೂ ಬಣ್ಣದ ಉಳಿಕೆಗಳು ಮಾತ್ರ ಕಂಡು ಬರುತ್ತವೆ. ಈ ಮಹಲು ಪಾರ್ಸನಿಕ್ ಪದ್ಧತಿಯಲ್ಲಿ ಕಟ್ಟಿದ ಕಟ್ಟಡವಾಗಿದ್ದು, ಪಕ್ಕದಲ್ಲಿ ನಿರ್ಮಿಸಿದ ಸರೋವರದಿಂದ ಕಾಲುವೆ ಮೂಲಕ ನೀರು ಹರಿದುಬಂದು ಈ ಮಹಲಿನ ಸುತ್ತಲೂ ನಿರ್ಮಿಸಿರುವ ಆಳವಾದ ಕಾಲುವೆಯಲ್ಲಿ ನಿಲ್ಲುತ್ತದೆ. ಇದರಿಂದ ಗಾಳಿಯು ನೀರಿನ ಮುಖಾಂತರ ಬೀಸಿ, ಬೇಸಿಗೆಯಲ್ಲಿ ಸಹಜವಾಗಿ ಮಹಲಿನ ಒಳಗಿನ ವಾತಾವರಣ ತಂಪಾಗಿರುತ್ತದೆ. ಇಲ್ಲಿ ಉಳಿದುಬಂದಿರುವ ಸ್ಪಷ್ಟವಾಗಿ ಗುರುತಿಸಬಹುದಾದ ಚಿತ್ರವೆಂದರೆ ರಾಜನೊಬ್ಬನು ಮುಸ್ಲಿಂ ಸಂತನೊಬ್ಬನೊಡನೆ ವಿಚಾರ ವಿನಿಮಯದಲ್ಲಿ ತೊಡಗಿರುವುದು. ಇದರಲ್ಲಿ ಸುಲ್ತಾನನು ಯಾವುದೋ ವಿಷಯಕ್ಕಾಗಿ ಮುಸ್ಲಿಂ ಸಂತನ ಸಲಹೆಯನ್ನು ಕೇಳಿತ್ತಿರುವಂತಿದೆ. ಸಂತನು ರಾಜನ ಸಮಸ್ಯೆಗೆ ಗ್ರಂಥನೋಡಿ ಏನೋ ಸಮಾಧಾನ ಹೇಳುತ್ತಿದ್ದಾನೆ. ಸುಲ್ತಾನನ ಹಿಂದುಗಡೆ ಚಿಕ್ಕ ಆಕೃತಿಯೊಂದು ಕಾಣುತ್ತಿದ್ದು ಅದು ಪರಿಚಾರಕನಾಗಿರಬಹುದು. ಇಡೀ ಚಿತ್ರದ ಹಿನ್ನೆಲೆಯಲ್ಲಿ ಹೂಬಳ್ಳಿಯನ್ನು ಚಿತ್ರಿಸಿದ್ದು ಚಿಕ್ಕ ಚಿಕ್ಕ ಬಣ್ಣದ ಹೂಗಳು ನೈಜವಾಗಿ ಚಿತ್ರಣಗೊಂಡಿವೆ. ವರ್ಣ ವಿನ್ಯಾಸ, ರಚನಾಶೈಲಿ ಪೂರ್ತಿಯಾಗಿ ಯುರೋಪ್ ಪ್ರಭಾವಕ್ಕೆ ಒಳಗಾದದ್ದು ಕಾಣುವುದು. ಈ ಚಿತ್ರದಲ್ಲಿ ನಸುಕೆಂದು, ಕಪ್ಪು, ಬೂದುವರ್ಣಗಳ ಛಾಯೆ ಹೆಚ್ಚಾಗಿ ಕಂಡುಬರುತ್ತವೆ. ಇನ್ನೊಂದು ಅಸ್ಪಷ್ಟವಾದ ಚಿತ್ರದಲ್ಲಿ ಕುದುರೆಮೇಲೆ ಕುಳಿತ ಸವಾರರು ಚಂಡಾಟದಲ್ಲಿ ನಿರತರಾಗಿದ್ದಾರೆ. ಸುತ್ತಲೂ ಹೂಬಳ್ಳಿಗಳು, ವಿವಿಧ ಪಕ್ಷಿ ಸಂಕುಲಗಳು ನೆರೆದಿದೆ ಇದೊಂದು ಸುಂದರ ಹೊರಾಂಗಣವನ್ನು ಸೂಚಿಸುತ್ತಿದ್ದು, ಶಿವರಾಂ ಕಾರಂತ ಅವರು ಪೋಲೋ ಆಟಗಾರರು ಎಂದು ಇದನ್ನು ಗುರುತಿಸುತ್ತಾರೆ.

ಇರಾನಿನ ಚಿತ್ರಕಾರನಾದ 'ಸಿಕ್ರಿ ಕಚದೋರಿಯನ್' ಎಂಬಾತ ಪ್ರತಿಮಾಡಿದ ಇಲ್ಲಿನ ಒಂದು ಚಿತ್ರಕೃತಿಯು ಇಲ್‌ಸ್ಟ್ರೇಟೆಡ್ ವೀಕ್ಲಿ ಪತ್ರಿಕೆಯ ದಿನಾಂಕ ೨೭-೧೧-೧೯೬೮ ರ ಆವೃತ್ತಿಯಲ್ಲಿ ಪ್ರಕಟಗೊಂಡಿದ್ದನ್ನು ಆಧರಿಸಿ ಶಿವರಾಂ ಕಾರಂತ ಅವರು[೧೫೩] ವಿವರಿಸುತ್ತಾರೆ. ಈ ಚಿತ್ರದಲ್ಲಿ ರಾಜಕುಮಾರಿಯೊಬ್ಬಳು ಸುಂದರ ರೂಪಿನಿಂದ ಕಂಗೊಳಿಸುತ್ತಿದ್ದು, ಅವಳ ಹಿಂದೆ ಸಖಿಯೊಬ್ಬಳು ನಿಂತಿದ್ದಾಳೆ. ಚಿತ್ರದ ಹಿನ್ನೆಲೆಯಲ್ಲಿ ಹೂ ಬಿಟ್ಟ ಗಿಡ ಬಳ್ಳಿಗಳು ಚಿತ್ರಿಸಲಾಗಿದೆ. ಪಕ್ಕದಲ್ಲಿಯೇ ಎರಡು ಜಿಂಕೆಗಳು ಚಿಗುರೆಲೆ ತಿನ್ನುತ್ತಿವೆ. ಆದಿಲ್‌ಶಾಹಿ ದರ್ಬಾರಿಗೆ ಬರತೊಡಗಿದ ಯಾರೋ ಐರೋಪ್ಯ ಚಿತ್ರಕಾರನಿಂದ ಈ ಚಿತ್ರವನ್ನು ಬರೆಸಿರಬಹುದೆಂದು ಕಾರಂತ ಅವರು ತರ್ಕಿಸಿದ್ದಾರೆ. ಈ ಚಿತ್ರವು ಇಂದು ಅಲ್ಲಿ

---

೧೫೩. ಡಾ. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪುಟ ೭೧

ಎಲ್ಲಿಯೂ ಕಂಡುಬರುವದಿಲ್ಲ. ಈ ಮಹಲಿನ ಒಂದು ಕಮಾನು ಗೋಡೆಯಲ್ಲಿ ಪೋರ್ಚುಗೀಸ್ ಪ್ರವಾಸಿಯೊಬ್ಬನ ಚಿತ್ರವಿದ್ದು ಅದು ಸಾಕಷ್ಟು ಹಾನಿಗೊಳಗಾಗಿದೆ. ಅಲ್ಲಲ್ಲಿ ವರ್ಣದ ತುಣುಕುಗಳು ಮಾತ್ರ ಉಳಿದಿವೆ. ಇವುಗಳಲ್ಲದೇ ಅರ್ಧ ವೃತ್ತಾಕಾರದ ಕಮಾನಿನ ಮೇಲ್ಭಾಗದಲ್ಲಿ ಹಲವಾರು ಪ್ರಾಣಿಗಳು, ಪಕ್ಷಿಗಳು, ಆನೆ, ಕುದುರೆ ಸವಾರರು, ನೃತ್ಯದಲ್ಲಿ ನಿರತ ಸ್ತ್ರೀಯರು. ವಾದ್ಯಗಾರರು. ವೈವಿಧ್ಯಮಯ ಅಲಂಕಾರಿಕ ನಕ್ಷೆಗಳು ಮುಂತಾದವುಗಳನ್ನು ತಕ್ಕಮಟ್ಟಿಗೆ ಗುರುತಿಸಬಹುದು.

**ಕುಮಟಗಿಯ ಭಿತ್ತಿ ಚಿತ್ರಗಳ ಲಕ್ಷಣಗಳು :**

* ಚಿತ್ರಗಳಲ್ಲಿ ನಸುಗೆಂಪು, ಕಪ್ಪು, ಬೂದು ವರ್ಣಗಳ ಬಳಕೆ ಅಧಿಕವಾಗಿದೆ.
* ಚಿತ್ರಗಳು ನೈಜರೂಪಣಕ್ಕೆ ಹತ್ತಿರವಿದ್ದು ಯುರೋಪಿನ ಪ್ರಭಾವವನ್ನು ತೋರಿಸುತ್ತವೆ.
* ಪ್ರಾಣಿ ಪಕ್ಷಿಗಳು. ಹೂ ಬಳ್ಳಿಯ ನಕ್ಷೆಗಳಲ್ಲಿ ಅತೀ ಅಲಂಕರಣ ರೂಪ ಚಿತ್ರಿಸದೇ ಆಯಾ ವಸ್ತುಗಳ ನೈಜರೂಪವನ್ನೇ ಚಿತ್ರಿಸಲು ಪ್ರಯತ್ನಿಸಿದ್ದಾರೆ.
* ಚಿತ್ರಗಳ ಶೈಲಿ ವರ್ಣಲೇಪನ ವಿಧಾನ ಮುಂತಾವುಗಳನ್ನು ಗಮನಿಸಿದಾಗ ಇಡೀ ಮಹಲಿನ ಚಿತ್ರಗಳೆಲ್ಲ ಒಬ್ಬ ಕಲಾವಿದನ ನೇತೃತ್ವದ ತಂಡದಿಂದ ಒಂದೇ ಸಲಕ್ಕೆ ರಚನೆಯಾದಂತೆ ತೋರುತ್ತದೆ.

**೪. ನರಗುಂದ ಅರಮನೆ :** ನರಗುಂದವು ತಾಲೂಕಾ ಸ್ಥಳವಾಗಿದ್ದು ಇಂದು ಗದಗ ಜಿಲ್ಲೆಗೆ ಸೇರಿದೆ. ನರಗುಂದವು ಕರ್ನಾಟಕ ಚರಿತ್ರೆಯಲ್ಲಿ ತುಂಬಾ ಹೆಸರುಮಾಡಿದ ಸ್ಥಳ. ಶಿವಾಜಿಯ ಕೈಕೆಳಗೆ ಅಧಿಕಾರಿಯಾಗಿದ್ದ ಅಪ್ಪಾಜಿಸೂರೋ ಎಂಬ ಮರಾಠ ಮೂಲದ ವ್ಯಕ್ತಿಯ ವಂಶಸ್ಥರು ಇಲ್ಲಿ ಆಳಿದ್ದಾರೆ.[೧೫೪] ಕ್ರಿ. ಶ. ೧೮೫೮ ರಲ್ಲಿ ಈ ಸಂಸ್ಥಾನವು ಬ್ರಿಟೀಷರ ವಶವಾಯಿತು. ನರಗುಂದ ಸಂಸ್ಥಾನಿಕರು ತಮ್ಮ ಆಡಳಿತಕಾಲದಲ್ಲಿ ಕಟ್ಟಿಸಿದ ಅರಮನೆಯಲ್ಲಿ ಭಿತ್ತಿಚಿತ್ರಗಳನ್ನು ಬರೆಸಿದ್ದು. ಆ ಕಟ್ಟಡ ಇಂದು ಸ್ಥಳೀಯ ಮುನಸಿಪಲ್ ಕಛೇರಿಯಾಗಿದೆ. ಅರಮನೆಯ ಈ ಚಿತ್ರಗಳ ಬಗೆಗೆ ವಿವರವಾಗಿ ಬರೆದವರೆಂದರೆ ಬಹುಶ ಡಾ. ಶಿವರಾಮ ಕಾರಂತ[೧೫೫] ಅವರು ಎನ್ನಬಹುದು. ಆದರೆ ಇವರು ಇಲ್ಲಿನ ಮೂರ್‍ನಾಲ್ಕು ಚಿತ್ರಗಳ ಬಗೆಗೆ ಮಾತ್ರ ವಿವರ ಕೊಡುತ್ತಾರೆ. ನಂತರ ಡಾ. ಎಸ್. ಸಿ. ಪಾಟೀಲ ಅವರು[೧೫೬] ಜನಪದ ಚಿತ್ರಕಲೆ ಬಗೆಗೆ ಅಧ್ಯಯನ ಮಾಡುವಾಗ ಇವುಗಳನ್ನು ಪ್ರಸ್ತಾಪಿಸುತ್ತಾರೆ. ಡಾ. ಅ. ಲ. ನರಸಿಂಹನ್ ಅವರು[೧೫೭] ಕರ್ನಾಟಕ ಚಿತ್ರಕಲೆಯ ಸಾಂಸ್ಕೃತಿಕ ಅಂಶಗಳು ಕುರಿತು ಹೇಳುವಾಗ ಇಲ್ಲಿನ ಒಂದೆರಡು ಚಿತ್ರಗಳನ್ನು ಉದಾಹರಿಸುತ್ತಾರಲ್ಲದೇ ಇವುಗಳು ರಚನೆಯಾದ ಕಾಲವನ್ನು ಚರ್ಚಿಸಿದ್ದಾರೆ. ಇವುಗಳಲ್ಲದೇ ದಿನಪತ್ರಿಕೆ. ವಾರಪತ್ರಿಕೆ, ಮಾಸಪತ್ರಿಕೆಗಳಲ್ಲಿ ಇವುಗಳ ಕುರಿತು ಪರಿಚಯಾತ್ಮಕ ಲೇಖನಗಳು ಆಗಾಗ ಬಂದಿವೆ. ಅವುಗಳು ಹೆಚ್ಚಿನ ವಿವರಣೆಯನ್ನು ನೀಡುವುದಿಲ್ಲ.

**ಕಾಲ :** ಅರಮನೆಯಲ್ಲಿನ ಭಿತ್ತಿ ಚಿತ್ರಗಳು ಯಾವ ಕಾಲದಲ್ಲಿ ರಚನೆಯಾಗಿವೆ ಎಂಬ ಬಗ್ಗೆ ಈಗಾಗಲೇ ಚರ್ಚೆಯಾಗಿದೆ. ಈ ಚಿತ್ರಗಳು ಬಾಬಾಸಾಹೇಬನ ನಂತರದಲ್ಲಿ ಅಂದರೆ ೧೮೫೮ ರ ನಂತರದ ಕಾಲದಲ್ಲಿ ರಚನೆಯಾಗಿರಬಹುದು ಎಂದು ಡಾ. ಅ. ಲ. ನರಸಿಂಹನ್ ಅವರು ತಿಳಿಸುತ್ತಾರೆ. ಅವರು ಇಲ್ಲಿರುವ ಯುದ್ಧವೊಂದರ

---

೧೫೪. ವೆಂಕಟ ರಂಗೋಕಟ್ಟಿ : ಧಾರವಾಡ ಜಿಲ್ಲಾ ಗೆಝೆಟೀಯರ್ (೧೮೮೭). ಪುಟ ೨೦೭
೧೫೫. ಡಾ. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪುಟ ೭೫
೧೫೬. ಡಾ. ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪುಟ ೪೮
೧೫೭. ಡಾ. ಅ. ಲ. ನರಸಿಂಹನ್ : ಕರ್ನಾಟಕ ಭಿತ್ತಿ ಚಿತ್ರ ಪರಂಪರೆ, ಪುಟ ೧೯೪

ಚಿತ್ರದ ಆಧಾರದ ಮೇಲೆ ಈ ಊಹೆಯನ್ನು ಮಾಡಿದ್ದಾರೆ. ಅವರು ಹೀಗೆ ಹೇಳುತ್ತಾರೆ. "ಬಾಬಾ ಸಾಹೇಬ ತನ್ನ ಅಂತಿಮ ಯುದ್ಧದ ವಿನಹ ಯಾವುದೇ ಯುದ್ಧ ಮಾಡಿದಂತಿಲ್ಲ. ಅಂತಿಮ ಯುದ್ಧ ಆರಂಭವಾದುದು ೧೮೫೮ ರ ಮಾರ್ಚಿನಲ್ಲಿ. ಮೇ ೨೯ ರಂದು ಮ್ಯಾನ್ಸನ್ ಸಾಹೇಬನನ್ನು ಸುರೇಬಾನದ ಹನುಮಂತ ದೇವಾಲಯದಲ್ಲಿ ಕೊಲೆಮಾಡಲಾಯಿತು. ಕಾಡು ಸೇರಿದ ಬಾಬಾಸಾಹೇಬನನ್ನು ಸೆರೆಹಿಡಿದು ಜೂನ್ ೧೨ ರಂದು ಬೆಳಗಾವಿಯಲ್ಲಿ ಗಲ್ಲಿಗೇರಿಸಲಾಯಿತು. ನರಗುಂದದ ಭಿತ್ತಿ ಚಿತ್ರದಲ್ಲಿ ಮಧ್ಯೆ ಪ್ರಧಾನವಾಗಿ ಕಾಣುವಂತೆ ಹನುಮಂತ ದೇವಾಲಯ ಚಿತ್ರಿಸಿದೆ. ಸುರೇಬಾನದ ಆಂಜನೇಯ ದೇವಾಲಯದಲ್ಲಿಯೇ ಮ್ಯಾನ್ಸನ್‌ನ ಕೊಲೆಯಾಗಿದ್ದು ಅದು ನರಗುಂದದವರ ಸಾಧನೆಯ ವಿಷಯ ಅರಮನೆಯ ಯುದ್ಧದ ಚಿತ್ರವೂ ಇದೇ ಯುದ್ಧ ಹಾಗೂ ಸುರೇಬಾನದ ಆಂಜನೆಯ ದೇವಾಲಯವೇ ಆಗಿದ್ದರೆ ಚಿತ್ರಗಳು ಆತನ ಜೀವಿತಕಾಲದಲ್ಲಿ ಬರೆಸಿದ್ದಾಗಿರುವುದಿಲ್ಲ. ಮ್ಯಾನ್ಸನ್‌ನ ಕೊಲೆಯೊಂದಿಗೇ ಆತ ತಲೆತಪ್ಪಿಸಿಕೊಂಡಿದ್ದು ತೊರಗಲ್ಲು ಅಡವಿಯಲ್ಲಿ ಆತ ಸೆರೆಸಿಕ್ಕು ಗಲ್ಲಿಗೇರಿಸಲ್ಪಟ್ಟ ಅನಂತರದ ಕೆಲವೇ ವರ್ಷಗಳಲ್ಲಿ ಈ ಚಿತ್ರಗಳ ಬರೆಸಿರಬಹುದು" ಎಂದು ಹೇಳುತ್ತಾರೆ.

ಆದರೆ ನರಸಿಂಹನ್ ಅವರ ಈ ಊಹೆ ಅಷ್ಟೊಂದು ಸರಿ ಎನಿಸವುದಿಲ್ಲವೆಂದು ಹೇಳಬಹುದು. ಮಾನ್ಸನ್‌ನ ಕೊಲೆಯೊಂದಿಗೆ ಕಾಡು ಸೇರಿದ ಬಾಬಾಸಾಹೇಬನು ಕೊನೆಗೆ ತೊರಗಲ್ಲು ಅಡವಿಯಲ್ಲಿ ಬ್ರಿಟಿಷರಿಗೆ ಸೆರೆಸಿಕ್ಕು ಆತನನ್ನು ಗಲ್ಲಿಗೇರಿಸಲಾಯಿತು. ಇದು ನಡೆದ ಇತಿಹಾಸವೂ ಹೌದು. ಬಾಬಾಸಾಹೇಬನ ಅಂತ್ಯದೊಂದಿಗೆ ನರಗುಂದ ಸಂಸ್ಥಾನವು ಬ್ರಿಟಿಷರ ಸಂಪೂರ್ಣ ಸ್ವಾಮ್ಯಕ್ಕೊಳಪಟ್ಟಿತು. ಅಲ್ಲಿ ಮತ್ತಾವ ದೊರೆಯೂ ಆಡಳಿತ ನಡೆಸಲಿಲ್ಲ. ಅಲ್ಲದೇ ಸುರೇಬಾನದ ಹನುಮಂತ ದೇವರ ಗುಡಿಯಲ್ಲಿ ಮಾನ್ಸನ್‌ನ ಕೊಲೆಮಾಡಿದ್ದು ನರಗುಂದದವರ ಸಾಧನೆ ವಿಷಯವೆಂದರೂ ಬ್ರಿಟಿಷರ ಸ್ವಾಮ್ಯಕೊಳಪಟ್ಟ ಈ ಸಂಸ್ಥಾನದಲ್ಲಿ ಬ್ರಿಟಿಷರ ವಿರೋಧಿ ಘಟನೆಯ ಚಿತ್ರವನ್ನು ಬರೆಸುವ, ಅಂದರೆ ಬ್ರಿಟಿಷ ಅಧಿಕಾರಿ ಮ್ಯಾನ್ಸನ್ ಸಾಹೇಬನ ಕೊಲೆಯನ್ನು ಪ್ರತಿನಿಧಿಸುವ ಕ್ರಮವನ್ನು ಬ್ರಿಟಿಷರು ನೋಡಿಕೊಂಡು ಸುಮ್ಮನಿದ್ದರೇ ಎಂಬುದೂ ವಿಚಾರ ಮಾಡಬೇಕಾಗುತ್ತದೆ. ಹಾಗಾಗಿ ಬಾಬಾಸಾಹೇಬನ ನಂತರದಲ್ಲಿ ಈ ಚಿತ್ರಗಳು ರಚನೆಯಾಗಿವೆ ಎಂಬುದು ಹೆಚ್ಚು ಯೋಗ್ಯವಲ್ಲ.

ಅ. ಲ. ನರಸಿಂಹನ್ ಅವರು ಯುದ್ಧ ಚಿತ್ರದಲ್ಲಿ ಇರುವ ಹನುಮಂತ ದೇವರ ಗುಡಿಯು ಸುರೇಬಾನದ ಹನುಮಂತ ಗುಡಿ ಇರಬಹುದು ಎಂದು ಹೇಳುತ್ತಾರೆ. ಆದರೆ ನರಗುಂದದಲ್ಲಿಯೇ ಬಾಬಾಸಾಹೇಬನ ಆಡಳಿತ ಕಾಲದಲ್ಲಿಯೇ ಎರಡು ಹನುಮಂತ ದೇವರ ಗುಡಿಗಳು ಇದ್ದವು. ಅವು ಈಗಲೂ ಇವೆ. ಅವುಗಳಲ್ಲಿ ಒಂದು ಗುಡಿಯಲ್ಲಿನ ಆಂಜನೇಯ ಮೂರ್ತಿಯು ಯುದ್ಧದ ಚಿತ್ರದಲ್ಲಿ ಇರುವ ಹನುಮಂತನ ಹಾಗೆ ಎಡಕ್ಕೇ ಮುಖಮಾಡಿದ್ದು ಅದೇ ಶೈಲಿಯಲ್ಲಿದೆ. ಹಾಗಾಗಿ ಯುದ್ಧ ದೃಶ್ಯದಲ್ಲಿರುವ ಹನುಮಂತಗುಡಿ ಸುರೇಬಾನ ಆಂಜನೇಯ ಎನ್ನಲು ಯಾವ ಬಲವಾದ ಆಧಾರವೂ ಇಲ್ಲ. ಹಾಗಾಗಿ ಬಾಬಾಸಾಹೇಬನ ಅಂತಿಮಯುದ್ಧದ ನಂತರ ಬರೆಸಿದ ಚಿತ್ರಗಳು ಇವು ಎಂಬುದು ಅಷ್ಟೊಂದು ಸರಿಯಾದ ಊಹೆಯಲ್ಲ. ಆತನಿಗಿಂತ ಮುಂಚಿನ ದೊರೆಗಳು ಬರೆಸಿರಬಹುದು ಎನಿಸುತ್ತದೆ.

ನರಗುಂದವನ್ನು ಎರಡು ಬಾರಿ ಟಿಪ್ಪು ವಶಪಡಿಸಿಕೊಂಡಿದ್ದು. ಪೇಶ್ವೆಗಳು, ನಿಜಾಮನು ನರಗುಂದದವರ ಸಹಾಯಕ್ಕೆ ಬಂದದ್ದು ಮುಂತಾದ ಘಟನೆಗಳನ್ನು ಇಲ್ಲಿರುವ ಯುದ್ಧ ಚಿತ್ರ ಪ್ರತಿನಿಧಿಸುತ್ತಿರಬಹುದು. ಈ ಅರಮನೆಯ

ಕಟ್ಟಡವು ಸುಮಾರು ಎರಡುನೂರು ವರ್ಷಗಳ ಹಳೆಯದಾದ ಕಟ್ಟಡವಾಗಿದೆ ಎಂದು ಶಿವರಾಮ ಕಾರಂತ ಅವರು[೧೫೮] ತಿಳಿಸುತ್ತಾರೆ. ಬಹುಶ ಇದು ಸಂಸ್ಥಾನದ ಮೊದಲ ದೊರೆ ರಾಮರಾವ್ ತಮ್ಮನ ಮಗ ದಾದಾಜಿಯ ಮಗನಾದ ಭಾಸ್ಕಾರರಾಯನ ಕಾಲದಲ್ಲಿ ನಿರ್ಮಿತವಾಗಿರಬಹುದು. (ಸುಮಾರು ಕ್ರಿ. ಶ. ೧೭೭೦ ರಲ್ಲಿ) ಎನಿಸುತ್ತದೆ. ಬಳವಂತರಾಯನು ಸಮಯ ಸಾಧಿಸಿ ಕ್ರಿ. ಶ. ೧೭೫೮ ರಲ್ಲಿ ಸಿಂಹಾಸನವನ್ನು ವಶಪಡಿಸಿಕೊಂಡಾಗ, ಭಾಸ್ಕರರಾಯನು ತಕ್ಷಣವೇ ಪುಣೆಗೆ ಹೋಗಿ ಮಾಧವರಾಯನ ಪ್ರೀತಿ ಸಂಪಾದಿಸಿ ಆತನ ಸಹಾಯದಿಂದ ಬಳವಂತರಾಯನನ್ನು ಪದಚ್ಯುತಗೊಳಿಸಿ ತಾನೇ ಮತ್ತೆ ಸಂಸ್ಥಾನವನ್ನು ಹಿಡಿದುಕೊಂಡನು. ಕಾರಂತ ಅವರು ಅರಮನೆಯ ಹಳತಿನಬಗ್ಗೆ ಕೊಡುವ ೨೦೦ ವರ್ಷಗಳ ಕಾಲಮಾನವು ಭಾಸ್ಕಾರರಾಯನ ಆಡಳಿತಕ್ಕೆ ಸರಿಹೊಂದುವುದುರಿಂದ ಬಹುಶ ಈತನ ಕಾಲಕ್ಕೆ ಅರಮನೆನಿರ್ಮಿಸಿರಬೇಕು ಎನಿಸುತ್ತದೆ. ಅಲ್ಲದೇ ತಾನು ನಿರ್ಮಿಸಿದ ಅರಮನೆಯನ್ನು ಅಲಂಕರಿಸಲು ತನ್ನ ಪ್ರೀತಿ ಪಾತ್ರ ದೊರೆಗಳಾಗಿದ್ದ. ತನಗೆ ರಾಜ್ಯವನ್ನು ಮರಳಿ ದೊರಕಿಸಿಕೊಟ್ಟ ಪೇಶ್ವೆಗಳ ರಾಜ್ಯದಿಂದಲೇ ಕಲಾವಿದರನ್ನು ಕರೆಯಿಸಿಕೊಂಡು ಈ ಅರಮನೆಯ ಚಿತ್ರಗಳನ್ನು ಬರೆಸಿರಬೇಕು. ಚಿತ್ರಗಳಲ್ಲಿರುವ ಪೇಶ್ವೆಗಳ ರೀತಿಯ ವಸ್ತ್ರವಿನ್ಯಾಸ, ವೇಷಭೂಷಣಗಳು. ಇದನ್ನು ಸಮರ್ಥಿಸುತ್ತವೆ. ಹಾಗಾಗಿ ಪೇಶ್ವೆಗಳ ಜೊತೆಗೆ ಅತ್ಯಂತ ನಿಕಟ ಸಂಪರ್ಕವಿದ್ದ ಭಾಸ್ಕರರಾಯನ ಕಾಲದಲ್ಲೇ ಈ ಚಿತ್ರಗಳು ರಚನೆಯಾಗಿರಬೇಕು (೧೭೭೦ ರ ಸುಮಾರಿಗೆ) ಎಂಬುದು ಹೆಚ್ಚು ಸಮಂಜಸವೆನಿಸುತ್ತದೆ.

**ಚಿತ್ರಗಳ ವಿವರಣೆ :** ಈ ಅರಮನೆಯಲ್ಲಿರುವ ರಾಜನ ಒಂದು ಖಾಸಗೀ ಕೋಣೆಯಲ್ಲಿ ಭಿತ್ತಿ ಚಿತ್ರಗಳನ್ನು ರಚಿಸಲಾಗಿದೆ. ಮೇಲಿನ ಅಂತಸ್ತಿನಲ್ಲಿರುವ ೧೨ x ೧೦ x ೮ ಅಡಿಗಾತ್ರದ ಕೋಟೆಯ ನಾಲ್ಕು ಬದಿಯ ಗೋಡೆಗಳು ಚಿತ್ರಗಳಿಂದ ತುಂಬಿವೆ. ಚಿತ್ರಗಳಿಗೆ ಲೇಪಿಸಲಾದ ರಾಸಾಯನಿಕ ದ್ರವದ ಪರಿಣಾಮದಿಂದ ಚಿತ್ರಗಳು ಕಪ್ಪುಬಣ್ಣಕ್ಕೆ ತಿರುಗಿದ್ದು ಗುರುತಿಸಲಾಗದಂತಹ ಪರಿಸ್ಥಿತಿ ಉಂಟಾಗಿದೆ. ಬರಿಗಣ್ಣಿನಿಂದ ಅತ್ಯಂತ ಸಮೀಪದಿಂದ ನೋಡಿದರೂ ಗುರುತಿಸಲಾಗದಂತೆ ಕಪ್ಪಾಗಿದ್ದು ಫೋಟೋ ಪ್ರತಿಗಳನ್ನು ತೆಗೆಯುವುದೂ ದುಸ್ಸಾಧ್ಯವಾಗಿದೆ. ಇಲ್ಲಿನ ಭಿತ್ತಿಚಿತ್ರಗಳನ್ನು ವಿಷಯಾಧಾರಿತವಾಗಿ ಈ ಕೆಳಗಿನಂತೆ ಎರಡು ವಿಧದಲ್ಲಿ ವಿಂಗಡಿಸಬಹುದು.

I. ಧಾರ್ಮಿಕ ಚಿತ್ರಗಳು

II. ಧಾರ್ಮಿಕೇತರ ಚಿತ್ರಗಳು

**I. ಧಾರ್ಮಿಕ ಚಿತ್ರಗಳು :** ಧಾರ್ಮಿಕ ಚಿತ್ರಗಳಲ್ಲಿ ಶೈವ ವೈಷ್ಣವ ಪುರಾಣಗಳಿಗೆ ಸಂಬಂಧಿಸಿದ ಚಿತ್ರಗಳು, ರಾಮಾಯಣ ಮಹಾಭಾರತದ ಕಥಾನಕಗಳಿಗೆ ಸಂಬಂಧಿಸಿದ ಚಿತ್ರಗಳಲ್ಲದೇ, ಋಷಿಮುನಿಗಳ ಚಿತ್ರಗಳು, ಗಣಪತಿ, ಸರಸ್ವತಿ. ಹಾಗೂ ಇತರ ದೇವತೆಗಳ ಚಿತ್ರಗಳೂ ಒಳಗೊಳ್ಳುತ್ತವೆ ಅವುಗಳನ್ನು ಒಂದೊಂದಾಗಿ ಈ ಕೆಳಗಿನಂದೆ ವಿವರಿಸಬಹುದು.

೧. ಶೇಷಶಯನ ವಿಷ್ಣುವಿನ ಚಿತ್ರ : ಇಡೀ ಒಂದು ದೊಡ್ಡ ಆಯತಾಕಾರದ ಪಟ್ಟಿಕೆಯಲ್ಲಿ ಈ ಚಿತ್ರರಚಿಸಲಾಗಿರುವ. ವಿಷ್ಣುವು ಏಳುಹೆಡೆಗಳ ಆದಿಶೇಷನ ಮೇಲೆ ಪವಡಿಸಿದ್ದಾನೆ. ಸರ್ಪವು ತನ್ನ ಹೆಡೆಯಿಂದ ನಾರಾಯಣನಿಗೆ ನೆರಳು ಮಾಡಿದೆ. ನೀಲ ಮೇಘಶ್ಯಾಮ ವರ್ಣದ ನಾರಾಯಣನು ಚತುರ್ಭುಜನಾಗಿದ್ದಾನೆ. ಹಿಂದಿನ

೧೫೮. ಡಾ. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪುಟ ೯೪

ಎರಡು ಕೈಗಳಲ್ಲಿ ಶಂಖ ಚಕ್ರಗಳು ರಾರಾಜಿಸುತ್ತಿದ್ದರೆ ಮುಂದಿನ ಎಡಕೈಯನ್ನು ಮೊಣಕಾಲಿನ ಮೇಲೆ ಆರಾಮವಾಗಿ ಇಳಿಬಿಟ್ಟುಕೊಂಡಿದ್ದು ಬಲಗೈ ಅಭಯಹಸ್ತ ಮುದ್ರೆಯಲ್ಲಿದೆ. ನಾರಾಯಣನ ಹೊಕ್ಕಳಿಂದ ಹೊರಟ ಕಮಲದ ಹೂವಿನಲ್ಲಿ ಬ್ರಹ್ಮನು ವಿರಾಜಮಾನನಾಗಿದ್ದಾನೆ. ಶೇಷಶಯನ ವಿಷ್ಣುವಿನ ಎಡಬಲಗಳಲ್ಲಿ ಶ್ರೀದೇವಿ ಭೂದೇವಿಯರು ಆತನ ಸೇವೆಯಲ್ಲಿ ನಿರತರಾಗಿದ್ದಾರೆ. ಶ್ರೀದೇವಿಯು ಕಪ್ಪು ಹಸಿರು ಮಿಶ್ರಿತ ಕೆಂಪು ಅಂಚಿನ ಚುಕ್ಕೆಗಳಿರುವ ಸೀರೆಯನ್ನು ಉಟ್ಟುಕೊಂಡಿದ್ದು ಇದಕ್ಕೆ 'ಚಂದ್ರಕಾಳಿ' ಸೀರೆ ಎಂದು ಹೆಸರಿದೆ ಒಂದು ವಿಶೇಷ ಸೀರೆ ಇದಾಗಿದೆ. ಅದರಂತೆ ನರಗುಂದದ ಸ್ತ್ರೀ ಚಿತ್ರಗಳಲ್ಲಿ ಇಂತಹ ಚಂದ್ರಕಾಳಿ ಸೀರೆಯು ಎಲ್ಲೂ ಕಂಡು ಬರದೇ ಈ ಶ್ರೀದೇವಿಯ (ಲಕ್ಷ್ಮೀ) ಚಿತ್ರದಲ್ಲಿ ಮತ್ತು ಭೂದೇವಿಯರ ಚಿತ್ರಗಳಲ್ಲಿ ಕಂಡುಬರುತ್ತದೆ. ಬಲಗಡೆಗಿರುವ ಭೂದೇವಿಯು ನಾರಾಯಣನನ್ನು ಸ್ತುತಿಸುತ್ತಿದ್ದಾಳೆ. ವಿಷ್ಣು. ಆದಿಶೇಷ. ಶ್ರೀದೇವಿ. ಭೂದೇವಿಯರು ಒಂದು ಕಟ್ಟೆಯಂತಿರುವ ಪೀಠದ ಮೇಲೆ ಇರುವಂತೆ ಚಿತ್ರಿತರಾಗಿದ್ದಾರೆ. ಈ ಪೀಠದ ನಾಲ್ಕೂ ಮೂಲೆಗಳಿಗೆ ಆಕರ್ಷಕವಾದ ದೀಪಸ್ತಂಭ (ಸಮೆ)ಗಳಿವೆ. ವಿಷ್ಣುವಿನ ಎದುರಿನ ಭಾಗದಲ್ಲಿ ಪೀಠದ ಮುಂಭಾಗದಲ್ಲಿ ಸೈಪ್ರಸ್ ವೃಕ್ಷ ಮತ್ತು ಒಂದು ಬೃಹತ್ತಾದ ಅಲಂಕಾರಿಕ ಹೂಕುಂಡವಿದೆ. ಕೆಂಪುಹಳದಿ ಹೂಗಳು ಇವರಲ್ಲಿ ತುಂಬಿಕೊಂಡಿವೆ. ಇಂತಹುದೇ ಹೂಕುಂಡ ಬಲಗಡೆಗೂ ಇದೆ. ಚಿತ್ರದ ಮೇಲ್ಭಾಗದಲ್ಲಿ ಆಕಾಶದಿಂದ ತೂಗುಬಿಟ್ಟಂತೆ ವಿವಿಧ ಬಗೆಯ ಹೂಗೊಂಚಲುಗಳಿವೆ. ಚಿತ್ರವು ಕೆಂಪುವರ್ಣದ ಹಿನ್ನಲೆಯನ್ನು ಹೊಂದಿದೆ. ಇಲ್ಲಿ ಪ್ರಮುಖವಾಗಿ ಕೆಂಪು. ನೀಲಿ. ಹಳದಿ. ಹಸಿರು ವರ್ಣಗಳು ಬಳಕೆಗೊಂಡಿವೆ. ಚಿತ್ರದ ಸುತ್ತಲೂ ಕೆಂಪು, ಹಳದಿ, ನೀಲಿ ಹೂಗಳ ಬಳ್ಳಿಯನ್ನು ರಚಿಸಿದ್ದಾರೆ.

೨. ಸೀತಾಸ್ವಯಂತವರ ದೃಶ್ಯ : ಇಲ್ಲಿನ ಮತ್ತೊಂದು ಕಡೆಯಲ್ಲಿ ಒಂದು ಉದ್ದ ಪಟ್ಟಿಕೆಯಲ್ಲಿ ರಾಮಾಯಣ ಕಥೆಗೆ ಸಂಬಂಧಿಸಿದ ದೃಶ್ಯಗಳನ್ನು ಸಂಯೋಜಿಸಿ ಚಿತ್ರಿಸಿದ್ದಾರೆ. ಈ ಉದ್ದ ಪಟ್ಟಿಕೆಯಲ್ಲಿ ದಶರಥನ ಆಸ್ಥಾನದಲ್ಲಿ ಆತನ ಒಪ್ಪಿಗೆ ಪಡೆದು ರಾಮಲಕ್ಷ್ಮಣರನ್ನು ಕರೆದೊಯ್ಯುವ ವಿಶ್ವಾಮಿತ್ರ ಮುನಿಗಳು, ವಿಶ್ವಾಮಿತ್ರಮುನಿಗಳ ಯಾಗ, ಸೀತಾಸ್ವಯಂವರ. ರಾಮಸೀತೆಗೆ ಮುನಿಗಳ ಆಶೀರ್ವಾದ ಮುಂತಾದ ಘಟನೆಗಳನ್ನು ಚಿತ್ರಿಸಲಾಗಿದೆ. ಆಸ್ಥಾನದ ದೃಶ್ಯದಲ್ಲಿ ಮೂವರು ಕಿರೀಟಧಾರಿ ವ್ಯಕ್ತಿಗಳು ಕುಳಿತಿದ್ದು ಇಬ್ಬರು ಮುನಿಗಳೂ ಇದ್ದಾರೆ. ಸೀತಾಸ್ವಯಂವರ ದೃಶ್ಯದಲ್ಲಿ ರಾಮ ಲಕ್ಷ್ಮಣರಿದ್ದು ರಾಮನು ಶಿವಧನುಸ್ಸನ್ನು ಹೆದೆ ಏರಿಸುತ್ತಿದ್ದಾನೆ. ಈ ದೃಶ್ಯದಲ್ಲಿ ದಶಕಂಠರಾವಣನೂ ಹಾಜರಿದ್ದು ತನ್ನಿಂದಾಗದ ಆ ಕೆಲಸಕ್ಕೆ ನಾಚಿಕೆಪಟ್ಟುಕೊಳ್ಳುತ್ತಿದ್ದಾನೆ. ರಾಮಲಕ್ಷಣರ ಚಿತ್ರಗಳಿಗಿಂತ ದಶಕಂಠರಾವಣನ ಚಿತ್ರವನ್ನು ಚಿಕ್ಕಪ್ರಮಾಣದಲ್ಲಿ ಬಿಡಿಸಿದ್ದಾರೆ. ಇದು ರಾಮಲಕ್ಷ್ಮಣರ ವ್ಯಕ್ತಿತ್ವಕಿಂತ ಆತನ ವ್ಯಕ್ತಿತ್ವ ಸಣ್ಣದು ಎನ್ನುವ ದೃಷ್ಟಿ ಇರಬಹುದು. ರಾಮನು ನೀಲವರ್ಣದವನಾಗಿದ್ದು ಲಕ್ಷ್ಮಣನು ಕಿತ್ತಳೆ ವರ್ಣದ ಮೈ ಬಣ್ಣ ಹೊಂದಿದ್ದಾನೆ. ರಾಮನು ಬಿಲ್ಲು ಹೆದೆಏರಿಸುವಾಗ ಉಳಿದ ರಾಜಕುಮಾರರು ವಿಸ್ಮಯದಿಂದ ನೋಡುತ್ತಲಿದ್ದಾರೆ.

ರಾಮ ಸೀತೆಯರ ಮದುವೆಯಲ್ಲಿ ಮುನಿಗಳೆಲ್ಲರು ರಾಮಸೀತೆಯರನ್ನು ಕೈ ಕೈ ಹಿಡಿದು ನಿಲ್ಲಿಸಿ ಆಶೀರ್ವದಿಸುತ್ತಿದ್ದಾರೆ. ಒಬ್ಬ ಮುನಿ ಸೀತೆಯ ಕೈಯನ್ನು ರಾಮನ ಕೈಯಲ್ಲಿ ಕೊಡುತ್ತಿದ್ದರೆ ಆ ಮುನಿಯ ಹಿಂದುಗಡೆ ಸ್ತ್ರೀಯೊಬ್ಬಳು ಆರತಿಯನ್ನು ತೆಗೆದುಕೊಂಡು ಬಂದಿದ್ದಾಳೆ. ಆರತಿ ಹಿಡಿದ ಸ್ತ್ರೀ ಕಪ್ಪು ಮಿಶ್ರಿತ ಹಸಿರುವರ್ಣದ ಸೀರೆಯನ್ನು ತೊಟ್ಟಿದ್ದು ಇದು ಗೆರೆಗಳನ್ನು ಹೊಂದಿದೆ. ನೋಡಲು ಆಕರ್ಷಕವಾದ ಈ ಸೀರೆಯನ್ನು ಕಡ್ಡಿ ಸೀರೆ ಎಂದು ಹೇಳುತ್ತಾರೆ. ಇಲಕಲ್ ಮಾದರಿಯ ಸೀರೆಗಳಲ್ಲಿ ಇಂದಿಗೂ ಇಂತಹ ಕಡ್ಡಿ ಸೀರೆ ಅತ್ಯಂತ ಆಕರ್ಷಕವಾದುದಾಗಿದೆ.

ಕೆಂಪು ಕುಪ್ಪಸತೊಟ್ಟ ಇವಳು ಕೊರಳು ಬಿರಿಯುವಂತೆ ಆಭರಣ ಧರಿಸಿದ್ದಾಳೆ. ತುರುಬನ್ನು ಕಟ್ಟಿಕೊಂಡಿದ್ದು ಹಣೆಯಮೇಲೆ ಅಗಲವಾದ ಅಡ್ಡಡ್ಡವಾಗಿರುವ ಕುಂಕುಮವನ್ನು ಹಚ್ಚಿಕೊಂಡಿದ್ದಾಳೆ. ಇಲ್ಲಿರುವ ಇನ್ನಿಬ್ಬರು ಸ್ತ್ರೀಯರೂ ಕಚ್ಚಿ ಸೀರೆಯನ್ನೇ ಉಟ್ಟುಕೊಂಡಿದ್ದಾರೆ. ಇಲ್ಲಿ ರಾಮನ ಹಿಂದುಗಡೆಗೆ ಲಕ್ಷ್ಮಣನೂ ಇದ್ದು ಚಿಕ್ಕ ಆಕೃತಿಯಲ್ಲಿ ಚಿತ್ರಿತನಾಗಿದ್ದಾನೆ. ರಾಮ ಸೀತೆಯರಿಗೆ ಉಳಿದ ಋಷಿಮುನಿಗಳು ಅಕ್ಷತೆಯನ್ನು ಹಾಕಿ ಆಶೀರ್ವದಿಸುತ್ತಿದ್ದಾರೆ. ಋಷಿಮುನಿಗಳೆಲ್ಲರೂ ಹಳದೀ ವರ್ಣದ ಕೆಂಪು ಅಂಚುಳ್ಳ ಪಂಚೆಗಳನ್ನು ಧರಿಸಿ ಕೊರಳಲ್ಲಿ ಕೈಗಳಲ್ಲಿ ರುದ್ರಾಕ್ಷಿ ಧರಿಸಿದ್ದಾರೆ. ರಾಮಲಕ್ಷ್ಮಣರು ಉದ್ದಾದ 'ಕುರ್ತಾ' ಮಾದರಿಯ ಅಂಗಿಗಳನ್ನು ಧರಿಸಿದ್ದಾರೆ. ರಾಮನು ಹಳದಿವರ್ಣದ ಪಾದದವರೆಗೆ ಇಳಿಬಿದ್ದಿರುವ ಅಂಗಿಯನ್ನು ಧರಿಸಿದ್ದರೆ. ಲಕ್ಷ್ಮಣನು ಮೊಣಕಾಲುವರೆಗೆ ಕೆಳಗಿಳಿದ ಕೆಂಪು ಗೀರುಗಳುಳ್ಳ ಅಂಗಿಧರಿಸಿದ್ದಾನೆ. ಇಬ್ಬರೂ ಕೆಂಪುವರ್ಣದ ಶಲ್ಯೆ ಹೊತ್ತಿದ್ದಾರೆ. ಸೀತಾ ದೇವಿಯ ಆಕೃತಿ ಚಿಕ್ಕದಾಗಿದೆ. ಕೆಂಪುಸೀರೆ ಉಟ್ಟುಕೊಂಡು ಅದೇವರ್ಣದ ಕುಪ್ಪಸ ತೊಟ್ಟಿದ್ದಾಳೆ. ಉದ್ದವಾದ ಜಡೆಯನ್ನು ಹಾಕಿಕೊಂಡಿದ್ದು ತಲೆತುಂಬ ಜಡೆಉದ್ದಕ್ಕೂ ಹೂ ಮುಡಿದುಕೊಂಡಿದ್ದಾಳೆ.

ಇಲ್ಲಿನ ಚಿತ್ರ ಪಟ್ಟಿಕೆಯ ಇಡೀ ಹಿನ್ನೆಲೆಯು ಕೆಂಪು ವರ್ಣದಿಂದ ರೂಪಿಸಿದ್ದು ಸುತ್ತಲಿನ ಚೌಕಟ್ಟು ಹೂಬಳ್ಳಿಯ ನಕ್ಷೆಯಿಂದ ಕೂಡಿದೆ. ಇದರಲ್ಲಿ ಕೆಂಪು ಹಳದಿ ಹೂಗಳು. ಹಸಿರು ಎಲೆಗಳು ತುಂಬಿವೆ. ಈ ರಾಮಾಯಣ ಚಿತ್ರಪಟ್ಟಿಕೆಯ ಕೆಳಭಾಗದಲ್ಲಿ ಕಮಾನಿನಾಕಾರದ ಸ್ಥಳದಲ್ಲಿ ಇಡೀ ಸ್ಥಳವನ್ನು ಹೂಬಳ್ಳಿ ನಕ್ಷೆಯಿಂದ ತುಂಬಿಸಲಾಗಿದೆ. ಒಂದೇ ಆಕಾರ, ಪ್ರಮಾಣದಲ್ಲಿರುವ ಕೆಂಪು ಹೂಗಳು ನಿಯಮಿತ ಅಂತರದಲ್ಲಿ ರಚನೆಯಾಗಿವೆ. ಮಧ್ಯದಲ್ಲಿ ಹಸಿರು ಎಲೆಗಳು ತುಂಬಿಕೊಂಡಿವೆ.

೩. ವರಾಹ ಅವತಾರದ ಚಿತ್ರ : ಇಲ್ಲಿನ ಗೋಡೆಯ ಒಂದು ಭಾಗದಲ್ಲಿ ವಿಷ್ಣುವಿನ ವರಾಹ ಅವತಾರವನ್ನು ಮುಖ್ಯವಾಗಿ ಮಧ್ಯದಲ್ಲಿ ಚಿತ್ರಿಸಿದ್ದು ಸುತ್ತಲೂ ಬೇರೆ ಬೇರೆ ಚಿತ್ರಗಳನ್ನು ರಚಿಸಿದ್ದಾರೆ. ಮಧ್ಯದಲ್ಲಿರುವ ವರಾಹ ಅವತಾರ ಚಿತ್ರದಲ್ಲಿ ವರಾಹನು ತನ್ನ ಎಡಗಾಲಿನಿಂದ ರಾಕ್ಷಸನನ್ನು ಕೆಳಕ್ಕೆ ತುಳಿದಿದ್ದು ಎಡಕೈಯಲ್ಲಿ ರಕ್ಕಸನ ಜುಟ್ಟನ್ನು ಹಿಡಿದು ಬಲಗೈಯ ಖಡ್ಗದಿಂದ ಆತನ ರುಂಡ ಕತ್ತರಿಸುತ್ತಿದ್ದಾನೆ. ಇನ್ನೆರಡು ಕೈಗಳಲ್ಲಿ ಶಂಖ ಚಕ್ರಗಳನ್ನು ಹಿಡಿದಿದ್ದಾನೆ. ರಾಕ್ಷಸನಿಂದ ಬಿಡುಗಡೆಗೊಂಡ ಭೂದೇವಿಯು ಕೃತಜ್ಞತಾಭಾವದಿಂದ ವರಾಹರೂಪಿ ವಿಷ್ಣುವನ್ನು ನೋಡುತ್ತಿದ್ದಾಳೆ. ವರಾಹನು ಕೆಂಪು ವಸ್ತ್ರವನ್ನು ಉಟ್ಟುಕೊಂಡಿದ್ದು ಹಳದಿವರ್ಣದ ಶಾಲು ಹೊದೆದುಕೊಂಡಿದ್ದಾನೆ. ಭೂದೇವಿಯು ಪ್ರಖರಕೆಂಪಿನ ಸೀರೆಉಟ್ಟಿದ್ದು ತೆಳುಹಳದೀ ವರ್ಣದ ಕುಪ್ಪಸತೊಟ್ಟಿದ್ದಾಳೆ. ಈ ಚಿತ್ರದ ಹಿನ್ನೆಲೆಯು ಗಾಢನೀಲಿ ವರ್ಣದಿಂದ ಕೂಡಿದ್ದು ಅಲ್ಲಿ ಹೂಬಳ್ಳಿಗಳು ಅಲಂಕಾರಿಕ ನಕ್ಷೆಗಳು ಇವೆ. ರಾಕ್ಷಸನು ಕತ್ತಿ ಢಾಲುಗಳನ್ನು ಹಿಡಿದುಕೊಂಡಿದ್ದಾನೆ. ಇಲ್ಲಿರುವ ಉತ್ತಮ ಚಿತ್ರಗಳಲ್ಲಿ ಇದೂ ಒಂದು.

೪. ರಾಮ ಲಕ್ಷ್ಮಣರು ತಾಟಕೀಯ ವಧೆಮಾಡುತ್ತಿರುವುದು : ಕೆಳಗಡೆ ಇರುವ ಇನ್ನೊಂದು ಚಿತ್ರದಲ್ಲಿ ವಿಶ್ವಾಮಿತ್ರ ಮುನಿಗಳು ರಾಮಲಕ್ಷ್ಮಣರನ್ನು ಕರೆದೊಯ್ಯುತ್ತಿದ್ದಾಗ ಎದುರು ಬಂದ ತಾಟಕಿ ಎಂಬ ರಾಕ್ಷಸಿಯನ್ನು ರಾಮ ಸಂಹರಿಸುತ್ತಿರುವ ಚಿತ್ರವಿದೆ. ಕಪ್ಪು ಬಣ್ಣದಲ್ಲಿರುವ ತಾಟಕಿಯು ನಾಲಿಗೆಯನ್ನು ಚಾಚಿಕೊಂಡು ಇವರತ್ತ ರಭಸದಿಂದ ನುಗ್ಗುತ್ತಿದ್ದಾಳೆ. ವಿಶ್ವಾಮಿತ್ರ ಮುನಿಯು ರಾಕ್ಷಸಿಯನ್ನು ಕೊಲ್ಲಲು ರಾಮಲಕ್ಷ್ಮಣರಿಗೆ ಆಜ್ಞಾಪಿಸುತ್ತಾನೆ. ಅಪ್ಪಣೆ ಎಂಬಂತೆ ಇಬ್ಬರೂ ಋಷಿಗೆ ಕೈಮುಗಿದು ರಾಕ್ಷಸಿಯನ್ನು ಕೊಲ್ಲುತ್ತಾರೆ. ರಾಕ್ಷಸಿಯು ಭಯಾನಕ ಮುಖವನ್ನು ಹೊಂದಿದ್ದಾಳೆ.

೫. ವಿಠ್ಠಲನ ಚಿತ್ರ : ಬಲಗಡೆಗಿರುವ ವಿಠ್ಠಲನ ಚಿತ್ರವು ಒಂದು ಆಕರ್ಷಕವಾದ ಚಿತ್ರವಾಗಿದೆ. ವಿಠ್ಠಲನು ಟೊಂಕದ ಮೇಲೆ ಕೈಗಳನ್ನಿಟ್ಟು ಕಮಲ ಪುಷ್ಪದ ಮೇಲೆ ನಿಂತಿದ್ದಾನೆ. ಕೊರಳಲ್ಲಿರುವ ರುದ್ರಾಕ್ಷಿ ಸರವು ಪಾದದವರೆಗೂ ಇಳಿಬಿದ್ದಿದೆ. ನೀಲವರ್ಣದ ವಿಠ್ಠಲನ ಮುಖದಲ್ಲಿ ಮಂದಹಾಸ ಮಿನುಗುತ್ತಲಿದೆ. ತೆಳುಹಳದಿ ವರ್ಣದ ಪಂಚೆಯನ್ನು ಉಟ್ಟಕೊಂಡಿದ್ದು ಅದೇವರ್ಣದ ಶಾಲನ್ನು ಇಳಿಬಿಟ್ಟಿದ್ದಾನೆ. ಉಳಿದ ಚಿತ್ರಗಳಿಗೆ ಹೋಲಿಸಿದರೆ ಇದರ ಶೈಲಿಯು ಸ್ವಲ್ಪ ಗ್ರಾಮ್ಯವೆನಿಸಿದರೂ ಚಿತ್ರಗಳಲ್ಲಿಯ ಭಾವನಾತ್ಮಕ ದೃಷ್ಟಿಯಿಂದ ಮತ್ತು ವರ್ಣವಿನ್ಯಾಸದಿಂದ. ಚಿತ್ರದ ಸಂಯೋಜನಾ ದೃಷ್ಟಿಯಿಂದ ಉತ್ತಮ ಚಿತ್ರಗಳ ಸಾಲಿಗೆ ಸೇರವುದು. ವಿಠ್ಠಲನ ಹಿಂದಿನ ಖಾಲಿಸ್ಥಳವನ್ನು ಹೋಗಲಾಡಿಸಲು ಗಿಡಗಳನ್ನೇ ಮಂಟಪದಹಾಗೆ ಬಗ್ಗಿಸಿ ರಚನೆಮಾಡಿದ್ದು ಕಲಾವಿದನ ಸಂಯೋಜನಾ ಸಾಮರ್ಥ್ಯವನ್ನು ತೊತಿರಿಸುವುದು. ಒಳಬಾಗಿದಂತಿರುವ ಗಿಡಗಳಲ್ಲಿಯ ಟೊಂಗೆ. ಎಲೆಗಳೇ ತೋರಣದಂತೆ ಕಂಗೊಳಿಸುತ್ತಿವೆ. ವಿಠ್ಠಲನ ಅಕ್ಕಪಕ್ಕದಲ್ಲಿ ಇಬ್ಬರು ಸ್ತ್ರೀಯರು ಹೂಮಾಲೆ ಹಿಡಿದು ನಿಂತಿದ್ದಾರೆ. ಮೇಲೆ ಆಕಾಶದಲ್ಲಿ ಬಲಕ್ಕೆ ಗರುಡ. ಎಡಕ್ಕೆ ಹನುಮಂತ ಇಬ್ಬರೂ ಹೂಮಾಲೆಯನ್ನು ವಿಠೋಬನಿಗೆ ಹಾಕಲು ಹಾರಿಬರುತ್ತಿದ್ದಾರೆ. ಇಬ್ಬರಿಗೂ ರೆಕ್ಕೆಗಳನ್ನು ರಚಿಸಿ ಪಕ್ಷಿರೂಪಿಯಾಗಿ ಅವರನ್ನು ತೋರಿಸಿದ್ದಾರೆ. ಕೆಳಗಿನ ಸ್ತ್ರೀಯರಿಬ್ಬರೂ ಸೂರ್ಯ ಕಾಂತಿಹೂವನ್ನು ಹೋಲುವ ಹೂವಿನ ಮೇಲೆ ನಿಂತಿದ್ದಾರೆ. ಹಸಿರು, ಕೆಂಪು, ತೆಳು, ಹಳದಿ ವರ್ಣಗಳು ಇಲ್ಲಿ ಮುಖ್ಯವಾಗಿ ಬಳಕೆಯಾಗಿವೆ.

ವಿಠ್ಠಲನ ಮತ್ತೊಂದು ಚಿತ್ರ : ಮತ್ತೊಂದು ದಿಕ್ಕಿನ ಗೋಡೆಯ ಮೇಲೆ ದೊಡ್ಡದಾದ ಉದ್ದ ಪಟ್ಟಿಕೆಯಲ್ಲಿ ಮಧ್ಯದಲ್ಲಿ ವಿಠ್ಠಲನನ್ನು ಚಿತ್ರಿಸಿದ್ದಾರೆ. ಇಲ್ಲಿ ವಿಠ್ಠಲನು ನಾಲ್ಕು ಕೈಗಳನ್ನು ಹೊಂದಿದ್ದು ಶಂಖ, ಚಕ್ರ, ಗಧಾಧಾರಿಯಾಗಿದ್ದಾನೆ. ಮೈಬಣ್ಣ ನೀಲಿಮಿಶ್ರಿತ ಕಪ್ಪಾಗಿದ್ದು ಕೆಂಪು ವರ್ಣದ ಧೋತರ ಉಟ್ಟಿದ್ದಾನೆ. ವಿಠ್ಠಲನ ಎಡಬಲಗಳಲ್ಲಿ ಆತನ ಭಂಟರಾದ ಗರುಡ. ಹನುಮಂತರು ಚಿತ್ರಿತರಾಗಿದ್ದಾರೆ. ಬಲಗಡೆಗೆ ಗರುಡನು ಇದ್ದು ಎರಡೂ ಕೈಯಲ್ಲಿ ಹಾವುಗಳನ್ನು ಹಿಡಿದಿದ್ದಾನೆ. ರೆಕ್ಕೆಗಳನ್ನು ಹೊಂದಿದ ಗರುಡನ ಮೈ ಬಣ್ಣ ಬೂದುವರ್ಣದ್ದಾಗಿದೆ. ಎಡಗಡೆಗೆ ಇರುವ ಹನುಮಂತನು ಕೈಮುಗಿದು ನಿಂತಿದ್ದು ಆತನ ಬಾಲ ಮೇಲಕ್ಕೆತ್ತಿದೆ. ಆಂಜನೇಯನ ಮೈಬಣ್ಣವು ಪಾಂಡುರಂಗನ ಮೈ ವರ್ಣದಂತೆಯೇ ಇರುವುದು ವಿಶೇಷ. ಗರುಡ ಮತ್ತು ಹನುಮಂತರ ಹಿಂದುಗಡೆಗೆ ದೊಡ್ಡದಾದ ಅಲಂಕಾರಿಕ ಗಿಡಗಳ ಚಿತ್ರಗಳಿದ್ದು ಈ ಗಿಡಗಳಲ್ಲಿ ಬೃಹತ್ತಾದ ಹೂಗಳು ಅರಳಿನಿಂತಿವೆ. ಗಿಡದ ಬುಡದಲ್ಲಿ ನವಿಲು ಗಿಳಿಗಳು ಸಂತೋಷದಿಂದ ಆಡುತ್ತಿವೆ. ವಿಠ್ಠಲನ ಈ ಚಿತ್ರ ಪಟ್ಟಿಕೆಯ ಕೆಳಗಡೆಯ ಚಿತ್ರಪಟ್ಟಿಕೆಯಲ್ಲಿ ಮೂರು ಚಿತ್ರಗಳಿದ್ದು ಮಧ್ಯದಲ್ಲಿ ಅಲಂಕಾರಿಕ ನಕ್ಷೆಯ ಚಿತ್ರವಿದ್ದರೆ ಬಲಕ್ಕೆ ಕಾರ್ತಿಕೇಯನ ಚಿತ್ರ ಎಡಕ್ಕೆ ಗಣಪತಿಯ ಚಿತ್ರಗಳಿವೆ.

೬. ಕೃಷ್ಣಲೀಲೆಯ ಚಿತ್ರಗಳು : ಇಲ್ಲಿರುವ ಕಿಟಕಿಯ ಮೇಲ್ಭಾಗದಲ್ಲಿ ಸುಮಾರು ೬ X ೩ ಅಡಿಗಳ ಆಯತಕಾರದಲ್ಲಿ ರಚಿಸಿದ ಇನ್ನೊಂದು ಬೃಹತ್ತಾದ ಚಿತ್ರವಿದೆ. ಇರದಲ್ಲಿ ಎರಡು ಉದ್ದನಾದ ಪಟ್ಟಿಕೆಗಳನ್ನು ರಚಿಸಿ ಆ ಎರಡರಲ್ಲೂ ಕೃಷ್ಣಕಥಾನಕಗಳನ್ನು ರಚಿಸಿದ್ದಾರೆ. ಮೇಲಣ ಪಟ್ಟಿಯಲ್ಲಿ ಚತುರ್ಭುಜ ಕೃಷ್ಣನು ಗೋಪಕನ್ಯೆಯೊಬ್ಬಳನ್ನು ತನ್ನ ಎರಡು ಕೈಗಳಿಂದ ತಬ್ಬಿ ಹಿಡಿದಿದ್ದಾನೆ. ಅವನ ಎಡಬಲಗಳಲ್ಲಿ ಐದೈದು ಮಂದಿ ಗೋಪಿಕಾಸ್ತ್ರೀಯರು ಅವನ ಬಳಿಗೆ ಹಾತೊರೆದು ಬರುತ್ತಿದ್ದಾರೆ. ಹೀಗೆ ಬರುತ್ತಿರುವ ಅವರ ವಯ್ಯಾರದ ನಡಿಗೆ ಮೋಹಕವಾಗಿದೆ. ಹಾಗೆ ಬಂದವರಲ್ಲಿ ಇನ್ನಿಬ್ಬರನ್ನು ತನ್ನ ಇನ್ನೆರಡು ಕೈಗಳಿಂದ ಹಿಡಿದುಕೊಂಡಿದ್ದಾನೆ. ಅರಲ್ಲಿ ಒಬ್ಬಳು ನಾಚಿ ಕತ್ತನ್ನು ಹೊರಳಿಸಿದ್ದಾಳೆ. ಕೆಳಗಣಪಟ್ಟಿಯಲ್ಲಿ ಅದೇ ಕೃಷ್ಣನನ್ನು ನಾಲ್ವರು ಕನ್ಯೆಯರು ಪಲ್ಲಕ್ಕಿಯಲ್ಲಿ

ಹೊತ್ತುಕೊಂಡು ಹೊರಟಿದ್ದಾರೆ. ಪಲ್ಲಕ್ಕಿಯಕೆಳಗೆ ಹಸುವೊಂದು ಬಾಲ ನಿಗುರಿಸಿ, ಕತ್ತನ್ನು ಮೇಲಕ್ಕೆತ್ತಿ ತಾನೂ ಜಿಗಿಯುತ್ತ ಹೊರಟಿದೆ. ಪಲ್ಲಕ್ಕಿಯ ಹಿಂದೆ ಮುಂದೆ ಚೌರಿ, ಛತ್ರ ಚಾಮರಾದಿಗಳನ್ನು ಹಿಡಿದು ಹೊರಟ ನಾರಿಯರ ಗುಂಪೇ ಇವೆ. ಈ ಚಿತ್ರಗಳ ಹಿನ್ನೆಲೆಯೂ ಉಳಿದ ಇಲ್ಲಿಯ ಚಿತ್ರಗಳಂತೆ ಕೆಂಪು ಹಿನ್ನೆಲೆಯನ್ನೇ ಹೊಂದಿದೆ. ಇಲ್ಲಿನ ಸ್ತ್ರೀಯರಿಗೆ ಕಿತ್ತಳೆ, ನಸುಗೆಂಪು, ಗೌರವರ್ಣ, ಹಳದಿ, ಪಾಟಲ ಮುಂತಾದ ಮೈಬಣ್ಣವಿದೆ. ಹಾಗೇ ವೈವಿಧ್ಯಮಯ ಸೀರೆ ಕುಪ್ಪುಸಗಳನ್ನು ಧರಿಸಿದ್ದಾರೆ. ಎರಡೂ ಪಟ್ಟಿಕೆಗಳ ಎಡಬಲಗಳಲ್ಲಿ ಕೊನೆಗೆ ಸೈಪ್ರಸ್ ವೃಕ್ಷದಂತಿರುವ ಚೂಪುಗಿಡವನ್ನು ಚಿತ್ರಿಸಿ ಚಿತ್ರಕ್ಕೆ ಸಮತೋಲವನ್ನು ತಂದಿದ್ದಾರೆ. ಇಲ್ಲಿನ ಇನ್ನೊಂದು ಪ್ರಮುಖ ಚಿತ್ರದಲ್ಲಿ ಕೃಷ್ಣನು ನಾಲ್ಕು ಕೈಗಳನ್ನು ಹೊಂದಿದವನಾಗಿದ್ದು ನೀಲಮೇಘ ವರ್ಣದವನಾಗಿದ್ದಾನೆ. ಹಿಂದಿನ ಎರಡು ಕೈಗಳಲ್ಲಿ ಶಂಖ ಚಕ್ರಗಳನ್ನು ಹಿಡಿದುಕೊಂಡಿದ್ದರೆ ಇನ್ನೆರಡು ಕೈಗಳಿಂದ ಕೊಳಲನ್ನು ನುಡಿಸುತ್ತಿದ್ದಾನೆ. ಕಾಲಮೇಲೆ ಕಾಲುಹಾಕಿ ಆಕರ್ಷಕ ಭಂಗಿಯಲ್ಲಿ ಕೃಷ್ಣನು ಕೊಳಲು ನುಡಿಸುತ್ತಿದ್ದರೆ ಅವನ ಸಮೀಪವೇ ಹಿಂದುಗಡೆ ನಿಂತ ಗೋವು ಆತನ ಹಿಮ್ಮಡಿಯನ್ನು ಪ್ರೀತಿಯಿಂದ ನೆಕ್ಕುತ್ತಿದೆ. ಕೃಷ್ಣನು ಕೀರಿಟ ಧರಿಸಿದ್ದು ಈ ಕಿರೀಟವು ಇಲ್ಲಿನ ಚಿತ್ರಗಳ ವೈಶಿಷ್ಟವೆನಿಸುತ್ತದೆ. ಕಾರಣ ಹೆಚ್ಚಿನ ಮುಖ್ಯ ಚಿತ್ರಗಳು ಅಂದರೆ, ಕೃಷ್ಣ, ಪರಮೇಶ್ವರ, ವಿಠೋಬ, ಮುಂತಾದವರಿಗೆ ಈ ರೀತಿಯ ಕೀರಿಟಗಳೇ ಇವೆ. ಕೆಂಪುವರ್ಣದ ಹಿನ್ನೆಲೆ ಇದ್ದು ವೃತ್ತದ ಹೊರಗಡೆಗೆ ಹಸಿರು ವರ್ಣವಿದೆ. ರೇಖಾತ್ಮಕ ವಿನ್ಯಾಸದಿಂದ ನೋಡಿದರೆ, ಶಕ್ತಿಯುತವಾದ ರೇಖೆಯಿಂದ ಕೂಡಿದ ಈ ಚಿತ್ರವು ಜೀವಂತಿಕೆಯಿಂದ ಕೂಡಿದಂತೆ ಭಾಸವಾಗುತ್ತದೆ. ಚಿತ್ರದ ಹೊರ ಅಂಚಿಗೆ ನಾಲ್ಕು ಎಸಳಿನ ಹಳದಿ ಹೂಗಳ ಬಳ್ಳಿಯನ್ನು ರಚಿಸಿ ಚಿತ್ರದ ಚೌಕಟ್ಟನ್ನು ಅಲಂಕರಿಸಲಾಗಿದೆ.

೭. ಸಮುದ್ರಮಂಥನ ದೃಶ್ಯ : ಇಲ್ಲಿನ ಮತ್ತೊಂದು ಅಂಕಣದಲ್ಲಿ ಪಟ್ಟಿಕೆಗಳನ್ನಾಗಿ ಮಾಡಿಕೊಂಡು ಸಮುದ್ರ ಮಂಥನ ದೃಶ್ಯ, ದೇವದೇವತೆಗಳು, ಪಾಂಡುರಂಗ, ಪಶುಪತಿ ಮುಂತಾದ ಚಿತ್ರಗಳನ್ನು ರಚಿಸಿದ್ದಾರೆ. ಅಂಕಣದ ಎಲ್ಲಕ್ಕೂ ಮೇಲ್ಭಾಗದಲ್ಲಿ ಸಮುದ್ರ ಮಂಥನ ದೃಶ್ಯವು ಉದ್ದನಾದ ಪಟ್ಟಿಕೆಯಲ್ಲಿ ರಚಿಸಿದೆ. ಒಂದು ಕಡೆಗೆ ದೇವತೆಗಳು ಮತ್ತೊಂದು ಕಡೆಗೆ ರಾಕ್ಷಸರು ಆದಿಶೇಷನನ್ನು ಹಗ್ಗಮಾಡಿ, ಮಂದಾರ ಪರ್ವತವನ್ನು ಕಡಗೋಲುಮಾಡಿ ಸಾಗರವನ್ನೇ ಕಡೆಯುತ್ತಿದ್ದಾರೆ. ಮಂದಾರ ಪರ್ವತವು ಸಾಗರದಲ್ಲಿ ಕೆಳಕ್ಕಿಳಿದು ಹೋಗುತ್ತಿರುಲು ಶ್ರೀಹರಿಯು ಕೂರ್ಮರೂಪತಾಳಿ ಅದನ್ನು ಎತ್ತಿ ಹಿಡಿದಿದ್ದಾನೆ. ರಾಕ್ಷಸರು ಕಪ್ಪು ವರ್ಣದವರಾಗಿದ್ದು ದಪ್ಪನಾದ ಮೀಸೆ ಕೆಂಡ ಬೀರುವ ಕಣ್ಣುಗಳನ್ನು ಹೊಂದಿದ್ದಾರೆ. ದೇವತೆಗಳೆಲ್ಲರೂ ಗೌರವರ್ಣದವರಾಗಿದ್ದು ಪ್ರತಿಯೊಬ್ಬರೂ ಬೇರೆ ಬೇರೆ ವರ್ಣದ ಅಂಗಿಯನ್ನು ತೊಟ್ಟಿದ್ದಾರೆ. ಹಾಗೇ ವಿವಿಧವರ್ಣಗಳ ಧೋತರಗಳನ್ನು ಉಟ್ಟುಕೊಂಡಿದ್ದಾರೆ. ದೇವತೆಗಳು ಉದ್ದತೋಳಿನ ಅಂಗಿಯನ್ನು ತೊಟ್ಟುಕೊಂಡಿದ್ದು ನಡಕ್ಕೆ ನಡುಪಟ್ಟಿಯನ್ನು ಬಿಗಿದುಕೊಂಡಿದ್ದಾರೆ. ದೇವತೆಗಳ ವಸ್ತ್ರ ಭೂಷಣ ಮರಾಠಾ ಶೈಲಿಯನ್ನು ನೆನಪಿಗೆ ತರುತ್ತದೆ. ಇದೇ ತೆರನಾದ ಚಿತ್ರ ಹಳಿಯಾಳ ಸಮೀಪದ ಬಿ. ಕೆ. ಹಳ್ಳಿಯ ರಾಮಮಂದಿರದಲ್ಲಿಯೂ ಇದೆ. ಇಲ್ಲಿನ ಚಿತ್ರದಲ್ಲಿ ಉದ್ದನಾದ ಬಡಿಗೆಯ ಹಾಗಿರುವ ಮಂದಾರ ಪರ್ವತವು ಹಳದೀ ವರ್ಣದಲ್ಲಿದ್ದು ಅದರ ತುಂಬ ಗಿಡ, ಹೂವುಗಳನ್ನು ರಚಿಸಿ ಅದನ್ನು ಪರ್ವತವೆಂಬ ಭ್ರಮೆಬರುವಂತೆ ಮಾಡಿದ್ದಾರೆ. ಪರ್ವತದ ಕೆಳಭಾಗದಲ್ಲಿರುವ ಕೂರ್ಮವು ಪರ್ವತವು ಸಮುದ್ರದಲ್ಲಿ ಮುಳುಗದಂತೆ ತಡೆದು ತನ್ನ ಡುಬ್ಬದ ಮೇಲೆ ಹೊತ್ತುಕೊಂಡಿದೆ. ಇಲ್ಲಿ ಪ್ರಮುಖವಾಗಿ ಕೆಂಪು, ಹಳದಿ, ಹಸಿರು, ನೀಲಿ ವರ್ಣಗಳು ಬಳಕೆಗೊಂಡಿವೆ. ಈ ಸಾಗರದ ಮಂಥನ ಚಿತ್ರಪಟ್ಟಿಕೆಯ ಕೆಳಗಡೆ ಇನ್ನೊಂದು ಉದ್ದ ಪಟ್ಟಿಕೆಯಲ್ಲಿ ಸಾಗರ ಮಂಥನದಿಂದ ಹೊರಬಂದ ಐರಾವತ, ಉಚ್ಚೈಶ್ರವಸ್, ಕಾಮಧೇನು, ಮುಂತಾದ ವಸ್ತುಗಳು ಮತ್ತು ದೇವಾನು ದೇವತೆಗಳ ಚಿತ್ರಗಳಿವೆ. ಐರಾವತವು ತೆಳುಹಳದೀ

ವರ್ಣದಲ್ಲಿದ್ದು ಮೈಮೇಲೆ ಹಸಿರು ಅಂಚುಳ್ಳ ಕೆಂಪು ವಸ್ತ್ರ ಹೊದಿಸಲಾಗಿದೆ. "ಉಚ್ಚೈಶ್ರವಸ್" ಕುದುರೆಯು ಹಿಂಗಾಲುಗಳ ಮೇಲೆ ನಿಂತು ಕುಣಿಯುತ್ತಿದೆ. ಕಾಮಧೇನು ಪಶುದೇಹ ಸ್ತ್ರೀಮುಖ ಹೊಂದಿದೆ. ಇವುಗಳಲ್ಲದೇ ಸಮುದ್ರ ಮಂಥನದಿಂದ ಉದ್ಭವಿಸಿದ ಲಕ್ಷ್ಮೀಯೂ ಇಲ್ಲಿ ಚಿತ್ರಿತಳಾಗಿದ್ದಾಳೆ. ಲಕ್ಷ್ಮೀಯನ್ನು ಸ್ವೀಕರಿಸಿದ ನಾರಾಯಣ, ಶಿವ ಮತ್ತಿತರ ದೇವತೆಗಳು ಹಾಗೂ ಕೆಲವು ಋಷಿಗಳೂ ಈ ಪಟ್ಟಿಕೆಯಲ್ಲಿ ಚಿತ್ರಿತರಾಗಿದ್ದಾರೆ. ಹಿನ್ನೆಲೆಯು ಕೆಂಪುವರ್ಣದಿಂದ ಕೂಡಿದೆ. ಹಳದಿ, ನೀಲಿ, ಕೆಂಪು, ಹಸಿರು ಉಪಯೋಗಿಸಲಾದ ಪ್ರಮುಖ ವರ್ಣಗಳು.

೮. ಋಷಿಗಳ ಚಿತ್ರಗಳು : ಈ ಚಿತ್ರದ ಸುತ್ತಲೂ ಕೆಂಪುಪಟ್ಟಿಯನ್ನು ರಚಿಸಿ ಅದರಲ್ಲಿ ಅಲಂಕಾರಿಕ ಗಿಡಗಳು, ಹೂಕುಂಡಗಳು, ಋಷಿಗಳು ಮುಂತಾದ ಚಿತ್ರಗಳನ್ನು ರಚಿಸಿದ್ದಾರೆ. ಮಂಟಪದ ಮೇಲ್ಭಾಗದಲ್ಲಿ ಎಡಕ್ಕೆ ಮತ್ತು ಬಲಕ್ಕೆ ಒಬ್ಬೊಬ್ಬ ಋಷಿಮುನಿಗಳನ್ನು ಚಿತ್ರಿಸಿದ್ದಾರೆ. ಈ ಮುನಿಗಳು ಜಪಮಾಲೆ ಹಿಡಿದುಕೊಂಡು ಜಪಿಸುತ್ತಿದ್ದಾರೆ. ಮುನಿಗಳ ಪಕ್ಕದಲ್ಲಿ ಒಂದೊಂದು ಕೊಕ್ಕರೆ ಹಾರಾಡುತ್ತಿವೆ. ಈ ಋಷಿಗಳ ಚಿತ್ರಗಳ ಕೆಳಭಾಗದಲ್ಲಿ ಅಲಂಕಾರಿಕ ಗಿಡಗಳು ಹೂಕುಂಡದಲ್ಲಿ ಬೆಳೆದಿವೆ ಕೆಂಪುಹಳದಿ ಮಿಶ್ರಿತ ಸುಂದರವಾದ ಹೂಗಳು ಅದಲ್ಲಿ ಅರಳಿವೆ. ಚಿತ್ರದ ಕೆಳಭಾಗದಲ್ಲಿ ಹಳು ಪಾತ್ರೆಗಳಿದ್ದು ಪ್ರತಿಯೊಂದರಲ್ಲೂ ಖಾದ್ಯಪದಾರ್ಥಗಳು ತುಂಬಿವೆ. ಇದೊಂದು ಆಕರ್ಷಕವಾದ ಚಿತ್ರವಾಗಿದೆ.

೯. ಪಶುಪತಿಯ ಚಿತ್ರ : ಎಡಗಡೆಗಿರುವ ಪಶುಪತಿಯ ಚಿತ್ರವು ಆಕರ್ಷಕವಾದ ಮತ್ತು ವಿಚಿತ್ರವಾದ ಚಿತ್ರವಾಗಿದೆ. ಪಶುವಿನ ಮೇಲೆ ಕುಳಿತು ಬರುತ್ತಿರುವ ಪಶುಪತಿಯ ಎದುರಿಗೆ ಸ್ತ್ರೀಯೋರ್ವಳು ಆನೆಯ ಮೇಲೆ ಕುಳಿತು ಬರುತ್ತಿದ್ದಾಳೆ. ಸ್ತ್ರೀ ಕುಳಿತ ಆನೆ ಮತ್ತು ಪಶುಪತಿ ಕುಳಿತ ಪಶುವಿನ ಮುಖಗಳು ಒಂದೆಡೆಗೇ ಸೇರಿಕೊಂಡಿವೆ. ಅಂದರೆ ಆನೆ ಮತ್ತು ಪಶುವಿಗಾಗಿ ಒಂದೇ ಮುಖವನ್ನು ರಚಿಸಲಾಗಿದೆ. ಎದುರು ಬದುರಾಗಿರುವ ಎರಡು ಬೇರೆ ಬೇರೆ ಪ್ರಾಣಿಗಳ ಮುಖವನ್ನು ಒಂದಾಗಿ ರಚಿಸಿದ್ದು ಕಲಾವಿದನ ಜಾಣ್ಮೆಯನ್ನು ತೋರಿಸುತ್ತದೆ. ಎರಡಕ್ಕೂ ಸೇರಿ ಒಂದೇ ಮುಖವಿದ್ದರೂ, ಸೂಕ್ಷ್ಮವಾಗಿ ಗಮನಿಸಿದಾಗ ಒಂದು ಕೋನದಿಂದ ಆನೆಯ ಮುಖವು ಸ್ಪಷ್ಟವಾಗಿ ಕಂಡರೆ, ಇನ್ನೊಂದು ಕೋನದಿಂದ ಪಶು(ಆಕಳು)ವಿನ ಮುಖವು ಸ್ಪಷ್ಟವಾಗಿಯೇ ಗೋಚರಿಸುವುದು. ಆನೆಯ ಸೊಂಡಿಲೇ ಎದುರಿಗಿರುವ ಪಶುವಿನ ಕೋಡಾಗಿ ಕಂಡರೆ ಆನೆಯ ಕೋರೆಗಳು ಕಿವಿಯ ಹಾಗೆ ರೂಪಾಂತರ ಹೊಂದಿವೆ. ಒಂದೇ ಕಣ್ಣು ಎರಡೂ ಪ್ರಾಣಿಗಳಿಗೆ ದೃಷ್ಟಿಯನ್ನು ಒದಗಿಸಿದ್ದು. ಆನೆಯ ತಲೆಯ ಮೇಲಿನ ಭಾಗ ಆಕಳಿನ ಬಾಯಿಯಂತೆ ಕಾಣುವುದು. ಚಿತ್ರಕಲೆಯಲ್ಲಿ ಪಳಗಿದ ಶ್ರೇಷ್ಠ ಚಿತ್ರಕಾರನಿಂದ ಮಾತ್ರ ಇಂತಹ ಚಮತ್ಕಾರಿ ಚಿತ್ರರಚನೆ ಸಾಧ್ಯ. ಪಶುವಿನ ಮೇಲೆ ಕುಳಿತ ಪಶುಪತಿಯು ಕಿರೀಟಧರಿಸಿದ್ದು ನಾಲ್ಕು ಕೈಗಳನ್ನು ಹೊಂದಿದವನಾಗಿದ್ದಾನೆ. ಹಿಂದಿನ ಎರಡು ಕೈಗಳಲ್ಲಿ ಒಂದಲ್ಲಿ ತ್ರಿಶೂಲ, ಇನ್ನೊಂದರಲ್ಲಿ ಢಮರುಗ ಹಿಡಿದುಕೊಂಡಿದ್ದಾನೆ. ಪಶುಪತಿ ಕುಳಿತುಕೊಂಡಿರುವ ಪಶುವೂ ಅತ್ಯಂತ ಶೃಂಗಾರಗೊಂಡಿದೆ. ಹಸಿರು ಅಂಚಿನ ಕೆಂಪು ವಸ್ತ್ರವನ್ನು ಪಶುವಿನ ಮೇಲೆ ಹಾಕಿದ ಕೊರಳಲ್ಲಿ ಆಭರಣಗಳೂ ಇದಕ್ಕೆ ಇವೆ. ಪಶುಪತಿಯ ಎದುರಿಗೆ ಆನೆಯಮೇಲೆ ಕುಳಿತ ದಾಕ್ಷಾಯಿಣಿ ಬರುತ್ತಿದ್ದು ರಾಜ ಪೋಷಾಕಿನಲ್ಲಿದ್ದಾಳೆ. ಅಲಂಕೃತ ಆನೆಯ ಮೇಲೆ ಚಾಮರದ ನೆರಳಲ್ಲಿ ರಾಣಿ ವಿರಾಜಮಾನಳಾಗಿದ್ದು, ಆನೆಯ ಕುತ್ತಿಗೆಯ ಮೇಲೆ ಮಾವುತನು ಆನೆಯನ್ನು ನಡೆಸುತ್ತಿದ್ದಾನೆ. ಮಾವುತನು ಟಿಪ್ಪುಸುಲ್ತಾನ್ ಶೈಲಿಯ ಟೊಪ್ಪಿಗೆಯನ್ನು ಧರಿಸಿದ್ದು ಇಲ್ಲಿನ ಬಹುಪಾಲು ಪುರುಷ ಚಿತ್ರಗಳಲ್ಲಿ ಇಂತಹ ಟೊಪ್ಪಿಗೆಗಳೇ ಕಂಡು ಬರುತ್ತವೆ. ಈ ಪಶುಪತಿ ದಾಕ್ಷಾಯಿಣಿ ಚಿತ್ರವು ಒಂದು ಉತ್ತಮ ಕಲಾಕೃತಿಯಾಗಿದೆ. ಶಕ್ತಿಯುತವಾದ ರೇಖೆಗಳು, ಔಚಿತ್ಯಪೂರ್ಣವಾದ ವರ್ಣಗಾರಿಕೆ, ಯೋಜನಾಬದ್ಧ ಸಂಯೋಜನಾ

ರೀತಿ ಇವುಗಳನ್ನು ಇಲ್ಲಿ ಮುಖ್ಯವಾಗಿ ಗುರುತಿಸಬಹುದು. ಹಿನ್ನಲೆಗೆ ಕೆಂಪು ವರ್ಣವನ್ನು ಬಳಸಿದ್ದು ಚಿತ್ರಕ್ಕೆ ಹಳದಿ ವರ್ಣವನ್ನು ಹೆಚ್ಚಾಗಿ ಬಳಸಲಾಗಿದೆ. ಚಿತ್ರದ ಕೆಳಭಾಗದಲ್ಲಿ ಮುಖ್ಯ ಚಿತ್ರಗಳು ಇದ್ದುದರಿಂದ ಮೇಲ್ಭಾಗದ ಬೋಳುತನವನ್ನು ಕಳೆಯಲು ಒಂದು ದೊಡ್ಡದಾದ ಪುಷ್ಪವನ್ನು ಚಿತ್ರಸಲಾಗಿದೆ. ಈ ಪುಷ್ಪದ ವರ್ಣವು ಪಶುಪತಿಯ ವರ್ಣವನ್ನು ಹೋಲುತ್ತಿದ್ದು ಆ ಮೂಲಕ ವರ್ಣ ಸಮತೋಲವನ್ನೂ ಸಾಧಿಸಲಾಗಿದೆ.

೧೦. ಗಣಪತಿಯ ಚಿತ್ರ : ಗಣಪತಿಯ ಚಿತ್ರವು ಅಲಗುಗಳುಳ್ಳ ವೃತ್ತಾಕಾರದ ಒಳಗಡೆಗೆ ರಚಿಸಿದ್ದು. ವೃತ್ತದ ಒಳಗಡೆಗೆ ಹಸಿರು ವರ್ಣದ ಹಿನ್ನಲೆ ಇದ್ದರೆ. ವೃತ್ತದ ಹೊರಗಡೆಯ ಚೌರಸದಲ್ಲಿ ಕೆಂಪುವರ್ಣದ ಲೇಪಿಸಲಾಗಿದೆ. ಗಣಪತಿಯು ಕುಳಿತ ಭಂಗಿಯಲ್ಲಿದ್ದು ಬೃಹತ್ತಾದ ತನ್ನ ಆನೆಯ ಮುಖಕ್ಕೆ ಕಿರೀಟವನ್ನು ಧರಿಸಿದ್ದಾನೆ. ನಾಲ್ಕು ಕೈಗಳನ್ನು ಹೊಂದಿದ ಗಣಪತಿಯು ಎರಡು ಕೈಗಳಲ್ಲಿ ಆಯುಧವಿದ್ದರೆ ಒಂದು ಕೈಯನ್ನು ಮೊಣಕಾಲ ಮೇಲೆ ಹಾಗೆ ಇಟ್ಟುಕೊಂಡಿದ್ದರೆ. ಇನ್ನೊಂದು ಕೈ ಯೋಗಮುದ್ರೆಯ ಭಂಗಿಯನ್ನು ತೋರುವುದು. ಚಿತ್ರದಲ್ಲಿ ಗಮನಾರ್ಹ ಅಂಶವೆಂದರೆ ಗಣಪತಿಯು ರಾಜ ಪೋಷಾಕಿನಂತೆ ತೋರುವ ಉದ್ದ ತೋಳಿನ ಅಂಗಿಯನ್ನು ತೊಟ್ಟಿದ್ದಾನೆ. ಭುಜಕ್ಕೆ ಭುಜಕೀರ್ತಿಗಳಿದ್ದು ಕೊರಳಲ್ಲಿ ಆಭರಣಗಳು ಧಾರಾಳವಾಗಿವೆ. ಹಳದೀ ಶಾಲು ಹೊದ್ದುಕೊಂಡಿರುವ ಗಣಪ ಹಿಂದಿನ ಲೋಡಿಗೆ ಆತುಕೊಂಡು ರಾಜಠೀವಿಯಿಂದ ಕುಳಿತಿದ್ದಾನೆ. ಇಲ್ಲಿ ಮುಖ್ಯವಾಗಿ ಕೆಂಪು. ಹಸಿರು. ಹಳದಿ ವರ್ಣಗಳು ಬಳಕೆಯಾಗಿವೆ.

೧೧. ಕಾರ್ತಿಕೇಯನ ಚಿತ್ರ : ಬಲಕ್ಕಿರುವ ಕಾರ್ತಿಕೇಯನ ಚಿತ್ರವು ಕೂಡಾ ಅಲಗುಳ್ಳ ವೃತ್ತಾಕಾರದಲ್ಲಿ ರಚಿಸಿದ್ದು ವೃತ್ತದೊಳಗಡೆ ಹಸಿರು. ಹೊರಗಿನ ಚೌರಸವು ಕೆಂಪು ಹಿನ್ನಲೆಗಳನ್ನು ಹೊಂದಿವೆ. ಕಾರ್ತಿಕೇಯನು ನವಿಲಿನಮೇಲೆ ಕುಳಿತಿದ್ದು ಕೆಂಪು ವರ್ಣದ ಬಟ್ಟೆ ಉಟ್ಟುಕೊಂಡಿದ್ದಾನೆ. ಮೈ ಬಣ್ಣವು ಕಿತ್ತಳೆ ವರ್ಣದಿಂದ ಕೂಡಿದೆ.

೧೨. ಜಯವಿಜಯರ ಚಿತ್ರಗಳು : ಕೆಳಗಡೆಗೆ ಎಡಬಲದಲ್ಲಿ ವಿಷ್ಣುವಿನ ದ್ವಾರಪಾಲಕರಾದ ಜಯವಿಜಯರ ಚಿತ್ರಗಳನ್ನು ರಚಿಸಲಾಗಿದೆ. ಜಯವಿಜಯರು ಆಯತಾಕಾರದ. ಮೇಲೆ ಕಮಾನು ಹೊಂದಿದ ಮಂಟಪಗಳಲ್ಲಿ ನಿಂತಿದ್ದು ಹಿನ್ನಲೆಯು ಕೆಂಪು ವರ್ಣದಿಂದ ಕೂಡಿದ್ದರೆ ಕಮಾನು ಹಸಿರುವರ್ಣದಿಂದ ರಚಿಸಿದೆ. ಇಬ್ಬರೂ ಕೆಂಪುವಸ್ತ್ರಧರಿಸಿದ್ದು ವಿಷ್ಣುವಿನ ಸಂಕೇತವಾದ ಶಂಖ ಚಕ್ರ ಗಧೆಗಳನ್ನು ಧರಿಸಿದ್ದಾರೆ. ಒಬ್ಬನ ಮೈಬಣ್ಣ ಹಳದಿ ಇದ್ದರೆ ಇನ್ನೊಬ್ಬನದು ಕಿತ್ತಳೆ ವರ್ಣದಲ್ಲಿದೆ.

೧೩. ದೇವತೆ ಚಿತ್ರ : ಕೆಳಗಡೆ ಇರುವ ಚಿತ್ರದಲ್ಲಿ ಕಪ್ಪು ನೀಲವರ್ಣದ ದೇವನೊಬ್ಬ ಪದ್ಮಾಸನ ಹಾಕಿ ಯೋಗ ಮುದ್ರೆಯಲ್ಲಿ ಕುಳಿತಿದ್ದಾನೆ. ದೇವನು ಆರು ಕೈಗಳನ್ನು ಹೊಂದಿದ್ದು ಶಂಖ. ಚಕ್ರ, ತ್ರಿಶೂಲ. ಢಮರುಗ, ಬಿಲ್ಲು ಬಾಣಗಳನ್ನು ಪ್ರತಿಯೊಂದರಲ್ಲಿ ಹಿಡಿದು ಕೊಂಡಿದ್ದು ಇನ್ನೊಂದು ಕೈಯಲ್ಲಿ ಜಪಮಾಲೆಯನ್ನು ಹಿಡಿದು ಜಪಿಸುತ್ತಿದ್ದಾನೆ. ಹಳದೀ ವರ್ಣದ ಕೆಳ ಉಡುಪು ತೊಟ್ಟಿದ್ದು ಕೆಂಪುವರ್ಣದ ಮೇಲುವಸ್ತ್ರವನ್ನು ಹೊದೆದುಕೊಂಡಿದ್ದಾನೆ. ಕಿವಿಯಲ್ಲಿ, ಆಭರಣಗಳನ್ನು ಧರಿಸಿದ್ದು ತಲೆಯಮೇಲೆ ಕೀರಿಟವೂ ಇದೆ. ಚಿತ್ರದ ಹಿನ್ನಲೆಯು ದಟ್ಟ ಕೆಂಪು ವರ್ಣದಿಂದ ಕೂಡಿದೆ.

೧೪. ದ್ವಾದಶ ರಾಶಿಗಳ ಚಿತ್ರಗಳು : ಇದರ ಕೆಳಗಡೆಯ ವೃತ್ತಗಳಲ್ಲಿ ಒಂದರ ಕೆಳಗೆ ಒಂದರಂತೆ ಸಾಲಾಗಿ ಮೇಷ. ವೃಷಭ. ಮಿಥುನ. ಕರ್ಕ. ಸಿಂಹ. ಕನ್ಯಾ. ತುಲಾ. ವೃಶ್ಚಿಕ, ಧನು, ಮಕರ, ಕುಂಭ, ಮೀನ ಹೀಗೆ ದ್ವಾದಶರಾಶಿಗಳನ್ನು ಚಿತ್ರಿಸಿದ್ದಾರೆ. ಇಲ್ಲಿಯ ಎಲ್ಲ ಚಿತ್ರಗಳ ಹಿನ್ನಲೆಯೂ ಕೆಂಪುವರ್ಣವೇ ಆಗಿದೆ. ಹಸಿರು, ಕೆಂಪು, ಹಳದಿ ಇಲ್ಲಿನ ಚಿತ್ರಗಳಲ್ಲಿ ಪ್ರಧಾನವಾಗಿ ಉಪಯೋಗಿಸಲಾದ ವರ್ಣಗಳಾಗಿವೆ

೧೫. ಕಾಮಧೇನುಗಳ ಚಿತ್ರ ಮತ್ತು ಹೂಗಳ ಅಲಂಕಾರಿಕ ಚಿತ್ರ : ವರಾಹ ಅವತಾರದ ಮೇಲೆ ಉದ್ದ ಪಟ್ಟಿಕೆಯಲ್ಲಿ ಎದುರು ಬದುರಾಗಿರುವ ಕಾಮಧೇನುಗಳು ಮತ್ತು ಅಲಂಕಾರಿಕ ಮೂರು ಎಸಳಿನ ಹೂಗಳಿವೆ. ಆಕಳಿನ ಶರೀರ ಸ್ತ್ರೀ ಮುಖಹೊಂದಿದ ಕಾಮಧೇನುಗಳು ರೆಕ್ಕೆಯನ್ನು ಹೊಂದಿವೆ. ಈ ಕಾಮಧೇನುಗಳೂ ದೀರ್ಘವೃತ್ತಾಕಾರದಲ್ಲಿ ರಚಿಸಿದ್ದರೆ ಇವುಗಳ ಪಕ್ಕದ ಹೂಗಳ ನಕ್ಷೆಗಳು ವೃತ್ತಗಳಲ್ಲಿ ರಚಿಸಿವೆ. ಈ ಎಲ್ಲ ಚಿತ್ರಗಳು ಹಳದಿವರ್ಣದಿಂದ ರಚಿಸಿದ್ದು ಹಿನ್ನಲೆ ಕೆಂಪಾಗಿವೆ.

೧೬. ಶರಭದ ಚಿತ್ರಗಳು : ವರಾಹ ಅವತಾರದ ಕೆಳಗಿನ ಚಿತ್ರದಲ್ಲಿ ಎದುರು ಬದುರಾಗಿರುವ ಎರಡು ಶರಭದ (ಸಿಂಹರೂಪಿ) ಚಿತ್ರಗಳು ಇವೆ. ಈ ಚಿತ್ರ ಕಮಾನಿನಂತಹ ಸ್ಥಳಾವಕಾಶದಲ್ಲಿ ರಚಿಸಿದ್ದು ಶರಭಗಳ ಮಧ್ಯ ಅಲಂಕಾರಿಕ ಹೂಕುಂಡವಿದೆ. ಎರಡೂ ಶರಭರಗಳು ಒಂದೊಂದು ಆನೆಗಳ ಮೇಲೆ ದಾಳಿಮಾಡಿ ಅವುಗಳನ್ನು ಕೊಲ್ಲುತ್ತಿದ್ದು ಭಯಾನಕವೆನಿಸುತ್ತದೆ. ಶರಭಗಳ ಕಾಲಿನ ಚೂಪಾದ ಉಗುರುಗಳು ಆನೆಯ ದೇಹಗಳನ್ನು ತಿವಿದಿದ್ದು, ಆನೆಗಳು ದಾಳಿಯ ವೇಗವನ್ನು ತಾಳದೇ ನೆಲಕ್ಕೆ ಒರಗಿವೆ. ಹಿನ್ನಲೆಯಲ್ಲಿ ಹಸಿರು ಎಲೆಬಳ್ಳಿಗಳ ಚಿತ್ರ ತುಂಬಿಕೊಂಡಿವೆ.

**II. ಧಾರ್ಮಿಕೇತರ ಚಿತ್ರಗಳು :** ಇಲ್ಲಿನ ಧಾರ್ಮಿಕೇತರ ಚಿತ್ರಗಳಲ್ಲಿ ರಾಜರಾಣಿ ಮಗು ಹಾಗೂ ಪರಿಚಾರಿಕೆಯರು ಇರುವ ಅಂತಪುರ ಚಿತ್ರಗಳು, ಯುದ್ಧ ಒಂದರ ದೃಶ್ಯ ನರ್ತಕಿಯರು, ಈಜುಕನ್ಯೆಯರು, ಅಲಂಕಾರಿಕ ಹೂಗಿಡಗಳು, ನಕ್ಷಾರೂಪಗಳು ಒಳಗೊಳ್ಳುತ್ತವೆ. ಅವುಗಳನ್ನು ಒಂದೊಂದಾಗಿ ನೋಡಬಹುದು.

೧. ರಾಜ ರಾಣಿ ಮಗುವಿನ ಚಿತ್ರ : ಇಲ್ಲಿನ ಇನ್ನೊಂದು ಪ್ರಮುಖವಾದ ಚಿತ್ರದಲ್ಲಿ ರಾಜ ರಾಣಿಯರಿದ್ದು ಅದು ಬಹುಶ ಆ ಕಾಲದಲ್ಲಿ ಈ ನರಗುಂದ ಸಂಸ್ಥಾನವನ್ನು ಆಳುತ್ತಿದ್ದ, ಚಿತ್ರಗಳಿಗೆ ಪೋಷಕನಾದ ದೊರೆಯ ಚಿತ್ರವಾಗಿರಬಹುದು.

ಇಲ್ಲಿ ರಾಜನು ಆರಾಮವಾದ ಭಂಗಿಯಲ್ಲಿ ಲೋಡಿಗೆ ವರಗಿ ಕುಳಿತುಕೊಂಡಿದ್ದಾನೆ. ಆತನ ಬಲಗಡೆಗೆ ರಾಣಿಯೂ ಆತನನ್ನು ತಬ್ಬಿಕೊಂಡು ಕುಳಿತಿದ್ದಾಳೆ. ಇವಳನ್ನು ತನ್ನ ಬಲಗೈಯಿಂದ ಬಳಸಿದ್ದಾನೆ. ರಾಜನ ಜೊತೆ ಇರುವ ರಾಣಿಯು ಕೆಂಪು ಕುಪ್ಪುಸ, ಕಡು ಹಸಿರು ವರ್ಣದ ಕೆಂಪು ಅಂಚಿನ ಸೀರೆಯನ್ನು ಉಟ್ಟುಕೊಂಡಿದ್ದು ಬಲಗೈಯನ್ನು ತುಟಿಯ ಮೇಲಿಟ್ಟುಕೊಂಡು, ಎಡಗೈಯಲ್ಲಿ ಮಲ್ಲಿಗೆ ಹೂವನ್ನು ಹಿಡಿದಿದ್ದಾಳೆ. ರಾಜನು ಹಳದೀ ವರ್ಣದ ಪೂರ್ತಿ ತೋಳಿನ ಅಂಗಿಯನ್ನು ತೊಟ್ಟುಕೊಂಡಿದ್ದು ಕಿರೀಟವನ್ನು ತಲೆಗೆ ಧರಿಸಿದ್ದಾನೆ. ಕಡುಹಸಿರುವರ್ಣದ ಶಾಲನ್ನು ಹೊದ್ದುಕೊಂಡು ಕೆಂಪು ಅಂಚಿನ ಬಿಳಿ ಪಂಚೆ ಉಟ್ಟಿದ್ದಾನೆ. ಈ ರಾಜ ರಾಣಿಯರು ಜೊತೆಯಾಗಿ ಕುಳಿತಿದ್ದರೆ ಇನ್ನೋರ್ವ ಸ್ತ್ರೀ ದೊರೆಯ ಕಾಲಹತ್ತಿರ ಕುಳಿತು ಆತನ ಕಾಲನ್ನು ಒತ್ತುತ್ತ ಆತನ ಸೇವೆಯಲ್ಲಿ ನಿರತಳಾಗಿದ್ದಾಳೆ. ಈಕೆಯ ಪಕ್ಕದಲ್ಲೇ ಒಂದು ಚಿಕ್ಕ ಗಂಡುಮಗು ರಾಜ ರಾಣಿಯರಿಗೆ ನನ್ನನ್ನು ಎತ್ತಿಕೊಳ್ಳಿ ಎಂದು ಕೈ ಮೇಲೆತ್ತಿ ಅಳುತ್ತಿದೆ. ಮಗುವು ನಗ್ನವಾಗಿದ್ದು ನಡದಲ್ಲಿ ಉಡದಾರ, ಕೊರಳಲ್ಲಿ, ಮುಂಗೈ, ಮುಂಗಾಲುಗಳಲ್ಲಿ ಆಭರಣಗಳನ್ನು ಧರಿಸಿದೆ. ಕಾಲುಒತ್ತುವ ಸ್ತ್ರೀಯು ಹಳದಿ ಕುಪ್ಪುಸ ಹಸಿರು ಸೀರೆ ತೊಟ್ಟಿದ್ದು ಮೈ ಮೇಲೆ ಅಷ್ಟೊಂದು ಆಭರಣಗಳು ಇಲ್ಲ. ಈ ಇಬ್ಬರು ಸ್ತ್ರೀಯರು ಮಗು ಅಲ್ಲದೇ ರಾಜನ ಎಡಗಡೆಗೆ ಕೆಂಪು ಸೀರೆ ಉಟ್ಟುಕೊಂಡ ಮಹಿಳೆಯೊಬ್ಬಳು ಕಾಲನ್ನು ಕೊಂಕಿಸಿ, ನಡುವಿನ ಮೇಲೆ ಕೈ ಇಟ್ಟುಕೊಂಡು ಒಯ್ಯಾರವಾಗಿ ಚಾಮರದಿಂದ ರಾಜನಿಗೆ ಗಾಳಿ ಬೀಸುತ್ತಿದ್ದಾಳೆ. ಇವಳು ಸೀರೆಯನ್ನು ಉಟ್ಟುಕೊಂಡ ರೀತಿ ತುಂಬಾ ಆಕರ್ಷಕವಾಗಿದೆ. ಇಡೀ ಚಿತ್ರವನ್ನು ಆಕರ್ಷಕವಾದ ಮಂಟಪವೊಂದರಲ್ಲಿ

ಸಂಯೋಜಿಸಿದ್ದು. ಅರಮನೆಯ ಒಳಗಿನ ಕಲ್ಪನೆಯನ್ನು ಕೊಡುತ್ತದೆ. ಮಂಟಪದ ಒಳಗಡೆಗೆ ಹೂಗಳನ್ನು ತೂಗುಬಿಟ್ಟಿದ್ದು ಚಿತ್ರದ ಸಮತೋಲನಕ್ಕೆ ಸಹಾಯವಾಗಿದೆ. ಇಡೀ ಚಿತ್ರದ ಹಿನ್ನೆಲೆಯ ವರ್ಣವು ನೀಲಿ ಹಸಿರು ಮಿಶ್ರಿತ (ಪಿಕಾಕ್ ಬ್ಲ್ಯೂ) ವರ್ಣವಾಗಿದ್ದು ಹಳದಿ ಕೆಂಪು ಹೂಗಳು ಅದರಲ್ಲಿ ಆಕರ್ಷಕವಾಗಿ ಕಾಣುತ್ತಿವೆ. ಇಲ್ಲಿನ ಹೆಚ್ಚಿನ ಎಲ್ಲ ಚಿತ್ರಗಳ ಹಿನ್ನೆಲೆಯು ಕೆಂಪು ವರ್ಣದ್ದೇ ಆಗಿರುವಾಗ ಈ ಒಂದೇ ಚಿತ್ರದ ಹಿನ್ನೆಲೆಯು ನೀಲಿ ವರ್ಣದ್ದಾಗಿರುವುದು ವಿಶೇಷವಾಗಿದೆ. ಉಳಿದೆಲ್ಲ ದೃಶ್ಯಗಳಿಗಿಂತ ಚಿತ್ರ ಬರೆಸಿದ ರಾಜನ ಚಿತ್ರವು ವಿಶೇಷವಾಗಿ ಕಾಣಬೇಕೆಂಬ ಉದ್ದೇಶದಿಂದ ಹೀಗೆ ಇದೊಂದೇ ಚಿತ್ರವನ್ನು ಹಿನ್ನೆಲೆಯಾಗಿ ನೀಲಿ ವರ್ಣದಿಂದ ರೂಪಿಸಿ ರಚಿಸಿರಬೇಕು.

೨. ರಾಜ ರಾಣಿಯರ ಚಿತ್ರ : ಬಲಗಡೆಯ ಚಿತ್ರದಲ್ಲಿನ ಒಂದು ದೃಶ್ಯದಲ್ಲಿ ಅಂತಪುರವನ್ನು ಪ್ರತಿಬಿಂಬಿಸುವ ಚಿತ್ರ ಒಂದಿದ್ದು ಅದರಲ್ಲಿ ರಾಜನೊಬ್ಬನು ಆರಾಮವಾಗಿ ಲೋಡಿಗೊರಗಿಕೊಂಡು ಕುಳಿತಿದ್ದಾನೆ. ಕಾಲುಗಳೆರಡನ್ನೂ ಕೆಳಗೆ ಇಳಿಬಿಟ್ಟುಕೊಂಡು ಕೈಗಳನ್ನು ಒಂದರ ಮೇಲೊಂದು ಇಟ್ಟುಕೊಂಡು ಎದುರಿಗೆ ಇರುವ ರಾಣಿಯೊಡನೆ ಸಂಭಾಷಣೆಯಲ್ಲಿ ತೊಡಗಿದ್ದಾನೆ. ರಾಜನು ಕೆಂಪು ಧೋತ್ರವನ್ನು ಉಟ್ಟುಕೊಂಡಿದ್ದು ಕಿತ್ತಳೆ ವರ್ಣದ ಶಾಲು ಧರಿಸಿದ್ದಾನೆ. ತಲೆಗೆ ಕಿರೀಟವಿದ್ದು ಮುಖವು ಭಾವನಾತ್ಮಕವಾಗಿ ಮೂಡಿದೆ. ಈ ರಾಜನ ಎದುರಿಗೆ ರಾಣಿಯೋರ್ವಳು ಲೋಡಿಗೆ ವರಗಿಕೊಂಡು ಮಗುವಿಗೆ ತನ್ನ ಮೊಲೆ ಉಣಿಸುತ್ತಿದ್ದಾಳೆ. ಮಗುವು ಆನಂದದಿಂದ ಹಾಲು ಕುಡಿಯುವ ಕ್ರಿಯೆಯಲ್ಲಿ ತೊಡಗಿದೆ ಎಂಬುದು ಮಗುವಿನ ಮುಖ ಕಮಲದ ಭಾವನೆಯಿಂದ ತಿಳಿಯಬಹುದು. ಮಗುವಿಗೆ ಮೊಲೆ ಉಣಿಸುತ್ತಿರುವ ಸ್ತ್ರೀಯು ಹಸಿರುವರ್ಣದ ಕಡ್ಡಿಸೀರೆಯನ್ನು ಉಟ್ಟುಕೊಂಡಿದ್ದು ಕೆಂಪು ಕುಪ್ಪಸ ತೊಟ್ಟಿದ್ದಾಳೆ. ಮುಖದಲ್ಲಿ ಮಾತೃವಾತ್ಸಲ್ಯವು ಹೊಮ್ಮುತ್ತಿದೆ. ತಾಯಿಯ ಮುಖದಲ್ಲಿ ಕರುಣೆ, ವಾತ್ಸಲ್ಯ, ಪ್ರೀತಿ, ಮಮತೆಗಳು ಮಡುಗಟ್ಟಿ ನಿಂತಿದ್ದು ಈ ಚಿತ್ರವು ಭಾವನಾತ್ಮಕ ದೃಷ್ಟಿಯಿಂದ ಇಲ್ಲಿನ ಚಿತ್ರಗಳಲ್ಲೇ ಶ್ರೇಷ್ಠ ಚಿತ್ರವಾಗಿದೆ ಎಂದು ಹೇಳಬಹುದು. ಮಗುವು ಬೆತ್ತಲಾಗಿದ್ದು ಗೆಜ್ಜೆ ಉಡದಾರ ಕೊರಳ ಆಭರಣಗಳನ್ನು ಧರಿಸಿ ನೀಲಿವರ್ಣದಲ್ಲಿ ಚಿತ್ರಿಸಿದೆ. ಚಿತ್ರದ ಹಿನ್ನೆಲೆಯು ಹಸಿರು ವರ್ಣದಲ್ಲಿದ್ದು. ಕೆಂಪು ವರ್ಣದ ಬಟ್ಟೆಗಳನ್ನು ಅಲ್ಲಲ್ಲಿ ಇಳಿಬಿಡಲಾಗಿದೆ. ರಾಜ ರಾಣಿಯರು ಕುಳಿತ ಪೀಠವು ಕಮಲದ ಹೂವಿನಹಾಗೆ ವಿನ್ಯಾಸಹೊಂದಿದೆ. ಈ ಚಿತ್ರವು ಸಂಸ್ಥಾನದ ರಾಜ ಪರಿವಾರವನ್ನು, ಮತ್ತು ಅಂತಪುರವನ್ನು ತೋರಿಸುವ ಚಿತ್ರವಾಗಿದೆ.

೩. ಯುದ್ಧದ ಚಿತ್ರ : ಇಲ್ಲಿರುವ ಇನ್ನೊಂದು ದೊಡ್ಡ ಚಿತ್ರವು ಯುದ್ಧಕ್ಕೆ ಸಂಬಂಧಿಸಿದುದಾಗಿದೆ. ಇದು ಒಟ್ಟು ೪ x ೮ ಅಡಿಯಷ್ಟು ಸ್ಥಳವನ್ನಾಕ್ರಮಿಸಿದೆ. ಈ ಚಿತ್ರವನ್ನು ಕಿಟಕಿಯ ಮೇಲಿರುವ ಒಂದು ಅಲಂಕೃತ ಕಮಾನಿನಲ್ಲಿ ಬರೆದಿದ್ದಾರೆ. ಈ ಒಟ್ಟು ಚಿತ್ರಣವನ್ನು ಮುಖ್ಯವಾದ ಎರಡು ಭಾಗಮಾಡಿ ಒಂದು ಭಾಗದಲ್ಲಿ ಯುದ್ಧ ತಯಾರಿಯಲ್ಲಿ ತೊಡಗಿರುವ ಸೈನಿಕರು. ಮತ್ತೊಂದು ಭಾಗದಲ್ಲಿ ಭೀಕರವಾಗಿ ನಡೆಯುತ್ತಿರುವ ಕದನದ ದೃಶ್ಯವಿದೆ. ಮೇಲಣ ಪಟ್ಟಿಯಲ್ಲಿ ಕಾಳಗಕ್ಕೆ ಹೊರಟ ಸೈನಿಕರಿದ್ದಲ್ಲಿ ಬಲಗಡೆಗೆ ಹನ್ನೊಂದು ಜನಸೈನಿಕರು ಹಸಿರುವರ್ಣದ ಕತ್ತಿ. ಢಾಲುಗಳನ್ನು ಹಿಡಿದು ಒಂದೇ ರೀತಿಯಲ್ಲಿ ಶಿಸ್ತಿನಿಂದ ಹೆಜ್ಜೆಹಾಕುತ್ತ ಸಾಗುತ್ತಿದ್ದಾರೆ. ಇವರು ಕೆಂಪು ವಸ್ತ್ರವನ್ನು ತಲೆಗೆ ಸುತ್ತಿಕೊಂಡಿದ್ದು ಅದೇ ವರ್ಣದ ಮೊಣಕಾಲಿನವರೆಗೆ ಇರುವ ಚಲ್ಲಣವನ್ನು ತೊಟ್ಟಿದ್ದಾರೆ. ಮಧ್ಯದಲ್ಲಿ ನಾಲ್ವರು ಮುಸ್ಲಿಂ ಸೈನಿಕರು ಕೆಂಪು, ಹಸಿರು ವರ್ಣದ ಯುದ್ಧ ಧ್ವಜವನ್ನು ಹಿಡಿದುಕೊಂಡಿದ್ದಾರೆ. ಮುಸ್ಲಿಂ ಸೈನಿಕರ ಎಡಗಡೆಗೆ ನಾಲ್ವರು ಯುರೋಪಿಯನ್ ಸೈನಿಕರಿದ್ದು ಅವರು ವಾದ್ಯಗಳನ್ನು ನುಡಿಸುತ್ತಿದ್ದಾರೆ. ಈ ವಾದ್ಯಗಳು ವಿಶಿಷ್ಟವಾಗಿದ್ದು

ಇವುಗಳನ್ನು ಕೊರಳಿಗೆ ನೇತುಹಾಕಿಕೊಂಡು ಹೊಟ್ಟೆಯ ಮೇಲೆ ಬರುವಂತೆ ಇಳಿಬಿಟ್ಟುಕೊಳ್ಳುತ್ತಾರೆ. ಇದು ಬುಟ್ಟಿಯ ಆಕಾರದಲ್ಲಿದ್ದು ಒಂದೇ ಬದಿಯಲ್ಲಿ ಬಾರಿಸಲು ಬರುತ್ತದೆ. ಇದು ಒಂದು ಚರ್ಮವಾದ್ಯವಾಗಿದ್ದು, ಉತ್ತರ ಕರ್ನಾಟಕ ಭಾಗದಲ್ಲಿ ಮದುವೆ ಮುಂಜಿವೆಗಳಲ್ಲಿ ಈ ವಾದ್ಯವನ್ನು ಸನಾದಿಯ ಜೊತೆಗೆ ಈಗಲೂ ಬಾರಿಸುತ್ತಾರೆ. ಇದಕ್ಕೆ ಗ್ರಾಮೀಣರು 'ತಾಸೆ' ಎಂದು ಕರೆಯುತ್ತಾರೆ. ಈ ವಾದ್ಯ ಈಗ ದುರ್ಲಭವಾಗುತ್ತಿದೆ. ಯುರೋಪಿಯನ್ ಸೈನಿಕರ ಎಡಗಡೆಗೆ ಬಂದೂಕುಗಳನ್ನು ಹಿಡಿದುಕೊಂಡು ಬರುತ್ತಲಿರುವ ಹಿಂದೂ ಸೈನಿಕರಿದ್ದಾರೆ. ಹೀಗೆ ಈ ಮೇಲಿನ ಪಟ್ಟಿಕೆಯಲ್ಲಿ ವಿವಿಧ ಬಗೆಯ ಸೈನಿಕರು. ಆನೆ ಕುದುರೆಗಳು ಮೇಳೈಸಿವೆ.

ಈ ಪಟ್ಟಿಕೆಯ ಕೆಳಭಾಗದಲ್ಲಿ ವಿಶಾಲವಾದ ರಣರಂಗದ ದೃಶ್ಯವನ್ನು ಚಿತ್ರಿಸಿದ್ದಾರೆ. ರಣರಂಗದ ಮಧ್ಯದಲ್ಲಿ ಒಂದು ಆಂಜನೆಯನ ಗುಡಿ ಇದ್ದು ಆಂಜನೇಯನು ಎಡಗಡೆಗೆ ಮುಖಮಾಡಿದ್ದಾನೆ. ಈ ಗುಡಿಯ ಎಡಭಾಗದಲ್ಲಿ ಹಿಂದೂ ರಾಜಕುಮಾರನೊಬ್ಬನು ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು ಯುದ್ಧದಲ್ಲಿ ತೊಡಗಿದ್ದರೆ ಆತನಿಗೆ ಸಹಾಯಕರಾಗಿ ಕುದುರೆ ಸವಾರರು ಕಾಲಾಳುಗಳು ಯುದ್ಧ ಮಾಡುತ್ತಿದ್ದಾರೆ. ಸೈನಿಕರು ಖಡ್ಗ, ಉದ್ದನಾದ ಭಲ್ಲೆಗಳನ್ನು ಹಿಡಿದುಕೊಂಡಿದ್ದಾರೆ. ಆನೆಯ ಮೇಲೆ ಕುಳಿತ ರಾಜನು ಸೈನ್ಯಕ್ಕೆ ಮಾರ್ಗದರ್ಶನ ಮಾಡುತ್ತಲಿದ್ದಾನೆ. ಇವರ ಎದುರಿನ ಅಂದರೆ ಆಂಜನೇಯ ಗುಡಿಯ ಬಲಗಡೆಗೆ ಇರುವ ಸೈನ್ಯದಲ್ಲಿ ಅಪಾರ ಜನ ಸೈನಿಕರಿದ್ದು ಇವರು ಬರೀ ಅಶ್ವಾರೋಹಿಗಳಾಗಿದ್ದಾರೆ. ಇದರಲ್ಲಿ ಆನೇ ಸವಾರರು ಇಲ್ಲ. ಭರ್ಚಿಯಿಂದ ಚುಚ್ಚುತ್ತ, ಖಡ್ಗದಿಂದ ವೈರಿಗಳನ್ನು ಹೊಡೆಯುತ್ತ ಕೆಲವು ಸೈನಿಕರು ಮುನ್ನಡೆದಿದ್ದಾರೆ. ನೀಲಿ. ಹಸಿರು. ಹಳದಿ. ಬಣ್ಣಗಳು ಪ್ರಮುಖವಾಗಿ ಇಲ್ಲಿ ಉಪಯೋಗಿಸಲಾಗಿದ್ದರೆ ಹಿನ್ನೆಲೆಯು ಕೆಂಪುವರ್ಣದಿಂದ ಕೂಡಿದೆ. ಇಲ್ಲಿನ ಯುದ್ಧ ದೃಶ್ಯದಲ್ಲಿ ನಾಯಿಗಳೂ ಭಾಗವಹಿಸಿವೆ. ಜೋರಾಗಿ ಬೊಗಳುತ್ತಿರುವ ಅನೇಕ ನಾಯಿಗಳನ್ನು ಇಲ್ಲಿ ಚಿತ್ರಿಸಲಾಗಿದೆ. ಇಲ್ಲಿನ ಎಲ್ಲ ಸೈನಿಕರೂ ಹೆಚ್ಚಾಗಿ ಒಂದೇ ರೀತಿಯ ಟೊಪ್ಪಿಗೆಯನ್ನು ಧರಿಸಿದ್ದಾರೆ. ಅದು ಹಿಂದೆ ಚಾಚಿದಂತೆ ಇರವುದಾಗಿದೆ. ಈ ಕದನ ದೃಶ್ಯದಲ್ಲಿ ಬರುವ ಆನೆ ಕುದುರೆಗಳಂತೂ ಪ್ರಮಾಣ ಬದ್ಧವಾಗಿ ಶಕ್ತಿಯುತ ರೇಖೆಯಿಂದ ಕೂಡಿವೆ. ಮಾನವಾಕೃತಿಗಳ ತಲೆಗೂದಲನ್ನು ಕಪ್ಪು ಹಸಿರು ವರ್ಣಗಳಿಂದಲೂ ತೋರಿಸಲಾಗಿದೆ.

ನರಗುಂದವು ಆದಿಲ್‌ಶಾಹಿ ಅರಸರು ಆಳಿದ ಬಿಜಾಪುರಕ್ಕೆ ಸಮೀಪದ ನಗರ, ಬಾಬಾಸಾಹೇಬ ದೊರೆಯ ಕಾಲಕ್ಕೆ ಆಗಾಗ ಬ್ರಿಟೀಷರೋ. ಪೋರ್ತುಗೀಜರೋ ಬಂದು ದೇಶಿಯ ಅರಸುಗಳ ಕದನದಲ್ಲಿ ಪಾಲುವಹಿಸತೊಡಗಿದ್ದರಿಂದಲೇ ಈ ಕಾಳಗದಲ್ಲಿ ಅವರನ್ನು ಕಾಣಿಸಿದ್ದಾರೆ. ಎಂದು ಶಿವರಾಂ ಕಾರಂತ ಅವರು[೧೫೯] ಹೇಳುತ್ತಾರೆ. ಆದರೆ ಇದೊಂದೇ ಕಾರಣವಲ್ಲದೇ ನರಗುಂದ ಸಂಸ್ಥಾಪಿಕರು ಮರಾಠಾ ಪೇಶ್ವೆಗಳ ಪ್ರೀತಿ ಪಾತ್ರರಾಗಿದ್ದರಲ್ಲದೇ ಕೆಲವು ಸಲ ಅವರ ಸಾಮಂತರೂ ಆಗಿದ್ದರು.[೧೬೦] ಹೀಗಾಗಿ ಮರಾಠಾ ಪೇಶ್ವೆಗಳ ಪ್ರಭಾವ ಇವರ ಮೇಲೆ ಹೆಚ್ಚಾಗಿ ಬಿದ್ದಿದೆ. ಇಲ್ಲಿನ ಚಿತ್ರಗಳಲ್ಲಿಯ ವೇಷ ಭೂಷಣಗಳು. ಉದ್ದ ತೋಳಿನ ಅಂಗಿ. ತಲೆಯ ಟೊಪ್ಪಿಗೆ ಮುಂತಾದವುಗಳಲ್ಲದೇ ಚಿತ್ರಶೈಲಿಯೂ ಮರಾಠಾ ಶೈಲಿಯನ್ನು ಹೋಲುವುದು. ಬಹುಶ ಈ ಚಿತ್ರಗಳನ್ನು ಮರಾಠ ಪೇಶ್ವೆಗಳ ಆಸ್ಥಾನದಿಂದ (ಪುಣೆ) ಚಿತ್ರಕಾರರನ್ನು ಕರೆಯಿಸಿಕೊಂಡು ಬರೆಸಿರಬೇಕು. ವರ್ಣದ ಗಡಸುತನ, ಪ್ರಖರತೆ, ರೇಖಾಶೈಲಿಗಳು ಮರಾಠಾ ಶೈಲಿಯನ್ನೇ

---

೧೫೯. ಡಾ. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪುಟ ೯೬

೧೬೦. ವೆಂಕಟರಂಗೋ ಕಟ್ಟಿ : ಧಾರವಾಡ ಜಿಲ್ಲಾ ಗೆಝೆಟೀಯರ್, ಪುಟ ೨೦೬

ಹೋಲುತ್ತವೆ. ಮೈಸೂರಿನ ಟಿಪ್ಪುಸುಲ್ತಾನನು ನರಗುಂದವನ್ನು ೧೭೮೦ ಮತ್ತು ೧೭೮೫ ರಲ್ಲಿ ಎರಡು ಬಾರಿ ವಶಪಡಿಸಿಕೊಂಡಿದ್ದನು. ಮರಾಠರು ಮತ್ತು ನಿಜಾಮನು ಒಂದಾಗಿ ಹೋರಾಡಿ ಟಿಪ್ಪುವಿನಿಂದ ನರಗುಂದವನ್ನು ಬಿಡಿಸಿದರು.[೯೧] ಇಂತಹ ಅನೇಕ ಘಟನೆಗಳಿಂದಾಗಿ ಈ ಯುದ್ಧದ ಚಿತ್ರದಲ್ಲಿ ವಿವಿಧ ಸೈನಿಕರನ್ನು ಅಂದರೆ ಒಂದೂ ಪೋರ್ತುಗೀಜ, ಮುಸ್ಲಿಂ ಸೈನಿಕರನ್ನು ಚಿತ್ರಿಸಿದ್ದಾರೆ.

೪. ನರ್ತಕಿಯರ ಚಿತ್ರಗಳು : ವರಾಹ ಚಿತ್ರದ ಎಡಬಲದಲ್ಲಿ ಇಬ್ಬರು ನರ್ತಕಿಯರ ಚಿತ್ರಗಳನ್ನು ರಚಿಸಿ ಚಿತ್ರಕ್ಕೆ ಸಮತೋಲವನ್ನು ತರಲಾಗಿದೆ. ಈ ನರ್ತಕಿಯರ ಚಿತ್ರಗಳು ದೀರ್ಘವೃತ್ತಾಕಾರದ ಸ್ಥಳದಲ್ಲಿ ರಚಿಸಿದ್ದು ಹಿನ್ನೆಲೆಗೆ ಕೆಂಪು ವರ್ಣ ಬಳಸಲಾಗಿದೆ. ನೃತ್ಯಗಾತಿಯರ ಭಂಗಿಗಳು ಆಕರ್ಷಕವಾಗಿದ್ದು ಎರಡೂ ಬೇರೆ ಬೇರೆ ಶೈಲಿಯಲ್ಲಿವೆ. ಒಬ್ಬಳು ಕೆಂಪು ಸೀರೆ ಉಟ್ಟಿದ್ದರೆ ಇನ್ನೊಬ್ಬಳು ಕಿತ್ತಳೆವರ್ಣದ ಸೀರೆ ಉಟ್ಟಿದ್ದಾಳೆ. ಇಬ್ಬರೂ ನೆಲದ ಮೇಲೆ ನರ್ತಿಸದೇ ಹೂವೊಂದರ ಮೇಲೆ ನರ್ತಿಸುತ್ತಿದ್ದಾರೆ.

೫. ಈಜುಕನ್ಯೆಯರ ಚಿತ್ರ : ಇದರ ಕೆಳಗಿನ ಇನ್ನೊಂದು ಚಿತ್ರವೂ ಆಕರ್ಷಕವಾಗಿದ್ದು ನಾಲ್ವರು ಈಜುವ ಕನ್ನಿಕೆಯರ ಚಿತ್ರವಿದಾಗಿದೆ. ಇದರಲ್ಲಿ ನಾಲ್ಕು ಜನ ಕನ್ಯೆಯರು ನೀರಿನಲ್ಲಿ ಮೀನಿನಂತೆ ಸರಾಗವಾಗಿ ತೇಲಾಡುತ್ತ ಈಜುತ್ತಿದ್ದಾರೆ. ಇವರು ಕೆಂಪು ಬಣ್ಣದ ರವಿಕೆ ತೊಟ್ಟು ಹಸಿರು ವರ್ಣದ ಹಳದಿ ಚುಕ್ಕಿಗಳಿರುವ ಲಂಗ ಧರಿಸಿದ್ದರೆ. ಇದರ ನಡುವೆ ಒಂದು ಆನೆಯ ಚಿತ್ರವಿದ್ದು ಅದರ ತಲೆಯ ಮೇಲೆ ಒಬ್ಬ ಸ್ತ್ರೀ ಬಿಲ್ಲು ಬಾಣಗಳನ್ನು ಧರಿಸಿ ನಿಂತಿದ್ದಾಳೆ. ಇವಳ ಕೆಳಭಾಗದಲ್ಲಿ ತುಂಡರಿಸಿದ ಕೆಲವು ತಲೆ. ಕಾಲು. ಕೈಗಳು ಚಲ್ಲಾಡಿದಂತೆ ಬಿದ್ದಿವೆ.

೬. ಅಲಂಕಾರಿಕ ಗಿಡಗಳ ಚಿತ್ರ : ಈ ಚಿತ್ರ ಪಟ್ಟಿಕೆಯ ಕೆಳಗೆ ಏಳು ಅಲಂಕಾರಿಕ ವೃಕ್ಷಗಳಿದ್ದು ಅವುಗಳ ಅಕ್ಕಪಕ್ಕದಲ್ಲಿ ಹುಲಿಗಳು ನಡೆದು ಬರುತ್ತಿವೆ. ಗಿಡಗಳು ಹಸಿರಿನಿಂದ ಕಂಗೊಳಿಸುತ್ತಿದ್ದು ಅದರಲ್ಲಿ ಹೂಗಳು ಅರಳಿ ನಿಂತಿವೆ ಪಕ್ಷಿಗಳು ಚಿಲಿಪಿಗುಟ್ಟುತ್ತ ಹಾಡುತ್ತಿವೆ. ಹುಲಿಗಳು ಹಳದೀವರ್ಣದ ಮೈ ಬಣ್ಣ ಹೊಂದಿದ್ದು ಚುಕ್ಕೆಯನ್ನು ಹೊಂದಿವೆ. ಗಂಭೀರವಾಗಿ ಗಿಡದ ಕಡೆಗೆ ನಡೆದುಬರುತ್ತಿವೆ. ಈ ಏಳು ವೃಕ್ಷಗಳ ಗುಂಪಿನ ಚಿತ್ರದ ಕೆಳಗಡೆ ಗೋಡೆಯಲ್ಲಿ ಕಿಟಕಿಯೊಂದಿದ್ದು. ಕಿಟಕಿಯ ಎಡಕ್ಕೆ ಪಶುಪತಿಯ ಚಿತ್ರ ಬಲಗಡೆಗೆ ವಿಠ್ಠಲನ ಚಿತ್ರವನ್ನು ರಚಿಸಲಾಗಿದೆ. ಇಲ್ಲಿನ ಉತ್ತಮ ಚಿತ್ರಗಳ ಸಾಲಿಗೆ ಈ ಎರಡೂ ಚಿತ್ರಗಳೂ ಸೇರುತ್ತವೆ. ಶರಭ ಚಿತ್ರಗಳ ಕೆಳಗೆ ಗೋಡೆಯಲ್ಲಿ ಒಂದು ಮಾಡವಿದ್ದು ಆ ಮಾಡದ ಎಡಬಲಗಳಲ್ಲಿ ಅಲಂಕಾರಿಕ ಹೂಗಿಡಗಳನ್ನು ರಚಿಸಿದ್ದಾರೆ. ಎಡಕ್ಕೆ ನಾಲ್ಕು ಬಲಕ್ಕೆ ನಾಲ್ಕು ಅಲಂಕಾರಿಕ ಗಿಡಗಳಿದ್ದು ಒಂದರ ಹಾಗೆ ಒಂದು ಇಲ್ಲ. ಪ್ರತಿಯೊಂದೂ ಬೇರೆ ಬೇರೆಯಾಗಿವೆ. ಅಲಂಕಾರಿಕ ಗಿಡಗಳಲ್ಲಿ ಕೆಲವು ನೆಲದಲ್ಲಿ ಹುಟ್ಟಿದ್ದರೆ ಇನ್ನು ಕೆಲವು ಹೂಕುಂಡದಲ್ಲಿ ಹುಟ್ಟಿದಂತೆ ರಚಿಸಲಾಗಿದೆ. ಹೂ ಕುಂಡದಲ್ಲಿನ ಗಿಡಗಳಲ್ಲಿ ವೈವಿಧ್ಯವಾದ ಹೂಗಳಿದ್ದು ದೊಡ್ಡ ಸಣ್ಣ ಎಸಳುಗಳನ್ನು ಹೊಂದಿವೆ. ಹಳದೀ ಕೆಂಪು ವರ್ಣದಲ್ಲಿವೆ ಹೂಕುಂಡದಲ್ಲಿನ ಗಿಡಗಳಲ್ಲಿ ಇಣಚಿ (ಅಳಿಲು) ಮತ್ತು ಇತರ ವೈವಿದ್ಯ ಪಕ್ಷಿಗಳಿದ್ದರೆ. ನೆಲದಲ್ಲಿ ಹುಟ್ಟಿರುವ ಸೈಪ್ರಸ್ ತರಹದ ವೃಕ್ಷಗಲ್ಲಿ ಮಂಗಗಳು ಚಲ್ಲಾಟವಾಡುತ್ತಿವೆ. ಈ ಅಲಂಕಾರಿಕ ವೃಕ್ಷಗಳೇ ಒಂದು ನಕ್ಷೆ ರೂಪಗಳಂತಿದ್ದರೂ ಮತ್ತೆ ಈ ವೃಕ್ಷಗಳ ಚಿತ್ರಗಳ ಚೌಕಟ್ಟಿಗೆ ಹೂಬಳ್ಳಿಯ ನಕ್ಷೆಯನ್ನು ರಚಿಸಲಾಗಿದೆ. ಚೌಕಟ್ಟಿನ ಹೂಬಳ್ಳಿಯ ನಕ್ಷೆಯಲ್ಲಿ ಕೆಂಪು ಹೂಗಳು, ಹಳದಿ. ಬಿಳಿ ವರ್ಣದ ಹೂಗಳಿವೆ. ಇವು ಹೆಚ್ಚಾಗಿ ನಾಲ್ಕು ಪಕಳೆಗಳ ಹೂವಾಗಿವೆ. ಈ ಅಲಂಕಾರಿಕ ಗಿಡಗಳಲ್ಲದೇ

---

೯೧. ವೆಂಕಟರಂಗೋ ಕಟ್ಟಿ : ಧಾರವಾಡ ಜಿಲ್ಲಾ ಗೆಝೆಟೀಯರ್. ಪುಟ ೨೦೬

ಆಯಾ ವಿಷಯಕ್ಕೆ ಪೂರಕವಾಗಿ ಅಲ್ಲಲ್ಲಿ ಅಲಂಕಾರಿಕ ಗಿಡಗಳು, ಹೂಕುಂಡಗಳು, ಎಲೆ ಬಳ್ಳಿಗಳು, ಸುಳವುಗಳು, ಜ್ಯಾಮಿತಿಕ ನಕ್ಷೆಗಳನ್ನು ರಚಿಸಲಾಗಿದ್ದು ಆಯಾ ವಿಷಯದ ವಿವರಣೆ ಮಾಡುವ ಸಂದರ್ಭದಲ್ಲಿ ಅವುಗಳ ಕುರಿತಾಗಿ ಹೇಳಲಾಗಿದೆ. ಅಲ್ಲದೇ ಚಿತ್ರಗಳ ಅಂಚುಗಳಿಗೆ, ಖಾಲಿ ಇದ್ದ ಸ್ಥಳ ತುಂಬಿಸಲೂ ಹೂಬಳ್ಳಿ ನಕ್ಷೆಗಳನ್ನು ಚಿತ್ರಿಸಲಾಗಿದೆ. ಕೆಲವು ಪ್ರಾಣಿಪಕ್ಷಿಗಳ ಚಿತ್ರಗಳೂ ಇಲ್ಲಿ ರಚನೆಯಾಗಿದ್ದು ವಿಷಯಕ್ಕೆ ಪೂರಕವಾಗಿರುವ ಅವುಗಳನ್ನು ಸಾಂದರ್ಭಿಕವಾಗಿ ಅಲ್ಲಲ್ಲಿ ವಿವರಿಸಲಾಗಿದೆ.

ಇಲ್ಲಿಯ ಕೋಣೆಯ ಗೋಡೆಗಳಲ್ಲಿ ಚೌಕ, ಆಯತ, ವೃತ್ತ ಕಮಾನಿನಂತಹ ಸ್ಥಳಗಳನ್ನು ಮಾಡಿಕೊಂಡು ಅದಲ್ಲಿ ಚಿತ್ರರಚಿಸಿದ್ದಾರೆ. ಕೋಣೆಯ ನಾಲ್ಕೂ ಗೋಡೆಗಳಲ್ಲಿ ಚಿತ್ರಗಳಿವೆ. ಎಲ್ಲ ಚಿತ್ರಗಳಿಗೆ ಕೆಂಪು ಹಿನ್ನೆಲೆಯನ್ನು ಕೊಟ್ಟಿದ್ದು ದೂರದಿಂದ ನೋಡಿದಾಗ ವರ್ಣವೇ ಪ್ರಧಾನವಾಗಿ ಕಾಣುವುದು. ಧಾರ್ಮಿಕ ಚಿತ್ರಗಳಲ್ಲಿ ಪಾಂಡುರಂಗನ ಮಹಿಮೆಯನ್ನು ಸಾರುವ ಚಿತ್ರಗಳೇ ಅಧಿಕವಾಗಿದ್ದು, ಈ ಅರಸರು ಪಂಡರಾಪುರದ ವಿಠ್ಠಲನ ಭಕ್ತರಾಗಿದ್ದರೆಂದು ಹೇಳಬಹುದು. ಅರಮನೆಯ ಸಮೀಪವೇ ಇವರ ಆರಾಧ್ಯದೈವ ವೆಂಕಟೇಶ್ವರ ಸ್ವಾಮಿಯ ದೇವಾಲಯವೂ ಇದೆ. ಇಲ್ಲಿನ ಚಿತ್ರಗಳ ವೇಷಭೂಷಣಗಳಲ್ಲಿ ಮರಾಠಾ ಪೇಶ್ವೆಗಳ ಪ್ರಭಾವಾ ಕಾಣುವುದರಿಂದ ಈ ದೊರೆಗಳು ಮರಾಠಾ ಪೇಶ್ವೆಗಳ ಜೊತೆಗೆ ಹೆಚ್ಚಿನ ಸಂಪರ್ಕ ಹೊಂದಿದವರಾಗಿದ್ದರೆಂದು ಹೇಳಬಹುದು. ಒಂದು ಸಂದರ್ಭದಲ್ಲಿ ನರಗುಂದವನ್ನು ವೈರಿಗಳು ವಶಪಡಿಸಿಕೊಂಡಾಗ ಪುಣೆಯ ಮಾಧವರಾವ್ ಪೇಶ್ವೆ ಮತ್ತೆ ನರಗುಂದವನ್ನು ಅದರ ವಾರಸುದಾರರಿಗೆ ದೊರಕಿಸಿಕೊಟ್ಟನು.[೧೭] ಹೀಗೆ ಪೇಶ್ವೆಗಳ ಹೆಚ್ಚಿನ ಸಂಪರ್ಕದಿಂದ ಚಿತ್ರಗಳಲ್ಲಿ ಮರಾಠಾ ಲಕ್ಷಣಗಳು ಕಂಡುಬಂದಿವೆ. ಇಲ್ಲವೆ ಮರಾಠಾ ಕಲಾವಿದರನ್ನೇ ಇಲ್ಲಿಗೆ ಕರೆಯಿಸಿಕೊಂಡೂ ಚಿತ್ರ ಬರೆಸಿರಬಹುದು.

**೫. ನಿಪ್ಪಾಣಿಯ ರಾಜವಾಡೆ ಭಿತ್ತಿ ಚಿತ್ರಗಳು :** ನಿಪ್ಪಾಣಿಯು ಕರ್ನಾಟಕದ ಬೆಳಗಾಂವ ಜಿಲ್ಲೆಯಲ್ಲಿದ್ದು ಮಹಾರಾಷ್ಟ್ರ ರಾಜ್ಯದ ಗಡಿಗೆ ಸಮೀಪದಲ್ಲಿದೆ. ಚಿಕ್ಕೋಡಿ ತಾಲೂಕಿಗೆ ಸೇರಿದ ಈ ಪಟ್ಟಣವು ಆ ಭಾಗದ ವ್ಯಾಪಾರ ಕೇಂದ್ರವಾಗಿದೆ. ನಿಪ್ಪಾಣಿಯಲ್ಲಿರುವ ಒಂದು ಹಳೆಗಾಲದ ರಾಜವಾಡೆಯಲ್ಲಿ ವರ್ಣ ಭಿತ್ತಿಚಿತ್ರಗಳು ಕಂಡುಬಂದಿವೆ. ಈ ವಾಡೆಯು ಹಿಂದೆ ಈ ಸಂಸ್ಥಾನವನ್ನು ಆಳಿದ ದೊರೆಗಳಿಗೆ ಸೇರಿದ್ದಾಗಿದೆ. ಈ ಸಂಸ್ಥಾನವನ್ನು ಆಳಿದ ಮೊದಲ ದೊರೆ (ದೇಸಾಯಿ) ಸಿದ್ದೋಜಿರಾವ್. ಅಪ್ಪಾಸಾಹೇಬ್ ನಿಂಬಾಳಕರ್ ಎಂಬುವವನಿಗೆ. ಈ ಸಂಸ್ಥಾನವು ಆದಿಲ್ ಶಾಹಿ ಸುಲ್ತಾನದಿಂದ ಜಹಗೀರ ಆಗಿ ಬಂದಿತ್ತು. ಈ ಸಂಸ್ಥಾನಕ್ಕೆ ಮೇಲಿಂದ ಮೇಲೆ ಪೇಶ್ವೆಗಳ ಕಾಟ ಇತ್ತು. ೧೮೦೧ ಮತ್ತು ೧೮೦೩ ರಲ್ಲಿ ಪೇಶ್ವೆ ನಿಪ್ಪಾಣಿ ಸಂಸ್ಥಾನದ ಮೇಲೆ ದಂಡೆತ್ತಿಬಂದ. ಕೊನೆಗೆ ಕ್ರಿ. ಶ. ೧೮೦೯ ರಲ್ಲಿ ಪೇಶ್ವೆನಿಗೂ ಈ ಸಂಸ್ಥಾನದ ದೇಸಾಯಿಗೂ ಒಪ್ಪಂದವೇರ್ಪಟ್ಟಿತು. ನಿಪ್ಪಾಣಿ ದೇಸಾಯಿಗೆ ಮಕ್ಕಳಿಲ್ಲದೇ ಹೋಗಲು ಕ್ರಿ. ಶ. ೧೮೩೯ ರಲ್ಲಿ ಈ ಸಂಸ್ಥಾನವನ್ನು ಬ್ರಿಟೀಷರು ತಮ್ಮ ಒಕ್ಕೂಟಕ್ಕೆ ಸೇರಿಸಿಕೊಂಡರು. ಆದರೆ ಇಂದು ಕೂಡಾ, ಈ ವಾಡೆಯಲ್ಲಿ ಅದೇ ರಾಜವಂಶಸ್ಥರಾದ 'ನಿಂಬಾಳ್‌ಕರ ದೇಸಾಯಿ' ಮನೆತನದವರೇ ವಾಸಮಾಡುತ್ತಿದ್ದಾರೆ. ಇಲ್ಲಿನ ಚಿತ್ರಗಳು ಸಂಸ್ಥಾನವನ್ನೂ ಬ್ರಿಟೀಷರು ವಶಪಡಿಸಿಕೊಳ್ಳುವ ಮೊದಲು ಅಂದರೆ ಕ್ರಿ. ಶ. ೧೮೧೦ ರಿಂದ ೧೮೩೯ ರ ನಡುವಿನ ಅವಧಿಯಲ್ಲಿ ಅಂದರೆ ೧೮೨೦ ರ ಸುಮಾರಿನಲ್ಲಿ ರಚಿಸರಬಹುದಾಗಿದೆ.

ಎರಡು ಅಂತಸ್ತುಗಳುಳ್ಳ ಈ ವಾಡೆ ವಿಶಾಲವಾಗಿದೆ. ಎದುರಿನಲ್ಲಿ ವಿಶಾಲ ಚಾವಡಿ, ಅದರ ಬೆನ್ನಿಗೆ ನಾಲ್ಕೂ ಕಡೆಗಳಲ್ಲಿ ಚಾವಡಿ, ಆ ಚಾವಡಿಯಲ್ಲಿ ಹಲವಾರು ಕೋಣೆಗಳು. ಚಾವಡಿ ಮತ್ತು ಕೋಣೆಗಳ ಮೇಲೆ ಅದೇ

---

೧೭. ವೆಂಕಟರಂಗೋ ಕಟ್ಟಿ : ಧಾರವಾಡ ಜಿಲ್ಲಾ ಗೆಝೆಟೀಯರ್, ಪುಟ ೨೦೫

ರೀತಿಯಲ್ಲಿರುವ ಮತ್ತೊಂದು ಅಂತಸ್ತು ಅದು ಕೆಳಗಿನ ಪ್ರತಿರೂಪದಂತಿದೆ. ಹೀಗೆ ಎರಡು ಅಂತಸ್ತುಗಳನ್ನು ಹೊಂದಿದ ವಿಶಾಲ ಕಟ್ಟಡವಾಗಿರುವ ಈ ವಾಡೆ ಮಧ್ಯದಲ್ಲಿ ತೆರೆದ ಅಂಗಳವನ್ನು ಹೊಂದಿದ್ದು ಅದರ ನಡುವೆ ಕುಲದೇವತೆಯಾದ ಅಂಬಾಭವಾನಿಯ ಮಂಟಪವನ್ನು ರಚಿಸಿದ್ದಾರೆ. ವಾಡೆಯ ಕೆಳ ಅಂತಸ್ತುಗಳಲ್ಲಿ ಯಾವುದೇ ಚಿತ್ರಗಳಿಲ್ಲ. ಎಲ್ಲ ಚಿತ್ರಗಳೂ ಮೇಲಂತಸ್ತಿನ ತೆರೆದ ಚಾವಡಿ ಮತ್ತು ಒಳಕೋಣೆಗಳಲ್ಲಿವೆ. ಇಲ್ಲಿಯ ಚಿತ್ರಗಳನ್ನು ಎರಡು ರೀತಿಯಲ್ಲಿ ವಿಂಗಡಿಸಬಹುದು.

I. ಒಳಕೋಣೆಯ ಚಿತ್ರಗಳು

II. ಹೊರಚಾವಡಿಯ ಚಿತ್ರಗಳು

ಒಳಕೋಣೆಗಳಲ್ಲಿ ಸಮತಟ್ಟಾದ ಗೋಡೆಗಳಲ್ಲಿ ಚಿತ್ರಗಳನ್ನು ಬರೆದಿದ್ದರೆ. ಹೊರಗಿನ ಚಾವಡಿಯ ಗೋಡೆಗಳಲ್ಲಿ ಗೂಡುಗಳನ್ನು (ಮಾಡು) ರಚಿಸಿ ಆ ಗೂಡುಗಳಲ್ಲಿ ಚಿತ್ರ ಬರೆಯಲಾಗಿದೆ. ಈ ಗೂಡುಗಳು ಚಿಕ್ಕವು ದೊಡ್ಡವು ಹೀಗೆ ವಿವಿಧ ಅಳತೆಯಲ್ಲಿದ್ದಂತೆ ವಿವಿಧ ಶೈಲಿಗಳಲ್ಲೂ ಇವೆ. ಒಳಕೋಣೆಯ ಚಿತ್ರಗಳೆಂದರೆ ಚಾವಡಿಯ ಗೋಡೆಗೆ ಹೊಂದಿಕೊಂಡಂತಿರುವ ಒಂದು ಶಯ್ಯಾಗಾರವಿದ್ದು ಇದು ರಾಜನ ಮಲಗುವ ಕೋಣೆಯಾಗಿರಬಹುದು. ಇಲ್ಲಿನ ಗೋಡೆಗಳಲ್ಲಿ ಚಿತ್ರಗಳಿವೆ.

***I. ಒಳಕೋಣೆಯ ಚಿತ್ರಗಳು :*** ಚಾವಡಿಗೆ ಹೊಂದಿಕೊಂಡಂತಿರುವ ಶಯ್ಯಾಗರವು ೧೦ x ೧೦ ಅಡಿವಿಶಾಲ ಮತ್ತು ೮ ಅಡಿ ಎತ್ತರವಾದುದಾಗಿದೆ. ಇದು ಒಂದೇ ಬಾಗಿಲನ್ನು ಹೊಂದಿದ್ದು ಕೋಣೆಯ ನಾಲ್ಕೂ ಗೋಡೆಗಳಲ್ಲೂ ನೆಲದಿಂದ ಮೇಲ್ಚಾವಣಿಯ ತನಕ ಚಿತ್ರಗಳನ್ನು ತುಂಬಿಸಿದ್ದಾರೆ. ಗೋಡೆಯನ್ನು ಬೇರೆ ಬೇರೆ ಗಾತ್ರದ ಚೌಕಟ್ಟನ್ನಾಗಿ ವಿಭಾಗಿಸಿ ಮುಖ್ಯವಾಗಿ ಕೃಷ್ಣಕಥಾನಕದ ದೃಶ್ಯಗಳನ್ನು ಬರೆದಿದ್ದಾರೆ. ಇವರ ಜೊತೆ ಕ್ವಚಿತ್ತಾಗಿ ಬೇರೆ ಚಿತ್ರಗಳೂ ಇವೆ.

೧. ಕೃಷ್ಣನು ಮಡದಿಯರೊಡನೆ ಸರಸದಲ್ಲಿರುವುದು : ಇಲ್ಲಿನ ಚಿತ್ರ ಒಂದರಲ್ಲಿ ಕೃಷ್ಣ ತನ್ನ ಇಬ್ಬರು ಮಡದಿಯರೊಡನೆ ಸುಂದರವಾದ ಉದ್ಯಾನದಲ್ಲಿ ಸರಸದಲ್ಲಿ ತೊಡಗಿದ್ದಾನೆ. ಉದ್ಯಾನದಲ್ಲಿ ಅನೇಕ ತರದ ಗಿಡಗಳು, ಹೂಗಳು ಬೆಳೆದಿವೆ. ರತ್ನಗಂಬಳಿಯಂತಿರುವ ವಸ್ತ್ರದ ಮೇಲೆ ಕೃಷ್ಣನು ಕುಳಿತಿದ್ದಾನೆ. ಹಳದೀ ವರ್ಣದ ಧೋತ್ರ ಉಟ್ಟಿದ್ದರೆ. ರಜಪೂತ ಮಾದರಿಯ ಉದ್ದ ನಿಲುವಂಗಿ ತೊಟ್ಟಿದ್ದಾನೆ. ಅಂಗಿಯ ಮೇಲೆ ಕಪ್ಪುವರ್ಣದ ಶಾಲನ್ನು ಹೊದ್ದುಕೊಂಡಿದ್ದಾನೆ. ಈ ಶಾಲು ಆತನ ಕಪ್ಪು ನೀಲವರ್ಣಕ್ಕೆ ಸಮತೋಲ ತಂದುಕೊಟ್ಟಿದೆ. ಕೃಷ್ಣನ ಎದುರಿಗೆ ಒಬ್ಬಳು ಆತನ ಮಡದಿ ಆತನ ಅತ್ಯಂತ ಸಮೀಪದಲ್ಲಿಯೇ ಕುಳಿತಿದ್ದಾಳೆ. ಅವನು ಅವಳ ಮೇಲೆ ಕೈಹಾಕಿ ಸಲ್ಲಾಪಿಸುತ್ತಿದ್ದಾನೆ. ನಾಚಿಕೆ. ಕೌತುಕ. ಉತ್ಕಟತೆಗಳು ಅವಳ ಮುಖಭಾವದಲ್ಲಿ ತುಂಬಿಕೊಂಡಿವೆ. ಇವರಿಬ್ಬರೂ ಸಲ್ಲಾಪದಲ್ಲಿ ತೊಡಗಿದ್ದರೆ ಇನ್ನೊಬ್ಬಳು ಕೃಷ್ಣನ ಹಿಂದೆ ನಿಂತು ಇವರಿಬ್ಬರನ್ನು ಅಚ್ಚರಿಯಿಂದ ನೋಡುತ್ತಿದ್ದಾಳೆ. ಕೃಷ್ಣನು ತನ್ನನ್ನು ಸರಸಕ್ಕೆ ಕರೆದಿಲ್ಲವಲ್ಲ ಏಕೆ ? ಎಂಬ ಅಚ್ಚರಿಯ ಭಾವ ಅವಳ ಮುಖದಲ್ಲಿದೆ. ಈ ಮೂರು ವ್ಯಕ್ತಿಗಳ ಆಕೃತಿಗಳು ಸೂಕ್ಷ್ಮವಾದ ವಿವರಗಳಿಂದ ಕೂಡಿದ್ದು ಅವರ ದೇಹವಿನ್ಯಾಸ ಮತ್ತು ಮುಖಭಾವಗಳು ಚನ್ನಾಗಿ ಪ್ರದರ್ಶಿತವಾಗಿವೆ. ಚಿತ್ರದ ಹಿನ್ನೆಲೆಯವರ್ಣವು ಗಡಸು ಕೆಂಪುವರ್ಣದಿಂದ ಕೂಡಿದೆ.

೨. ಕೃಷ್ಣ ಮತ್ತು ಆತನ ಮಡದಿಯರ ಮತ್ತೊಂದು ಚಿತ್ರ : ಕೃಷ್ಣ ಮತ್ತು ಆತನ ಮಡದಿಯರು ಸರಸದಲ್ಲಿ ತೊಡಗಿರುವ ಇನ್ನೊಂದು ಚಿತ್ರವು ೮ x ೧೦ ಅಂಗುಲ ಅಳತೆಯಲ್ಲಿ ರಚಿಸಿದೆ. ಇದೂ ಸುಂದರ ಉದ್ಯಾನ ಒಂದರ

ಚಿತ್ರವನ್ನು ಕೊಡುತ್ತದೆ. ಹೂಗಿಡಗಳು, ವಿವಿಧ ಬಗೆಯ ಸಸ್ಯಗಳು ಇಲ್ಲಿವೆ. ಉದ್ಯಾನದ ಗೋಡೆಗಳು ಬೂದುವರ್ಣದಲ್ಲಿ ರಚಿಸಿವೆ. ಗೋಡೆಯ ಕಲ್ಲುಗಳನ್ನು ಕೂಡಾ ವಿವರವಾಗಿ ತೋರಿಸಲಾಗಿದೆ.

ಚಿತ್ರದ ಮಧ್ಯದಲ್ಲಿ ಕೃಷ್ಣನು ತನ್ನ ತೊಡೆಯ ಮೇಲೆ ಮಡದಿಯನ್ನು ಕುಳ್ಳಿರಿಸಿಕೊಂಡು ಮುದ್ದಿಸುತ್ತಿದ್ದಾನೆ. ಹಿಂದಿನ ಚಿತ್ರದಲ್ಲಿ ಕೃಷ್ಣನಿಗೆ ಅಂಗಿಯನ್ನು ಚಿತ್ರಿಸಿದ್ದರೆ. ಇಲ್ಲಿ ಅಂಗಿಯನ್ನು ಚಿತ್ರಿಸಿಲ್ಲ. ಸನಿಹದಲ್ಲೇ ಇನ್ನೊಬ್ಬಳು ಮಡದಿ ನಿಂತು ನೋಡುತ್ತಿದ್ದಾಳೆ. ಅವಳ ಮುಖದಲ್ಲಿ ಆಶಾಭಾವ ತುಂಬಿದೆ. ತಾನೂ ಈ ಕ್ರಿಯೆಯಲ್ಲಿ ಪಾಲ್ಗೊಳ್ಳುವುದು ಯಾವಾಗ ಎನ್ನುವುದೇ ಅವಳ ನಿರೀಕ್ಷೆಯಾದಂತೆ ಕಾಣುತ್ತದೆ. ಕೃಷ್ಣನ ಎದುರಿನಲ್ಲಿ ಪನ್ನೀರು, ಪಂಚಪಾತ್ರೆಗಳು, ಹಣ್ಣು ಹಂಪಲು, ಎಲೆ ಅಡಿಕೆಯನ್ನು ಹಾಕಿದ ಪಾತ್ರೆಗಳಿವೆ. ಮತ್ತೊಂದು ಕಡೆಗೆ ಇನ್ನಿಬ್ಬರು ಸ್ತ್ರೀಯರು ನಿಂತಿದ್ದಾರೆ. ಚಿತ್ರದ ಬಲಗಡೆಗೆ ಮೂಲೆಯಲ್ಲಿ ರಾಣಿಯರ ಅಂತಪುರವನ್ನು ತೋರಿಸಿ ಅದರಲ್ಲಿರುವ ಉನ್ನತ ಸ್ತ್ರೀಯರು, ಸಖಿಯರನ್ನೂ ಸೂಚ್ಯವಾಗಿ ತೋರಿಸಿದ್ದಾರೆ. ಈ ಅಂತಪುರದ ಗೋಡೆಯು ತೆಳು ಹಳದೀ ವರ್ಣದಲ್ಲಿದೆ. ಇಲ್ಲಿಯೂ ಗೋಡೆಯ ಕಲ್ಲುಗಳನ್ನು ತೋರಿಸಲಾಗಿದೆ. ನೆಲದ ಭಾಗವನ್ನು ತೆಳು ಕೆಂಪಿನಿಂದ ತೋರಿಸಿದರೆ ಓಣಿಲೆಯು ಕಡು ಕೆಂಪಿನಿಂದ ಕೂಡಿದೆ.

೩. ಓಕುಳಿ ಉತ್ಸವದ ದೃಶ್ಯ (ವಸಂತೋತ್ಸವದ ದೃಶ್ಯ) : ಇನ್ನೊಂದು ಚಿತ್ರದಲ್ಲಿ ವಸಂತೋತ್ಸವದಲ್ಲಿ ಬಣ್ಣ ಆಡುತ್ತಿರುವ ದೃಶ್ಯವಿದೆ. ಇದರಲ್ಲಿ ಒಂದು ಉದ್ಯಾನವಿದ್ದು ಅದರಲ್ಲಿ ಕೃಷ್ಣ ಮತ್ತು ಗೋಪಿಕಾ ಸ್ತ್ರೀಯರಲ್ಲದೇ ಅನೇಕ ಜನರೂ ಬಣ್ಣದಾಟದಲ್ಲಿ ಪಾಲ್ಗೊಂಡಿದ್ದಾರೆ. ಸುಂದರವಾದ ಉದ್ಯಾನಕ್ಕೆ ಬಣ್ಣದಾಟದಿಂದ ಇನ್ನೂ ಹೆಚ್ಚಿನ ಕಳೆ ಬಂದಿದೆ. ಉದ್ಯಾನದ ಎಡಬಲಗಳಲ್ಲಿ ಮತ್ತು ಹಿಂದುಗಡೆಗೆ ರಾಣಿಯರು ವಾಸಿಸುವ ಜನಾನಾಗಳಿವೆ. ರಾಣಿಯರು ಇತರ ಸಖೀಜನರು ಕಿಡಕಿಯಿಂದ, ಬಾಲ್ಕನಿಯಿಂದ ಬಣ್ಣದಾಟದ ಸಂಭ್ರಮ ನೋಡುತ್ತಲಿದ್ದಾರೆ. ನಡುವಿನ ವಿಶಾಲ ಅಂಗಳದಲ್ಲಿ ಮಧ್ಯದಲ್ಲಿ ತಾವರೆಯ ಮೇಲೆ ಕೃಷ್ಣನು ನಿಂತಿದ್ದಾನೆ. ತನ್ನ ಸಮೀಪ ಬಂದ ಗೋಪಿಕಾಸ್ತ್ರೀ ಒಬ್ಬಳಿಗೆ ಅವಳ ಕೈಹಿಡಿದು ಬಣ್ಣ ಹಚ್ಚುತ್ತಿದ್ದಾನೆ. ಆತನ ಇನ್ನೊಂದು ಕೈಯಲ್ಲಿ ಬಣ್ಣ ಸಿಡಿಸುವ ಪಿಚಕಾರಿ ಇದೆ. ಅಂಗಳದ ನೆಲ ಬಣ್ಣದಾಟದ ಪ್ರಭಾವದಿಂದ ಕೆಂಪು, ಹಳದಿ, ನೀಲಿ ಮುಂತಾಗಿ ವರ್ಣಮಯವಾಗಿ ಕಾಣುತ್ತಲಿದೆ. ಕೃಷ್ಣನ ಮುಂದೆ, ಒಂದೆ ಪಕ್ಕದಲ್ಲಿ ಓಗೆ ಉದ್ಯಾನದ ತುಂಬ ಹಲವು ಸ್ತ್ರೀಯರು ಬಣ್ಣದಾಟದಲ್ಲಿ ತೊಡಗಿದ್ದಾರೆ. ದೊಡ್ಡ ದೊಡ್ಡ ಪಾತ್ರೆಗಳಲ್ಲಿ ಬಣ್ಣದ ನೀರನ್ನು ತುಂಬಿಸಿಕೊಂಡು ಪಿಚಕಾರಿಗಳಿಂದ ಆ ನೀರನ್ನು ಒಬ್ಬರ ಮೇಲೊಬ್ಬರು ಎರಚುತ್ತಿದ್ದಾರೆ. ಅವರು ತಮ್ಮ ತಮ್ಮಲ್ಲಿ ಬಣ್ಣ ಎರಚುತ್ತಿರುವರಲ್ಲದೇ ಬಿಂದಿಗೆಯನ್ನೋ, ಬುಟ್ಟಿಯನ್ನೋ ಹೊತ್ತುಕೊಂಡು ನಡೆವವರು, ಆಕಸ್ಮಿಕವಾಗಿ ಅಲ್ಲಿ ಬಂದವರಿಗೆ, ನೋಡಲು ನಿಂತ ಜನರಿಗೂ ಬಣ್ಣ ಎರಚುತ್ತಿದ್ದಾರೆ.

ಇನ್ನೂ ಕೆಲವರು ವಸಂತನೃತ್ಯದಲ್ಲಿ ತೊಡಗಿದ್ದಾರೆ. ಒಬ್ಬಳು ತಂಬೂರಿ ಮೀಟಲು ತೊಡಗಿದ್ದರೆ, ಮತ್ತೊಬ್ಬಳು ಸಾರಂಗ ನುಡಿಸುತ್ತಿದ್ದಾಳೆ, ಮುಗದೊಬ್ಬಳು ಮೃದಂಗ ಬಾರಿಸುತ್ತಿದ್ದಾಳೆ. ಇವರ ವಾದ್ಯದ ಗತ್ತಿನ ತಾಳಕ್ಕೆ ಮತ್ತೋರ್ವಳು ನರ್ತಿಸುತ್ತಿದ್ದಾಳೆ. ಸುಮಾರು ಮುವ್ವತ್ತಕ್ಕೂ ಹೆಚ್ಚು ಮನುಷ್ಯಾಕೃತಿಗಳಿಂದ ಕೂಡಿದ ಈ ಚಿತ್ರವು ಉತ್ತಮ ಸಂಯೋಜನೆಯಿಂದ ಕೂಡಿದೆ. ಉದ್ಯಾನ, ಅದರ ಹಿಂದಿನ ರಾಜಪರಿವಾರದವರ ನಿವಾಸಗಳಿರುವ ಪ್ರದೇಶ, ಚಿತ್ರದ ಮುಂಭಾಗಗಳನ್ನು ಪ್ರತ್ಯೇಕಿಸುವಲ್ಲಿ ಕಲಾವಿದನ ಸಂಯೋಜನಾ ಜಾಣ್ಮೆ ಎದ್ದು ಕಾಣುವುದು. ಪಿಚಕಾರಿಯಿಂದ ಚಿಮ್ಮುವ ಬಣ್ಣದ ನೀರಿನ ಎಳೆತಗಳು ಸ್ವಲ್ಪ ಪ್ರಖರವೆನಿಸಿದರೂ ವಿಷಯಕ್ಕೆ ಪೂರಕವಾಗಿವೆ.

೪. ಕೃಷ್ಣನ ಸರಸದ ಚಿತ್ರ : ಕೃಷ್ಣನಿಗೆ ಸಂಬಂಧಿಸಿದ ಇನ್ನೊಂದು ಚಿತ್ರದಲ್ಲಿ ಅರಮನೆಯ ಅಂತಪುರದ ಒಳಗಿನ ನೋಟವನ್ನು ಒದಗಿಸುವ ಚಿತ್ರವೊಂದಿದೆ. ಇದರಲ್ಲಿ ಕೃಷ್ಣನು ಒಬ್ಬಳು ಸ್ತ್ರೀಯೊಡನೆ ಸರಸದಲ್ಲಿ ತೊಡಗಿದ್ದಾನೆ. ಆತನ ಅಕ್ಕಪಕ್ಕದಲ್ಲಿ ಇನ್ನಿಬ್ಬರು ಸಖಿಯರೂ ಇದ್ದಾರೆ. ಚಿತ್ರದಲ್ಲಿ ನಾಲ್ಕೂ ದಿಕ್ಕಿಗೂ ಕಪ್ಪು ಹಾಗೂ ಕಂದು ವರ್ಣದ ಗೋಡೆಯನ್ನು ರಚಿಸಿ ಅಂತಪುರದ ಒಳಗಿನ ಭಾವನೆ ಬರುವಂತೆ ಮಾಡಿದ್ದಾರೆ. ಮೇಲಿನ ಗೋಡೆಯನ್ನು ಕಂದು ಬಣ್ಣದಲ್ಲಿ ರಚಿಸಿದ್ದರೆ ಕೆಳಗೋಡೆಯನ್ನು ಕಪ್ಪು ವರ್ಣದಲ್ಲಿ ರೂಪಿಸಿದ್ದಾರೆ. ಗೋಡೆಯಲ್ಲಿ ಕಲ್ಲುಗಳನ್ನೂ, ಕಮಾನುಗಳನ್ನೂ ತೋರಿಸಲಾಗಿದೆ. ಅಂತಪುರದ ಕೋಣೆಯ ಒಳಭಾಗವನ್ನು ಕಡುಕೆಂಪಿನ ವರ್ಣದಿಂದ ತುಂಬಲಾಗಿದೆ. ಇದುವೇ ಚಿತ್ರದ ಹಿನ್ನೆಲೆವರ್ಣವೂ ಆಗಿದೆ. ಕೋಣೆಯ ಮಧ್ಯದಲ್ಲಿ ಒಂದು ಮಂಚದಮೇಲೆ ಕೃಷ್ಣನೂ ಆತನ ಮಡದಿಯೂ ಇದ್ದಾರೆ. ಕೃಷ್ಣನು ಮಡದಿಯನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಸರಸದಲ್ಲಿ ತೊಡಗಿದ್ದಾನೆ. ಕೃಷ್ಣನು ತನ್ನೆರಡೂ ಕೈಗಳಿಂದ ಅವಳನ್ನು ತಬ್ಬಿಹಿಡಿದಿದ್ದಾನೆ. ಕೃಷ್ಣನ ತೋಳ ಬಂಧನದಲ್ಲಿ ಆತನ ತೊಡೆಯ ಮೇಲಿಂದ ಎದ್ದು ಹೊರನಡೆಯುತ್ತಿದ್ದಾಳೆ. ಅವಳಿಗೆ ಪಕ್ಕದಲ್ಲಿಯೇ ನಿಂತ ಸಖಿಯೊಬ್ಬಳು, ಅವಳ ಎರಡೂ ಕೈಗಳನ್ನು ಹಿಡಿದು ಮೇಲೆಬ್ಬಿಸಿ ಸಹಾಯ ಮಾಡುತ್ತಿದ್ದಾಳೆ. ಬಲಕ್ಕೆ ಇನ್ನೊಬ್ಬಳು ಏನೋ ವಸ್ತು ತಂದು ಕೊಡುತ್ತಿದ್ದಾಳೆ. ಇವಳು ಹಸಿರು ಬಣ್ಣದ ಸೀರೆ ತೊಟ್ಟು ತೆಳುಕೆಂಪು ವರ್ಣದ ಕುಪ್ಪಸ ತೊಟ್ಟಿದ್ದಾಳೆ. ಇನ್ನೊಬ್ಬಳು ಸಖಿ ತೆಳುಕೆಂಪು ವರ್ಣದ ಸೀರೆ ತೊಟ್ಟು ಹಸಿರು ವರ್ಣದ ಕುಪ್ಪಸ ತೊಟ್ಟಿದ್ದಾಳೆ. ಕೃಷ್ಣನು ನೀಲವರ್ಣದವನಿದ್ದು ಹಳದಿ ಪಂಚೆ ಉಟ್ಟಿದ್ದಾನೆ. ಆತನ ಮಡದಿಯು ಕೂದಲನ್ನು ಸುಂದರವಾಗಿ ಜಡೆ ಹಾಕಿಕೊಂಡಿದ್ದು ಸಖಿಯರು ತುರುಬು ಕಟ್ಟಿದ್ದಾರೆ. ಕೃಷ್ಣನ ಮೈಯ ಕಪ್ಪು ನೀಲವರ್ಣ ಮಂಚದ ಅದೇವರ್ಣ, ಬಲಗಡೆಯ ಸಖಿಯ ದಟ್ಟ ಹಸಿರು ಸೀರೆ ವರ್ಣ, ಎಡಗಡೆ ಸಖಿಯ ಕುಪ್ಪಸದ ಅದೇ ವರ್ಣ ಚಿತ್ರಕ್ಕೆ ಸಮತೋಲವನ್ನು ತಂದಿವೆಯಲ್ಲದೇ ಹಿತವಾದ ಹೊಂದಾಣಿಕೆಯನ್ನೂ ನೀಡಿವೆ. ಈ ಚಿತ್ರದಲ್ಲಿ ಕಲಾವಿದ ಆಕೃತಿಗಳಲ್ಲಿ ದುಂಡುತನವನ್ನು ತರಲೂ ಪ್ರಯತ್ನಿಸಿದಂತೆ ಕಾಣುವುದು. ಕೃಷ್ಣನ ಬಲಗೈ, ಎಡಗಡೆಯ ಸಖಿಯ ಮುಂಚಾಚಿದ ಎರಡೂ ಕೈಗಳನ್ನು ಚಿತ್ರಿಸಿರುವುದನ್ನು ನೋಡಿದರೆ ಆ ಪ್ರಯತ್ನ ಮಾಡಿದ್ದಾನೆ. ಎನಿಸುತ್ತದೆ. ಚಿತ್ರವು ಉತ್ತಮ ಮಟ್ಟದ್ದಿದ್ದು ವರ್ಣ ಹೊಂದಾಣಿಕೆಯೂ ಚನ್ನಾಗಿದೆ, ಆದರೆ ಕೃಷ್ಣನ ಮಂಚದ ಮುಂದಿರುವ ಕೆಲವು ಪಾತ್ರೆಗಳನ್ನು ಮಾತ್ರ ಯಾರೋ ಅದೇ ತಾನೇ ಚಿತ್ರಬರೆಯಲು ಕಲಿತ ವಿದ್ಯಾರ್ಥಿ ಚಿತ್ರಿಸಿದಂತೆ ಕಂಡುಬರುತ್ತವೆ.

೫. ಯಜ್ಞದ ದೃಶ್ಯ : ಇಲ್ಲಿನ ಚಿತ್ರ ಒಂದು ಯಾವುದೋ ಯಾಗ (ಯಜ್ಞ) ಒಂದರ ದೃಶ್ಯವಾಗಿದೆ. ಯಜ್ಞದಲ್ಲಿ ತೊಡಗಿರುವ ಋಷಿಗಳು, ಅದನ್ನು ಮಾಡಿಸುತ್ತಿರುವ ರಾಜ, ಎಲ್ಲರೂ ಆಕರ್ಷಕವಾಗಿ ಚಿತ್ರಿತರಾಗಿದ್ದಾರೆ. ಚಿತ್ರದ ಹಿನ್ನೆಲೆಯವರ್ಣವು ಕೆಂಪಿನಿಂದ ಕೂಡಿದೆ. ಚಿತ್ರದ ಮುಂಭಾಗದಲ್ಲಿ ಒಂದು ಮಂಟಪದ ಕೆಳಗೆ ಕಿರೀಟಧರಿಸಿದ, ದಾಡಿಬಿಟ್ಟ ದೊರೆಯೊಬ್ಬ ನಿಂತಿದ್ದಾನೆ. ಅವನ ಮುಂದೆ ಒಂದೇ ಬಗೆಯ ಧೋತ್ರ, ಉತ್ತರೀಯ, ಕಿರೀಟವನ್ನು ಧರಿಸಿದ ಐವರು ರಾಜಕುಮಾರರು ಕೈಯೊಡ್ಡಿ ನಿಂತಿದ್ದಾರೆ. ಈ ಯಾಗ ನೋಡಲು ಬಂದ ಜನಸಮುದಾಯವನ್ನು ಮಂಟಪದ ಮೇಲೆ ಎಡಬಲಗಳಲ್ಲಿ ಸಾಲಾಗಿ ಚಿತ್ರಿಸಿದ್ದಾರೆ. ತೀರ ಮೇಲಣ ಸಾಲಿನಲ್ಲಿ ಬಲಗಡೆಗೆ ಹಲವು ರಾಜಕುಮಾರರು ಸಾಲಾಗಿ ಕುಳಿತಿದ್ದಾರೆ. ಅವರ ಬಲಗಡೆಗೆ ಯಾಗಕ್ಕೆ ಆಗಮಿಸಿದ ಋಷಿಗಳು, ಸಾಧು ಸಂತರು ಇದ್ದಾರೆ. ಎರಡನೆಯ ಸಾಲಿನಲ್ಲಿ ಅರಸರೂ ಮತ್ತೊಂದು ಕಡೆ ಇನ್ನೂ ಕೆಲವು ಸಾಧು ಸಂತರು ಕುಳಿತಿದ್ದಾರೆ. ಮಂಟಪದ ಕೆಳಗಿನ ಎರಡು ಸಾಲುಗಳಲ್ಲಿ ಋಷಿಮುನಿಗಳು ಯಾಗಕ್ಕೆ ಬಂದ ಅನೇಕ ಜನರನ್ನೂ ಒಬ್ಬರ ಹಿಂದೆ ಒಬ್ಬರಂತೆ ಸಾಲಾಗಿ ಚಿತ್ರಿಸಿದ್ದಾರೆ. ಸಾಲು ಸಾಲುಗಳಲ್ಲಿ ರಚಿಸಿದ ನೂರಾರು ಜನರನ್ನು ವಿವಿಧ ವರ್ಣದ ಉಡುಗೆತೊಡುಗೆಗಳಲ್ಲಿ ವಿವಿಧ ಮೈಬಣ್ಣಗಳಲ್ಲಿ ಚಿತ್ರಿಸಿದ

ರೀತಿ ಕಲಾವಿದನ ಸಹನೆ, ಜಾಣ್ಮೆ, ಕುಶಲತೆಗಳನ್ನು ತೋರಿಸುತ್ತದೆ. ಚಿತ್ರಗಳು ಚಿಕ್ಕಪ್ರಮಾಣದವಾಗಿದ್ದರೂ (೨ ಇಂಚು) ಅವುಗಳನ್ನು ಅತ್ಯಂತ ಸೂಕ್ಷ್ಮವಿವರಗಳಿಂದ ರೂಪಿಸಿದ್ದಾರೆ. ಚಿಕ್ಕಪ್ರಮಾಣದ ಆಕೃತಿಗಳಲ್ಲೇ ಮುಖಭಾವವನ್ನು ತೋರಿಸುವ ಪರಿ ಆಶ್ಚರ್ಯ ತರಿಸುತ್ತದೆ. ವರ್ಣವಿನ್ಯಾಸದಿಂದಲೂ ಈ ಕೃತಿ ಉತ್ತಮವಾಗಿದೆ.

೬. ಕೃಷ್ಣನ ಮಗುವಿನ ಜನನದ ದೃಶ್ಯ (ಪುತ್ರೋತ್ಸವ) : ಇಲ್ಲಿನ ಒಂದು ವಿಶಾಲವಾದ ಚಿತ್ರವು ಕೃಷ್ಣನ ಪುತ್ರಜನನವನ್ನು, ಅದರ ಸಂಭ್ರಮ ಸಡಗರವನ್ನು ಬಿಂಬಿಸುವ ಚಿತ್ರವಾಗಿದೆ. ಇದು ೮ x ೮ ಅಡಿಗಳಷ್ಟು ವಿಶಾಲವಾಗಿದ್ದು, ಕೋಣೆಯ ಒಳಭಾಗದ ಒಂದು ಬದಿಯ ಗೋಡೆಯನ್ನು ಪೂರ್ತಿಯಾಗಿ ಆವರಿಸಿದೆ. ಈ ಚಿತ್ರಕ್ಕೆ ಹಿನ್ನೆಲೆಯಾಗಿ ಕಂದು, ಕೆಂಪು, ಹಳದಿ ವರ್ಣಗಳನ್ನು ಬಳಸಿದ್ದಾರೆ. ಮೇಲ್ಭಾಗಕ್ಕೆ ಕಂದು ಹಿನ್ನೆಲೆ ಬಳಸಿದ್ದರೆ, ಮಧ್ಯಭಾಗಕ್ಕೆ ಕೆಂಪು, ಕೆಳಭಾಗಕ್ಕೆ ಹಳದಿ ಹಿನ್ನೆಲೆ ಲೇಪಿಸಿದ್ದಾರೆ. ದೂರದಿಂದ ನೋಡಿದಾಗ ಇಡೀ ಗೋಡೆಯು ಮೂರು ವರ್ಣಗಳ ಪಟ್ಟಿಗಳಂತೆ ಕಂಡುಬರುವುದು. ಸಮೀಪದಿಂದ ವೀಕ್ಷಿಸಿದಾಗ ಅರಮನೆಯ ಭಾಗಗಳು, ಅಂತಪುರದಲ್ಲಿ ಇರುವ ರಾಣಿಯರು ಸಖಿಯರು, ಅಲ್ಲಿರುವ ಋಷಿಗಳು, ಅರಸು ಕುವರಿಯರು ಅರಮನೆಯ ತೆರೆದ ಚಾವಡಿಗಳು, ವಿವಿಧ ಕೋಣೆಗಳು ಚಿತ್ರಿಸಿದ್ದು ಕಂಡು ಬರುತ್ತದೆ. ಅರಮನೆಯ ಆವರಣದಲ್ಲಿ ಉದ್ಯಾನ ಚಿತ್ರಿಸಿದ್ದೂ ಕಾಣುವುದು.

ಈ ಚಿತ್ರದ ಕೆಳಗಿನ ಭಾಗದಲ್ಲಿ ನಾಲ್ವರು ದಾಸಿಯರು ಉದ್ಯಾನದಲ್ಲಿ ದೂರದಲ್ಲಿ ವಿವಿಧ ಕೆಲಸಗಳಲ್ಲಿ ತೊಡಗಿದ್ದಾರೆ. ಅರಮನೆಯ ಮೊದಲ ಅಂತಸ್ತಿನಲ್ಲಿರುವ ದೃಶ್ಯದಲ್ಲಿ ಒಂದು ಭಾಗದಲ್ಲಿ ಕೃಷ್ಣ ಕುಳಿತುಕೊಂಡಿದ್ದಾನೆ. ಅವನ ಮುಂದೆ ಚಾವಡಿಯುದ್ದಕ್ಕೂ ಅಂತಪುರದ ಮಹಿಳೆಯರು ಸಂಭ್ರಮದಲ್ಲಿದ್ದಾರೆ.

ಎರಡನೆಯ ಅಂತಸ್ತಿನಲ್ಲಿಯೂ ಕೃಷ್ಣನ ಚಿತ್ರವಿದ್ದು ಅಲ್ಲಿ ಕೃಷ್ಣನ ಜೊತೆಗೆ ಒಬ್ಬ ಋಷಿ ಆಸೀನನಾಗಿದ್ದಾನೆ. ಅವರಿಬ್ಬರೂ ಏನೋ ಸಂಭಾಷಣೆಯಲ್ಲಿ ತೊಡಗಿದಂತಿದೆ. ಬಹುಶ ಮಗುವಿನ ಜನ್ಮವಾಗಿರುವುದರಿಂದ ಋಷಿಗಳು ಅದರ ಜನ್ಮಕುಂಡಲಿ ಮುಂತಾದವುಗಳಬಗ್ಗೆ ಕೃಷ್ಣನಿಗೆ ಹೇಳುತ್ತಿರಬಹುದು. ಇಲ್ಲಿ ಅನೇಕ ಸಖಿಯರೂ ಚಿತ್ರಿತರಾಗಿದ್ದಾರೆ. ಇಲ್ಲಿಯೇ ಬಲಗಡೆಗೆ ಮೂಲೆಯಲ್ಲಿ ಮಂಚದ ಮೇಲೆ ಮಲಗಿಕೊಂಡಿರುವ ಬಾಣಂತಿ, ಕೂಸನ್ನು ಎತ್ತಿ ಆಡಿಸುತ್ತಿರುವ ಸಖಿಯರು, ಬಾಣಂತಿಗೆ, ಮಗುವಿಗೆ ಉಪಚರಿಸಲು ಬಂದ ಇತರ ಸಖಿಯರು ಚಿತ್ರಿತರಾಗಿದ್ದಾರೆ. ತೀರ ಮೇಲಣ ಅಂತಸ್ತಿನಲ್ಲಿ ತೆರೆದ ಚಾವಡಿಯಲ್ಲಿ ಕೃಷ್ಣನು ಒಬ್ಬ ಸ್ತ್ರೀಯೊಡನೆ ಸಂಭಾಷಣೆಯಲ್ಲಿ ತೊಡಗಿದ್ದಾನೆ. ಅವರ ಬಲಕ್ಕೆ ಹಲವು ಸ್ತ್ರೀಯರು ಜತೆ ಜತೆಯಾಗಿ ಮಾತನಾಡುತ್ತಲಿದ್ದಾರೆ. ಇಲ್ಲಿಯೇ ಮತ್ತೊಂದು ಕಡೆಗೆ ಋಷಿಯೋರ್ವನು ಆಸನದಲ್ಲಿ ಕುಳಿತಿದ್ದು ಹಲವು ಸ್ತ್ರೀಯರು ಉಪಚರಿಸುತ್ತಿದ್ದಾರೆ. ಒಂದು ಘಟನೆಯನ್ನು ಬೇರೆ ಬೇರೆ ದೃಶ್ಯಗಳಾಗಿ ವಿಂಗಡಿಸಿ ರಚಿಸುವ ಪರಿಯನ್ನು ಇಲ್ಲಿ ಕಾಣಬಹುದು.

೭. ಕೃಷ್ಣ ಮತ್ತು ಆತನ ಮಡದಿಯರ ಇನ್ನುಳಿದ ಸರಸದ ಚಿತ್ರಗಳು : ಈ ಕೋಣೆಯು ಶಯನಗೃಹವಾಗಿರುವುದರಿಂದ ಹೆಚ್ಚಾಗಿ ಶೃಂಗಾರಕ್ಕೆ, ಸರಸಕ್ಕೆ ಸಂಬಂಧ ಪಟ್ಟ ಚಿತ್ರಗಳೇ ಅಧಿಕವಾಗಿವೆ. ಈಗ ಮೇಲೆ ಹೇಳಲಾದ ಚಿತ್ರಗಳಲ್ಲದೇ ಕೃಷ್ಣನು ಮಂಚದಮೇಲೆ ಕುಳಿತು ಮಡದಿಯರ ಜೊತೆಗೆ ಕಾಮಕೇಳಿಯಲ್ಲಿ ತೊಡಗಿದ ದೃಶ್ಯಗಳು, ಸರಸಸಲ್ಲಾಪದಲ್ಲಿರುವ ಚಿತ್ರಗಳೂ ಇಲ್ಲಿ ರಚನೆಯಾಗಿವೆ. ಒಂದರಲ್ಲಿ ಕೃಷ್ಣ ಮಡದಿಯನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಮುದ್ದಿಸುತ್ತಿದ್ದರೆ, ಇನ್ನೊಂದರಲ್ಲಿ ಅವಳ ಬೆನ್ನ ಹಿಂದಿನಿಂದ ಕೈಗಳನ್ನು ಮುಂದೆ ತಂದು ಅವಳ ಸ್ತನಗಳನ್ನು ಮರ್ದಿಸುತ್ತಿದ್ದಾನೆ. ಮಡಿಯ ಜೊತೆ ಸರಸ ಸಂಭಾಷಣೆಯಲ್ಲಿರುವುದು, ಶೃಂಗಾರ ಚೇಷ್ಟೆಗಳಿಂದ ಅವಳನ್ನು ಕೆರಳಿಸುವುದು ಮುಂತಾದ ಕ್ರಿಯೆಗಳಲ್ಲಿ ತೊಡಗಿದ ಚಿತ್ರಗಳಿವೆ.

ಕೋಣೆಯ ಒಳಗಿನ ಈ ಚಿತ್ರಗಳು ಸಾಮಾನ್ಯವಾಗಿ ಕಡುಕೆಂಪು ವರ್ಣದ ಹಿನ್ನೆಲೆಯನ್ನು ಹೊಂದಿವೆ. ಹೆಚ್ಚಾಗಿ ಪ್ರಖರವರ್ಣಗಳನ್ನೇ ಬಳಸಲಾಗಿದೆ. ಅಲ್ಲಲ್ಲಿ ಚಿತ್ರಕ್ಕೆ ನೆರಳು ಬೆಳಕಿನ ಪರಿಣಾಮ ತರಲುಪ್ರಯತ್ನಿಸಲಾಗಿದೆ. ಹೊರಚಾವಡಿಯ ಚಿತ್ರಕ್ಕೆ ಹೋಲಿಸಿದರೆ ಈ ಚಿತ್ರಗಳ ಹೊರ ರೇಖೆಗಳು ದಪ್ಪವೆನಿಸುತ್ತವೆ. ಹೊರ ರೇಖೆಗಳಿಗೆ ನೀಲಿ, ಕೆಂಪು. ಕಪ್ಪು ವರ್ಣಗಳನ್ನು ಬಳಸಲಾಗಿದೆ. ಚಿತ್ರಗಳೆಲ್ಲವೂ ಕೃಷ್ಣ ಕಥಾನಕಕ್ಕೆ ಸಂಬಂಧಿಸಿದವುಗಳಾಗಿವೆ. ಕೆಂಪು, ಹಸಿರು, ಹಳದಿ. ಕಪ್ಪು ಮುಖ್ಯವಾಗಿ ಇಲ್ಲಿ ಬಳಸಲಾಗದ ವರ್ಣಗಳಾಗಿವೆ.

***II. ಹೊರಚಾವಡಿಯ ಚಿತ್ರಗಳು :*** ನಿಪ್ಪಾಣಿಯ ಈ ವಾಡೆಯ ಮೇಲಿನ ಅಂತಸ್ತಿನಲ್ಲಿ ಮೂರುಕಡೆ ಗೋಡೆಯುಳ್ಳ ತೆರೆದ ಚಾವಡಿ ಇದೆ. ಈ ತೆರೆದ ಚಾವಡಿಯ ಹಿಂದಿನ ಗೋಡೆಗೆ ಹೊಂದಿಕೊಂಡೇ ಶಯ್ಯಾಗಾರವಿದೆ. ಶಯ್ಯಾಗಾರದ ಹೊರಗಿನ ಈ ತೆರೆದ ಚಾವಡಿಯಲ್ಲಿ ಮೂರು ಕಡೆಯ ಗೋಡೆಗಳಲ್ಲೂ ಮಾಡುಗಳನ್ನು ರಚಿಸಿ ಅದರಲ್ಲಿ ಚಿತ್ರಗಳನ್ನು ಬರೆಯಲಾಗಿದೆ. ಎಡಬಲದ ಗೋಡೆಯಲ್ಲಿರುವ ಮಾಡುಗಳಲ್ಲಿಯ ಚಿತ್ರಗಳು ನಾಶವಾಗಿಹೋಗಿವೆ. ಶಯ್ಯಾಗರಕ್ಕೆ ಹೊಂದಿಕೊಂಡಿರುವ ಹಿಂದಿನ ಗೋಡೆಯಲ್ಲಿರುವ ಗೂಡುಗಳಲ್ಲಿ ಮಾತ್ರ ಈಗ ಚಿತ್ರಗಳು ಅಲ್ಪಸ್ವಲ್ಪ ಉಳಿದುಕೊಂಡಿವೆ. ಇಲ್ಲಿ ಗೋಡೆಯಲ್ಲಿ ಅಲಂಕಾರಿಕ ಮಾಡುಗಳನ್ನು ರಚಿಸಿ ಅವುಗಳ ಸುತ್ತಲೂ ಮತ್ತೆ ಚಿಕ್ಕ ಚಿಕ್ಕ ಮಾಡುಗಳನ್ನು ರಚಿಸಿ ಅವುಗಳಲ್ಲೂ ಚಿತ್ರ ಬರೆದಿದ್ದಾರೆ. ಮಧ್ಯದಲ್ಲಿರುವ ಮುಖ್ಯ ಮಾಡುಗಳು ೨ x ೩ ಅಡಿಗಳ ಅಳತೆಯಲ್ಲಿದ್ದು ಚಿತ್ರಬರೆದ ಅವುಗಳ ಒಳಭಾಗದ ಭಿತ್ತಿಯು ೧ x ೨ ಅಡಿಗಳ ಅಳತೆಯನ್ನು ಹೊಂದಿವೆ. ಇಂತಹ ಮಾಡುಗಳು ಒಟ್ಟು ೨೩ ಇದ್ದು. ಪೂರ್ವ ಗೋಡೆಯಲ್ಲಿ ೮ ಮತ್ತು ಪಶ್ಚಿಮದ ಗೋಡೆಯಲ್ಲಿ ೮ ಮಾಡುಗಳಿದ್ದರೆ, ದಕ್ಷಿಣ ಗೋಡೆಯಲ್ಲಿ ೭ ಮಾಡುಗಳಿವೆ. ಇವುಗಳಲ್ಲಿ ಈಗ ದಕ್ಷಿಣದ ೭ ಮಾಡುಗಳಲ್ಲಿ ಮಾತ್ರ ಚಿತ್ರಗಳಿವೆ. ಸುತ್ತಲಿನ ಚಿಕ್ಕ ಮಾಡುಗಳು ೮ x ೬ ಇಂಚುಗಳಿಂದ ಹಿಡಿದು ವಿವಿಧ ಅಳತೆಗಳಲ್ಲಿವೆ. ಮಾಡುಗಳಲ್ಲಿಯ ಚಿತ್ರಗಳು ಚಿಕ್ಕ ಪ್ರಮಾಣದವುಗಳಾಗಿರುವುದರಿಂದ ಅತ್ಯಂತ ಸೂಕ್ಷ್ಮ ವಿವರಗಳಿಂದ ರಚಿಸಿವೆ. ಮಾಡುಗಳಲ್ಲಿಯ ಚಿತ್ರಗಳು ಈಗ ಕೇವಲ ನಾಲ್ಕೈದು ಮಾತ್ರ ಉಳಿದುಕೊಂಡಿವೆ. ಹೊರಚಾವಡಿಯಲ್ಲಿರುವ ಮಾಡುಗಳಲ್ಲಿ ಈ ಚಿತ್ರಗಳನ್ನು ಅಧ್ಯಯನದ ಅನೂಕಲಕ್ಕಾಗಿ ಮತ್ತೆ ಎರಡು ರೀತಿಯಲ್ಲಿ ಕೆಳಗಿನಂತೆ ವಿಂಗಡಿಸಬಹುದು.

೧. ದೊಡ್ಡ ಮಾಡುಗಳಲ್ಲಿಯ ಚಿತ್ರಗಳು
೨. ಚಿಕ್ಕಮಾಡುಗಳಲ್ಲಿಯ ಚಿತ್ರಗಳು

*೧. ದೊಡ್ಡ ಮಾಡುಗಳಲ್ಲಿಯ ಚಿತ್ರಗಳು :* ದೊಡ್ಡ ಮಾಡುಗಳಲ್ಲಿಯ ಚಿತ್ರಗಳು ಹೆಚ್ಚಾಗಿ ನಾಶವಾಗಿದ್ದು ಈಗ ಕೇವಲ ಮೂರ್ನಾಲ್ಕು ಚಿತ್ರಗಳು ಮಾತ್ರ ಉಳಿದುಕೊಂಡಿವೆ. ಅವುಗಳನ್ನು ಈ ರೀತಿ ವಿವರಿಸಬಹುದು.

I. ಬಕಾಸುರ ವಧೆಯ ಚಿತ್ರ : ಇಲ್ಲಿನ ಒಂದು ಅಲಂಕಾರಿಕ ಕಮಾನುಳ್ಳ ಮಾಡದಲ್ಲಿ ಕೃಷ್ಣನು ಬಕಾಸುರನನ್ನು ವಧೆ ಮಾಡುತ್ತಿರುವ ಚಿತ್ರವಿದೆ. ಬಲರಾಮ ಕೃಷ್ಣರಿಬ್ಬರೂ ಬೃಂದಾವನದಲ್ಲಿ ವಾಸಮಾಡುತ್ತಿದ್ದಾಗ, ತಮ್ಮ ಜೊತೆಯ ಹುಡುಗರೊಂದಿಗೆ ಯಮುನಾ ನದಿಯ ಪ್ರಾಂತ್ಯಕ್ಕೆ ಹೋಗಿ ಗೋವುಗಳನ್ನು ಮೇಯಿಸುತ್ತ ವಿನೋದಾರ್ಥವಾಗಿ ಆಟವಾಡಿಕೊಂಡು, ಹಾಡಿ ಕುಣಿದು ಕಾಲ ಕಳೆಯುತ್ತಿದ್ದರು. ಕಂಸನು ಈ ಗುಟ್ಟನ್ನು ತಿಳಿದು ಬಲರಾಮ ಕೃಷ್ಣರನ್ನು ಹೇಗಾದರೂ ಮಾಡಿ ಕೊಲ್ಲಿಸಬೇಕೆಂದು ಅನೇಕ ರಾಕ್ಷಸರನ್ನು ಅವರ ಬಳಿಗೆ ಕಳಿಸೊಡಗಿದನು. ಹಾಗೆ ಕೃಷ್ಣನನ್ನು ಕೊಲ್ಲಲು ಬಂದ ರಾಕ್ಷಸರಲ್ಲಿ ಬಕನೆಂಬ ರಾಕ್ಷಸನೂ ಒಬ್ಬ. ಬಕಪಕ್ಷಿಯಂತೆ ರೂಪತಾಳಿ ಬಂದ ರಾಕ್ಷಸನು ತನ್ನ

ಕೊಕ್ಕಿನಿಂದ ಗೋವುಗಳನ್ನೂ ಗೋಪಾಲಕರನ್ನೂ ಕುಕ್ಕಿ ಕುಕ್ಕಿ ಕೊಲ್ಲತೊಡಗಿದನು. ಇದನ್ನು ಕಂಡ ಶ್ರೀಕೃಷ್ಣನು ಬಕನ ಕೊಕ್ಕನ್ನು ಹಿಡಿದುಕೊಂಡು ಎರಡು ಭಾಗವಾಗಿ ಸೀಳಿ ಆತನನ್ನು ಕೊಂದು ಹಾಕಿದನು. ಚಿತ್ರದಲ್ಲಿ ಕೃಷ್ಣನು ಪಕ್ಷಿರೂಪದಲ್ಲಿರುವ ಬಕನನ್ನು ಕೊಕ್ಕು ಹಿಡಿದು ಎರಡು ಭಾಗವಾಗಿ ಸೀಳುತ್ತಿರುವನು. ನೀಲವರ್ಣದ ಕೃಷ್ಣನು ಕಿರೀಟಧರಿಸಿದ್ದು. ಮೈಮೇಲೆ ಹಳದಿ ವರ್ಣದ ಶಾಲುಹೊದ್ದುಕೊಂಡಿದ್ದಾನೆ. ಕೃಷ್ಣನು ರಾಕ್ಷಸನನ್ನು ಕೊಲ್ಲುತ್ತಿರುವುದನ್ನು ನಾಲ್ಕು ಜನ ಗೋಪಾಲಕರು ದೂರದಲ್ಲಿ ನಿಂತು ಗಾಭರಿಯಿಂದ ನೋಡುತ್ತಿದ್ದಾರೆ. ಈ ಗೋಪಾಲಕರು ಹಿಂದೆ ಬೆನ್ನ ಮೇಲೆ ಇಳಿಬಿದ್ದಂತ ಕುಲಾವಿಗಳನ್ನು ತಲೆಮೇಲೆ ಧರಿಸಿದ್ದಾರೆ. ಇವು ತಲೆಯಿಂದ ಪಾದದವರೆಗೂ ಇಳಿಬಿದ್ದಿವೆ. ಈಗಿನ ದನಗಾಹಿಗಳೂ ಇಂತಹವೇ ಕುಲಾವಿಗಳನ್ನೂ ಧರಿಸುತ್ತಾರೆ. ಈ ಬಾಲಕರು ಎಡಗೈಯಲ್ಲಿ ಉದ್ದುದ್ದ ಬಡಿಗೆಗಳನ್ನು ಹಿಡಿದುಕೊಂಡಿದ್ದು ಬರೀ ಚಡ್ಡಿಯನ್ನು ಮಾತ್ರ ಧರಿಸಿದ್ದಾರೆ. ಇವರು ಗೌರವರ್ಣದವರಾಗಿದ್ದು ಕಂದು ಹಾಗೂ ಬಿಳಿ ಚಡ್ಡಿಗಳಿವೆ. ಈ ಗೋಪಾಲಕರ ಎದುರಿನಲ್ಲಿ ದನಗಳ ಗುಂಪು ಇದೆ. ಕೆಲವು ದನಗಳು ಮೇಯುತ್ತಿದ್ದರೆ. ಇನ್ನು ಕೆಲವು ತಮ್ಮ ಮೈಯನ್ನು ನೆಕ್ಕಿಕೊಳ್ಳುತ್ತಲಿವೆ. ಕೆಲವು ಆಯಾಸದಿಂದ ಗಿಡದ ಕೆಳಗೆ ಮಲಗಿದ್ದರೆ ಇನ್ನು ಕೆಲವು ಓಡುತ್ತಲಿವೆ. ಗೋವುಗಳ ಪಕ್ಕದಲ್ಲಿ ಅದರ ಕರುಗಳೂ ನಡೆಯುತ್ತಲಿವೆ. ದನಗಳ ಗುಂಪಿನ ಸಮೀಪ ದೊಡ್ಡ ಮರಗಳು ಅವುಗಳಲ್ಲಿಯ ಎಲೆ, ಹೂಗಳು ಸುಂದರವಾಗಿ ಕಾಣುತ್ತಲಿವೆ. ಅನತಿದೂರದಲ್ಲಿ ಗುಡ್ಡ ಬೆಟ್ಟಗಳು. ಗಿಡ ಮರಗಳು. ಆಕಾಶ. ಮುಂತಾದವು ಸೃಷ್ಟಿಯ ಸೊಬಗನ್ನು ತೋರುತ್ತವಲ್ಲದೇ, ದನಗಳು ಮೇಯುವ ಗುಡ್ಡ ಬೆಟ್ಟದ ಸಹಜ ಪರಿಸರವನ್ನು ನಮ್ಮ ಮುಂದೆ ತೆರೆದಿಡುತ್ತವೆ.

ಹಿನ್ನೆಲೆಯಾಗಿ ಕೆಂಪು ವರ್ಣವನ್ನು ಬಳಸಿದ್ದು ಚಿತ್ರದ ವಿಷಯಕ್ಕೆ ಪೂರಕವಾಗಿ ಇಲ್ಲದೇ ಹೋದರೂ ವರ್ಣ ಸಾಮರಸ್ಯತೆಯ ದೃಷ್ಟಿಯಿಂದ ಉತ್ತಮವಾಗಿದೆ. ರೇಖೆಗಳು ಶಕ್ತಿಯುತವಾಗಿ ಜೀವಂತವಾಗಿ ಕಂಗೊಳಿಸುತ್ತವೆ. ಚಿತ್ರದ ಮುಂಭಾಗದಲ್ಲಿ ತೆಳು ನೀಲವರ್ಣದಲ್ಲಿ ನದಿಯನ್ನು ತೋರಿಸಿದ್ದು ಅದರಲ್ಲಿ ನೀರಿನ ಅಲೆಗಳನ್ನು ತೋರಿಸಿರುವ ರೀತಿ ಕುತೂಹಲಕರವಾಗಿದೆ. ಉದ್ದವಾಗಿ ಇಲ್ಲವೇ ಒಂದರ ನಂತರ ಒಂದಾಗಿ ಎಳೆದು ನೀರಿನ ಅಲೆಗಳನ್ನು ತೋರಿಸಿದ್ದಾರೆ. ಒಟ್ಟು ಚಿತ್ರ ಸಂಯೋಜನೆಯು ತೀರ ಉದ್ದವಾಗಿರುವ ಸ್ಥಳದಲ್ಲಿ ರಚಿಸಿದ್ದರೂ, ದನಗಳು ಮೇಯುವ ಅರಣ್ಯದ ಹೊರಾಂಗಣದ ಅನುಭವ ಬರುವಂತೆ ಅಗಲ ಮತ್ತು ವಿಶಾಲತೆಯ ಅನುಭವವನ್ನೂ ಕೊಡುತ್ತದೆ.

II. ನಾಟ್ಯ ಶಾಲೆಯ ಚಿತ್ರ : ಇಲ್ಲಿರುವ ಮತ್ತೊಂದು ಮಾಡದಲ್ಲಿ ಅರಮನೆಯಂತಿರುವ ನಾಟ್ಯ ಶಾಲೆಯಲ್ಲಿ ನರ್ತಕಿಯೊಬ್ಬಳು ನರ್ತಿಸುವ ಚಿತ್ರವಿದೆ. ಈ ಚಿತ್ರದಲ್ಲಿ ಸುತ್ತಲೂ ಬಲವಾದ ಕೋಟೆಗೋಡೆ ಇದ್ದು, ಮಧ್ಯದಲ್ಲಿ ಸುಂದರವಾದ ಕಮಾನುಗಳು ನಾಟ್ಯಮಂದಿರವಿದೆ. ಅದರಲ್ಲಿ ಮಧ್ಯದಲ್ಲಿ ಸ್ತ್ರೀಯೊಬ್ಬಳು ತನ್ನ ಎರಡೂ ಕೈಗಳನ್ನು ಮೇಲೆತ್ತಿ ಕುಣಿಯುತ್ತಿದ್ದರೆ, ಆಕೆಯ ಬಲಗಡೆಗೆ ಮುಸ್ಲಿಂ ದೊರೆಯೊಬ್ಬ ನೃತ್ಯವನ್ನು ವೀಕ್ಷಿಸುತ್ತ ಕುಳಿತಿದ್ದಾನೆ. ಆಕೆಯ ಎಡಗಡೆಗೆ ಇನ್ನೊಬ್ಬ ವ್ಯಕ್ತಿಯಿದ್ದು ಆತ ಕಿರೀಟ ಧರಿಸಿದ್ದಾನೆ. ಈ ಚಿತ್ರದಲ್ಲಿ ಇರುವ ಹಿಂದೂ ವ್ಯಕ್ತಿ ಇವನೊಬ್ಬನೇ. ಇಲ್ಲಿ ಕುಳಿತ ಮುಸ್ಲಿಂ ದೊರೆ ಗಡ್ಡ ಬಿಟ್ಟು ತಲೆಗೆ ಮುಸ್ಲಿಂ ಶೈಲಿಯ ಟೊಪ್ಪಿಗೆ ಧರಿಸಿದ್ದಾನೆ. ನಾಟ್ಯಮಂದಿರದ ಕಂಬಗಳು ಬಂಗಾರದ ವರ್ಣದಲ್ಲಿದ್ದರೆ ಅದರ ಹಿನ್ನೆಲೆಯು ಕಂದುಗೆಂಪು ವರ್ಣದಲ್ಲಿದೆ. ನಾಟ್ಯವಾಡುತ್ತಿರುವ ಸ್ತ್ರೀ ಕೆಂಪು ಸೀರೆಯನ್ನು ಉಟ್ಟುಕೊಂಡಿದ್ದಾಳೆ. ನಾಟ್ಯಮಂದಿರದ ಸುತ್ತಲೂ ಇರುವ ಕೋಟೆಗೋಡೆಯು ಬಲವಾಗಿದ್ದು ಅಲ್ಲಲ್ಲಿ ಬುರುಜು. ಬತೇರಿಗಳನ್ನು ಹೊಂದಿದೆ. ಕೋಟೆಯ ಬಾಗಿಲು ಕಟ್ಟಿಗೆಯದಿದ್ದಂತೆ ತೋರುವುದು. ಕೋಟೆಯ

ಗೋಡೆಯ ಪ್ರತಿಯೊಂದು ಕಲ್ಲುಗಳನ್ನೂ ಸೂಕ್ಷ್ಮವಾಗಿರುವ ವಿವರಗಳಿಂದ ಚಿತ್ರಿಸಿದ್ದಾರೆ. ಕೋಟೆ ಮತ್ತು ನಾಟ್ಯ ಶಾಲೆಯ ಮಧ್ಯದ ಒಳ ಆವಣವು ತಿಳಿ ಹಸಿರು, ತೆಳು ಹಳದಿ ವರ್ಣದಿಂದ ಕೂಡಿದೆ. ಕೋಟೆಯ ಬಾಗಿಲನ್ನು ಭದ್ರಪಡಿಸಲಾಗಿದೆ. ಕೋಟೆಯ ಹೊರ ಭಾಗದಲ್ಲಿ ಬಾಗಿಲಿನ ಮುಂದೆ ಹಲವಾರು ಮುಸ್ಲಿಂ ಪುರುಷರು ಕುಳಿತಿದ್ದಾರೆ. ಇವರು ಅಂಗಿತೊಟ್ಟು ಮೇಲೆ ಕೆಂಪು ಹಸಿರು ಮುಂತಾದ ವರ್ಣಗಳ ಜಾಕೀಟು ತೊಟ್ಟಿದ್ದಾರಲ್ಲದೇ ತಲೆಗೆ ಮೊಗಲ್ ಶೈಲಿಯ ಟೊಪ್ಪಿಗೆ ಧರಿಸಿದ್ದಾರೆ. ಎಲ್ಲರೂ ಗಡ್ಡಬಿಟ್ಟಿದ್ದು ಅವರಲ್ಲಿ ಉದ್ದಗಡ್ಡ ಬಿಟ್ಟ ಒಬ್ಬ ಸಂತನಂತಹ ವ್ಯಕ್ತಿಯೂ ಇದ್ದಾನೆ. ಕೆಲವರು ವೀಣೆಯನ್ನು ಬಾರಿಸುವುದನ್ನು ಬಿಟ್ಟು ಅವುಗಳನ್ನು ಆಚೆಗೆ ಎತ್ತಿಟ್ಟು ಸಂಭಾಷಣೆಯಲ್ಲಿ ತೊಡಗಿದ್ದರೆ. ಮತ್ತೆ ಕೇಲವರು ಕೈಯಲ್ಲಿ ಹೂ ಹಿಡಿದು ಅದನ್ನು ಮೂಸುತ್ತಿದ್ದಾರೆ. ಈ ಇಡೀ ಚಿತ್ರ ಮುಸ್ಲಿಂ ದೊರೆ ಒಬ್ಬನ ಆಸ್ಥಾನದಲ್ಲಿನ ನಾಟ್ಯ ಶಾಲೆಯಲ್ಲಿ ನಡೆದ ನಾಟ್ಯ ಕಾರ್ಯಕ್ರಮವಾಗಿರಬಹುದು. ಕೆಳಗಿನ ಜನರು ನಾಟ್ಯವೀಕ್ಷಿಸಲು ಬಂದ ಗಣ್ಯರಿರಬೇಕು.

ಇದೊಂದು ವಿಶಿಷ್ಟ ಸಂಯೋಜನಾ ಕೃತಿಯಾಗಿದೆ. ನಾಟ್ಯ ವೀಕ್ಷಿಸಲು ಬಂದ ಗಣ್ಯಜನರನ್ನು ನಾಟ್ಯಮಂದಿರದ ಒಳಗೆ ಚಿತ್ರಿಸದೇ ಚಿತ್ರದ ಅತ್ಯಂತ ಕೆಳಭಾಗದಲ್ಲಿ ಅವರನ್ನು ಚಿತ್ರಿಸಿದ್ದಾರೆ. ಬಹುಶ ಅವರನ್ನು ಅಲ್ಲೇ ಚಿತ್ರಿಸಿದ್ದರೆ ಕೋಟೆಯನ್ನು ಚಿತ್ರಿಸಲು, ನಾಟ್ಯಮಂದಿರ ಚಿತ್ರಿಸಲು, ಕೋಟೆಯ ವಿವಿಧ ಭಾಗಗಳನ್ನು ವಿವರವಾಗಿ ಚಿತ್ರಿಸಲು ಜಾಗಸಾಲದೇ ಹೋಗುತ್ತಿತ್ತು. ಹಾಗಾಗಿ ಕೋಟೆ ಮತ್ತು ನಾಟ್ಯಶಾಲೆಗಳನ್ನು ವಿವರವಾಗಿ ಚಿತ್ರಿಸಿ ಜನರನ್ನು ಕೆಳಭಾಗದಲ್ಲಿ ಚಿತ್ರಿಸಿದ್ದಾರೆ. ರಾಜ ನರ್ತಕಿಯರ ನಾಟ್ಯವು ರಾಜಪರಿವಾರದವರು ಮತ್ತು ಗಣ್ಯರಿಗೆ ಮಾತ್ರ ಮೀಸಲಾಗಿರುತ್ತಿದ್ದು ಬೇರೆಯಾರು ಅಲ್ಲಿ ಪ್ರವೇಶಿಸುವಂತಿರಲಿಲ್ಲ. ಹೆಚ್ಚಿನ ಸಂದರ್ಭದಲ್ಲಿ ಹೀಗೆ ಇರುತ್ತಿತ್ತು ಇದನ್ನು ಸಾಂಕೇತಿಸಲು ಕೋಟೆಯ ಬಾಗಿಲನ್ನು ಭದ್ರಪಡಿಸಿ ಒಳಗೆ ನರ್ತನವನ್ನು ಏರ್ಪಡಿಸಲಾಗಿದೆ. ಇಲ್ಲಿ ಹೆಚ್ಚಿನ ವರ್ಣಗಳ ಬಳಕೆಯಾಗಿರದೇ ಕೆಲವೇ ವರ್ಣಗಳನ್ನು ಅಂದರೆ ಕೆಂಪು, ಹಸಿರು, ಹಳದಿಗಳನ್ನು ಬಳಸಲಾಗಿದೆ.

III. ಯಾಗದ ಚಿತ್ರ : ಇಲ್ಲಿನ ಮತ್ತೊಂದು ಮಾಡದಲ್ಲಿರುವ ಚಿತ್ರದಲ್ಲಿ ಹಲವಾರು ಋಷಿಮುನಿಗಳು ಯಾಗದಲ್ಲಿ ತೊಡಗಿರುವ ಚಿತ್ರವಿದೆ. ಚಿತ್ರದ ಹಿನ್ನೆಲೆಯು ಕೆಂಪುವರ್ಣದಿಂದ ಕೂಡಿದೆ. ಚಿತ್ರದ ಬಲಮೂಲೆಯಲ್ಲಿ ಒಂದು ಯಜ್ಞ ಕಟ್ಟೆಯ ಸುತ್ತಲೂ ಎಂಟು ಮಂದಿ ಋಷಿಮುನಿಗಳು ಕುಳಿತಿದ್ದಾರೆ. ಅವರು ತಮ್ಮ ತಮ್ಮಲ್ಲೇ ಸಂಭಾಷಣೆಯಲ್ಲಿ ತೊಡಗಿದ್ದಾರೆ. ಚಿತ್ರದ ಎಡಭಾಗದಲ್ಲಿ ಎರಡು ಸಾಲುಗಳಲ್ಲಿ ಸ್ತ್ರೀಯರು ದೀರ್ಘ ಸಂಭಾಷಣೆಯಲ್ಲಿ ತೊಡಗಿದ್ದಾರೆ. ಮೇಲಿನ ಸಾಲಿನಲ್ಲಿ ಮೂವರು ಸ್ತ್ರೀಯರಿದ್ದರೆ ಕೆಳಗಿನ ಸಾಲಿನಲ್ಲಿ ನಾಲ್ವರು ಸ್ತ್ರೀಯರಿದ್ದಾರೆ. ಚಿತ್ರದ ಮಧ್ಯಭಾಗದಲ್ಲಿ ವಿಶಾಲವಾದ ಅಂಗಣದಂತಹ ಬಯಲು ಪ್ರದೇಶವಿದ್ದು ಅಲ್ಲಿ ಆರು ಆಕಳುಗಳು ಸಾಲಾಗಿ ನಿಂತಿವೆ. ಅವುಗಳಲ್ಲಿ ಬಿಳಿ, ಕೆಂಪು, ಕೆಂದು, ಬೂದು ವರ್ಣದ ಮೈಬಣ್ಣದವುಗಳಿವೆ. ಈ ಆಕಳುಗಳ ಹಿಂದೆ ಎರಡು ಚಿಕ್ಕ ಕರುಗಳೂ ಅವುಗಳನ್ನು ಹಿಂಬಾಲಿಸಿವೆ. ಬಯಲಿನ ಮಧ್ಯಭಾಗದಲ್ಲಿ ಒಬ್ಬ ಗೋಪಾಲ ಬಾಲಕನು ನಿಂತು ಏನೋ ಕೆಲಸದಲ್ಲಿ ತೊಡಗಿದ್ದಾನೆ. ಅವನ ಕೆಳಭಾಗದಲ್ಲಿ ಆಕಳುಗಳ ಸಾಲಿನ ಹಿಂದುಗಡೆ ಕೃಷ್ಣನು ಕುಳಿತಿದ್ದು ಇಬ್ಬರು ಗೋಪ ಬಾಲಕರು ಆತನಿಗೆ ಯಾವುದೋ ವಿಷಯ ಹೇಳುತ್ತಲಿದ್ದಾರೆ. ಆತನ ಹಿಂದೆ ಇನ್ನೊಬ್ಬ ಬಾಲಕ ನಿಂತು ಇವರ ಸಂಭಾಷಣೆ ಆಲಿಸುತ್ತಿದ್ದಾನೆ. ಎಲ್ಲ ಗೋಪಾಲ ಬಾಲಕರು ಚಡ್ಡಿಯನ್ನು ಧರಿಸಿ ಕಂಬಳಿಯಂತಹ ವಸ್ತ್ರವನ್ನು ಹೆಗಲಲ್ಲಿ ಹಾಕಿಕೊಂಡು ಬಗಲಲ್ಲಿ ಬಡಿಗೆ ಹಿಡಿದುಕೊಂಡಿದ್ದಾರೆ. ಚಿತ್ರಕ್ಕೆ ಚಪ್ಪಟೆ ವರ್ಣಲೇಪನವೇ ಇದೆ. ಕೆಂಪು ಕಂದು, ಬಿಳಿ, ಬೂದು, ಹಾಗೂ ಕಪ್ಪು ವರ್ಣಗಳು ಬಳಕೆಯಾಗಿವೆ.

IV. ಮಹಿಷಾಸುರ ಮರ್ದಿನಿಯ ಚಿತ್ರ : ಇಲ್ಲಿನ ಮತ್ತೊಂದು ಮಾಡದಲ್ಲಿ ದೇವಿಯು ಮಹಿಷಾಸುರನನ್ನು ಕೊಲ್ಲುತ್ತಿರುವ ದೃಶ್ಯವಿದೆ. ಕೆಂಪು ಹಿನ್ನೆಲೆಯಮೇಲೆ ಈ ಚಿತ್ರರಚಿಸಲಾಗಿದೆ. ಎಂಟು ಕೈಗಳನ್ನು ಹೊಂದಿದ ದೇವಿಯು ಪ್ರತಿಯೊಂದು ಕೈಯಲ್ಲೂ ಆಯುಧಗಳನ್ನು ಹಿಡಿದುಕೊಂಡಿದ್ದಾಳೆ. ತ್ರಿಶೂಲ, ಢಮರುಗ, ಖಡ್ಗ, ಬಿಲ್ಲು, ಬಾಣ, ಶಂಖ, ಚಕ್ರ, ಪರಶು ಮುಂತಾದ ಆಯುಧಗಳನ್ನು ವಾದ್ಯಗಳನ್ನು ಕೈಯಲ್ಲಿ ಧರಿಸಿದ್ದಾಳೆ. ಮಹಿಷಾಸುರ ರಾಕ್ಷಸನು ಕೋಣದ ರೂಪದಲ್ಲಿದ್ದು ಆ ಕೋಣದ ರುಂಡವನ್ನು ಕಡಿದುಚಲ್ಲಿ ಅದರ ಬಾಲವನ್ನು ಹಿಡಿದುಕೊಂಡು ದೇಹದ ಮೇಲೆ ವೀರನಾಟ್ಯವಾಡುತ್ತಿದ್ದಾಳೆ. ದೇವಿಯು ಕೋಣದ ರುಂಡವನ್ನು ಕಡಿದು ಚಲ್ಲಿದ್ದಲ್ಲದೇ ಇನ್ನೂ ಒಬ್ಬ ರಾಕ್ಷಸನ ತಲೆಗೂದಲನ್ನು ಹಿಡಿದು ಅವನ ರುಂಡವನ್ನೂ ಕತ್ತರಿಸಲು ಅಣಿಯಾಗಿದ್ದಾಳೆ. ಬಲಭಾಗದಲ್ಲಿ ಮಹಿಷಾಸುರನ ಪತ್ನಿಯು ಕೈಮುಗಿದು ದೇವಿಯಲ್ಲಿ ಪ್ರಾರ್ಥಿಸುತ್ತಿದ್ದಾಳೆ. ಚಿತ್ರಗಳಿಗೆ ಮೂಲದಲ್ಲಿ ಬೇರೆ ಬೇರೆ ವರ್ಣಗಳನ್ನು ಉಪಯೋಗಿಸಿದ್ದರಬಹುದು. ಆದರೆ ಕಾಲಾಂತರದಲ್ಲಿ ಎಲ್ಲ ಛಾಯೆಗಳು ಮಾಸಿಹೋಗಿ, ಚಿತ್ರಗಳು ಬರೀ ಬೂದು ಹಾಗೂ ಕಪ್ಪು ವರ್ಣದ ಛಾಯೆಗಳಲ್ಲಿ ಮಾತ್ರ ಉಳಿದುಕೊಂಡಿವೆ. ದೇವಿಚಿತ್ರದ ಕಿರೀಟವು ಆಕರ್ಷಕವಾಗಿದೆ. ಸೀರೆ ಉಟ್ಟ ರೀತಿಯು ವಿಶೇಷವಾಗಿದೆ. ಉದ್ದನಾದ ಸೆರಗು ಬೆನ್ನ ಹಿಂದಿನಿಂದ ತೆಗೆದುಕೊಂಡು ಮುಂದೆ ಮೊಣಕಾಲಕೆಳಗಿನ ಭಾಗದವರೆಗೂ ಇಳಿಬಿದ್ದಿದ್ದು ಮುಂಭಾಗದ ಮೈಯನ್ನು ಸಂಪೂರ್ಣ ಮುಚ್ಚಿದೆ. ದೇವಿಯ ಚಿತ್ರದ ಎಡಬಲಗಳಲ್ಲಿರುವ ಚಿಕ್ಕಮಾಡುಗಳಲ್ಲಿ ಇಬ್ಬರು ಸ್ತ್ರೀಯರು ಹೂಮಾಲೆಗಳನ್ನು ಹಿಡಿದು ದೇವಿಯತ್ತ ಬರುತ್ತಿದ್ದಾರೆ.

V. ಸಂತನೊಬ್ಬನ ಚಿತ್ರ : ಇನ್ನೊಂದು ಮಾಡದಲ್ಲಿ ಮಧ್ಯದಲ್ಲಿ ಒಬ್ಬ ಮುದುಕ ವ್ಯಕ್ತಿಯ ಚಿತ್ರ ಬಂದಿದೆ. ಈತನು ತಲೆಗೆ ರುಮಾಲು ಸುತ್ತಿದ್ದು ಮೈತುಂಬ ಶಾಲುಹೊದ್ದುಕೊಂಡಿದ್ದಾನೆ. ಪೀಠದ ಮೇಲೆ ಗಂಭೀರ ಮುದ್ರೆಯಲ್ಲಿ ಕುಳಿತ ಈ ಸಂತನ ಎಡಬಲಗಳಲ್ಲಿರುವ ಚಿಕ್ಕ ಮಾಡುಗಳಲ್ಲಿ ಇಬ್ಬರು ಸ್ತ್ರೀಯರು ಆತನಿಗೆ ಚಾಮರ ಬೀಸುತ್ತಲಿದ್ದಾರೆ. ಚಿತ್ರದ ಮೇಲ್ಭಾಗದಲ್ಲಿ ಒಂದು ಕಮಲದ ಹೂವಿದ್ದರೆ ಕೆಳಭಾಗದಲ್ಲಿ ಸೂರ್ಯಕಾಂತಿ ಹೂವನ್ನು ಹೋಲುವ ಹುವಿನ ಚಿತ್ರವಿದೆ. ಚಿತ್ರದ ಹಿನ್ನೆಲೆ ಕೆಂಪುವರ್ಣದಿಂದ ಕೂಡಿದೆ. ಮುಖ್ಯಚಿತ್ರದ ಹೆಚ್ಚಿನ ಭಾಗವು ನಾಶವಾಗಿರುವುದರಿಂದ ಈ ಚಿತ್ರವು ಯಾವುದಕ್ಕೆ ಸಂಬಂಧಿಸಿದ್ದು ಎಂಬುದು ತಿಳಿದುಬರುವುದಿಲ್ಲ. ಮುದುಕ ವ್ಯಕ್ತಿ ಸಂತನ ಚಿತ್ರವು ಹಾಳಾಗಿರುವುದರಿಂದ ಅದನ್ನು ಗುರುತಿಸುವುದೂ ಕಷ್ಟ. ಮಾಡದ ಮೇಲ್ಗಡೆಗೆ ಕಮಾನಿನಲ್ಲಿ ಸುಂದರವಾದ ಹೂಗಳನ್ನು ಚಿತ್ರಿಸಲಾಗಿದೆ. ಅದರ ಪಕ್ಕದಲ್ಲಿ ಎಲೆಬಳ್ಳಿಯನ್ನೂ ರಚಿಸಲಾಗಿದೆ. ಮಾಡದ ಕೆಳಭಾಗದಲ್ಲಿನ ಚಿಕ್ಕದಾದ ಇನ್ನೊಂದು ಮಾಡದಲ್ಲಿ ನೀಲಿ ವರ್ಣದ ಹಿನ್ನೆಲೆಯಲ್ಲಿ ಐದು ಎಸಳುಗಳ ಸುಂದರವಾದ ತಿಳಿಕೆಂಪು ಮತ್ತು ಹಳದಿ ವರ್ಣದ ಹೂಗಳನ್ನು ರಚಿಸಲಾಗಿದೆ. ಈ ಹೂಗಳ ಹಿನ್ನೆಲೆಯಲ್ಲಿ ದಟ್ಟ ನೀಲಿವರ್ಣದಿಂದ ಎಲೆ ಬಳ್ಳಿಯನ್ನು ರೂಪಿಸಲಾಗಿದೆ. ಇವುಗಳಲ್ಲದೇ ಇಡೀ ಮಾಡಿನ ಹೊರ ಚೌಕಟ್ಟನ್ನೂ ಕೂಡಾ ಹೂಬಳ್ಳಿಯ ನಕ್ಷೆಯಿಂದ ಅಲಂಕರಿಸಲಾಗಿದೆ.

VI. ಕೃಷ್ಣ ಮತ್ತು ಗೋಪಿಕಾಸ್ತ್ರೀಯರು : ಇಲ್ಲಿನ ಗೋಡೆಯ ಮತ್ತೊಂದು ಮಾಡದಲ್ಲಿ ಕೃಷ್ಣ ಮತ್ತು ಗೋಪಿಕಾಸ್ತ್ರೀಯರನ್ನು ಚಿತ್ರಿಸಿದ್ದಾರೆ. ನದಿಯ ದಂಡೆಯ ಮೇಲೆ ಒಟ್ಟು ಇಪ್ಪತ್ತೆರಡು ಜನ ಸ್ತ್ರೀಯರು ಇಬ್ಬಿಬ್ಬರಂತೆ ಜೊತೆಯಾಗಿ ಮಾತನಾಡುತ್ತಿದ್ದಾರೆ. ಇವರೆಲ್ಲ ನಾಲ್ಕು ಸಾಲುಗಳಲ್ಲಿ ಚಿತ್ರಿತರಾಗಿದ್ದಾರೆ. ಮೊದಲ ಸಾಲಿನಲ್ಲಿ ಎಡಗಡೆಗೆ ಕೃಷ್ಣನು ಒಬ್ಬನೇ ಇದ್ದು ಆತನೊಂದಿಗೆ ಯಾರೂ ಸಂಭಾಷಣೆಯಲ್ಲಿ ತೊಡಗಿಲ್ಲ. ಆತ ಇವರೆಲ್ಲರ ಗುಂಪಿನಿಂದ ಬೇರೆ ಕಡೆಗೆ ನಡೆದು ಹೋಗುತ್ತಿರುವಂತೆ ಚಿತ್ರಿಸಲಾಗಿದೆ. ಕೃಷ್ಣನೊಬ್ಬನನ್ನು ಸೇರಿಸಿ ಒಟ್ಟು ಇಪ್ಪತ್ತಮೂರು ಮನುಷ್ಯ

ಚಿತ್ರಗಳಿವೆ. ಕೃಷ್ಣನೊಬ್ಬ ಪುರುಷನಾಗಿದ್ದರೆ ಎಲ್ಲರೂ ಸ್ತ್ರೀಯರೇ ಆಗಿದ್ದಾರೆ. ಕೆಲವು ಸ್ತ್ರೀಯರು ಕುಳಿತು ಸಂಭಾಷಣೆಯಲ್ಲಿ. ತೊಡಗಿದ್ದರೆ ಹಲವರು ನಿಂತುಕೊಂಡೇ ಸಂಭಾಷಿಸುತ್ತಿದ್ದಾರೆ. ಗೋಪಿಕಾಸ್ತ್ರೀಯರು ಅನೇಕ ವಿಧದ ವರ್ಣಮಯವಾದ ಸೀರೆ ಕುಪ್ಪಸಗಳನ್ನು ತೊಟ್ಟಿದ್ದಾರೆ. ಚಿತ್ರದ ಹಿನ್ನಲೆಯು ಕೆಂಪಾಗಿದ್ದು ಸಮತಟ್ಟಾಗಿದೆ. ಮುಂಭಾಗದಲ್ಲಿ ತೋರಿಸಿರುವ ನದಿಯ ಭಾಗದಲ್ಲಿ ಮಾತ್ರ ನೀರಿನ ಅಲೆಗಳಂತೆ ಗೆರೆಗಳನ್ನು ತೋರಿಸಲಾಗಿದೆ. ಇಲ್ಲಿಯೂ ನೀರಿನ ಅಲೆಗಳನ್ನು ಅರ್ಧವೃತ್ತದ ಗೆರೆಗಳನ್ನು ಒಂದರ ಓಂದೆ ಒಂದರಂತೆ ಒತ್ತೊತ್ತಾಗಿ ರಚಿಸಿ ತೋರಿಸಲಾಗಿದೆ. ಉಳಿದಂತೆ ಎಲ್ಲ ಪ್ರದೇಶವೂ ಸಮತಟ್ಟಾಗಿದೆ. ನದಿಯ ಬಣ್ಣ ತೆಳು ನೀಲಿಯಾಗಿದ್ದರೆ ಗೋಪಿಕಾಸ್ತ್ರೀಯರು ಇರುವ ವಿಶಾಲ ಭೂಪ್ರದೇಶ ಕೆಂಪಾಗಿದೆ. ಮೇಲ್ಭಾಗದ ಆಕಾಶವು ಮೂಲದಲ್ಲಿ ತಳು ನೀಲಿ ವರ್ಣವಲ್ಲಿದ್ದಿರಬಹುದು ಆದರೆ ಇಂದು ಬಣ್ಣ ಉದುರಿ. ಹಿಂದಿನ ಭಿತ್ತಿ ಉದುರಿ ಗೋಡೆಯ ಕಪ್ಪು ಭಾಗ ಕಂಡುಬರುತ್ತಲಿದೆ.

VII.✓ಗೋಪಾಲಕರು ದನ ಕಾಯುತ್ತಿರುವ ಚಿತ್ರ : ಇನ್ನೊಂದು ಅಲಂಕಾರಿಕ ಮಾಡೊಂದರಲ್ಲಿನ ಚಿತ್ರದಲ್ಲಿ ಗೋಪಾಕಲಕರು ವಿಶಾಲವಾದ ಬಯಲು ಜಾಗೆಯಲ್ಲಿ ದನಗಳನ್ನು ಬಿಟ್ಟು ಗಿಡದ ನೆರಳಲ್ಲಿ ವಿರಮಿಸುತ್ತಿದ್ದಾರೆ. ಬಯಲಲ್ಲಿರುವ ದನಗಳು ವಿವಿಧ ಬಣ್ಣಗಳಲ್ಲಿವೆ. ಕೆಲವು ದನಗಳು ಮೇಯುತ್ತಲಿದ್ದರೆ. ಮತ್ತೆ ಕೆಲವು ಮುಖ ಮೇಲೆ ಮಾಡಿ ಓಡುತ್ತಿವೆ. ಇನ್ನು ಹಲವು ಮಲಗಿಕೊಂಡಿದ್ದರೆ. ಮತ್ತ ಕೆಲವು ತಮ್ಮ ಮೈ ನೆಕ್ಕಿಕೊಳ್ಳುತ್ತ, ತಮ್ಮ ಕರುಗಳಿಗೆ ಹಾಲುಣಿಸುತ್ತಿವೆ. ದೂರದಲ್ಲಿ ಗುಡ್ಡ. ಬೆಟ್ಟ. ಆಕಾಶ. ಗಿಡಗಳು. ನದಿ. ಸರೋವರ ಮುಂತಾದವುಗಳು ಕಾಡಿನ ಪರಿಸರವನ್ನು ನೆನಪಿಸುತ್ತವೆ. ಇಲ್ಲಿಯ ಪಶುಗಳು ಪ್ರಮಾಣಬದ್ಧವಾಗಿ ಅತ್ಯಂತ ಆಕರ್ಷಕ ಶೈಲಿಯಲ್ಲಿ ರೂಪಿತವಾಗಿವೆ. ಚಿತ್ರದ ಹೆಚ್ಚಿನ ಭಾಗ ನಾಶವಾಗಿದ್ದು ವರ್ಣವಿನ್ಯಾಸವನ್ನು ಗುರುತಿಸಲು ಆಗುವುದಿಲ್ಲ. ಅಲ್ಲಲ್ಲಿ ಹಿನ್ನೆಲೆಯ ಕೆಂಪುವರ್ಣ ಮಾತ್ರ ಕಂಡು ಬರುತ್ತದೆ.

*೨. ಚಿಕ್ಕಮಾಡಗಳಲ್ಲಿಯ ಚಿತ್ರಗಳು :* ದೊಡ್ಡ ಮಾಡುಗಳ ಸುತ್ತಲೂ ಚಿಕ್ಕ ಚಿಕ್ಕ ಅಲಂಕಾರಿಕ ಮಾಡುಗಳನ್ನು ರಚಿಸಿ ಅವುಗಳಲ್ಲಿಯೂ ಚಿತ್ರಗಳನ್ನು ರಚಿಸಿದ್ದಾರೆ. ಚಿಕ್ಕ ಮಾಡುಗಳಲ್ಲಿಯೂ ಪ್ರಧಾನವಾಗಿ ಕೃಷ್ಣ ಕಥಾನಕಗಳನ್ನೇ ರಚಿಸಿದ್ದರೂ ಬೇರೆ ವಿಷಯಕ್ಕೆ ಸಂಬಂಧಪಟ್ಟ ಚಿತ್ರಗಳೂ ಇವೆ. ಚಿಕ್ಕಮಾಡುಗಳ ಚಿತ್ರಗಳು ಈ ಕೆಳಗಿನಂತಿವೆ.

I. ಇಬ್ಬರು ರಾಜಕುಮಾರಿಯರ ಚಿತ್ರ : ಇಲ್ಲಿನ ಒಂದು ಮಾಡಿನಲ್ಲಿ ಒಬ್ಬರ ಕೆಳಗೊಬ್ಬರು ರಾಜಕುವರಿಯರನ್ನು ಪ್ರತ್ಯೇಕ ಕಮಾನಿನಲ್ಲಿ ಚಿತ್ರಿಸಿದ್ದಾರೆ. ಮೇಲಿನ ರಾಜಕುಮಾರಿಯು ತನ್ನ ಎಡಗೈಯಲ್ಲಿ ಸಾಳ್ವಪಕ್ಷಿಯೊಂದನ್ನು ಹಿಡಿದುಕೊಂಡು ಅದರ ಜೊತೆ ಆಟ ಆಡುತ್ತಿದ್ದಾಳೆ ಅವಳು ಮೊಗಲ್ ಶೈಲಿಯ ಉಡುಪನ್ನು ಧರಿಸಿದ್ದು ಮೇಲು ಹೊದಿಕೆಯನ್ನು ಧರಿಸಿದ್ದಾಳೆ. ಅವಳು ಧರಿಸಿದ ಮೇಲುಹೊದಿಕೆ ಪಾರದರ್ಶಕವಾಗಿದ್ದು ಅದನ್ನು ರಚಿಸಿದ ಕಲಾವಿದನ ಕೌಶಲ ಎದ್ದು ಕಾಣುತ್ತದೆ. ಕೆಳಗಿನ ಭಾಗದ ಕಮಾನಿನಲ್ಲಿ ಮತ್ತೊರ್ವ ರಾಜಕುಮಾರಿ ಇದ್ದು ಅವಳು ಜಿಂಕೆಯೊಂದಕ್ಕೆ ಗಿಡದ ತಪ್ಪಲು ತಿನಿಸುತ್ತಿದ್ದಾಳೆ. ಆಕೆ ತನ್ನ ಎಡಗೈಯಲ್ಲಿ ಗಿಡದ ಟೊಂಗೆಯನ್ನು ಹಿಡಿದು ತನ್ನ ತಲೆಯ ಎತ್ತರಕ್ಕೆ ಅದನ್ನು ಮೇಲಕ್ಕೆತ್ತಿದ್ದಾಳೆ. ಜಿಂಕೆಯು ಅದನ್ನು ತಿನ್ನಲು ಕುತ್ತಿಗೆಯನ್ನು ಮೇಲೆ ಮಾಡಿ ತನ್ನ ಹಿಂಗಾಲುಗಳ ಮೇಲೆ ನಿಂತು ಮುಂಗಾಲು ಮೇಲೆಮಾಡಿ ಮೇಲಕ್ಕೆ ಜಿಗಿಯುತ್ತಿದೆ. ರಾಜಕುವರಿಗೆ ಇದರಿಂದ ಮೋಜೆನಿಸಿ ಅವಳ ಮುಖದಲ್ಲಿ ನಗುವಿನ ಮಂದಹಾಸ ತುಂಬಿಕೊಂಡಿದೆ. ಇವಳು ಚುಕ್ಕೆಗಳುಳ್ಳ ಹಳದಿ ವರ್ಣದ ಕುಪ್ಪಸ ತೊಟ್ಟಿದ್ದಾಳೆ. ಇವಳ

ಉಡುಗೆಯು ರಜಪೂತ ಶೈಲಿಯಲ್ಲಿ ಇದೆ. ಎರಡೂ ಚಿತ್ರಗಳ ಹಿನ್ನೆಲೆಯು ಕೆಂಪು ವರ್ಣದಿಂದ ಕೂಡಿದೆ. ಕಮಾನುಗಳಲ್ಲಿ ಐದುಎಸಳಿನ ದೊಡ್ಡ ಕೆಂಪುವರ್ಣದ ಹೂಗಳ ಬಳ್ಳಿಯನ್ನು ರಚಿಸಲಾಗಿದೆ.

II. ಕೃಷ್ಣನು ತನ್ನ ಮಡದಿಯ ತಲೆ ಬಾಚುತ್ತಿರುವುದು : ಮತ್ತೊಂದು ಚಿಕ್ಕ ಮಾಡಿನಲ್ಲಿರುವ ಒಂದು ಚಿತ್ರದಲ್ಲಿ ಕೃಷ್ಣನು ತನ್ನ ಮಡದಿಯ ತಲೆಬಾಚುತ್ತಿರುವ ದೃಶ್ಯವಿದೆ. ಆತನ ಮಡದಿಯು ತನ್ನ ಎದುರಿಗೆ ಸ್ವಲ್ಪ ದೂರದಲ್ಲಿ ಕನ್ನಡಿಯನ್ನು ಇಟ್ಟುಕೊಂಡು ಆತ ಬಾಚಿದ್ದು ಸರಿಯಾಗಿದೆಯೋ ಇಲ್ಲವೋ ಎಂದು ನೋಡಿಕೊಳ್ಳುತ್ತಲಿದ್ದಾಳೆ. ದೂರದ ಕನ್ನಡಿಯಲ್ಲಿ ಆಕೆಯ ಮುಖವೂ ಪ್ರತಿಫಲಿಸಿದೆ. ಆಕೆ ಒಂದು ಕಾಲನ್ನು ಮಡಚಿ ಇನ್ನೊಂದನ್ನು ಮೇಲಕ್ಕೆ ಗೂಡಿಸಿಕೊಂಡು ಕುಳಿತಿದ್ದರೆ. ಕೃಷ್ಣನು ಎರಡೂ ಕಾಲುಗಳನ್ನು ಮಡಚಿಕೊಂಡು ಕುಳಿತಿದ್ದಾನೆ. ಇವರಿಬ್ಬರ ಹಿನ್ನೆಲೆಯಲ್ಲಿ ಮನೆ ಅದರ ಮೇಲಿನ ಅಂತಸ್ತುಗಳು. ಅಲಂಕಾರಿಕ ಕುಂಬಿಗಳು, ಬಾಗಿಲು ಕಿಟಕಿಗಳು ವಿವರ ಪೂರ್ಣವಾಗಿ ರಚನೆಗೊಂಡಿವೆ. ಕೃಷ್ಣನು ಕಿರೀಟಧಾರಿಯಾಗಿ ತೆಳುಕೆಂಪುವರ್ಣದ ಶಾಲು ಹೊದೆದುಕೊಂಡಿದ್ದಾನೆ. ಆತನ ಮಡದಿಯು ಕಿವಿಯಲ್ಲಿ, ಮೂಗಿನಲ್ಲಿ ರಿಂಗಿನಂತಹ ದೊಡ್ಡದಾದ ಮುತ್ತಿನ ಆಭರಣಗಳನ್ನು ಧರಿಸಿದ್ದಾಳೆ. ಚಿತ್ರದ ಹಿನ್ನೆಲೆಯಾಗಿ ಕೆಂಪುವರ್ಣವನ್ನು ಬಳಸಲಾಗಿದೆ.

III. ಕೃಷ್ಣನ ರಾಸಲೀಲೆಯ ಚಿತ್ರ - ೧ : ಮತ್ತೊಂದು ಚಿಕ್ಕ ಮಾಡಿನಲ್ಲಿ ಕೃಷ್ಣನು ತನ್ನ ಮಡದಿಯ ಜೊತೆಗೆ ರಾಸಲೀಲೆಯಲ್ಲಿ ತೊಡಗಿದ ಚಿತ್ರವಿದೆ. ಮನೆಯ ಒಳ ಆವರಣದಲ್ಲಿ ಒಂದು ಮಂಚದ ಮೇಲೆ ಕೃಷ್ಣನು ತನ್ನ ಮಡದಿಯನ್ನು ಜೋರಾಗಿ ಅಪ್ಪಿಹಿಡಿದು ಮುದ್ದಿಸುತ್ತಿದ್ದಾನೆ. ಮೆತ್ತಗಿರುವ ದಿಂಬಿಗೆ ಒರಗಿದ ಕೃಷ್ಣನು ಕಾಲನ್ನು ಮುಂಚಾಚಿ ತನ್ನ ಸೊಂಟದ ಮೇಲೆ ಪತ್ನಿಯನ್ನು ಕುಳ್ಳಿರಿಸಿಕೊಂಡು ಎರಡೂ ಕೈಯಿಂದ ಆಕೆಯನ್ನು ಬಳಸಿ ಅವಳ ತುಟಿಗೆ ಮುತ್ತು ಕೊಡುತ್ತಿದ್ದಾನೆ. ಕೃಷ್ಣನು ಕಿರೀಟ ಧಾರಿಯಾಗಿದ್ದು ಹಳದಿ ವರ್ಣದ ಶಾಲು ಹೊದ್ದುಕೊಂಡಿದ್ದಾನೆ. ಅದೇ ವರ್ಣದ ಪಂಚೆಯನ್ನು ಉಟ್ಟಿದ್ದಾನೆ. ಆತನ ಮಡದಿಯು ಕೆಂಪುವರ್ಣದ ಗೀರುಗಳುಳ್ಳ ಸೀರೆಯನ್ನು ಧರಿಸಿದ್ದರೆ ದಟ್ಟ ಹಳದೀ ವರ್ಣದ ಕುಪ್ಪಸ ತೊಟ್ಟಿದ್ದಾಳೆ. ಅವರ ಮಂಚದ ಸಮೀಪ ಒಂದು ಪಾತ್ರೆಯಲ್ಲಿ ಹಣ್ಣು ಹಂಪಲುಗಳಿದ್ದರೆ, ಕೆಲವು ಹೂಜಿಗಳಲ್ಲಿ ನೀರು. ಪಾನಕ ಪೇಯಗಳನ್ನೂ ಇಡಲಾಗಿದೆ. ಹಿನ್ನೆಲೆಗೆ ಕೆಂಪುವರ್ಣ ಬಳಿದು ಚಿತ್ರದ ಹೊರ ರೇಖೆಗಳನ್ನು ಕಪ್ಪು ವರ್ಣದಿಂದ ಎಳೆದು ಪೂರೈಸಲಾಗಿದೆ.

ಕೃಷ್ಣನ ರಾಸಲೀಲೆಯ ಚಿತ್ರ - ೨ : ಇನ್ನೊಂದು ಚಿಕ್ಕಮಾಡಿನಲ್ಲಿಯೂ ಕೃಷ್ಣನು ತನ್ನ ಮಡದಿಯ ಜೊತೆ ರಾಸಲೀಲೆಯಲ್ಲಿ ತೊಡಗಿರುವ ಚಿತ್ರವಿದೆ. ಇದರಲ್ಲಿ ಕೃಷ್ಣನು ಮಂಚದ ಮೇಲೆ ಕುಳಿತು ತನ್ನ ತೊಡೆಯ ಮೇಲೆ ಮಡದಿಯನ್ನು ಕುಳ್ಳಿರಿಸಿಕೊಂಡು ರಾಸಲೀಲೆಯಲ್ಲಿ ತೊಡಗಿದ್ದಾನೆ. ಕೃಷ್ಣನು ಮಂಚದಮೇಲೆ ಕುಳಿತು ಕೆಳಗೆ ಕಾಲನ್ನು ಇಳಿಬಿಟ್ಟುಕೊಂಡು ಕುಳಿತಿದ್ದರೆ, ಮಡದಿಯು ಆತನ ಎದೆಗೆ ಬೆನ್ನು ಮಾಡಿ ಹಿಂದೆ ಒರಗಿದಂತೆ ಆತನ ತೊಡೆಯನ್ನೇರಿ ಎರಡೂ ಕೈಗಳನ್ನು ಮೇಲಕ್ಕೆತ್ತಿದ್ದಾಳೆ. ಕೃಷ್ಣನು ಅವಳ ಬೆನ್ನು ಹಿಂದಿನಿಂದ ಎರಡೂ ಕೈಗಳನ್ನು ಬಳಸಿ ಮುಂದೆತಂದು ಅವಳ ಎರಡೂ ಕುಚಗಳನ್ನು ಮರ್ದಿಸುತ್ತಿದ್ದಾನೆ. ಕೃಷ್ಣನು ಬಿಳಿಪಂಚೆಯುಟ್ಟು, ಕೆಂಪುವರ್ಣದ ಶಾಲನ್ನು ಹೊದ್ದುಕೊಂಡಿದ್ದರೆ ಆತನ ಮಡದಿ ಹಳದೀ ವರ್ಣದ ಗೆರೆಗಳುಳ್ಳ ಸೀರೆಯನ್ನು ಉಟ್ಟಿದ್ದಾಳೆ. ಆದರೆ ಕುಪ್ಪಸವನ್ನು ತೊಟ್ಟಿಲ್ಲ. ಇಲ್ಲಿಯೂ ಮಂಚದ ಸಮೀಪದಲ್ಲಿ ಹಣ್ಣು ಹಂಪಲು ಪಾನೀಯಗಳನ್ನು ಪಾತ್ರೆಯಲ್ಲಿ ಇಡಲಾಗಿದೆ. ಚಿತ್ರದ ಹಿನ್ನೆಲೆ ಕೆಂಪಾಗಿದ್ದರೆ ಹೊರರೇಖೆಗಳನ್ನು ಕಪ್ಪು ವರ್ಣದಿಂದ ಎಳೆಯಲಾಗಿದೆ.

IV. ಕೃಷ್ಣ ಸತ್ಯಭಾಮೆಯರ ಚಿತ್ರ : ಇಲ್ಲಿರುವ ಎದುರ ಬದುರಾಗಿರುವ ಎರಡು ಚಿಕ್ಕ ಮಾಡುಗಳಲ್ಲಿ ಕೃಷ್ಣ ಮತ್ತು ಸತ್ಯಭಾಮೆಯರ ಸಂಭಾಷಣೆಯ ದೃಶ್ಯಗಳಿವೆ. ಪಾರಿಜಾತ ಹೂವನ್ನು ನೋಡಿ ಅದು ತನಗೂ ಬೇಕೆಂದು ಸತ್ಯಭಾಮೆ ಹಠಮಾಡಿ ಅದನ್ನು ತರಲು ಕೃಷ್ಣನನ್ನು ಕಳುಹಿಸಿಕೊಡುವ ದೃಶ್ಯ ಮೊದಲ ಚಿತ್ರದಲ್ಲಿದೆ. ಇದರಲ್ಲಿ ಸತ್ಯಭಾಮೆಯು ಮನೆಯ ಹೊರಭಾಗದಲ್ಲಿ ನಿಂತು ಕೃಷ್ಣನೊಡನೆ ಸಂಭಾಷಣೆಯಲ್ಲಿ ತೊಡಗಿದ್ದಾಳೆ. ಕೃಷ್ಣನು ಗಧೆಯನ್ನು ಹಿಡಿದುಕೊಂಡು ಪಾರಿಜಾತ ತರಲು ಅಣಿಯಾಗಿದ್ದಾನೆ. ಆತ ಹಳದಿ ವರ್ಣದ ಪಂಚೆ ಉಟ್ಟು ತಿಳಿಕೆಂಪು ವರ್ಣದ ಶಾಲು ಹೊದೆದಿದ್ದಾನೆ. ಹಿನ್ನೆಲೆಯ ಮನೆಯು ಬಿಳಿ ಬಣ್ಣದಲ್ಲಿದೆ. ಈ ಗೂಡಿನ ಎದುರಿಗಿರುವ ಇನ್ನೊಂದು ಚಿಕ್ಕಮಾಡಿನಲ್ಲಿ ಕೃಷ್ಣನು ಸತ್ಯಭಾಮೆಗೆ ಮಾತುಕೊಟ್ಟಂತೆ ಪಾರಿಜಾತ ಹೂವನ್ನು ತಂದು ಕೊಟ್ಟಿದ್ದಾನೆ. ಬರೀ ಹೂವಲ್ಲದೇ ದೇವಲೋಕದಲ್ಲಿರುವ ಪಾರಿಜಾತದ ಗಿಡವನ್ನೇ ಕೃಷ್ಣ ಕಿತ್ತುಕೊಂಡು ಬಂದು ಭಾಮೆಗೆ ಕೊಡುತ್ತಿದ್ದಾನೆ. ಮನೆಯ ಬಾಗಿಲಲ್ಲಿ ಸತ್ಯಭಾಮೆಯು ಕೃಷ್ಣನನ್ನು ಎದುರುಗೊಳ್ಳುತ್ತಲಿದ್ದು. ಕೃಷ್ಣನು ಪಾರಿಜಾತ ವೃಕ್ಷವನ್ನು ಎಡಗೈಯಲ್ಲಿ ಹಿಡಿದುಕೊಂಡು ಬಲಗೈಯಲ್ಲಿ ಗಧೆಯನ್ನು ಹಿಡಿದಿದ್ದಾನೆ. ತನ್ನ ಕೋರಿಕೆ ಈಡೇರಿದ್ದರಿಂದ ಭಾಮೆಯ ಮುಖದಲ್ಲಿ ಸಂತೋಷ ಕಾಣಿಸುತ್ತಿದೆ. ಈ ಚಿತ್ರಗಳಲ್ಲಿ ಭಾಮೆಯು ಮರಾಠಾ ಶೈಲಿಯಲ್ಲಿ ಸೀರೆಯನ್ನು ಉಟ್ಟು, ಹಣೆಗೆ ಅಡ್ಡವಾಗಿ ಕುಂಕುಮ ಹಚ್ಚಿಕೊಂಡಿದ್ದಾಳೆ. ಮೂಗಿನಲ್ಲಿ ರಿಂಗಿನ ವಿನ್ಯಾಸ ದೊಡ್ಡದಾದ ಮುತ್ತಿನ ಮೂಗುತಿ ಇವೆ ಆಕೆಯನ್ನು ನೋಡಿದ ತಕ್ಷಣ ಮರಾಠಾ ಪೇಶ್ವೆ ದೊರೆಗಳ ರಾಜ ಪರಿವಾರದವರಂತೆ ತೋರುತ್ತಾಳೆ. ಚಿತ್ರದ ಹಿನ್ನೆಲೆಯಲ್ಲಿ ಅರಮನೆ. ಅದರ ಮೇಲಿನ ಅಂತಸ್ತುಗಳು. ತೆರೆದ ಬಾಲ್ಕನಿ, ಕಿಟಕಿ ಬಾಗಿಲುಗಳು ಸುಂದರವಾಗಿ ಮೂಡಿಬಂದಿವೆ. ಎರಡೂ ಚಿತ್ರಗಳ ಹಿನ್ನೆಲೆಯು ಕೆಂಪಾಗಿದೆ. ಎರಡನೆಯ ಚಿತ್ರದಲ್ಲಿ ಕೃಷ್ಣ ಹಿಡಿದುಕೊಂಡ ಪಾರಿಜಾತದ ಗಿಡವಲ್ಲಿ ಹೂಗಳು ತುಂಬಿಕೊಂಡಿವೆ. ಸ್ಥಳಾವಕಾಶವು ಅತ್ಯಂತ ಕಡಿಮೆಯಾದರೂ ಎರಡೇ ಆಕೃತಿಗಳಿಂದ ಸುಂದರವಾಗಿ ಸಂಯೋಜನೆಗೊಳಿಸಲಾಗಿದೆ. ಇಲ್ಲಿರುವ ಇನ್ನೆರಡು ಎದುರುಬದುರಾಗಿರುವ ಚಿಕ್ಕಮಾಡುಗಳಲ್ಲಿ ಕೃಷ್ಣನು ತನ್ನ ಪತ್ನಿಯ ಸಂಗಡ ಮಾತನಾಡುತ್ತ ಕುಳಿತಿದ್ದಾನೆ. ಎರಡೂ ಚಿತ್ರಗಳಲ್ಲೂ ಕೃಷ್ಣ ಮತ್ತು ಆತನ ಮಡದಿ ಹಿಂದಿನ ತಲೆದಿಂಬಿಗೆ ಒರಗಿಕೊಂಡು ಕುಳಿತಿದ್ದಾರೆ. ಅವರು ಕುಳಿತ ಸ್ಥಳವು ಒಂದು ಕಿಟಕಿಯ ಪಕ್ಕ ಎದಂತೆ ಕಾಣುತ್ತದೆ. ಒಂದು ಚಿತ್ರದಲ್ಲಿ ಕಿಟಕಿಯ ಪರದೆಯನ್ನು ಕೆಳಗೆ ಇಳಿಬಿಟ್ಟಿದ್ದರೆ ಇನ್ನೊಂದು ಚಿತ್ರದಲ್ಲಿ ಪರದೆಯನ್ನು ಮೇಲಕ್ಕೆ ಸುರುಳಿ ಸುತ್ತಿ ಕಟ್ಟಲಾಗಿದೆ. ಅವರು ಮಂಚದ ಮೇಲೆ ಕುಳಿತಿದ್ದು ನೆಲದ ಬಣ್ಣವು ಕಡು ನೀಲಿಯಾಗಿದೆ. ಕೃಷ್ಣನು ಹಳದೀ ಪಂಚೆ ಮತ್ತು ಕೆಂಪುಶಾಲನ್ನು ಹೊದ್ದಿದ್ದಾನೆ. ಆತನ ಪತ್ನಿಯು ತಲೆತುಂಬ ಸೆರಗು ಹೊದ್ದುಕೊಂಡಿದ್ದು, ವೇಷಭೂಷಣಗಳು ಮರಾಠಾ ಪೇಶ್ವೆ ಶೈಲಿಯಲ್ಲಿವೆ. ಚಿತ್ರದ ಮೇಲ್ಭಾಗದಲ್ಲಿ ಅರಮನೆಯ ಮೇಲಂತಸ್ತುಗಳನ್ನು ತೋರಿಸಲಾಗಿದೆ. ಇಡೀ ಚಿತ್ರದ ಹೊರಗಿರುವ ಕಮಾನಿನ ಮೇಲೆ ಹೂಬಳ್ಳಿಯ ಚಿತ್ರಗಳನ್ನು ರಚಿಸಲಾಗಿದೆ.

V. ಶಿವಪಾರ್ವತಿಯ ಚಿತ್ರ : ಒಂದು ಚಿಕ್ಕಮಾಡಿನಲ್ಲಿ ಶಿವನು ತನ್ನ ತೊಡೆಯ ಮೇಲೆ ಪಾರ್ವತಿಯನ್ನು ಕುಳ್ಳಿರಿಸಿಕೊಂಡು ಯೋಗದಲ್ಲಿ ತೊಡಗಿದ್ದಾನೆ. ಇಲ್ಲಿ ಪಾರ್ವತಿಯ ಚಿತ್ರ ಅತ್ಯಂತ ಚಿಕ್ಕದಾಗಿದ್ದು ಶಿವನ ಬಲತೊಡೆಯಮೇಲೆ ಕುಳಿತಿದ್ದಾಳೆ. ಶಿವನು ಒಂದು ಪೀಠದ ಮೇಲೆ ಕುಳಿತಿದ್ದು ಮುಂದೆ ಸ್ವಲ್ಪ ದೂರದಲ್ಲಿ ನಂದಿಯು ಮಲಗಿಕೊಂಡಿದೆ. ನಂದಿಯ ಮೈಮೇಲೆ ಅಲಂಕಾರಿಕ ವಸ್ತ್ರವನ್ನು ಹಾಕಲಾಗಿದ್ದು, ಪಾರ್ವತಿಯು ಕೆಂಪು ಸೀರೆಉಟ್ಟುಕೊಂಡಿದ್ದಾಳೆ. ಜಟಾಧಾರಿ ಶಿವನ ಈ ಚಿತ್ರ ಹೆಚ್ಚಾಗಿ ನಾಶವಾಗಿದೆ.

VI. ಭಕ್ತನೊಬ್ಬನ ಚಿತ್ರ : ಶಿವ ಪಾರ್ವತಿಯರ ಚಿತ್ರದ ಎದುರಿಗಿರುವ ಚಿಕ್ಕಮಾಡಿನಲ್ಲಿ ಇರುವ ಒಂದು ಚಿತ್ರದಲ್ಲಿ ಕಿರೀಟಧರಿಸಿದ ಒಬ್ಬ ವ್ಯಕ್ತಿಯು ಒಂಟಿಗಾಲಲ್ಲಿ ನಿಂತು. ಕೈಮುಗಿದು. ಮೇಲಕ್ಕೆ ನೋಡುತ್ತ ತಪಸ್ಸಿನಲ್ಲಿ ತೊಡಗಿದ್ದಾನೆ. ಈ ವ್ಯಕ್ತಿಯ ಮೇಲ್ಗಡೆಗೆ ನಾಲ್ಕು ಆಕೃತಿಗಳಿದ್ದು ಅವು ಬಣ್ಣ ಉದುರಿ ಮಾಸಿಹೋಗಿವೆ. ಹೀಗಾಗಿ ಅವು ಏನೆಂದು ತಿಳಿಯಲಾಗುತ್ತಿಲ್ಲ. ಬಹುಶ ಇದು ಕೈಲಾಸದ ದೃಶ್ಯವಾಗಿರಬಹುದು. ಹಿಂದಿನ ಚಿತ್ರವು ಶಿವಪಾರ್ವತಿಯರನ್ನು ಕುರಿತಾಗಿದ್ದಂತೆ. ಇದುಕೂಡಾ ಶಿವಪಾರ್ವತಿಗೆ ಸಂಬಂಧಿಸಿದ ಕೈಲಾಸ ದೃಶ್ಯವಾಗಿದ್ದು, ಕೆಳಗೆ ಭೂಲೋಕದಲ್ಲಿ ಭಕ್ತನೊಬ್ಬ ಶಿವನನ್ನು ಕುರಿತು ತಪಸ್ಸು ಮಾಡುತ್ತಿರಬಹುದು. ಭಕ್ತನ ಚಿತ್ರವೊಂದನ್ನುಳಿದು ಮೇಲಿನ ಭಾಗದ ಕೈಲಾಸ ದೃಶ್ಯ ಅಲ್ಲಿಯ ವ್ಯಕ್ತಿ ಚಿತ್ರಗಳು ನಾಶವಾಗಿಹೋಗಿವೆ. ಚಿತ್ರದ ಹಿನ್ನೆಲೆ ಕೆಂಪಾಗಿದೆ. ಚಿತ್ರದ ಹೊರಕಮಾನಿಗೆ ಅಲಂಕಾರಿಕವಾದ ನೀಲಿ. ಹಳದಿ. ಕೆಂಪು ಹೂಗಳ ಬಳ್ಳಿಯನ್ನು ರಚಿಸಿದ್ದಾರೆ. ಶಿವನ ಚಿತ್ರವಿರುವ ಮಾಡದ ಕೆಳಗೆ ಮತ್ತು ಭಕ್ತನ ಚಿತ್ರವಿರುವ ಮಾಡದ ಕೆಳಗೆ ಇನ್ನೆರಡು ಚಿಕ್ಕಮಾಡಗಳಿದ್ದು ಅವೆರಡರಲ್ಲೂ ಐದು ವರ್ಣದ ಪಕಳೆಗಳನ್ನು ಹೊಂದಿದ್ದು ಅದರ ಸುತ್ತಲೂ ಬಂಗಾರ ವರ್ಣದ ದಪ್ಪನಾದ ಹೊರರೇಖೆ ಎಳೆಯಲಾಗಿದೆ. ಈ ಹೂಗಳ ಚಿತ್ರಕ್ಕೇ ಮತ್ತೆ ಸುತ್ತಲೂ ಅಲಂಕಾರಿಕವಾಗಿ ಹೂಬಳ್ಳಿಯ ಚಿತ್ರವನ್ನು ರಚಿಸಿದೆ.

VII. ಹೂಕುಂಡದ ಚಿತ್ರಗಳು : ಒಂದು ದೊಡ್ಡ ಮಾಡದ ಅಕ್ಕಪಕ್ಕದಲ್ಲಿನ ಎರಡು ಚಿಕ್ಕ ಮಾಡುಗಳಲ್ಲಿ ಹೂಕುಂಡದ ಚಿತ್ರಗಳಿವೆ. ಈ ಮಾಡುಗಳು ಆಕಾರದಲ್ಲಿ ಉದ್ದುದ್ದವಾಗಿದ್ದು ಚಿತ್ರಗಳನ್ನು ಅದಕ್ಕೆ ತಕ್ಕಂತೆ ಹೊಂದಿಸಲಾಗಿದೆ. ಕೆಳಗೆ ಚಿಕ್ಕ ಚಿಕ್ಕ ಹೂಜಿಗಳ ಹಾಗಿರುವ ಹೂಕುಂಡಗಳಿದ್ದು ಅದರಲ್ಲಿ ಮಾಡದ ಮೇಲ್ತುದಿಯವರೆಗೂ ಹೂಗಿಡಗಳನ್ನು ಉದ್ದಕ್ಕೂ ಬೆಳೆಸಲಾಗಿದೆ. ಕುಂಡದ ಆಕಾರಕ್ಕೆ ಹೂಗಿಡಗಳು ಬೆಳೆದಿರುವ ಎತ್ತರ ಅತಿ ಎನಿಸಿದರೂ ಸ್ಥಳ ಹೊಂದಾಣಿಕೆಯ ದೃಷ್ಟಿಯಿಂದ ಉತ್ತಮ ಸಂಯೋಜನೆ ಎನಿಸುತ್ತದೆ. ಕುಂಡದ ಹೂಗಿಡಗಳು ಉದ್ದಕ್ಕೆ ಎತ್ತರವಾಗಿದ್ದು ಯಾವುದೇ ಎಲೆಯನ್ನು ಹೊಂದದೇ ಕೊನೆಯವರೆಗೂ ವಿವಿಧ ರೀತಿಯ ಹೂಗಳನ್ನೇ ಹೊಂದಿವೆ. ಸೇವಂತಿಗೆ. ಸಂಪಿಗೆ. ಕನಕಾಂಬರ. ಮಲ್ಲಿಗೆ. ಚಂಡುಹೂ ಹೀಗೆ ವೈವಿಧ್ಯ ಹೂಗಳು ಈ ಗಿಡಗಳಲ್ಲಿವೆ. ಗಿಡಗಳು ಗುಚ್ಚದಂತೆ ಇರದೇ ನೇರವಾದ ಒಂದು ಕಟ್ಟಿಗೆಗೆ ಸಾಲಾಗಿ ಹೂಗಳನ್ನು ಚುಚ್ಚಿದಂತೆ ಕಾಣುವುದು. ಒಂದೊಂದು ಕಡೆಗೆ ಸುಮಾರು ಇಪ್ಪತ್ತಕ್ಕೂ ಹೆಚ್ಚು ಹೂಗಳನ್ನು ಈ ಗಿಡಗಳು ಹೊಂದಿವೆ. ಪ್ರತಿಯೊಂದು ಬೇರೆ ಬೇರೆ ಶೈಲಿಯಲ್ಲೇ ಇರುವುದು ಗಮನಾರ್ಹ. ಚಿತ್ರದ ಹೊರ ಕಮಾನಿಗೂ ಮತ್ತೆ ಹೂಬಳ್ಳಿಯ ನಕ್ಷೆಯನ್ನು ರಚಿಸಲಾಗಿದೆ.

VIII. ಮಹಿಳೆಯರ ಚಿತ್ರಗಳು : ಹೂಕುಂಡದ ಎರಡೂ ಚಿಕ್ಕ ಮಾಡುಗಳ ಕೆಳಗೆ ಇನ್ನೂ ಚಿಕ್ಕದಾಗಿರುವ ಇನ್ನೆರಡು ಮಾಡುಗಳಿವೆ. ಅದಲ್ಲಿ ಪ್ರತಿಯೊಂದರಲ್ಲೂ ಒಬ್ಬೊಬ್ಬ ಮಹಿಳೆಯನ್ನು ಚಿತ್ರಿಸಲಾಗಿದೆ. ಈ ಮಹಿಳೆಯರು ಹಳದೀ ಸೀರೆ ಉಟ್ಟು ಕೆಂಪು. ಹಸಿರು ವರ್ಣದ ಕುಪ್ಪಸ ತೊಟ್ಟುಕೊಂಡಿದ್ದಾರೆ. ಮೇಲ್ಗಡೆಗೆ ಹೂಗಿಡಗಳಿದ್ದು ಅದರಲ್ಲಿ ಹೂಗಳು ಅರಳಿಕೊಂಡಿವೆ. ಈ ಸ್ತ್ರೀ ಚಿತ್ರಗಳು ಮಾತ್ರ ಮರಾಠಾ ಶೈಲಿಯ ಉಡುಪುನ್ನು ಧರಿಸಿಲ್ಲ ಹಿನ್ನೆಲೆಯನ್ನು ಕೆಂಪಿನಿಂದ ತುಂಬಿಸಲಾಗಿದೆ.

IX. ಶಿವಲಿಂಗದ ಚಿತ್ರ : ಇನ್ನೊಂದು ಚಿಕ್ಕಮಾಡದಲ್ಲಿ ಒಂದು ಮಂಟಪದಲ್ಲಿ ಶಿವಲಿಂಗವೊಂದಿದೆ. ಈ ಮಂಟಪವು ನಾಲ್ಕು ಕಡೆಗೆ ಕಂಬಗಳುನ್ನು ಹೊಂದಿ ಮೇಲೆ ಛತ್ತನ್ನು ಹೊಂದಿದ ತೆರೆದ ಮಂಟಪವಾಗಿದೆ. ಇದು ಕೂಡಲಸಂಗಮದಲ್ಲಿರುವ ಶಿವಲಿಂಗ ಮಂಟಪವನ್ನು ಹೋಲುತ್ತದೆ. ಒಂದು ಕಟ್ಟೆಯ ಮೇಲಿರುವ ಈ ಮಂಟಪದಲ್ಲಿ

ಒಳಗೆ ಕಪ್ಪು ಶಿಲೆಯ ಲಿಂಗವಿದ್ದು. ಮಂಟಪದ ಎದುರಿಗೆ ಒಬ್ಬ ವ್ಯಕ್ತಿಯು ಕುಳಿತು ಪೂಜೆಯಲ್ಲಿ ತೊಡಗಿದ್ದಾನೆ. ಮಂಟಪದ ಬಲಗಡೆಗೆ ಒಂದು ಬೃಹತ್ ಗಿಡವಿದ್ದು ಆ ಗಿಡದಲ್ಲಿ ಹೂ ಕಾಯಿಗಳು ಬಿಟ್ಟಿವೆ. ಪೂಜೆಯಲ್ಲಿ ನಿರತ ವ್ಯಕ್ತಿಯು ಈಶ್ವರ ಲಿಂಗಕ್ಕೆ ಹೂಗಳಿಂದ ಅರ್ಚನೆ ಮಾಡುತ್ತಲಿದ್ದಾನೆ. ಚಿತ್ರದ ಹೊರಭಾಗದಲ್ಲಿ ದೊಡ್ಡ ದೊಡ್ಡ ಬಿಳಿ ಹೂಗಳನ್ನು ಅಲ್ಲಲ್ಲಿ ರಚಿಸಿ ಚಿತ್ರವನ್ನು ಅಲಂಕರಿಸಲಾಗಿದೆ. ಈ ಚಿತ್ರದ ಎಡಬಲದಲ್ಲಿ ಎರಡು ಚಿಕ್ಕಮಾಡುಗಳಿದ್ದು ಅವುಗಳಲ್ಲಿ ಮೂರು ಎಸಳಿನ ಒಂದೊಂದು ಹಳದೀ ಹೂಗಳನ್ನು ರಚಿಸಿದೆ.

X. ಪೂಜಾರಿಗಳ ಚಿತ್ರ : ಶಿವಲಿಂಗದ ಚಿತ್ರವಿರುವ ಮಾಡದ ಎಡಬಲಗಳಲ್ಲಿ ಮತ್ತೆರಡು ತ್ರಿಕೋನಾಕಾರದ ಮಾಡುಗಳಿದ್ದು ಅವುಗಳಲ್ಲಿ ಪ್ರತಿಯೊಂದರಲ್ಲಿ ಒಬ್ಬೊಬ್ಬ ಬ್ರಾಹ್ಮಣ ವ್ಯಕ್ತಿಯನ್ನು ಚಿತ್ರಿಸಲಾಗಿದೆ. ಈ ವ್ಯಕ್ತಿಗಳು ಪಂಚೆ ಉಟ್ಟುಕೊಂಡು ಮೈಮೇಲೆ ಶಾಲುಧರಿಸಿದ್ದಾರೆ. ನೆಲದ ಮೇಲೆ ಕುಳಿತ ಇವರು ಗ್ರಂಥವನ್ನು ಪಠಣಮಾಡುತ್ತಿದ್ದಾರೆ. ತಲೆಗೂದಲನ್ನು ಹಿಂದಕ್ಕೆ ಗಂಟುಕಟ್ಟಿಕೊಂಡಿದ್ದು ಮೈಗಾ ನಾಮಧರಿಸಿ ಜನಿವಾರ ಹಾಕಿಕೊಂಡಿರುವರು. ಎದುರಿನಲ್ಲಿ ಗ್ರಂಥವಿದ್ದು ಕೈಯಲ್ಲಿ ಮತ್ತೊಂದು ಗ್ರಂಥ ಹಿಡಿದು ಪಠಣ ಮಾಡುತ್ತಿದ್ದಾರೆ. ಹಿನ್ನಲೆ ಕೆಂಪುವರ್ಣವಾಗಿದೆ.

XI. ಅಲಂಕಾರಿಕ ಹೂವಿನ ಚಿತ್ರಗಳು : ಗ್ರಂಥ ಪಠಣ ಮಾಡುತ್ತಿರುವ ಪೂಜಾರಿಗಳ ಚಿತ್ರದ ಕೆಳಗೆ ಮೂಲೆಯಲ್ಲಿರುವ ಇನ್ನೆರಡು ಚಿಕ್ಕಮಾಡುಗಳಲ್ಲಿ ಐದು ಎಸಳಿನ ಅಲಂಕಾರಿಕ ಹೂಗಳಿವೆ. ಒಂದೊಂದು ಮಾಡಿನಲ್ಲೂ ಒಂದೊಂದು ಹೂಗಳಿವೆ. ಈ ಹೂಗಳು ಹಳದಿವರ್ಣದಲ್ಲಿದ್ದು ಅದರಲ್ಲಯೇ ದಟ್ಟ ತೆಳು ಹೀಗೆ ಬೇರೆ ಬೇರೆ ಛಾಯೆಗಳನ್ನು ಹೊಂದಿವೆ. ಈ ಹೂಗಳ ಚಿತ್ರಗಳಿರುವ ಮಾಡುಗಳ ಹೊರಭಾಗದ ಕಮಾನನ್ನು ಮತ್ತೆ ಬಿಳಿ ಹಳದಿ ಹೂಗಳ ಬಳ್ಳಿಯಿಂದ ಅಲಂಕರಿಸಲಾಗಿದೆ.

XII. ದೇವಿಯ ಚಿತ್ರ : ಮತ್ತೊಂದು ಚಿಕ್ಕಗೂಡಿನಲ್ಲಿ ಆರು ಕೈಗಳನ್ನು ಹೊಂದಿದ ದೇವಿಯ ಚಿತ್ರವಿದ್ದು, ಧ್ಯಾನಮುದ್ರೆಯಲ್ಲಿ ಕುಳಿತಂತೆ ಚಿತ್ರಿಸಲಾಗಿದೆ. ದೇವಿಯು ಕಮಲದ ಮೇಲೆ ಕುಳಿತಿದ್ದು ಪ್ರತಿಯೊಂದು ಕೈಯಲ್ಲೂ ಬೇರೆ ಬೇರೆ ಆಯುಧಗಳನ್ನು ಹಿಡಿದಿದ್ದಾಳೆ. ಇದು ಸಂಸ್ಥಾನಿಕರ ಕುಲದೇವತೆಯಾದ ಅಂಬಾಭವಾನಿಯನ್ನು ಪ್ರತಿನಿಧಿಸುತ್ತಿರಬೇಕು. ದೇವಿಯ ಎಡಬಲಗಳಲ್ಲಿ ಚಿಕ್ಕಮಾಡುಗಳಿದ್ದು ಅವುಗಳಲ್ಲಿ ಒಂದೊಂದು ಹೂಗಳನ್ನು ರಚಿಸಲಾಗಿದೆ. ಚಿತ್ರಉಳ್ಳ ಇಡೀ ಮಾಡಿನ ಸುತ್ತಲು ಅಲ್ಲಲ್ಲಿ ಹೂಗಳನ್ನ ರಚಿಸಿ ಮಾಡನ್ನು ಅಲಂಕರಿಸಲಾಗಿದೆ.

XIII. ತಂಬೂರಿ ನುಡಿಸುತ್ತಿರುವವರು : ದೇವಿ ಚಿತ್ರ ಇರುವ ಮಾಡಿನ ಅಕ್ಕಪಕ್ಕದಲ್ಲಿ ತ್ರಿಕೋನಾಕಾರದ ಇನ್ನೆರಡು ಮಾಡುಗಳಿವೆ. ಅವುಗಳಲ್ಲಿ ಪ್ರತಿಯೊಂದರಲ್ಲೂ ಒಬ್ಬೊಬ್ಬ ವ್ಯಕ್ತಿ ತಂಬೂರಿ ತಾಳ ನುಡಿಸುತ್ತ ದೇವರ ನಾಮಸ್ಮರಣೆಯಲ್ಲಿ ತೊಡಗಿದ್ದಾರೆ. ಒಂದು ಕೈಯಲ್ಲಿ ತಂಬೂರಿ ಮೀಟುತ್ತ ಇನ್ನೊಂದು ಕೈಯಿಂದ ಚಿಟಿಕೆ ಬಾರಿಸುತ್ತಿದ್ದಾರೆ. ಇಬ್ಬರೂ ಪದ್ಮಾಸನ ಹಾಕಿಕುಳಿತ ಭಂಗಿಯಲ್ಲಿದ್ದು. ಪಂಚೆ ಉಟ್ಟು, ತಲೆಗೆ ಪಂಢರಾಪುರದ ಪಾಂಡುರಂಗನ ಭಕ್ತರು ಧರಿಸುವಂತಹ ಟೊಪ್ಪಿಗೆ ಧರಿಸಿದ್ದಾರೆ. ಮೈ ಮೇಲೆ ಶಾಲು ಹೊದೆದುಕೊಂಡು ಮೈ ತುಂಬ ನಾಮ ಹಚ್ಚಿಕೊಂಡಿದ್ದಾರೆ. ಅವರು ಕುಳಿತು ದೇವರನಾಮ ಹಾಡುತ್ತಿರುವ ರೀತಿ ಆಕರ್ಷಕವಾಗಿದೆ. ಪಂಚೆಗಳು ಮತ್ತು ಶಾಲುಗಳು ಬಿಳಿ ಮತ್ತು ಹಳದಿ ವರ್ಣದಿಂದ ಕೂಡಿವೆ. ಈ ತಂಬೂರಿ ವಾದಕರ ಚಿತ್ರವಿರುವ ಮಾಡಿನ ಕೆಳಗಡೆ ಎರಡು ಅಲಂಕಾರಿಕ ಗಿಡಗಳ ಚಿತ್ರಗಳಿವೆ.

XIV. ಅಲಂಕಾರಿಕ ಗಿಡಗಳ ಚಿತ್ರಗಳು : ತಂಬೂರಿ ವಾದಕರ ಚಿತ್ರವಿರುವ ಮಾಡಿನ ಕೆಳಗಡೆ ಮೂಲೆಯಲ್ಲಿ ಎಡಬಲಗಳಲ್ಲಿ ಮತ್ತೆರಡು ಚಿಕ್ಕ ಮಾಡುಗಳಿವೆ. ಅವುಗಳಲ್ಲಿ ಅಲಂಕಾರಿಕವಾಗಿ ರಚಿಸಿದ ಹೂಗಿಡಗಳಿವೆ. ಒಂದು ಕಡೆಗೆ ಹಳದೀ ಹೂಗಳಿದ್ದರೆ. ಇನ್ನೊಂದು ಕಡೆಗೆ ನೀಲಿವರ್ಣದ ಹೂಗಳನ್ನು ರಚಿಸಲಾಗಿದೆ. ಈ ದೊಡ್ಡ ಹೂಗಳು ಐದು ಎಸಳುಗಳನ್ನು ಹೊಂದಿವೆ. ಇಲ್ಲಿನ ಚಿತ್ರಕಾರನಿಗೆ ಐದು ಎಸಳಿನ ಹೂಗಳನ್ನು ಚಿತ್ರಸುವುದು ಇಷ್ಟವೆಂದು ತೋರುತ್ತದೆ. ಎಲ್ಲ ಕಡೆಯ ಹೂಗಳಿಗೂ ಐದು ಎಸಳನ್ನು ಮಾತ್ರ ಇಲ್ಲಿನ ಚಿತ್ರಕಾರ ಚಿತ್ರಿಸಿದ್ದಾನೆ. ಚಿತ್ರದ ಹಿನ್ನಲೆಯ ವರ್ಣವು ಇಲ್ಲಿಯೂ ಕೆಂಪಿನಿಂದ ಕೂಡಿದೆ.

ಸೈಪ್ರಸ್ ವೃಕ್ಷಗಳು : ದೊಡ್ಡ ಮಾಡ ಒಂದರ ಎಡಬಲ ಮೂಲೆಯಲ್ಲಿರುವ ತ್ರಿಕೋನಾಕಾರದ ಎರಡು ಮಾಡುಗಳಲ್ಲಿ ಸೈಪ್ರಸ್ ವೃಕ್ಷಗಳನ್ನು ಚಿತ್ರಸಲಾಗಿದೆ. ಈ ವೃಕ್ಷಗಳು ಅಲಂಕಾರಿಕವಾಗಿದ್ದು ನೇರವಾಗಿರುವ ಬದಲು ಮಾಡಿನ ಆಕಾರ ಡೊಂಕಾದಂತೆ ಅದನ್ನು ಹೊಂದಿಕೊಂಡು ಇವು ಡೊಂಕಾಗಿ ಬೆಳೆದಂತೆ ಚಿತ್ರಿಸಲಾಗಿದೆ. ಈ ವೃಕ್ಷಗಳ ಬಣ್ಣ ಮೂಲದಲ್ಲಿ ಹಸಿರು ಇರಬಹುದು. ಆದರೆ ಈಗ ವರ್ಣವೆಲ್ಲ ಉದುರಿಹೋಗಿ ಬೂದುವರ್ಣದ ಗಿಡಗಳಾಗಿ ಕಾಣುತ್ತಲಿವೆ. ಈ ಸೈಪ್ರಸ್ ವೃಕ್ಷಗಳ ಸುತ್ತಲೂ ಅಲಂಕಾರಿಕ ಹೂಬಳ್ಳಿಯನ್ನು ರಚಿಸಲಾಗಿದೆ. ಹಿನ್ನೆಲೆವರ್ಣ ಯಥಾಪ್ರಕಾರ ಕೆಂಪಾಗಿದೆ.

XV. ಕಮಲದ ಹೂವಿನ ಚಿತ್ರ : ಸೈಪ್ರಸ್ ವೃಕ್ಷಗಳ ಚಿತ್ರಗಳಿರುವ ಮಾಡಿನ ಮೇಲೆ ಅಡ್ಡಲಾಗಿರುವ ಇನ್ನೊಂದು ಚಿಕ್ಕ ಗೂಡಿನಲ್ಲಿ ಮೂರು ಕಮಲದ ಹೂಗಳನ್ನು ಚಿತ್ರಿಸಲಾಗಿದೆ. ಈ ಮೂರರಲ್ಲಿ ಮಧ್ಯದ ಹೂ ದೊಡ್ಡದಾಗಿದ್ದು ಎಡಬಲದ ಹೂಗಳು ಚಿಕ್ಕವಾಗಿವೆ. ಕಮಲದ ಹೂಗಳಿಗೆ ಎಲೆಯನ್ನೂ ತೀರ ಕೆಳಗೆ ರಚಿಸಲಾಗಿದ್ದು ಮೊದಲ ನೋಟಕ್ಕೆ ಕಂಡುಬರುವುದಿಲ್ಲ. ಈ ಕಮಲ ಹೂಗಳು ತೆಳು ಕೆಂಪುವರ್ಣದಿಂದ ಕೂಡಿವೆ. ಕಮಲ ಹೂಗಳ ಎಡಬಲದಲ್ಲಿಯೂ ಮತ್ತೆ ಅಲಂಕಾರಿಕ ಬೇರೆ ಜಾತಿಯ ಹೂಗಳನ್ನು ರಚಿಸಲಾಗಿದೆ. ಅವು ನೀಲಿ. ಹಳದಿ ವರ್ಣದಲ್ಲಿವೆ. ಚಿತ್ರದ ಹೊರ ಚೌಕಟ್ಟನ್ನು ಹೂಬಳ್ಳಿಯಿಂದ ಅಲಂಕರಿಸಿದೆ.

XVI. ನರಸಿಂಹ ಅವತಾರದ ಚಿತ್ರ : ಅಡ್ಡಲಾಗಿರುವ ಇನ್ನೊಂದು ಚಿಕ್ಕಮಾಡಿನಲ್ಲಿ ವಿಷ್ಣುವಿನ ನರಸಿಂಹ ಅವತಾರದ ಚಿತ್ರವನ್ನು ರಚಿಸಿದ್ದಾರೆ. ಕಂಬವನ್ನು ಸೀಳಿಬಂದ ನರಸಿಂಹನು ಹಿರಣ್ಯಕಶ್ಯಪನನ್ನು ಎತ್ತಿ ತನ್ನ ತೊಡೆಯ ಮೇಲೆ ಹಾಕಿಕೊಂಡು ಆತನ ಹೊಟ್ಟೆಯನ್ನು ಬಗೆಯುತ್ತಿದ್ದಾನೆ. ನಾಲ್ಕು ಕೈಗಳನ್ನು ಹೊಂದಿದ ನರಸಿಂಹ ಹಿಂದಿನೆರಡು ಕೈಗಳಲ್ಲಿ ಶಂಖ ಚಕ್ರಗಳನ್ನು ಹಿಡಿದಿದ್ದರೆ. ಮುಂದಿನ ಕೈಗಳಿಂದ ರಾಕ್ಷಸನ ಹೊಟ್ಟೆಯನ್ನು ಸೀಳುತ್ತಿದ್ದಾನೆ. ಹಿರಣ್ಯಕಶ್ಯಪನನ್ನು ಕಪ್ಪುವರ್ಣದಲ್ಲಿ ಚಿತ್ರಿಸಿದ್ದರೆ ನರಸಿಂಹನನ್ನು ಗೌರವರ್ಣದಲ್ಲಿ ಚಿತ್ರಿಸಲಾಗಿದೆ. ನರಸಿಂಹನ ಎಡಭಾಗದಲ್ಲಿ ಬಾಲಕ ಪ್ರಹ್ಲಾದನು ಚಡ್ಡಿಧರಿಸಿದ್ದು ಹೆಗಲಮೇಲೆ ಶಲ್ಯೆ ಹಾಕಿಕೊಂಡು ತಲೆಗೆ ಮರಾಠಾ ಶೈಲಿಯ ಟೊಪ್ಪಿಗೆಯನ್ನು ಧರಿಸದ್ದಾನೆ. ಅಂತಹ ಚಿಕ್ಕ ಸ್ಥಳದಲ್ಲೂ ಪ್ರತಿಯೊಂದು ಸೂಕ್ಷ್ಮ ವಿವರಗಳನ್ನು ವಿವರವಾಗಿ ಚಿತ್ರಿಸಲಾದೆ. ಚಿತ್ರಗಳ ಹೊರ ರೇಖೆ ಗಳನ್ನು ಕಪ್ಪು ವರ್ಣದಲ್ಲಿ ಎಲೆಯಲಾಗಿದ್ದು, ನರಸಿಂಹನ ಚಿತ್ರದ ಮೇಲೆ ಕೆಳಗೆ, ಅಕ್ಕಪಕ್ಕ ಹೀಗೆ ಸುತ್ತಲೂ ಅಲಂಕಾರಿಕ ಬಣ್ಣ ಬಣ್ಣದ ಹೂಗಳನ್ನು ರಚಿಸಿದ್ದಾರೆ.

XVII. ಆರತಿ ಬೆಳಗುತ್ತಿರುವ ಸ್ತ್ರೀಯರ ಚಿತ್ರ : ನರಸಿಂಹ ಅವತಾರ ಚಿತ್ರವಿರುವ ಮಾಡಿನ ಕೆಳಗಡೆ ಎಡ ಬಲಗಳಲ್ಲಿ ಇನ್ನೆರಡು ಚಿಕ್ಕ ಗೂಡುಗಳಿದ್ದು ಅದರಲ್ಲಿ ಪ್ರತಿಯೊಂದು ಮಾಡಿನಲ್ಲಿ ಓರ್ವಳು ಆರತಿ ಬೆಳಗುತ್ತಿರುವ

ಸ್ತ್ರೀಯರನ್ನು ಚಿತ್ರಿಸಲಾಗಿದೆ. ಈ ಸ್ತ್ರೀಯರು ಹಳದಿ ವರ್ಣದ ಸೀರೆ ಉಟ್ಟುಕೊಂಡು ಹಸಿರು ಕೆಂಪು ವರ್ಣದ ಕುಪ್ಪಸ ತೊಟ್ಟುಕಾಂಡಿದ್ದಾರೆ. ಹಣೆಯಲ್ಲಿ ಅಡ್ಡವಾಗಿ ಕುಂಕುಮದ ಪಟ್ಟಿಯನ್ನು ಹಚ್ಚಿಕೊಂಡು ತಲೆತುಂಬಾ ಸೆರಗುಹೊದ್ದು ಕೊಂಡಿದ್ದಾರೆ. ಮರಾಠಾ ಶೈಲಿಯ ಈ ಸ್ತ್ರೀಯರು ಶರಡೂ ಕೈಗಳಿಂದ ಆರತಿ ತಟ್ಟೆ ಹಿಡಿದುಕೊಂಡು ಬೆಳಗುತ್ತಿದ್ದಾರೆ.

XVIII. ದುರ್ಗಾದೇವಿಯ ಚಿತ್ರ : ಅಡ್ಡಲಾಗಿರುವ ಇನ್ನೊಂದು ಚಿಕ್ಕ ಮಾಡಿನಲ್ಲಿ ದುರ್ಗಾದೇವಿಯ ಚಿತ್ರವೊಂದಿದೆ. ದೇವಿಯು ಆರುಕೈಗಳನ್ನು ಹೊಂದಿದ್ದು ಪ್ರತಿಯೊಂದರಲ್ಲೂ ಆಯುಧಗಳನ್ನು ಹಿಡಿದುಕೊಂಡಿದ್ದಾಳೆ. ಖಡ್ಗದಿಂದ ರಾಕ್ಷಸರ ರುಂಡವನ್ನು ಕಡಿದಿದ್ದು ಎಡಗೈಯಲ್ಲಿ ರಾಕ್ಷಸರ ರುಂಡವನ್ನು ಹಿಡಿದುಕೊಂಡಿದ್ದಾಳೆ. ಬಣ್ಣ ಉದುರಿ ಹೆಚ್ಚಿನ ಭಾಗ ಹಾಳಾಗಿ ಹೋಗಿದ್ದರಿಂದ ಚಿತ್ರವನ್ನು ಸಂಪೂರ್ಣ ಗುರುತಿಸುವುದೇ ಕಷ್ಟವಾಗುತ್ತದೆ. ದೇವಿಯ ಎಡಬಲಗಳಲ್ಲಿ ಇಬ್ಬರು ಸ್ತ್ರೀಯರು ಚಾಮರ ಬೀಸುತ್ತ ನಿಂತಿದ್ದರೆ. ಸುತ್ತಲೂ ಹೂಬಳ್ಳಿಯ ನಕ್ಷೆಯನ್ನು ರಚಿಸಿದ್ದಾರೆ.

XIX. ಪೂಜಾರಿ. ಭಟ್ಟರ ಚಿತ್ರಗಳು : ದೇವಿಯ ಚಿತ್ರದ ಎಡಬಲದಲ್ಲಿ ಇರುವ ತ್ರಿಕೋನಾಕಾರದ ಎರಡು ಮಾಡುಗಳಲ್ಲಿ ಇಬ್ಬರು ಪೂಜಾರಿ ಭಟ್ಟರ ಚಿತ್ರಗಳಿವೆ. ಈ ಭಟ್ಟರು ಚಂಡಿಕೆ ಬಿಟ್ಟಿದ್ದು, ಪಂಚೆಉಟ್ಟು ಶಾಲು ಹೊದೆದುಕೊಂಡಿದ್ದಾರೆ. ಕೈಯಲ್ಲಿ ಪೂಜಾಸಾಮಗ್ರಿ ಹಿಡಿದುಕೊಂಡು ಪೂಜೆಗೆ ತೆರಳುತ್ತಿದ್ದಾರೆ. ಕ್ರಿ. ಶ. ೧೯ ನೇ ಶತಮಾನದ ಪ್ರಾರಂಭದಲ್ಲಿ ರಚನೆಯಾದ ನಿಪ್ಪಾಣಿಯ ಭಿತ್ತಿಚಿತ್ರಗಳು ಹಿಂದಿನ ೧೮ ನೇ ಶತಮಾನದ ಚಿತ್ರಗಳಂತೆಯೇ ಸಂಯೋಜನಾ ವಿನ್ಯಾಸ ಹೊಂದಿದ್ದರೂ ಅಲ್ಪಸ್ವಲ್ಪ ಬದಲಾವಣೆಗೊಳಪಟ್ಟಿವೆ. ಹಿಂದಿನ ಶತಮಾನದಲ್ಲಿ ಮಂಟಪಗಳ ವಿನ್ಯಾಸ. ವೃತ್ತ, ಚಕ್ರಾಕಾರ, ಅಂಡಾಕಾರದಂತಹ ಸ್ಥಳಾವಕಾಶಗಳಲ್ಲಿ ಚಿತ್ರಗಳು ರಚಿಸಿದ್ದರೆ, ಇಲ್ಲಿ ಹೆಚ್ಚಾಗಿ ಮಂಟಪಗಳ ವಿನ್ಯಾಸಗಳನ್ನು ಚಿತ್ರರಚನೆಗಾಗಿ ರೂಪಿಸಲಾಗಿದೆ. ಕೆಲವು ಚಿತ್ರಗಳಿಗೆ ಮಂಟಪಗಳಂತೆ ವಿನ್ಯಾಸಗಳನ್ನು ಕಲಾವಿದ ಹಿನ್ನಲೆಯಾಗಿ ರೂಪಿಸಿದ್ದರೆ ಇನ್ನು ಕೆಲವು ಕಡೆ ಮಾಡುಗಳ ಸಹಜವಾದ ಮಂಟಪಗಳ ಹಿನ್ನೆಲೆಯಲ್ಲಿ ಚಿತ್ರಬರೆಯಲಾಗಿದೆ. ಚಿತ್ರಗಳಿಗಾಗಿ ಆಯತ. ಚೌಕ. ಕಮಾನುಗಳಂತಹ ಸ್ಥಳವಿನ್ಯಾಸಗಳನ್ನು ಪ್ರತ್ಯೇಕವಾಗಿ ರೂಪಿಸಿಕೊಳ್ಳದೇ ಗೋಡೆಯಲ್ಲಿರುವ ಅಂತಹ ವಿನ್ಯಾಸಗಳನ್ನೇ ಇಡಿಯಾಗಿ ಕಲಾಕೃತಿಗಳಿಗಾಗಿ ಬಳಸಿಕೊಳ್ಳಲಾಗಿದೆ. ಚಿತ್ರಗಳ ಹಿನ್ನೆಲೆ ಮುನ್ನೆಲೆಯನ್ನು ತೋರಿಸುವಲ್ಲಿ ಮತ್ತೆ ಬದಲಾವಣೆಯಾಗಿದ್ದು ಹಿಂದಿನ ಶತಮಾನದಲ್ಲಿ ಹಿನ್ನೆಲೆಯಲ್ಲಿ ಸ್ಥಳನಿರ್ದೇಶನ ಮಾಡುವ ದೃಶ್ಯವನ್ನು ಚಿತ್ರಿಸದೇ ಬರೀ ಆಕೃತಿಗಳನ್ನು ಚಿತ್ರಿಸಿದ್ದರೆ ಈ ಶತಮಾನದಲ್ಲಿ ಮತ್ತೆ ಹಿನ್ನೆಲೆಯಲ್ಲಿ ಹೊರಾಂಗಣದ ದೃಶ್ಯಗಳನ್ನು ನಿರೂಪಿಸುವ ಪರಿಪಾಠ ತೊಡಗಿಕೊಂಡಂತಿದೆ. ಅರಮನೆ, ದೇವಾಲಯ, ಕೋಟೆ, ಗುಡ್ಡ ಬೆಟ್ಟಗಳ ಹೊರಾಂಗಣದೃಶ್ಯಗಳು ಇಲ್ಲಿ ಹೆಚ್ಚಾಗಿ ಕಂಡು ಬರುತ್ತವೆ. ಕೃಷ್ಣ ಮತ್ತು ಆತನ ಮಡದಿಯರ ಸರಸದ ದೃಶ್ಯಗಳು ಒಳಾಂಗಣದ ದೃಶ್ಯಗಳೇ ಆಗಿದ್ದರೂ ಅರಮನೆಯ ಬಾಗಿಲು, ಕಿಟಕಿ, ಮಹಡಿಯ ಅಂತಸ್ತು ಗೋಡೆಗಳ ಭಾಗಗಳನ್ನು ತೋರಿಸಿರುವುದರಿಂದ ಹೊರಾಂಗಣದ ದೃಶ್ಯಗಳಂತೆ ಭಾಸವಾಗುತ್ತದೆ. ಆಕೃತಿಗಳ ಸಂಯೋಜನೆಯಲ್ಲಿ ಹಿಂದಿನಂತೆ ಎರಡು, ಮೂರು, ಅಥವಾ ನಾಲ್ಕು ಆಕೃತಿಗಳ ಸಂಯೋಜನೆ ಹೆಚ್ಚಾಗಿ ಕಂಡಬುರುವುದು, ನಿಪ್ಪಾಣಿಯ ಹೊರಚಾವಡಿಯ ಚಿತ್ರಗಳಲ್ಲಿ ಎರಡು ಹಾಗೂ ಮೂರು ಆಕೃತಿಗಳ ಸಂಯೋಜನೆಗಳೇ ಅಧಿಕವಾಗಿ ರಚಿಸಿವೆ. ವರ್ಣಗಳಲ್ಲಿ ಗಡಸುತನ ಹೆಚ್ಚಾಗಿದ್ದು ಕೆಂಪು ಬಣ್ಣವನ್ನು ಅದರ ಪ್ರಖರತೆಯೊಂದಿಗೆ ಬಳಸಲಾಗಿದೆ.

**ನಿಪ್ಪಾಣಿಯ ಭಿತ್ತಿಚಿತ್ರಗಳ ಲಕ್ಷಣಗಳು :**

* ಎಲ್ಲ ಚಿತ್ರಗಳ ಹಿನ್ನೆಲೆಯೂ ಕೆಂಪು ವರ್ಣದಿಂದ ರಚಿಸಿದ್ದರೆ ಒಂದರೆಡು ಅಲಂಕಾರಿಕ ಚಿತ್ರಗಳು ಹಿನ್ನೆಲೆಗೆ ಮಾತ್ರ ನೀಲಿವರ್ಣ ಲೇಪಿಸಲಾಗಿದೆ.
* ಇಲ್ಲಿಯ ಚಿತ್ರಗಳನ್ನು ಒಳಕೋಣೆಯ ಗೋಡೆ ಚಿತ್ರಗಳು ಮತ್ತು ಹೊರಚಾವಡಿಯ ಗೂಡಿನ ಚಿತ್ರಗಳು ಎಂದು ವಿಭಾಗಿಸಬಹುದು. ಗೂಡಿನ ಚಿತ್ರಗಳಲ್ಲಿ ಮತ್ತೆ ದೊಡ್ಡ ಗೂಡಿನ ಚಿತ್ರಗಳು ಮತ್ತು ಚಿಕ್ಕ ಗೂಡಿನ ಚಿತ್ರಗಳು ಎಂದು ಎರಡು ಭಾಗ ಮಾಡಬಹುದು.
* ಒಳ ಕೋಣೆಯ ಚಿತ್ರಗಳಿಗಿಂತ ಹೊರಚಾವಡಿಯ ಗೂಡಿನ ಚಿತ್ರಗಳು ವರ್ಣವಿನ್ಯಾಸ, ರೇಖಾವಿನ್ಯಾಸ ಮತ್ತು ಸಂಯೋಜನಾ ದೃಷ್ಟಿಯಿಂದ ಉತ್ತಮವಾಗಿವೆ.
* ಒಳಕೋಣೆಯ ಚಿತ್ರಗಳು ಹೆಚ್ಚಿನ ವರ್ಣ ವೈವಿಧ್ಯತೆಯಿಂದ ಕೂಡಿದ್ದರೆ ಹೊರ ಚಾವಡಿಯ ಚಿತ್ರಗಳಲ್ಲಿ ಕೇವಲ ೩ ರಿಂದ ೪ ಮುಖ್ಯವರ್ಣಗಳನ್ನು ಮಾತ್ರ ಬಳಸಲಾಗಿದೆ.
* ಚಿತ್ರದ ಹೊರ ರೇಖೆಗಳನ್ನು ಹೆಚ್ಚಾಗಿ ಕಪ್ಪು ವರ್ಣದಿಂದ ಎಳೆದಿದ್ದಾರೆ.
* ಪ್ರಧಾನವಾಗಿ ಕೃಷ್ಣ ಕಥಾನಕದ ಚಿತ್ರಗಳನ್ನೇ ಕಾಣಬಹುದು. ಅದರಲ್ಲೂ ಕೃಷ್ನನ ಬಾಲ್ಯ ಮತ್ತು ಆತನ ಸರಸದ ದೃಶ್ಯಗಳು ಹೆಚ್ಚಾಗಿವೆ.
* ಚಿತ್ರಗಳು ಹೆಚ್ಚಾಗಿ ಚಿಕ್ಕಪ್ರಮಾಣದಲ್ಲಿದ್ದು ಆಕೃತಿಗಳು ೮ ಇಂಚುಗಳಿಗಿಂತ ದೊಡ್ಡವಾಗಿಲ್ಲ. ಹಾಗಾಗಿ ಕಿರುರೂಪ ಚಿತ್ರಗಳನ್ನು ನೋಡಿದ ಅನುಭವವಾಗುವುದು.

**೬) ನಿಪ್ಪಾಣಿಕರ್ ವಾಡೆ ಅಥಣಿ :** ಸುಮಾರು ಎರಡು ಶತಮಾನಗಳ ಹಿಂದೆ ನಿಪ್ಪಾಣಿಯಿಂದ ಅಥಣಿಗೆ ಬಂದು ನೆಲೆಸಿದ ಒಬ್ಬ ಸರದಾರನ ಹಳೆಕಾಲದ ಮನೆಯಾದ ಈ ಕಟ್ಟಡದಲ್ಲಿ ಗೋಡೆಗಳ ಮೇಲೆ ಚಿತ್ರಗಳಿದ್ದುದಾಗಿ ಡಾ. ಶಿವರಾಮ ಕಾರಂತ ಅವರು[೧೬೩] ಹೇಳುತ್ತಾರೆ. ಆ ಕಟ್ಟಡದ ಚಾವಡಿ ಗೋಡೆಯ ತುಂಬ ಭಿತ್ತಿ ಚಿತ್ರಗಳಿದ್ದು ಅವುಗಳ ಮೇಲೆ ನಾಲ್ಕೆಂಟು ಬಾರಿ ಸುಣ್ಣ ಬಳಿಯಲಾಗಿದೆ. ಸುಣ್ಣದ ಹಾಳೆಗಳು ಬಿಚ್ಚಿಹೋದ ಕಡೆಗೆ ಕೆಲವು ಬಣ್ಣದ ತುಣುಕುಗಳು ಕಂಡುಬರುತ್ತವೆ. ಒಂದು ಕಡೆಗೆ ಸುಣ್ಣದ ಹಾಳೆಗಳನ್ನು ಕೆರೆದು ಎಬ್ಬಿಸಿದಾಗ ತೀರ ಕೆಳಪದರದಲ್ಲಿ ಗ್ರಾಮೀಣಶೈಲಿಯ ಚಿತ್ರಗಳ ತುಣುಕೊಂದು ಕಾಣಿಸಿತೆಂದು ವಿವರಣೆ ಕೊಡುತ್ತಾರೆ. ಆದರೆ ಇಂದು ಈ ಚಿತ್ರಗಳಷ್ಟೇ ಅಲ್ಲದೇ ಈ ಕಟ್ಟಡವೇ ಇಲ್ಲವಾಗಿದೆ. ಆ ಹಳೆಯ ವಾಡೆಯನ್ನು ಸಂಪೂರ್ಣನಾಶಪಡಿಸಿ ಆ ಸ್ಥಳದಲ್ಲಿ ವಾಣಿಜ್ಯ ಸಂಕೀರ್ಣ ಕಟ್ಟಲಾಗಿದೆ.

**೭) ಸುರಪುರದ ಅರಮನೆ :** ಸುರುಪುರವು ಗುಲಬರ್ಗಾ ಜಿಲ್ಲೆಯ ಒಂದು ತಾಲೂಕು ಸ್ಥಳ. ವಿಜಯನಗರ ಪತನದ ನಂತರ ಸ್ವತಂತ್ರ್ಯವಾದ ಅನೇಕ ಸಂಸ್ಥಾನಗಳು ಪಾಳೆಯಪಟ್ಟುಗಳಲ್ಲಿ ಸುರಪುರ ಸಂಸ್ಥಾನವೂ ಒಂದು. ಸ್ವತಂತ್ರವಾಗಿ ಆಳ್ವಿಕೆ ಪ್ರಾರಂಭಿಸಿದ ನಂತರ ಈ ಸಂಸ್ಥಾನದಲ್ಲಿ 'ರಾಜಾ ಇಮ್ಮಡಿ ವೆಂಕಟಪ್ಪ ನಾಯಕ' (೧೭೭೩-೧೮೦೨) ನಿಂದ 'ರಾಜಾ ನಾಲ್ವಡಿ ವೆಂಕಟಪ್ಪ ನಾಯಕನ' ವರೆಗಿನ ಅವಧಿಯು (೧೮೪೨-೧೮೫೮) ಈ ಸಂಸ್ಥಾನದ ಆಳ್ವಿಕೆಯಲ್ಲಿಯೇ ಮಹತ್ವದ ಘಟ್ಟವಾಗಿದೆ. ಈ ಕಾಲಾವಧಿಯಲ್ಲೇ ಆಂಧ್ರಮೂಲದ 'ಗರುಡಾದ್ರಿ' ಎಂಬ ಮನೆತನದ ಕಲಾವಿದರು. ಸುರಪುರಕ್ಕೆ ಬಂದು ನೆಲೆಸಿದರು.[೧೬೪] ಈ ಮನೆತನದ ಮೂಲಪುರುಷ ಚಿಟಿವೇಲಯ್ಯ ಆತನ ಮಗ ಬೆನಕಯ್ಯ. ಬೆನಕಯ್ಯನ ಹಿರಿಯಮಗನೇ ಈ ಭಾಗದಲ್ಲಿ ಮನೆ ಮಾತನಾಗಿರುವ ಪ್ರಸಿದ್ಧ ಕಾಲವಿದ ಬಾನಯ್ಯ ಗರುಡಾದ್ರಿ. ಸುರಪುರಕ್ಕೆ ಬಂದು

---

೧೬೩. ಡಾ. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪುಟ ೮೯

೧೬೪. ಬಸವರಾ ಉಪ್ಪಿನ : ಬಾನಯ್ಯಗರುಡಾದ್ರಿ, ಪುಟ ೧

ನೆಲೆಸಿದ ಗರುಡಾದ್ರಿ ಕಲಾವಿದರು ರಾಜಧಾನಿಯ ಪ್ರಮುಖ ಸ್ಥಳಗಳಾದ ಅರಮನೆ, ಮಂದಿರಗಳು, ಮಠಗಳು, ಮತ್ತು ಶ್ರೀಮಂತರ ಮನೆಗಳ ಗೋಡೆಗಳ ಮೇಲೆ ಮತ್ತು ಹಾಳೆಯ ಮೇಲೆ ಚಿತ್ರಗಳನ್ನು ರಚಿಸಿದರು. ಇವುಗಳಲ್ಲಿ ಅರಮನೆ ಮತ್ತು ಮಠಗಳಲ್ಲಿಯ ಚಿತ್ರಗಳು ಗಮನಾರ್ಹವಾಗಿವೆ. ಹೆಚ್ಚಿನ ಚಿತ್ರಗಳು ಇಂದು ಇಲ್ಲವಾಗಿದ್ದರೂ ಸುರಪುರದ ಅರಮನೆಯ ಒಂದು ಕಡೆ ಮತ್ತು ಸಮೀಪದ ರಂಗವ್ ಪೇಟೆಯ ರುದ್ರಸ್ವಾಮಿ ಮಠ, ಹಾಗೂ ಅಣ್ಣಯ್ಯನ ಮಠಗಳಲ್ಲಿ ಭಿತ್ತಿ ಚಿತ್ರಗಳನ್ನು ಕಾಣಬಹುದು.

ಸುರಪುರದ ನಾಯಕರ ಅರಮನೆಯಲ್ಲಿ ಇಂದು ಒಂದು ಕಡೆಗೆ ಗೋಡೆಯ ಮೇಲೆ ಭಿತ್ತಿ ಚಿತ್ರ ಮಸುಕಾಗಿ ಕಂಡು ಬರುವುದು. ಅರಮನೆಯ ಒಳ ಆವರಣದಲ್ಲಿರುವ ಆಸ್ಥಾನದ ಅಥವಾ ಸಭಾಂಗಣದ ಬಾಗಿಲಿನ ಎದುರು ಗೋಡೆಯಲ್ಲಿ ಚಿತ್ರ ಕಂಡುಬರುವುದು. ಈ ಗೋಡೆಯಲ್ಲಿ ಎರಡು ಕಂಬಗಳುಳ್ಳ ಐದು ಫೀಟು ಅಳತೆಯಲ್ಲಿರುವ ಕಮಾನಿನ ಆಕಾರದ (ಗೂಡು) ಮಾಡು ಇದೆ. ಇದರಲ್ಲಿ ಶೇಷಶಯನ ವಿಷ್ಣುವಿನ ಚಿತ್ರರಚಿಸಲಾಗಿದೆ. ಏಳು ಹೆಡೆಗಳಿಂದ ಕೂಡಿದ ಆದಿಶೇಷನ ಮೇಲೆ ವಿಷ್ಣು ತಲೆಗೆ ಕೈಕೊಟ್ಟು ಮಲಗಿಕೊಂಡಿದ್ದಾನೆ. ನೀಲಮೇಘಶ್ಯಾಮ ವರ್ಣದ ವಿಷ್ಣುವಿನ ಕಾಲ ಹತ್ತಿರ ಶ್ರೀದೇವಿ ಭೂದೇವಿಯರು ಆತನ ಕಾಲು ಒತ್ತುತ್ತ ಸೇವೆಯಲ್ಲಿ ತೊಡಗಿದ್ದಾರೆ. ಆತನ ನಾಭಿಯಿಂದ ಹುಟ್ಟಿದ ಕಮಲದಲ್ಲಿ ವೇದಗಳನ್ನು ಹಿಡಿದುಕೊಂಡಿರುವ ಚತುರ್ಮುಖ ಬ್ರಹ್ಮನು ಕುಳಿತಿದ್ದಾನೆ. ಚಿತ್ರಗಳು ನಾಶವಾಗುತ್ತಿದ್ದರೂ ವರ್ಣಶೋಭೆ ಇನ್ನೂ ಉಜ್ವಲವಾಗಿದೆ.

ಈ ಚಿತ್ರಪಟ್ಟಿಕೆಯಲ್ಲಿ ಕೆಳಗೆ ಇನ್ನೊಂದು ಭಾಗ ಮಾಡಿಕೊಂಡು ಆ ಭಾಗದಲ್ಲಿ ವಿಷ್ಣುವಿನ ದ್ವಾರಪಾಲಕರಾದ ಜಯವಿಜಯ ಎಂಬಿಬ್ಬರು ದ್ವಾರಪಾಲಕರ ಚಿತ್ರಗಳನ್ನು ಬರೆಯಲಾಗಿದೆ. ಇವರು ದ್ವಾರವನ್ನು ಕಾಯುತ್ತಿದ್ದಾರೆ, ಎನ್ನುವುದಕ್ಕೆ ಸಾಂಕೇತಿಕವಾಗಿ ಒಂದು ಬಾಗಿಲನ್ನು ಚಿತ್ರಿಸಿ ಅದನ್ನು ಅರ್ಧ ತೆರೆದಂತೆ ತೋರಿಸಲಾಗಿದೆ. ಕಮಾನಿನ ಆಕಾರದ ಮಾಡಿನ ಎಡಬಲಗಳಲ್ಲಿ ಹನುಮಂತ, ಗರುಡರನ್ನು ಚಿತ್ರಸಲಾಗಿದೆ. ಇವರು ಕೈಮುಗಿದುಕೊಂಡು ನಿಂತಿರುವ ಭಂಗಿಯಲ್ಲಿದ್ದು . ಇನ್ನೆರಡು ಆಕೃತಿಗಳು ಅತ್ಯಂತ ಮಸುಕಾಗಿ ಕಾಣುತ್ತಿವೆ. ಕೆಲವು ಭಾಗ ಪೂರ್ತಿ ಹಾಳಾಗಿ ಹೋಗಿದೆ.

**೮) ಸವಣೂರಿನ ನವಾಬರ ವಾಡೆ :** ಸವಣೂರಿನಲ್ಲಿ ಆಳ್ವಿಕೆ ನಡೆಸಿದ ನವಾಬರು ಮೂಲತಃ ಅಪಘಾನಿಗಳು, ಕಾಬೂಲದ ಪಕ್ಕದಲ್ಲಿರುವ ಕೊಲಸ್ಥಾನದ ಮಿಯಾನಾ ಗುಡ್ಡಗಾಡು ಪ್ರದೇಶಕ್ಕೆ ಸೇರಿದ ಪಠಾಣರು. ದಿಲ್ಲಿಯ ಸುಲ್ತಾನರ ಸೇವೆಯಿಂದ ಕಾಲಕ್ರಮೇಣ ಬಿಜಾಪುರದ ಆದಿಲ್‌ಶಾಹಿಗಳ ಬಳಿಗೆ ಬಂದು ಇಲ್ಲಿ ಸಚಿವ, ಸುಬೇದಾರ ಮುಂತಾದ ಅನೇಕ ಹುದ್ದೆಗಳಲ್ಲಿ ಸೇವೆ ಸಲ್ಲಿಸಿದರು. ಬಿಜಾಪುರವನ್ನು ಸುಲ್ತಾನ್ ಸಿಕಂದರನು ಆಳುತ್ತಿದ್ದಾಗ ಕ್ರಿ. ಶ. ೧೬೮೬ ರಲ್ಲಿ ಔರಂಗಜೇಬನು ಬಿಜಾಪುರ ರಾಜ್ಯವನ್ನು ಸಂಪೂರ್ಣವಾಗಿ ಗೆದ್ದುಕೊಂಡನು. ಆಗ ಸಿಕಂದರನ ಮಂತ್ರಿಯಾಗಿದ್ದ ಅಬ್ದುಲ್ ರವೂಫ್‌ಖಾನನ ವ್ಯಕ್ತಿತ್ವಕ್ಕೆ ಔರಂಗಜೇಬನು ಮಾರುಹೋಗಿ ಕರ್ನಾಟಕ ಸುಬಾದ ಆಡಳಿತವನ್ನು ಅಬ್ದುಲ್ ರವೂಫ್‌ಖಾನನಿಗೇ ವಹಿಸಿದನು. ಹೀಗೆ ಬಿಜಾಪುರ ಶಾಹಿಗಳಿಂದ ಈ ಭಾಗದ ಆಡಳಿದ ನವಾಬರ ಕೈಗೆ ಬಂದಿತು. ಅಬ್ದುಲ್ ರವೂಫ್‌ಖಾನನು ಔರಂಗಜೇಬನಿಂದ ಕರ್ನಾಟಕ ಪ್ರಾಂತದ ಸುಬೇದಾರಿಕೆಯನ್ನು ವಹಿಸಿಕೊಂಡು ಬಂಕಾಪುರಕ್ಕೆ ಬಂದು ಸ್ವಲ್ಪ ಸಮಯದಲ್ಲೇ ಹೊಸರಾಜಧಾನಿ[೧೬೫] ಸವಣೂರನ್ನು ಕಟ್ಟಿಸಿದನು. ಇದು ಕ್ರಿ. ಶ. ೧೬೮೬-೮೭ ರಲ್ಲಿ ನಿರ್ಮಾಣವಾಯಿತು. ಹೀಗೆ ಕ್ರಿ. ಶ. ೧೬೮೬-೮೭ ರಿಂದ ರಾಜಧಾನಿಯಾದ ಸವಣೂರಲ್ಲಿ ಮೊದಲ ದೊರೆ ಅಬ್ದುಲ್ ರವೂಫ್‌ಖಾನನಿಂದ ಮೊದಲ್ಗೊಂಡು

---

೧೬೫. ಗೋವಿಂದ ಮೂರ್ತಿ ದೇಸಾಯಿ : ಸವಣೂರ ನವಾಬರು, ಪುಟ ೧೦

ಎರಡನೆಯ ಅಬ್ದುಲ್ ಮಜೀದ್ ಖಾನನ (ಕ್ರಿ. ಶ. ೧೯೧೨-೧೯೪೮) ವರೆಗೆ ಅನೇಕ ನವಾಬರು ಆಳ್ವಿಕೆ ನಡೆಸಿದ್ದಾರೆ. ಸವಣೂರಲ್ಲಿ ಭಿತ್ತಿ ಚಿತ್ರಗಳಿರುವ ವಾಡೆಯನ್ನು ಅಬ್ದುಲ್ ಮಜೀದ್ ಖಾನನು ಕ್ರಿ. ಶ. ೧೯೨೨ ರಲ್ಲಿ ಕಟ್ಟಿಸಿದನು.[೧೬೬] ನಿರ್ಮಾಣ ಸಂದರ್ಭದಲ್ಲಿಯೇ ಅದರಲ್ಲಿ ಭಿತ್ತಿಚಿತ್ರಗಳನ್ನು ಬರೆಸಲಾಯಿತು. ಸವಣೂರಿನ ವಾಡೆಯಲ್ಲಿ ಗೋಡೆಯಮೇಲೆ, ಗೋಡೆಗೆ ಅಳವಡಿಸಿದ ಕಟ್ಟಿಗೆಯ ಫಲಕಗಳ ಮೇಲೆ. ಕಿಟಕಿ ಬಾಗಿಲುಗಳ ಕಟ್ಟಿಗೆಯ ಚೌಕಟ್ಟುಗಳ ಮೇಲೆ, ಕಟ್ಟಿಗೆಯ ಮೆಟ್ಟಿಲು (ಪಾವಟಿಗೆ)ಗಳ ಮೇಲೆ ವರ್ಣಚಿತ್ರಗಳನ್ನು ರಚಿಸಲಾಗಿದೆ. ಆದರೆ ಇಂದು ಹೆಚ್ಚಿನ ಚಿತ್ರಗಳು ಅಳಿಸಿಹೋಗಿ ಅಲ್ಪಸ್ವಲ್ಪ ಉಳಿದಿವೆ. ಈ ವಾಡೆಯಲ್ಲಿ ಮುರಾರ್ಜಿ ದೇಸಾಯಿ ವಸತಿ ಶಾಲೆ ಇದೆ. ಅದನ್ನು ಪ್ರಾರಂಭಿಸುವ ಸಂದರ್ಭದಲ್ಲಿ ಸುಣ್ಣ ಸಾರಿಸಿ ಚಿತ್ರ ಅಳಿಸಲಾಗಿದೆ. ಆದರೂ ಕೆಲವು ಚಿತ್ರಗಳು ಉಳಿದಿವೆ. ಸವಣೂರು ವಾಡೆಯ ಭಿತ್ತಿಚಿತ್ರಗಳನ್ನು ಈ ಕೆಳಗಿನಂತೆ ಎರಡು ರೀತಿಯಲ್ಲಿ ವಿಂಗಡಿಸಬಹುದು.

I. ಗೋಡೆಯ ಮೇಲಿನ ಚಿತ್ರಗಳು

II. ಮರದ ಫಲಕದ ಮೇಲಿನ ಚಿತ್ರಗಳು

***I. ಗೋಡೆಯ ಮೇಲಿನ ಚಿತ್ರಗಳು :*** ಗೋಡೆಯ ಮೇಲೆ ರಚನೆಯಾದ ಚಿತ್ರಗಳು ನವಾಬರ ಜೀವನ ಶೈಲಿ, ಗತ್ತುಗಾರಿಕೆ. ವೈಭವದ ಜೀವನವನ್ನು ತೋರಿಸುತ್ತಿದ್ದರೂ ಪರೋಕ್ಷವಾಗಿ ಸಾಮಾನ್ಯ ಜನರ ಮೇಲೆ ನವಾಬರು ನಡೆಸುತ್ತಿದ್ದ ದಬ್ಬಾಳಿಕೆಯನ್ನೂ ಅವು ಪ್ರತಿಬಿಂಬಿಸುತ್ತಿವೆ. ಇಲ್ಲಿನ ಎಲ್ಲ ಚಿತ್ರಗಳಲ್ಲಿಯೂ ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತ ನವಾಬನ ರೂಪ ಕಂಡಬರುತ್ತದೆ. ಇಲ್ಲಿ ಇನ್ನೂ ಹೆಚ್ಚಿನ ಚಿತ್ರಗಳಿದ್ದಿರಬಹುದು ಅವುಗಳನ್ನು ನಾಶಮಾಡಲಾಗಿದೆ. ಅಲ್ಲದೇ ಈ ಕಟ್ಟಡದಲ್ಲಿ ಈಗ ಮುರಾರ್ಜಿ ದೇಸಾಯಿ ವಸತಿ ಶಾಲೆ ನಡೆಯುತ್ತಿದ್ದು ಅದರ ಪ್ರಾರಂಭಸಮಯದಲ್ಲಿ ಚಿತ್ರಗಳಿರುವ ಇಡೀ ಕೋಣೆಗೆ ಸುಣ್ಣ ಸಾರಿಸುವಾಗ ಕೆಲವು ಚಿತ್ರಗಳನ್ನು ನಾಶಪಡಿಸಲಾಗಿದೆ. ಉಳಿದಿರುವ ಕೆಲವು ಚಿತ್ರಗಳು ವಿದ್ವಾಂಸರ ಗಮನಕ್ಕೆ ಬಂದು ಅವುಗಳ ಮೇಲೆ ಸುಣ್ಣ ಬಣ್ಣ ಲೇಪಿಸುವ ಕ್ರಮವನ್ನು ನಿಲ್ಲಿಸಲಾಗಿದ್ದು ಸ್ತುತ್ಯಕಾರ್ಯವಾಗಿದೆ. ಉಳಿದಂತಹ ಕೆಲವು ಚಿತ್ರಗಳನ್ನು ಹೀಗೆ ವಿವರಿಸಬಹುದು.

೧. ಶವಯಾತ್ರೆಯ ಮೇಲೆ ದಾಳಿಮಾಡಿದ ಆನೆ : ಆನೆಯ ಮೇಲಿನ ಅಂಬಾರಿಯಲ್ಲಿ ಸುಲ್ತಾನನು ತನ್ನ ಸಹಾಯಕನ ಜೊತೆ ಹೊರಟಿರುವ ಒಂದು ದೃಶ್ಯದಲ್ಲಿ, ಆನೆಯ ಪಕ್ಕದಿಂದ ನಾಲ್ಕು ಜನ ಒಬ್ಬ ವ್ಯಕ್ತಿಯನ್ನು ಹೊತ್ತುಕೊಂಡು ಹೋಗುತ್ತಿದ್ದಾರೆ. ಇದು ಬಹುಶ ಶವಯಾತ್ರೆ ಇರಬಹುದು. ಇಲ್ಲಿ ಆನೆಯು ತನ್ನ ಸೊಂಡಿಲಿನಿಂದ ಶವವನ್ನು ಎತ್ತಿಕೊಂಡು ನೆಲಕ್ಕೆ ಅಪ್ಪಳಿಸುತ್ತಿದೆ. ಈ ಕ್ರಿಯೆಯನ್ನು ಅಂಬಾರಿಯಲ್ಲಿ ಕುಳಿತ ನವಾಬರು ವೀಕ್ಷಿಸುತ್ತಿದ್ದಾರೆ. ನವಾಬನು ಕೋಟು ಧರಿಸಿ ಟೈಕಟ್ಟಿದ್ದು ಆಧುನಿಕ ವೇಷಭೂಷಣ ದಲ್ಲಿದ್ದಾನೆ. ಕೆಳಗಿರುವ ನಾಲ್ಕು ವ್ಯಕ್ತಿಗಳಲ್ಲಿ ಇಬ್ಬರು ಕಂದುವರ್ಣದವರಾಗಿದ್ದರೆ ಇನ್ನಿಬ್ಬರು ಬೂದುವರ್ಣದಲ್ಲಿ ಚಿತ್ರಿಸಿದ್ದಾರೆ. ಈ ನಾಲ್ಕು ಜನರೂ ತಲೆಗೆ ವಸ್ತ್ರಗಳನ್ನು ಸುತ್ತಿಕೊಂಡಿದ್ದು, ಕಚ್ಚೆಯಂತೆ ಮೇಲೆ ಕಟ್ಟಿದ ಪಂಚೆಯನ್ನು ಹೊಂದಿದ್ದಾರೆ. ಮೈಮೇಲೆ ಯಾವುದೇ ಅಂಗಿ ಇರದೇ ಮೇಲ್ಭಾಗ ನಗ್ನವಾಗಿದೆ. ಚಿತ್ರದ ಹಿನ್ನೆಲೆಯಲ್ಲಿ ಕೆಂಪುಹಂಚಿನ ಮನೆಗಳು, ಗಿಡ ಮರಗಳು ರಚಿಸಿದ್ದು ಚಿತ್ರಗಳ ಸಂಯೋಜನೆಗೆ ಪೂರಕವಾಗಿವೆ.

---

೧೬೬. ಗೋವಿಂದ ಮೂರ್ತಿ ದೇಸಾಯಿ : ಸವಣೂರು ನವಾಬರು, ಪುಟ ೧೪೪

೨. ಚಹಾಪಾರ್ಟಿಯನ್ನು ಹಾಳುಗೆಡುವಿದ ಆನೆ : ಮತ್ತೊಂದು ಚಿತ್ರದಲ್ಲಿ ನಾಲ್ಕೈದು ಜನ ಒಂದು ಬಂಗಲೆಯ ಹೊರಗೆ ವಿರಾಮದಲ್ಲಿ ಕುಳಿತಿದ್ದಾರೆ. ಅವರೆಲ್ಲ ಕಟ್ಟಿಗೆಯ ಮತ್ತು ಬಿದಿರು ಬೆತ್ತದಿಂದ ಮಾಡಲ್ಪಟ್ಟ ಕುರ್ಚಿಗಳಲ್ಲಿ ಕುಳಿತಿದ್ದು ಮಧ್ಯದಲ್ಲಿ ಒಂದು ಚಿಕ್ಕ ಮೇಜಿನ ಮೇಲೆ ಚಹಾ ಪಾನೀಯಗಳನ್ನು ಇಡಲ್ಪಟ್ಟಿವೆ. ಇಲ್ಲಿನ ವ್ಯಕ್ತಿಗಳು ಪ್ಯಾಂಟು. ಶರ್ಟಗಳನ್ನು ಧರಿಸಿ ಕುತ್ತಿಗೆಗೆ ಟೈ ಕಟ್ಟಿಕೊಂಡಿದ್ದಾರೆ. ಕೆಲವರು ತಲೆಗೆ ಪಾಶ್ಚಾತ್ಯ ಶೈಲಿಯ ಹ್ಯಾಟುಗಳನ್ನು ಧರಿಸಿದ್ದಾರೆ. ಈ ಸಂದರ್ಭದಲ್ಲಿ ಅಲ್ಲಿಗೆ ಬಂದ ನವಾಬರ ಆನೆಯು ಉನ್ಮತ್ತತೆಯಿಂದ ಎಲ್ಲವನ್ನೂ ತುಳಿದುಹಾಕಿದೆ. ಅದರ ಸೊಂಡಲಿನ ರಭಸಕ್ಕೆ ಸಿಕ್ಕ ಕುರ್ಚಿಗಳು ವ್ಯಕ್ತಿಗಳು ದೂರಕ್ಕೆ ಎಸೆಯಲ್ಪಟ್ಟಿದ್ದರೆ, ಮಧ್ಯದ ಮೇಜನ್ನು ಕಾಲಿನಿಂದ ತುಳಿದು ಹಾಕಿದೆ. ಮುಂದುವರೆದು ಒಬ್ಬ ವ್ಯಕ್ತಿಯನ್ನು ತುಳಿಯುವ ಸನ್ನಾಹದಲ್ಲಿದೆ. ಆನೆಯ ಈ ಕೃತ್ಯಕ್ಕೆ ಹೆದರಿದ ಒಬ್ಬ ಬಾಲಕ ವ್ಯಕ್ತಿಯೊಬ್ಬನ ಬಗಲಲ್ಲಿ ಜಿಗಿದು ಕುಳಿತಿದ್ದಾನೆ. ಅನತಿದೂರದಲ್ಲಿ ಬಂಗಲೆಯಲ್ಲಿರುವ ವ್ಯಕ್ತಿಗಳು ಈ ದೃಶ್ಯವನ್ನು ಆಶ್ಚರ್ಯದಿಂದ ನೋಡುತ್ತಿದ್ದಾರೆ. ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತ ನವಾಬರು ಇದರ ಪರಿವೆ ಇಲ್ಲದೇ ಸಮಚಿತ್ತದಿಂದ ಇರುವಹಾಗೆ ಚಿತ್ರಣಗೊಂಡಿದೆ. ಚಿತ್ರದ ಹಿನ್ನಲೆಯಲ್ಲಿ ಬಂಗಲೆ, ದೂರದಲ್ಲಿ ಗುಡ್ಡ ಬೆಟ್ಟ, ಗಿಡಮರಗಳು. ಕೆರೆಯ ದಂಡೆಯಲ್ಲಿ ಬೆಳೆದ ಟೆಂಗಿನ ಮರಗಳು ರಚನೆಯಾಗಿವೆ.

೩. ಎತ್ತಿನ ಬಂಡಿಯನ್ನು ತುಳಿದು ಹಾಕಿದ ಆನೆ : ಇನ್ನೊಂದು ಕಡೆಗೆ ಎರಡು ಬಿಳಿ ಎತ್ತುಗಳಿಂದ ಎಳೆಯಲ್ಪಟ್ಟ ಬಂಡಿಯಲ್ಲಿ ಕೆಲವು ಜನರು ಪ್ರಯಾಣಿಸುತ್ತಿದ್ದಾರೆ. ಇಲ್ಲಿ ಹಿಂದಿನಿಂದ ಬಂದ ಆನೆಯು ಬಂಡಿಯಲ್ಲಿ ಒಮ್ಮೆಲೇ ಕಾಲಿಟ್ಟಿದ್ದು ಅದರ ರಭಸಕ್ಕೆ ಇಡೀ ಬಂಡಿಯು ಮೇಲ್ಮುಖವಾಗಿದೆ. ಎತ್ತುಗಳು ಹಾಗೆಯೇ ಬಂಡಿಗಂಟಿಕೊಂಡಂತೆ ನೊಗದಲ್ಲಿ ಜೋತಾಡುತ್ತಿವೆ. ಬಂಡಿಯಲ್ಲಿ ಕುಳಿತಿದ್ದ ಸ್ತ್ರೀ ಪುರುಷರು ದಿಕ್ಕು ದಿಕ್ಕುಗಳಿಗೆ ಎಸೆಯಲ್ಪಟ್ಟಿದ್ದಾರೆ. ಆನೆಯ ಮೇಲಿನ ಅಂಬಾರಿಯಲ್ಲಿ ಕುಳಿತ ನವಾಬರು ಈ ದೃಶ್ಯವನ್ನು ಕೈಕಟ್ಟಿ ವೀಕ್ಷಿಸುತ್ತಿದ್ದಾರೆ. ಆನೆಯ ಮೇಲಿರುವ ಅಂಬಾರಿಯು ಎಲ್ಲಕಡೆಗೂ ಒಂದೇ ರೀತಿಯಲ್ಲಿದ್ದು ಪೆಟ್ಟಿಗೆಯ ವಿನ್ಯಾಸದಲ್ಲಿದೆ. ಈ ಚಿತ್ರದಲ್ಲಿ ಹಿನ್ನೆಲೆಯ ಚಿತ್ರಣವು ಸುಂದರ ಪ್ರಕೃತಿ ದೃಶ್ಯವಾಗಿದ್ದು ಗುಡ್ಡ ಬೆಟ್ಟ, ಗಿಡಮರಗಳು, ನೀರು ತುಂಬಿದ ಕೆರೆ, ದೂರದಲ್ಲಿ ಕೆಂಪು ಹಂಚಿನ ಮನೆಗಳು ಸುಂದರವಾಗಿ ಮೂಡಿ ಬಂದಿವೆ. ಪ್ರಕೃತಿ ದೃಶ್ಯವಾಗಿದ್ದುದರಿಂದ ಹಸಿರು ವರ್ಣ ಪ್ರಧಾನವಾಗಿ ಬಳಕೆಗೊಂಡಿದೆ.

೪. ನವಾಬರ ಹುಲಿ ಬೇಟೆ : ಬೇಟೆಯ ದೃಶ್ಯ ಒಂದರಲ್ಲಿ ನವಾಬರು ಅದೇ ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು ಬೇಟೆಗಾಗಿ ಕಾಡಿಗೆ ಬಂದಿದ್ದು ಅವರ ಜೊತೆಗೆ ಬೆಂಗಾವಲಾಗಿ ಇನ್ನೊಂದು ಆನೆಯೂ ಇದೆ. ಇದರ ಮೇಲೆಯೂ ಇಬ್ಬರು ವ್ಯಕ್ತಿಗಳು ಕುಳಿತಿದ್ದು ಅವರೂ ಬೇಟೆಯಲ್ಲಿ ತೊಡಗಿದ್ದಾರೆ. ಎರಡೂ ಆನೆಯ ಮೇಲೆ ಕುಳಿತವರು ಉದ್ದ ತೋಳಿನ ಅಂಗಿ ತೊಟ್ಟಿದ್ದು ಸೊಂಟಕ್ಕೆ ಬೆಲ್ಟಬಿಗಿದುಕೊಂಡಿದ್ದಾರೆ. ತಲೆಗೆ ಹ್ಯಾಟು. ಶಿರಸ್ತ್ರಾಣ ಧರಿಸಿದ್ದು, ಬೇಟೆಗಾಗಿ ನಿಗದಿಯಾದ ಉಡುಪುಗಳನ್ನು ತೊಟ್ಟುಕೊಂಡಿದ್ದಾರೆ. ನವಾಬನಕೈಯಲ್ಲಿ ಮತ್ತು ಇನ್ನೊಂದು ಆನೆಯ ಮೇಲೆ ಕುಳಿತ ವ್ಯಕ್ತಿಯೊಬ್ಬನ ಕೈಯಲ್ಲಿ ಕೋವಿಗಳಿವೆ. ಹುಲಿಯೊಂದು ನವಾಬನು ಕುಳಿತ ಆನೆಯ ಕಡೆಗೆ ಘರ್ಜಿಸುತ್ತ ಬರುತ್ತಿದ್ದು, ಅದಕ್ಕೆ ಆನೆಯು ಹೆದರಿ ಹಿಮ್ಮೆಟ್ಟಿದಂತೆ ತೋರುತ್ತದೆ. ಆನೆಯ ಮೇಲೆ ಕುಳಿತ ನವಾಬನು ಬಂದೂಕದಿಂದ ಗುರಿಯಿಟ್ಟು ಹುಲಿಯನ್ನು ಹೊಡೆಯುತ್ತಿದ್ದಾನೆ. ದೂರದಲ್ಲಿ ದೊಡ್ಡಗಿಡ ಒಂದರಲ್ಲಿ ಜೇನು ಹುಟ್ಟಿನಿಂದ ಜೇನು ಬಿಡಿಸುವ ಕಾರ್ಯದಲ್ಲಿ ತೊಡಗಿದ ವ್ಯಕ್ತಿಯೊಬ್ಬನು ಹುಲಿಯ ಘರ್ಜನೆ ಮತ್ತು ನವಾಬನ ಬಂದೂಕಿನ ಗುಂಡಿನ ಸಪ್ಪಳದಿಂದ ಹೆದರಿಕೊಂಡು ಗಿಡದ ಮೇಲಿಂದ ಬೀಳುತ್ತಿದ್ದಾನೆ. ಈ ಚಿತ್ರದಲ್ಲಿ ಸುಂದರ ಪ್ರಕೃತಿ ದೃಶ್ಯ ಸಂಯೋಜನೆ ಮಾಡಲಾಗಿದ್ದು

ಬಲಬದಿಗೆ ಕಲ್ಲುಬೆಟ್ಟ. ಮಧ್ಯದಲ್ಲಿ ವಿಶಾಲಮರಗಳು. ಬೃಹತ್‌ಗಿಡ. ತೀರ ಹಿಂದುಗಡೆ ಬಿಳಿ ಮೋಡಗಳಿಂದ ಕೂಡಿದ ನೀಲಾಕಾಶ ಕಲಾವಿದನ ನಿಸರ್ಗದ ಒಲವನ್ನು ತೋರಿಸಿಕೊಡುತ್ತವೆ. ಇದೇ ರೀತಿಯ ಹುಲಿಬೇಟೆಯ ಚಿತ್ರಗಳು ಇನ್ನೂ ಮೂರು ಕಡೆಗೆ ರಚನೆಯಾಗಿವೆ. ಅಲ್ಲಿ ಹಿನ್ನಲೆಯ ಪ್ರಕೃತಿ ದೃಶ್ಯಗಳು ಬದಲಾಗಿದ್ದರೂ ಉದ್ದೇಶಮಾತ್ರ ಹುಲಿಬೇಟೆಯಾಗಿದೆ.

೫. ನವಾಬರ ಕಾರಿನ ಚಿತ್ರ : ನವಾಬರು ಉಪಯೋಗಿಸುತ್ತಿದ್ದ 'ರೋಲ್ಸರಾಯ್' ಕಾರು ಇಲ್ಲಿನ ಭಿತ್ತಿಚಿತ್ರದಲ್ಲಿ ರಚನೆಯಾಗಿದೆ. ಮೇಲ್ಭಾಗದ ತೆರೆದುಕೊಂಡಂತೆ ಇರುವ ಈ ಕಾರು ಕೆಂಪುಬಣ್ಣದಲ್ಲಿದೆ. ನವಾಬರು ಉಪಯೋಗಿಸುತ್ತಿದ್ದ ಕಾರು ಸಹಿತ ಕೆಂಪು ಬಣ್ಣದಲ್ಲಿಯೇ ಇತ್ತೆಂದು ಇತಿಹಾಸದಿಂದ ತಿಳಿದುಬರುವುದು. ಸವಣೂರು ಸಂಸ್ಥಾನವು ಭಾರತದ ಒಕ್ಕೂಟದಲ್ಲಿ ಸೇರಿದಾಗ. ಕೊನೆಯ ಬಾರಿ ಸವಣೂರನ್ನು ಬಿಟ್ಟು ನವಾಬರು ಈ ಕೆಂಪುಕಾರಿನಲ್ಲಿಯೇ ಕುಳಿತು ಜನರಿಗೆ ಕೈ ಬೀಸುತ್ತ ಬೆಂಗಳೂರಿನ ಕಡೆಗೆ ತೆರಳಿದರು ಎಂದು ಹೇಳಲಾಗುತ್ತದೆ. ಈ ಕಾರಿನ ಪಕ್ಕದಲ್ಲಿ ನವಾಬರು ಅದರ ಮೇಲೆ ಕೈ ಊರಿಕೊಂಡು ನಿಂತಂತೆ ಚಿತ್ರಣಗೊಂಡಿದೆ.

೬. ಮೂವರು ಬಾಲಕರ ಚಿತ್ರ : ಎಲ್ಲ ಚಿತ್ರಗಳೂ ಅತ್ಯಂತ ಮೇಲ್ಭಾಗದ ಗೋಡೆಯಲ್ಲಿ ರಚನೆಯಾಗಿದ್ದರೆ, ಕೈಗೆಟುಕುವಂತೆ. ಕಣ್ಣಿನ ನೇರಕ್ಕಿರುವಂತೆ ಕೆಳಭಾಗದ ಗೋಡೆಯಲ್ಲಿ ಒಂದುಕಡೆಗೆ ಮೂವರು ಬಾಲಕರ ಚಿತ್ರ ರಚಿಸಿದೆ. ಈ ಬಾಲಕರು ಉದ್ದ ತೋಳಿನ ಅಂಗಿಯನ್ನು ತೊಟ್ಟುಕೊಂಡಿದ್ದು, ಕೊರಳಲ್ಲಿ ಪದಕವಿರುವ ಹಾರಗಳನ್ನು ಹಾಕಿಕೊಂಡಿದ್ದಾರೆ. ತಲೆಯ ಮೇಲೆ ಜುಟ್ಟಿನಂತಿರುವ ಟೊಪ್ಪಿಗೆಗಳನ್ನು ಧರಿಸಿದ್ದು ಬಲಗಡೆಯ ಬಾಲಕ ಛತ್ರಿಯನ್ನು ಹಿಡಿದುಕೊಂಡಿರಿವನು. ಧಾರ್ಮಿಕ ವಿಧಿಯೊಂದರ ಚಿತ್ರ ಇದಾಗಿದ್ದು, ಇಲ್ಲಿ ಉಳಿದ ಚಿತ್ರಗಳಿಗಿಂತ ತೆಳುವಾದ ವರ್ಣಲೇಪನ ಮಾಡಲಾಗಿದೆ. ಹಿನ್ನಲೆಗೆ ಹಳದಿ ವರ್ಣ ಲೇಪಿಸಿದೆ. ಈ ಬಾಲಕರ ಮುಂದುಗಡೆಗೆ ಏನೋ ವಸ್ತುಗಳು ರಚನೆಯಾಗಿದ್ದು ಆ ಭಾಗ ಪೂರ್ತಿನಾಶವಾಗಿದೆ. ಉಳಿದ ಚಿತ್ರಗಳೆಲ್ಲ ನವಾಬರ ವೈಭವ. ಪ್ರತಿಷ್ಟೆಗಳನ್ನು ತೋರಿಸಿದರೆ ಈ ಚಿತ್ರದಲ್ಲಿ ಬೇರೆಯ ವಸ್ತುವಿಷಯ ಚಿತ್ರಣಗೊಂಡಿದ್ದು ಗಮನಾರ್ಹವಾಗಿದೆ.

II. *ಮರದ ಫಲಕದ ಮೇಲಿನ ಚಿತ್ರಗಳು :* ವಾಡೆಯ ಮೇಲಿನ ಮಹಡಿಗೆ ಹೋಗುವ ಮೆಟ್ಟಿಲುಗಳು ಮರದಿಂದ ನಿರ್ಮಿಸಲಾಗಿದ್ದು ಈ ಮರದ ಹಲಗೆಗಳ ಮೇಲೆ ಮತ್ತು ಕಟ್ಟಡದಲ್ಲಿ ಅಲ್ಲಲ್ಲಿ ಅಳವಡಿಸಲಾಗಿರುವ ಮರದ ಪಟ್ಟಿಗಳಲ್ಲಿ ಹೂಬಳ್ಳಿಯ ನಕ್ಷೆಗಳನ್ನು ರಚಿಸಲಾಗಿದೆ. ಆದರೆ ಈಗ ಎಲ್ಲ ಕಡೆಯ ಚಿತ್ರಗಳೂ ನಾಶವಾಗಿದ್ದು ಎಡಭಾಗದ ಕಟ್ಟಿಗೆಯ ಮೆಟ್ಟಿಲುಗಳ ಮೇಲೆ ಅಲ್ಲಲ್ಲಿ ಬಣ್ಣದ ಉಳಿಕೆಗಳು ಕಂಡುಬರುತ್ತವೆ. ಈ ಹೂಬಳ್ಳಿಯ ನಕ್ಷೆಗಳು ನೈಜ ಶೈಲಿಯಲ್ಲಿವೆ. ಮರದ ಫಲಕದ ಮೇಲೆ ರಚನೆಯಾದ ನಕ್ಷಾ ಚಿತ್ರಗಳಲ್ಲದೇ ಒಳಗಿನ ಕೋಣೆಗಳಲ್ಲಿ ಗೋಡೆಯಲ್ಲಿಯೂ ಹೂಬಳ್ಳಿಯ ನಕ್ಷೆಗಳನ್ನು ಚಿತ್ರಿಸಲಾಗಿದ್ದು ಅದರ ಮೇಲೆ ಸುಣ್ಣ ಸಾರಿಸಿ ಅಳಿಸಿಹಾಕಲಾಗಿದೆ. ಸುಣ್ಣದ ಹಿಂದಿನಿಂದ ಮಸುಕಾಗಿ ಅಲ್ಲಲ್ಲಿ ಕುರುಹುಗಳು ಕಂಡಬುರುತ್ತವೆ.

ಇಲ್ಲಿಯ ಚಿತ್ರಗಳು ಪಾಶ್ಚಾತ್ಯ ಶೈಲಿಯಲ್ಲಿ ನೆರಳು ಬೆಳಕಿನ ವಿನ್ಯಾಸದಲ್ಲಿ ರಚನೆಯಾಗಿವೆ. ಚಿತ್ರಗಳು ಉತ್ಕೃಷ್ಟ ಮಟ್ಟದಲ್ಲಿ ಇರದೇ ಪ್ರಬುದ್ಧವಲ್ಲದ ಕಲಾವಿದನು ರಚಿಸಿದಂತಿವೆ. ಭಾರತೀಯ ಪರಂಪರಾಗತ ಪ್ರಾಕೃತಿಕ ವರ್ಣಗಳ ಬಳಕ ಇಲ್ಲಿರದೇ ಪಾಶ್ಚಾತ್ಯ ರಾಸಾಯನಿಕ ವರ್ಣಗಳು ಬಳಕೆಗೊಂಡಿವೆ. ಚಿತ್ರಗಳಲ್ಲಿ ನವಾಬರ ಜೀವನ ವಿಧಾನ ಪ್ರತಿಬಿಂಬಿಸುವ ಘಟನೆಗಳನ್ನು ಸ್ಥೂಲವಾಗಿ ತಿಳಿಸಿಕೊಡುವ ಆಕರಗಳಾಗಿವೆ. ಇಂತಹ ಕೆಲವು ಪ್ರಮುಖ ಲಕ್ಷಣಗಳು ಈ ಚಿತ್ರದಲ್ಲಿವೆ.

**೯. ರಾಮದುರ್ಗದ ವಾಡೆ :** ಬೆಳಗಾಂವ ಜಿಲ್ಲೆಯ ರಾಮದುರ್ಗವು ತಾಲೂಕಾಸ್ಥಳವಾಗಿದೆ. ನರಗುಂದ ಸಂಸ್ಥಾನಿಕರ ಸೋದರ ಸಂಬಂಧಿ ಸಂಸ್ಥಾನ ಇದಾಗಿದೆ. ಕ್ರಿ. ಶ. ೧೯ ನೇ ಶತಮಾನದ ಮೊದಲ ಭಾಗದಲ್ಲಿ ಕಟ್ಟಲ್ಪಟ್ಟ ಇಲ್ಲಿನ ರಾಜವಾಡೆ ಒಂದು ಸುಂದರ ರಚನೆಯಾಗಿದೆ. ಈ ಅರಮನೆಲ್ಲಿ ಭಿತ್ತಿ ಚಿತ್ರಗಳು ಅತ್ಯಲ್ಪ ಪ್ರಮಾಣದಲ್ಲಿ ಕಂಡುಬರುತ್ತವೆ. ಒಳಭಾಗದ ಗೋಡೆಯಲ್ಲಿ ಬಾಗಿಲಿನ ಮೇಲ್ಭಾಗದಲ್ಲಿ ಒಂದು ಕಡೆಗೆ ಮಾತ್ರ ಸುಮಾರು ಒಂದು ಫೂಟಿನಷ್ಟು ಹೂಬಳ್ಳಿಯ ನಕ್ಷೆ ರಚಿಸಲಾಗಿದೆ. ಬಿಳಿ ಸುಣ್ಣದ ಗೋಡೆಯಲ್ಲಿ ತಿಳಿಕೆಂಪು ವರ್ಣದಿಂದ ರಚಿಸಿದ ಈ ನಕ್ಷೆಗಳನ್ನು ಬಿಟ್ಟರೆ ಒಳಭಾಗದಲ್ಲಿ ಮತ್ತಾವ ಭಿತ್ತಿ ಚಿತ್ರಗಳೂ ಕಂಡುಬರುವುದಿಲ್ಲ. ಈ ರಾಜವಾಡೆಯ ಮುಖ್ಯ ದ್ವಾರದ ಮೇಲಿನ ಅಂತಸ್ತಿನಲ್ಲಿ ಹೊರಗೋಡೆಯ ಚಾಚುಭಾಗಕ್ಕೆ ಅಲಂಕಾರಿಕ ಗಾಜುಗಳನ್ನು ಹೊಂದಿಗಸಲಾಗಿದೆ. ಈ ಗಾಜುಗಳ ಮೇಲೆ ಮೂರು ಬದಿಯಲ್ಲಿ ಒಂದೇ ತೆರನಾದ ನಕ್ಷಾ ಚಿತ್ರವನ್ನು ರಚಿಸಲಾಗಿದೆ.

ಅರಮನೆಗಳಲ್ಲಿ ರಚನೆಯಾದ ಭಿತ್ತಿಚಿತ್ರಕಲೆ ಅದರ ರಚನೆಗೆ ಪೋಷಕನಾದ ಅರಸನ ಧರ್ಮಾಭಿಮಾನ, ಸೌಂದರ್ಯೋಪಾಸನೆಗಳಲ್ಲದೇ ಆತನ ಆಸಕ್ತಿ, ಅಭಿರುಚಿ, ಸ್ವಭಾವಗಳಿಗಣುಸಾರವಾಗಿ ರಚನೆಯಾಗಿರುತ್ತದೆ. ಅಲ್ಲದೇ ಅರಮನೆಗಳ ವಿವಿಧ ಭಾಗಗಳಲ್ಲಿ ಆಯಾ ಸ್ಥಳಗಳಿಗೆ ಅನುಸಾರವಾಗಿ ಚಿತ್ರಗಳು ರಚನೆಯಾಗಿರುತ್ತವೆ ಎನ್ನಬಹುದು. ಹೆಚ್ಚು ಜನ ಬಂದು ಹೋಗುವ ದರ್ಬಾರ ಹಾಲ್ ಅಥವಾ ಸಭಾಭವನಗಳಂತಹ ಸ್ಥಳದಲ್ಲಿ ರಾಜರ ಮತ್ತು ರಾಜ ಪರಿವಾರದವರ ಚಿತ್ರಗಳು, ಯುದ್ಧ ಸಂಬಂಧೀ ಘಟನೆಗಳು, ಉತ್ಸವಗಳು, ಆಚರಣೆಗಳು, ರಾಜರು ಅನುಸರಿಸುವ ಧರ್ಮಕ್ಕೆ ಸಂಬಂಧಿಸಿದ ದೇವತಾ ಚಿತ್ರಗಳಿರುವುದು ಕಂಡುಬರುತ್ತದೆ. ವಿಜಯನಗರದ ಕೃಷ್ಣದೇವರಾಯನ ಅರಮನೆಯಲ್ಲಿ ರಾಜನ ಮತ್ತು ಆತನ ತಂದೆಯ ಚಿತ್ರಗಳನ್ನು ಬಾಗಿಲಿನ ಎಡಬಲಗಳಲ್ಲಿ ಬರೆಯಲಾಗಿತ್ತು. ಮತ್ತೊಂದು ಕಡೆಗೆ ವಿದೇಶಿ ಜನರನ್ನು ಅವರ ವೇಷಭೂಷಣಗಳಿಂದ ಚಿತ್ರಿಸಿದಂತೆಯೇ ರಾಜ್ಯದಲ್ಲಿರುವ ವಿವಿಧ ಬಗೆಯ ಜನರನ್ನು ಅವರವರ ಲಕ್ಷಣಗಳಿಗಣುಸಾರವಾಗಿ ಮತ್ತೊಂದು ಭಾಗದಲ್ಲಿ ಚಿತ್ರಿಸಲಾಗಿತ್ತು[೧೬೭] ಎಂದು ತಿಳಿದು ಬರುತ್ತವುದು. ಅರಮನೆಯ ಖಾಸಗೀ ಕೋಣೆಗಳು, ಅಂತಪುರಗಳಂತಹ ಸ್ಥಳಗಳಲ್ಲಿ ಭಿತ್ತಿ ಚಿತ್ರಗಳು ರಚನೆಯಾದಾಗ ಅವು ಹೆಚ್ಚಾಗಿ ರಾಜನ ವೈಯಕ್ತಿಕ ಅಭಿಲಾಷೆಗಳಿಗೆ ಒತ್ತುಕೊಟ್ಟಂತೆ ಇರುತ್ತವೆ.

ನರಗುಂದದ ಅರಮನೆಯಲ್ಲಿರುವ ಭಿತ್ತಿಚಿತ್ರಗಳು ರಾಜನ ಖಾಸಗಿ ಕೋಣೆಯಲ್ಲಿದ್ದು, ಅಲ್ಲಿ ಧಾರ್ಮಿಕ ಚಿತ್ರಗಳ ಜೊತೆಗೆ ರಾಜರಾಣಿಯರು ಅಂತಪುರದಲ್ಲಿ ಮಾತನಾಡುತ್ತಿರುವುದು, ಸರಸದಲ್ಲಿ ತೊಡಗಿರುವುದು, ಮತ್ತು ರಾಜರಾಣಿಯರ ಜೊತೆಗೆ ಚಿಕ್ಕ ಮಗುವು ಆಡುತ್ತಿರುವುದು, ಮಗುವಿಗೆ ರಾಣಿಯು ಸ್ತನ್ಯ ಪಾಪಮಾಡಿಸುತ್ತಿರುವುದಂತಹ ಚಿತ್ರಗಳಲ್ಲದೇ ರಾಣಿಯರು ಜಲಕ್ರೀಡೆ ಯಾಡುತ್ತಿರುವ ಚಿತ್ರಗಳೂ ರಚಿಸಿವೆ. ನಿಪ್ಪಾಣಿಯ ರಾಜವಾಡೆಯಲ್ಲಿನ ರಾಜನ ಶಯನ ಕೋಣೆಯಲ್ಲಿ ಹೆಚ್ಚಾಗಿ ಶೃಂಗಾರಕ್ಕೆ ಸಂಬಂಧಿಸಿದ ಚಿತ್ರಗಳು ರಚಿಸಿವೆ. ಕೃಷ್ಣ ಮತ್ತು ಆತನ ಮಡದಿಯರ ಸರಸಕ್ಕೆ ಸಂಬಂಧಿಸಿದ ಚಿತ್ರಗಳು ಇಲ್ಲಿವೆ. ಕೃಷ್ಣನು ತನ್ನ ಮಡದಿಯ ತಲೆ ಬಾಚುತ್ತಿರುವುದು, ಹೂ ಮುಡಿಸುತ್ತಿರುವುದು, ಶೃಂಗಾರ ಮಾಡುತ್ತಿರುವಂತಹ ಚಿತ್ರಗಳಲ್ಲದೇ ಕುಚಗಳನ್ನು ಮರ್ದಿಸುತ್ತುರುವುದು, ಅಪ್ಪಿಕೊಂಡಿರುವುದು, ವಿವಿಧ ಭಂಗಿಯ ಶಯನ ದೃಶ್ಯಗಳಂತಹ ರತಿವಿಲಾಸಗಳ ನಿರೂಪಣೆಯ ಚಿತ್ರಗಳು ಇಲ್ಲಿ ರಚನೆಯಾಗಿವೆ.

ಸುರಪುರದ ಅರಮನೆಯಲ್ಲಿ ಮೊದಲು ಹೆಚ್ಚಿನ ಚಿತ್ರಗಳು ಇದ್ದಿರಬಹುದು ಆದರೆ ಈಗ ಸಭಾಂಗಣದ ಒಂದು ಕಡೆಗೆ ಮಾತ್ರ ಶೇಷಶಯನ ವಿಷ್ಣುವಿನ ಚಿತ್ರ ಗೋಚರಿಸುತ್ತದೆ. ಸಭಾಂಗಣವು ಸಾರ್ವಜನಿಕ ಸ್ಥಳವಾಗಿದ್ದು ಅಲ್ಲಿ

---

೧೬೭. ಸದಾನಂದ ಕನವಳ್ಳಿ (ಅನು) : ಮರೆತು ಹೋದ ಮಹಾಸಾಮ್ರಾಜ್ಯ ವಿಜಯನಗರ, ಪುಟ, ೨೭೦, ೨೭೩, ೨೯೯

# ರಂಗೀನ್ ಮಹಲ್ ಬೀದರ



ಬಾಗಿಲ ಸುತ್ತಲಿನ ನಕ್ಷೆ.



ಗೋಡೆಯ ಮೇಲಿನ ನಕ್ಷೆ



ಚೋಲ್ಟಾಬಾಗಿನ ನಕ್ಷೆ (ರಂಗೀನಮಹಲ್)

ಅಸರ್ ಮಹಲ್ ವಿಜಾಪುರ



ಬಾಗಿಲು ಮತ್ತು ಗೋಡೆಯ ನಕ್ಷೆ.



ಬೆಳ್ಕಸೋಡೆಯ ನಕ್ಷೆ (ಅಪರ್‌ಮಹಲ್)



ಮುಗುಳಿನ ನಾಯಕರಣ ದೃಶ್ಯ (ಅಪರಮಹಲ್)



ರಾಜನ ಅಂತಃಪುರ (ನರಗುಂದ)



ರಾಮಾಯಣದ ಪಟ್ಟಿಕೆ (ನರಗುಂದ)

ನಿಪ್ಪಾಣಿಯ ರಾಜವಾಡೆ ನಿಪ್ಪಾಣಿ



ಉದ್ಧವನೊಂದಿಗೆ ಕೃಷ್ಣ.



ಉಗ್ರನರಸಿಂಹ.

ನಾಯಕರ ಅರಮನೆ ಸುರಪುರ



ಶೇಷಶಯನ ಚಿತ್ರ.

ರಾಮದುರ್ಗದ ವಾಡೆ



ಗಾಜಿನ ಮೇಲಿನ ನಕ್ಷೆ.

ನವಾಬರ ವಾಡೆ ಸವಣೂರ



ಮದವೇರಿದ ಆನೆಯ ಹಾವಳಿ.



ನವಾಬರ ಬೇಟೆಯ ದೃಶ್ಯ.

ಶೃಂಗಾರ. ಮತ್ತು ಅಂತಪುರಗಳಂತಹ ಖಾಸಗೀ ವಿಷಯಗಳಿಗೆ ಸಂಬಂಧಿಸಿದ ಚಿತ್ರಗಳಿರದೇ ದೇವತಾ ಚಿತ್ರಗಳು, ರಾಜದರ್ಬಾರ್. ಮೆರವಣಿಗೆ. ಉತ್ಸವ. ಬೇಟೆ. ಯುದ್ಧಗಳಂತಹ ಚಿತ್ರಗಳು ರಚನೆಯಾಗಿರುತ್ತವೆ. ಬೀದರ್‌ನಲ್ಲಿರುವ ಮುಸ್ಲಿಂ ಅರಮನೆಯಲ್ಲಿ ಕೇವಲ ನಕ್ಷಾ ರೂಪ ವಿನ್ಯಾಸಗಳು ಚಿತ್ರಿಸಿದ್ದರೆ ಬಿಜಾಪುರ ಮತ್ತು ಕುಮಟಗಿಯಲ್ಲಿ ನಕ್ಷಾ ಚಿತ್ರಗಳ ಜೊತೆಗೆ ವ್ಯಕ್ತಿಚಿತ್ರಗಳೂ ರಚಿಸಿವೆ. ಮುಸ್ಲಿಂ ಅರಮನೆಗಳ ಭಿತ್ತಿ ಚ್ರಿಗಳು ಹಿಂದೂ ಅರಮನೆಗಳ ಭಿತ್ತಿಗಳಂತೆ ವೈವಿಧ್ಯ. ವಿಷಯಸಂಪತ್ತು. ವರ್ಣವಿನ್ಯಾಸಗಳಿಂದ ಕೂಡಿರುವುದಿಲ್ಲ ಎನ್ನಬಹುದು. ಸುರುಪುರದ ನವಾಬರ ವಾಡೆಯಲ್ಲಿನ ಭಿತ್ತಿಚಿತ್ರಗಳು ನವಾಬರ ಆಡಳಿತಪದ್ಧತಿ. ವೇಷ. ಭೂಷಣ. ಹವ್ಯಾಸಗಳನ್ನು ತಿಳಿಸಿಕೊಡುವ ಧಾರ್ಮಿಕೇತರ ಚಿತ್ರಗಳಾಗಿವೆ. ಹೀಗೆ ಅರಮನೆಗಳಲ್ಲಿರುವ ಭಿತ್ತಿಚಿತ್ರಗಳು ಆಯಾರಾಜರ ಆಸಕ್ತಿ, ಅಭಿರುಚಿ, ಧರ್ಮಾಭಿಮಾನಗಳಂತಹ ವಿವರಗಳನ್ನು ಒದಗಿಸಿಕೊಡುತ್ತವೆ.

## IV. ಮಸೀದೆ ಮತ್ತು ಸಮಾಧಿ ಭವನಗಳಲ್ಲಿರುವ ಭಿತ್ತಿಚಿತ್ರಕಲೆ

ಕರ್ನಾಟಕದಲ್ಲಿ ಇಸ್ಲಾಂ ಆಡಲಿತ ಪ್ರಾರಂಭಗೊಂಡ ನಂತರ ಮಸೀದೆ, ದರ್ಗಾ, ಸಮಾಧಿ ಭವನಗಳು ನಿರ್ಮಾಣವಾಗ ತೊಡಗಿದವು. ಪ್ರಾರಂಭದಲ್ಲಿ ಇವುಗಳು ಅಲಂಕಾರರಹಿತ ಕೃತಿಗಳಾಗಿದ್ದರೆ, ನಂತರದಲ್ಲಿ ಸ್ಥಳೀಯ ಪ್ರಭಾವಕ್ಕೊಳಗಾಗಿ ಇಂತಹ ಕಟ್ಟಡಗಳನ್ನು ವರ್ಣ ವಿನ್ಯಾಸಗಳಿಂದ ಅಲಂಕರಿಸುವ ಹವ್ಯಾಸವನ್ನು ಮುಸ್ಲಿಂ ಸುಲ್ತಾನರು ಬೆಳೆಸಿಕೊಂಡರು. ವರ್ಣ ವಿನ್ಯಾಸಗಳಿಂದ ಅಲಂಕರಿಸಿದರೂ ಅಲ್ಲಿ ವ್ಯಕ್ತಿ ಚಿತ್ರಣಗಳಿರದೇ ನಕ್ಷಾ ಚಿತ್ರಗಳಿಗೆ ಅವು ಸೀಮಿತಗೊಂಡಿವೆ. ಹೀಗೆ ವರ್ಣಚಿತ್ರ ವಿನ್ಯಾಸಗಳಿಂದ ಅಲಂಕಾರಗೊಂಡ ಮಸೀದೆ, ಸಮಾಧಿ ಭವನಗಳು ಉತ್ತರ ಕರ್ನಾಟಕದಲ್ಲಿ ಕಂಡುಬರುತ್ತಿದ್ದು ಅವು ಈ ಕೆಳಗಿನಂತಿವೆ.

೧. ತಾಜುದ್ದೀನ ಫಿರೋಜನ ಸಮಾಧಿ, ಗುಲಬರ್ಗಾ

೨. ಬಂದೇನವಾಜ್ ದರ್ಗಾ, ಗುಲಬರ್ಗಾ

೩. ಶಹಾಕಮಾಲ್, ಮುಜಾರ್‍ರದನ ದರ್ಗಾ, ಗುಲಬರ್ಗಾ

೪. ಬಹಾಮೀ ಸಮಾಧಿಗಳು, ಅಸ್ಟೂರು

**೧. ತಾಜುದ್ದೀನ ಫಿರೋಜನ ಸಮಾಧಿ, ಗುಲಬರ್ಗಾ :** ಗುಲಬರ್ಗಾವು ಕ್ರಿ. ಶ. ೧೩೪೭ ರಿಂದ ೧೪೨೪ ರ ವರೆಗೆ ಬಹಮನಿ ಸುಲ್ತಾನರ ರಾಜಧಾನಿಯಾಗಿ ಮೆರೆದ ಪ್ರದೇಶ. ೧೪೨೪ ರ ನಂತರ ಬಹಮನಿ ಸುಲ್ತಾನರು ತಮ್ಮ ರಾಜಧಾನಿಯನ್ನು ಬೀದರ್‌ಗೆ ವರ್ಗಾಯಿಸುವ ಪೂರ್ವದಲ್ಲಿ ಕ್ರಿ. ಶ. ೧೩೫೮ ರಿಂದ ೧೪೨೪ ರ ವರೆಗೆ ಬಿರುಸಾದ ಚಟುವಟಿಕೆಗಳನ್ನು ಕಂಡ ಪ್ರದೇಶವಾಗಿದೆ. ಈ ಅವಧಿಯಲ್ಲಿ ಗುಲಬರ್ಗಾದಲ್ಲಿ ಅನೇಕ ಗಮನಾರ್ಹ ಕಟ್ಟಡಗಳು ರಚನೆಯಾಗಿವೆ. ಅವುಗಳಲ್ಲಿ ಶೇಖ ಸಿರಾಜುದ್ದೀನ್ ಜುನ್ನೈದಿಯ ದರ್ಗಾ, ಶಹಾಬಜಾರ್ ಮಸೀದಿ, ಸಪ್ತಗುಂಬಜಗಳು, ಹಜರತ್‌ಗೇಸೂದ ರಾಜನ ದರ್ಗಾ. ಶಹಕಮಾಲ್ ದರ್ಗಾಗಳನ್ನು ಹೆಸರಿಸಬಹುದು. ಇವುಗಳಲ್ಲಿ ಸಪ್ತಗುಂಬಜಗಳ ಸಾಲಿನಲ್ಲಿರುವ ತಾಜುದ್ದೀನ್ ಫಿರೋಜನ ಸಮಾಧಿ. ಮತ್ತು ಸಂತಗೇಸೂದರಾಜನ ದರ್ಗಾಗಳಲ್ಲಿ ವರ್ಣಭಿತ್ತಿ ಚಿತ್ರಗಳು ಕಂಡು ಬರುತ್ತವೆ. ಅವುಗಳನ್ನು ಒಂದೊಂದಾಗಿ ನೋಡಬಹುದು. ತಾಜುದ್ದೀನ್ ಫಿರೋಜನ ಸಮಾಧಿಯು ಗುಲಬರ್ಗಾದಲ್ಲಿ ಸಪ್ತಗುಂಬಜಗಳ ಸಾಲಿನಲ್ಲಿದೆ. ಈ ಸಪ್ತಗುಂಬಜಗಳು ಸಾಲಾಗಿರುವ ಸಮಾಧಿ ಕಟ್ಟಡಗಳಾಗಿವೆ. ಇಲ್ಲಿ ಅಲ್ಲಾವುದ್ದೀನ ಮುಜಾಹಿದ್ (ಮರಣ ೧೩೭೮). ಒಂದನೇ ದಾವುದ್ (ಮರಣ ೧೩೭೮), ತಾಜುದ್ದೀನ್ ಫಿರೋಜ್


IV. ಮಸೀದೆಗಳಲ್ಲಿರುವ ಭಿತ್ತಿ ಚಿತ್ರಕಲೆ
1) ತಾಜುದ್ದೀನ ಫಿರೋಜನ ಸಮಾಧಿ. ಗುಲಬರ್ಗಾ
2) ಬಂದೇ ಜವಾಜ ದರ್ಗಾ, ಗುಲಬರ್ಗಾ
3) ಶಹಾಕಮಾಲ್ ಮುಜರ್‍ರಾದನ ದರ್ಗಾ, ಗುಲಬರ್ಗಾ
4) ಬಹಾಮೀ ಸಮಾಧಿಗಳು, ಅಸ್ತೂರು
I) ಹಜರತ್ ಗೇಸೂದ ರಾಜನ ದರ್ಗಾ
II) ಗೇಸೂದರಾಜನ ಶಿಷ್ಯರ ಸಮಾಧಿಗಳು
1) ಹಜರತ್ ಗೇಸೂದರಾಜನ ದರ್ಗಾದ ಎದುರಿನ ಸಮಾಧಿ
2) ಹಜರತ್ ಗೇಸೂದರಾಜನ ದರ್ಗಾದ ಎಡಭಾಗದ ಸಮಾಧಿ
I) ಅಹಮ್ಮದ್ ಅಲ್-ವಲಿ-ಬಹಮನಿ ಸಮಾಧಿ
II) ಅಹಮ್ಮದಷಾನ ಸಮಾಧಿ
III) ಎರಡನೇ ಅಲ್ಲಾವುದ್ದೀನನ ಸಮಾಧಿ

(ಮರಣ ೧೪೨೨) ಮುಂತಾದ ಸುಲ್ತಾನರನ್ನು ಸಮಾಧಿ ಮಾಡಲಾಗಿದೆ. ಇಲ್ಲಿರುವ ಏಳು ಸಮಾಧಿ ಭವನಗಳಲ್ಲಿ ತಾಜುದ್ದೀನ್ ಫಿರೋಜ್‌ನ ಸಮಾಧಿಯೇ ಉಳಿದವುಗಳಿಗಿಂತ ಸುಂದರವಾಗಿದೆ. ಅದೊಂದರಲ್ಲಿ ಮಾತ್ರ ವರ್ಣದಿಂದರಚಿಸಿದ ಹೂಬಳ್ಳಿಯ ನಕ್ಷೆಗಳು[೧೭೮] ಇದ್ದುದಾಗಿ ತಿಳಿದುಬರುತ್ತದೆ. ಆದರೆ ಅಲ್ಲಿ ಇಂದು ಯಾವ ಚಿತ್ರಗಳೂ ಉಳಿದಿರದೇ ಗುಮ್ಮಟಗಳ ಮೇಲೆ ಮಾಡಿದ್ದ ವರ್ಣಾಲಂಕಾರದ ಕುರುಹುಗಳು ಮಾತ್ರ ಕಂಡು ಬರುತ್ತವೆ. ಈ ಸಮಾಧಿ ಕಟ್ಟಡದಲ್ಲಿ ವರ್ಣದಿಂದ ರಚಿಸಿದ ನಕ್ಷೆಗಳಲ್ಲದೇ ಗಾರೆಯಿಂದ ಮತ್ತು ಬಣ್ಣದ ಕಲ್ಲುಗಳಿಂದ ಮಾಡಲಾಗದ ಹೂಬಳ್ಳಿಯ ನಕ್ಷೆ ಜ್ಯಾಮಿತಿಕ ಆಕಾರದ ರೂಪವಿನ್ಯಾಸಗಳು ಕಂಡುಬರುತ್ತವೆ.

**೨. ಬಂದೇನವಾಜ್ ದರ್ಗಾ :** ಗುಲಬರ್ಗಾ ಭಾಗದ ಪ್ರಖ್ಯಾತವಾದ ಇಸ್ಲಾಂ ಧಾರ್ಮಿಕ ಸ್ಥಳವಾದ ಇಲ್ಲಿ ಮೂರು ಕಟ್ಟಡಗಳಲ್ಲಿ ವರ್ಣದಿಂದ ರಚಿಸಿದ ಹೂಬಳ್ಳಿಯ ನಕ್ಷಾ ವಿನ್ಯಾಸಗಳು ಕಂಡುಬರುತ್ತವೆ. ಇಲ್ಲಿನ ಚಿತ್ರಗಳನ್ನು ಎರಡು ವಿಧವಲ್ಲಿ ವಿಂಗಡಿಸಬಹುದು.

I. ಹಜರತ್‌ಗೇಸೂದರಾಜನ ದರ್ಗಾದ ವಿನ್ಯಾಸಗಳು

II. ಗೇಸೂದರಾಜನ ಶಿಷ್ಯರ ಸಮಾಧಿಗಳ ಚಿತ್ರವಿನ್ಯಾಸಗಳು

***I. ಹಜರತ್‌ಗೇಸೂ ಹರಾಜನ ದರ್ಗಾ (ಬಂದೇನವಾಜ್ ದರ್ಗಾ) :*** ಹಜರತ್ ಗೇಸೂದರಾಜ್ ಅಪಾರ ಗೌರವವನ್ನು ಪಡೆದ ಒಬ್ಬ ಸೂಫಿಸಂತು. ಈತನ ಕ್ರಿ. ಶ. ೧೪೦೧ ರಲ್ಲಿ ಗುಲಬರ್ಗಾಕ್ಕೆ ಬಂದನು. ಕೋಟೆಯ ಜಾಮೀ ಮಸೀದಿಯ ಬಳಿಯ ಒಂದು ಮಠದಲ್ಲಿ ತಂಗಿದನು. ನಂತರ ನಗರದಿಂದ ಸ್ವಲ್ಪದೂರಲ್ಲಿ ಆತನು ದರ್ಗಾ ಒಂದನ್ನು ಹದಿನೈದನೆ ಶತಮಾನದಲ್ಲಿ ನಿರ್ಮಿಸಿಕೊಂಡನು. ಅದುಕಾಲಕಾಲಕ್ಕೆ ಬೆಳವಣಿಗೆಯನ್ನು ಕಾಣುತ್ತ ವಿಸ್ತಾರವಾಗುತ್ತ ನಡೆಯಿತು. ಇಂದು ಅಲ್ಲಿ ಅನೇಕ ಸಮಾಧಿಗಳು. ಮಸೀದೆಗಳು. ಮದರ್‌ಸಾಗಳು, ವಿಶ್ರಾಂತಿಗೃಹಗಳು, ಅಂಗಳಗಳು, ಮತ್ತು ದ್ವಾರಗಳು ಕಂಡುಬರುತ್ತವೆ. ಈ ದರ್ಗಾದ ಮುಖ್ಯಕಟ್ಟಡ ಹಜರತ್‌ಗೇಸೂ ದರಾಜ್‌ನ ಸಮಾಧಿ ಭವನ. ಇದು ಈತನ ಕಾಲವಾದ ಕ್ರಿ. ಶ. ೧೪೨೨ ರಲ್ಲಿ[೧೭೯] ನಿರ್ಮಿಸಿದೆ. ಈ ದರ್ಗಾದ ವಿಸ್ತರಣಕಾರ್ಯವು ೧೭ ನೇ ಶತಮಾನದ ವರೆಗೂ ಮುಂದುವರೆಯಿತು. ಕ್ರಿ. ಶ. ೧೬ ಮತ್ತು ೧೭ ನೇ ಶತಮಾನಗಳ ಬಿಜಾಪುರ ಆದಿಲ್ ಶಾಹಿಗಳ ಕಾಲದ ರಚನೆಗಳೂ ಇಲ್ಲಿವೆ. ಈ ದರ್ಗಾದ ಮುಖ್ಯ ಕಟ್ಟಡವಾದ ಹಜರತ್‌ಗೇಸೂದರಾಜನ ಸಮಾಧಿ ಭವನವು ಉಳಿದವುಗಳಿಗಿಂತ ಸುಂದರವಾಗಿದ್ದು ಒಳಭಾಗವು ವರ್ಣಾಲಂಕಾರದಿಂದ ಕೂಡಿದೆ. ಸೂಡುಬಿಲ್ಲೆಗಳ ಬಣ್ಣ ಬಣ್ಣದ ರಚನೆಗಳು, ಕನ್ನಡಿ ನಕ್ಷೆಗಳು. ಮುತ್ತುಗಳಿಂದ ಅಲಂಕರಿಸಿದ ವಿನ್ಯಾಸಗಳು ಇಲ್ಲಿ ಕಂಡುಬರುತ್ತವೆ. ಹಳೆಯ ಕಾಲದ ವರ್ಣದಿಂದ ರಚಿಸಿದ ನಕ್ಷಾ ವಿನ್ಯಾಸದ ಮೇಲೆ ಮತ್ತೆ ಹೊಸದಾಗಿ ಬಣ್ಣ ಬಳಿದು ಕನ್ನಡಿ ಜೋಡಿಸಿ ನವೀಕರಿಸಲಾಗಿದೆ.

***II. ಗೇಸೂದರಾಜ್‌ನ ಶಿಷ್ಯರ ಸಮಾಧಿಗಳ ಚಿತ್ರವಿನ್ಯಾಸಗಳು :*** ಗೇಸೂದರಾಜ್‌ನ ಇಬ್ಬರು ಶಿಷ್ಯರ ಸಮಾಧಿ ಭವನಗಳಲ್ಲಿ ವರ್ಣ ವಿನ್ಯಾಸಗಳು ಕಂಡು ಬಂದಿದ್ದು ಅವುಗಳನ್ನು ಹೀಗೆ ವಿವರಿಸಬಹುದು :

---

೧೭೮. ಬಿ. ಷೇಕ್ ಅಲಿ (ಸಂ) : ಕರ್ನಾಟಕ ಚರಿತ್ರೆ (ಸಂಪುಟ ೪) ಪುಟ ೩೦೮

೧೭೯. ಬಿ. ಷೇಕ್ ಅಲಿ : ಕರ್ನಾಟಕ ಚರಿತ್ರೆ. ಸಂಪುಟ ೪. ಪುಟ ೩೦೮

೧. ಹಜರತ್ ಗೇಸೂದಾರಾಜನ ದರ್ಗಾ ಎದುರಿಗಿರುವ ಸಮಾಧಿ.

೨. ಹಜರತ್ ಗೇಸೂದರಾಜನ ದರ್ಗಾದ ಎಡಭಾಗದಲ್ಲಿರುವ ಸಮಾಧಿ.

೧. ಹಜರತ್ ಗೇಸೂದರಾಜನ ದರ್ಗಾದ ಎದುರಿಗಿರುವ ಸಮಾಧಿ : ಗೇಸೂದರಾಜನ ದರ್ಗಾದ ಎದುರಿಗೇ ಇರುವ ಆತನ ಶಿಷ್ಯನೊಬ್ಬನ ಸಮಾಧಿಯು ಭವ್ಯವಾಗಿದ್ದು ಒಳಗಡೆಯ ನಾಲ್ಕೂ ಬದಿಯ ಗೋಡೆಗಳು, ಗುಮ್ಮಟದ ಒಳಭಾಗ ಹೂಬಳ್ಳಿಯ ನಕ್ಷಾ ವಿನ್ಯಾಸಗಳಿಂದ ತುಂಬಿದೆ. ಹೂಬಳ್ಳಿಯ ನೈಜರೂಪಗಳಲ್ಲದೇ ಅಲ್ಲಲ್ಲಿ ಜ್ಯಾಮಿತಿಕ ಆಕಾರದ ನಕ್ಷೆಗಳು ರಚಿಸಿವೆ. ತೆಳುಕೆಂಪು ವರ್ಣದ ಹಿನ್ನೆಲೆಯಲ್ಲಿ ವೈವಿಧ್ಯಪೂರ್ಣ ವಿನ್ಯಾಸಗಳು ಇಲ್ಲಿ ರಚನೆಯಾಗಿವೆ. ಬೀದರ್ ರಂಗೀನ ಮಹಲ್ ಕಟ್ಟಡದಂತೆ ಇಲ್ಲಿನ ನಕ್ಷೆಗಳು ಪರ್ಶಿಯನ್ ಪ್ರಭಾವದಿಂದ ಕೂಡಿರದೇ ಸ್ಥಳೀಯ ಶೈಲಿಯನ್ನು ಪ್ರತಿಬಿಂಬಿಸುತ್ತವೆ.

೨. ಹಜರತ್‌ಗೇಸೂದರಾಜನ ದರ್ಗಾದ ಎಡಭಾಗದಲ್ಲಿರುವ ಸಮಾಧಿ : ಗೇಸೂದರಾಜನ ಇನ್ನೊಬ್ಬ ಶಿಷ್ಯನ ಸಮಾಧಿಯು ಎಡಭಾಗದಲ್ಲಿ ನಿರ್ಮಿಸಿದೆ. ಈ ಸಮಾಧಿ ಭವನದಲ್ಲೂ ವರ್ಣ ವಿನ್ಯಾಸಗಳು ಕಂಡುಬರುತ್ತವೆ. ಇಲ್ಲಿ ಒಳಗೋಡೆಗಳು ಮತ್ತು ಮೇಲ್ಛಾವಣಿ ಸಂಪೂರ್ಣ ವರ್ಣಚಿತ್ತಾರಗಳಿಂದ ತುಂಬಿಸಲಾಗಿದೆ. ಹೂಬಳ್ಳಿಯ ನೈಜರೂಪಗಳು. ಜ್ಯಾಮಿತಿಕ ರೂಪದ ನಕ್ಷೆಗಳಲ್ಲದೇ. ಇಲ್ಲಿ ಕಟ್ಟಡಗಳ ವಾಸ್ತು ಸ್ವರೂಪವನ್ನು ಬಾಹ್ಯರೇಖೆಯಲ್ಲಿ ತೋರಿಸುವಂತಹ ವಿನ್ಯಾಸದ ನಕ್ಷೆಗಳು. ಮತ್ತು ಕಮಾನುಗಳನ್ನು ರಚಿಸಲಾಗಿದೆ. ಹಳದಿವರ್ಣದ ಹಿನ್ನೆಲೆಯಲ್ಲಿ ಇಲ್ಲಿ ಚಿತ್ರವಿನ್ಯಾಸಗಳು ರಚನೆಗೊಂಡಿವೆ.

**೩. ಶಹಾಕಮಾಲ್ ಮುಜರ್‍ರಾದನ ದರ್ಗಾ :** ಶಹಾಕಮಾಲ್ ಮುಜರ್‍ರಾದ್ ಸಂತನ ದರ್ಗಾವು ಹಜರತ್ ಗೇಸೂದರಾಜನ ದರ್ಗಾದ ಆಗ್ನೇಯ ದಿಕ್ಕಿನಲ್ಲಿ ನಿರ್ಮಿಸಿದೆ. ಈ ದರ್ಗಾ ಕ್ರಿ. ಶ. ೧೫ ನೇ ಶತಮಾನದಲ್ಲಿ ನಿರ್ಮಿಸಿದ್ದು, ದರ್ಗಾ ಸಮೀಪವೇ ಒಂದು ಮಸೀದೆಯನ್ನೂ ಎರಡು ಇನ್ನಿತರ ರಚನೆಗಳನ್ನು ಕಾಣಬಹುದು. ಮಸೀದೆಯ ಗುಮ್ಮಟದ ಒಳಭಾಗದಲ್ಲಿ ವರ್ಣದಿಂದ ಚಿತ್ರಿಸಲಾದ ಹೂಬಳ್ಳಿಯ ನಕ್ಷೆಗಳು ಕಂಡುಬರುತ್ತವೆ.[೧೭೦] ವರ್ಣವಿನ್ಯಾಸಗಳಲ್ಲಿ ಹೂಬಳ್ಳಿಯ ನೈಜರೂಪಗಳು, ಜ್ಯಾಮಿತಿಕ ಆಕಾರದ ನಕ್ಷೆಗಳು ಕಂಡುಬರುತ್ತವೆ.

**೪. ಅಸ್ತೂರಿನ ಬಹಮನಿ ಸಮಾಧಿಗಳು :** ಬೀದರಿನ ಪೂರ್ವಕ್ಕೆ ಸುಮಾರು ೧೦ ಕಿ. ಮಿ. ದೂರದಲ್ಲಿರುವ ಅಸ್ತೂರಿನಲ್ಲಿ ಬೀದರನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ಬಹಮನಿ ಸುಲ್ತಾನರ ಗೋರಿ (ಸಮಾಧಿ ಭವನ)ಗಳಿವೆ. ಅಸ್ತೂರು ಕ್ರಿ. ಶ. ೧೪ ನೆಯ ಅಶತಮಾನದಲ್ಲಿ ಮಹಮ್ಮದ್ ಷಾನಕಾಲಕ್ಕೆ ನಿರ್ಮಾಣವಾದ ಊರಾಗಿದೆ. ಅಹಮ್ಮದ್ ಷಾ ಮತ್ತು ಅವನ ವಂಶಜರ ಹತ್ತು ಗೋರಿಗಳು ಇಲ್ಲಿ ನಿರ್ಮಿಸಿವೆ. ಈ ಸಮಾಧಿಗಳಿಗೆ ಹೋಗಬೇಕಾದರೆ ಮೊದಲು ದುಲಹನ್ ದರವಾಜಾ ಎಂದು ಕರೆಯಲಾಗುವ ಬಾಗಿಲಿನ ಮೂಲಕ ಪ್ರವೇಶಿಸಬೇಕು. ಇಲ್ಲಿರುವ ಮೂರು ಸಮಾಧಿ ಭವನಗಳಲ್ಲಿರುವ ವರ್ಣವಿನ್ಯಾಸಗಳು ಹೂಬಳ್ಳಿಯ ನಕ್ಷೆಗಳು ಮತ್ತು ಜ್ಯಾಮಿತಿಕ ನಕ್ಷಾ ರೂಪಗಳಾಗಿವೆ. ಆ ಸಮಾಧಿಗಳು ಈ ಕೆಳಗಿನಂತಿವೆ.

---

೧೭೦. ಬಿ. ಷೇಕ್ ಅಲಿ (ಸಂ) : ಕರ್ನಾಟಕ ಚರಿತ್ರ (ಸಂಪುಟ ೪), ಪುಟ ೩೦೯

I. ಅಹಮ್ಮದ ಅಲ್‌ವಲಿ ಬಹಮನಿ ಸಮಾಧಿ

II. ಮಹಮ್ಮದ ಷಾನ ಸಮಾಧಿ

III. ಎರಡನೇ ಅಲ್ಲಾವುದ್ದೀನ ಷಾನ ಸಮಾಧಿ

***I. ಅಹಮ್ಮದ ಅಲ್-ವಲಿ-ಬಹಮನಿ ಸಮಾಧಿ (ಅಹಮದ್ ಶಹಾ ಬಹಮನಿ ಸಮಾಧಿ) :*** ಅಹಮ್ಮದನು ಬಹಮನಿ ಸಾಮ್ರಾಟರಲ್ಲಿ ೯ ನೇ ಸುಲ್ತಾನನಾಗಿದ್ದನು. ಈತನು ಕ್ರಿ. ಶ. (೧೪೨೨-೩೬)ರ ವರೆಗೆ ೧೩ ವರ್ಷಗಳ ಕಾಲ ಆಳ್ವಿಕೆ ಮಾಡಿದನು. ಈತನು ಗುಲಬರ್ಗಾದ ಬಂದೇನವಾಜ ದರ್ಗಾಕ್ಕೆ ಹೆಚ್ಚಿನ ಸಹಾಯ ಕಲ್ಪಿಸಿಕೊಟ್ಟನು. ಈತನ ಸಮಾಧಿ ಭವನದಲ್ಲಿ ವರ್ಣಚಿತ್ರಗಳನ್ನು ರಚಿಸಲಾಗಿದೆ. ಈ ಸಮಾಧಿಯು ಚೌಕಾಕಾರದ ತಳಪಾಯದ ಮೇಲೆ ಕಟ್ಟಲಾದ ಕಟ್ಟಡವಾಗಿದ್ದು ವಿಶಾಲ ಮತ್ತು ಎತ್ತರವಾಗಿದೆ. ಗೋಡೆಯು ಹೆಚ್ಚಿನ ದಪ್ಪಳತೆಯಿಂದ ಕೂಡಿದೆ. ಈ ಸಮಾಧಿ ಭವನವು ೩ ಪ್ರವೇಶದ್ವಾರಗಳನ್ನು ಹೊಂದಿದ್ದು. ಅವು ಪೂರ್ವ. ಉತ್ತರ, ಮತ್ತು ದಕ್ಷಿಣ ದಿಕ್ಕಿನಲ್ಲಿವೆ. ಈ ಸಮಾಧಿ ಭವನದ ಒಳಭಾಗದ ಗುಮ್ಮಟ ಮತ್ತು ಗೋಡೆಗಳನ್ನು ವರ್ಣ ಚಿತ್ರಗಳಿಂದ ಅಲಂಕರಿಸಲಾಗಿದೆ.[೭೧] ಗುಮ್ಮಟದ ಒಳಭಾಗದ ಛಾವಣಿಗೋಡೆಗಳಲ್ಲಿ ಮಾತ್ರವಲ್ಲದೇ ಬಾಗಿಲ ಪಟ್ಟಿಕೆಗಳೂ ಸಹಿತ ಹೂಬಳ್ಳಿ ನಕ್ಷೆಗಳಿಂದ ಕೂಡವೆ. ಇಲ್ಲಿ ಗಮನಾರ್ಹವೆಂದರೆ ದಕ್ಷಿಣ ದಿಕ್ಕಿನ ಗೋಡೆಯಲ್ಲಿ ಸ್ವಸ್ತಿಕ ಚಿಹ್ನೆಯನ್ನೂ ಬರೆಯಲಾಗಿದೆ. ಈ ಸಮಾಧಿ ಭವನದ ಗುಂಬಜವು ದೆಹಲಿಯ ಲೋಧಿ ಸಮಾಧಿಗಳ ಗುಂಬಜವನ್ನು ಹೋಲುತ್ತದೆ. ಇಲ್ಲಿನ ಗುಂಬಜ ಮತ್ತು ಒಳಗೋಡೆಗಳಲ್ಲಿನ ಎಲ್ಲ ಚಿತ್ರಗಳೂ ಜ್ಯಾಮಿತಿಕ ರೂಪದ ನಕ್ಷೆಗಳು ಮತ್ತು ಹೂಬಳ್ಳಿಯ ನೈಜರೂಪಗಳಾಗಿವೆ. ಇಲ್ಲಿನ ಚಿತ್ರಗಳಲ್ಲಿ ಬಂಗಾರ ವರ್ಣವನ್ನೂ ಬಳಸಲಾಗಿದೆ. ನೀಲಿ, ಹಸಿರು, ನಸುಕೆಂಪು, ಬೂದುವರ್ಣಗಳು ಇಲ್ಲಿ ಸುಂದರವಾಗಿ ಸಮ್ಮಿಳಿತಗೊಂಡಿವೆ. ಇಲ್ಲಿನ ಚಿತ್ರಗಳಲ್ಲಿ ವರ್ಣಗಳ ವಿವಿಧ ರೀತಿಯ ಛಾಯೆಗಳನ್ನು ತೋರಿ ಅವುಗಳಲ್ಲಿ ನೆರಳು ಬೆಳಕು ಉಂಟುಮಾಡಲು ಪ್ರಯತ್ನಿಸದೇ ವರ್ಣಗಳ ವಿವಿಧ ಛಾಯೆಗಳನ್ನೇ ಚಪ್ಪಟೆಯಾಗಿ ಲೇಪಿಸಿ ವರ್ಣಹೊಂದಾಣಿಕೆ ಮಾಡಲಾಗಿದೆ.

ದಕ್ಷಿಣ ದಿಕ್ಕಿನ ಮೇಲ್ಛಾವಣಿಯಲ್ಲಿರುವ ಚಿತ್ರಗಳಲ್ಲಿ ಹೂಬಳ್ಳಿ ಚಿತ್ರಗಳಿಗೆ ಬಂಗಾರವರ್ಣವನ್ನು ಬಳಸಿದ್ದು ಅದು ಎದ್ದು ಕಾಣುವಂತೆ ಪೂರಕವಾಗಿ ಹಿನ್ನೆಲೆಯಲ್ಲಿ ದಟ್ಟವಾದ ಬಣ್ಣ ಲೇಪಿಸಲಾಗಿದೆ. ಮಧ್ಯದಲ್ಲಿರುವ ಚಿತ್ರದಲ್ಲಿ ಇಂತಹುದೇ ಚಿತ್ರವಿದ್ದರೂ ಹಿನ್ನೆಲೆಯಾಗಿ ದಟ್ಟ ಕಂದು ವರ್ಣಬಳಸಿ ಹೂಬಳ್ಳಿಯ ನಕ್ಷಾ ಚಿತ್ರಗಳಿಗೆ ಬಂಗಾರವರ್ಣ ಮತ್ತು ತಿಳಿಕೆಂಪು ಬಳಸಲಾಗಿದೆ. ಮತ್ತೊಂದು ಕಡೆ ಮೇಲ್ಛಾವಣಿಯಲ್ಲಿ ಹೊರಚಾಚಿದಂತಿರುವ ಛತ್ತಿನ ಭಾಗದಲ್ಲಿ ಕೆಲವು ಜ್ಯಾಮಿತಿಕ ಆಕೃತಿಗಳಲ್ಲಿ ನಕ್ಷೆಗಳನ್ನು ರಚಿಸಲಾಗಿದೆ. ಅಲ್ಲದೇ ಪೂರಕವಾಗಿ ಹೂಬಳ್ಳಿಯ ನಕ್ಷೆಯನ್ನೂ ಇಲ್ಲಿ ರಚಿಸಿದೆ. ಜ್ಯಾಮಿತಿಕ ರೂಪದ ನಕ್ಷೆಗಳು ಆಯತ ಮತ್ತು ಚೌಕಾಕಾರದ ಅಲಂಕಾರಿಕ ರೂಪದಲ್ಲಿವೆ. ಆಯತ ಮತ್ತು ಚೌಕಾಕಾರದ ಮಧ್ಯಭಾಗದಲ್ಲಿ ಜ್ಯಾಮಿತಿಕ ಆಕೃತಿಯ ನಕ್ಷೆಗಳಿದ್ದರೆ ಹೊರಭಾಗದ ಅಂಚುಗಳಲ್ಲಿ ಹೂಬಳ್ಳಿಯ ನೈಜ ಶೈಲಿಯ ವಿನ್ಯಾಸಗಳಿವೆ. ಚಿತ್ರಗಳನ್ನು 'ತುಗ್ರಾ' (Tughra) ಶೈಲಿಯಲ್ಲಿ ರಚಿಸಿದ್ದೇನೆ ಎಂದು ಕಲಾವಿದನು 'ಕುಫಿಕ್' ಭಾಷೆಯಲ್ಲಿ ಬರೆದಿದ್ದಾನೆ. ಎಂಬುದನ್ನು 'ಯಜದಾನಿ' ಅವರು[೭೨] ಗುರುತಿಸಿದ್ದಾರೆ. ಮಧ್ಯಭಾಗದ ಈ ಚಿತ್ರಗಳಿಗೆ

೭೧. ಜಿ. ಯಜದಾನಿ : ಬೀದರ್ ಇಟ್ಸ್ ಹಿಸ್ಟರಿ ಆ್ಯಂಡ್ ಮಾನ್ಯುಮೆಂಟ್ಸ್, ಪುಟ ೧೧೬

೭೨. ಜಿ. ಯಜದಾನಿ : ಬೀದರ್ ಇಟ್ಸ್ ಹಿಸ್ಟರಿ ಆ್ಯಂಡ್ ಮಾನ್ಯುಮೆಂಟ್ಸ್, ಪುಟ ೧೧೯

ತಿಳಿಯಾದ ನೀಲಿ ಒನ್ನೆಲೆವರ್ಣ ಕೊಡಲಾಗಿದೆ. ಅದರ ಮೇಲೆ ತೆಳುಕೆಂಪು,ಬಿಳಿ, ಬಂಗಾರವರ್ಣ ಮುಂತಾದವುಗಳಿಂದ ಹೂಬಳ್ಳಿಯ ನಕ್ಷೆ ರಚಿಸಲಾಗಿದೆ. ಕೆಲವುಕಡೆ ಚಿತ್ರಗಳಿಗೆ ಬಿಳಿ ವರ್ಣದಲ್ಲಿ ಹೊರರೇಖೆ ಎಳೆಯಲಾಗಿದ್ದು. ಒಂದ ಕಡೆಗೆ 'ಅಲಿ' ಎಂದು 'ಕುಫಿಕ್' ಭಾಷೆಯಲ್ಲಿ ಮೂರು ಸಲ ಬರೆಯಲಾಗಿದೆ.

***II. ಮಹಮ್ಮದ ಷಾನ ಸಮಾಧಿ :*** ಅಹಮ್ಮದ್ ಷಾನ ಮಗನಾದ ಮಹಮ್ಮದಷಾನ ಸಮಾಧಿಯು ಕ್ರಿ. ಶ. ೧೪೪೨-೧೪೫೮ ರ ಅವಧಿಯಲ್ಲಿ ರಚನೆಯಾಗಿದೆ. ಮಹಮ್ಮದ್ ಷಾನ ಸಮಾಧಿಯು ಆತನ ತಂದೆಯ ಸಮಾಧಿಯನ್ನೇ ಹೋಲುವುದು. ಈ ಸಮಾಧಿ ಭವನದ ಒಳಭಾಗದಲ್ಲೂ ವರ್ಣಚಿತ್ರಗಳಿಂದ ಅಲಂಕರಿಸಲಾಗಿದೆ. ವರ್ಣಚಿತ್ರಗಳಲ್ಲದೇ ಬಣ್ಣ ಬಣ್ಣದ ಸೂಡುಬಿಲ್ಲೆಗಳಿಂದ ಗೋಡೆಗಳಲ್ಲಿ ನಕ್ಷೆಗಳನ್ನು ರೂಪಿಸಲಾಗಿದೆ. ಇಲ್ಲಿಯ ವರ್ಣಚಿತ್ರಗಳೂ ಸಹಿತ ಹೂಬಳ್ಳಿಯ ನಕ್ಷೆಗಳು. ಜ್ಯಾಮಿತಿಕ ನಕ್ಷೆಗಳಿಂದ ಕೂಡಿವೆ. ಅಲ್ಲಲ್ಲಿ ವರ್ಣದಿಂದ ಧಾರ್ಮಿಕ ವಾಕ್ಯಗಳನ್ನೂ ಬರೆಯಲಾಗಿದೆ. ಈ ಚಿತ್ರಗಳೂ ಆತನ ತಂದೆಯ ಸಮಾಧಿ ಚಿತ್ರಗಳನ್ನು ಹೋಲುತ್ತವೆ.

***III. ಎರಡನೆಯ ಅಲ್ಲಾವುದ್ದೀನ ಷಾನ ಸಮಾಧಿ :*** ಈ ಸಮಾಧಿಯು ಆತನಿಂದಲೇ ತಾನು ಸಾಯುವ ಮೊದಲೇ ಕಟ್ಟಲ್ಪಟ್ಟಿತು. (೧೪೩೬-೧೪೫೮). ಈ ಸಮಾಧಿಗೆ ೩ ಪ್ರವೇಶದ್ವಾರಗಳಿದ್ದು ಅವು ಪೂರ್ವ, ಉತ್ತರ, ದಕ್ಷಿಣದಲ್ಲಿವೆ. ಈ ಸಮಾಧಿ ಭವನದ ಒಳಗೋಡೆ. ಮೇಲ್ಛಾವಣಿಗಳಲ್ಲಿ ವರ್ಣಚಿತ್ರಗಳಿವೆ. ಇವು ಕೂಡಾ ಹೂಬಳ್ಳಿಯ ನಕ್ಷೆಗಳಾಗಿವೆ. ಇಲ್ಲಿ ನೀಲಿ. ಹಸಿರು, ಹಳದಿ, ವರ್ಣಗಳು ಪ್ರಮುಖವಾಗಿ ಬಳಕೆಗೊಂಡಿವೆ. ಗೋಡೆಗಳಲ್ಲಿ ಪಟ್ಟಿಕೆಗಳನ್ನು ಮಾಡಿ ಚಿತ್ರಿಸಿವಂತೆ ಗುಮ್ಮಟದ ಒಳಭಾಗದ ಮೇಲ್ಛಾವಣಿಯ ತುಂಬಾ ವರ್ಣ ಚಿತ್ರ ಬಿಡಿಸಲಾಗಿದೆ. ಅಸ್ಟೂರಿನಲ್ಲಿಯ ಚಿತ್ರಗಳು (ನಕ್ಷಾರೂಪಗಳು) ಇಂಡೋ ಪರ್ಶಿಯನ್ ಶೈಯಲ್ಲಿ ರಚಿತಗೊಂಡಿವೆ. ಚಿತ್ರಗಳು ಸಾಮಾನ್ಯವಾಗಿ ೧ ಸೆ.ಮಿ. ದಪ್ಪನಾದ ಭಿತ್ತಿಯ ಮೇಲೆ ಸುಣ್ಣದ ಲೇಪ ಬಳಿದು ಚಿತ್ರಿಸಲಾಗಿದೆ. ಮೇಲೆ ಹೇಳಲಾದ ಗುಲಬರ್ಗಾ, ಬೀದರ್ ಮತ್ತು ಅಸ್ಟೂರಿನ ನಕ್ಷಾರೂಪದ ಭಿತ್ತಿಚಿತ್ರಗಳಲ್ಲಿ ಗುಲಬರ್ಗಾದಲ್ಲಿ ಮುಸ್ಲಿಮರ ಪ್ರಾರಂಭಿಕ ಕಾಲದ ಚಿತ್ರರಚನೆ ಸಪ್ತಗುಂಬಜಗಳ ಸಾಲಿನಲ್ಲಿ ತಾಜುದ್ದೀನ್ ಫಿರೋಜ್‌ನ ಸಮಾಧಿಯಲ್ಲಿ ಮಾತ್ರ ಅಲ್ಪ ಸ್ವಲ್ಪ ಕಂಡುಬರುವುದು. ಸುಲ್ತಾನರು ಅದೇ ತಾನೇ ಆಡಳಿತ ಪ್ರಾರಂಭಿಸಿದ್ದರಿಂದ ಹಿಂದುಗಳಂತೆ ಚಿತ್ರಿರಚಿಸಿ ವಾಸ್ತುಕೃತಿಗಳನ್ನು ಅಲಂಕರಿಸುವ ಹವ್ಯಾಸ ಇನ್ನೂ ಬೆಳೆದುಕೊಂಡಿದ್ದಿಲ್ಲ ಎನ್ನಬಹುದು.

ಆದರೆ ನಂತರದಲ್ಲಿ ಇಲ್ಲಿಯ ಪ್ರಭಾವದಿಂದ ಮುಸ್ಲಿಮರೂ ತಮ್ಮ ಕಟ್ಟಡಗಳನ್ನು ವರ್ಣಚಿತ್ರಗಳಿಂದ ಅಲಂಕರಿಸತೊಡಗಿದರು. ರಾಜಧಾನಿಯನ್ನು ಗುಲಬರ್ಗಾದಿಂದ ಬೀದರ್‌ಗೆ ವರ್ಗಾಯಿಸಿದನಂತರ ಈ ಹವ್ಯಾಸ ಹೆಚ್ಚಾಯಿತು. ಬೀದರ್‌ದಲ್ಲಿನ ರಂಗೀನಮಹಲ್ ಕಟ್ಟಡದಲ್ಲಿರುವ ನಕ್ಷಾರೂಪಗಳು ಬಹಮನಿ ಸಾಮ್ರಾಟರ ಪ್ರಾರಂಭಿಸಕ ಹೆಜ್ಜೆಯನ್ನು ತೋರಿಸಿದರೆ. ಸಮೀಪದ ಅಸ್ಟೂರಿನಲ್ಲಿಯ ಸಮಾಧಿ ಭವನಗಳಲ್ಲಿನ ವೈವಿಧ್ಯ ನಕ್ಷೆಗಳು ಪರ್ಶಿಯನ್ ಪ್ರಭಾವದಿಂದ ಪ್ರೇರಿತವಾಗಿವೆ. ರಂಗೀನ್‌ಮಹಲ್‌ನಲ್ಲಿ ಬಾಗಿಲಿನ ಅಂಚುಗಳಿಗೆ ಮೇಲ್ಛಾವಣಿಗಳಿಗೆ ಕಮಾನುಗಳಿಗೆ ನಕ್ಷಾರೂಪಗಳನ್ನು ಚಿತ್ರಿಸಲಾಗಿದೆ.

ಅಸ್ಟೂರಿನಲ್ಲಿಯ ನಕ್ಷಾರೂಪಗಳು ಬೀದರ್ ರಂಗೀನ್ ಮಹಲ್ ನಕ್ಷೆಗಳಿಗಿಂತ ಪ್ರಬುದ್ಧವಾಗಿವೆಯಲ್ಲದೇ ವರ್ಣವಿನ್ಯಾಸ. ಸಂಯೋಜನಾ ರೀತಿ. ರಚನಾಶೈಲಿಗಳಲ್ಲೂ ಉತ್ತಮವಾಗಿವೆ. ವರ್ಣಛಾಯೆಗಳಲ್ಲಿ ಇವು ಬೇರೆಯಾಗಿರುವುದರಿಂದ ಸ್ಥಳೀಯವಲ್ಲದ ಬಣ್ಣಗಳಿಂದ. ಅಂದರೆ ಬಹುಶಃ ಪರ್ಶಿಯಾದಿಂದ ಆಮದಾದ ಬಣ್ಣಗಳಿಂದ

ರಚನೆಯಾಗಿರಬೇಕು. ಬೀದರಿನ ರಂಗೀನ್ ಮಹಲ್‌ದಲ್ಲಿ ಹೆಚ್ಚಾಗಿ ಜ್ಯಾಮಿತಿಕ ರೂಪಗಳಿದ್ದರೆ. ಅಸ್ತೂರಿನಲ್ಲಿಯ ಸಮಾಧಿಗಳಲ್ಲಿ ಜ್ಯಾಮಿತಿಕ ರೂಪದ ಜೊತೆಗೇ ನೈಜ ರೂಪವನ್ನು ಹೋಲುವ ಹೂಬಳ್ಳಿಯ ನಕ್ಷೆಗಳೂ ಕಂಡುಬರುತ್ತವೆ. ಗುಲಬರ್ಗಾದ ಬಂದೇನವಾಜ್ ದರ್ಗಾದಲ್ಲಿನ ಚಿತ್ರಗಳಲ್ಲಿ ಹೆಚ್ಚಿನವು ಬಿಜಾಪುರದ ಸುಲ್ತಾನರ ಕಾದಲ್ಲಿ ರಚನೆಯಾಗಿದ್ದು ಅವುಗಳಲ್ಲಿ ಒಂದೂ ಪ್ರಭಾವ ಕಾಣಿಸುತ್ತದೆ. ಮಸೀದೆ ಮತ್ತು ಸಮಾಧಿ ಭವನಗಳಲ್ಲಿನ ಭಿತ್ತಿ ಚಿತ್ರಕಲೆಯು ಮುಸ್ಲಿಂ ಧಾರ್ಮಿಕ ರೀತಿ ನೀತಿಗಳನ್ನು ಅನುಸರಿಸಿ ರಚನೆಯಾಗಿರುವುದರಿಂದ ಹೆಚ್ಚಿನ ವೈವಿಧ್ಯತೆ ಕಂಡುಬರುವುದಿಲ್ಲ. ಮುಸ್ಲಿಂ ಧರ್ಮವು ಮೂರ್ತಿ ಪೂಜೆಯನ್ನು ನಿರಾಕರಿಸಿದಂತೆ ವ್ಯಕ್ತಿಚಿತ್ರ ರಚನೆಯನ್ನೂ ನಿಷೇಧಿಸಿದೆ. ಹಾಗಾಗಿ ಮುಸ್ಲಿಂ ಧಾರ್ಮಿಕ ಕಟ್ಟಡಗಳು, ಸಮಾಧಿಗಳಲ್ಲಿ ಅಲಂಕರಣಕ್ಕಾಗಿ ಕೇವಲ ಹೂಬಳ್ಳಿಯನಕ್ಷೆ ಮತ್ತು ಜ್ಯಾಮಿತಿಕ ರೂಪ ವಿನ್ಯಾಸಗಳನ್ನು ರಚಿಸುತ್ತಾರೆ.

### V. ಮಠಗಳಲ್ಲಿರುವ ಭಿತ್ತಿಚಿತ್ರಕಲೆ

ದೇವಾಲಯ. ಅರಮನೆಗಳನ್ನು ಭಿತ್ತಿ ಚಿತ್ರಗಳಿಂದ ಅಲಂಕರಿಸಿದಂತೆ ಮಠಮಾನ್ಯಗಳನ್ನೂ ಸಹಿತ ಭಿತ್ತಿ ಚಿತ್ರಕಲೆಯಿಂದ ಅಂದಗೊಳಿಸಿದ್ದು ಕಂಡುಬರುತ್ತದೆ. ದಕ್ಷಿಣ ಕರ್ನಾಟಕದಲ್ಲಿ ಶ್ರವಣಬೆಳಗೊಳ, ಕಾರ್ಕಳ, ಮೂಡಬಿದರೆಗಳಲ್ಲಿನ ಜೈನಮಠದಲ್ಲಿ. ಮತ್ತು ಚಿತ್ರದುರ್ಗದ ಶೈವ ಮಠವಾದ ಅಂಕಲಗಿ ಮಠದಲ್ಲಿ ಭಿತ್ತಿಚಿತ್ರಗಳು ಕಂಡು ಬಂದಂತೆ ಉತ್ತರ ಕರ್ನಾಟಕದ ಮಠಗಳಲ್ಲಿಯೂ ಭಿತ್ತಿ ಚಿತ್ರಕಲೆ ಕಂಡು ಬರುತ್ತದೆ. ಉತ್ತರ ಕರ್ನಾಟಕದಲ್ಲಿ ಶಿಷ್ಟಪದ ಭಿತ್ತಿಚಿತ್ರಕಲೆ ಕಂಡು ಬಂದಿರುವ ಮಠಗಳು ಈ ಕೆಳಗಿನಂತಿವೆ.

೧. ಆನೆಗೊಂದಿಯ ಹುಚ್ಚಪ್ಪಯ್ಯಮಠ
೨. ಅಥಣಿಯ ಗಚ್ಚಿನಮಠ (ವೀರಶೈವಮಠ)
೩. ಅಮ್ಮಿನಭಾವಿಯ ಪಂಚಗೃಹ ಹಿರೇಮಠ
೪. ಮಹಾಲಿಂಗಪುರದ ಮಹಾಲಿಂಗೇಶ್ವರಮಠ
೫. ಸುರಪುರದ ವಿರಕ್ತಮಠ
೬. ಸುರಪುರದ ಅಣ್ಣಯ್ಯನಮಠ

**೧. ಹುಚ್ಚಪ್ಪಯ್ಯನ ಮಠ, ಆನೆಗೊಂದಿ :** ಆನೆಗೊಂದಿಯು ಹಂಪೆಯಂತೆ ಐತಿಹಾಸಿಕ ಮಹತ್ವ ಪಡೆದ ಸ್ಥಳ, ಆನೆಗೊಂದಿಯು ಹಂಪೆಯ ಉತ್ತರಕ್ಕಿರುವ ತುಂಗಭದ್ರಾನದಿಯ ಎಡದಂಡೆಯ ಮೇಲಿನಿರುವ ಒಂದು ಗ್ರಾಮ. ಸಮೀಪದ ದಾರಿ ಎಂದರೆ ಹಂಪೆಯಿಂದ ತೆಪ್ಪದಲ್ಲಿ ಹೋಗಬಹುದು. ಇಲ್ಲವೇ ರಸ್ತೆ ಮುಖಾಂತರವಾದರೆ ಸುಮಾರು ೬೦ ಕಿಮಿಗಳ ಸುತ್ತು ದಾರಿಯಲ್ಲಿ ಹೋಗಬೇಕಾಗುವುದು. ಆನೆಗುಂದಿಯ ಗುಡ್ಡದಲ್ಲಿ ಪ್ರಾಗಿತಿಹಾಸ ಕಾಲದ ಬಂಡೆ ವರ್ಣ ಚಿತ್ರಗಳೂ ಕಂಡು ಬಂದಿವೆ. ಹಾಗಾಗಿ ಪ್ರಾಚೀನ ಕಾಲದಿಂದಲೇ ಇಲ್ಲಿ ಭಿತ್ತಿ ಚಿತ್ರರಚನೆ ನಡೆಯುತ್ತಿತ್ತೆಂದು ಹೇಳಬಹುದು. ಅನೇಕ ಐತಿಹಾಸಿಕ ಮಹತ್ವದ ಪ್ರಾಚೀನ ಸ್ಮಾರಕಗಳು ಇಲ್ಲಿ ಕಂಡು ಬರುತ್ತವೆ. ಕೋಟೆ ಕೊತ್ತಲಗಳು, ಪಂಪಾಸರೋವರ, ವಾಲಿಭಾಂಡಾರ, ಶೇಷಶಯನ ದೇವಸ್ಥಾನ. ಮಾಧ್ವಗುರುಗಳ ನವಬೃಂದಾವನ, ಹಳೆಯ ಅರಮನೆ, ಹುಚ್ಚಪ್ಪಯ್ಯಮಠ ಪ್ರಮುಖವಾಗಿವೆ. ಇವುಗಳಲ್ಲಿ ಹುಚ್ಚಪ್ಪಯ್ಯಮಠದಲ್ಲಿ ಹಳೆಗಾಲದ ಭಿತ್ತಿಚಿತ್ರಗಳು ಕಂಡುಬರುತ್ತವೆ. ನದಿಯ ಸಮೀಪದಲ್ಲೇ ಹುಚ್ಚಪ್ಪಯ್ಯನ ಮಠ ಎಂದು ಕರೆಯಾಗುವ ಹಳೆಯ ಕಟ್ಟಡದ ಒಂದು ಗದ್ದೆಯಲ್ಲಿ ಕಂಡುಬರುತ್ತದೆ. ಈ ಗದ್ದೆಯು ಇಂದು ಮುಸ್ಲಿಂ ಕುಟುಂಬ ಒಂದಕ್ಕೆ ಸೇರಿದೆ. ಹುಚ್ಚಪ್ಪಯ್ಯ ಮಠದ ಉತ್ತರ ಭಾಗದಲ್ಲಿ ಅನೇಕ ಸ್ಥಂಬಳಿಂದ ಕೂಡಿದ ಹಜಾರದಂತಹ ಮಂಟಪವಿದೆ. ಈ ಮಂಟಪದ ಮೇಲ್ಛಾವಣಿಗಳಲ್ಲಿ ಚಿತ್ರಗಳು ರಚಿಸಿವೆ. ಇವು ವಿಜಯನಗರ ಕಾಲದಲ್ಲಿಯೇ ರಚಿಸಿವೆ ಎಂದು ನಂಬಲಾಗಿದೆ. ಇವುಗಳ ಶೈಲಿಯನ್ನು ನೋಡಿದರೆ

# V. ಮಠಗಳಲ್ಲಿರುವ ಭಿತ್ತಿ ಚಿತ್ರಕಲೆ

- 1) ಆನೆಗೊಂದಿಯ ಹುಚ್ಚಪ್ಪಯ್ಯ ಮಠ
- 2) ಅಥಣಿಯ ಗಚ್ಚಿನ ಮಠ
- 3) ಅಮ್ಮಿನಭಾವಿಯ ಹಿರೇಮಠ
  - I) ಮರದ ಫಲಕದ ಮೇಲಿನ ಚಿತ್ರಗಳು
    - 1) ಧಾರ್ಮಿಕ ಚಿತ್ರಗಳು
      - I) ಪುರಾಣಗಳಿಗೆ ಸಂಬಂಧಿಸಿದ ಚಿತ್ರಗಳು
        1) ಗಣಪತಿ ಸರಸ್ವತಿಯರ ಚಿತ್ರಗಳು
        2) ಉಗ್ರ ನರಸಿಂಹನ ಚಿತ್ರ
        3) ಕೃಷ್ಣನ ವಿಶ್ವರೂಪ ದರ್ಶನ
        4) ಕೃಷ್ಣ ಮತ್ತು ಆತನ ಮಡದಿಯರ ಚಿತ್ರ
        5) ಶೇಷಶಯನ ವಿಷ್ಣುವಿನ ಚಿತ್ರ
        6) ದೇವಿಯ ಚಿತ್ರ
        7) ಕೃಷ್ಣನು ಕೊಳಲು ನುಡಿಸುವ ಚಿತ್ರ
        8) ಶಿವನ ಒಡ್ಡೋಲಗ
        9) ಜಮದಗ್ನಿ ಋಷಿ
        10) ತ್ರಿಪುರ ಸಂಹಾರ ದೃಶ್ಯ
        11) ಕರ್ಣಾರ್ಜುನರ ಯುದ್ಧ
        12) ಮನ್ಮಥ ವಿಜಯ
      - II) ಮಠದ ಸ್ವಾಮಿಗಳಿಗೆ ಸಂಬಂಧಿಸಿದ ಚಿತ್ರಗಳು
    - 2) ಧಾರ್ಮಿಕೇತರ ಚಿತ್ರಗಳು
      - I) ಐತಿಹಾಸಿಕ ಚಿತ್ರಗಳು
        1) ಸಂಗೊಳ್ಳಿ ರಾಯಣ್ಣನ ಚಿತ್ರ
        2) ಕಿತ್ತೂರು ಚೆನ್ನಮ್ಮ ರಾಣಿಯ ಮೆರವಣಿಗೆ ದೃಶ್ಯ
      - II) ಕಾಲ್ಪನಿಕ ಪಕ್ಷಿಗಳು
      - III) ಹುಬಳ್ಳಿ ನಕ್ಷೆಗಳು
  - II) ಗೋಡೆಯ ಮೇಲಿನ ಚಿತ್ರಗಳು
    1) ನರಗುಂದದ ಬಾಬಾಸಾಹೇಬನ ಚಿತ್ರ
  - III) ಲೋಹ ಫಲಕದ ಮೇಲಿನ ಚಿತ್ರಗಳು
    1) ಕಾಳಿಂಗ ಮರ್ದನ ಕೃಷ್ಣ
    2) ಆದಿಶಕ್ತಿಯ ಚಿತ್ರ
    3) ಉಗ್ರನರಸಿಂಹ
    4) ಕಾಲಾಂತಕ ಶಿವನ ಚಿತ್ರ
- 4) ಮಹಾಲಿಂಗಪುರದ ಮಹಾಲಿಂಗೇಶ್ವರ ಮಠ
  - I) ದಕ್ಷಿಣ ಗೋಡೆಯ ಚಿತ್ರಗಳು
    1) ದಕ್ಷಿಣಾಮೂರ್ತಿ ಶಿವನ ಚಿತ್ರ
    2) ವೀರಭದ್ರನ ಚಿತ್ರ
    3) ಅಲಂಕಾರಿಕ ಹೂಕುಂಡ
  - II) ಪೂರ್ವ ಗೋಡೆಯ ಚಿತ್ರಗಳು
    - 1) ದೇವತಾ ಚಿತ್ರಗಳು
      I) ಬ್ರಹ್ಮ ಸರಸ್ವತಿ
      II) ಕಂಸನನ್ನು ಕೊಲ್ಲುತ್ತಿರುವ ಕೃಷ್ಣ
      III) ವೀಣಾಪಾಣಿ ಸರಸ್ವತಿ
      IV) ಗಣಪತಿ
      V) ನಂದಿಯ ಮೇಲೆ ಬರುತ್ತಿರುವ ಶಿವ
      VI) ದೇವತಾ ಪುರುಷರು
    - 2) ಮುಸ್ಲಿಂ ಸಂತರ ಚಿತ್ರಗಳು
    - 3) ಮಠದ ಸ್ವಾಮಿಗಳಿಗೆ ಸಂಬಂಧಿಸಿದ ಚಿತ್ರಗಳು
      - I) ತಪಸ್ಸಿನ ಚಿತ್ರಗಳು
      - II) ಪವಾಡದ ಚಿತ್ರಗಳು
        1) ಸತ್ತ ಬಾಲಕನನ್ನು ಬದುಕಿಸಿದ್ದು
        2) ಮಾಲೋಜಿ ರಾಜನ ಮಗ ಗೋವಿಂದನನ್ನು ಮಲರೋಗ ದಿಂದ ನಿವಾರಣೆ ಮಾಡಿದ್ದು
        3) ಕಳ್ಳನನ್ನು ಕ್ಷಮಿಸಿದ್ದು
        4) ನಾಗಯ್ಯ ಮುಕ್ತಿನಾಯಿ ದಂಪತಿಗಳ ವೀರವ್ರತ ಪೂರೈಸಿದ್ದು
        5) ಮಾಲೋಜಿ ರಾಜನು ನರಗಟ್ಟಿ ಗ್ರಾಮದಲ್ಲಿ ಅಷ್ಟಲಿಂಗಗಳನ್ನು ಸ್ಥಾಪಿಸಿದ್ದು
- 5) ಸುರಪುರದ ವಿರಕ್ತ ಮಠ (ರುದ್ರಸ್ವಾಮಿಮಠ, ಸುರಪುರ)
  I) ಮದುವೆಯ ಚಿತ್ರ
  II) ಸರಸ್ವತಿ ಚಿತ್ರ
  III) ಸಮುದ್ರ ಮಂಥನ
  IV) ದೇವಾಸುರರ ಯುದ್ಧ
  V) ಹೂ ಕುಂಡದ ಚಿತ್ರ
  VI) ಜಯವಿಜಯರ ಚಿತ್ರ
  VII) ಚಾಮರಧಾರಿ ಮಹಿಳೆಯರು
  VIII) ಶೇಷಶಯನ ವಿಷ್ಣು
  IX) ದತ್ತಾತ್ರೇಯನ ಚಿತ್ರ
- 6) ಸುರಪುರದ ಅಣ್ಣಾಯನ ಮಠ
  - I) ಪೂರ್ವಗೋಡೆಯ ಚಿತ್ರಗಳು
    1) ದ್ರೌಪದಿ ಸ್ವಯಂವರ
    2) ಸಮುದ್ರ ಮಂಥನ
    3) ಪಾರ್ವತಿ ಕಲ್ಯಾಣ
    4) ಮೆರವಣಿಗೆ ದೃಶ್ಯ
    5) ಬಾಗಿಲುಗಳು ಚಿತ್ರ
  - II) ಉತ್ತರಗೋಡೆಯ ಚಿತ್ರಗಳು
    1) ದತ್ತಾತ್ರೇಯನ ಚಿತ್ರ
    2) ಮಹಿಷಾಸುರ ಮರ್ದಿನಿ
    3) ವ್ಯಾಯಾಮ ಶಾಲೆಯ ಚಿತ್ರ
    4) ಕೃಷ್ಣನ ಪ್ರಣಯ ದೃಶ್ಯ
    5) ಮನ್ಮಥ ವಿಜಯ
    6) ಕೀಚಕ ವಧೆ
  - III) ದಕ್ಷಿಣಗೋಡೆಯ ಚಿತ್ರಗಳು
    1) ಕಾಮಧೇನುವಿನ ಚಿತ್ರ
    2) ಗರುಡನ ಚಿತ್ರ
    3) ಮಂಗನ ಚಿತ್ರ
    4) ಸುಳುವಿನ ಚಿತ್ರ

ಅದು ನಿಜವೂ ಎನಿಸುತ್ತದೆ. ಚಿತ್ರಗಳು ಸಾಕಷ್ಟು ನಾಶವಾಗಿದ್ದರೂ ಸ್ವರೂಪವನ್ನು ಊಹಿಸಬಹುದಾಗಿದೆ. ಆನೆಗುಂದಿಯಲ್ಲಿ ಅನೇಕ ಕುತೂಹಲಕಾರಿ ಚಿತ್ರಗಳಿದ್ದವೆಂದು ಹೇಳಿಕೆ ಇದ್ದು, ಈಗ ಚಿತ್ರಗಳೆಲ್ಲ ಅಳಿಸಿ ಹೋಗಿ ನವನಾರೀ ಕುಂಜರದ ಸೊಂಡಿಲಿನ ಭಾಗದ ಇಬ್ಬರು ಸ್ತ್ರೀಯರ ಅಸ್ಪಷ್ಟ ರೂಪುಗಳು, ಎದುರಿಗೆ ಚಾಮರ ಬೀಸುತ್ತಿರುವ ಒಬ್ಬಳು ಪರಿಚಾರಿಕೆ. ಕಮಲದ ಹೂವಿನ ತೂಗುಬಿಟ್ಟ ಹಾರಗಳು, ಪಂಚನಾರೀ ತುರಗದ ತಲೆಯ ಭಾಗದಲ್ಲಿ ಒಬ್ಬಳು ಸ್ತ್ರೀ ಹೀಗೆ ಕೆಲವೇ ಮಸುಕು ಚಿತ್ರಗಳು ಉಳಿದುಕೊಂಡಿವೆ ಇಷ್ಟರಿಂದಲೇ ಅವು ರೇಖೆ ಮತ್ತು ಬಣ್ಣಗಾರಿಕೆಯಲ್ಲಿ ವಿಜಯನಗರ ಕಾಲದ ಮಾದರಿಯಲ್ಲಿವೆ ಎಂದು ಗುರುತಿಸಬಹುದಾಗಿದೆ. "ಒಂದು ಅಂಕಣದಲ್ಲಿ ಹೂಗೊಂಚಲು, ಅದರಲ್ಲಿ ಓಡಾಡುತ್ತಿರುವ ಅಳಿಲುಗಳು ಚಿತ್ರಿಸಿದೆ. ಅಲ್ಲೇ ಇಬ್ಬರು ಸ್ತ್ರೀಯರು ಮತ್ತು ಚಿಕ್ಕ ಆಕೃತಿಗಳು ನೃತ್ಯಮಾಡುತ್ತಿರುವಂತೆ ಇವೆ. ಇವನ್ನು ಇಬ್ಬರು ಪುರುಷರು ನಿಂತು ನೋಡುತ್ತಿದ್ದು, ಮೇಲ್ಭಾಗದಲ್ಲಿ ದೊಡ್ಡದಾದ ಕಮಲಾಕೃತಿ ಇದೆ. ಇನ್ನೊಂದು ಅಂಕಣದಲ್ಲಿ ಇಬ್ಬರು ಸ್ತ್ರೀಯರು ರಾಣಿಯನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಮೆರವಣಿಗೆ ಹೊರಟಿರುವ ದೃಶ್ಯವಿದೆ. ಈ ದೃಶ್ಯದ ಮೇಲ್ಭಾಗದಲ್ಲಿ ಕಮಲದ ಮೊಗ್ಗು ಮತ್ತು ಹಾರಗಳನ್ನು ರಚಿಸಿದ್ದಾರೆ. ಮತ್ತೊಂದು ಅಂಕಣದಲ್ಲಿ ಕಿರೀಟಧಾರಿಯಾದ. ಗಡ್ಡ ಬಿಟ್ಟಿರುವ ವ್ಯಕ್ತಿ ಒಂಟೆಯಮೇಲೆ ಕುಳಿತು ಸವಾರಿ ಹೊರಟಿರುವ ಚಿತ್ರಣವಿದೆ. ಅವನಮುಂದೆ ಆನೆ. ಅದರ ಜೊತೆಗೆ ನವನಾರೀ ಕುಂಜರ ಮತ್ತು ಪಂಚನಾರೀ ತುರಗ ಚಿತ್ರಗಳನ್ನೂ ರಚಿಸಿದೆ. ಇವುಗಳ ಮುಂದೆ ಚಾಮರ ಹಿಡಿದ ಮತ್ತು ವಸ್ತ್ರ ಹಾರಾಡಿಸುತ್ತುರುವ ಸ್ತ್ರೀಯರನ್ನು ಚಿತ್ರಿಸಿದ್ದರು[೧೭೩] ಎಂದು ತಿಳಿದುಬರುತ್ತದೆ."

"ಆನೆಗುಂದಿಯ ಚಿತ್ರಗಳನ್ನು ಕುರಿತು ಸ್ಟೆಲ್ಲಾ ಕ್ರಾಮರಿಷ್ ರವರು ಸುಮಾರು ಎರಡು ದಶಕಗಳ ಹಿಂದೆ ಅಧ್ಯಯನ ಮಾಡಿದ್ದಾರೆ. ಈ ಚಿತ್ರಗಳ ಬಗ್ಗೆ ಅವರು ತಮ್ಮ "ಎ ಸರ್ವೆ ಆಫ್ ಪೇಂಟಿಂಗ್ ಇನ್ ಡೆಕ್ಕನ್" ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ. ಇದಲ್ಲದೇ ಎಸ್. ವೆಂಕಟರಾಮಣಯ್ಯನವರು ಆನೆಗುಂದಿಯ ಚಿತ್ರಗಳ ಕುರಿತು ವಿವರಣೆ ನೀಡಿದ್ದನ್ನು ಎಸ್. ವೆಂಕಟೇಶ್[೧೭೪] ಉಲ್ಲೇಖಿಸುತ್ತಾರೆ. ಆನೆಗೊಂದಿಯ ಭಿತ್ತಿಚಿತ್ರಗಳ ನಡುವಿನ ಒಂದು ಚೌಕಟ್ಟು ಪಟ್ಟಿಯಲ್ಲಿ 'ಪಂಚನಾರಿ ತುರಗ' ಎಂಬ ಕನ್ನಡ ಬರವಣಿಗೆ ಕಂಡು ಬರುತ್ತದೆ. ಆನೆಗೊಂದಿಯ ಭಿತ್ತಿಚಿತ್ರಗಳು ವಿಜಯನಗರ ಕಾಲದಲ್ಲಿ ರಚನೆಯಾಗಿದ್ದು, ಚಿತ್ರಗಳ ಸಂಯೋಜನಾ ರೀತಿಯಲ್ಲಿ ಕೆಲವು ವಿಶಿಷ್ಟತೆಗಳನ್ನು ಗುರುತಿಸಬಹುದು.

**೨. ಗಚ್ಚಿನ ಮಠ, ಅಥಣಿ :** ಸುಮಾರು ಇನ್ನೂರಾಐವತ್ತು ವರ್ಷಗಳಿಗೂ ಹಳೆಯದಾದ ಈ ಮಠದಲ್ಲಿ ಸ್ವಾಮಿಗಳು ಕುಳಿತುಕೊಳ್ಳುವ ಒಂದು ಕೋಣೆಯಲ್ಲಿ ಮಸುಕಾದ ವರ್ಣಚಿತ್ರಗಳು ಕಂಡುಬರುತ್ತವೆ ಎಂದು ಡಾ. ಶಿವರಾಮ ಕಾರಂತ ಅವರು[೧೭೫] ಮೂವತ್ತು ವರ್ಷಗಳ ಹಿಂದೆ ಇಲ್ಲಿಗೆ ಭೇಟ್ಟಿ ನೀಡಿ ವರದಿಮಾಡಿದ್ದಾರೆ. ಎದುರುಬದುರಾಗಿರುವ ಗೋಡೆಗಳ ಮೇಲೆ ಸುಮಾರು ಐದುಫೀಟುಗಳಿಗಿಂತಲೂ ಮೇಲಿನ ಭಾಗದಲ್ಲಿ ಅಸ್ಪಷ್ಟವಾದ ಹಲವು ವ್ಯಕ್ತಿಗಳು, ಪ್ರಾಣಿಗಳು, ಜೊತೆಗೆ ಪೌರಾಣಿಕ ಪ್ರಾಣಿಗಳಾದ ಕಾಮಧೇನು. ಶರಭ, ಕಾಲ್ಪನಿಕ ವಿಚಿತ್ರ ಪ್ರಾಣಿಗಳು ಇಲ್ಲಿವೆ ಎಂದು ತಿಳಿಸುತ್ತಾರೆ. ಆದರೆ ಇಂದು ಅಲ್ಲಿ ಯಾವ ಚಿತ್ರಗಳೂ ಕಂಡುಬರುವುದಿಲ್ಲ. ಚಿತ್ರಗಳಿದ್ದ ಕೋಣೆಯನ್ನು ನವೀಕರಿಸಿ ಕಟ್ಟಲಾಗಿದೆ. ಈ ಮಠದಲ್ಲಿನ ಚಿತ್ರಗಳು ಯೋಗ ಮಂಟಪದಲ್ಲಿ ಇದ್ದುದಾಗಿ ಸ್ಥಳೀಯರು ಹೇಳುತ್ತಾರೆ. ಈ ಯೋಗ ಮಂಟಪವು[೧೭೬] ಮಠದ

---

೧೭೩. ನೂತನ ವಾರಪತ್ರಿಕೆ – ೨೦ ಫೆಬ್ರುವರಿ. ೨೦೦೦ ಪುಟ ೩೫. ಕಣ್ಮರೆಯಾಗುತ್ತಿರುವ ಆನೆಗೊಂದಿಯ ಭಿತ್ತಿಚಿತ್ರಗಳು –ಎಸ್. ವೆಂಕಟೇಶ

೧೭೪. ನೂತನ ವಾರಪತ್ರಿಕೆ – ೨೦ ಫೆಬ್ರುವರಿ. ೨೦೦೦ ಪುಟ ೩೬. ಕಣ್ಮರೆಯಾಗುತ್ತಿರುವ ಆನೆಗೊಂದಿಯ ಭಿತ್ತಿಚಿತ್ರಗಳು –ಎಸ್. ವೆಂಕಟೇಶ

೧೭೫. ಡಾ. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪುಟ ೫೯

೧೭೬. ಪಂಡಿತ ಚಂದ್ರಶೇಖರ ಶಾಸ್ತ್ರೀ : ಶ್ರೀಮದ್ ಅಥಣಿಯ ಶಿವಯೋಗೀಶ ಮಹಿಮೆ, ಪುಟ ೭

ಮೂರನೇ ಸ್ವಾಮಿಗಳಾಗಿದ್ದ 'ಚನ್ನಬಸವಸ್ವಾಮಿ'ಗಳ ಕಾಲದಲ್ಲಿ ಕ್ರಿ. ಶ. ೧೯ ನೇ ಶತಮಾನದ ಅಂತ್ಯಭಾಗದಲ್ಲಿ ರಚನೆಯಾಗಿದ್ದು, ಚಿತ್ರಗಳೂ ಅದೇ ಕಾಲದಲ್ಲಿ ಬರೆಸಲ್ಪಟ್ಟಿವೆ.

**೩. ಅಮ್ಮಿನಭಾವಿಯ ಪಂಚಗೃಹ ಹಿರೇಮಠ :** ಧಾರವಾಡದಿಂದ ಸುಮಾರು ೧೨ ಕಿ. ಮಿ. ದೂರದಲ್ಲಿರುವ ಅಮ್ಮಿನಭಾವಿಯು ಬಾವಿಗಳಿಂದಲೇ ತುಂಬಿದ ಊರಾಗಿದೆ. ಈ ಊರು ಅತಿ ದೊಡ್ಡಭಾವಿಯನ್ನು ಹೊಂದಿದ್ದು, ಆ ಭಾವಿಯಿಂದಾಗಿಯೇ ಈ ಊರಿಗೆ ಅಮ್ಮಿನಭಾವಿ ಎಂದು ಹೆಸರು ಬಂದಿದೆ ಎಂಬುದನ್ನು ಸ್ಥಳೀಯರು ಹೇಳುತ್ತಾರೆ. ಈ ಗ್ರಾಮವು ಪೂರ್ವದಲ್ಲಿ ಶಿವಪುರ ಎಂದು ಕರೆಯಲ್ಪಡುತ್ತಿದ್ದು, ಸಾವಿರದ ಆರುನೂರು (೧೬೦೦) ವರ್ಷಗಳ ಹಿಂದೆ ಇದು ಒಂದು ಅಗ್ರಹಾರವಾಗಿತ್ತು ಆಗ ಇದನ್ನು ಚಾಂದರಾಜ ಎಂಬ ಪಾಳೆಗಾರ ಆಳುತ್ತಿದ್ದ. ಪಂಚಪೀಠಗಳಲ್ಲಿ ಒಂದೆನಿಸಿದ ರಂಭಾಪುರಿ (ಬಾಳೆಹೊನ್ನೂರು) ಶಾಖಾ ಮಠವಾಗಿರುವ. ಸುಮಾರು ೧೮ ನೇ ಶತಮಾನದ ಕೊನೆಯಲ್ಲಿ ಕಟ್ಟಲ್ಪಟ್ಟ ಇಲ್ಲಿನ ಪಂಚಗೃಹ ಹಿರೇಮಠದಲ್ಲಿ ಅನೇಕ ಭಿತ್ತಿಚಿತ್ರಗಳನ್ನು ರಚಿಸಲಾಗಿದೆ. ಈ ಮಠವು ಚಚ್ಚೌಕವಾಗಿ ಕಟ್ಟಲಾಗಿದ್ದು ಒಳಗೆ ಮಧ್ಯದಲ್ಲಿ ತೊಟ್ಟಿಯ ಹಾಗಿರುವ ತಗ್ಗು ಸ್ಥಳವನ್ನು ಬಿಟ್ಟು, ಸುತ್ತಲೂ ಎತ್ತರವಾದ ಕಟ್ಟೆಯನ್ನು ನಿರ್ಮಿಸಿದ್ದಾರೆ. ಹೀಗೆ ನಿರ್ಮಿಸಿರುವ ಒಳಾಂಗಣದ ಸುತ್ತಲೂ ಗೋಡೆಯ ಮೇಲೆ ವರ್ಣಚಿತ್ರಗಳನ್ನು ರಚಿಸಿದ್ದರೆಂದು ಕಾಣುತ್ತದೆ. ಆದರೆ ಈಗ ಸುತ್ತಲೂ ಇರುವ ಈ ಗೋಡೆಯ ಯಾವ ಭಾಗದಲ್ಲೂ ಚಿತ್ರಗಳು ಉಳಿದಿಲ್ಲ. ಅವುಗಳನ್ನು ಕೀಳಿಸಿ ತೆಗೆಸಿದ್ದಾರೆ. ಇದೇ ಒಳಾಂಗಣದಲ್ಲಿರುವ ಕಂಬದ ಮೇಲಿನ ಬೋದಿಗೆ, ತೊಲೆಗಳ ಮೇಲೂ ವರ್ಣ ಚಿತ್ರಗಳನ್ನು ರಚಿಸಲಾಗಿದ್ದು ಇವು ಇನ್ನೂ ಉತ್ತಮ ಸ್ಥಿತಿಯಲ್ಲಿವೆ. ಗೋಡೆಯ ಹಾಗೆ ಕೈಗೆಟುಕದ ಸ್ಥಳದಲ್ಲಿ ಇರದೇ ಅತೀ ಮೇಲಿನ ಭಾಗದಲ್ಲಿ ಇವು ಇರುವುದರಿಂದ ಇಲ್ಲವೇ ಇವು ಕಟ್ಟಿಗೆಯ ಮೇಲೆ ರಚಿಸಿರುವುದರಿಂದ ಗೋಡೆಗೆ ಬಳಿದಂತೆ ಸುಣ್ಣ ಬಣ್ಣಬಳಿದು ನವೀನತೆ ತರುವ ವಿಚಾರಕ್ಕೆ ಕೈ ಹಾಕಿಲ್ಲ. ಪ್ರವೇಶ ದ್ವಾರದ ಹೊರ ಪಡಸಾಲೆಯ ಕಂಬದ ಬೋದಿಗೆ ಮತ್ತು ತೊಲೆಗಳಲ್ಲೂ ವರ್ಣಚಿತ್ರಗಳನ್ನು ಕಾಣಬಹುದು. ಹೊರ ಪಡಸಾಲೆಯ ಪೂರ್ತಿ ಹೊರಚಾಚಿದ ಜಂತಿಯ ಭಾಗದ (ಮೇಲ್ಛಾವಣಿ) ಎರಡೂ ಬದಿಗಳಲ್ಲೂ ವರ್ಣಚಿತ್ರಗಳನ್ನು ರಚಿಸಲಾಗಿದೆ. ಈ ಮಠವು ಎರಡು ಅಂತಸ್ತುಗಳನ್ನು ಹೊಂದಿದ್ದು ಪ್ರವೇಶದ್ವಾರದ ಮೇಲಿರುವ ತೆರೆದ ಮಂಟಪದ ಮೇಲ್ಛಾವಣಿಯಲ್ಲಿ ಹೊರಚಾಚಿದ ಭಾಗಕ್ಕೆ ತಗಡುಗಳನ್ನು ಅಳವಡಿಸಿದ್ದು ಈ ದಪ್ಪನಾದ ತಗಡುಗಳು ಮೇಲೆಯೂ ವರ್ಣ ಚಿತ್ರಗಳನ್ನು ರಚಿಸಿದ್ದಾರೆ. ಇವು ವಾತಾವರಣಕ್ಕೆ ನೇರವಾಗಿ ಒಡ್ಡಿಕೊಂಡಿರುವದರಿಂದ ಚಿತ್ರಗಳು ಬಹಳವಾಗಿ ನಶಿಸಿಹೋಗಿ ಬರೀ ವರ್ಣ ಚುಕ್ಕೆಗಳು ಮಾತ್ರ ಕಂಡುಬರುತ್ತವೆ. ಹೀಗೆ ಗೋಡೆ. ಕಟ್ಟಿಗೆ, ಕಬ್ಬಿಣ (ತಗಡು)ಗಳ ಮೇಲೆ ಚಿತ್ರಗಳನ್ನು ರಚಿಸಿದ್ದು ಒಂದೇ ಸ್ಥಳದಲ್ಲಿ ಕಾಣುವುದು ಅಪರೂಪ. ಆ ದೃಷ್ಟಿಯಿಂದ ಉತ್ತರ ಕರ್ನಾಟಕದ ಭಿತ್ತಿ ಚಿತ್ರಗಳ ನೆಲೆಗಳಲ್ಲಿ ಇದನ್ನು ವಿಶಿಷ್ಟವೆಂದು ಪರಿಗಣಿಸಬಹುದು. ಅಮ್ಮಿನ ಭಾವಿಯ ಚಿತ್ರಗಳನ್ನು ಮೂರು[೧೭೭] ರೀತಿಯಲ್ಲಿ ವಿಂಗಡಿಸಲಾಗಿದೆ. ಇದೆ ವಿಂಗಡಣೆಯಲ್ಲಿ ಇವುಗಳನ್ನು ವಿವರಿಸಹುದು.

I. ಮರದ ಫಲಕದ ಮೇಲಿನ ಚಿತ್ರಗಳು

II. ಗೋಡೆಯ ಮೇಲಿನ ಚಿತ್ರಗಳು

III. ಲೋಹಫಲಕದ ಮೇಲಿನ ಚಿತ್ರಗಳು

---

೧೭೭. ಡಾ. ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪುಟ ೪೨

**I. ಮರದ ಫಲಕದ ಮೇಲಿನ ಚಿತ್ರಗಳು :** ಈ ಬಗೆಯ ಚಿತ್ರಗಳನ್ನು ಮಠದ ಮೇಲ್ಛಾವಣಿಯಲ್ಲಿ ಕಾಣಬಹುದು. ಕಂಬಕ್ಕೆ ಹೊಂದಿಸಿರುವ ಕಟ್ಟಿಗೆಯ ಫಲಕಗಳಲ್ಲಿ ಚಿತ್ರಗಳಿದ್ದು, ಫಲಕದ ಸೌಂದರ್ಯ ಹೆಚ್ಚಿಸಲು ಮಧ್ಯದಲ್ಲಿ ಹೂವಿನ ನಕ್ಷೆಯನ್ನು ಪ್ರತಿಯೊಂದು ಫಲಕದ ಮೇಲೂ ಕೆತ್ತಿದ್ದಾರೆ. ಚಿತ್ರ ರಚಿಸುವಾಗ ಈ ಮಧ್ಯದ ಹೂ ನಕ್ಷೆಯನ್ನು ವರ್ಣದಿಂದ ತುಂಬಿ ಅದರ ಎಡಬಲಗಳಲ್ಲಿ ಚಿತ್ರಗಳನ್ನು ಬರೆದಿದ್ದಾರೆ. ಮಧ್ಯದ ಹೂವಿನ ನಕ್ಷೆಯು ಒಟ್ಟು ಚಿತ್ರದ ಸೌಂದರ್ಯಕ್ಕೆ ಸಹಾಯಕವಾಗುವಂತೆ ಬಳಸಿಕೊಂಡಿದ್ದಾರೆ. ಈ ಫಲಕಗಳಲ್ಲಿ ಮಧ್ಯದಲ್ಲಿ ಹೂವಿನ ನಕ್ಷೆಯಲ್ಲದೇ ಸುತ್ತಲೂ ಕಮಾನಿನಂತೆ ಚೌಕಟ್ಟು ರಚಿಸಿ ಎಡಬಲಗಳಲ್ಲಿ ಸುಳುವಿನ ನಕ್ಷೆಯನ್ನು ಕೆತ್ತಿದ್ದಾರೆ. ಪ್ರತಿಯೊಂದು ಫಲಕಗಳೂ ಬೇರೆ ಬೇರೆ ಸುಳಿವಿನ ನಕ್ಷೆಯನ್ನು ಹೊಂದಿದೆ. ಸುಳುವುಗಳನ್ನು ಕೆತ್ತದೇ ಇರುವ ಫಲಕಗಳಲ್ಲಿ ವರ್ಣದಿಂದಲೇ ಸುಳುವಿನ ನಕ್ಷೆಗಳನ್ನು ರಚಿಸಲಾಗಿದೆ. ಈ ಮರದ ಫಲಕಗಳ ಮೇಲಿನ ಚಿತ್ರಗಳನ್ನು ಮತ್ತೆ ವಿಷಯಾಧಾರಿತವಾಗಿ ಎರಡು ವಿಧದಲ್ಲಿ ವಿಂಗಡಿಸಬಹುದು.

೧. ಧಾರ್ಮಿಕ ಚಿತ್ರಗಳು

೨. ಧಾರ್ಮಿಕೇತರ ಚಿತ್ರಗಳು

**೧. ಧಾರ್ಮಿಕ ಚಿತ್ರಗಳು :** ಮರದ ಫಲಕದ ಮೇಲೆ ರಚನೆಯಾದ ಧಾರ್ಮಿಕ ಚಿತ್ರಗಳಲ್ಲಿ ಪುರಾಣ ಮಹಾಕಾವ್ಯಗಳಿಗೆ ಸಂಬಂಧಿಸಿದ ಚಿತ್ರಗಳೂ ಮಠದ ಸ್ವಾಮಿಗಳಿಗೆ ಸಂಬಂಧಿಸಿದ ಚಿತ್ರಗಳೂ ಇರುವುದರಿಂದ ಇವುಗಳನ್ನು ವಿಷಯಕ್ಕನುಸಾರವಾಗಿ ಈ ಕೆಳಗಿನಂತೆ ವಿಂಗಡಿಸಬಹುದು.

I. ಪುರಾಣಗಳಿಗೆ ಸಂಬಂಧಿಸಿದ ಚಿತ್ರಗಳು

II. ಮಠದ ಸ್ವಾಮಿಗಳಿಗೆ ಸಂಬಂಧಿಸಿದ ಚಿತ್ರಗಳು

***I. ಪುರಾಣಗಳಿಗೆ ಸಂಬಂಧಿಸಿದ ಚಿತ್ರಗಳು :*** ಪುರಾಣಗಳಿಗೆ ಸಂಬಂಧಿಸಿದ ಚಿತ್ರಗಳಲ್ಲಿ ವಿಷ್ಣುಪುರಾಣ, ಶೈವಪುರಾಣ, ದೇವಿಪುರಾಣಗಳಲ್ಲದೇ ರಾಮಾಯಣ, ಮಹಾಭಾರತ ಕಥಾನಕಗಳನ್ನು ಆಧರಿಸಿದ ಚಿತ್ರಗಳಿದ್ದು, ವಿದ್ಯಾದೇವತೆಗಳೆನಿಸಿದ ಗಣಪತಿ ಸರಸ್ವತಿಯರ ಚಿತ್ರಗಳೂ ಇಲ್ಲಿ ರಚನೆಯಾಗಿವೆ. ಅವುಗಳನ್ನು ಕುರಿತು ಒಂದೊಂದಾಗಿ ಹೀಗೆ ವಿವರಿಸಬಹುದು.

೧. ಗಣಪತಿ ಸರಸ್ವತಿಯರ ಚಿತ್ರಗಳು : ಇಲ್ಲಿರುವ ಒಂದು ಫಲಕದ ಮೇಲೆ ಎಡಗಡೆಗೆ ಗಣಪತಿ ಬಲಗಡೆಗೆ ಸರಸ್ವತಿಯನ್ನು ಚಿತ್ರಸಲಾಗಿದೆ. ಗರಪತಿಯು ನಾಲ್ಕು ಕೈಗಳನ್ನು ಹೊಂದಿದವನಾಗಿದ್ದು, ಕಂದುವರ್ಣದ ಹೂವಿನ ನಕ್ಷೆಯಿರುವ ಉದ್ದ ತೋಳಿನ ಅಂಗಿಯನ್ನು ತೊಟ್ಟಿದ್ದಾನೆ. ಇದು ಪೇಶ್ವೆ ಶೈಲಿಯ ಉಡುಪುಗಳನ್ನು ಹೋಲುತ್ತದೆ. ಗಣಪತಿ ತೊಟ್ಟುಕೊಂಡ ಅಂಗಿಯು ಮೈಗೆ ಬಿಗಿಯಾಗಿ ಅಂಟಿಕೊಂಡಂತೆ ಇದ್ದು ಆತನ ಉಬ್ಬಿದ ಹೊಟ್ಟೆಯು ಅಂಗಿಯನ್ನು ತೆರೆದುಕೊಂಡು ಹೊರಬಿದ್ದಿದೆ. ಕೆಂಪುವರ್ಣದ ಧೋತ್ರವನ್ನು ಉಟ್ಟಿರುವ ಗಣಪನು ಕಾಲಮೇಲೆ ಕಾಲನ್ನು ಹಾಕಿಕೊಂಡು ಪೀಠದ ಮೇಲೆ ಆರಾಮವಾಗಿ ಕುಳಿತಿದ್ದಾನೆ. ವಾಹನವಾದ ಇಲಿಯು ಪೀಠದ ಕೆಳಗೆ ಜಿಗಿದಾಡುತ್ತಿದೆ.

ಬಲಗಡೆಗೆ ಸರಸ್ವತಿಯ ಚಿತ್ರವಿದ್ದು ಆಕೆ ಪೀಠವೊಂದರ ಮೇಲೆ ಕುಳಿತು ವೀಣೆ ನುಡಿಸುತ್ತಿದ್ದಾಳೆ. ಒಂದು ಕೈಯಲ್ಲಿ ಪುಸ್ತಕ ಹಿಡಿದಿದ್ದು ಉಳಿದ ಮೂರು ಕೈಗಳನ್ನು ವೀಣೆ ನುಡಿಸಲು ಬಳಸಿದ್ದಾಳೆ. ಬೂದುವರ್ಣದ ಕುಪ್ಪಸ ತೊಟ್ಟು ತೆಳುಕೆಂಪುವರ್ಣದ ಚುಕ್ಕೆಗಳಿರುವ ಸೀರೆಯನ್ನು ಉಟ್ಟಿದ್ದಾಳೆ. ಕಿವಿ, ಮೂಗು, ಕೊರಳು ಆಭರಗಳಿಂದ ಕಂಗೊಳಿಸುತ್ತಿವೆ.

ಹಣೆಯಲ್ಲಿ ಜ್ಯೋತಿಯಂತೆ ಉದ್ದವಾಗಿರುವ ಬೊಟ್ಟನ್ನು ಇಟ್ಟುಕೊಂಡಿದ್ದಾಳೆ. ಹಿಂದಿರುವ ನೀಲವರ್ಣದ ಲೋಡಿಗೆ ಆತುಕೊಂಡು ಕುಳಿತು ಸ್ವಲ್ಪವೇ ಮುಂದಕ್ಕೆ ಬಾಗಿ ವೀಣೆ ಬಾರಿಸುತ್ತಿರುವ ಸರಸ್ವತಿಯ ಭಂಗಿಯು ಆಕರ್ಷಕವಾಗಿ ಕಂಡುಬರುವುದು. ಮುಖವು ಮಂದಸ್ಮಿತವಾಗಿ ತೋರುವುದು. ಪಕ್ಕದಲ್ಲಿ ಆಕೆಯ ವಾಹನ ನವಿಲು ಪೀಠದ ಕೆಳಗೆ ಒಂದು ಅಲಂಕಾರಿಕ ಕಂಬದಮೇಲೆ ನಿಂತು ಕುಣಿಯುತ್ತಿದೆ. ಸಮೀಪದಲ್ಲಿಯೇ ಹಾವು ಸರಸ್ವತಿಯ ಬಳಿಯಿಂದ ಗಣಪತಿಯ ಕಡೆಗೆ ಸಾಗುತ್ತಲಿದೆ. ಚಿತ್ರದ ಮೇಲಿನ ಭಾಗವು ಬೋಳಾಗಿ ಕಾಣಬಾರದೆಂಬ ದೃಷ್ಟಿಯಿಂದ ಅಲ್ಲಲ್ಲಿ ಹೂಗೊಂಚಲನ್ನು ತೂಗುಬಿಡಲಾಗಿದೆ. ಹಿನ್ನೆಲೆಯ ವರ್ಣವು ಕೆಂಪಾಗಿದ್ದು, ಚಿತ್ರದ ಕಮಾನಿನ ಹೊರ ಆವರಣದ ವರ್ಣವನ್ನು ಹಳದೀ ವರ್ಣದಿಂದ ಲೇಪಿಸಿ ಅದರಲ್ಲಿ ಕೆಂಪು ಬಿಳಿ ವರ್ಣದಿಂದ ಹೂ ಎಲೆಗಳ ನಕ್ಷೆ ಬರೆದಿದ್ದಾರೆ.

*೨. ಉಗ್ರನರಸಿಂಹ (ಲಕ್ಷ್ಮೀನರಸಿಂಹ)ನ ಚಿತ್ರ :* ಮತ್ತೊಂದು ಚಿತ್ರವು ಉಗ್ರನರಸಿಂಹನ ಚಿತ್ರವಾಗಿದೆ. ಈ ಫಲಕವು ಅಷ್ಟೊಂದು ಉದ್ದವಾಗಿರದ ಕಾರಣ ಮಧ್ಯದಲ್ಲಿ ಹೂವಿನ ನಕ್ಷೆಯನ್ನು ಕೆತ್ತಿಲ್ಲ. ಇಡೀ ಫಲಕವನ್ನು ಒಂದೇ ವಿಷಯದ ಚಿತ್ರಕ್ಕಾಗಿ ಬಳಸಿಕೊಳ್ಳಲಾಗಿದೆ. ಈ ಚಿತ್ರದಲ್ಲಿ ನರಸಿಂಹನು ಉಗ್ರರೂಪಿಯಾಗಿದ್ದು ಎಡ ತೊಡೆಯ ಮೇಲೆ ಲಕ್ಷ್ಮೀಯನ್ನು ಕುಳ್ಳಿರಿಸಿ ಕೊಂಡಿದ್ದಾನೆ. ಚತುರ್ಭುಜಧಾರಿಯಾದ ನರಸಿಂಹನು ಎರಡು ಕೈಗಳಲ್ಲಿ ಶಂಖ ಚಕ್ರಗಳನ್ನು ಹಿಡಿದಿದ್ದು ಮತ್ತೆರಡು ಕೈಗಳಲ್ಲಿ ಒಂದನ್ನು ಲಕ್ಷ್ಮೀಯನ್ನು ಬಳಸಿ ಹಿಡಿದಿದ್ದರೆ, ಇನ್ನೊಂದು ಕೈಯಿಂದ ಅಭಯ ತೋರುತ್ತಿದ್ದಾನೆ. ಕಂದು ವರ್ಣದ ಪಂಚೆ ಉಟ್ಟುಕೊಂಡಿರುವ ನರಸಿಂಹನು ಹಳದೀ ವರ್ಣದ ಶಾಲನ್ನು ಹೊದ್ದಿದ್ದಾನೆ. ಮುಖವು ಅತ್ಯಂತ ಉಗ್ರಸ್ವರೂಪದಿಂದ ಕೂಡಿದೆ. ಈ ಉಗ್ರನರಸಿಂಹನ ಕುಳಿತ ಭಂಗಿ, ಮುಖಭಾವ ಆತ ಕುಳಿತ ಪೀಠ ಹೀಗೆ ಪ್ರತಿಯೊಂದರಲ್ಲೂ ಹಂಪೆಯ ನರಸಿಂಹ ಶಿಲ್ಪವನ್ನು ಹೋಲುವುದು. ಎಡತೊಡೆಯ ಮೇಲೆ ಕುಳಿತ ಲಕ್ಷ್ಮೀಯು ಹಸಿರುಮಿಶ್ರಿತ ಕಪ್ಪು ಸೀರೆ ಉಟ್ಟಿದ್ದಾಳೆ. ಸೀರೆಯ ಮಧ್ಯದಲ್ಲಿ ಹೂಗಳ ನಕ್ಷೆಗಳೂ ತುಂಬಿಕೊಂಡಿವೆ. ಲಕ್ಷ್ಮೀಯು ತೊಟ್ಟುಕೊಂಡಿರುವ ಕುಪ್ಪಸವು ಬೂದುವರ್ಣದಲ್ಲಿದ್ದು ಕೆಂಪು ಅಂಚನ್ನು ಹೊಂದಿದೆ. ಮಧ್ಯದಲ್ಲಿ ಹೂಗಳ ಸಾಲಾದ ನಕ್ಷೆಗಳಿವೆ. ಈ ಕುಪ್ಪಸವು ಉತ್ತರ ಕರ್ನಾಟಕ ಭಾಗದ ಜನಪ್ರಿಯ ಕೈಮಗ್ಗದ ಖಣಗಳನ್ನು ನೆನಪಿಗೆ ತರುವುದು. ತಲೆತುಂಬ ಹೂ ಮುಡಿದು ಬಿಂಕದಿಂದ ಕುಳಿತ ಲಕ್ಷ್ಮೀಯರೂಪ ಎಂತಹವರನ್ನೂ ಬೆರಗುಗೊಳಿಸುವುದು. ನರಸಿಂಹನ ಎಡಬಲಗಳಲ್ಲಿ ಇಬ್ಬರು ಭಟ್ಟರು ಚಂಡಿಕೆ ಬಿಟ್ಟುಕೊಂಡು ಕೈ ಮುಗಿದುಕೊಂಡು ನರಸಿಂಹನನ್ನು ಪ್ರಾರ್ಥಿಸುತ್ತಿದ್ದಾರೆ. ಇಬ್ಬರೂ ಕಂದುಬಣ್ಣದ ಪಂಚೆಯನ್ನು ಉಟ್ಟುಕೊಂಡಿದ್ದು ಮೈತುಂಬ ನಾಮವನ್ನು ಬಳಿದುಕೊಂಡಿದ್ದಾರೆ. ಚಿತ್ರದ ಹಿನ್ನೆಲೆಯವರ್ಣವು ಕೆಂಪಾಗಿದ್ದರೆ ಹೊರ ಆವರಣದ ವರ್ಣವು ಹಳದಿಯಾಗಿದೆ.

೩. ಶ್ರೀಕೃಷ್ಣನ ವಿಶ್ವರೂಪ ದರ್ಶನ : ಇಲ್ಲಿರುವ ಮತ್ತೊಂದು ಫಲಕದ ಮೇಲೆ ಶ್ರೀಕೃಷ್ಣನ ವಿಶ್ವರೂಪದರ್ಶನದ ಚಿತ್ರವನ್ನು ಬಿಡಿಸಲಾಗಿದೆ. ಇಲ್ಲಿನ ಕೃಷ್ಣನ ವಿರಾಟ್‌ರೂಪವು ವಿಚಿತ್ರವಾಗಿದ್ದು, ಇಂತಹ ಮಾದರಿಯ ಕೃಷ್ಣನ ವಿರಾಟ್ ದರ್ಶನದ ಚಿತ್ರಗಳು ಒರಿಸ್ಸಾದ ಪಟಚಿತ್ರಗಳಲ್ಲಿ ಸಾಮಾನ್ಯವಾಗಿ ಕಂಡಬುರುತ್ತವೆ. ಕರ್ನಾಟಕದ ಬೇರೆ ಕಡೆಗೆ ಕೃಷ್ಣನ ಇಂತಹ ರೂಪ ಹಂಪೆಯ ಭಿತ್ತಿ ಚಿತ್ರದಲ್ಲಿ, ದೇವನಹಳ್ಳಿಯ ಬಳಿಯ ವಿಜಯಪುರದ ಶೈವ ಮಠವೊಂದರ[೧೭೮] ಪಲ್ಲಕ್ಕಿಯಲ್ಲಿ ಕಂಡುಬಂದಿವೆ. ಅರ್ಜುನನಿಗೆ ವಿರಾಟ್ ರೂಪದರ್ಶನ ಮಾಡಿಸುತ್ತಿರುವ ಕೃಷ್ಣನ ರೂಪವು ಇಲ್ಲಿ ವಿಚಿತ್ರವಾಗಿದೆ. ಮನುಷ್ಯನೂ ಅಲ್ಲದ, ಪ್ರಾಣಿಯೂ ಅಲ್ಲದ, ಪಕ್ಷಿಯನ್ನೂ ಹೋಲೇಲದ ಈ ಆಕೃತಿಯು ಪಕ್ಷಿಯ

---

೧೭೮. ಅ. ಲ. ನರಸಿಂಹನ್ : ಕಲಾಕೋಶ, ಪುಟ ೧೪

ಮುಖ. ಸಿಂಹದ ಶರೀರ. ಕಾಲುಗಳಲ್ಲಿ ಒಂದು ಆನೆಯದು, ಒಂದು ಹುಲಿಯದು, ಇನ್ನೊಂದು ಆಕಳದು ಮತ್ತೊಂದು ಮನುಷ್ಯ ಕೈಯನ್ನೇ ಕಾಲನ್ನಾಗಿ ಹೊಂದಿದೆ. ಅದರಲ್ಲಿ ವಿಷ್ಣುವಿನ ಚಕ್ರವನ್ನು ಹಿಡಿದುಕೊಂಡಿದೆ. ಇದಕ್ಕೆ ಬಾಲವಾಗಿ ಐದು ಹೆಡೆಗಳ ಸರ್ಪವೇ ಇದೆ. ಈ ಆಕೃತಿಯಲ್ಲಿ ಅದರ ವಿವಿಧ ಅಂಗಗಳಲ್ಲಿ ವೈವಿದ್ಯತೆ ಇದ್ದಂತೆ ಅದರ ವರ್ಣವಿನ್ಯಾಸದಲ್ಲೂ ವಿವಿಧತೆ ತುಂಬಿಕೊಂಡಿದೆ. ನೀಲಿ, ಕೆಂಪು, ಹಳದಿ, ಬಿಳಿ, ಕಂದು ಮುಂತಾದ ವರ್ಣಗಳು ಬಳಕೆಯಾಗಿವೆ. ಈ ಪ್ರಾಣಿಶರೀರ ಹೊಂದಿದ ವಿಚಿತ್ರ ಆಕೃತಿಯ ಬೆನ್ನಿನ ಮೇಲೆ ಕೃಷ್ಣನು ನರ್ತಿಸುತ್ತಿದ್ದಾನೆ. ಇದು ಒಂದು ತೆಳುವಾದ ಪೀಠದ ಮೇಲೆ ರಚಿಸಲಾಗಿದೆ. ಈ ಕೃಷ್ಣನ ವಿರಾಟ್‌ರೂಪದ ವಿಚಿತ್ರಕೃತಿಯ ಮುಂದೆ ಎದುರಾಗಿ ಅರ್ಜುನನು ಕೈಮುಗಿದುಕೊಂಡು ನಿಂತಿದ್ದಾನೆ. ಕೃಷ್ಣನ ವಿಶ್ವರೂಪ ದರ್ಶನದಿಂದ ಉಂಟಾದ ಧನ್ಯತಾಭಾವ ಅರ್ಜುನನ ಮುಖದಲ್ಲಿ ಹೊಮ್ಮುತ್ತಿದೆ. ಅರ್ಜುನನು ಎಡಭುಜಕ್ಕೆ ಬಿಲ್ಲನ್ನು ನೇತುಹಾಕಿದ್ದಾನೆ. ನಸುಹಳದಿ ವರ್ಣದ ಪಂಚೆಯನ್ನು ಉಟ್ಟುಕೊಂಡು ಕೆಂಪುವರ್ಣದ ಉತ್ತರೀಯವನ್ನು ನಡಕ್ಕೆ ಬಿಗಿದಿದ್ದಾನೆ. ಚಿತ್ರದ ಹಿನ್ನೆಲೆ ಕೆಂಪುವರ್ಣದಿಂದ ಕೂಡಿದ್ದರೆ ಹೊರ ಆವರಣಕ್ಕೆ ಹಳದಿ ವರ್ಣ ಲೇಪಿಸಿದ್ದಾರೆ. ವಿಷಯ ನಿರೂಪಣೆಯಲ್ಲಿ ವಿಶೇಷತೆಯನ್ನು ಭಿನ್ನತೆಯನ್ನೂ ಇಲ್ಲಿ ಕಾಣಬಹುದು.

೪. ಕೃಷ್ಣ ಮತ್ತು ಆತನ ಮಡದಿಯರ ಚಿತ್ರ : ಇಲ್ಲಿರುವ ಮತ್ತೊಂದು ಫಲಕದ ಮೇಲೆ ಕೃಷ್ಣನು ತನ್ನ ಇಬ್ಬರು ಮಡದಿಯರ ಜೊತೆಗೆ ಸರಸದಲ್ಲಿ ತೊಡಗಿರುವ ಚಿತ್ರವಿದೆ. ನಾಲ್ಕು ಕೈಗಳನ್ನು ಹೊಂದಿದ ಕೃಷ್ಣನು ಎರಡು ಕೈಗಳಿಂದ ತನ್ನ ಎಡಬಲದಲ್ಲಿ ಇಬ್ಬರು ಮಡದಿಯರನ್ನು ಅವರ ಕುತ್ತಿಗೆ ಬಳಸಿ ತಬ್ಬಿ ಹಿಡಿದಿದ್ದಾನೆ. ಇನ್ನೆರಡು ಕೈಗಳನ್ನು ಅವರ ಬೆನ್ನಮೇಲೆ ಊರಿದ್ದಾನೆ. ಒಬ್ಬಳು ಮಡದಿಯ ಕುಚವನ್ನೂ ಮರ್ದಿಸುತ್ತಿದ್ದಾನೆ. ಆತನ ತೋಳತೆಕ್ಕೆಯಲ್ಲಿ ಸಿಲುಕಿದ ಮಡದಿಯರು ತಮ್ಮ ಒಂದೊಂದು ಕೈಗಳಿಂದ ಕೃಷ್ಣನ ಕತ್ತನ್ನು ಬಳಸಿದ್ದರೆ. ಒಬ್ಬಳು ಈ ಸರಸಕ್ರಿಯೆಯಿಂದ ನಾಚಿ ಮುಖ ತಿರುವಿಕೊಂಡಿರುವಂತಿದೆ. ಮತ್ತೊಬ್ಬಳು ಉತ್ತೇಜನಗೊಂಡು ಕೃಷ್ಣನನ್ನು ಮುದ್ದಿಸಲು ಅಣಿಯಾಗಿದ್ದಾಳೆ. ಎಡಗಡೆಯವಳು ಹಳಿಕೆಹಪು ಧಡಿಯುಳ್ಳ ಕರಿ ಕಡ್ಡಿ ಸೀರೆಯನ್ನು ಉಟ್ಟುಕೊಂಡು, ಅಂಚುಳ್ಳ ತೆಳು ಕೆಂಪುವರ್ಣದ ಕುಪ್ಪಸ ತೊಟ್ಟುಕೊಂಡಿದ್ದಾಳೆ. ಈಕೆ ತೊಟ್ಟುಕೊಂಡಿರುವ ಕುಪ್ಪಸ ಮತ್ತು ಉಟ್ಟಿರುವ ಸೀರೆ ಕೈಮಗ್ಗದ ವಸ್ತ್ರಗಳಾದ ಇಲಕಲ್ ಸೀರೆ ಮತ್ತು ಗುಳೇದಗುಡ್ಡದ ಖಣಗಳನ್ನು ನೆನಪಿಸುತ್ತವೆ. ಇವಳು ಕೊರಳತುಂಬಾ ಆಭರಣವನ್ನೂ ಧರಿಸಿದ್ದಾಳೆ. ಬಲಗಡೆಯ ಮಡದಿ ತೆಳುಗುಲಾಬಿ ಕುಪ್ಪಸ ತೊಟ್ಟು, ನಸುಹಳದೀ ವರ್ಣದ ಸೀರೆ ಉಟ್ಟಿದ್ದಾಳೆ. ಇಬ್ಬರೂ ತಲೆಯಲ್ಲಿ ಗುಲಾಬಿ ಹೂ ಮುಡಿದುಕೊಂಡಿದ್ದಾರೆ.

ಕೃಷ್ಣನು ನೀಲ ವರ್ಣದವನಿದ್ದು ಕಿರೀಟ ಧರಿಸಿದ್ದಾನೆ. ಕಿರೀಟಕ್ಕೆ ಮೂಲದಲ್ಲಿ ಬಂಗಾರ ವರ್ಣ ಲೇಪಿಸಿರಬೇಕು. ಈಗ ಅದು ಉದುರಿಹೋಗಿ ಹಿನ್ನೆಲೆಯ ಬಳಿ ವರ್ಣದ ಭಿತ್ತಿಯು ಕಂಡು ಬರುವುದು. ಆ ದೆಸೆಯಿಂದ ಬಿಳಿ ಕಿರೀಟ ಧರಿಸಿದಂತೆ ಕಾಣುವುದು. ನಡುವಿಗೆ ಕೆಂಪುವರ್ಣದ ಉತ್ತರೀಯವನ್ನು ಬಿಗಿದು ಕೊಂಡಿದ್ದಾನೆ. ಕೃಷ್ಣ ಆತನ ಮಡದಿಯರು ಮಧ್ಯದಲ್ಲಿದ್ದರೆ ಚಿತ್ರದ ಎರಡೂ ಅಂಚಿಗೆ ಇಬ್ಬರು ಸ್ತ್ರೀಯರು ಆರತಿ ಬೆಳಗುತ್ತ ನಿಂತಿದ್ದಾರೆ. ಬಲಗಡೆಗಿರುವ ಆರತೀ ಬೆಳಗುತ್ತಿರುವ ಸ್ತ್ರೀ ಬಿಳಿ ಚುಕ್ಕೆಗಳನ್ನು ಹೊಂದಿದ ಕರೀ ಸೀರೆಯನ್ನು ಉಟ್ಟಿದ್ದರೆ ಮಾಸಲು ಹಳದಿ ವರ್ಣದ ಕುಪ್ಪಸ ತೊಟ್ಟಿದ್ದಾಳೆ. ಇವಳು ಉಟ್ಟ ಸೀರೆಯು ಬಹಳ ಆಕರ್ಷಕವಾಗಿದೆ. ಮೂಗಲ್ಲಿ ಮೂಗುತಿಯು ಹೊಳೆಯುತ್ತಿದೆ. ಎರಡೂ ಕೈಯಲ್ಲಿ ಆರತಿಯನ್ನು ಹಿಡಿದುಕೊಂಡು ಸ್ವಲ್ಪವೇ ಮುಂದಕ್ಕೆ ಬಾಗಿರುವ ಇವಳ ಭಂಗಿಯು ಆಕರ್ಷಕವಾಗಿದೆ.

ಎಡಗಡೆಗಿರುವ ಆರತಿ ಬೆಳಗುತ್ತಿರುವ ಸ್ತ್ರೀಯು ಕೆಂಪು ಕುಪ್ಪಸ ತೊಟ್ಟು ಹಳದಿ ವರ್ಣದ ಸೀರೆ ಉಟ್ಟಿದ್ದಾಳೆ. ಈಕೆ ಉಟ್ಟಿರುವ ಹಳದಿ ಸೀರೆಯಲ್ಲಿ ಉದ್ದುದ್ದನಾದ ಕಡ್ಡಿಗಳಿವೆ ಅವು ಕೆಲವೊಮ್ಮೆ ವೃತ್ತಾಕಾರವಾಗಿಯೂ ತಿರುಗಿವೆ. ಅಸಾಧ್ಯವಾದ ಕಡ್ಡಿಗಳನ್ನು ಈ ಸೀರೆಯಲ್ಲಿ ಚಿತ್ರಿಸಿದ್ದಾರೆ. ಅಚ್ಚು ಹೊಡೆದ ಸೀರೆಯಂತೆ ಈ ಮಹಿಳೆಯ ಸೀರೆ ಕಂಡುಬರುವುದು. ಇಬ್ಬರೂ ಆರತಿಯವರು ತುಂಬಾ ಆಕರ್ಷಕವಾಗಿದ್ದಾರೆ. ಕೃಷ್ಣನ ಮಡದಿಯರಿಗಿಂತ ಇವರೇ ಹೆಚ್ಚು ಸೌಂದರ್ಯವತಿಯರಾಗಿ ಕಾಣುತ್ತಾರೆ. ಹಿನ್ನೆಲೆಯ ವರ್ಣ ಕೆಂಪಾಗಿದ್ದರೂ ಪೂರಕವಾಗಿ ಬಳಸಿದ ಇನ್ನುಳಿದ ಪ್ರಖರ ವರ್ಣಗಳು ದೆಸೆಯಿಂದ ವರ್ಣವಿನ್ಯಾಸ ಕಣ್ಣಿಗೆ ಹಿತವಾಗಿ, ಆಕರ್ಷಕವಾಗಿ ಕಾಣುವುದು. ಕೃಷ್ಣನು ಮಡದಿಯರೊಡನೆ ಸರಸದಲ್ಲಿ ತೊಡಗಿರುವ ಇಂತಹುದೇ ಚಿತ್ರ ನರಗುಂದದ ಗುಂಡಪ್ಪ ಹಸಬಿ ಎಂಬವರ ಮನೆಯಲ್ಲಿಯೂ ಇದೆ. ಆದರೆ ನರಗುಂದದಲ್ಲಿ ಕೃಷ್ಣ ಆತನ ಮಡದಿಯರು ಮಾತ್ರ ಇದ್ದರೆ ಇಲ್ಲಿ ಅಮ್ಮಿನಭಾವಿಯಲ್ಲಿ ಹೆಚ್ಚಾಗಿ ಇಬ್ಬರು ಆರತಿ ಬೆಳಗುವ ಸ್ತ್ರೀಯರು ಇದ್ದಾರೆ.

೫. ಶೇಷಶಯನ ವಿಷ್ಣುವಿನ ಚಿತ್ರ : ಇಲ್ಲಿರುವ ಮತ್ತೊಂದು ಫಲಕದ ಮೇಲೆ ಶೇಷಶಯನ ವಿಷ್ಣುವಿನ ಚಿತ್ರವಿದೆ. ಇದರಲ್ಲಿ ವಿಷ್ಣುವು ಆದಿಶೇಷನ ಮೇಲೆ ತಲೆಗೆ ಕೈಕೊಟ್ಟು ಒರಗಿಕೊಂಡಿದ್ದಾನೆ. ಲಕ್ಷ್ಮೀದೇವಿಯು ಆತನ ಕಾಲನ್ನು ಒತ್ತುವ ಸೇವೆಯಲ್ಲಿ ತೊಡಗಿದ್ದಾಳೆ. ವಿಷ್ಣುವಿನ ಹೊಕ್ಕಳಿಂದ ಹೊರಟ ಕಮಲದಲ್ಲಿ ಬ್ರಹ್ಮನು ವಿರಾಜಮಾನನಾಗಿದ್ದಾನೆ. ನಾಭಿಯಿಂದ ಹೊರಟ ಕಮಲಕ್ಕೆ ಒಂದು ದೇಟು ಅದರ ತುದಿಯಲ್ಲಿ ಒಂದು ಕಮಲ ಹೂ ಅದರಲ್ಲಿ ಬ್ರಹ್ಮನನ್ನು ರಚಿಸುವುದು ಸಾಮಾನ್ಯ. ಆದರೆ ಇಲ್ಲಿ ಹೊಕ್ಕಳಿನಿಂದ ಹೊರಟ ಕಮಲದ ದೇಟಿಗೆ ಹಲವಾರು ಎಲೆಗಳು, ಟೊಂಗೆಗಳು, ಮೊಗ್ಗುಗಳನ್ನು ರಚಿಸಿ ಅದೊಂದು ಗಿಡ ಎನ್ನುವಂತೆ ಮಾಡಿದ್ದಾರೆ. ಎಲೆಗಳು ಹಸಿರುವರ್ಣದಿಂದ ಕೂಡಿರದೇ ಹಳದೀ ವರ್ಣದಿಂದ ಕೂಡಿವೆ. ಆದಿಶೇಷನು ಕೆಂಪು ಚುಕ್ಕೆಗಳನ್ನು ಮೈತುಂಬ ಹೊಂದಿ ಸುರುಳಿಸುತ್ತಿಕೊಂಡು ಭೀಕರವಾಗಿ ಕಾಣುತ್ತಿದ್ದಾನೆ. ವಿಷ್ಣುವು ನೀಲಮೇಘ ಶ್ಯಾಮ ವರ್ಣದವನಾಗಿದ್ದು, ಕೆಂಪು ಧೋತ್ರ ಉಟ್ಟಿದ್ದಾನೆ. ಶಂಖ, ಚಕ್ರ, ಗಧೆಗಳನ್ನು ಕೈಯಲ್ಲಿ ಹಿಡಿದುಕೊಂಡಿರುವ ನಾರಾಯಣ ಮತ್ತು ಲಕ್ಷ್ಮೀದೇವಿಯರ ಎದುರಿನಲ್ಲಿ ನಾರದನು ಕೈಮುಗಿದುಕೊಂಡು ನಿಂತಿದ್ದಾನೆ.

ಈ ಶೇಷಶಯನ ವಿಷ್ಣುವಿನ ಚಿತ್ರದ ಎಡಕ್ಕೆ ಬಿಲ್ಲು ಧರಿಸಿದ ರಾಮನು ತನ್ನ ಮಡದಿಯ ಜೊತೆಗೆ ಪೀಠದ ಮೇಲೆ ಕುಳಿತು ಕೊಂಡಿದ್ದಾನೆ. ಆತನ ಮುಂದೆ ಆಂಜನೇಯನು ಕೈಮುಗಿದುಕೊಂಡು ನಿಂತಿದ್ದಾನೆ. ಇಲ್ಲಿಯೂ ಚಿತ್ರದ ಹಿನ್ನೆಲೆ ವರ್ಣ ಕೆಂಪಾಗಿದೆ. ನೀಲಿ, ಹಳದಿ, ಹಸಿರು ಇಲ್ಲಿ ಬಳಕೆಗೊಂಡ ಇತರ ಪ್ರಮುಖ ವರ್ಣಗಳು.

೬. ದೇವಿಯ ಚಿತ್ರ : ಇಲ್ಲಿನ ಮತ್ತೊಂದು ಫಲಕದ ಮೇಲೆ ಆದಿಶಕ್ತಿಯು ಹದಿನೆಂಟು ಕೈಗಳುಳ್ಳವಳಾಗಿ ಕಮಲದ ಮೇಲೆ ಧ್ಯಾನದಲ್ಲಿ ಕುಳಿತಿದ್ದಾಳೆ. ದೇವಿಯು ಸಾಮಾನ್ಯವಾಗಿ ಸಿಂಹವಾಹಿಣಿಯಾಗಿಯೇ ಹೆಚ್ಚಿನ ಸಂದರ್ಭದಲ್ಲಿ ಚಿತ್ರಿತವಾಗಿದ್ದರೂ ಇಲ್ಲಿ ಮಾತ್ರ ಕಮಲದ ಮೇಲೆ ಚಿತ್ರಿತಳಾಗಿದ್ದಾಳೆ. ಆಕೆಯ ವಾಹನ ಸಿಂಹ ಇಲ್ಲಿ ಕಂಡುಬರುದಿಲ್ಲ. ಆದಿಶಕ್ತಿ ಪರಮೇಶ್ವರಿಯು ಪದ್ಮಾಸನ ಹಾಕಿ ಕಮಲದ ಮೇಲೆ ಧ್ಯಾನದಲ್ಲಿ ತೊಡಗಿರುವ ಭಂಗಿ ನೋಡುಗರಲ್ಲಿ ಶಾಂತಭಾವವನ್ನು ತೋರುತ್ತಿದೆ. ಇದಕ್ಕೆ ಚಿತ್ರಗಳಿಗೆ ಬಳಸಿದ ವರ್ಣಗಳು ಹೆಚ್ಚಿನ ಸಹಾಯ ಮಾಡಿವೆ. ಆದರೆ ಚಿತ್ರದ ಹಿನ್ನೆಲೆಯ ವರ್ಣವನ್ನು ಎಲ್ಲ ಚಿತ್ರಗಳಿಗೂ ಬಳಸಿದಂತೆ ಇಲ್ಲಿಯೂ ಕೆಂಪನ್ನು ಬಳಸಲಾಗಿದೆ. ಹಿನ್ನೆಲೆವರ್ಣವು ಕೆಂಪುವರ್ಣದ ಬದಲಾಗಿ

ಶಾಂತಭಾವಕ್ಕೆ ಸಹಾಯ ಮಾಡುವ ಬೇರೆ ವರ್ಣವಾಗಿದ್ದರೆ ಇನ್ನೂ ಪರಿಣಾಮಕಾರಿಯಾಗುತ್ತಿತ್ತು. ಆದರೆ ಇಲ್ಲಿನ ಎಲ್ಲ ಚಿತ್ರಗಳಿಗೂ ಹಿನ್ನೆಲೆಯಾಗಿ ಕೆಂಪನ್ನು ಸಾಮಾನ್ಯವಾಗಿ ಬಳಸಲಾಗಿದೆ.

ದೇವಿಯು ಹದಿನೆಂಟು ಕೈಗಳುಳ್ಳವಳಾಗಿ ಪ್ರತಿಯೊಂದು ಕೈಯಲ್ಲಿ ಆಯುಧ ಹಿಡಿದಿದ್ದಾಳೆ. ತೆಳು ಕೆಂಪುವರ್ಣದ ಕುಪ್ಪಸ. ಕಡುಹಸಿರು ವರ್ಣದ ಹೂಗಳನಕ್ಷೆಯ ಸೀರೆ ಉಟ್ಟಿದ್ದಾಳೆ. ತಲೆಯಮೇಲಿನ ಕಿರೀಟವು ಬಂಗಾರ ವರ್ಣದ್ದಾಗಿದ್ದು ಆಕರ್ಷಕವಾಗಿದೆ. ದೇವಿಯ ಎಡಬಲಗಳಲ್ಲಿ ಇಬ್ಬರು ಸ್ತ್ರೀಯರು ಆರತಿ ಬೆಳಗುತ್ತ ನಿಂತಿದ್ದಾರೆ. ತಲೆ ಕೂದಲನ್ನು ತುರುಬುಕಟ್ಟಿ ಹೂಮುಡಿದುಕೊಂಡಿದ್ದಾರೆ. ಕೆಂಪುಸೀರೆ ಉಟ್ಟು ಮಾಸಲು ಹಳದಿವರ್ಣದ ಕುಪ್ಪಸ ತೊಟ್ಟಿದ್ದಾರೆ. ಚಿತ್ರದ ಹೊರಆವರಣಕ್ಕೆ ಹಳದಿ ವರ್ಣಲೇಪಿಸಿ ಕಂದುವರ್ಣದಿಂದ ಎಲೆ ಬಳ್ಳಿ ನಕ್ಷೆ ರಚಿಸಿದ್ದಾರೆ.

೭. ಶ್ರೀಕೃಷ್ಣನು ಕೊಳಲು ನುಡಿಸುತ್ತಿರುವ ಚಿತ್ರ : ಈ ಚಿತ್ರದಲ್ಲಿ ಕೃಷ್ಣನು ಮಧ್ಯದಲ್ಲಿ ನಿಂತು ಕೊಳಲನ್ನು ನುಡಿಸುತ್ತಿದ್ದರೆ. ಆತನ ಎಡಬಲಗಳಲ್ಲಿ ಇಬ್ಬರು ಸ್ತ್ರೀಯರು ಆತನಿಗೆ ಚಾಮರ ಬೀಸುತ್ತ ನಿಂತಿದ್ದಾರೆ. ನಾಲ್ಕು ಕೈಗಳನ್ನು ಹೊಂದಿದ ಕೃಷ್ಣನು ತನ್ನೆರಡು ಕೈಗಳಿಂದ ಕೊಳಲನ್ನು ನುಡಿಸುತ್ತಿದ್ದಾನೆ. ಕತ್ತನ್ನು ಎಡಕ್ಕೆ ಬಾಗಿಸಿ, ಎಡಗಾಲನ್ನು ನೆಲಕ್ಕೆ ಊರಿ. ಆಕಳಿಗೆ ಆಸರೆಯಾಗಿ ನಿಂತು ಕೊಳಲು ನುಡಿಸುತ್ತಿರುವ ಭಂಗಿ ಅತ್ಯಂತ ಆಕರ್ಷಕವಾಗಿದೆ. ಕೃಷ್ಣನ ಕಿರೀಟವು ಟೊಪ್ಪಿಗೆಯಹಾಗಿದೆ. ಇಲ್ಲಿನ ಕೃಷ್ಣನ ಚಿತ್ರಗಳ ಕಿರೀಟಗಳು ಮಾತ್ರ ಈ ರೀತಿ ಇವೆ. ನೀಲಮೇಘ ಶ್ಯಾಮನಾದ ಕೃಷ್ಣನು ತಿಳಿಗುಲಾಬಿ ಧೋತರ ಉಟ್ಟುಕೊಂಡಿದ್ದಾನೆ. ಆತನ ಹಿಂದಿರುವ ಬಿಳಿ ಗೋವು ಕಂದು ವರ್ಣದ ಕೋಡುಗಳಿಂದ ಚಿತ್ರಿಸಿದ್ದು. ಕೃಷ್ಣನ ಮುರಳಿಗಾನಕ್ಕೆ ಮನಸೋತು ಪ್ರೀತಿಯಿಂದ ಆತನ ಬಲಗಾಲ ಹಿಮ್ಮಡಿಯನ್ನು ನೆಕ್ಕುತ್ತಿದೆ.

ಕೃಷ್ಣನ ಎಡಬಲದಲ್ಲಿರುವ ಇಬ್ಬರು ಗೋಪಿಕಾಸ್ತ್ರೀಯರು ಟೊಂಕದ ಮೇಲೆ ಕೈಯಿಟ್ಟಿಕೊಂಡು ಬಳುಕಿ. ವಯ್ಯಾರದಿಂದ ಚಾಮರ ಬೀಸುತ್ತಿದ್ದಾರೆ. ಅದರಲ್ಲಿ ಒಬ್ಬಳು ಕಡುಹಸಿರು ವರ್ಣದ ಹೂಗಳ ನಕ್ಷೆಹೊಂದಿರುವ ಕೆಂಪು ಧಡಿಯ ಸೀರೆ ಉಟ್ಟು. ಕೆಂಪು ಕುಪ್ಪಸ ತೊಟ್ಟಿದ್ದಾಳೆ. ಇನ್ನೊಬ್ಬಳು ಹಳದಿ ಮಾಸಲು ವರ್ಣದ ಸೀರೆ ಉಟ್ಟು ತೆಳುಗುಲಾಬಿವರ್ಣದ ಕುಪ್ಪಸ ಧರಿಸಿದ್ದಾಳೆ. ಈ ಸ್ತ್ರೀಯರು ಕೂದಲನ್ನು ತುರುಬಾಗಿ ಕಟ್ಟಿರುವುದು ಅವರ ಅಂದವನ್ನು ಮತ್ತಷ್ಟು ಹೆಚ್ಚಿಸಿದೆ. ಇಲ್ಲಿನ ಎಲ್ಲ ಸ್ತ್ರೀಯರ ಚಿತ್ರಗಳಲ್ಲೂ ಇದೇ ರೀತಿಯ ಕೇಶಾಲಂಕಾರವಿದೆ. ಬಹುಶ ಈ ರೀತಿ ತುರುಬು ಕಟ್ಟುವುದು ಆ ಕಾಲದ ಜನಪ್ರಿಯ ಹವ್ಯಾಸವಾಗಿರಬಹುದು.

೮. ಶಿವನ ಒಡ್ಡೋಲಗ ದೃಶ್ಯ : ಇಲ್ಲಿನ ಮತ್ತೊಂದು ಫಲಕದ ಮೇಲೆ ಶಿವನ ಒಡ್ಡೋಲಗ ದೃಶ್ಯವಿದೆ. ಇಲ್ಲಿರುವ ಉತ್ತಮ ಚಿತ್ರಗಳಲ್ಲಿ ಇದೂ ಒಂದು. ಕೈಲಾಸ ಪರ್ವತದಲ್ಲಿ ಶಿವನು ಪಾರ್ವತಿ ಸಮೇತ ಕುಳಿತಿದ್ದಾನೆ. ಇಲ್ಲಿ ಶಿವನಿಗೆ ಐದು ಮುಖಗಳು. ಹತ್ತು ಕೈಗಳು ಇವೆ. ಪಾರ್ವತಿಯನ್ನು ತನ್ನ ಎಡತೊಡೆಯ ಮೇಲೆ ಕುಳ್ಳಿರಿಸಿಕೊಂಡಿದ್ದಾನೆ. ತನ್ನ ಹಲವು ಕೈಗಳಲ್ಲಿ ವಿವಿಧ ಆಭರಣಗಳನ್ನು ಧರಿಸಿದ್ದು, ಐದೂ ಮುಖಗಳು ಕಿರೀಟ ಹೊಂದಿವೆ. ಇಲ್ಲಿ ಜಟಾಧಾರಿಯಾಗಿ, ನೀಲಕಂಠನಾಗಿ, ಚರ್ಮಾಂಬರಧಾರಿಯಾಗಿ ರೂಪಿತವಾಗಿರದೇ, ಕಿರೀಟವುಳ್ಳವನಾಗಿ ಧೋತ್ರ ಉಟ್ಟುಕೊಂಡು, ಆಭರಣಧರಿಸಿ ರಾಜಗಾಂಭೀರ್ಯದಿಂದ ಕಂಗೊಳಿಸುತ್ತಿದ್ದಾನೆ. ಆತನ ತೊಡೆಯ ಮೇಲೆ ಕುಳಿತ ಪಾರ್ವತಿಯ ಆಕೃತಿಯು ಅತ್ಯಂತ ಚಿಕ್ಕದಾಗಿದೆ. ಆಕೆಯು ಕಡುಹಸಿರು ವರ್ಣದ ಸೀರೆ ಉಟ್ಟಿದ್ದಾಳೆ. ಶಿವನ ಮುಂದೆ ನಂದಿಯು ಮಲಗಿಕೊಂಡಿದೆ. ಶಿವ ಪಾರ್ವತಿಯರ ಮುಂದೆ ಶಿವಗಣಗಳೆಲ್ಲ ವಾದ್ಯನುಡಿಸುತ್ತ ಶಿವನನ್ನು ಭಜಿಸುತ್ತಿವೆ. ವೀರಭದ್ರ. ನಂದಿ. ಭೃಂಗಿ,

ಟಗರಿನ ಮುಖದ ವ್ಯಕ್ತಿ. ಮುನಿಗಳು. ಮುಂತಾದವರಿದ್ದಾರೆ. ವೀರಭದ್ರನು ಬಿಳಿಪಂಚೆ ಉಟ್ಟು ನಡಕ್ಕೆ ಕೆಂಪುವಸ್ತ್ರ ಬಿಗಿದು ಕಾಲಲ್ಲಿ ಗೆಜ್ಜೆ ಕಟ್ಟಿಕೊಂಡು ಕೈಯಲ್ಲಿ ಶಸ್ತ್ರ ಹಿಡಿದುಕೊಂಡು ವೀರಾವೇಶದಿಂದ ಕುಣಿಯುತ್ತಿದ್ದಾನೆ. ಮೈತುಂಬ ವಿಭೂತಿ ಬಳಿದುಕೊಂಡು ಕೊರಳಲ್ಲಿ ಮಾಲೆಧರಿಸಿಕೊಂಡು ಹೆಜ್ಜೆ ಹಾಕುತ್ತಿರುವ ಆತನ ಕುಣಿತದ ಭಂಗಿಯಲ್ಲಿ ವೇಗ ಕಂಡು ಬರುತ್ತದೆ. ಶಿವನಿಗೆ ಅತ್ಯಂತ ಸಮೀಪದಲ್ಲಿ ವೀರಭದ್ರ ಕುಣಿಯುತ್ತಿದ್ದರೆ ಆತನ ನಂತರ ಉಳಿದವರು ಸಾಲಾಗಿ ನಿಂತು ವಾದ್ಯಬಾರಿಸುತ್ತಿದ್ದಾರೆ.

ಕಪ್ಪು ಅಂಗಿ. ಹಳದಿ ಪಂಚೆ. ಕೆಂಪು ಶಾಲು ಧರಿಸಿ ಆಕಳ ಮುಖ ಹೊಂದಿದ ನಂದಿಯು ಮೃದಂಗ ಬಾರಿಸುತ್ತಿದ್ದರೆ, ಇನ್ನೊಬ್ಬನು ತಾಳ. ಮತ್ತೊಬ್ಬರು ತಂಬೂರಿ. ಹೀಗೆ ವಿವಿಧ ವಾದನ ನುಡಿಸುತ್ತಲಿದ್ದಾರೆ. ಭೃಂಗಿಯು ಹಸಿರು ವರ್ಣದ ಅಂಗಿತೊಟ್ಟಿದ್ದು. ಇನ್ನೊಬ್ಬನು ಕಡು ಹಸಿರು ವರ್ಣದ ಅಂಗಿ ಧರಿಸಿದ್ದಾನೆ. ಅಂಗಿತೊಟ್ಟುಕೊಂಡ ಎಲ್ಲರೂ ನಡುವಿಗೆ ಕಾವಿಬಣ್ಣದ ವಸ್ತ್ರವನ್ನು ಬಿಗಿದುಕೊಂಡಿದ್ದಾರೆ. ಎಲ್ಲರೂ ಭಜನೆಮಾಡುತ್ತಿರುವ ಗತ್ತನ್ನು ನೋಡಿದರೆ ಪಂಢರಾಪುರಕ್ಕೆ ಹೊರಟ ದಿಂಡಿಯ ಭಕ್ತಸಮೂಹದಂತೆ ಕಂಡುಬರುತ್ತದೆ. ಈ ಚಿತ್ರದ ಹೊರ ಅಂಚನ್ನು ವಿಶೇಷವಾಗಿ ಹೂಬಳ್ಳಿಯ ನಕ್ಷೆಯಿಂದ ಅಲಂಕರಿಸಲಾಗಿದೆ.

೯. ಜಮದಗ್ನಿ ಋಷಿಯ ಚಿತ್ರ : ಇಲ್ಲಿರುವ ಫಲಕದ ಮತ್ತೊಂದು ಚಿತ್ರವು ಜಮದಗ್ನಿ ಮುನಿಯದಾಗಿದೆ. ಜಮದಗ್ನಿ ಋಷಿಯ ಆಶ್ರಮದಲ್ಲಿರುವ ಕಾಮಧೇನು ಕಲ್ಪವೃಕ್ಷಗಳನ್ನು ನೋಡಿ ಅವುಗಳು ಮಹತ್ವ ತಿಳಿದು ಕಾರ್ತಿವೀರ್ಯನು ಅವುಗಳನ್ನು ತನಗೆ ಕೊಡಬೇಕೆಂದು ಮುನಿಯಲ್ಲಿ ಕೇಳಿಕೊಳ್ಳುತ್ತಾನೆ. ಜಮದಗ್ನಿಯು ಅದಕ್ಕೆ ಒಪ್ಪದಿದ್ದಾಗ ಕಾರ್ತಿವೀರ್ಯನು ಸಮಯಸಾಧಿಸಿ ಅವುಗಳನ್ನು ಅಪಹರಿಸಿಕೊಂಡು ಹೋಗುತ್ತಾನೆ. ಮುಂದೆ ಪರಶುರಾಮ ಕಾರ್ತಿವೀರ್ಯನನ್ನು ಕೊಂದು ಅವುಗಳನ್ನು ಮರಳಿ ತರುತ್ತಾನೆ. ಇಲ್ಲಿ ಜಮದಗ್ನಿ ಋಷಿಯು ಪೀಠದ ಮೇಲೆ ಕುಳಿತಿದ್ದು. ಆತನ ಬಲಗಡೆಗೆ ಕಲ್ಪವೃಕ್ಷವಿದೆ. ಕಲ್ಪವೃಕ್ಷದಲ್ಲಿ ಹೂಗಳು ಅರಳಿದ್ದು ಒಂದು ಬೃಹತ್ತಾದ ಫಲವೂ ಬಿಟ್ಟಿದೆ. ಆತನ ಎಡಗಡೆಗೆ ಕಾಮಧೇನುವಿದ್ದು. ಅದು ಸ್ತ್ರೀಮುಖ ಆಕಳ ಶರೀರಹೊಂದಿದೆ. ಪಕ್ಷಿಗಳ ರೆಕ್ಕೆ ನವಿಲಿನಬಾಲ ಇದಕ್ಕಿದೆ. ನವಿಲಿನ ಬಾಲವಲ್ಲದೇ ಆಕಳಿನ ಎರಡುಬಾಲಗಳೂ ಇದಕ್ಕಿವೆ. ಅದರ ನಾಲ್ಕೂ ಮೊಲೆಯಿಂದ ಧಾರಾಕಾರವಾಗಿ ಹಾಲು ಈಶ್ವರಲಿಂಗ ಒಂದರ ಮೇಲೆ ಸುರಿಯುತ್ತಿವೆ. ಕಾರ್ತಿವೀರ್ಯನು ಕಾಮಧೇನು ತನಗೆ ಕೊಡಲು ಜಮದಗ್ನಿ ಮುನಿಗಳಲ್ಲಿ ಕೈಮುಗಿದು ಕೇಳಿಕೊಳ್ಳುತ್ತಿದ್ದಾನೆ. ಇಲ್ಲಿ ಹಳದಿ, ಬಂಗಾರವರ್ಣ, ಮತ್ತು ಹಸಿರುವರ್ಣಗಳು ಪ್ರಮುಖವಾಗಿ ಬಳಕೆಯಾಗಿವೆ. ಜಮದಗ್ನಿ ಮುನಿಯು ಕಾವಿ ಪಂಚೆ ಉಟ್ಟಿದ್ದು ರುದ್ರಾಕ್ಷಿ ಧರಿಸಿದ್ದಾನೆ. ಕಾರ್ತಿವೀರ್ಯನ ಕೋರಿಕೆಯನ್ನು ಒಪ್ಪದೇ ಸಿಟ್ಟಿನಿಂದ ಕಣ್ಣುದೊಡ್ಡವುಮಾಡಿ ನೋಡುತ್ತಿದ್ದಾನೆ. ಇಲ್ಲಿ ರಚನೆಯಾಗಿರುವ ಕಾಮಧೇನುವಿನ ಬಣ್ಣ ಬಿಳಿಯಾಗಿದ್ದು ಶುಭ್ರವಾಗಿದೆ. ತೆಳುವಾದ ಗೌರವರ್ಣವನ್ನು ಹೊಂದಿದ ಕಾರ್ತಿವೀರ್ಯ, ಕಂದುವರ್ಣದ ಮೈಬಣ್ಣ ಹೊಂದಿದ ಜಮದಗ್ನಿ ಮುನಿ. ಆತಕುಳಿತ ಪೀಠಕ್ಕೆ ಕೊಡಲಾಗಿರುವ ತೆಳುಹಳದೀ ವರ್ಣ, ಕಂದು ಹಸಿರು ಮಿಶ್ರಿತ ಗಿಡದ ವರ್ಣಗಳು ಚಿತ್ರದ ವರ್ಣಸಂಯೋಜನೆಯಲ್ಲಿ ಸಮತೋಲ ತಂದಿವೆ. ಮಠದ ಪ್ರವೇಶದ್ವಾರದಲ್ಲಿ ಬೋದಿಗೆಗಳ ಮೇಲೂ ಚಿತ್ರಗಳಿವೆ. ಇವು ಕೂಡಾ ಮರದ ಫಲಕದ ಮೇಲೆ ರಚಿಸಿದ ಚಿತ್ರಗಳಾಗಿವೆ. ಇಲ್ಲಿ ಕರ್ಣ. ಅರ್ಜುನರ ಯುದ್ಧ. ಶಿವನು ತ್ರಿಪುರ ಸಂಹಾರ ಮಾಡುವ ದೃಶ್ಯ, ಮತ್ತು ಕೆಲವು ಕಾಲ್ಪನಿಕ ಪಕ್ಷಿಗಳು ರಚನೆಗೊಂಡಿವೆ. ಜೊತೆಗೆ ಹೂಬಳ್ಳಿಯ ನಕ್ಷೆಗಳೂ ರಚಿಸಿವೆ.

೧೦. ತ್ರಿಪುರ ಸಂಹಾರ ದೃಶ್ಯ : ಇಲ್ಲಿನ ಬೋದಿಗೆಯ ಒಂದು ಫಲಕದಲ್ಲಿ ಶಿವನು ತ್ರಿಪುರಾಂತಕ ರಾಕ್ಷಸರನ್ನು ಕೊಲ್ಲುವ ದೃಶ್ಯವಿದೆ. ತ್ರಿಪುರ ಎಂದರೆ ಮೂರು ಪುರಗಳು. ಈ ಮೂರು ಪುರಗಳನ್ನು ತಾರಕಾಸುರನ ಮಕ್ಕಳಾದ ತಾರಕಾಕ್ಷ, ಕಮಲಾಕ್ಷ, ಮತ್ತು ವಿದ್ಯುನ್ಮಾಲಿ ಎಂಬ ರಾಕ್ಷಸರು ಆಳುತ್ತಿದ್ದರು. ಈ ಪುರಗಳು ಒಂದು ಚಿನ್ನದ್ದು, ಒಂದು ಬೆಳ್ಳಿಯದು. ಮತ್ತು ಒಂದು ಕಬ್ಬಿಣದ ಕೋಟೆಯನ್ನು ಹೊಂದಿದ್ದವು. ಇವು ಅಭೇದ್ಯವಾಗಿದ್ದವು. ಇಲ್ಲಿನ ರಾಕ್ಷಸರ ಕಾಟ ವಿಪರೀತವಾದಾಗ ಇವರನ್ನು ಸಂಹರಿಸಲು ಎಲ್ಲ ದೇವತೆಗಳು ಶಿವನನ್ನೇ ಮೊರೆಹೊಕ್ಕರು. ಅವರೆಲ್ಲ ತಮ್ಮ ಶಕ್ತಿಯ ಅರ್ಧಭಾಗ ಕೊಟ್ಟರು. ಅಂದಿನಿಂದ ಶಿವನಿಗೆ ಮಹಾದೇವನೆಂದು ಹೆಸರಾಯಿತು. ಇದರೊಂದಿಗೆ ದೇವತೆಗಳೂ ಶಿವನಿಗೆ ನೆರವಾದರು. ವಿಷ್ಣು ಧನುಸ್ಸಾದ. ಸಾವಿತ್ರಿ ಧನುವಿನ ದಾರವಾಯಿತು. ಸೂರ್ಯ-ಚಂದ್ರರು ರಥದಗಾಲಿಗಳಾದರು, ಬ್ರಹ್ಮನು ರಥದ ಸಾರತಿಯಾದ. ಸೋಮ. ಅಗ್ನಿ. ವೇದಗಳೇ ಬಾಣದತುದಿಗಳಾಗಿ ತ್ರಿಪುರಗಳನ್ನು ದಹಿಸಿದವು.

ಇಲ್ಲಿನ ಚಿತ್ರದಲ್ಲಿ ಕುದುರೆಗಳಿಂದ ಎಳೆಯಲ್ಪಟ್ಟ ರಥದಲ್ಲಿ ಬ್ರಹ್ಮನು ಸಾರಥಿಯಾಗಿದ್ದಾನೆ. ಆದಿಶೇಷ ಸರ್ಪವು ಕುದುರೆಗಳಿಗೆ ಬಿಗಿದ ಹಗ್ಗವಾಗಿದೆ. ಸೂರ್ಯ-ಚಂದ್ರರು ಗಾಲಿಗಳಾಗಿದ್ದಾರೆ. ರಥದಲ್ಲಿ ಚಿಕ್ಕದಾದ ಸ್ತ್ರೀ ಆಕೃತಿಯು ಇದ್ದು ಪಾರ್ವತಿಯನ್ನು ಪ್ರತಿನಿಧಿಸುತ್ತಲಿದೆ. ಶಿವನು ರುಂಡಮಾಲೆ ಧರಿಸಿದ್ದು ಎಡಗಾಲಿನ ಮೊಣಕಾಲೂರಿ ಬಲಗಾಲನ್ನು ಎತ್ತಿಟ್ಟು ಆಕರ್ಷಕ ಶೈಲಿಯಲ್ಲಿ ಬಾಣ ಬಿಡುತ್ತಿದ್ದಾನೆ. ಚತುರ್ಮುಖ ಬ್ರಹ್ಮ ಮತ್ತು ಶಿವ ಇಬ್ಬರೂ ಬಿಳಿ ವರ್ಣದಲ್ಲಿ ಚಿತ್ರಿಸಿದ್ದಾರೆ. ಗಾಲಿಗಳಾದ ಸೂರ್ಯ-ಚಂದ್ರರು ನೀಲಿ ಮತ್ತು ಹಳದಿ ವರ್ಣದಲ್ಲಿ ಚಿತ್ರಿಸಿದ್ದು, ಗಾಲಿಗಳಿಗೆ ಕಣ್ಣು, ಮೂಗು. ಬಾಯಿಗಳನ್ನು ರಚಿಸಿದ್ದಾರೆ. ಆದಿಶೇಷನ ಐದು ಹೆಡೆಗಳು ಚಲನೆಯಿಂದ ಕೂಡಿದಂತೆ ಭಾಸವಾಗುತ್ತವೆ. ಅದರ ಮೈಯಲ್ಲಿರುವ ಕಂದು. ಕಪ್ಪು. ಚುಕ್ಕೆಗಳು ಸರ್ಪದ ಜೀವಂತಿಕೆಯ ಅನುಭವ ತರುತ್ತವೆ. ಕುದುರೆಗಳು ಹಿಂಗಾಲನ್ನು ಮೀಟಿಕೊಂಡು ಮುಂಗಾಲನ್ನು ಮೇಲೆತ್ತಿ ರಭಸದಿಂದ ಮುನ್ನುಗ್ಗುತ್ತಿವೆ. ತ್ರಿಪುರದಲ್ಲಿರುವ ರಾಕ್ಷಸರು ಮೂರು ವೃತ್ತಗಳಲ್ಲಿ ರಚನೆಯಾಗಿದ್ದಾರೆ. ಮೂರು ವೃತ್ತಗಳನ್ನು ನೀಲಿ ವರ್ಣದಿಂದ ತುಂಬಿಸಿದ್ದು ಅವುಗಳಲ್ಲಿ ಕಂದು ಮೈ ಬಣ್ಣದ ರಾಕ್ಷಸರನ್ನು ಚಿತ್ರಿಸಿದ್ದಾರೆ. ಕೊರಳಲ್ಲಿ ಮಾಲೆಧರಿಸಿ. ಮೈತುಂಬ ವಿಭೂತಿ ಹಚ್ಚಿಕೊಂಡು ಕೈಯಲ್ಲಿ ಖಡ್ಗ ಹಿಡಿದುಕೊಂಡು ಮುನ್ನುಗ್ಗುತ್ತಿದ್ದಾರೆ. ದುಂಡಾದ ಹೊಳೆಯುವ ಕಣ್ಣುಗಳು. ದಪ್ಪ ಮೀಸೆ. ಕೋರೆ ಹಲ್ಲುಗಳು ಅವರ ಭೀಕರತೆಯನ್ನು ಸೂಚಿಸುತ್ತಿವೆ. ವರ್ಣವಿನ್ಯಾಸ, ವರ್ಣಹೊಂದಾಣಿಕೆ ಚಿತ್ರ ಸಂಯೋಜನೆ ಇಲ್ಲಿ ಅತ್ಯಂತ ಉತ್ತಮ ಮಟ್ಟದಲ್ಲಿವೆ.

೧೧. ಕರ್ಣಾರ್ಜುನರ ಯುದ್ಧದ ದೃಶ್ಯ : ಹೊರ ಕೋಣೆಯ ಇನ್ನೊಂದು ಬೋದಿಗೆಯಲ್ಲಿ ಮಹಾಭಾರತ ಯುದ್ಧಕ್ಕೆ ಸಂಬಂಧಿಸಿದ ಕರ್ಣಾರ್ಜುನರ ಕಾಳಗದ ಚಿತ್ರ ರಚಿಸಲಾಗಿದೆ. ಇಲ್ಲಿನ ಚಿತ್ರದಲ್ಲಿ ಅರ್ಜುನನ ರಥವನ್ನು ಶ್ರೀಕೃಷ್ಣನು ನಡೆಸುತ್ತಿದ್ದಾನೆ. ಕೃಷ್ಣನು ನಾಲ್ಕು ಕೈಗಳನ್ನು ಹೊಂದಿದವನಾಗಿದ್ದು ಎರಡು ಕೈಗಳಿಂದ ರಥ ನಡೆಸುತ್ತಿದ್ದರೆ, ಇನ್ನೆರಡು ಕೈಗಳಿಂದ ಶಂಖ, ಚಕ್ರಗಳನ್ನು ಹಿಡಿದುಕೊಂಡಿದ್ದಾನೆ. ಎಡಗೈಯಿಂದ ಕರ್ಣನೆಡೆಗೆ ಬೆರಳುಮಾಡಿ ತೋರಿಸುತ್ತ ಅರ್ಜುನನಿಗೆ ಬಾಣಬಿಡಲು ಸನ್ನೆಮಾಡುತ್ತಿರುವಂತಿದೆ. ನೀಲವರ್ಣದ ಕೃಷ್ಣನು ಕಿರೀಟಧರಿಸಿದ್ದು ತೆಳುಕೆಂಪು ವರ್ಣದ ಧೋತ್ರ ಚಿತ್ರಿಸಲಾಗಿದೆ.

ರಥದಲ್ಲಿರುವ ಅರ್ಜುನನು ತನ್ನ ಗಾಂಢೀವದಿಂದ ಕರ್ಣನಿಗೆ ಬಾಣಬಿಡುತ್ತಿದ್ದಾನೆ. ಬಲಗಾಲನ್ನು ನೆಲಕ್ಕೆ ಊರಿ ಬಿಲ್ಲಿನದಾರವನ್ನು ವೇಗದಿಂದ ಹಿಂದಕ್ಕೆ ಜಗ್ಗಿ ಬಾಣಬಿಡುತ್ತಿರುವ ಅರ್ಜುನನ ಶೈಲಿ ಚೇತೋಹಾರಿಯಾಗಿದೆ. ಅರ್ಜುನನು

ತೆಳುಹಳದಿ ವರ್ಣದ ಪಂಚೆತೊಟ್ಟಿದ್ದು ಕಂದುವರ್ಣದ ಉತ್ತರೀಯ ನಡಕ್ಕೆ ಕಟ್ಟಿದೆ. ರಥದಲ್ಲಿ ಶಂಖವೂ ಇದೆ. ರಥದ ಮೇಲೆ ಆಂಜನೇಯನು ಧ್ವಜವನ್ನುಗಟ್ಟಿಯಾಗಿ ಹಿಡಿದುಕೊಂಡು ಕುಳಿತಿದ್ದು. ಈತನ ಬಣ್ಣವೂ ಕೃಷ್ಣನ ಬಣ್ಣದ ಹಾಗೆ ನೀಲವಾಗಿದೆ. ಈ ಮಠದಲ್ಲಿ ರಚಿಸಿದ ಎಲ್ಲ ಹನುಮಂತನ ಚಿತ್ರಗಳಲ್ಲೂ ಆತನ ಮೈ ಬಣ್ಣವನ್ನು ನೀಲವಾಗಿಯೇ ರಚಿಸಲಾಗಿದೆ. ಬಹುಶ ಆತ ರಾಮ ಭಕ್ತ ಎಂದು ಸೂಚಿಸಲು ರಾಮನ ವರ್ಣವಾದ ನೀಲವರ್ಣದಲ್ಲೇ ಆತನನ್ನು ಚಿತ್ರಿಸಿರಬಹುದು. ಬಿಳಿವರ್ಣದ ಕುದುರೆಗಳು ವೇಗದಿಂದ ಓಡುತ್ತಿರುವಂತೆ ಕಾಣುತ್ತಿವೆ.

ಅರ್ಜುನನಿಗೆ ಎದುರಾಗಿ ಕರ್ಣನು ರಥದಲ್ಲಿ ಯುದ್ಧಮಾಡುತ್ತಿದ್ದು. ಕರ್ಣನ ರಥವನ್ನು ಶಲ್ಯಮಹಾರಾಜನು ನಡೆಸುತ್ತಿದ್ದಾನೆ. ಕೃಷ್ಣನು ಅರ್ಜುನನಿಗೆ ಯುದ್ಧ ಸಂಬಂಧಿ ಸಲಹೆ ಸೂಚನೆಗಳನ್ನು ಕೊಡುತ್ತಿರುವಂತೆ. ಶಲ್ಯನು ಕರ್ಣನಿಗೆ ಯಾವುದೇ ಸಲಹೆ ಸೂಚನೆ ಕೊಡದೇ. ಕರ್ಣನ ಕಡೆಗೆ ತಿರುಗಿಯೂ ನೋಡದೆ ತನ್ನ ಪಾಡಿಗೆ ತಾನು ರಥ ನಡೆಸುತ್ತಿದ್ದಾನೆ. ಶಲ್ಯನ ಸಲಹೆಯನ್ನು ಕರ್ಣ ತಿರಸ್ಕರಿಸಿದಾಗ ಇಬ್ಬರಿಗೂ ಮನಸ್ತಾಪ ಉಂಟಾಗಿ ನಾನೆಂದೂ ನಿನಗೆ ಸಲಹೆಕೊಡಲಾರೆ ಎಂದು ಶಲ್ಯಪ್ರತಿಜ್ಞೆ ಮಾಡಿರುತ್ತಾನೆ. ಅವರಿಬ್ಬರಲ್ಲಿರುವ ಮನಸ್ತಾಪದ ಭಾವನಾತ್ಮಕ ಚಿತ್ರ ಇಲ್ಲಿ ಉತ್ತಮವಾಗಿ ಮೂಡಿಬಂದಿದೆ. ಕರ್ಣನು ಬಾಣ ಬಿಡುತ್ತಿರುವ ಭಂಗಿಯಲ್ಲಿ ಆತನ ಬಲಗೈಯನ್ನು ಚಿತ್ರಿಸಿರುವ ರೀತಿ, ವಾಸ್ತವದಲ್ಲಿ ಹಾಗಿರದೇ ಇದ್ದರೂ ಚಿತ್ರದ ವೇಗಕ್ಕೆ ಅದು ಸಹಾಯ ಮಾಡುತ್ತಿದೆ. ಕರ್ಣನ ರಥದ ಮೇಲಿನ ಧ್ವಜದಲ್ಲಿ ಆನೆಯ ಮುಖದ ಚಿತ್ರವಿದೆ.

ಕರ್ಣ ಅರ್ಜುನ ಇಬ್ಬರ ರಥಗಳೂ ಒಂದೇ ರೀತಿಯಲ್ಲಿದ್ದರೂ ಅರ್ಜುನನ ರಥ ಹೆಚ್ಚು ಸುಂದರವಾಗಿದೆ. ಈ ರಥಗಳ ಗಾಲಿಗಳು ಆರು ಹಲ್ಲುಗಳನ್ನು ಹೊಂದಿದ್ದು ಅವುಗಳ ದಪ್ಪಳತೆ ಕಡಿಮೆ ಇದೆ ಎನಿಸುತ್ತದೆ. ಯುದ್ಧ ಮಾಡುವ ವ್ಯಕ್ತಿಯು ರಥದಲ್ಲಿ ಇದ್ದು ಅಲ್ಲಿ ಆತನಿಗೆ ಸಾಕಾಗುವಷ್ಟು ಮಾತ್ರ ಸ್ಥಳವಿದೆ. ಸಾರಥಿಯು ಮುಂಚಾಚಿದ ಭಾಗದಲ್ಲಿ ಕುಳಿತುಕೊಂಡಿದ್ದಾನೆ. ಯುದ್ಧಮಾಡುವ ವ್ಯಕ್ತಿ ಮತ್ತು ಸಾರಥಿ ಇಬ್ಬರಿಗೂ ಪ್ರತ್ಯೇಕವಾಗಿ ಮೇಲೆ ಛತ್ರಿಯ ಹಾಗೆ ಕಮಾನಿನ ಭಾಗದಿಂದ ನೆರಳು ಮಾಡಲಾಗಿದೆ. ರಥಗಳಲ್ಲಿ ಹಿಂದಿನ ಭಾಗದಲ್ಲಿ ಲೋಡಿನಹಾಗಿರುವ ಆಕೃತಿಗಳಿದ್ದು ಅವು ರಥದ ಹಿಂಭಾಗದ ತಡೆಗಳಾಗಿವೆ. ಈ ಚಿತ್ರದಲ್ಲಿ ಹಿನ್ನೆಲೆವರ್ಣವು ಕೆಂಪಾಗಿದೆ. ಈ ಯುದ್ಧ ದೃಶ್ಯದಲ್ಲಿ ಎರಡೂ ಬಾಣಗಳ ಸುರಿಮಳೆಯೇ ಆಗುತ್ತಲಿದೆ. ಹೀಗೆ ಹಾರಿಬರುತ್ತಲಿರುವ ಬಾಣಗಳೂ ವೈವಿಧ್ಯತೆಯಿಂದ ಕೂಡಿವೆ. ಈ ಬಾಣಗಳಿಂದ ಕರ್ಣಾರ್ಜುನರ ಯುದ್ಧದ ಭೀಕರತೆಯನ್ನು ಕಣ್ಣಿಗೆ ಕಟ್ಟುವಂತೆ ಇಲ್ಲಿ ಚಿತ್ರಿಸಲಾಗಿದೆ. ಮಠದ ಪ್ರವೇಶದ್ವಾರದ ಹೊರಭಾಗದಲ್ಲಿ ಮೇಲ್ಛಾವಣಿಯ ಚಾಚುಭಾಗದಲ್ಲಿನ ಕಟ್ಟಿಗೆಯ ಫಲಕದ ಮೇಲೆಯೂ ವರ್ಣಚಿತ್ರಗಳನ್ನು ರಚಿಸಲಾಗಿದೆ. ಬಲಗಡೆಗೆ ಮನ್ಮಥನು ಶಿವನ ತಪಸ್ಸನ್ನು ಭಂಗಪಡಿಸುವ ಚಿತ್ರ, ಎಡಗಡೆಗೆ ಶಿವ ಪುರಾಣಕ್ಕೆ ಸಂಬಂಧಿಸಿದ ಘಟನೆಗಳು ಚಿತ್ರಿಸಿವೆ.

೧೨. ಮನ್ಮಥನು ಶಿವನ ತಪಸ್ಸು ಭಂಗ ಪಡಿಸುವುದು : ಈ ಚಿತ್ರದಲ್ಲಿ ಶಿವನು ತಪಸ್ಸು ಮಾಡುತ್ತಿದ್ದು, ಪದ್ಮಾಸನ ಹಾಕಿ ಕುಳಿತಿದ್ದಾನೆ. ನಾಲ್ಕು ಕೈಗಳನ್ನು ಹೊಂದಿದ ಶಿವನಿಗೆ ಮೀಸೆಯನ್ನೂ ಚಿತ್ರಿಸಲಾಗಿದೆ. ಶಿವನ ಜಟೆಯಿಂದ ಧಾರಾಕಾರವಾಗಿ ಗಂಗೆ ಸುರಿಯುತ್ತಲಿದೆ. ಶಿವನ ಮುಂದೆ ರತಿದೇವಿಯು ನಾಟ್ಯಮಾಡುತ್ತಿದ್ದಾಳೆ. ಮನ್ಮಥ ರತಿದೇವಿಯರ ನಾಟ್ಯದಿಂದ ಶಿವನ ತಪಸ್ಸು ಭಂಗಗೊಳ್ಳದಾದಾಗ ಹೂಬಾಣಗಳನ್ನು ಬಿಡಲು ತೊಡಗಿದ್ದಾನೆ. ಗಿಳಿಗಳಿಂದ ಎಳೆಯಲ್ಪಟ್ಟ ರಥದಲ್ಲಿರುವ ಮನ್ಮಥನು ಕಬ್ಬಿನ ಜಲ್ಲೆಯನ್ನೇ ಬಿಲ್ಲನ್ನಾಗಿ ಮಾಡಿಕೊಂಡಿದ್ದಾನೆ. ಚಂದ್ರ ಮತ್ತು ವಾಯು ಆತನ ಕೆಲಸಕ್ಕೆ ಸಹಾಯಕರಾಗಿದ್ದು. ಶಿವನು ತಪಸ್ಸು ಮಾಡುತ್ತಿರುವ ಸ್ವಲ್ಪದೂರದಲ್ಲೇ ಹೇಮಕೂಟ ಪರ್ವತವಿದೆ ಅಲ್ಲಿ ಮುನಿಯೊಬ್ಬನು ತಪಸ್ಸಿನಲ್ಲಿ ತೊಡಗಿದ್ದಾನೆ. ಪರ್ವತದಲ್ಲಿ ಪ್ರಾಣಿಗಳು ಓಡಾಡುತ್ತಿವೆ. ಮಠದ ಒಳಭಾಗದ ಎಲ್ಲ ಚಿತ್ರಗಳ ಹಿನ್ನೆಲೆಯನ್ನು ಒಂದೇ ತೆರನಾದ ಕೆಂಪು ವರ್ಣದ ಹಿನ್ನೆಲೆಯಲ್ಲಿ ರೂಪಿಸಿದ್ದರೆ ಹೊರಭಾಗದ ಈ ಚಿತ್ರಗಳ

ಓನ್ನೆಲೆಯನ್ನು ಮಾತ್ರ ನೀಲವರ್ಣದಿಂದ ರಚಿಸಿದ್ದಾರೆ. ಚಿತ್ರಗಳು ಪೂರ್ತಿ ಹೊರಭಾಗದಲ್ಲಿ ವಾತಾವರಣಕ್ಕೆ ಸದಾ ತೆರೆದು ಕೊಂಡಿರುವುದರಿಂದ ವರ್ಣಗಳು ಉದುರಿಹೋಗಿ ಚಿತ್ರಗಳು ಬಹಳ ಹಾನಿಗೊಳಗಾಗಿವೆ. ಕೆಲವು ಚಿತ್ರಗಳಂತೂ ಗುರುತಿಸಲೂ ಆಗದಷ್ಟು ಹಾನಿಗೊಂಡಿವೆ. ಹಿನ್ನೆಲೆಗೆ ಲೇಪಿಸಿದ ನೀಲವರ್ಣವು ಉಳಿದುಕೊಂಡಿದ್ದು ಚಿತ್ರಗಳಿಗೆ ಲೇಪಿಸಿದ ವರ್ಣವೆಲ್ಲ ಹೋಗಿ ಬರೀ ಬಿಳಿ ಆಕೃತಿಗಳಾಗಿ ಮಾತ್ರ ಕೆಲವು ಕಂಡರೆ. ಇನ್ನೂ ಕೆಲವು ಚಿತ್ರಗಳಲ್ಲಿ ಚಿತ್ರಗಳ ವರ್ಣದ ಜೊತೆಗೆ ಹಿನ್ನೆಲೆಯೂ ಉದುರಿಹೋಗಿ ಹಿಂದಿನ ಕಟ್ಟಿಗೆಯ ಫಲಕ ಕಂಡು ಬರುತ್ತಲಿದೆ.

ಮತ್ತೊಂದು ಫಲಕದಲ್ಲಿ ಶಿವಪುರಾಣಕ್ಕೆ ಸಂಬಂಧಿಸಿದ ಚಿತ್ರಗಳನ್ನು ರಚಿಸಲಾಗಿದೆ. ಚಿತ್ರಗಳು ತೀರ ನಾಶವಾಗಿದ್ದರಿಂದ ಯಾವ ಘಟನೆಯನ್ನು ಕುರಿತು ಹೇಳುತ್ತವೆ ಎನ್ನುವುದಾಗಲಿ, ಆಕೃತಿಗಳು ಯಾರನ್ನು ಪ್ರತಿನಿಧಿಸುತ್ತವೆ ಎಂದು ಕೂಡಾ ತಿಳಿದುಬರುವುದಿಲ್ಲ. ಶಿವ ಮತ್ತು ವಿಷ್ಣು ತಪಸ್ಸಿನಲ್ಲಿ ತೊಡಗಿರುವುದು, ಚತುರ್ಮುಖಬ್ರಹ್ಮ, ಕೈಯಲ್ಲಿ ರುದ್ರಾಕ್ಷಿ ಹಿಡಿದುಕೊಂಡಿರುವ ಒಬ್ಬಳು ಮಹಿಳೆ. ಜಪದಲ್ಲಿನಿರತ ಋಷಿ ಮುಂತಾದ ಕೆಲವು ಚಿತ್ರಗಳು ಅಸ್ಪಷ್ಟವಾಗಿ ಕಂಡುಬರುತ್ತವೆ. ಇಲ್ಲಿಯೂ ಹಿನ್ನೆಲೆವರ್ಣ ನೀಲಿಯಾಗಿದೆ.

***II. ಮಠದ ಸ್ವಾಮಿಗಳಿಗೆ ಸಂಬಂಧಿಸಿದ ಚಿತ್ರ :*** ಇಲ್ಲಿನ ಮತ್ತೊಂದು ಫಲಕದ ಮೇಲೆ ಮಠದ ಸ್ವಾಮಿಗಳಿಗೆ ಸಂಬಂಧ ಪಟ್ಟ ಚಿತ್ರ ಒಂದಿದೆ. ಮಠದ ಪಟ್ಟದ ಸ್ವಾಮಿಗಳು ತಮ್ಮ ಆಸನದಲ್ಲಿ ಕುಳಿತುಕೊಂಡಿದ್ದಾರೆ. ಇಬ್ಬರು ಚೋಪದಾರರು ಸಂಗನಬಸಪ್ಪ ಎಂಬ ವ್ಯಕ್ತಿಯನ್ನು ಕರೆದುಕೊಂಡು ಬಂದು ಪಟ್ಟದ ಸ್ವಾಮಿಗಳ ಎದುರಿಗೆ ನಿಲ್ಲಿಸಿದ್ದಾರೆ. ಸಂಗನಬಸಪ್ಪನು ಸ್ವಾಮಿಗಳಿಗೆ ಬಗ್ಗಿ ಕೈ ಮುಗಿಯುತ್ತಿದ್ದಾನೆ. ಆತನು ಬಿಳಿ ಧೋತ್ರ ಧರಿಸಿದ್ದು ಮೈತುಂಬ ವಿಭೂತಿ ಬಳಿದುಕೊಂಡಿದ್ದಾನೆ. ಕೊರಳಲ್ಲಿ ಇಷ್ಟಲಿಂಗವಿದೆ. ಸ್ವಾಮಿಗಳು ಕಾವಿ ಅಂಗಿಯನ್ನು ತೊಟ್ಟಿದ್ದು ಹಳದೀ ವರ್ಣದ ಪಂಚೆಯುಟ್ಟಿದ್ದಾರೆ. ಬಿಳಿವರ್ಣದ ಕೆಂಪು ಅಂಚಿನ ಪೇಟಾ ತಲೆಯಲ್ಲಿದೆ. ಚೋಪದಾರರು ಕಪ್ಪು ಬಣ್ಣದ, ಮೊಣಕಾಲುವರೆಗೆ ಇಳಿಬಿದ್ದ ಉದ್ದ ತೋಳಿನ ಷರಾಯಿಯಂತಹ ಅಂಗಿಯನ್ನು ತೊಟ್ಟಿದ್ದಾರೆ. ನಡುವಿಗೆ ಹಳದಿ ಕೆಂಪು ಮಿಶ್ರಿತ ಶಲ್ಯೆಯನ್ನು ಚುಂಗುಬಿಟ್ಟು ಬಿಗಿದು ಕಟ್ಟಿ, ತಲೆಗೆ ಸ್ವಾಮಿಗಳಂತಹವೇ ಟೊಪ್ಪಿಗೆ ಧರಿಸಿದ್ದಾರೆ. ಕೈಯಲ್ಲಿ ವಿಶಿಷ್ಟ ಬಗೆಯ ದಂಡವನ್ನು ಹಿಡಿದಿದ್ದಾರೆ. ಬಹುಶ ಇದು ಈ ಚೋಪದಾರರ ಸಮವಸ್ತ್ರವಾಗಿರಬಹುದು. ಈ ಚಿತ್ರದ ಎಡಗಡೆಗೆ ಒಂದು ಪೀಠದಲ್ಲಿ ಮೂವರು ವ್ಯಕ್ತಿಗಳು ಕುಳಿತುಕೊಂಡು ಯಾವುದೋ ವಿಷಯದ ಚರ್ಚೆಯಲ್ಲಿ ತೊಡಗಿದ್ದಾರೆ. ಇವರಲ್ಲಿ ಮಧ್ಯದವರು ಬಸಲಿಂಗಪ್ಪನವರು, ಬಲಗಡೆಯವರು ಕೃಷ್ಣಾಚಾರ್ಯರು, ಎಡಗಡೆಯವರು ಡಾಕಪ್ಪ ದೇಸಾಯರು ಎಂದು ಆ ಚಿತ್ರದಲ್ಲೇ ಬರೆದಿದ್ದಾರೆ. ಎಡಬಲದಲ್ಲಿರುವ ಡಾಕಪ್ಪ ದೇಸಾಯಿ ಮತ್ತು ಕೃಷ್ಣಾಚಾರಿ ಇವರು ಧೋತ್ರಉಟ್ಟು ತಲೆಗೆ ಪೇಟಾ ಸುತ್ತಿಕೊಂಡಿದ್ದು ಅಂಗಿಯನ್ನು ಧರಿಸದೇ ಮೈ ತುಂಬ ನಾಮವನ್ನು ಧರಿಸಿದ್ದಾರೆ. ಮಧ್ಯದಲ್ಲಿರುವ ಬಸಲಿಂಗಪ್ಪನವರು ತಲೆಗೆ ಪೇಟಾಸುತ್ತಿ ಶುಭ್ರವಾದ ಧೋತ್ರ ಉಟ್ಟು ಉದ್ದತೋಳಿನ ಅಂಗಿಯನ್ನು ತೊಟ್ಟಿದ್ದಾರೆ. ಬಹುಶ ಇವರು ಮತವಿಚಾರದ ಚರ್ಚೆಯಲ್ಲಿ ತೊಡಗಿರಬಹುದು. ಕೃಷ್ಣಾಚಾರಿ ಮತ್ತು ಡಾಕಪ್ಪ ದೇಸಾಯಿ ಇಬ್ಬರೂ ವೈಷ್ಣವ ಧರ್ಮಾವಲಂಬಿಯಾಗಿದ್ದರೆ. ಬಸವಲಿಂಗಪ್ಪನವರು ಶೈವ ಮತಾವಲಂಬಿಯಾಗಿದ್ದಾರೆ, ಎಂದು ಚಿತ್ರಗಳನ್ನು ನೋಡಿದೊಡನೇ ಮನದಟ್ಟಾಗುತ್ತದೆ. ಬಹುಶ ತಮ್ಮ ತಮ್ಮ ಮತವಿಚಾರಗಳ ಶ್ರೇಷ್ಠತೆಯಬಗ್ಗೆ ಚರ್ಚೆ ನಡೆಯುತ್ತಿರಬೇಕು. ಇಲ್ಲಿನ ವರ್ಣ ವಿನ್ಯಾಸವು ಪ್ರಖರವೆನಿಸದೆ ಕಣ್ಣಿಗೆ ಸೌಮ್ಯತೆಯ ಅನುಭವ ಕೊಡುತ್ತದೆ.

**೨. ಧಾರ್ಮಿಕೇತರ ಚಿತ್ರಗಳು :** ಧಾರ್ಮಿಕೇತರ ಚಿತ್ರಗಳಲ್ಲಿ ಅಧ್ಯಯನಕ್ಕಾಗಿ ಮತ್ತೆ ಕೆಳಗಿನಂತೆ ಮೂರು ಬಗೆಯಲ್ಲಿ ವಿಂಗಡಿಸಬಹುದು.

I. ಐತಿಹಾಸಿಕ ಚಿತ್ರಗಳು

II. ಕಾಲ್ಪನಿಕ ಪಕ್ಷಿಗಳ ಚಿತ್ರಗಳು

III. ಹೂಬಳ್ಳಿ ನಕ್ಷಾ ಚಿತ್ರಗಳು

*I. ಐತಿಹಾಸಿಕ ಚಿತ್ರಗಳು :* ಐತಿಹಾಸಿಕ ಚಿತ್ರಗಳಲ್ಲಿ ಸಂಗೊಳ್ಳಿರಾಯಣ್ಣನಿಗೆ ಶಿಕ್ಷೆಕೊಡುವ ಚಿತ್ರ, ರಾಣಿಯ ಮೆರವಣಿಗೆಯ ಚಿತ್ರಗಳು ಒಳಗೊಳ್ಳುತ್ತವೆ. ಆನೆಯಮೇಲೆ ಅಂಬಾರಿಯಲ್ಲಿ ಮೆರವಣಿಗೆ ಹೊರಟಿರುವ ಈ ರಾಣಿಯ ಚಿತ್ರ ಬಹುಶ ಕಿತ್ತೂರು ಸಂಸ್ಥಾನದ ಚನ್ನಮ್ಮರಾಣಿಯದಾಗಿರಬಹುದು. ಈ ಚಿತ್ರದ ಪಕ್ಕವೇ ಚನ್ನಮ್ಮರಾಣಿಯ ನಂಬಿಗಸ್ಥ ಸೇನಾನಿಯಾದ ಸಂಗೊಳ್ಳಿರಾಯಣ್ಣ ಚಿತ್ರವಿರುವುದರಿಂದ ರಾಣಿಯ ಮೆರವಣಿಗೆಯ ಚಿತ್ರ ಕಿತ್ತೂರು ಚನ್ನಮ್ಮರಾಣಿಯದಾಗಿರಬಹುದಾಗಿದೆ. ಅಲ್ಲದೇ ಕೆಲವು ಜನರ ಹೇಳಿಕೆಯ ಪ್ರಕಾರ ಈ ಮಠದ ಮರದ ಫಲಕದ ಚಿತ್ರಗಳು ಮೂಲದಲ್ಲಿ ಕಿತ್ತೂರು ಅರಮನೆಯಲ್ಲಿ ಇದ್ದು. ಅವುಗಳನ್ನು ಇಲ್ಲಿಗೆ ತಂದು ಜೋಡಿಸಲಾಗಿದೆ ಎನ್ನುವ ವಾದವೂ ಇದೆ. ಇದರ ಬಗ್ಗೆ ಇನ್ನೂ ಅಧ್ಯಯನ ನಡೆಯಬೇಕಾಗಿದೆ. ಇಂತಹ ಕೆಲವು ಅಂಶಗಳ ಮೇಲಿಂದ ಈ ರಾಣಿಯ ಮೆರವಣಿಗೆ ಚಿತ್ರವನ್ನು ಕಿತ್ತೂರು ಚನ್ನಮ್ಮರಾಣಿಗೆ ಸಂಬಂಧಿಸಿದ್ದೆಂದು ಸದ್ಯಕ್ಕೆ ಊಹಿಸಬಹುದು. ಇಲ್ಲಿನ ಐತಿಹಾಸಿಕ ಚಿತ್ರಗಳಲ್ಲಿ ಒಳಗೊಳ್ಳುವ ಸಂಗೊಳ್ಳಿರಾಯಣ್ಣನ ಚಿತ್ರ ಮತ್ತು ರಾಣಿಯ ಮೆರವಣಿಗೆ ದೃಶ್ಯಗಳನ್ನು ಒಂದೊಂದಾಗಿ ನೋಡಬಹುದು.

೧. ಸಂಗೊಳ್ಳಿರಾಯಣ್ಣನಿಗೆ ಶಿಕ್ಷೆಕೊಡುತ್ತಿರುವ ದೃಶ್ಯ : ಫಲಕ ಒಂದರ ಮೇಲೆ ಸಂಗೊಳ್ಳಿರಾಯಣ್ಣನಿಗೆ ಸಂಬಂಧಿಸಿದ ಘಟನೆಗಳನ್ನು ಚಿತ್ರಸಲಾಗಿದೆ. ಎಡಗಡೆ ಇರುವ ದೃಶ್ಯದಲ್ಲಿ ಕುರ್ಚಿಯಲ್ಲಿ ಕುಳಿತ ಬ್ರಿಟೀಷ ಅಧಿಕಾರಿಗಳಿಬ್ಬರು ಸಂಗೊಳ್ಳಿರಾಯಣ್ಣನನ್ನ ಹಿಡಿದುಕೊಡುವಂತೆ ಸ್ಥಳೀಯ ಮುಖಂಡರನ್ನು ಮನವೊಲಿಸುತ್ತಿದ್ದಾರೆ. ಬಲಗಡೆಗಿರುವ ದೃಶ್ಯಗಳಲ್ಲಿ ರಾಯಣ್ಣನಿಗೆ ಶಿಕ್ಷೆಕೊಡುತ್ತಿರುವುದೂ. ಆತನ ತಂದೆತಾಯಿಗಳು ಆರ್ತಭಾವದಿಂದ ಇದನ್ನು ವೀಕ್ಷಿಸುತ್ತಿರುವುದೂ ರಚನೆಯಾಗಿದೆ. ಸಂಗೊಳ್ಳಿರಾಯಣ್ಣನ ಎರಡೂ ಕೈಗಳನ್ನು ಹಿಂದೆ ಹಗ್ಗದಿಂದ ಕಟ್ಟಿ ನಡಕ್ಕೆ ತೋಳುಗಳಿಗೆ ಹಗ್ಗಬಿಗಿದು ಬಂಧಿಸಿ. ಆ ಹಗ್ಗವನ್ನು ಒಬ್ಬ ಪೋಲಿಸ್ ಹಿಡಿದುಕೊಂಡಿದ್ದಾನೆ. ಇನ್ನೊಂದು ಕೈಯಿಂದ ಬಡಿಗೆ ತೆಗೆದುಕೊಂಡು ರಾಯಣ್ಣನನ್ನು ಹೊಡೆಯುತ್ತಲಿದ್ದಾನೆ. ಮತ್ತೊಬ್ಬನು ರಾಯಣ್ಣನ ಬಟ್ಟೆಗಳನ್ನು ಕಳಚಿ ಬರಿ ಚಡ್ಡಿಯಮೇಲೆ ನಿಲ್ಲಿಸಿ ಆತನ ತಲೆಯನ್ನು ಬೋಳಿಸುತ್ತಿದ್ದಾನೆ. ಇಂತಹ ಶಿಕ್ಷಾ ವಿಧಾನವನ್ನು ಕಣ್ಣಾರೆ ಕಂಡ ಆತನ ತಂದೆ ತಾಯಿಗಳು ನೊಂದುಕೊಂಡು ಆತನನ್ನು ಬಿಡುವಂತೆ ಪೋಲಿಸರಲ್ಲಿ ಬೇಡುತ್ತಿರಬೇಕು. ಇಬ್ಬರೂ ಕೈಮುಂದೆ ಮಾಡಿ ಶಿಕ್ಷೆಯನ್ನು ನಿಲ್ಲಿಸಲು ಕೇಳುತ್ತಿದ್ದಾರೆ. ರಾಣ್ಣನ ತಂದೆಯು ಬಿಳೀ ವಸ್ತ್ರವೊಂದನ್ನು ಚಡ್ಡಿಯಹಾಗೆ ಧರಿಸಿದ್ದು ತಲೆಗೆ ಬಿಳಿರುಮಾಲು ಸುತ್ತಿದ್ದಾನೆ. ಅಂಗಿಯನ್ನು ಧರಿಸಿಲ್ಲ. ಮೈಗೆ ವಿಭೂತಿಯನ್ನು ಬಳಿದುಕೊಂಡಿದ್ದಾನೆ. ಎಡ ಹೆಗಲ ಮೇಲೆ ಕಂಬಳಿಯೊಂದನ್ನು ಹೊದೆದುಕೊಂಡು ಬಲಗೈಯಲ್ಲಿ ಬಡಿಗೆ ಹಿಡಿದಿದ್ದಾನೆ. ಆತನ ತಾಯಿ ಕೂಡಾ ಹಣೆಯಲ್ಲಿ ವಿಭೂತಿ ಧರಿಸಿದ್ದಾಳೆ. ತಲೆಯು ಬೆಳ್ಳಗಾಗಿ ಮಾಗಿದ ವಯಸ್ಸನ್ನು ತೋರಿಸುತ್ತಿದೆ. ಕಪ್ಪು ಹಸಿರು ಸೀರೆ, ತೆಳಹಸಿರು

ವರ್ಣದ ಕುಪ್ಪಸ ತೊಟ್ಟ ಇವಳೂ ಎಡಗೈಯಲ್ಲಿ ಬಡಿಗೆ ಹಿಡಿದಿದ್ದಾಳೆ. ಇಡೀ ಚಿತ್ರದ ಹಿನ್ನೆಲೆ ವರ್ಣವು ಕೆಂಪಾಗಿದೆ ಚಿತ್ರಗಳಲ್ಲಿ ಕಪ್ಪು. ಹಳದಿ. ಹಸಿರು ವರ್ಣಗಳನ್ನು ಹೆಚ್ಚಾಗಿ ಬಳಸಲಾಗಿದೆ. ಈ ಚಿತ್ರದಲ್ಲಿ ರಾಯಣ್ಣನು ಶಿಕ್ಷೆ ಅನುಭವಿಸುತ್ತಿದ್ದರೂ ನಾಡಿಗಾಗಿ ದುಡಿದು ಹೆಮ್ಮೆಯನಗು ಅವನ ಮುಖಭಾವದಲ್ಲಿ ಕಂಗೊಳಿಸುತ್ತಿದೆ. ಹಾಗೇ ಆತನ ತಂದೆ ತಾಯಿಗಳ ಮುಖದಲ್ಲಿರುವ ದುಃಖ. ಪೋಲಿಸರ ಚಹರೆಗಳಲ್ಲಿ ಕಂಡುಬರುವ ದರ್ಪ ಇವುಗಳನ್ನು ನೋಡಿದಾಗ ಭಾವನಾತ್ಮಕ ದೃಷ್ಟಿಯಿಂದ ಈ ಚಿತ್ರ ಉತ್ತಮ ಕೃತಿ ಎನ್ನಬಹುದು.

೨. ಕಿತ್ತೂರ ರಾಣಿಯ ಮೆರವಣಿಗೆಯ ದೃಶ್ಯ : ಇಲ್ಲಿನ ಮತ್ತೊಂದು ಫಲಕದ ಮೇಲೆ ಕಿತ್ತೂರ ರಾಣಿಯ ಮೆರವಣಿಗೆ ದೃಶ್ಯವನ್ನು ಚಿತ್ರಸಲಾಗಿದೆ. ಆನೆಯ ಮೇಲೆ ಅಂಬಾರಿ ಇದ್ದು ಅದರಲ್ಲಿ ಮೂವರು ಸ್ತ್ರೀಯರು ಕುಳಿತಿದ್ದಾರೆ. ಮಧ್ಯದವಳ ಆಕೃತಿ ದೊಡ್ಡದಾಗಿದ್ದು. ಎಡಬಲದ ಆಕೃತಿ ಚಿಕ್ಕವಾಗಿದೆ. ಬಹುಶ ನಡುವಿನವಳೇ ರಾಣಿ ಇರಬಹುದು. ಇವಳು ನೀಲಿ ವರ್ಣದ. ಹೂವಿನ ನಕ್ಷೆಯ ಸೀರೆ ಉಟ್ಟಿದ್ದಾಳೆ. ಆನೆಯು ಬಿಳಿ ವರ್ಣದಲ್ಲಿದ್ದು ಅಲಂಕಾರಗೊಲಿಸಲಾಗಿದೆ. ಅಂಬಾರಿಯನ್ನು ಹೊತ್ತು ಕೊಂಡು ಗಂಭೀರತೆಯಿಂದ ನಡೆಯುತ್ತಿದೆ. ಅದರ ಸೊಂಡಿಲಿನಲ್ಲಿ ಹೂಮಾಲೆಯೊಂದಿದೆ ಆನೆಯ ಮುಂದುಗಡೆ ಹಸಿರು ಮಿಶ್ರಿತ ಕಪ್ಪು ವರ್ಣದ ವ್ಯಕ್ತಿಯೊಬ್ಬ ನಿಂತಿದ್ದು, ಅವನು ಗಧೆಯನ್ನು ಎಡ ಭುಜದ ಮೇಲೆ ಹೊತ್ತುಕೊಂಡಿದ್ದು ದೊಡ್ಡ ಮೀಸೆಯನ್ನು ಬಿಟ್ಟಿದ್ದಾನೆ. ತಲೆಯಲ್ಲಿ ಕಿರೀಟ ಧರಿಸಿದ್ದು ಹಣೆಗೆ ನಾಮ, ಮೈ ತುಂಬ ಗಂಧ ಲೇಪಿಸಿಕೊಂಡಿದ್ದಾನೆ. ಈತನ ಆಕೃತಿ ಬೃಹದಾಕಾರವಾಗಿದ್ದು ಆನೆಗಿಂತ ದೊಡ್ಡವನಾಗಿ ಚಿತ್ರಿಸಲಾಗಿದೆ. ಮನುಷ್ಯನಿಗಿಂತ ವಾಸ್ತವದಲ್ಲಿ ಆನೆ ದೊಡ್ಡದಾಗಿದ್ದರೂ ಚಿತ್ರದಲ್ಲಿ ಪ್ರಧಾನ ವ್ಯಕ್ತಿ ಅವನಾಗಿರುವುದರಿಂದ ಆತನನ್ನು ಎಲ್ಲ ಚಿತ್ರಗಳಿಗಿಂತ ದೊಡ್ಡವನಾಗಿ ಚಿತ್ರಿಸಲಾಗಿದೆ. ರಾಜನಂತಿರುವ ಈತ ಮಹಾಭಾರತದ ಭೀಮನಂತೆ ಕಂಗೊಳಿಸುತ್ತಾನೆ. ಈತನ ಮುಂದುಗಡೆಗೆ ಕೆಂಪು ಅಂಗಿ. ಪೇಟಾದಂತಹ ಸಮವಸ್ತ್ರಧರಿಸಿ ಕೈಯಲ್ಲಿ ಉದ್ದವಾದ ಭರ್ಜಿಯನ್ನು ಹಿಡಿದುಕೊಂಡ ರಾಜಭಟನು ಹೋಗುತ್ತಿದ್ದಾನೆ. ಬಿಳಿ, ಹಸಿರು. ಹಳದಿ ವರ್ಣಗಳು ಇಲ್ಲಿ ಹೆಚ್ಚಾಗಿ ಬಳಕೆಯಾಗಿವೆ.

*II. ಕಾಲ್ಪನಿಕ ಪಕ್ಷಿಗಳ ಚಿತ್ರಗಳು :* ಮಠದ ಹೊರ ಕೋಣೆಯಲ್ಲಿ ಬೋದಿಗೆಯಲ್ಲಿನ ಮರದ ಫಲಕಗಳ ಮೇಲೆ ಮೂರುಕಡೆಗೆ ಕಾಲ್ಪನಿಕವಾದ ವಿಚಿತ್ರ ಆಕಾರದ ಪಕ್ಷಿಗಳನ್ನು ಚಿತ್ರಸಲಾಗಿದೆ. ಈ ಪಕ್ಷಿಗಳು ಸಿಂಹದ ಮುಖಹೊಂದಿದ್ದು ಪಕ್ಷಿಶರೀರ ಹೊಂದಿವೆ. ಮುಖವು ಸಂಪೂರ್ಣ ಸಿಂಹದ ಮುಖದ ಹಾಗಿರದೇ ಅದರಲ್ಲಿ ಅಲಂಕಾರಿಕ ರೂಪವನ್ನು ವಿನ್ಯಾಸಗೊಳಿಸಲಾಗಿದೆ. ಗುಂಡಾದ ಹೊಳೆಯುವ ಕಪ್ಪು ಕಣ್ಣುಗಳು, ಕಿವಿಗಳಲ್ಲದೇ ಕೋಡುಗಳನ್ನೂ ಇವುಗಳಿಗೆ ಚಿತ್ರಿಸಿದೆ. ಕೋಡುಗಳು ಚಿಕ್ಕವಾಗಿದ್ದು ಚೇಳಿನ ಕೊಂಡಿಯ ವಿನ್ಯಾಸದಲ್ಲಿವೆ. ಪಕ್ಷಿಗಳ ಮೈ ಬಣ್ಣ ಹಸಿರು ಮಿಶ್ರಿತ ಹಳದಿಯಾಗಿದ್ದು. ಹಿನ್ನಲೆಯು ಕೆಂಪುವರ್ಣದಿಂದ ಕೂಡಿದೆ. ಉದ್ದವಾದ ಬಾಲವನ್ನು ಹೊಂದಿದ ಈ ಪಕ್ಷಿಗಳು ವಿಚಿತ್ರ ರೂಪಿನದಾಗಿವೆ. ಈ ಕಾಲ್ಪನಿಕ ಪಕ್ಷಿಗಳ ಚಿತ್ರಪಲಕದ ಹೊರಭಾಗದಲ್ಲಿ ನೈಜರೂಪದಲ್ಲಿ ಗಿಳಿಗಳು ಮತ್ತು ಹೂಬಳ್ಳಿಯ ನಕ್ಷೆಗಳನ್ನು ರಚಿಸಿದೆ. ಇಲ್ಲಿಯ ಕಾಲ್ಪನಿಕ ಪಕ್ಷಿಗಳಲ್ಲದೇ ಒಳಭಾಗದ ಫಲಕದಲ್ಲಿಯೂ ಒಂದು ಕಾಲ್ಪನಿಕ ಪಕ್ಷಿಚಿತ್ರವಿದ್ದು ಅದನ್ನು ಕೃಷ್ಣನ ವಿಶ್ವರೂಪದರ್ಶನದ ಚಿತ್ರ ವಿವರಿಸುವಾಗ ಹೇಳಲಾಗಿದೆ.

*III. ಹೂಬಳ್ಳಿ ನಕ್ಷಾ ಚಿತ್ರಗಳು :* ಹೂಬಳ್ಳಿಯ ನಕ್ಷಾರೂಪಗಳು ಚಿತ್ರಫಕಲದ ಅಂಚುಗಳಲ್ಲಿ ರಚನೆಯಾಗಿವೆ. ಕೆಲವು ಕಡೆಗೆ ಚಿತ್ರಕ್ಕೆ ಪೂರಕವಾಗಿ ಚಿತ್ರಗಳ ಮಧ್ಯಭಾಗದಲ್ಲಿ ಇಲ್ಲವೇ ಮೇಲೆ ಅಥವಾ ಕೆಳಗೆ ರಚಿಸಿವೆ. ಹೂಬಳ್ಳಿಯ ನಕ್ಷಾ ರೂಪಗಳು ನೈಜ ಶೈಲಿಯಲ್ಲಿದ್ದು, ನೆರಳು ಬೆಳಕಿನ ವಿನ್ಯಾಸದಿಂದ ಕೂಡಿ ದುಂಡುತನದ ಅನುಭವ ಕೊಡುತ್ತವೆ.

*II. ಗೋಡೆಯ ಮೇಲಿನ ಚಿತ್ರಗಳು :* ಮಠದ ಒಳಗಿನ ಗೋಡೆಯಲ್ಲಿ ಕೆಲವು ಭಿತ್ತಿಚಿತ್ರಗಳಿದ್ದುದಾಗಿ ತಿಳಿದುಬರುತ್ತದಾದರೂ ಈಗ ಗೋಡೆಯಮೇಲೆ ಯಾವ ಚಿತ್ರಗಳೂ ಉಳಿದಿಲ್ಲ. ಅವೆಲ್ಲವನ್ನೂ ತೆಗೆದು ಸುಣ್ಣಸಾರಿಸಿದ್ದಾರೆ. ಗೋಡೆಯ ಮೇಲೆ ಇದ್ದ ಚಿತ್ರಗಳಲ್ಲಿ ಸಿಂಹಾಸನಾರೂಢನಾಗಿರುವ ರಾಜನ ಚಿತ್ರವೊಂದಿದ್ದು ಅದನ್ನು ಸ್ಥಳೀಯರು ನರಗುಂದದ ಬಾಬಾಸಾಹೇಬ ಎಂದು ಗುರುತಿಸುತ್ತಾರೆ. ಈ ಚಿತ್ರದಲ್ಲಿ ಮುಸ್ಲಿಂ ಶೈಲಿಯ ಗುಂಬಜಗಳು ಕಂಡುಬರುತ್ತವೆ. ರಾಜನ ಅಕ್ಕಪಕ್ಕದಲ್ಲಿ ಸೇವಕರು ಇದ್ದಾರೆ. ಇನ್ನೊಂದು ಚಿತ್ರದಲ್ಲಿ ಶಿವ, ಆತನ ವಾಹನ ನಂದಿ ಶಿವನ ಪರಿವಾರ ಕಾಣಬಹುದು. ಕೈಲಾಸದ ಈ ದೃಶ್ಯದಲ್ಲಿ ಮಧ್ಯದಲ್ಲಿ ನಾರದ ಸಮೀಪದಲ್ಲೇ ದಿಕ್ಪಾಲಕರು ಚಿತ್ರಿತರಾಗಿದ್ದಾರೆ. ಇವುಗಳಲ್ಲದೇ ಮಠದ ಹಿಂದಿನ ಸ್ವಾಮಿಗಳ ಭಾವಚಿತ್ರಗಳೂ ಚಿತ್ರಿತಗೊಂಡಿದ್ದ ಬಗ್ಗೆ ಹೇಳುತ್ತಾರೆ. ಆದರೆ ಇಂದು ಗೋಡೆಯ ಮೇಲೆ ಯಾವ ಚಿತ್ರಗಳೂ ಇಲ್ಲ.

*III. ಲೋಹ ಫಲಕದ ಮೇಲಿನ ಚಿತ್ರಗಳು :* ಅಮ್ಮಿನಭಾವಿಯ ಮಠದ ಪ್ರವೇಶದ್ವಾರದಲ್ಲಿ ಎರಡನೆಯ ಅಂತಸ್ತಿನ ಮೇಲ್ಚಾವಣಿಯ ಹೊರಚಾಚಿದ ಭಾಗಕ್ಕೆ ಕಬ್ಬಿಣದ ತೆಳುವಾದ ಫಲಕಗಳನ್ನು ಜೋಡಿಸಿದ್ದಾರೆ. ಈ ಕಬ್ಬಿಣದ ಫಲಕಗಳ (ತಗಡು) ಮೇಲೆ ವರ್ಣ ಚಿತ್ರಗಳನ್ನೂ ಬಿಡಿಸಿದ್ದಾರೆ. ಇವು ಪೂರ್ತಿ ಹೊರಭಾಗದಲ್ಲಿರುವುದರಿಂದ ಬೇಗನೇ ಹಾಳಾಗಿವೆ. ಕಬ್ಬಿಣಕ್ಕೆ ತುಕ್ಕು ಹಿಡಿದು. ಬಣ್ಣಗಳು ಉದುರಿಹೋಗಿವೆ. ಕೆಲವು ಸಂಪೂರ್ಣ ಅಳಿಸಿ ಹೋಗಿದ್ದರೆ ಇನ್ನು ಕೆಲವು ಬಣ್ಣದ ಉಳಿಕೆಗಳಾಗಿ ಮಾತ್ರ ತಮ್ಮ ಇರುವನ್ನು ತೋರಿಸುತ್ತಿವೆ. ಕೃಷ್ಣನು ಕಾಳಿಂಗ ಮರ್ದನ ಮಾಡುತ್ತಿರುವ ಚಿತ್ರದಲ್ಲಿ ಬಾಲಕ ಕೃಷ್ಣನು ಎಡಕೈಯಲ್ಲಿ ಕಾಳಿಂಗನ ಬಾಲವನ್ನು ಎತ್ತಿಹಿಡಿದು ಬಲಗೈಯಿಂದ ಆತನ ಹೆಡೆಯ ಮೇಲೆ ಗುದ್ದುತ್ತ ಅದನ್ನು ಸಂಹರಿಸಿ ಅದರ ಮೇಲೆ ನಾಟ್ಯವಾಡುತ್ತಿದ್ದಾನೆ. ಕೃಷ್ಣನ ಭಂಗಿಯು ಆಕರ್ಷಕವಾಗಿದೆ. ಕೃಷ್ಣನ ನೀಲ ಛಾಯೆ ಮಾತ್ರ ವರ್ಣದಲ್ಲಿ ಉಳಿದುಕೊಂಡಿದೆ. ಉಳಿದಂತೆ ಎಲ್ಲ ಹಾಳಾಗಿದೆ. ಮತ್ತೊಂದು ಚಿತ್ರದಲ್ಲಿ ಆದಿಶಕ್ತಿ ದೇವಿಯು ರಾಕ್ಷಸರನ್ನು ಸಂಹರಿಸುತ್ತಿರುವ ದೃಶ್ಯ ಅಸ್ಪಷ್ಟವಾಗಿದೆ. ದೇವಿಯ ವಿವಿಧ ಕೈಗಳಲ್ಲಿ ವಿವಿಧ ಆಯುಧಗಳು ಇವೆ. ದೇವಿಯು ಕುಳಿತ ಸಿಂಹದ ಚಿತ್ರವು ನಾಶವಾಗಿದ್ದು ಕೇವಲ ಅದರ ಕಾಲುಗಳು ಉಗುರುಗಳು ಕಂಡುಬರುತ್ತವೆ. ಮತ್ತೊಂದು ಚಿತ್ರದಲ್ಲಿ ಕಂಬವನ್ನು ಸೀಳಿಬಂದ ನರಸಿಂಹನು ಹಿರಣ್ಯಕಶ್ಯಪನನ್ನು ಸಂಹರಿಸುತ್ತಿರುವ ದೃಶ್ಯವಿದೆ. ಉಗ್ರರೂಪಿಯಾದ ನರಸಿಂಹನು ತನ್ನ ತೊಡೆಯ ಮೇಲೆ ಹಿರಣ್ಯ ಕಶ್ಯಪನನ್ನು ಮಲಗಿಸಿಕೊಂಡು ಆತನ ಹೊಟ್ಟೆಯನ್ನು ಸೀಳುತ್ತಿದ್ದಾನೆ. ಬಲಗಡೆಗೆ ಪ್ರಹ್ಲಾದನೂ ಎಡಗಡೆಗೆ ಆತನ ತಾಯಿಯೂ ಭಕ್ತಿಯಿಂದ ಕೈಮುಗಿದುಕೊಂಡು ನಿಂತಿದ್ದಾರೆ. ವರ್ಣವೆಲ್ಲ ಉದುರಿ ಹೋಗಿದೆ. ಮತ್ತೊಂದು ಚಿತ್ರದಲ್ಲಿ ಶಿವನು, ಕೃಷ್ಣನೂ ರಾಕ್ಷಸರನ್ನು ಸಂಹರಿಸುತ್ತಿರುವ ಚಿತ್ರಗಳಿವೆ. ಇವು ತೀರಾ ಮಸುಕಾಗಿವೆ.

**ಅಮ್ಮಿನ ಭಾವಿಯ ಭಿತ್ತಿ ಚಿತ್ರದ ಲಕ್ಷಣಗಳು :**

* ಮಠದ ಒಳಭಾಗದ ಚಿತ್ರಗಳಿಗೆ ಹಿನ್ನೆಲೆವರ್ಣವಾಗಿ ದಟ್ಟಕೆಂಪು ಬಳಸಿದ್ದರೆ, ಹೊರಭಾಗದ ಚಿತ್ರಗಳಿಗೆ ದಟ್ಟನೀಲಿ ವರ್ಣದ ಹಿನ್ನೆಲೆ ಇದೆ.
* ಉದ್ದವಾಗಿರುವ ಚಿತ್ರಫಲಕದಲ್ಲಿ ಸಾಮಾನ್ಯವಾಗಿ ಮಧ್ಯದಲ್ಲಿ ಹೂವಿನ ನಕ್ಷೆ ರಚಿಸಿದ್ದರೆ, ಚಿಕ್ಕ ಫಲಕಗಳಲ್ಲಿ ಇದು ಕಂಡುಬರುವುದಿಲ್ಲ.

* ದೊಡ್ಡ ಫಲಕಗಳಲ್ಲಿ ಎಡ ಬಲಗಳಲ್ಲಿ ಬೇರೆ ಬೇರೆ ವಿಷಯಗಳನ್ನು ಚಿತ್ರಿಸಿದ್ದರೆ, ಕೆಲವು ಸಾರಿ ಒಂದೇ ವಿಷಯವನ್ನೇ ವಿಭಾಗಿಸಿ ಚಿತ್ರಿಸಿದ್ದಾರೆ. ಆದರೆ ಚಿಕ್ಕ ಫಲಕಗಳಲ್ಲಿ ಒಂದೇ ಘಟನೆ, ಒಂದೇ ವಿಷಯವನ್ನು ಮಧ್ಯದಲ್ಲಿ ಚಿತ್ರಿಸಿದ್ದಾರೆ.
* ಚಿತ್ರಗಳು ರೇಖಾ ಪ್ರಧಾನವಾಗಿದ್ದರೂ ಅಲ್ಲಲ್ಲಿ ನೆರಳು ಬೆಳಕು ತೋರಿಸಲು ಪ್ರಯತ್ನಿಸಲಾಗಿದೆ.
* ದೇವತಾ ಚಿತ್ರಗಳಲ್ಲಿ ಪುರುಷ ಚಿತ್ರಗಳಿಗೆ ಮೀಸೆಯನ್ನು ರಚಿಸಿರುವುದ ಸಹಜತೆಯನ್ನು ತೋರಿಸುವುದಾಗಿದೆ.

**೪. ಮಹಾಲಿಂಗೇಶ್ವರ ಮಠ, ಮಹಾಲಿಂಗಪುರ :** ಬಾಗಲಕೋಟ ಜಿಲ್ಲೆಯ ಮುಧೋಳ ತಾಲೂಕಿಗೆ ಸೇರಿದ ಒಂದು ಗ್ರಾಮ ಮಹಾಲಿಂಗಪುರ. ಮುಧೋಳದಿಂದ ದಕ್ಷಿಣಕ್ಕೆ ಸುಮಾರು ೨೦ ಕಿ. ಮಿ. ಗಳ ಅಂತರದಲ್ಲಿರುವ ಮಹಾಲಿಂಗಪುರದ ದಕ್ಷಿಣ ಕೊನೆಯಲ್ಲಿ ಮಹಾಲಿಂಗೇಶ್ವರ ಮಠವು ಕಟ್ಟಲ್ಪಟ್ಟಿದೆ. ಈ ಭಾಗದ ಪ್ರಮುಖ ಧಾರ್ಮಿಕ ಸ್ಥಳವಾದ ಈ ಮಠದ ಬೃಹದಾಕಾರದ ಪ್ರವೇಶದ್ವಾರವು ಕ್ರಿ. ಶ. ೧೮೫೬ ರಲ್ಲಿಯೇ ಕಟ್ಟಲಾಗಿದೆ. ಪಕ್ಕದಲ್ಲಿರುವ ಮಠದ ಕಟ್ಟಡವು ಇನ್ನೂ ಪುರಾತನವಾಗಿದ್ದು ಸುಮಾರು ೧೮ ನೇ ಶತಮಾನದ ರಚನೆಯಾಗಿದೆ. ಈ ಮಠದಲ್ಲಿ ರಚನೆಯಾಗಿರುವ ವರ್ಣ ಭಿತ್ತಿ ಚಿತ್ರಗಳು ೧೮ ನೇ ಶತಮಾನದ ಉತ್ತರಾರ್ಧದ ಕೃತಿಗಳಾಗಿವೆ. ಧಾರವಾಡ ಜಿಲ್ಲೆಯಲ್ಲಿರುವ ಅಮ್ಮಿನಭಾವಿಯ ಪಂಚಗೃಹ ಹಿರೇಮಠ ಮತ್ತು ಈ ಮಹಾಲಿಂಗೇಶ್ವರ ಮಠಗಳು ವಿನ್ಯಾಸದಲ್ಲಿ ಒಂದೇ ರೀತಿ ಇವೆ. ಮಹಾಲಿಂಗೇಶ್ವರ ಮಠವಲ್ಲಿ ಮೊದಲು ಗೋಡೆಯ ಮೇಲೆ ನಾಲ್ಕು ಬದಿಗಳಲ್ಲೂ ಚಿತ್ರಗಳಿರಬಹುದು, ಅಂತಹ ಕುರುಹುಗಳೂ ಅಲ್ಲಿವೆ. ಆದರೆ ಈಗ ಕೇವಲ ದಕ್ಷಿಣ ಮತ್ತು ಪೂರ್ವಗೋಡೆಗಳಲ್ಲಿ ಒಂದೊಂದು ಕಡೆಗೆ ಮಾತ್ರ ಭಿತ್ತಿಚಿತ್ರಗಳು ಉಳಿದುಕೊಂಡಿವೆ. ಈ ಮಠದ ಭಿತ್ತಿ ಚಿತ್ರಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆ ಎರಡು ವಿಧದಲ್ಲಿ ವಿಂಗಡಿಸಬಹುದು.

I. ದಕ್ಷಿಣ ಗೋಡೆಯ ಚಿತ್ರಗಳು

II. ಪೂರ್ವ ಗೋಡೆಯ ಚಿತ್ರಗಳು

***I. ದಕ್ಷಿಣ ಗೋಡೆಯ ಚಿತ್ರಗಳು :*** ದಕ್ಷಿಣ ಗೋಡೆಯ ಚಿತ್ರಗಳಲ್ಲಿ ಈಗ ಕೇವಲ ಮೂರು ಚೌಕಗಳಲ್ಲಿ ಚಿತ್ರಗಳಿವೆ. ದಕ್ಷಿಣಾಮೂರ್ತಿ ಶಿವನ ಚಿತ್ರ, ವೀರಭದ್ರನ ಚಿತ್ರ, ಅಲಂಕಾರಿಕ ಹೂಕುಂಡದ ಚಿತ್ರ.

೧. ದಕ್ಷಿಣಾ ಮೂರ್ತಿ ಶಿವನ ಚಿತ್ರ : ಸಂಗೀತ, ನೃತ್ಯ, ಯೋಗ ವಿದ್ಯೆಗಳ ಉಪದೇಶಕನಾಗಿ ಶಿವನು ದಕ್ಷಿಣಾಮೂರ್ತಿ ಎಂದು ಹೆಸರಾಗಿದ್ದಾನೆ. ಈ ಹೆಸರು ಹೇಗೆ ಬಂತೆಂಬುದಕ್ಕೆ ಒಂದು ವಿವರಣೆಯನ್ನು ಹೇಳುತ್ತಾರೆ. ಋಷಿಗಳಿಗೆ ಶಿವನು ಯೋಗ ಮತ್ತು ಜ್ಞಾನಗಳನ್ನು ಬೋಧಿಸುವಾಗ ದಕ್ಷಿಣಾಭಿಮುಖವಾಗಿ ಕುಳಿತಿರುತ್ತಿದ್ದರಿಂದ ದಕ್ಷಿಣಾಮೂರ್ತಿ ಎಂದು ಕರೆಯಲ್ಪಟ್ಟನಂತೆ. ದಕ್ಷಿಣಾಮೂರ್ತಿಯನ್ನು ನಾಲ್ಕು ವಿವಿಧ ರೂಪಗಳಲ್ಲಿ ಚಿತ್ರಿಸಲಾಗುತ್ತದೆ. ಯೋಗೋಪದೇಶಕ, ವೀಣಾವಾದನದ ಅಧ್ಯಾಪಕ, ಜ್ಞಾನ ಪ್ರಸಾರಕ ಮತ್ತು ಶಾಸ್ತ್ರಗಳ ವ್ಯಾಖ್ಯಾನಮೂರ್ತಿ. ಈ ನಾಲ್ಕರಲ್ಲಿ ವ್ಯಾಖ್ಯಾನ ಮೂರ್ತಿ ರೂಪವನ್ನು ನಾವು ದೇವಾಲಯಗಳಲ್ಲಿ ಬಹುಸಾಧಾರಣವಾಗಿ ಕಾಣುತ್ತೇವೆ. ಶೈವ ಅಥವಾ ವೈಷ್ಣವ ದೇವಾಲಯ, ಮಠಮಾನ್ಯಗಳಲ್ಲಿ ಪ್ರಧಾನವಾದ ಮಧ್ಯದಕ್ಷಿಣ ಗೋಡೆಯಲ್ಲಿ ದಕ್ಷಿಣಾಮೂರ್ತಿ ಶಿವನಿಗಾಗಿ ಒಂದು ಭಾಗವು ಕಾಯ್ದಿರಿಸಿ ಅಲ್ಲಿ ದಕ್ಷಿಣಾಮೂರ್ತಿಯನ್ನು ಚಿತ್ರಿಸಲಾಗುತ್ತದೆ.[೧೮೦] ಎಂಬ ವಿವರಗಳು

೧೮೦. ಜಿ. ಜ್ಞಾನಾನಂದ (ಅನು) : ಕಾಶ್ಯಪಶಿಲ್ಪಶಾಸ್ತ್ರ, ಪುಟ ೫೬೫

ದೊರೆಯುತ್ತವೆ. ಮಹಾಲಿಂಗಪುರದ ಈ ಮಠದಲ್ಲಿಯೂ ದಕ್ಷಿಣಾಮೂರ್ತಿಯ ಶಿವನ ಚಿತ್ರವನ್ನು ದಕ್ಷಿಣಗೋಡೆಯಲ್ಲಿಯೇ ರಚಿಸಲಾಗಿದೆ. ಈ ಚಿತ್ರದಲ್ಲಿ ಶಿವನು ಹುಲಿಯ ಚರ್ಮದ ಮೇಲೆ ಕುಳಿತಿದ್ದು ಆತನ ಎಡ ತೊಡೆಯ ಮೇಲೆ ಪಾರ್ವತಿಯೂ ಬಲತೊಡೆಯ ಮೇಲೆ ಗಣಪತಿಯೂ ಚಿತ್ರಿತರಾಗಿದ್ದಾರೆ. ಶಿವನ ಅಕ್ಕಪಕ್ಕದಲ್ಲಿ ಕೆಳಗಡೆಗೆ ಅನೇಕ ಋಷಿಗಳು ಚಿತ್ರಿತರಾಗಿದ್ದಾರೆ. ಇವರಲ್ಲಿ ಕೆಲವರು ಕುಳಿತಿದ್ದರೆ ಇನ್ನು ಕೆಲವರು ನಿಂತು ಕೊಂಡಿದ್ದಾರೆ. ದಕ್ಷಿಣಾ ಮೂರ್ತಿ ಶಿವನಸುತ್ತಲೂ ನೆರೆದಿರುವ ಋಷಿಗಳಲ್ಲಿ ನಾರದ, ಜಮದಗ್ನಿ, ವಶಿಷ್ಠ, ಭೃಗು, ಭಾರದ್ವಾಜ, ಸನಕ, ಮತ್ತು ಅಗಸ್ತರು ಪ್ರಮುಖರಾಗಿರುತ್ತಾರೆ ಎಂದು ಕಾಶ್ಯಪ ಶಿಲ್ಪಶಾಸ್ತ್ರದಲ್ಲಿ ಹೇಳಿದ್ದಾರೆ. ಕೌಶಿಕ, ಕಾಶ್ಯಪ, ಭಾರದ್ವಾಜ, ಅತ್ರಿ. ಮತ್ತು ಗೌತಮ ಪ್ರಮುಖರು ಎಂದು ಕಾಮಿಕಾಗಮವು ಹೇಳಿದೆ. ಕಾರಣಾಗಮದಲ್ಲಿ ಅಗಸ್ತ್ಯ, ಪುಲಸ್ತ್ಯ, ವಿಶ್ವಾಮಿತ್ರ ಮತ್ತು ಅಂಗೀರಸ ಋಷಿಗಳ ಹೆಸರು ಮಾತ್ರ ಇವೆ.[೧೮೧] ಈ ಚಿತ್ರದಲ್ಲಿ ಸಪ್ತರ್ಷಿಗಳ ಜೊತೆಗೇ ಬೇರೆ ಬೇರೆ ಮುನಿಗಳೂ ಶಿವನಸುತ್ತಲೂ ನೆರೆದಿದ್ದಾರೆ. ಶಿವನು ಕುಳಿತ ಪ್ರದೇಶವು ಗುಡ್ಡಬೆಟ್ಟ ಪ್ರದೇಶದಂತೆ ಕಂಡುಬರುತ್ತಿದ್ದು ಅಲ್ಲಲ್ಲಿ ಕಲ್ಲುಗಳು. ಗಿಡಗಂಟಿಗಳು, ದೊಡ್ಡಮರಗಳು, ನೀರಿನ ಕೊಳಗಳು ರಚಿಸಿವೆ ಕಾಡಿನಲ್ಲಿ ಜಿಂಕೆಗಳೂ ಗುಂಪುಗುಂಪಾಗಿ ಓಡುತ್ತಿವೆ. ಶಿವ ಸುತ್ತಲೂ ನೆರೆದ ಮುನಿಗಳಲ್ಲಿ ಶಿವನಿಗೆ ಅತ್ಯಂತ ಸಮಿಪವಾಗಿ ಆತನ ಬಲಭಾಗದಲ್ಲಿ ನಾರದ ಮುನಿಯು ಇದ್ದಾನೆ. ಆತ ಹಸಿರು ಪಂಚೆ ಉಟ್ಟು ಕೆಂಪು ಶಾಲನ್ನು ಮೈಮೇಲೆ ಹಾಕಿಕೊಂಡಿದ್ದಾನೆ. ನಾರದನ ಬಲಭಾಗದಲ್ಲಿ ಮತ್ತೊಬ್ಬ ಋಷಿ ಕಹಳೆಯಂತಹ ವಾದ್ಯವನ್ನು ನುಡಿಸುತ್ತಿದ್ದು ಕೆಂಪು ಪಂಚೆ ಉಟ್ಟಿದ್ದಾನೆ. ಇಲ್ಲಿನ ಎಲ್ಲ ಮುನಿಗಳೂ ಕೆಂಪು ಇಲ್ಲವೆ ಹಸಿರುಪಂಚೆ ಉಟ್ಟು ಅಂತಹ ಬಣ್ಣದ್ದೇ ಶಾಲುಹೊದೆದುಕೊಂಡಿದ್ದಾರೆ. ಕಹಳೆ ಊದುತ್ತಿರುವ ಋಷಿಯ ಪಕ್ಕದಲ್ಲಿ ಮತ್ತೊಬ್ಬ ಮುನಿ ಕಾಲುಗಳನ್ನು ಮಡಚಿಕೊಂಡು ಮೊಣಕಾಲುಗಳ ಮೇಲೆ ಕುಳಿತು ಧ್ಯಾನದಲ್ಲಿ ತೊಡಗಿದ್ದಾನೆ. ಈ ಚಿತ್ರದಲ್ಲಿ ಶಿವಭಕ್ತನಾದ ರಾವಣನೂ ಇರುವುದು ವಿಶೇಷವಾಗಿದೆ. ಆತನಿಗೆ ಆರುಮುಖ ಹನ್ನೆರಡು ಕೈಗಳನ್ನು ಚಿತ್ರಿಸಿದ್ದಾರೆ. ಆತನು ಎದ್ದು ನಿಂತು ಕೈಯಲ್ಲಿ ದಂಡ ಕಮಂಡಲಗಳನ್ನು ಹಿಡಿದು ಶಿವನಾಮಸ್ಮರಣೆಯಲ್ಲಿ ತೊಡಗಿದ್ದಾನೆ. ರಾವಣನಿಗೆ ಹತ್ತು ತಲೆಗಳು ಇಪ್ಪತ್ತು ಕೈಗಳು ಚಿತ್ರಿಸಬೇಕಾಗಿದ್ದು ಅಲ್ಲಿನ ಸ್ಥಳದ ಅಭಾವದಿಂದ ಕಡಿಮೆ ಸಂಖ್ಯೆಯ ತಲೆ ಕೈಗಳನ್ನು ಚಿತ್ರಿಸಿರಬಹುದು. ರಾವಣನ ಎಡಗಡೆಗೆ ಮತ್ತೊಬ್ಬ ಋಷಿಯೂ ನಿಂತೂಕೊಂಡು ತಪಸ್ಸಿನಲ್ಲಿ ತೊಡಗಿದ್ದಾನೆ. ಒಟ್ಟು ಮೂರು ಸಾಲುಗಳಲ್ಲಿ ಋಷಿಗಳು ಚಿತ್ರಿತರಾಗಿದ್ದಾರೆ. ಎರಡನೆಯ ಸಾಲಿನಲ್ಲಿ ಮಧ್ಯದಲ್ಲಿ ಶಿವನ ಬಲಕ್ಕೆ ನಂದಿಯೂ ಎಡಕ್ಕೆ ಸಿಂಹವೂ ಮಲಗಿಕೊಂಡಿದೆ. ನಂದಿಯ ಪಕ್ಕದಲ್ಲಿ ಕಪ್ಪು ಮೈಬಣ್ಣದ. ಕೈಯಲ್ಲಿ ಖಡ್ಗ ಹಿಡಿದುಕೊಂಡಿರುವ ಕಿರೀಟಧಾರಿ ರಾಕ್ಷಸನೊಬ್ಬ ಚಿತ್ರಿತವಾಗಿದ್ದಾನೆ ಕೆಳಗಿರುವ ಮೂರನೆಯ ಸಾಲಿನಲ್ಲಿ ಒಟ್ಟು ಎಂಟುಜನ ಋಷಿಗಳು ಚಿತ್ರಿಸಿದ್ದಾರ. ಅವರಲ್ಲಿ ಕೆಲವರು ಎದ್ದು ನಿಂತು ಶಿವನ ಸ್ಮರಣೆ ಮಾಡುತ್ತಿದ್ದರೆ ಇನ್ನೂ ಹಲವರು ಕುಳಿತು ಆತನನ್ನು ಭಜಿಸುತ್ತಿದ್ದಾರೆ. ಬಲ ಮೂಲೆಯಲ್ಲಿ ವಸ್ತ್ರಹಿಡಿದ ದೇವಲ ಮಹರ್ಷಿ ಚಿತ್ರವಿದೆ.

ಇಡೀ ಚಿತ್ರಸಂಯೋಜನೆಯಲ್ಲಿ ಶಿವನ ಆಕೃತಿಯೇ ಅತ್ಯಂತ ದೊಡ್ಡದಾಗಿದೆ. ನಾಲ್ಕು ಕೈಗಳನ್ನು ಹೊಂದಿದ ಶಿವನು ತ್ರಿಶೂಲ. ಶಂಖ, ಢಮರುಗಳನ್ನು ಹಿಡಿದುಕೊಂಡಿದ್ದಾನೆ. ಆತನ ಕೊರಳಲ್ಲಿ ಹಾವು ಹೆಡೆಬಿಚ್ಚಿ ಆಡುತ್ತಿದ್ದರೆ. ಆತನ ಜಟೆಯ ಮೇಲೆ ಐದು ಹೆಡೆಗಳ ಸರ್ಪವು ಸುಳಿರಳಿಯಾಗಿ ಸುತ್ತಿಕೊಂಡು ಕುಳಿತಿದೆ. ಜಟೆಯ ತುದಿಯಿಂದ

---

೧೮೧. ಜಿ. ಜ್ಞಾನಾನಂದ : ಶ್ರೀ ಕಶ್ಯಪ ಶಿಲ್ಪಶಾಸ್ತ್ರಂ. ಪುಟ ೫೬೬

ಗಂಗೆಯು ಕಾರಂಜಿಯಂತೆ ಚಿಮ್ಮಿ ಬರುತ್ತಿದ್ದಾಳೆ. ಶಿವನ ಎಡಬಲಗಳಲ್ಲಿ ದೊಡ್ಡ ದೊಡ್ಡ ಗಿಡಮರಗಳಿದ್ದು ಅವುಗಳಲ್ಲಿ ಹೂಗಳು ಅರಳಿವೆ. ಮರದ ರೆಂಬೆ. ಕೊಂಬೆಗಳಲ್ಲಿ ಅಸಂಖ್ಯಾತಗಿಳಿಗಳು, ಮಂಗಗಳು ಕುಳಿತುಕೊಂಡಿದ್ದರೆ, ಇನ್ನೂ ಕೆಲವು ಮಂಗಗಳು ಗಿಡದಿಂದ ಗಿಡಕ್ಕೆ ಜಿಗಿದಾಡುತ್ತಲಿವೆ. ಸಿಂಧೂರ ವರ್ಣದ ಆಕಾಶದಲ್ಲಿ ಅಲ್ಲಲ್ಲಿ ಸೂರ್ಯಕಾಂತಿ ಹೂಗಳು ರಚಿಸಿವೆ. ಗಿಳಿಗಳು ಹಿಂಡು ಹಿಂಡಾಗಿ ಮನಬಂದ ಕಡೆ ಹಾರುತ್ತಿವೆ. ಇಡೀ ಆಕಾಶ ಗಿಳಿಗಳಿಂದಲೇ ತುಂಬಿಹೋಗಿವೆ. ಚಿತ್ರದ ಹೊರಚೌಕಟ್ಟಿಗೆ ಅಂದವಾದ ಹೂಬಳ್ಳಿಯ ನಕ್ಷೆಯನ್ನು ಮೂರಪಟ್ಟಿಗಳಲ್ಲಿ ರಚಿಸಲಾಗಿದೆ. ಆಕಾಶದ ಬಣ್ಣ ಸಿಂಧೂರ ಕೆಂಪಾಗಿದ್ದರೆ, ನೆಲದ ವರ್ಣ ತೆಳುಹಳದಿಯಾಗಿದ್ದು ಅಲ್ಲಲ್ಲಿ ಹಸಿರು ನೀಲಿ ಮಿಶ್ರಮಾಡಗಿಲೆ. ರೇಖಾ ವಿನ್ಯಾಸದಿಂದ ಅಷ್ಟೊಂದು ಶಕ್ತಿಶಾಲಿ ಚಿತ್ರವಾಗಿರದಿದ್ದರೂ ಚಿತ್ರ ಸಂಯೋಜನೆ, ವರ್ಣವಿನ್ಯಾಸಗಳಿಂದ ಅದ್ಭುತ ಎನ್ನುವ ಕಲ್ಪನೆಯನ್ನು ಕೊಡುತ್ತದೆ.

೨. ವೀರಭದ್ರನ ಚಿತ್ರ : ದಕ್ಷಿಣಾಮೂರ್ತಿ ಶಿವನ ಚಿತ್ರದ ಬಲಗಡೆಗೆ ಇರುವ ಒಂದು ಚೌಕಾಕಾರದ ಮಂಟಪದಲ್ಲಿ ವೀರಭದ್ರನ ಚಿತ್ರವೊಂದಿದೆ. ಕಡುಕೆಂಪುವರ್ಣದ ಹಿನ್ನೆಲೆಯನ್ನು ಹೊಂದಿದ ಈ ಚಿತ್ರದಲ್ಲಿ ವೀರಭದ್ರನ ಗುಂಡಾದ ದೊಡ್ಡದಾದ ಹೊಳೆಯುವ ಕಣ್ಣುಗಳು. ದಪ್ಪನಾದ ಗಲ್ಲಕ್ಕೆ ಅಂಟಿಕೊಂಡ ಚಪ್ಪಟೆ ಮೀಸೆ, ಆತನ ಭೀಕರತೆಯನ್ನು ಇನ್ನೂ ಹೆಚ್ಚಿಸಿವೆ. ತಲೆಯಮೇಲೆ ಬಂಗಾರವರ್ಣದ ಕಿರೀಟವನ್ನು ಧರಿಸಿದ್ದು ಕೊರಳಲ್ಲಿಯೂ ಅದೇ ವರ್ಣದ ಆಭರಣಗಳಿವೆ. ಮಾಸಲು ಹಸಿರುವರ್ಣದ ಪಂಚೆ ಉಟ್ಟಿದ್ದರೆ. ಹಳದೀ ವರ್ಣದ ಶಾಲನ್ನು ಮೈಮೇಲೆ ಹೊದ್ದುಕೊಂಡಿದ್ದಾನೆ. ಈತನಿಗೆ ಆರುಕೈಗಳನ್ನು ಚಿತ್ರಿಸಲಾಗಿದ್ದು, ಆ ಕೈಗಳಲ್ಲಿ ತ್ರಿಶೂಲ, ಖಡ್ಗ, ಶಂಖ, ಢಮರುಗ, ಹಾವುಗಳನ್ನು. ಎಡಕೈಯೊಂದರಲ್ಲಿ ದಕ್ಷಬ್ರಹ್ಮನ ರುಂಡವನ್ನೂ ಹಿಡಿದುಕೊಂಡಿದ್ದಾನೆ. ವೀರಭದ್ರನು ಹಳದಿವರ್ಣದ ಒಂದು ಪೀಠದ ಮೇಲೆ ನಿಂತಿದ್ದು ಆತನ ಎಡಬಲಗಳಲ್ಲಿ ಒಂಭತ್ತು ಎಲೆಗಳನ್ನು ಹೊಂದಿದ ಎರಡು ಹಸಿರು ಗಿಡಗಳಿವೆ. ಚಿತ್ರದ ಚೌಕಟ್ಟನ್ನು ಸಾಲಾದ ಎಲೆಗಳನ್ನು ಚಿತ್ರಿಸುವ ಮೂಲಕ ಅಲಂಕರಿಸಿದ್ದಾರೆ. ಚಿತ್ರದಲ್ಲಿ ಮುಖ್ಯವಾಗಿ ಕೆಂಪು, ಕಂದು. ಹಳದಿ. ಹಸಿರು. ವರ್ಣಗಳನ್ನು ಬಳಸಲಾಗಿದೆ. ವರ್ಣವಿನ್ಯಾಸವು ಕಡುಪಾಗಿರುವುದರಿಂದ ಕಪ್ಪು ವರ್ಣದಲ್ಲಿ ಚಿತ್ರದ ಹೊರರೇಖೆ ಎಳೆದಿದ್ದಾರೆ. ಚಿತ್ರವು ಗ್ರಾಮೀಣ ಶೈಲಿಯನ್ನು ಹೋಲುತ್ತಿದ್ದು, ರೇಖೆಗಳು ಶಕ್ತಿಯುತವಾಗಿಲ್ಲ.

೩. ಅಲಂಕಾರಿಕ ಹೂಕುಂಡದ ಚಿತ್ರ : ವೀರಭದ್ರನ ಚಿತ್ರದ ಕೆಳಗಿನ ಒಂದು ಚಿಕ್ಕಚೌಕದಲ್ಲಿ ಅಲಂಕಾರಿಕ ಹೂಕುಂಡ ಒಂದನ್ನು ರಚಿಸಿದ್ದಾರೆ. ಸಾಮನ್ಯವಾಗಿರುವ ಅತ್ಯಂತ ಸರಳತೆಯಿಂದ ಕೂಡಿದ ಒಂದು ಹಳದೀ ವರ್ಣದ ಕುಂಡದಲ್ಲಿ ವರ್ಣದ ದೊಡ್ಡ ಎಲೆಗಳ ಗಿಡಗಳನ್ನು ಚಿತ್ರಿಸಲಾಗಿದೆ ಅದರಲ್ಲಿ ಸೂರ್ಯಕಾಂತಿ ಹೂಗಳನ್ನು ಹೋಲುವ ಹಳದೀ ಹೂಗಳನ್ನು ರಚಿಸಲಾಗಿದೆ. ಒಟ್ಟು ಐದು ದೊಡ್ಡ ಹೂಗಳಿದ್ದರೆ ಮೇಲೆ ಎರಡು ಮೊಗ್ಗೆಗಳಿವೆ. ಹೂ ಕುಂಡದ ಎಡಬಲಗಳಲ್ಲಿ ಎರಡು ಮಂಗಗಳು ನೆಲದ ಮೇಲೆ ಮಾನವರಹಾಗೆ ನಿಂತು ಹೂವಿನ ಗಿಡದಿಂದ ಏನನ್ನೋ ಕಿತ್ತು ತಿನ್ನುತ್ತಿವೆ. ಬಲಗಡೆಯ ಮಂಗ ಹಸಿರು ವರ್ಣದಲ್ಲಿದ್ದರೆ ಎಡಗಡೆಯ ಮಂಗ ಹಳದೀವರ್ಣದಲ್ಲಿದೆ. ಮಂಗಗಳು ನಿಂತ ನೆಲಭಾಗದಲ್ಲಿ ಅಲ್ಲಲ್ಲಿ ಹಸಿರು ಹುಲ್ಲು ಕಂಟಿಗಳನ್ನು ಚಿತ್ರಿಸಲಾಗಿದೆ. ಚಿತ್ರದ ಹೊರಚೌಕಟ್ಟನ್ನು ಎಲೆಗಳ ನಕ್ಷೆಯಿಂದ ಅಲಂಕರಿಸಲಾಗಿದ್ದು. ಚಿತ್ರದ ಹಿನ್ನೆಲೆ ವರ್ಣವು ಕಂದು ವರ್ಣದ್ದಾಗಿದೆ. ಚಿತ್ರದ ಹೊರರೇಖೆಗಳು ಕಪ್ಪು ವರ್ಣದಲ್ಲಿ ರಚನೆಯಾಗಿದ್ದು. ಅಷ್ಟೊಂದು ಶಕ್ತಿಶಾಲಿಯಾಗಿ ಮೂಡಿಬಂದಿಲ್ಲ.

***II. ಪೂರ್ವ ಗೋಡೆಯ ಚಿತ್ರಗಳು :*** ಪೂರ್ವ ಗೋಡೆಯಲ್ಲಿ ಕೇವಲ ಒಂದು ಚಿತ್ರ ಪಟ್ಟಿಕೆ ಮಾತ್ರ ಉಳಿದಿದ್ದು ಈ ಪಟ್ಟಿಕೆಯೊಂದರಲ್ಲೇ ಅನೇಕ ವಿಷಯಗಳಿಗೆ ಸಂಬಂಧಿಸಿದ ಚಿತ್ರಗಳನ್ನು ರಚಿಸಲಾಗಿದೆ. ಈ ಚಿತ್ರಪಟ್ಟಿಕೆಯು ಅತ್ಯಂತ

ವಿಶಾಲವಾಗಿದ್ದು ಆಯತಾಕಾರದಲ್ಲಿ ಸುಮಾರು ೧೨x೫ ಪೂಟುಗಳ ಅಳತೆಯಲ್ಲಿದೆ. ಈ ಪಟ್ಟಿಕೆಯಲ್ಲಿ ಇರುವ ಚಿತ್ರಗಳು ಬೇರೆ ಬೇರೆ ವಿಷಯಕ್ಕೆ ಸಂಬಂಧಿಸಿದಂತೆ ಇರುವುದಲ್ಲದೇ ಬೇರೆ ಬೇರೆ ಶೈಲಿಯಲ್ಲಿಯೂ ಇವೆ. ಹಾಗಾಗಿ ಒಂದೇ ಪಟ್ಟಿಕೆಯಲ್ಲೇ ಹಲವು ಕಲಾವಿದರು ಕೂಡಿ ಚಿತ್ರರಚನೆ ಮಾಡಿದ್ದಾರೆ. ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು ಮಹೇಶ್ವರರಿಗೆ ಸಂಬಂಧಿಸಿದ ಚಿತ್ರಗಳಲ್ಲದೇ ಗಣಪತಿ, ಸರಸ್ವತಿ, ಲಕ್ಷ್ಮೀ, ಕೃಷ್ಣ, ಇಂದ್ರ, ದತ್ತಾತ್ರೇಯ ಮುಂತಾದ ದೇವತೆಗಳು, ಋಷಿಮುನಿಗಳ ಚಿತ್ರಗಳು. ಅಲ್ಲದೇ ಮಠದ ಸ್ವಾಮಿಗಳ ಮಹಿಮೆಯನ್ನು ಸಾರುವ ಅನೇಕ ಘಟನಾವಳಿಗಳ ಚಿತ್ರಗಳೂ ಇಲ್ಲಿವೆ. ಈ ಚಿತ್ರ ಪಟ್ಟಿಕೆಯಲ್ಲಿ ಎಷ್ಟೊಂದು ಆಕೃತಿಗಳಿವೆ ಎಂದರೆ ಕಣ್ಣು ಹಾಯಿಸಿದ ಪ್ರತಿಯೊಂದು ಭಾಗದಲ್ಲೂ ಇರುವೆಗಳ ಗುಂಪಿನಂತೆ ಮಾನವಾಕೃತಿಗಳೇ ಕಾಣುವವು. ಮಾನವಾಕೃತಿಗಳಂತೆ ಅಲ್ಲಲ್ಲಿ ವಿಷಯಕ್ಕೆ ಸಂಬಂಧಪಟ್ಟಂತೆ ಪ್ರಾಣಿಗಳು ಪಕ್ಷಿಗಳು, ಗಿಡಮರಗಳು, ಬೆಟ್ಟಗುಡ್ಡಗಳು, ಗವಿಗಳೂ ರಚನೆಗೊಂಡಿವೆ. ಈ ಚಿತ್ರ ಪಟ್ಟಿಕೆಯಲ್ಲಿರುವ ಚಿತ್ರಗಳನ್ನು ಕೆಳಗಿನಂತೆ ಮೂರು ವಿಧದಲ್ಲಿ ವಿಂಗಡಿಸಬಹುದು.

೧. ದೇವತಾ ಚಿತ್ರಗಳು

೨. ಮುಸ್ಲಿಂ ಸಂತರ ಚಿತ್ರಗಳು

೩. ಮಠದ ಸ್ವಾಮಿಗಳಿಗೆ ಸಂಬಂಧಿಸಿದ ಚಿತ್ರಗಳು

*೧. ದೇವತಾ ಚಿತ್ರಗಳು :* ದೇವತಾ ಚಿತ್ರಗಳಲ್ಲಿ ಈ ಕೆಳಗಿನ ಚಿತ್ರಗಳು ಒಳಗೊಳ್ಳುತ್ತವೆ.

I. ಬ್ರಹ್ಮಸರಸ್ವತಿ ಚಿತ್ರ : ಚಿತ್ರಪಟ್ಟಿಕೆಯಲ್ಲಿ ಅತ್ಯಂತ ಮೇಲೆ ಮೊದಲಸಾಲಿನಲ್ಲಿ ಬಲಭಾಗದ ಮೂಲೆಯಲ್ಲಿ ಚತುರ್ಮುಖ ಬ್ರಹ್ಮನು ಚಿತ್ರಿತನಾಗಿದ್ದಾನೆ. ಇಲ್ಲಿ ಬ್ರಹ್ಮನು ಕಮಲದ ಮೇಲೆ ಚಿತ್ರಿಸಿರದೇ ಅಲಂಕೃತ ಪೀಠದ ಮೇಲೆ ಕುಳಿತು ಹಿಂದಿನ ದಿಂಬಿಗೆ ಆನಿಸಿದಂತೆ ಚಿತ್ರಿಸಿದ್ದಾರೆ. ಆತನ ಪಕ್ಕದಲ್ಲಿ ಒಂದು ಅಲಂಕೃತ ಗಿಡವೂ ಬಲಭಾಗದಲ್ಲಿದೆ. ಇನ್ನೂ ಬಲಕ್ಕೆ ಮೂವರು ಋಷಿಗಳು ಕೈಮುಗಿದು ಬ್ರಹ್ಮನನ್ನು ಪ್ರಾರ್ಥಿಸುತ್ತಿದ್ದಾರೆ. ಋಷಿಗಳು ಹಳದೀ ವರ್ಣದ ಪಂಚೆ ತೊಟ್ಟು ಜಾಕೀಟಿನಂತಹ ಮುಸ್ಲಿಂ ಶೈಲಿಯ ಅಂಗಿಯನ್ನು ತೊಟ್ಟಿದ್ದಾರೆ. ಅದರಲ್ಲಿ ಒಬ್ಬ ಋಷಿಯ ಅಂಗಿ ಕಪ್ಪು ವರ್ಣದಲ್ಲಿದೆ. ಈ ಮೊದಲ ಸಾಲಿನ ಎಡಭಾಗದ ಕೊನೆಯಲ್ಲಿ ಮತ್ತೆ ಬ್ರಹ್ಮ ಸರಸ್ವತಿಯರನ್ನು ಚಿತ್ರಿಸಿದ್ದಾರೆ. ಅವರ ಎದುರಿಗೆ ನಾಲ್ಕು ಜನ ಋಷಿಗಳು ಕೈಮುಗಿದು ಕುಳಿತಿದ್ದಾರೆ. ಚತುರ್ಮುಖ ಬ್ರಹ್ಮನು ಇಲ್ಲಿಯೂ ಹಿಂದಿನ ದಿಂಬಿಗೆ ಆತುಕೊಂಡು ಕುಳಿತಿದ್ದಾನೆ. ಆತನ ಬಲಗಡೆಗೆ ಸರಸ್ವತಿಯು ವೀಣೆನುಡಿಸುತ್ತಿದ್ದಾಳೆ. ಸರಸ್ವತಿಗೆ ಹಸಿರು ಸೀರೆ ಚಿತ್ರಿಸಲಾಗಿದೆ. ಬ್ರಹ್ಮನ ಎಡಕ್ಕೆ ಒಂದು, ಸರಸ್ವತಿಯ ಬಲಕ್ಕೊಂದು ಹಸಿರು ತುಂಬಿದ ಗಿಡಗಳಿವೆ. ಇವರ ಎದುರಿಗೆ ಕುಳಿತ ನಾಲ್ಕು ಋಷಿಗಳಲ್ಲಿ ಒಬ್ಬ ಋಷಿಯ ಶಾಲು ಕಪ್ಪು ವರ್ಣದಲ್ಲಿದೆ. ಬಲ ಮೂಲೆಯ ಚಿತ್ರಗಳಿಂದ ಎಡಮೂಲೆಯ ಚಿತ್ರಗಳ ಮಧ್ಯೆ ಇರುವ ಖಾಲಿ ಸ್ಥಳದಲ್ಲಿ ಸುಂದರವಾದ ಶೈಲಿಕೃತ ಅಲಂಕಾರಿಕ ತೂಗು ದೀಪಗಳನ್ನು ಚಿತ್ರಿಸಿದ್ದಾರೆ. ಇವು ಕಪ್ಪು, ಹಸಿರು, ನೀಲಿ, ಹಳದಿ ವರ್ಣದಲ್ಲಿವೆ. ಈ ಚಿತ್ರಗಳ ಹೊರರೇಖೆಗಳು ಕಂದು ವರ್ಣದಲ್ಲಿದ್ದು, ಜೀವಂತಿಕೆಯಿಂದ ಕೂಡಿದೆ.

II. ಕೃಷ್ಣನು ಕಂಸನನ್ನು ಕೊಲ್ಲುತ್ತಿರುವ ಚಿತ್ರ : ಪೂರ್ವಗೋಡೆಯ ಚಿತ್ರಪಟ್ಟಿಕೆಯಲ್ಲಿ ಬಲಭಾಗದಲ್ಲಿ ಒಂದು ಕಡೆಗೆ ಕೃಷ್ಣನು ಕಂಸನನ್ನು ಕೊಲ್ಲುತ್ತಿರುವ ದೃಶ್ಯ ಚಿತ್ರಣಗೊಂಡಿದೆ. ಚಿತ್ರದಲ್ಲಿ ಕೃಷ್ಣನು ಕಂಸನನ್ನು ಕೆಳಕ್ಕೆ ಹಾಕಿ

ಆತನ ಕಾಲನ್ನು ತನ್ನ ಒಂದು ಕಾಲಿನಿಂದ ಮೆಟ್ಟಿನಿಂತು ಮತ್ತೊಂದು ಕಾಲನ್ನು ಹಿಡಿದು ಆತನನ್ನು ಸೀಳುತ್ತ ಬಲಗೈಯಲ್ಲಿರುವ ಗಧೆಯಿಂದ ಪ್ರಹಾರ ಮಾಡುತ್ತಿದ್ದಾನೆ. ಕಂಸನು ಕೈಯಲ್ಲಿ ಖಡ್ಗ ಢಾಲುಗಳನ್ನು ಹಿಡಿದುಕೊಂಡಿದ್ದರೂ ಕೃಷ್ಣನ ಪ್ರಹಾರ ರಭಸಕ್ಕೆ ನೆಲಕ್ಕೊರಗಿ ಬಿದ್ದಿದ್ದಾನೆ. ಚಿತ್ರದ ಮೇಲ್ಭಾಗದಲ್ಲಿ ಎರಡು ಪಕ್ಷಿಗಳನ್ನು ರಚಿಸಿದ್ದರೆ, ಕೆಳಭಾಗದಲ್ಲಿ ನಾಲ್ಕುಗಿಡಗಳು ಚಿತ್ರಣಗೊಂಡಿವೆ. ಚಿತ್ರದ ಹಿನ್ನೆಲೆ ವರ್ಣವು ಕೆಂಪಾಗಿದೆ.

III. ವೀಣೆ ನುಡಿಸುತ್ತಿರುವ ಸರಸ್ವತಿಯ ಚಿತ್ರ : ಇಲ್ಲಿನ ಒಂದು ಚಿತ್ರದಲ್ಲಿ ಸರಸ್ವತಿಯು ಸಿಂಹಾಸನದಂತಿರುವ ಅಲಂಕೃತ ಪೀಠವೊಂದರ ಮೇಲೆ ಕುಳಿತು ವೀಣೆಬಾರಿಸುತ್ತಿದ್ದಾಳೆ. ಒಂದು ಕಾಲನ್ನು ಮೇಲೆ ಮಾಡಿಕೊಂಡು ಇನ್ನೊಂದು ಕಾಲನ್ನು ಮಡಚಿಕೊಂಡು ಕುಳಿತ ಭಂಗಿ ಆಕರ್ಷಕವಾಗಿದೆ. ಬಲಗೈಯಿಂದ ವೀಣೆ ಬಾರಿಸುತ್ತಿದ್ದು ಎಡಗೈಯಲ್ಲಿ ಪುಷ್ಪ ಒಂದನ್ನು ಹಿಡಿದು ಮೂಸುತ್ತಿದ್ದಾಳೆ. ಕುಳಿತ ಪೀಠವು ಸುಂದರವಾಗಿದ್ದು ಎಡಗಡೆಗೆ ಕೆಂಪುವರ್ಣದ ದಿಂಬಿನಂತಹ ಲೋಡು ಇದೆ. ಹಿಂದೆ ಹಸಿರುವರ್ಣದ ಪ್ರಭಾವಳಿಯ ಮಂಟಪವಿದ್ದು, ಆ ಮಂಟಪದ ತುದಿಯಲ್ಲಿರುವ ಕೊಡೆಯಾಕಾರದ ಅಲಂಕಾರಯುಕ್ತವಾದ ಛತ್ರದ ತುದಿಗೆ ಈ ಮಠದ ಮೂಲ ದೈವವಾದ ಮಹಾಲಿಂಗೇಶ್ವರರ ಸಂಕೇತದ ಮುಖವಿದೆ. ಇಂತಹುದೆ ಮುಖವನ್ನು ಮಠದಲ್ಲಿರುವ ಗರ್ಭಗೃಹದಲ್ಲಿಯೂ ಬೆಳ್ಳಿಯಲ್ಲಿ ಮಾಡಿ ಇಟ್ಟಿರುವುದನ್ನು ನೋಡಬಹುದು.

ವೀಣೆ ಬಾರಿಸುತ್ತಿರುವ ಸರಸ್ವತಿಯು ದಟ್ಟಹಸಿರು ವರ್ಣದ ಸೀರೆ ಉಟ್ಟಿದ್ದಾಳೆ. ಈ ಸೀರೆಯು ಕೆಂಪು ಹಳದಿ ಧಡಿಯನ್ನು ಹೊಂದಿದ್ದು ಮಧ್ಯದಲ್ಲಿ ಹೂವಿನ ನಕ್ಷೆಗಳನ್ನು ಹೊಂದಿದೆ. ತಲೆಗೂದಲನ್ನು ತುರುಬಾಗಿ ಕಟ್ಟಿದ್ದು ಆ ತುರುಬು ಮುಚ್ಚುವಂತೆ ಅರ್ಧತಲೆಗೆ ಸೆರಗನ್ನು ಹೊದ್ದು ಕೊಂಡಿದ್ದಾಳೆ. ಮೀನಿನಾಕಾರದ ಕಣ್ಣು, ಕಾಮನ ಬಿಲ್ಲಿನಂತಿರುವ ಹುಬ್ಬು, ಮೂಗಿನಲ್ಲಿರುವ ರಿಂಗಿನಾಕಾರದ ಮೂಗುತಿ ಅವಳ ಮುಖಕ್ಕೆ ಹೆಚ್ಚಿನ ಅಂದವನ್ನು ಕೊಟ್ಟಿದೆ. ಕುಂಕುಮವನ್ನು ಹಣೆಯಲ್ಲಿ ಅಡ್ಡ ಪಟ್ಟಿಯಾಗಿ ಹಚ್ಚಿ ಕೊಂಡಿದ್ದಾಳೆ. ಇವಳ ಮುಂದುಗಡೆ ನವಿಲೊಂದು ಸಂತೋಷದಿಂದ ಆಪುತ್ತಲಿದ್ದು, ಕತ್ತು ತಿರುವಿ ನೋಡುತ್ತಲಿದೆ. ವೀಣಾಪಾಣಿ ಸರಸ್ವತಿಯು ಎಡ ಬಲಗಳಲ್ಲಿ ಮಹಿಳೆಯರಿಬ್ಬರು ಚಾಮರ ಬೀಸುತ್ತ ನಿಂತಿದ್ದಾರೆ. ಅವರ ಪಕ್ಕದಲ್ಲಿ ದೊಡ್ಡ ದೊಡ್ಡ ಹಳದೀ ಹೂಗಳ ಗಿಡ ಬೆಳೆದಿವೆ. ಚಾಮರ ಬೀಸುತ್ತಿರುವ ಮಹಿಳೆಯರು ಕೆಂಪುಸೀರೆ ಉಟ್ಟುಕೊಂಡು ಕಪ್ಪಿನಿಂದ ಕೂಡಿದ ಕಡುಹಸಿರುವರ್ಣದ ಕುಪ್ಪಸ ತೊಟ್ಟುಕೊಂಡಿದ್ದಾರೆ. ಈ ಕೆಂಪು ಸೀರೆಗಳು ಮಧ್ಯದಲ್ಲಿ ಹೂವಿನ ನಕ್ಷೆಯನ್ನು ಸೆರಗಿನ ತುದಿಯಲ್ಲಿ ಬಂಗಾರ ವರ್ಣದ ಜರಿಯ ಅಂಚನ್ನು ಹೊಂದಿವೆ. ಎಡಗಡೆಯ ಮಹಿಳೆಯ ಸೀರೆ ಪಾರದರ್ಶಕವಾಗಿದೆ. ಇಬ್ಬರೂ ಸ್ತ್ರೀಯರು ಹೊಕ್ಕಳವರೆಗೂ ಇಳಿಬಿದ್ದ ಕೊರಳ ಸರವನ್ನು ಧರಿಸಿದ್ದಾರೆ. ವೀಣೆ ನುಡಿಸುತ್ತಿರುವ ಮಹಿಳೆಯ ಮೇಲ್ಭಾಗದಲ್ಲಿ ಮುಖಕ್ಕೆ ಎದುರಾಗಿ ಆರತಿ ತಟ್ಟೆಯನ್ನು ಚಿತ್ರಿಸಲಾಗಿದ್ದು ಅದರಲ್ಲಿ ಫಲತಾಂಬೂಲ ಕಳಶಗಳು ಇವೆ. ಈ ಒಟ್ಟು ಚಿತ್ರವನ್ನು ಗಮನಿಸಿದಾಗ ಇದು ವೀಣಾಪಾಣಿ ಸರಸ್ವತಿಯ ಚಿತ್ರವಾಗಿದೆ ಎಂದು ಹೇಳಬಹುದು. ಈ ಚಿತ್ರಪಟ್ಟಿಕೆಯಲ್ಲಿ ಬರುವ ದೇವಾನು ದೇವತೆಗಳನ್ನು ಸಾಮಾನ್ಯ ಮನುಷ್ಯರ ಹಾಗೆ ರಚಿಸಿ ಅವರಂತೆಯೇ ಅಂಗಿ, ಧೋತರ, ಮುಂತಾದ ವೇಷಭೂಷಣಗಳನ್ನು ಚಿತ್ರಿಸಿದ್ದಾರಲ್ಲದೇ, ದೇವತೆಗಳ ರೂಢವಾದ ನೋಟಗಳ ಬದಲಾಗಿ ಅವರು ಸಾಮಾನ್ಯರಂತೆ ಚಟುವಟಿಕೆಯಲ್ಲಿ ತೊಡಗಿದಂತೆಯೂ ಚಿತ್ರಿಸಲಾಗಿದೆ. ಬ್ರಹ್ಮನು ಕಮಲದ ಮೇಲೆ ಕುಳಿತಿರದೇ ನೆಲದಮೇಲೆ ಕುಳಿತಿರುವುದು, ಆತನ ಪಕ್ಕದಲ್ಲಿ ಸರಸ್ವತಿಯೂ ಕಮಲಹೂವಿನ ಮೇಲೆ ಅಥವಾ ನವಿಲಿನ ಮೇಲೆ ಕುಳಿತುಕೊಳ್ಳದೇ ನೆಲದ ಮೇಲೆ ಕುಳಿತಿದ್ದು ಮೇಲಿನ ಸಾಲಿನ ಚಿತ್ರದಲ್ಲಿ ಕಾಣಬಹುದು. ಸರಸ್ವತಿ ಚಿತ್ರವು ವರ್ಣವಿನ್ಯಾಸ, ಚಿತ್ರ ಸಂಯೋಜನೆ, ರೇಖಾ ವಿನ್ಯಾಸದಿಂದ

ಅತ್ಯಂತ ಉತ್ತಮವಾದ ಕೃತಿಯಾಗಿದೆ. ಚಿತ್ರದ ಹೊರರೇಖೆಗಳು ಅತ್ಯಂತ ಶಕ್ತಿಯುತವಾಗಿದ್ದು ಜೀವಂತಿಕೆಯಿಂದ ಕೂಡಿವೆ. ಆಕೃತಿಗಳೂ ಪ್ರಮಾಣಬದ್ಧವಾಗಿ ರಚಿಸಿವೆ. ಚಿತ್ರಗಳ ಭಾವಭಂಗಿ ಆಕರ್ಷಕವಾಗಿವೆ. ಈ ಚಿತ್ರವು ಈ ಇಡೀ ಪಟ್ಟಿಕೆಯಲ್ಲಿ ಅಲ್ಲದೇ ಮಹಾಲಿಂಗಪುರದ ಚಿತ್ರಗಳಲ್ಲೇ ಅತ್ಯಂತ ಉತ್ಕೃಷ್ಟ ಕೃತಿಯಾಗಿದೆ. ಕಿರುರೂಪ ಶೈಲಿಯ ಚಿತ್ರಗಳ ವಿಸ್ತೃತ ರೂಪದಂತಿರುವ ಈ ಕೃತಿ, ಪೇಶ್ವೆಶೈಲಿಯಲ್ಲಿದೆ.

IV. ಗಣಪತಿಯ ಚಿತ್ರ : ವೀಣಾಪಾಣಿ ಸರಸ್ವತಿಯ ಚಿತ್ರದ ಎಡಗಡೆಗೆ ಸುಂದರವಾದ ಗಣಪತಿಯ ಚಿತ್ರವೊಂದಿದೆ. ಗಣಪತಿಯು ಅಲಂಕೃತ ಪೀಠವೊಂದರ ಮೇಲೆ ಹಿಂದಿರುವ ದಿಂಬಿಗೆ ಒರಗಿಕೊಂಡು ಕುಳಿತಿದ್ದಾನೆ. ಪೀಠದ ಹಿಂದಿರುವ ಪ್ರಭಾವಳಿ ಇಲ್ಲಿಯೂ ವೀಣಾಪಾಣಿ ಮಹಿಳೆಯ ಚಿತ್ರದಂತೆಯೇ ಇದ್ದು ಅದರ ಮೇಲ್ಭಾಗದಲ್ಲಿ ಮಠದ ದೈವವಾದ ಮಹಾಲಿಂಗೇಶ್ವರರ ಸಾಂಕೇತಿಕ ಮುಖವಿದೆ. ಗಣಪತಿಯು ಕಂದುವರ್ಣದ, ಚುಕ್ಕಿಗಳಿರುವ ಉದ್ದ ತೋಳಿನ ಪೇಶ್ವೆ ಶೈಲಿಯ ಅಂಗಿಯನ್ನು ತೊಟ್ಟುಕೊಂಡಿದ್ದಾನೆ. ಹೊಟ್ಟೆಯು ಅಂಗಿಯನ್ನು ಮೀರಿ ಹೊರಬಂದಿದೆ. ನಾಲ್ಕು ಕೈಗಳ ಗಣಪತಿಯು ಪದ್ಮಾಸನ ಹಾಕಿ ಕುಳಿತಿದ್ದಾನೆ. ಇಂತಹುದೇ ಶೈಲಿಯ ಗಣಪತಿ ಚಿತ್ರ ಅಮ್ಮಿನಭಾವಿಯ ಮಠದಲ್ಲೂ ಇದೆ. ಎರಡೂ ಮಠಗಳೂ ಒಂದೇ ಶೈಲಿಯಲ್ಲಿ ರಚನೆಯಾಗಿದ್ದು ಗಮನಾರ್ಹವಾಗಿದೆ. ಈ ಗಣಪತಿಯ ಚಿತ್ರದ ಎದುರಿಗೆ ಐರ್ವಮಹಿಳೆ ಆರತಿ ಬೆಳಗುತ್ತ ನಿಂತಿದ್ದರೆ ಎಡಭಾಗದಲ್ಲಿ ಇನ್ನೋರ್ವ ಮಹಿಳೆ ಚಾಮರ ಬೀಸುತ್ತ ನಿಂತಿದ್ದಾಳೆ. ಇಬ್ಬರೂ ಮಹಿಳೆಯರು ತೆಳು ಹಳದೀ ವರ್ಣದ ಸೀರೆ ಉಟ್ಟುಕೊಂಡು ಕೆಂಪು ವರ್ಣದ ಕುಪ್ಪಸ ತೊಟ್ಟಿದ್ದಾರೆ. ತಲೆಗೂದಲನ್ನು ತುರುಬಾಗಿ ಕಟ್ಟಿಕೊಂಡು ತುರುಬು ಮುಚ್ಚುವಂತೆ ಅರ್ಧ ತಲೆಗೆ ಸೆರಗನ್ನು ಹೊದ್ದುಕೊಂಡಿದ್ದಾರೆ. ಹೊಕ್ಕಳ ವರೆಗೆ ಇಳಿಬಿದ್ದ ಕೊರಳ ಸರ, ಮೂಗಿನಲ್ಲಿ ರಿಂಗಿನಂತಹ ಆಕರ್ಷಕ ಮೂಗುನತ್ತುಗಳನ್ನು ಇಬ್ಬರೂ ಧರಿಸಿದ್ದಾರೆ. ಗಣಪತಿಯ ಮೇಲ್ಭಾಗದಲ್ಲಿ ಆತನ ಮುಖಕ್ಕೆ ಎದುರಾಗಿ ಒಂದು ಪಾತ್ರೆಯ ತುಂಬ ಆಹಾರ ಪದಾರ್ಥ ತುಂಬಿ ಇಟ್ಟಿದ್ದು ಅವುಗಳನ್ನು ಗಿಳಿಗಳೆರಡು ಕುಕ್ಕಿ ತಿನ್ನುತ್ತಿವೆ. ವರ್ಣವಿನ್ಯಾಸ, ರೇಖಾವಿನ್ಯಾಸಗಳಿಂದ ಚಿತ್ರವು ಉತ್ತಮವಾಗಿದೆ. ವರ್ಣವಿನ್ಯಾಸವು ಪ್ರಖರವರ್ಣಗಳಿಂದ ಕೂಡಿದ್ದರೂ ಅವುಗಳನ್ನು ಮಿಶ್ರಮಾಡುವ ರೀತಿ, ಹದವರಿತು ಸಂಯಮದಿಂದ ಅವುಗಳನ್ನು ಬಳಸಿದ ರೀತಿಯಿಂದ ವರ್ಣಗಳು ಕಣ್ಣಿಗೆ ತಂಪಾದ ಅನುಭವ ಕೊಡುತ್ತವೆ.

V. ನಂದಿಯ ಮೇಲೆ ಬರುತ್ತಿರುವ ಶಿವ : ಎರಡನೆಯ ಸಾಲಿನಲ್ಲಿ ಮಧ್ಯದಲ್ಲಿ ಶಿವನು ನಂದಿಯ ಮೇಲೆ ಕುಳಿತು ಬರುತ್ತಿದ್ದಾನೆ. ಅಲಂಕೃತವಾದ ನಂದಿಯಮೇಲೆ ಕುಳಿತು ಬರುತ್ತಿರುವ ಶಿವನು ಹಸನ್ಮುಖನಾಗಿದ್ದಾನೆ. ಶಿವನ ಹಿಂದೆ ಶಿವಗಣಗಳು ಛತ್ರಚಾಮರ ಹಿಡಿದು ಬರುತ್ತಿದ್ದಾರೆ ಗಣಗಳ ಹಿಂದೆ ಗಣಪತಿ, ನಾರದ, ವೀರಭದ್ರರೂ ಅವರೊಂದಿಗೆ ನಡೆಯುತ್ತಿದ್ದಾರೆ. ನಡೆದುಬರುತ್ತಿರುವ ಗಣಪತಿಯು ಕಿರೀಟ ಧರಿಸಿದ್ದು, ಹಳದೀ ವರ್ಣದ ಪಂಚೆ ಉಟ್ಟುಕೊಂಡು ಪೇಶ್ವೆ ಶೈಲಿಯಲ್ಲಿ ಉದ್ದುತೋಳಿನ ಕೆಂಪಂಗಿಯನ್ನು ತೊಟ್ಟಿದ್ದಾನೆ.

VI. ದೇವತಾಪುರುಷರು : ಶಿವನ ಎದುರಿನಲ್ಲಿ ಎಂಟುಮಂದಿ ಕಿರೀಟಧರಿಸಿದ ದೇವತೆಗಳು ಕೈಮುಗಿದು ಆತನನ್ನು ಬರಮಾಡಿಕೊಳ್ಳುತ್ತಿದ್ದಾರೆ. ಇವರಲ್ಲಿ ಒಬ್ಬನು ಎರಡು ಮುಖಗಳನ್ನು ಹೊಂದಿದವನೂ ಇದ್ದಾನೆ. ಇವರೆಲ್ಲರೂ ಪಂಚೆಉಟ್ಟುಕೊಂಡು ಉದ್ದತೋಳಿನ ಕೋಟಿನಹಾಗಿರುವ ಅಂಗಿಯನ್ನು ಧರಿಸಿದ್ದಾರೆ. ಮತ್ತೆ ಅಂಗಿಯ ಮೇಲೆ ಜಾಕೀಟಿನಂತಹ ಕಿರು ಅಂಗಿಗಳನ್ನು ಎಲ್ಲರೂ ಧರಿಸಿದ್ದಾರೆ. ಇವರೆಲ್ಲ ಎಡಗಾಲನ್ನು ಮೇಲೆತ್ತಿ ಬಲಗಾಲನ್ನು ಒಂದು ಅಗಲವಾದ ಹೂವಿನ ಮೇಲೆ ಇಟ್ಟು ಒಂದೇ ಕಾಲಿನ ಮೇಲೆ ನಿಂತಿದ್ದಾರೆ.

ಮಹಾಲಿಂಗಪುರದ ದೇವತಾ ಚಿತ್ರಗಳು ವೇಷಭೂಷಣ. ವಸ್ತ್ರವಿನ್ಯಾಸಗಳು ಸಹಜ ಮನುಷ್ಯರ ಹಾಗಿದ್ದು ಇಲ್ಲಿ ದೇವತೆಗಳನ್ನು ಮನುಷ್ಯರಿಂದ ಪ್ರತ್ಯೇಕಿಸುವ ಪ್ರಯತ್ನವಿಲ್ಲ. ದೇವತೆಗಳೆಂದರೆ ಅತೀತವೆನಿಸುವ ಭಾವನೆಯ ಬದಲಾಗಿ ಮನುಷ್ಯತ್ವ. ಮಾನವೀಯತೆ. ಪ್ರೀತಿ. ಮಮತೆಗಳಂತಹ ಮಾನವೀಯ ಮೌಲ್ಯಗಳು ಹೊಂದಿದ ವ್ಯಕ್ತಿಯೇ ದೇವತಾಸ್ವರೂಪ ಎನ್ನುವ ೧೨ ನೇ ಶತಮಾನದ ಶರಣರ ತತ್ವ ಆದರ್ಶಗಳಿಗನುಸಾರವಾಗಿ ಮನುಷ್ಯರೂಪದಲ್ಲೇ ದೇವತೆಗಳನ್ನು ಕಾಣುವ ಸಾಂಕೇತಿಕ ನಿರೂಪಣೆ ಇಲ್ಲಿನ ಚಿತ್ರಗಳಲ್ಲಿದೆ.

*೨. ಮುಸ್ಲಿಂ ವ್ಯಕ್ತಿಗಳ ಚಿತ್ರಗಳು :* ಪೂರ್ವಗೋಡೆಯ ಚೌಕದಲ್ಲಿರುವ ಚಿತ್ರಗಳಲ್ಲಿ ಮೇಲಿನಿಂದ ಎರಡನೆಯ ಸಾಲಿನಲ್ಲಿ ಬಲಭಾಗದಲ್ಲಿ ಐದುಜನ ಮುಸ್ಲಿಂ ವ್ಯಕ್ತಿಗಳು ಚಿತ್ರಿತರಾಗಿದ್ದಾರೆ. ಇವರು ಟೊಪ್ಪಿಗೆ ಧರಿಸಿದ್ದು ಗಡ್ಡ ಬಿಟ್ಟಿದ್ದಾರೆ. ಕೊರಳಲ್ಲಿ ರುದ್ರಾಕ್ಷಿಯೂ ಇದ್ದು. ಮುಸ್ಲಿಂ ಸಂತರಾದ ಸೂಫಿಗಳು ಮತ್ತು ಫಕೀರರಂತೆ ಕಾಣುತ್ತಾರೆ. ಇವರೂ ಸಹಿತ ಜಾಕೀಟಿನಂತಹ ಕಿರು ಅಂಗಿಯನ್ನು ತೊಟ್ಟಿದ್ದು ಹಣೆಯಲ್ಲಿ ವಿಭೂತಿ ಧಾರಣಮಾಡಿದ್ದಾರೆ. ಈ ಮಠಕ್ಕೆ ಹಿಂದಿನಿಂದಲೂ ಮುಸ್ಲಿಂ ಧಾರ್ಮಿಕರೂ ಸಹಿತ ಭಕ್ತಿ ತೋರುತ್ತಿದ್ದರೆಂದು ಈ ಚಿತ್ರಗಳಿಂದ ಹೇಳಬಹುದು. ಅಲ್ಲದೇ ಈಗಲೂ ಅನೇಕ ಜನ ಮುಸ್ಲಿಮರು ಈ ಮಠಕ್ಕೆ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ವಿಜಾಪುರದ ಸುಲ್ತಾನರು ಸಹಿತ ಈ ಮಠದ ಬಗ್ಗೆ ಗೌರವಉಳ್ಳವರಾಗಿದ್ದರಲ್ಲದೇ ಮಠಕ್ಕೆ ಸನದು ಕೊಟ್ಟಿರುವುದು[೮೨] ತಿಳಿದುಬರುತ್ತದೆ.

*೩. ಮಠದ ಸ್ವಾಮಿಗಳಿಗೆ ಸಂಬಂಧಿಸಿದ ಚಿತ್ರಗಳು :* ಇವುಗಳಲ್ಲಿ ಮತ್ತೆ ಈ ಕೆಳಗಿನಂತೆ ಎರಡು ರೀತಿಯಲ್ಲಿ ವಿಂಡಗಿಸಬಹುದು.

I. ತಪಸ್ಸಿನ ಚಿತ್ರಗಳು

II. ಪವಾಡದ ಚಿತ್ರಗಳು

*I. ತಪಸ್ಸಿನ ಚಿತ್ರಗಳು :* ಮಠದ ಸ್ವಾಮಿಗಳಿಗೆ ಸಂಬಂಧಿಸಿದ ಚಿತ್ರಗಳಲ್ಲಿ ಮಹಲಿಂಗೇಶ್ವರರು ತಪಸ್ಸನ್ನಾಚರಿಸುತ್ತಿರುವ ಅನೇಕ ಚಿತ್ರಗಳಿವೆ. ಮಹಲಿಂಗಪುರದ ಸಮೀಪವಿರುವ ಚೆನ್ನಗಿರಿ ಎಂಬ ಚಿಕ್ಕ ಬೆಟ್ಟಪ್ರದೇಶದಲ್ಲಿ ಮಹಲಿಂಗಸ್ವಾಮಿಗಳು ತಪಸ್ಸನ್ನಾಚರಿಸಿದ್ದು. ಅವರ ತಪಸ್ಸಿನ ವಿವಿಧ ಭಂಗಿಗಳು ಇಲ್ಲಿ ಚಿತ್ರಿಸಲ್ಪಟ್ಟಿವೆ. ಹಿನ್ನೆಲೆಯಲ್ಲಿ ಗಿಡಮರಗಳು ಅವುಗಳಲ್ಲಿ ಮಂಗ. ಗಿಳಿಗಳು ಚಿತ್ರಿಸಿದ್ದು ತಪೋಭೂಮಿಯ ಕಲ್ಪನೆ ಕೊಡುತ್ತಿವೆ. ಸ್ವಾಮಿಗಳು ತಪಸ್ಸಾನ್ನಾಚರಿಸುತ್ತಿರುವ ವಿವಿಧ ಭಂಗಿಗಳು ಹೀಗಿವೆ. – ಜಟಾಧಾರಿಯಾದ ಗಡ್ಡಮೀಸೆಗಳನ್ನು ಬಿಟ್ಟುಕೊಂಡಿರುವ ಮುನಿಯು ಬರೀ ಕೌಪೀನ ಧರಿಸಿಕೊಂಡಿದ್ದು ಲಿಂಗಪೂಜೆಯಲ್ಲಿ ತೊಡಗಿದ್ದಾನೆ. ನೀಲವರ್ಣದ ಈಶ್ವರಲಿಂಗಕ್ಕೆ ತನ್ನಕಮಂಡಲದಿಂದ ನೀರನ್ನು ಹಾಕಿ ಹೂಗಳನ್ನು ಸಮರ್ಪಿಸುತ್ತಿದ್ದಾನೆ. ಪಕ್ಕದಲ್ಲಿ ಬಾಳೇಗಿಡ ಮತ್ತಿತ್ತರ ಗಿಡಗಂಟಿಗಳು ಬೆಳೆದಿದ್ದು ವಿವಿಧ ಬಗೆಯ ಪಕ್ಷಿಸಮೂಹ ಅಲ್ಲಿ ಚಿಲಿಪಿಲಿಗುಟ್ಟುತ್ತಿವೆ. ಮತ್ತೊಂದು ಕಡೆಗೆ ಮುನಿಯು ಕೌಪೀನ ಧಾರಿಯಾಗಿದ್ದು ತಲೆ ಕೆಳಗೆ ಮಾಡಿ ನಿಂತಿರುವ ಭಂಗಿಯಲ್ಲಿ ತಪಸ್ಸಾಚರಿಸುತ್ತಿದ್ದಾನೆ. ಇಲ್ಲಿಯೂ ಹಿನ್ನಲೆಯಲ್ಲಿ ಗಿಡಮರಗಳಿಂದ ಕೂಡಿದ ತಪೋಭೂಮಿಯ ವಾತಾವರಣವಿದ್ದು ಕೋತಿಗಳೆರಡು ಮುನಿಯ ತಪಸ್ಸನ್ನು ಕುತೂಹಲದಿಂದ ವಿಕ್ಷಿಸುತ್ತಲಿವೆ.

ತಪಸ್ಸಿನಲ್ಲಿ ಕುಳಿತ ಋಷಿಯ ಚಿತ್ರವೊಂದು ಬಲಭಾಗದಲ್ಲಿ ರಚನೆಯಾಗಿದೆ. ಗಿಡಗಳಿಂದ ಆವೃತ್ತವಾದ ಒಂದು ಪ್ರದೇಶದ ಬುಡದಲ್ಲಿ ಮುನಿಯು ಜಪಮಾಲೆ ಹಿಡಿದುಕೊಂಡು ತಪಸ್ಸಿನಲ್ಲಿ ಕುಳಿತಿದ್ದಾನೆ. ಆತ ಕುಳಿತ ರೀತಿ

---

೮೨. ಡಾ. ಅಶೋಕ ನರೋಡೆ (ಸಂ) : ಶ್ರೀಗುರುಮಹಾಲಿಂಗೇಶ್ವರ ಬಹುಪರಾಕ್‌ಗಳು, ಪುಟ ३४

ಆಶ್ಚರ್ಯವಾಗಿದೆ. ಎರಡೂ ಕಾಲುಗಳನ್ನು ಕೂಡಿಸಿಕೊಂಡು ಪಾದಗಳನ್ನು ನೆಲಕ್ಕೂರಿ ಕುಳಿತಿದ್ದಾನೆ. ಋಷಿಯ ಹಿಂದೆ ಹುಲಿಯೊಂದು ಮಲಗಿಕೊಂಡಿದೆ. ಋಷಿಯ ಬಲಕ್ಕೊಂದು, ಎಡಕ್ಕೊಂದು ನಾಯಿಗಳು ಕುಳಿತುಕೊಂಡಿವೆ. ಈ ಚಿತ್ರವು ತೀರ ಗ್ರಾಮೀಣ ಶೈಲಿಯಲ್ಲಿದ್ದು ರೇಖೆಗಳು ಬಹಳ ಕಳಪೆಯಾಗಿವೆ. ಅದೇ ತಾನೆ ಕಲಿಯುತ್ತಿರುವ ವಿದ್ಯಾರ್ಥಿಯು ಇವನ್ನು ಬರೆದಂತೆ ಇದೆ. ಚಿತ್ರದ ರೇಖೆಗಳು ಮತ್ತು ಚಿತ್ರಣ ಶೈಲಿ ಎಷ್ಟು ಕಳಪೆಯಾಗಿದೆ ಎಂದರೆ ಹುಲಿಯ ಮುಖವು ಚಿತ್ರಣ ಶೈಲಿಯ ದೋಷದಿಂದಾಗಿ ಮನುಷ್ಯಮುಖ ಕಂಡಂತೆ ತೋರುವುದು. ಇನ್ನೊಂದು ಕಡೆಗೆ ಮುನಿಯು ಮೈತುಂಬ ಹುಲಿಚರ್ಮ ಸುತ್ತಿಕೊಂಡು ಒಂಟಿಕಾಲಲ್ಲಿ ನಿಂತು ತಪಸ್ಸನ್ನಾಚರಿಸುತ್ತಿದ್ದಾನೆ. ಅಕ್ಕಪಕ್ಕದಲ್ಲಿ ಬಾಳೆ, ತೆಂಗು, ಹಾಗೂ ಇತರ ಗಿಡಮರಗಳಿದ್ದು ಅವುಗಳಲ್ಲಿ ಪಕ್ಷಿಸಂಕುಲ ನೆರೆದಿದೆ. ಈ ಚಿತ್ರದ ಕೆಳಭಾಗದಲ್ಲಿ ಮುನಿಯು ಹುಲಿಚರ್ಮದ ಮೇಲೆ ಕುಳಿತುಕೊಂಡಿದ್ದು ಮೈಮೇಲೆ ಕಾವಿ ಮತ್ತು ಬಿಳಿವಸ್ತ್ರ ಧರಿಸಿದ್ದಾನೆ. ಬಲಗಡೆಗೆ ಕಮಂಡಲು ಮತ್ತು ಅರಣಿ (ತಪೋದಂಡ)ಗಳು ಇಡಲ್ಪಟ್ಟಿವೆ. ಹಿನ್ನೆಲೆಯ ಹಸಿರುಸಿರಿ ಕಮಾನಿನಂತೆ ರಕ್ಷಣೆಯೊದಗಿಸಿದೆ.

ಸ್ವಾಮಿಗಳ ತಪಸ್ಸಿನ ಭಂಗಿಯ ಇನ್ನೊಂದು ಚಿತ್ರದಲ್ಲಿ ಕೌಪೀನ ಧರಿಸಿದ ಮುನಿಯು ಎರಡೂ ಕಾಲುಗಳನ್ನು ಕತ್ತರಿ ಹಾಗೆ ಜೋಡಿಸಿಕೊಂಡು ಯೋಗಪಟ್ಟದಲ್ಲಿ ಕುಳಿತಿದ್ದು, ಕೈಯಲ್ಲಿ ರುದ್ರಾಕ್ಷಿಮಾಲೆ ಹಿಡಿದುಕೊಂಡು ಜಪದಲ್ಲಿ ತೊಡಗಿದ್ದಾನೆ. ಹುಲಿಯಚರ್ಮದ ಮೇಲೆ ಕುಳಿತ ಮುನಿಯ ಎಡಬಲಗಳಲ್ಲಿ ಅಲಂಕಾರಿಕ ವಿನ್ಯಾಸದಲ್ಲಿ ಗಿಡಗಳು ಚಿತ್ರಿಸಿವೆ. ಈ ರೀತಿಯ ಮುನಿಗಳ ತಪಸ್ಸಿನ ಚಿತ್ರಗಳು ಮಹಾಲಿಂಗೇಶ್ವರ ಮುನಿಗಳು ಚೆನ್ನಗಿರಿ ಬೆಟ್ಟದಲ್ಲಿ ತಪಸ್ಸು ಮಾಡಿದ ವಿವಿಧ ಭಂಗಿಗಳನ್ನು ತೋರಿಸುತ್ತಿದ್ದು, ಮಹಾಲಿಂಗೇಶ್ವರ ಮುನಿಗಳ ಕಠಿಣ ತಪಸ್ಸಿನ ನಿಲುವುಗಳು, ಭಕ್ತಿಭಾವಗಳು ಇಲ್ಲಿ ವ್ಯಕ್ತಗೊಂಡಿವೆ.

*II. ಪವಾಡದ ಚಿತ್ರಗಳು :* ಮಹಲಿಂಗಮುನಿಗಳ ತಪಸ್ಸಿನ ಚಿತ್ರಗಳಲ್ಲದೇ ಮಹಲಿಂಗ ಮುನಿಗಳ ಪವಾಡವನ್ನು ನಿರೂಪಿಸುವ ಚಿತ್ರಗಳೂ ಇಲ್ಲಿ ರಚನೆಯಾಗಿವೆ. ಅವುಗಳನ್ನು ಹೀಗೆ ಹೆಸರಿಸಬಹುದು :

೧. ಸತ್ತಬಾಲಕನನ್ನು ಬದುಕಿಸಿದ್ದು
೨. ಮಾಲೋಜಿರಾಜನ ಕುಮಾರ ಗೋವಿಂದರಾಜನನ್ನು ಮಲರೋಗದಿಂದ ನಿವಾರಣೆಮಾಡಿದ್ದು.
೩. ಶಿವಲಿಂಗದ ಮೇಲಿನ ಬಟ್ಟೆ ಕದ್ದೊಯ್ಯುವ ಕಳ್ಳನನ್ನು ಕ್ಷಮಿಸಿದ್ದು.
೪. ನಾಗಯ್ಯ ಮುಪ್ಪಿನಾಂಬೆ ದಂಪತಿಗಳ ವೀರವ್ರತ ಪೂರೈಸಿದ್ದು.
೫. ಮಾಲೋಜಿರಾಜನು ನರಗಟ್ಟಿ ಗ್ರಾಮದಲ್ಲಿ ಅಷ್ಟಲಿಂಗಗಳನ್ನು ಸ್ಥಾಪಿಸಿದ್ದು.

೧. ಸತ್ತಬಾಲಕನನ್ನು ಬದುಕಿಸಿದ್ದು : ಮೋದಪುರದ (ಮುಧೋಳ) ರಾಜನಾದ ಮಾಲೋಜಿರಾವ್ ಘೋರ್ಪಡೆಯು ಮಹಾಲಿಂಗೇಶ್ವರರ ಪರಮ ಭಕ್ತನಾಗಿದ್ದನು. ಒಂದು ದಿನ ರಾಜನು ತನ್ನ ಚತುರಂಗ ಸೇನೆಯ ಸಡಗರದೊಂದಿಗೆ ಮಹಲಿಂಗ ಮುನಿನಾಥನನ್ನು ಕಾಣಲು ಹೊರಟನು. ನರಗಟ್ಟಿ ಊರಿನಲ್ಲಿ ಹೊರಟ ಈ ವೈಭವದ ಮೆರವಣಿಗೆ ನೋಡಲು ಮಕ್ಕಳಿಂದ ಮುದುಕರಾದಿಯಾಗಿ ಅನೇಕ ಸ್ತ್ರೀ ಪುರುಷರು ನೆರೆದರು. ಅದರಲ್ಲಿ ಒಬ್ಬಬಾಲಕ ಪಟ್ಟದಾನೆಯ ವೈಭಕ್ಕೆ ಬೆರಗಾಗಿ ಅದನ್ನು ಹತ್ತಿರದಿಂದ ವೀಕ್ಷಿಸಲು ತೆರಳಿದಾಗ, ತನ್ನೆದುರಾಗಿ ಬಂದ ಬಾಲಕನನ್ನು ಆನೆಯು ಸಿಟ್ಟಿನಿಂದ ಸೊಂಡಿಲಿನಲ್ಲಿ ಎತ್ತಿ ಅಪ್ಪಳಿಸಿಕೊಂದುಹಾಕಿತು. ಈ ಘಟನೆಯಿಂದ ಮನನೊಂದ ರಾಜನು ಮಹಾಲಿಂಗೇಶ್ವರರ ಮೊರೆಹೋಗಲು ಮುನಿಗಳು ಕೃಪೆಮಾಡಿ ಸತ್ತಬಾಲಕನನ್ನು ಮತ್ತೆ ಬದುಕಿಸಿದರೆಂದು[೧೮೩]

೧೮೩. ಅಣ್ಣಾಜಿ ಫಡತಾರೆ : ಶ್ರೀ ಮಹಾಲಿಂಗೇಶ್ವರ ಮಹಾತ್ಮೆ, ಪುಟ ೨೬, ೨೭

ಮಹಾಲಿಂಗೇಶ್ವರ ಮಹಿಮೆ ಸಾರುತ್ತದೆ. ಇಲ್ಲಿ ರಚನೆಯಾದ ಚಿತ್ರದಲ್ಲಿ ಸತ್ತಬಾಲಕನನ್ನು ರಾಜನು ಮಹಾಲಿಂಗೇಶ್ವರ ಮುನಿಯ ಮುಂದೆ ತಂದುಹಾಕಿದ್ದು ನೀನೆ ಕಾಪಾಡಬೇಕೆಂದು ಮೊರೆಇಡುತ್ತಿದ್ದಾನೆ. ಅವನ ಹಿಂದೆ ಇಬ್ಬರು ಬಾಲಕರೂ ಓಡುತ್ತ ಬಂದು ನಿಂತಿದ್ದಾರೆ. ಮಹಾಲಿಂಗೇಶ್ವರ ಮುನಿಗಳು ತಮ್ಮ ತಪೋದಂಡದಿಂದ ಅಭಿಮಂತ್ರಿಸಿ ಬಾಲಕನನ್ನು ಜೀವಂತಮಾಡುತ್ತಿರುವಂತೆ ಚಿತ್ರಿಸಲಾಗಿದೆ. ವರ್ಣವಿನ್ಯಾಸದಲ್ಲಿ ಸತ್ತಬಾಲಕನ ತಾಯಿಯು ಕೆಂಪು ಬಣ್ಣದ ಸೀರೆಉಟ್ಟುಕೊಂಡಿದ್ದು. ತಲೆಯ ಮೇಲೆ ಸೆರಗುಹೊದೆದುಕೊಂಡಿದ್ದಾಳೆ. ಸೀರೆಗೊಪ್ಪುವ ಹಸಿರು ಬಣ್ಣದ ಹೂವಿನ ಕುಪ್ಪಸ ತೊಟ್ಟಿದ್ದು. ಅಂಚುಗಳನ್ನು ಹೊಂದಿದೆ. ಮೂಗಿನಲ್ಲಿ ದೊಡ್ಡದಾದ ನಾಸಾಭರಣ ಕಂಗೊಳಿಸುತ್ತಿದೆ. ಮಹಿಳೆಯ ಹಿಂದಿರುವ ಬಾಲಕರು ಚಡ್ಡಿಯನ್ನು ಮಾತ್ರ ಧರಿಸಿದ್ದು ಬರೀ ಮೈಯಲ್ಲಿಯ ಚಿತ್ರಿಸಲ್ಪಟ್ಟಿದ್ದಾರೆ. ಘಟನೆಗೆ ಸಂಬಂಧಿಸಿದಂತೆ ಇನ್ನೂ ಹೆಚ್ಚಿನ ವಿವರಗಳು ಬೇಕೆನಿಸುತ್ತವಾದರೂ ಇದು ಸಾಂಕೇತಿಕ ರೂಪದಲ್ಲಿದೆ.

೨. ಮಾಲೋಜಿರಾಜನ ಕುಮಾರ ಗೋವಿಂದರಾಜನನ್ನು ಮಲರೋಗದಿಂದ ನಿವಾರಣೆಮಾಡಿದ್ದು : ಮಾಲೋಜಿರಾಜನಿಗೆ ಗೋವಿಂದರಾಜನೆಂಬ ಮಗನಿದ್ದು ಆತ ಮಲರೋಗದಿಂದ ಬಳಲುತ್ತಿದ್ದ. ಯಾವುದೇ ಉಪಚಾರದಿಂದ ಗುಣವಾಗದೇ ದಿನೇ ದಿನೇ ದೇಹಸ್ಥಿತಿ ಕ್ಷೀಣಿಸತೊಡಗಿತು. ಇದರಿಂದ ಕಂಗೆಟ್ಟ ರಾಜನು ಮಹಲಿಂಗ ಮುನಿಯ ಬಳಿಗೆ ರೋಗಪೀಡಿತ ಮಗನನ್ನು ಕರೆದುಕೊಂಡು ಬಂದು ಕಾಪಾಡಬೇಕೆಂದು ಕೇಳಿಕೊಂಡನು. ಮುನಿವರನು ಇದು ಆತನು ಪೂರ್ವಜನ್ಮದಲ್ಲಿ ಮಾಡಿದ ಕರ್ಮಫಲವೆಂದೂ ಶಿವನಿಚ್ಛೆಯಂತೆ ಎಲ್ಲವೂ ನಡೆಯುವುದು ಎಂದು ಹೇಳಿ ಮರಳಿ ಕಳಿಸಿದನು. ಸ್ವಲ್ಪದಿಗಳನಂತರ ರೋಗಪೀಡತಿನಾದ ಗೋವಿಂದರಾಜನು ಮರಣಹೊಂದಿದನು. ಇದರಿಂದ ಕೆಂಗೆಟ್ಟ ಆತನ ಮಡದಿಯು ಎಲ್ಲರನ್ನೂ ಕಾಪಾಡಿದ ಮಹಲಿಂಗಮುನಿ ನನ್ನ ಗಂಡನನ್ನು ಕಾಪಾಡದೇ ಹೋದನೆಂದು ಸಂಕಟಪಡುತ್ತ ಗೋವಿಂದರಾಜನ ಶವವನ್ನು ಹೊತ್ತುಕೊಂಡು ಮಹಲಿಂಗೇಶ್ವರನ ಸನ್ನಿಧಿಗೆ ಒಯ್ಯುತ್ತಾಳೆ. ನನ್ನ ಗಂಡನನ್ನು ನೀನೆ ಬದುಕಿಸಿಕೊಡಬೇಕೆಂದು ಮುನಿಯ ಚರಣಗಳಿಗೆ ಶರಣು ಹೋಗುತ್ತಾಳೆ. ಮಹಲಿಂಗ ಮುನಿಯು ಕರಣೆತೋರಿ ಗೋವಿಂದರಾಜನ ಶವದ ಕೊರಳಲ್ಲಿ ರುದ್ರಾಕ್ಷಿ ಮಾಲೆ ಹಾಕಿ ವಿಭೂತಿ ಹಣೆಗೆ ಲೇಪಿಸಿ ತಪೋದಂಡದಿಂದ ಅಭಿಮಂತ್ರಿಸಿ ಮತ್ತೆ ಬದುಕಿಸಿದನೆಂದು [೧೮೪] ಮಹಾಲಿಂಗೇಶ್ವರ ಪುರಾಣ ಹೇಳುತ್ತದೆ.

ಇಲ್ಲಿನ ಚಿತ್ರದಲ್ಲಿ ಸತ್ತರಾಜನ ಶವವನ್ನು ಆತನ ಮಡದಿಯು ತಂದು ಮುನಿಯ ಸನ್ನಿಧಿಯಲ್ಲಿ ಹಾಕಿದ್ದಾಳೆ. ಮುನಿಯು ರಾಜನ ಶವದ ಕೊರಳಲ್ಲಿ ರುದ್ರಾಕ್ಷಿಮಾಲೆ ಹಾಕಿ ಹಣೆಗೆ ವಿಭೂತಿಇಟ್ಟು ತಪೋದಂಡದಿಂದ ಅಭಿಮಂತ್ರಿಸುತ್ತಿರುವಂತೆ ಚಿತ್ರಿಸಿದೆ. ರಾಜನ ಮಡದಿಯು ಎರಡೂ ಕೈಗಳನ್ನು ಮುಂದೆ ಚಾಚಿ ಆರ್ತತೆಯಿಂದ ಬೇಡಿಕೊಳ್ಳುತ್ತಿದ್ದಾಳೆ. ಹಳದೀ ಮಿಶ್ರಿತ, ಹೂಗಳ ನಕ್ಷೆಯ ಸೀರೆ ಉಟ್ಟುಕೊಂಡಿದ್ದು ಹಸಿರು ಬಣ್ಣದ ಕುಪ್ಪಸ ತೊಟ್ಟಿದ್ದಾಳೆ. ವೈಭವಯುತವಾದ ನಾಸಾಭರಣ, ಕಿವಿಯೋಲೆಗಳು, ಕೊರಳ ಸರಗಳು, ಮತ್ತು ಕೈ ಬಳೆಗಳು ಮಹಿಳೆಯು ರಾಜಪರಿವಾರದವಳು ಎನ್ನುವುದನ್ನು ಎತ್ತಿತೋರುತ್ತಿವೆ. ಆಕೆಯ ಹಿಂಭಾಗದಲ್ಲಿ ಇಬ್ಬರು ವ್ಯಕ್ತಿಗಳಿದ್ದು ಆಕೆಗಿಂತ ಕಿರಿದಾದ ರೂಪದಲ್ಲಿ ಚಿತ್ರಿಸಿದ್ದಾರೆ. ಚಿತ್ರದ ಕೆಳಭಾಗದಲ್ಲಿ ಅಲ್ಲಲ್ಲಿ ಅಲಂಕಾರಿಕ ಗಿಡಗಳನ್ನು ಚಿತ್ರಿಸಿ ದೃಶ್ಯ ಸಂಯೋಜನೆಗೊಳಿಸುವ ಪ್ರಯತ್ನ ಮಾಡಲಾಗಿದೆ.

೩. ಶಿವಲಿಂಗದ ಮೇಲಿನ ಬಟ್ಟೆ ಕದ್ದೊಯ್ಯುತ್ತಿರುವ ಕಳ್ಳನನ್ನು ಕ್ಷಮಿಸಿದ್ದು : ಮಹಾಲಿಂಗೇಶ್ವರರು ಭಕ್ತರಿಗೆ ಉಪದೇಶ ಮಾಡುತ್ತಿರುವ ಸಂದರ್ಭದಲ್ಲಿ ಸಮಯಸಾಧಿಸಿ ಕಳ್ಳನೊಬ್ಬ ಗರ್ಭಗೃಹದಲ್ಲಿನ ಶಿವಲಿಂಗದ ಮೇಲಿನ

---

೧೮೪. ಅಣ್ಣಾಜಿ ಫಡತಾರೆ : ಶ್ರೀ ಮಹಾಲಿಂಗೇಶ್ವರ ಮಹಾತ್ಮೆ, ಪುಟ ೫೭, ೫೮

ವಸ್ತ್ರ ಮತ್ತು ಆಭರಣಗಳನ್ನು ಕದ್ದೊಯ್ಯುತ್ತಾನೆ. ತಮ್ಮ ದಿವ್ಯದೃಷ್ಟಿಯಿಂದ ಇದನ್ನು ಕುಳಿತಲ್ಲಿಂದಲೇ ತಿಳಿದುಕೊಂಡ ಮಹಾಲಿಂಗೇಶ್ವರರು ಆತನನ್ನು ಕರೆಸಿ ಯಾವುದೇ ರೀತಿಯಿಂದ ಶಿಕ್ಷಿಸದೇ ಪ್ರೀತಿಮಾತುಗಳಿಂದ ತಿಳಿಹೇಳಿ ನೆರೆದ ಭಕ್ತರಿಂದ ಸ್ಥಳದಲ್ಲಿಯೇ ಧವಸಧಾನ್ಯ ತುಸುಹಣವನ್ನು ಕೊಡಿಸಿದರಲ್ಲದೇ ಆತ ಕದ್ದುಕೊಂಡಿದ್ದ ವಸ್ತ್ರಆಭರಣಗಳನ್ನೂ ಆತನಿಗೇ ಕೊಡಿಸಿದರು. ಇದರಿಂದ ಮನ ಪರಿವರ್ತನೆ ಯಾಗಿ ಆತ ಮುಂದೆ ಒಳ್ಳೇರೀತಿಯಿಂದ ಬಾಳಿದನು[೧೮೫] ಎಂಬುದಾಗಿ ಮಹಲಿಂಗೇಶ್ವರ ಮಹಾತ್ಮೆ ಹೇಳುತ್ತದೆ. ಇಲ್ಲಿನ ಚಿತ್ರದಲ್ಲಿ ಈ ತರಹದ ಹೆಚ್ಚಿನ ವಿವರಣೆ ಇರದೇ ದೇವಾಲಯದಂತಿರುವ ಮಂಟಪದಲ್ಲಿ ಪುರಜನರು ಭಕ್ತಿಯಿಂದ ಕೈಮುಗಿಕೊಂಡು ಸ್ವಾಮಿಗಳ ಉಪದೇಶ ಕೇಳುತ್ತಿದ್ದಾರೆ. ಬಲಮೂಲೆಯ ಮೇಲ್ಭಾಗದಲ್ಲಿ ಕಳ್ಳನು ಕದ್ದುಕೊಂಡ ವಸ್ತುಗಳ ಗಂಟನ್ನು ಕುಂಕುಳಲ್ಲಿ ಎತ್ತಿಕೊಂಡು ಹೋಗುತ್ತಿದ್ದಾನೆ. ಹೆಚ್ಚಿನ ವಿವರಗಳಿಗರದೇ ಇದೊಂದು ಸಾಂಕೇತಿಕ ಚಿತ್ರದಂತಿದೆ.

೪. ನಾಗಯ್ಯ ಮುಪ್ಪಿನಾಂಬೆ ದಂಪತಿಗಳ ವೀರವ್ರತ ಪೂರೈಸಿದ್ದು : ನರಗಟ್ಟಿಗ್ರಾಮದ ನಾಗಯ್ಯ ಮತ್ತು ಮುಪ್ಪಿನಾಂಬೆ ಎಂಬ ದಂಪತಿಗಳು ಪ್ರತಿನಿತ್ಯ ಓರ್ವಜಂಗಮರನ್ನು ಆದರದಿಂದ ಬರಮಾಡಿಕೊಂಡು ಭಕ್ತಿಯಿಂದ ಪೂಜಿಸಿ ಪಾದೋದಕವನ್ನು ಸ್ವೀಕರಿಸಿ ಬಾಳುವ ವೀರ ಮಹೇಶ್ವರ ವ್ರತವನ್ನು ಕಟ್ಟುನಿಟ್ಟಾಗಿ ಆಚರಿಸುತ್ತ ಬಂದಿದ್ದರು. ಒಂದು ದಿನ ಎಷ್ಟು ಹುಡುಕಿದರೂ ಯಾವ ಜಂಗಮನೂ ಸಿಗದಿರಲು. ದಂಪತಿಗಳು ಚಿಂತಾಕ್ರಾಂತರಾದರು. ತಮ್ಮ ವ್ರತಕ್ಕೆ ಭಂಗಉಂಟಾಯಿತೆಂದು ಚಿಂತಿಸುತ್ತಿರಲು ಮಹಾಮಹಿಮನಾದ ಪರಶಿವನ ಅಂತರ್ಧ್ವನಿಯು ಮೊಳಗಿ ಅಲ್ಲಿಯೇ ಸಮೀಪದಲ್ಲಿ ಚೆನ್ನಗಿರಿ ತಪೋವನದಲ್ಲಿರುವ ಮಹಲಿಂಗೇಶ್ವರನನ್ನು ಇಂದಿನ ಪೂಜೆಗೆ ಕರೆದುಕೊಂಡು ಹೋಗಿರಿ ಆತನು ನನ್ನ ಲೀಲಾಪುರುಷನಾಗಿದ್ದಾನೆ ಎಂದು ತಿಳಿಸಿದನು. ಅದರಂತೆ ದಂಪತಿಗಳು ಮಹಲಿಂಗೇಶ್ವರ ಮುನಿಯ ಸನ್ನಿಧಿಗೆ ಬಂದು ಭಕ್ತಿಯಿಂದ ಬಿನ್ನವಿಸಿಕೊಂಡು ಪೂಜೆಗೆ ಮನೆಗೆ ಕರೆದೊಯ್ಯುತ್ತಾರೆ ಎಂದು[೧೮೬] ಮಹಾಲಿಂಗೇಶ್ವರ ಮಹಾತ್ಮೆ ಹೇಳುತ್ತದೆ. ಇಲ್ಲಿನ ಚಿತ್ರದಲ್ಲಿ ಶಿವಭಕ್ತ ದಂಪತಿಗಳು ಜೊತೆಯಾಗಿ ಬಂದು ಕೈಮುಗಿದು ವಿನೀತಭಾವದಿಂದ ಮಹಲಿಂಗೇಶ್ವರರನ್ನು ಬೇಡಿಕೊಳ್ಳುತ್ತಿದ್ದಾರೆ. ಗಿಡದ ಬುಡದಲ್ಲಿ ಕುಳಿತ ಮಹಲಿಂಗೇಶ್ವರರು ಕೈಮುಂದೆ ಮಾಡಿ ಆಶೀರ್ವಾದ ಪೂರ್ವಕವಾಗಿ ತಮ್ಮ ಒಪ್ಪಿಗೆ ಸೂಚಿಸುತ್ತಿದ್ದಾರೆ. ಚಿತ್ರದ ಹಿನ್ನೆಲೆಯಲ್ಲಿ ಗಿಡಮರಗಳಿಂದ ಕೂಡಿದ ಮುನಿಯ ಆಶ್ರಮವು ಹಿತಕರ ವಾತಾವರಣ ಕೊಡುತ್ತಿದೆ. ದಂಪತಿಗಳಲ್ಲಿ ಪುರುಷನು ಹಳದಿ ವರ್ಣದ ಧೋತರ, ಕೆಂಪು ವಸ್ತ್ರ ಹೊದ್ದುಕೊಂಡಿದ್ದರೆ. ಆತನ ಸತಿಯು ಕೆಂಪು ಸೀರೆ ಉಟ್ಟುಕೊಂಡಿದ್ದಾಳೆ.

೫. ಮಾಲೋಜಿರಾಜನು ನರಗಟ್ಟಿ ಗ್ರಾಮದಲ್ಲಿ ಅಷ್ಟಲಿಂಗಗಳನ್ನು ಸ್ಥಾಪಿಸಿದ್ದು : ಮಾಲೋಜಿರಾಜನು ನರಗಟ್ಟಿ ಗ್ರಾಮವನ್ನು ಮಹಲಿಂಗೇಶ್ವರ ಮಠಕ್ಕೆ ದತ್ತಿ ನೀಡಿ. ಗ್ರಾಮದ ಸುತ್ತಲೂ ಎಂಟೂ ದಿಕ್ಕುಗಳಲ್ಲಿ ಅಷ್ಟಲಿಂಗಗಳನ್ನು ಸ್ಥಾಪಿಸಲು ಮಹಲಿಂಗೇಶ್ವರ ಮುನಿಯ ಅಪ್ಪಣೆ ಕೇಳಿದನು. ಮುನಿಯು ಅದಕ್ಕೆ ಒಪ್ಪಿಗೆ ಕೊಟ್ಟ ತಕ್ಷಣ ತನ್ನ ಸಕಲ ರಾಜ ವೈಭವದೊಂದಿಗೆ ತೆರಳಿ ಭಕ್ತಿಯಿಂದ. ಶ್ರದ್ಧೆಯಿಂದ ಗ್ರಾಮದ ಎಂಟುದಿಕ್ಕುಗಳಲ್ಲಿ ಲಿಂಗ ಮುದ್ರೆಗಳನ್ನು ಸ್ಥಾಪಿಸುತ್ತಾನೆ. ಎಂಬವಿವರಣೆ ಮಹಲಿಂಗ ಲೀಲೆಯಿಂದ ತಿಳಿದುಬರುತ್ತದೆ. ಇಲ್ಲಿ ರಚನೆಯಾದ ಚಿತ್ರದಲ್ಲಿ ಎಂಟೂ ದಿಕ್ಕುಗಳಲ್ಲಿ ಲಿಂಗಮಂಟಪಗಳನ್ನು ಚಿತ್ರಿಸಲಾಗಿದ್ದು ಆ ಮಂಟಪಗಳಲ್ಲಿ ಲಿಂಗಗಳಿವೆ ಮಂಟಪಗಳು ನಾಲ್ಕುಕಡೆಗೆ

---

೧೮೫. ಅಣ್ಣಾಜಿ ಫಡತಾರೆ : ಶ್ರೀ ಮಹಾಲಿಂಗೇಶ್ವರ ಮಹಾತ್ಮೆ, ಪುಟ ೧೯, ೨೦
೧೮೬. ಅಣ್ಣಾಜಿ ಫಡತಾರೆ : ಶ್ರೀ ಮಹಾಲಿಂಗೇಶ್ವರ ಮಹಾತ್ಮೆ, ಪುಟ ೧೯, ೨೦

ತೆರೆದುಕೊಂಡಿದ್ದು, ಮೇಲೆ ಕಳಶದ ಹಾಗಿರುವ ವಿನ್ಯಾಸವಿದೆ. ಮಧ್ಯದಲ್ಲಿ ಲಿಂಗಉಳ್ಳ ಈ ಮಂಟಪಗಳು ಕೂಡಲ ಸಂಗಮದ ಐಕ್ಯಮಂಟಪವನ್ನು ನೆನಪಿಸುತ್ತವೆ. ರಾಜನು ದತ್ತಿ ಕೊಟ್ಟ ಪ್ರದೇಶವನ್ನು ಅಳತೆಪಟ್ಟಿಯಿಂದ ಅಳತೆಮಾಡಿ ಗುರುತಿಸುತ್ತಿದ್ದಾನೆ. ಮಂಟಪದ ಮೇಲ್ಭಾಗದಲ್ಲಿ ನಕ್ಷಾ ಚಿತ್ರಗಳಿವೆ.

**ಮಹಾಲಿಂಗಪುರದ ಭಿತ್ತಿ ಚಿತ್ರಗಳ ಲಕ್ಷಣಗಳು :**

* ಇಲ್ಲಿಯ ಚಿತ್ರಗಳನ್ನು ಕೆಂಪು ಹಿನ್ನೆಲೆ ವರ್ಣದ ಮೇಲೆ ರಚಿಸಲಾಗಿದೆ.
* ಇಲ್ಲಿಯ ಚಿತ್ರಗಳಲ್ಲಿ ಎರಡು ಮೂರು ಶೈಲಿಗಳನ್ನು ಕಾಣಬಹುದು. ದೇವತಾ ಚಿತ್ರಗಳನ್ನು ನುರಿತ ಕಲಾವಿದರು ರಚಿಸಿದ್ದು ಅವು ರೇಖಾ ವಿನ್ಯಾಸದಲ್ಲಿ ಉತ್ತಮವಾಗಿವೆ. ಮಠದ ಮಹಿಮೆಯನ್ನು ಸಾರುವ ಚಿತ್ರಗಳು ಇತರ ಋಷಿಮುನಿಗಳ ಚಿತ್ರಗಳು ಗ್ರಾಮೀಣ ಜನಪದ ಶೈಲಿಯಲ್ಲಿವೆ. ಇವು ರೇಖಾ ವಿನ್ಯಾಸದಿಂದ ಕಳಪೆ ಎನಿಸುತ್ತವೆ.
* ಇಲ್ಲಿಯ ಯಾವ ಚಿತ್ರಗಳನ್ನೂ ನೆಲದಮೇಲೆ ನಿಂತಂತೆ ರಚಿಸಿರದೇ ಎಲ್ಲ ಚಿತ್ರಗಳ ಕಾಲಬುದಡಲ್ಲೂ ಹೂವಿನಂತಹ ಪೀಠವನ್ನು ರಚಿಸಲಾಗಿದೆ.
* ಋಷಿಮುನಿಗಳ ಮತ್ತು ಮಠದ ಮಹಿಮೆಯನ್ನು ಹೇಳುವ ಚಿತ್ರಗಳನ್ನು ಯೋಜನಾಬದ್ಧವಾಗಿ ಸಂಯೋಜನೆ ಗೊಳಿಸದೇ ಎಲ್ಲೆಂದರಲ್ಲಿ ಚಿತ್ರಿಸಿದ್ದರಿಂದ ನೋಡುಗರಿಗೆ ಗೋಜಲಾಗಿ ಕಾಣುತ್ತದೆ. ಆದರೆ ದೇವತಾ ಚಿತ್ರಗಳಲ್ಲಿ ಈ ರೀತಿಯಾಗಿಲ್ಲ ಅವುಗಳನ್ನು ವ್ಯವಸ್ಥಿತವಾಗಿ ಸಂಯೋಜನೆಗೊಳಿಸಿ ಉತ್ತಮ ವರ್ಣ ವಿನ್ಯಾಸ. ಶಕ್ತಿಯುತವಾದ ಹೊರರೆಖೆಗಳಿಂದ ರಚಿಸಲಾಗಿದೆ.
* ಚಿತ್ರದ ಮಧ್ಯದಲ್ಲಿ ಅಲ್ಲಲ್ಲಿ ಅಲಂಕಾರಿಕಗಿಡ ಮರಗಳು, ಪ್ರಾಣಿ ಪಕ್ಷಿಗಳು ಚಿತ್ರಣಗೊಂಡಿವೆ. ಪಕ್ಷಿಚಿತ್ರಗಳಲ್ಲಿ ಗಿಳಿಗಳು ಮಾತ್ರ ಗಮನಾರ್ಹವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ.

ಈ ಮೇಲೆ ಹೇಳಲಾದ ಅಮ್ಮಿನಭಾವಿ ಮತ್ತು ಮಹಾಲಿಂಗಪುರದ ಮಠದ ಭಿತ್ತಿಚಿತ್ರಗಳು ಕ್ರಿ. ಶ. ೧೮ ನೇ ಶತಮಾನದ ಉತ್ತರಾರ್ಧದಲ್ಲಿ ರಚನೆಯಾಗಿದ್ದು ನರಗುಂದದ ಅರಮನೆ ಮತ್ತು ಗುಳೇದಗುಡ್ಡದ ಹೊಸಮನಿ ಗೌಡರ ಮನೆಯ ಚಿತ್ರಗಳ ಸಂಯೋಜನಾ ವಿನ್ಯಾಸಕ್ಕೆ ಸಮೀಪವಾಗಿವೆ. ಅಮ್ಮಿನಭಾವಿಯ ಮಠದ ಚಿತ್ರಗಳಿಗೆ ಮಂಟಪದಂತಹ ಸ್ಥಳವಿನ್ಯಾಸ ಒದಗಿಸಿದ್ದರೆ. ಮಹಾಲಿಂಗಪುರದ ಮಠದ ಚಿತ್ರಗಳಲ್ಲಿ ಮಂಟಪದ ವಿನ್ಯಾಸಗಳಿರದೇ ಗುಳೇದಗುಡ್ಡದ ಗೌಡರಮನೆಯ ಚಿತ್ರಗಳಂತೆ ಆಯತಾಕಾರದ ಪಟ್ಟಿಕೆಯಲ್ಲಿ ಚದುರಿದಂತೆ ಆಕೃತಿಗಳನ್ನು ರಚಿಸಲಾಗಿದೆ.

**೫. ರುದ್ರಸ್ವಾಮಿಮಠ, ಸುರಪುರ :** ಸುರುಪುರದಿಂದ ಉತ್ತರಕ್ಕೆ ಗುಲಬರ್ಗಾಕ್ಕೆ ಹೋಗುವ ದಾರಿಯಲ್ಲಿ ತುಸುವೇ ದೂರದಲ್ಲಿ ಗುಡ್ಡದ ಕೆಳಗೆ ಸುಮಾರು ೨ ಕಿ. ಮಿ. ಅಂತರದಲ್ಲಿ ರಂಗಮ್ ಪೇಟೆ ಎಂಬ ಸ್ಥಳವಿದೆ. ಇಲ್ಲಿನ ರುದ್ರಸ್ವಾಮಿಮಠ ಎಂಬ ವೀರಶೈವ ಮಠದಲ್ಲಿ ಭಿತ್ತಿಚಿತ್ರಗಳು ರಚನೆಯಾಗಿವೆ. ಈ ರುದ್ರಸ್ವಾಮಿ ಮಠದಲ್ಲಿ ನಾಲ್ಕು ಕಂಬಗಳಿಂದ ಕೂಡಿದ, ಮೂರು ಕಡೆಗೆ ಗೋಡೆಗಳನ್ನು ಹೊಂದಿದ ತೆರೆದ ಪಡಸಾಲೆಯು ಮಠದ ಮುಂಭಾಗದಲ್ಲಿದೆ. ಈ ಪಡಸಾಲೆಯ ಗೋಡೆಗಳಲ್ಲಿ ಮೇಲ್ಛಾವಣಿಗೆ ಸಮೀಪವಾಗಿರುವಂತೆ ಚಿತ್ರಗಳನ್ನು ರಚಿಸಿದ್ದಾರೆ. ಗೋಡೆಯಲ್ಲಿ ಎರಡು ಅಡಿಗಳ ಎತ್ತರದ ಉದ್ದವಾದ ಪಟ್ಟಿಕೆಯನ್ನು ಮಾಡಿಕೊಂಡು ಅದರಲ್ಲಿ ಚಿತ್ರಬರೆದಿದ್ದಾರೆ. ಮೊದಲು ಗೋಡೆಯ ಎಲ್ಲ ಭಾಗದಲ್ಲಿ ಚಿತ್ರಗಳಿದ್ದಿರಬಹುದು. ಆದರೆ ಈಗ ೫೦ ಅಡಿ ಉದ್ದದ ಪಟ್ಟಿಕೆಯಲ್ಲಿ ಒಂದು ಬದಿಗೆ ಚಿತ್ರಗಳಿವೆ. ಅವುಗಳನ್ನು ಈ ರೀತಿಯಾಗಿ ವಿವರಿಸಬಹುದು :

**I. ಮದುವೆಯ ಸಮಾರಂಭದ ಚಿತ್ರ :** ಇಲ್ಲಿನ ಚಿತ್ರವೊಂದು ಮದುವೆಯ ಸಮಾರಂಭವನ್ನು ಕುರಿತಾಗಿದ್ದು ಇಲ್ಲಿ ಮದುಮಕ್ಕಳ ಜೊತೆಗೆ ಇತರ ಜನರೂ ನೆರೆದಿದ್ದಾರೆ. ಪಕ್ಕದಲ್ಲಿ ಋಷಿಮುನಿ ಕೈ ಮೇಲೆತ್ತಿ ಮದು ಮಕ್ಕಳಿಗೆ ಆಶೀರ್ವಾದ ಮಾಡುತ್ತಿದ್ದಾನೆ. ಸಮೀಪದಲ್ಲಿ ಅನೇಕ ವಾದ್ಯಗಾರರು ವಾದ್ಯಬಾರಿಸುತ್ತಿದ್ದಾರೆ. ಇಲ್ಲಿ ಮುಖ್ಯವಾಗಿ ನೀಲಿ. ಹಸಿರು. ಕಂದುಗೆಂಪು ವರ್ಣ ಬಳಸಲಾಗಿದೆ. ಚಿತ್ರದ ಹೊರ ರೇಖೆಗಳು ಕಂದುಗೆಂಪು ವರ್ಣದಲ್ಲಿವೆ.

**II. ಸರಸ್ವತಿಯ ಚಿತ್ರ :** ಮದುವೆಯ ಚಿತ್ರದ ಪಕ್ಕದಲ್ಲಿ ಸರಸ್ವತಿಯ ಚಿತ್ರವೊಂದಿದೆ. ಇದರಲ್ಲಿ ಸರಸ್ವತಿ ದೇವಿಯು ವೀಣೆ ನುಡಿಸುತ್ತ ಕಮಲದ ಮೇಲೆ ಕುಳಿತಿದ್ದಾಳೆ. ಪಕ್ಕದಲ್ಲಿ ವಾಹನ ನವಿಲೂ ಚಿತ್ರಿತವಾಗಿದೆ. ನೀಲಿ, ಕೆಂಪು. ಹಳದಿ ಪ್ರಮುಖವಾಗಿ ಬಳಸಲಾದ ವರ್ಣಗಳು.

**III. ಸಮುದ್ರ ಮಂಥನ ದೃಶ್ಯ :** ಇಲ್ಲಿನ ಮತ್ತೊಂದು ಚಿತ್ರ ಸಮುದ್ರ ಮಂಥನ ದೃಶ್ಯ. ದೇವತೆಗಳು ಮತ್ತು ರಾಕ್ಷಸರು ಒಂದೊಂದು ಕಡೆಗೆ ನಿಂತು ಆದಿಶೇಷನನ್ನು ಹಗ್ಗಮಾಡಿ ಮಂದಾರ ಪರ್ವತವನ್ನು ಕಡಗೋಲು ಮಾಡಿ ಸಮುದ್ರವನ್ನು ಕಡೆಯುತ್ತಿದ್ದಾರೆ. ಮಂದಾರ ಪರ್ವತವು ಸಮುದ್ರದಲ್ಲಿ ಮುಳುಗತೊಡಗಿದಾಗ ನಾರಾಯಣನು ಆಮೆಯ ರೂಪತಾಳಿ ಪರ್ವತವನ್ನು ಎತ್ತಿ ಮೇಲೆ ನಿಲ್ಲಿಸುತ್ತಾನೆ. ಇಲ್ಲಿ ಪರ್ವತದ ಬುಡದಲ್ಲಿ ಆಮೆಯೂ ಚಿತ್ರಿಸಿದೆ. ಸಮುದ್ರ ಮಂಥನದಿಂದ ಹೊರಬಂದ ಕಾಮಧೇನು. ಲಕ್ಷ್ಮೀ. ಐರಾವತ್. ಉಚ್ಛಶ್ರವಷ್ ಮುಂತಾದವು ಸಾಂಕೇತೀಕವಾಗಿ ಚಿತ್ರಿಸಿವೆ. ಸಮುದ್ರ ಮಂಥನ ದೃಶ್ಯವು ಉತ್ತರ ಕರ್ನಾಟಕದಲ್ಲಿ ನರಗುಂದದಲ್ಲಿಯೂ ಕಂಡುಬರುವುದು

**IV. ದೇವಾಸುರರ ಯುದ್ಧ :** ಈ ಚಿತ್ರದಲ್ಲಿ ದೇವತೆಗಳಿಗೆ ಮತ್ತು ಅಸುರರಿಗೆ ಯುದ್ಧ ನಡೆಯುತ್ತಿದೆ. ಆಕಾಶ ಮಾರ್ಗದಲ್ಲಿ ಹಾರುತ್ತಿರುವಂತೆ ಮಧುಕೈಟಭರೆಂಬ ರಾಕ್ಷಸರನ್ನು ಚಿತ್ರಿಸಿ ಅವರ ಎದುರಿಗೆ ದೇವೇಂದ್ರನು ರಥಾರೂಢನಾಗಿ ಯುದ್ಧದಲ್ಲಿ ತೊಡಗಿದಂತೆ ಚಿತ್ರಿಸಲಾಗಿದೆ. ರಥವು ನಾಲ್ಕು ಅಶ್ವಗಳಿಂದ ಎಳೆಯಲ್ಪಡುತ್ತಿದೆ. ರಾಕ್ಷಸರ ಆಯುಧಗಳು. ಅವರ ಭೀಕರವಾದ ಕಣ್ಣುಗಳು ಸ್ಪಷ್ಟವಾಗಿ ರಚನೆಗೊಂಡಿವೆ.

**V. ಹೂಕುಂಡದ ಚಿತ್ರ :** ದೇವಾಸುರರ ಯುದ್ಧದ ಚಿತ್ರದ ಕೆಳಗಡೆ ಒಂದು ಅಲಂಕೃತ ಹೂಕುಂಡವನ್ನು ರಚಿಸಲಾಗಿದೆ. ಈ ಕುಂಡದ ಮೇಲೆ ಸುಳುವಿನ ನಕ್ಷೆಯನ್ನು ಚಿತ್ರಿಸಿದೆ. ಅದರಲ್ಲಿನ ಗಿಡದಲ್ಲಿ ಹೂಗಳು. ಎಲೆಗಳು ತುಂಬಿಕೊಂಡಿದ್ದು ಹೂ ಕುಂಡದ ಎಡಬಲದಲ್ಲಿ ಎರಡು ಗರುಡ ಪಕ್ಷಿಗಳನ್ನು ರಚಿಸಿದ್ದಾರೆ. ಈ ಗರುಡ ಪಕ್ಷಿಗಳು ನಕ್ಷೆಯಿಂದ ಅಲಂಕೃತಗೊಂಡ ಪೀಠಗಳ ಮೇಲೆ ಕುಳಿತಿವೆ.

**VI. ಜಯ ವಿಜಯರ ಚಿತ್ರಗಳು :** ಈ ಪಡಸಾಲೆಯ ಗೋಡೆಯಲ್ಲಿನ ಬಾಗಿಲೊಂದರ ಅಕ್ಕಪಕ್ಕಗಳಲ್ಲಿ ಗದೆಹಿಡಿದು ನಿಂತ ಜಯವಿಜಯರ ಚಿತ್ರಗಳಿವೆ. ಉದ್ದನಾದ ಗಧೆಯನ್ನು ಕೆಳಮುಖವಾಗಿ ನೆಲಕ್ಕೆ ಊರಿಕೊಂಡು ನಿಂತಿರುವ ಭಂಗಿಯಲ್ಲಿ ಕಾಲನ್ನು ಇನ್ನೊಂದು ಕಾಲಮೇಲೆ ಹಾಕಿಕೊಂಡು ನಿಂತಿದ್ದಾರೆ. ಇಂತಹ ಭಂಗಿಗಳೇ ಎಲ್ಲ ಕಡೆ ಚಿತ್ರಿತವಾಗಿವೆ.

**VI. ಚಾಮರ ಬೀಸುತ್ತಿರುವ ಮಹಿಳೆಯ ಚಿತ್ರ :** ಬಾಗಿಲಿನ ಬಲಭಾಗದಲ್ಲಿ ಚಾಮರ ಬೀಸುತ್ತಿರುವ ಮಹಿಳೆಯ ಚಿತ್ರವಿದೆ. ಬಲಗೈಯಿಂದ ಚಾಮರ ಬೀಸುತ್ತ. ಎಡಗೈಯನ್ನು ತನ್ನ ಸೊಂಟದ ಮೇಲೆ ಇಟ್ಟುಕೊಂಡ ಮಹಿಳೆಯ ಭಂಗಿ ಆಕರ್ಷಕವಾಗಿದೆ. ಆಕೆಯ ಸೀರೆ. ಕುಪ್ಪಸಗಳು ಆಕರ್ಷಕ ವರ್ಣವಿನ್ಯಾಸದಿಂದ ಕೂಡಿದ್ದು ಅವುಗಳ ಅಂಚಿನಲ್ಲಿ ಪಟ್ಟಿಗಳನ್ನು ರಚಿಸಿದ್ದಾರೆ.

**VIII. ಶೇಷಶಯನ ವಿಷ್ಣು :** ಚಾಮರ ಬೀಸುತ್ತಿರುವ ಮಹಿಳೆಯ ಮುಂದುಗಡೆ ಶೇಷಶಯನ ವಿಷ್ಣುವಿನ ಚಿತ್ರವಿದೆ. ನೀಲವರ್ಣದ ವಿಷ್ಣುವು ಏಳು ಹೆಡೆಗಳ ಸರ್ಪ ಆದಿಶೇಷನ ಮೇಲೆ ಪವಡಿಸಿದ್ದು ಲಕ್ಷ್ಮೀದೇವಿ ಅವನ ಕಾಲು ಒತ್ತುತ್ತ ಸೇವೆಯಲ್ಲಿ ತೊಡಗಿದ್ದಾಳೆ. ಆಕೆ ಗೌರವರ್ಣದವಳಾಗಿದ್ದು ತಲೆಯಲ್ಲಿ ಕಿರೀಟ ಧರಿಸಿದ್ದಾಳೆ. ವಿಷ್ಣುವಿನ ನಾಭಿಯಿಂದ ಹುಟ್ಟಿದ ಕಮಲದಲ್ಲಿ ಬ್ರಹ್ಮದೇವನಿದ್ದಾನೆ.

**IX. ದತ್ತಾತ್ರೇಯನ ಚಿತ್ರ :** ಶೇಷಶಯನ ವಿಷ್ಣುವಿನ ಪಕ್ಕದಲ್ಲಿ ದತ್ತಾತ್ರೇಯನ ಚಿತ್ರವೊಂದಿದೆ. ಮೂರು ಮುಖ ಹೊಂದಿದ ದತ್ತಾತ್ರೇಯನು ಹುಲಿಯ ಚರ್ಮವನ್ನು ಮೈಗೆ ಸುತ್ತಿಕೊಂಡಿದ್ದು ಕೈಗಳಲ್ಲಿ ಆಯುಧ, ಕಮಂಡಲು ಹಿಡಿದುಕೊಂಡಿದ್ದಾನೆ. ಆತನ ಪಾದದ ಬಳಿ ಮೂರು ನಾಯಿಗಳಿವೆ. ಈ ಮಠದ ಎಡಗೋಡೆಯಲ್ಲಿನ ಚಿತ್ರಗಳೆಲ್ಲ ನಾಶವಾಗಿ ಹೋಗಿವೆ. ಒಂದು ಕಡೆಗೆ ವರ್ಣದ ತುಣುಕುಗಳು ಮಾತ್ರ ಉಳಿದಿದ್ದು, ಆ ಭಾಗದಲ್ಲಿ ಅಲ್ಲಲ್ಲಿ ಹೂಮಾಲೆಯ ಚಿತ್ರಣ ಕಂಡು ಬರುತ್ತದೆ. ಈ ಹೂಮಾಲೆ ಕಂಬಗಳಿಗೆ ನೇತು ಹಾಕಿದಂತೆ ಇದೆ. ಬಹುಶ ಈ ಭಾಗದ ಚಿತ್ರವು ಸಭಾಂಗಣ ಒಂದರ ಚಿತ್ರವಾಗಿರಬಹುದು.

**೬. ಅಣ್ಣಯ್ಯನಮಠ, ಸುರಪುರ :** ರಂಗಮ್ ಪೇಟೆಯಲ್ಲಿಯೇ ರುದ್ರಸ್ವಾಮಿ ಮಠಕ್ಕೆ ಸ್ವಲ್ಪದೂರದಲ್ಲಿ ಇನ್ನೊಂದು ಮಠವಿದೆ ಇದಕ್ಕೆ ಅಣ್ಣಯ್ಯನ ಮಠವೆಂದು ಹೆಸರಿದ್ದರೂ ಸ್ಥಳೀಯರು ಇದನ್ನು ಗೆಜ್ಜೆಸ್ವಾಮಿ ಮಠವೆಂದು ಹೇಳುತ್ತಾರೆ. ಸಾಕಷ್ಟು ಜೀರ್ಣಗೊಂಡಿರುವ ಗೆಜ್ಜೆಸ್ವಾಮಿ ಮಠದ ಮುಂಭಾಗದಲ್ಲಿರುವ ಪಡಸಾಲೆಯಲ್ಲಿ ಹಲವು ಚಿತ್ರಗಳು ಕಂಡು ಬರುತ್ತವೆ. ರುದ್ರಸ್ವಾಮಿ ಮಠದಲ್ಲಿರುವಂತಹ ನಾಲ್ಕು ಕಂಬಗಳುಳ್ಳ ಮೂರು ಕಡೆಗೆ ಗೋಡೆಯನ್ನು ಹೊಂದಿದ ತೆರದ ಪಡಸಾಲೆಯು ಇಲ್ಲಿಯೂ ಇದೆ. ಈ ಪಡೆಸಾಲೆಯು ೧೫ ಅಡಿ ಅಗಲ ಮತ್ತು ೨೦ ಅಡಿ ಉದ್ದವಾಗಿದೆ. ಈ ಪಡಸಾಲೆಯ ಮೂರೂ ಗೋಡೆಗಳಲ್ಲೂ ಚಿತ್ರಗಳಿವೆ. ನೆಲದಿಂದ ಎರಡು ಅಡಿ ಅಂತರ ಮೇಲ್ಛಾವಣಿಯವರೆಗೂ ಹರಡಿಕೊಂಡಿವೆ. ಇಲ್ಲಿ ಮೂರುಗೋಡೆಗಳಲ್ಲಿ ಚಿತ್ರಗಳು ಇದ್ದು ಅವುಗಳಲ್ಲಿ ಹೆಚ್ಚಿನವು ನಾಶವಾಗಿವೆ. ಉಳಿದ ಕೆಲವೇ ಚಿತ್ರಗಳನ್ನು ಈ ರೀತಿ ವಿಂಗಡಿಸಬಹುದು.

I. ಪೂರ್ವಗೋಡೆಯ ಚಿತ್ರಗಳು

II. ಉತ್ತರಗೋಡೆಯ ಚಿತ್ರಗಳು

III. ದಕ್ಷಿಣಗೋಡೆಯ ಚಿತ್ರಗಳು

***I. ಪೂರ್ವಗೋಡೆಯ ಚಿತ್ರಗಳು :*** ಪೂರ್ವಗೋಡೆಯಲ್ಲಿ ಈಗ ಐದು ಚಿತ್ರಗಳಿದ್ದು ಅವುಗಳನ್ನು ಈ ಕೆಳಗಿನಂತೆ ವಿವರಿಸಬಹುದು :

**೧. ದ್ರೌಪದಿ ಸ್ವಯಂವರ :** ಈ ಚಿತ್ರದಲ್ಲಿ ದ್ರೌಪದಿಯು ಕೈಯಲ್ಲಿ ಎಣ್ಣೆಯ ತಟ್ಟೆಯನ್ನು ಹಿಡಿದುಕೊಂಡಿದ್ದಾಳೆ. ಅರ್ಜುನನು ಅವಳಿಗಭಿಮುಖವಾಗಿ ನಿಂತುಕೊಂಡು, ಎಣ್ಣೆಯಲ್ಲಿ ನೋಡಿಕೊಂಡು ಮೇಲೆ ಕಟ್ಟಲಾಗಿರುವ ಮೀನಿನ ಪ್ರತಿಬಿಂಬಕ್ಕೆ ಬಾಣಬಿಡುತ್ತಿದ್ದಾನೆ. ಸುತ್ತಲೂ ಆಮಂತ್ರಿತರಾದ ಗಣ್ಯರು, ಕೌರವರು, ಬ್ರಾಹ್ಮಣವೇಷಧಾರಿಗಳಾದ ಪಾಂಡವರು, ಸೈನಿಕರು, ದ್ವಾರಪಾಲಕರು, ಮುಂತಾದವರು ಚಿತ್ರಿತರಾಗಿದ್ದಾರೆ. ಈ ಚಿತ್ರದಲ್ಲಿ ಕೆಂಪು, ನೀಲಿ, ಮತ್ತು ಹಳದಿ ವರ್ಣಗಳನ್ನು ಪ್ರಮುಖವಾಗಿ ಬಳಸಲಾಗಿದೆ. ಬಣ್ಣಗಳ ಲೇಪನವು ಜನಪದ ಕಲೆಯಂತೆ ಚಪ್ಪಟೆಯಾಗಿ

ದಪ್ಪನಾಗಿದೆ. ರೇಖೆಗಳ ಎಳೆತವೂ ಸೂಕ್ಷ್ಮವಾಗಿರದೇ ದಪ್ಪವಾಗಿ ದಿಟ್ಟತೆಯಿಂದ ಕೂಡಿದೆ. ಆದರೆ ಚಿತ್ರ ಸಂಯೋಜನೆಯಲ್ಲಿ ಸ್ಥಳವಕಾಶದ ವಿಭಜನೆ. ಆಕೃತಿಗಳ ಹೊಂದಾಣಿಕೆ ಉನ್ನತ ಮಟ್ಟದ್ದಾಗಿದೆ.

**೨. ಸಮುದ್ರಮಂಥನ ದೃಶ್ಯ :** ಇಲ್ಲಿರುವ ಸಮುದ್ರ ಮಂಥನ ಚಿತ್ರವು ರುದ್ರಸ್ವಾಮಿ ಮಠದಲ್ಲಿರುವ ಸಮುದ್ರ ಮಂಥನ ಚಿತ್ರದಂತೆಯೇ ಇದೆ. ಎರಡೂ ಒಂದೇ ಶೈಲಿ ಮತ್ತು ವಿನ್ಯಾಸದಲ್ಲಿವೆ. ಇಲ್ಲಿಯೂ ಚಿತ್ರದ ಕೆಳಗೆ ಅಲಂಕಾರಿಕ ಹೂಕುಂಡಗಳನ್ನು ರಚಿಸಲಾಗಿದೆ.

**೩. ಪಾರ್ವತಿ ಕಲ್ಯಾಣ (ಗಿರಿಜಾ ಕಲ್ಯಾಣ) :** ಇಲ್ಲಿನ ಮತ್ತೊಂದು ಚಿತ್ರ 'ಗಿರಿಜಾ ಕಲ್ಯಾಣ' ದೃಶ್ಯವಾಗಿದೆ. ಚಿತ್ರದ ಮಧ್ಯದಲ್ಲಿ ಪಾರ್ವತಿ ಪರಮೇಶ್ವರರನ್ನು ಮಂಟಪದಲ್ಲಿ ಚಿತ್ರಿಸಿದ್ದಾರೆ. ಮದುವೆಗೆ ಬಂದು ಋಷಿಮುನಿಗಳು, ದೇವತೆಗಳು. ಗಗನ ಸಖಿಯರು ಮತ್ತು ವಾದ್ಯವೃಂದದವರು ನೆರೆದಿದ್ದಾರೆ. ಆಕಾಶದಿಂದ ದೇವತೆಗಳು ಹೂಮಳೆ ಚಲ್ಲುತ್ತಿದ್ದಾರೆ.

**೪. ಮೆರವಣಿಗೆಯ ದೃಶ್ಯ :** ಈ ಮೆರವಣಿಗೆಯ ದೃಶ್ಯದಲ್ಲಿ ಅನೇಕ ಜನರು ಪುಜಾ ಸಾಮಗ್ರಿಗಳನ್ನು ಹಿಡಿದುಕೊಂಡು ನಡೆದಿದ್ದಾರೆ. ಮುಂದೆ ಕೆಲವು ಜನರು ವಿವಿಧವಾದ್ಯ ಬಾರಿಸುತ್ತ ನಡೆಯುತ್ತಿದ್ದರೆ, ಸ್ವಲ್ಪ ದೂರದಲ್ಲಿ ಆರತಿ ಹಿಡಿದುಕೊಂಡಿರುವ ಸುಮಂಗಲೆಯರೂ ಬರುತ್ತಿದ್ದಾರೆ. ಚಿತ್ರದಲ್ಲಿ ನೀಲಿ. ಹಳದಿ, ನಸುಗೆಂಪು ವರ್ಣ ಹೆಚ್ಚಾಗಿ ಬಳಸಲಾಗಿದೆ.

**೫. ಬಾಗಿಲುಗಳ ಚಿತ್ರ :** ಇನ್ನೊಂದು ಚಿತ್ರದಲ್ಲಿ ಎರಡು ಒಂದೇ ರೀತಿಯ ಬಾಗಿಲುಗಳನ್ನು ಚಿತ್ರಿಸಿ ಆ ಬಾಗಿಲು ಬಳಿಯಲ್ಲಿ ಆಯುಧ ಹಿಡಿದುಕೊಂಡಿರುವ ದ್ವಾರಪಾಲಕರಾದ ಜಯ ವಿಜಯರ ಚಿತ್ರಗಳನ್ನು ರಚಿಸಲಾಗಿದೆ. ರುದ್ರಸ್ವಾಮಿ ಮಠದಲ್ಲಿರುವ ಜಯ ವಿಜಯರ ಚಿತ್ರಗಳಂತೆಯೇ ಇವು ಅದೇ ಶೈಲಿ ವರ್ಣವಿನ್ಯಾಸದಲ್ಲಿವೆ.

***II. ಉತ್ತರ ಗೋಡೆಯ ಚಿತ್ರಗಳು :*** ಉತ್ತರ ದಿಕ್ಕಿನ ಗೋಡೆಯಲ್ಲಿ ಈಗ ಆರು ಚಿತ್ರಗಳು ಉಳಿದುಕೊಂಡಿದ್ದು ಅವುಕೆಳಗಿನಂತಿವೆ :

**೧. ದತ್ತಾತ್ರೇಯನ ಚಿತ್ರ :** ಈ ಚಿತ್ರದಲ್ಲಿ ದತ್ತಾತ್ರೇಯನು ಮೂರು ಮುಖಗಳನ್ನು ಹೊಂದಿದ್ದು ಮೈಗೆ ಹುಲಿಯ ಚರ್ಮವನ್ನು ಸುತ್ತಿಕೊಂಡಿದ್ದಾನೆ. ದತ್ತಾತ್ರೇಯನ ಮೂರು ಮುಖಗಳಲ್ಲಿ ಶಿವನಭಾಗ, ವಿಷ್ಣುವಿನಭಾಗ, ಮತ್ತು ಬ್ರಹ್ಮನ ಭಾಗಗಳನ್ನು ವಿವರವಾಗಿ ಚಿತ್ರಿಸಲಾಗಿದೆ. ಎದುರುಮುಖವು ವಿಷ್ಣುವಿನದಾಗಿದೆ. ಬಲಬದಿಯಮುಖ ಬ್ರಹ್ಮನದಾದರೆ ಎಡಕ್ಕಿರುವ ಮುಖ ಶಿವನದಾಗಿದೆ. ಈತನ ಸುತ್ತಲೂ ನಾಯಿಗಳು ನಿಂತಿವೆ. ಪಕ್ಕದಲ್ಲಿ ಎರಡು ಗೋವುಗಳು. ಎರಡು ಕರುಗಳು ರಚನೆಯಾಗಿವೆ. ಹಿಂದಿರುವ ಗಿಡದ ಮೇಲೆ ಅಳಿಲುಗಳು ಓಡಾಡುತ್ತಲಿವೆ.

**೨. ಮಹಿಷಾಸುರ ಮರ್ದಿನಿ :** ಮತ್ತೊಂದು ಚಿತ್ರ ದೇವಿಯು ಮಹಿಷಾಸುರನನ್ನು ಸಂಹರಿಸುತ್ತಿರುವ ಚಿತ್ರವಾಗಿದೆ. ಇದರಲ್ಲಿ ದೇವಿಯು ತನ್ನ ಕೈಗಳಲ್ಲಿ ಖಡ್ಗ, ಢಾಲು, ಭರ್ಚಿ, ತ್ರಿಶೂಲ ಮುಂತಾದ ಆಯುಧಗಳನ್ನು ಹಿಡಿದುಕೊಂಡು ಮಹಿಷರೂಪದ ರಾಕ್ಷಸನನ್ನು ಸಂಹರಿಸುತ್ತಿದ್ದಾಳೆ. ಮಹಿಷನ ರುಂಡವನ್ನು ತನ್ನ ಖಡ್ಗದಿಂದ ಕತ್ತರಿಸಿದ್ದು ಇನ್ನೊಂದು ಕೈಯಲ್ಲಿಯೂ ಅಸುರನ ಕತ್ತರಿಸಲ್ಪಟ್ಟ ರುಂಡವಿದೆ. ಇಂತಹುದೇ ಮಹಿಷಾಸುರ ಮರ್ದಿನಿಯ ಚಿತ್ರ ನಿಪ್ಪಾಣಿ, ಅಮ್ಮಿನಭಾವಿ, ನರಗುಂದಗಳಲ್ಲಿ ಕಾಣಬಹುದಾಗಿದೆ.

**೩. ವ್ಯಾಯಾಮ ಶಾಲೆಯ ಚಿತ್ರ :** ಇಲ್ಲಿರುವ ಮತ್ತೊಂದು ಚಿತ್ರದಲ್ಲಿ ಕೆಲವು ಜನ ಪುರುಷರು ಲೋಡು, ಗಧೆಯಂತಹ ಆಯುಧಗಳು ಹಾಗೂ ಇತರ ವ್ಯಾಯಾಮ ಸಲಕರಣೆಗಳಿಂದ ಕಸರತ್ತು ಮಾಡುತ್ತಿದ್ದಾರೆ. ಇವರೆಲ್ಲರು ಚಡ್ಡಿಗಳನ್ನು ಧರಿಸಿದ್ದು ದಪ್ಪನಾದ ಮೈಕಟ್ಟು ಹೊಂದಿದ್ದಾರೆ. ನಸುಗೆಂಪು ವರ್ಣವನ್ನು ಹೆಚ್ಚಾಗಿ ಬಳಸಲಾಗಿದೆ.

**೪. ಕೃಷ್ಣನ ಪ್ರಣಯ ದೃಶ್ಯ :** ಕೃಷ್ಣನು ತನ್ನ ಸಖಿಯೊಂದಿಗೆ ಸರಸದಲ್ಲಿ ತೊಡಗಿರುವ ಈ ಚಿತ್ರದಲ್ಲಿ ವರ್ಣಗಳು ಹೆಚ್ಚಾಗಿ ಉದುರಿಹೋಗಿವೆ. ಈ ಚಿತ್ರದಲ್ಲಿ ಕೃಷ್ಣನು ಗೋಪಿಕಾ ಸ್ತ್ರೀಯೊಬ್ಬಳನ್ನು ಹಿಡಿದುಕೊಂಡು ಅವಳ ಸ್ತನಗಳ ತೊಟ್ಟನ್ನು ಬೆರಳುಗಳಿಂದ ಹಿಚುಕುತ್ತಿದ್ದಾನೆ. ಕೃಷ್ಣನು ಗೌಳಿಗರ ವೇಷದಲ್ಲಿದ್ದಾನೆ. ಸಖಿಯು ಆತನ ಸರಸಕ್ಕೆ ನಾಚಿ ಮುಖ ಬೇರೆ ಕಡೆಗೆ ತಿರುವಿದ್ದಾಳೆ.

**೫. ಶಿವನ ತಪಸ್ಸು ಭಂಗಪಡಿಸುತ್ತಿರುವ ಮನ್ಮಥ :** ಈ ಚಿತ್ರದಲ್ಲಿ ಶಿವನು ಪರ್ವತದ ಮೇಲೆ ಕೂತು ತಪಸ್ಸು ಮಾಡುತ್ತಿದ್ದಾನೆ. ಮನ್ಮಥ ರತಿದೇವಿಯರು ಆತನ ತಪಸ್ಸು ಭಂಗಪಡಿಸಲು ನೃತ್ಯಗೈಯುತ್ತಾರೆ. ಅದರಿಂದ ಶಿವ ಎಚ್ಚರಗೊಳ್ಳದಾಗ ಮನ್ಮಥನು ಶಿವನಿಗೆ ಹೂಬಾಣವನ್ನು ಬಿಡುತ್ತಾನೆ. ಚಿತ್ರದಲ್ಲಿ ನೃತ್ಯಗೈದು ಬೇಸತ್ತ ರತಿದೇವಿಯು ಒಂದು ಕಡೆಗಿದ್ದರೆ ಮನ್ಮಥನು ರಥದ ಮೇಲೆ ನಿಂತು ಬಾಣ ಬಿಡುತ್ತಿದ್ದಾನೆ. ಮನ್ಮಥನ ಬಿಲ್ಲುಬಾಣಗಳು ಹೂಗಳಿಂದ ಅಲಂಕರಿಸಲ್ಪಟ್ಟಿವೆ. ಸುತ್ತಲಿನ ಪರಿಸರವು ಎಲೆ ಚಿಗುರುಗಳಿಂದ ಹೂಬಳ್ಳಿಗಳಿಂದ ನಲಿಯುತ್ತಿದ್ದು ವಸಂತ ಕಾಲದ ಶೃಂಗಾರ ಭಾವನೆಯನ್ನು ಕೊಡುತ್ತಿದೆ.

**೬. ಕೀಚಕನ ವಧೆ :** ಭೀಮನು ಕೀಚಕನನ್ನು ಸಂಹರಿಸುತ್ತಿರುವ ಈ ಚಿತ್ರದಲ್ಲಿ ರೇಖೆಗಳು ದಿಟ್ಟವಾಗಿ ಮತ್ತು ದಪ್ಪವಾಗಿವೆ. ವಿರಾಟನಗರದಲ್ಲಿ ಕೀಚಕನಿಂದ ಅವಮಾನಿತಳಾದ ದ್ರೌಪದಿಯು ಭೀಮನಿಗೆ ವಿಷಯ ತಿಳಿಸಲು ಆತ ಕೀಚಕನನ್ನು ಕೊಲ್ಲುವ ಸಂಚು ತಯಾರಿಸುತ್ತಾನೆ. ಅದೇ ಪ್ರಕಾರ ಆತ ಸ್ತ್ರೀ ವೇಷದಲ್ಲಿ ಹೋಗಿ ಕೀಚಕನನ್ನು ಸಂಹರಿಸುತ್ತಾನೆ. ಇಲ್ಲಿಯ ಚಿತ್ರದಲ್ಲಿ ಭೀಮನು ಸ್ತ್ರೀ ವೇಷಧಾರಿಯಂತೆ ಕಾಣುವುದಿಲ್ಲ. ಭೀಮನು ಕೀಚಕನನ್ನು ಕೊಲ್ಲುತ್ತಿರುವಾಗ ದ್ರೌಪದಿಯು ಮರೆಯಲ್ಲಿ ನಿಂತು ನೋಡುತ್ತಿರುವಂತೆ ಇಲ್ಲಿ ಚಿತ್ರಿಸಲಾಗಿದೆ.

***III. ದಕ್ಷಿಣಗೋಡೆಯ ಚಿತ್ರಗಳು :*** ದಕ್ಷಿಣ ಗೋಡೆಯಲ್ಲಿ ನಾಲ್ಕು ಚಿತ್ರಗಳಿದ್ದು ಅವುಗಳು ಈ ಕೆಳಗಿನಂತಿವೆ :

**೧. ಕಾಮಧೇನುವಿನ ಚಿತ್ರ :** ಇಲ್ಲಿರುವ ಇನ್ನೊಂದು ಚಿತ್ರದಲ್ಲಿ ಒಂದು ಮಾವಿನ ಮರವನ್ನು ಚಿತ್ರಿಸಿ ಅದರ ಎಡಬಲಗಳಲ್ಲಿ ಒಂದೊಂದು ಕಾಮಧೇನುಗಳನ್ನು ಚಿತ್ರಿಸಿದ್ದಾರೆ. ಈ ರೀತಿಯ ಚಿತ್ರಣವನ್ನು ರಾಯಚೂರಿನ ಬಾಜಿನಗೌಡರ ಮನೆಯಲ್ಲೂ ಕಾಣಬಹುದು. ಇಲ್ಲಿನ ಕಾಮಧೇನುಗಳೂ ಗೋ ಶರೀರ, ಸ್ತ್ರೀ ಮುಖಗಳನ್ನು ಹೊಂದಿದೆ. ಮುಖಕ್ಕೆ ಆಕಳಿನ ಹಾಗೆ ಕೋಡುಗಳನ್ನು ರಚಿಸಿದ್ದರೂ ಮತ್ತೆ ಮಹಿಳೆಯರ ಹಾಗೆ ಎರಡು ಜಡೆಯನ್ನೂ ಚಿತ್ರಿಸಿದ್ದಾರೆ. ಪಕ್ಷಿಯಹಾಗೆ ರೆಕ್ಕೆಗಳು ನವಿಲಿನಂತೆ ಬಾಲಗಳೂ ಇದಕ್ಕೆ ಇವೆ. ಮಾವಿನ ಮರದ ಅಕ್ಕಪಕ್ಕದಲ್ಲಿ ಎರಡು ಪಕ್ಷಿಗಳು ಹಾರುತ್ತಿರುವಂತೆ ಚಿತ್ರಿಸಿದೆ.

**೨. ಗರುಡನ ಚಿತ್ರ :** ವಿಷ್ಣುವಿನ ವಾಹನ ಗುರುಡನ ಚಿತ್ರವೊಂದು ಇಲ್ಲಿದೆ. ಇಲ್ಲಿನ ಗರುಡನ ಚಿತ್ರಕ್ಕೆ ಎರಡು ಮುಖಗಳನ್ನು ರಚಿಸಲಾಗಿದೆ. ಮುಖಗಳಿಗೆ ತೊಡಿಸಿದ ಕಿರೀಟ, ಉದ್ದನಾದ ಕೊಂಡಿಯಂತಿರುವ ಮೂಗು ಆಕರ್ಷಕವಾಗಿವೆ ಗರುಡನು ನಾಲ್ಕು ಆನೆಗಳನ್ನು ಹಿಡಿದು ಮೇಲೆ ಹಾರುತ್ತಿರುವಂತೆ ಚಿತ್ರಿಸಿದೆ. ಗರುಡನ ಚಿತ್ರಗಳು

ಉತ್ತರ ಕರ್ನಾಟಕದ ಹೆಚ್ಚಿನ ಭಿತ್ತಿಚಿತ್ರಗಳಲ್ಲಿ ಕಂಡುಬಂದಿವೆ. ಅವುಗಳಲ್ಲಿ ನರಗುಂದ, ಅಮ್ಮಿನಭಾವಿ, ನಿಪ್ಪಾಣಿ, ರಾಯಚೂರು. ಗುಳೆಗುಡ್ಡ ಮುಖ್ಯವಾಗಿವೆ. ಇವುಗಳಲ್ಲಿ ಗುಳೇದಗುಡ್ಡದಲ್ಲಿನ ಗರುಡನ ಚಿತ್ರ, ವರ್ಣವಿನ್ಯಾಸ ಶಕ್ತಿಯುತವಾದ ರೇಖೆಗಳಿಂದ ಕೂಡಿ ಆಕರ್ಷಕವಾಗಿದೆ.

**೩. ಮಂಗನ ಚಿತ್ರ :** ಈ ಚಿತ್ರದಲ್ಲಿ ಬಾಳೆ. ಮಾವು. ತೆಂಗು. ಮುಂತಾದ ಗಿಡಗಳಿಂದ ಕೂಡಿದ ತೋಟದಲ್ಲಿ ಮಂಗವೊಂದು ಮಾವಿನ ಹಣ್ಣು ತಿನ್ನುತ್ತ ಕುಳಿತಿರುವಂತೆ ಚಿತ್ರಸಲಾಗಿದೆ. ಒಂದು ಕೈಯಲ್ಲಿ ಮಾವಿನ ಹಣ್ಣನ್ನು ತಿನ್ನುತ್ತಿದ್ದರೆ. ಇನ್ನೊಂದು ಕೈಯಲ್ಲಿ ಇನ್ನೂ ಮೂರು ಮಾವಿನ ಹಣ್ಣುಗಳನ್ನು ಹಿಡಿದುಕೊಂಡಿದೆ. ಈ ಚಿತ್ರದಲ್ಲಿ ಬಾಳೆಯಗಿಡಗಳು ಸುತ್ತಲಿನ ಪ್ರಕೃತಿ ಚನ್ನಾಗಿ ರೂಪಿತವಾಗಿದೆ.

**೪. ಸುಳುವಿನ ನಕ್ಷೆಗಳು :** ಗೋಡೆಯಲ್ಲಿ ಅಲ್ಲಲ್ಲಿ ಸುಳುವಿನ ನಕ್ಷೆಗಳನ್ನು ಮುಖ್ಯಚಿತ್ರಗಳಿಗೆ ಸಹಾಯಕವಾಗುವಂತೆ ಮತ್ತು ಪ್ರತ್ಯೇಕವಾಗಿ ನಕ್ಷೆಗಳನ್ನೇ ಹಲವು ಕಡೆಯಲ್ಲಿ ಚಿತ್ರಿಸಲಾಗಿದೆ. ಈ ನಕ್ಷೆಯಲ್ಲಿ ವಿವಿಧ ಹೂ. ಬಳ್ಳಿಗಳನ್ನು ಪ್ರತಿನಿಧಿಸುವ ಸಂಕೇತಗಳು. ಮತ್ತು ಬೇರೆ ರೀತಿಯ ಇನ್ನಿತರ ಸುಳುವುಳುಗಳೂ ರಚನೆಯಾಗಿವೆ.

**ಸುರಪುರ ವೀರಶೈವ ಮಠಗಳ ಭಿತ್ತಿಚಿತ್ರ ಲಕ್ಷಣಗಳು :**

* ಇಲ್ಲಿಯ ಚಿತ್ರಗಳು ಚಿಕಣಿ ಚಿತ್ರಗಳ (ಮಿನಿಯೇಚರ್) ವಿಸ್ತೃತ ರೂಪಗಳಂತೆ ಕಂಡುಬರುತ್ತವೆ.
* ಒಂದು ರೀತಿಯ ನಸುಗೆಂಪು. ಹಸಿರು. ಹಳದಿ ಮತ್ತು ನೀಲಿ ವರ್ಣಗಳು ಪ್ರಮುಖವಾಗಿ ಬಳಸಲಾಗಿದೆ. ಎಲ್ಲ ಚಿತ್ರಗಳಲ್ಲಿ ಇವೇ ವರ್ಣಗಳು ಪುನರಾವರ್ತನೆಯಾಗಿವೆ. ಇಲ್ಲಿ ಬಳಸಲಾದ ನೀಲಿ. ಕೆಂಪು. ಹಳದಿ. ಹಸಿರು ವರ್ಣಗಳು ವಿಶೇಷ ಕಾಂತಿಯಿಂದ ಕೂಡಿದ್ದು ಉತ್ತರ ಕರ್ನಾಟಕದ ಬೇರೆಭಾಗಗಳಲ್ಲಿನ ಭಿತ್ತಿ ಚಿತ್ರಗಳಲ್ಲಿ ಈ ಹೊಳಪು ಕಂಡುಬರುವುದಿಲ್ಲ. ಇವು ಸ್ಥಳೀಯವಾಗಿ ದೊರೆಯುವ ಮೂಲಗಳಿಂದ ಪಡೆದವುಗಳಾಗಿರಬೇಕು.
* ಚಿತ್ರಗಳಲ್ಲಿ ಬರುವ ಮನುಷ್ಯಾಕೃತಿಗಳಲ್ಲಿನ ಆಭರಣಗಳು, ಸೀರೆ, ಕುಪ್ಪಸ ತಲೆಯ ಪೇಟ, ಶಾಲು ಮುಂತಾದ ವಸ್ತ್ರಗಳ ಅಂಚುಗಳು ಮತ್ತು ನಕ್ಷೆಗಳು ಅಲ್ಲದೇ ದೇವತೆಗಳ ಕಿರೀಟ, ಅವರ ಹಿಂದಿನ ಪ್ರಭಾವಳಿಗೆ ಬಂಗಾರದ ವರ್ಣವನ್ನು ಬಳಸಲಾಗಿದೆ.
* ಮನುಷ್ಯಾಕೃತಿಯ ಚಿತ್ರಗಳಲ್ಲಿ ಕಾಲಿನಿಂದ ಅವುಗಳ ದೇಹ ಮತ್ತು ತಲೆಗಳು ಹಿಂದಕ್ಕೆ ವಾಲಿದಂತೆ ಕಂಡುಬರುತ್ತವೆ. ದೇಹದ ಭಾರವು ಕಾಲುಗಳ ಮೇಲೆ ಬೀಳದೇ ಆಕೃತಿಗಳು ಹಿಂದಕ್ಕೆ ಬೀಳುತ್ತಿವೆಯೇನೋ ಎನಿಸುತ್ತದೆ.
* ಚಿತ್ರದ ಹಿನ್ನೆಲೆಯಲ್ಲಿ ಮತ್ತು ಮೇಲ್ಭಾಗದಲ್ಲಿ ಹೆಚ್ಚಿನ ಸ್ಥಳ ಉಳಿದುಕೊಂಡಾಗ ಅಲ್ಲಿ ನಕ್ಷತ್ರಗಳು, ಗಾಜಿನ ಅಲಂಕಾರಿಕ ತೂಗು ದೀಪಗಳನ್ನು ರಚಿಸಲಾಗಿದೆ. ಇದರಂತೆ ಚಿತ್ರಗಳ ಮುಂಭಾಗದಲ್ಲಿ ವಿವಿಧ ಬಗೆಯ ತಟ್ಟೆಗಳು, ಹೂಜಿಗಳು, ಇತರ ಐಹಿಕ ವಸ್ತುಗಳನ್ನು ಚಿತ್ರಿಸಲಾಗಿದೆ.
* ಸುರಪುರ ಚಿತ್ರಗಳಲ್ಲಿ ಗಾಢ ಕೆಂಪುವರ್ಣವನ್ನು ಆಕೃತಿಗಳ ಮೈಬಣ್ಣವಾಗಿ ಹೆಚ್ಚು ಬಳಸಲಾಗಿದೆ.
* ಇಲ್ಲಿನ ಸ್ತ್ರೀ ಚಿತ್ರಗಳು ದೊಡ್ಡ ದೊಡ್ಡ ಬದಾಮಿಯಾಕಾರದ ಕಣ್ಣುಗಳನ್ನು ಹೊಂದಿವೆ. ಮಹಿಳೆಯರ ಸೀರೆ ಕುಪ್ಪಸಗಳು ಅಂಚುಗಳನ್ನು ಹೊಂದಿದ್ದು ಆ ಅಂಚುಗಳಲ್ಲಿ ವೈವಿಧ್ಯಮಯ ನಕ್ಷೆಗಳು ರಚಿಸಲ್ಪಟ್ಟಿವೆ.

ಮಠಗಳಲ್ಲಿ ರಚನೆಯಾದ ಭಿತ್ತಿ ಚಿತ್ರಕಲೆಯು ಸಹಿತ ದೇವಾಲಯದ ಭಿತ್ತಿ ಚಿತ್ರಕಲೆಯಂತೆ ಸರ್ವಧರ್ಮ ಸಮನ್ವಯ ಭಾವನೆಯ ಪ್ರತೀಕವಾಗಿದೆ. ಮಠಗಳಲ್ಲಿ ಆಯಾ ಮಠಕ್ಕೆ ಸಂಬಂಧಿಸಿದ ಸ್ವಾಮಿಗಳ ಚಿತ್ರಗಳಲ್ಲದೇ ಇತರ ದೇವತೆಗಳ ಚಿತ್ರಗಳೂ ರಚನೆಯಾಗಿರುತ್ತವೆ. ಮಹಾಲಿಂಗೇಶ್ವರ ಮಠದಲ್ಲಿ ಮಹಲಿಂಗಸ್ವಾಮಿಗಳ ಚಿತ್ರಗಳನ್ನು ರಚಿಸಿದಂತೆಯೇ ಶಿವ. ವಿಷ್ಣು. ಲಕ್ಷ್ಮೀ. ಸರಸ್ವತಿ. ವೀರಭದ್ರ. ಗಣಪತಿ. ಹೀಗೆ ವಿವಿಧ ದೇವತೆಗಳನ್ನು ಚಿತ್ರಿಸಲಾಗಿದೆ. ಅಲ್ಲದೇ ಮುಸ್ಲಿಂ ದೊರೆಗಳ. ಸಂತರ ಚಿತ್ರಗಳು ಇಲ್ಲಿರಚಿಸಿವೆ. ಈ ಮಠದ ದಕ್ಷಿಣಾ ಮೂರ್ತಿ ಶಿವನ ಚಿತ್ರದಲ್ಲಿ ಶಿವನ ಸುತ್ತಲೂ ನೆರೆದ ಋಷಿಮುನಿಗಳಲ್ಲಿ ಸೂಕ್ಷ್ಮವಾಗಿ ಗಮನಿಸಿದಾಗ ಬಟ್ಟೆಯನ್ನು ಕೈಯಲ್ಲಿ ಹಿಡಿದುಕೊಂಡ ದೇವಲ ಮಹರ್ಷಿಯ ಚಿತ್ರವೂ ಕಂಡುಬರುವುದು. ಈ ದೇವಲ ಮಹರ್ಷಿ ನೇಕಾರಿಕೆ ವೃತ್ತಿಯನ್ನು ಮಾಡುವ ಜನಾಂಗದ ಮೂಲಪುರುಷನಲ್ಲದೇ ಪರಮೇಶ್ವರನ ಅಂಗದಿಂದ ಹುಟ್ಟಿದ ಈ ಮುನಿ ಮೊದಲಿಗೆ ಬಟ್ಟೆನೇಯ್ಗೆಯನ್ನು ಪ್ರಾರಂಭಿಸಿದನೆಂದು ದೇವಾಂಗ ಸಮುದಾಯದ ಜನರು ನಂಬುತ್ತಾರೆ. ಮಹಾಲಿಂಗಪುರ ಗ್ರಾಮದಲ್ಲಿ ಮೊದಲಿನಿಂದಲೂ ನೇಕಾರಿಕೆಯನ್ನು ಅನುಸಿರಿಸಿಕೊಂಡು ಬಂದ ಜನಾಂಗದವರಿದ್ದಾರೆ. ಈಗಲೂ ಈ ಜನಾಂಗದವರು ಈ ಮಠಕ್ಕೆ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಈ ಜನಾಂಗದವರ ಮಠದ ಮೇಲಿನ ಭಕ್ತಿಯನ್ನು ಪ್ರತಿನಿಧಿಕರಿಸಲು ಅವರ ಮೂಲಪುರುಷ ದೇವಲ ಮುನಿಯ ಚಿತ್ರವನ್ನು ಇಲ್ಲಿ ರಚನೆ ಮಾಡಿರುವ ಸಾಧ್ಯತೆ ಇದೆ. ಇಂತಹ ಚಿತ್ರಗಳು ಮಠದ ಸ್ವಾಮಿಗಳು ಅನ್ಯ ಧರ್ಮೀಯರ ಮೇಲೆ ತೋರುವ ಸಮಭಾವವನ್ನು ತೋರುತ್ತವೆ.

ಅಮ್ಮಿನಭಾವಿಯ ಪಂಚಗೃಹ ಹಿರೇಮಠದಲ್ಲಿ ನ್ಯಾಯತೀರ್ಮಾನ ಮಾಡುತ್ತಿರುವ ಸ್ವಾಮಿಗಳ ಚಿತ್ರವಿದ್ದು ನ್ಯಾಯಸ್ಥಾನಗಳಾಗಿ ಮಠಗಳು ವಹಿಸಿದ ಪಾತ್ರವನ್ನು ಇದು ಪ್ರತಿಬಿಂಬಿಸುತ್ತದೆ. ಇಲ್ಲಿಯೇ ಇನ್ನೊಂದು ಕಡೆಗೆ ಮಠದ ಸ್ವಾಮಿಗಳು ವೈಷ್ಣವ ಧರ್ಮಾನುಯಾಯಿಗಳ ಜೊತೆಗೆ ವಿಚಾರ ವಿನಿಮಯದಲ್ಲಿ ತೊಡಗಿರುವ ಚಿತ್ರವಿದ್ದು, ಮತಧರ್ಮದ ವಿಚಾರವಾಗಿ ಇತರ ಧಾರ್ಮಿಕ ಮುಖಂಡರ ಜೊತೆಗೆ ಚರ್ಚಿಸುವ ಉದಾರ ಮನೋಭಾವವನ್ನು ಉಳ್ಳವರಾಗಿದ್ದರೆಂದು ಇದು ತಿಳಿಸುತ್ತದೆ. ಇಲ್ಲಿನ ಒಂದು ಚಿತ್ರ ಸಂಗೊಳ್ಳಿರಾಯಣ್ಣನಿಗೂ ಇನ್ನೊಂದು ಚಿತ್ರ ಕಿತ್ತೂರು ಚನ್ನಮ್ಮರಾಣಿಗೂ ಸಂಬಂಧಿಸಿದ್ದು, ಮಠಗಳು ಜನರಲ್ಲಿ ಐತಿಹಾಸಿಕ ಪ್ರಜ್ಞೆ ಮೂಡಿಸುವ ನಿಟ್ಟಿನಲ್ಲಿ ಕೆಲಸ ಮಾಡುತ್ತಿದ್ದವು ಎಂದು ಹೇಳಬಹುದು. ಅಲ್ಲದೇ ಸಮಕಾಲೀನ ಸಮಸ್ಯೆಗೆ ಮಠಗಳ ಸ್ಪಂದಿಸುವಿಕೆಯನ್ನೂ ಇಂತಹ ಚಿತ್ರಗಳು ಹೇಳುತ್ತವೆ. ಬ್ರಿಟೀಷರ ವಿರುದ್ಧ ಹೋರಾಡಿದ ಕಿತ್ತೂರು ಚನ್ನಮ್ಮ ಮತ್ತು ಸಂಗೊಳ್ಳಿರಾಯಣ್ಣನ ಚಿತ್ರಗಳನ್ನು ಮಠಗಳಲ್ಲಿ ರಚನೆಮಾಡಿ ಆ ಮೂಲಕ ಜನರಲ್ಲಿ ಸ್ಫೂರ್ತಿ ತುಂಬುವ ಕೆಲಸವನ್ನೂ ಮಠಗಳು ಮಾಡಿವೆ. ಅಮ್ಮಿನಭಾವಿಯ ಇದೇ ಮಠದಲ್ಲಿ ಗೋಡೆಯಮೇಲೆ ಬ್ರಿಟೀಷರನ್ನು ಎದುರಿಸಿದ ನರಗುಂದದ ಬಾಬಾಸಾಹೇಬನ ಚಿತ್ರವೂ ಬರೆಯಲ್ಪಟ್ಟಿತ್ತು ಆದರೆ ಈಗ ಅದು ಹಾಳಾಗಿದೆ. ಇಂತಹ ಕೆಲವು ಚಿತ್ರಗಳ ಹಿನ್ನೆಲೆಯಿಂದ ಹೇಳಬಹುದಾದರೆ ಮಠಗಳಲ್ಲಿನ ಭಿತ್ತಿಚಿತ್ರಕಲೆ ಕೇವಲ ಧರ್ಮಪ್ರಸಾರಕ್ಕೆ ಮಾತ್ರ ಸೀಮಿತವಾಗಿರದೇ ಸಮಾಜನದಲ್ಲಿ ಸಾಂಸ್ಕೃತಿಕ, ರಾಜಕೀಯ. ಧಾರ್ಮಿಕ ಜಾಗೃತಿಯನ್ನು ಉಂಟುಮಾಡುವ ಹಿನ್ನೆಲೆಯಲ್ಲಿ ರೂಪಗೊಂಡಿದೆ ಎನ್ನಬಹುದು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಉತ್ತರ ಕರ್ನಾಟಕದಲ್ಲಿ ಶಿಷ್ಟಪರಂಪರೆಯ ಭಿತ್ತಿಚಿತ್ರಕಲೆ ಕಂಡುಬಂದ ಮಠಗಳು ಹೆಚ್ಚಾಗಿ ವೀರಶೈವ ಮಠಗಳೇ ಆಗಿವೆ.

## VI. ಚರ್ಚಗಳಲ್ಲಿರುವ ಭಿತ್ತಿ ಚಿತ್ರಕಲೆ

ಹಿಂದೂ ದೇವಾಲಯ. ಮಠಮಾನ್ಯಗಳಲ್ಲಿ. ಮತ್ತು ಮುಸ್ಲಿಂ ಧಾರ್ಮಿಕ ಕಟ್ಟಡಗಳಲ್ಲಿ ಭಿತ್ತಿ ಚಿತ್ರಗಳು ಮತ್ತು ಹೂಬಳ್ಳಿಯ ಚಿತ್ರವಿನ್ಯಾಸಗಳು ಕಂಡು ಬರುತ್ತವೆ. ಮುಸ್ಲಿಮರು ಭಾರತದಲ್ಲಿ ಸ್ಥಳೀಯ ಪ್ರಭಾವದಿಂದ ಭಿತ್ತಿ ಚಿತ್ರಕಲೆಯನ್ನು ತಮ್ಮ ಕಟ್ಟಡಗಳಲ್ಲಿ ಅಳವಡಿಸಿಕೊಂಡರೆ. ಕ್ರಿಶ್ಚಿಯನ್ನರು ಇಲ್ಲಿನ ಪ್ರಭಾವಕ್ಕೆ ಒಳಗಾಗದೇ ಈ ಮೊದಲೇ ತಮ್ಮ ನಾಡಿನಲ್ಲಿ ಪ್ರಚಲಿತದಲ್ಲಿದ್ದ ಭಿತ್ತಿ ಚಿತ್ರಪರಂಪರೆಯನ್ನು ಇಲ್ಲಿನ ಚರ್ಚುಗಳಲ್ಲೂ ಅಳವಡಿಸಿದರು. ತಮ್ಮ ನಾಡಿನ ಚರ್ಚುಗಳಲ್ಲಿ ಯೇಸುವಿನ ಜೀವನದ ಘಟನೆಗಳನ್ನು ಮತ್ತು ಪೂರಕವಾಗಿ ಜ್ಯಾಮಿತಿಕ ರೂಪದ ನಕ್ಷಾಚಿತ್ರಗಳನ್ನು ರಚಿಸುತ್ತಿದ್ದ ಪದ್ಧತಿಯನ್ನೇ ಇಲ್ಲಿಯೂ ಮುಂದುವರೆಸಿದರು. ಭಾರತದ ಅನೇಕ ಪ್ರಾಚೀನ ಚರ್ಚುಗಳಲ್ಲಿ ಭಿತ್ತಿ ಚಿತ್ರಗಳು ರಚನೆಯಾಗಿವೆ. ಗೋವಾದಲ್ಲಿನ ಬಾಮ್‌ಜೀಸಸ್ ಬೆಸೆಲಿಕಾ. ಸಂತಪ್ರಾನ್ಸಿಸ್‌ಚರ್ಚ, ಸೇಕೆಥೆಡ್ರಿಲ್, ಸಂತಕಚೇತನ ಚರ್ಚಗಳಲ್ಲಿ ಕ್ರಿ. ಶ. ೧೫ ನೇ ಶತಮಾನದ ಭಿತ್ತಿಚಿತ್ರಗಳಿವೆ. ಹಾಗೇ ಕರ್ನಾಟಕದ ಮಂಗಳೂರಿನ ಸೇಂಟ್ ಅಲಾಯಸೆಸ್ ಚರ್ಚ. ಕುಲಶೇಖರ ಚರ್ಚ. ಜಪ್ಪೊ ಚರ್ಚ. ಬಂಟ್ವಾಳದ ಅಗರಾರ್ ಚರ್ಚಗಳಲ್ಲಿ ಇಪ್ಪತ್ತನೇ ಶತಮಾನದ ಪ್ರಾರಂಭದ ಭಿತ್ತಿಚಿತ್ರಗಳಿವೆ. ಉತ್ತರ ಕರ್ನಾಟಕದಲ್ಲಿ ಬೆಳಗಾಂವಿಯ ಎರಡು ಪ್ರಾಚೀನ ಚರ್ಚಗಳಲ್ಲಿ ಭಿತ್ತಿಚಿತ್ರಗಳು ರಚನೆಯಾಗಿದ್ದು ತಿಳಿದುಬರುವುದು. ಅವು ಈ ಕೆಳಗಿನಂತಿವೆ :

೧. ಸೇಂಟ್‌ಮೇರಿ ಚರ್ಚ, ಬೆಳಗಾಂವಿ

೨. ಸೇಂಟ್ ಕ್ಸೇವಿಯರ್ ಚರ್ಚ, ಬೆಳಗಾಂವಿ

**೧. ಸೇಂಟ್ ಮೇರಿ ಚರ್ಚ :** ಬೆಳಗಾವಿಯ ಸೇಂಟ್‌ಮೇರಿ ಚರ್ಚ ಕ್ರಿ. ಶ. ೧೮೬೯ ರಲ್ಲಿ ನಿರ್ಮಾಣವಾಗಿದ್ದು, ಈ ಭವ್ಯವಾದ ಕಲ್ಲಿನ ಕಟ್ಟಡವನ್ನು ವಿನ್ಯಾಸಗೊಳಿಸಿದವನು ಕೆ. ಫ್ರಾನ್ಸಿಸ್‌ಗೆಲ್ ಎಂಬಾತ.[೧೮೭] ಈ ಚರ್ಚಿನ ಬಾಗಿಲು ಮತ್ತು ಕಿಟಕಿಗಳಿಗೆ ಬಣ್ಣದ ಗಾಜುಗಳನ್ನು ಹಾಕಲಾಗಿದೆ. ಅದರ ಮೇಲೆ ಅಲ್ಲಲ್ಲಿ ನಕ್ಷೆಗಳನ್ನು ರೂಪಿಸಲಾಗಿದೆ. ಚರ್ಚಿನ ಒಳಗೋಡೆಗಳಲ್ಲಿ ಬಣ್ಣಗಳಿಂದ ಬೈಬಲ್ಲಿನ ಘಟನಾವಳಿಗಳನ್ನೂ ಚಿತ್ರಿಸಲಾಗಿದೆ[೧೮೮] ಎಂದು ವಿವರಗಳು ಸಿಗುತ್ತಿದ್ದರೂ ಇಂದು ಒಳಭಾಗದ ಗೋಡೆಯ ಚಿತ್ರಗಳು ಕಂಡುಬರುವುದಿಲ್ಲ. ಕಿಟಕಿಯ ಬಣ್ಣದ ಗಾಜುಗಳ ಮೇಲೆ ಅಲ್ಲಲ್ಲಿ ನಕ್ಷಾರೂಪಗಳು ಮಾತ್ರ ಕಾಣಸಿಗುತ್ತವೆ.

**೨. ಸೇಂಟ್ ಕ್ಸೇವಿಯರ್ ಚರ್ಚ :** ಬೆಳಗಾವಿಯ ಸೇಂಟ್‌ಕ್ಸೇವಿಯರ್ ಚರ್ಚನಲ್ಲಿಯೂ ಚಿತ್ರಗಳಿದ್ದುದಾಗಿ ವಿವರಗಳು ಸಿಗುತ್ತಿದ್ದರೂ,[೧೮೯] ಅಲ್ಲಿ ಇಂದು ಯಾವ ಚಿತ್ರಗಳೂ ಉಳಿದಿಲ್ಲ. ಈ ಚರ್ಚನ ಕಿಟಕಿಗಳಲ್ಲಿ ಗಾಜಿನ ಮೇಲೆ ಕ್ರಿಸ್ತ ಜೀವನದ ಘಟನೆಗಳನ್ನೂ ಚಿತ್ರಿಸಲಾಗಿದೆ ಎಂಬವಿವರಣೆಗಳು ದೊರೆಯುತ್ತವೆ. ಆದರೆ ಹಳೆಯದಾದ ಸೇಂಟ್ ಕ್ಸೇವಿಯರ್ ಚರ್ಚನ್ನು ಪೂರ್ತಿಯಾಗಿ ನೆಲಸಮಗೊಳಿಸಿ, ಬೇರೆ ಕಡೆಗೆ ನವ್ಯರೀತಿಯಲ್ಲಿ ಕಟ್ಟಲಾಗಿದೆ. ಈಗ ಬೆಳಗಾವಿಯಲ್ಲಿ ಪ್ರಾಚೀನ ಚರ್ಚಗಳಲ್ಲಿ ಕಂಡು ಬರುವ ಭಿತ್ತಿ ಚಿತ್ರಗಳ ಉದಾಹರಣೆ ಎಂದರೆ ಸೇಂಟ್‌ಮೇರಿ ಚರ್ಚಿನ ಕಿಟಕಿಗಳ ಬಣ್ಣದ ಗಾಜಿನ ಮೇಲೆ ಕಂಡುಬರುವ ನಕ್ಷಾವಿನ್ಯಾಸಗಳಾಗಿವೆ.

---

೧೮೭. ಸೆಬಾಸ್ಟಿಯನ್ ಜೋಸೆಫ್ (ಸಂ.) : ಕರ್ನಾಟಕ ಚರಿತ್ರೆ (ಸಂಪುಟ ೬), ಪುಟ ೨೬೪

೧೮೮. ಸೆಬಾಸ್ಟಿಯನ್ ಜೋಸೆಫ್ (ಸಂ.) : ಕರ್ನಾಟಕ ಚರಿತ್ರೆ (ಸಂಪುಟ ೬), ಪುಟ ೨೬೪

೧೮೯. ಹಿಸ್ಟಾರಿಕ್ ಮ್ಯಾಗಿಕ್ : ಟೂರಿಸ್ಟಗೈಡ್ (ನಾರ್ಥ ಕರ್ನಾಟಕ), ಪುಟ ೧

ಚರ್ಚುಗಳಲ್ಲಿನ ಭಿತ್ತಿ ಚಿತ್ರಕಲೆಯು ಜ್ಯಾಮಿತಿಕ ರೂಪದ ನಕ್ಷಾವಿನ್ಯಾಸ ಇಲ್ಲವೇ ಕ್ರಿಸ್ತನ ಜೀವನದ ಘಟನೆಗಳನ್ನು ಪ್ರತಿಬಿಂಬಿಸುವಲ್ಲಿ ಸೀಮಿತಗೊಂಡಿದೆ. ಹಿಂದೂ ದೇವಾಲಯ, ಮಠಮಾನ್ಯಗಳಂತೆ ವೈವಿಧ್ಯ ವಿಷಯ ಸಂಪತ್ತು, ಹಲವು ಉದ್ದೇಶಗಳ ಹಿನ್ನೆಲೆಯಲ್ಲಿ ಇಲ್ಲಿನ ಭಿತ್ತಿ ಚಿತ್ರಕಲೆ ರೂಪುಗೊಂಡಿರದೇ, ಕಟ್ಟಡದ ಸೌಂದರ್ಯ, ಮತ್ತು ಕ್ರೈಸ್ತಧರ್ಮದ ವಿಚಾರಗಳನ್ನು ತಿಳಿಸಲು ಸೀಮಿತಗೊಂಡಂತೆ ಕಂಡುಬರುತ್ತದೆ. ಅನ್ಯ ಪ್ರದೇಶಗಳಲ್ಲಿನ ಚರ್ಚುಗಳಲ್ಲಿ ರಚನೆಯಾದ ಭಿತ್ತಿ ಚಿತ್ರಕಲೆಯಲ್ಲಿ ಹಲವು ಉದ್ದೇಶ, ವೈವಿಧ್ಯತೆಗಳು ಇದ್ದಿರಬಹುದಾದರೂ ಉತ್ತರ ಕರ್ನಾಟಕ ಭಾಗದ ಚರ್ಚುಗಳ ಭಿತ್ತಿಚಿತ್ರಗಳಲ್ಲಿ ಅಂತಹ ವೈವಿಧ್ಯತೆ ಕಂಡುಬರುವುದಿಲ್ಲ.

## VII. ಮನೆಗಳಲ್ಲಿರುವ ಭಿತ್ತಿಚಿತ್ರಕಲೆ

ರಾಜರು, ಸಂಸ್ಥಾನಿಕರು ತಮ್ಮ ಅರಮನೆ, ರಾಜವಾಡೆಗಳನ್ನು ಭಿತ್ತಿಚಿತ್ರಕಲೆಯಿಂದ ಅಲಂಕರಿಸಿದಂತೆ, ಅವರ ಕೈಕೆಗಳಗಿನ ಅಧಿಕಾರಿಗಳು, ನಂತರದಲ್ಲಿ ಗೌಡರು, ಶ್ಯಾನುಭೋಗರು, ದೇಸಾಯಿಗಳಂತಹ ಊರಿನ ಪ್ರತಿಷ್ಠಿತ ಜನರು ಸಹಿತ ತಮ್ಮ ಮನೆಗಳನ್ನು ಭಿತ್ತಿಚಿತ್ರಗಳಿಂದ ಸುಂದರಗೊಳಿಸಿದ್ದಾರೆ. ಶ್ರೀರಂಗಪಟ್ಟಣದ ನವಾಬರ ಬಳಿ ಅಧಿಕಾರಿಯಾಗಿದ್ದ ನಲ್ಲಪ್ಪನೆಂಬುವವನು ಶಿಬಿಯ ನರಸಿಂಹಸ್ವಾಮಿ ದೇವಾಲಯವನ್ನು ಕಟ್ಟಿಸಿ ಅಲ್ಲಿ ಭಿತ್ತಿಚಿತ್ರಗಳನ್ನು ಬರೆಸಿದಂತೆ ತುಮಕೂರಿನಲ್ಲಿರುವ ತನ್ನ ನಿವಾಸದಲ್ಲಿಯೂ ಭಿತ್ತಿಚಿತ್ರಗಳನ್ನು ರಚಿಸಿ ಅದನ್ನು ಅಲಂಕರಿಸಿದ್ದಾನೆ. ಈ ಜೀರ್ಣವಾದ ಮನೆಯನ್ನು ತುಮಕೂರಿನಲ್ಲಿ ಇಂದಿಗೂ ನೋಡಬಹುದಾಗಿದೆ. ಉತ್ತರ ಕರ್ನಾಟಕದಲ್ಲಿಯೂ ಪ್ರತಿಷ್ಠಿತರ ಮನೆಗಳಲ್ಲಿ ಭಿತ್ತಿಚಿತ್ರಗಳು ರಚನೆಯಾಗಿದ್ದು ಕಂಡುಬರುತ್ತದೆ. ಅವುಗಳು ಈ ಕೆಳಗಿನಂತಿವೆ :

೧. ಗುಳೇದಗುಡ್ಡದ ಹೊಸಮನಿಗೌಡರ ಮನೆ
೨. ರಾಯಚೂರಿನ ಖಾಜಿನಗೌಡರ ಮನೆ
೩. ನರಗುಂದದ ಗುಂಡಪ್ಪ ಹಸಬಿಯವರ ಮನೆ
೪. ಸಂಕೇಶ್ವರದ ಮಮದಾಪುರ ಅವರ ಮನೆ

**೧. ಗುಳೇದಗುಡ್ಡದ ಹೊಸಮನಿಗೌಡರ ಮನೆ :** ಗುಳೇದಗುಡ್ಡವು ಇಂದು ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲೂಕಿಗೆ ಸೇರಿದ ಒಂದು ಪಟ್ಟಣ. ಜಿಲ್ಲಾ ಕೇಂದ್ರವಾದ ಬಾಗಲಕೋಟೆಯಿಂದ ಸುಮಾರು ೧೫ ಕಿ. ಮಿ.ಗಳ ಅಂತರದಲ್ಲಿದೆ. ಈ ಊರಿನ ಶಂಕ್ರಪ್ಪ ನಾಗಣ್ಣೆಪ್ಪ ಹೊಸಮನಿಗೌಡರು ಎಂಬವರ ಹಳೆಗಾಲದ ಮನೆಯಲ್ಲಿ ಭಿತ್ತಿಚಿತ್ರಗಳಿವೆ. ಈ ಭಿತ್ತಿಚಿತ್ರಗಳ ಬಗ್ಗೆ ಮೊದಲು ಗಮನ ಸೆಳೆದವರೆಂದರೆ ಅದೇ ಊರಿನ ಹಿಂದೀ ಮಾಧ್ಯಮಶಾಲೆಯಲ್ಲಿ ಚಿತ್ರಕಲಾಶಿಕ್ಷಕರಾಗಿರುವ ಮಹದೇವ ಜಗತಾಪ ಎಂಬವರು. ನಂತರ ಅವರೇ ವಾರಪತ್ರಿಕೆ, ದಿನಪತ್ರಿಕೆಗಳಿಗೆ ಆ ಕುರಿತು ಲೇಖನಗಳನ್ನೂ ಬರೆದರು. ಆಮೇಲೆ ಡಾ. ಎಸ್. ಸಿ. ಪಾಟೀಲ ಅವರು ತಮ್ಮ ಸಂಶೋಧನಾ ಗ್ರಂಥಗಳಲ್ಲಿ ಇವುಗಳ ಬಗ್ಗೆ ಪ್ರಸ್ತಾಪಿಸಿದ್ದಾರೆ. ಅಲ್ಲದೇ ಕರ್ನಾಟಕ ಲಲಿತಕಲಾ ಅಕಾಡೆಮಿಯವರು ಇವುಗಳನ್ನು ವಿಡಿಯೋ ಚಿತ್ರೀಕರಣ ಮಾಡಿರುವರಲ್ಲದೇ, ಅವರೆ ೧೯೯೪ ರಲ್ಲಿ ಹೊರತಂದ ಕಲಾ ಕೋಶ ಎಂಬ ಗ್ರಂಥದಲ್ಲಿ ಗುಳೇದಗುಡ್ಡ ಚಿತ್ರಗಳ ಕುರಿತ ಚಿಕ್ಕಮಾಹಿತಿಯನ್ನೂ ಅ. ಲ. ನರಸಿಂಹನ್ ಒದಗಿಸಿದ್ದಾರೆ.

**ಕಾಲ :** ಚಿತ್ರಗಳಿರುವ ಮನೆಯು ಸುಮಾರು ಎರಡುನೂರು ವರ್ಷಗಳಷ್ಟು ಹಳೆಯದಾಗಿದೆ. ಮನೆಯ ನಿರ್ಮಾಣದ ಸಮಯದಲ್ಲೇ ಚಿತ್ರಗಳನ್ನೂ ಬರೆಸಲಾಗಿದೆ ಎಂದು ಆ ಮನೆಯ ಈಗಿನ ಗೃಹಸ್ಥರಾದ ಚಂದ್ರಶೇಖರ


VII. ಮನೆಗಳಲ್ಲಿರುವ ಭಿತ್ತಿ ಚಿತ್ರಕಲೆ
1) ಗುಳೇದಗುಡ್ಡದ ಹೊಸಮನಿಗೌಡರ ಮನೆ
2) ರಾಯಚೂರಿನ ಖಾಜಿನಗೌಡರ ಮನೆ
3) ನರಗುಂದದ ಗುಂಡಪ್ಪ ಹಸಬಿಯವರ ಮನೆ
4) ಸಂಕೇಶ್ವರದ ವರ್ತಕರ ಮನೆ
I) ದೊಡ್ಡ ಚೌಕದಲ್ಲಿರುವ ಚಿತ್ರಗಳು
II) ದೀರ್ಘ ವೃತ್ತಾಕಾರದಲ್ಲಿನ ಚಿಕ್ಕ ಚಿತ್ರಗಳು
1) ಧಾರ್ಮಿಕ ಚಿತ್ರಗಳು
I) ನವಿಲಿನ ಮೇಲೆ ಕುಳಿತಿರುವ ಸರಸ್ವತಿ
II) ಮಹಿಷಾಸುರ ಮರ್ಧಿನಿ
III) ಮಂದಿರದಲ್ಲಿ ಆಂಜನೇಯ
IV) ರಾಕ್ಷಸನನ್ನು ಕೊಲ್ಲುತ್ತಿರುವ ಆಂಜನೇಯ
V) ವೆಂಕಟೇಶ್ವರನ ಚಿತ್ರ
VI) ಕಾಳಿಂಗಮರ್ದನ ಕೃಷ್ಣ
VII) ಕೃಷ್ಣ ಮತ್ತು ರಾಧೆ
VIII) ನಾಗದೇವತೆ
IX) ಕಾಮಧೇನು
X) ಗರುಡನ ಚಿತ್ರ
2) ಧಾರ್ಮಿಕೇತರ ಚಿತ್ರಗಳು
I) ತಾಯಿ ಮಗು
II) ಅಲಂಕಾರಿಕ ಗಿಡಗಳು
I) ಶಯನಗೃಹದ ಚಿತ್ರಗಳು
1) ಧಾರ್ಮಿಕ ಚಿತ್ರಗಳು
I) ಬೆಣ್ಣೆ ಕದಿಯುತ್ತಿರುವ ಕೃಷ್ಣ
II) ಗೋಪಿಕಾ ಸ್ತ್ರೀಯರೊಡನೆ ಕೃಷ್ಣ
III) ಬೆಣ್ಣೆಕಳ್ಳ ಕೃಷ್ಣ
IV) ಯಶೋದೆ ಕೃಷ್ಣ
V) ಕೊಳಲು ನುಡಿಸುತ್ತಿರುವ ಕೃಷ್ಣ
VI) ಗೋಪಿಕಾ ಸ್ತ್ರೀಯರ ವಸ್ತ್ರಾಪಹರಣ
VII) ಅರ್ಜುನಸುಧನ್ವರ ಯುದ್ಧ
VIII) ಗಂಧರ್ವರ ಚಿತ್ರಗಳು
IX) ಕೃಷ್ಣನ ಆಸ್ಥಾನದ ದೃಶ್ಯ
2) ಧಾರ್ಮಿಕೇತರ ಚಿತ್ರಗಳು
I) ಜಿಂಕೆಗಳೊಂದಿಗೆ ಮಹಿಳೆ
II) ಅಲಂಕಾರಿಕ ಗಿಡಗಳು
III) ಅಲಂಕಾರಿಕ ಹೂ ಕುಂಡಗಳು
IV) ಹೂಬಳ್ಳಿ ನಕ್ಷೆಗಳು
II) ಸ್ನಾನಗೃಹದ ಚಿತ್ರಗಳು
1) ಧಾರ್ಮಿಕ ಚಿತ್ರಗಳು
I) ಶೇಷಶಯನ ವಿಷ್ಣು
II) ಪ್ರಕೃತಿ ಪುರುಷ
III) ನಳಕೂಬರ ಮಣಿಗ್ರೀವರ ಶಾಪವಿಮೋಚನೆ
IV) ಬೆಣ್ಣೆಕಳ್ಳ ಕೃಷ್ಣ
V) ವಟಪತ್ರ ಶಯನ ಕೃಷ್ಣ
2) ಧಾರ್ಮಿಕೇತರ ಚಿತ್ರಗಳು
I) ಜಿಂಕೆಯನ್ನು ಮೇಯಿಸುತ್ತಿರುವ ಸ್ತ್ರೀಯರು
II) ಮಹಿಳೆಯರ ಚಿತ್ರ
III) ಸರದಾರನ ಚಿತ್ರ
IV) ಅಲಂಕಾರಿಕ ಹೂ ಕುಂಡಗಳು
V) ಅಲಂಕಾರಿಕ ಗಿಡಗಳು
I) ಮನೆಯ ವಂಶಸ್ಥರ ಚಿತ್ರಗಳು
1) ಕುದುರೆ ಸವಾರರ ಚಿತ್ರಗಳು
II) ಧಾರ್ಮಿಕ ಚಿತ್ರಗಳು
1) ಕೃಷ್ಣನು ಮಡದಿಯರೊಂದಿಗೆ ಇರುವ ಚಿತ್ರ
2) ರಾಮರಾವಣರ ಯುದ್ಧ
3) ಗಂಡಭೇರುಂಡ
4) ಆಂಜನೇಯ

ಹೊಸಮನಿಯವರು ಹೇಳುತ್ತಾರೆ. ಬಹುಶ ನರಗುಂದದ ಚಿತ್ರಗಳು ರಚನೆಯಾದ ನಂತರದ ೫-೧೦ ವರ್ಷಗಳ ಅವಧಿಯಲ್ಲಿ ಇವು ರಚನೆಯಾಗಿರಬೇಕೆಂದು ಅನಿಸುತ್ತದೆ. ಕಾರಣ ಮನೆಯು ನಿರ್ಮಾಣವಾಗಿ ೧೫೦ ವರ್ಷಗಳಿಗಿಂತ ಕಡಿಮೆಯಾಗಿಲ್ಲವೆಂದು ಸ್ಥಳೀಯರು ಮತ್ತು ಆ ಮನೆಯ ಈಗಿನ ಗೃಹಸ್ಥರೇ ಹೇಳುತ್ತಾರೆ. ಮನೆಯ ರಚನಾ ವಿಧಾನ ಶೈಲಿ ನೋಡಿದರೆ ಸುಮಾರು ೨೦೦ ವರ್ಷಗಳು ಸಂದಿರಬೇಕೆಂದು ಸಹಜವಾಗಿ ಹೇಳಬಹುದು. ಚಿತ್ರಗಳೂ ಬಹಳ ಕಾಲದಿಂದ ಇವೆ ಎಂದೂ ಹೇಳುತ್ತಾರೆ. ಮನೆಯನಿರ್ಮಾಣ ಸಂದರ್ಭದಲ್ಲೇ ಇವುಗಳನ್ನು ರಚಿಸಲಾಗಿದೆ. ಈ ಚಿತ್ರಗಳಿರುವ ಮನೆಯು ಒಂದು ಪ್ರತ್ಯೇಕವಾದ ಚಿತ್ರಶಾಲೆಯೇ ಆಗಿದ್ದಂತೆ ತೋರುತ್ತದೆ. ಹಿಂದಿನ ದಿನಗಳಲ್ಲಿ ಅಲ್ಲಿರುವ ಒಂದು ಅಲಂಕಾರಿಕ ಮಾಡ(ಗೂಡು)ದಲ್ಲಿ ಪ್ರತಿವರ್ಷ ಗಣಪತಿಯನ್ನು ಕೂಡ್ರಿಸಿದ ಸಂದರ್ಭದಲ್ಲಿ ಜನರು ಚಿತ್ರಗಳನ್ನು ನೋಡಲೆಂದೇ ತಂಡೋಪತಂಡವಾಗಿ ಬರುತ್ತಿದ್ದರೆಂದು ಅಲ್ಲಿನ ಹಿರಿಯರು ಹೇಳುತ್ತಾರೆ. ಉಳಿದ ದಿನಗಳಲ್ಲಿಯೂ ಅದನ್ನು ಒಂದು ಚಿತ್ರಪ್ರದರ್ಶನ ಶಾಲೆಯಾಗಿಯೇ ಬಿಟ್ಟಿದ್ದು ಸಾರ್ವಜನಿಕರು ಅಲ್ಲಿಗೆ ಭೇಟ್ಟಿಕೊಡುತ್ತಿದ್ದುದಾಗಿಯೂ ಹೇಳುತ್ತಾರೆ. ಚಿತ್ರಗಳಿರುವ ಮೇಲ್ಮಹಡಿಯ ಕೋಣೆಯ ಗಾತ್ರ ೧೩ x ೨೮ ಅಡಿ ಇದೆ. ಇದಕ್ಕೆ ಪೂರ್ವ ದಿಕ್ಕಿನಲ್ಲಿ ಸುಂದರವಾದ ಸಾಲಾಗಿರುವ ಕಿಟಕಿಗಳಿವೆ. ಅವುಗಳಿಂದ ಬೆಳಕು ಚಿತ್ರಗಳ ಮೇಲೆ ಬೀಳುತ್ತದೆ. ಇದೊಂದು ಪೂರ್ವಯೋಜಿತ ಕಟ್ಟಡವಾಗಿದ್ದು ಚಿತ್ರಶಾಲೆಗಾಗಿಯೇ ಕಟ್ಟಲಾಗಿದೆ ಎನಿಸುತ್ತದೆ. ಈ ಕೋಣೆಯನ್ನು ಪ್ರವೇಶಿಸಲು ಪಶ್ಚಿಮಕ್ಕೆ ಚಿಕ್ಕದಾದ ಬಾಗಿಲು ಇದೆ. ಮೊದಲು ಕೋಣೆಯ ನಾಲ್ಕೂ ಗೋಡೆಗಳಲ್ಲಿ ಚಿತ್ರಗಳಿದ್ದು ಈಗ ಕೇವಲ ಒಂದು ಕಡೆಗೆ ಅಂದರೆ ಪಶ್ಚಿಮ ಗೋಡೆಯಲ್ಲಿ ಮಾತ್ರ ಚಿತ್ರಗಳಿವೆ. ಈ ಚಿತ್ರಗಳೂ ಹೆಚ್ಚಿನ ಪ್ರಮಾಣದಲ್ಲಿ ನಾಶವಾಗಿ ಹೋಗಿದ್ದು ಕೇವಲ ಅಲ್ಲಲ್ಲಿ ೩-೪ ಚಿತ್ರಗಳು ಮಾತ್ರ ಉಳಿದುಕೊಂಡಿವೆ. ಚಿತ್ರಗಳಿಗೆ ಯಾವ ರಕ್ಷಣೆಯೂ ಇಲ್ಲ. ಇದನ್ನೊಂದು ಹಳೆಯ ವಸ್ತುಗಳನ್ನು ತುಂಬುವ ಸಂಗ್ರಹ ಕೋಣೆಯಾಗಿ ಬಳಸುತ್ತಿದ್ದಾರೆ. ಉಳಿದಿರುವ ಇಲ್ಲಿಯ ಚಿತ್ರಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು :

I. ದೊಡ್ಡ ಚೌಕದಲ್ಲಿನ ಚಿತ್ರಗಳು.

II. ದೀರ್ಘ ವೃತ್ತಾಕಾರದಲ್ಲಿನ ಚಿಕ್ಕ ಚಿತ್ರಗಳು.

***I. ದೊಡ್ಡ ಚೌಕದಲ್ಲಿನ ಚಿತ್ರಗಳು :*** ದೊಡ್ಡ ಚೌಕದಲ್ಲಿ ನಿರ್ಧಿಷ್ಟವಾಗಿ ಸ್ಥಳವಿಂಗಡನೆ ಮಾಡದೇ ಚದುರಿದಂತೆ ಚಿತ್ರಗಳನ್ನು ರಚಿಸಿದ್ದು. ಇದರಲ್ಲಿ ಧಾರ್ಮಿಕ ಚಿತ್ರಗಳು. ಸಾಮಾಜಿಕ ಚಿತ್ರಗಳು, ಹೂಬಳ್ಳಿ ನಕ್ಷೆಗಳು ಅಲ್ಲಲ್ಲಿ ರಚಿಸಿವೆ. ದೊಡ್ಡ ಚೌಕದ ಈ ಚಿತ್ರಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಮತ್ತೆ ಈ ಕೆಳಗಿನಂತೆ ವಿಂಗಡಿಸಬಹುದು.

೧. ಧಾರ್ಮಿಕ ಚಿತ್ರಗಳು

೨. ಧಾರ್ಮಿಕೇತರ ಚಿತ್ರಗಳು

*೧. ಧಾರ್ಮಿಕ ಚಿತ್ರಗಳು :* ಧಾರ್ಮಿಕ ಚಿತ್ರಗಳಲ್ಲಿ ಕೃಷ್ಣನಿಗೆ ಸಂಬಂಧಿಸಿದ ಚಿತ್ರಗಳು. ದುರ್ಗಾದೇವಿ. ಆಂಜನೇಯ. ಸರಸ್ವತಿ. ಗರುಡ ಹನುಮಂತ ಇವರ ಚಿತ್ರಗಳು ಇಲ್ಲಿದ್ದು ಅವುಗಳನ್ನು ಒಂದೊಂದಾಗಿ ವಿವರಿಸಬಹುದು.

I. ನವಿಲಿನ ಮೇಲೆ ಕುಳಿತಿರುವ ಸರಸ್ವತಿ : ಇಲ್ಲಿನ ಮೇಲ್ಭಾಗದ ಗೋಡೆಯಲ್ಲಿ ನವಿಲಿನ ಮೇಲೆ ಕುಳಿತ ಸರಸ್ವತಿಯ ಚಿತ್ರವೊಂದು ಇನ್ನೂ ಸ್ವಲ್ಪಮಟ್ಟಿಗೆ ಉಳಿದುಕೊಂಡಿದೆ. ಆದರೂ ನವಿಲಿನ ಮುಖ. ಸರಸ್ವತಿಯ ದೇಹದ ಕೆಲವು ಭಾಗಗಳಲ್ಲಿ ಬಣ್ಣ ಉದುರಿಹೋಗಿದೆ. ಈ ಚಿತ್ರದಲ್ಲಿ ಸರಸ್ವತಿಯು ಕಾಲುಗಳನ್ನು ಎಡಬಲಗಳಲ್ಲಿ

ಇಳಿಬಿಟ್ಟುಕೊಂಡು ನವಿಲಿನ ಮೇಲೆ ಕುಳಿತಿದ್ದಾಳೆ. ನಾಲ್ಕು ಕೈಗಳನ್ನು ಹೊಂದಿದ ಸರಸ್ವತಿದೇವಿಯು ವೀಣೆಯನ್ನೂ ಹಿಡಿದಿದ್ದಾಳೆ. ದಟ್ಟಕೆಂಪುವರ್ಣದ ಸೀರೆ ಉಟ್ಟು. ತೆಳುಕೆಂಪು ವರ್ಣದ ಕುಪ್ಪಸ ತೊಟ್ಟಿದ್ದಾಳೆ. ಕುಪ್ಪಸದಲ್ಲಿ ದಟ್ಟಕೆಂಪುವರ್ಣದ ಚುಕ್ಕೆಗಳಿವೆ. ಕೈಗಳಲ್ಲಿ ಹಸಿರು ಬಳೆಗಳನ್ನು ಹಣೆಯಲ್ಲಿ ದುಂಡಾದ ಕುಂಕುಮ ಚಿತ್ರಿಸಲಾಗಿದೆ. ಸಿಲಿಂಡರಾಕಾರದ ಮೇಲೆ ಚೂಪಾಗಿರುವ ವಿಜಯನಗರ ಶೈಲಿಯ ಕಿರೀಟವಿದ್ದು. ಬುಜಕೀರ್ತಿಯಿಂದ ಮೊಣಕಾಲವರೆಗೆ ಇಳಿಬಿದ್ದ ಉದ್ದನಾದ ಆಭರಣವಿದೆ.

ನವಿಲು ಸರಸ್ವತಿ ಚಿತ್ರಕ್ಕಿಂತ ೫-೬ ಪಟ್ಟು ದೊಡ್ಡದಾಗಿದೆ. ಸರಸ್ವತಿಯ ದೇಹವು ನವಿಲಿನ ಮುಖದಷ್ಟು ಮಾತ್ರವಿದೆ. ಆಕೆಯ ಕೈಕಾಲುಗಳು. ನವಿಲಿನ ಕಾಲಿನ ಉಗುರಿನಷ್ಟು ಮಾತ್ರ ದಪ್ಪವಿವೆ. ಹೀಗೆ ಎಲ್ಲ ದೃಷ್ಟಿಯಿಂದಲೂ ಬೃಹತ್ತಾದ ನವಿಲು ಸರಸ್ವತಿಯನ್ನು ಹೊತ್ತುಕೊಂಡು ಹಾರುವುದು ಇಲ್ಲಿ ಸಹಜವೆನಿಸುತ್ತದೆ. ನವಿಲಿಗೂ ಕೊರಳಲ್ಲಿ ಆಭರಣಗಳಿವೆ ಈ ಚಿತ್ರವ ಸುತ್ತಮುತ್ತ ಅಲ್ಲಲ್ಲಿ ಕೆಂಪುಹೂಗಳು ಹಸಿರು ಎಲೆಗಳನ್ನು ರಚಿಸಲಾಗಿದೆ. ಚಿತ್ರದ ಹಿನ್ನೆಲೆ ತೆಳುಹಳದಿ ವರ್ಣದ್ದಾಗಿದೆ.

II. ಮಹಿಷಾಸುರ ಮರ್ದಿನಿ ಚಿತ್ರ : ಸರಸ್ವತಿಯ ಚಿತ್ರದ ಬಲಭಾಗದಲ್ಲಿ ಮಹಿಷಾಸುರ ಮರ್ದಿನಿ ದೇವಿಯ ಚಿತ್ರ ರಚನೆಗೊಂಡಿದೆ. ಎಂಟುಕೈಗಳನ್ನು ಹೊಂದಿದ ದೇವಿಯು ಖಡ್ಗ. ಢಾಲು. ತ್ರಿಶೂಲ. ಕುಡಗೋಲು ಮುಂತಾದ ಆಯುಧಗಳನ್ನು ಕೈಗಳಲ್ಲಿ ಹಿಡಿದುಕೊಂಡಿದ್ದು ರೌದ್ರಾವತಾರದಿಂದ ಕೂಡಿದ್ದಾಳೆ. ಮಹಿಷಾಸುರನು ಎಮ್ಮೆಯ ರೂಪದಲ್ಲಿದ್ದು ದೇವಿಯು ಖಡ್ಗದಿಂದ ಎಮ್ಮೆಯ ರುಂಡ ಕತ್ತರಿಸಿದ್ದಾಳೆ. ಮಹಿಷನನ್ನು ತನ್ನ ಕಾಲುಗಳಿಂದ ಮೆಟ್ಟಿ ಆತನ ಬಾಲವನ್ನು ಕೈಯಲ್ಲಿ ಎತ್ತಿಹಿಡಿದು ವೀರನೃತ್ಯ ಮಾಡುತ್ತಿದ್ದಾಳೆ. ಎಡಗಡೆಗೆ ಇನ್ನೂ ಒಬ್ಬ ರಾಸಕ್ಷನಿದ್ದು ದೇವಿಯು ತನ್ನ ಇನ್ನೊಂದು ಕೈಯಿಂದ ಆತನ ತಲೆಯ ಜುಟ್ಟನ್ನು ಹಿಡಿದು ಅವನನ್ನೂ ಸಂಹರಿಸಲು ಮುಂದಾಗಿರುವಳು. ಈ ರಾಕ್ಷಸ ಕಂದು ವರ್ಣದಲ್ಲಿದ್ದರೆ ಮಹಿಷಾಸುರನು ಎಮ್ಮೆಯ ನೈಜವಾದ ನೀಲ ಕಪ್ಪು ವರ್ಣದಲ್ಲಿ ರಚನೆಗೊಂಡಿದ್ದಾನೆ. ಮೂಗಿನ ರಿಂಗಿನಾಕಾರದ ಮೂಗುತಿ. ಕಿರೀಟ. ಕೊರಳ ಆಭರಣಗಳು ಬಂಗಾರ ವರ್ಣದಲ್ಲಿದ್ದು ಹೆಚ್ಚಿನ ಮೆರಗು ತಂದಿವೆ. ದೇವಿಯ ಮೈ ಬಣ್ಣ ನಸುಹಳದೀಯಾಗಿದ್ದು ಕೆಂಪುವರ್ಣದ ಸೀರೆಯನ್ನು ಚಿತ್ರಿಸಿದೆ. ಉಳಿದಂತೆ ಎಲ್ಲ ಕಡೆಯ ವರ್ಣ ಉದುರಿಹೋಗಿದೆ. ದೇವಿಯ ಬಲಭಾಗದಲ್ಲಿ ಕೆಂಪು ಪಂಚೆ ಕೆಂಪು ಶಾಲು ಧರಿಸಿದ ಜುಟ್ಟು ಬಿಟ್ಟ ವ್ಯಕ್ತಿಯೊಬ್ಬ ಕೈ ಮುಗಿದು ಭಕ್ತಿಯಿಂದ ನಮಿಸುತ್ತಿದ್ದಾನೆ. ತಲೆಬಾಗಿ ಕೈ ಜೋಡಿಸಿ ನಮಿಸುತ್ತಿರುವ ಈತನ ಭಂಗಿ ಭಕ್ತಿ, ವಿನಮ್ರತೆಯನ್ನು ಪ್ರತಿಬಿಂಬಿಸುತ್ತದೆ. ಮಹಿಷಾಸುರ ಮರ್ದಿನಿಯ ಚಿತ್ರಗಳು ನರಗುಂದ. ಅಮ್ಮಿನಭಾವಿ, ನಿಪ್ಪಾಣಿಗಳಲ್ಲೂ ರಚಿಸಿದ್ದು ಕಾಣಬಹುದು.

III. ಮಂದಿರದಲ್ಲಿರುವ ಆಂಜನೇಯನ ಚಿತ್ರ : ಗೋಡೆಯ ಮಧ್ಯಭಾಗದಲ್ಲಿ ಸುಂದರವಾಗಿರುವ ಗುಡಿಯಂತೆ ಕಾಣುವ ಒಂದು ಅಲಂಕಾರಿಕ ಮಂಟಪದಲ್ಲಿ ಹನುಮಂತನ ಚಿತ್ರವನ್ನು ಬರೆಯಲಾಗಿದೆ. ಗುಡಿಯಂತಿರುವ ಮಂಟಪವು ಅತ್ಯಂತ ಸುಂದರವಾಗಿದ್ದು ಸುಳುವು ನಕ್ಷೆಗಳಿಂದ ಕೂಡಿದೆ. ಈ ಮಂಟಪದ ಮಧ್ಯದಲ್ಲಿ ಎದುರಿಗೆ ಮುಖಮಾಡಿನಿಂತ ಹನುಮಂತನನ್ನು ಕೆಂಪು ಹಿನ್ನೆಲೆಯಲ್ಲಿ ಚಿತ್ರಸಲಾಗಿದೆ. ಎದುರು ಮುಖದ ಹನುಮಂತನು ನಾಲಿಗೆಯನ್ನು ಹೊರಚಾಚಿದ್ದು ಗಂಭಿರ ಮುಖ ಹೊಂದಿದ್ದಾನೆ. ಆತನ ಕಿರೀಟವು ಟೊಪ್ಪಿಗೆಯನ್ನು ಹೋಲುತ್ತದೆ. ನೀಲಿ ಮೈಬಣ್ಣದ ಹನುಮಂತನು ಕೇಸರಿ ವರ್ಣದ ಶಾಲನ್ನು ಕೈಮೇಲೆ ಇಳಿಬಿಟ್ಟಂತೆ ಚಿತ್ರಿಸಿದೆ. ಕೊರಳಲ್ಲಿ ಧರಿಸಿದ ಆಭರಣವೊಂದು

ಪಾದದವರೆಗೂ ಇಳಿಬಿದ್ದಿದ್ದು. ಎರಡೂ ಕಾಲುಗಳನ್ನು ಸರಿಯಾಗಿ ಜೋಡಿಸಿ ನಿಂತ ಆಂಜನೇಯನ ಬಾಲವು ಬಲಗಡೆಯಿಂದ ಮೇಲಕ್ಕೆ ಹೋಗಿ ತಲೆಯಮೇಲೆ ಹಾಯ್ದು ಎಡಗಡೆ ಇಳಿಬಿದ್ದಿದೆ. ಹಿನ್ನೆಲೆಯ ಕೆಂಪುವರ್ಣದಲ್ಲಿ ಹಸಿರು ವರ್ಣದ ಕಮಾನು ರಚಿಸಲಾಗಿದೆ. ಇಂತಹುದೇ ಮಂದಿರ (ಮಂಟಪ)ದಲ್ಲಿರುವ ಆಂಜನೇಯನ ಚಿತ್ರ ನರಗುಂದ ಅರಮನೆಯಲ್ಲಿ ಯುದ್ಧದ ಚಿತ್ರದಲ್ಲೂ ಕಂಡು ಬಂದಿದೆ. ಆದರೆ ಎರಡೂ ಚಿತ್ರಗಳು ಶೈಲಿಯಲ್ಲಿ ಭಿನ್ನವಾಗಿವೆ. ನರಗುಂದದ ಆಂಜನೆಯ ಎಡಗಡೆಗೆ ಮುಖಮಾಡಿದ್ದರೆ ಇವನು ಎದುರು ಮುಖದ ಆಂಜನೇಯನಾಗಿದ್ದಾನೆ. ನರಗುಂದದ ಮಂಟಪ ಚಿಕ್ಕದಾಗಿದ್ದರೆ ಇದು ದೊಡ್ಡದಲ್ಲದೆ ಹೆಚ್ಚಿನ ಸೌಂದರ್ಯದಿಂದ ಕೂಡಿದೆ. ಆಂಜನೇಯನ ಮಂಟಪದ ಅಕ್ಕಪಕ್ಕದಲ್ಲಿ ದೊಡ್ಡ ದೊಡ್ಡ ಕೆಂಪು ಹೂಗಳನ್ನು ಎಲೆ ಬಳ್ಳಿಗಳನ್ನು ರಚಿಸಲಾಗಿದೆ.

IV. ಆಂಜನೇಯನು ರಾಕ್ಷಸನನ್ನು ಸಂಹರಿಸುತ್ತಿರುವ ಚಿತ್ರ : ಮೇಲ್ಭಾಗದ ಗೋಡೆಯಲ್ಲಿ ಆಂಜನೇಯನು ರಾಕ್ಷಸನನ್ನು ಕೊಲ್ಲುತ್ತಿರುವ ದೃಶ್ಯವು ಆಕರ್ಷಕವಾಗಿದೆ. ಹನುಮಂತನು ತನ್ನ ಎಡಗೈಯಲ್ಲಿ ರಾಕ್ಷಸನ ತಲೆಯ ಜುಟ್ಟನ್ನು ಹಿಡಿದು ಮೇಲಕ್ಕೆ ಎತ್ತಿ ಕೆಳಕ್ಕೆ ಕುಕ್ಕಿದ್ದಾನೆ. ಕೆಳಕ್ಕೆ ಬಿದ್ದ ರಾಕ್ಷಸನ ಎದೆಗೆ ತನ್ನ ಬಲಗಾಲಿನಿಂದ ಪ್ರಹಾರ ಮಾಡುತ್ತಿದ್ದಾನೆ. ಹನುಮಂತನ ಕೈಯಲ್ಲಿ ಯಾವುದೇ ಆಯುಧಗಳು ಇರದೇ ಬರೀ ಬಲಗೈಯ ಮುಷ್ಟಿ ಆಘಾತಗಳಿಂದಲೇ ರಾಕ್ಷಸನನ್ನು ನೆಲಕ್ಕೊರಗುವಂತೆ ಮಾಡಿದ್ದಾನೆ. ರಾಕ್ಷಸನು ಕೈಗಳಲ್ಲಿ ಖಡ್ಗ ಢಾಲುಗಳನ್ನು ಹಿಡಿದುಕೊಂಡಿದ್ದರೂ ಪ್ರಯೋಜನವಾಗಿಲ್ಲ. ಆಂಜನೇಯನ ಪ್ರಹಾರದಿಂದ ಮುದುಡಿಕೊಂಡು ಬಿದ್ದಿದ್ದಾನೆ. ರಾಕ್ಷಸನ ಕಣ್ಣುಗಳು ಕೋಲಾಕಾರವಾಗಿದ್ದು ಕೆಂಡಮುಂಡೆಗಳಂತೆ ಹೊಳೆಯುತ್ತಿವೆ. ಕಂದು ಮೈಬಣ್ಣ ಹೊಂದಿದ ರಾಕ್ಷಸನು ಕೋರೆ ಹಲ್ಲುಗಳನ್ನು ಹೊಂದಿ ಭೀಕರವಾಗಿ ಕಾಣುತ್ತಿದ್ದಾನೆ. ಆಂಜನೇಯನು ತೆಳು ನೀಲವರ್ಣದವನಾಗಿದ್ದು ಕೆಂಪು ಚಡ್ಡಿ ಚಿತ್ರಿಸಲಾಗಿದೆ. ಆತನ ಮುಖದ ಉಬ್ಬಿದ ಮುಂಭಾಗವೂ ಕೆಂಪಾಗಿದೆ. ಈತನಿಗೂ ಕೂಡಾ ಭುಜಕೀರ್ತಿಯಿಂದ ಇಳಿಬಿದ್ದ ಉದ್ದವಾದ ಆಭರಣ ಚಿತ್ರಿಸಿದೆ. ಆಂಜನೇಯನು ಪ್ರಹಾರ ಮಾಡುತ್ತಿರುವ ಭಂಗಿಯು ಆಕರ್ಷಕವಾಗಿದ್ದು ಚಲನಶೀಲವಾಗಿದೆ. ಹೊರರೇಖೆಗಳು ಅತ್ಯಂತ ಶಕ್ತಿಯುತವಾಗಿದ್ದು ಕೆಂಪು ಮಿಶ್ರಿತ ಕಪ್ಪು ವರ್ಣದಲ್ಲಿವೆ. ಚಿತ್ರದ ಸುತ್ತಲೂ ಅಲ್ಲಲ್ಲಿ ಕೆಂಪುವರ್ಣದ ದೊಡ್ಡ ಹೂಗಳಿವೆ. ಆಂಜನೇಯನ ಕಿರೀಟವು ಭಿನ್ನವಾಗಿದ್ದು ವಿಜಯನಗರ ಶೈಲಿಯ ಕೊಳವೆಯಾಕಾರ ಹೋಲುವದಿಲ್ಲ.

V. ವೆಂಕಟೇಶ್ವರನ ಚಿತ್ರ : ಇಲ್ಲಿರುವ ಮತ್ತೊಂದು ಗಮನಾರ್ಹ ಚಿತ್ರವೆಂದರೆ ವೆಂಕಟೇಶ್ವರನ ಚಿತ್ರವಾಗಿದೆ. ಒಂದು ಅಲಂಕಾರ ಯುಕ್ತವಾಗಿರುವ ಕಮಾನಿನಲ್ಲಿ ಈ ಚಿತ್ರ ರಚಿಸಿದ್ದಾರೆ. ಕಮಾನನ್ನು ಕಡು ಹಸಿರುವರ್ಣದಿಂದ ರಚಿಸಿದ್ದು ಅದರ ಮೇಲೆ ಹೂಬಳ್ಳಿಯನ್ನು ಹಳದಿ ಕೆಂಪುವರ್ಣದಿಂದ ರಚಿಸಲಾಗಿದೆ. ವೆಂಕಟೇಶ್ವರನು ನೀಲಿವರ್ಣದಲ್ಲಿದ್ದು ಕೆಂಪುವರ್ಣದ ಶಾಲನ್ನು ಹೊದೆದಿದ್ದಾನೆ. ಬಹುಶ ಕಂದು ವರ್ಣದ ಪಂಚೆಯನ್ನು ಉಟ್ಟಿದ್ದು ಈಗವರ್ಣವೆಲ್ಲ ಕಿತ್ತು ಹೋಗಿದೆ. ಮೈ ತುಂಬ ನಾಮ ಹಚ್ಚಿಕೊಂಡಿದ್ದು ಕೊರಳ ತುಂಬ ಆಭರಣಗಳಿವೆ. ನಾಲ್ಕು ಕೈಗಳಲ್ಲಿ ಹಿಂದಿನೆರಡು ಕೈಗಳಲ್ಲಿ ಶಂಖ ಚಕ್ರಗಳನ್ನು ಚಿತ್ರಿಸಿದೆ. ಕಿರೀಟವು ವಿಶೇಷವಾಗಿದ್ದು ವಿಜಯನಗರ ಶೈಲಿಯ ಲೇಪಾಕ್ಷಿ ಚಿತ್ರಗಳಂತೆ ಉದ್ದನಾಗಿ ಕೊಳವೆಯಂತೆ ಕಾಣುವುದು. ಇಂತಹ ಕಿರೀಟ ಉತ್ತರ ಕರ್ನಾಟಕದ ಬೇರಾವ ದೇವತಾ ಚಿತ್ರಗಳಲ್ಲೂ ಕಂಡುಬರುವುದಿಲ್ಲ. ಭುಜಕ್ಕೆ ಭುಜಕೀರ್ತಿ ಧರಿಸಿದ್ದು ಅವು ಸಿಂಹ ಮುಖಗಳನ್ನು ಹೊಂದಿವೆ. ಕಿರೀಟ ಮೈ ಮೇಲೆ ಧರಿಸಿದ ಆಭರಣಗಳೆಲ್ಲ ಬಂಗಾರ ವರ್ಣದಲ್ಲಿದ್ದು ಅವುಗಳಲ್ಲಿ ಕೆಂಪು, ಹಸಿರು, ನೀಲಿ, ಮುಂತಾದ ಮುತ್ತು ರತ್ನ

ಹವಳ ಜೋಡಿಸಿದಂತೆ ಕಾಣುವುದು ವೆಂಕಟೇಶ್ವರನಿಗೆ ಮೀಸೆಯನ್ನು ಚಿತ್ರಿಸಲಾಗಿದೆ. ಆತ ಒಂದು ಪೀಠದ ಮೇಲೆ ನಿಂತಿದ್ದು ಆತನ ಎಡಬಲಗಳಲ್ಲಿ ಇಬ್ಬರು ಸ್ತ್ರೀಯರು ಭಕ್ತಿಯಿಂದ ಕೈಮುಗಿದು ನಿಂತಿದ್ದಾರೆ. ಇಬ್ಬರಿಗೂ ಕೆಂಪು ಕುಪ್ಪಸ ಚಿತ್ರಿಸಿದೆ. ಉಳಿದಂತೆ ಎಲ್ಲ ಭಾಗದ ವರ್ಣ ಕಿತ್ತುಹೋಗಿದೆ. ಸ್ವಲ್ಪ ಇದನ್ನೇ ಹೋಲುವ ವೆಂಕಟೇಶ್ವರನ ಚಿತ್ರ ನರಗುಂದ ಅರಮನೆಯಲ್ಲಿದ್ದರೂ ಇದಕ್ಕಿಂತ ತುಂಬಾ ಭಿನ್ನವಾಗಿದೆ. ಇಲ್ಲಿಯ ವೆಂಕಟೇಶ್ವರನ ಚಿತ್ರದ ಹಿನ್ನಲೆಯು ನಸು ಹಳದೀ ವರ್ಣದ್ದಾಗಿದೆ.

VI. ಕಾಳಿಂಗಮರ್ದನ ಕೃಷ್ಣನ ಚಿತ್ರ : ಇಲ್ಲಿನ ಮತ್ತೊಂದು ಮಹತ್ವದ ಚಿತ್ರ ಕಾಳಿಂಗಮರ್ದನ ಕೃಷ್ಣನ ಚಿತ್ರವಾಗಿದೆ. ಈ ಚಿತ್ರವು ಅಲಂಕೃತ ಕಮಾನೊಂದರೊಳಗೆ ತೆಳುಹಳದೀ ವರ್ಣದ ಹಿನ್ನಲೆಯಲ್ಲಿ ರಚಿಸಿದೆ. ಚಿತ್ರಕ್ಕಾಗಿ ರಚಿಸಿರುವ ಕಮಾನು ಹಸಿರು ವರ್ಣದಲ್ಲಿದ್ದು ಅದರ ಮೇಲೆ ಹಳದೀ ಕೆಂಪುವರ್ಣದಿಂದ ಹೂಬಳ್ಳಿ ನಕ್ಷೆ ರಚಿಸಲಾಗಿದೆ. ಚಿತ್ರದಲ್ಲಿ ಎರಡು ಕೈಗಳನ್ನು ಹೊಂದಿದ ಕೃಷ್ಣನು ಒಂದು ಕೈಯಲ್ಲಿ ಚಕ್ರ ಹಿಡಿದಿದ್ದರೆ ಇನ್ನೊಂದು ಕೈಯಲ್ಲಿ ಸರ್ಪದ ಬಾಲಹಿಡಿದುಕೊಂಡು ಅದರ ಮೇಲೆ ಕುಣಿಯುತ್ತಲಿದ್ದಾನೆ. ಕೃಷ್ಣನ ಆಘಾತಗಳಿಂದ ಸರ್ಪವು ರಕ್ತಕಾರುತ್ತಲಿದೆ. ಕಾಳಿಂಗ ಸರ್ಪವು ನಸುಗಪ್ಪು ವರ್ಣದಲ್ಲಿ ಚಿತ್ರಿಸಿದ್ದು ಮೈತುಂಬ ಚುಕ್ಕೆಗಳನ್ನು ಹೊಂದಿದೆ. ಒಂದೇ ಹೆಡೆಯನ್ನು ಹೊಂದಿ ದಪ್ಪನಾಗಿರುವದು. ಕೃಷ್ಣನು ಕಿರೀಟ ಧರಿಸಿದ್ದು ಅದು ಅತ್ಯಂತ ಸುಂದರವಾಗಿದೆ. ಇಲ್ಲಿಯೂ ಕಿರೀಟ ಉದ್ದನಾದ ಕೊಳವೆಯ ಆಕಾರದಲ್ಲಿದ್ದು ಮೇಲೆ ಹಾಗೂ ಅಕ್ಕಪಕ್ಕದಲ್ಲಿ ಹೆಚ್ಚಿನ ಅಲಂಕಾರಿಕ ಭಾಗಗಳನ್ನು ಹೊಂದಿದೆ. ಇಲ್ಲಿರುವ ವೆಂಕಟೇಶ್ವರನ ಚಿತ್ರದ ಕಿರೀಟಕ್ಕಿಂತಲೂ ಇದು ಹೆಚ್ಚು ಸುಂದರವಾಗಿದೆ. ಭುಜಕ್ಕೆ ಭುಜ ಕೀರ್ತಿಗಳನ್ನು ಧರಿಸಿದ್ದು, ಭುಜದಿಂದಲೇ ಮೊಣಕಾಲು ಕೆಳಗಿನವರೆಗೂ ಆಭರಣವೊಂದು ಇಳಿಬಿದ್ದಿದೆ. ಇದಲ್ಲದೇ ಕೊರಳಲ್ಲಿ ಕೈಕಾಲುಗಳಲ್ಲಿ ಬೇರೆ ಬೇರೆ ಆಭರಣಗಳಿವೆ. ಎಲ್ಲವೂ ಬಂಗಾರ ವರ್ಣದಲ್ಲಿವೆ. ಕೃಷ್ಣನ ಮುಖವು ಗುಂಡಾಗಿದ್ದು ಅಗಲವಾದ ಹೊಳೆಯುವ ಕಣ್ಣುಗಳು ದಪ್ಪನಾದ ಮೀಸೆ, ಹಣೆಯಲ್ಲಿ ನಾಮ, ಬಿಲ್ಲಿನಾಕಾರದ ಹುಬ್ಬುಗಳು ಮುಖಕ್ಕೆ ಹೆಚ್ಚಿನ ಕಳೆಯನ್ನು ತಂದಿವೆ. ಕೃಷ್ಣನ ಮೈ ಬಣ್ಣವು ಕೆಂಪು, ಹಳದಿ ಮಿಶ್ರಿತ ಗೌರವರ್ಣದಲ್ಲಿದೆ. ಆತನ ಪಂಚೆಯು ಅಚ್ಚಕೆಂಪುಬಣ್ಣದಲ್ಲಿ ಚಿತ್ರಿಸಿದೆ. ಕುತ್ತಿಗೆ ಮತ್ತು ದೇಹವನ್ನು ಎಡಕ್ಕೆ ಬಾಗಿಸಿ, ಎಡಗಾಲನ್ನು ಮುಂದೆ ಚಾಚಿ, ಬಲಗಾಲು ಹಿಂದಿಕ್ಕಿ ಎಡಗೈಯಲ್ಲಿ ಹಾವಿನ ಬಾಲ ಹಿಡಿದು ಅದರ ಮೇಲೆ ನರ್ತಿಸುತ್ತಿರುವ ಆತನ ರೂಪ ಆಕರ್ಷಕವಾಗಿದೆ.

ಈ ಚಿತ್ರದ ಹೊರರೇಖೆಗಳು ಕಂದುಮಿಶ್ರಿತ ಕಪ್ಪು ವರ್ಣದಲ್ಲಿ ಎಳೆಯಲಾಗಿದ್ದು, ಬಹಳ ಶಕ್ತಿಯುತವಾಗಿವೆ. ಚಿತ್ರದ ಪ್ರತಿಯೊಂದು ಭಾಗಕ್ಕೂ ಹೊರರೇಖೆ ಎಳೆಯಲಾಗಿದ್ದು, ಎಲ್ಲಿಯೂ, ಯಾವ ಭಾಗದಲ್ಲಿಯೂ ಹೊರರೇಖೆಗಳು ಶಕ್ತಿ, ವೇಗ, ಕಳೆದುಕೊಂಡಿಲ್ಲ. ರೇಖಾವಿನ್ಯಾಸದ ದೃಷ್ಟಿಯಿಂದ ಇದೊಂದು ಶ್ರೇಷ್ಠವಾದ ಕೃತಿಯಾಗಿದೆ ಎನ್ನಬಹುದು. ಚಿತ್ರದ ಮೇಲೆ ಕೆಳಗೆ ಅಲ್ಲಲ್ಲಿ ದೊಡ್ಡ ದೊಡ್ಡ ಕೆಂಪು ಹೂಗಳನ್ನು ಅದರ ಜೊತೆ ಎಲೆಗಳನ್ನೂ ಚಿತ್ರಿಸಿ ಕೆಂಪು ಬಣ್ಣದ ಚೌಕಟ್ಟು ರಚಿಸಲಾಗಿದ್ದು ಎಡ ಬಲಗಳಲ್ಲಿ ಮಾತ್ರ ಅದರ ಮೇಲೆ ಹೂ ಬಳ್ಳಿಯ ನಕ್ಷೆ ರಚಿಸಿದ್ದಾರೆ. ಈ ಬಳ್ಳಿಯ ಹೂಗಳು ನಾಲ್ಕು ಎಸಳನ್ನು ಹೊಂದಿದ್ದು ಕೆಂಪುವರ್ಣದಲ್ಲಿವೆ. ಈ ಕಾಳಿಂಗ ಮರ್ದನ ಚಿತ್ರದ ವಿಶೇಷವೆಂದರೆ ಹೆಚ್ಚಾಗಿ ಎಲ್ಲ ಕಡೆಗೂ ಕಾಳಿಂಗ ಮರ್ದನ ಕೃಷ್ಣನನ್ನು ಬಾಲಕನನ್ನಾಗಿ ಮತ್ತು ನೀಲವರ್ಣದವನಾಗಿ ಚಿತ್ರಿಸಿದರೆ, ಇಲ್ಲಿ ಮಧ್ಯವಯಸ್ಕನನ್ನಾಗಿ, ಗೌರವರ್ಣದವನನ್ನಾಗಿ, ಚಿತ್ರಿಸಲಾಗಿದೆ. ಕಿರೀಟಧರಿಸಿ, ಮೀಸೆ ಬಿಟ್ಟಿರುವ ವ್ಯಕ್ತಿಯನ್ನಾಗಿಯೂ ಇಲ್ಲಿ ಆತನನ್ನ ನೋಡಬಹುದು.

VII. ಕೃಷ್ಣ ಮತ್ತು ರಾಧೆಯ ಚಿತ್ರ : ಕೃಷ್ಣ ಜೀವನಕ್ಕೆ ಸಂಬಂಧಿಸಿದ ಇಲ್ಲಿನ ಚಿತ್ರಗಳಲ್ಲಿ ಕೃಷ್ಣ ರಾಧೆಯರ ಈ ಚಿತ್ರವು ಗಮನಾರ್ಹವಾಗಿದೆ. ಅಲಂಕಾರಿಕ ಕಮಾನಿನಲ್ಲಿರುವ ಈ ಚಿತ್ರದಲ್ಲಿ ಕೃಷ್ಣನು ರಾಧೆಯನ್ನು ಅಪ್ಪಿಕೊಂಡು ನಿಂತಿದ್ದಾನೆ. ಚತುರ್ಭುಜಧಾರಿಯಾದ ಕೃಷ್ಣನ ಹಿಂದಿನ ಎರಡು ಕೈಗಳಲ್ಲಿ ಶಂಖ ಚಕ್ರಗಳನ್ನು ಚಿತ್ರಿಸಿದ್ದು ಮುಂದಿನ ಕೈಗಳಿಂದ ರಾಧೆಯನ್ನು ಬಳಸಿ ಸಂತೈಸುತ್ತಿರುವನು. ಕಪ್ಪು ನೀಲವರ್ಣದ ಕೃಷ್ಣನು ಪಂಚೆ ಉಟ್ಟಿದ್ದು ಶಾಲನ್ನು ಕೈಗಳಲ್ಲಿ ಇಳಿಬಿಟ್ಟಿದ್ದಾನೆ. ಕೊರಳಲ್ಲಿ, ಆಭರಣ ಧರಿಸಿ ಮೈತುಂಬ ನಾಮ ಹಚ್ಚಲಾಗಿದೆ. ಭುಜಕೀರ್ತಿಯಿಂದ ಮೊಣಕಾಲಿನ ಕೆಳಗಿನವರೆಗೆ ಇಳಿದಿರುವ ಆಭರಣವೊಂದು ಈತನಿಗೆ ಚಿತ್ರಿಸಿದ್ದು. ಅದು ಈ ಚಿತ್ರಗಳ ವೈಶಿಷ್ಟ್ಯವೆನ್ನಬಹುದು. ಇಲ್ಲಿನ ಎಲ್ಲ ದೇವತಾ ಚಿತ್ರಗಳಲ್ಲೂ ಈ ತರಹದ ಆಭರಣ ಕಂಡುಬರುವುದು. ಕೃಷ್ಣನು ತನ್ನ ಬಲಗಾಲಿನಿಂದ ರಾಧೆಯನ್ನು ಬಳಸಿದ ರೀತಿ ಅವಾಸ್ತವ ಎನಿಸುತ್ತದೆ. ಇದನ್ನು ಸಾಂಕೇತಿಕವಾಗಿ ನೋಡಬಹುದಷ್ಟೇ. ರಾಧೆಯು ಗೌರವರ್ಣದವಳಾಗಿದ್ದು ಕೆಂಪು ವರ್ಣದ ಸೀರೆಯನ್ನು ಉಟ್ಟುಕೊಂಡಿದ್ದಾಳೆ. ಅದರಲ್ಲಿ ಚಿಕ್ಕ ಚಿಕ್ಕ ಮೂರು ಎಸಳಿನ ಹೂವಿನ ನಕ್ಷೆಗಳಿವೆ. ತಲೆಗೂದಲನ್ನು ಮೇಲೆತ್ತಿ ತುರುಬು ಕಟ್ಟಿರುವಳು. ಕಿವಿಯಲ್ಲಿ ಅವು ಪೂರ್ತಿ ಮುಚ್ಚುವಂತೆ ಆಭರಣ ಧರಿಸಿದ್ದಾಳೆ. ತನ್ನ ಎಡಗೈಯಿಂದ ಕೃಷ್ಣನನ್ನು ಬಳಸಿಹಿಡಿದುಕೊಂಡಿದ್ದು ಒಂದು ಹೂವಿನ ಮೇಲೆ ನಿಂತಿದ್ದಾಳೆ. ಚಿತ್ರದ ಸುತ್ತಲೂ ಕೆಂಪು ಗುಲಾಬಿ ಹೂಗಳನ್ನು ಅಲ್ಲಲ್ಲಿ ರಚಿಸಲಾಗಿದೆ. ಕೃಷ್ಣನ ಕಿರೀಟ ಮತ್ತೆ ವಿಜಯನಗರ ಶೈಲಿಯ ಕೊಳವೆಯಾಕಾರ ಹೋಲುವುದು ಗಮನಾರ್ಹ

VIII. ನಾಗದೇವತೆಯ ಚಿತ್ರ : ಇಲ್ಲಿರುವ ತಾಯಿಮಗವಿನ ಚಿತ್ರದ ಬಲಗಡೆಗೆ ಮೂಲೆಯಲ್ಲಿ ನಾಗದೇವನ ಚಿತ್ರವಿದೆ. ಇಲ್ಲಿ ನಾಗದೇವನು ಗೌರವರ್ಣದವನಾಗಿದ್ದು ಕೆಂಪು ಪಂಚೆ ಧರಿಸಿ, ಹಸಿರು ಶಾಲು ಹೊದ್ದುಕೊಂಡಿದ್ದಾನೆ. ಕಿರೀಟಧಾರಿಯಾದ ನಾಗನು ಕೊರಳಲ್ಲಿ ಆಭರಣ ಧರಿಸಿದ್ದು ಇಲ್ಲಿಯೂ ಭುಜದಿಂದ ಇಳಿದ ಆಭರಣ ಚಿತ್ರಿಸಿದೆ. ಆಕರ್ಷಕವಾದ ಕಣ್ಣುಗಳು ಬಿಲ್ಲಿನಾಕಾರ ಹುಬ್ಬು, ಕುಡಿಮೀಸೆ ಮುಖದ ಅಂದವನ್ನು ಹೆಚ್ಚಿಸಿವೆ. ಈ ಚಿತ್ರವು ಅತ್ಯಂತ ಉತ್ತಮವಾದ ರೇಖಾ ವಿನ್ಯಾಸ ಹೊಂದಿದ್ದು ಶಕ್ತಿಯುತವಾದ ಹೊರರೇಖೆಗಳಿವೆ. ಆದರೂ ಮುಖದಿಂದ ಪಾದದಕಡೆಗೆ ಕೆಳಗೆ ಬಂದಂತೆ ರೇಖಾವಿನ್ಯಾಸದ ಬಿಗುವು ಸಡಿಲಗೊಂಡಂತೆ ಅನಿಸುತ್ತದೆ. ಬಹುಶ ಮುಖವನ್ನು ಸೇರಿಸಿ ಸೊಂಟದ ಮೇಲ್ಭಾಗದ ಹೊರರೇಖೆಯನ್ನು ನುರಿತ ಕಲಾವಿದರು ರಚಿಸಿದ್ದಾರೆ. ಸೊಂಟದ ಕೆಳಭಾಗದ ಪಾದದವರೆಗಿನ ಚಿತ್ರದ ಹೊರರೇಖೆಯನ್ನು ಕಲಿಯುತ್ತಿರುವ ವಿದ್ಯಾರ್ಥಿಗಳು ರಚಿಸಿದಂತೆ ಇದೆ. ಅದಕ್ಕೆ ನಿದರ್ಶನವೆಂಬಂತೆ ಮೇಲ್ಭಾಗದ ರೇಖೆಗಳು ಶಕ್ತಿಯುತವಾಗಿವೆಯಲ್ಲದೇ ಕೈಗಳ ಪ್ರಮಾಣ, ಅವುಗಳಲ್ಲಿಯ ಬೆರಳು ಸೂಕ್ತವಿನ್ಯಾಸದಲ್ಲಿವೆ. ಆದರೆ ಕಾಲುಗಳ ಪ್ರಮಾಣ ವ್ಯತ್ಯಾಸಗೊಂಡಿದ್ದು. ಪಾದಗಳೂ ಅವುಗಳ ಬೆರಳುಗಳೂ ಸೂಕ್ತವಾಗಿ ರಚನೆಯಾಗಿಲ್ಲ. ಎಡಪಾದ ಯಾವುದು ಬಲಪಾದ ಯಾವುದು ಎಂಬ ಕಲ್ಪನೆಯೂ ಅಲಿಲ್ಲ. ಎರಡೂ ಪಾದಗಳು ಒಂದೇ ರೀತಿಯಾಗಿವೆ. ಹಾಗೇ ಕಾಲಿನ ಹೆಬ್ಬೆರಳು ಎರಡೂ ಬಲಗಾಲಲ್ಲಿ ಇರುವಂತೆಯೇ ಇವೆ. ಅಲ್ಲದೇ ಕಾಲಿನ ಹೊರ ರೇಖೆಗಳು ಸತ್ವಯುಕ್ತವಾಗಿರದೇ ಪೇಲವವಾಗಿವೆ.

**IX. ಕಾಮಧೇನುವಿನ ಚಿತ್ರ :** ಗೋಡೆಯ ಮೇಲ್ಭಾಗದಲ್ಲಿ ಆಂಜನೇಯನ ಮಂಟಪದ ಎಡಭಾಗದಲ್ಲಿ ಕಾಮಧೇನುವಿನ ಚಿತ್ರವಿದೆ. ಕಾಮಧೇನುವು ಸ್ತ್ರೀಮುಖಿ. ಆಕಳ ದೇಹವನ್ನು ಹೊಂದಿದೆ. ಸ್ತ್ರೀಮುಖವು ಕಿರೀಟ ಧರಿಸಿದ್ದು ಆಕಳಿನ ಹಾಗೆ ಕೋಡುಗಳನ್ನೂ ಸ್ತ್ರೀಯ ಹಾಗೆ ಜಡೆಯನ್ನೂ ಹೊಂದಿದೆ. ಈ ಕಾಮಧೇನುವಿಗೆ ಆಕಳಿನಂತಹ ಎರಡು

ಬಾಲಗಳಲ್ಲದೇ. ನವಿಲಿನ ಹಿಂಭಾಗದಂತೆ ಇನ್ನೊಂದು ಬಾಲವೂ ಇದೆ. ಇದು ಹಸಿರು ವರ್ಣದಲ್ಲಿದ್ದು ಅದರಲ್ಲಿ ನವಿಲಿನ ಕಣ್ಣುಗಳಂತಹ ನಕ್ಷೆಗಳಿವೆ. ಕಾಮಧೇನು ಹಸಿರು ರೆಕ್ಕೆಯನ್ನು ಹೊಂದಿದ್ದು ಕೆಂಪು ವಸ್ತ್ರವನ್ನು ಮೈಮೇಲೆ ಹಾಕಲಾಗಿದೆ. ಮುಂಗಾಲು ಎತ್ತಿ ಓಡುತ್ತಿರುವಂತೆ ರಚಿಸಲಾಗಿದ್ದು. ಕೆಳಭಾಗದಲ್ಲಿ ಅದರ ಕರು ಮೊಲೆ ಕುಡಿಯುತ್ತಿದೆ. ಈ ಕರುವಿನ ರೂಪವು ಸಾಮಾನ್ಯ ಆಕಳ ಕರುವಿನ ರೂಪದಲ್ಲಿದೆ. ಕಾಮಧೇನು ಮತ್ತು ಅದರ ಕರು ಎರಡೂ ಕೆಂಪು ಮಿಶ್ರಿತ ಹಳದಿ ವರ್ಣದಲ್ಲಿವೆ. ಈ ಚಿತ್ರದಲ್ಲಿಯೂ ಹೊರರೇಖೆಗಳು ಶಕ್ತಿಶಾಲಿಯಾಗಿ ಜೀವಂತಿಕೆಯಿಂದ ಕೂಡಿವೆ. ಕಾಮಧೇನುವಿನ ಚಿತ್ರ ಅಮ್ಮಿನಭಾವಿಯಲ್ಲೂ ಕಂಡುಬರುವುದು.

X. ಗರುಡನ ಚಿತ್ರ : ಮೇಲಿನ ಗೋಡೆಯ ಮೂಲೆಯಲ್ಲಿ ಬೃಹತ್ತಾದ ಗರುಡನ ಚಿತ್ರ ಒಂದಿದೆ. ಇದು ಸಂಪೂರ್ಣ ನಾಶವಾಗಿದ್ದು ಅಲ್ಲಲ್ಲಿ ಬಣ್ಣದ ಉಳಿಕೆಗಳು. ಒಂದು ಕಾಲು. ಮುಖದ ಸ್ವಲ್ಪ ಭಾಗ ಮಾತ್ರ ಉಳಿದುಕೊಂಡಿವೆ. ಬಣ್ಣದ ಉಳಿಕೆಯ ಆಧಾರದಿಂದ ಇದನ್ನು ಹೀಗೆ ವಿವರಿಸಬಹುದು. ಎರಡೂ ಕೈಗಳಲ್ಲಿ ದೊಡ್ಡ ದೊಡ್ಡ ಹಾವುಗಳನ್ನು ಹಿಡಿದುಕೊಂಡ ಗರುಡನು ಅವುಗಳ ಬಾಲವನ್ನು ಕಾಲಿನಿಂದ ಮೆಟ್ಟಿ ನಿಂತಿದ್ದಾನೆ. ಆತನ ಮೂಗು ಹಕ್ಕಿನ ಹಾಗೆ ಅತ್ಯಂತ ಚೂಪಾಗಿ ಮುಂದೆ ಬಾಗಿಕೊಂಡಿದೆ. ಕೆಂಪು ಚಡ್ಡಿ, ಹಸಿರು ಶಾಲು ಧರಿಸಿದ ಗರುಡನು ತಲೆಯಲ್ಲಿ ಕಿರೀಟ ಉಳ್ಳವನಾಗಿದ್ದಾನೆ. ಕೊರಳಲ್ಲಿ. ಕೈಯಲ್ಲಿ, ಕಾಲಲ್ಲಿ ಆಭರಣಗಳನ್ನು ಧರಿಸಿದ್ದರೂ ಇಲ್ಲಿಯೂ ಭುಜಕೀರ್ತಿಯಿಂದ ಇಳಿಬಿದ್ದ, ಮೊಣಕಾಲಕೆಳಗಿನವರೆಗೂ ಇರುವ ದೊಡ್ಡ ಪಟ್ಟಿಯಂತಹ ಸರವನ್ನು ರಚಿಸಲಾಗಿದೆ. ಆಭರಣಗಳಿಗೆ ಅಲ್ಲಲ್ಲಿ ಕೆಂಪು, ಹಸಿರು. ನೀಲಿ ವರ್ಣದ ಹರಳುಗಳು, ಮುತ್ತು ಮಾಣಿಕ್ಯಗಳನ್ನು ಅಳವಡಿಸಲಾಗಿದೆ. ಚಿತ್ರದ ಹೊರರೇಖೆಗಳು ಕಪ್ಪು ಮಿಶ್ರಿತ ಕೆಂಪುವರ್ಣದಲ್ಲಿದ್ದು ಶಕ್ತಿ ಶಾಲಿಯಾಗಿವೆ. ರೇಖಾವಿನ್ಯಾಸ. ವರ್ಣಹಂಚಿಕೆಯಲ್ಲಿ ಇದೊಂದು ಉತ್ತಮ ಚಿತ್ರವಾಗಿದೆ.

*೨. ಧಾರ್ಮಿಕೇತರ ಚಿತ್ರಗಳು :* ದೊಡ್ಡ ಚೌಕದಲ್ಲಿ ಧಾರ್ಮಿಕ ಚಿತ್ರಗಳ ಜೊತೆಗೇ ಅಲ್ಲಲ್ಲಿ ಧಾರ್ಮಿಕೇತರ ಚಿತ್ರಗಳನ್ನು ರಚಿಸಲಾಗಿದೆ. ಮೊದಲು ಇಂತಹ ಚಿತ್ರಗಳೂ ಸಹಿತ ಹೆಚ್ಚಿನ ಸಂಖ್ಯೆಯಲ್ಲಿ ಇರಬಹುದು. ಆದರೆ ಈಗ ತಾಯಿಮಗುವಿನ ಚಿತ್ರ. ಅಲಂಕಾರಿಕ ಗಿಡಗಳ ಚಿತ್ರಗಳು ಮಾತ್ರ ಈ ಗುಂಪಿನಲ್ಲಿ ಉಳಿದಿವೆ.

I. ತಾಯಿ ಮಗುವಿನ ಚಿತ್ರ : ರಾಕ್ಷಸನನ್ನು ಕೊಲ್ಲುತ್ತಿರುವ ಹನುಮಂತನ ಚಿತ್ರದ ಬಲಗಡೆಗೆ ತಾಯಿಯೊಬ್ಬಳು ತನ್ನ ಮಗುವನ್ನು ಆಡಿಸುತ್ತಿರುವ ಸುಂದರವಾದ ಚಿತ್ರವಿದೆ. ಹಠಮಾಡಿ ಅಳುತ್ತಿರುವ ಬಾಲಕನನ್ನು ಸಮಾಧಾನಿಸಲು ತಾಯಿಯು ಗಿಡದಲ್ಲಿ ಅರಳಿದ ಕೆಂಪು ಹೂವೊಂದನನ್ನು ಕಿತ್ತು ಕೊಡುತ್ತಿದ್ದಾಳೆ. ಮಗುವು ಇನ್ನೂ ಬೇಗನೇ ಆ ಹೂವನ್ನು ತಾಯಿಯ ಕೈಯಿಂದ ಕಿತ್ತುಕೊಳ್ಳಬೇಕೆಂಬ ಅಪೇಕ್ಷೆಯಿಂದ ಮೇಲಕ್ಕೆ ನೆಗೆದು ಹೂ ಹಿಡಿದ ಆಕೆಯ ಕೈಯನ್ನು ಜಗ್ಗುತ್ತಲಿದೆ. ಮಗುವು ತಲೆಗೆ ಒಂದು ಕೆಂಪುಬಣ್ಣದ ಕುಲಾವಿ ಧರಿಸಿದ್ದು ಉಳಿದಂತೆ ಮೈ ಮೇಲೆ ಯಾವುದೇ ಬಟ್ಟೆ ಇಲ್ಲದೇ ನಗ್ನವಾಗಿದೆ. ಕೊರಳಲ್ಲಿ ಚೈನದಂತಹ ಆಭರಣ ಹಾಗೂ ನಡುವಿನಲ್ಲಿ ಉಡದಾರವಿದೆ. ತಾಯಿಯು ಕೆಂಪು ಬಣ್ಣದ ಚುಕ್ಕೆಗಳಿರುವ ಕುಪ್ಪಸ ತೊಟ್ಟಿದ್ದು. ಬಹುಶ ಕಡು ಹಸಿರು ವರ್ಣದ ಸೀರೆ ಧರಿಸಿರಬಹುದು. ಆದರೆ ಈಗ ಸೀರೆಯ ಬಣ್ಣವೆಲ್ಲ ಉದುರಿಹೋಗಿ ಬೂದುವರ್ಣದ ಹಿನ್ನೆಲೆ ಕಾಣುತ್ತಲಿದೆ. ಕೊರಳು, ಕಿವಿ, ಮೂಗು, ತಲೆಯಲ್ಲಿ ಕೂಡಾ ಆಭರಣ ಹೊಂದಿದ ತಾಯಿಯು ಮೊಣಕಾಲವರೆಗೆ ಇಳಿಬಿದ್ದ ನಡುಪಟ್ಟಿಯನ್ನು ಧರಿಸಿದ್ದಾಳೆ. ಮೂಗಿನ ಆಭರಣ ನತ್ತು ಕಿವಿಯಲ್ಲಿನ ತೂಗಾಡುವ ಜುಮುಕಿಯಂತಹ ಲೋಲಕಗಳು, ಆಕರ್ಷಕವಾಗಿವೆ. ಕೂದಲನ್ನು ತುರುಬಾಗಿ

ಕಟ್ಟಿದ್ದು. ಗಲ್ಲದ ಮೇಲೆ ಸುರುಳಿಯಾದ ಮುಂಗುರುಳು ತೂಗಾಡುತ್ತಲಿವೆ. ವಿಶಾಲವಾದ ಬಿಲ್ಲಿನಾಕಾರದ ಹುಬ್ಬಿನ ಮಧ್ಯದಲ್ಲಿ ಚಂದ್ರನ ಹಾಗೆ ದುಂಡಾಗಿರುವ ಕೆಂಪುವರ್ಣದ ಕುಂಕುಮ ಬೊಟ್ಟು ಮುಖಕ್ಕೆ ಹೆಚ್ಚಿನ ಅಂದ ತಂದು ಕೊಟ್ಟಿದೆ. ಚಿತ್ರದ ಸುತ್ತಲೂ ಅಲ್ಲಲ್ಲಿ ಕೆಂಪು ಹೂಗಳ ಟೊಂಗೆಗಳನ್ನು ಚಿತ್ರಸಲಾಗಿದೆ. ಹೊರರೇಖೆಗಳನ್ನು ಕಂದು ಹಾಗೂ ಕಪ್ಪು ವರ್ಣದಿಂದ ಎಳೆಯಾಗಿದೆ. ರೇಖೆಗಳು ಶಕ್ತಿಯುತವಾಗಿದ್ದರೂ ಮಗುವಿನ ಚಿತ್ರದ ಪ್ರಮಾಣ ಯೋಗ್ಯವಾಗಿಲ್ಲ.

II. ಅಲಂಕಾರಿಕ ಗಿಡದ ಚಿತ್ರ : ಕಾಳಿಂಗ ಮರ್ದನ ಕೃಷ್ಣನ ಚಿತ್ರದ ಬಲಭಾಗದಲ್ಲಿರುವ ಒಂದು ಕಮಾನಿನಲ್ಲಿ ಸುಂದರವಾದ. ಸೈಪ್ರೈಸ್ ವೃಕ್ಷವನ್ನು ಹೋಲುವ ಅಲಂಕಾರಿಕ ಗಿಡದ ಚಿತ್ರವಿದೆ. ಈ ಗಿಡದ ಆಕಾರವು ಹೃದಯ ಆಕಾರದಲ್ಲಿದ್ದು. ಉದ್ದನಾಗಿ ಚಾಚಿಕೊಂಡು. ಮೇಲೆ ಬೆಳೆದ ತುದಿಯು ಕೆಳಬಾಗಿ, ಅಲಂಕಾರಯುಕ್ತ ಕವಲುಗಳಾಗಿ ವಿಸ್ತರಿಸಿದೆ. ಕಂದು ವರ್ಣದ ಗಿಡದ ಕಾಂಡಕ್ಕೆ ಅಂಟಿಕೊಂಡಂತೆ ಬೆಳೆದಿರುವ ಹಸಿರು ಗಿಡದಲ್ಲಿ ದೊಡ್ಡದಾದ ಕೆಂಪು ಹೂಗಳು ಅರಳಿವೆ. ಈ ಗಿಡದಲ್ಲಿ ಒಟ್ಟು ಹತ್ತು ಹೂಗಳು ಅರಳಿವೆ. ಈ ಚಿತ್ರದ ಕಮಾನಿಗೂ ಹಸಿರುವರ್ಣ ಲೇಪಿಸಿ ಅದರ ಮೇಲೆ ಹೂಬಳ್ಳಿ ನಕ್ಷೆ ಬರೆದಿದ್ದಾರೆ. ಈ ಗಿಡದ ಚಿತ್ರಕ್ಕೂ ಹೊರರೇಖೆ ಎಳೆಯಲಾಗಿದೆ. ಕಂದು ವರ್ಣದ ರೇಖೆಗಳು ಇಲ್ಲಿ ಪ್ರಮುಖವಾಗಿವೆ. ಚಿತ್ರದ ಹಿನ್ನೆಲೆ ತೆಳುಹಳದೀಯಾಗಿದೆ. ಕಾಳಿಂಗ ಮರ್ದನ ಕೃಷ್ಣ ಮತ್ತು ಅಲಂಕಾರಿಕ ಗಿಡದ ಚಿತ್ರಗಳ ಕೆಳಭಾಗದಲ್ಲಿ ಮೂರು ದೀರ್ಘವೃತ್ತಾಕಾರದಲ್ಲಿ ಚಿಕ್ಕ ಚಿಕ್ಕ ಚಿತ್ರಗಳಿದ್ದು ಅವು ಏನನ್ನು ಕುರಿತು ರಚಿಸಿವೆ ಎಂಬುದಾಗಲಿ, ಯಾವ ವಿಷಯಕ್ಕೆ ಸಂಬಂಧಿಸಿವೆ ಎಂಬುದಾಗಲಿ ತಿಳಿಯುವದಿಲ್ಲ ಕಾರಣ ಅವೆಲ್ಲ ಸಂಪೂರ್ಣ ನಾಶವಾಗಿದ್ದು ಕೇವಲ ಬಣ್ಣದ ಉಳಿಕೆಗಳು ಮಾತ್ರ ಇವೆ.

ಇಲ್ಲಿ ಮುಖ್ಯ ಚಿತ್ರಗಳ ಜೊತೆಜೊತೆಯಲ್ಲಿ ಅಲ್ಲಲ್ಲಿ ವೈವಿಧ್ಯಮಯವಾದ ಬೃಹತ್ ಅಲಂಕಾರಿಕ ಗಿಡಗಳನ್ನೂ ರಚಿಸಿದ್ದಾರೆ. ಹನುಮಂತ ದೇವರ ಮಂಟಪದ ಎಡಬಲಗಳಲ್ಲಿ, ತಾಯಿ ಮಗುವಿನ ಚಿತ್ರದ ಅಕ್ಕಪಕ್ಕದಲ್ಲಿ, ಗರುಡನ ಚಿತ್ರದ ಬದಿಗಳಲ್ಲಿ, ಕಾಳಿಂಗ ಮರ್ದನ ಚಿತ್ರದ ಸಮೀಪ, ಹೀಗೆ ಅಲ್ಲಲ್ಲಿ ಅಲಂಕಾರಿಕ ಗಿಡಗಳಿವೆ. ಈ ಗಿಡಗಳು ವೈವಿಧ್ಯಮಯವಾಗಿದ್ದು. ಸುಂದರವಾಗಿಯೂ ಇವೆ. ಈಗಿಡಗಳಲ್ಲಿ ಟೆಂಗಿನ ಗಿಡವೂ ಸೇರಿದೆ. ಮತ್ತೊಂದು ವಿಧದ ಗಿಡವೆಂದರೆ. ನೇರವಾದ ಬೊಡ್ಡೆ (ಕಾಂಡ)ಯನ್ನು ರಚಿಸಿ ಅದರ ತುದಿಗೆ ಎರಡು ವೃತ್ತಗಳನ್ನು ಮಾಡಿಕೊಂಡು ಅವುಗಳಲ್ಲಿ ಎಲೆಯ ನಕ್ಷೆಯನ್ನು ರೂಪಿಸಲಾಗಿದೆ. ಮತ್ತೊಂದು ರೀತಿಯ ಗಿಡಗಳೆಂದರೆ ಹೃದಯದಾಕಾರ ಹೊಂದಿದ ಉದ್ದವಾದ ಸೈಪ್ರೈಸ್ ವೃಕ್ಷಗಳು. ಇವು ಮೇಲಿನ ತುದಿಯಲ್ಲಿ ಕೆಳಗೆ ಬಾಗಿಕೊಂಡಿವೆ. ಈ ಮಾದರಿಯ ವೃಕ್ಷಗಳು ನೆಲದಲ್ಲಿ ಹಾಗೂ ಕುಂಡದಲ್ಲಿ ಇರುವಂತೆ ರಚಿಸಲಾಗಿದೆ. ಉಳಿದ ಮಾದರಿಯ ಗಿಡಗಳಲ್ಲಿ ಹೂಗಳನ್ನು ರಚಿಸಿಲ್ಲ. ಆದರೆ ಸೈಪ್ರೈಸ್ ಮಾದರಿಯ ಈ ಗಿಡಗಳಲ್ಲಿ ದೊಡ್ಡ ದೊಡ್ಡ ಕೆಂಪು ಹೂಗಳು ಅರಳಿದಂತೆ ರಚಿಸಲಾಗಿದೆ. ಸಾಮಾನ್ಯವಾಗಿ ಎಲ್ಲ ಗಿಡಗಳ ಬೊಡ್ಡೆಗಳು ಕಂದುವರ್ಣದಲ್ಲಿದ್ದು ಗರಿಗಳ ಜೊತೆಗೆ ಕಾಯಿಯನ್ನೂ ಚಿತ್ರಿಸಿದೆ. ಇವುಗಳಲ್ಲದೇ ಅಲ್ಲಲ್ಲಿ ಚಿಕ್ಕಪುಟ್ಟ ಹೂಗೊಂಚಲುಗಳನ್ನೂ ಹೂ ಬಳ್ಳಿ, ಮತ್ತು ಪ್ರತ್ಯೇಕವಾದ ಎಲೆಗಳನ್ನೂ ರಚಿಸಲಾಗಿದೆ.

**III. ದೀರ್ಘವೃತ್ತಾಕಾರದಲ್ಲಿನ ಚಿಕ್ಕ ಚಿತ್ರಗಳು :** ಮೇಲೆ ಹೇಳಲಾದ ದೊಡ್ಡ ಚಿತ್ರಗಳಲ್ಲದೇ ಗೋಡೆಯ ಕೆಳಭಾಗದಲ್ಲಿ ದೊಡ್ಡ ಚಿತ್ರಗಳ ಕೆಳಭಾಗದ ಪಟ್ಟಿಯಲ್ಲಿ ದೀರ್ಘವೃತ್ತಗಳಲ್ಲಿ ಚಿಕ್ಕ ಚಿಕ್ಕ ಚಿತ್ರಗಳನ್ನೂ ರಚಿಸಲಾಗಿದೆ. ಇವು ಸಂಪೂರ್ಣ ಹಾಳಾಗಿದ್ದು. ಯಾವ ಚಿತ್ರ ಎಂದು ತಿಳಿದುಬರುವುದಿಲ್ಲ. ಈ ದೀರ್ಘವೃತ್ತಗಳಲ್ಲಿ ಅಕ್ಕಪಕ್ಕದಲ್ಲಿ ಗಿಡಗಳನ್ನು ರಚಿಸಿ ಮಧ್ಯದಲ್ಲಿ ಚಿತ್ರ ಬರೆಯಲಾಗಿದೆ. ಅವುಗಳಲ್ಲಿ ಆನೆ ಸವಾರರು, ಶರಭ, ಕುದುರೆ ಸವಾರರು ಮುಂತಾಗಿ

ಅಸ್ಪಷ್ಟವಾಗಿ ಗುರುತಿಸಬಹುದು. ಈ ಚಿತ್ರಗಳಲ್ಲಿ ಕೂಡಾ ಅಲ್ಲಲ್ಲಿ ದೊಡ್ಡ ಕೆಂಪು ಹೂಗಳನ್ನು ಕಾಣಬಹುದಾಗಿದೆ. ಇಲ್ಲಿಯೂ ಹಿನ್ನಲೆವರ್ಣ ತೆಳುಹಳದಿಯಿಂದ ಕೂಡಿದೆ.

**ಗುಳೇದಗುಡ್ಡದ ಭಿತ್ತಿ ಚಿತ್ರಗಳ ಲಕ್ಷಣಗಳು :**

* ಇಲ್ಲಿನ ಚಿತ್ರಗಳು ದೊಡ್ಡ ಪ್ರಮಾಣದಲ್ಲಿದ್ದು ಸುಮಾರು ೨ ಪೂಟುಗಳಷ್ಟು ದೊಡ್ಡದಾಗಿವೆ.
* ಮುಖ್ಯ ಚಿತ್ರಗಳ ಸುತ್ತಲೂ ಇರುವ ಖಾಲೀ ಜಾಗೆಯನ್ನು ತುಂಬಲು ಕೆಂಪು ಹೂಗಳನ್ನು ರಚಿಸಿದ್ದಾರೆ.
* ಮುಖ್ಯ ಚಿತ್ರಗಳ ಜೊತೆಗೆ ಅಲ್ಲಲ್ಲಿ ಬೃಹತ್ ಗಿಡಮರಗಳನ್ನೂ ರಚಿಸಿದ್ದಾರೆ.
* ಮಹಿಳೆಯರ ಉಡುಪುಗಳಿಗೆ ಕೆಂಪು ಹಸಿರು ವರ್ಣಗಳನ್ನು ಪ್ರಮುಖವಾಗಿ ಬಳಸಿದ್ದಾರೆ.
* ದೇವತೆಗಳ ಚಿತ್ರಗಳಲ್ಲಿನ ಕಿರೀಟಗಳಲ್ಲಿ ವೈವಿದ್ಯತೆ ಇದ್ದು ೩ ರಿಂದ ೪ ಬಗೆಯ ಕಿರೀಟಗಳನ್ನು ಕಾಣಬಹುದು. ಅವುಗಳಲ್ಲಿ ವಿಜಯನಗರ ಶೈಲಿಯಂತೆ ಕೊಳವೆಯಾಕಾರದ ಕಿರೀಟಗಳೂ ಇಲ್ಲಿ ರಚಿಸಿವೆ.
* ಸ್ತ್ರೀ ಚಿತ್ರಗಳ ಉಡುಪಿನಲ್ಲಿ ಹೆಚ್ಚಿನ ವೈವಿದ್ಯತೆ ಇಲ್ಲ. ಅಮ್ಮಿನಭಾವಿ, ನರಗುಂದದಲ್ಲಿನ ಸ್ತ್ರೀ ಚಿತ್ರಗಳಲ್ಲಿ ಇರುವ ಸೀರೆ ಕುಪ್ಪಸಗಳಲ್ಲಿನ ವೈವಿಧ್ಯತೆ, ನಕ್ಷೆಗಳು ಬಣ್ಣಗಳು ಇಲ್ಲಿಲ್ಲ. ಸಮೀಪದ ಇಲಕಲ್ ಪಟ್ಟಣ ಮತ್ತು ಗುಳೇದಗುಡ್ಡಗಳು ಸೀರೆ-ಖಣಗಳಿಗೆ ಪ್ರಸಿದ್ಧವಾಗಿವೆ. ಅಂತಹ ಇಲಕಲ್ ಸೀರೆ ಮತ್ತು ಗುಳೇದಗುಡ್ಡದ ಕುಪ್ಪಸಗಳು ಇಲ್ಲಿನ ಸ್ತ್ರೀ ಚಿತ್ರಗಳಲ್ಲಿ ಕಂಡು ಬರದೇ ಇರುವುದು ಆಶ್ಚರ್ಯವೆನಿಸುತ್ತದೆ. ಈ ಮಾದರಿಯ ಸೀರೆ ಕುಪ್ಪಸಗಳು, ಅಮ್ಮಿನಭಾವಿ, ನರಗುಂದಗಳಲ್ಲಿನ ಭಿತ್ತಿಚಿತ್ರಗಳಲ್ಲಿ ಧಾರಾಳವಾಗಿ ಕಂಡು ಬರುತ್ತವೆ.
* ಚಿತ್ರಗಳು ರೇಖಾ ಪ್ರಧಾನವಾಗಿದ್ದು, ಶಕ್ತಿಶಾಲಿ ಹೊರರೇಖೆಗಳನ್ನು ಹೊಂದಿದೆ. ಹೊರರೇಖೆಗಳನ್ನು ಕೆಂಪುಮಿಶ್ರಿತ ಕಪ್ಪು ವರ್ಣದಿಂದ ಎಳೆಯಲಾಗಿದೆ.
* ಚಿತ್ರಗಳನ್ನು ತೆಳು ಹಳದಿ ಹಿನ್ನಲೆಯ ಮೇಲೆ ರಚಿಸಲಾಗಿದೆ. ಆದರೆ ತೆಳುಹಳದಿ ಹಿನ್ನಲೆ ಲೇಪನಕ್ಕಿಂತ ಮೊದಲು ಬೂದು ವರ್ಣದ ಹಿನ್ನಲೆ ಲೇಪಿಸಿದಂತೆ ತೋರುತ್ತದೆ. ಚಿತ್ರಗಳ ವರ್ಣ ಕಿತ್ತುಬಂದ ಸ್ಥಳದಲ್ಲಿ ಎಲ್ಲಕಡೆಯೂ ಬೂದುವರ್ಣದ ಹಿನ್ನಲೆ ಕಂಡುಬರುತ್ತದೆ. ಮತ್ತೆ ಕೆಲವು ಕಡೆ ಆ ಬೂದು ವರ್ಣದ ತೆಳುಪದರ ಕಳಚಿಬಿದ್ದಾಗ ಮಾತ್ರ ಹಿಂದಿನ ವರ್ಣದ ಭಿತ್ತಿಯು ಗೋಚರಿಸುತ್ತಲಿದೆ. ಅಂದರೆ ಬಿಳಿದಾದ ಭಿತ್ತಿಯನ್ನು ನುಣುಪುಗೊಳಿಸಿದನಂತರ ತೆಳು ಹಳದಿ ವರ್ಣವನ್ನು ಲೇಪಿಸಿ ಚಿತ್ರರಚಿಸಲಾಗಿದೆ.
* ಆಭರಣಗಳಲ್ಲಿ ಭುಜಕೀರ್ತಿಯಿಂದ ಮೊಣಕಾಲಿನ ಕೆಳಗಿನವರೆಗೆ ಇಳಿಬಿದ್ದಿರುವ ಸರದಂತಹ ದಪ್ಪ ಆಭರಣ ಸಾಮಾನ್ಯವಾಗಿ ಎಲ್ಲ ಚಿತ್ರಗಳಲ್ಲಿಯೂ ಸಾಮಾನ್ಯಸ್ತ್ರೀ ಚಿತ್ರಗಳಲ್ಲಿ ಈ ಸರದಂತಹ ದಪ್ಪ ಆಭರಣ ಸೊಂಟದಿಂದ ಮೊಣಕಾಲಕೆಳಗಿನವರೆಗೆ ಇಳಿಬಿದ್ದಿದೆ.
* ಚಿತ್ರಗಳಲ್ಲಿ ಪ್ರಮುಖವಾಗಿ ಕೆಂಪು, ಹಸಿರು, ಹಳದೀ ವರ್ಣಗಳನ್ನೇ ಬಳಸಲಾಗಿದೆ.

**೨. ಖಾಜಿನಗೌಡರ ಮನೆ, ರಾಯಚೂರು :** ರಾಯಚೂರು ಪ್ರದೇಶದಲ್ಲಿ ಪ್ರಾಗೈತಿಹಾಸಿಕ ಕಾಲದ ಭಿತ್ತಿಚಿತ್ರಗಳು ಕಂಡು ಬರುತ್ತಿದ್ದು, ಪ್ರಾಚೀನ ಕಾಲದಿಂದಲೂ ಈ ಪ್ರದೇಶ ಚಿತ್ರಕಲಾ ಕೇಂದ್ರವಾಗಿದ್ದಂತೆ ತೋರುತ್ತದೆ. ರಾಚೂರು ನಗರದ ಜನನಿಬಿಡ ಪ್ರದೇಶದಲ್ಲಿರು ಖಾಜಿನಗೌಡರ ಹಳೆಗಾಲದ ಮನೆಯೊಂದರಲ್ಲಿ ಭಿತ್ತಿಚತ್ರಗಳು ಕಂಡುಬಂದಿವೆ.

ಇವುಗಳನ್ನು ಮೊದಲಿಗೆ ಪರಿಚಯಿಸಿದವರು ಬಹುಶ ಸಂತೋಷಕುಮಾರ ಗುಲ್ವಾಡಿಯವರು. ಮೂರು ಅಂತಸ್ತುಗಳನ್ನು ಹೊಂದಿದ ಈ ಮನೆಯ ಎರಡನೆಯ ಅಂತಸ್ತಿನಲ್ಲಿ ಎರಡು ಕೋಣೆಗಳಲ್ಲಿ ಭಿತ್ತಿಚಿತ್ರಗಳಿವೆ. ಒಂದು ಕೋಣೆ ಶಯನಗೃಹವಾಗಿದ್ದರೆ. ಇನ್ನೊಂದು ಕೋಣೆ ಸ್ನಾನಗೃಹವಾಗಿದೆ. ಈ ಹಿನ್ನೆಲೆಯಲ್ಲಿ ಒಂದನ್ನು ಶಯನ ಚಿತ್ರಶಾಲೆ, ಇನ್ನೊಂದನ್ನು ಅಭಿಷೇಕ ಚಿತ್ರಶಾಲೆ ಎಂದು ಇವುಗಳನ್ನು ಗುರುತಿಸಬಹುದು. ಈ ಕೋಣೆಗಳು ಸುಮಾರು ೧೫ x ೨೦ ಫೂಟುಗಳ ಅಳತೆಯಲ್ಲಿದ್ದು ಗೋಡೆಗಳು ಮೇಲ್ಛಾವಣಿಗಳು ಚಿತ್ರಗಳಿಂದ ತುಂಬಿವೆ. ಮೇಲ್ಛಾವಣಿಯಲ್ಲಿ ಬರೀ ಹೂಬಳ್ಳಿಯ ನಕ್ಷಾ ಚಿತ್ರಗಳು ಮಾತ್ರ ಇದ್ದು ಯಾವುದೇ ಮಾನವಾಕೃತಿ ಇಲ್ಲವೇ ಪ್ರಾಣಿ ಪಕ್ಷಿಗಳ ಆಕೃತಿಗಳಿಲ್ಲ. ಚಿತ್ರಗಳ ದೆಸೆಯಿಂದಾಗಿಯೇ ಈ ಮನೆಗೆ 'ದೌಲತ್ ಮಹಲ್' ಎಂಬ ಇನ್ನೊಂದು ಹೆಸರೂ ಇದೆ ಎಂಬುದಾಗಿ ಸ್ಥಳೀಯರು ಹೇಳುತ್ತಾರೆ.

**ಕಾಲ :** ಈ ಮನೆಯ ಸರದಾರನ ಚಿತ್ರದ ಹತ್ತಿರ ೧೮೨೮ ಮುತ್ತ 'ಹ' ಎನ್ನುವ ಅಕ್ಷರಗಳನ್ನು ಬರೆಯಲಾಗಿದೆ. ಇದರಿಂದ ಈ ಮನೆಯು ಸುಮಾರು ೧೭೦ ವರ್ಷಗಳಿಗಿಂತಲೂ ಹಳೆಯದು ಎಂದು ಗೊತ್ತಾಗುತ್ತದೆ. ಬಹುಶ ಚಿತ್ರಗಳೂ ಮನೆಯ ನಿರ್ಮಾಣವಾದ ಸಂದರ್ಭದಲ್ಲೇ ಅಂದರೆ ಕ್ರಿ. ಶ. ೧೮೨೮ ರಲ್ಲಿಯೇ ರಚನೆಯಾಗಿವೆ. ಇಲ್ಲಿಯ ಚಿತ್ರಗಳಲ್ಲಿ ಹಳದಿ. ನೀಲಿ. ಕೆಂಪು. ಹಸಿರು ಬಣ್ಣಗಳನ್ನು ಪ್ರಮುಖವಾಗಿ ಉಪಯೋಗಿಸಲಾಗಿದೆ. ಚಿತ್ರಗಳ ರೂಪ, ಶೈಲಿಗಳು ಚಿಕಣಿ ಚಿತ್ರಗಳ ವಿಸ್ತೃತ ರೂಪಗಳಂತೆ ಕಾಣುತ್ತವೆ. ಚಿತ್ರವಿಷಯಗಳು ಹಿಂದೂ ಆದರೂ ಚಿತ್ರಗಳಲ್ಲಿ ಮೊಗಲ್ ಶೈಲಿ ಕಂಡುಬರುತ್ತದೆ. ಚಿತ್ರಗಳಲ್ಲಿ ಹೆಚ್ಚಾಗಿ ಕೃಷ್ಣನ ಜೀವನಕ್ಕೆ ಸಂಬಂಧಿಸಿದ ಚಿತ್ರಗಳೇ ಅಧಿಕವಾಗಿದ್ದರೂ ನಿತ್ಯ ಜೀವನದ ಘಟನೆಗಳು. ಅಲಂಕಾರಿಕ ವೃಕ್ಷಗಳು. ಗಿಳಿ. ಗೊರವಂಕ. ಅಳಿಲು. ಮಂಗ. ಜಿಂಕೆ, ಮುಂತಾದ ಪ್ರಾಣಿಪಕ್ಷಿಗಳ ಚಿತ್ರಗಳೂ ಇಲ್ಲಿವೆ. ಇಲ್ಲಿನ ಚಿತ್ರಗಳನ್ನು ಸ್ಥೂಲವಾಗಿ ಈ ಕೆಳಗಿನಂತೆ ಎರಡು ರೀತಿಯಲ್ಲಿ ವಿಂಗಡಿಸಬಹುದು.

I. ಶಯನಗೃಹದ ಚಿತ್ರಗಳು

II. ಸ್ನಾನಗೃಹದ ಚಿತ್ರಗಳು

**I. ಶಯನಗೃಹದ ಚಿತ್ರಗಳು :** ಈ ಕೋಣೆಯಲ್ಲಿ ಗೋಡೆಯಲ್ಲಿ ನಿರ್ದಿಷ್ಟವಾದ ಪಟ್ಟಿಕೆಗಳನ್ನು ಮಾಡಿಕೊಂಡು ಚಿತ್ರರಚನೆ ಮಾಡಿರದೇ ಗೋಡೆಯಲ್ಲಿ ಎಲ್ಲೆಂದರಲ್ಲಿ ಚದುರಿದಂತೆ ಚಿತ್ರಗಳನ್ನು ರಚನೆಮಾಡಲಾಗಿದೆ. ಶಯನಗೃಹದ ಈ ಚಿತ್ರಗಳನ್ನು ಮತ್ತೆ ವಿಷಯಕ್ಕನುಸಾರವಾಗಿ ಈ ಕೆಳಗಿನಂತೆ ವಿಂಗಡಿಸಬಹುದು.

೧. ಧಾರ್ಮಿಕ ಚಿತ್ರಗಳು

೨. ಧಾರ್ಮಿಕೇತರ ಚಿತ್ರಗಳು

***೧. ಧಾರ್ಮಿಕ ಚಿತ್ರಗಳು :*** ಧಾರ್ಮಿಕ ಚಿತ್ರಗಳಲ್ಲಿ ಕೃಷ್ಣನಿಗೆ ಸಂಬಂಧಿಸಿದ ಚಿತ್ರಗಳೇ ಹೆಚ್ಚಾಗಿದ್ದು ಅವುಗಳನ್ನು ಕೆಳಗಿನಂತೆ ವಿವರಿಸಬಹುದು :

I. ಬೆಣ್ಣೆ ಕದಿಯುತ್ತಿರುವ ಕೃಷ್ಣ : ಈ ಚಿತ್ರದಲ್ಲಿ ಜಂತಿಯಲ್ಲಿ ಕಟ್ಟಲಾಗಿರುವ ನೆಲುವಿನಲ್ಲಿ ಇರುವ ಗಡಿಗೆಯಲ್ಲಿನ ಬೆಣ್ಣೆಯನ್ನು ಕೃಷ್ಣ ಕದಿಯುತ್ತಿದ್ದಾನೆ. ಕಪ್ಪು ಮಣ್ಣಿನ ಮಡಕೆಗಳಲ್ಲಿ ಬೆಣ್ಣೆ ತುಂಬಿ ಒಂದರಮೇಲೊಂದರಂತೆ ಹೊಂದಿಸಿ ಇಡಲಾಗಿದೆ. ಬೆಣ್ಣೆ ತುಂಬಿದ ಗಡಿಗೆಗಳು ಬಾಲಕ ಕೃಷ್ಣನಿಗೆ ಕೈಗೆ ಎಟುಕದ್ದರಿಂದ ಕೃಷ್ಣನು ಏಣಿಯೊಂದನ್ನು ಇಟ್ಟುಕೊಂಡು ಅದರ ಮೇಲೆ ಹತ್ತಿ ಬೆಣ್ಣೆ ಕದಿಯುತ್ತಿದ್ದಾನೆ. ಬೆಣ್ಣೆ ಕದಿಯುವ ಕೃಷ್ಣನ

ಕಳ್ಳತನವನ್ನು ಅರಿತ ಗೋಪಿಕಾ ಸ್ತ್ರೀಯು ಧಾವಿಸಿ ಬಂದು ಬಡಿಗೆಯಿಂದ ಆತನನ್ನು ಹೊಡೆದು ಕೆಳಗೆ ಇಳಿಸುತ್ತಿದ್ದಾಳೆ. ಸರ್ವಾಂತರ್‌ಯಾಮಿ ಕೃಷ್ಣನು ಕೆಳಗೆ ಇಳಿದು ಆಕೆಯ ಜಡೆಯನ್ನು ಎಳೆದು ಪೀಡಿಸುತ್ತಿದ್ದಾನೆ. ಇದರಿಂದ ಚಕಿತಗೊಂಡ ಗೋಪಿಕಾ ಸ್ತ್ರೀ ಏಣಿಯಮೇಲಿ ಕೆಳಗೆ ಎರಡೂ ಕಡೆ ಕೃಷ್ಣನನ್ನು ಕಂಡು ಗಾಬರಿಯಾಗಿದ್ದಾಳೆ. ಕೃಷ್ಣನು ನೀಲವರ್ಣದವನಾಗಿದ್ದು, ನಗ್ನನಾಗಿದ್ದಾನೆ. ತಲೆಗೆ ಕಿರೀಟ, ಕೊರಳಲ್ಲಿ ಆಭರಣ, ನಡುವಿನಲ್ಲಿ ಉಡದಾರವಿದೆ. ಗೋಪಿಕಾ ಸ್ತ್ರೀಯು ಕೆಂಪು ಸೀರೆ, ತೆಳುಹಸಿರು ವರ್ಣದ ಕುಪ್ಪಸ ತೊಟ್ಟಿದ್ದಾಳೆ. ತಲೆಗೂದಲನ್ನು ಜಡೆಯಾಗಿ ಹೆಣೆದುಕೊಂಡು ಜಡೆಬಂಗಾರದ ಆಭರಣ ಧರಿಸಿರುವಳು. ಮೂಗಿನಲ್ಲಿ ರಿಂಗಿನಂತೆ ದುಂಡಗಿರುವ ಆಭರಣ, ಕಿವಿಯಲ್ಲಿ ತೂಗಾಡುವ ಲೋಲಕದಂತ ಆಭರಣಗಳಿವೆ.

II. ಕೃಷ್ಣನು ಗೋಪಿಕಾ ಸ್ತ್ರೀಯೊಡನೆ ಸರಸದಲ್ಲಿರುವುದು : ಏಣಿ ಮೇಲೆ ಹತ್ತಿ ಬೆಣ್ಣೆ ಕದಿಯುತ್ತಿರುವ ಕೃಷ್ಣನ ಚಿತ್ರದ ಬಲಗಡೆಗೆ ಇರುವ ಇನ್ನೊಂದು ಚಿತ್ರದಲ್ಲಿ ಕೃಷ್ಣನು ಮಜ್ಜಿಗೆ ಕಡೆಯುತ್ತಿರುವ ಗೋಪಿಕಾಸ್ತ್ರೀಯೊಡನೆ ಸರಸದಲ್ಲಿ ತೊಡಗಿದ್ದಾನೆ. ಗಡಿಗೆಯಲ್ಲಿರುವ ಮಜ್ಜಿಗೆಯನ್ನು ಉದ್ದನಾದ ಒಂದು ಕಡಗೋಲಿನಿಂದ ಹಗ್ಗಹಾಕಿ ಎದ್ದು ನಿಂತು ಕಡೆಯುತ್ತಿರುವ ಗೋಪಿಕಾಸ್ತ್ರೀಯ ಹಿಂದಿನಿಂದ ಕೃಷ್ಣನು ಮೆತ್ತಗೆ ಬಂದು ಅವಳನ್ನು ಅಪ್ಪಿ ಹಿಡಿದಿದ್ದಾನೆ. ಆಶ್ಚರ್ಯಗೊಂಡ ಅವಳು ಕತ್ತನ್ನು ಹಿಂದೆ ತಿರುವಿ ಆತನನ್ನು ನೋಡುತ್ತಿದ್ದಾಳೆ. ಹಿಂದಿನಿಂದ ಅಪ್ಪಿಕೊಂಡ ಕೃಷ್ಣನು ಒಂದು ಕೈಯನ್ನು ಅವಳ ಬೆನ್ನ ಮೇಲೆ ಹಾಕಿ, ಇನ್ನೊಂದು ಕೈಯಿಂದ ಅವಳ ಸೊಂಟ ಹಿಚುಕಿ ಕಿಟಲೆ ಮಾಡುತ್ತಿದ್ದಾನೆ. ನೀಲಿ ಮೈ ಬಣ್ಣ ಹೊಂದಿದ ಕೃಷ್ಣ ತೆಳು ಹಳದಿ ಪಂಚೆಯುಟ್ಟು, ಕೆಂಪುಶಾಲು ಧರಿಸಿದ್ದಾನೆ. ಟೊಪ್ಪಿಗೆ ಯಾಕಾರದ ಕಿರೀಟವು ತಲೆಯಲ್ಲಿದೆ. ಸ್ತ್ರೀಯು ತೆಳು ಹಸಿರು ವರ್ಣದ ಸೀರೆ ಉಟ್ಟು ಕೆಂಪುವರ್ಣದ ಕುಪ್ಪಸ ತೊಟ್ಟಿದ್ದಾಳೆ. ಸೀರೆ ಕುಪ್ಪಸಗಳು ಮಧ್ಯದಲ್ಲಿ ಯಾವುದೇ ನಕ್ಷೆ ಹೊಂದಿರದೇ ಚಪ್ಪಟೆ ವರ್ಣ ಲೇಪನ ಮಾಡಲಾಗಿದೆ.

III. ಬೆಣ್ಣೆ ಕಳ್ಳ ಕೃಷ್ಣನ ಇನ್ನೊಂದು ಚಿತ್ರ : ಮಜ್ಜಿಗೆ ಕಡೆಯುತ್ತಿರುವ ಗೋಪಿಕಾ ಸ್ತ್ರೀಯ ಚಿತ್ರದ ಕೆಳಗಡೆಗೆ ಬೆಣ್ಣೆ ಕದ್ದು ತಿನ್ನುತ್ತಲಿರುವ ಕೃಷ್ಣನ ಚಿಕ್ಕ ಚಿತ್ರವಿದೆ. ಬಾಲಕ ಕೃಷ್ಣನು ಬೆಣ್ಣೆ ತುಂಬಿದ ಗಡಿಗೆಯೊಂದನ್ನು ಕದ್ದು ತಂದು ಮುದ್ದೆ ಮುದ್ದೆಯಾಗಿ ಅದನ್ನು ತಿನ್ನುತ್ತಿದ್ದಾನೆ. ಸ್ತ್ರೀಯೊಬ್ಬಳು ಅದನ್ನು ಕಂಡು ಓಡಿಬಂದು ಬಡಿಗೆಯಿಂದ ಆತನನ್ನು ಹೊಡೆಯುತ್ತಿದ್ದಾಳೆ.

IV. ಯಶೋದೆಯೊಂದಿಗೆ ಮಗು ಕೃಷ್ಣ : ಇಲ್ಲಿರುವ ಮತ್ತೊಂದು ಕಮಾನಿನಲ್ಲಿ ಮಗು ಕೃಷ್ಣನನ್ನು ಎತ್ತಿ ಮುದ್ದಾಡುತ್ತಿರುವ ಯಶೋದೆಯ ಚಿತ್ರವಿದೆ. ಯಶೋಧೆಯು ಪೀಠವೊಂದರ ಮೇಲೆ ನಿಂತಿದ್ದು ತನ್ನ ಎರಡೂ ಕೈಗಳಿಂದ ಕೃಷ್ಣನನ್ನು ಎದೆಗೆ ಅಪ್ಪಿಕೊಂಡು ಆತನ ಕೆನ್ನೆಯನ್ನು ಮುದ್ದಿಸುತ್ತಿದ್ದಾಳೆ ಮಗು ಕೃಷ್ಣನು ನೀಲವರ್ಣದವನಾಗಿದ್ದರೆ, ತಾಯಿ ಹಳದಿ, ಕೆಂಪು ಮಿಶ್ರಿತ ಗೌರವರ್ಣದವಳಾಗಿದ್ದಾಳೆ. ನಡುವಿನಲ್ಲಿ ಉಡದಾರ ಧರಿಸಿದ ಕೃಷ್ಣ ನಗ್ನನಾಗಿದ್ದಾನೆ. ತಾಯಿ ಯಶೋದೆಯ ಮುಖಭಾವವು ಮಾತೃ ಅನುಭೂತಿಯಿಂದ ಕಂಗೊಳಿಸುತ್ತಿದೆ. ಕೊರಳು, ಕಿವಿ, ತಲೆ, ಕೈಕಾಲುಗಳಲ್ಲಿ ಆಭರಣಗಳು ತುಂಬಿವೆ. ತೆಳು ಹಸಿರು ವರ್ಣದ ಸೀರೆ, ಕೆಂಪುವರ್ಣದ ಕುಪ್ಪಸಗಳು ಅವಳಿಗೆ ಚನ್ನಾಗಿ ಒಪ್ಪಿವೆ. ಯಶೋದೆಯ ಅಕ್ಕಪಕ್ಕದಲ್ಲಿ ಎರಡು ನವಿಲುಗಳು ಚಿತ್ರದ ಸಂಯೋಜನೆಗೆ ತೂಕ ಒದಗಿಸಿವೆ. ಈ ನವಿಲುಗಳು ನೀಲವರ್ಣದಲ್ಲಿದ್ದು, ಸೂಕ್ಷ್ಮ ವಿವರಗಳಿಂದ ರಚಿಸಿವೆ. ಇಡೀ ಚಿತ್ರಕ್ಕೆ ರಚಿಸಲಾಗಿರುವ ಕಮಾನಿನಲ್ಲಿಯೂ ಹೂಬಳ್ಳಿಯ ನಕ್ಷೆ ಇದೆ.

V. ಕೊಳಲನೂದುವ ಕೃಷ್ಣನ ಚಿತ್ರ : ಮಗು ಕೃಷ್ಣನನ್ನು ಎತ್ತಿಕೊಂಡಿರುವ ಯಶೋದೆಯ ಚಿತ್ರದ ಬಲಗಡೆಗೆ ಕೃಷ್ಣನು ಕೊಳಲೂದುತ್ತಿರುವ ಚಿತ್ರವಿದೆ. ಇಲ್ಲಿ ಕೃಷ್ಣನು ಮರ ಒಂದರ ಕೆಳಗೆ ನಿಂತು ಗೋವು ಒಂದಕ್ಕೆ ಒರಗಿ ನಿಂತು ಕೊಳಲನ್ನು ನುಡಿಸುತ್ತಿದ್ದಾನೆ. ನಾಲ್ಕು ಕೈಗಳನ್ನು ಹೊಂದಿಂದ ನೀಲಮೇಘಶ್ಯಾಮ ವರ್ಣದ ಕೃಷ್ಣನು ಹಿಂದಿನ ಎರಡು ಕೈಗಳಲ್ಲಿ ಶಂಖ ಚಕ್ರಗಳನ್ನು ಹಿಡಿದಿದ್ದರೆ. ಮುಂದಿನ ಎರಡು ಕೈಗಳಲ್ಲಿ ಕೋಳಲನ್ನು ನುಡಿಸುತ್ತಿದ್ದಾನೆ. ಹಸಿರು ಪಂಚೆ ಉಟ್ಟು ಕೆಂಪು ಶಾಲು ಧರಿಸಿದ ಕೃಷ್ಣನ ತಲೆಯಲ್ಲಿ ಕಿರೀಟವೂ ಇದೆ. ಹಳದೀ ವರ್ಣದಲ್ಲಿರುವ ಗೋವು ಮೇಲಕ್ಕೆ ಎತ್ತಿದ ಕೃಷ್ಣನ ಬಲಗಾಲಿನ ಪಾದವನ್ನು ನೆಕ್ಕುತ್ತಲಿದೆ. ತನ್ಮಯತೆಯಿಂದ ಕೊಳಲು ನುಡಿಸುತ್ತಿರುವ ಕೃಷ್ಣನ ಭಂಗಿ ಆಕರ್ಷಕವಾಗಿದೆ. ಆತನ ಹಿಂದಿನ ಹಸಿರು ಗಿಡವಲ್ಲಿ ಹೂಗಳು ಕಾಯಿಗಳು ತುಂಬಿಕೊಂಡಿವೆ. ಚಿತ್ರದ ವರ್ಣವು ಅಲ್ಲಲ್ಲಿ ಉದುರಿಹೋಗಿ ಅಸ್ಪಷ್ಟವಾಗಿ ಕಾಣುವುದು ಇಂತಹ ಚಿತ್ರ ನರಗುಂದ, ಅಮ್ಮಿನಭಾವಿಯಲ್ಲೂ ಇದೆ.

ಕೊಳಲೂದುತ್ತಿರುವ ಕೃಷ್ಣನ ಬಲಗಡೆಗೆ ಗೋಪಬಾಲಕನೊಬ್ಬ ಗೋವುಗಳನ್ನು ಕಾಯುತ್ತಲಿದ್ದು, ಆ ಗೋವುಗಳೆಲ್ಲ ಕೃಷ್ಣನ ಮುರಳೀ ಗಾನಕ್ಕೆ ಮನಸೋತು ಅವನತ್ತಲೇ ಧಾವಿಸಿಬರುತ್ತಿವೆ. ಏಳು ಆಕಳು, ಎರಡು ಕರುಗಳು ಆ ಗುಂಪಿನಲ್ಲಿದ್ದು ಎಲ್ಲ ಗೋವುಗಳೂ ಒಂದೇ ಬಣ್ಣದಲ್ಲಿವೆ. ಗೋಪಬಾಲಕನು ತಲೆಗೆ ಉದ್ದನಾದ ಕುಲಾವಿ ಧರಿಸಿದ್ದು ಕೆಂಪು ಚಡ್ಡಿ ತೊಟ್ಟುಕೊಂಡು ಕೈಯಲ್ಲಿ ಉದ್ದನಾದ ಬಡಿಗೆ ಹಿಡಿದ್ದಿದ್ದಾನೆ. ದನಗಾಹಿ ಗೋಪಾಲಕರ ಇಂತಹ ಚಿತ್ರಗಳನ್ನು ನಿಪ್ಪಾಣಿಯ ರಾಜವಾಡೆಯಲ್ಲಿಯೂ ಕಾಣಬಹುದು.

VI. ಕೃಷ್ಣನು ಗೋಪಿಕಾ ಸ್ತ್ರೀಯರ ವಸ್ತ್ರಗಳನ್ನು ಅಪಹರಿಸಿದುದು : ಇಂತಹ ಚಿತ್ರಗಳು ಎರಡು ಕಡೆಗೆ ಇವೆ. ಪೂರ್ವಜನ್ಮದಲ್ಲಿ ಭಗವಂತನನ್ನು ಕುರಿತು ತಪಸ್ಸು ಮಾಡಿ ಸಿದ್ಧಿಯಾಗದ ಕಾರಣ ಈ ಜನ್ಮದಲ್ಲಿ ಗೋಪಿಕಾಸ್ತ್ರೀಯರಾಗಿ ಹುಟ್ಟಿ ಶ್ರೀ ಕೃಷ್ಣನ ಸೇವೆಸಾಕ್ಷಾತ್ಕಾರಗಳು ಎಂದಿಗೆ ಲಭಿಸುವವೋ ಎಂದು ಕಾದುಕೊಂಡಿದ್ದ ಗೊಲ್ಲರ ಹೆಂಗಸರು ಶ್ರೀಕೃಷ್ಣನ ರೂಪಲಾವಣ್ಯಗಳಿಗೆ ಮೋಹಿತರಾಗಿ ಪರವಶರಾಗುತ್ತಿದ್ದರು. ಒಂದುದಿನ ಕೃಷ್ಣನು ತಂಪಾದ ಬೆಳದಿಂಗಳು ಹೊತ್ತಿನಲ್ಲಿ ಮನೋಹರವಾಗಿ ವೇಣುಗಾನ ಮಾಡುತ್ತ ಸರೋವರದ ಬಳಿಬಂದು, ಅಲ್ಲಿ ಸ್ವಚ್ಛಂದವಾಗಿ ಜಲಕ್ರೀಡೆಯಾಡುತ್ತಿದ್ದ ಗೋಪಿಕಾಸ್ತ್ರೀಯರ ಬಳಿ ಬಂದನು. ಅವರು ದಡದ ಮೇಲೆ ಬಿಚ್ಚಿಟ್ಟ ತಮ್ಮ ವಸ್ತ್ರಗಳನ್ನು ಮೆಲ್ಲಗೇ ತೆಗೆದುಕೊಂಡು ಮರವನ್ನೇರಿಕುಳಿತ. ಜಲಕ್ರೀಡೆಯ ನಂತರ ತಮ್ಮ ವಸ್ತ್ರಗಳು ಕಾಣಲಾರದ್ದು ತಿಳಿದು ಗೋಪಿಯರು ಕೃಷ್ಣನ ಬಳಿಬಂದು ಅಂಗಲಾಚಿ ಆತನಿಂದ ವಸ್ತ್ರಪಡೆದುಕೊಳ್ಳುತ್ತಾರೆ.

ಚಿತ್ರದಲ್ಲಿ ಕೃಷ್ಣನು ಗೋಪಿಕಾಸ್ತ್ರೀಯರ ವಸ್ತ್ರಗಳನ್ನು ಅಪಹರಿಸಿಕೊಂಡು ಮರವನ್ನೇರಿದ್ದಾನೆ. ವಸ್ತ್ರಗಳನ್ನು ಮರವಲ್ಲಿ ಅಲ್ಲಲ್ಲಿ ಟೊಂಗೆಗಳಿಗೆ ಸಿಕ್ಕಿಸಿ. ತಾನು ಕೊಳಲನ್ನೂದುತ್ತ ಕುಳಿತಿದ್ದಾನೆ. ಕೆಳಗೆ ಮರದ ಸುತ್ತಲೂ ಗೋಪಿಕಾ ಸ್ತ್ರೀಯರು ತಮ್ಮ ವಸ್ತ್ರಗಳನ್ನು ಕೊಡಲು ಕೃಷ್ಣನಿಗೆ ಪರಿಪರಿಯಿಂದ ಬೇಡುತ್ತಿದ್ದಾನೆ. ಕೆಲವರು ಕೈ ಮೇಲೆ ಮಾಡಿ ನಿವೇದಿಸಿಕೊಳ್ಳುತ್ತಿದ್ದರೆ ಮತ್ತೆ ಕೆಲವರು ಕೈಮುಗಿದು ಭಕ್ತಿ ಪೂರ್ವಕವಾಗಿ ನಮಿಸುತ್ತಿದ್ದಾರೆ. ಮೂವರು ಸ್ತ್ರೀಯರು ಕೃಷ್ಣನ ಕೊರಳಿಗೆ ಹಾಕಲು ಹೂಮಾಲೆಯನ್ನು ತಂದಿದ್ದಾರೆ. ಓರ್ವ ಗೋಪಿಕಾಸ್ತ್ರೀಯಂತೂ ಮರವನ್ನೇ ಏರುತ್ತಿದ್ದಾಳೆ. ಆಕೆ ಮರವನ್ನು ಅಪ್ಪಿಕೊಂಡಿದ್ದು ಪ್ರಕೃತಿ ಪುರುಷರ ಸಮಾಗಮದ ಸಂಕೇತವಾಗಿದೆ. ಆ ಮೂಲಕ ಗೋಪಿಕಾಸ್ತ್ರೀಯರ ಆಸೆಯನ್ನು ಕೃಷ್ಣ ಪೂರೈಸಿದನು ಎಂದು ಇಲ್ಲಿ ಸಾಂಕೇತಿಕವಾಗಿ ತೋರಿಸಲಾಗಿದೆ. ಗೋಪಿಕಾಸ್ತ್ರೀಯರು ಇಲ್ಲಿ ಬಟ್ಟೆಯನ್ನು ಧರಿಸಿದ್ದಾರೆ. ತಿಳಿಕೆಂಪು ತಿಳಿಹಸಿರು ವರ್ಣದ ಸೀರೆ ಕುಪ್ಪಸಗಳನ್ನು ತೊಟ್ಟುಕೊಂಡು ಈ ಸ್ತ್ರೀಯರು ಎಲ್ಲರೂ ಒಂದೇ ರೀತಿಯಲ್ಲಿ ಕೂದಲನ್ನು ಆಭರಣಗಳನ್ನು ಧರಿಸಿದ್ದು ಹಣೆಯಲ್ಲಿ ದುಂಡಾದ ಕೆಂಪು ಕುಂಕುಮದ

ಪೊಟ್ಟು ಇಟ್ಟುಕೊಂಡಿದ್ದಾರೆ. ಅವರು ನಿಂತ ಕೆಳಗಿನ ಭಾಗದಲ್ಲಿ ನೀರನ್ನು ತೋರಿಸಿದ್ದು ಅದರಲ್ಲಿ ಮೀನುಗಳು, ನೀರಾಮೆ. ಹಾವುಗಳಂತಹ ಜಲಚರಗಳನ್ನು ಚಿತ್ರಿಸಿದೆ.

ಗಿಡದ ಮೇಲೆರಿ ಕುಳಿತುಕೊಂಡಿರುವ ನೀಲವರ್ಣದ ಕೃಷ್ಣನು ಹಳದೀ ಪಂಚೆ ಉಟ್ಟು ಕೆಂಪುಶಾಲು ಧರಿಸಿದ್ದಾನೆ. ಗಿಡದ ಟೊಂಗೆಯಲ್ಲಿ ಅಲ್ಲಲ್ಲಿ ಗೋಪಿಯರಿಂದ ಕದ್ದ ಕೆಂಪು. ಹಳದಿ. ಬಿಳಿ, ಸೀರೆಗಳನ್ನು ಚಿತ್ರಿಸಲಾಗಿದೆ. ಗಿಡದಲ್ಲಿ ಎಲೆಹೂಗಳು ತುಂಬಿದ್ದು. ಗಿಡದ ತುಂಬಾ ಅಳಿಲು (ಇಣಚಿ)ಗಳು ಓಡಾಡುತ್ತಿವೆ. ಗಿಡದ ಬೊಡ್ಡೆಗೆ ಹಾವೊಂದು ಸುತ್ತಿಕೊಂಡಿದ್ದು. ಅದರ ಬಾಲ ಕೃಷ್ಣನ ಕೈಯಲ್ಲಿದೆ. ಇಲ್ಲಿರುವ ಉತ್ತಮ ಚಿತ್ರಗಳಲ್ಲಿ ಇದೂ ಒಂದಾಗಿದೆ. ರೇಖಾ ಪ್ರಧಾನವಾದ ಈ ಚಿತ್ರದಲ್ಲಿ ಕೆಲವು ಶಕ್ತಿಯುತವಾದ ರೇಖೆಗಳಿದ್ದರೆ. ಕೆಲವು ಕಡೆ ಸಪ್ಪೆ ಎನಿಸುವ ರೇಖೆಗಳು ಇವೆ. ಸಂಯೋಜನಾ ದೃಷ್ಟಿಯಿಂದ ಯೋಜನಾ ಬದ್ಧ ಕೃತಿ ಇದಾಗಿದೆ.

VII. ಅರ್ಜುನ ಸುಧನ್ವರ ಯುದ್ಧದ ದೃಶ್ಯ : ಇಲ್ಲಿನ ಒಂದು ವಿಶಾಲ ಅಂಕಣದಲ್ಲಿ ಅರ್ಜುನ ಸುಧನ್ವರ ಯುದ್ಧದ ಚಿತ್ರವನ್ನು ಬಿಡಿಸಲಾಗಿದೆ. ಧರ್ಮರಾಯನು ಅಶ್ವಮೇಧಯಾಗ ಮಾಡುವ ಸಂದರ್ಭದಲ್ಲಿ ಯಜ್ಞಾಶ್ವವು ಚಂಪಕಾನಗರ ದೊಳಗೆ ಪ್ರವೇಶಿಸುವುದು. ಆ ನಗರದ ದೊರೆ ಹಂಸಧ್ವಜನ ನಾಲ್ಕು ಮಕ್ಕಳಲ್ಲಿ ಅತ್ಯಂತ ಪರಾಕ್ರಮಿಯಾದ ಮತ್ತು ಕೃಷ್ಣ ಭಕ್ತನಾದ ಸುಧನ್ವನು ಯಜ್ಞ ಕುದುರೆಯನ್ನು ಕಟ್ಟಿ ಬೆಂಗಾವಲಿಗೆ ಬಂದ ಅರ್ಜುನನೊಡನೆ ಭೀಕರ ಯುದ್ಧ ಮಾಡುವನು. ಸುಧನ್ವನ ಅತುಲ ಪರಾಕ್ರಮದಿಂದ ಅರ್ಜುನನು ಹಿಮ್ಮೆಟ್ಟಿ ಕೃಷ್ಣನೇ ಮತ್ತೊಮ್ಮೆ ಅರ್ಜುನನ ಸಾರಥಿಯಾಗಿ ಬರಬೇಕಾಗುವುದು. ಆಮೇಲೆ ಮಾತ್ರ ಅರ್ಜುನನಿಗೆ ಜಯಲಭಿಸುವುದು.

ಇಲ್ಲಿನ ಚಿತ್ರದಲ್ಲಿ ಅರ್ಜುನನೂ ಕೃಷ್ಣ ಭಕ್ತನಾದ ಸುಧನ್ವನೂ ಎದುರು ಬದುರಾಗಿ ರಥದಲ್ಲಿ ಕುಳಿತು ಯುದ್ಧಕ್ಕೆ ತೊಡಗಿಕೊಂಡಿದ್ದಾರೆ. ಅರ್ಜುನನ ರಥವನ್ನು ಕೃಷ್ಣನೇ ಸಾರಥಿಯಾಗಿ ನಡೆಸುತ್ತಿದ್ದಾನೆ. ಅರ್ಜುನನ ರಥದ ಮೇಲಿರುವ ಧ್ವಜದಲ್ಲಿ ಕಪಿರಾಯನ ಚಿತ್ರವಿದ್ದರೆ ಸುಧನ್ವನ ರಥದ ಧ್ವದಲ್ಲಿ ಹಂಸಪಕ್ಷಿ ಇದೆ. ಇಬ್ಬರ ರಥಗಳೂ ಸಾಮಾನ್ಯವಾಗಿ ಒಂದೇ ಮಾಟದಲ್ಲಿದ್ದರೂ ಸುಧನ್ವನ ರಥವು ಹೆಚ್ಚು ಸುಂದರವಾಗಿದೆ. ರಥದ ಗಾಲಿ ಎಂಟೆಂಟು ಹಲ್ಲುಗಳನ್ನು ಹೊಂದಿವೆ. ಎರಡೂ ರಥಗಳು ಹಳದೀ ವರ್ಣದಲ್ಲಿದ್ದು ಅವುಗಳ ಮೇಲೆ ಹೂಬಳ್ಳಿಯ ನಕ್ಷೆಯನ್ನು ಕಪ್ಪು ರೇಖೆಯಿಂದ ರಚಿಸಲಾಗಿದೆ. ಅರ್ಜುನನ ರಥದ ಕುದುರೆಗಳು ಮತ್ತು ಸಾರಥಿಯಾದ ಕೃಷ್ಣನ ಬಣ್ಣ ಒಂದೇ ರೀತಿ ಕಡುನೀಲಿಯಾಗಿದ್ದರೆ ಸುಧನ್ವನ ರಥದ ಕುದುರೆಗಳು ಹಳದಿ ವರ್ಣದಲ್ಲಿವೆ. ಅರ್ಜುನ ತೆಳುಹಳದೀ ವರ್ಣದ ಮೈ ಬಣ್ಣ ಹೊಂದಿದ್ದರೆ ಕೃಷ್ಣ ಭಕ್ತನಾದ ಸುಧನ್ವನು ತೆಳುನೀಲಿ ವರ್ಣದ ಮೈಬಣ್ಣ ಉಳ್ಳವನಾಗಿದ್ದಾನೆ. ಕುದುರೆಗಳು ಮುಂಗಾಲು ಮೇಲೆತ್ತಿ ರಭಸದಿಂದ ಚಲಿಸುತ್ತವೆ ಎಂಬ ಕಲ್ಪನೆ ಬರುವಂತೆ ಚಿತ್ರಿಸಲಾಗಿದೆ. ವರ್ಣವಿನ್ಯಾಸ, ವರ್ಣಗಳ ಹಂಚಿಕೆ, ಆಕೃತಿಗಳ ಸಂಯೋಜನೆ, ರೇಖಾ ವಿನ್ಯಾಸ ಹೀಗೆ ಎಲ್ಲ ದೃಷ್ಟಿಯಿಂದಲೂ ಇಲ್ಲಿನ ಚಿತ್ರಗಳಲ್ಲೇ ಈ ಕೃತಿ ಅತ್ಯಂತ ಗಮನಾರ್ಹ ವೆನಿಸುತ್ತದೆ. ಯುದ್ಧಾಳುಗಳು ಠೀವಿಯಿಂದ ರಥದಲ್ಲಿ ಕುಳಿತಿರುವ ರೀತಿ, ಕುದುರೆಗಳು ನೆಗೆದಿರುವ ಪರಿ, ಸಾರಥಿಗಳ ಚಲನವಲನ ಮುಂತಾದವು ಚಿತ್ರಕ್ಕೆ ಜೀವಂತಿಕೆ, ಚಲನೆಯನ್ನು ಒದಗಿಸಿವೆ.

VIII. ಗಂಧರ್ವರ ಚಿತ್ರಗಳು : ಕೋಣೆಯ ಮೇಲ್ಭಾಗದ ಗೋಡೆಯಲ್ಲಿ ಎಡಬಲಗಳಲ್ಲಿ ಇಬ್ಬರು ಗಂಧರ್ವ ಸ್ತ್ರೀಯರನ್ನು ಚಿತ್ರಸಲಾಗಿದೆ. ಈ ಗಂಧರ್ವಸ್ತ್ರೀಯರು ತಲೆಯಮೇಲೆ ಕಿರೀಟ ಧರಿಸಿದ್ದಾರೆ. ಪಕ್ಷಿಯಂತೆ ರೆಕ್ಕೆಗಳನ್ನು ಹೊಂದಿದ ಇವರು ನೆಲಮುಟ್ಟುವಂತಹ ಉದ್ದವಾದ ಜಡೆಗಳನ್ನೂ ಉಳ್ಳವರಾಗಿದ್ದಾರೆ. ಜಡೆಗಳ ತುದಿಗಳಲ್ಲಿ

ಗಂಟೆಯಂತಹ ಕುಚ್ಚುಗಳು ತೂಗುತ್ತಿವೆ. ಕೈಗಳನ್ನು ಮೇಲೆತ್ತಿ ಕಾಲನ್ನು ಕತ್ತರಿಯಾಗಿಟ್ಟು ಕುಣಿಯುತ್ತಿರುವರು. ಕೈಗಳಲ್ಲಿ ಗಾಲಿಯಂತಹ ದುಂಡಾದ ಗೆಜ್ಜೆಯ ಆಭರಣ ಹಿಡಿದುಕೊಂಡು ಬಾರಿಸುತ್ತಿದ್ದಾರೆ. ಬಗಲಗಡೆಯವಳು ಬಿಳಿ ಸೀರೆ ನೀಲಿ ಕುಪ್ಪಸ ಧರಿಸ್ಸಿರೆ. ಎಡಗಡೆಯ ಗಂಧರ್ವ ಸ್ತ್ರೀ ನೀಲಿ ಸೀರೆ ಉಟ್ಟು ಕೆಂಪು ಕುಪ್ಪಸ ತೊಟ್ಟಿದ್ದಾಳೆ. ಬಲಗಡೆಯ ಸ್ತ್ರೀಯ ಸಂಗಡ ಎರಡು ನವಿಲುಗಳು ಕುಣಿಯುತ್ತಿದ್ದರೆ. ಎಡಗಡೆಯವಳ ಜೊತೆಗೆ ಎರಡು ಜಿಂಕೆಗಳು ನರ್ತಿಸುತ್ತಿವೆ. ಜಿಂಕೆಗಳು ಕಪ್ಪು ಕೋಡು ಹೊಂದಿ ಹಳದಿ ಮತ್ತು ನಸು ಕಂದು ವರ್ಣದ ಮೈ ಬಣ್ಣದಲ್ಲಿವೆ. ಈ ಗಂಧರ್ವ ಸ್ತ್ರೀ ಚಿತ್ರಗಳು ಪಾಶ್ಚಾತ್ಯ ದೇಶಗಳ ಏಂಜೆಲ್ಸ್‌ಗಳನ್ನು ಹೋಲುತ್ತವೆ.

IX. ಕೃಷ್ಣನ ಆಸ್ಥಾನದ ದೃಶ್ಯ : ಇಲ್ಲಿನ ಒಂದು ಆಸ್ಥಾನ ದೃಶ್ಯದಲ್ಲಿ ಕೃಷ್ಣನು ಮಡದಿಯನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡಿರುವ ಚಿತ್ರವಿದೆ. ಸುಂದರವಾದ ದೊಡ್ಡ ದೊಡ್ಡ ಕಂಬಗಳನ್ನು ಹೊಂದಿದ ರಾಜದರ್ಬಾರದಲ್ಲಿ ಕೃಷ್ಣನು ಉನ್ನತ ಪೀಠವೊಂದರ ಮೇಲೆ ಕುಳಿತಿದ್ದಾನೆ. ಒಂದು ಕಾಲನ್ನು ಮೇಲೆ ಮಡಚಿಕೊಂಡು, ಇನ್ನೊಂದು ಕಾಲನ್ನು ಕೆಗಳೆ ಇಳಿಬಿಟ್ಟುಕೊಂಡು ಕುಳಿತ ಕೃಷ್ಣನ ಎಡ ತೊಡೆಯ ಮೇಲೆ ಆತನ ಮಡದಿ ಕುಳಿತಿದ್ದಾನೆ. ಕೆಳಗೆ ಇಳಿಬಿಟ್ಟ ಕೃಷ್ಣನ ಕಾಲನ್ನು ಗರುಡನು ಒತ್ತುತ್ತ ಸೇವೆಯಲ್ಲಿ ತೊಡಗಿದ್ದಾನೆ. ಕೃಷ್ಣನ ಹಿಂದೆ ಕೆಲವು ಸ್ತ್ರೀಯರು ಛತ್ರ ಚಾಮರ ಹಿಡಿದುಕೊಂಡಂತೆ ಚಿತ್ರಿಸಿದೆ. ಕೃಷ್ಣನ ಮುಂಭಾಗದ ವಿಶಾಲ ಸ್ಥಳದಲ್ಲಿ ಸ್ತ್ರೀಯರ ಸಮೂಹವು ನೆರೆದಿದ್ದು ಭಕ್ತಿಯಿಂದ ಆತನನ್ನು ಭಜಿಸುತ್ತಿದ್ದಾರೆ. ಕೃಷ್ಣನಿಗೆ ಅತ್ಯಂತ ಸಮೀಪವಾಗಿ ಒಬ್ಬ ವೃದ್ಧೆಯು ತಂಬೂರಿ ಮೀಟುತ್ತ ಆತನ ಗುಣಗಾಣದಲ್ಲಿ ತೊಡಗಿದ್ದರೆ. ಆಕೆಯ ಹಿಂದಿನ ಸ್ತ್ರೀಯರು ಕೈಮುಗಿದು ನಮಿಸುತ್ತಿದ್ದಾರೆ. ಇವರಿಗಿಂತ ಮೇಲಿನ ಸಾಲಿನಲ್ಲಿರುವ ಮೂವರು ಸ್ತ್ರೀಯರಲ್ಲಿ ಇಬ್ಬರು ಆರತಿಯನ್ನು ಹಿಡಿದಿದ್ದಾರೆ. ಇಲ್ಲಿ ಮೂರು ಸಾಲುಗಳಲ್ಲಿ ಸ್ತ್ರೀಯರು ನೆರೆದಿದ್ದು ಕೆಳಗಿನ ಸಾಲಿನಲ್ಲಿ ಐವರು ಸ್ತ್ರೀಯರು ಪದ್ಮಾಸನ ಹಾಕಿ ಕೈಮುಗಿದುಕೊಂಡು ಕುಳಿತಿರುವರು. ಮಧ್ಯದ ಸಾಲಿನಲ್ಲಿ ಕೊನೆಯವಳು ಸೇವಂತಿಗೆ ಹೂಮಾಲೆಯೊಂದನ್ನು ಹಿಡಿದುಕೊಂಡು ಕೃಷ್ಣನಿಗೆ ಹಾಕಲು ಬಂದಿದ್ದಾಳೆ. ಈ ಸ್ತ್ರೀ ಸಮೂಹದಲ್ಲಿ ಹದಿಮೂರು ಜನ ಮಹಿಳೆಯರಿದ್ದು ಕೆಂಪು, ಹಳದಿ, ಬಿಳಿ ಸೀರೆಯನ್ನುಟ್ಟುಕೊಂಡಿದ್ದಾರೆ. ಎಲ್ಲ ಸ್ತ್ರೀಯರೂ ಮೂಗಿನಲ್ಲಿ ರಿಂಗಿನಂತಹ ಆಭರಣ ಧರಿಸಿದ್ದಾರೆ. ಎಲ್ಲರೂ ಒಂದೇ ರೀತಿಯ ಕೇಶವಿನ್ಯಾಸ ಹೊಂದಿದ್ದು ತುರುಬನ್ನು ಕಟ್ಟಿಕೊಂಡಿರುವರು. ಅರಮನೆಯ ಒಳಭಾಗವನ್ನು ತೋರಿಸುವ ಈ ಚಿತ್ರ ಕೃಷ್ಣನನ್ನು ಪ್ರತ್ಯಕ್ಷಕಂಡು ಭಕ್ತಿಯಿಂದ ಪೂಜಿಸುವ ಆತನ ಆಸ್ಥಾನದ ದೃಶ್ಯವಾಗಿದೆ. ಸುಮಾರು ಇಪ್ಪತ್ತು ಮನುಷ್ಯಾಕೃತಿಗಳನ್ನು ಹೊಂದಿದ ಈ ಚಿತ್ರಕೃತಿಯು ಉತ್ತಮ ಸಂಯೋಜನೆಯಿಂದ ಕೂಡಿದೆ. ಆಕೃತಿಗಳನ್ನು ಹಂಚಿಹಾಕಿದ ಪರಿ ಆಕರ್ಷಕ ವಾಗಿದ್ದರೂ, ಚಿತ್ರದ ಎಡಭಾಗಕ್ಕೆ ಹೆಚ್ಚಿನ ಆಕೃತಿಗಳು ಒಂದೇ ಕಡೆಗೆ ಬಂದು ಆ ಕಡೆಗೆ, ಕಣ್ಣಿನ ನೋಟ ಹೆಚ್ಚಾಗಿ ಹರಿಯುವುದು. ಚಿತ್ರದ ಪ್ರಧಾನ ವ್ಯಕ್ತಿ ಕೃಷ್ಣನಾಗಿದ್ದರೂ, ಸ್ತ್ರೀ ಸಮೂಹವೇ ನೋಡುಗನ ಮೊದಲ ದೃಷ್ಟಿ ಸೆಳೆಯುವುದು. ಚಿತ್ರದಲ್ಲಿ ಕೆಂಪುವರ್ಣ ಅಧಿಕವಾಗಿ ಬಳಕೆಗೊಂಡಿದ್ದು ಅದಕ್ಕೆ ಸಂವಾದಿಯಾಗಿ ಹಳದೀ ವರ್ಣವನ್ನು ಬಳಸಿದ್ದರೂಕೂಡಾ ಕೆಂಪೇ ಕಣ್ಣಿಗೆ ಹೊಡೆದು ಕಾಣುತ್ತದೆ. ಚಿತ್ರದ ಹೊರರೇಖೆಗಳನ್ನು ಕಪ್ಪು ವರ್ಣದಿಂದ ಎಳೆಯಲಾಗಿದೆ.

*೨. ಧಾರ್ಮಿಕೇತರ ಚಿತ್ರಗಳು :* ಈ ಶಯನ ಗೃಹದಲ್ಲಿ ಧಾರ್ಮಿಕ ಚಿತ್ರಗಳಿದ್ದಂತೆ, ಧಾರ್ಮಿಕೇತರ ಚಿತ್ರಗಳೂ ರಚನೆಯಾಗಿದ್ದು. ಜಿಂಕೆಯೊಂದಿಗಿರುವ ಮಹಿಳೆ, ಅಲಂಕಾರಿಕ ಗಿಡಗಳು, ಹೂಬಳ್ಳಿಯ ನಕ್ಷೆಗಳಂತಹ ವಿನ್ಯಾಸಗಳು ಈ ವಿಧದಲ್ಲಿ ಒಳಗೊಳ್ಳುತ್ತವೆ.

I. ಜಿಂಕೆಗಳೊಂದಿಗಿರುವ ಮಹಿಳೆ : ಈ ಚಿತ್ರವು ಕಮಾನಿನಾಕಾರದ ಸ್ಥಳವಿನ್ಯಾಸದಲ್ಲಿ ರಚನೆಯಾಗಿದ್ದು, ಮಹಿಳೆ ಚಿಕ್ಕ ಪೀಠ ಒಂದರಮೇಲೆ ನಿಂತಿದ್ದಾಳೆ. ಮಹಿಳೆಯ ಕೆಳಭಾಗದಲ್ಲಿ ಎಡಬಲಗಳಲ್ಲಿ ಎರಡು ಜಿಂಕೆಗಳು ಇದ್ದು ಅವು ಮುಖಮೇಲೆ ಮಾಡಿ ಮಹಿಳೆಯನ್ನು ನೋಡುತ್ತಿವೆ. ಜಿಂಕೆಗಳು ದ್ವಿವರ್ಣದಲ್ಲಿ ರಚಿಸಿದ್ದು ಬೆನ್ನಿನ ಭಾಗದಲ್ಲಿ ತೆಳುಹಸಿರು ವರ್ಣವಿದೆ. ದೇಹದ ಉಳಿದ ಭಾಗದಲ್ಲಿ ಹಳದಿವರ್ಣವಿದ್ದು ಕೋಡುಗಳು ಕಪ್ಪಾಗಿವೆ. ಮಹಿಳೆಯು ತನ್ನ ಬಲಗೈಯನ್ನು ಗಲ್ಲದ ಮೇಲೆ ಇಟ್ಟುಕೊಂಡು ಕತ್ತು ಕೊಂಕಿಸಿ ವಯ್ಯಾರದಿಂದ ನಿಂತಿದ್ದಾಳೆ. ಕಿವಿ, ಮೂಗು, ಕೊರಳು, ಕಾಲು, ಕೈಗಳಲ್ಲಿ ಆಭರಣಗಳಿವೆ. ತಲೆಗೂದಲನ್ನು ತುರುಬಾಗಿ ಕಟ್ಟಿಕೊಂಡಿದ್ದು ಅದಕ್ಕೆ ತಲೆಯನ್ನು ಆಭರಣಗಳಿಂದ ಶೃಂಗರಿಸಲಾಗಿದೆ. ಗೌರವರ್ಣದ ಸೀರೆ. ತೆಳುಹಸಿರುವರ್ಣದ ಕುಪ್ಪಸಗಳು ವರ್ಣಹೊಂದಾಣಿಕೆಯಿಂದ ಕೂಡಿದೆ. ಮಹಿಳೆಯ ಸುತ್ತಲೂ ಇರುವ ಕಮಾನಿನಲ್ಲಿ ಕೆಂಪುಹೂಗಳ ನಕ್ಷೆಗಳು ತುಂಬಿವೆ. ಮಹಿಳೆಯ ಕಣ್ಣುಗಳು ಗುಂಡಾಗಿದ್ದು, ಗದ್ದದ ಮೇಲೆ ಹಚ್ಚೆಯ ಚಿತ್ರವಿದೆ. ಕೊರಳು. ಕೈ. ತಲೆಗಳಂತೆ. ಕಿವಿಯಲ್ಲಿಯೂ ದೊಡ್ಡ ಆಭರಣಗಳಿವೆ.

II. ಅಲಂಕಾರಿಕ ಗಿಡಗಳು : ಈ ಕೋಣೆಯ ಕಿಟಕಿಯೊಂದರ ಎಡಬಲಗಳಲ್ಲಿ ಎರಡು ಅಲಂಕಾರಿಕ ಗಿಡಗಳನ್ನು ರಚಿಸಿದ್ದು ಅವು ಸೈಪ್ರೈಸ್ ವೃಕ್ಷವನ್ನು ಹೋಲುತ್ತವೆ. ಎಲೆಯಾಕಾರದಲ್ಲಿ ಉದ್ದಕ್ಕೆ ಇರುವ ಈ ಗಿಡಗಳ ತುದಿಯಲ್ಲಿ ಒಂದೊಂದು ಹಣ್ಣುಗಳಾಗಿವೆ. ಬೊಡ್ಡೆಯಲ್ಲಿ ಪ್ರತ್ಯೇಕವಾದ ನಾಲ್ಕು ಎಲೆಗಳಿದ್ದು, ಗಿಡದ ಕಾಂಡ ಎಲೆ. ಟೊಂಗೆ ಎಲ್ಲವೂ ಒಂದೇ ತೆರನಾದ ಹಸಿರುವರ್ಣದಿಂದ ರಚಿಸಿವೆ. ಈ ಗಿಡದಲ್ಲಿ ಕೆಂಪು ಹೂಗಳು, ಹಸಿರು ಮತ್ತು ನೀಲಿವರ್ಣದ ಎಲೆಗಳನ್ನು ರಚಿಸಲಾಗಿದೆ. ಹೂಬ್ಬಳ್ಳಿಯ ನಕ್ಷೆಯನ್ನು ಬರೀಗೋಡೆಯ ಮೇಲೆ ಅಲ್ಲದೇ ಕೋಣೆಯ ಮೇಲ್ಛಾವಣಿಯಲ್ಲೂ ಬರೆಯಲಾಗಿದೆ. ಇಡೀ ಗೋಡೆಗಳೇ ಒಂದು ಕಲಾ ಕೃತಿ ಎಂಬಂತೆ ಭಾವಿಸಿ ಪ್ರತಿಯೊಂದು ದಿಕ್ಕಿನ ಗೋಡೆಯ ನಾಲ್ಕು ಬದಿಗಳಲ್ಲೂ ಹೂಬಳ್ಳಿ ನಕ್ಷೆ ರಚಿಸಲಾಗಿದೆ.

III. ಅಲಂಕಾರಿಕ ಹೂಕುಂಡಗಳು : ಈ ಕೋಣೆಯಲ್ಲಿ ಅಲಂಕಾರಿಕ ಗಿಡಗಳಂತೆ ಅಲಂಕಾರಿಕ ಹೂ ಕುಂಡಗಳನ್ನು ಅಲ್ಲಲ್ಲಿ ರಚಿಸಿದ್ದಾರೆ. ಈ ಹೂಕುಂಡಗಳು ವೈವಿಧ್ಯಮಯವಾಗಿದ್ದು ಅಷ್ಟೇ ಆಕರ್ಷಕವಾಗಿಯೂ ಇವೆ. ಕುಂಡಗಳಲ್ಲಿ ಬೆಳೆದ ಬೃಹತ್‌ಗಿಡಗಳಲ್ಲಿ ಕೆಂಪು. ಹಳದಿ. ನೀಲಿ. ನಸುಗೆಂಪು, ವರ್ಣದ ಹೂಗಳು ಅರಳಿವೆ. ಹೂಗಳು ದೊಡ್ಡವು ಸಣ್ಣವು ಹೀಗೆ ಬೇರೆ ಬೇರೆ ತರಹದ್ದು ಇವೆ. ಈ ಹೂಗಿಡಗಳಲ್ಲಿ ಗಿಳಿ, ಗೊರವಂಕಗಳು ತುಂಬಿಕೊಂಡು ಚಿಲಿಪಿಲಿಗುಟ್ಟುತ್ತಿವೆ. ಪ್ರತಿಯೊಂದು ಹೂ ಕುಂಡದ ಎಡಬಲಗಳಲ್ಲಿ ನವಿಲುಗಳು ಇದ್ದು ಅದರ ಪಕ್ಕದಲ್ಲಿರುವ ಪಾತ್ರೆಯಿಂದ ಹಣ್ಣುಗಳನ್ನು ಕುಕ್ಕಿ ತಿನ್ನುತ್ತಿವೆ. ಹೂ ಕುಂಡದ ಮೇಲೆ ರೇಖಾ ಕೃತಿಯಿಂದ ಕಪ್ಪು ವರ್ಣದಲ್ಲಿ ನಕ್ಷೆ ಬಿಡಿಸಲಾಗಿದೆ.

IV. ಹೂಬಳ್ಳಿಯ ನಕ್ಷೆಗಳು : ಅಲಂಕಾರಿಕಗಿಡ. ಮತ್ತು ಹೂ ಕುಂಡಗಳಂತೆ ಹೂಬಳ್ಳಿ ನಕ್ಷೆಗಳನ್ನೂ ಇಲ್ಲಿ ರಚನೆಮಾಡಲಾಗಿದೆ. ಇಂತಹ ನಕ್ಷಾ ಚಿತ್ರಕ್ಕೆ ಪೂರಕವಾಗಿ ಚಿತ್ರಗಳ ಅಂಚುಗಳಲ್ಲಿ ಇಲ್ಲವೇ ವಸ್ತುಗಳ ಮೇಲೆ. ಹಾಗೂ ಬಟ್ಟೆಗಳ ಮೇಲೆ ಕಂಡುಬರುತ್ತವೆ. ಇದಲ್ಲದೇ ಮೇಲ್ಛಾವಣಿಯಲ್ಲಿ ಮತ್ತು ಗೋಡೆಯ ಮೇಲ್ಭಾಗದಲ್ಲಿ ಹೂಬ್ಬಳ್ಳಿಯ ನಕ್ಷೆ ರಚಿಸಲಾಗಿದೆ.

***II. ಸ್ನಾನಗೃಹದ ಚಿತ್ರಗಳು:*** ಸ್ನಾನಗೃಹದ ಈ ಚಿತ್ರಗಳು ಶಯನಗೃಹದ ಚಿತ್ರಗಳಿಗಿಂತ ಹೆಚ್ಚು ಕಲಾತ್ಮಕವಾಗಿವೆ. ರೇಖಾವಿನ್ಯಾಸ. ವರ್ಣಗಾರಿಕೆ, ಸಂಯೋಜನಾ ದೃಷ್ಟಿ ಹೀಗೆ ಎಲ್ಲ ದೃಷ್ಟಿಕೋನಗಳಿಂದಲೂ ಈ ಚಿತ್ರಗಳು

ಮೇಲೆನಿಸುತ್ತವೆ. ಆ ಕೃತಿಗಳು ಮಾತ್ರ ಶಯನಗೃಹದ ಆಕೃತಿಗಳಿಗಿಂದ ಪ್ರಮಾಣದಲ್ಲಿ ಚಿಕ್ಕವಾಗಿವೆ. ಶಯನಗೃಹದಲ್ಲಿರುವ ಚಿತ್ರಗಳು ಗೋಡೆಯಲ್ಲಿ ಹೆಚ್ಚಿನ ಸ್ಥಳ ಖಾಲಿ ಬಿಡದೇ ಸ್ವಲ್ಪ ನಿಬಿಡವಾಗಿ ಗುಂಪಾಗಿ ರಚನೆಯಾಗಿವೆ. ಆದರೂ ಕೆಲವು ಭಾಗದಲ್ಲಿ ಇಲ್ಲಿಯೂ ಗೋಡೆಯ ಬೋಳುತನವನ್ನು ನೋಡಬಹುದು ಶಯನಗೃಹದಲ್ಲಿನ ಚಿತ್ರಗಳಲ್ಲಿ ಕೆಂಪು. ಹಳದಿ. ನೀಲಿ. ಮೂರುವರ್ಣಗಳನ್ನು ಪ್ರಧಾನವಾಗಿ ಬಳಸಿದ್ದರೆ ಇಲ್ಲಿನ ಚಿತ್ರಗಳಲ್ಲಿ ವರ್ಣಗಳ ವಿನ್ಯಾಸ ಉತ್ತಮವಾಗಿದೆಯಲ್ಲದೇ ಕೆಂಪು, ಹಳದಿ, ನೀಲಿ, ವರ್ಣಗಳ ಜೊತೆಗೆ ಬೇರೆ ಬೇರೆ ಮಿಶ್ರವರ್ಣಗಳನ್ನು ಬಳಸಿದ್ದಾರೆ. ಶಯನಗೃಹದ ಚಿತ್ರಗಳು ಇನ್ನೂ ಚನ್ನಾಗಿಯೇ ಇದ್ದು ಬಹಳ ನಾಶವಾಗಿಲ್ಲ. ಆದರೆ ಸ್ನಾನಗೃಹದ ಈ ಚಿತ್ರಗಳು ಹೆಚ್ಚಾಗಿ ನಾಶವಾಗಿದ್ದು. ಕೆಲವು ಚಿತ್ರಗಳ ಕುರಿತು ಹೇಳಲು ಬರದಷ್ಟು ಕೆಟ್ಟುಹೋಗಿವೆ.

ಸ್ನಾನಗೃಹದ ಚಿತ್ರಗಳನ್ನೂ ಸಹಿತ ಈ ಕೆಳಗಿನಂತೆ ವಿಂಗಡಿಸಬಹುದು :

೧. ಧಾರ್ಮಿಕ ಚಿತ್ರಗಳು

೨. ಧಾರ್ಮಿಕೇತರ ಚಿತ್ರಗಳು

*೧. ಧಾರ್ಮಿಕ ಚಿತ್ರಗಳು :* ಧಾರ್ಮಿಕ ಚಿತ್ರಗಳೆಲ್ಲವೂ ಕೃಷ್ಣನಿಗೆ ಸಂಬಂಧಿಸಿದ್ದು ಅವುಗಳನ್ನು ಒಂದೊಂದಾಗಿ ಈ ಕೆಳಗಿನಂತೆ ವಿವರಿಸಬಹುದು.

I. ಶೇಷಶಯನ ವಿಷ್ಣು : ಸುರುಳಿಯಾಗಿ ಸುತ್ತಿಕೊಂಡ ಆದಿಶೇಷನ ಮೇಲೆ ನಾರಾಯಣನು ಕುಳಿತುಕೊಂಡಿದ್ದು, ಲಕ್ಷ್ಮೀದೇವಿಯು ಆತನ ಕಾಲನ್ನು ಒತ್ತುತ್ತಿದ್ದಾಳೆ. ಆತನ ನಾಭಿಯಿಂದ ಹೊರಟ ಕಮಲದಲ್ಲಿ ಬ್ರಹ್ಮನು ವಿರಾಜಮಾನನಾಗಿದ್ದು ಸೃಷ್ಟಿಕಾರ್ಯದಲ್ಲಿ ತೊಡಗಿದ್ದಾನೆ. ನಾರಾಯಣನು ನೀಲವರ್ಣದವನಾಗಿದ್ದು ಹಳದೀ ಪಂಚೆ ಉಟ್ಟು ಹಸಿರು ಶಾಲು ಚಿತ್ರಿಸಿದೆ. ಆದಿಶೇಷನು ಹಳದೀ ವರ್ಣದಲ್ಲಿದ್ದು ಚುಕ್ಕೆಗಳನ್ನು ಹೊಂದಿದ ದೇಹ ಉಳ್ಳವನಾಗಿದ್ದಾನೆ. ವಿಷ್ಣುವಿನ ಕಾಲು ಒತ್ತುತ್ತ ಕುಳಿತ ಲಕ್ಷ್ಮೀದೇವಿಯು ಕೆಂಪುಸೀರೆ ಹಸಿರು ಕುಪ್ಪಸ ಧರಿಸಿದ್ದಾಳೆ. ಗೌರವರ್ಣದಲ್ಲಿರುವ ಲಕ್ಷ್ಮೀದೇವಿಯು ಕಿವಿಮುಚ್ಚುವಂತಹ ಆಭರಣ ಮೂಗಲ್ಲಿ ಮೂಗುತಿ ಧರಿಸಿದ್ದು, ಕೂದಲನ್ನು ಜಡೆಯಾಗಿ ಹೆಣೆದುಕೊಂಡಿದ್ದಾಳೆ. ತಲೆಯಲ್ಲಿ ಕಿರೀಟವಿಲ್ಲ. ವಿಷ್ಣುವಿನ ಬಲಕ್ಕೆ ಹನುಮಂತನೂ ಎಡಕ್ಕೆ ಗರುಡನೂ ಭಕ್ತಿಯಿಂದ ಕೈಮುಗಿದು ನಿಂತಿದ್ದಾರೆ. ಹನುಮಂತನು ಹಸಿರು ವರ್ಣದಲ್ಲಿ ರಚನೆಯಾಗಿದ್ದರೆ ಗರುಡನು ನೀಲವರ್ಣದ ಮೈ ಬಣ್ಣ ಹೊಂದಿದ್ದಾನೆ. ಹನುಮಂತನು ಮೈ ತುಂಬ ನಾಮ ಹಚ್ಚಿಕೊಂಡಿದ್ದು. ಆತನ ಬಾಲ ಮೇಲೆ ಹೋಗಿ ತಲೆಯ ಮೇಲಿನಿಂದ ಮುಖದ ಮುಂದೆ ಇಳಿಬಿದ್ದಿದೆ. ಅದಕ್ಕ ತುದಿಗೆ ಗಂಟೆಯನ್ನು ಕಟ್ಟಲಾಗಿದೆ. ಗರುಡನು ರೆಕ್ಕೆಯನ್ನು ಉಳ್ಳವನಾಗಿ ಚೂಪಾದ ಮೂಗನ್ನು ಹೊಂದಿದ್ದಾನೆ ವಿಷ್ಣು. ಹನುಮಂತ, ಗರುಡ ಮೂವರ ಕಿರೀಟಗಳೂ ಸಿಲಿಂಡರಾಕಾರದ ಕೊಳವೆಯಂತೆ ಒಂದೇ ತೆರನಾಗಿವೆ. ಅವುಗಳಿಗೆ ಮೇಲೆ ಸಣ್ಣ ಗೋಪುರದಹತೆ ಕಳಸವಿದೆ. ಚಿತ್ರದ ವರ್ಣವು ಅಲ್ಲಲ್ಲಿ ಕಿತ್ತು ಹೋಗಿದ್ದು ಚಿತ್ರದ ಪೂರ್ಣ ಅಂದವನ್ನು ಅನುಭವಿಸಲು ತೊಂದರೆಯಾಗುತ್ತದೆ.

II. ಪ್ರಕೃತಿ ಪುರುಷ ಸಾಂಕೇತಿಕ ಚಿತ್ರ : ಎಡಗಡೆಯ ಕೋಣೆಯಲ್ಲಿರುವ ಗೋಪಿಕಾಸ್ತ್ರೀಯರ ವಸ್ತ್ರಾಪಹರಣ ಚಿತ್ರದಂತೆಯೇ ಈ ಚಿತ್ರವೂ ಇದೆ. ಆದರೆ ಇಲ್ಲಿ ಕೃಷ್ಣನು ಗೋಪಿಕಾಸ್ತ್ರೀಯರ ವಸ್ತ್ರಗಳನ್ನು ಮರದ ಮೇಲೆ ತೆಗೆದುಕೊಂಡು ಹೋಗಿಲ್ಲ. ಸಹಜವಾಗಿ ನೋಡಿದರೆ ಈ ಚಿತ್ರವೂ ಗೋಪಿಕಾ ವಸ್ತ್ರಾಪಹರಣ ಚಿತ್ರದಂತೇ ಕಂಡುಬರುವುದು. ಒಬ್ಬ ಸ್ತ್ರೀ ಮರವೇರಿ ಕೃಷ್ಣನನ್ನು ದಂಡಿಸಲು ಉದ್ಯುಕ್ತಳಾಗಿದ್ದಾಳೆ. ಕೃಷ್ಣನು ಗೋಪಿಕಾಸ್ತ್ರೀಯರ

ವಸ್ತ್ರಹರಣ ಮಾಡಿದ ಯಾವ ಸಂಕೇತವೂ ಇಲ್ಲಿ ಚಿತ್ರಣವಾಗಿಲ್ಲ. ಹಾಗಾಗಿ ಇದನ್ನು ಪ್ರಕೃತಿಪುರುಷರ ಸಾಂಕೇತಿಕ ಚಿತ್ರವೆಂದು ಪರಿಗಣಿಸಬಹುದು. ಗೋಪಿಕಾಸ್ತ್ರೀಯರು ಪ್ರಕೃತಿಯಾಗಿಯೂ ಕೃಷ್ಣನು ಪುರುಷನಾಗಿಯೂ ಇಲ್ಲಿ ಚಿತ್ರಿತರಾಗಿದ್ದಾರೆ. ಪೂರ್ವಜನ್ಮದಲ್ಲಿ ನಾರಾಯಣನನ್ನು ಕುರಿತು ತಪಸ್ಸು ಮಾಡಿ ಸಿದ್ಧಿಯಾಗದ ಕಾರಣ ಈ ಜನ್ಮದಲ್ಲಿ ಗೋಪಿಕಾಸ್ತ್ರೀಯರಾಗಿ ಹುಟ್ಟಿ ಕೃಷ್ಣನ ಸೇವೆ ಸಾಕ್ಷಾತ್ಕಾರಗಳನ್ನು ಪಡೆದುಕೊಳ್ಳಲು ಹಾತೊರೆಯುತ್ತಿದ್ದ ಗೊಲ್ಲರ ಹೆಂಗಸರು ಆ ಕಾರಣವಾಗಿ ಕೃಷ್ಣನ ರೂಪಲವಣ್ಯಗಳಿಗೆ ಮೋಹಿತರಾಗಿ ಪರವಶಗೊಂಡು ತಮ್ಮಷ್ಟಕ್ಕೆ ತಾವೇ ಬಂದು ಶ್ರೀಹರಿಯನ್ನು ಪೀಡಿಸುತ್ತಿದ್ದರು. ಕೃಷ್ಣನು ಅವರನ್ನು ಕಾಡಿಸಿ ಪಿಡಿಸಿ, ಕೊನೆಗೆ ಆದರಿಸಿ ಅವರ ಕೋರಿಕೆಗಳನ್ನು ನೆರವೇರಿಸುತ್ತ ಅವರವರ ಭಾವಕ್ಕ ತಕ್ಕಂತೆ ಅವರೊಡನೆ ಕೂಡಿಸುಖಿಸುತ್ತಿದ್ದನು. ಅಂತಹ ಕೃಷ್ಣ ಗೋಪಿಕಾಸ್ತ್ರೀಯರ ಭಕ್ತಿ. ಭಾವ. ವಿರಹ. ಸಮಾಗಮಗಳನ್ನು ತೋರಿಸುವ ಚಿತ್ರ ಇದಾಗಿದೆ. ಚಿತ್ರದಲ್ಲಿ ಮರವನ್ನು ಸ್ತ್ರೀಯರನ್ನು ಪ್ರಕೃತಿಯಾಗಿ ಚಿತ್ರಿಸಿದ್ದರೆ. ಕೃಷ್ಣನನ್ನು ಪುರುಷನನ್ನಾಗಿ ಚಿತ್ರಿಸಿ ಸಾಂಕೇತಿಕವಾದ ಅರ್ಥವನ್ನು ಇಲ್ಲಿ ಕೊಟ್ಟಿದ್ದಾರೆ. ಚಿತ್ರದಲ್ಲಿ ನದಿಯ ದಂಡೆಯ ಮೇಲೆ ಬೆಳೆದ ಬೃಹತ್ ಮರವೊಂದರ ಮೇಲೆ ಕೃಷ್ಣನು ಮುರಳಿಗಾನ ಮಾಡುತ್ತಲಿದ್ದಾನೆ ಮರವು ಹಸಿರೆಲೆಗಳು ಕೆಂಪು ಹೂಗಳನ್ನು ಹೊಂದಿ ಸುಪುಷ್ಪವಾಗಿದೆ. ಕಪ್ಪುವರ್ಣದ ಬೊಡ್ಡೆ, ಟೊಂಗೆಗಳು ಮರದ ಅಂದವನ್ನು ಹೆಚ್ಚಿಸಿವೆ. ಕೃಷ್ಣನು ನೀಲಮೇಘ ಶ್ಯಾಮನಾಗಿದ್ದು ಹಳದಿ ಪಂಚೆ ಉಟ್ಟು, ಕೆಂಪು ಶಾಲನ್ನು ಹೊದೆದಿದ್ದಾನೆ. ಕೃಷ್ಣನು ಕುಳಿತ ಮರವನ್ನು ಓರ್ವ ಸ್ತ್ರೀ ಅಪ್ಪಿಕೊಂಡು ಮೇಲೆರುತ್ತಿದ್ದರೆ, ಇನ್ನೊರ್ವಳು ಕೆಳಗೆ ಕುಳಿತು ಆ ಮರವನ್ನು ಪೂಜಿಸುತ್ತಿದ್ದಾಳೆ. ಬಲಗಡೆಗಿರುವ ನಾಲ್ಕು ಜನ ಸ್ತ್ರೀಯರು ಕೈಮುಗಿದು ಪ್ರಾರ್ಥಿಸುತ್ತಿದ್ದರೆ, ಎಡಗಡೆಯ ಸ್ತ್ರೀಯರು ಕೈ ಮೇಲೆತ್ತಿ ಕೃಷ್ಣನಲ್ಲಿ ತಮ್ಮ ಕೋರಿಕೆಯನ್ನು ಅರಿಕೆಮಾಡಿಕೊಳ್ಳುತ್ತಿದ್ದಾರೆ. ಸ್ತ್ರೀಯರು ಕೆಂಪು, ಕಪ್ಪು. ಹಸಿರು ವರ್ಣದ ಸೀರೆ ಕುಪ್ಪಸಗಳನ್ನು ಧರಿಸಿದ್ದಾರೆ. ಎಲ್ಲ ಸ್ತ್ರೀಯರ ಮೂಗಿನಲ್ಲಿರುವ ರಿಂಗಿನಾಕಾರದ ಮೂಗುತಿ ಹಣೆಯ ಮೇಲಿರುವ ಗುಂಡಾಕಾರದ ಕೆಂಪು ಕುಂಕುಮದ ಬೊಟ್ಟು ಒಂದೇ ತೆರನಾಗಿವೆ. ಬಳಿಯಲ್ಲೇ ಹರಿಯುತ್ತಿರುವ ನದಿಯಲ್ಲಿ ವಿವಿಧ ಬಗೆಯ ಮೀನುಗಳು ನೀರಾಮೆ, ಹಾವು, ಕಪ್ಪೆಗಳು ತುಂಬಿಕೊಂಡಿವೆ.

ರೇಖಾ ವಿನ್ಯಾಸ. ಸಂಯೋಜನೆ. ವರ್ಣವಿನ್ಯಾಸ ಮುಂತಾದವುಗಳ ದೃಷ್ಟಿಕೋನದಿಂದ ಈ ಕೃತಿ ಇಲ್ಲಿನ ಚಿತ್ರಗಳಲ್ಲೇ ಒಂದು ಗಮನಾರ್ಹ ಕೃತಿಯಾಗಿದೆ. ಪ್ರಖರತೆ ಇರದೇ ಕಣ್ಣಿಗೆ ತಂಪು ಕೊಡುವ ವರ್ಣಗಳ ಬಳಕೆ, ವರ್ಣಗಳಿಗೆ ಹೊಂದಾಣಿಕೆಯಾಗುವಂತೆ ಎಳೆದ ಮೃದುತನದಿಂದ ಕೂಡಿದ ಹೊರರೇಖೆಗಳು ಈ ಚಿತ್ರ ರಚಿಸಿದ ಕಲಾವಿದನ ಕುಶಲತೆ, ಅನುಭವವನ್ನು ತೋರಿಸುತ್ತವೆ.

III. ನಳಖೂಬರ. ಮಣಿಗ್ರೀವರ ಶಾಪವಿಮೋಚನೆಯ ಚಿತ್ರ : ಕೃಷ್ಣ, ಗೋಪಿಕಾಸ್ತ್ರೀಯರನ್ನು ಒಳಗೊಂಡ 'ಪ್ರಕೃತಿ ಪುರುಷ' ಸಾಂಕೇತಿಕ ಚಿತ್ರದ ಬಲಭಾಗದಲ್ಲಿ ನಳಕೂಬರ, ಮಣಿಗ್ರೀವರ ಶಾಪ ವಿಮೋಚನೆಯ ಚಿತ್ರವನ್ನು ರಚಿಸಲಾಗಿದೆ. "ಪೂರ್ವದಲ್ಲಿ ಒಂದು ತಪ್ಪು ಮಾಡಿದ ನಾರದ ಮಹರ್ಷಿಯನ್ನು ಕೆರಳಿಸಿ ಅವನಿಂದ ಶಾಪವನ್ನು ಪಡೆದ ಕುಬೇರನ ಮಕ್ಕಳಾದ ನಳಖೂಬರ, ಮಣಿಗ್ರೀವರೆಂಬವರು ಅವಳಿ ಮತ್ತೀ ಮರಗಳಾಗಿ ನಂದಗೋಕುಲದಲ್ಲಿ ಹುಟ್ಟಿಕೊಂಡಿದ್ದರು. ಈ ಮರಗಳು ಬಹುಸುಂದರವಾಗಿ, ಆಶ್ಚರ್ಯಕರವಾಗಿ ಇದ್ದಕಾರಣ ಊರಿನವರೆಲ್ಲ ಆ ಮರಗಳನ್ನು ಬಹುಪ್ರೀತಿಯಿಂದ ನೋಡಿಕೊಳ್ಳುತ್ತ. ಬುಡದಲ್ಲಿ ಕುಳಿತು ಆಟವಾಡುತ್ತ. ವಿನೋದದ ನೆಲೆಮಾಡಿಕೊಂಡಿದ್ದರು. ಒಂದು ದಿನ ತಾಯಿ ಯಶೋದೆಯು ಬಾಲಕ ಕೃಷ್ಣನ ಕಾಟ ತಾಳಲಾರದೇ ಆತನನ್ನು ಒಂದು ಮರದ ಒರಳಿಗೆ ಹಗ್ಗದಿಂದ ಕಟ್ಟಿಹಾಕಿ ತನ್ನ ಕೆಲಸದಲ್ಲಿ ತೊಡಗಿದ್ದಳು. ಸಮಯನೋಡಿಕೊಂಡು ಕೃಷ್ಣನು

ಅಂಬೆಗಾಲಿಡುತ್ತ ಆ ಒರಳನ್ನು ಎಳೆದುಕೊಂಡು ಊರಿನ ಹೊರಗಿರುವ ಅವಳಿ ಮತ್ತೀ ಮರದ ಬಳಿಗೆ ಹೋಗಿ ಆ ಮರವ ಸಂದಿನಲ್ಲಿ ನುಗ್ಗಿದಾಗ ಒರಳು ಮಧ್ಯದಲ್ಲಿ ಸಿಕ್ಕಿಕೊಂಡು ಮರಗಳು ದೊಪ್ಪನೇ ಮಹಾರಭಸದಿಂದ ನೆಲಕ್ಕೆ ಬಿದ್ದವು. ಆಗ ಕೃಷ್ಣನ ಸ್ಪರ್ಶದಿಂದ ಶಾಪದಿಂದ ಮುಕ್ತಿ ಪಡೆದ ನಳಕೂಬರ ಮತ್ತು ಮಣಿಗ್ರೀವರು ತಮ್ಮ ನಿಜರೂಪ ತಾಳಿ ಕೃಷ್ಣನಿಗೆ ನಮಸ್ಕರಿಸಿ ಹೊರಟುಹೋದರು.[೯೦] ಎಂಬಂತಹ ವಿವರಣೆ ಕೃಷ್ಣ ಕಥಾನಕದಲ್ಲಿ ಬರುವುದು.

ಚಿತ್ರದಲ್ಲಿ ಅಲಂಕಾರಿಕ ಅಂಡಾಕಾರದ ಎರಡು ಮರಗಳನ್ನು ಚಿತ್ರಿಸಿದ್ದು ಆ ಮರಗಳಲ್ಲಿ ನಳಕೂಬರ, ಮಣಿಗ್ರೀವರು ಕುಳಿತಿದ್ದಾರೆ. ಮರದ ತುಂಬ ಹಸಿರೆಲೆಗಳು. ಹೂಗಳು ತುಂಬಿವೆ. ಒಂದೇ ತೆರನಾಗಿರುವ ಈ ಅವಳಿ ಮರದ ಪಕ್ಕದಲ್ಲೇ ನಾರದ ಮಹಾರ್ಷಿಯು ತನ್ನ ತಂಬೂರಿ ಮೀಟುತ್ತ ಚಿಟಿಕೆ ಬಾರಿಸುತ್ತ ನಿಂತಿದ್ದಾನೆ. ಎರಡೂ ಮರಗಳ ಸಂದಿನಿಂದ ಅಂಬೆಗಾಲಿಡುತ್ತ ನುಗ್ಗಿ ಬಂದ ಕೃಷ್ಣ. ಮರಗಳ ಸಂದಿನಲ್ಲಿ ಸಿಕ್ಕಕೊಂಡ ಒರಳು ಇಲ್ಲಿ ಸುಂದರವಾಗಿ ಚಿತ್ರಿತವಾಗಿವೆ. ಕೃಷ್ಣನ ಪಕ್ಕದಲ್ಲೇ ತಾಯಿ ಯಶೋದೆ ಕೋಲೊಂದನ್ನು ಹಿಡಿದುಕೊಂಡು ಆತನನ್ನು ದಂಡಿಸುತ್ತಿದ್ದಾಳೆ. ಪಕ್ಕದಲ್ಲೇ ಬೆಣ್ಣೆ ತುಂಬಿದ ಪಾತ್ರೆಯೂ ಇದೆ.

ಮರದ ರೂಪದಲ್ಲಿರುವ ನಳಖೂಬರ. ಮಣಿಗ್ರೀವರ ಇಬ್ಬರೂ ಒಂದೇ ರೀತಿಯ ಹಳದಿ ಪಂಚೆ ಕೆಂಪು ಶಾಲು ಧರಿಸಿದ್ದಾರೆ. ಕೃಷ್ಣನಿಂದ ತಮ್ಮ ಶಾಪವಿಮೋಚನೆಯಾಗಿದ್ದಕ್ಕೆ ಕೃತಜ್ಞತಾ ಭಾವ ಸೂಚಿಸುತ್ತಿದ್ದಾರೆ. ಒಬ್ಬನು ಕೈ ಮುಗಿದು ತನ್ನ ಭಕ್ತಿ ವ್ಯಕ್ತಪಡಿಸುತ್ತಿದ್ದರೆ ಇನ್ನೊಬ್ಬ ಕೈಗಳನ್ನು ಮುಂದೆ ಮಾಡಿ ಕೃತಜ್ಞತೆ ಹೇಳುತ್ತಿದ್ದಾನೆ. ಬಾಲಕ ಕೃಷ್ಣನು ನೀಲ ಮೈಬಣ್ಣದಿಂದ ನಗ್ನವಾಗಿದ್ದಾನೆ. ತಲೆಯಲ್ಲಿ ಚಿಕ್ಕ ಕಿರೀಟ ನಡುವಿಲ್ಲಿ ಸುಂದರ ಉಡದಾರ ಚಿತ್ರಿಸಿದೆ. ಚಿತ್ರದಲ್ಲಿ ಹೊರರೇಖೆಗಳು ಒಂದೊಂದು ಕಡೆಗೆ ಶಕ್ತಿಯುತವಾಗಿದ್ದರೆ ಮತ್ತೆ ಕೆಲವು ಭಾಗದಲ್ಲಿ ಸತ್ವಹೀನವಾಗಿ ಕಂಡುಬರುತ್ತವೆ. ಆದರೆ ಸಂಯೋಜನಾ ರೀತಿ ತುಂಬಾ ಆಕರ್ಷಕವಾಗಿದೆ.

IV. ಬೆಣ್ಣೆ ಕಳ್ಳ ಕೃಷ್ಣನ ಚಿತ್ರ : ಪ್ರಕೃತಿ ಪುರುಷ ಚಿತ್ರದ ಎಡಭಾಗದಲ್ಲಿ ಬೆಣ್ಣೆ ಕದಿಯುತ್ತಿರುವ ಕೃಷ್ಣನ ವಿವಿಧ ಭಂಗಿಯ ಚಿತ್ರಗಳಿವೆ. ಈ ಚಿತ್ರಗಳು ಎಡಕೋಣೆಯಲ್ಲಿರುವ ಚಿತ್ರವನ್ನು ಸಂಪೂರ್ಣ ಹೋಲುತ್ತವೆ. ಮನೆಯ ಜಂತಿಯಲ್ಲಿ ಕಟ್ಟಲಾಗಿರುವ ನೆಲವಿನಲ್ಲಿ ಇಡಲಾಗಿರುವ ಸಾಲಾದ ಬೆಣ್ಣೆ ಪಾತ್ರೆಗಳಲ್ಲಿನ ಬೆಣ್ಣೆಯನ್ನು ಏಣಿಯೊಂದನ್ನು ಇಟ್ಟುಕೊಂಡು ಅದರ ಮೇಲೆ ಹತ್ತಿ ಕದಿಯುತ್ತಿದ್ದಾನೆ. ಇದನ್ನು ಕಂಡ ಮನೆಯೊಡತಿ ಮಜ್ಜಿಗೆ ಕಡೆಯುವ ಕಡಗೋಲನ್ನೇ ತಂದು ಏಣಿಯ ಮೇಲಿರುವ ಕೃಷ್ಣನನ್ನು ದಂಡಿಸುತ್ತಿದ್ದಾಳೆ. ಏಣಿಯ ಮೇಲೆ ಇರುವ ಕೃಷ್ಣನಲ್ಲದೇ ಇನ್ನೊಬ್ಬ ಕೃಷ್ಣನೂ ಕೆಳಗಿದ್ದು ಆತ ದಂಡಿಸುತ್ತಿರುವ ಮಹಿಳೆಯ ಗದ್ದ ಹಿಡಿದು ರಮಿಸುತ್ತಿದ್ದಾನೆ. ಮೇಲೆ ಕೆಳಗೆ ಕೃಷ್ಣನನ್ನು ಕಂಡು ಮಹಿಳೆಯು ಆಶ್ಚರ್ಯ ಚಕಿತಳಾಗಿದ್ದಾಳೆ. ಮೇಲೆ ಜಂತಿಯಲ್ಲಿ ಸಾಲಾಗಿ ಬೆಣ್ಣೆ ತುಂಬಿದ ಪಾತ್ರೆಗಳು ಇದ್ದು ಅಲ್ಲಿ ಮತ್ತೊಬ್ಬ ಕೃಷ್ಣನು ಅವುಗಳನ್ನು ತೆಗೆದು ಗಾಳಿಯಲ್ಲಿ ತೇಲುತ್ತಿರುವಂತೆ ರಚಿತವಾಗಿದ್ದಾನೆ. ಇನ್ನೊಂದು ಕಡೆ ಕೆಳಭಾಗದಲ್ಲಿ ತಾಯಿ ಯಶೋದೆಯು ಮಜ್ಜಿಗೆಯನ್ನು ಕಡೆಯುತ್ತಿದ್ದು. ಬಾಲಕ ಕೃಷ್ಣನು ಹಿಂದಿನಿಂದ ಬಂದು ತಾಯಿಯ ಸೆರಗನ್ನು ಜಗ್ಗಿ ಆಕೆಯನ್ನು ಬೆಣ್ಣೆಗಾಗಿ ಪೀಡಿಸುತ್ತಿದ್ದಾನೆ. ಎಲ್ಲ ಕಡೆಗಿರುವ ಕೃಷ್ಣನ ಬಾಲ ರೂಪಗಳು ನಗ್ನವಾಗಿದ್ದು ನೀಲವರ್ಣದಿಂದ ಕೂಡಿದೆ. ಮಹಿಳೆಯರು ಹಳದಿ ಮತ್ತು ತಿಳಿಹಸಿರು ವರ್ಣದ ಸೀರೆ ಉಟ್ಟು ಕೆಂಪು ವರ್ಣದ ಕುಪ್ಪಸ ತೊಟ್ಟಿದ್ದಾರೆ. ಈ ಚಿತ್ರ ವರ್ಣ ವಿನ್ಯಾಸದಿಂದ ಉತ್ತಮವೆನಿಸಿದರೂ ರೇಖಾ ವಿನ್ಯಾಸದಿಂದ ಸಪ್ಪೆ ಎನಿಸುತ್ತದೆ.

---

೯೦. ರಾಮಾಯಣ ಕಥಾ ಸಂಗ್ರಹ (೧೮೫೦) : ಪುಟ ೨೬೨

V. ವಟಪತ್ರಶಯನ ಕೃಷ್ಣನ ಚಿತ್ರ : ಇಲ್ಲಿನ ಮತ್ತೊಂದು ಚಿತ್ರ ವಟಪತ್ರದ (ಆಲದ ಎಲೆ) ಮೇಲೆ ಮಲಗಿರುವ ಕೃಷ್ಣನದಾಗಿದೆ. ಇಲ್ಲಿ ಕೃಷ್ಣನು ನೀರಿನ ಮೇಲೆ ತೇಲುತ್ತಿರುವ ಆಲದ ಎಲೆಯೊಂದರ ಮೇಲೆ ಮಲಗಿ ಆಡುತ್ತಿದ್ದಾನೆ. ಬಾಲಕ ಕೃಷ್ಣನು ಅಂಗಾತ ಮಲಗಿದ್ದು ತನ್ನ ಬಲಗಾಲಿನ ಹೆಬ್ಬೆರಳನ್ನು ಬಾಯಿಯಲ್ಲಿ ಇಟ್ಟುಕೊಂಡು ಆಡುತ್ತಿದ್ದಾನೆ. ನೀಲವರ್ಣದ ಕೃಷ್ಣನು ನಗ್ನವಾಗಿದ್ದು ನಡುವಿನಲ್ಲಿ ಸುಂದರವಾದ ಉಡದಾರ ಧರಿಸಿದ್ದಾನೆ. ಆಲದ ಎಲೆಯು ಕಡುಹಸಿರು ವರ್ಣದಲ್ಲಿದೆ. ಎಲೆಯ ಕೆಳಗಿನ ನೀರಿನಲ್ಲಿ ವಿವಿಧ ಬಗೆಯ ಮೀನುಗಳು, ಹಾವುಗಳು, ನೀರಾಮೆಗಳು ತುಂಬಿಕೊಂಡಿವೆ. ಆದರೆ ನೀರಿನ ಭಾಗಕ್ಕೆ ಯಾವುದೇ ವರ್ಣ ಲೇಪನಮಾಡಿಲ್ಲ. ನೀರಿನ ಹೊರಭಾಗದಲ್ಲಿ ಎಡ ಬಲಗಳಲ್ಲಿ ಇಬ್ಬರು ಸ್ತ್ರೀಯರಿದ್ದು ಬಲಗಡೆಯ ಸ್ತ್ರೀ ಚಾಮರ ಬೀಸುತ್ತಿದ್ದರೆ ಎಡಗಡೆಯ ಮಹಿಳೆ ಆರತಿ ಬೆಳಗುತ್ತಿದ್ದಾಳೆ. ಚಾಮರ ಬೀಸುವ ಮಹಿಳೆ ಹಸಿರು ಸೀರೆ ಉಟ್ಟು ಕೆಂಪು ಕುಪ್ಪಸ ತೊಟ್ಟಿದ್ದರೆ, ಆರತಿ ಬೆಳಗುತ್ತಿರುವ ಸ್ತ್ರೀ ಕೆಂಪು ಸೀರೆ, ಉಟ್ಟು ಹಸಿರು ಕುಪ್ಪಸ ತೊಟ್ಟಿದ್ದಾಳೆ. ಚಿತ್ರವು ಸಂಯೋಜನಾ ದೃಷ್ಟಿಯಿಂದ ಉತ್ತಮವೆನಿಸಿದರೂ ವರ್ಣವಿನ್ಯಾಸ ರೇಖಾ ವಿನ್ಯಾಸಗಳ ದೃಷ್ಟಿಯಿಂದ ಅಷ್ಟೊಂದು ಉತ್ತಮವಾಗಿಲ್ಲ. ಈ ಚಿತ್ರದ ಹೆಚ್ಚಿನ ಭಾಗ ನಾಶವಾಗಿ ಹೋಗಿದೆ.

*೨. ಧಾರ್ಮಿಕೇತರ ಚಿತ್ರಗಳು :* ಶಯನ ಗೃಹದಂತೆ ಈ ಸ್ನಾನಗೃಹದಲ್ಲಿಯೂ ಧಾರ್ಮಿಕೇತರ ಚಿತ್ರಗಳಿದ್ದು, ಅವು ಕೆಳಗಿನಂತಿವೆ :

I. ತಂಬೂರಿ ಬಾರಿಸುತ್ತಿರುವ ಮಹಿಳೆಯ ಚಿತ್ರ : ಅಲಂಕಾರಿಕ ಗಿಡಗಳು ರಚಿಸಿರುವ ಮಂಟಪಗಳ ಮೇಲಿರುವ ಚಿತ್ರ ಒಂದರಲ್ಲಿ ಮಹಿಳೆಯೊಬ್ಬಳು ತಂಬೂರಿ ಬಾರಿಸುತ್ತಿರುವ ಚಿತ್ರವಿದೆ. ಕೊರಳಲ್ಲಿ ತಂಬೂರಿ ಹಾಕಿಕೊಂಡು, ಎಡಗೈಯಲ್ಲಿ ಚಿಟಿಕೆ ಹಿಡಿದುಕೊಂಡು. ತುಸುವೇ ಬಾಗಿ ತಂಬೂರಿ ಮೀಟುತ್ತಿರುವ ಮಹಿಳೆಯ ಭಂಗಿ ಅತ್ಯಂತ ಆಕರ್ಷಕವಾಗಿದೆ. ಮಹಿಳೆಯು ಸೀರೆಯ ಸೆರಗಳನ್ನು ಕೊರಳಲ್ಲಿ ಸುತ್ತಿಕೊಂಡಿರುವ ರೀತಿ ವಿಶೇಷವಾಗಿದೆ. ಕಪ್ಪು ಹಸಿರು ಸೀರೆಯನ್ನು ಉಟ್ಟ ಈ ಮಹಿಳೆ ಕೆಂಪು ಕುಪ್ಪಸ ತೊಟ್ಟಿದ್ದಾಳೆ. ಈ ಮಹಿಳೆಯ ಎದುರಿನಲ್ಲಿ ಆಕೆಯ ತಾಳಕ್ಕೆ ಹಾವಭಾಕ್ಕೆ ಜಿಂಕೆಯೊಂದು ಕುಣಿಯುತ್ತಿದೆ. ಈ ಚಿತ್ರದ ವರ್ಣವಿನ್ಯಾಸ ಕಣ್ಣಿಗೆ ಹಿತವಾಗಿದೆ.

II. ಜಿಂಕೆಯನ್ನು ಮೇಯಿಸುತ್ತಿರುವ ಇಬ್ಬರು ಸ್ತ್ರೀಯರು : ಅಲಂಕಾರಿಕ ಗಿಡಗಳಿರುವ ಮಂಟಪದ ಮೇಲಿನ ಗೋಡೆಯಲ್ಲಿರುವ ಇನ್ನೊಂದು ಚಿತ್ರ ಇಬ್ಬರು ಸ್ತ್ರೀಯರು ಜಿಂಕೆಗೆ ತಪ್ಪಲು ತಿನ್ನಿಸುತ್ತಿರುವುದು. ಜಿಂಕೆಗೆ ತಪ್ಪಲು ತಿನ್ನಿಸುತ್ತಿರುವ ಓರ್ವ ಮಹಿಳೆ ಇರುವ ಚಿತ್ರ ಇದೇ ಕೋಣೆಯಲ್ಲಿ ಇನ್ನೊಂದು ಭಾಗದಲ್ಲಿಯೂ ಇದೆ. ಇಬ್ಬರ ಮಧ್ಯೆ ಒಂದು ಹೂಕುಂಡವೂ ಚಿತ್ರಿಸಿದೆ. ಹೂಕುಂಡದ ಬಲಗಡೆಗಿರುವ ಮಹಿಳೆ ಹಸಿರು ಸೀರೆಉಟ್ಟು ಕೆಂಪು ಕುಪ್ಪಸ ತೊಟ್ಟಿದ್ದಾಳೆ. ಇವಳು ಸೀರೆಯ ಸೆರಗನ್ನು ಕೊರಳ ಸುತ್ತ ಹಾಕಿಕೊಂಡ ರೀತಿ ತಂಬೂರಿ ಬಾರಿಸುತ್ತಿರುವ ಮಹಿಳೆಯ ರೀತಿಯಲ್ಲಿದೆ. ಈ ರೀತಿ ಸೆರಗನ್ನು ಕೊರಳಸುತ್ತ ಹಾಕಿಕೊಂಡ ಮಹಿಳೆಯ ಚಿತ್ರಗಳು ಇಲ್ಲಿ ಇವೆರಡೇ ಇವೆ. ಅಲ್ಲದೇ ಉತ್ತರ ಕರ್ನಾಟಕದ ಬೇರೆ ಭಾಗದಲ್ಲಿರುವ ಭಿತ್ತಿಚಿತ್ರಗಳಲ್ಲಿರುವ ಸ್ತ್ರೀ ಚಿತ್ರಗಳಲ್ಲಿ ಈ ರೀತಿ ಹೆಚ್ಚಾಗಿ ಕಂಡು ಬಂದಿಲ್ಲ. ಇವಳು ಒಂದು ಕೈಯಿಂದ ಹರಿದ ತಪ್ಪಲನ್ನು ಜಿಂಕೆಗೆ ತಿನ್ನಿಸುತ್ತಿದ್ದಾಳೆ. ಹೂಕುಂಡದ ಎಡಭಾಗದಲ್ಲಿರುವ ಮಹಿಳೆಯೂ ಒಂದು ಕೈಯಿಂದ ತಪ್ಪಲು ಹರಿಯುತ್ತಿದ್ದು ಇನ್ನೊಂದು ಕೈಯಿಂದ ತಪ್ಪಲನ್ನು ಜಿಂಕೆಗೆ ತಿನ್ನಿಸುತ್ತಿದ್ದಾಳೆ. ಇವಳು ಕೆಂಪು ಸೀರೆ ಉಟ್ಟು ಹಸಿರು ಕುಪ್ಪಸ ತೊಟ್ಟಿದ್ದಾಳೆ ಇಬ್ಬರೂ ಮೂಗಿನಲ್ಲಿ ರಿಂಗಿನಂತಹ ಮೂಗುತಿ ಇಟ್ಟಿದ್ದು ಬಲಗಡೆಯವಳು ಕೂದಲನ್ನು ತುರುಬಾಗಿ ಕಟ್ಟಿದ್ದರೆ ಎಡಗಡೆಯವಳು ಜಡೆ ಹೆಣೆದುಕೊಂಡಿದ್ದಾಳೆ. ಜಿಂಕೆಗಳು ಕತ್ತನ್ನು ಹಿಂದೆ ತಿರುಗಿಸಿ

ಮಹಿಳೆಯರ ಕೈಯಲ್ಲಿನ ತಪ್ಪಲು ತಿನ್ನುತ್ತಿವೆ. ಈ ಜಿಂಕೆಗಳ ಕೆಳಭಾಗದಲ್ಲಿ ಅವುಗಳ ಚಿಕ್ಕ ಚಿಕ್ಕ ಮರಿಗಳಿದ್ದು ಅವು ತಾಯಿಯ ಹಾಲನ್ನು ಕುಡಿಯುತ್ತಲಿವೆ.

ಮಧ್ಯದಲ್ಲಿನ ಹೂಕುಂಡ ಪ್ರಖರವಾದ ನೀಲಿವರ್ಣದಲ್ಲಿ ರಚನೆಯಾಗಿದ್ದು ಅದರ ಮೇಲೆ ನಕ್ಷೆಗಳನ್ನು ಚಿತ್ರಿಸಲಾಗಿದೆ. ಕುಂಡದಲ್ಲಿ ಬೆಳೆದ ಗಿಡದತುಂಬ ಕೆಂಪು. ಹಳದಿ. ನೀಲಿ. ಕಂದು ಮುಂತಾದ ವರ್ಣದ ಹೂಗಳು ಅರಳಿವೆ. ಅಲ್ಲದೇ ಗಿಡದ ಟೊಂಗೆಟೊಂಗೆಯಲ್ಲಿಯೂ ಕಂದು. ಹಳದಿ. ಹಸಿರು. ನೀಲಿ. ವರ್ಣಗಳಲ್ಲಿರುವ ಗಿಳಿ, ಗೊರವಂಕಗಳು ಚಿಲಿಪಿಲಿಗುಟ್ಟುತ್ತಿವೆ ಎಂಬಂತೆ ರಚಿಸಲಾಗಿದೆ. ಚಿತ್ರವು ಸಂಯೋಜನಾ ವಿನ್ಯಾಸದಿಂದ ಉತ್ತಮವಾಗಿದೆ. ವಟಪತ್ರಶಯನ ಕೃಷ್ಣನ ಚಿತ್ರದ ಕೆಳಗಡೆಗೆ ಎಡಭಾಗದಲ್ಲಿ ಮಹಿಳೆಯೊಬ್ಬಳು ಜಿಂಕೆಯೊಂದಕ್ಕೆ ತಪ್ಪಲು ತಿನ್ನಿಸುತ್ತಿರುವ ಇನ್ನೊಂದು ಚಿತ್ರವಿದೆ. ಕೆಂಪು ಸೀರೆ ಉಟ್ಟು. ಹಸಿರು ಕುಪ್ಪಸ ತೊಟ್ಟುಕೊಂಡಿರುವ ಮಹಿಳೆ ಗಿಡದಿಂದ ತಪ್ಪಲನ್ನು ಕಿತ್ತು ಜಿಂಕೆಗೆ ತಿನ್ನಿಸುತ್ತಿರುವ ಈ ದೃಶ್ಯದಲ್ಲಿ ಜಿಂಕೆಯು ಮುಂಗಾಲುಗಳನ್ನು ಎತ್ತಿ ಮೇಲೆ ನೆಗೆದು ತಪ್ಪಲು ತಿನ್ನುತ್ತಿದೆ. ತಪ್ಪಲು ಕೀಳುತ್ತಿರುವ ಮಹಿಳೆಯು ಕೂದಲನ್ನು ಜಡೆಯಾಗಿ ಹೆಣೆದುಕೊಂಡಿದ್ದು, ಮೂಗು, ಕಿವಿ, ಕೊರಳಲ್ಲಿ ಆಭರಣ ಧರಿಸಿದ್ದಾಳೆ. ಚಿತ್ರ ರಚನೆಗೆ ಮೊದಲು ಸಿಂಧೂರ ವರ್ಣದಿಂದ ಚಿತ್ರಗಳ ಪ್ರಾಥಮಿಕ ಬಾಹ್ಯ ರೇಖೆಗಳನ್ನು ಹಾಕಿಕೊಂಡಿದ್ದಾರೆ. ಜಿಂಕೆಯ ಚಿತ್ರಗಳ ಪಕ್ಕದಲ್ಲಿ ಸಿಂಧೂರವರ್ಣದ ರೇಖೆಗಳು ಹಾಗೆಯೇ ಉಳಿದುಕೊಂಡಿವೆ.

II. ಓರ್ವ ಮಹಿಳೆಯ ಚಿತ್ರ : ಕೋಣೆಯ ಒಂದು ಮೂಲೆಯಲ್ಲಿ ಒಬ್ಬಳೇ ನಿಂತುಕೊಂಡಿರುವ ಓರ್ವ ಮಹಿಳೆಯ ಚಿತ್ರವಿದೆ. ಈ ಮಹಿಳೆ ಗಣ್ಯ ಸ್ತ್ರೀಯಂತೆ ಕಾಣುತ್ತಿದ್ದು. ಬಹುಶ ಈ ಮನೆಗೆ ಸೇರಿದ ಪರಿವಾರದವಳಾಗಿರಬಹುದು. ಈ ಮಹಿಳೆ ಕೆಂಪುಸೀರೆ ಉಟ್ಟು ಹಸಿರು ಕುಪ್ಪಸ ತೊಟ್ಟಿದ್ದಾಳೆ. ಕೊರಳಲ್ಲಿ, ಕಿವಿಯಲ್ಲಿ, ಕೈಯಲ್ಲಿ, ಕಾಲಲ್ಲಿ ಆಭರಣಗಳಿವೆ. ತಲೆಗೂದಲನ್ನು ಬಾಚಿ ತುರುಬಾಗಿ ಕಟ್ಟಿಕೊಂಡು ತಲೆಯಲ್ಲಿಯೂ ಆಭರಣ ಧರಿಸಿದ್ದಾಳೆ. ಎಡಗೈಯನ್ನು ಗದ್ದಕ್ಕೆ ಹಿಡಿದುಕೊಂಡು ಬಲಗೈಯನ್ನು ಟೊಂಕದ ಮೇಲೆ ಇಟ್ಟುಕೊಂಡು ಒಂದು ಅಲಂಕೃತ ಪೀಠದ ಮೇಲೆ ನಿಂತಿದ್ದಾಳೆ. ಅಗಲವಾದ ಹೊಳೆಯುವ ಕಣ್ಣುಗಳು. ಕಾಮನ ಬಿಲ್ಲಿನಂತಹ ತೀಡಿದ ಹುಬ್ಬುಗಳು ಹಣೆಯ ಮೇಲಿರುವ ಕೆಂಪು ಕುಂಕುಮದ ಬೊಟ್ಟು ಅವಳ ಮುಖದ ಸೌಂದರ್ಯವನ್ನು ಹೆಚ್ಚಿಸಿವೆ. ಈ ಚಿತ್ರವು ಮೂರು ಫೂಟಿನಷ್ಟು ಎತ್ತರವಾಗಿದೆ.

III. ಸರದಾರನೊಬ್ಬನ ಚಿತ್ರ : ಬಲಗಡೆಯ ಕೋಣೆಯ ಮೂಲೆಯಲ್ಲಿ ಬಿಸಿನೀರಿನ ವ್ಯವಸ್ಥೆಗಾಗಿ ಒಂದು ತೊಟ್ಟಿ ಇದ್ದು ಅದರ ಸುತ್ತಲೂ ಅಲಂಕಾರಿಕ ಹೂ ಕುಂಡಗಳು ಹೂಬಳ್ಳಿಯ ನಕ್ಷೆಗಳನ್ನು ಚಿತ್ರಿಸಿದ್ದಾರೆ. ಅದರ ಒಂದು ಭಾಗದಲ್ಲಿ ಒಬ್ಬ ಸರದಾರನ ಚಿತ್ರವನ್ನೂ ರಚಿಸಲಾಗಿದೆ. ಈತನ ಉಡುಪು, ರಜಪೂತ, ಮತ್ತು ಮೊಗಲ್ ಶೈಲಿಯ ಪ್ರಭಾವಕ್ಕೆ ಒಳಗಾಗಿವೆ. ಆದರೆ ವರ್ಣಗಳು ಕಡುಪಾಗಿವೆ. ಇಲ್ಲಿಯೂ ಕೆಂಪು, ಹಳದಿ, ನೀಲಿ ವರ್ಣಗಳೇ ಪ್ರಮುಖವಾಗಿ ಒಳಗೊಂಡಿವೆ.

IV. ಅಲಂಕಾರಿಕ ಹೂಕುಂಡಗಳು : ಶಯನ ಗೃಹದಲ್ಲಿರುವಂತೆ ಇಲ್ಲಿಯೂ ಅಲಂಕಾರಿಕ ಹೂಕುಂಡಗಳನ್ನು ರಚಿಸಲಾಗಿದೆ. ಶಯನಗೃಹದಲ್ಲಿ ಇಂತಹ ಹೂ ಕುಂಡಗಳು ಕಡಿಮೆ ಸಂಖ್ಯೆಯಲ್ಲಿದ್ದರೆ, ಈ ಕೋಣೆಯಲ್ಲಿ ಗೋಡೆತುಂಬ ಅಲ್ಲಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹೂ ಕುಂಡಗಳು ರಚನೆಯಾಗಿವೆ. ಅಂತಹ ಒಂದು ಹೂಕುಂಡದ ವಿನ್ಯಾಸ ಹೀಗಿದೆ. ಅಗಲವಾದ ಬಂಗಾರವರ್ಣದ ಬಟ್ಟಲಿನಂತಿರುವ ಪೀಠವೊಂದರ ಮೇಲೆ ಮೂರು ಕುಂಡಗಳನ್ನು (ಹೂಜಿ) ಇಡಲಾಗಿದ್ದು ಮಧ್ಯದಲ್ಲಿ ದೊಡ್ಡದು ಅಕ್ಕಪಕ್ಕದಲ್ಲಿ ಚಿಕ್ಕಕುಂಡಗಳಿವೆ ಮಧ್ಯ ಇರುವ ದೊಡ್ಡ ಕುಂಡದಲ್ಲಿ ಚೆಂಡು ಹೂವಿನಂತಿರುವ ಹೂವಿನ ಗಿಡವನ್ನು ಚಿತ್ರಿಸಲಾಗಿದ್ದು. ಇದರಲ್ಲಿ ಎಲೆಗಳಿವೆ. ಈ ಗಿಡದಲ್ಲಿ ಹದಿನೈದು ಗಿಳಿಗಳು ವಿವಿಧ ಭಂಗಿಯಲ್ಲಿ

ರಚನೆಯಾಗಿದ್ದು. ಪಕ್ಕದಲ್ಲಿನ ಕುಂಡಗಳಲ್ಲಿರುವ ಹಣ್ಣುಗಳನ್ನು ಜೋಡಿಗಿಳಿಗಳು ಕುಕ್ಕಿತಿನ್ನುತ್ತಿವೆ. ಇಂತಹ ಅಲಂಕಾರಿಕ ಹೂಕುಂಡಗಳು ಅಲ್ಲಲ್ಲಿ ರಚನೆಯಾಗಿದ್ದು ಅವುಗಳ ಎಡಬಲಗಳಲ್ಲಿ ಗಿಳಿಗಳಲ್ಲದೇ ನವಿಲು, ಪಾರಿವಾಳ, ಕಾಮಧೇನು, ಹಂಸ ಪಕ್ಷಿಗಳು ರಚಿಸಿವೆ.

V. ಅಲಂಕಾರಿಕ ಗಿಡಗಳು : ಬಲಗಡೆಗಿರುವ ಕೋಣೆಯಲ್ಲಿ ಗೋಡೆಯ ಕೆಳಭಾಗದಲ್ಲಿ ಸಾಲಾಗಿ ಮಂಟಪಗಳನ್ನು ರಚಿಸಿ ಆ ಮಂಟಪಗಳಲ್ಲಿ ಅಲಂಕಾರಿಕ ಗಿಡ. ಹೂಕುಂಡಗಳನ್ನು ಒಂದರ ನಂತರ ಒಂದಾಗಿ ರಚಿಸಿದ್ದಾರೆ. ಒಂದು ಮಂಟಪದಲ್ಲಿ ಗಿಡ ರಚಿಸಿದ್ದರೆ. ನಂತರದ ಮಂಟಪದಲ್ಲಿ ಹೂಕುಂಡ ರಚಿಸಿದ್ದಾರೆ. ಮಂಟಪಗಳು ಸುಂದರವಾಗಿದ್ದು ಅವುಗಳ ಮೇಲೆ ಹೂಬಳ್ಳಿಯ ನಕ್ಷೆಗಳನ್ನು ಚಿತ್ರಿಸಿದ್ದಾರೆ. ಪ್ರತಿಯೊಂದು ಹೂಕುಂಡದ ಮೇಲೆ ಮೂರು ಗಿಳಿಗಳನ್ನು ಗೊರವಂಕಗಳನ್ನು ಚಿತ್ರಿಸಿದ್ದು. ಪ್ರತಿಯೊಂದು ಗಿಡ - ಹೂಕುಂಡದ ಎಡಬಲಗಳಲ್ಲಿ ಪ್ರಾಣಿ - ಪಕ್ಷಿಗಳನ್ನು ಚಿತ್ರಿಸಿದ್ದಾರೆ. ಅಂತಹ ಕೆಲವು ಗಿಡ. ಹೂಕುಂಡಗಳು ಹೀಗಿವೆ.

ಮಾವಿನ ಗಿಡವನ್ನು ಹೋಲುವ ಒಂದು ಅಲಂಕಾರಿಕ ಗಿಡದ ಎಡಬಲಗಳಲ್ಲಿ ಎರಡು ನವಿಲುಗಳು ನಿಂತಿವೆ. ಗಿಡದ ತುಂಬ ಹೂ ಎಲೆಗಳು ತುಂಬಿವೆ. ಗಿಡವು ಅಂಡಾಕಾರದಲ್ಲಿದೆ. ಗಿಡದ ಮೇಲೆ ಮೂರು ಅಳಿಲುಗಳು ಜಿಗಿದಾಡುತ್ತಿವೆ. ಇದರ ಪಕ್ಕದಲ್ಲಿರುವ ಮಂಟಪದಲ್ಲಿ ಹೂ ಕುಂಡವಿದ್ದು ಕುಂಡದ ಎಡಬಲಗಳಲ್ಲಿ ಎರಡು ಜಿಂಕೆಗಳು ಮುಂಗಾಲನ್ನು ಎತ್ತಿ ಹಿಂಗಾಲ ಮೇಲೆ ನಿಂತು ಮೇಲಕ್ಕೆ ಜಿಗಿಯುತ್ತಿವೆ. ಕುಂಡದಲ್ಲಿರುವ ಹೂವಿನ ಗಿಡವು ಹಳದೀ ವರ್ಣದಲ್ಲಿದ್ದು ಅದರ ತುಂಬ ಕೆಂಪು. ನೀಲಿ. ಹೂಗಳು ಅರಳಿವೆ. ಅದರ ಮೇಲೆ ಹಸಿರು ವರ್ಣದ ಮೂರು ಗಿಳಿಗಳು ಕುಳಿತಿವೆ. ಇದರ ಬದಿಯ ಮತ್ತೊಂದು ಮಂಟಪದಲ್ಲಿ ಮಾವಿನ ಗಿಡ ಹೋಲುವ ಗಿಡವಿದ್ದು ಅದರ ಬದಿಯಲ್ಲಿ ಎರಡು ಕಾಮಧೇನುಗಳು ಚಿತ್ರಿಸಿವೆ. ಗಿಡದ ಮೇಲೆ ಮೂರು ಅಳಿಲುಗಳಿವೆ. ಹೀಗೆ ಉಳಿದ ಮಂಟಪದಲ್ಲಿ ಒಂದು ಗಿಡದ ನಂತರ ಒಂದು ಹೂಕುಂಡ ರಚಿಸಿ ಅವುಗಳ ಬದಿಯಲ್ಲಿ ನವಿಲು, ಜಿಂಕೆ, ಕಾಮಧೇನುಗಳನ್ನು ರಚಿಸಿದ್ದರೆ, ಅವುಗಳ ಮೇಲೆ ಅಳಿಲು. ಮಂಗ ಮತ್ತು ಗಿಳಿ ಗೊರವಂಕಗಳನ್ನು ಚಿತ್ರಿಸಲಾಗಿದೆ.

**ರಾಯಚೂರಿನ ಭಿತ್ತಿಚಿತ್ರಗಳ ಲಕ್ಷಣಗಳು :**

* ಚಿತ್ರಗಳನ್ನು ಬಿಳಿ ಇಲ್ಲವೆ ತೆಳುಹಳದಿ ವರ್ಣದ ಹಿನ್ನೆಲೆ ಲೇಪನದ ಮೇಲೆ ಚಿತ್ರಿಸಲಾಗಿದೆ. ಎಡ ಕೋಣೆಯ ಚಿತ್ರಗಳು ಬಿಳಿ ಹಿನ್ನೆಲೆ ಮೇಲೆ ರಚಿಸಿದ್ದರೆ, ಬಲಕೋಣೆಯ ಚಿತ್ರಗಳು ತೆಳುಹಳದಿ ವರ್ಣದ ಹಿನ್ನೆಲೆ ಹೊಂದಿವೆ.
* ಚಿತ್ರಗಳಿಗಾಗಿ ಪ್ರತ್ಯೇಕ ಹಿನ್ನೆಲೆ ಲೇಪಿಸಿಕೊಳ್ಳದೇ ಇಡೀ ಗೋಡೆಗೆ ಅಥವಾ ಇಡೀ ಕೋಣೆಗೆ ಒಂದೇ ಹಿನ್ನೆಲೆ ಲೇಪನ ಕೊಟ್ಟಿದ್ದಾರೆ.
* ಚಿ್ರಗಳಿಗೆ ಮಾತ್ರ ವರ್ಣವಿನ್ಯಾಸಮಾಡಿದ್ದು. ಚಿತ್ರದ ಹಿನ್ನೆಲೆ, ಮುನ್ನೆಲೆ ಬದಿಗಳಲ್ಲಿ ಎಲ್ಲಿಯೂ ಮತ್ತೆ ವರ್ಣ ಲೇಪನ ಮಾಡಿಲ್ಲ.
* ಚಿತ್ರಗಳ ರಚನೆಗೆ ಮೊದಲು ಇದ್ದಿಲಿನಿಂದ ರೇಖಾ ಚಿತ್ರ ಬರೆದುಕೊಂಡು ಅದರ ಮೇಲೆ ಸಿಂಧೂರ ವರ್ಣದಿಂದ ರೇಖೆಗಳನ್ನು ಎಳೆದು. ಆ ಮೇಲೆ ಚಿತ್ರಕ್ಕೆ ವರ್ಣ ಲೇಪನ ಮಾಡಿದ್ದಾರೆ. ಚಿತ್ರದ ಕೊನೆಗೆ ಕಪ್ಪು ಹಾಗೂ ಕಂದುವರ್ಣದಲ್ಲಿ ಹೊರರೇಖೆ ಎಳೆದಿದ್ದಾರೆ.

* ಒಂದು ವಿಷಯಕ್ಕೆ ಸಂಬಂಧಿಸಿದ ಚಿತ್ರರಚನೆ ಮುಗಿನಂತರ ಮತ್ತೊಂದು ವಿಷಯಕ್ಕೆ ಸಂಬಂಧಿಸಿದ ಚಿತ್ರಗಳನ್ನು ಪ್ರತ್ಯೇಕವಾದ ಸ್ಥಳ. ಅಥವಾ ಭಾಗಗಳನ್ನಾಗಿ ಮಾಡಿಕೊಂಡು. ಮೊದಲಿನ ಚಿತ್ರಗಳಿಂದ ಪ್ರತ್ಯೇಕಿಸಿ ಬರೆಯದೇ. ಒಂದು ಚಿತ್ರದ ಬದಿಯಲ್ಲೇ ಅದಕ್ಕೆ ಹೊಂದಿಕೊಂಡಂತೆ ಯಾವುದೇ ಭಾಗಮಾಡದೇ ಮತ್ತೊಂದು ಚಿತ್ರ ಬರೆದಿರುವುದರಿಂದ ಚಿತ್ರಗಳ ವಿಷಯಗಳು ಒಂದನ್ನೊಂದು ಸೇರಿಕೊಂಡು ಅವುಗಳನ್ನು ಗುರುತಿಸುವಲ್ಲಿ ತೊಂದರೆಯಾಗುತ್ತದೆ.
* ಪ್ರತಿಯೊಂದು ಹೂಕುಂಡದ ಅಕ್ಕಪಕ್ಕದಲ್ಲಿ ನವಿಲುಗಳು, ಜಿಂಕೆ, ಮಂಗ, ಹಂಸಪಕ್ಷಿಗಳು, ಕಾಮಧೇನುಗಳು, ಪಾರಿವಾಳಗಳು, ಗಿಳಿಗಳು ಮುಂತಾದ ಪ್ರಾಣಿಪಕ್ಷಿಗಳನ್ನು ರಚಿಸಲಾಗಿದ್ದರೆ ಪ್ರತಿಯೊಂದು ಗಿಡದ ಪಕ್ಕದಲ್ಲಿಯೂ ಇವುಗಳನ್ನು ಕಾಣಬಹುದು.

**೩. ನರಗುಂದದ ಗುಂಡಪ್ಪ ಹಸಬಿಯವರ ಮನೆಯ ಭಿತ್ತಿಚಿತ್ರಗಳು :** ನರಗುಂದದ ಗುಂಡಪ್ಪ ಹಸಬಿಯವರ ಅಜ್ಜಂದಿರಾಜ ಸಿದ್ಧಪ್ಪ ಕಲ್ಯಾಣಪ್ಪ ಹಸಬಿ ಎಂಬವರು ನರಗುಂದದ ಬಂಡಾಯದ ಬಳಿಕ ಅಂದರೆ ಕ್ರಿ. ಶ. ೧೮೭೫ ರ ನಂತರ ತಮ್ಮ ವಾಸಕ್ಕಾಗಿ ಮನೆಯೊಂದನ್ನು ಕಟ್ಟಿಕೊಂಡಿದ್ದಾರೆ. ಈ ಮನೆಯು ಎರಡು ಅಂತಸ್ತುಗಳನ್ನು ಮೊದಲು ಹೊಂದಿತ್ತು. ಆದರೆ ನಂತರದಲ್ಲಿ ಎರಡನೆಯ ಮಹಡಿ ಜೀರ್ಣವಾದುದರಿಂದ ಅದನ್ನು ತೆಗೆದು ಹಾಕಿದರು. ಈಗ ಉಳಿದಿರುವ ಮೊದಲ ಮಹಡಿಯ ಹೊರಭಾಗದ ಚಾವಡಿಯಲ್ಲಿ ಮೇಲ್ಛಾವಣಿಯ ಮರದ ಹಲಗೆಗಳ ಮೇಲೆ ಭಿತ್ತಿ ಚಿತ್ರಗಳಿವೆ. ಇವು ಕೇವಲ ನೂರುವರ್ಷಗಳಷ್ಟು ಹಿಂದಿನವು ಆದರೂ ಸದಾ ಬಿಸಿಲುಗಾಳಿಗೆ ಮೈ ಒಡ್ಡಿ ವಾತಾವರಣಕ್ಕೆ ತೆರೆದುಕೊಂಡಿರುವುದರಿಂದ ಚಿತ್ರಗಳು ಬಹಳ ನಾಶವಾಗಿವೆ ಅಲ್ಲದೇ ಮರದ ಹಲಗೆಗಳಲ್ಲಿ ಬಿರುಕು ಬಿಟ್ಟಿವೆ. ಶಿವರಾಮ ಕಾರಂತ ಅವರ ಪರಿಶೀಲನೆಯ ಸಂದರ್ಭದಲ್ಲಿ ನಾಶದಹಾದಿ ಹಿಡಿದಿದ್ದ ಈ ಚಿತ್ರಗಳು ಇಂದು ಅಂದರೆ ಮತ್ತೆ ೩೦-೪೦ ವರ್ಷಗಳ ನಂತರದಲ್ಲಿ ಇನ್ನೂ ಹೆಚ್ಚಿನ ಹಾನಿಗೊಳಗಾಗಿವೆ. ಈಗ ಕೇವಲ ಮೂರ್‍ನಾಲ್ಕು ಚಿತ್ರಗಳು ಮಾತ್ರ ಕಂಡು ಬರುತ್ತಿದ್ದು ಅವುಗಳನ್ನು ವಿಷಯಾಧಾರಿತವಾಗಿ ಈ ಕೆಳಗಿನಂತೆ ವಿಂಗಡಿಸಬಹುದು.

I. ಮನೆಯ ವಂಶಸ್ಥರ ಚಿತ್ರಗಳು

II. ಧಾರ್ಮಿಕ ಚಿತ್ರಗಳು

**I. ಮನೆಯ ವಂಶಸ್ಥರ ಚಿತ್ರಗಳು :** ಮರದ ಫಲಕದ ಮೇಲೆ ರಚನೆ ಯಾಗಿರುವ ಇಲ್ಲಿನ ಚಿತ್ರಗಳಲ್ಲಿ ಮನೆಯ ವಂಶಸ್ಥರ ಚಿತ್ರಗಳೂ ಇವೆ. ನರಗುಂದ ಸಂಸ್ಥಾನವು ಪ್ರವರ್ಧಮಾನದಲ್ಲಿದ್ದಾಗ ಈ ಮನೆಯ ಹಿರಿಯರು ಉನ್ನತ ಅಧಿಕಾರದಲ್ಲಿದ್ದುದಾಗಿ ಹೇಳುತ್ತಾರೆ. ಅದನ್ನು ಪ್ರತಿಬಿಂಬಿಸುವ ಒಂದು ಚಿತ್ರವಿದ್ದು ಇಬ್ಬರು ಸರದಾರರು ಕುದುರೆ ಮೇಲೆ ಹೊರಟ ದೃಶ್ಯ ಚಿತ್ರಿಸಲಾಗಿದೆ.

೧. ಕುದುರೆ ಸವಾರರ ಚಿತ್ರ : ಇಲ್ಲಿನ ಒಂದು ಚಿತ್ರದಲ್ಲಿ ಇಬ್ಬರು ಕುದುರೆ ಸವಾರರು ರಭಸದಿಂದ ಧಾವಿಸುತ್ತಿರುವ ಚಿತ್ರವಿದೆ. ಈ ಚಿತ್ರವು ಸುಮಾರು ೨ x ೪ ಅಡಿ ಅಳತೆಯಲ್ಲಿದೆ. ಈ ಚಿತ್ರದಲ್ಲಿ ಒಬ್ಬರ ಹಿಂದೆ ಒಬ್ಬರಂತೆ ಇಬ್ಬರು ಕುದುರೆಸವಾರರು ವೇಗದಿಂದ ಹೊರಟಿದ್ದಾರೆ. ಮುಂದಿನ ಕುದುರೆಯು ಕೆಂಪುಮಿಶ್ರಿತ ಬಿಳಿವರ್ಣದಲ್ಲಿದ್ದರೆ, ಹಿಂದಿನ ಕುದುರೆಯು ನಸುಕಂದು ವರ್ಣದಲ್ಲಿದೆ. ಎರಡೂ ಕುದುರೆಗಳು ಮುಂಗಾಲುಗಳನ್ನು ಎತ್ತಿ ಕೆನೆಯುತ್ತಿವೆ. ಕುದುರೆಗಳ ಭಂಗಿಯು ಆಕರ್ಷಕವಾಗಿವೆ. ಕುದುರೆ ಸವಾರರು ಮರಾಠ ಶೈಲಿಯ ಸರದಾರರ ಉಡುಪುಗಳನ್ನು ಧರಿಸಿದ್ದಾರೆ. ಮುಂದಿನ

ಸವಾರ ತೆಳು ಹಸಿರು ವರ್ಣದ ಟೊಪ್ಪಿಗೆ ನೀಲಿ ಮಿಶ್ರಿತ ಬಿಳಿ ವರ್ಣದ ಉದ್ದ ತೋಳಿನ ಅಂಗಿ, ತೆಳು ಕೆಂಪುವರ್ಣದ ಪಂಚೆಯ ಹಾಗಿರುವ ಚಲ್ಲಣವನ್ನು ತೊಟ್ಟಿದ್ದು ನಡಕ್ಕೆ ಕಡುಹಸಿರು ಬಣ್ಣದ ನಡುಪಟ್ಟಿಯನ್ನು ಬಿಗಿದಿದ್ದಾನೆ. ಕಾಲಲ್ಲಿ ಅದೇ ವರ್ಣದ ಬೂಟುಗಳನ್ನು ಚಿತ್ರಿಸಿದೆ. ಹಿಂದಿನ ಕುದುರೆಯ ಸವಾರನು ಕಡುಹಸಿರು ಬಣ್ಣದ ಅಂಗಿ ಅದೇ ವರ್ಣದ ಪೇಠ ಧರಿಸಿದ್ದಾನೆ. ಈತನಿಗೆ ಕಾಲಲ್ಲಿ ಯಾವುದೇ ಪಾದರಕ್ಷೆಗಳು ಕಂಡು ಬರುವುದಿಲ್ಲ. ಇಲ್ಲಿ ಚಿತ್ರಗಳಿಗೆ ಕೆಂಪು ಮತ್ತು ನೀಲ ವರ್ಣದ ಹೊರರೇಖೆಗಳನ್ನು ಎಳೆಯಲಾಗಿದೆ. ಚಿತ್ರದ ಹಿನ್ನೆಲೆಯ ವರ್ಣವು ದಟ್ಟ ನೀಲಿಯಾಗಿದ್ದು, ಅದು ಈಗ ಮಾಸಿಹೋಗಿ ತೆಳು ನೀಲಿವರ್ಣಕ್ಕೆ ತಿರುಗಿದೆ. ಈ ಚಿತ್ರದ ವರ್ಣವಿನ್ಯಾಸವು ಕಣ್ಣಿಗೆ ತಂಪು ಕೊಡುವಂತೆ ಇವೆ. ಮೂಲದಲ್ಲಿ ಇವು ಪ್ರಖರ ವರ್ಣಗಳಾಗಿದ್ದರೂ ವಾತಾವರಣಕ್ಕೆ ಸಿಕ್ಕು ಮಾಸಿಹೋಗಿವೆ.

**II. ಧಾರ್ಮಿಕ ಚಿತ್ರಗಳು :** ಧಾರ್ಮಿಕ ಚಿತ್ರಗಳಲ್ಲಿ ಕೃಷ್ಣನ ಸರಸದ ದೃಶ್ಯ, ರಾಮ, ರಾವಣರ ಯುದ್ಧ, ಆಂಜನೇಯನ ಚಿತ್ರ, ಗಂಡಭೇರುಂಡ ಚಿತ್ರಗಳು ಇಲ್ಲಿ ರಚನೆಯಾಗಿದ್ದು ಅವುಗಳನ್ನು ಒಂದೊಂದಾಗಿ ವಿವರಿಸಬಹುದು.

೧. ಕೃಷ್ಣ ಮತ್ತು ಆತನ ಮಡದಿಯರ ಸರಸ ಸಚಿತ್ರಗಳು : ಇಲ್ಲಿನ ಮೇಲ್ಚಾವಣೆಯ ಮರದ ಹಲಗೆಯ ಮೇಲೆ ಕೃಷ್ಣನು ತನ್ನ ಇಬ್ಬರು ಮಡದಿಯರ ಸಂಗಡ ಸರಸದಲ್ಲಿ ತೊಡಗಿರುವ ಎರಡು ಚಿತ್ರಗಳಿವೆ. ವಸ್ತುವಿಷಯ, ವರ್ಣವಿನ್ಯಾಸ ಎರಡರಲ್ಲೂ ಒಂದೇ ತೆರನಾಗಿದ್ದರೆ ನಿರೂಪಣೆಯಲ್ಲಿ ಮಾತ್ರ ಭಿನ್ನತೆ ಇದೆ. ಹೀಗಿರುವ ಎರಡು ಚಿತ್ರಗಳಲ್ಲಿ ಒಂದರಲ್ಲಿ ನಾಲ್ಕು ಕೈಗಳನ್ನು ಹೊಂದಿದ ಶ್ರೀಕೃಷ್ಣನು ಎರಡು ಕೈಗಳಿಂದ ಎಡಬಲಗಳಲ್ಲಿ ತನ್ನಿಬ್ಬರು ಸತಿಯರನ್ನು ತಬ್ಬಿ ಹಿಡಿದಿದ್ದಾನೆ. ಇನ್ನೆರಡು ಕೈಗಳಿಂದ ಆ ಇಬ್ಬರು ಮಡದಿಯರ ಕುಚಗಳನ್ನು ಮರ್ದನ ಮಾಡುತ್ತಿದ್ದಾನೆ. ಕೃಷ್ಣನು ಟೊಪ್ಪಿಗೆಯಂತಿರುವ ಚಿಕ್ಕದಾದ ಕಿರೀಟವನ್ನು ಧರಿಸಿದ್ದು ಕೊರಳಲ್ಲಿ ಆಭರಣಗಳೂ ಇವೆ. ಭುಜಕ್ಕೆ ಭುಜಕೀರ್ತಿಯನ್ನು ಧರಿಸಿದ್ದಾನೆ. ನೀಲ ಮೇಘಶ್ಯಾಮ ವರ್ಣದ ಕೃಷ್ಣನು ಹಳದಿ ವರ್ಣದ ಧೋತ್ರಧರಿಸಿ, ನಡುವಿಗೆ ಕಡುಹಸಿರು ವರ್ಣದ ಶಾಲು ಕಟ್ಟಿರುವನು.

ಆತನ ಮಡದಿಯರು ವಿಶಿಷ್ಟ ರೀತಿಯಲ್ಲಿ ಕೂದಲನ್ನು ಎತ್ತಿ ತುರುಬು ಕಟ್ಟಿದ್ದಾರೆ. ಹಣೆಯ ಮೇಲೆ ಜ್ಯೋತಿಯಾಕಾರದ ಬೊಟ್ಟನ್ನು ಇಟ್ಟುಕೊಂಡಿದ್ದು, ಇಬ್ಬರ ಕೊರಳಲ್ಲಿ ಮೂಗಿನಲ್ಲಿ, ಕಿವಿಯಲ್ಲಿ, ಕೈಯಲ್ಲಿ, ಕಾಲಲ್ಲಿ ಆಭರಣಗಳಿವೆ. ಇಬ್ಬರೂ ಕಪ್ಪು ಪ್ರಧಾನವಾದ ಸೀರೆಗಳನ್ನು ಉಟ್ಟುಕೊಂಡಿದ್ದು ಒಬ್ಬಳ ಸೀರೆಯಲ್ಲಿ ಸೇವಂತಿಗೆ ಹೂವನ್ನು ಹೋಲುವ ನಕ್ಷೆ ಇದ್ದರೆ ಇನ್ನೊಬ್ಬಳ ಸೀರೆಯಲ್ಲಿ ಯಾವುದೇ ಹೂವಿನ ನಕ್ಷೆ ಇರುವುದಿಲ್ಲ. ಇಬ್ಬರ ಸೀರೆಗಳ ಅಂಚುಗಳೂ ತೆಳು ನೀಲವರ್ಣದಿಂದ ಕೂಡಿವೆ. ಇಬ್ಬರೂ ಕುಪ್ಪಸವನ್ನು ಧರಿಸಿಲ್ಲ. ತೆರೆದೆದೆಯಲ್ಲಿಯೇ ಇದ್ದಾರೆ. ಕೃಷ್ಣನ ಕುಚಮರ್ದನ ಕ್ರಿಯೆಯಿಂದ ಒಬ್ಬಳು ನಾಚಿ ಬೇರೆ ಕಡೆಗೆ ಮುಖ ತಿರುವಿದ್ದರೆ ಇನ್ನೊಬ್ಬಳು ಸುಮ್ಮನೇ ನಿಂತಿದ್ದಾಳೆ. ಕೃಷ್ಣ ಮತ್ತು ಆತನ ಮಡದಿಯರ ದೇಹದ ರೂಪಗಳು ಎದುರು ನೋಟವನ್ನು ತೋರುತ್ತಿದ್ದರೂ ಅವರ ಕಾಲುಗಳು ಮಾತ್ರ ಬದಿಯ ನೋಟದಲ್ಲಿ ಕಂಡಂತೆ ಚಿತ್ರಿಸಿವೆ. ಇಲ್ಲಿಯೂ ಕೆಂಪು ನೀಲಿ ಹೊರರೇಖೆಗಳನ್ನು ಚಿತ್ರಕ್ಕೆ ಎಳೆಯಲಾಗಿದೆ. ಚಿತ್ರದ ಹಿನ್ನೆಲೆಯು ನೀಲವರ್ಣದ್ದಾಗಿದೆ. ಇನ್ನೊಂದು ಇಂತಹ ಚಿತ್ರದಲ್ಲಿ ಕೃಷ್ಣನು ತನ್ನಿಬ್ಬರು ಮಡದಿಯರನ್ನು ಸೊಂಟದ ಮೇಲೆ ಏರಿಸಿಕೊಂಡು ಸರಸದಲ್ಲಿ ತೊಡಗಿದ್ದಾನೆ. ಮೊದಲಿನ ಚಿತ್ರದಂತೆ ಇಲ್ಲಿಯೂ ಕೃಷ್ಣನು ಮಡದಿಯರ ಕುಚಮರ್ದನದಲ್ಲಿ ತೊಡಗಿದ್ದಾನೆ. ವರ್ಣ ವಿನ್ಯಾಸದಲ್ಲಿ ಮೊದಲಿನ ಚಿತ್ರವನ್ನೇ ಇದು ಹೋಲುತ್ತದೆ.

೨. ರಾಮ ರಾವಣರ ಯುದ್ಧದ ದಶ್ಯ : ಇಲ್ಲಿರುವ ಮತ್ತೊಂದು ೨ x ೪ ಅಡಿ ಅಳತೆಯಲ್ಲಿರುವ ಚಿತ್ರವು ರಾಮ - ರಾವಣರ ಯುದ್ಧ ದೃಶ್ಯವನ್ನು ಪ್ರತಿನಿಧಿಸುತ್ತದೆ. ಎಡಗಡೆಗೆ ರಾವಣನನ್ನು ಬೃಹದಾಕಾರದಲ್ಲಿ ಚಿತ್ರಿಸಿದ್ದಾರೆ. ಹತ್ತು ತಲೆ ಇಪ್ಪತ್ತು ಕೈಗಳನ್ನು ಹೊಂದಿದ ದಶಕಂಠ ರಾವಣನು ಖಡ್ಗಧಾರಿಯಾಗಿ ಅಲ್ಲದೇ ಬೇರೆ ಬೇರೆ ಕೈಗಳಲ್ಲಿ ವಿವಿಧ ಆಯುಧಗಳನ್ನು ಹಿಡಿದು ನಿಂತಿದ್ದಾನೆ. ಕಂದು ಮೈಬಣ್ಣ ಉಳ್ಳವನಾಗಿದ್ದು ಬಿಳಿಧೋತ್ರ ಉಟ್ಟು ನೀಲಿ ಶಾಲು ಭುಜದಿಂದ ಇಳಿಬಿಟ್ಟಿದ್ದಾನೆ. ಮೈ ಮೇಲಿನ ಒಡವೆಗಳು ಹಳದಿ ಬಣ್ಣದಲ್ಲಿವೆ. ಮೊದಲಿಗೆ ಅವು ಬಂಗಾರದ ವರ್ಣದಲ್ಲಿದ್ದಿರಬಹುದು ಆದರೆ ಕಾಲನ ದಾಳಿಗೆ ಸಿಕ್ಕಿ ಮಾಸಿಹೋಗಿ ಮಾಸಲು ಹಳದಿಯಾಗಿ ಆಭರಣಗಳ ವರ್ಣ ಮಾರ್ಪಟ್ಟಿದೆ. ರಾವಣನನ್ನು ಈ ಚಿತ್ರದಲ್ಲಿ ಪ್ರಧಾನವಾಗಿ ಎದುರುನೋಟದಿಂದ ಚಿತ್ರಿಸಿದ್ದರೆ, ರಾಮಲಕ್ಷ್ಮಣರು ಮತ್ತು ಆತನ ಸಂಗಡಿಗರನ್ನು ರಾವಣನಿಗಿಂತ ಚಿಕ್ಕವರಾಗಿ ಬದಿಯ ನೋಟದಲ್ಲಿ ಚಿತ್ರಿಸಿದ್ದಾರೆ. ರಾವಣನ ಬಲಕ್ಕೆ ರಾಮ ಲಕ್ಷ್ಮಣ ಮತ್ತು ಅವನ ಸೈನ್ಯವನ್ನು ಚಿತ್ರಿಸಿದ್ದಾರೆ. ಇವರೆಲ್ಲರನ್ನೂ ಸಾಲಾಗಿ ಒಬ್ಬರ ಹಿಂದೆ ಒಬ್ಬರಾಗಿ ಇರುವರು. ರಾಮನು ಕಂದುಮೈವರ್ಣದವನಾಗಿದ್ದು ಹಳದಿವರ್ಣದ ಧೋತ್ರ ಉಟ್ಟಿದ್ದಾನೆ. ಲಕ್ಷ್ಮಣನು ಗೌರವರ್ಣದವನಾಗಿದ್ದು ನೇರಳೆ ವರ್ಣದ ಧೋತ್ರ ಉಟ್ಟಿದ್ದಾನೆ. ರಾಮನು ಬಿಲ್ಲಿಗೆ ಬಾಣಹೂಡಿ ಹೊಡೆಯುತ್ತಿರುವಂತೆ ಚಿತ್ರಿತನಾಗಿದ್ದರೆ, ಲಕ್ಷ್ಮಣ ಬಿಲ್ಲು ಹಿಡಿದುಕೊಂಡು ಸುಮ್ಮನೇ ಅಣ್ಣನ ಹಿಂದುಗಡೆ ನಿಂತಿದ್ದಾನೆ. ರಾಮನನ್ನುಳಿದು ಲಕ್ಷ್ಮಣ ಮತ್ತು ಇತರ ವ್ಯಕ್ತಿಗಳ ದೇಹಗಳನ್ನು ಹಿಂದಕ್ಕೆ ಬಾಗಿಸಿ ರಚಿಸಿದ್ದು ಇಡೀ ಚಿತ್ರಕ್ಕೆ ಒಂದು ವೇಗವನ್ನು ತಂದುಕೊಟ್ಟಿದೆ. ರಾಮನು ಬಿಡುತ್ತಿರುವ ಬಾಣದ ರಭಸವನ್ನೂ ಈ ಕ್ರಿಯೆ ಪ್ರತಿನಿಧಿಸಿದಂತೆ ತೋರುತ್ತದೆ. ಇವರುಗಳ ಹಿಂದೆ ದೂರ ಆಕಾಶದಲ್ಲಿ ಹನುಮಂತನು ಹಾರುತ್ತಿದ್ದಾನೆ. ಆತನ ಬಾಲವು ಮುಂದಕ್ಕೆ ಚಾಚಿಕೊಂಡಿರುವ ರೀತಿ ಆಕರ್ಷಕವಾಗಿದೆ.

೩. ಗಂಡಭೇರುಂಡದ ಚಿತ್ರ : ಇಲ್ಲಿನ ಇನ್ನೊಂದು ಚಿತ್ರ ಗಂಡಭೇರುಂಡ ಪಕ್ಷಿಯದಾಗಿದೆ. ಇಲ್ಲಿನ ಈ ಗಂಡಭೇರುಂಡವು ವಿಚಿತ್ರವಾದ ಆಕಾರವನ್ನು ಹೊಂದಿದೆ. ಮನುಷ್ಯ ಶರೀರ, ಪಕ್ಷಿಯ ಮುಖಹೊಂದಿ ರೆಕ್ಕೆಗಳನ್ನು ಉಳ್ಳದ್ದಾಗಿದೆ. ನೋಡಲು ಗರುಡನಂತೆ ಕಾಣುವುದು. ರೆಕ್ಕೆಗಳ ಜತೆಗೆ ಎಂಟು ಜೊತೆ ಕೈಗಳೂ ಹಾಗೇ ಎಂಟು ಜೊತೆ ಕಾಲುಗಳೂ ಇವಕ್ಕೆ ರಚಿಸಲಾಗಿದೆ. ಈ ಗಂಡಭೇರುಂಡ ಪಕ್ಷಿಗೆ ಒಂದೇ ಮುಖವಿರದೇ ವಿವಿಧ ರೀತಿಯ ಅನೇಕ ಮುಖಗಳನ್ನು ರಚಿಸಲಾಗಿದೆ. ಮಧ್ಯದ ಪ್ರಧಾನವಾದ ಮುಖ ಗರುಡನಂತೆ ಇದ್ದರೆ ಇನ್ನುಳಿದ ಮುಖಗಳು ಮಾನವ ಮುಖ. ವಿಚಿತ್ರ ಆಕಾರದ ಪ್ರಾಣಿಪಕ್ಷಿಗಳ ಮುಖಗಳು. ಕಾಲ್ಪನಿಕ ಪ್ರಾಣಿಪಕ್ಷಿಗಳ ಮುಖಗಳನ್ನು ಹೊಂದಿದೆ. ಈ ಚಿತ್ರವು ಶಿವರಾಮ ಕಾರಂತ ಅವರ ಪರಿಶೀಲನೆಯ ಸಮಯದಲ್ಲೇ ಸಾಕಷ್ಟು ನಾಶವಾಗಿತ್ತು. ಈಗಿನ ಇದರ ಪರಿಸ್ಥಿತಿಯಂತೂ ಇನ್ನೂ ಶೋಚನೀಯವಾಗಿದೆ.

೪. ಆಂಜನೇಯನ ಚಿತ್ರ : ಇಲ್ಲಿರುವ ಮತ್ತೊಂದು ಚಿತ್ರವು ಆಂಜನೇಯನದಾಗಿದೆ. ಇಲ್ಲಿನ ಚಿತ್ರದಲ್ಲಿ ಹನುಮಂತನು ತನ್ನ ಬಾಲವನ್ನು ಮೇಲೆತ್ತಿಕೊಂಡು ಮುಖದ ಮುಂದೆ ಇಳಿಬಿದ್ದಂತೆ ಚಾಚಿಕೊಂಡಿದ್ದಾನೆ. ಹನುಮಂತನಿಗೆ ಮುಖಕ್ಕೆ ಗಡ್ಡ ಮೀಸೆಗಳನ್ನು ರಚಿಸಿದ್ದು ಇಲ್ಲಿ ಕುತೂಹಲ ಕೆರಳಿಸುತ್ತದೆ. ಇದರ ವರ್ಣಗಳು ಬಹಳ ಮಾಸಿಹೋಗಿವೆ. ಸರಳ ಸುಂದರ ರೇಖೆಗಳು ಅಲ್ಲಲ್ಲಿ ಕಂಡುಬರುತ್ತವೆ. ನರಗುಂದದ ಗುಂಡಪ್ಪ ಹಸಬಿಯವರ ಮನೆಯಲ್ಲಿನ ಚಿತ್ರಗಳಿಗೂ ಇದೇ ಊರಿನ ಅರಮನೆಯ ಚಿತ್ರಗಳಿಗೂ ಬಹಳವಾಗಿ ವ್ಯತ್ಯಾಸ ಕಂಡುಬರುತ್ತದೆ. ವರ್ಣ ವಿನ್ಯಾಸ ವಸ್ತು ವಿಷಯ, ಚಿತ್ರರಚನಾ ಶೈಲಿ ಎಲ್ಲವೂ ಭಿನ್ನವಾಗಿದೆ. ಅರಮನೆಯಲ್ಲಿನ ಚಿತ್ರಗಳು ಮರಾಠರ

ಪ್ರಭಾವದಿಂದ ಕೂಡಿದ್ದರೆ ಈ ಚಿತ್ರಗಳು ಸ್ಥಳೀಯ ಲಕ್ಷಣಗಳನ್ನು ಮೈಗೂಡಿಸಿಕೊಂಡಿವೆ. ವರ್ಣವಿನ್ಯಾಸದಲ್ಲಿ ಅರಮನೆಯ ಚಿತ್ರಗಳು ಪ್ರಖರವರ್ಣದಿಂದ ಕಣ್ಣಿಗೆ ತೀಕ್ಷ್ಣ ಅನುಭವ ಕೊಟ್ಟರೆ ಈ ಚಿತ್ರಗಳು ಪ್ರಖರವರ್ಣಗಳನ್ನೇ ಬಳಸಿದಾಗ್ಯೂ ಅವುಗಳಿಗೆ ಪೂರಕವಾದ ಪ್ರತಿಯಾದ ಪ್ರಖರ ವರ್ಣ ಮಿಶ್ರಮಾಡಿಕೊಂಡು ಬಳಸಿದ್ದರಿಂದ ಕಣ್ಣಿಗೆ ತೀಕ್ಷ್ಣ ಪ್ರಭಾವ ಬೀರದೆ ತಂಪಾದ ಅನುಭವ ಕೊಡುತ್ತವೆ. ವರ್ಣ ಮಿಶ್ರಣ ಅವುಗಳ ಬಳಕೆಯ ವಿಷಯದಲ್ಲಿ ಹಸಬಿಯವರ ಮನೆಯ ಚಿತ್ರಗಳೇ ಮೇಲೆನಿಸುತ್ತವೆ. ಹಸಬಿಯವರ ಮನೆಯ ಚಿತ್ರಗಳು ಬಹಳ ಮಾಸಿಹೋಗಿದ್ದು, ಅವುಗಳ ರಕ್ಷಣೆಯ ವಿಷಯದಲ್ಲಿ ಮನೆಯವರು ಯಾವ ಕ್ರಮವನ್ನೂ ತೆಗೆದುಕೊಂಡಂತೆ ಕಾಣುವುದಿಲ್ಲ.

**೪. ಸಂಕೇಶ್ವರದ ಮಮದಾಪುರ ಅವರ ಮನೆ :** ಬೆಳಗಾಂವ ಜಿಲ್ಲೆಯ ಸಂಕೇಶ್ವರದ ವರ್ತಕರೊಬ್ಬರ ಮನೆಯಲ್ಲಿ ಸುಮಾರು ಕ್ರಿ. ಶ. ೧೮೭೦ ರಲ್ಲಿ ರಚನೆಯಾದ ಭಿತ್ತಿಚಿತ್ರಗಳು ಕಂಡುಬರುತ್ತವೆ. ಇಲ್ಲಿ ಮೊದಲು ಗೋಡೆಯಲ್ಲಿ ಲಕ್ಷ್ಮೀ, ಸರಸ್ವತಿ, ಗಣಪತಿ, ಶಿವ, ಹೀಗೆ ದೇವತಾ ಚಿತ್ರಗಳು ಇದ್ದುದಾಗಿ ಹೇಳುತ್ತಾರೆ. ಆದರೆ ಈಗ ಅವುಗಳ ಮೇಲೆ ಸುಣ್ಣ ಬಣ್ಣಸಾರಿಸಲಾಗಿದ್ದು, ಕೇವಲ ಹೂಬಳ್ಳಿಯ ನಕ್ಷಾವಿನ್ಯಾಸಗಳು ಮಾತ್ರ ಉಳಿದುಕೊಂಡಿವೆ. ಮನೆಯ ಎಲ್ಲ ಬದಿಯ ಗೋಡೆಗಳಲ್ಲಿ ಸುಮಾರು ೪ ರಿಂದ ೫ ಅಡಿಗಳ ಎತ್ತರದಲ್ಲಿ ಅಡ್ಡಪಟ್ಟಿಯನ್ನು ರಚಿಸಿ ಅದರಲ್ಲಿ ಹೂಬಳ್ಳಿಯ ನಕ್ಷಾ ರೂಪಗಳನ್ನು ಚಿತ್ರಿಸಲಾಗಿದೆ. ಮಾಡುಗಳು, ಕಿಟಕಿ ಬಾಗಿಲುಗಳು ಬಂದಲ್ಲಿ, ಅವುಗಳ ಅಂಚುಗಳಿಗೆ ವಿಶೇಷವಾಗಿರುವ ನಕ್ಷಾ ವಿನ್ಯಾಸಗಳನ್ನು ಮಾಡಲಾಗಿದೆ. ಮನೆಯ ಉದ್ದಕ್ಕೂ ಒಂದೇ ಬಗೆಯಲ್ಲಿರುವ ನಕ್ಷಾ ವಿನ್ಯಾಸವಿದ್ದು ಹೆಚ್ಚಿನ ವೈವಿಧ್ಯತೆ ಇಲ್ಲ. ಚಿತ್ರಗಳು ತೈಲವರ್ಣದಿಂದ ರಚನೆಯಾಗಿದ್ದು ಹೊಳಪಿನಿಂದ ಕೂಡಿವೆ.

ಮನೆಯಲ್ಲಿ ರಚನೆಯಾದ ಭಿತ್ತಿ ಚಿತ್ರಕಲೆಯು ಪೂರ್ತಿಯಾಗಿ ವೈಯಕ್ತಿಕ ಭಾವನೆಗಳಿಗೆ ಸಂಬಂಧಿಸಿದಂತೆ ಚಿತ್ರಿಸಲ್ಪಟ್ಟಿರುತ್ತದೆ. ಪೋಷಕನ ಅಭಿರುಚಿ, ಅನಿಸಿಕೆಗಳನ್ನಾಧರಿಸಿ ರಚನೆಯಾಗುವ ಮನೆಗಳಲ್ಲಿಯ ಭಿತ್ತಿ ಚಿತ್ರ ಕಲೆಯಲ್ಲಿ ಇಷ್ಟದ ದೇವತೆಗಳು, ಮನೆಯ ವಂಶಸ್ಥರು, ಅವರ ಚಟುವಟಿಕೆಗಳು, ಆಚರಿಸುವ ಧಾರ್ಮಿಕ ವಿಧಿಗಳಂತಹ ಘಟನೆಗಳು ಚಿತ್ರಿಸಲ್ಪಟ್ಟಿರುತ್ತವೆ. ಗುಳೇದಗುಡ್ಡದ ಹೊಸಮನಿಗೌಡರ ಮನೆಯಲ್ಲಿ ಇತರ ದೇವತೆಗಳ ಜೊತೆಗೆ ಅವರ ಕುಲದೈವವಾದ ದುರ್ಗಾದೇವಿಯ ಚಿತ್ರವು ಅರಮನೆಯ ವಂಶಪರಂರೆಯನ್ನು ಪ್ರತಿಬಿಂಬಿಸಿದರೆ, ಮಧ್ಯದಲ್ಲಿನ ಆಂಜನೇಯ ದೇವರ ಗುಡಿಯ ಚಿತ್ರ ಆ ದೇವರ ಬಗೆಗಿನ ಇವರ ಭಕ್ತಿಯನ್ನು ಸೂಚಿಸುತ್ತದೆ. ಆಭರಣಾದಿ ವೇಷಭೂಷಣಗಳು ಹಿಂದಿನ ದಿನಗಳಲ್ಲಿ ಈ ಮನೆತನಕ್ಕೆ ಇರುವ ಪ್ರತಿಷ್ಠೆ, ಗೌರವಗಳನ್ನು ಅವರ ಸ್ಥಿತಿಗತಿಗಳನ್ನು ನೆನಪಿಸುವ ಕನ್ನಡಿಗಳಾಗಿವೆ ಎನ್ನಬಹುದು.

ರಾಯಚೂರಿನ ಖಾಜಿನಗೌಡರ ಮನೆಯಲ್ಲಿ ಕೃಷ್ಣ ಕಥಾನಕಗಳಿಗೆ ಸಂಬಂಧಿಸಿದ ಚಿತ್ರಗಳು ಮಾತ್ರ ಇದ್ದು, ಶೈವ ಸಂಬಂಧೀ ಚಿತ್ರಗಳು ಕಂಡುಬರುವುದಿಲ್ಲ. ಇದರ ಜೊತೆಗೆ ತಾಯಿ, ಮಗು, ಮಹಿಳೆ, ಸರದಾರರ ಚಿತ್ರಗಳು ಈ ಮನೆಯ ವಂಶಂಸ್ಥರನ್ನು ಪರಿಚಯಿಸುತ್ತವೆ.

ನರಗುಂದದ ಗುಂಡಪ್ಪ ಹಸಬಿಯವರ ಮನೆಯಲ್ಲಿಯೂ ಕುದುರೆಗಳ ಮೇಲೆ ಸವಾರಿಮಾಡುತ್ತಿರುವ ಮನೆಯ ವಂಶಸ್ಥರ ಚಿತ್ರ, ಕೃಷ್ಣನ ಸರಸದ ದೃಶ್ಯ, ರಾಮಾಯಣದ ಚಿತ್ರಗಳು ಕಂಡುಬರುತ್ತವೆ. ಸಂಕೇಶ್ವರದ ವರ್ತಕರ ಮನೆಯಲ್ಲಿನ ನಕ್ಷಾ ಚಿತ್ರಗಳು ಅವರ ಕಲಾ ಅಭಿವ್ಯಕ್ತಿಯ ಮತ್ತೊಂದು ರೂಪಗಳಾಗಿವೆ. ಹೀಗೆ ಮನೆಗಳಲ್ಲಿ ರಚನೆಯಾದ ಭಿತ್ತಿ ಚಿತ್ರಕಲೆಯನ್ನು ಸ್ಥೂಲವಾಗಿ ನೋಡಿದಾಗ ಪೋಷಕರ ಧರ್ಮಾಭಿಮಾನ, ಕಲಾಭಿಮಾನ, ಅವರ ಆಸಕ್ತಿ ಅಭಿರುಚಿಗಳ ವಿವರಗಳು ಅವುಗಳಲ್ಲಿ ಅಡಕವಾಗಿರುವುದು ತಿಳಿದು ಬರುತ್ತದೆ.



ತ್ರಿಪುರ ರಾಕ್ಷಸರು



ಬಾಬಾಸಾಹೇಬ.

ಅರ್ಜುನನೊಂದಿಗೆ ಹೋಗುತ್ತಿರುವ ಕೃಷ್ಣ





ಮೃತಬಾಲಕನನ್ನು ಮರಕ್ಕೆ ಬಿಗಿಯುತ್ತಿರುವ ...

ಮಹಾಲಿಂಗೇಶ್ವರ ಮಠ ಮಹಾಲಿಂಗಪುರ



ಕೃಷ್ಣನು ರಾಕ್ಷಸನನ್ನು ಕೊಲ್ಲುತ್ತಿರುವುದು.



ಶಿವಪಾರ್ವತಿ.



ರಾಮಭಕ್ತರು. (ಅಣ್ಣಾಂವ್ವನ ಮಠ)



ಸಮುದ್ರಮಂಥನ. (ಅಣ್ಣಾಂವ್ವನ ಮಠ)

ಗುಂಡಪ್ಪ ಹಸಬಿಯವರ ಮನೆ

ನರಗುಂದ



ಕೃಷ್ಣನ ಪರಿವಾರದ ಚಿತ್ರ



ಕುದುರೆ ಸವಾರರು.



ಗೋಪಿಕಾ ವಸ್ತ್ರಾಪಹರಣ. ([illegible])

ಖಾಜಿನಗೌಡರ ಮನೆ ರಾಯಚೂರು



ಪ್ರಕೃತಿ ಪುರುಷ ಪಾಂಚಾಲಿಕ ಚಿತ್ರ.



ಅರ್ಜುನ ಸುಧನ್ವರ ಯುದ್ಧ.



ಕೃಷ್ಣನ ಆಸ್ಥಾನದ ದೃಶ್ಯ.

## ೪. ಸಮ್ಮಿಶ್ರ ಕಾವಿ ಭಿತ್ತಿ ಚಿತ್ರಕಲೆ

ಕರ್ನಾಟಕದ ಕರಾವಳಿ ಭಾಗದಲ್ಲಿ ಮಾತ್ರ ವಿಶೇಷವಾಗಿ ಕಂಡುಬರುವ ಕಾವಿಬಣ್ಣದ ಭಿತ್ತಿ ಚಿತ್ರಕಲೆ ಬಹುವರ್ಣ ಭಿತ್ತಿಚಿತ್ರಗಳಿಗಿಂತ ಭಿನ್ನವಾದ ಸ್ವರೂಪವನ್ನು ಹೊಂದಿದೆ. ಈ ಕಾವಿ ಬಣ್ಣದ ಭಿತ್ತಿಚಿತ್ರಕಲೆಯಲ್ಲಿ ಶಿಷ್ಟಪದ ಮತ್ತು ಜನಪದ ಭಿತ್ತಿಚಿತ್ರಕಲೆ. ಈ ಎರಡೂ ಅಂಶಗಳು ಸಮ್ಮಿಶ್ರಗೊಂಡಿರುವುದರಿಂದ ಈ ಕಾವಿಬಣ್ಣದ ಭಿತ್ತಿಚಿತ್ರಕಲೆಯನ್ನು ಸಮ್ಮಿಶ್ರ ಕಾವಿ ಭಿತ್ತಿ ಚಿತ್ರಕಲೆ ಎಂದು ಈ ಅಧ್ಯಯನದಲ್ಲಿ ಪರಿಗಣಿಸಲಾಗಿದೆ.

ಕರ್ನಾಟಕ ಕರಾವಳಿ ಭಾಗದಲ್ಲಿ ಮಾತ್ರ ಕಂಡಬರುವ ಈ ಕಾವಿ ಬಣ್ಣದ ಭಿತ್ತಿ ಚಿತ್ರಕಲೆ ಬಯಲು ಪ್ರದೇಶದಲ್ಲಿ ಅಪರೂಪ. ಇದಕ್ಕೆ ಮುಖ್ಯ ಕಾರಣವೆಂದರೆ ಈ ಭಾಗದ ಹವಾಮಾನ ಮತ್ತು ಇಲ್ಲಿಯ ಕಟ್ಟಡಗಳ ಸ್ವರೂಪ. ಕರಾವಳಿಭಾಗದ ಹವಾಮಾನವೆಲ್ಲ ವರ್ಷದ ಹೆಚ್ಚಿನ ಭಾಗ ಆರ್ದ್ರತೆಯಿಂದ ಕೂಡಿಕೊಂಡಿರುವುದರಿಂದ ವಾತಾವರಣದಲ್ಲಿನ ಆರ್ದ್ರತೆಯ ಕಾರಣವಾಗಿ ಗೋಡೆಯ ಮೇಲೆ ರಚಿಸಿದ ವರ್ಣಚಿತ್ರದ ವರ್ಣ ಬೇಗನೇ ಹಾಳಾಗುತ್ತದೆ. ಹೀಗಾಗಿ ಬಯಲು ಪ್ರದೇಶದಲ್ಲಿ ರಚನೆಯಾದ ಬಹುವರ್ಣ ಭಿತ್ತಿ ಚಿತ್ರಗಳಂತೆ ಇಲ್ಲಿ ಚಿತ್ರ ರಚಿಸಿದರೆ ಹೆಚ್ಚು ದಿನಗಳವರೆಗೆ ಬಾಳುವುದಿಲ್ಲ. ಅಲ್ಲದೇ ಇಲ್ಲಿನ ಹವಾಮಾನಕ್ಕನುಗುಣವಾಗಿ ಇಲ್ಲಿನ ಕಟ್ಟಡಗಳು ವಿಶಿಷ್ಟವಾಗಿ ರಚನೆಯಾಗುರುತ್ತವೆ. ಜೂನ್ ತಿಂಗಳಿಂದ ಸಪ್ಟಂಬರ್ ಅಕ್ಟೋಬರ್ ವರೆಗೆ ಇಲ್ಲಿ ಸತತವಾಗಿ ಸುರಿಯುವ ಮಳೆಯಿಂದಾಗಿ ಅದರ ಅಬ್ಬರವನ್ನು ತಡೆಯಲು ಈ ಭಾಗದ ಕಟ್ಟಡಗಳೂ ವಿಶೇಷವಾಗಿ ನಿರ್ಮಿತವಾಗಿರುತ್ತವೆ. ದೊಡ್ಡ ದೊಡ್ಡ ಬಂಡೆಗಲ್ಲುಗಳನ್ನು ಕೊರೆದು ಪಡೆಯಲಾದ ಬೃಹತ್ ಪ್ರಮಾಣದ ಛಡಿಗಲ್ಲುಗಳಿಂದಲೇ. ಜೊತೆಗೆ ಸ್ಥಳೀಯವಾಗಿ ತಯಾರಿಸಲಾದ ಗಚ್ಚಿನಿಂದ ಕಟ್ಟಡಗಳನ್ನು ಕಟ್ಟುತ್ತಾರೆ. ಈ ಛಡಿಗಲ್ಲುಗಳು ವಿಪರಿತ ಭಾರವಾಗಿರುವುದರಿಂದ ದಪ್ಪನಾದ ಗೋಡೆಗಳನ್ನೇ ನಿರ್ಮಿಸಬೇಕಾಗುತ್ತದೆ. ಅಲ್ಲದೇ ಹೀಗೆ ದೇವಾಲಯವನ್ನು ಕಟ್ಟಿದಾಗ ಅಂತಹ ದಪ್ಪಗೋಡೆಯಲ್ಲಿ ಕುಸುರಿ ಕೆಲಸ, ಚಿತ್ರ ಪಟ್ಟಿಕೆ ಕೊರೆಯುವುದು ಉಬ್ಬು ಶಿಲ್ಪ ಕೆತ್ತುವುದು ಮುಂತಾದ ಅಲಂಕಾರಿಕ ಕೆಲಸಗಳು ಸುಲಭದ ಕೆಲಸವಲ್ಲ. ಹೀಗಾಗಿ ತೋರಿಕೆಯ ಕಂಬ. ಕಮಾನು, ಕಿಡಕಿ ಬಾಗಿಲುಗಳನ್ನು ರೂಪಿಸಿ ದೇವಾಲಯಕ್ಕೆ ಮಾತ್ರ ಅಂದ ತಂದುಕೊಡುತ್ತಾರೆ. ಇಂತಹ ತೋರಿಕೆಯ ಸ್ಥಳಗಳನ್ನು ಉಬ್ಬು ಇಲ್ಲವೇ ತಗ್ಗಾಗಿ ಮಾಡಿ ಅವುಗಳನ್ನು ಇನ್ನೂ ಅಂದಗೊಳಿಸಲು ಅವುಗಳಲ್ಲಿ ಚಿತ್ರ ರಚನೆ ಮಾಡುತ್ತಾರೆ. ಬರೀ ಇಂತಹ ನಿಗದಿತ ಸ್ಥಳಗಳಲ್ಲಿ ಮಾತ್ರವಲ್ಲದೇ, ಗೋಡೆಯ ಸಮತಟ್ಟಾದ ಭಾಗ. ಮತ್ತು ತಮಗೆ ಸರಿಕಂಡಲ್ಲಿ ಚಿತ್ರರಚಿಸುತ್ತಾರೆ. ಕಟ್ಟಡದ ಹೊರಭಾಗ ಹಾಗೂ ಒಳಭಾಗದ ಗೋಡೆಗಳು, ಒಳಭಾಗದ ಮೇಲ್ಛಾವಣಿಯಲ್ಲಿ. ದೇವಾಲಯದ ಸುತ್ತಲಿನ ಪೌಳಿಗಳು, ಪ್ರದಕ್ಷಿಣಾ ಪಥದ ಗೋಡೆಗಳು, ಗರ್ಭಗೃಹದ ಮೇಲಿರುವ ಒಂದು ಅಥವಾ ಎರಡು ಮಹಡಿಯ ಹೊರಗೋಡೆಗಳು. ಜಗಲಿಯ ಮೇಲೆ, ಅಪರೂಪಕ್ಕೆ ಗರ್ಭಗೃಹದಲ್ಲಿ ಹಾಗೂ ದೇವರ ಹಿಂದಿನ ಗೋಡೆಗಳಲ್ಲೂ ಚಿತ್ರಗಳನ್ನು ರಚಿಸುತ್ತಾರೆ. ಕಾವಿ ಭಿತ್ತಿ ಚಿತ್ರಕಲೆ ಕರಾವಳಿ ಪ್ರದೇಶದ ಒಂದು ವಿಶಿಷ್ಟ ಕಲಾಪ್ರಕಾರ. ಪ್ರಾದೇಶಿಕ ವೈಶಿಷ್ಟ್ಯತೆಯನ್ನು ಇಂದಿಗೂ ಉಳಿಸಿಕೊಂಡು ಬಂದಿರುವ ಈ ಕಲೆಯ ಕುರಿತಾದ ಅಧ್ಯಯನ ತುಂಬ ಮಹತ್ವದ್ದಾಗಿದೆ.

**ಕಾವಿ ಭಿತ್ತಿ ಚಿತ್ರಕಲೆಯ ಸ್ವರೂಪ :** ಕಾವಿ ಭಿತ್ತಿಚಿತ್ರಕಲೆಯು ಕೆಂಪು ಹುರಿಮಂಜಿನ ಬಣ್ಣದಿಂದ ರಚನೆಯಾದ ಭಿತ್ತಿ ಚಿತ್ರಕಲೆಯಾಗಿದೆ. ಬಯಲು ಪ್ರದೇಶದಲ್ಲಿ ಕಂಡುಬರುವ ಭಿತ್ತಿ ಚಿತ್ರಗಳಂತೆ ಇಲ್ಲಿ ಕೆಂಪು. ಹಸಿರು. ನೀಲಿ, ಹಳದಿ, ಕಪ್ಪು, ಬಿಳಿಪು ಹೀಗೆ ಬಹುವರ್ಣಗಳು ಕಂಡುಬರುವುದಿಲ್ಲ. ಕೇವಲ ಕಾವಿ (ಕೆಂಪು) ಬಣ್ಣ


4. ಸಮ್ಮಿಶ್ರ ಕಾವಿ ಭಿತ್ತಿ ಚಿತ್ರಕಲೆ
I)) ದೇವಾಲಯಗಳಲ್ಲಿರುವ ಕಾವಿ ಭಿತ್ತಿ ಚಿತ್ರಕಲೆ
II) ಮಠಗಳಲ್ಲಿರುವ ಕಾವಿ ಭಿತ್ತಿ ಚಿತ್ರಕಲೆ
1) ಜೀವೋತ್ತಮ ಮಠ. ಗೋಕರ್ಣ
2) ಚಿತ್ರಾಪುರ ಮಠ. ಶಿರಾಲಿ
III) ಮನೆಗಳಲ್ಲಿರುವ ಕಾವಿ ಭಿತ್ತಿ ಚಿತ್ರಕಲೆ
1) ತಿಮ್ಮಣ್ಣ ಪೈಯವರ ಮನೆ. ಬೀಳಗಿ
2) ವಿ. ಎಸ್. ಕಾಮತ್ ಅವರ ಮನೆ. ಗೋಕರ್ಣ
3) ಎಸ್. ಎಮ್. ಜೋಶಿಯವರ ಮನೆ. ಗೋಕರ್ಣ
4) ನಾಗೇಶ್ ಶೆಟ್ಟಿ ಅವರ ಮನೆ. ಅವರ್ಸಾ
1) ವಿಷ್ಣು ದೇವಾಲಯಗಳ ಕಾವಿ ಕಲೆ
I) ಶ್ರೀರಾಮ ಮಂದಿರ. ಹೊನ್ನಾವರ
II) ವೆಂಕಟರಮಣ ದೇವಾಲಯ ಹೊನ್ನಾವರ
III) ಗೋಪಾಲಕೃಷ್ಣ ದೇವಾಲಯ ಹೊನ್ನಾವರ
IV) ಗೋಪಿನಾಥ ವೆಂಕಟರಮಣ ದೇವಾಲಯ. ಪಳದೀಪುರ
V) ಬಾಳಗೊಡ ಸೀತಾರಾಮಚಂದ್ರ ದೇವಾಲಯ. ಬೀಳಗಿ
VI) ಬೇಡ್ಕಣಿ ಸೀತಾರಾಮಚಂದ್ರ ದೇವಾಲಯ. ಬೀಳಗಿ
VII) ವೆಂಕಟರಮಣ ದೇವಾಲಯ ಅಘನಾಶಿನಿ
VIII) ನಾರಾಯಣ ದೇವಾಲಯ. ಅಗ್ರಹಾರ
IX) ಲಕ್ಷ್ಮೀನಾರಾಯಣ ಮಂದಿರ. ಅವರ್ಸಾ
X) ಗೋಪಾಲಕೃಷ್ಣ ದೇವಾಲಯ. ಶಿರಸಿ
XI) ಲಕ್ಷ್ಮೀ ವೆಂಕಟೇಶ ದೇವಾಲಯ ಗೇರುಸೊಪ್ಪಾ
XII) ಲಕ್ಷ್ಮೀ ವೆಂಕಟರಮಣ ದೇವಾಲಯ ಹೊಸಾಡ
2) ಈಶ್ವರ ದೇವಾಲಯಗಳ ಕಾವಿ ಕಲೆ
I) ಶಂಭುಲಿಂಗೇಶ್ವರ ದೇವಾಲಯ ಗುಣವಂತೆ
II) ಈಶ್ವರ ದೇವಾಲಯ. ಬಾಳೆಗದ್ದೆ
3) ದೇವಿ ಮಂದಿರಗಳ ಕಾವಿ ಕಲೆ
I) ಮಾರಿಕಾಂಬಾ ದೇವಾಲಯ. ಶಿರಸಿ
II) ಶಾರದಾಂಬಾ ದೇವಾಲಯ. ಹೊನ್ನಾವರ
III) ಅಮ್ಮನವರ ದೇವಾಲಯ. ಮಾವಿನಕುರ್ವೆ
IV) ಮಾರಿಕಾಂಬಾ ದೇವಸ್ಥಾನ. ಬೀಳಗಿ
V) ಭುವನೇಶ್ವರ ದೇವಸ್ಥಾನ. ಭುವನಗಿರಿ
VI) ಶಾಂತಿಕಾ ಪರಮೇಶ್ವರಿ ದೇವಾಲಯ ಸಾಂತಗಲ್
VII) ಮಹಾಳಸಾ ನಾರಾಯಣಿ ದೇವಾಲಯ ಕುಮಟಾ
VIII) ಆರ್ಯಾದುರ್ಗಾ ದೇವಾಲಯ. ಅಂಕೋಲಾ
IX) ದೇವಿ ಮಂದಿರ. ಬಳಲೆ
X) ಬಿಳಗಿರಿಯಮ್ಮ ದೇವಾಲಯ. ಶಟಗೇರಿ
XI) ದುರ್ಗಾ ದೇವಾಲಯ. ಸದಾಶಿವಘಡ
XII) ಮಹಾಮಾಯಾ ದೇವಾಲಯ. ಚಿತಾಕುಲ
XIII) ಮಾರಿಕಾಂಬಾ ದೇವಾಲಯ. ಮಾಜಾಳಿ
4) ಗಣಪತಿ ದೇವಾಲಯಗಳ ಕಾವಿ ಕಲೆ
I) ಅರ್ಧಗಣಪತಿ ದೇವಾಲಯ. ಬನವಾಸಿ
II) ಗಣಪತಿ ದೇವಾಲಯ. ಹೊನ್ನಾವರ
III) ಗಣಪತಿ ದೇವಾಲಯ. ಚಂದಾವರ
IV) ಅಗಸೆವಿನಾಯಕ ದೇವಾಲಯ. ಅಘನಾಶಿನಿ
5) ಮಾರುತಿ ದೇವಾಲಯಗಳ ಕಾವಿ ಕಲೆ
I) ಮಾರುತಿ ದೇವಾಲಯ. ಹೊನ್ನಾವರ
II) ಮಾರುತಿ ದೇವಾಲಯ. ಚಂದಾವರ
III) ಹನುಮಾನ್ ದೇವಾಲಯ. ಶಿರಾಲಿ
IV) ಹನುಮಾನ್ ದೇವಾಲಯ. ಅಮದಳ್ಳಿ
6) ಇತರ ದೇವಾಲಯಗಳ ಕಾವಿ ಕಲೆ
I) ಗಡಿವಾಳಬಂಟ ಸಣ್ಣ ಹೊಸಬ ದೇವಾಲಯ. ಚೌಡಗೇರಿ
II) ಗಡಿವಾಳಬಂಟ ದೊಡ್ಡ ಹೊಸಬ ದೇವಾಲಯ. ಚೌಡಗೇರಿ
III) ಘಟಬೀರ ದೇವಾಲಯ. ಬಗ್ಗೋಣ
IV) ಹಿರೆಹೊಸಬ ದೇವಾಲಯ. ಬಳಲೆ

ಮಾತ್ರ ಇಲ್ಲಿ ಕಂಡುಬರುತ್ತದೆ ಆ ಕಾರಣವಾಗಿಯೇ ಇವುಗಳನ್ನು ಕಾವಿ ಚಿತ್ರಗಳು ಎಂದು ಕರೆಯಲಾಗುತ್ತದೆ. ಬಹುವರ್ಣ ಭಿತ್ತಿಚಿತ್ರಗಳಂತೆ ಇವು ಗೋಡೆಯಲ್ಲಿ ಒಂದಾಗಿರುವಂತೆ ಕಂಡುಬರುವುದಿಲ್ಲ. ಬದಲಾಗಿ ದಪ್ಪಳತೆಯನ್ನು ಹೊಂದಿದ್ದು ಗೋಡೆಯಿಂದ ಮೇಲೆದ್ದಂತೆ ಕಂಡು `ಬರುತ್ತವೆ. ಗೋಡೆಗೆ ಭಿತ್ತಿ (ಮಿಶ್ರಣ) ಲೇಪಿಸಿ ಆ ಭಿತ್ತಿಯನ್ನೇ ಕೊರೆದು ಚಿತ್ರವಾಗಿ ರೂಪಿಸಲಾಗಿರುತ್ತದೆ. ಹಾಗಾಗಿ ಇವು ಗೋಡೆಯಿಂದ ಮುಂದೆ ಚಾಚಿದಂತೆ ತೋರುತ್ತವೆ. ಈ ನಿಟ್ಟಿನಲ್ಲಿ ಇವು ಬಹುವರ್ಣ ಭಿತ್ತಿಚಿತ್ರಗಳಿಗಿಂತ ಭಿನ್ನವಾಗಿ ನಿಲ್ಲುತ್ತವೆ.

ಈ ಕಾವಿ ಚಿತ್ರಗಳಲ್ಲಿ ಬಹುವರ್ಣ ಭಿತ್ತಿಚಿತ್ರಗಳಲ್ಲಿ ಕಂಡುಬರುವಂತೆ ಬೆಳಕು ನೆರಳುಗಳ ಸಂಯೋಜನೆ, ಉಬ್ಬುತಗ್ಗುಗಳ ಕಲ್ಪನೆ, ಅಂದರೆ ಚಿತ್ರಗಳ ದುಂಡುತನದ ಕಲ್ಪನೆ ಕಂಡುಬರದೇ ಚಿತ್ರಗಳು ಚಪ್ಪಟೆಯಾಗಿರುವಂತೆ ಕಂಡುಬರುತ್ತವೆ. ಚಿತ್ರಗಳು ಚಪ್ಪಟೆಯಾಗಿದ್ದು ಏಕವರ್ಣದಿಂದ ಕೂಡಿದ್ದರೂ ಸಂದರ್ಭಾನುಸಾರ ಭಾವಗಳನ್ನು ಮುಖಗಳಲ್ಲಿ ಮೂಡಿಸಲಾಗಿದೆ. ಚಿತ್ರಗಳಲ್ಲಿಯ ಪ್ರತಿಯೊಂದು ವಿವರಗಳನ್ನೂ ರೇಖೆಗಳಿಂದಲೇ ತೋರಿಸುವುದು ಕಾವಿ ಚಿತ್ರಕಲೆಯ ವೈಶಿಷ್ಟ್ಯವಾಗಿದೆ.

**ಕಾವಿ ಬಣ್ಣದ ಭಿತ್ತಿ ಚಿತ್ರ ರಚನಾ ವಿಧಾನ :** ಕಾವಿ ಚಿತ್ರಗಳನ್ನು ರಚಿಸಬೇಕಾದರೂ ಮೊದಲು ಗೋಡೆಗೆ ಭಿತ್ತಿ (ಗಾರೆಮಿಶ್ರಣ)ಯನ್ನು ಲೇಪಿಸಬೇಕಾಗುವುದು. ಚಿತ್ರ ರಚಿಸಬೇಕಾದ ಸ್ಥಳಕ್ಕೆ ವಿಶೇಷವಾಗಿ ತಯಾರಿಸಿಕೊಂಡ ಗಾರೇ ಲೇಪನವನ್ನು ಲೇಪಿಸಿಕೊಂಡು ಅದರ ಮೇಲೆ ಚಿತ್ರರಚನೆಯ ಪ್ರಕ್ರಿಯೆಯನ್ನು ಮುಂದುವರೆಸಬೇಕಾಗುವುದು. ಚಿತ್ರಕ್ಕಾಗಿ ಲೇಪಿಸಲಾಗುವ ಗಾರೆಲೇಪನಕ್ಕೆ ಅದರದೇ ಆದ ತಯಾರಿಕಾ ವಿಧಾನವಿದೆ.

**ಕಾವಿ ಚಿತ್ರಕಲೆಯ ಭಿತ್ತಿ ತಯಾರಿಕೆ ವಿಧಾನ :** ಸುಣ್ಣ, ಬೆಲ್ಲ, ಅಂಟು, ಸೂಕ್ಷ್ಮವಾದ ಮರಳು ಮುಂತಾವುಗಳನ್ನು ಕೂಡಿಸಿ ಅರೆದು ಆ ಮಿಶ್ರಣಕ್ಕೆ ಮತ್ತೆ ಹುರಿಮಂಜು (ಕಾವಿಬಣ್ಣ) ಬೆರೆಸಿ ಮತ್ತೊಮ್ಮೆ ಚನ್ನಾಗಿ ಅರೆದು ಕೆಲದಿನಗಳಕಾಲ ನೆನೆ ಇಡುವುದು. ಆ ಮಿಶ್ರಣವು ಚನ್ನಾಗಿ ನೆನೆದು ಜಿಗುಟಾಗಿದೆಯೋ ಇಲ್ಲವೋ ಎಂದು ಆಗಾಗ ನೋಡುತ್ತಿರಬೇಕಾಗುವುದು. ಹೀಗೆ ಆಗಾಗ ಪರೀಕ್ಷಿಸುತ್ತಿರುವಾಗಲೇ ಮಿಶ್ರಣಕ್ಕೆ ಬೆರೆಸಿದ ಕಾವಿಬಣ್ಣ (ಹುರಿಮಂಜು) ನಿಗದಿತ ಪ್ರಮಾಣದಲ್ಲಿ ಇದೆಯೋ ಅಥವಾ ಕಡಿಮೆಯಾಗಿದೆಯೋ ಎಂದೂ ನೋಡುವುದು. ಕಡಿಮೆ ಯಾಗಿದ್ದಲ್ಲಿ ಮತ್ತೆ ಹುರಿಮಂಜು ಕಲೆಸಿ ನೆನೆ ಹಾಕುವುದು. ನೆನೆಹಾಕಿದ ಈ ಮಿಶ್ರಣಕ್ಕೆ ಆಗಾಗ ಬಣಗದಂತೆ ನೀರು ಚಿಮುಕಿಸುತ್ತಿರುವುದರಿಂದ ಕೆಲವು ಸಲ ಕಾವಿ ಬಣ್ಣದ ಪ್ರಮಾಣ ಕಡಿಮೆಯಾಗುವ ಸಾಧ್ಯತೆಯೂ ಇರುತ್ತದೆ. ಅದಕ್ಕಾಗಿ ಮತ್ತೆ ಹುರಿಮಂಜು ಬೆರೆಸಿಕೊಳ್ಳಬೇಕಾಗುವುದು. ಕೆಲವು ದಿನಗಳನಂತರ ಚನ್ನಾಗಿ ನೆನೆದು ಜಿಗುಟಾದ ಮಿಶ್ರಣವನ್ನು ತೆಗೆದುಕೊಂಡು ಚನ್ನಾಗಿ ಕಲಕಿನಾದಿಕೊಂಡು ಹದವಾಗಿ ಕಣಕದ ಹಾಗೆ ಮಾಡಿಕೊಂಡು ಗೊಡೆಗೆ ಚಿತ್ರರಚಿಸಬೇಕಾದ ಸ್ಥಳಕ್ಕೆ ಲೇಪಿಸಬೇಕು.

**ಕಾವಿ ಭಿತ್ತಿ ಚಿತ್ರ ರಚನಾ ವಿಧಾನ :** ಭಿತ್ತಿ ಹಸಿ ಇರುವಾಗ ಚಿತ್ರರಚಿಸುವ ಪಾಶ್ಚಾತ್ಯರು "ಸ್ಗ್ರಾಫಿಟೋ" ಎಂದು ಕರೆಯುವ ವಿಧಾನದಂತೆ ಕಾವಿ ಚಿತ್ರರಚನೆಯನ್ನೂ ಭಿತ್ತಿ ಹಸಿಇರುವಾಗಲೇ ಮಾಡಲಾಗುತ್ತದೆ. ರಚಿಸಬೇಕಾದ ಚಿತ್ರದ ಮಾದರಿಯನ್ನು ಹಾಳೆಯಲ್ಲಿ ಬರೆದುಕೊಳ್ಳಬೇಕಾಗುದುದು ಮುಖ್ಯವಾಗಿದೆ. ಈಗಾಗಲೇ ತಯಾರಿಸಿಕೊಂಡ ಗಾರೆ ಮಿಶ್ರಣವನ್ನು ಚಿತ್ರರಚಿಸಬೇಕಾದ ಸ್ಥಳಕ್ಕೆ ತ್ಯಾಪಿಯ ಸಹಾಯದಿಂದ ಸಮತಟ್ಟಾಗಿ ಲೇಪಿಸಬೇಕು. ಆ ಮಿಶ್ರಣ ಹಸಿ ಇರುವಾಗಲೇ ರಚಿಸಲೇಕಾದ ಚಿತ್ರದ ಮಾದರಿಯನ್ನು ಹಾಳೆಯಲ್ಲಿ ಬರೆದುಕೊಂಡು

(ಚಿತ್ರಮಾದರಿಯನ್ನು ಮೊದಲೇ ಅಳತೆಗೆ ತಕ್ಕಂತೆ ಬರೆದಿಟ್ಟುಕೊಂಡಿರಬೇಕು.) ಮಿಶ್ರಣಕ್ಕೆ ಅಂಟಿಸಬೇಕು. ನಂತರ ಉಕ್ಕಿನ ಕಂಟದಿಂದ (ಚೂಪಾದ ಮೊಳೆ) ಹಾಳೆಯ ಮೇಲೆ ಇರುವ ಚಿತ್ರದ ರೇಖೆಗಳಗುಂಟ ಜೋರಾಗಿ ಗೀರುತ್ತ ಹೋಗಬೇಕು. ಹೀಗೆ ಎಳೆದಾಗ ಹಾಳುಯ ಮಾತ್ರವಲ್ಲದೇ ಹಸಿಯಾದ ಮಿಶ್ರಣವು ಕೂಡಾ ಎಳೆದ ರೇಖೆಗುಂಟ ಕಿತ್ತುಬಂದು ಅಲ್ಲಿ ಹಿಂದಿನ ಬಿಳಿಗೋಡೆಯು ಗೋಚರಿಸುವುದು. ಚಿತ್ರದ ಹೊರಭಾಗದ ಬೇಡಾದ ಭಾಗದ ಮಿಶ್ರಣವನ್ನೂ ತ್ಯಾಪಿಯ ಸಹಾಯದಿಂದ ತೆಗೆದುಹಾಕಿದಾಗ ಅಲ್ಲಿಯೂ ಹಿನ್ನೆಲೆಯ ಬಿಳಿ ಗೋಡೆ ಕಾಣುವುದು. ಕರಟದಿಂದ ರೇಖೆ ಎಳೆಯುವಾಗ ಆಗಲಿ ಅಥವಾ ತ್ಯಾಪಿಯಿಂದ ಬೇಡಾದ ಭಾಗವನ್ನು ಬೇರ್ಪಡಿಸುವಾಗ ಹೆಚ್ಚು ಭಾಗ ಕಿತ್ತು ಬಂದರೆ ತಕ್ಷಣವೇ ತ್ಯಾಪಿಯ ಸಹಾಯದಿಂದ ಮತ್ತೆ ಮಿಶ್ರಣ ಲೇಪಿಸಬಹುದು. ಅದಕ್ಕಾಗಿ ಗಾರೆ ಮಿಶ್ರಣದ ಸ್ವಲ್ಪ ಭಾಗವನ್ನು ಮೊದಲೇ ಉಳಿಸಿಕೊಂಡಿರಬೇಕು. ಹೀಗೆ ಚಿತ್ರ ರಚನೆ ಮುಗಿದ ನಂತರ ಲೇಪನವು ಸ್ವಲ್ಪ ಒಣಗಿದ ಮೇಲೆ ನೀರು ಚಿಮುಕಿಸಿ ಅದರ ಮೇಲೆ ಅಂಟಿದ ಹಾಳೆಯನ್ನು ತೆಗೆದುಬಿಡಲಾಗುತ್ತಿತ್ತು. ಕೆಲವು ಪ್ರಬುದ್ಧಕಲಾವಿದರು ಹಸಿಯಾದ ಗಾರೆ ಲೇಪನದ ಮೇಲೆ ಹಾಳೆಯ ಮೇಲೆ ಬರೆದುಕೊಂಡ ಚಿತ್ರವನ್ನು ಅಂಟಿಸದೇ ನೇರವಾಗಿ ಉಕ್ಕಿನ ಕರಟದಿಂದ ರೇಖಾಕೃತಿ ರಚಿಸುತ್ತಿದ್ದರೆಂದೂ ಹೇಳುತ್ತಾರೆ. ಆದರೆ ಹಸಿ ಮಿಶ್ರಣದ ಮೇಲೆ ಹಾಳೆಯಲ್ಲಿ ಬರೆದ ಚಿತ್ರ ಅಂಟಿಸಿ ಚಿತ್ರರೂಪಿಸುವುದು ಸಾಮಾನ್ಯ ಪದ್ಧತಿಯಾಗಿದೆ. ಶಿಲ್ಪಿಗಳು ಶಿಲ್ಪ ಕೆತ್ತನಗೆ ಮೊದಲು ಹಾಳೆಯಲ್ಲಿ ಬರೆದುಕೊಂಡ ಮಾದರಿ ಚಿತ್ರವನ್ನು ಶಿಲ್ಪಕೆತ್ತಬೇಕಾದ ಕಲ್ಲಿಗೆ ಅಂಟಿಸುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಲೇಪನದ ಮೇಲಿನ ಹಾಳೆಯನ್ನು ಕಿತ್ತು ತೆಗೆದು ಇಡೀ ಚಿತ್ರರಚನೆಗೆ ಐದಾರು ದಿನಗಳವರೆಗೆ ಆಗಾಗ ನೀರು ಉಣಿಸುತ್ತಿದ್ದರೆ ಚಿತ್ರಗಳು ಬಿರುಕುಬಿಡದೇ ಹೆಚ್ಚುದಿನ ಬಾಳಿಕೆ ಬರುತ್ತವೆ.[೯೯೧] ಹೀಗೆ ತಯಾರಾದ ಕಾವಿ ಬಣ್ಣದ ಭಿತ್ತಿಚಿತ್ರಗಳು ಬಿಳಿ ಗೋಡೆಯ ಮೇಲೆ ಆಕರ್ಷಕವಾಗಿ ಕಾಣುತ್ತವೆ.

ಸಾಮಾನ್ಯವಾಗಿ ಕಾವಿ ಚಿತ್ರರಚನೆಯ ವಿಧಾನ ಇದೇ ಆಗಿದ್ದರೂ ಇದಕ್ಕಿಂತ ಭಿನ್ನವಾದ ಕಾವಿ ಚಿತ್ರಗಳು ಹೊನ್ನಾವರ, ಬನವಾಸಿ, ಬಿಳಗಿಗಳಲ್ಲಿ ಕಂಡುಬರುತ್ತವೆ.

ಬನವಾಸಿಯ ಮಧುಕೇಶ್ವರ ದೇವಾಯಲದಲ್ಲಿ ಮತ್ತು ಹೊನ್ನಾವರದ ಶ್ರೀರಾಮ ಮಂದಿರದಲ್ಲಿ ರಚನೆಯಾದ ಕೆಲವು ಚಿತ್ರಗಳಲ್ಲಿ ಹಸಿ ಮಿಶ್ರಣದ ಮೇಲೆ ಉಕ್ಕಿನ ಕಂಟದಿಂದ ರೇಖಾ ಚಿತ್ರ ರಚಿಸಿದ ನಂತರ ಚಿತ್ರವ ಬೇಡಾದ ಭಾಗದ ಮಿಶ್ರಣವನ್ನು ತ್ಯಾಪಿಯಿಂದ ಹಸಿಇರುವಾಗ ಬೇರ್ಪಡಿಸದೇ ಹಾಗೇ ಉಳಿಸಿದ್ದಾರೆ. ಇದರಿಂದಾಗಿ ಚಿತ್ರದ ಹಿನ್ನೆಲೆಯಲ್ಲಿ ಬಿಳಿಗೋಡೆ ಹೆಚ್ಚಾಗಿ ಕಂಡುಬರದೇ ಬರೀ ಬಿಳಿ ರೇಖೆಗಳು ಮಾತ್ರ ಗೋಚರಿಸುತ್ತವೆ. ಈ ಪ್ರಕಾರದ ಚಿತ್ರಗಳು ಕೆಂಪು ಹಿನ್ನೆಲೆಯ ಮೇಲೆ ಬಿಳಿ ರೇಖೆಯಿಂದ ಚಿತ್ರ ಬರೆದಂತೆ ಕಂಡು ಬರುತ್ತವೆ. ಈ ವಿಧಾನದ ಚಿತ್ರಗಳೇ ಕಾಲಮಾನದಿಂದ ಪ್ರಾಚೀನವಾದವುಗಳೆಂದು ಕೃಷ್ಣಾನಂದ ಕಾಮತರು[೯೯೨] ಅಭಿಪ್ರಾಯ ಪಡುತ್ತಾರೆ. ಅದು ಸರಿಯಾದ ವಿವರಣೆಯೇ ಆಗಿದೆಯನ್ನಬೇಕು.

೯೯೧. ಕಾವಿ ಭಿತ್ತಿ ಚಿತ್ರ ಕಲೆಯ ಗಾರೆ (ಭಿತ್ತಿ) ಮಿಶ್ರಣ, ತಯಾರಿಕಾ ವಿಧಾನ, ಚಿತ್ರರಚನಾ ವಿಧಾನಗಳ ಬಗ್ಗೆ ಮಾಹಿತಿ ನೀಡಿದವರು –ಬಿಳಗಿ (ಸಿದ್ದಾಪುರ ತಾಲೂಕು)ಯ ಲಕ್ಷ್ಮಣ ಚಿಣವಾರ (೮೫ ವರ್ಷ), ಗೋಪಾಲಕೃಷ್ಣ ಶ್ರೀನಿವಾಸ ಭಟ್ (೭೮ ವರ್ಷ), ಪದ್ಮಾಕರ ಮಡಗಾವಂಕರ್ (ವಯಸ್ಸು ೫೦), ಅಂಕೋಲಾ ತಾಲೂಕಿನ 'ಅವರ್ಸಾದ' ಮಚೇಂದ್ರನಾಥ ಶೇಷಬಾಳಕರ ಗಾಂವಕರ್ (೭೫ ವರ್ಷ).

೯೯೨. ಡಾ. ಕೃಷ್ಣಾನಂದ ಕಾಮತ್ : ಕಾವಿಕಲೆ, ಪುಟ ೮೯

ಈ ವಿಧಾನವಲ್ಲದೇ ಬೀಳಗಿಯಲ್ಲಿ ಮಾತ್ರ ಕಂಡುಬಂದ ಇನ್ನೊಂದು ಬಗೆಯ ಚಿತ್ರಗಳನ್ನೂ ಇಲ್ಲಿ ಉಲ್ಲೇಖಿಸಬಹುದಾಗಿದೆ. ಬೀಳಗಿ (ಸಿದ್ಧಾಪುರ ತಾಲೂಕು)ಯ ಬೇಡ್ಕಣಿ ಸೀತಾರಾಮಚಂದ್ರ ದೇವಾಲಯದಲ್ಲಿ ಕೆಲವು ಕಡೆಗೆ ಕಾವಿಬಣ್ಣವಲ್ಲದೇ ಅದರ ಜೊತೆಗೆ ಕಪ್ಪು ಕೆಂಪು, ಹಸಿರು, ಮುಂತಾದ ವರ್ಣಗಳನ್ನು ಉಪಯೋಗಿಸಿಯೂ ಚಿತ್ರ ಬರೆದಿದ್ದಾರೆ. ಇಲ್ಲಿ ಗೋಡೆಯಲ್ಲಿ ಗೂಡು (ಮಾಡು)ಗಳಿದ್ದು ಅವುಗಳ ಅಂಚುಗಳನ್ನು ಕಾವಿ ಚಿತ್ರರಚನೆಯ ಸಾಮಾನ್ಯ ವಿಧಾನದಂತೆ ಕಾವಿಬಣ್ಣದ ಗಾರೆ ಲೇಪಿಸಿ, ನಕ್ಷೆಗಳನ್ನು ರೂಪಿಸಿಅಲಂಕರಿಸಲಾಗಿದೆ. ಈ ಅಲಂಕಾರಿಕ ಗೂಡುಗಳ ಒಳಗೆ ಹಸಿರು, ಕಪ್ಪು, ಕೆಂಪು, ನೀಲಿ, ಮುಂತಾದ ವರ್ಣಗಳನ್ನು ಬಳಸಿ ಸಹಜವಾಗಿ ಚಿತ್ರ ರಚಿಸಲಾಗಿದೆ. ದೇವಾಲಯದ ಪೂಜಾರಿಗಳ ಹೇಳಿಕೆ ಪ್ರಕಾರ ಇವು ಕೂಡಾ ಉಳಿದ ಕಾವಿ ಚಿತ್ರಗಳಂತೆ ಹಳೆಯಕಾಲದ ಚಿತ್ರಗಳೇ ಆಗಿವೆ. ಇವುಗಳ ಬಣ್ಣ ವಾತಾವರಣಕ್ಕೆ ಸಿಲುಕಿ ಹಾರಿಹೋಗಿ ಚಿತ್ರಗಳು ಮಸುಕಾಗಿವೆ. ಹೀಗಾಗಿ ಕಾವಿ ಚಿತ್ರರಚನೆಯಲ್ಲಿ ಮೂರು ವಿಧಾನಗಳನ್ನು ನೋಡಬಹುದಾಗಿದೆ.

**ಕಾವಿ ಭಿತ್ತಿ ಚಿತ್ರಕಲೆಯ ಪ್ರಾಚೀನತೆ :** ಗೋವಾ ಮೂಲದ ಕೊಂಕಣಿ ಮತಸ್ಥರಿಂದ ಆರಂಭವಾಗಿರಬಹುದಾದ ಈ ಕಲೆ ಕ್ರಿ. ಶ. ೧೩-೧೪ ನೇ ಶತಮಾನಗಳಲ್ಲಿ[೧೯೩] ಕರ್ನಾಟಕವನ್ನೂ ಪ್ರವೇಶಿಸಿತು. ಗೋವಾದಲ್ಲಿನ ಆ ಕಾಲದ ರಾಜಕೀಯ ಪರಿಸ್ಥಿತಿ ಕೊಂಕಣಿಗರಿಗೆ ಬಿಗಡಾಯಿಸಿತು. ಕಾರಣಾಂತರಗಳಿಂದ ಅವರು ಕರ್ನಾಟಕದ ಉತ್ತರ ಭಾಗದ ಕರಾವಳಿ ಕಡೆಗೆ ವಲಸೆ ಬಂದರು. ಕರ್ನಾಟಕಕ್ಕೆ ಬಂದ ಕೊಂಕಣಿಗರು ಇಲ್ಲಿಯ ಸ್ಥಳೀಯ ಜನರೊಂದಿಗೆ ಬೆರೆತರೂ ತಮ್ಮ ದೇವಾಲಯಗಳು, ಮಠಮಾನ್ಯಗಳನ್ನು ಕಟ್ಟಿ ಅವುಗಳಲ್ಲಿ ಕಾವಿ ಚಿತ್ರಗಳನ್ನು ರಚಿಸುವಲ್ಲಿ ನಿರತರಾದರು. ಇಂದಿಗೂ ಕರಾವಳಿ ಭಾಗದ ಕೊಂಕಣಿ ಮತಸ್ಥರ ಮನೆ, ಮಠ, ದೇವಾಲಯಗಳಲ್ಲಿಯೇ ಹೆಚ್ಚಾಗಿ ಕಾವಿ ಚಿತ್ರಗಳಿರುವುದು ಕಂಡುಬರುತ್ತದೆ. ನಂತರದಲ್ಲಿ ಕೊಂಕಣಿಗರಿಂದ ಈ ಕಲೆಯನ್ನು ಇತರರೂ ಕಲಿತುಕೊಂಡು ಅದರ ಬೆಳವಣಿಗೆಗೆ ಕಾರಣರಾದರೆಂಬ ಅಭಿಪ್ರಾಯ ಸರಿಯೆನಿಸುತ್ತದೆ. ಸುಮಾರು ಇತ್ತೀಚಿನ ಐವತ್ತು ವರ್ಷಗಳ ಹಿಂದಿನವರೆಗೂ ಕಾವಿ ಚಿತ್ರರಚನೆ ನಡೆಯುತ್ತಿತ್ತೆಂದು ಕರಾವಳಿ ಭಾಗದ ಜನರು ಹೇಳುತ್ತಾರೆ. ಈಗ ಈ ಪರಂಪರೆ ಅಲ್ಲಲ್ಲಿ ಕ್ವಚಿತ್ತಾಗಿ ನಡೆಯುವುದನ್ನು ಕಾಣುತ್ತೇವೆ.

### ಸಮ್ಮಿಶ್ರ ಕಾವಿ ಭಿತ್ತಿ ಚಿತ್ರಕಲೆಯ ನೆಲೆಗಳು :

ಕಾವಿ ಭಿತ್ತಿ ಚಿತ್ರಕಲೆಯ ನೆಲೆಗಳನ್ನು ಅವುರಚನೆಕೊಂಡಿರುವ ಸ್ಥಳಗಳನ್ನಾಧರಿಸಿ ಈ ಕೆಳಗಿನಂತೆ ಮೂರು ರೀತಿಯಲ್ಲಿ ವಿಂಗಡಿಸಬಹುದು :

I. ದೇವಾಯಲಗಳಲ್ಲಿರುವ ಕಾವಿ ಭಿತ್ತಿಚಿತ್ರಕಲೆ

II. ಮಠಗಳಲ್ಲಿರುವ ಕಾವಿ ಭಿತ್ತಿಚಿತ್ರಕಲೆ

III. ಮನೆಗಳಲ್ಲಿರುವ ಕಾವಿ ಭಿತ್ತಿಚಿತ್ರಕಲೆ

## I. ದೇವಾಲಯಗಳಲ್ಲಿರುವ ಕಾವಿ ಭಿತ್ತಿಚಿತ್ರಕಲೆ

ಕಾವಿ ಭಿತ್ತಿಚಿತ್ರಕಲೆ ಇತರೆಡೆಗಳಲ್ಲಿ ಕಂಡುಬಂದರೂ ಪ್ರಮುಖವಾಗಿ ರಚನೆಯಾಗಿರುವುದು ದೇವಾಲಯಗಳಲ್ಲೇ ಆಗಿದೆ. ಶಿಷ್ಟಸಂಪ್ರದಾಯದ ಬಹುವರ್ಣ ಭಿತ್ತಿಚಿತ್ರಗಳಂತೆ ಕಾವಿ ಭಿತ್ತಿಚಿತ್ರಗಳೂ ಅನೇಕ ದೇವಾಲಯಗಳಲ್ಲಿ

---

೧೯೩. ಅ. ಲ. ನರಸಿಂಹನ್ : ಕಾಲಕೋಶ, ಪುಟ ೯೧

ರಚನೆಯಾಗಿದ್ದು. ಅವುಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆ ವಿಂಗಡಿಸಿಕೊಂಡು ವಿವರಿಸಬಹುದಾಗಿದೆ.

೧. ವಿಷ್ಣುದೇವಾಲಯಗಳು (ವೈಷ್ಣವ ಸಂಬಂಧಿ ದೇವಾಲಯಗಳು)

೨. ಈಶ್ವರ ದೇವಾಲಯಗಳು (ಶೈವ ಸಂಬಂಧಿ ದೇವಾಲಯಗಳು)

೩. ದೇವಿ ಮಂದಿರಗಳು

೪. ಗಣಪತಿ ದೇವಾಲಯಗಳು

೫. ಮಾರುತಿ ದೇವಾಲಯಗಳು

೬. ಇತರ ದೇವಾಲಯಗಳು

## ೧. ವಿಷ್ಣುದೇವಾಲಯಗಳು (ವೈಷ್ಣವ ಸಂಬಂಧಿ ದೇವಾಲಯಗಳು)

ರಾಮ. ಕೃಷ್ಣ. ವೆಂಕಟೇಶ್ವರ. ಗೋಪಿನಾಥ. ಗೋಪಾಲಕೃಷ್ಣ. ನಾರಾಯಣ ಹೀಗೆ ವಿಷ್ಣುವಿಗೆ ಸಂಬಂಧಿಸಿದ ದೇವಾಲಯಗಳನ್ನು ಈ ಗುಂಪಿನಲ್ಲಿ ಹೆಸರಿಸಿದೆ.

I. ಶ್ರೀರಾಮಂದಿರ, ಹೊನ್ನಾವರ

II. ಗೋಪಾಲಕೃಷ್ಣ ದೇವಾಲಯ, ಹೊನ್ನಾವರ

III. ವೆಂಕಟರಮಣ ದೇವಾಲಯ, ಹೊನ್ನಾವರ

IV. ಗೋಪಿನಾಥ ವೆಂಕಟರಮಣ ದೇವಾಲಯ, ಹಳದಿಪುರ

V. ಬಾಳಗೂಡ ಸೀತಾರಮಚಂದ್ರ ದೇವಾಲಯ, ಬಿಳಗಿ

VI. ಬೇಡ್ಕಣಿ ಸೀತಾರಾಮಚಂದ್ರ ದೇವಾಲಯ, ಬಿಳಗಿ

VII. ವೆಂಕಟರಮಣ ದೇವಾಲಯ, ಅಘನಾಶಿನಿ

VIII. ನಾರಾಯಣ ದೇವಾಲಯ, ಅಗ್ರಹಾರ

IX. ಲಕ್ಷ್ಮೀನಾರಾಯಣ ದೇವಾಲಯ, ಅವರ್ಸಾ

X. ಗೋಪಾಲಕೃಷ್ಣ ದೇವಾಲಯ, ಸಿರಸಿ

XI. ಲಕ್ಷ್ಮೀವೆಂಕಟೇಶ ದೇವಾಲಯ, ಗೇರುಸೊಪ್ಪಾ

XII. ಲಕ್ಷ್ಮೀವೆಂಕಟೇಶ ದೇವಾಲಯ, ಹೊಸಾಡ

***I. ಶ್ರೀರಾಮಂದಿರ, ಹೊನ್ನಾವರ :*** ಹೊನ್ನಾವರವು ತಾಲೂಕಾಕೇಂದ್ರವಾಗಿದ್ದು ಜಿಲ್ಲಾ ಕೇಂದ್ರವಾದ ಕಾರವಾದಿಂದ ಸುಮಾರು ೯೩ ಕಿ. ಮಿ. ಗಳ ಅಂತರದಲ್ಲಿದೆ. ಇಲ್ಲಿನ ಶ್ರೀರಾಮ ಮಂದಿರವು ಕ್ರಿ. ಶ. ೧೮ ನೇ ಶತಮಾನದಲ್ಲಿ ರಚನೆಯಾಗಿದೆ ಎಂಬುದಾಗಿ ಇಲ್ಲಿನ ಪೂಜಾರಿಗಳ ಹೇಳಿಕೆಯಾಗಿದೆ. ಈ ರಾಮಮಂದಿರದ ಕಾವಿ ಚಿತ್ರಗಳು ಕರಾವಳಿ ಭಾಗದಲ್ಲೇ ಅತ್ಯಂತ ಶ್ರೇಷ್ಟಮಟ್ಟದ ಚಿತ್ರಗಳ ಸಾಲಿನಲ್ಲಿ ಸೇರುತ್ತವೆ. ಸಂಯೋಜನೆ, ರೇಖಾಲಾಲಿತ್ಯ, ಪ್ರಮಾಣಬದ್ಧತೆ ಹೀಗೆ ಚಿತ್ರಕಲೆಯ ತಾಂತ್ರಿಕ ಅಂಶಗಳಲ್ಲಿ ಇವು ಪ್ರಬುದ್ಧವಾಗಿವೆ. ಈ ದೇವಾಲಯದ ಹೊರಗೋಡೆಗಳು, ಒಳಗಿನ ಛಾವಣಿ, ಮತ್ತು ಗರ್ಭಗೃಹದ ಮೇಲಿನ ಶಿಖರ, ಗೋಡೆಗಳು ಕಾವಿ ಚಿತ್ರಳಿಂದ ತುಂಬಿವೆ. ಈ ದೇವಾಲಯದ ಚಿತ್ರಗಳನ್ನು ಸ್ಥೂಲವಾಗಿ ಈ ಕೆಳಗಿನಂತೆ ವಿಭಾಗಿಸಬಹುದಾಗಿದೆ.



ವಿಷ್ಣು ದೇವಾಲಯಗಳ ಕಾವಿ ಭಿತ್ತಿ ಚಿತ್ರಕಲೆ
I) ಶ್ರೀರಾಮ ಮಂದಿರ, ಹೊನ್ನಾವರ
II) ವೆಂಕಟರಮಣ ದೇವಾಲಯ, ಹೊನ್ನಾವರ
III) ಗೋಪಾಲಕೃಷ್ಣ ದೇವಾಲಯ, ಹೊನ್ನಾವರ
IV) ಗೋಪಿನಾಥ ವೆಂಕಟರಮಣ ದೇವಾಲಯ, ಹಳದೀಪುರ
1) ಹೊರ ಗೋಡೆಯ ಚಿತ್ರಗಳು
2) ಗರ್ಭಗೃಹದ ಮೇಲಿನ ಶಿಖರದ ಚಿತ್ರಗಳು
I) ದಶಾವತಾರ ಚಿತ್ರಗಳು
1) ಮತ್ಸ್ಯಾವತಾರ
2) ಕೂರ್ಮಾವತಾರ
3) ವರಾಹ ಅವತಾರ
4) ನರಸಿಂಹ ಅವತಾರ
5) ವಾಮನ ಅವತಾರ
6) ಪರಶುರಾಮ ಅವತಾರ
7) ರಾಮಾವತಾರ
8) ಕೃಷ್ಣಾವತಾರ
9) ಬೌದ್ಧ ಅವತಾರ
10) ಕಲ್ಕಿ ಅವತಾರ
II) ಇತರ ದೇವತಾ ಚಿತ್ರಗಳು
1) ಹನುಮಂತ ಗರುಡರ ಚಿತ್ರ
2) ಸರಸ್ವತಿಯ ಚಿತ್ರ
3) ಜಯವಿಜಯರ ಚಿತ್ರ
4) ಗಣಪತಿಯ ಚಿತ್ರ
5) ದೇವಿ ಚಿತ್ರಗಳು
6) ಶೇಷಶಯನ ವಿಷ್ಣುವಿನ ಚಿತ್ರ
7) ಕೃಷ್ಣನು ರಾಕ್ಷಸನನ್ನು ಕೊಲ್ಲುತ್ತಿರುವ ಚಿತ್ರ
8) ನಂದಿಯ ಚಿತ್ರ
9) ಗಜೇಂದ್ರ ಮೋಕ್ಷ
10) ಲಕ್ಷ್ಮೀದೇವಿಯ ಚಿತ್ರ
11) ಭಸ್ಮಾಸುರ ಮೋಹಿನಿ ಚಿತ್ರ
12) ಕಾಳಿಂಗ ಮರ್ದನ ಕೃಷ್ಣನ ಚಿತ್ರ
13) ಭೃಂಗಿಯ ಚಿತ್ರ
14) ಮತ್ಸ್ಯರೂಪದ ಕನ್ಯೆಯರ ಚಿತ್ರ
15) ಪಕ್ಷಿರೂಪದ ಕನ್ಯೆಯರ ಚಿತ್ರ
I) ಆನೆಯ ಮೇಲೆ ಕುಳಿತ ದೇವತಾ ಪುರುಷ
II) ಟಗರಿನ ಮೇಲೆ ಕುಳಿತ ದೇವತಾ ಪುರುಷ
III) ಕುದುರೆಯ ಮೇಲೆ ಕುಳಿತ ದೇವತಾ ಪುರುಷ
IV) ಮನುಷ್ಯನ ಮೇಲೆ ಕುಳಿತ ದೇವತಾ ಪುರುಷ
V) ನಂದಿಯ ಮೇಲೆ ಕುಳಿತ ದೇವತಾ ಪುರುಷ


ವಿಷ್ಣು ದೇವಾಲಯಗಳ ಕಾವಿ ಭಿತ್ತಿ ಚಿತ್ರಕಲೆ
V) ಬಾಳಗೊಡ ಸೀತಾರಾಮಚಂದ್ರ ದೇವಾಲಯ, ಬೀಳಗಿ
VI) ಬೇಡ್ಕಣೆ ಸೀತಾರಾಮಚಂದ್ರ ದೇವಾಲಯ, ಬೀಳಗಿ
VII) ವೆಂಕಟರಮಣ ದೇವಾಲಯ, ಅಘನಾಶಿನಿ
1) ಹೊರ ಗೋಡೆಯ ಚಿತ್ರಗಳು
2) ಗರ್ಭಗೃಹದ ಮೇಲಿನ ಶಿಖರದ ಚಿತ್ರಗಳು
1) ವೃತ್ತಾಕಾರದ ನಕ್ಷೆಗಳು
2) ಹೂ-ಬಳ್ಳಿಯ ನಕ್ಷೆಗಳು
I) ದಶಾವತಾರ ಚಿತ್ರಗಳು
II) ಸೇವಕಿಯರ ಚಿತ್ರಗಳು
III) ಆಂಜನೇಯನ ಚಿತ್ರಗಳು
1) ದಶಾವತಾರ ಚಿತ್ರಗಳು
2) ಇತರ ಚಿತ್ರಗಳು
I) ನಾರದನ ಚಿತ್ರ
II) ತುಂಬುರನ ಚಿತ್ರ
III) ಗರುಡನ ಚಿತ್ರ
IV) ವಾಲ್ಮೀಕಿ ಋಷಿಯ ಚಿತ್ರ
V) ಪರಿಚಾರಿಕೆಯರ ಚಿತ್ರಗಳು
VIII) ನಾರಾಯಣ ದೇವಾಲಯ, ಅಗ್ರಹಾರ
IX) ಲಕ್ಷ್ಮೀನಾರಾಯಣ ಮಂದಿರ, ಆವರ್ಸಾ
X) ಗೋಪಾಲಕೃಷ್ಣ ದೇವಾಲಯ, ಶಿರಸಿ
XI) ಲಕ್ಷ್ಮೀ ವೆಂಕಟೇಶ ಮಂದಿರ, ಗೇರುಸೊಪ್ಪಾ
XII) ಲಕ್ಷ್ಮೀ ವೆಂಕಟರಮಣ ದೇವಾಲಯ, ಹೊಸಾಡ
1) ಒಳ ಗೋಡೆಯ ಚಿತ್ರಗಳು
2) ಹೊರ ಗೋಡೆಯ ಚಿತ್ರಗಳು
1) ಹೊರ ಗೋಡೆಯ ಚಿತ್ರಗಳು
2) ಒಳ ಗೋಡೆಯ ಚಿತ್ರಗಳು
1) ಹೊರ ಗೋಡೆಯ ಚಿತ್ರಗಳು
2) ಒಳ ಗೋಡೆಯ ಚಿತ್ರಗಳು
I) ಕರ್ಣಾರ್ಜುನರ ಯುದ್ಧದ ಚಿತ್ರ
II) ಕಮಲದ ಹೂವಿನ ಚಿತ್ರ
III) ರಾಜರಾಣಿಯರ ಚಿತ್ರ
IV) ನರಸಿಂಹನ ಚಿತ್ರ
V) ಅರ್ಜುನ ಸುಧನ್ವರ ಯುದ್ಧದ ಚಿತ್ರ
VI) ಅರ್ಜುನ ತಾಮ್ರಧ್ವಜರ ಯುದ್ಧದ ಚಿತ್ರ
VII) ದಾನವರಾಜನ ಚಿತ್ರ
I) ವಿಷ್ಣುವನ್ನು ಹೊತ್ತುಕೊಂಡಿರುವ ಗರುಡ
II) ರಾಮನನ್ನು ಹೊತ್ತುಕೊಂಡಿರುವ ಆಂಜನೇಯ
III) ಬೃಹನ್ನಳೆ
IV) ಹಂಸಧ್ವಜನ ಚಿತ್ರ
V) ಭೀಮ ದ್ರೌಪದಿಯ ಚಿತ್ರ
VI) ಪ್ರಭಾವತಿ ಸುಧನ್ವರ ಚಿತ್ರ
VII) ಕಾಳಿಂಗಮರ್ದನ ಕೃಷ್ಣ
VIII) ಬಲಿಚಕ್ರವರ್ತಿಯ ಚಿತ್ರ
IX) ಸರಸ್ವತಿಯ ಚಿತ್ರ

೧) ಹೊರಗೋಡೆಯ ಚಿತ್ರಗಳು

೨) ಗರ್ಭಗೃಹದ ಮೇಲಿನ ಶಿಖರದ ಚಿತ್ರಗಳು

**೧. ಹೊರಗೋಡೆಯ ಚಿತ್ರಗಳು :** ದೇವಾಲಯದ ಹೊರಗೋಡೆಯಲ್ಲಿ ಸುತ್ತಲೂ ಸಾಲಾಗಿ ಚಿತ್ರಗಳನ್ನು ರಚಿಸಲಾಗಿದೆ. ಪ್ರಮುಖವಾಗಿ ಗೋಡೆಯುದ್ದಕ್ಕೂ ದಶಾವತಾರ ಚಿತ್ರಗಳನ್ನು ರಚಿಸಲಾಗಿದ್ದು ಮಧ್ಯದಲ್ಲಿ ಅಲ್ಲಲ್ಲಿ ಬೇರೆ ಬೇರೆ ದೇವತಾ ಚಿತ್ರಗಳನ್ನೂ ರಚಿಸಲಾಗಿದೆ. ಈ ಹಿನ್ನೆಲೆಯಲ್ಲಿ ಹೊರಗೋಡೆಯ ಚಿತ್ರಗಳನ್ನು ಈ ಕೆಳಗಿನಂತೆ ಎರಡು ವಿಧದಲ್ಲಿ ವಿಂಗಡಿಸಿಕೊಂಡು ವಿವರಿಸಬಹುದು.

I. ದಶಾವತಾರ ಚಿತ್ರಗಳು

II. ಇತರ ದೇವತೆಗಳ ಚಿತ್ರಗಳು

*I. ದಶಾವತಾರ ಚಿತ್ರಗಳು :* ದಶಾವತಾರ ಚಿತ್ರಗಳು ಅತ್ಯಂತ ಉತ್ತಮ ರೇಖಾವಿನ್ಯಾಸದಿಂದ ಕೂಡಿದ್ದು ಕಲಾವಿದನ ಪ್ರಬುದ್ಧತೆಯನ್ನು ಬಿಂಬಿಸುತ್ತಲಿವೆ. ವಿಷ್ಣುವಿನ ದಶಾವತಾರಗಳಾದ ಮೊದಲಿನ ಮತ್ಸ್ಯಾವತಾರದಿಂದ ಹತ್ತನೆಯ ಅವತಾರವಾದ ಕಲ್ಕಿ ಅವತಾರದವರೆಗೆ ಎಲ್ಲ ಅವತಾರದ ಚಿತ್ರಗಳೂ ಸವಿವರವಾಗಿ ರಚನೆಯಾಗಿವೆ. ಅವುಗಳನ್ನು ಒಂದೊಂದಾಗಿ ಈ ಕೆಳಗಿನಂತೆ ವಿವರಿಸಬಹುದು.

೧. ಮತ್ಸ್ಯಾವತಾರ : ಮತ್ಸ್ಯಾವತಾರ ಚಿತ್ರದಲ್ಲಿ ನಾಲ್ಕು ಕೈಗಳನ್ನು ಹೊಂದಿದ ವಿಷ್ಣುವು ಕೈಗಳಲ್ಲಿ ಶಂಖ. ಚಕ್ರಗಳನ್ನು ಹಿಡಿದಿರುವನಲ್ಲದೇ ಉಳಿದ ಇನ್ನೆರಡು ಕೈಗಳಿಂದ ಒಂದು ಕೈಯಿಂದ ರಾಕ್ಷಸನ ಜುಟ್ಟುಹಿಡಿದು ಮತ್ತೊಂದು ಕೈಯಲ್ಲಿರುವ ಭರ್ಜಿಯಿಂದ ರಾಕ್ಷಸನನ್ನು ಚುಚ್ಚಿ ಸಾಯಿಸುತ್ತಿದ್ದಾನೆ. ರಾಕ್ಷಸನು ಕೈಯಲ್ಲಿ ಖಡ್ಗ ಢಾಲುಗಳನ್ನು ಹಿಡಿದುಕೊಂಡಿದ್ದು ವಿಷ್ಣುವಿನ ಪದಾಘಾತದಿಂದ ನಾಲಿಗೆ ಚಾಚಿ ಕಿರುಚುತ್ತಿದ್ದಾನೆ. ವಿಷ್ಣುವಿನ ಬಲಗಾಲು ರಚನೆಯಾಗುವಲ್ಲಿ ಕಾಲಿನ ಬದಲಾಗಿ ಮತ್ಸ್ಯವನ್ನು ಚಿತ್ರಿಸಲಾಗಿದೆ.

೨. ಕೂರ್ಮಾವತಾರ : ಈ ದೃಶ್ಯದಲ್ಲಿ ಹಿಂದಿನ ಮತ್ಸ್ಯಾವತಾರ ಚಿತ್ರದಂತೆಯೇ ವಿಷ್ಣುವಿನ ಭಂಗಿ ಚಿತ್ರಿತವಾಗಿದೆ. ವಿಷ್ಣುವು ಎಡಗಾಲಿನಿಂದ ರಾಕ್ಷಸನನ್ನು ಮೆಟ್ಟಿದ್ದು ಉದ್ದನಾದ ಭರ್ಜಿಯಿಂದ ಚುಚ್ಚಿ ಕೊಲ್ಲುತ್ತಿದ್ದಾನೆ. ವಿಷ್ಣುವಿನ ಬಲಗಾಲಿನ ಸ್ಥಳದಲ್ಲಿ ಕೂರ್ಮವು ಚಿತ್ರಿಸಿದೆ. ಕೂರ್ಮದ ಮೈಮೇಲೆ ಗೆರೆಗಳನ್ನು ರಚಿಸಿ ಅದರ ಮೈಮೇಲಿನ ನಕ್ಷೆಗಳನ್ನು ರೂಪಿಸಲು ಪ್ರಯತ್ನಿಸಿದೆ.

೩. ವರಾಹ ಅವತಾರ : ಈ ದೃಶ್ಯದಲ್ಲಿ ವಿಷ್ಣುವು ರಾಕ್ಷಸನ ಜುಟ್ಟನ್ನು ಎಡಗೈಯಲ್ಲಿ ಹಿಡಿದು ಬಲಗೈಯಲ್ಲಿರುವ ಖಡ್ಗದಿಂದ ಆತನ ರುಂಡವನ್ನು ಕತ್ತರಿಸುತ್ತಿದ್ದಾನೆ. ವಿಷ್ಣುವಿನ ಬಲಭಾಗದ ಕಾಲಿನ ಹತ್ತಿರ ವರಾಹ (ಹಂದಿ)ವು ಚಿತ್ರಿಸಿದೆ. ಅದರ ಮೈಮೇಲೆ ಪಟ್ಟೆಗಳನ್ನು ಎಳೆಯಾಲಾಗಿದೆ. ರಾಕ್ಷಸನು ಕೈಯಲ್ಲಿ ಖಡ್ಗ, ಢಾಲುಗಳನ್ನು ಹಿಡಿದುಕೊಂಡು ಬಿದ್ದಿದ್ದಾನೆ.

೪. ನರಸಿಂಹ ಅವತಾರ : ಕಂಬವನ್ನು ಸೀಳಿಬಂದ ನರಸಿಂಹನು ಹಿರಣ್ಯಕಶಿಪುವನ್ನು ತೊಡೆಯಮೇಲೆ ಹಾಕಿಕೊಂಡು ಆತನ ಹೊಟ್ಟೆಯನ್ನು ಸೀಳುತ್ತಿದ್ದಾನೆ. ನರಸಿಂಹನ ಹಿಂದಿರುವ ಸೀಳಿದ ಕಂಬವು ಹೂಗಳ ನಕ್ಷೆಯಿಂದ ಕೂಡಿದೆ. ರಾಕ್ಷಸನು ಧರಿಸಿದ ಚಡ್ಡಿಯಂತಹ ಉಡುಪು ಅಡ್ಡವಾದ ಗೆರೆಗಳನ್ನು ಹೊಂದಿದೆ. ಇದನ್ನು

ಪ್ರತ್ಯೇಕವಾಗಿ ಚಿತ್ರಿಸಿರದೇ ರಾಕ್ಷಸನ ತೊಡೆಯ ಭಾಗದಲ್ಲಿ ಅಡ್ಡಡ್ಡಗೆರೆಗಳನ್ನು ಎಳೆದು ರೂಪಿಸಲಾಗಿದೆ. ಚಿತ್ರದ ಅಂಕಣದಲ್ಲಿ ಮೇಲೆರಡು ಕೆಳಗೆರಡು ವೃತ್ತಾಕಾರದ ನಕ್ಷೆಗಳು ರಚಿಸಿವೆ.

೫. ವಾಮನಾವತಾರ : ಈ ದೃಶ್ಯದಲ್ಲಿ ದಾನಬೇಡಲು ಬಂದ ವಾಮನನು ಎಡಗೈಯಲ್ಲಿ ಕಮಂಡಲು ಹಿಡಿದು ಬಲಗೈಯನ್ನು ಚಾಚಿ ಬಲಿ ಚಕ್ರವರ್ತಿಯಲ್ಲಿ ದಾನ ಬೇಡುತ್ತಿದ್ದಾನೆ. ಸಿಂಹಾಸನದ ಮೇಲೆ ಕುಳಿತ ಬಲಿ ಚಕ್ರವರ್ತಿಯು ಕೈ ಮುಂದೆ ಚಾಚಿ ದಾನ ನೀಡುತ್ತಿದ್ದಾನೆ. ಹಿನ್ನೆಲೆಯಲ್ಲಿ ಕೃಷ್ಣನ ಚಕ್ರವು ರಚನೆಯಾಗಿದೆ.

೬. ಪರಶುರಾಮ ಅವತಾರ : ಇಲ್ಲಿನ ದಶಾವತಾರ ಚಿತ್ರಗಳಲ್ಲಿ ಪರಶುರಾಮ ಮತ್ತು ರಾಮಾವತಾರದ ಚಿತ್ರಗಳನ್ನು ಹೊರತುಪಡಿಸಿ ಉಳಿದೆಲ್ಲ ಚಿತ್ರಗಳು ಒಂದೇ ಅಂಕಣದಲ್ಲಿ ರಚನೆಯಾಗಿವೆ. ಆದರೆ ಇವೆರಡು ಅವತಾರದ ದೃಶ್ಯ ಚಿತ್ರಿಸುವಲ್ಲಿ ಪ್ರತಿಯೊಂದು ಅವತಾರಕ್ಕೂ ಎರಡೆರಡು ಅಂಕಣ ಬಳಸಿಕೊಳ್ಳಲಾಗಿದೆ. ಪರಶುರಾಮ ಅವತಾರ ದೃಶ್ಯದಲ್ಲಿ ಒಂದು ಅಂಕಣದಲ್ಲಿ ಪರಶುರಾಮನು ಕೊಡಲಿಯಿಂದ ಯುದ್ಧ ಮಾಡುತ್ತಿದ್ದಾನೆ. ಆತನ ಎದುರಿಗಿರುವ ಇನ್ನೊಂದು ಅಂಕಣದಲ್ಲಿ ಸಹಸ್ರಾರ್ಜುನನು ಪರಶುರಾಮನಿಗೆದುರಾಗಿ ಕಾದಾಡುತ್ತಿದ್ದಾನೆ. ಈ ದೃಶ್ಯವು ಅತ್ಯಂತ ಆಕರ್ಷಕವಾಗಿ ರಚನೆಯಾಗಿದ್ದು ಇಲ್ಲಿನ ದಶಾವತಾರ ಚಿತ್ರಗಳಲ್ಲೇ ಅತ್ಯಂತ ಉತ್ಕೃಷ್ಟ ಕೃತಿಯಾಗಿದೆ ಎನ್ನಬಹುದು.

ಕಿರೀಟ ಧರಿಸಿ ಕೊರಳಲ್ಲಿ ಆಭರಣ ಹಾಕಿಕೊಂಡು ಕೈಯಲ್ಲಿ ಕೊಡಲಿ ಹಿಡಿದು ಪರಶುರಾಮನು ಯುದ್ಧ ಮಾಡುತ್ತಿದ್ದಾನೆ. ಹೂವಿನ ನಕ್ಷೆಯ ಪಂಚೆಯನ್ನು ಈತ ಉಟ್ಟಿದ್ದು ನಡುವಿನಿಂದ ಇಳಿಬಿದ್ದ ನಿರಿಗೆಯು ಅಲಂಕಾರಿಕ ಹೂವಿನ ರೂಪತಾಳಿದೆ. ಪರಶುರಾಮನು ಅಲಂಕೃತ ಪೀಠವೊಂದರ ಮೇಲೆ ನಿಂತಿದ್ದು, ಆತನ ಕಾಲಿನ ಹತ್ತಿರವೇ ಪೇಶ್ವೆಶೈಲಿಯ ಟೋಪಿ. ಉಡುಗೆ ತೊಡುಗೆ ಧರಿಸಿದ ವ್ಯಕ್ತಿಯೊಬ್ಬ ಚಿತ್ರಿತವಾಗಿದ್ದಾನೆ. ಪರಶುರಾಮನ ಮೇಲ್ಭಾಗದಲ್ಲಿ ಆನೆ ಮತ್ತು ಎತ್ತಿನ ರೂಪಗಳು ಸಂಯುಕ್ತಗೊಂಡಿರುವ ಚಮತ್ಕಾರೀ ಚಿತ್ರವೊಂದು ರಚನೆಯಾಗಿದೆ. ಎರಡು ದೇಹ ಒಂದೇ ಮುಖ ಹೊಂದಿರುವ ಈ ಚಿತ್ರವು ಒಂದುಕಡೆಗೆ ಮರೆಮಾಡಿದರೆ ಆನೆಯಾಗಿಯೂ ಇನ್ನೊಂದು ಕಡೆ ಮರೆಮಾಡಿದರೆ ಎತ್ತು (ನಂದಿ) ಆಗಿಯೂ ಕಾಣುತ್ತದೆ. ಇಂತಹುದೇ ಚಿತ್ರ ಉತ್ತರ ಕರ್ನಾಟಕದ ಅನೇಕ ಭಾಗಗಳಲ್ಲಿ ಕಂಡು ಬರುತ್ತದೆ. ಶಿಷ್ಟ ಸಂಪ್ರದಾಯದ ಬಹುವರ್ಣ ಭಿತ್ತಿಚಿತ್ರಗಳಲ್ಲೂ ಈ ಚಿತ್ರ ಕಾಣಿಸುತ್ತದೆ. ನರಗುಂದದ ಬಾಬಾಸಾಹೇಬನ ಅರಮನೆಯಲ್ಲಿ, ಹಳಿಯಾಳದ ಸಮೀಪವಿರುವ ಬಿ. ಕೆ. ಹಳ್ಳಿಯಲ್ಲಿ ಅಲ್ಲದೇ ಹಂಪೆಯ ವಿಠ್ಠಲ ದೇವಾಲಯದ ಬಲಭಾಗದ ಗೋಡೆಯಲ್ಲಿ ಶಿಲ್ಪದಲ್ಲಿ ಇಂತಹ ಚಿತ್ರವನ್ನು ಕೆತ್ತಲಾಗಿದೆ. ಪರಶುರಾಮನ ಎದುರಿಗೆ ಯುದ್ಧ ಮಾಡುತ್ತಿರುವ ಸಹಸ್ರಾರ್ಜುನ ಚಿತ್ರದಲ್ಲಿ ಸಹಸ್ರಾರ್ಜುನನು ಇಪ್ಪತ್ತು ಕೈಗಳನ್ನು ಹೊಂದಿದ್ದಾನೆ. ಎರಡು ಬಿಲ್ಲುಗಳನ್ನು ಈತ ಹಿಡಿದುಕೊಂಡಿದ್ದು ಎರಡರಿಂದಲೂ ಬಾಣಗಳನ್ನು ಒಂದೇ ಸಮಯದಲ್ಲಿ ಬಿಡುತ್ತಿದ್ದಾನೆ. ಹೂಗಳ ನಕ್ಷೆಯಿಂದ ಕೂಡಿದ ಪಂಚೆಯನ್ನು ಉಟ್ಟುಕೊಂಡಿರುವನು. ಈತನ ಮುಂದೆ ಕಾಲಿನ ಹತ್ತಿರ ಪೇಶ್ವೆಶೈಲಿಯ ವೇಷಭೂಷಣ ತೊಟ್ಟ ಖಡ್ಗಧಾರಿ ವ್ಯಕ್ತಿಯೊಬ್ಬನಿದ್ದಾನೆ. ಪರಶುರಾಮನ ಅಂಕಣದಲ್ಲಿರುವಂತೆ ಸಹಸ್ರಾರ್ಜುನ ಚಿತ್ರದ ಅಂಕಣದಲ್ಲೂ ಮೇಲ್ಭಾಗದಲ್ಲಿ ಮತ್ತೊಂದು ಚಮತ್ಕಾರೀ ಚಿತ್ರರಚಿಸಿದೆ. ಇದು ವಾಸ್ತವವಾಗಿ ಎರಡು ಮಂಗಗಳ ಚಿತ್ರವಾಗಿದ್ದು ಸಂಯೋಜನಾ ಜಾಣ್ಮೆಯಿಂದ ನಾಲ್ಕು ಮಂಗಗಳ ವಿವಿಧರೂಪಗಳನ್ನು ಅದು ತೋರಿಸುತ್ತದೆ. ಅದರ ಒಂದೊಂದು ಭಾಗವನ್ನು

ಮರೆಮಾಡುತ್ತ ಹೋದರೆ ಕುಳಿತು ಹಣ್ಣು ತಿನ್ನುತ್ತಿರುವ ಮಂಗ. ತಲೆಕೆಳಾಗಾಗಿ ಲಾಗ ಹೊಡೆಯುತ್ತಿರುವ ಮಂಗ. ಹಣ್ಣು ಹಿಡಿದು ಮುಂದಕ್ಕೆ ಹಾರುತ್ತಿರುವ ಮಂಗ ಹೀಗೆ ವಿವಿಧ ರೂಪಗಳು ಗೋಚರಿಸುತ್ತವೆ.

೭. ರಾಮಾವತಾರ : ರಾಮಾವತಾರವನ್ನು ನಿರೂಪಿಸಲೂ ಎರಡು ಅಂಕಣಗಳನ್ನು ಬಳಸಿಕೊಂಡಿದ್ದು ಒಂದು ಅಂಕಣದಲ್ಲಿ ರಾಮನನ್ನು ಇನ್ನೊಂದು ಅಂಕಣದಲ್ಲಿ ರಾವಣನನ್ನು ಚಿತ್ರಿಸಲಾಗಿದೆ. ರಾಮನು ಬಿಲ್ಲುಬಾಣ ಧರಿಸಿ ರಾವಣನ ಮೇಲೆ ಯುದ್ಧಮಾಡುತ್ತಿದ್ದಾನೆ. ಆತನ ಹಿಂದೆ ಮುಂದೆ ಅಲಂಕಾರಿಕ ಗಿಡಗಳು ಚಿತ್ರಿಸಿದೆ. ವೃತ್ತಾಕಾರದ ಜ್ಯಾಮಿತಿಕ ನಕ್ಷೆಯ ಕೆಳಗೆ ಬೊಡ್ಡೆಯನ್ನು ಚಿತ್ರಿಸಿ ಗಿಡವಾಗಿ ರೂಪಿಸಲಾಗಿದೆ. ಮೇಲ್ಭಾಗದಲ್ಲೂ ಮೂರು ವೃತ್ತದ ನಕ್ಷೆಗಳಿವೆ. ಹತ್ತು ತಲೆ ಇಪ್ಪತ್ತು ತೋಳುಗಳನ್ನು ಹೊಂದಿದ ರಾವಣನು ಕೂಡಾ ಬಿಲ್ಲು ಬಾಣಧರಿಸಿದ್ದು ರಾಮನ ಮೇಲೆ ಯುದ್ಧ ಮಾಡುತ್ತಿದ್ದಾನೆ. ರಾಮನ ಹೊಡೆತಗಳಿಂದ ಹಿಮ್ಮೆಟ್ಟಿದ ರಾವಣನು ಹಿಂದೆ ಬೀಳುತ್ತಿರುವಂತೆ ಚಿತ್ರಿಸಲಾಗಿದೆ.

೮. ಕೃಷ್ಣಾವತಾರ : ಕೃಷ್ಣಾವತಾರ ಚಿತ್ರದಲ್ಲಿ ನಾಲ್ಕು ಕೈಗಳನ್ನು ಹೊಂದಿದ ಕೃಷ್ಣನು ಎರಡು ಕೈಗಳಿಂದ ಕೊಳಲನ್ನು ನುಡಿಸುತ್ತಿದ್ದು, ಇನ್ನೆರಡು ಕೈಗಳಲ್ಲಿ ಒಂದು ಕೈಯಲ್ಲಿ ಚಕ್ರಹಿಡಿದುಕೊಂಡಿದ್ದರೆ, ಇನ್ನೊಂದು ಕೈಯಿಂದ ಕಿರುಬೆರಳಲ್ಲೇ ಗೋವರ್ಧನ ಪರ್ವತವನ್ನು ಎತ್ತಿದ್ದಾನೆ. ಪರ್ವತದಲ್ಲಿ ಗಿಡ ಮರಗಳು ಜೀವಸಂಕುಲ ಚಿತ್ರಿಸಿದೆ. ಶ್ರೀಕೃಷ್ಣನು ಎತ್ತಿದ ಪರ್ವತದ ಕೆಳಗೆ ಗೋಪಾಲಕರು ಆಶ್ರಯ ಪಡೆದಂತೆ ಗೋವುಗಳೂ ಆಶ್ರಯ ಪಡೆದಿವೆ. ಮೇಲ್ಭಾಗದಲ್ಲಿ ಎದುರುಬದುರಾದ ಎರಡು ಗಿಳಿಗಳೂ ರಚನೆಯಾಗಿವೆ.

೯. ಬೌದ್ಧಾವತಾರ : ಬೌದ್ಧಾವತಾರ ಚಿತ್ರದಲ್ಲಿ ಬುದ್ಧನು ಸೊಂಟದ ಮೇಲೆ ಕೈಯಿಟ್ಟುಕೊಂಡು ನಗ್ನನಾಗಿ ನಿಂತುಕೊಂಡಿದ್ದಾನೆ. ಬುದ್ಧನು ಸರ್ವಸಂಗ ಪರಿತ್ಯಾಗಿ ಎಂಬುದನ್ನು ತೋರಿಸುಲು ನಗ್ನನಾಗಿ ಚಿತ್ರಿಸಿದ್ದರೂ ಕೊರಳಲ್ಲಿ ಸಾಕಷ್ಟು ಆಭರಣಗಳನ್ನು ಚಿತ್ರಿಸಿದೆ. ಬುದ್ಧನ ನಗ್ನ ರೂಪದಲ್ಲಿ ಮರ್ಮಾಂಗವನ್ನೂ ಚಿತ್ರಿಸಲಾಗಿದೆ. ಬುದ್ಧನ ಸುತ್ತಲೂ ಹೂಬಳ್ಳಿಯ ನಕ್ಷೆಗಳು, ಗಿಡಮರಗಳು ಅಲ್ಲದೇ ಗಿಳಿಗಳು, ವಿಷ್ಣುವಿನ ಸಂಕೇತವಾಗಿ ಶಂಖಚಕ್ರಗಳು ಚಿತ್ರಿಸಿದೆ.

೧೦. ಕಲ್ಕಿ ಅವತಾರ : ಕಲ್ಕಿ ಅವತಾರ ಚಿತ್ರದಲ್ಲಿ ಕಲ್ಕಿ ರೂಪವನ್ನು ತಾಳಿದ ವಿಷ್ಣುವು ನಾಲ್ಕು ಕೈಗಳನ್ನು ಹೊಂದಿದ್ದಾನೆ. ಎರಡು ಕೈಗಳಲ್ಲಿ ಶಂಖಚಕ್ರಗಳನ್ನು ಹಿಡಿದುಕೊಂಡಿದ್ದು, ಇನ್ನೊಂದು ಕೈಯಿಂದ ಕುದುರೆಯ ಲಗಾಮು ಹಿಡಿದಿದ್ದು ಮತ್ತೊಂದು ಕೈಯನ್ನು ಹಾಗೇ ಇಳಿಬಿಟ್ಟಿದ್ದಾನೆ. ಕೊರಳಲ್ಲಿ ಆಭರಣಗಳು, ಹೂಮಾಲೆಗಳಿವೆ. ಕಲ್ಕಿಯು ಹಿಡಿದುಕೊಂಡಿರುವ ಕುದುರೆಯ ಮೇಲೆ ಜೀನು ತೋಡಿಸಲಾಗಿದೆ. ಕುದುರೆಯ ಬೆನ್ನಮೇಲೆ ಅಲಂಕಾರಿಕವಾದ ಛತ್ರಿಯು ಇದೆ. ಮೇಲ್ಭಾಗದಲ್ಲಿ ಉದ್ದವಾಗಿ ಗಡ್ಡ ಬಿಟ್ಟ ಸಾಧು ಒಬ್ಬನಿದ್ದಾನೆ. ಆತ ಉದ್ದವಾದ ನಿಲುವಂಗಿಯಂತಹ ಉಡುಪು ಧರಿಸಿದ್ದು, ಎದೆಯನ್ನು ಬಳಸಿದಂತೆ ಶಲ್ಯವನ್ನು ಹೊದ್ದುಕೊಂಡಿದ್ದಾನೆ. ಪಕ್ಕದಲ್ಲಿ ಹೂಗಳು, ವೃತ್ತಾಕಾರದ ನಕ್ಷೆಗಳು ರಚಿಸಿವೆ.

*II. ಇತರ ದೇವತೆಗಳ ಚಿತ್ರಗಳು :* ಹೊರಗೋಡೆಯಲ್ಲಿ ದಶಾವತಾರ ಚಿತ್ರಗಳ ಮಧ್ಯದಲ್ಲಿಯೇ ಅಲ್ಲಲ್ಲಿ ಬೇರೆ ಬೇರೆ ದೇವತೆಗಳ, ದೇವತಾಪುರುಷರ ಚಿತ್ರಗಳನ್ನೂ ರಚಿಸಿದ್ದಾರೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಬಹುದು :

೧. ಹನುಮಂತ ಗರುಡರ ಚಿತ್ರ : ಬಾಗಿಲುಗಳ ಎಡಬಲಗಳಲ್ಲಿ ಜಯವಿಜಯರ ಚಿತ್ರಗಳಿದ್ದರೆ ಅವರ ಪಕ್ಕದಲ್ಲಿಯೇ ಹನುಮಂತ ಮತ್ತು ಗರುಡರ ಚಿತ್ರಗಳನ್ನು ರಚಿಸಲಾಗಿದೆ. ಹನುಮಂತ ಮತ್ತು ಗರುಡ ಇಬ್ಬರೂ ಕೈಮುಗಿದು ನಿಂತಿದ್ದಾರೆ. ಹನುಮಂತನು ಕೈಮುಗಿದುಕೊಂಡಂತಿರುವ ಆತನ ಕೈಯಲ್ಲಿ ತಲೆಕೆಳಗಾದ ಗಧೆ ಇದೆ. ಗರುಡನ ಕೊರಳಲ್ಲಿ ಹಾವುಗಳಿವೆ. ಬೆನ್ನಿಗೆ ಆಕರ್ಷಕವಾದ ರೆಕ್ಕೆಗಳು, ತಲೆಗೆ ಸುಂದರ ಕಿರೀಟ ಗರುಡನಿಗಿದೆ.

೨. ಸರಸ್ವತಿಯ ಚಿತ್ರ : ಸರಸ್ವತಿಯ ಚಿತ್ರವೊಂದು ದೇವಾಲಯದ ಹೊರಗೋಡೆಯಲ್ಲಿ ರಚಿಸಿದೆ. ಮತ್ಸ್ಯಾವತಾರ ಚಿತ್ರದ ಎಡಭಾಗದಲ್ಲಿ ಸರಸ್ವತಿಯ ಚಿತ್ರವಿದೆ. ನಾಲ್ಕು ಕೈಗಳನ್ನು ಹೊಂದಿದ ಸರಸ್ವತಿಯು ಮೂರು ಕೈಗಳನ್ನು ವೀಣೆಬಾರಿಸಲು ತೊಡಗಿಸಿದ್ದಾಳೆ. ಸರಸ್ವತಿಯು ಕಮಲದ ಹೂವಿನ ಮೇಲೆ ಕುಳಿತಿರದೇ ಅಲಂಕಾರಿಕ ಪೀಠದ ಮೇಲೆ ಕುಳಿತಿದ್ದಾಳೆ. ಹೂಗಳ ನಕ್ಷೆಯಿರುವ ಸೀರೆ ಅಲಂಕಾರ ಹೆಚ್ಚಿಸಿದೆ. ಎಡಗಡೆಯಲ್ಲಿ ಹೂವಿನ ಗಿಡವೊಂದು ಬೆಳೆದುನಿಂತಿದೆ. ಮೇಲ್ಭಾಗದಲ್ಲೂ ಎರಡು ದೊಡ್ಡ ಹೂಗಳಿವೆ.

೩. ಜಯವಿಜಯರ ಚಿತ್ರಗಳು : ಶ್ರೀರಾಮಮಂದಿರದಲ್ಲಿ ದಶಾವತಾರ ಚಿತ್ರಗಳಲ್ಲದೇ ಇನ್ನಿತರ ಚಿತ್ರಗಳೂ ರಚನೆಯಾಗಿವೆ. ಬಾಗಿಲಿನ ಎಡಬಲಗಳಲ್ಲಿ ವೈಕುಂಠದ ದ್ವಾರಪಾಲಕರಾದ ಜಯವಿಜಯರ ಚಿತ್ರಗಳು ಇಲ್ಲಿ ಸುಂದರವಾಗಿ ರಚಿಸಿವೆ. ದೇವಾಲಯದ ಮೂರುಕಡೆಗೆ ಪ್ರವೇಶದ್ವಾರಗಳಿದ್ದು, ಎಡಬಲದಲ್ಲಿರುವ ಚಿಕ್ಕ ಪ್ರವೇಶದ್ವಾರಗಳ ಅಕ್ಕಪಕ್ಕಗಳಲ್ಲಿ ಜಯವಿಜಯರ ಚಿತ್ರಗಳಿವೆ. ಗರ್ಭಗೃಹದ ಎದುರಿಗೆ ಇರುವ ದೇವಾಲಯದ ಮುಖ್ಯ ಪ್ರವೇಶದ್ವಾರದ ಅಕ್ಕಪಕ್ಕದಲ್ಲಿಯೂ ಜಯವಿಜಯರ ಚಿತ್ರಗಳು ಮೊದಲು ಇದ್ದವು. ಎಂದು ಈ ದೇವಾಲಯದ ಪೂಜಾರಿಗಳು ಹೇಳುತ್ತಾರೆ. ಆದರೆ ಈಗ ಮುಖ್ಯ ಪ್ರವೇಶದ್ವಾರದ ಗೋಡೆಗೆ ಬಣ್ಣ ಹಚ್ಚಲಾಗಿದೆ. ಹಾಗಾಗಿ ಈಗ ಎರಡು ಬಾಗಿಲುಗಳ ಪಕ್ಕಗಳಲ್ಲಿ ಮಾತ್ರ ಇಲ್ಲಿ ಜಯವಿಜಯರ ಚಿತ್ರಗಳು ಉಳಿದುಕೊಂಡಿವೆ. ಜಯವಿಜಯರು ಅಲಂಕಾರ ಮಂಟಪಗಳಲ್ಲಿ ನಿಂತಿದ್ದು ಒಂದು ಕಾಲಿಗೆ ಇನ್ನೊಂದು ಕಾಲನ್ನು ತೊಡಕಿಸಿ ಆಕರ್ಷಕ ಭಂಗಿಯಲ್ಲಿ ನಿಂತಿದ್ದಾರೆ. ನಾಲ್ಕು ಕೈಗಳಿದ್ದು ಶಂಖ, ಚಕ್ರ, ಗಧೆಗಳನ್ನು ಹಿಡಿದಿದ್ದಾರೆ. ಜಯವಿಜಯರು ನಿಂತುಕೊಂಡಿರುವ ಮಂಟಪಗಳು ವೈವಿಧ್ಯವಾಗಿದ್ದು ಪ್ರತಿಯೊಂದೂ ಭಿನ್ನ ಭಿನ್ನ ರೂಪಗಳನ್ನು ಹೊಂದಿವೆ. ಮಂಟಪಗಳ ಹೊರಗೆ ಒಳಗೆ ಹೂವಿನ ನಕ್ಷೆಗಳನ್ನು ರಚಿಸಲಾಗಿದೆ.

೪. ಗಣಪತಿಯ ಚಿತ್ರ : ದೇವಾಲಯದ ಹಿಂಭಾಗದಲ್ಲಿನ ಗೋಡೆಯಲ್ಲಿ ಗಣಪತಿಯ ಚಿತ್ರರಚಿಸಿದೆ. ತನ್ನ ಬೃಹತ್ ಹೊಟ್ಟೆಗೆ ಹಾವು ಸುತ್ತಿಕೊಂಡು, ಎರಡೂ ಕೈಗಳಲ್ಲಿ ಹೂಗಳನ್ನು ಹಿಡಿದು ಇಲಿಯಮೇಲೆ ಕುಳಿತು ಗಣಪತಿ ಹೊರಟಿದ್ದಾನೆ. ಇಲಿಯು ದೊಡ್ಡಪ್ರಮಾಣದಲ್ಲಿ ರಚಿಸಿದ್ದು ಎಡಬಲಗಳಲ್ಲಿ ಇಬ್ಬರು ಪಕ್ಷಿರೂಪದ ಯಕ್ಷಿಯರು ಗಣೇಶನಿಗೆ ಹೂ ಚಲ್ಲುತ್ತಿದ್ದಾರೆ.

೫. ದೇವಿಯ ಚಿತ್ರಗಳು : ಶ್ರೀರಾಮ ಮಂದಿರದ ಎಡಭಾಗದ ಗೋಡೆಯಲ್ಲಿ ಕಲ್ಕಿ ಅವತಾರದ ಚಿತ್ರದ ಬಲಗಡೆಗೆ ಮೂಲೆಯಲ್ಲಿ ದೇವಿ ಮಹಾತ್ಮೆಯ ಎರಡು ಚಿತ್ರಗಳಿವೆ. ಒಂದು ಚಿತ್ರದಲ್ಲಿ ಎಂಟು ಭುಜಗಳನ್ನು ಹೊಂದಿದ ದೇವಿಯು ಮಹಿಷಾಸುರನನ್ನು ದೊಡ್ಡದಾದ ಈಟಿಯಿಂದ ಇರಿದು ಕೊಲ್ಲುತ್ತಿದ್ದಾಳೆ. ಆಕೆಯ ಎಂಟು ಕೈಗಳಲ್ಲಿ ಎರಡು ಕೈಯಿಂದ ಈಟಿ ಹಿಡಿದು ರಾಕ್ಷಸನಿಗೆ ಚುಚ್ಚುತ್ತಿದ್ದರೆ ಮತ್ತೊಂದು ಕೈಯಲ್ಲಿ ಮಹಿಷಾಸುರನ ಬಾಲವನ್ನೂ ಹಾಗೂ ಇನ್ನೊಂದು ಕೈಯಿಂದ ಆತನ ಜುಟ್ಟನ್ನು ಹಿಡಿದು ಆರ್ಭಟಿಸುತ್ತಿದ್ದಾಳೆ. ಉಳಿದ ಕೈಗಳಲ್ಲಿ

ಕತ್ತಿ ಢಾಲು. ಕೊಡಲಿ ಮುಂತಾದ ಆಯುಧಗಳನ್ನು ಹಿಡಿದುಕೊಂಡಿದ್ದಾಳೆ. ಮಹಿಷ ರೂಪದ ರಾಕ್ಷಸ ಎಮ್ಮೆ (ಮಹಿಷ) ಮುಖವು ಕತ್ತರಿಸಿ ಕೆಳಗೆ ಬಿದ್ದಿದ್ದು ಖಡ್ಗ ಢಾಲುಗಳಿಂದ ದೇವಿಯೊಂದಿಗೆ ಕಾದುತ್ತಿದ್ದಾನೆ. ಇನ್ನೊಂದು ದೇವಿಯ ಚಿತ್ರ ಪಕ್ಕದಲ್ಲಿಯೇ ಇದ್ದು ಅದರಲ್ಲಿ ದೇವಿಗೆ ನಾಲ್ಕು ಕೈಗಳನ್ನು ಚಿತ್ರಿಸಲಾಗಿದೆ. ಹಿಂದಿನ ಚಿತ್ರದಂತೆ ಇಲ್ಲಿಯೂ ದೇವಿ ರಾಕ್ಷಸನನ್ನು ಸಂಹರಿಸುತ್ತಿದ್ದಾಳೆ. ರಾಕ್ಷಸನ ಜುಟ್ಟು ದೇವಿಯ ಕೈಲಿದ್ದು ಈಟಿಯಿಂದ ತಿವಿಯುತ್ತಿದ್ದಾಳೆ. ಕೆಳಗಿಬಿದ್ದ ರಾಕ್ಷಸನ ಕೈಗಳಲ್ಲಿ ಖಡ್ಗ ಢಾಲುಗಳಿವೆ. ಇಲ್ಲಿ ದೇವಿಯ ಹಿಂದುಗಡೆಗೆ ಹೂವಿನ ಗಿಡವೊಂದು ಅಲಂಕಾರಿಕವಾಗಿ ಚಿತ್ರಿಸಲಾಗಿದೆ. ಇಲ್ಲಿನ ಎರಡೂ ಚಿತ್ರಗಳಲ್ಲಿ ದೇವಿಯು ಯಾವುದೇ ವಾಹನದ ಮೇಲೆ ನಿಂತು ಯುದ್ಧ ಮಾಡದೇ ನೆಲದಲ್ಲಿ ನಿಂತೇ ಯುದ್ಧದಲ್ಲಿ ತೊಡಗಿದ್ದಾಳೆ.

೬. ಶೇಷಶಯನ ವಿಷ್ಣು : ದೇವಾಲಯದ ಹಿಂಭಾಗದ ಗೋಡೆಯಲ್ಲಿ ಕಿಟಕಿಯ ಪಕ್ಕ ಬಲಗಡೆಗೆ ಶೇಷಶಯನ ವಿಷ್ಣುವಿನ ಚಿತ್ರ ರಚಿಸಲಾಗಿದೆ. ಏಳು ಹೆಡೆಗಳ ಆದಿ ಶೇಷನ ಮೇಲೆ ವಿಷ್ಣುವು ಒರಗಿದಂತೆ ಕಾಲುಚಾಚಿ ಮಲಗಿಕೊಂಡಿದ್ದು. ಚಾಚಿದ ಆತನ ಕಾಲುಗಳನ್ನು ಶ್ರೀದೇವಿ-ಭೂದೇವಿಯರು ಒತ್ತುತ್ತ ಆತನ ಸೇವೆಯಲ್ಲಿ ತೊಡಗಿದ್ದಾರೆ. ವಿಷ್ಣುವಿನ ಹೊಕ್ಕಳಿಂದ ಹುಟ್ಟಿದ ಕಮಲದಲ್ಲಿ ಬ್ರಹ್ಮದೇವನನ್ನು ಚಿತ್ರಸಲಾಗಿದೆ. ಮೇಲ್ಭಾಗದಲ್ಲಿ ಹೂವಿನ ಗಿಡಗಳು ಜೋತಾಡುತ್ತಿದ್ದು ನೈಜರೂಪಕ್ಕೆ ಹತ್ತಿರವಾಗಿವೆ. ಆದಿಶೇಷ ಸರ್ಪದ ಕೆಳಭಾಗದಲ್ಲಿ ನೀರನ್ನು ಸಾಂಕೇತಿಕವಾಗಿ ಚಿತ್ರಿಸಿದ್ದು ಅದರಲ್ಲಿ ಬಗೆಬಗೆಯ ಮೀನು ಮತ್ತು ಇತರ ಜಲಚರಗಳನ್ನು ಚಿತ್ರಿಸಿದೆ.

೭. ಕೃಷ್ಣನು ರಾಕ್ಷಸನನ್ನು ಕೊಲ್ಲುತ್ತಿರುವ ಚಿತ್ರ : ಶೇಷಶಯನ ವಿಷ್ಣುವಿನ ಚಿತ್ರದ ಬಲಭಾಗದಲ್ಲಿ ಕೃಷ್ಣನು ರಾಕ್ಷಸನನ್ನು ಕೊಲ್ಲುತ್ತಿರುವ ಚಿತ್ರವಿದೆ. ಕೃಷ್ಣನು ಎಡಗೈಯಿಂದ ರಾಕ್ಷಸನ ಜುಟ್ಟುಹಿಡಿದು ಬಲಗೈಯಲ್ಲಿರುವ ಖಡ್ಗದಿಂದ ಆತನ ರುಂಡ ಕತ್ತರಿಸುತ್ತಿದ್ದಾನೆ. ರಾಕ್ಷಸನು ಕೈಗಳಲ್ಲಿ ಖಡ್ಗ ಢಾಲುಗಳನ್ನು ಹಿಡಿದುಕೊಂಡಿದ್ದರೂ ಅಸಹಾಯಕತೆಯಿಂದ ನೆಲಕ್ಕ ಕುಸಿದಿದ್ದಾನೆ. ಈ ದೃಶ್ಯವನ್ನು ದೂರದಿಂದ ಒಬ್ಬ ಗೋಪಬಾಲಕ ಒಬ್ಬಳು ಗೋಪಿಕಾಸ್ತ್ರೀ ನೋಡುತ್ತಿದ್ದು ಭಕ್ತಿಯಿಂದ ಕೈ ಮುಗಿದಿದ್ದಾರೆ. ಮಂಟಪದ ಬಳಿಗೆ ಮೇಲ್ಗಡೆಗೆ ಎಡಭಾಗದಲ್ಲಿ ದೊಡ್ಡದಾದ ಹೂವನ್ನು ಚಿತ್ರಿಸಿದ್ದರೆ, ಮೇಲ್ಭಾಗದಲ್ಲಿ ಎರಡು ಗಿಳಿಗಳು ರಚಿಸಿವೆ. ಕೃಷ್ಣನು ರಾಕ್ಷಸನ ಜುಟ್ಟುಹಿಡಿದು ಆತನನ್ನು ಸಂಹರಿಸುತ್ತಿರುವ ಇಂತಹುದೇ ಚಿತ್ರಗಳು ಹೊನ್ನಾವರದ ಮಾರುತಿ ದೇವಾಲಯ, ಅಮ್ಮಿನಭಾವಿಯ ಪಂಚಗೃಹ ಹಿರೇಮಠದ ಮೇಲ್ಛಾವಣಿಯಲ್ಲೂ ರಚಿಸಿವೆ.

೮. ನಂದಿಯ ಚಿತ್ರ : ಗಣಪತಿಯ ಚಿತ್ರದ ಎಡಭಾಗದಲ್ಲಿ ನಂದಿಯ ಚಿತ್ರವಿದೆ. ಆಕಳ ಮುಖದ ನಂದಿಯು ತಲೆಯಲ್ಲಿ ಕಿರೀಟ ಧರಿಸಿದ್ದು, ಮೃದಂಗ ಬಾರಿಸುತ್ತ ಕುಣಿಯುತ್ತಿದ್ದಾನೆ. ನಂದಿಯ ಮೇಲ್ಭಾಗದಲ್ಲಿ ಚೇಳನ್ನು ಚಿತ್ರಸಲಾಗಿದೆ.

೯. ಗಜೇಂದ್ರ ಮೋಕ್ಷ : ಗಜೇಂದ್ರ ಮೋಕ್ಷ ಎಂದು ಅಲ್ಲೇ ಚಿತ್ರದ ಕೆಳಗೆ ಬರೆಯಲ್ಪಟ್ಟ ಈ ಚಿತ್ರವು ಹಿಂಭಾಗದ ಗೋಡೆಯಲ್ಲಿ ರಚನೆಯಾಗಿದೆ. ಈ ಚಿತ್ರದಲ್ಲಿ ಮೊಸಳೆ ಮತ್ತು ಆನೆ ಕಾದಾಡುತ್ತಿವೆ. ಮೊಸಳೆಯು ತನ್ನ ಬಾಲದಿಂದ ಆನೆಯನ್ನು ಹೊಡೆಯುತ್ತಿದ್ದರೆ ಆನೆಯು ತನ್ನ ನಾಲ್ಕು ಕಾಲುಗಳಿಂದ ಮೊಸಳೆಯನ್ನು ಮೆಟ್ಟಿ ನಿಂತು ಸೊಂಡಿಲಿನಿಂದ ಪ್ರಹಾರ ಮಾಡುತ್ತಲಿದೆ. ಆನೆಯ ಹಿಂದುಗಡೆ ಕಿರೀಟಧರಿಸಿದ ದೇವತಾಪುರುಷನೊಬ್ಬ ನಿಂತಿದ್ದಾನೆ.

೧೦. ಲಕ್ಷ್ಮೀದೇವಿಯ ಚಿತ್ರ : ದೇವಾಲಯದ ಎಡಗೋಡೆಯಲ್ಲಿ ಸರಸ್ವತಿಯ ಚಿತ್ರದ ಪಕ್ಕದಲ್ಲಿ ಲಕ್ಷ್ಮೀದೇವಿಯ ಚಿತ್ರವಿದೆ. ತಲೆಯ ಮೇಲೆ ಸಿಲಿಂಡರಾಕಾರದ ಕಿರೀಟ ಧರಿಸಿದ್ದು ಕೊರಳಲ್ಲಿ, ಕೈಗಳಲ್ಲಿ ನಡುವಿನಲ್ಲಿ ಹೀಗೆ ವಿವಿಧ ಆಭರಣಗಳನ್ನು ಹೊಂದಿದ್ದಾಳೆ. ಅಲಂಕೃತ ಪೀಠವೊಂದರ ಮೇಲೆ ಒಂದಿನ ದಿಂಬಿಗೆ ಒರಗಿಕೊಂಡಿರುವಂತೆ ಚಿತ್ರಿಸಲಾಗಿದ್ದು. ಅಕ್ಕಪಕ್ಕ ಮತ್ತು ಮೇಲ್ಭಾಗದಲ್ಲಿ ವಿವಿಧ ಹೂ ನಕ್ಷೆಗಳು ಚಿತ್ರಿಸಲ್ಪಟ್ಟಿವೆ. ಸುತ್ತಲೂ ಇರುವ ಹೂಗಳ ಗುಂಪಿನಲ್ಲಿ ಕಮಲದ ಹೂವುಗಳು ಪ್ರಮುಖವಾಗಿವೆ. ಸಾಮಾನ್ಯವಾಗಿ ಕಮಲದ ಹೂವಿನ ಮೇಲೆ ಲಕ್ಷ್ಮೀದೇವಿ ಕುಳಿತಂತೆ ಚಿತ್ರಿಸುವ ಪರಿಪಾಠವಿದ್ದರೂ ಇಲ್ಲಿ ದೇವಿಯನ್ನು ದಿಂಬಿನಂತಹ ಆಸನದಮೇಲೆ ಕುಳ್ಳಿರಿಸಿ ಬದಿಯಲ್ಲಿ ಕಮಲದ ಹೂಗಳನ್ನು ಚಿತ್ರಿಸಿದ್ದಾರೆ.

೧೧. ಭಸ್ಮಾಸುರ - ಮೋಹಿನಿಯರ ನೃತ್ಯದ ಚಿತ್ರ : ಭಸ್ಮಾಸುರನು ಯಾರ ತಲೆಯಮೇಲೆ ಕೈ ಇಡುತ್ತಾನೋ ಅವರು ಭಸ್ಮವಾಗುವಂತೆ ಶಿವನಿಂದ ವರಪಡೆದು ಬಂದು ದೇವಲೋಕ ಆದಿಯಾಗಿ ಎಲ್ಲರಿಗೂ ತೊಂದರೆ ಕೊಡಲಾರಂಭಿಸುತ್ತಾನೆ. ಇದರಿಂದ ಬೇಸತ್ತ ದೇವತೆಗಳೆಲ್ಲ ವಿಷ್ಣುವಿನಲ್ಲಿ ಶರಣುಹೋಗಲು ಆತ ಮೋಹಿನಿಯ ರೂಪಧರಿಸಿ ಭಸ್ಮಾಸುರನನ್ನು ಮೋಹಗೊಳಿಸಿ ನೃತ್ಯಕ್ಕೆ ಆಹ್ವಾನಿಸುತ್ತಾನೆ. ನೃತ್ಯಮಾಡುತ್ತ ಮೋಹಿನಿಯು ತನ್ನ ಕೈಗಳನ್ನು ತಲೆಯಮೇಲೆ ಇಟ್ಟುಕೊಳ್ಳುತ್ತಾಳೆ. ಮೋಹಿನಿಯ ನಾಟ್ಯವನ್ನು ಅನುಕರಿಸುತ್ತಿರುವ ಭಸ್ಮಾಸುರನು ಶಿವನಿಂದ ತಾನು ಪಡೆದ ವರದ ವಿಷಯವನ್ನು ಒಂದು ಕ್ಷಣ ಮರೆತು ತನ್ನ ಕೈಗಳನ್ನು ತನ್ನ ತಲೆಯಮೇಲೆ ಇಟ್ಟು ಕೊಳ್ಳುತ್ತಾನೆ. ಅದರಿಂದಾಗಿ ಭಸ್ಮಾಸುರ ತಾನೇ ಸುಟ್ಟು ಹೋಗುತ್ತಾನೆ. ಈ ಚಿತ್ರದಲ್ಲಿ ಮೋಹಿನಿಯು ತಲೆಯಮೇಲೆ ಕೈ ಇಟ್ಟುಕೊಂಡು ನರ್ತಿಸುತ್ತಿದ್ದು. ಆಕೆಯನ್ನು ಭಸ್ಮಾಸುರನು ಅನುಕರಿಸುತ್ತಿದ್ದಾನೆ. ಹಿನ್ನೆಲೆಯಲ್ಲಿ ಗಿಡವೊಂದು ಹೂ ಲತೆಗಳಿಂದ ತುಂಬಿದ್ದು ಶೃಂಗಾರ ಪೂರ್ಣಸನ್ನಿವೇಶಕ್ಕೆ ಸಹಾಯಕವಾಗಿದೆ.

೧೨. ಕಾಳಿಂಗ ಮರ್ದನ ಕೃಷ್ಣ : ದೇವಾಲಯದ ಎಡಗೋಡೆಯಲ್ಲಿ ಕಾಳಿಂಗಮರ್ದನ ಕೃಷ್ಣನ ಚಿತ್ರವು ರಚಿಸಲ್ಪಟ್ಟಿದೆ. ಬಲಗೈಯಿಂದ ಕಾಳಿಂಗ ಸರ್ಪದ ಬಾಲವನ್ನು ಹಿಡಿದುಕೊಂಡು ಅದರ ಹೆಡೆಯ ಮೇಲೆ ಎಡಗಾಲನ್ನು ಮೆಟ್ಟಿ ಕೃಷ್ಣನು ನರ್ತಿಸುತ್ತಿದ್ದಾನೆ. ಚಿತ್ರದ ಸುತ್ತಲೂ ಅಲಂಕಾರಿಕ ಹೂಗಳ ನಕ್ಷೆಗಳಿವೆ. ಕಾಳಿಂಗ ಮರ್ದನ ಕೃಷ್ಣನ ಚಿತ್ರಗಳು, ಬಹುವರ್ಣ ಭಿತ್ತಿಚಿತ್ರಗಳಲ್ಲೂ ಅನೇಕ ಕಡೆ ಕಂಡು ಬರುತ್ತದೆ. ಅಮ್ಮಿನಭಾವಿಯ ಹಿರೇಮಠ, ಬಿ. ಕೆ. ಹಳ್ಳಿಯ ರಾಮದೇವಾಲಯ, ಗುಳೇದಗುಡ್ಡದ ಹೊಸಮನಿ ಗೌಡರ ಮನೆ, ನಿಪ್ಪಾಣಿ ರಾಜವಾಡೆಗಳಲ್ಲಿ ಕಾಳಿಂಗಮರ್ದನ ಕೃಷ್ಣನ ಚಿತ್ರ ರಚನೆಯಾಗಿದೆ. ಕಾವಿಚಿತ್ರಗಳಲ್ಲೇ ಇದೇ ವಿನ್ಯಾಸದಲ್ಲಿರುವ ಚಿತ್ರ ಹೊನ್ನಾವರದಲ್ಲೇ ಇರುವ ಮಾರುತಿ ದೇವಾಲಯಲ್ಲೂ ರಚಿಸಿದೆ.

೧೩. ಭೃಂಗಿಯ ಚಿತ್ರ : ದೇವಾಲಯದ ಎಡಗೋಡೆಯಲ್ಲಿರುವ ಒಂದು ಚಿತ್ರದಲ್ಲಿ ಪೂಜಾರಿಯೊಬ್ಬನು ಪೂಜೆಯಲ್ಲಿ ತೊಡಗಿದ್ದಾನೆ. ಆತನ ಹಿಂದುಗಡೆ ಮೂರುಕಾಲುಗಳನ್ನು ಹೊಂದಿದ ಭೃಂಗಿಯು ಚಿಟಿಕೆತಾಳಗಳನ್ನು ಬಾರಿಸುತ್ತ ಕುಣಿಯುತ್ತಿದ್ದಾನೆ. ಭೃಂಗಿಯು ಹೂವಿನ ನಕ್ಷೆಯುಳ್ಳ ಪಂಚೆಯನ್ನು ಉಟ್ಟುಕೊಂಡಿದ್ದು, ನಡುವಿಗೆ ವಸ್ತ್ರವನ್ನು ಕಟ್ಟಿಕೊಂಡಿರುವನು. ಇನ್ನೊಂದು ವಸ್ತ್ರವನ್ನು ಹೆಗಲ ಮೇಲೆ ಹಾಕಿಕೊಂಡು ಮೈ ಮರೆತು ಕುಣಿಯುತ್ತಿದ್ದಾನೆ. ಈತನ ಮೂರು ಕಾಲುಗಳು ಆತನ ಕುಣಿತದ ವಿವಿಧ ಭಂಗಿಗಳನ್ನು ತೋರ್ಪಡಿಸುತ್ತಿವೆ. ಭೃಂಗಿಯು ಮುಂದೆ ಪೂಜೆಯಲ್ಲಿ ನಿರತನಾದ ಪೂಜಾರಿಯು ಎಡಗೈಯಲ್ಲಿ ಗಂಟೆಬಾರಿಸುತ್ತ ಬಲಗೈಯಿಂದ

ಧೂಪಾರತಿ ಬೆಳಗುತ್ತಿದ್ದಾನೆ. ಈತನು ಕಚ್ಚೆಹಾಕಿ ಪಂಚೆ ಉಟ್ಟುಕೊಂಡಿದ್ದು ಹಣೆಯ ಮೇಲೆ ನಾಮಧರಿಸಿದ್ದಾನೆ. ಕುಣಿಯುತ್ತಿರುವ ಭೃಂಗಿಯು ಸಹಿತ ಹಣೆಯಲ್ಲಿ ಮರಾಠಾ ಪೇಶ್ವೆಗಳಂತೆ ಮೂರು ನಾಮಗಳನ್ನು ಧರಿಸಿದ್ದು, ಕೊರಳಲ್ಲಿ ಹೂಮಾಲೆ ಇದೆ. ತಲೆಗೂದಲನ್ನು ಎತ್ತಿಕಟ್ಟಿದ್ದು ಈತನ ರೂಪ ಫಂಡಾರಾಪುರದ ಪಾಂಡುರಂಗನ ಸಂತರ ನೆನಪುಕೊಡುತ್ತವೆ. ಇಲ್ಲಿ ಪೂಜಾರಿಯ ಮುಂದುಗಡೆ ಯಜ್ಞಕುಂಡವಿದ್ದು ಅದರ ಸಮೀಪ ಒಬ್ಬ ಮುನಿ 'ಯೋಗಪಟ್ಟ'ದಲ್ಲಿ ಕುಳಿತಿದ್ದಾನೆ. ಆತನ ಕಾಲುಗಳನ್ನು ಪಾಶದಿಂದ ಬಂಧಿಸಲಾಗಿದೆ. ಇಂತಹ ಮುನಿಗಳ ಯೋಗಪಟ್ಟದ ಚಿತ್ರಗಳು ಮಹಾಲಿಂಗಪುರದ ಮಹಾಲಿಂಗೇಶ್ವರಮಠ, ಬುಜೂರುಕಂಚನ ಹಳ್ಳಿಯ ರಾಮದೇವಾಲಯಗಳಲ್ಲಿಯೂ ಕಂಡುಬರುತ್ತವೆ. ಭೃಂಗಿಯ ಚಿತ್ರಪಟ್ಟಿಕೆಯ ಮೇಲ್ಭಾಗದಲ್ಲಿ ಅಲಂಕಾರಿಕ ವಿನ್ಯಾಸದಲ್ಲಿ ಬಾತುಕೋಳಿಯನ್ನು ಚಿತ್ರಿಸಲಾಗಿದೆ. ಕೆಳಭಾಗದಲ್ಲಿ ಹೆಣ್ಣ-ಗಂಡಿನ ಜೋಡಿಯೊಂದು ಸರಸದಲ್ಲಿ ತೊಡಗಿದೆ. ಪೂಜಾ ಚಿತ್ರವಾದ ಈ ಪಟ್ಟಿಕೆಯಲ್ಲಿ ಪತಿಪತ್ನಿಯರ ಸರಸದ ಚಿತ್ರ ಚಿತ್ರಿಸಿದ್ದು ಪ್ರಾಪಂಚಿಕದಿಂದ ಪಾರಮಾರ್ಥಿಕ ಸಾಧಿಸುವ ಸಾಂಕೇತಿಕ ಅರ್ಥವನ್ನು ಈ ಚಿತ್ರದಲ್ಲಿ ಗುರುತಿಸಬಹುದು.

೧೪. ಮತ್ಸ್ಯರೂಪದ ಕನ್ಯೆಯರು : ಎಡಭಾಗದ ಗೋಡೆಯಲ್ಲಿ ಕಿಟಕಿಯ ಬಲಗಡೆಗೆ ಇಬ್ಬರು ಮತ್ಸ್ಯ ಕನ್ಯೆಯರನ್ನು ಚಿತ್ರಿಸಲಾಗಿದೆ. ಈ ಕನ್ಯೆಯರ ಸೊಂಟದವರೆಗಿನ ಭಾಗ ಮನುಷ್ಯರದಾಗಿದ್ದು ಸೊಂಟದ ಕೆಳಭಾಗ ಮೀನಿನ (ಮತ್ಸ್ಯ) ರೂಪದ್ದಾಗಿದೆ. ಈ ಮತ್ಸ್ಯ ಕನ್ಯೆಯರು ಕೈ ಮುಗಿದು ನಮಿಸುತ್ತಿದ್ದಾರೆ. ಇವರ ಮೇಲ್ಭಾಗದಲ್ಲಿ ಕೆಳಭಾಗದಲ್ಲಿ ಹೂ ಬಳ್ಳಿಯ ನಕ್ಷೆಗಳಿವೆ.

೧೫. ಪಕ್ಷಿರೂಪದ ಕನ್ಯೆಯರು : ಬಲಭಾಗದ ಗೋಡೆಯಲ್ಲಿ ಕಿಟಕಿಯ ಅಕ್ಕಪಕ್ಕ ಇಬ್ಬರು ಪಕ್ಷಿರೂಪದ ಕನ್ಯೆಯರ ಚಿತ್ರಗಳಿವೆ. ಕಿರೀಟ ಧರಿಸಿದ ಈ ಕನ್ಯೆಯರ ರೂಪ ಸೊಂಟದವರೆಗೆ ಮಾನವಾಕೃತಿಯಾಗಿದ್ದು ಸೊಂಟದ ಕೆಳಗಿನ ಬಾಗ ನವಿಲಿನ ರೂಪವಾಗಿದೆ. ಕಾಲುಗಳು ಸಹಿತ ನವಿಲಿನದಾಗಿವೆ. ಇಬ್ಬರೂ ಕನ್ಯೆಯರು ಕೈಯಲ್ಲಿ ವೀಣೆ ಹಿಡಿದುಕೊಂಡಿದ್ದಾರೆ.

*೨. ಗರ್ಭಗೃಹದ ಮೇಲಿನ ಶಿಖರದ ಚಿತ್ರಗಳು :* ಹೊರಗೋಡೆಯಲ್ಲಿ ಬಿಳಿಹಿನ್ನೆಲೆಯ ಮೇಲೆ ಕಾವಿ ಬಣ್ಣದ ಚಿತ್ರಗಳನ್ನು ರಚಿಸಿದ್ದರೆ, ಶಿಖರದ ಮೇಲಿನ ಈ ಚಿತ್ರಗಳು ಕಾವಿ ಬಣ್ಣದ ಹಿನ್ನೆಲೆಯ ಮೇಲೆ ಬಿಳಿ ರೇಖೆಗಳಿಂದ ರಚನೆಯಾಗಿವೆ. ಕಾವಿಬಣ್ಣದ ಹಿನ್ನೆಲೆಯ ಭಿತ್ತಿಯ ಮೇಲೆ ಬಿಳಿ ರೇಖೆಗಳಿಂದ ಚಿತ್ರರಚಿಸುವ ಕ್ರಮವು ಪುರಾತನವಾಗಿದ್ದು ಈ ಶೈಲಿಯ ಚಿತ್ರಗಳು ಬನವಾಸಿಯ ಮಧುಕೇಶ್ವರ ದೇವಾಲಯದಲ್ಲಿಯೂ ಇವೆ. ಕಾವಿ ಬಣ್ಣದ ಭಿತ್ತಿಯ ಮೇಲೆ ಬಿಳಿರೇಖೆಗಳಿಂದ ರಚಿಸಿದ ಚಿತ್ರಗಳು ಈ ದೇವಾಲಯದ ಶಿಖರದ ಭಾಗದಲ್ಲಿ ಮಾತ್ರ ಕಂಡಬರುತ್ತವೆ. ಚೌಕಾಕಾರದ ಶಿಖರದ ನಾಲ್ಕೂಬದಿಯ ಗೋಡೆಗಳಲ್ಲೂ ಚಿತ್ರಗಳಿವೆ. ದಿಕ್ಪಾಲಕರ ಚಿತ್ರಗಳು ಇಲ್ಲಿ ರಚನೆಯಾಗಿದ್ದು ಅವುಗಳನ್ನು ಒಂದೊಂದಾಗಿ ಈ ಕೆಳಗಿನಂತೆ ವಿವರಿಸಬಹುದು :

೧. ಆನೆಯ ಮೇಲೆ ಕುಳಿತ ದೇವತಾ ಪುರುಷ : ನಾಲ್ಕು ಕೈಗಳನ್ನು ಹೊಂದಿದ ಕಿರೀಟಧಾರಿ ದೇವತಾಪುರುಷನೊಬ್ಬ ಆನೆಯಮೇಲೆ ಕುಳಿತು ಸಾಗುತ್ತಿದ್ದಾನೆ. ಆತನ ನಾಲ್ಕು ಕೈಗಳಲ್ಲಿ ಒಂದು ಕೈಯಲ್ಲಿ ಶಂಖ, ಇನ್ನೊಂದರಲ್ಲಿ ಗಧೆ,

ಮತ್ತೊಂದರಲ್ಲಿ ಚಕ್ರ ಹಿಡಿದಿದ್ದರೆ ಇನ್ನೊಂದು ಕೈ ಆಶೀರ್ವಾದ ಭಂಗಿಯಲ್ಲಿದೆ. ಆನೆಯು ಸೊಂಡಿಯಲ್ಲಿ ಹೂ ಮಾಲೆ ಹಿಡಿದುಕೊಂಡಿದೆ. ಆನೆಗಿಂತ ವ್ಯಕ್ತಿಯ ಪ್ರಮಾಣವೇ ದೊಡ್ಡದಾಗಿದ್ದು ಆನೆಯು ಆಟಿಕೆಯ ಗೊಂಬೆಯಂತೆ ತೋರುತ್ತದೆ. ಚಿತ್ರವು ಒಂದು ಅಲಂಕಾರಿಕ ಮಂಟಪದಲ್ಲಿ ರಚಿಸಿದ್ದು ಕೆಳಭಾಗದಲ್ಲಿ ಪೀಠವನ್ನು ರಚಿಸಿದೆ. ಮಂಟಪದ ಮೇಲು ಭಾಗದಲ್ಲಿ ಗೋಪುರದ ವಿನ್ಯಾಸವಿದ್ದು. ಸುಳುವಿನ ನಕ್ಷೆ ಹೊಂದಿದೆ.

೨. ಟಗರಿನ ಮೇಲೆ ಕುಳಿತ ದೇವತಾಪುರುಷ : ಮತ್ತೊಂದು ಚಿತ್ರದಲ್ಲಿ ಎರಡು ಮುಖ ಹೊಂದಿದ ದೇವತಾಪುರುಷನು ಟಗರಿನ ಮೇಲೆ ಕುಳಿತುಕೊಂಡಿದ್ದು ಈತನು ಆರು ಕೈಗಳನ್ನು ಹೊಂದಿದ್ದಾನೆ. ಕೈಗಳಲ್ಲಿ ಶಂಖ. ಚಕ್ರ. ಗಧೆಗಳಲ್ಲದೇ ಮೂರು ಎಲೆಗಳನ್ನು ಹೊಂದಿದ ಗಿಡದ ಟೊಂಗೆಯನ್ನು ಸಹಿತ ಹಿಡಿದಿದ್ದಾನೆ. ಈತನ ಎರಡು ಮುಖಗಳು ಒಂದಕ್ಕೊಂದು ಅಂಟಿಕೊಂಡು ಬದಿಯ ನೋಟದಲ್ಲಿ ರಚಿಸಿವೆ. ಎರಡೂ ತಲೆಗಳಿಗೂ ಒಂದೇ ಕಿರೀಟ ರಚಿಸಲಾಗಿದೆ. ಟಗರು ದಷ್ಟಪುಷ್ಟವಾಗಿದ್ದು ಗೂಳಿಯನ್ನು ಹೋಲುತ್ತದೆ. ಚಿತ್ರದ ಹಿಂದಿರುವ ಮಂಟಪ ಮೂರು ಕಾಮನುಗಳ ಬಾಗುವಿಕೆಯಿಂದ ರಚನೆಯಾಗಿದ್ದು ಮೇಲ್ಭಾಗದಲ್ಲಿ ಕಳಶಹೊಂದಿದೆ. ಅದರ ಕಂಬಗಳಲ್ಲಿ ಮತ್ತು ಮೇಲ್ಭಾಗದಲ್ಲಿ ಸುಂದರವಾದ ಹೂ ಬಳ್ಳಿಯ ನಕ್ಷೆರಚಿಸಿದೆ.

೩. ಕುದುರೆಯ ಮೇಲೆ ಕುಳಿತ ದೇವತಾ ಪುರುಷ : ಇನ್ನೊಂದು ಚಿತ್ರದಲ್ಲಿ ದೇವತಾಪುರುಷನು ಕುದುರೆಯ ಮೇಲೆ ಕುಳಿತುಕೊಂಡಿದ್ದಾನೆ. ನಾಲ್ಕು ಕೈಗಳನ್ನು ಹೊಂದಿದ್ದು. ಶಂಖ ಚಕ್ರಗಳನ್ನು ಹಿಡಿದುಕೊಂಡಿದ್ದಾನೆ ಒಂದು ಕೈಯಿಂದ ಕುದುರೆಯ ಲಗಾಮು ಎಳೆಯುತ್ತಿದ್ದಾನೆ. ದೇಹಕ್ಕೆ ಯುದ್ಧಕವಚ ಧರಿಸಿದಂತೆ ಕಾಣುತ್ತಿದ್ದು. ದಪ್ಪನಾದ ಮೀಸೆಯು ಆತನ ವ್ಯಕ್ತಿತ್ವಕ್ಕೆ ಭೂಷಣವಾಗಿದೆ. ಈ ದೇವತಾಪುರುಷನ ಪ್ರಮಾಣ ಮತ್ತು ಆತ ಕುಳಿತ ಕುದುರೆ ಪ್ರಮಾಣಗಳು ಹೋಲಿಕೆಯಲ್ಲಿ ವ್ಯತ್ಯಾಸವಿದ್ದರೂ ವಯ್ಯಕ್ತಿಕ ಅಳತೆಯಲ್ಲಿ ಪ್ರಮಾಣಬದ್ಧವಾದ ಆಕೃತಿಗಳಾಗಿವೆ. ಕುದುರೆಯ ಮುಂದುಗಡೆ ನವಿಲೊಂದು ತನ್ನ ಕೊಕ್ಕಿನಲ್ಲಿ ಹೂ ಮಾಲೆಯನ್ನು ಹಿಡಿದುಕೊಂಡು ಎದುರಾಗಿ ಬರುತ್ತಿದೆ. ಚಿತ್ರದ ಹಿನ್ನೆಲೆಯಲ್ಲಿ ಇಲ್ಲಿಯೂ ಮಂಟಪದ ವಿನ್ಯಾಸವಿದ್ದು ಇದು ಅವುಗಳಿಗಿಂತ ಭಿನ್ನವಾಗಿದೆ. ಇಲ್ಲಿ ಮಂಟಪದ ಮೇಲ್ಭಾಗದಲ್ಲಿ ಕಳಶದ ಹಾಗಿರುವ ಎತ್ತರವಾದ ಭಾಗವಿರದೇ ಹೂ ಬಳ್ಳಿನಕ್ಷೆಯ ಅಲಂಕಾರಿಕ ವಿನ್ಯಾಸವಿದೆ ಪ್ರಮಾಣ ಮತ್ತು ರೇಖಾ ವಿನ್ಯಾಸದಿಂದ ಈ ಚಿತ್ರ ಉತ್ತಮ ಮಟ್ಟದಲ್ಲಿದೆ. ರೇಖೆಗಳು ಜೀವಂತಿಕೆಯಿಂದ ಕಂಗೊಳಿಸುತ್ತವೆ.

೪. ಮನುಷ್ಯನ ಮೇಲೆ ಕುಳಿತ ದೇತಾಪುರುಷ : ಮಂಟಪದಲ್ಲಿರುವ ಇನ್ನೊಂದು ಚಿತ್ರದಲ್ಲಿ ದೇವತಾಪುರುಷನು ವ್ಯಕ್ತಿಯೊಬ್ಬನ ಬೆನ್ನಮೇಲೆ ಕುಳಿತಿದ್ದಾನೆ. ಇಲ್ಲಿ ವ್ಯಕ್ತಿಯೇ ದೇವತಾಪುರುಷನ ವಾಹನವಾಗಿದ್ದಾನೆ. ದೇವತಾಪುರುಷನು ನಾಲ್ಕುಕೈಗಳನ್ನು ಹೊಂದಿದ್ದು. ಶಂಖ. ಚಕ್ರ. ಗಧೆಗಳನ್ನು ಹಿಡಿದಿದ್ದಾನೆ. ತಲೆಯಲ್ಲಿ ಸುಂದರವಾದ ಕಿರೀಟ. ಕೊರಳಲ್ಲಿ ಆಭರಣಗಳಿವೆ. ದೇವತಾಪುರುಷನನ್ನು ಹೊತ್ತುಕೊಂಡ ವ್ಯಕ್ತಿಯು ತಲೆಗೆ ಕಿರೀಟ ಧರಿಸಿಲ್ಲ. ದೇವಪುರುಷನ ಪ್ರಮಾಣವೇ ದೊಡ್ಡದಿದ್ದು ಆತನನ್ನು ಹೊತ್ತುಕೊಂಡ ವ್ಯಕ್ತಿಯ ಪ್ರಮಾಣ ಚಿಕ್ಕದಿದೆ. ಈ ಚಿತ್ರದ ಹಿನ್ನೆಲೆಯ ಮಂಟಪವು ಮೂರುಕಾಮನುಗಳ ಬಾಗುವಿಕೆಯಿಂದ ಸುಂದರವಾಗಿ ಕಂಗೊಳಿಸುತ್ತಿದ್ದು ಕಮಾನಿನ ಅಂಚಿಗೆ ನಕ್ಷೆಗಳನ್ನು ರಚಿಸಿದೆ. ಮಂಟಪದಲ್ಲಿ ಕೆಳಭಾಗದಲ್ಲಿ ಕಂಬದಲ್ಲಿ ಮೇಲಿನ ಕಳಶದಲ್ಲಿ ಸುಳುವಿನ ನಕ್ಷಾ ಚಿತ್ರಗಳಿದ್ದು. ಮಂಟಪದ ಒಳಭಾಗದಲ್ಲಿ ಐದು ವೃತ್ತಾಕಾರದ ಸರಳ ನಕ್ಷೆಗಳಿದ್ದರೂ ಪ್ರತಿಯೊಂದು ಬೇರೆ ಬೇರೆ

ವಿನ್ಯಾಸದಲ್ಲಿ ರಚನೆಯಾಗಿವೆ. ಶಕ್ತಿಯುತವಾದ ರೇಖೆಗಳಿಂದ ಕೂಡಿದ ಈ ಚಿತ್ರವು ಉತ್ತಮ ಸಂಯೋಜನೆಯಿಂದ ಅಳವಡಿಸಲ್ಪಟ್ಟಿದೆ.

೫. ನಂದಿಯ ಮೇಲೆ ಕುಳಿತ ದೇವತಾಪುರುಷ : ಮತ್ತೊಂದು ಚಿತ್ರದಲ್ಲಿ ದೇವತಾಪುರುಷನು ನಂದಿಯ ಮೇಲೆ ಕುಳಿತುಕೊಂಡಿದ್ದಾನೆ. ನಾಲ್ಕು ಕೈಗಳನ್ನು ಹೊಂದಿದ್ದು ಶಂಖ, ಚಕ್ರ, ಗಧೆಗಳನ್ನು ಹಿಡಿದುಕೊಂಡಿದ್ದಾನೆ. ಕೊರಳಲ್ಲಿ ಮಿತವಾದ ಆಭರಣಗಳಿದ್ದು, ಭುಜ ಮತ್ತು ನಡುವನ್ನು ಬಳಸಿದಂತೆ ಶಾಲನ್ನು ಹೊದ್ದುಕೊಂಡಿದ್ದಾನೆ. ಈತ ಕುಳಿತ ನಂದಿಯು ಆಕಾರದಲ್ಲಿ ಕುಳ್ಳಾಗಿದ್ದು ಮುಖವು ಮನುಷ್ಯ ಮುಖದಂತಿದೆ. ಚಿತ್ರದ ಕೆಳಭಾಗದಲ್ಲಿ ಎಡಬಲಗಳಲ್ಲಿ ಒಂದೊಂದು ಅಲಂಕಾರಿಕ ಗಿಡದ ವಿನ್ಯಾಸಗಳಿದ್ದರೆ, ಮೇಲ್ಭಾಗದಲ್ಲಿ ಎರಡು ವೃತ್ತಾಕಾರದ ನಕ್ಷೆಗಳಿವೆ. ಇದುಕೂಡಾ ಮೂರು ಕಮಾನುಗಳಿಂದಾದ ಮಂಟಪದ ವಿನ್ಯಾಸದಲ್ಲಿ ರಚನೆಯಾಗಿದೆ. ಮೇಲಿನ ಕಳಶಭಾಗದಲ್ಲಿ ಎಲೆಬಳ್ಳಿಯ ನಕ್ಷೆಗಳಿವೆ. ಇನ್ನೊಂದು ಚಿತ್ರದಲ್ಲಿಯೂ ದೇವತಾಪುರುಷನು ನಂದಿಯ ಮೇಲೆ ಕುಳಿತಿದ್ದಾನೆ. ಶಂಖ, ಚಕ್ರ, ಗಧೆ ಹಿಡಿದುಕೊಂಡಿದ್ದಾನೆ. ಈ ಚಿತ್ರವೂ ಮಂಟಪದ ವಿನ್ಯಾಸದ ಒಳಗೇ ರಚನೆಯಾಗಿದ್ದು ಈಗ ವಿವರಿಸಿದ ಚಿತ್ರಗಳನ್ನೇ ಹೋಲುತ್ತದೆ. ಇಲ್ಲಿ ಮಂಟಪವು ಬಿಲ್ಲಿನಹಾಗೆ ಬಾಗಿದ ಒಂದೇ ಕಮಾನಿನಿಂದ ಕೂಡಿದೆ. ಸುಳುವುಗಳ ನಕ್ಷಾಚಿತ್ರ, ಹಿನ್ನಲೆಯಲ್ಲಿ ವೃತ್ತಾಕಾರದ ಎರಡು ನಕ್ಷೆಗಳು ಇಲ್ಲಿ ಕಂಡುಬರುತ್ತವೆ. ಶಿಖರದ ಮೇಲೆ ಒಟ್ಟು ಎಂಟು ಚಿತ್ರಗಳಿದ್ದು ಅವುಗಳಲ್ಲಿ ಎರಡು ಚಿತ್ರಗಳ ರಚನೆ ಪೂರ್ಣಗೊಂಡಿಲ್ಲ. ಇವೆಲ್ಲವೂ ಮಂಟಪದ ವಿನ್ಯಾಸದಲ್ಲಿಯೇ ರಚನೆಯಾಗಿದ್ದು ಕೆಂಪುಹಿನ್ನೆಲೆಯಲ್ಲಿ ಬಿಳಿರೇಖೆಯಿಂದ ರಚನೆಯಾಗಿವೆ.

**II) ಗೋಪಾಲಕೃಷ್ಣ ದೇವಾಲಯ ಹೊನ್ನಾವರ :** ಹೊನ್ನಾವರದ ಮಾರುತಿದೇವಾಲಯದ ಎದುರಿಗೆ ಇರುವ ಈ ದೇವಾಲಯವನ್ನು ಕ್ರಿ. ಶ. ೧೯ ನೇ ಶತಮಾನದಲ್ಲಿ ಕಟ್ಟಲಾಗಿದ್ದು, ಕಲ್ಲಿನ ಮುಖಮಂಟಪ ಹೊಂದಿದೆ. ಈ ದೇವಾಲಯದ ನಿರ್ಮಾಣ ಸಮಯದಲ್ಲಿ ಗ್ರಾನೈಟ್ ಶಿಲೆಯ ಕಂಬಗಳನ್ನು ಬಳಸಲಾಗಿದ್ದು ಅವುಗಳನ್ನು ಗೇರುಸೊಪ್ಪಾದಿಂದ ತರಲಾಗಿದೆ. ಈ ದೇವಾಲಯದಲ್ಲಿ ಮೊದಲು ವೈವಿದ್ಯ ಕಾವಿಚಿತ್ರಗಳ ಭಂಡಾರವೇ ಇದ್ದು, ೧೯೪೭ ರಲ್ಲಿ ದೇವಾಲಯ ನವೀಕರಣ ಸಂದರ್ಭದಲ್ಲಿ ಕೆಲವು ಚಿತ್ರಗಳು ನಾಶವಾಗಿವೆ. ಆದರೂ ಇನ್ನೂ ಕೆಲವು ಚಿತ್ರಗಳು ಉಳಿದುಕೊಂಡಿದ್ದವೆಂದು ಸ್ಥಳೀಯರು ಹೇಳುತ್ತಿದ್ದು ಈಗ ಮತ್ತೆ ಇಡೀ ದೇವಾಲಯವನ್ನು ಪೂರ್ತಿಯಾಗಿ ಕೆಡವಿ ಪುನಃ ರೂಪಿಸುತ್ತಿದ್ದು ಈ ಸಂದರ್ಭದಲ್ಲಿಯೇ ಅಲ್ಲಿಗೆ ಭೇಟ್ಟಿಕೊಡಲಾಯಿತು. ಹಿನ್ನಲೆಯಲ್ಲಿ ಉಳಿದುಕೊಂಡ ಗೋಡೆಯ ಮೇಲೆ ಕೆಲವು ಕಾವಿ ಬಣ್ಣದ ನಕ್ಷೆಗಳನ್ನು ಮಾತ್ರ ನೋಡಲು ಸಾಧ್ಯವಾಯಿತು. ಈ ದೇವಾಲಯದಲ್ಲಿಯೂ ವೈವಿಧ್ಯಮಯ ದೃಶ್ಯಗಳು, ರಾಮಾಯಣ, ಮಹಾಭಾರತ ಘಟನೆಗಳು, ದಶಾವತಾರ ಚಿತ್ರಗಳು ಮುಂತಾದ ಅನೇಕ ಚಿತ್ರಗಳು ಇದ್ದುದಾಗಿ ಸ್ಥಳೀಯರು ಹೇಳುತ್ತಾರೆ. ಆದರೆ ದೇವಾಲಯ ನವೀಕರಣಗೊಳಿಸುವ ನಿಟ್ಟಿನಲ್ಲಿ ದೇವಾಲಯವನ್ನು ಇಡೀಯಾಗಿ ಕೆಡವಿ ಪುನಃ ರೂಪಿಸುವ ಸಂದರ್ಭದಲ್ಲಿ ಅಮೂಲ್ಯ ಚಿತ್ರಸಂಪತ್ತನ್ನು ಕಳೆದುಕೊಂಡಾಗಿದೆ.

***III. ವೆಂಕಟರಮಣ ದೇವಾಲಯ, ಹೊನ್ನಾವರ :*** ಹೊನ್ನಾವರದ ರಥಬೀದಿಯಲ್ಲಿರುವ ವೆಂಟರಮಣ ದೇವಾಲಯುವನ್ನು ಕ್ರಿ. ಶ. ೧೮೮೩ ರಲ್ಲಿ ಕಟ್ಟಲಾಗಿದ್ದು ಈಗ ಮತ್ತೆ ಇಡೀ ದೇವಾಲಯುವನ್ನು ಸಂಪೂರ್ಣವಾಗಿ

ನವೀಕರಿಸಿ ಕಟ್ಟಲಾಗಿದೆ. ಹಾಗಾಗಿ ಮೊದಲಿನ ವೈವಿಧ್ಯಕಾವಿ ಚಿತ್ರಗಳು ಮರೆಯಾಗಿ ಕೇವಲ ನಕ್ಷಾಚಿತ್ರಗಳು ಮಾತ್ರ ಉಳಿದುಕೊಂಡಿವೆ. ಈಗ ಉಳಿದುಕೊಂಡಿರುವ ಚಿತ್ರಗಳನ್ನು ಈ ರೀತಿ ವಿಂಗಡಿಸಬಹುದು.

೧. ಹೊರಗೋಡೆಯ ಚಿತ್ರಗಳು

೨. ಒಳಗೋಡೆಯ ಚಿತ್ರಗಳು

೧. **ಹೊರಗೋಡೆಯ ಚಿತ್ರಗಳು :** ದೇವಾಲಯದ ನವೀಕರಣದಿಂದಾಗಿ ಹೊರಗೋಡೆಯಲ್ಲಿನ ಚಿತ್ರಗಳು ನಾಶವಾಗಿದ್ದು. ಗೋಡೆಯ ಅಂಚು ಮತ್ತು ಗೋಡೆಯಲ್ಲಿ ಇರುವ ಕಂಬಗಳ ಮೇಲೆ ಮಾತ್ರ ನಕ್ಷಾಚಿತ್ರಗಳು ಕಂಡುಬರುತ್ತವೆ. ಈ ನಕ್ಷೆಯಲ್ಲಿ ಹೆಚ್ಚಿನ ವೈವಿಧ್ಯತೆ ಇರದೇ ಹೂ ಬಳ್ಳಿಯ ಪುನರಾವರ್ತಿತ ರೂಪವಿದೆ. ಇದೇ ಒಂದೇ ತೆರನಾದ ನಕ್ಷೆಯನ್ನು ಇಡೀ ದೇವಾಲಯದ ಗೋಡೆಯ ಸುತ್ತಲೂ ಒಳಗೆ ಹೊರಗೆ ರಚನೆಮಾಡಲಾಗಿದೆ.

೨. **ಒಳಗೋಡೆಯ ಚಿತ್ರಗಳು :** ದೇವಾಲಯದ ಒಳಭಾಗದ ಗೋಡೆಯಲ್ಲಿಯಾವುದೇ ಚಿತ್ರಗಳು ಉಳಿದುಕೊಂಡಿಲ್ಲ. ಆದರೆ ಗರ್ಭಗೃಹದ ಬಾಗಿಲಿನ ಎಡಬಲಗಳಲ್ಲಿ ದ್ವಾರಪಾಲಕರಾದ ಜಯವಿಜಯರ ಚಿತ್ರಗಳು ಇನ್ನೂ ಇವೆ. ಆದರೆ ಈ ಚಿತ್ರಗಳು ಕಾವಿ ಬಣ್ಣದಲ್ಲಿರದೇ ಅವುಗಳ ಮೇಲೆ ಆಧುನಿಕ ವಾರ್ನಿಸ್ ಬಣ್ಣದ ಲೇಪನ ಮಾಡಲಾಗಿದೆ. ಜಯವಿಜಯರು ಗಧೆಯನ್ನು ಕೆಳಮುಖವಾಗಿ ನೆಲಕ್ಕೆ ಇಟ್ಟುಕೊಂಡು ನಿಂತಿದ್ದಾರೆ. ಕೈಗಳಲ್ಲಿ ಶಂಖ. ಚಕ್ರಗಳನ್ನು ಧರಿಸಿ. ಕಾಲುಗಳನ್ನು ಒಂದಕ್ಕೊಂದು ತೊಡಕಿಸಿಕೊಂಡು ಕತ್ತರಿಯ ಹಾಗೆ ಮಾಡಿಕೊಂಡಿರುವ ವಿನ್ಯಾಸದಲ್ಲಿ ಜಯವಿಜಯರು ನಿಂತಿರುವ ಇವರ ರೂಪಗಳು ಎಲ್ಲಕಡೆಗೂ ಇದೇ ತೆರನಾಗಿವೆ.

***IV. ಗೋಪಿನಾಥ ವೆಂಕಟರಮಣ ದೇವಾಲಯ, ಹಳದಿಪುರ :*** ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿನಲ್ಲಿರುವ ಹಳದೀಪುರವು ಹೊನ್ನಾವರದಿಂದ ಸುಮಾರು ೧೦ ಕಿ. ಮಿ. ಗಳ ಅಂತರದಲ್ಲಿದೆ. ಇಲ್ಲಿನ ಪ್ರಾಚೀನದೇವಾಲಯಗಳಲ್ಲಿ ಗೋಪಿನಾಥ ವೆಂಕಟರಮಣ ದೇವಾಲಯವೂ. ಒಂದಾಗಿದೆ. ಇದು ಕ್ರಿ. ಶ. ೧೬೮೦ ರ ಸುಮಾರಿನಲ್ಲಿ ಕಟ್ಟಿದ ದೇವಾಲಯವಾಗಿದ್ದು, ನಂತರದಲ್ಲಿ ಮತ್ತೆ ನವೀರಕರಣ ಗೊಳಿಸಲಾಗಿದೆ. ಹೀಗಾಗಿ ಇಲ್ಲಿದ್ದಂತಹ ಹೆಚ್ಚಿನ ಕಾವಿಚಿತ್ರಗಳು ನಾಶವಾಗಿ ಈಗ ಈ ಚಿತ್ರಗಳು ಸಹಿತ ಮುಲರೂಪದಲ್ಲಿರದೇ, ಕಪ್ಪು ಮಿಶ್ರಿತವರ್ಣವನ್ನು ಇಡೀ ಚಿತ್ರಕ್ಕೆ ಬಳಿಯಲಾಗಿದ್ದು. ಕಾವಿಚಿತ್ರಗಳ ಆತ್ಮ ಎಂದು ಕರೆಯಬಹುದಾದ ರೇಖಾ ವಿನ್ಯಾಸವನ್ನೇ ಬಣ್ಣಲೇಪಿಸಿ ಮುಚ್ಚಲಾಗಿದೆ. ಕಪ್ಪು ಬಣ್ಣದ ಮೇಲೆ ಮತ್ತೆ ಪ್ರತ್ಯೇಕವಾದ ಬಿಳಿ ವರ್ಣದ ಹೊರರೇಖೆಗಳನ್ನು ಎಳೆದಿದ್ದರೂ. ಕಾವಿ ಭಿತ್ತಿಚಿತ್ರಗಳಂತೆ ಉಬ್ಬುಶಿಲ್ಪದ ಮಾದರಿಯಲ್ಲಿ ಈ ಚಿತ್ರಗಳು ಕಂಡುಬರದೇ ಬಹುವರ್ಣ ಭಿತ್ತಿಚಿತ್ರಗಳಂತೆ ಚಪ್ಪಟೆಯಾಗಿ ಕಂಡು ಬರುತ್ತವೆ. ಇದಕ್ಕೆ ಚಿತ್ರಗಳನ್ನು ತಿದ್ದಿದವರ ಅಲಕ್ಷತನ ಇಲ್ಲದೆ ಆ ಕಲೆಯ ವಿನ್ಯಾಸ. ಸ್ವರೂಪದಬಗ್ಗೆ ಮಾಹಿತಿ ಇಲ್ಲದ್ದರಿಂದ ಹೀಗಾಗಿದೆ. ಹೊರಗೋಡೆಯಲ್ಲಿ ಈಗ ಉಳಿದಿರುವ ಚಿತ್ರಗಳು ದಶಾವತಾರಕ್ಕೆ ಸಂಬಂಧಿಸಿದ್ದು ಒಂದೊಂದು ಅಂಕಣದಲ್ಲಿ ಒಂದೊಂದು ಅವತಾರಗಳನ್ನು ರಚನೆ ಮಾಡಲಾಗಿದೆ. ಮತ್ಸ್ಯಾವತಾರದಲ್ಲಿ ವಿಷ್ಣುವು ರಾಕ್ಷಸನ ಹಿಂದೆಲೆಯ ಜುಟ್ಟುಹಿಡಿದುಕೊಂಡು ನೇರವಾದ ಖಡ್ಗದಿಂದ ಚುಚ್ಚಿ ಸಂಹರಿಸುತ್ತಿದ್ದಾನೆ. ರಾಕ್ಷಸನು ದೊಡ್ಡದಾದ ಖಡ್ಗವನ್ನು ಹಿಡಿದುಕೊಂಡಿದ್ದು ವಿಷ್ಣುವಿನ ರೂಪಕ್ಕಿಂತ ಚಿಕ್ಕ ಪ್ರಮಾಣದಲ್ಲಿ ರಚಿತವಾಗಿದ್ದಾನೆ. ವಿಷ್ಣುವಿನ ಸೊಂಟದವರೆಗಿನ ಭಾಗವು ಮತ್ಸ್ಯರೂಪದಲ್ಲಿದ್ದು ಮೇಲ್ಭಾಗ ಮಾನವಾಕೃತಿಯಲ್ಲಿದೆ. ಕೂರ್ಮಾವತಾರದಲ್ಲಿ ವಿಷ್ಣುವು ರಾಕ್ಷಸನನ್ನು ಗಧೆಯಿಂದ ಸಂಹರಿಸುತ್ತಿದ್ದು, ರಾಕ್ಷಸನು ನೇರವಾದ ಖಡ್ಗ ಹಾಗೂ ಹೂಜಿಯ ವಿನ್ಯಾಸದಲ್ಲಿರುವ ಗುರಾಣಿಯನ್ನು ಹಿಡಿದಿದ್ದಾನೆ. ವಿಷ್ಣುವಿನ

ಬಲಗಾಲಿನ ಭಾಗದಲ್ಲಿ ಕೂರ್ಮವನ್ನು ಚಿತ್ರಿಸಲಾಗಿದೆ. ಎಡಗಾಲಿನಿಂದ ರಾಕ್ಷಸನನ್ನು ತುಳಿದು ಹಾಕಿದ್ದಾನೆ. ವರಾಹ ಅವತಾರದ ಚಿತ್ರದಲ್ಲಿ ವಿಷ್ಣುವು ರಾಕ್ಷಸನ ಜುಟ್ಟುಹಿಡಿದು ಗಧೆಯಿಂದ ಆತನನ್ನು ಸಂಹರಿಸುತ್ತಿದ್ದಾನೆ. ಇಲ್ಲಿನ ವರಾಹವು ಹಂದಿಯಂತೆ ಕಂಡುಬರದೇ ದೊಡ್ಡದಾಗಿ ರಚನೆಯಾಗಿದ್ದು ಕುದುರೆಯ ಹಾಗೆ ಕಂಡುಬರುತ್ತದೆ. ರಾಕ್ಷಸನು ದೊಡ್ಡದಾದ ಅರ್ಧ ಚಂದ್ರಕ್ಯಾತಿಯ ಖಡ್ಗಹಿಡಿದಿದ್ದಾನೆ.

ನರಸಿಂಹ ಅವತಾರದಲ್ಲಿ ಕಂಬವನ್ನು ಸೀಳಿಬಂದ ನರಸಿಂಹನು ಹಿರಣ್ಯ ಕಶಪನನ್ನು ತನ್ನ ತೊಡೆಯ ಮೇಲೆ ಹಾಕಿಕೊಂಡು ಸಂಹರಿಸುತ್ತಿದ್ದಾನೆ. ನರಸಿಂಹನ ಧೋತರಕ್ಕೆ ಚುಕ್ಕೆಗಳನ್ನು ಇಟ್ಟು ಅಲಂಕರಿಸಿದ್ದು ಆತನಗಡ್ಡದಲ್ಲಿಯೂ ಚುಕ್ಕೆಗಳನ್ನು ಇಟ್ಟು ಅದರ ಸ್ವರೂಪ ತರಲು ಪ್ರಯತ್ನಿಸಲಾಗಿದೆ. ಈ ಎರಡೂ ರಚನೆಗಳು ತೀರಾ ಪ್ರಾರಂಭಿಕ ಹಂತವನ್ನು ತೋರಿಸುತ್ತವೆ. ವಾಮನಾವತಾರ. ಪರಶುರಾಮ ಅವಾತಾರ. ರಾಮಾವತಾರ, ಕೃಷ್ಣಾವತಾರ ಬೌದ್ಧವತಾರ. ಕಲ್ಕಿ ಅವತಾರದ ಚಿತ್ರಗಳೂ ಇಲ್ಲಿ ರಚನೆಯಾಗಿದ್ದು ಎಲ್ಲವೂ ಒಂದೇ ಶೈಲಿಯಲ್ಲಿವೆ. ಎಲ್ಲ ಅವತಾರಗಳಲ್ಲೂ ವಿಷ್ಣುವು ಆಯಾ ಅವತಾರಗಳನ್ನು ತಾಳಿ ರಾಕ್ಷಸನ ಜುಟ್ಟಹಿಡಿದು ಕೊಲ್ಲುತ್ತಿದ್ದಾನೆ. ಬೌದ್ಧಾವತಾರದಲ್ಲಿ ವಿಷ್ಣುವು ಟೊಂಕದ ಮೇಲೆ ಕೈಯಿಟ್ಟುಕೊಂಡು ನಿಂತಿದ್ದಾನೆ. ಇಲ್ಲಿನ ದಶಾವತಾರದ ಚಿತ್ರಗಳು ಚೌಕವಾದ ಮಂಟಪಗಳಲ್ಲಿ ರಚನೆಯಾಗಿದ್ದು, ಮೇಲಿನ ಭಾಗದಲ್ಲಿ ಕಳಶದ ಹಾಗೆ ಇರುವ ವಿನ್ಯಾಸವನ್ನು ರೂಪಿಸಿ ಅದರಲ್ಲಿ ಚಿತ್ರದ ವಿಷಯ ಯಾವುದೆಂದು ಅಕ್ಷರದಲ್ಲಿ ಬರೆಯಲಾಗಿದೆ.

***V. ಬಾಳಗೊಡ ಸೀತಾರಾಮಚಂದ್ರ ದೇವಾಲಯ, ಬಿಳಗಿ :*** ಉತ್ತರ ಕನ್ನಡ ಜಿಲ್ಲೆಯ ಸಿದ್ಧಾಪುರ ತಾಲೂಕಿನಲ್ಲಿರುವ ಬಿಳಗಿಯು ಸಿದ್ಧಾಪುರದಿಂದ ಪಶ್ಚಿಮಕ್ಕೆ ಸುಮಾರು ೨೫ ಕಿ. ಮಿ. ಗಳ ಅಂತರದಲ್ಲಿದೆ. ಹಿಂದೆ ಶ್ವೇತಪುರವೆಂದು ಕರೆಯಲ್ಪಡುತ್ತಿದ್ದ ಬಿಳಗಿಯಲ್ಲಿ ಘಂಟಿವಂಶದ ರಾಜರು ಆಳಿದ್ದಾರೆ. ಇಲ್ಲಿನ ಮುಖ್ಯದೇವಾಲಯಗಳಲ್ಲಿ ಬಾಳಗೊಡ ಸೀತಾರಾಮಚಂದ್ರ ದೇವಾಲಯವೂ ಒಂದಾಗಿದ್ದು, ಈ ದೇವಾಲಯದಲ್ಲಿ ಕಾವಿ ಭಿತ್ತಿಚಿತ್ರಗಳು ರಚನೆಯಾಗಿವೆ. ಹಳೆಯದೇವಾಲಯವು ಊರಹೊರಗೆ ಇದ್ದು. ಅದನ್ನು ನಾಶಪಡಿಸಿ ಈಗಿರುವ ಸ್ಥಳದಲ್ಲಿ ಪೇಟೆಯ ಮಧ್ಯಭಾಗದಲ್ಲಿ ಈ ದೇವಾಲಯವನ್ನು ಕ್ರಿ. ಶ. ೧೯೦೨ ರಲ್ಲಿ ಶ್ರೀ ಮೂಡಲಗಿರಿ ನಾರಾಯಣ ಪೈ ಹಾಗೂ ವೇದಮೂರ್ತಿ ನಾರಾಯಣ ಭಟ್ ಇವರ ಮುಖಂಡತ್ವದಲ್ಲಿ ಕಟ್ಟಿಸಲಾಯಿತು. ಅದೇ ಸಂದರ್ಭದಲ್ಲಿ ಇಲ್ಲಿ ತಿಮ್ಮಣ್ಣ ಪೈ ಎಂಬುವವರ ನೇತೃತ್ವದ ಕಾವಿ ಚಿತ್ರ ರಚನಾ ತಂಡವು ಕಾವಿ ಚಿತ್ರಗಳನ್ನು ರಚನೆ ಮಾಡಿದೆ. ಎಂಬುದಾಗಿ ಹೇಳುತ್ತಾರೆ. ಈ ದೇವಾಲಯದಲ್ಲಿ ಹೊರಗೋಡೆಯಲ್ಲಿ ಮತ್ತು ಗರ್ಭಗೃಹದ ಶಿಖರದ ಮೇಲೆ ಸುತ್ತಲಿನ ಗೋಡೆಯಲ್ಲಿ ಚಿತ್ರಗಳಿದ್ದು ಎರಡೂ ಭಿನ್ನ ಶೈಲಿಯಲ್ಲಿ ರಚನೆಯಾಗಿವೆ. ಈ ದೇವಾಲಯದ ಚಿತ್ರಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆ ವಿಂಗಡಿಸಿಕೊಂಡು ವಿವರಿಸಬಹುದಾಗಿದೆ :

೧) ಹೊರಗೋಡೆಯ ಚಿತ್ರಗಳು

೨) ಗರ್ಭಗೃಹದ ಮೇಲಿನ ಶಿಖರದ ಚಿತ್ರಗಳು

**೧) ಹೊರಗೋಡೆಯ ಚಿತ್ರಗಳು :** ಈ ದೇವಾಲಯದ ಹೊರಗೋಡೆಯ ಚಿತ್ರಗಳು ಬಿಳಿ ಹಿನ್ನೆಲೆಯ ಮೇಲೆ ರಚನೆಯಾದ ಕಾವಿ ಚಿತ್ರಗಳಾಗಿವೆ. ಹೊರಗೋಡೆಯು ಉದ್ದಕ್ಕೂ ಮಂಟಪಗಳಂತೆ ಸ್ಥಳವಿನ್ಯಾಸಗೊಳಿಸಿಕೊಂಡು ಚಿತ್ರಿಸಿದ್ದಾರೆ. ಹೊರಗೋಡೆಯ ಚಿತ್ರಗಳನ್ನು ವಿಷಯಕ್ಕನುಸಾರವಾಗಿ ಮತ್ತೆ ಈ ಕೆಳಗಿನಂತೆ ವಿಂಗಡಿಸಬಹುದು :

I. ದಶಾವತಾರ ಚಿತ್ರಗಳು

II. ಸೇವಕಿಯರ ಚಿತ್ರಗಳು

III. ಆಂಜನೇಯನ ಚಿತ್ರಗಳು

*I. ದಶಾವತಾರ ಚಿತ್ರಗಳು :* ವಿಷ್ಣುವಿನ ದಶಾವತಾರಗಳಾದ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ ಅವತಾರಗಳನ್ನು ಗೋಡೆಯ ಸುತ್ತಲೂ ಚಿತ್ರಣಮಾಡಲಾಗಿದೆ. ಇಲ್ಲಿ ಪ್ರತಿಯೊಂದು ಅವತಾರದ ಚಿತ್ರಕ್ಕೂ ಪ್ರತ್ಯೇಕವಾದ ಮಂಟಪದಂತಹ ವಿನ್ಯಾಸಗಳನ್ನು ಮಾಡಿಕೊಂಡು ಚಿತ್ರ ರಚಿಸಲಾಗಿದೆ. ಇಲ್ಲಿ ದಶಾವತಾರದ ಚಿತ್ರಗಳ ಮಧ್ಯದಲ್ಲಿ ಬೇರಾವುದೇ ಚಿತ್ರಗಳನ್ನು ರಚನೆ ಮಾಡದೇ ಪೂರ್ತಿಯಾಗಿ ಹತ್ತೂ ಅವತಾರದ ಚಿತ್ರಗಳನ್ನು ಸಾಲಾಗಿ ರಚಿಸಿದೆ. ದಶಾವತಾರದಲ್ಲಿ ಇಲ್ಲಿಯೂ ವಿಷ್ಣು ಆಯಾ ಅವತಾರಗಳನ್ನು ತಾಳಿ ರಾಕ್ಷಸನನ್ನು ಜುಟ್ಟುಹಿಡಿದು ಸಂಹರಿಸುತ್ತಿರುವಂತೆ ಚಿತ್ರಿಸಲಾಗಿದೆ. ಇತರೆಡೆಗಳಲ್ಲಿ ಇದ್ದಂತಹ ವಿವರಗಳೇ ಇಲ್ಲಿದ್ದು ಹೆಚ್ಚಿನ ವಿಶೇಷತೆ ಕಂಡುಬರುವುದಿಲ್ಲ.

*II. ಸೇವಕಿಯರ ಚಿತ್ರಗಳು :* ದೇವಾಲಯದ ಹೊರಗೋಡೆಯಲ್ಲಿ ಮೂರುಬದಿಯಲ್ಲಿ ದಶಾವತಾರದ ಚಿತ್ರಗಳು ರಚಿಸಿದ್ದರೆ. ಗರ್ಭಗೃಹದ ಬಾಗಿಲಿನ ಎಡಬಲಗಳ ಗೋಡೆಯಲ್ಲಿ ಇಬ್ಬರು ಚಾಮರ ಬೀಸುತ್ತಿರುವ ಸೇವಕೀಯರನ್ನು ರಚಿಸಲಾಗಿದೆ. ಎಡಭಾಗದ ಸೇವಕಿ ಎಡಗೈಯಲ್ಲಿ ಚಾಮರ ಹಿಡಿದಿದ್ದರೆ, ಬಲಭಾಗದ ಸೇವಕಿ ಬಲಗೈಯಲ್ಲಿ ಚಾಮರ ಹಿಡಿದುಕೊಂಡಿದ್ದಾಳೆ. ಈ ಎರಡೂ ಚಿತ್ರಗಳು ಒಂದೇ ವಿನ್ಯಾಸದಲ್ಲಿ ಒಂದೇ ಭಂಗಿಯಲ್ಲಿ ಇರುವುದರಿಂದ ಒಂದೇ ಚಿತ್ರದ ಅಚ್ಚುಪ್ರತಿಯನ್ನೇ ಎರಡೂ ಕಡೆಗೂ ಬಳಸಿರುವ ಸಾಧ್ಯತೆಗಳಿವೆ.

*III. ಆಂಜನೇಯನ ಚಿತ್ರಗಳು :* ದೇವಾಲಯದ ಮೂರು ಬದಿಯ ಗೋಡೆಯಲ್ಲಿ ದಶಾವತಾರ ಚಿತ್ರಗಳು ರಚನೆಯಾಗಿದ್ದು, ಇವುಗಳನ್ನು ಎಡಭಾಗದಿಂದ ಪ್ರಾರಂಭಿಸಿ ಹಿಂದಿನ ಗೋಡೆ ಬಳಸಿ ಬಲಭಾಗದ ಗೋಡೆಯವರೆಗೂ ಚಿತ್ರಿಸಲಾಗಿದೆ. ದಶಾವತಾರ ಚಿತ್ರಗಳನ್ನು ಪ್ರಾರಂಭಿಸುವಾಗ ಎಡಗೋಡೆಯಲ್ಲಿ ಮತ್ತು ಹತ್ತೂ ಅವತಾರಗಳನ್ನು ಚಿತ್ರಣ ಮಾಡಿದನಂತರ ಬಲಭಾಗದ ಗೋಡೆಯಲ್ಲಿ ಸ್ವಲ್ಪ ಜಾಗವನ್ನು ಬಿಡಲಾಗಿದೆ. ಹೀಗೆ ಖಾಲಿಉಳಿದ ಎರಡೂ ಬದಿಯ ಗೋಡೆಯಲ್ಲಿ ಆಂಜನೇಯನ ಎರಡೆರಡು ಚಿತ್ರಗಳನ್ನು ರಚಿಸಲಾಗಿದೆ. ಎಡಕ್ಕೆ ಎರಡು ಮತ್ತು ಬಲಕ್ಕೆ ಎರಡು ಹೀಗೆ ಒಟ್ಟು ನಾಲ್ಕು ಆಂಜನೇಯನ ಚಿತ್ರಗಳು ಇಲ್ಲಿವೆ. ಆದರೆ ಒಂದು ಬದಿಯಲ್ಲಿ ಚಿತ್ರಣ ಮಾಡಿದ ವಿನ್ಯಾಸದ ಆಂಜನೇಯನ ಚಿತ್ರಗಳೇ ಇನ್ನೊಂದು ಬದಿಯಲ್ಲಿಯೂ ಇವೆ. ಇವುಗಳನ್ನು ಸಹಿತ ಅಚ್ಚುತಂತ್ರದಿಂದ ರಚನೆಮಾಡಿರಬಹುದಾಗಿದೆ. ಒಂದೇತೆರನಾಗಿರುವ ಈ ಆಂಜನೇಯನ ಚಿತ್ರಗಳು ಕಿಡಕಿಯ ಅಕ್ಕಪಕ್ಕದಲ್ಲಿ ರಚನೆ ಯಾಗಿವೆ. ಮುಂದೆ ಇರುವ ಆಂಜನೇಯನು ಎಡಗೈಯಲ್ಲಿ ಕೋಲನ್ನು ಹಿಡಿದುಕೊಂಡು ನೆಲಕ್ಕೆ ಊರಿಕೊಂಡು ನಿಂತಿದ್ದಾನೆ. ಬಲಗೈಯನ್ನು ಮುಂದೆ ಮಾಡಿ ಏನೋ ಹೇಳುತ್ತಿರುವಂತೆ ಇದೆ. ಕಿರೀಟಧರಿಸಿದ ಆಂಜನೇಯನು ಹೆಗಲಮೇಲೆ ಉದ್ದನಾದ ಶಾಲನ್ನು ಇಳಿಬಿಟ್ಟುಕೊಂಡಿದ್ದಾನೆ. ಆದರೆ ಈತನಿಗೆ ಬಾಲವನ್ನೇ ಚಿತ್ರಿಸಿಲ್ಲ. ಈತನ ಹಿಂದಿರುವ ಆಂಜನೇಯನ ಚಿತ್ರದಲ್ಲಿ ಈತ ಯಾವುದೇ ಆಯುಧವನ್ನು ಹಿಡಿದುಕೊಂಡಿಲ್ಲ ಬಲಗೈಯನ್ನು ಸಂಜ್ಞಾಪೂರಕವಾಗಿ ಮೇಲೆತ್ತಿದ್ದು ಇವನಿಗೆ ಬಾಲವನ್ನು ರಚನೆಮಾಡಲಾಗಿದೆ.

**೨) ಗರ್ಭಗೃಹದ ಮೇಲಿನ ಶಿಖರದ ಚಿತ್ರಗಳು :** ಈ ದೇವಾಲಯದ ಗರ್ಭಗೃಹದ ಮೇಲಿರುವ ಶಿಖರದ ಸುತ್ತಲೂ ವಿಶೇಷವಾದ ಚಿತ್ರಗಳನ್ನು ಬರೆಯಲಾಗಿದೆ. ಸಾಮಾನ್ಯವಾಗಿ ಕಾವಿ ಚಿತ್ರಕಲೆಯಲ್ಲಿ ಕಾವಿ

ಬಣ್ಣವೇ ಪ್ರಧಾನವಾಗಿದ್ದು ಅದೊಂದನ್ನೇ ಬಳಸಲಾಗುತ್ತದೆ. ಆದರೆ ಶಿಖರದ ಮೇಲಿನ ಈ ಚಿತ್ರಗಳಲ್ಲಿ ಕಾವಿ ಬಣ್ಣದ ನಕ್ಷೆ. ಸುಳಿವುಗಳಿಂದ ಅಲಂಕರಿಸಲಾಗಿದ ಮಾಡುಗಳಲ್ಲಿನ ಒಳಭಾಗದಲ್ಲಿ ನೀಲಿ, ಕಪ್ಪು ವರ್ಣದಿಂದ ಚಿತ್ರಗಳನ್ನು ರಚಿಸಲಾಗಿದೆ. ಕಾವಿ ಚಿತ್ರ ರಚನೆಯಲ್ಲಿ ಇಂತಹ ಉದಾಹರಣೆ ಅಪರೂಪ. ಗರ್ಭಗೃಹದ ಮೇಲಿನ ಈ ಶಿಖರವು ಅಷ್ಟಕೋನಾಕೃತಿಯಲ್ಲಿದ್ದು. ಅದರ ಪ್ರತಿಯೊಂದು ಮೈಯಲ್ಲೂ ಕಮಾನಿನಾಕಾರದ ಮಾಡುಗಳನ್ನು ರಚಿಸಿ ಅದರ ಒಳಗೋಡೆಯಲ್ಲಿ ಚಿತ್ರಬರೆಯಲಾಗಿದೆ. ಶಿರಖರದ ಮಾಡುಗಳಲ್ಲಿ ಋಷಿಮುನಿಗಳು ಮತ್ತು ಮಂಗಗಳನ್ನೂ ಚಿತ್ರಿಸಲಾಗಿದೆ. ಶಿಖರದ ಈ ಚಿತ್ರಗಳನ್ನು ವಿಷಯಾನುಸಾರವಾಗಿ ಈ ಕೆಳಗಿನಂತೆ ವಿಂಗಡಿಸಿಕೊಳ್ಳಬಹುದು :

I. ಋಷಿಮುನಿಗಳ ಚಿತ್ರಗಳು

II. ಮಂಗಗಳ ಚಿತ್ರಗಳು

III. ನಕ್ಷಾ ಚಿತ್ರಗಳು

*I. ಋಷಿಮುನಿಗಳ ಚಿತ್ರಗಳು :* ಶಿಖರದ ಹೊರಗೋಡೆಯ ಸುತ್ತಲೂ ಇರುವ ಒಟ್ಟು ಎಂಟು ಮಾಡುಗಳಲ್ಲಿ ನಾಲ್ಕು ಮಾಡುಗಳಲ್ಲಿ ಋಷಿಮುನಿಗಳ ಚಿತ್ರಗಳಿವೆ. ಇವು ಕಾವಿ ಚಿತ್ರರಚನಾ ವಿಧಾನದಲ್ಲಿ ರಚನೆಯಾಗಿರದೇ ಗೋಡೆಯ ಮೇಲೆ ಕುಂಚದಿಂದ ಬರೆಯಲ್ಪಟ್ಟಿವೆ. ಇವು ಬರೀ ಕಪ್ಪು ವರ್ಣದಲ್ಲಿ ರಚಿಸಿದ್ದು ರೇಖಾ ಪ್ರಧಾನವಾಗಿವೆ. ಋಷಿಮುನಿಗಳು ತಪಸ್ಸಿನಲ್ಲಿ ಕುಳಿತ ವಿವಿಧ ಭಂಗಿಯಲ್ಲಿ ರಚನಾಯಾಗಿದ್ದು, ಒಬ್ಬ ಮುನಿ ಪದ್ಮಾಸನದಲ್ಲಿ ಕುಳಿತು ಬಲಗೈಯಲ್ಲಿ ರುದ್ರಾಕ್ಷಿಮಾಲೆ ಹಿಡಿದುಕೊಂಡಿದ್ದಾನೆ. ಎಡಗೈಯನ್ನು ತೊಡೆಯ ಮೇಲೆ ಇಟ್ಟುಕೊಂಡಿದ್ದಾನೆ. ಇನ್ನೊಬ್ಬ ಋಷಿಯು ಎರಡೂ ಕೈಗಳನ್ನು ಮೊಣಕಾಲಿನ ಮೇಲೆ ಇಟ್ಟುಕೊಂಡು ಪದ್ಮಾಸನಲ್ಲಿ ಕುಳಿತಿದ್ದಾನೆ. ಮೂರನೆಯ ಋಷಿಯು ಒಂದುಕೈಯನ್ನು ದಂಡದ (ಅರಣಿ) ಮೇಲೆ ಇಟ್ಟುಕೊಂಡಿದ್ದು ಬಲಗೈಯಲ್ಲಿ ರುದ್ರಾಕ್ಷಿ ಮಾಲೆ ಹಿಡಿದ್ದಾನೆ. ನಾಲ್ಕನೆಯ ಮುನಿಯು ಬಲಗೈಯಲ್ಲಿ ದಂಡ ಹಿಡಿಕೊಂಡಿದ್ದು ಎಡಗೈಯಲ್ಲಿ ಕಮಂಡಲ ಹಿಡಿದಿದ್ದಾನೆ. ಎಲ್ಲ ಮುನಿಗಳೂ ಪದ್ಮಾಸನದಲ್ಲೇ ಕುಳಿತಿದ್ದಾರೆ. ಈ ಮುನಿಗಳ ತಲೆಯ ಜಟೆ. ಗಡ್ಡ ಮೀಸೆಗಳನ್ನು ಸೂಕ್ಷ್ಮ ಕುಂಚದಿಂದ ರೇಖಾ ಪ್ರಧಾನವಾಗಿ ರಚಿಸಲಾಗಿದೆ. ಎಲ್ಲ ಮುನಿಗಳೂ ಹಣೆಯಲ್ಲಿ ವಿಭೂತಿಧಾರಣಮಾಡಿದ್ದಾರೆ.

*II. ಮಂಗಗಳ ಚಿತ್ರಗಳು :* ಶಿಖರದ ಗೋಡೆಯಲ್ಲಿರುವ ಎಂಟುಮಾಡುಗಳಲ್ಲಿ ನಾಲ್ಕು ಮಾಡಿಗಳಲ್ಲಿ ಮಂಗಗಳ ಚಿತ್ರಗಳಿವೆ. ಈ ಮಂಗಗಳ ಚಿತ್ರಗಳು ನೀಲಿ ಬಣ್ಣದಲ್ಲಿ ರಚನೆಯಾಗಿದ್ದು, ಕುಂಚದಿಂದ ರಚಿಸಲ್ಪಟ್ಟಿವೆ ಮೊದಲು ಕಪ್ಪು ಬಣ್ಣದಲ್ಲಿ ಹೊರರೇಖೆಗಳನ್ನು ರಚಿಸಿಕೊಂಡು ಒಳಭಾಗದಲ್ಲಿ ನೀಲಿಬಣ್ಣವನ್ನು ತುಂಬಲಾಗಿದೆ. ಋಷಿಮುನಿಗಳ ಚಿತ್ರಗಳನ್ನು ಬರೀ ರೇಖಾ ಪ್ರಧಾನವಾಗಿ ರಚಿಸಿ ಒಳಭಾಗದಲ್ಲಿ ಯಾವುದೇ ವರ್ಣವನ್ನು ತುಂಬಿಲ್ಲ. ಆದರೆ ಈ ಮಂಗಗಳು ಒಳಭಾಗದಲ್ಲಿ ಚಪ್ಪಟೆಯಾಗಿ ಬಣ್ಣತುಂಬಿ ನೆರಳು ಚಿತ್ರದಂತೆ ರೂಪಿಸಲಾಗಿದೆ. ನಾಲ್ಕೂ ಮಂಗಗಳು ವಿಭಿನ್ನಶೈಲಿಯಲ್ಲಿವೆ. ಎರಡು ಮಂಗಗಳು ಮರಿಗಳನ್ನು ಎತ್ತಿಕೊಂಡಿದ್ದು, ಇನ್ನೆರಡು ಮಂಗಗಳು ಕೈ ಮುಗಿದು ಕುಳಿತುಕೊಂಡಂತಿರುವ ಭಂಗಿಯಲ್ಲಿ ರಚಿಸಿವೆ. ಪ್ರತಿಯೊಂದೂ ಮಂಗಗಳ

ವಿನ್ಯಾಸಕ್ಕನುಸಾರವಾಗಿ ಅವುಗಳ ಬಾಲಗಳೂ ವೈವಿಧ್ಯಮಯವಾಗಿ ಬಾಗಿಕೊಂಡಿವೆ. ಮಾಡುಗಳಲ್ಲಿನ ಈ ಮಂಗನ ಚಿತ್ರಗಳು ಮತ್ತು ಋಷಿಮುನಿಗಳ ಚಿತ್ರಗಳು ಹೊರಭಾಗದಲ್ಲಿರುವುದರಿಂದ ಹೆಚ್ಚು ಹಾನಿಗೊಳಗಾಗಿವೆ.

*III. ನಕ್ಷಾ ಚಿತ್ರಗಳು :* ಶಿಖರದ ಮೇಲಿನ ಮಾಡುಗಳಲ್ಲಿನ ಋಷಿಮುನಿಗಳ ಮತ್ತು ಮಂಗಗಳ ಚಿತ್ರಗಳಲ್ಲದೇ ನಕ್ಷಾ ಚಿತ್ರವೂ ಇಲ್ಲಿರಚಿಸಿದೆ. ಇಲ್ಲಿನ ನಕ್ಷಾ ಚಿತ್ರಣವು ಮೂರು ಬಗೆಯ ವಿನ್ಯಾಸದಲ್ಲಿದ್ದು, ಅದು ಹೀಗಿದೆ. ಕಂಬದ ಹಾಗಿರುವ ನೆರಳು ಚಿತ್ರಗಳು ಅಷ್ಟಕೋನಾಕೃತಿಯ ಪ್ರತಿಯೊಂದು ಮೂಲೆಯಲ್ಲಿಯೂ ರಚನೆಯಾಗಿದ್ದು. ಅವುಗಳ ಮೇಲೆ ದಪ್ಪನಾದ ಪಟ್ಟಿಯನ್ನು ಉದ್ದಕ್ಕೂ ರಚಿಸಲಾಗಿದೆ. ಮತ್ತೊಂದು ಬಗೆಯ ವಿನ್ಯಾಸವೆಂದರೆ ಹಗ್ಗದ ಸುರುಳಿಯಂತಿರುವ ಪುನರಾವರ್ತಿತ ನಕ್ಷೆಯನ್ನು ರೂಪಿಸಲಾಗಿದೆ. ಇದೇ ಮಾದರಿಯ ನಕ್ಷೆಯನ್ನು ಶಿಖರದ ಮೇಲಿನಭಾಗದ ಪಟ್ಟಿಯಲ್ಲಿಯೂ ರಚಿಸಿದೆ. ಮೂರನೆಯ ವಿಧದ ನಕ್ಷೆ ಎಂದರೆ ಶಿಖರದ ಮೇಲ್ಭಾಗದಲ್ಲಿ ಜ್ಯಾಮಿತಿಕ ರೂಪದಲ್ಲಿ ನಕ್ಷೆಯನ್ನು ಉದ್ದಪಟ್ಟಿಕೆಯಲ್ಲಿ ಶಿಖರದ ಸುತ್ತಲೂ ರಚನೆಮಾಡಲಾಗಿದೆ.

***VI. ಬೇಡ್ಕಣಿ ಸೀತಾರಾಮಚಂದ್ರ ದೇವಾಲಯ, ಬಿಳಗಿ :*** ಸಿದ್ದಾಪುರ ತಾಲೂಕಿನ ಬಿಳಗಿಯಲ್ಲಿರುವ ಬಾಳಗೊಡ ಸೀತಾರಾಮಚಂದ್ರ ದೇವಾಲಯದ ಸನಿಹದಲ್ಲಿಯೇ ಬೇಡ್ಕಣಿ ಸೀತಾರಾಮಚಂದ್ರ ದೇವಾಲಯವೂ ಕಟ್ಟಲ್ಪಟ್ಟಿದೆ. ಈ ದೇವಾಲಯದಲ್ಲಿಯೂ ಕಾವಿ ಭಿತ್ತಿಚಿತ್ರಗಳು ರಚನೆಯಾಗಿವೆ. ಈ ದೇವಾಲಯವು ಸಹಿತ ಮೂಲದಲ್ಲಿ ಊರ ಹೊರಭಾಗದಲ್ಲಿ ಕಟ್ಟಲ್ಪಟ್ಟಿತ್ತು. ನಂತರದಲ್ಲಿ ಕ್ರಿ. ಶ. ೧೯೦೮ ರಲ್ಲಿ ಶ್ರೀಮತ್ ಇಂದಿರಾಕಾಂತ ತೀರ್ಥ ಸ್ವಾಮೀಜಿಯವರ ಆರ್ಥಿಕ ಸಹಾಯದಿಂದ ಶ್ರೀವಾಮನ್ ಶೆಣೈ ಮತ್ತು ಶ್ರೀನಿವಾಸ್ ಆಚಾರ್ಯ ಇವರ ಮುಖಂಡತ್ವದಲ್ಲಿ ಊರಿನ ಅಡ್ಡಕೇರಿಯಲ್ಲಿ ಈಗಿರುವ ನೆಲೆಯಲ್ಲಿ ಕಟ್ಟಿಸಲಾಯಿತು. ಅದೇ ಸಂದರ್ಭದಲ್ಲಿಯೇ ಕಾವಿ ಚಿತ್ರಗಳನ್ನೂ ರಚನೆಮಾಡಲಾಯಿತು ಎಂದು ತಿಳಿದುಬರುವುದು. ಈ ದೇವಾಲಯದ ಹೊರಗೋಡೆಗಳು ಕಾವಿ ಚಿತ್ರಕಲೆಯಿಂದ ಅಲಂಕರಿಸಲ್ಪಟ್ಟಿದ್ದು. ಸುತ್ತಲೂ ಚಿತ್ರಗಳನ್ನು ಮತ್ತು ನಕ್ಷೆಯ ಚಿತ್ತಾರಗಳನ್ನು ರಚಿಸಲಾಗಿದೆ. ಈ ದೇವಾಲಯದ ಚಿತ್ರಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು :

೧. ದಶಾವತಾರದ ಚಿತ್ರಗಳು

೨. ಇತರ ಚಿತ್ರಗಳು

*೧. ದಶಾವತಾರ ಚಿತ್ರಗಳು :* ದೇವಾಲಯದ ಸುತ್ತಲೂ ವಿಷ್ಣುವಿನ ದಶಾವತಾರದ ಚಿತ್ರಗಳನ್ನು ರಚನೆಮಾಡಲಾಗಿದೆ. ಇತರೆಡೆಯಲ್ಲಿನ ಕಾವಿಭಿತ್ತಿ ಚಿತ್ರಗಳಲ್ಲಿ ರಚನೆಯಾಗಿರುವ ದಶಾವತಾರ ಚಿತ್ರಗಳಿಗಿಂತ ಇವು ಭಿನ್ನವಾಗಿ ನಿರೂಪಿಸಲ್ಪಟ್ಟಿವೆ. ಉಳಿದಕಡೆಗಳಲ್ಲಿ ವಿಷ್ಣು ಆಯಾ ಅವತಾರಗಳನ್ನು ತಾಳಿ ರಾಕ್ಷಸರ ಜುಟ್ಟುಹಿಡಿದು ಸಂಹರಿಸುತ್ತಿರುವಂತೆ ರಚನೆಯಾಗಿರುವುದು ಅಧಿಕವಾಗಿದೆ. ಆದರೆ ಇಲ್ಲಿ ಆತರಹ ಇಲ್ಲದೇ ಪ್ರತಿಯೊಂದು ಅವತಾರದಲ್ಲಿಯೂ ಬೇರೆ ಬೇರೆ ಬಗೆಯಲ್ಲಿ ರಚನೆಯಾಗಿವೆ.

ಮತ್ಸ್ಯಾವತಾರ ಚಿತ್ರದಲ್ಲಿ ರಾಕ್ಷಸನನ್ನು ಸಂಹರಿಸಿದ ವಿಷ್ಣುವು ಮತ್ಸ್ಯರೂಪದಲ್ಲಿ ಚಿತ್ರಿಸಿದ್ದಾನೆ. ಇಲ್ಲಿ ರಾಕ್ಷಸನ ಚಿತ್ರವಿರದೇ ಬರೀ ಮತ್ಸ್ಯರೂಪದ ಶ್ರೀಹರಿಯು ಮಾತ್ರ ರಚನೆಯಾಗಿದ್ದಾನೆ. ಕೂರ್ಮಾವತಾರದಲ್ಲಿಯೂ ರಾಕ್ಷಸನಿರದೇ ಕೂರ್ಮ ರೂಪದ ಶ್ರೀಹರಿ ಮಾತ್ರ ಚಿತ್ರಿಸಿದ್ದಾನೆ. ನಾಲ್ಕು ಕೈಗಳಲ್ಲಿ ಹಿಂದಿನ ಎರಡು ಕೈಗಳು ಶಂಖ ಚಕ್ರಗಳನ್ನು ಹಿಡಿದುಕೊಂಡಿದ್ದರೆ ಇನ್ನೆರಡು ಕೈಗಳಲ್ಲಿ ಒಂದರಲ್ಲಿ ಗಧೆ ಇನ್ನೊಂದರಲ್ಲಿ ಹೂವನ್ನು

ಹಿಡಿದಿದ್ದಾನೆ. ವರಾಹ ಅವತಾರದ ಚಿತ್ರವು ಕಮಾನಿನಾಕಾರದ ಸ್ಥಳವಿನ್ಯಾಸದಲ್ಲಿ ರಚನೆಯಾಗಿದ್ದು ಒಳಭಾಗದಲ್ಲಿ ಅಲ್ಲಲ್ಲಿ ಹೂವಿನ ಟೊಂಗೆಗಳನ್ನು ರಚನೆಮಾಡಲಾಗಿದೆ. ನರಸಿಂಹ ಅವತಾರದಲ್ಲಿ ನರಸಿಂಹನು ಹಿರಣ್ಯಕಶಿಪುವನ್ನು ಸಂಹರಿಸುತ್ತಿದ್ದು. ಕಂಬವನ್ನು ಸೀಳಿಬಂದ ನರಸಿಂಹನ ಹಿಂದಿನ ಕಂಬವು ಸಾಂಕೇತಿಕವಾಗಿದ್ದು, ನೈಜರೂಪದಲ್ಲಿ ರಚಿಸಿಲ್ಲ. ಈ ಮಂಟಪದಲ್ಲಿಯೂ ಸುತ್ತಲೂ ಹೂವಿನ ಟೊಂಗೆಗಳನ್ನು ರಚಿಸಿದೆ. ಮಂಟಪದ ಕೆಳಭಾಗದಲ್ಲಿ ಗೋಡೆಯ ವಿನ್ಯಾಸದಲ್ಲಿರುವ ಕಟ್ಟೆಯನ್ನು ಚಿತ್ರಿಸಿದೆ. ವರಾಹ ಮತ್ತು ನರಸಿಂಹ ಅವತಾರ ಇರುವ ಎರಡೂ ಮಂಟಪಗಳ ಕೆಳಭಾಗದಲ್ಲಿ ಲಿಂಗಾಕಾರದ ತಳಪೀಠವನ್ನು ರಚಿಸಲಾಗಿದೆ. ವಾಮನಾವತಾರ ಮತ್ತು ಪರುಶುರಾಮ ಅವತಾರದ ಚಿತ್ರಗಳು ಮಂಟಪದಲ್ಲಿ ರಚಿಸಿವೆ. ಚಿತ್ರದಲ್ಲಿ ರಾಮಾವತಾರದಲ್ಲಿ ರಾಮನು ಬಿಲ್ಲಿಗೆ ಬಾಣಹೂಡಿ ಹೊಡೆಯುತ್ತಿದ್ದಾನೆ. ರಾಮನು ದಪ್ಪನಾದ ಮೀಸೆ ಬಿಟ್ಟಂತೆ ಚಿತ್ರಿಸಲಾಗಿದೆ. ರಾಮನ ಸುತ್ತಲೂ ಹೂಬಳ್ಳಿಗಳು ತುಂಬಿಕೊಂಡಿವೆ. ಕೃಷ್ಣಾವತಾರ ಚಿತ್ರವು ರಾಮಾವಾತಾರದ ಚಿತ್ರದಂತೆಯೇ ಆಯತಾಕಾರದಲ್ಲಿ ರಚಿಸಿದೆ. ಬೌದ್ಧಾವತಾರದ ಚಿತ್ರದಲ್ಲಿ ಸುತ್ತಲೂ ಹೂಬಳ್ಳಿಯ ನಕ್ಷೆಗಳು ರಚನೆಯಾಗಿದ್ದು, ಕೆಳಭಾಗದಲ್ಲಿ ಗೋಡೆಯ ವಿನ್ಯಾಸವಿದೆ. ಈ ಚಿತ್ರದಲ್ಲಿ ಬುದ್ಧನ ಕೈಗಳು ತೊಡೆಯ ಕೆಳಭಾಗದ ವರೆಗೂ ಇಳಿದಿದ್ದು, ಆಕೃತಿಗೆ ಉದ್ದವೆನಿಸುತ್ತಿವೆ.

*೨. ಇತರ ಚಿತ್ರಗಳು :* ಬೇಡ್ಕಣಿ ಸೀತಾರಾಮಚಂದ್ರ ದೇವಾಲಯದಲ್ಲಿ ದಶಾವತಾರ ಚಿತ್ರಗಳ ಮಧ್ಯದಲ್ಲಿ ಅಲ್ಲಲ್ಲಿ ಇತರ ಚಿತ್ರಗಳನ್ನೂ ರಚನೆಮಾಡಲಾಗಿದೆ. ಅವುಗಳಲ್ಲಿ ನಾರದ, ತುಂಬುರ, ಗರುಡ, ವಾಲ್ಮೀಕಿ ಋಷಿ, ಪರಿಚಾರಿಕೆಯರ ಚಿತ್ರಗಳಿವೆ. ಅವುಗಳನ್ನು ಒಂದೊಂದಾಗಿ ಸ್ಥೂಲವಾಗಿ ಈ ರೀತಿಯಲ್ಲಿ ವಿವರಿಸಬಹುದು.

I. ನಾರದನ ಚಿತ್ರ : ವರಾಹ ಅವತಾರ ಮತ್ತು ನರಸಿಂಹ ಅವತಾರದ ಚಿತ್ರಗಳ ನಡುವೆ ಗೋಡೆಯಲ್ಲಿ ಒಂದು ಕಿಟಕಿ ಇದ್ದು. ಅದರಲ್ಲಿ ಕೆಳಭಾಗದ ವಿಶಾಲಸ್ಥಳದಲ್ಲಿ ನಾರದನ ಚಿತ್ರ ರಚನೆಮಾಡಲಾಗಿದೆ. ನಾರದನು ಕೊರಳಲ್ಲಿ ಹೂ ಮಾಲೆ ಹಾಕಿಕೊಂಡಿದ್ದು, ತಂಬೂರಿ ಬಾರಿಸುತ್ತಿದ್ದಾನೆ. ಎಡಗೈಯಲ್ಲಿ ಚಿಟಿಕೆ ತಾಳ ಹಿಡಿದುಕೊಂಡಿದ್ದು, ಹಾಡುತ್ತ ವಿಹರಿಸುತ್ತಿದ್ದಾನೆ. ಸುತ್ತಲೂ ಹೂ ಬಳ್ಳಿಯ ನಕ್ಷೆಯ ವಿನ್ಯಾಸಗಳಿಂದ ಅಲಂಕರಿಸಲಾಗಿದೆ. ನಾರದನ ಚಿತ್ರವಿರುವ ಈ ಕಿಟಕಿಯ ಸುತ್ತಲೂ ಹಗ್ಗದ ವಿನ್ಯಾಸದಲ್ಲಿರುವ ನಕ್ಷಾ ಚಿತ್ರಣವಿದೆ. ನಾರದನ ಚಿತ್ರವು ಚಿಕ್ಕಪ್ರಮಾಣದಲ್ಲಿದ್ದು ಸುಮಾರು ಒಂದು ಫೂಟು ಅಳತೆಯಲ್ಲಿದೆ.

II. ತುಂಬುರನ ಚಿತ್ರ : ಬೌದ್ಧವತಾರ ಮತ್ತು ಕಲ್ಕಿ ಅವತಾರದ ಚಿತ್ರಗಳ ಮಧ್ಯದಲ್ಲಿ ಇರುವ ಮತ್ತೊಂದು ಕಿಟಕಿಯಲ್ಲಿ ತುಂಬರನನ್ನು ಚಿತ್ರಿಸಿದೆ. ತುಂಬುರನ ಚಿತ್ರದ ಸುತ್ತಲೂ ಸಹಿತ ಹೂ ಬಳ್ಳಿಯ ನಕ್ಷೆಗಳನ್ನು ರಚಿಸಿ ಅಲಂಕರಿಸಿದೆ. ಕೆಳಭಾಗದಲ್ಲಿ ಗೋಡೆಯ ಹಾಗಿರುವ ಪೀಠವನ್ನು ರಚಿಸಿದ್ದು ಈ ಚಿತ್ರವುಳ್ಳ ಕಿಟಕಿಯ ಸುತ್ತಲೂ ಸಹಿತ ಅಂಚುಗಳಿಗೆ ನಕ್ಷಾ ಚಿತ್ರಣವನ್ನು ಮಾಡಲಾಗಿದೆ.

III. ಗರುಡನ ಚಿತ್ರ : ದೇವಾಲಯದ ಬಲ ಬದಿ ಮತ್ತು ಎಡಬದಿಯ ಗೋಡೆಯಲ್ಲಿ ಗರುಡನ ಚಿತ್ರಗಳನ್ನು ರಚಿಸಲಾಗಿದೆ. ಬಾಳಗೊಡ ಸೀತಾರಾಮಚಂದ್ರ ದೇವಾಲಯದಲ್ಲಿ ಹನುಮಂತನ ಚಿತ್ರಗಳನ್ನು ರಚಿಸಿದ್ದರೆ, ಇಲ್ಲಿ ಗರುಡನ ಚಿತ್ರಗಳು ರಚಿಸಲ್ಪಟ್ಟಿವೆ. ಗರುಡನು ಕೈ ಮುಗಿದುಕೊಂಡು ನಿಂತಿರುವ ಭಂಗಿಯಲ್ಲಿದ್ದು ಕಿರೀಟಧರಿಸಿದ್ದಾನೆ. ಬೆನ್ನಿಗೆ ರೆಕ್ಕೆಗಳನ್ನು ರಚಿಸಲಾಗಿದ್ದು ಪ್ರಮಾಣದಲ್ಲಿ ಅವು ಚಿಕ್ಕವಾಗಿದ್ದು ಸಾಂಕೇತಿಕ ರೂಪದಲ್ಲಿವೆ. ಗರುಡನು ಬಿಗಿಯಾಗಿ ಅರ್ಧತೊಡೆ ಮುಚ್ಚುವ ಚಡ್ಡಿಯನ್ನು ಧರಿಸಿದ್ದು ಸೊಂಟಕ್ಕೆ ಉತ್ತರೀಯವನ್ನು ಕಟ್ಟಿಕೊಂಡಿದ್ದಾನೆ. ಎರಡೂ ಕಡೆಯ ಗರುಡನ ಚಿತ್ರಗಳು ಒಂದೇ ತೆರನಾಗಿದ್ದು ಅಚ್ಚು ವಿಧಾನದಿಂದ ರಚಿಸಿರುವ ಸಾಧ್ಯತೆ ಇದೆ.

IV. ವಾಲ್ಮೀಕಿ ಋಷಿಯ ಚಿತ್ರ : ಬೌದ್ಧಾವತಾರ ಮತ್ತು ಕೃಷ್ಣಾವತಾರ ಚಿತ್ರದ ಮಧ್ಯದಲ್ಲಿನ ಒಂದು ಮಾಡಿನಲ್ಲಿ ವಾಲ್ಮೀಕಿ ಋಷಿಯ ಚಿತ್ರರಚಿಸಲಾಗಿದೆ. ಪೀಠದ ಮೇಲೆ ಕುಳಿತ ವಾಲ್ಮೀಕಿ ಮುನಿಯು ರಾಮಾಯಣ ರಚನೆಯಲ್ಲಿ ತೊಡಗಿದಂತೆ ಚಿತ್ರಿಸಲಾಗಿದೆ. ಮುಂದುಗಡೆಯಲ್ಲಿ ಗುಣಾಕಾರ ಚಿಹ್ನೆಯನ್ನು ಹೋಲುವ ನಿಲುವು ಪೀಠದ ಮೇಲೆ ಗ್ರಂಥವನ್ನು ಇಡಲಾಗಿದ್ದು. ಮುನಿಯ ಎಡಗೈಯಲ್ಲಿ ಶ್ಲೋಕಗಳನ್ನು ರಚನೆಮಾಡಿದ ಹಸ್ತಪ್ರತಿ, ಇದ್ದು ಬಲಗೈಯಲ್ಲಿ ಲೇಖನಿ ಹಿಡಿದುಕೊಂಡಿದ್ದಾನೆ. ಮುನಿಯು ಗಡ್ಡಬಿಟ್ಟಿದ್ದು ತಲೆಗೂದಲನ್ನು ಒಂದೆ ಹಾಗೇ ಇಳಿಬಿಟ್ಟುಕೊಂಡಿರುವನು. ಈತನ ಮೇಲ್ಭಾಗದಲ್ಲಿನ ಚಿಕ್ಕಕಮಾನಿನಲ್ಲಿ ಗಡಿಯಾರವನ್ನು ಚಿತ್ರಿಸಲಾಗಿದ್ದು ಅದು ಹತ್ತುಗಂಟೆಯ ಸಮಯ ತೋರಿಸುತ್ತಿದೆ. ಗಡಿಯಾರದ ಚಿತ್ರ ನೋಡಿದರೆ ಈ ಚಿತ್ರಗಳು ಇತ್ತೀಚೆಗೆ ಇಪ್ಪತ್ತನೇ ಶತಮಾನದಲ್ಲಿ ರಚಿಸಿವೆ ಎಂಬುವುದು ಹೆಚ್ಚು ಸ್ಪಷ್ಟವಾಗುತ್ತದೆ.

V. ಪರಿಚಾರಿಕೆಯರ ಚಿತ್ರಗಳು : ಬಾಳಗೊಡ ಸೀತಾರಾಮಚಂದ್ರ ದೇವಾಲಯದಲ್ಲಿ ಗರ್ಭಗೃಹದ ಎಡಬಲಗಳಲ್ಲಿ ಪರಿಚಾರಿಕೆಯರನ್ನು ಚಿತ್ರಿಸಿದಂತೆ ಇಲ್ಲಿಯೂ ಚಾಮರ ಹಿಡಿದುಕೊಂಡ ಪರಿಚಾರಿಕೆಯರನ್ನು ಚಿತ್ರಿಸಲಾಗಿದೆ. ತಲೆಗೂದಲನ್ನು ತುರುಬುಕಟ್ಟಿ ತಲೆಯನ್ನು ಆಭರಣಗಳಿಂದ ಅಲಹಕರಿಸಿಕೊಂಡಂತೆ, ಕೊರಳ ತುಂಬ ಆಭರಣಗಳು ತುಂಬಿವೆ. ನಕ್ಷೆಯುಳ್ಳ ಕುಪ್ಪಸ. ಗೆರೆಯ ವಿನ್ಯಾಸ ಹೊಂದಿರುವ ಸೀರೆ ಧರಿಸಿದ್ದು ಪರಿಚಾರಿಕೆಯರ ಮೇಲ್ಭಾಗದಲ್ಲಿ ವೃತ್ತಾಕಾರದ ಹೂವಿನ ನಕ್ಷೆ ಇದೆ. ಇಡೀ ದೇವಾಲಯದ ಚಿತ್ರಗಳಲ್ಲೇ ಇವು ತೀರ ಕಳಪೆ ಮಟ್ಟದಲ್ಲಿದ್ದು ಈ ಚಿತ್ರಗಳನ್ನು ರಚಿಸಿದವರೇ ಬೇರೆ ಎಂದು ತಿಳಿಯುತ್ತದೆ. ಈ ಪರಿಚಾರಿಕೆಯರ ಚಿತ್ರಗಳು ಮತ್ತು ಬಾಳಗೊಡ ಸೀತಾರಾಮಚಂದ್ರ ದೇವಾಲಯದ ಪರಿಚಾರಿಕೆಯರ ಚಿತ್ರಗಳು ಒಂದೇ ತೆರನ ಾಗಿದ್ದು ಬಹುಶ ಒಬ್ಬಕಲಾವಿದನಿಂದಲೇ ರಚಿಸಿವೆ.

***VII. ವೆಂಕಟರಮಣ ದೇವಾಲಯ, ಅಘನಾಶಿನಿ:*** ಉತ್ತರ ಕನ್ನಡ ಜಿಲ್ಲೆಯ ಕುಮಟಾ ತಾಲೂಕಿನಲ್ಲಿರುವ ಅಘನಾಶಿನಿಯು ಕುಮಟಾದಿಂದ ಸುಮಾರು ೨೪ ಕಿ. ಮಿ. ಗಳ ಅಂತರದಲ್ಲಿದೆ. ಇಲ್ಲಿನ ವೆಂಕಟರಮಣ ದೇವಾಲಯವು ಊರಿನಿಂದ ೨ ಕಿ. ಮಿ. ಅಂತರದಲ್ಲಿದ್ದು. ಆಗಾಗ ಕಟ್ಟಲ್ಪಟ್ಟಿದೆ. ಗುಡಿಯ ಪೂಜಾರಿಗಳ ಹೇಳಿಕೆಯ ಪ್ರಕಾರ ಕ್ರಿ. ಶ. ೧೮ ನೇ ಶತಮಾನದಲ್ಲಿ ನಿರ್ಮಿಸಿದ ಈ ದೇವಾಲಯವು ಕಾಲಕಾಲಕ್ಕೆ ಜೀರ್ಣೋದ್ಧಾರಗೊಳ್ಳುತ್ತ. ನವೀಕರಣ ಹೊಂದುತ್ತ ಬಂದಿದೆ. ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲಿ ರಚನೆಯಾದ ಕೆಲವು ಕಾವಿ ಚಿತ್ರ ವಿನ್ಯಾಸಗಳು ಇನ್ನೂ ಕಂಡುಬರುತ್ತವೆ. ಈ ದೇವಾಲಯದ ಕಾವಿಚಿತ್ರ ವಿನ್ಯಾಸಗಳನ್ನು ಈ ಕೆಳಗಿನಂತೆ ಎರಡು ರೀತಿಯಲ್ಲಿ ವಿಂಗಡಿಸಿಕೊಂಡು ವಿವರಿಸಬಹುದು :

೧. ವೃತ್ತಾಕಾರದ ನಕ್ಷೆಗಳು

೨. ಹೂ ಬಳ್ಳಿಯ ನಕ್ಷೆಗಳು

*೧. ವೃತ್ತಾಕಾರದ ನಕ್ಷೆಗಳು :* ವೃತ್ತಾಕಾರದ ನಕ್ಷೆಗಳು ದೇವಾಲಯದ ಸುತ್ತಲೂ ಗೋಡೆಯಲ್ಲಿ ಅಲ್ಲಲ್ಲಿ ರಚನೆಯಾಗಿದ್ದು ಒಟ್ಟು ಹತ್ತು ನಕ್ಷೆಗಳು ದೇವಾಲಯದ ಕೆಳಗೋಡೆಯಲ್ಲಿದ್ದರೆ ಇನ್ನುನಾಲ್ಕು ನಕ್ಷೆಗಳು ಗರ್ಭಗೃಹದ ಮೇಲಿನ ಶಿಖರದ ಗೋಡೆಯಲ್ಲಿವೆ. ಹೀಗೆ ಒಟ್ಟು ಹದಿನಾಲ್ಕು ವೃತ್ತಾಕಾರದ ನಕ್ಷೆಗಳಿದ್ದರೂ ಪ್ರತಿಯೊಂದು ಭಿನ್ನಭಿನ್ನ ರೂಪದಲ್ಲಿವೆ. ಜ್ಯಾಮಿತಿಕ ಉಪಕರಣಗಳನ್ನು ಬಳಸಿ ರಚನೆಮಾಡಿದ ಈ ವೃತ್ತಾಕಾರದ

ನಕ್ಷೆಗಳ ಸ್ವರೂಪವೇ ಕಾವಿ ಚಿತ್ರರಚನೆಯಲ್ಲಿ ಒಂದು ಆಕರ್ಷಕ ಮತ್ತು ಕುತೂಹಲಕರ ಸಂಗತಿಯಾಗಿದೆ. ಕೆಳಗಿನ ಗೋಡೆಯಲ್ಲಿನ ವೃತ್ತದ ನಕ್ಷೆಗಳಲ್ಲಿ ಗರ್ಭಗೃಹದ ಎಡ ಮತ್ತು ಬಲಬದಿಯ ಒಂದೊಂದು ವೃತ್ತದ ನಕ್ಷೆಗಳಿಗೆ ಕೆಳಗೆ ಟೊಂಗೆಯನ್ನು ಮತ್ತು ಎಲೆಗಳನ್ನು ರಚನೆಮಾಡಿ ಗಿಡದ ಸ್ವರೂಪ ಕೊಟ್ಟಿದ್ದಾರೆ, ಇಂತಹ ರಚನೆಗಳು ಬಳಲೆಗ್ರಾಮದ ಅಮ್ಮನವರ ದೇವಾಲಯದಲ್ಲಿಯೂ ಚಿಸಿವೆ. ಕೆಲವು ವೃತ್ತಗಳಲ್ಲಿ ಜ್ಯಾಮತಿಕ ವಿನ್ಯಾಸದಿಂದ ಹೂವಿನ ನಕ್ಷೆಗಳನ್ನು ರಚಿಸಿದ್ದರೆ ಮತ್ತೆ ಕೆಲವು ವೃತ್ತಗಳಲ್ಲಿ ಚಿಕ್ಕದಾದ ಹೂವಿನ ನಕ್ಷೆಗಳನ್ನು ಅಚ್ಚುತಂತ್ರದಿಂದ ಪುನರಾವರ್ತಿತವಾಗಿ ರಚನೆ ಮಾಡಲಾಗಿದೆ.

*೨. ಹೂ ಬಳ್ಳಿಯ ನಕ್ಷೆಗಳು :* ದೇವಾಲಯದ ಹೊರಗೋಡೆಯಲ್ಲಿ ವೃತ್ತಾಕಾರದ ನಕ್ಷೆಗಳಿದ್ದರೆ ದೇವಾಲಯದ ಒಳಭಾಗದಲ್ಲಿ ಮತ್ತು ಪ್ರವೇಶದ್ವಾರದ ಗೋಡೆಯಲ್ಲಿ ಹೂ ಬಳ್ಳಿಯ ನಕ್ಷೆಗಳಿವೆ. ಒಳಭಾಗದ ಗೋಡೆಯಲ್ಲಿ ಮೇಲಿನ ಭಾಗದಲ್ಲಿ ಅಂಚಿಗೆ ಸಾಲಾಗಿ ಬಳ್ಳಿಯ ನಕ್ಷೆ ರಚಿಸಿದ್ದರೆ, ಪ್ರವೇಶದ್ವಾರದ ಗೋಡೆಯ ಮೇಲೆ ಮತ್ತು ಗರ್ಭಗೃಹದ ಬಾಗಿಲಿನ ಅಂಚುಗಳಿಗೆ ಮತ್ತು ಅಕ್ಕಪಕ್ಕಗಳಲ್ಲಿ ಸಾಲಾದ ಬಳ್ಳಿಯ ನಕ್ಷೆ ರಚನೆ ಮಾಡಲಾಗಿದೆ. ಸಾಮಾನ್ಯವಾಗಿ ಇದು ಇಡೀ ದೇವಾಲಯದ ತುಂಬ ಒಂದೇ ತೆರನಾಗಿದ್ದು ಹೆಚ್ಚಿನ ವೈವಿದ್ಯತೆ ಕಂಡುಬರುವುದಿಲ್ಲ. ಹಗ್ಗದ ಮುರಿಗೆಯಂತಿರುವ ವಿನ್ಯಾಸ. ಮತ್ತು ಜೋಡಿಗೆರೆಗಳನ್ನು ಒಂದು ಬದಿಗೆವಾಲಿದಂತೆ ಪುನರಾವರ್ತಿಸಿ ರಚಿಸ ರೂಪಿಸಿರುವ ನಕ್ಷೆ ಇಲ್ಲಿ ಕಂಡುಬರುತ್ತದೆ.

***VIII. ನಾರಾಯಣ ದೇವಾಲಯ, ಅಗ್ರಹಾರ :*** ಕುಮಟಾ ಸಮೀಪವಿರುವ ಅದೇ ತಾಲೂಕಿಗೆ ಸೇರಿದ ಅಗ್ರಹಾರ ಗ್ರಾಮದ ನಾರಾಯಣ ದೇವಾಲಯದಲ್ಲಿ ಕಾವಿ ಚಿತ್ರಗಳಿವೆ ಎಂಬುದಾಗಿ ಉಲ್ಲೇಖವಿದ್ದರೂ ಇಂದು ಅಲ್ಲಿ ಚಿತ್ರಗಳು ಕಂಡುಬರುವುದಿಲ್ಲ. ದೇವಾಲಯವನ್ನು ನವೀಕರಿಸಲಾಗಿದ್ದು, ಚಿತ್ರಗಳು ನಾಶವಾಗಿವೆ. ಈ ದೇವಾಲಯದಲ್ಲಿ ದಶಾವತಾರ ಚಿತ್ರಗಳು. ಕೃಷ್ಣಕಥೆಗೆ ಸಂಬಂಧಿಸಿದ ಚಿತ್ರಗಳು ಮತ್ತು ಹೂ ಬಳ್ಳಿನಕ್ಷೆಗಳು ರಚನೆಯಾಗಿದ್ದವೆಂದು ಸ್ಥಳೀಯರು ಹೇಳುತ್ತಾರೆ.

***IX. ಲಕ್ಷ್ಮೀನಾರಾಯಣ ದೇವಾಲಯ, ಅವರ್ಸಾ :*** ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲೂಕಿಗೆ ಸೇರಿದ ಅವರ್ಸಾ ಗ್ರಾಮವು ಅಂಕೋಲಾದಿಂದ ಸುಮಾರು ೮ ಕಿ. ಮಿ. ಅಂತರದಲ್ಲಿದೆ ಇಲ್ಲಿನ ಲಕ್ಷ್ಮೀನಾರಾಯಣ ಮಂದಿರದಲ್ಲಿ ಕಾವಿ ಚಿತ್ರಗಳು ಕಂಡಬರುತ್ತವೆ. ಆದರೆ ಈ ಚಿತ್ರಗಳು ಮೂಲಸ್ವರೂಪದಲ್ಲಿ ಉಳಿದುಕೊಂಡಿರದೇ ತಿದ್ದುಪಡಿ ಮಾಡಲಾಗಿದೆ. ಹಳದೀಪುರದ ವೆಂಕಟರಮಣ ದೇವಾಲಯದ ಚಿತ್ರಗಳಂತೆ ಇಲ್ಲಿನ ಚಿತ್ರಗಳ ಮೇಲೆಯೂ ಸ್ವಲ್ಪ ನಸುಕಪ್ಪು ವರ್ಣವನ್ನು ಲೇಪಿಸಲಾಗಿದ್ದು, ಒಳಭಾಗದ ಬಿಳಿಗೆರೆಗಳು ಮುಚ್ಚಿಕೊಂಡಿದ್ದರಿಂದ ಪ್ರತ್ಯೇಕವಾದ ಚಿತ್ರದ ಹೊರರೇಖೆಗಳನ್ನು ಬಿಳಿವರ್ಣದಿಂದ ಎಳೆಯಲಾಗಿದೆ. ಚಿತ್ರದ ಮೂಲಸ್ವರೂಪ ಇಲ್ಲಿಯೂ ಕೆಟ್ಟು ಹೋಗಿದೆ. ಈ ಚಿತ್ರಗಳ ರಚನಾ ಶೈಲಿ ಹಳದೀಪುರದ ವೆಂಕಟರಮಣ ದೇವಾಲಯದ ಚಿತ್ರಗಳಿಗೆ ಹೋಲಿಕೆಯಾಗುತ್ತಿದ್ದು ಎರಡೂ ಕಡೆಯ ಚಿತ್ರಗಳನ್ನು ಒಬ್ಬನೇ ಕಲಾವಿದ ರಚನೆ ಮಾಡಿರುವುದು ಹೆಚ್ಚು ಮನದಟ್ಟಾಗುತ್ತದೆ. ಅವರ್ಸಾದ ಲಕ್ಷ್ಮೀನಾರಾಯಣ ಮಂದಿರದಲ್ಲಿ ಹೊರಭಾಗದ ಗೋಡೆ ಮತ್ತು ಒಳಭಾಗದ ಗೋಡೆಗಳಲ್ಲಿ ಕಾವಿ ಚಿತ್ರಗಳನ್ನು ರಚಿಸಲಾಗಿದೆ. ಒಳಭಾಗದ ಗೋಡೆಗಳಲ್ಲಿನ ಚಿತ್ರಗಳನ್ನು ಸುಣ್ಣಬಣ್ಣ ಸಾರಿಸಿ ಸಂಪೂರ್ಣವಾಗಿ ಮುಚ್ಚಲಾಗಿದೆ. ಕೆಲವು ಕಡೆ ತೆಳುವಾದ ಸುಣ್ಣಲೇಪನವಾದ ಕಡೆಗಳಲ್ಲಿ ಹಿಂಭಾಗದ ನಕ್ಷೆಗಳು

ಸೂಕ್ಷ್ಮವಾಗಿ ಗೋಚರಿಸುತ್ತವೆ. ಈ ದೇವಾಲಯದ ಚಿತ್ರಗಳನ್ನು ಈ ಕೆಳಗಿನಂತೆ ವಿಂಗಡಿಸಿಕೊಂಡು ವಿವರಿಸಬಹುದು :

೧. ಒಳಗೋಡೆಯ ಚಿತ್ರಗಳು
೨. ಹೊರಗೋಡೆಯ ಚಿತ್ರಗಳು

*೧. ಒಳಗೋಡೆಯ ಚಿತ್ರಗಳು :* ದೇವಾಲಯದ ಒಳಗೋಡೆಯಲ್ಲಿ ವೃತ್ತಾಕಾರದ ನಕ್ಷೆಗಳು, ಹೂಬಳ್ಳಿಯ ವಿವಿಧ ರೂಪಗಳು. ವಿವಿಧ ಜ್ಯಾಮಿತಿಕ ವಿನ್ಯಾಸದ ಸುಳಿವುಗಳು ರಚಿತವಾಗಿವೆ. ಆದರೆ ಇವುಗಳ ಮೇಲೆ ಸುಣ್ಣ ಬಣ್ಣ ಸಾರಿಸಿ ಅಳಿಸಿ ಹಾಕಲಾಗಿದೆ. ಇಲ್ಲಿ ಕೃಷ್ಣ ಕಥೆಗಳಿಗೆ ಸಂಬಂಧಿಸಿದ ಚಿತ್ರಗಳೂ ಇದ್ದುದಾಗಿ ಸ್ಥಳೀಯರು ಹೇಳುತ್ತಾರೆ. ಆದರೆ ಅಂತಹ ಕುರುಹುಗಳು ಕಂಡುಬರುವುದಿಲ್ಲ.

*೨. ಹೊರಗೋಡೆಯ ಚಿತ್ರಗಳು :* ಹೊರಗೋಡೆಯಲ್ಲಿ ಸುತ್ತಲೂ ದಶಾವತಾರದ ಚಿತ್ರಗಳನ್ನು ರಚನೆಮಾಡಲಾಗಿದೆ. ದೇವಾಲಯದ ಎಡಗೋಡೆಯಲ್ಲಿ ನಾಲ್ಕು ಮತ್ತು ಬಲಗೋಡೆಯಲ್ಲಿ ನಾಲ್ಕು ಅವತಾರಗಳನ್ನು ಚಿತ್ರಿಸಿದ್ದರೆ ಹಿಂಬದಿಯ ಗೋಡೆಯ ಮೇಲೆ ಎರಡು ಅವತಾರಗಳ ಚಿತ್ರಗಳನ್ನು ರಚಿಸಲಾಗಿದೆ. ಬಲಬದಿಯ ಗೋಡೆಯಲ್ಲಿ ಮತ್ಸ್ಯ. ಕೂರ್ಮ. ವರಾಹ. ಪರುಶುರಾಮ. ಎಡಬದಿಯ ಗೋಡೆಯಲ್ಲಿ ರಾಮ. ಕೃಷ್ಣ, ಬುದ್ಧ, ಕಲ್ಕಿ ಅವತಾರದ ಚಿತ್ರಗಳು ರಚನೆಗೊಂಡಿವೆ. ಈ ಎಲ್ಲ ಚಿತ್ರಗಳು ಆಯತ ಇಲ್ಲವೇ ಚೌಕಾಕಾರದ ಮಂಟಪದಂತಹ ಸ್ಥಳವಿನ್ಯಾಸದಲ್ಲಿ ರಚನೆಯಾಗಿವೆ. ಮಂಟಪಾಕಾರದ ಮೇಲೆ ಕಳಶದ ವಿನ್ಯಾಸ ರೂಪಿಸಲಾಗಿದೆ. ಈ ಚಿತ್ರಗಳು ಹಳದೀಪುರದ ವೆಂಕರಮಣ ಮತ್ತು ಹೊನ್ನಾವರ ಮಾರುತಿ ದೇವಾಲಯದಲ್ಲಿ ರಚನೆಯಾದ ದಶಾವತಾರ ಚಿತ್ರಗಳಿಗೆ ಹೋಲಿಕೆಯಾಗುತ್ತವೆಯಲ್ಲದೇ ಜನಪದ ಶೈಲಿಯಲ್ಲಿ ರಚನೆಯಾಗಿವೆ. ಇಲ್ಲಿಯೂ ವಿಷ್ಣುವಿನ ಸೊಂಟದ ಮೇಲ್ಭಾಗ ಮಾನವಾಕಾರದಲ್ಲಿದೆ. ಎಲ್ಲ ಕಡೆಗೂ ನಾಲ್ಕು ಕೈಗಳನ್ನು ಹೊಂದಿದವನಾಗಿರುವ ಶ್ರೀಹರಿಯು ಖಡ್ಗ ಇಲ್ಲವೆ ಗದೆಯಿಂದ ರಾಕ್ಷಸರನ್ನು ಸಂಹರಿಸುತ್ತಿದ್ದಾನೆ. ಆದರೆ ರಾಮಾವತಾರದಲ್ಲಿ ಬಿಲ್ಲುಬಾಣಗಳಿಂದ ರಾವಣನನ್ನು ಸಂಹರಿಸುತ್ತಿದ್ದರೆ. ಪರುಶುರಾಮ ಅವತಾರದಲ್ಲಿ ಕೊಡಲಿಯು ಆಯುಧವಾಗಿದೆ. ಮತ್ಸ್ಯಾವತಾರ ಚಿತ್ರದ ಮೇಲಿನಭಾಗದಲ್ಲಿ ತೂಗುದೀಪ ಒಂದನ್ನು ಚಿತ್ರಸಲಾಗಿದ್ದು ಅಂದಿನ ದೀಪದ ವ್ಯವಸ್ಥೆ ತಿಳಿಯಬಹುದು. ಕೆಳಭಾಗದಲ್ಲಿ ನೀರನ್ನು ಚಿತ್ರಿಸಲಾಗಿದ್ದು ಅದರಲ್ಲಿ ಮೀನು, ಆಮೆಗಳಂತಹ ಜಲಚರಣಗಳನ್ನು ಚಿತ್ರಿಸಿದೆ. ಕೂರ್ಮಾವತಾರದಲ್ಲಿ ಕೂರ್ಮದ ಮೈಮೇಲೆ ಚುಕ್ಕೆಗಳಂತಹ ನಕ್ಷೆ ರಚಿಸಿ ನೈಜತೆಯನ್ನು ತರಲು ಪ್ರಯತ್ನಿಸಲಾಗಿದೆ. ವರಾಹ ಅವತಾರದ ಹಂದಿಯು ದೊಡ್ಡದಾಗಿದ್ದು ನೈಜತೆಗೆ ದೂರವಾಗಿದೆ. ಪರಶುರಾಮ ಅವತಾರದಲ್ಲಿ ಕೊಡಲಿಯನ್ನು ಆಯುಧವಾಗಿ ಹೊಂದಿದ ಶ್ರೀಹಿರಿಯು ಸಹಸ್ರಾರ್ಜುನನನ್ನು ಸಂಹರಿಸುತ್ತಿದ್ದಾನೆ. ರಾಮಾವತಾರ ಚಿತ್ರದಲ್ಲಿ ರಾಮನಿಗಿಂತ ರಾವಣನ ರೂಪವನ್ನು ಭವ್ಯವಾಗಿ ದೊಡ್ಡದಾಗಿ ಚಿತ್ರಸಲಾಗಿದ್ದು, ಆತನಿಗೆ ಒಂದು ಮುಖ ಇಪ್ಪತ್ತು ಕೈಗಳನ್ನು ರಚಿಸಲಾಗಿದೆ. ಕೃಷ್ಣಾವತಾರದ ಚಿತ್ರದಲ್ಲಿ ಕೃಷ್ಣನು ಕಂಸನನ್ನು ಕೊಲ್ಲುತ್ತಿರುವಂತೆ ಚಿತ್ರಿಸಿದೆ. ಒನ್ನೆಲೆಯಲ್ಲಿ ಬಲರಾಮನೂ ಚಿತ್ರಿಸಲ್ಪಟ್ಟಿದ್ದಾನೆ. ಬೌದ್ಧ ಅವತಾರದಲ್ಲಿ ಶ್ರೀಹರಿಯು ಪಂಢರಾಪುರದ ವಿಠಲನಹಾಗೆ ಟೊಂಕದಮೇಲೆ ಕೈಯಿಟ್ಟುಕೊಂಡಿದ್ದು ಪಕ್ಕದಲ್ಲಿ ರುಕ್ಮಿಣೀದೇವಿಯೂ ಅದೇ ವಿನ್ಯಾಸದಲ್ಲಿ ಜೊತೆಯಾಗಿ ನಿಂತಿದ್ದಾಳೆ. ಕಲ್ಕೀ ಅವತಾರದ ಚಿತ್ರವು ಹಳದೀಪುರದ ವೆಂಕಟರಮಣ ದೇವಾಲಯದಲ್ಲಿ ರಚನೆಯಾದ ವಿನ್ಯಾಸದಲ್ಲಿಯೇ ಚಿತ್ರಿಸಿದೆ. ಈ ಚಿತ್ರಗಳ ಮೂಲರೂಪ ತಿದ್ದುವಿಕೆಯಿಂದ ಹಾಳಾಗಿದ್ದು ಮಾತ್ರವಲ್ಲದೇ

ಚಿತ್ರಗಳು ರಚನೆಯಾಗಿರುವ ಮಂಟಪದ ಒಳಭಾಗಕ್ಕೆ ತೆಳುಹಳದೀ ವರ್ಣಲೇಪನಮಾಡಿ ಅವುಗಳ ಒಟ್ಟು ಅಂದವನ್ನೇ ಬದಲಾಯಿಸಲಾಗಿದೆ.

*X. ಗೋಪಾಲಕೃಷ್ಣ ದೇವಾಲಯ, ಸಿರಸಿ :* ಸಿರಸಿಯ ಮಾರಿಕಾಂಬಾ ದೇವಾಲಯದ ಸನಿಹದಲ್ಲಿಯೇ ಅದೇ ಮಾರ್ಗದಲ್ಲಿ ಸುಮಾರು ಐವತ್ತು ಗಜಗಳ ಅಂತರದಲ್ಲಿ ಈ ದೇವಾಲಯ ನಿರ್ಮಿಸಿದ್ದು ಇದು ಸುಮಾರು ನೂರಾಐವತ್ತು ವರ್ಷಗಳ ಹಿಂದೆ ಕಟ್ಟಲ್ಪಟ್ಟಿದೆ ಎಂಬುದಾಗಿ ತಿಳಿದುಬರುತ್ತದೆ.[೧೯೪] ಇಲ್ಲಿಯೂ ಕಾವಿ ಭಿತ್ತಿಚಿತ್ರಕಲೆ ರಚನೆಯಾಗಿದ್ದು ಅದರ ಮೇಲೆ ಆಧುನಿಕ ವಾರ್ನಿಸ್ ಬಣ್ಣ ಲೇಪನ ಮಾಡಲಾಗಿದೆ. ಇಲ್ಲಿ ಮನುಷ್ಯ, ಪ್ರಾಣಿ, ಪಕ್ಷಿಗಳಂತಹ ಯಾವುದೇ ಚಿತ್ರಗಳಿರದೇ ನಕ್ಷಾರೂಪದ ವಿನ್ಯಾಸಗಳಿವೆ. ಈ ನಕ್ಷಾವಿನ್ಯಾಸವು ಮೂರು ಬಗೆಯಲ್ಲಿದ್ದು, ಪಗ್ಗದ ಸುರುಳಿಯಂತಿರುವ ಸುಳುವಿನ ನಕ್ಷೆ. ಎಲೆಯ ಆಕಾರದ ಬಳ್ಳಿಯನಕ್ಷೆ, ಜೋಡುಗೆರೆಗಳ ಪುನಾರಾವರ್ತಿತರೂಪವಲ್ಲದೇ ಕಿಟಕಿಯ ಅಂಚುಗಳಿಗೆ ವೃತ್ತಾಕಾರದ ಹೂವಿನ ನಕ್ಷೆಗಳನ್ನು ರಚನೆಮಾಡಲಾಗಿದೆ. ಇಲ್ಲಿ ನಕ್ಷೆಗಳನ್ನು ಬಾಗಿಲುಗಳ ಅಂಚುಗಳಿಗೆ. ಕಂಬಗಳಿಗೆ ಕಿಟಕಿ ಮಾಡುಗಳ ಅಂಚುಗಳಿಗೆ ಗೋಡೆಯ ಅಂಚುಗಳಿಗೆ ಮತ್ತು ಗೋಡೆಯ ತೊಲೆಗಳ ಮೇಲೆ ರಚನೆಮಾಡಲಾಗಿದೆ.

*XI. ಲಕ್ಷ್ಮೀ ವೆಂಕಟೇಶ ದೇವಾಲಯ, ಗೇರುಸೊಪ್ಪಾ :* ಉತ್ತರ ಕನ್ನಡ ಜಿಲ್ಲೆಯ ಗೇರುಸೊಪ್ಪದಲ್ಲಿನ ಲಕ್ಷ್ಮೀವೆಂಕಟೇಶ ದೇವಾಲಯದಲ್ಲಿ ಕಾವಿ ಭಿತ್ತಿಚಿತ್ರಗಳು ರಚನೆಯಾಗಿವೆ. ಇಲ್ಲಿಯ ಭಿತ್ತಿಚಿತ್ರಗಳ ಕುರಿತು[೧೯೫] ಸ್ಥೂಲವಾಗಿ ಅಧ್ಯಯನಮಾಡಲಾಗಿದೆ. ಈ ದೇವಾಲಯದಲ್ಲಿ ಹೊರಗೋಡೆ ಮತ್ತು ಒಳಗೋಡೆಗಳು ಚಿತ್ರಗಳಿಂದ ತುಂಬಿಕೊಂಡಿವೆ. ಈ ದೇವಾಲಯದ ಚಿತ್ರಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು.

೧. ಹೊರಗೋಡೆಯ ಚಿತ್ರಗಳು

೨. ಒಳಗೋಡೆಯ ಚಿತ್ರಗಳು

*೧. ಹೊರಗೋಡೆಯ ಚಿತ್ರಗಳು :* ಹೊರಗೋಡೆಯಲ್ಲಿ ಸುತ್ತಲೂ ಪಟ್ಟಿಕೆಗಳನ್ನು ಮಾಡಿಕೊಂಡು ಚಿತ್ರರಚಿಸಲಾಗಿದೆ. ಗರ್ಭಗೃಹದ ಬಾಗಿಲಿನ ಎಡಬಲಗಳಲ್ಲಿ ಜಯವಿಜಯರ ಚಿತ್ರಗಳನ್ನು ಚಿತ್ರಿಸಿದೆ. ಉಳಿದಂತೆ ಗೋಡೆಯ ಸುತ್ತಲೂ ಇರುವ ಚಿತ್ರಗಳೆಂದರೆ ಬಲಭಾಗದ ಗೋಡೆಯಿಂದ ಬಲಗಡೆಗೆ ಮೊದಲ ಚಿತ್ರ :

I. ಕರ್ಣಾರ್ಜುನರ ಯುದ್ಧದ ದೃಶ್ಯ : ಇದರಲ್ಲಿ ಅರ್ಜುನನ ಸಾರಥಿಯಾಗಿ ಕೃಷ್ಣನು, ಕರ್ಣನ ಸಾರಥಿಯಾಗಿ ಶಲ್ಯನು ರಥದಲ್ಲಿ ಕುಳಿತಿದ್ದಾರೆ. ಅರ್ಜುನನ ರಥದ ಧ್ವಜದಲ್ಲಿ ಆಂಜನೇಯನು ಚಿತ್ರಿಸಲ್ಪಟ್ಟಿದ್ದಾನೆ. ಕರ್ಣನು ಅರ್ಜುನನಿಗೆ ಸರ್ಪಾಸ್ತ್ರ ಪ್ರಯೋಗಿಸುತ್ತಿದ್ದು ಶಲ್ಯನು ಏನೋ ಸೂಚನೆ ಕೊಡುತ್ತಿದ್ದಾನೆ. ಎದುರಿಗೆ ಇರುವ ಪಟ್ಟಿಕೆಯಲ್ಲಿ ಕೃಷ್ಣನು ಸರ್ಪಾಸ್ತ್ರದಿಂದ ಅರ್ಜುನನನ್ನು ತಪ್ಪಿಸುವ ಪ್ರಯತ್ನದಲ್ಲಿದ್ದಾನೆ. ಈ ಚಿತ್ರದಲ್ಲಿ ಕರ್ಣನ ಉಡುಪು ವೇಷ ಭೂಷಣಗಳು ಕರಾವಳಿ ಭಾಗದ ಬೆಸ್ತರನ್ನು ಹೋಲುತ್ತವೆ ಎನ್ನುವುದು ಗಮನಾರ್ಹ.

---

೧೯೪. ಜಿ. ಸುಬ್ರಾಯಭಟ್ : ಶಿರಸಿ ಶಹರದರ್ಶನ, ಪುಟ ೩೭

೧೯೫. ವಿವರಗಳಿಗೆ ನೋಡಿ : ಡಾ. ಬೆಂ. ಶಾ. ಶ್ಯಾಮಲಾ ರತ್ನಕುಮಾರಿ : ಇತಿಹಾಸದರ್ಶನ (ಸಂಪುಟ ೧೩) ಪುಟ ೧೭೯

II. ಕಮಲದ ಹೂವಿನ ಚಿತ್ರ : ಕರ್ಣಾರ್ಜುನರ ಯುದ್ಧ ದೃಶ್ಯದ ಪಕ್ಕದಲ್ಲಿ ಒಂದು ಪಟ್ಟಿಕೆಯಲ್ಲಿ ಕಮಲದ ಹೂವಿನ ದೊಡ್ಡ ಚಿತ್ರವಿದೆ. ಅರಳಿಕೊಂಡಿರುವ ಹೂವಿನ ಪಕಳೆಗಳು ಕೆಳಬಾಗಿಕೊಂಡಿವೆ. ಎಲೆಗಳು, ಹೂವಿನ ಕೆಳಭಾಗದ ದೇಟು ರಚಿಸಿದಲ್ಲದೇ ಅಂಕಣದ ಸುತ್ತಲೂ ಹೂವಿನ ನಕ್ಷೆಯನ್ನು ಚಿತ್ರಿಸಲಾಗಿದೆ.

III. ರಾಜರಾಣಿಯರ ಚಿತ್ರ : ಒಂದು ಅಂಕಣದಲ್ಲಿ ಪೀಠವೊಂದರ ಮೇಲೆ ಕುಳಿತರಾಜನಿದ್ದು ಆತ ಕಿರೀಟ ಧರಿಸಿದ್ದು. ವಸ್ತ್ರಾಭರಣಗಳಿಂದ ಶೋಭಿತನಾಗಿದ್ದಾನೆ. ಆತನ ಎದುರಿಗೆ ಸಾಧಾರಣ ಉಡುಗೆಯಲ್ಲಿರುವ ಸೇವಕನೊಬ್ಬನು ದಂಡಹಿಡಿದುಕೊಂಡು ರಾಜನಿಗೆ ಏನನ್ನೋ ನಿವೇದಿಸುತ್ತಿದ್ದಾನೆ. ಇವರ ಪಕ್ಕದಲ್ಲಿ ಸ್ತ್ರೀಯರ ಗುಂಪು ಇದ್ದ ಇವರಲ್ಲಿ ರಾಣಿಯೊಬ್ಬಳು ಅಲಂಕರಿಸಿಕೊಳ್ಳುತ್ತಿದ್ದು ಉಳಿದ ಸ್ತ್ರೀಯರು ಅವಳಿಗೆ ಸಹಾಯ ಮಾಡುತ್ತಿದ್ದಾರೆ.

IV. ನರಸಿಂಹನ ಚಿತ್ರ : ದಾನವರಾಜ ಹಿರಣ್ಯಕಶ್ಯಪನನ್ನು ಸಂಹರಿಸುತ್ತಿರುವ ನರಸಿಂಹನು ಉಗ್ರವಾಗಿ ಕಂಡುಬರುತ್ತಾನೆ. ನರಸಿಂಹನು ಸೀಳಿಬಂದ ಕಂಬವನ್ನು ಇಲ್ಲಿ ಸಾಂಕೇತಿಕವಾಗಿ ಚಿತ್ರಣಮಾಡಲಾಗಿದ್ದು, ಆತನ ಹಿನ್ನೆಲೆಯಲ್ಲಿ ಅಲಂಕಾರಿಕವಾದ ಹೂಬಳ್ಳಿಯ ಮಂಟಪ ಚಿತ್ರಿಸಿದೆ. ನರಸಿಂಹನ ಎಡಬಲಗಳಲ್ಲಿ ಎರಡು ವೃತ್ತಾಕಾರದ ನಕ್ಷೆಗಳು ರಚನೆಯಾಗಿವೆ.

V. ಅರ್ಜುನ ಸುಧನ್ವರ ಯುದ್ಧ : ಕುರುಕ್ಷೇತ್ರ ಯುದ್ಧದನಂತರ ಧರ್ಮರಾಜನು ಅಶ್ವಮೇಧಯಾಗ ಮಾಡಲು ತೊಡಗಿದಾಗ ಯಾಗದ ಕುದುರೆಯನ್ನು ಕಟ್ಟಿದ ಸುಧನ್ವನು ಅರ್ಜುನನ ಜೊತೆಯುದ್ಧ ಮಾಡುತ್ತಾನೆ. ಈ ಚಿತ್ರದಲ್ಲಿ ಅರ್ಜುನ ಸುಧನ್ವರು ಪರಸ್ಪರ ಬಿಲ್ಲುಬಾಣಗಳಿಂದ ಕಾದಾಡುತ್ತಿದ್ದು ಹಿನ್ನೆಲೆಯಲ್ಲಿ ಗಿಡಗಳು ಹೂಬಳ್ಳಿಯ ನಕ್ಷೆಗಳು ರಚಿಸಿವೆ.

VI. ಅರ್ಜುನ ತಾಮ್ರಧ್ವಜರ ಯುದ್ಧ : ಅಶ್ವಮೇಧಯಾಗದ ಕುದುರೆಯನ್ನು ಕಟ್ಟಿದಾಗ ಸುಧನ್ವನ ಜೊತೆ ಅರ್ಜುನನು ಹೋರಾಡುವಂತೆ ತಾಮ್ರಧ್ವಜನ ವಿರುದ್ಧವೂ ಹೋರಾಡುತ್ತಾನೆ. ಈ ದೃಶ್ಯದಲ್ಲಿಯೂ ತಾಮ್ರಧ್ವಜ ಮತ್ತು ಅರ್ಜುನ ಇಬ್ಬರೂ ಬಿಲ್ಲು ಬಾಣಗಳನ್ನು ಬಳಸಿ ಕಾದಾಡುತ್ತಿದ್ದು, ನೆಲದ ಮೇಲೆಯೇ ನಿಂತು ಯುದ್ಧಕ್ಕೆ ತೊಡಗಿದ್ದಾರೆ. ಹಿನ್ನೆಲೆಯಲ್ಲಿ ಗಿಡಮರಗಳು, ಹೂ ಬಳ್ಳಿಯ ನಕ್ಷೆಗಳು ರಚನೆಯಾಗಿವೆ.

VII. ದಾನವರಾಜನ ಚಿತ್ರ : ಒಂದು ಚಿತ್ರ ಪಟ್ಟಿಕೆಯಲ್ಲಿ ದಾನವರಾಜನೊಬ್ಬ ಗುರುಶುಕ್ರಾಚಾರ್ಯರಿಂದ ಆಶೀರ್ವಾದ ಪಡೆಯುತ್ತಿದ್ದಾನೆ. ಎಡಗೈಯಲ್ಲಿ ಬಿಲ್ಲು ಬಲಗೈಯಲ್ಲಿ ಖಡ್ಗಹಿಡಿದ ದಾನವನು ಮಂಡೆಯೂರಿ ಕುಳಿತುನಮಿಸುತ್ತಿದ್ದು ಗುರುಶುಕ್ರಾಚಾರ್ಯನು ಆಶೀರ್ವಾದ ಮಾಡಿ ಬಾಣಒಂದನ್ನು ದಯಪಾಲಿಸುತ್ತಿದ್ದಾನೆ. ಇವರ ಪಕ್ಕದಲ್ಲಿ ಗುರುವಿನಿಂದ ಆಶೀರ್ವಾದ ಪಡೆದ ದಾನವರಾಜ ಬಿಲ್ಲು, ಬಾಣ, ಖಡ್ಗ, ಯುದ್ಧಕವಚಗಳನ್ನು ಧರಿಸಿ ದೇವತೆಗಳ ಮೇಲೆ ಯುದ್ಧಕ್ಕೆ ಹೊರಟಿದ್ದಾನೆ.

*೨. ಒಳಗೋಡೆಯ ಚಿತ್ರಗಳು :* ಹೊರಗೋಡೆಯಲ್ಲಿರುವಂತೆ ಒಳಗೋಡೆಯಲ್ಲಿಯೂ ವಿವಿಧ ಬಗೆಯ ಚಿತ್ರಗಳು ರಚಿಸಿವೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಬಹುದು :

I. ವಿಷ್ಣುವನ್ನು ಹೊತ್ತುಕೊಂಡಿರುವ ಗರುಡ : ವಿಷ್ಣುವನ್ನು ಹೊತ್ತಿರುವ ಗರುಡನು ಸಂಪೂರ್ಣ ಮಾನವರೂಪಿನಲ್ಲಿದ್ದು ಮೂಗು ಮಾತ್ರ ಹದ್ದಿನ ಹಾಗೆ ಚೂಪಾಗಿ ಚಿತ್ರಿಸಿದೆ. ಬಲಗೈಯಲ್ಲಿ ಹಾವನ್ನು ಹಿಡಿದಿದ್ದು. ಎಡಗೈಯಿಂದ ಬೆನ್ನ ಮೇಲೆ ಕುಳಿತ ವಿಷ್ಣುವನ್ನು ಬಳಸಿ ಹಿಡಿದ್ದಾನೆ. ಬೆನ್ನಿಗೆ ರೆಕ್ಕೆಗಳನ್ನು ಚಿತ್ರಿಸಲಾಗಿದ್ದು ಅವುಗಳ ಒಳಭಾಗದಲ್ಲಿ ನಕ್ಷೆಯನ್ನು ರೂಪಿಸಲಾಗಿದೆ. ನಾಲ್ಕು ಕೈಗಳನ್ನು ಚಿತ್ರಿಸಲಾಗಿದ್ದು, ಅವುಗಳ ಒಳಭಾಗದಲ್ಲ ನಕ್ಷೆಯನ್ನು ರೂಪಿಲಸಲಾಗಿದೆ. ನಾಲ್ಕು ಕೈಗಳನ್ನು ಹೊಂದಿದ ವಿಷ್ಣುವು ಎರಡು ಕೈಗಳಲ್ಲಿ ಶಂಖಚಕ್ರಗಳನ್ನು ಹಿಡಿದುಕೊಂಡಿದ್ದರೆ. ಒಂದು ಕೈಯಿಂದ ಗರುಡನಿಗೆ ನಿರ್ದೇಶನ ಕೊಡುತ್ತಿದ್ದಾನೆ. ಚಿತ್ರವು ಮಂಟಪದ ಆಕಾರದಲ್ಲಿ ರಚಿಸಿದ್ದು ಕೆಳಭಾಗದಲ್ಲಿ ಪೀಠವನ್ನು ರಚಿಸಲಾಗಿದೆ.

II. ರಾಮನನ್ನು ಹೊತ್ತುಕೊಂಡಿರುವ ಆಂಜನೇಯ : ಆಂಜನೇಯನು ಶ್ರೀರಾಮನನ್ನು ತನ್ನ ಹೆಗಲ ಮೇಲೆ ಹೊತ್ತುಕೊಂಡು ಹಾರುತ್ತಿದ್ದಾನೆ. ರಾಮನು ಕೈಯಲ್ಲಿ ಬಿಲ್ಲು ಬಾಣಗಳನ್ನು ಹಿಡಿದುಕೊಂಡು ಬೃಹದಾಕಾರದಲ್ಲಿ ರಚನೆಯಾಗಿದ್ದರೆ. ಆಂಜನೇಯನು ಚಿಕ್ಕ ಆಕಾರದಲ್ಲಿದ್ದಾನೆ. ಆಂಜನೇಯನು ಒಂದು ಕೈಯಿಂದ ರಾಮನನ್ನು ಬಳಸಿಹಿಡಿದಿದ್ದು ಇನ್ನೊಂದು ಕೈಯಿಂದ ಆತನ ಪಾದವನ್ನು ಹಿಡಿದುಕೊಂಡಿದ್ದಾನೆ. ಆತನ ಬಾಲವು ಅಲಂಕಾರಿಕ ವಿನ್ಯಾಸದಲ್ಲಿದ್ದು ತುದಿಯಲ್ಲಿ ಗಂಟೆಯನ್ನು ಕಟ್ಟಲಾಗಿದೆ. ಈ ಚಿತ್ರದ ಕೆಳಭಾಗದಲ್ಲಿ ಒಂದು ವೃತ್ತಾಕರದ ನಕ್ಷೆಯನ್ನು ಚಿತ್ರಿಸಿದ್ದರೆ ಮೇಲ್ಭಾಗದಲ್ಲಿ ತೂಗುದೀಪವನ್ನು (ಗೋಳಾಪು) ಚಿತ್ರಿಸಲಾಗಿದೆ.

III. ಬೃಹನ್ನಳೆ : ಅಜ್ಞಾತವಾಸದಲ್ಲಿರುವ ಪಾಂಡವರು ಬೇರೆ ಬೇರೆ ವೇಷಧರಿಸಿದಾಗ ಅರ್ಜುನನು ಬೃಹನ್ನಳೆಯ ವೇಷಧರಿಸುತ್ತಾನೆ. ಚಿತ್ರದಲ್ಲಿ ಸ್ತ್ರೀ ವೇಷಧಾರಿಯಾದ ಅರ್ಜುನನು ಎಡಗೈಯಲ್ಲಿ ಬಿಲ್ಲು, ಬಲಗೈಯಲ್ಲಿ ಬಾಣ ಹಿಡಿದುಕೊಂಡಿರುವನು. ಕಚ್ಚೆಹಾಕಿ ಉಟ್ಟುಕೊಂಡ ಸೀರೆ, ಚುಕ್ಕೆಯ ವಿನ್ಯಾಸದ ಕುಪ್ಪಸಗಳು, ಮೂಗಿನಲ್ಲಿರುವ ಮೂಗುತಿ, ತಲೆಗೂದಲನ್ನು ತುರುಬಾಗಿ ಕಟ್ಟಿರುವುದು ಸ್ತ್ರೀ ವೇಷವನ್ನು ಪ್ರತಿನಿಧಿಕರಿಸಿದರೆ, ದಷ್ಟಪುಷ್ಟವಾದ ಕೈಕಾಲುಗಳು, ಕಟ್ಟುಮಸ್ತಾದ ಮೈಕಟ್ಟು, ಜಟ್ಟಿಯಂತಿರುವ ಆತನ ರೂಪ ಪುರುಷನ ಲಕ್ಷಣಗಳನ್ನು ಒಳಗೊಂಡಿದೆ. ಚಿತ್ರದ ಸುತ್ತಲೂ ಹೂಬಳ್ಳಿಯನಕ್ಷೆ ಜ್ಯಾಮಿತಿಕ ಅಲಂಕಾರದ ನಕ್ಷೆಗಳನ್ನು ರಚಿಸಲಾಗಿದೆ.

IV. ಹಂಸಧ್ವಜನ ಚಿತ್ರ : ಒಂದು ಪಟ್ಟಿಕೆಯಲ್ಲಿ ಹಂಸಧ್ವಜ ಮತ್ತು ಆತನ ಪುತ್ರನನ್ನು ಚಿತ್ರಿಸಲಾಗಿದೆ. ಇಬ್ಬರೂ ಜೊತೆಯಾಗಿ ನಿಂತಿದ್ದು ಕಿರೀಟಧಾರಿಗಳಾಗಿದ್ದಾರಲ್ಲದೇ ಬಿಲ್ಲು, ಬಾಣ, ಖಡ್ಗ, ಯುದ್ಧಕವಚಗಳನ್ನು ಧರಿಸಿಕೊಂಡು ನಿಂತಿದ್ದಾರೆ. ಚಿತ್ರಗಳ ಹಿನ್ನಲೆಯಲ್ಲಿ ಅಲಂಕಾರಿಕ ಮಂಟಪಗಳನ್ನು ರಚನೆ ಮಾಡಲಾಗಿದೆ. ಅದರ ಸುತ್ತಲೂ ಹೂಬಳ್ಳಿಯ ನಕ್ಷೆಇರುವುದು.

V. ಭೀಮದ್ರೌಪದಿಯ ಚಿತ್ರ : ಅರಣ್ಯವಾಸದಲ್ಲಿ ದ್ರೌಪದಿಯು ಸೌಗಂಧಿಕ ಪುಷ್ಪವನ್ನು ಅಪೇಕ್ಷಿಸಿದಾಗ ಭೀಮನು ತಂದುಕೊಡುತ್ತಾನೆ. ಚಿತ್ರದಲ್ಲಿ ಭೀಮನು ಸೌಗಂಧಿಕ ಪುಷ್ಪವನ್ನು ತಂದು ದ್ರೌಪದಿಗೆ ಕೊಡುತ್ತಿರುವ ದೃಶ್ಯವಿದೆ. ಭೀಮನು ಬೃಹದಾಕಾರದಲ್ಲಿ, ದ್ರೌಪದಿಯು ಚಿಕ್ಕಪ್ರಮಾಣದಲ್ಲಿ ಚಿತ್ರಿಸಲ್ಪಟ್ಟಿದ್ದಾರೆ. ಭೀಮನ ಎಡಗೈಯಲ್ಲಿ ಗಧೆಯನ್ನು ಹಿಡಿದುಕೊಂಡಿದ್ದು, ಬಲಗೈಯಲ್ಲಿ ಸೌಗಂಧಿಕ ಪುಷ್ಪವನ್ನು ಹಿಡಿದಿದ್ದಾನೆ. ದ್ರೌಪದಿಯ ಕೈಯಲ್ಲಿಯೂ ಒಂದು ಚಿಕ್ಕ ಹೂವನ್ನು ಚಿತ್ರಿಸಲಾಗಿದೆ. ಭೀಮನು ಕಿರೀಟವು ವೃತ್ತಾಕಾರದಲ್ಲಿದ್ದು ಅದರಲ್ಲಿ ಸಮಾನಾಂತರ ಅಡ್ಡಗೆರೆಗಳನ್ನು ರಚಿಸಲಾಗಿದೆ. ಹಿನ್ನಲೆಯಲ್ಲಿ ಅಲಂಕಾರಿಕ ಮಂಟಪವಿದ್ದು ಸುತ್ತಲೂ ಹೂಬಳ್ಳಿಯ ನಕ್ಷಾಚಿತ್ರಣವಿದೆ.

VI. ಪ್ರಭಾವತಿ ಸುಧನ್ವರ ಚಿತ್ರ : ಈ ಚಿತ್ರದಲ್ಲಿ ಸುಧನ್ವನು ಪ್ರಭಾವತಿಯ ಹೆಗಲ ಮೇಲೆ ಕೈಹಾಕಿ ಅವಳನ್ನು ಅಪ್ಪಿಹಿಡಿದಿದ್ದಾನೆ. ಪ್ರಭಾವತಿಯ ಹಿಂದೆ ನಿಂತ ಪೇಟಾಧರಿಸಿದ ವ್ಯಕ್ತಿಯೊಬ್ಬ ಆಶೀರ್ವಾದ ಮಾಡುತ್ತಿದ್ದಾನೆ. ಇದು ಸುಧನ್ವ ಪ್ರಭಾವತಿಯರ ಮದುವೆ ದೃಶ್ಯವಾಗಿರಬಹುದು. ಸುಧನ್ವ ಧರಿಸಿದ ಕಿರೀಟವು ವಿಶಿಷ್ಟವಾಗಿದ್ದು ಬುಟ್ಟಿಯಹಾಗೆ ಕಂಡಬರುತ್ತದೆ. ಚಿತ್ರದ ಹಿನ್ನೆಲೆಯಲ್ಲಿ ಗಿಳಿ, ಹೂಬಳ್ಳಿಗಳು ತೂಗುದೀಪ ಚಿತ್ರಿಸಿದೆ.

VII. ಕಾಳಿಂಗಮರ್ದನ ಕೃಷ್ಣ : ಈ ಚಿತ್ರದಲ್ಲಿ ಕೃಷ್ಣನು ಕಾಳಿಂಗನನ್ನು ಕಾಲಿನಿಂದ ಮೆಟ್ಟಿ ಸಂಹರಿಸುತ್ತಿದ್ದಾನೆ. ಎರಡು ಕೈಗಳನ್ನು ಹೊಂದಿದ ಕೃಷ್ಣನು ಎಡಗೈಯಿಂದ ಕಾಳಿಂಗ ಸರ್ಪದ ಬಾಲಹಿಡಿದುಕೊಂಡಿದ್ದು ಬಲಗೈಯಿಂದ ಮುಷ್ಟಿಪ್ರಹಾರ ಮಾಡುತ್ತಿದ್ದಾನೆ. ಒಂದು ಕಾಲನ್ನು ಅದರ ದೇಹದ ಮೇಲೆ ಇಟ್ಟು ಇನ್ನೊಂದು ಕಾಲಿನಿಂದ ಕಾಳಿಂಗದ ಹೆಡೆಯನ್ನು ತುಳಿಯುತ್ತಿದ್ದಾನೆ. ಕೆಳಭಾಗದಲ್ಲಿ ಎರಡು ವೃತ್ತಾಕಾರದ ನಕ್ಷೆಗಳು ರಚಿಸಿದ್ದರೆ ಮೇಲೆ ಮೂರು ವೃತ್ತದ ನಕ್ಷೆಗಳು ಹಾಗೂ ಹೂ ಬಳ್ಳಿಯ ಅಲಂಕಾರಿಕ ವಿನ್ಯಾಸಗಳು ರಚಿಸಿವೆ. ಈ ಚಿತ್ರ ಹೊನ್ನಾವರದ ಶ್ರೀರಾಮಮಂದಿರದ ಕಾಳಿಂಗಮರ್ದನ ಕೃಷ್ಣನ ಚಿತ್ರಕ್ಕೆ ಹೆಚ್ಚಾಗಿ ಹೋಲಿಕೆಯಾಗುತ್ತದೆ.

VIII. ಬಲಿಚಕ್ರವರ್ತಿಯ ಚಿತ್ರ : ಈ ಚಿತ್ರದಲ್ಲಿ ದಾನಕೇಳಲು ಬಂದ ವಾಮನನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ತಾನು ಕೆಳಗೆ ಕೈಮುಗಿದು ನಿಂತ ಬಲಿಚಕ್ರವರ್ತಿಯನ್ನು ಚಿತ್ರಿಸಲಾಗಿದೆ. ಬಿಲ್ಲು, ಬಾಣ, ಧರಿಸಿ ಕಿರೀಟವಿಟ್ಟುಕೊಂಡು ಸಕಲವೇಷಭೂಷಣಗಳಿಂದ ಶೋಭಿಸುತ್ತಿರುವ ಬಲಿಚಕ್ರವರ್ತಿಯು ವಾಮನನ ಮುಂದೆ ಅಂಜಲೀಬದ್ಧನಾಗಿ ನಿಂತಿದ್ದಾನೆ. ಚಿತ್ರದ ಹಿನ್ನೆಲೆಯಲ್ಲಿ ಅಲಂಕಾರಿಕ ಮಂಟಪದ ವಿನ್ಯಾಸವಿದ್ದು ಸುತ್ತಲೂ ಹೂಬಳ್ಳಿಯ ನಕ್ಷೆ ರಚಿಸಿದೆ. ಮೇಲ್ಭಾಗದಲ್ಲಿ ತೂಗುದೀಪವನ್ನು ಚಿತ್ರಿಸಿದ್ದು ಕೆಳಗಡೆಗೆ ಪೀಠವನ್ನು ಚಿತ್ರಿಸಲಾಗಿದೆ.

IX. ಸರಸ್ವತಿಯ ಚಿತ್ರ : ನವಿಲಿನ ಮೇಲೆ ಕುಳಿತ ಸರಸ್ವತಿಯು ವೀಣೆ ನುಡಿಸುತ್ತಿರುವಂತೆ ಚಿತ್ರಿಸಿದೆ. ನವಿಲಿನ ಮೈ ಮೇಲಿನ ಅಲಂಕಾರಿಕ ನಕ್ಷಾವಿನ್ಯಾಸವು ಅತ್ಯಂತ ಸೂಕ್ಷ್ಮವಾಗಿದ್ದು, ಜ್ಯಾಮಿತಿಕ ರೂಪದಲ್ಲಿದೆ. ಸರಸ್ವತಿಯ ಹಿನ್ನೆಲೆಯಲ್ಲಿ ನವಿಲಿನ ಗರಿಗಳನ್ನೆ ಪ್ರಭಾವಳಿಯಂತೆ ವೃತ್ತಾಕರದಲ್ಲಿ ರಚಿಸಲಾಗಿದೆ. ಸರಸ್ವತಿದೇವಿಯು ಧರಿಸಿದ ವಸ್ತ್ರಗಳು ನಕ್ಷೆಯಿಂದ ಅಲಂಕರಸಲ್ಪಟ್ಟಿವೆಯಲ್ಲದೇ ಮೂಗುತಿ, ಕೊರಳಸರ, ಕೈಬಳೆಗಳು ಮತ್ತು ಇತರ ಆಭರಣಗಳು ಶೈಲೀಕೃತವಾಗಿ ರಚಿಸಿವೆ. ಗೇರುಸೊಪ್ಪಾದ ಈ ಚಿತ್ರಗಳು ಹೊನ್ನಾವರದ ಶ್ರೀರಾಮ ಮಂದಿರದ ಚಿತ್ರಗಳಿಗೆ ಸಮೀಪವಾಗಿವೆ.

***XII. ಲಕ್ಷ್ಮೀವೆಂಕಟೇಶ ದೇವಾಲಯ, ಹೊಸಾಡ :*** ಉತ್ತರ ಕನ್ನಡ ಜಿಲ್ಲೆಯ ಹೊಸಾಡದಲ್ಲಿರುವ ಲಕ್ಷ್ಮೀವೆಂಕಟರಮಣ ದೇವಾಲಯದಲ್ಲಿ ಕಾವಿಚಿತ್ರಕಲೆ ಕಂಡು ಬರುತ್ತದೆ. ಇಲ್ಲಿನ ದೇವಾಲಯಲ್ಲಿ ದೇವಾಲಯದ ಹೊರಭಾಗ ಮತ್ತು ಒಳಭಾಗದ ಗೋಡೆಗಳಲ್ಲಿ ಚಿತ್ರರಚನೆಯಾಗಿದ್ದು ಅದನ್ನು ಈ ಕೆಳಗಿನಂತೆ ವಿಂಗಡಿಸಬಹುದು.

೧. ಹೊರಗೋಡೆಯ ಚಿತ್ರಗಳು

೨. ಒಳಗೋಡೆಯ ಚಿತ್ರಗಳು

***೧. ಹೊರಗೋಡೆಯ ಚಿತ್ರಗಳು :*** ಹೊರಗೋಡೆಯಲ್ಲಿ ಸಾಲಾಗಿ ಪಟ್ಟಿಕೆಗಳನ್ನು ಮಾಡಿಕೊಂಡು ವಿಷ್ಣುವಿನ ದಶಾವತಾರ ಚಿತ್ರಗಳನ್ನು ರಚನೆಮಾಡಲಾಗಿದೆ. ಒಂದೊಂದು ಅಂಕಣದಲ್ಲಿ ಒಂದೊಂದು ಚಿತ್ರಗಳನ್ನು

ರಚಿಸಲಾಗಿದ್ದು. ಪರಶುರಾಮ ಅವತಾರ ಮತ್ತು ರಾಮಾವತಾರ ಚಿತ್ರಗಳಿಗಾಗಿ ಎರಡು ಅಂಕಣ ಬಳಸಿಕೊಳ್ಳಲಾಗಿದೆ. ಉಳಿದಂತೆ ಈ ಚಿತ್ರಗಳು ಇತರೆಡೆಯ ದಶಾವತಾರ ಚಿತ್ರಗಳಂತೆ ಇವೆ. ಆದರೆ ಶೈಲಿಯಲ್ಲಿ ಇವು ಗೇರುಸೊಪ್ಪದಲ್ಲಿನ ಲಕ್ಷ್ಮೀ ವೆಂಕಟೇಶ ದೇವಾಲಯಗಳ ಚಿತ್ರಗಳನ್ನು ಹೋಲುತ್ತವೆ.

*೨. ಒಳಗೋಡೆಯ ಚಿತ್ರಗಳು :* ಒಳಗೋಡೆಯಲ್ಲಿ ಕಾಳಿಂಗ ಮರ್ದನ ಕೃಷ್ಣ, ಸರಸ್ವತಿ, ಲಕ್ಷ್ಮೀ, ಗಣಪತಿ, ಆಂಜನೇಯ, ಗರುಡ, ವಿಜಯವಿಜಯರ ಚಿತ್ರಗಳನ್ನು ರಚಿಸಲಾಗಿದ್ದು ಈ ಚಿತ್ರಗಳು ಸಹಿತ ಗೇರುಸೊಪ್ಪಾದ ಚಿತ್ರಗಳನ್ನು ಹೋಲುತ್ತವೆ. ಈ ಚಿತ್ರಗಳನ್ನು ಮಂಟಪದಂತಹ ವಿನ್ಯಾಸಗಳಲ್ಲಿ ರಚನೆಮಾಡಲಾಗಿದ್ದು, ಮಂಟಪದ ಮೇಲೆ ಕಳಶಗಳಂತಹ ಸುಳುವಿನ ನಕ್ಷೆ ರೂಪಿಸಲಾಗಿದೆ. ಚಿತ್ರಮಂಟಪದ ಸುತ್ತಲೂ ಹೂಬಳ್ಳಿಯ ನೈಜರೂಪಗಳು, ಜ್ಯಾಮಿತಿಕ ಅಲಂಕರಣಗಳು. ಪ್ರತಿಯೊಂದು ಚಿತ್ರಪಟ್ಟಿಕೆಯ ಕೆಳಭಾಗದಲ್ಲಿ ಪೀಠಗಳು ಚಿತ್ರಿಸಿದ್ದು ಕಂಡು ಬರುವುದು.

## ೨. ಈಶ್ವರ ದೇವಾಲಯಗಳು (ಶೈವ ಸಂಬಂಧಿ ದೇವಾಲಯಗಳು)

ಉತ್ತರ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಕಾವಿಭಿತ್ತಿಚಿತ್ರರಚನೆಯಾದ ಈಶ್ವರ ದೇವಾಲಯಗಳು ಈ ಕೆಳಗಿನಂತಿವೆ :

I. ಶಂಭುಲಿಂಗೇಶ್ವರ ದೇವಾಲಯ, ಗುಣವಂತೆ

II. ಈಶ್ವರ ದೇವಾಲಯ ಬಾಳೇಗದ್ದೆ

**I. ಶಂಭುಲಿಂಗೇಶ್ವರ ದೇವಾಲಯ, ಗುಣವಂತೆ :** ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿನ ಗುಣವಂತೆಯು ಪುಣ್ಯಕ್ಷೇತ್ರವಾಗಿದೆ. ಹೊನ್ನಾವರದಿಂದ ಸುಮಾರು ಹದಿನೈದು ಕಿ. ಮಿ. ಗಳ ಅಂತರದಲ್ಲಿರುವ ಈ ಕ್ಷೇತ್ರದಲ್ಲಿ ಪುರಾತನವಾದ ಶಂಭುಲಿಂಗೇಶ್ವರ ದೇವಾಲಯವಿದ್ದು, ಅದರಲ್ಲಿ ಕಾವಿ ಭಿತ್ತಿಚಿತ್ರರಚನೆ ಕಂಡುಬರುತ್ತದೆ. ಇಲ್ಲಿನ ಚಿತ್ರಗಳಿಗೆ ಯಾವುದೇ ಆಧುನಿಕ ವರ್ಣಲೇಪನಮಾಡದೇ ಮೂಲಸ್ವರೂಪದಲ್ಲಿ ಉಳಿದುಬಂದಿವೆ. ಇಲ್ಲಿನ ಚಿತ್ರಗಳು ಎರಡು ಶೈಲಿಯನ್ನು ಬಿಂಬಿಸುತ್ತಿದ್ದು, ವೃತ್ತಾಕಾರದ ನಕ್ಷೆಗಳು ಶಿಷ್ಟಸಂಪ್ರದಾಯವನ್ನು ಅನುಸರಿಸಿದಂತೆ ಇದ್ದರೆ ಮಾನವಕೃತಿಗಳು ಜನಪದ ಶೈಲಿಯನ್ನು ಪ್ರತಿಬಿಂಬಿಸುತ್ತವೆ. ಈ ದೇವಾಲಯದಲ್ಲಿ ಮೊದಲು ಹೆಚ್ಚಿನ ಚಿತ್ರಗಳು ಇದ್ದರಬಹುದು. ಆದರೆ ಈಗ ಮೇಲಂತಸ್ತಿನ ಛಾವಣಿಯ ಚಾಚುಭಾಗದ ಆಸರೆಗೋಡೆಗಳಲ್ಲಿ ಮಾತ್ರ ಚಿತ್ರಗಳು ಉಳಿದುಕೊಂಡಿವೆ. ಉಳಿದಿರುವ ಈ ಚಿತ್ರಗಳನ್ನು ಕೆಳಗಿನಂತೆ ವಿಂಗಡಿಸಬಹುದು :

೧. ವ್ಯಕ್ತಿ ಚಿತ್ರಗಳು

೨. ವೃತ್ತಾಕಾರದ ನಕ್ಷೆಗಳು

***೧. ವ್ಯಕ್ತಿ ಚಿತ್ರಗಳು :*** ಮೇಲ್ಛಾವಣಿಯ ಚಾಚುಭಾಗದಲ್ಲಿರುವ ಆಸರೆಗೋಡೆಗಳಲ್ಲಿನ ಒಟ್ಟು ಚಿತ್ರಗಳು ಮೂರು ವ್ಯಕ್ತಿಚಿತ್ರಗಳಾಗಿದ್ದರೆ ಇನ್ನುಳಿದ ಮೂರು ಚಿತ್ರಗಳು ವೃತ್ತಾಕಾರದ ನಕ್ಷೆಗಳಾಗಿವೆ. ಈ ಮೂರು ವ್ಯಕ್ತಿಗಳು ನಿಂತುಕೊಂಡಿರುವ ಭಂಗಿಯಲ್ಲಿ ರಚಿಸಿವೆ. ಪಾದದವರೆಗೂ ಇಳಿದುಕೊಂಡಿರುವ ಪಂಚೆಯು ಉದ್ದವಾದ

ನಿಲುವಂಗಿಯಂತೆ ಕಂಡುಬರುತ್ತದೆ. ಮೂರೂ ಚಿತ್ರಗಳಲ್ಲಿ ಉದ್ದತೋಳಿನ ಅಂಗಿಯನ್ನು ಚಿತ್ರಿಸಲಾಗಿದ್ದು ಅದರ ಮೇಲೆಯೇ ಕೊರಳ ಆಭರಣಗಳನ್ನು ರೇಖಾ ಪ್ರಧಾನವಾಗಿ ರಚಿಸಲಾಗಿದೆ. ಇವರ ತಲೆಯ ಮೇಲಿರುವ ರುಮಾಲು ಮತ್ತು ವೇಷಭೂಷಣಗಳು ಗಣ್ಯ ವ್ಯಕ್ತಿಗಳಂತೆ ಕಂಡುಬರುತ್ತವೆ. ಇವು ದೇವಾಲಯಕ್ಕೆ ಸಹಾಯ ಸಲ್ಲಿಸಿದ ವ್ಯಕ್ತಿಗಳ ಚಿತ್ರಗಳಾಗಿರುವ ಸಾಧ್ಯತೆಗಳಿವೆ.

*೨. ವೃತ್ತಾಕಾರದ ನಕ್ಷೆಗಳು :* ಛಾವಣಿಯ ಆಸರೆಗೋಡೆಯ ಮೂರುಕಡೆ ಮೂರು ವೃತ್ತಾಕಾರದ ನಕ್ಷೆಗಳನ್ನು ರಚಿಸಲಾಗಿದೆ. ಒಂದರೊಳಗೊಂದು ಚಿಕ್ಕದಾಗುತ್ತ ಹೋಗುವ ವೃತ್ತಗಳನ್ನು ರಚಿಸಿದ್ದು, ಪ್ರತಿಯೊಂದು ವೃತ್ತಗಳ ಪರಿಧಿಯಲ್ಲಿ ಭಿನ್ನಭಿನ್ನವಾಗಿರುವ ವಿನ್ಯಾಸದ ನಕ್ಷೆಗಳಿವೆ. ಜ್ಯಾಮಿತಿಕ ಉಪಕರಣಗಳನ್ನು ಬಳಸಿ ರಚನೆಮಾಡಲಾದ ಈ ವೃತ್ತದನಕ್ಷೆಗಳು ಪ್ರತಿಯೊಂದೂ ಬೇರೆಯಾದ ನಕ್ಷೆಗಳನ್ನು ಹೊಂದಿವೆ. ಎರಡು ನಕ್ಷೆಗಳು ಸ್ವಲ್ಪವಾಗಿ ಇನ್ನೂ ಕಂಡುಬರುತ್ತಿದ್ದರೆ ಇನ್ನೊಂದು ನಕ್ಷೆಯು ಸಂಪೂರ್ಣ ನಾಶವಾಗಿದೆ. ಇಂತಹ ವೃತ್ತದ ನಕ್ಷೆಗಳು ಕೆಳಭಾಗದ ಗೋಡೆಯಲ್ಲಿನ ಕಂಬಗಳಲ್ಲಿಯೂ ಮೊದಲು ಇದ್ದು ದೇವಾಲಯದ ನವೀಕರಣ ಸಂದರ್ಭದಲ್ಲಿ ಅವುಗಳನ್ನು ನಾಶಪಡಿಸಲಾಗಿದೆ ಎಂದು ಸ್ಥಳೀಯ ದೇವಾಲಯದ ಆಡಳಿತ ಮಂಡಳಿಯ ಹೇಳಿಕೆಯಾಗಿದೆ.

**II. ಈಶ್ವರ ದೇವಾಲಯ, ಬಾಳೇಗದ್ದೆ :** ಹೊನ್ನಾವರದಿಂದ ಪೂರ್ವಕ್ಕೆ ಸುಮಾರು ಹದಿನೈದು ಕಿ. ಮಿ. ಗಳ ಅಂತರದಲ್ಲಿರುವ ಬಾಳೇಗದ್ದೆ ಗ್ರಾಮದ ಈಶ್ವರ ದೇವಾಲಯದಲ್ಲಿ ಕಾವಿ ಚಿತ್ರಗಳು ಮೊದಲಿಗೆ ರಚಿಸಿದ್ದರೂ ಈಗ ಅಲ್ಲಿ ಯಾವುದೇ ಚಿತ್ರಗಳು ಕಂಡುಬರುವುದಿಲ್ಲ. ಇಡೀ ದೇವಾಲಯವನ್ನು ನವೀಕರಿಸಿ ಕಟ್ಟಲಾಗಿದ್ದು ದೇವಾಲಯದ ಯಾವಭಾಗದಲ್ಲಿಯೂ ಕಾವಿಚಿತ್ರಗಳು ಉಳಿದುಕೊಂಡಿಲ್ಲ. ಕಾವಿಚಿತ್ರಗಳ ಹಿನ್ನೆಲೆಯಲ್ಲಿ ವಿಷ್ಣು ದೇವಾಲಯಗಳು ಮತ್ತು ದೇವಿಮಂದಿರಗಳಿಗೆ ಹೋಲಿಸಿದರೆ ಈಶ್ವರ ದೇವಾಲಯಗಳಲ್ಲಿ ಕಾವಿ ಚಿತ್ರರಚನೆಯಾಗಿದ್ದು ಕಡಿಮೆಯಾಗಿದೆ. ಒಟ್ಟಾಗಿ ನೋಡಿದರೂ ಈ ಭಾಗದಲ್ಲಿ ಶಿವದೇವಾಲಯಗಳಿಗಿಂತ ವೈಷ್ಣವ ದೇವಾಲಯಗಳೇ ಅಧಿಕವಾಗಿವೆ.

## ೩. ದೇವಿಮಂದಿರಗಳು

ಉತ್ತರ ಕನ್ನಡ ಜಿಲ್ಲೆಯಲ್ಲಿ ವಿಷ್ಣುದೇವಾಲಯಗಳಂತೆ ಹಲವು ದೇವಿಮಂದಿರಗಳಲ್ಲೂ ಕಾವಿ ಚಿತ್ರಕಲೆ ರಚನೆಯಾಗಿದೆ. ಇಲ್ಲಿ ಸ್ತ್ರೀ ದೇವತೆಗೆ ಸಂಬಂಧಿಸಿದ ಲಕ್ಷ್ಮೀ ಸರಸ್ವತಿ, ಪರಮೇಶ್ವರಿ ಹೀಗೆ ಎಲ್ಲ ದೇವಾಲಯಗಳನ್ನೂ ದೇವಿಮಂದಿರಗಳೆಂದೇ ಪರಿಗಣಿಸಲಾಗಿದೆ. ಈ ಹಿನ್ನೆಲೆಯಲ್ಲಿ ಉತ್ತರ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಕಾವಿಚಿತ್ರಗಳು ರಚನೆಯಾದ ದೇವಿಮಂದಿರಗಳು ಈ ಕೆಳಗಿನಂತಿವೆ :

I. ಶ್ರೀ ಮಾರಿಕಾಂಬಾ ದೇವಾಲಯ, ಸಿರಸಿ

II. ಶಾರದಾಂಬಾ ದೇವಾಲಯ, ಹೊನ್ನಾವರ

III. ಅಮ್ಮನವರ ದೇವಾಲಯ, ಮಾವಿನಕುರ್ವೆ

IV. ಮಾರಿಕಾಂಬಾ ದೇವಸ್ಥಾನ, ಬಿಳಗಿ


ದೇವಿ ಮಂದಿರಗಳ ಕಾವಿ ಭಿತ್ತಿ ಚಿತ್ರಕಲೆ
I) ಮಾರಿಕಾಂಬಾ ದೇವಾಲಯ, ಶಿರಸಿ
II) ಶಾರದಾಂಬಾ ದೇವಾಲಯ, ಹೊನ್ನಾವರ
III) ಅಮ್ಮನವರ ದೇವಾಲಯ, ಮಾವಿನ ಕುರ್ವೆ
IV) ಮಾರಿಕಾಂಬಾ ದೇವಸ್ಥಾನ, ಬೀಳಗಿ
1) ಹೊರ ಗೋಡೆಯ ಚಿತ್ರಗಳು
2) ಒಳ ಗೋಡೆಯ ಚಿತ್ರಗಳು
3) ಮಂಟಪದ ಚಿತ್ರಗಳು
I) ದೇವಿಯ ಚಿತ್ರಗಳು
II) ಹನುಮಂತ ಗರುಡರ ಚಿತ್ರಗಳು
III) ರಾಜರ ಚಿತ್ರಗಳು
IV) ನಕ್ಷಾ ಚಿತ್ರಗಳು
I) ಪೂರ್ವ ಮಂಟಪದ ಚಿತ್ರಗಳು
II) ಪಶ್ಚಿಮ ಮಂಟಪದ ಚಿತ್ರಗಳು
III) ದಕ್ಷಿಣ ಮಂಟಪದ ಚಿತ್ರಗಳು
1) ರಾಮಾಯಣ ದೃಶ್ಯ
2) ಕರ್ಣಾರ್ಜುನರ ಯುದ್ಧ
3) ಶಿವನ ಚಿತ್ರ
4) ಉಗ್ರ ನರಸಿಂಹ
5) ಶ್ರೀಕೃಷ್ಣ ಎಲೆಯ ಮೇಲೆ ಮಲಗಿರುವ ಚಿತ್ರ
6) ಷಣ್ಮುಖನ ಚಿತ್ರ
7) ದಶಾವತಾರದ ಚಿತ್ರಗಳು
8) ವಿಚಿತ್ರ ಪಾಕ್ಷಿಯ ಚಿತ್ರ
1) ರಾಮಲಕ್ಷ್ಮಣರ ಚಿತ್ರ
2) ಬಿಲ್ಲು ಹಿಡಿದ ರಾಮನ ಚಿತ್ರ
3) ರಾಮಸೀತೆಯರ ಚಿತ್ರ
4) ಗರುಡನ ಚಿತ್ರ
5) ದೇವತಾಪುರುಷರ ಚಿತ್ರ
6) ರಾಜನ ಚಿತ್ರ
7) ನಂದಿಯ ಮೇಲೆ ಕುಳಿತ ಶಿವನ ಚಿತ್ರ
8) ಕೃಷ್ಣನ ಚಿತ್ರಗಳು
1) ಗರ್ಭಗೃಹದ ಗೋಡೆಯ ನಕ್ಷಾವಿನ್ಯಾಸ
2) ಮಂಟಪದ ಗೋಡೆಯ ನಕ್ಷಾವಿನ್ಯಾಸ
1) ದೇವಿ ಚಿತ್ರಗಳು
2) ಇತರ ದೇವತೆಗಳ ಚಿತ್ರಗಳು
3) ನಕ್ಷಾ ರೂಪಗಳು

V. ಭುವನೇಶ್ವರಿ ದೇವಾಲಯ, ಭುವನಗಿರಿ

VI. ಶ್ರೀ ಶಾಂತಿಕಾ ಪರಮೇಶ್ವರಿ ದೇವಾಲಯ, ಸಾಂತಗಲ್

VII. ಮಹಾಳಸಾ ನಾರಾಯಣಿ ದೇವಾಲಯ, ಕುಮಟಾ

VIII. ಆರ್ಯದುರ್ಗಾ ದೇವಾಲಯ, ಅಂಕೋಲಾ

IX. ದೇವಿಮಂದಿರ ಬಳಲೆ

X. ಬಿಳಿಗಿರಿಯಮ್ಮನ ದೇವಾಲಯ, ಶೆಟಗೇರಿ

XI. ದುರ್ಗಾದೇವಾಲಯ, ಸದಾಶಿವಘಡ

XII. ಮಹಾಮಾಯಾ ದೇವಾಲಯ, ಚಿತಾಕುಲ

XIII. ಮಾರಿಕಾಂಬಾ ದೇವಾಲಯ ಮಾಜಾಳಿ

**I. ಶ್ರೀ ಮಾರಿಕಾಂಬಾ ದೇವಾಲಯ, ಸಿರಸಿ :** ಉತ್ತರ ಕನ್ನಡ ಜಿಲ್ಲೆಯ ಸಿರಸಿಯ ಮಾರಿಕಾಂಬಾ ದೇವಾಲಯವು ಪ್ರಸಿದ್ಧವಾದ ದೇವಾಲಯವಾಗಿದೆ. ಈ ದೇವಾಲಯವು[೧೯೬] ಕ್ರಿ. ಶ. ೧೭೪೫ ರಿಂದ ೧೭೬೩ ರ ಅವಧಿಯಲ್ಲಿ ಸೋದೆಯ ಅರಸು ಇಮ್ಮಡಿ ಸದಾಶಿವರಾಯನ ಕಾಲದಲ್ಲಿ ನಿರ್ಮಿಸಲ್ಪಟ್ಟಿದ್ದು ಕಾಲಕಾಲಕ್ಕೆ ಬೆಳವಣಿಗೆ ಹೊಂದುತ್ತಬಂದಿದೆ. ಈ ದೇವಾಲಯದ ಹೊರಭಾಗ, ಒಳಭಾಗ, ಸುತ್ತಲಿನ, ಮಂಟಪಗಳು, ಹೀಗೆ ಇಡೀ ದೇವಾಲಯ ಕಾವಿ ಚಿತ್ರಗಳಿಂದ ತುಂಬಿದೆ. ದೇವಾಲಯವನ್ನು ನವೀಕರಿಸುವಾಗ ಈ ಚಿತ್ರಗಳನ್ನೂ ನವೀಕರಣ ಗೊಳಿಸುವ ಪ್ರಯತ್ನದಲ್ಲಿ ಇವುಗಳಿಗೆ ವಾರ್ನಿಷ್ ಬಣ್ಣ ಹಚ್ಚಿ, ಮೂಲ ಕಾವಿ ಚಿತ್ರಗಳನ್ನು ಹಾಳುಮಾಡಲಾಗಿದೆ. ಇದರಿಂದ ಅವುಗಳ ನೈಜತೆ ಕಾಣೆಯಾಗಿದೆ. ಈ ದೇವಾಲಯದ ಒಟ್ಟು ಕಾವಿಭಿತ್ತಿ ಚಿತ್ರಗಳನ್ನು ಅಧ್ಯಯನದ ಅನುಕೂಲತೆಗಾಗಿ ಈ ಕೆಗಳಿನಂತೆ ವಿಂಗಡಿಸಿಕೊಂಡು ಚರ್ಚಿಸಬಹುದು.

೧. ಹೊರಗೋಡೆಯ ಚಿತ್ರಗಳು

೨. ಒಳಗೋಡೆಯ ಚಿತ್ರಗಳು

೩. ಮಂಟಪದ ಚಿತ್ರಗಳು

***೧. ಹೊರಗೋಡೆಯ ಚಿತ್ರಗಳು :*** ದೇವಾಲಯದ ಪೂರ್ತಿಹೊರಭಾಗದ ಗೊಡೆಯಲ್ಲಿ ವೈವಿಧ್ಯಕಾವಿ ಚಿತ್ರಗಳನ್ನು ರಚನೆಮಾಡಲಾಗಿದ್ದು, ದೂರದಿಂದ ಈ ಚಿತ್ರಗಳನ್ನು ನೋಡಿದರೆ ಇಡೀ ದೇವಾಲಯವೇ ಕೆಂಪುಬಣ್ಣದಂತೆ ಕಂಡಬರುತ್ತದೆ. ದೇವಿ ಚಿತ್ರಗಳು ಬೇರೆ ಬೇರೆ ವಿಷಯದ ಚಿತ್ರಗಳು ಇಲ್ಲಿ ರಚಿಸಿದ್ದು ಈ ಹೊರಗೋಡೆಯ ಚಿತ್ರಗಳನ್ನು ಈ ಕೆಳಗಿನಂತೆ ವಿಂಗಡಿಸಿಕೊಂಡು ವಿವರಿಸಬಹುದಾಗಿದೆ :

I. ದೇವಿ ಚಿತ್ರಗಳು

II. ಹನುಮಂತ ಗರುಡರ ಚಿತ್ರಗಳು

III. ರಾಜರ ಚಿತ್ರಗಳು

IV. ನಕ್ಷಾ ಚಿತ್ರಗಳು

---

೧೯೬. ಎಂ. ಜಿ. ವಾರಿ : ಸೋದೆ ಅರಸು ಮನೆತನ ಒಂದು ಅಧ್ಯಯನ, ಪುಟ ೧೯೪

*I. ದೇವಿ ಚಿತ್ರಗಳು :* ಈ ದೇವಾಲಯದ ಅಧಿದೇವತೆ ಶಕ್ತಿಸ್ವರೂಪಿಣಿ ದುರ್ಗಾದೇವಿ ಅಥವಾ ಮಾರಿಕಾಂಬೆಯ ಚಿತ್ರಗಳು ಹೊರಗೋಡೆಯಲ್ಲಿ ರಚನೆಯಾಗಿವೆ. ಮಹಿಷಾಸುರ ಮರ್ದಿನಿ ದೇವಿಯ ರೂಪಗಳು ವಿಭಿನ್ನ ಬಗೆಯಲ್ಲಿ ರಚನೆಯಾಗಿದ್ದರೂ ಎಲ್ಲವುಗಳ ವಿಷಯಮಾತ್ರ ಒಂದೇ ಆಗಿವೆ. ಮಹಿಷನನ್ನು ಕೊಲ್ಲುವ ದೇವಿಯ ವಿವಿಧ ರೂಪಗಳು ಇಲ್ಲಿವೆ. ಕೆಲವು ಚಿತ್ರಗಳಲ್ಲಿ ದೇವಿ ಸಿಂಹದ ಮೇಲೆ ಕುಳಿತಿದ್ದರೆ, ಮತ್ತೆ ಕೆಲವು ಕಡೆಗೆ ನೆಲದ ಮೇಲೆ ನಿಂತುಕೊಂಡೇ ರಾಕ್ಷಸರನ್ನು ಸಂಹಾರ ಮಾಡುತ್ತಿದ್ದಾಳೆ.

ಒಂದು ಚಿತ್ರದಲ್ಲಿ ಸಿಂಹದ ಮೇಲೆ ಕುಳಿತ ದೇವಿಯು ಮಹಿಷಾಸುರ ರಾಕ್ಷಸನನ್ನು ಸಂಹರಿಸುತ್ತಿದ್ದು, ಇಲ್ಲಿ ಸಿಂಹದ ರೂಪವು ಹುಲಿಯಂತೆ ತೋರುತ್ತಿದೆ. ಕಾಲುಗಳು. ದೇಹದ ವಿನ್ಯಾಸ ಪ್ರಮಾಣಬದ್ಧವಾಗಿಲ್ಲ. ಸಿಂಹದ ಮೇಲೆ ಕುಳಿತ ದೇವಿಯ ಚಿತ್ರಣವೂ ನೈಜವಾಗಿರದೇ ಸಾಂಕೇತಿಕತೆಯಿಂದ ಕೂಡಿದೆ. ದೇವಿಯ ಎಂಟು ಕೈಗಳಲ್ಲಿ ಎಂಟು ವಿಧವಾದ ಆಯುಧಗಳಿದ್ದು ರಭಸದಿಂದ ನುಗ್ಗುತ್ತಿದ್ದಾಳೆ. ಕೆಳಗೆ ಬಿದ್ದ ಮಹಿಷಾಸುರ ರಾಕ್ಷಸನು ಪಶುರೂಪದಲ್ಲಿದ್ದು ಮುಖಮಾತ್ರ ಮಾನವರೂಪದಲ್ಲಿದೆ. ಕೆಳಭಾಗದಲ್ಲಿ ಕತ್ತರಿಸಲ್ಪಟ್ಟ ಮಾನವ ಮತ್ತು ಪಶುವಿನ ರುಂಡಗಳು ಬಿದ್ದುಕೊಂಡಿವೆ. ಮಹಿಷಾಸುರನ ಮೇಲೆ ದೇವಿ ಮತ್ತು ಆಕೆಯ ವಾಹನ ಸಿಂಹ ಇಬ್ಬರೂ ಒಮ್ಮೆಲೇ ದಾಳಿಮಾಡಿದ ರಭಸಕ್ಕೆ ಆತ ಕೆಳಕ್ಕೆ ಬಿದ್ದಿದ್ದಾನೆ.

ಮತ್ತೊಂದು ಚಿತ್ರದಲ್ಲಿ ದೇವಿಯು ನೆಲದಮೇಲೆ ನಿಂತು ಮಹಿಷಾಸುರ ರಾಕ್ಷಸನನ್ನು ಸಂಹರಿಸುತ್ತಿದ್ದಾಳೆ. ಇಲ್ಲಿ ಆಕೆಯ ವಾಹನ ಚಿತ್ರಣವಾಗಿಲ್ಲ. ಇಲ್ಲಿಯೂ ಎಂಟು ಕೈಗಳನ್ನು ಹೊಂದಿದ ದೇವಿಯು ಖಡ್ಗ, ಕೊಡಲಿ, ಭರ್ಚಿ. ಗದೆ. ಢಾಲುಗಳನ್ನು ಹಿಡಿದುಕೊಂಡಿದ್ದು ಒಂದು ಕೈಯಲ್ಲಿ ಮೂರು ಎಲೆಗಳ ಗಿಡದ ಟೊಂಗೆಯನ್ನು ಹಿಡಿದುಕೊಂಡಿದ್ದಾಳೆ. ಉದ್ದನಾದ ಈಟಿಯಿಂದ ರಾಕ್ಷಸನನ್ನು ಚುಚ್ಚಿಕೊಲ್ಲುತ್ತಿದ್ದು. ಕೆಳಗೆ ಬಿದ್ದ ರಾಕ್ಷಸನು ಮಹಿಷರೂಪದಲ್ಲಿದ್ದಾನೆ. ದೇಹಭಾಗ ಪಶುವಿನದಾಗಿದ್ದರೆ. ಮುಖವು ಮಾನವರೂಪದಲ್ಲಿದೆ. ಕೆಳಭಾಗದಲ್ಲಿ ಕತ್ತರಿಸಲ್ಪಟ್ಟ ಪಶುವಿನ ಮುಖವು ಚಿತ್ರಸಲ್ಪಟ್ಟಿದ್ದರೆ. ಮೇಲಿನ ಭಾಗದಲ್ಲಿ ತೂಗುದೀಪವನ್ನು ಚಿತ್ರಿಸಿದೆ. ಮಹಿಷರೂಪದಲ್ಲಿರುವ ರಾಕ್ಷಸನು ಗಧೆ ಮತ್ತು ಗುರಾಣಿಯನ್ನು ಹಿಡಿದುಕೊಂಡಿದ್ದಾನೆ. ದೇವಿಯು ಒಂದು ಕೈಯಿಂದ ರಾಕ್ಷಸನ ಉದ್ದವಾದ ಜುಟ್ಟನ್ನು ಹಿಡಿದುಜಗ್ಗುತ್ತಿದ್ದಾಳೆ. ಸಾಮಾನ್ಯವಾಗಿ ಇದೇ ವಿನ್ಯಾಸದಲ್ಲಿರುವ ದೇವಿ ಚಿತ್ರಗಳೇ ಇನ್ನುಳಿದ ಕಡೆಗೂ ಇವೆ. ಹೊರಗೋಡೆಯಲ್ಲಿ ಇಂತಹ ಆರು ಚಿತ್ರಗಳು ರಚನೆಯಾಗಿವೆ.

*II. ಹನುಮಂತ ಗರುಡರ ಚಿತ್ರಗಳು :* ಹೊರಗೋಡೆಯಲ್ಲಿ ದೇವಿಚಿತ್ರಗಳು ರಚನೆಯಾದಂತೆಯೇ ಆಂಜನೇಯ ಗರುಡರ ಚಿತ್ರಗಳೂ ರಚಿಸಿವೆ. ದೇವಾಲಯದ ಪ್ರವೇಶದ್ವಾರದ ಎಡಬಲಗಳಲ್ಲಿ ರಚನೆಯಾದ ವಿಷ್ಣುಭಕ್ತರ ಈ ಚಿತ್ರಗಳಲ್ಲಿ ಬಲಭಾಗದಲ್ಲಿ ಆಂಜನೇಯನನ್ನು ಚಿತ್ರಿಸಿದ್ದರೆ. ಎಡಭಾಗದಲ್ಲಿ ಗರುಡನನ್ನು ಚಿತ್ರಿಸಲಾಗಿದೆ. ಆಂಜನೇಯನು ಎಡಗೈಯಲ್ಲಿ ಗಧೆಯನ್ನು ಹಿಡಿದುಕೊಂಡಿದ್ದು. ಬಲಗೈಯಲ್ಲಿ ತನ್ನ ಸುರುಳಿಯಾದ ಬಾಲವನ್ನು ಹಿಡಿದುಕೊಂಡು ರಭಸದಿಂದ ನುಗ್ಗಿ ಬರುತ್ತಿರುವಂತೆ ಚಿತ್ರಿಸಲ್ಪಟ್ಟಿದ್ದಾನೆ. ಆಂಜನೇಯನು ಸಾಮಾನ್ಯವಾಗಿ ಚಡ್ಡಿ ಅಥವಾ ಕಚ್ಚೆ ಧರಿಸಿರುವಂತೆ ಚಿತ್ರಿಸಿರುವುದು ಹೆಚ್ಚಾಗಿ ಕಂಡುಬಂದರೂ ಇಲ್ಲಿ ಪಾದದವರೆಗೂ ಇಳಿಬಿದ್ದ ಧೋತರವನ್ನು ಚಿತ್ರಿಸಲಾಗಿದೆ. ಉಳಿದಂತೆ ಆಕರ್ಷಕವಾದ ಕಿರೀಟ, ಆಭರಣಗಳು ಗಮನ ಸೆಳೆಯುತ್ತವೆ. ಗರುಡನ ಚಿತ್ರದಲ್ಲಿ ಗರುಡನು ಬಲಗೈಯಲ್ಲಿ ಹಾವನ್ನು ಹಿಡಿದುಕೊಂಡಂತೆ ಚಿತ್ರಿಸಿದೆ. ಗರುಡನಿಗೆ ಪಾದದವರೆಗೂ

ಇಳಿಬಿದ್ದಂತೆ ಧೋತರ ಚಿತ್ರಿಸಲಾಗಿದೆ. ಹಿಂಭಾಗದಲ್ಲಿರುವ ಆತನ ರೆಕ್ಕೆಗಳು ಅಲಂಕಾರಿಕ ವಿನ್ಯಾಸದಲ್ಲಿವೆ. ಆತನ ಕೈಯಲ್ಲಿರುವ ಹಾವು ಹೆಡೆಯನ್ನು ಬಿಚ್ಚಿಕೊಂಡು ಫೂತ್ಕರಿಸುತ್ತಿದೆ. ಗರುಡನ ಕೊರಳಲ್ಲಿನ ಆಭರಣವು ಸಹಿತ ಹಾವಿನ ವಿನ್ಯಾಸದಲ್ಲಿದೆ.

*III. ರಾಜರ ಚಿತ್ರಗಳು :* ಹೊರಗೋಡೆಯಲ್ಲಿ ದೇವತಾ ಚಿತ್ರಗಳ ಮಧ್ಯದಲ್ಲಿರುವ ಎರಡು ಅಂಕಣಗಳಲ್ಲಿ ಆನೆಯ ಮೇಲೆ ಕುಳಿತ ರಾಜರ ಚಿತ್ರಗಳು ರಚನೆಯಾಗಿವೆ. ಒಂದು ಚಿತ್ರದಲ್ಲಿ ಆನೆಯ ಮೇಲೆ ಕುಳಿತ ರಾಜನೊಬ್ಬ ಮುಂಗೈವರೆಗೂ ಇರುವ ಉದ್ದತೋಳಿನ ಅಹಗಿ ಧರಿಸಿದ್ದು ಅದರ ಮೇಲೆಯೇ ಆಭರಣಗಳನ್ನು ರಚಿಸಲಾಗಿದೆ. ತಲೆಗೆ ಕಿರೀಟವಿದ್ದು ಕೈಯಲ್ಲಿ ಅಂಕುಶದಂತಹ ಆಯುಧ ಹಿಡಿದುಕೊಂಡಿದ್ದಾನೆ. ಆನೆಯ ಸೊಂಡಿಲಿಗೆ ಅಲಂಕಾರ ಯುಕ್ತವಾದ ಹೂ ಮಾಲೆ ಹಾಕಿದಂತಿದ್ದು. ಹಿನ್ನೆಲೆಯಲ್ಲಿಯೂ ಹೂ ಬಳ್ಳಿಯ ಮತ್ತು ಗಿಡದ ಅಲಂಕಾರಿಕ ವಿನ್ಯಾಸದ ನಕ್ಷೆ ಇದೆ. ಕೆಳಭಾಗದಲ್ಲಿಯೂ ಗಿಡ ಮತ್ತು ಬಳ್ಳಿಯ ನಕ್ಷೆಇದ್ದು, ಆನೆಯ ಮುಂದಿನ ಕಾಲುಗಳಿಗೆ ಈ ನಕ್ಷೆಯನ್ನು ಸಮೀಕರಿಸಲಾಗಿದೆ. ಹಾಗಾಗಿ ಆನೆಯ ಮುಂದಿನ ಕಾಲುಗಳು ಗಿಡದ ನಕ್ಷೆಯ ಒಂದು ಭಾಗದಂತೆ ಕಂಡು ಬರುತ್ತವೆ. ಆನೆಯ ಮೇಲೆ ಕುಳಿತ ಇನ್ನೊಬ್ಬ ರಾಜನ ಚಿತ್ರವೂ ಇದ್ದು ಇದರಲ್ಲಿ ರಾಜನು ಎಡಗೈಯಲ್ಲಿ ಖಡ್ಗವನ್ನು ಬಲಗೈಯಲ್ಲಿ ಅಂಕುಶವನ್ನು ಹಿಡಿದಿದ್ದಾನೆ. ಈತನೂ ಉದ್ದತೋಳಿನ ಅಂಗಿಯನ್ನು ತೊಟ್ಟಿದ್ದು ತಲೆಗೆ ಅಲಂಕಾರಿಕ ರುಮಾಲು ಧರಿಸಿದ್ದಾನೆ. ಇಲ್ಲಿ ಆನೆಯು ಗಿಡದ ಟೊಂಗೆಯೊಂದನ್ನು ಮುರಿದು ತಿನ್ನುತ್ತಿರುವಂತೆ ಚಿತ್ರಿಸಿದ್ದರೆ ಮೇಲ್ಭಾಗದಲ್ಲಿ ತೂಗುದೀಪಗಳನ್ನು ರಚಿಸಲಾಗಿದೆ. ಆನೆಯ ಮೇಲೆ ಕುಳಿತ ಈ ಎರಡೂ ರಾಜರ ಚಿತ್ರಗಳು ಬಹುಶ ದೇವಾಲಯಕ್ಕೆ ಪ್ರೋತ್ಸಾಹಕೊಟ್ಟ ಸೋದೆ ಅರಸರಿಗೆ ಸಂಬಂಧಿಸಿದವುಗಳಾಗಿರಬೇಕು.

*IV. ನಕ್ಷಾ ಚಿತ್ರಗಳು :* ದೇವಾಲಯದ ಹೊರಗೋಡೆಯಲ್ಲಿ ರಚನೆಯಾದ ಕಾವಿಚಿತ್ರಗಳಲ್ಲಿ ನಕ್ಷಾವಿನ್ಯಾಸದ ಚಿತ್ತಾರಗಳೇ ಅಧಿಕವಾಗಿವೆ. ವೃತ್ತಾಕಾರದ ನಕ್ಷೆಗಳು. ಗಿಳಿಗಳ ಅಲಂಕಾರಿಕ ರೂಪಗಳು. ಎಲೆ. ಹೂಬಳ್ಳಿಯ ನೈಜರೂಪಗಳು. ಅವುಗಳ ಪರಿವರ್ತಿತ ಅಲಂಕಾರಿಕ ವಿನ್ಯಾಸಗಳು ಇಲ್ಲಿ ಚಿತ್ರಿಸಿವೆ. ವೃತ್ತಾಕಾರದ ನಕ್ಷೆಗಳು ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿದ್ದು ಸಣ್ಣವು, ದೊಡ್ಡವು ಹೀಗೆ ವಿವಿಧ ಗಾತ್ರದಲ್ಲಿಯೂ ರಚಿಸಿವೆ. ಬಹುಶ ಈ ದೇವಾಲಯದಲ್ಲಿ ರಚನೆಯಾದಷ್ಟು ಸಂಖ್ಯೆಯ ವೃತ್ತಾಕಾರದ ನಕ್ಷೆಗಳು ಕರ್ನಾಟಕದ ಇನ್ನಾವ ಭಾಗದಲ್ಲೂ ರಚನೆಯಾಗಿಲ್ಲವೆಂದು ಹೇಳಬಹುದು. ಇಷ್ಟೊಂದು ವಿಪುಲ ಸಂಖ್ಯೆಯಲ್ಲಿ ರಚನೆಯಾದ ವೃತ್ತದ ನಕ್ಷೆಗಳಿದ್ದರೂ ಒಂದರ ಹಾಗೆ ಇನ್ನೊಂದು ಇರದೇ ಪ್ರತಿಯೊಂದೂ ನಕ್ಷೆಗಳು ಬೇರೆ ವಿನ್ಯಾಸಗಳನ್ನೇ ಹೊಂದಿವೆ ಕಲಾವಿದರ ಅದ್ಭುತ ಕಲ್ಪನಾಶಕ್ತಿಯನ್ನು ಇಲ್ಲಿ ಗುರುತಿಸಬಹುದು ಜ್ಯಾಮಿತಿಕ ಉಪಕರಣ ಬಳಸಿರಚನೆಮಾಡಿದ ಈ ವೃತ್ತದ ನಕ್ಷೆಗಳಲ್ಲಿ ಕೆಲವು ಸಲ ಒಳಭಾಗದಲ್ಲಿ ಇಲ್ಲವೇ ಹೊರಭಾಗದ ಅಂಚುಗಳಲ್ಲಿ ಜ್ಯಾಮಿತಿಕ ಉಪಕರಣ ಬಳಸದೆಯೇ ಚಿತ್ರಿಸಿದ್ದೂ ಕಂಡು ಬರುತ್ತದೆ. ಒಳಭಾಗದ ಚಿಕ್ಕಪ್ರಮಾಣದ ಹೂಗಳು. ಹೊರಭಾಗದ ಅಂಚಿನ ಪುರಾವರ್ತಿತ ಕಿರಣದ ಹಾಗಿರುವ ಗೆರೆಗಳನ್ನು ಎಳೆಯುವಲ್ಲಿ ಇಂತಹ ಪ್ರಯತ್ನ ಕಂಡುಬರುತ್ತದೆ. ಈ ನಕ್ಷೆಗಳಲ್ಲದೇ ಅಲ್ಲಲ್ಲಿ ಇರುವ ಕಮಾನಿನಾಕಾರದ ಮಾಡುಗಳ ಮೇಲ್ಭಾಗದಲ್ಲಿ ಜೋಡಿ ಗಿಳಿಗಳನ್ನು ಅಲಂಕಾರಿಕ ರೂಪದಲ್ಲಿ ಚಿತ್ರಿಸಲಾಗಿದೆ. ಈ ಗಿಳಿಗಳು ಅಕ್ಕಪಕ್ಕದಲ್ಲಿ ಎಲೆ, ಹೂ, ಮೊಗ್ಗುಗಳನ್ನು ಹೊಂದಿದ ಬಳ್ಳಿಗಳು

ಇಲ್ಲವೆ ಗಿಡದ ಟೊಂಗೆಗಳನ್ನು ರಚಿಸಿದ್ದು, ಇವು ನೈಜ ಮತ್ತು ಅಲಂಕಾರಿಕ ರೂಪಗಳಲ್ಲಿ ರಚಿಸಿವೆ. ಮಾನವಾಕೃತಿಗಳು ರಚನೆಯಾಗಿರುವ ಮೇಲ್ಭಾಗದ ಪಟ್ಟಿಕೆಯಲ್ಲಿ ಗೋಡೆಯುದ್ದಕ್ಕೂ ಹೂವಿನ ನಕ್ಷೆ ರಚಿಸಿದ್ದು, ಎರಡು ವೃತ್ತಗಳ ಒಳಭಾಗದಲ್ಲಿ ಎಂಟು ಎಸಳಿನ ಹೂವನ್ನು ರಚಿಸಲಾಗಿದೆ. ಈ ನಕ್ಷಾ ವಿನ್ಯಾಸವು ಹೂವಿನ ಬಳ್ಳಿಯು ಹಬ್ಬಿದಂತೆ ಕಂಡಬುರುವ ಪುನರಾವರ್ತಿತ ರೂಪವಾಗಿದೆ. ಇದೇ ವಿನ್ಯಾಸದಲ್ಲಿರುವ ನಕ್ಷಾ ಚಿತ್ರವು ಗೋಕರ್ಣದ ಬಳಿಯ ಚೌಡಗೇರಿಯಲ್ಲಿ, ಕುಮಟಾ ಸಮೀಪದ ಸಾಂತಗಲ್‌ದಲ್ಲಿ. ಅಂಕೋಲಾ ಸಮೀಪದ ಬಳಲೆಗ್ರಾಮದಲ್ಲಿ ಹೀಗೆ ಅನೇಕ ಕಡೆಯ ದೇವಾಲಯಗಳಲ್ಲಿ ಕಂಡುಬಂದಿದೆ. ಬಹುಶ ಈ ರೀತಿಯ ನಕ್ಷಾ ಚಿತ್ರಗಳಿಗೆ ಅಚ್ಚುಗಳನ್ನು ಬಳಸುತ್ತಿರಬಹುದಾಗಿದೆ.

*೨. ಒಳಗೋಡೆಯ ಚಿತ್ರಗಳು :* ಮಾರಿಕಾಂಬಾ ದೇವಾಲಯದ ಒಳಗೋಡೆಯ ಚಿತ್ರಗಳಲ್ಲಿ ಹೆಚ್ಚಿನ ವೈವಿಧ್ಯತೆ ಕಂಡುಬರುವುದಿಲ್ಲ. ಮುಖ್ಯದ್ವಾರದ ಒಳಭಾಗದ ಎಡಬಲಗಳಲ್ಲಿ, ಬಾಗಿಲಿನ ಹಿಂದಿನ ಪಾರ್ಶ್ವದಲ್ಲಿ, ಗೋಡೆಯ ಮೇಲ್ಭಾಗ ಕೆಳಭಾಗ. ಎಡ ಮತ್ತು ಬಲಭಾಗದಗೋಡೆಗಳಲ್ಲಿ ಅಲ್ಲಲ್ಲಿ ಕಾವಿ ಚಿತ್ರಕಲೆ ರಚನೆಯಾಗಿದ್ದರೂ ಈ ಎಲ್ಲ ಕಡೆಗೂ ದೊಡ್ಡದಾದ ವೃತ್ತಾಕಾರದ ನಕ್ಷೆಗಳನ್ನೇ ಸಾಲಾಗಿ ರಚನೆ ಮಾಡಲಾಗಿದೆ. ಯಾವುದೇ ವ್ಯಕ್ತಿ ಚಿತ್ರಣ. ಪ್ರಾಣಿ. ಪಕ್ಷಿ. ಅಥವಾ ಬೇರೆ ರೀತಿಯ ನಕ್ಷಾ ಚಿತ್ರಣ ಇಲ್ಲಿ ಕಂಡುಬರುವುದಿಲ್ಲ.

*೩. ಮಂಟಪದ ಚಿತ್ರಗಳು :* ಈ ದೇವಾಲಯದ ಆವರಣದಲ್ಲಿ ಸುತ್ತಲೂ ಮಂಟಪಗಳನ್ನು ನಿರ್ಮಿಸಲಾಗಿದ್ದು ಆ ಮಂಟಪಗಳ ಗೋಡೆ ಮೇಲ್ಭಾವಣಿಗಳನ್ನು ಕಾವಿ ಭಿತ್ತಿಚಿತ್ರಕಲೆಯಿಂದ ಅಲಂಕರಿಸಲಾಗಿದೆ. ಆವಣದಲ್ಲಿರುವ ಮೂರೂ ದಿಕ್ಕಿನ ಮಂಟಪಗಳಲ್ಲಿ ಕಾವಿ ಚಿತ್ರಕಲೆ ರಚನೆಯಾಗಿದ್ದು ಅದನ್ನು ಈ ಕೆಳಗಿನಂತೆ ವಿಂಗಡಿಸಿಕೊಂಡು ವಿವರಿಸಬಹುದಾಗಿದೆ.

I. ಪೂರ್ವ ಮಂಟಪದ ಚಿತ್ರಗಳು

II. ಪಶ್ಚಿಮ ಮಂಟಪದ ಚಿತ್ರಗಳು

III. ದಕ್ಷಿಣ ಮಂಟಪದ ಚಿತ್ರಗಳು

*I. ಪೂರ್ವ ಮಂಟಪದ ಚಿತ್ರಗಳು :* ಪೂರ್ವದಿಕ್ಕಿನ ಮಂಟಪದಲ್ಲಿ ಮುಖ್ಯವಾಗಿ ಎರಡು ದೊಡ್ಡಪಟ್ಟಿಕೆಗಳನ್ನು ಮಾಡಿಕೊಂಡು ಅದರಲ್ಲಿ ರಾಮಾಯಣ ದೃಶ್ಯಗಳನ್ನು ಉದ್ಧಕ್ಕೂ ರಚನೆ ಮಾಡಲಾಗಿದೆ. ಅದರ ಜೊತೆಗೆ ಅಲ್ಲಲ್ಲಿ ಪ್ರತ್ಯೇಕ ಪಟ್ಟಿಕೆಗಳಲ್ಲಿ ಇತರ ದೇವತಾ ಚಿತ್ರಗಳನ್ನೂ ರಚನೆಮಾಡಲಾಗಿದ್ದು ಅವುಗಳ ಕುರಿತಾಗಿ ಈ ಕೆಳಗಿನಂತೆ ವಿವರಿಸಬಹುದು.

೧. ರಾಮಯಣದ ದೃಶ್ಯ : ದೇವಾಲಯದ ಬಲಗಡೆ ಇರುವ ಮಂಟಪದಲ್ಲಿ ಉದ್ದವಾದ ಎರಡು ಪಟ್ಟಿಕೆಗಳಲ್ಲಿ ರಾಮಾಯಣ ಕಥೆಯನ್ನು ನಿರೂಪಿಸಲಾಗಿದೆ. ಸೀತೆಯ ಅಪಹರಣದ ನಂತರ ರಾಮಲಕ್ಷ್ಮಣರು ಸುಗ್ರೀವನ ಸಖ್ಯಬೆಳೆಸುವುದು. ಸಮುದ್ರಕ್ಕೆ ಸೇತುವೆ ಕಟ್ಟಿ ಲಂಕಾ ಪಟ್ಟಣ ಸೇರುವುದು, ಅಲ್ಲಿ ವಾನರರು ರಾಕ್ಷಸರ ನಡುವಿನ ಯುದ್ಧ. ಕುಂಭಕರ್ಣ. ಇಂದ್ರಜಿತು. ಮುಂತಾದ ರಾಕ್ಷಸ ವೀರರೊಡನೆ ರಾಮಲಕ್ಷ್ಮಣ. ಹನುಮಂತಾದಿಗಳು ಹೋರಾಡುತ್ತಿರುವುದು ಹೀಗೆ ಇಡೀ ಪಟ್ಟಿಕೆಗಳನ್ನು ರಾಮಾಯಣ ದೃಶ್ಯಗಳಿಂದ ತುಂಬಿಸಿದ್ದಾರೆ. ಮೇಲಿನ ಪಟ್ಟಿಯಲ್ಲಿ ಬಲತುದಿಯಲ್ಲಿ ಆದಿಶೇಷನ ಮೇಲೆ ಪವಡಿಸಿದ ನಾರಾಯಣನ ಚಿತ್ರವಿದ್ದರೆ ಎಡತುದಿಯಲ್ಲಿ

ಗಣಪತಿ ಮತ್ತು ನವಿಲಿನ ಮೇಲೆ ಕುಳಿತ ಷಣ್ಮುಖ ಇವರ ಚಿತ್ರ ರಚಿಸಿದೆ. ಈ ರಾಮಾಯಣ ಪಟ್ಟಿಕೆಯಲ್ಲಿ ಹತ್ತುತಲೆಯ ರಾವಣನ ಚಿತ್ರ, ವಾನರರು ಸೇತುವೆಕಟ್ಟಿ ಸಮುದ್ರದಾಟಿದ ದೃಶ್ಯ, ಹನುಮಂತ ಅಂಗದರು ರಾಮ, ಲಕ್ಷ್ಮಣರನ್ನು ಹೆಗಲ ಮೇಲೆ ಹೊತ್ತುಕೊಂಡು ಯುದ್ಧಭೂಮಿಯಲ್ಲಿ ಕಾದುವ ಚಿತ್ರ ಮುಂತಾದ ಕೆಲವು ಚಿತ್ರಗಳು ಆಕರ್ಷಕವಾಗಿವೆ. ರಾಮಾಯಣ ಪಟ್ಟಿಕೆಗಳ ಹಿಂಭಾಗದಲ್ಲಿನ ಬಾಗಿಲ ಎಡಭಾಗದಲ್ಲಿರುವ ಮೂರು ಚಿತ್ರಗಳಲ್ಲಿ ಮೇಲಿನ ಚಿತ್ರದಲ್ಲಿ ಸಾಧು ಒಬ್ಬ ಎಡಗೈಯಲ್ಲಿ ಕಮಂಡಲು, ಬಲಗೈಯಲ್ಲಿ ಜೋಳಿಗೆ ಹಿಡಿದು ಕೊರಳಲ್ಲಿ ಮಾಲೆ ಧರಿಸಿ ನಡೆದಿದ್ದಾನೆ. ಮಧ್ಯದ ಚಿತ್ರದಲ್ಲಿ ವ್ಯಕ್ತಿಯೊಬ್ಬ ಕೈಯಲ್ಲಿ ಆಯುಧ ಹಿಡಿದುಕೊಂಡಿದ್ದು ಆತನ ಹಿಂದುಗಡೆ ಢಾಲು ಚಿತ್ರಿಸಿದೆ. ಕೆಳಗಿನ ಚಿತ್ರದಲ್ಲಿ ಇಬ್ಬರು ವ್ಯಕ್ತಿಗಳಿದ್ದು ಒಬ್ಬನು ದೊಡ್ಡ ಪ್ರಮಾಣದಲ್ಲಿ ಚಿತ್ರಿಸಿದ್ದರೆ ಇನ್ನೊಬ್ಬಾತನನ್ನು ಆತನ ಸೊಂಟದವರೆಗೂ ಮಾತ್ರ ಚಿಕ್ಕ ಪ್ರಮಾಣದಲ್ಲಿ ರೂಪಿಸಿದೆ. ಇಬ್ಬರೂ ಕೈಯಲ್ಲಿ ಖಡ್ಗಗಗಳನ್ನು ಹಿಡಿದುಕೊಂಡಿದ್ದಾರೆ.

೨. ಕರ್ಣಾರ್ಜುನರ ಯುದ್ಧ : ಮತ್ತೊಂದು ಮುಖ್ಯ ಚಿತ್ರ ಇದಾಗಿದೆ. ಕರ್ಣಾರ್ಜುನರು ರಥದಲ್ಲಿ ನಿಂತು ಯುದ್ಧಮಾಡುತ್ತಿದ್ದಾರೆ. ಅರ್ಜುನನಿಗೆ ಶ್ರೀಕೃಷ್ಣ ಸಾರಥಿಯಾಗಿದ್ದರೆ ಕರ್ಣನಿಗೆ ಶಲ್ಯನು ಸಾರಥಿಯಾಗಿದ್ದಾನೆ. ರಥಗಳು ಪೂರ್ತಿಯಾದ ನೈಜರೂಪದಲ್ಲಿ ಚಿತ್ರಿಸದೇ ಸಾಂಕೇತಿಕ ರೂಪದಲ್ಲಿವೆ. ಚೌಕಾಕಾರಕ್ಕೆ ಕೆಳಗಡೆ ಗಾಲಿಗಳನ್ನು ಚಿತ್ರಿಸಿದ್ದು ಚೌಕದ ಒಳಗಡೆ ಯುದ್ಧ ಮಾಡುತ್ತಿರುವ ಕರ್ಣ ಅರ್ಜುನರಿದ್ದಾರೆ. ಅರ್ಜುನನ ರಥಕ್ಕೆ ಅಲ್ಲಲ್ಲಿ ಬಾಣಗಳು ನಾಟಿದ್ದರೂ ಕರ್ಣನ ರಥಕ್ಕೆ ಅರ್ಜುನನು ಬಿಟ್ಟ ಹೆಚ್ಚಿನ ಬಾಣಗಳು ನಾಟಿಕೊಂಡಿವೆ. ಇಲ್ಲಿನ ಆಕರ್ಷಣೆ ಎಂದರೆ ಯುದ್ಧವು ಬರೀ ಕರ್ಣಾರ್ಜುನರ ಮಧ್ಯೆ ನಡೆದಿರದೇ ಸಾರಥಿಗಳಾದ ಕೃಷ್ಣ-ಶಲ್ಯರನಡುವೆಯೂ ನಡೆದಿದೆ ಹಾಗೆ ಎರಡೂ ರಥದ ಕುದುರೆಗಳೂ ಸೆಣಸುತ್ತಿವೆ. ಅದರಂತೆ ಎರಡೂ ರಥಗಳ ಮೇಲಿರುವ ಧ್ವಜಗಳು (ಪತಾಕೆ) ಮಧ್ಯದಲ್ಲಿ ಕದನ ವೇರ್ಪಟ್ಟಿದೆ. ಕರ್ಣನ ರಥದ ಮೇಲಿನ ಧ್ವಜವು ಮುಂದೆಬಾಗಿದ್ದು, ಅರ್ಜುನನ ರಥದ ಮೇಲಿರುವ ಹನುಮಂತನು ತನ್ನಕೈಯಲ್ಲಿರುವ ಧ್ವಜದಿಂದ ಕರ್ಣನ ರಥದ ಧ್ವಜವನ್ನು ಹೊಡೆಯುತ್ತಿದ್ದಾನೆ. ರಥಗಳು ಒಂದಕ್ಕೊಂದು ತೀರ ಹತ್ತಿರದಲ್ಲಿ ನಿಂತಿವೆ. ಸಾರಥಿ ಕುದುರೆಗಳಂತೂ ಒಂದಕ್ಕೊಂದು ತಾಕುತ್ತಿವೆ. ಕರ್ಣಾರ್ಜುನರ ಯುದ್ಧದ ಆಕರ್ಷಕವಾದ ಇನ್ನೊಂದು ಚಿತ್ರ ಅಮ್ಮಿನಭಾವಿಯ ಹಿರೇಮಠದಲ್ಲಿಯೂ ರಚನೆಯಾಗಿದೆ.

೩. ಶಿವನ ಚಿತ್ರ : ಒಳಭಾಗದ ಮಂಟಪದಲ್ಲಿರುವ ಮತ್ತೊಂದು ಆಕರ್ಷಕ ಚಿತ್ರವೆಂದರೆ ನಂದಿಯಮೇಲೆ ಕುಳಿತ ಶಿವನದಾಗಿದೆ. ಇಲ್ಲಿ ಶಿವನ ಎಡತೊಡೆಯ ಮೇಲೆ ಪಾವರ್ತಿ ಕುಳಿತಿದ್ದಾಳೆ. ಪಾರ್ವತಿಯ ಆಕಾರ ಚಿಕ್ಕದಾಗಿದೆ. ಶಿವನ ನಾಲ್ಕು ಕೈಗಳಲ್ಲಿ ಒಂದು ಕೈಯಲ್ಲಿ ಜಿಂಕೆಯುನ್ನು ಹಿಡಿದುಕೊಂಡಿದ್ದರೆ ಒಂದು ಕೈಯಿಂದ ಪಾರ್ವತಿಯನ್ನು ಬಳಸಿಹಿಡಿದು. ಮತ್ತೊಂದು ಕೈ ಅಭಯ ಮುದ್ರೆಯಲ್ಲಿದೆ. ಶಿವನ ಜಟೆಯಲ್ಲಿ ಗಂಗೆಯು ಚಿತ್ರಿತಳಾಗಿದ್ದು ಶಿವನ ಮೇಲ್ಭಾಗದಲ್ಲಿ ಬಲಗಡೆಗೆ ಗಣಪತಿ ಮತ್ತು ಆತನ ವಾಹನ ಇಲಿ ಚಿತ್ರಿಸಲಾಗಿದೆ ಎಡಭಾಗದಲ್ಲಿ ಛತ್ರ ಚಾಮರ ಹಿಡಿದ ಪರಿಚಾರಿಕೆಯರನ್ನು ಚಿತ್ರಿಸಿದೆ. ಬಲಭಾಗದ ಕೆಳಮೂಲೆಯಲ್ಲಿ ಒಬ್ಬಾತ ಜಾಗಟೆಬಾರಿಸುತ್ತಿದ್ದಾನೆ.

೪. ಉಗ್ರನರಸಿಂಹ : ಇಲ್ಲಿ ರಚನೆಯಾಗಿರುವ ಉಗ್ರನರಸಿಂಹನ ಚಿತ್ರದಲ್ಲಿ ನರಸಿಂಹನು ಹಿರಣ್ಯಕಶ್ಯಪನನ್ನು ತೊಡೆಯಮೇಲೆ ಹಾಕಿಕೊಂಡು ಹೊಟ್ಟೆ ಸೀಳುತ್ತಿರುವ ಚಿತ್ರವಿದೆ. ಆದರೆ ಇಲ್ಲಿ ನರಸಿಂಹನ ಹಿಂದೆ ಸಾಂಕೇತಿಕವಾಗಿ

ಆದರೂ ಸೀಳಿದ ಕಂಭವನ್ನು ತೋರಿಸಿಲ್ಲ. ನರಸಿಂಹನು ಕಂಬಂದಿಂದ ಪ್ರತ್ಯಕ್ಷನಾಗಿ ಬರುವಂತೆ ಎಲ್ಲ ಕಡೆಗೂ ಚಿತ್ರಿಸಿರುತ್ತಾರೆ. ನರಸಿಂಹನು ಹಿರಣ್ಯಕಶ್ಯಪನ ಹೊಟ್ಟೆ ಬಗಿಯುತ್ತಿರುವಾಗ ಪ್ರಹ್ಲಾದನು ಕೈಮುಗಿದು ನಿಂತಿರುವ ದೃಶ್ಯವಿದೆ. ಉಗ್ರನರಸಿಂಹನ ಚಿತ್ರವಿರುವ ಎಲ್ಲಕಡೆಗೂ ಇದೇ ರೀತಿ ಇರುವುದು ಸಾಮಾನ್ಯವಾಗಿ ಕಂಡುಬರುತ್ತದೆ.

೫. ಶ್ರೀಕೃಷ್ಣ ಎಲೆಯ ಮೇಲೆ ಮಲಗಿರುವ ಚಿತ್ರ : ನರಸಿಂಹನ ಎಡಭಾಗದಲ್ಲಿ ಆಲದೆಲೆಯ ಮೇಲೆ ಮಲಗಿದ ಶ್ರೀಕೃಷ್ಣನ ಚಿತ್ರವಿದೆ. ಬಾಲಕ ಕೃಷ್ಣನು ಆಲದೆಲೆಯ ಮೇಲೆ ಮಲಗಿಕೊಂಡು ಆಡುತ್ತಿದ್ದು ಬಲಗಾಲ ಹೆಬ್ಬೆರಳನ್ನು ಬಾಯಲ್ಲಿಟ್ಟುಕೊಂಡಿದ್ದಾನೆ. ಕೃಷ್ಣನು ಆಲದೆಲೆಯಲ್ಲಿ ಮಲಗಿಕೊಂಡು ಆಡುತ್ತಿರುವ ಚಿತ್ರ ರಾಯಚೂರಿನ ಖಾಜಿನಗೌಡರ ಮನೆಯಲ್ಲಿಯೂ ಕಂಡುಬರುತ್ತದೆ.

೬. ಷಣ್ಮುಖನ ಚಿತ್ರ : ಮೂರುಮುಖ ಎಂಟು ಕೈಗಳನ್ನು ಹೊಂದಿರುವ ಷಣ್ಮುಖನ ಚಿತ್ರವೊಂದು ಒಳಗಿನ ಮಂಟಪದಲ್ಲಿ ರಚಿಸಿದೆ. ಬಿಲ್ಲು, ಬಾಣ, ಖಡ್ಗ, ಕತ್ತಿ, ಹೀಗೆ ವಿವಿಧ ಆಯುಧಗಳನ್ನು ಎಂಟೂ ಕೈಗಳಲ್ಲಿ ಹಿಡಿದುಕೊಂಡಿದ್ದಾನೆ. ಎಡಬಲಗಳಲ್ಲಿ ಮೇಲ್ಗಡೆಗೆ ಹಾವುಗಳು ಗಿಳಿಗಳು ರಚನೆಯಾಗಿವೆ. ಕೆಳಭಾಗದಲ್ಲಿ ಅಲಂಕಾರಿಕ ಹೂಗಿಡಗಳಿವೆ.

೭. ದಶಾವತಾರದ ಚಿತ್ರ : ಮಂಟಪದ ಮತ್ತೊಂದು ಕಡೆಗೆ ಉದ್ದನಾದ ಪಟ್ಟಿಕೆಯಲ್ಲಿ ದಶಾವತಾರದ ಚಿತ್ರಗಳನ್ನು ಬರೆಯಲಾಗಿದೆ. ಒಂದೊಂದು ಕಮಾನಿನಲ್ಲಿ ಒಂದೊಂದು ಅವತಾರಗಳನ್ನು ಚಿತ್ರಿಸಲಾಗಿದೆ. ಈ ದಶಾವತಾರದ ಚಿತ್ರಗಳನ್ನು ಒಬ್ಬ ಕಲಾವಿದ ಮಾತ್ರ ಚಿತ್ರಿಸಿರದೇ ಒಬ್ಬರಿಗಿಂತ ಹೆಚ್ಚು ಜನಚಿತ್ರಿಸಿದಂತೆ ತೋರುತ್ತದೆ. ಹಾಗಾಗಿ ಈ ದಶಾವತಾರ ಚಿತ್ರಗಳಲ್ಲಿ ಭಿನ್ನ ಶೈಲಿ ಕಂಡಬುರುತ್ತದೆ. ಇದರಲ್ಲಿ ವರಾಹ, ಮತ್ಸ್ಯ ಮತ್ತು ನರಸಿಂಹ ಅವತಾರಗಳ ಚಿತ್ರಗಳು ಉತ್ತಮವಾಗಿವೆ.

೮. ವಿಚಿತ್ರ ಪಕ್ಷಿಯ ಚಿತ್ರ : ಒಳಮಂಟಪದಲ್ಲಿನ ಒಂದು ಕಡೆಗೆ ವಿಚಿತ್ರ ಕಾಲ್ಪನಿಕ ಪಕ್ಷಿಯೊಂದು ಚಿತ್ರಿತವಾಗಿದೆ. ಇದು ಪಕ್ಷಿಯ ದೇಹ ಹೊಂದಿದ್ದರೆ ಆನೆಯ ಮುಖಉಳ್ಳದ್ದಾಗಿದೆ. ಇಂತಹ ಪಕ್ಷಿದೇಹ ಪ್ರಾಣಿಮುಖದ ಕಾಲ್ಪನಿಕ ಪಕ್ಷಿಗಳು ಅಮ್ಮಿನಭಾವಿಯ ಹಿರೇಮಠದಲ್ಲಿಯೂ ರಚನೆಯಾಗಿವೆ. ಇಲ್ಲಿನ ಚಿತ್ರದಲ್ಲಿ ದೇಹದಲ್ಲಿ ಚಿಕ್ಕದಾದ ರೆಕ್ಕೆಗಳು ಇದ್ದರೆ, ನವಿಲಿನ ಪುಚ್ಛವನ್ನು ಅಲಂಕಾರಿಕವಾಗಿ ರಚಿಸಿದೆ. ಸೊಂಡಿಲಿನಲ್ಲಿ ಗಿಡದ ಟೊಂಗೆಯನ್ನು ಚಿತ್ರಿಸಿದ್ದು. ಚಿತ್ರದ ಸುತ್ತಲೂ ಎಲೆಬಳ್ಳಿಯನ್ನು ರೂಪಿಸಲಾಗಿದೆ. ಪಕ್ಷಿಯ ಮೇಲ್ಭಾಗದಲ್ಲಿ ಮತ್ತು ಸೊಂಡಿಲಿನ ಮುಂಭಾಗದಲ್ಲಿ ಎರಡು ವೃತ್ತಾಕಾರದ ಜ್ಯಾಮಿತಿಕ ರೂಪದ ನಕ್ಷೆಗಳಿದ್ದು ಇಡೀ ಚಿತ್ರವೇ ವೃತ್ತಾಕಾರದ ವಿನ್ಯಾಸದಲ್ಲಿರಚನೆಯಾಗಿದೆ.

***II. ಪಶ್ಚಿಮ ಮಂಟಪದ ಚಿತ್ರಗಳು :*** ಪಶ್ಚಿಮ ದಿಕ್ಕಿನ ಮಂಟಪದಲ್ಲಿ ಮುಖ್ಯವಾಗಿ ರಾಮ, ಲಕ್ಷ್ಮಣ, ಸೀತೆಯರ ಚಿತ್ರಗಳು, ಕೃಷ್ಣನ ಕಥಾನಕಗಳು, ಚಿತ್ರಿಸಿದ್ದು ಇದರ ಜೊತೆಗೆ ಇತರ ದೇವತಾ ಚಿತ್ರಗಳೂ ರಚನೆಯಾಗಿದ್ದು ಅವುಗಳ ಕುರಿತು ಒಂದೊಂದಾಗಿ ಈ ಕೆಳಗಿನಂತೆ ವಿವರಿಸಬಹುದು :

೧. ರಾಮಲಕ್ಷ್ಮಣರ ಚಿತ್ರ : ರಾಮಲಕ್ಷ್ಮಣರನ್ನು ಚಿತ್ರಿಸಲಾದ ಒಂದು ಚಿತ್ರದಲ್ಲಿ ರಾಮನನ್ನು ದೊಡ್ಡವನನ್ನಾಗಿ ಲಕ್ಷ್ಮಣನನ್ನು ಚಿಕ್ಕವನನ್ನಾಗಿ ಚಿತ್ರಿಸಿದೆ. ರಾಮನು ಬಿಲ್ಲು ಬಾಣಗಳನ್ನು ಹಿಡಿದುಕೊಂಡಿದ್ದರೆ ಲಕ್ಷ್ಮಣನು ಖಡ್ಗ ಢಾಲುಗಳನ್ನು ಹಿಡಿದಿದ್ದಾನೆ. ಚಿಕ್ಕರೂಪದಲ್ಲಿರುವ ಆಂಜನೇಯನು ರಾಮನ ಪಾದಪೂಜೆಯಲ್ಲಿ ತೊಡಗಿದ್ದಾನೆ.

೨. ರಾಮನ ಚಿತ್ರ : ಇನ್ನೊಂದು ಚಿತ್ರದಲ್ಲಿ ರಾಮನೊಬ್ಬನೇ ಇದ್ದು ಬಿಲ್ಲು ಬಾಣಗಳನ್ನು ಹಿಡಿದುಕೊಂಡಿದ್ದಾನೆ. ಈ ಚಿತ್ರದಲ್ಲಿ ರಾಮನೊಬ್ಬನೇ ಇರುವದರಿಂದ ಚಿತ್ರ ಸಂಯೋಜನೆಯ ದೃಷ್ಟಿಯಿಂದ ಕೆಳಗಡೆ ನೆಲದಲ್ಲಿ ಅಲಂಕಾರಿಕ ಹೂಗಳನ್ನು ಗಿಡಬಳ್ಳಿಗಳನ್ನು ರಚಿಸಿದೆ.

೩. ರಾಮ ಸೀತೆಯ ಚಿತ್ರ : ಈ ಚಿತ್ರದ ಪಕ್ಕದಲ್ಲಿರುವ ಮತ್ತೊಂದು ಚಿತ್ರದಲ್ಲಿ ರಾವಣನ ಮರಣದ ನಂತರ ರಾಮಸೀತೆಯರು ಪರಸ್ಪರ ಭೇಟಿಯಾಗುತ್ತಿರುವ ಸನ್ನಿವೇಶ ಚಿತ್ರಿತವಾಗಿದೆ. ಸೀತೆಯು ಕೈಯಲ್ಲಿ ಹೂವನ್ನು ಹಿಡಿದುಕೊಂಡಿದ್ದು ರಾಮನು ಕೈಗಳ ಚಲನೆಯಿಂದ ಹಾವಭಾವ ವ್ಯಕ್ತಪಡಿಸಿ ಘಟನಾವಳಿಗಳನ್ನು ವಿವರಿಸುತ್ತಿದ್ದಾನೆ. ಕೆಳಭಾಗದಲ್ಲಿ ಎರಡು ಟಗರುಗಳು ಕಾದಾಡುತ್ತಿವೆ. ರಾಮನ ಎಲ್ಲ ಚಿತ್ರಗಳಲ್ಲೂ ಮೀಸೆ ಚಿತ್ರಿಸಿದೆ.

೪. ಗರುಡನ ಚಿತ್ರ : ಗರುಡನ ಚಿತ್ರದಲ್ಲಿ ಆತನ ಎಡಬಲದಲ್ಲಿ ಹಾವುಗಳನ್ನು ಆತನ ತೋಳು ಬಳಸಿದಂತೆ ಚಿತ್ರಿಸಿದೆ. ಗರುಡನ ಕೊರಳಲ್ಲಿ ತೊಡೆಯವರೆಗೆ ಇಳಿಬಿದ್ದ ಆಭರಣವನ್ನು ರಚಿಸಲಾಗಿದ್ದು ಇಂತಹ ಉದ್ದವಾದ ಕೊರಳ ಆಭರಣ ಗುಳೇದಗುಡ್ಡದ ಹೊಸಮನಿಗೌಡರ ಮನೆಯ ಚಿತ್ರದಲ್ಲಿದ್ದುದನ್ನು ನೆನಪಿಸಿಕೊಳ್ಳಬಹುದು. ಗರುಡನ ಹಿಂದೆ ಮುಂದೆ ಮೇಲೆ ಕೆಳಗೆ ಅಲಂಕಾರಿಕ ಗಿಡ. ಬಳ್ಳಿಗಳನ್ನು ರಚಿಸಿದೆ. ಗರುಡನ ಮೇಲ್ಭಾಗದಲ್ಲಿ ಕಾಮಧೇನು ಮತ್ತು ನಾಯಿಯನ್ನು ಹೋಲುವ ಪ್ರಾಣಿಗಳನ್ನು ರಚಿಸಲಾಗಿದೆ.

೫. ದೇವತಾಪುರುಷರ ಚಿತ್ರ : ಗರುಡನ ಚಿತ್ರದ ಮುಂಭಾಗದಲ್ಲಿ ಎರಡು ಕಮಾನುಗಳನ್ನು ರಚಿಸಿ ಅದರಲ್ಲಿ ಇಬ್ಬರು ದೇವತಾ ಪುರುಷರನ್ನು ಚಿತ್ರಿಸಿದೆ. ಒಬ್ಬನು ತೋಳದಂತಹ ಪ್ರಾಣಿಯ ಮೇಲೆ ಕುಳಿತಿದ್ದರೆ ಇನ್ನೊಬ್ಬಾತ ಟಗರಿನ ಮೇಲೆ ಕುಳಿತಿದ್ದಾನೆ. ಇಬ್ಬರ ಮುಂದೆಯೂ ಅಲಂಕಾರಿಕ ಹೂ ಗಿಡಗಳು ಇದ್ದು ಸುತ್ತಲೂ ಹೂಗಳ ಚಿತ್ತಾರಗಳಿಂದ ಅಲಂಕಾರಗೊಳಿಸಿದೆ. ಈ ದೇವತಾ ಪುರುಷರ ಕೆಳಭಾಗದಲ್ಲಿ ಚಿಕ್ಕಪ್ರಮಾಣದಲ್ಲಿ ಮತ್ತೆ ಪ್ರತ್ಯೇಕ ಚಿತ್ರಗಳಿದ್ದು ಮುಂದಿನ ಚಿತ್ರದ ಕೆಳಗೆ ಇರುವ ಚಿತ್ರದಲ್ಲಿ ಒಬ್ಬ ಪುರುಷ ಮತ್ತು ಒಬ್ಬಳು ಸ್ತ್ರೀ ಇದ್ದು ಅವರಿಬ್ಬರ ವಾಗ್ವಾದವನ್ನು ರಾಜಭಟನೋರ್ವನು ಆಲಿಸುತ್ತಿದ್ದಾನೆ. ರಾಜಭಟನು ಸೊಂಟದಲ್ಲಿ ಖಡ್ಗ ಕೈಯಲ್ಲಿ ರಾಜದಂಡ ಹಿಡಿದು ಕೊಂಡಿದ್ದಾನೆ. ಹಿಂದಿನ ಚಿತ್ರದ ಕೆಳಗಿರುವ ಸಣ್ಣ ಚಿತ್ರದಲ್ಲಿ ಆಕಳು ತನ್ನ ಕರುವಿಗೆ ಹಾಲುಣಿಸುತ್ತಿರುವ ಚಿತ್ರ ಇದೆ.

೬. ರಾಜರ ಚಿತ್ರ : ಒಳಭಾಗದಲ್ಲಿ ಮತ್ತೊಂದು ಕಡೆ ಜೋಡಿಯಾಗಿರುವ ಎರಡು ಕಮಾನು ರಚಿಸಿ ಅದರಲ್ಲಿ ಪ್ರತಿಯೊಂದರಲ್ಲಿ ಒಬ್ಬೊಬ್ಬ ವ್ಯಕ್ತಿಯನ್ನು ರಚಿಸಲಾಗಿದೆ. ಎಡಭಾಗದ ಕಮಾನಿನಲ್ಲಿರುವ ವ್ಯಕ್ತಿ ಕುದುರೆ ಮೇಲೆ ಕುಳಿತು ಧಾವಿಸುತ್ತಿದ್ದು ಕೈಯಲ್ಲಿ ಉದ್ದವಾದ ಖಡ್ಗ ಹಿಡಿದ್ದಾನೆ. ಈ ಚಿತ್ರದ ಕೆಳಗಡೆ ಇರುವ ಚಿಕ್ಕ ಚಿತ್ರದಲ್ಲಿ ಮಜ್ಜಿಗೆ ಕಡೆದು ಬೆಣ್ಣೆ ತೆಗೆಯುತ್ತಿರುವ ಯಶೋಧೆ ಆಕೆಯ ಮುಂದೆ ಗಡಿಗೆಯಲ್ಲಿ ಕೈಹಾಕಿ ಬೆಣ್ಣೆ ತಿನ್ನುತ್ತಿರುವ ಕೃಷ್ಣ ಚಿತ್ರಿತವಾಗಿದ್ದಾರೆ. ಬಲಗಡೆ ಇರುವ ಕಮಾನಿನಲ್ಲಿ ಆನೆಯಮೇಲೆ ಕುಳಿತ ವ್ಯಕ್ತಿ ಇದ್ದಾನೆ. ಆತನ ಎದುರಿಗೆ ಅಲಂಕಾರಿಕ ಹೂಬಳ್ಳಿ ಇದೆ. ಈ ಚಿತ್ರದ ಕೆಳಭಾಗದಲ್ಲಿ ಇರುವ ಚಿಕ್ಕ ಚಿತ್ರದಲ್ಲಿ ಎರಡು ಗೂಳಿಗಳು ಕಾದಾಡುತ್ತಿರುವ ದೃಶ್ಯವಿದೆ.

೭. **ನಂದಿಯ ಮೇಲೆ ಕುಳಿತ ಶಿವನ ಚಿತ್ರ :** ಮತ್ತೊಂದು ಚಿತ್ರದಲ್ಲಿ ಈ ಎರಡು ಕಮಾನುಗಳ ಬಲಭಾಗದ ಚಿತ್ರದಲ್ಲಿ ನಂದಿಯ ಮೇಲೆ ಕುಳಿತ ಚಂದ್ರಶೇಖರ ಶಿವನ ರೂಪ ಚಿತ್ರಿಸಿದೆ. ಈ ಚಿತ್ರದ ಕೆಳಗಿರುವ ಚಿಕ್ಕ ಪ್ರಮಾಣದ ಚಿತ್ರದಲ್ಲಿ ಎರಡು ಗಿಳಿಗಳಿವೆ. ಎಡಕ್ಕಿರುವ ಮತ್ತೊಂದು ಚಿಕ್ಕ ಚಿತ್ರದಲ್ಲಿ ಇಬ್ಬರು ವ್ಯಕ್ತಿಗಳು ಕಾದಾಡುತ್ತಿದ್ದಾರೆ. ಒಬ್ಬರ ತಲೆ ಜುಟ್ಟನ್ನು ಇನ್ನೊಬ್ಬರು ಕೈಯಲ್ಲಿ ಹಿಡಿದುಕೊಂಡಿದ್ದು, ಇನ್ನೊಂದು ಕೈಗಳಲ್ಲಿ ಚಿಕ್ಕ ಚಿಕ್ಕ ಆಯುಧ ಹಿಡಿದುಕೊಂಡಿದ್ದಾರೆ.

೮. ಕೃಷ್ಣನ ಚಿತ್ರ : ಇದರ ಎಡಭಾಗದಲ್ಲಿರುವ ಇನ್ನೊಂದು ಚಿತ್ರದಲ್ಲಿ ಗರುಡನು ಕೃಷ್ಣನನ್ನು ಹೆಗಲ ಮೇಲೆ ಹೊತ್ತುಕೊಂಡು ಹೋಗುತ್ತಿದ್ದಾನೆ. ಚಿತ್ರದ ಸುತ್ತಲೂ ಅಲಂಕಾರಿಕ ಹೂ ಬಳ್ಳಿಯ ಚಿತ್ರಣವಿದೆ. ಇದರ ಕೆಳಭಾಗದಲ್ಲಿ ಇರುವ ಪಟ್ಟಿಕೆಯಲ್ಲಿ ವೃತ್ತಗಳು ಮತ್ತು ಕದನ ದೃಶ್ಯ ರಚಿಸಿದೆ. ಕದನ ದೃಶ್ಯದಲ್ಲಿ ದೇವತಾ ಪುರುಷನೊಬ್ಬನು ರಾಕ್ಷಸನೊಡನೆ ಹೋರಾಡುತ್ತಿದ್ದಾನೆ. ಇವರಿಬ್ಬರು ಹಿಡಿದುಕೊಂಡಿರುವ ಆಯುಧಗಳು ಅಲಂಕಾರಯುಕ್ತವಾಗಿವೆ.

***III. ದಕ್ಷಿಣ ಮಂಟಪದ ಚಿತ್ರಗಳು :*** ಮಾರಿಕಾಂಬಾ ದೇವಾಲಯದ ದಕ್ಷಿಣದಿಕ್ಕಿನ ಮಂಟಪದಲ್ಲಿ ಮಾನವಾಕೃತಿಗಳು. ಪ್ರಾಣಿಪಕ್ಷಿಗಳ ಚಿತ್ರಗಳಿರದೇ ವೈವಿಧ್ಯಮಯವಾದ ನಕ್ಷಾ ಚಿತ್ರಣದಿಂದ ಇಡೀ ಮಂಟಪವನ್ನು ಅಲಂಕರಿಸಲಾಗಿದೆ. ಈ ಮಂಟಪದಲ್ಲಿನ ಕಮಾನುಗಳು. ಮೇಲ್ಛಾವಣಿ. ಗೋಡೆಗಳು ಹೀಗೆ ಎಲ್ಲಕಡೆಗೂ ನಕ್ಷಾವಿನ್ಯಾಸ ತುಂಬಿದೆ. ವೃತ್ತಕಾರದ ನಕ್ಷೆಗಳಲ್ಲದೇ ಹೂ ಬಳ್ಳಿಯ ಚಿತ್ರಣ. ಸುಳುವುಗಳ ಚಿತ್ರಣ ಹೀಗೆ ಹಲವು ವಿಧದ ನಕ್ಷೆಗಳ ರೂಪಗಳು ಇಲ್ಲಿ ಕಂಡುಬರುತ್ತವೆ.

**II. ಶಾರದಾಂಬಾ ದೇವಾಲಯ, ಹೊನ್ನಾವರ :** ಹೊನ್ನಾವರದ ರಥಬೀದಿಯಲ್ಲಿರುವ ಇನ್ನೊಂದು ಮುಖ್ಯದೇವಾಲಯ ಶಾರದಾಂಬಾ ದೇಲವಾಲಯವಾಗಿದೆ. ಇದು ವೆಂಕಟರಮಣ ದೇವಾಲಯದ ಎದುರಿಗೇ ಕಟ್ಟಲ್ಪಟ್ಟಿದೆ. ಈ ದೇವಾಲಯದಲ್ಲೂ ಕಾವಿಭಿತ್ತಿಚಿತ್ರಕಲೆ ಕಂಡುಬರುತ್ತದೆ. ಮೊದಲು ಇಡೀ ದೇವಾಲಯವು ಕಾವಿಕಲೆಯಿಂದ ಅಲಂಕರಿಸಲಾಗಿತ್ತು. ಆದರೆ ದೇವಾಲಯವನ್ನು ನವೀಕರಣಗೊಳಿಸುವಾಗ ದೇವಾಲಯದಲ್ಲಿದ್ದಂತಹ ಎಲ್ಲ ಚಿತ್ರಗಳನ್ನು ಅಳಿಸಿಹಾಕಲಾಗಿದೆ. ಆದರೆ ಒಂದೆರಡು ಕಡೆ ಮಾತ್ರ ಜ್ಯಾಮಿತಿಕ ರೂಪದ ನಕ್ಷೆಗಳನ್ನು ಹಾಗೇ ಉಳಿಸಲಾಗಿದೆ. ಈ ದೇವಾಲಯದಲ್ಲಿ ನಕ್ಷಾ ವಿನ್ಯಾಸವು ಮುಖ್ಯವಾಗಿ ಎರಡು ಕಡೆಗೆ ಕಂಡುಬರುತ್ತದೆ. ಅದನ್ನು ಈ ಕೆಳಗಿನಂತೆ ವಿಂಗಡಿಸಬಹುದು.

೧. ಗರ್ಭಗೃಹದ ಸುತ್ತಲಿನ ಗೋಡೆಯ ನಕ್ಷಾವಿನ್ಯಾಸ

೨. ಮಂಟಪದ ಗೋಡೆಯ ನಕ್ಷಾವಿನ್ಯಾಸ

೧. **ಗರ್ಭಗೃಹದ ಸುತ್ತಲಿನ ಗೋಡೆಯ ನಕ್ಷಾವಿನ್ಯಾಸ :** ಗರ್ಭಗೃಹದ ಸುತ್ತಲೂ ಹೊರಗೋಡೆಯಲ್ಲಿ ನಕ್ಷಾವಿನ್ಯಾಸವನ್ನು ರಚಿಸಲಾಗಿದ್ದು. ಬಾಗಿಲ ಅಂಚು. ಗೋಡೆಯ ಮೂಲೆಗಳು. ಗೋಡೆಯ ಮೇಲೆ ಕೆಳಗಿನ ಅಂಚುಗಳಲ್ಲಿ, ಗೋಡೆಯಲ್ಲಿನ ಕಂಬ, ಕಿಟಕಿ, ಮಾಡುಗಳ ಅಂಚುಗಳಿಗೆ ನಕ್ಷೆಯನ್ನು ರೂಪಿಸಿದ್ದು ಕಂಡುಬರುತ್ತದೆ. ಈ ವಿನ್ಯಾಸವು ಒಂದೇ ಅಳತೆಯಲ್ಲಿ ಒಂದರ ಹಿಂದೆ ಒಂದು ಅಡ್ಡರೇಖೆಗಳನ್ನು ಎಳೆದು, ಪುನರಾವರ್ತಿಸಿದ

ರೂಪದಲ್ಲಿದೆ. ಇನ್ನೊಂದು ಬಗೆ ಎಂದರೆ, ಹಗ್ಗದ ಮುರಿಗೆಯ ಹಾಗಿದ್ದರೆ. ಮತ್ತೊಂದು ವಿನ್ಯಾಸವು ಎಲೆಬಳ್ಳಿಯ ಜ್ಯಾಮಿತಿಕ ರೂಪದಲ್ಲಿದೆ. ಈ ಮೂರುಬಗೆಯ ನಕ್ಷೆಯನ್ನೇ ಗರ್ಭಗೃಹದ ಸುತ್ತಲಿನ ಗೋಡೆಯಲ್ಲಿ ರಚನೆಮಾಡಲಾಗಿದೆ. ಇಲ್ಲಿಯೂ ಮೂಲಕಾವಿಬಣ್ಣದ ಮೇಲೆ ಆಧುನಿಕ ವಾರ್ನಿಸ್ ಬಣ್ಣದ ಲೇಪನ ಮಾಡಲಾಗಿದೆ.

**೨. ಮಂಟಪದ ಗೋಡೆಯ ನಕ್ಷಾವಿನ್ಯಾಸ :** ದೇವಾಲಯದ ಒಳಗಿನ ಪ್ರಾಕಾರದಲ್ಲಿ ಗರ್ಭಗೃಹಕ್ಕೆ ಎದುರಾಗಿ ಸಾಲಾದ ಕಮಾನಿನಾಕಾರದ ಮಂಟಪಗಳನ್ನು ಕಟ್ಟಿಸಲಾಗಿದ್ದು, ಆ ಮಂಟಪಗಳ ಗೋಡೆಯ ಮೇಲೆ ನಕ್ಷಾವಿನ್ಯಾಸಗಳನ್ನು ರೂಪಿಸಲಾಗಿದೆ. ಜ್ಯಾಮಿತಿಕ ರೂಪದ ಈ ವೃತ್ತದ ನಕ್ಷೆಗಳು ಭಿನ್ನಭಿನ್ನ ರೂಪದಲ್ಲಿದ್ದು ಒಂದೇ ಅಳತೆಯಲ್ಲಿವೆ. ಕೆಲವು ವೃತ್ತದ ನಕ್ಷೆಗಳನ್ನು ಹೂಗಳಂತೆ ಪರಿಭಾವಿಸಿ ಅವುಗಳಿಗೆ ಎಲೆ, ಕಾಂಡ, ಹಣ್ಣುಕಾಯಿಗಳನ್ನು ಚಿತ್ರಿಸಿ ಗಿಡದ ರೂಪ ಕೊಡಲಾಗಿದೆ. ಇವುಗಳು ಕೂಡಾ ಆಧುನಿಕ ವರ್ಣ ಲೇಪನದಿಂದ ತಮ್ಮ ಮೂಲಸ್ವರೂಪನ್ನು ಕಳೆದುಕೊಂಡಿವೆ.

**III. ಅಮ್ಮನವರ ದೇವಾಲಯ, ಮಾವಿಕುರ್ವೆ :** ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿಗೆ ಸೇರಿದ ಮಾವಿನಕುರ್ವೆಗ್ರಾಮವು ಹೊನ್ನಾವರದಿಂದ ಸುಮಾರು ೫ ಕಿ. ಮಿ. ಗಳ ಅಂತರದಲ್ಲಿದೆ. ನದಿಯ ಆಚೆಯ ದಡದಲ್ಲಿರುವ ಮಾವಿನಕುರ್ವೆಗೆ ದೋಣಿಯಮೂಲಕ ಪ್ರಯಾಣಿಸಬಹುದು. ಇಲ್ಲವೆ ೨೨ ಕಿ. ಮಿ. ಗಳ ದೂರದಲ್ಲಿನ ಸೇತುವೆಯ ಮೂಲಕ ಬಳಸುದಾರಿಯಲ್ಲಿ ರಸ್ತೆಯಮೂಲಕ ತಲುಪಬಹುದು. ಈ ಗ್ರಾಮದ ಗ್ರಾಮದೇವತೆಯನ್ನು ಸ್ಥಳೀಯವಾಗಿ ಅಮ್ಮನವರ ದೇವಾಲಯ ಎಂದು ಕರೆಯುತ್ತಿದ್ದು. ಈ ದೇವಾಲಯದಲ್ಲಿ ಕಾವಿ ಚಿತ್ರಗಳು ರಚನೆಯಾಗಿವೆ. ಆದರೆ ಈಗ ದೇವಾಲಯ ನವೀಕರಿಸಿದ್ದರಿಂದ ಚಿತ್ರಗಳು ನಾಶವಾಗಿವೆ. ಈ ದೇವಾಲಯದ ಚಿತ್ರಗಳನ್ನು ಸ್ಥೂಲವಾಗಿ ಈ ಕೆಳಗಿನಂತೆ ವಿಂಗಡಿಸಬಹುದು.

೧. ದೇವಿ ಚಿತ್ರಗಳು

೨. ಇತರ ದೇವತೆಗಳ ಚಿತ್ರಗಳು

೩. ನಕ್ಷಾ ರೂಪಗಳು

**೧. ದೇವಿ ಚಿತ್ರಗಳು :** ಹೊರಗೋಡೆಯಲ್ಲಿ ಸುತ್ತಲೂ ಚಿತ್ರಗಳನ್ನು ರಚಿಸಲಾಗಿದ್ದು ಅವುಗಳಲ್ಲಿ ಮುಖ್ಯವಾಗಿ ದೇವಿಮಹಾತ್ಮೆಯನ್ನು ಬಿಂಬಿಸುವ ಚಿತ್ರಗಳಿವೆ. ಮಧ್ಯದಲ್ಲಿ ಅಲ್ಲಲ್ಲಿ ಇತರ ದೇವತೆಗಳಿಗೆ ಸಂಬಂಧಿಸಿದ ಚಿತ್ರಗಳು ರಚಿಸಿವೆ. ದೇವಿ ಚಿತ್ರಗಳೆಲ್ಲ ಆಕೆ ರಾಕ್ಷಸರನ್ನು ಸಂಹರಿಸುತ್ತಿರುವಂತೆ ಚಿತ್ರಿಸಿವೆ. ಅಂತಹ ಒಂದು ಚಿತ್ರದಲ್ಲಿ ಸಿಂಹದ ಮೇಲೆ ಕುಳಿತ ದೇವಿಯು ಹದಿನೆಂಟು ಕೈಗಳನ್ನು ಹೊಂದಿದ್ದು. ಬೇರೆ ಬೇರೆ ಆಯುಧಗಳನ್ನು ಧರಿಸಿದ್ದಾಳೆ. ಮಹಿಷರೂಪದ ರಾಕ್ಷಸನನ್ನು ಉದ್ದನಾದ ಈಟಿಯಿಂದ ಚುಚ್ಚಿ ಕೊಲ್ಲುತ್ತಿರುವ ರೂಪವು ಉಗ್ರವಾಗಿದೆ. ನೆಲಕ್ಕೆ ಬಿದ್ದ ಮಹಿಷಾಸುರನು ಖಡ್ಗ ಢಾಲುಗಳನ್ನು ಹಿಡಿದುಕೊಂಡಿದ್ದು ಇನ್ನೂ ದೇವಿಯೊಡನೆ ಕಾದುತ್ತಿರುವಂತೆ ಇದೆ. ಮತ್ತೊಂದು ಚಿತ್ರದಲ್ಲಿ ದೇವಿಯು ಇನ್ನೊಬ್ಬ ರಾಕ್ಷಸನನ್ನು ಸಂಹರಿಸುತ್ತಿರುವ ಚಿತ್ರವಿದ್ದು. ಇಲ್ಲಿಯೂ ದೇವಿಗೆ ಹದಿನೆಂಟು ಕೈಗಳಿವೆ. ದೇವಿಯಿಂದ ಸಂಹರಿಸಲ್ಪಟ್ಟ ರಾಕ್ಷಸನ ರುಂಡವು ಕೆಳಗೆ ಬಿದ್ದಿದ್ದು. ಅದರಿಂದ ರಕ್ತವು ತೊಟ್ಟಿಕ್ಕುತ್ತಿದೆ. ಕೆಳಗೆ ಬಿದ್ದ ರಾಕ್ಷಸನ ಕೈಗಳಲ್ಲಿ ಖಡ್ಗ ಗುರಾಣಿಗಳು ಇನ್ನೂ ಹಿಡಿಯಲ್ಪಟ್ಟಿವೆ. ಇಲ್ಲಿ ದೇವಿಯ ಕೈಗಳಲ್ಲಿ ವಿವಿಧ ಆಯುಧಗಳ ಜೊತೆಗೆ ಶಂಖ ಚಕ್ರ ಗಧೆಗಳೂ ಕಂಡುಬರುತ್ತವೆ. ಇಂತಹ ದೇವಿಯ ಚಿತ್ರಗಳು ದೇವಾಲಯದ ಸುತ್ತಲೂ ರಚನೆಯಾಗಿದ್ದು, ಈಗ ದೇವಾಲಯ ನವೀಕರಣದಿಂದ ನಾಶವಾಗಿವೆ.

**೨. ಇತರ ದೇವತೆಗಳ ಚಿತ್ರಗಳು :** ದೇವಿ ಚಿತ್ರಗಳ ಮಧ್ಯದಲ್ಲಿ ಅಲ್ಲಲ್ಲಿ ಇತರ ದೇವತೆಗಳ ಚಿತ್ರಗಳನ್ನೂ ರಚಿಸಿದ್ದು ಅವುಗಳು ಸಹಿತ ನಾಶವಾಗಿವೆ. ಅಂತಹ ಒಂದು ಚಿತ್ರ ಶೇಷಶಯನ ವಿಷ್ಣುವಿನದಾಗಿದೆ. ಇದರಲ್ಲಿ ಆದಿಶೇಷನ ಮೇಲೆ ಕುಳಿತ ವಿಷ್ಣು ಲಕ್ಷ್ಮೀಯರದಾಗಿದೆ. ಇದರಲ್ಲಿ ವಿಷ್ಣುವು ಲಕ್ಷ್ಮೀದೇವಿಯ ಸೇವೆಯಲ್ಲಿ ತೊಡಗಿದ್ದಾನೆ. ಅವಳ ಪಾದಕ್ಕೆ ಹೂಗಳನ್ನು ಸಮರ್ಪಿಸಿ ಅವಳನ್ನು ಸಂತೈಸುತ್ತಿದ್ದಾನೆ. ಆದಿಶೇಷನು ತನ್ನ ಹೆಡೆಯಿಂದ ಇವರಿಗೆ ನೆರಳು ಒದಗಿಸಿದ್ದು ಸುತ್ತಲೂ ಹೂಬಳ್ಳಿಯ ನಕ್ಷೆ ರಚನೆಯಾಗಿದೆ. ಮತ್ತೊಂದು ಕಡೆಗೆ ಗೋವರ್ಧನ ಗಿರಿಧಾರಿ ಕೃಷ್ಣನ ಚಿತ್ರವಿದೆ. ತನ್ನ ಕಿರುಬೆರಳಿಂದ ಗೋವರ್ಧನ ಗಿರಿಯನ್ನು ಎತ್ತಿಹಿಡಿದ ಕೃಷ್ಣನು ಇನ್ನೊಂದು ಕೈಯನ್ನು ಸೊಂಟದಮೇಲೆ ಇಟ್ಟುಕೊಂಡಿರುವ ಭಂಗಿಯು ಆಕರ್ಷಕವಾಗಿದೆ. ಕೃಷ್ಣನು ಎತ್ತಿದ ಪರ್ವತದ ಕೆಳಗೆ ಗೋವುಗಳು, ಗೋಪಾಲಕರು ಆಶ್ರಯ ಪಡೆದಿದ್ದಾರೆ. ಇಂತಹ ಇತರ ದೇವತಾ ಚಿತ್ರಗಳೂ ಅಲ್ಲಲ್ಲಿ ರಚನೆಯಾಗಿದ್ದಾಗಿ ಸ್ಥಳೀಯರು ಹೇಳುತ್ತಾರೆ. ಆದರೆ ದೇವಾಲಯದ ನವೀಕರಣದಿಂದಾಗಿ ಇವುಗಳೂ ನಾಶವಾಗಿವೆ.

**೩. ನಕ್ಷಾ ರೂಪಗಳು :** ದೇವಾಲಯದ ಬಾಗಿಲುಗಳು, ಕಿಟಕಿ, ಮಾಡುಗಳಲ್ಲಿ, ಗೋಡೆಯ ಅಂಚುಗಳಿಗೆ ಜ್ಯಾಮಿತಿಕರೂಪದ ನಕ್ಷೆ ರಚನೆ ಮಾಡಲಾಗಿದ್ದು, ಮೇಲೆ ಸುಣ್ಣ ಬಣ್ಣ ಸಾರಿಸಿ ಅಳಿಸಲಾಗಿದೆ. ತೆಳುವಾದ ಸುಣ್ಣಲೇಪನವಾದಕಡೆಯಲ್ಲಿ ಹಿನ್ನೆಲೆಯಲ್ಲಿ ನಕ್ಷಾ ಚಿತ್ರಣದ ಕುರುಹುಗಳು ಮಸುಕಾಗಿ ಕಂಡು ಬರುತ್ತವೆ.

**IV. ಮಾರಿಕಾಂಬಾ ದೇವಸ್ಥಾನ, ಬಿಳಗಿ :** ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲೂಕಿನ ಬಿಳಗಿಯಿಂದ ಸುಮಾರು ಆರು ಕಿ. ಮಿ. ಗಳ ಅಂತರದಲ್ಲಿ ಮಾರಿಕಾಂಬಾ ದೇವಾಲಯವು ನಿರ್ಮಿಸಿದೆ. ಈ ದೇವಾಲಯದಲ್ಲಿ ಕ್ರಿ. ಶ. ೧೯೦೦ ರಲ್ಲಿ ರಚನೆಯಾದ ಕಾವಿಚಿತ್ರಗಳಿದ್ದು ಅವುಗಳನ್ನು ಬಿಳಗಿಯ ತಿಮ್ಮಣ್ಣ ಪೈ ಅವರ ನೇತೃತ್ವದ ಕಲಾವಿದರ ತಂಡ ರಚನೆಮಾಡಿದೆ ಎಂಬುದಾಗಿ ಹೇಳಲಾಗುತ್ತದೆ.[೧೯೭] ಆದರೆ ಇಡೀ ದೇವಾಲಯವನ್ನು ಇತ್ತೀಚೆಗೆ ಸಂಪೂರ್ಣ ನವೀಕರಣಮಾಡಿ ಕಟ್ಟಲಾಗಿದ್ದು, ಯಾವುದೇ ಚಿತ್ರಗಳು ಉಳಿದುಕೊಂಡಿಲ್ಲ.

**V. ಭುವನೇಶ್ವರಿ ದೇವಾಲಯ, ಭುವನಗಿರಿ :** ಸಿದ್ಧಾಪುರ ತಾಲೂಕಿನ ಬಿಳಗಿಯಿಂದ ಸುಮಾರು ಹತ್ತು ಕಿಮಿಗಳ ಅಂತರದಲ್ಲಿ ಈ ದೇವಾಲಯವಿದೆ. ಭುವನಗಿರಿ ಎಂಬ ಚಿಕ್ಕ ಬೆಟ್ಟದ ಮೇಲೆ ಈ ಭುವನೇಶ್ವರಿ ದೇವಾಲಯ ಕಟ್ಟಲ್ಪಟ್ಟಿದೆ. ಇಲ್ಲಿನ ಚಿತ್ರಗಳನ್ನು ಕ್ರಿ. ಶ. ೧೯೦೧-೦೨ ರ ಅವಧಿಯಲ್ಲಿ ರಚನೆಮಾಡಲಾಗಿದೆ ಎಂಬ ಹೇಳಿಕೆ ಇದ್ದು,[೧೯೮] ಈಗ ಅಲ್ಲಿ ಚಿತ್ರಗಳು ಇಲ್ಲ. ಇಲ್ಲಿ ದೇವಿ ಮಹಾತ್ಮೆಯನ್ನು ಬಿಂಬಿಸುವ ಚಿತ್ರಗಳಲ್ಲದೇ ಮಧ್ಯದಲ್ಲಿ ಅಲ್ಲಲ್ಲಿ ಇತರ ದೇವತಾ ಚಿತ್ರಗಳೂ ವಿವಿಧ ನಕ್ಷಾರೂಪಗಳೂ ಚಿತ್ರಿಸಿದ್ದವೆಂದು ಸ್ಥಳೀಯರು ಹೇಳುತ್ತಾರೆ. ಆದರೆ ಇಲ್ಲಿಯೂ ದೇವಾಲಯವನ್ನು ನವೀಕರಿಸಿ ಕಟ್ಟಲಾಗಿದ್ದು ಚಿತ್ರಗಳು ನಾಶವಾಗಿವೆ.

**VI. ಶ್ರೀ ಶಾಂತಿಕಾ ಪರಮೇಶ್ವರಿ ದೇವಾಲಯ, ಸಾಂತಗಲ್ :** ಉತ್ತರ ಕನ್ನಡ ಜಿಲ್ಲೆಯ ಕುಮಟಾ ತಾಲೂಕಿಗೆ ಸೇರಿದ ಸಾಂತಗಲ್ ಗ್ರಾಮವು ಸಂತೇಗುಳಿ ಮಂಡಳ ಪಂಚಾಯತ್ ವ್ಯಾಪ್ತಿಗೆ ಸೇರಿದೆ. ಇಲ್ಲಿನ ಶ್ರೀ

---

೧೯೭. ಪದ್ಮಾಕರ ಮಡಗಾಂವಕರ (ಸಂ.) : ಶ್ವೇತಪುರ, ಪುಟ ೯

೧೯೮. ಭುವನೇಶ್ವರಿ ದೇವಾಲಯದ ಚಿತ್ರಗಳನ್ನು ೧೯೦೧-೦೨ ರ ಅವಧಿಯಲ್ಲಿ ರಚನೆ ಮಾಡಲಾಗಿದೆ ಎಂದು ಹೇಳಿದವರು ಸಮೀಪದ ಬಿಳಗಿಯ ಸೀತಾರಾಮಚಂದ್ರ ದೇವಾಲಯದ ಪೂಜಾರಿಗಳಾದ ೮೯ ವರ್ಷ ವಯಸ್ಸಿನ ಶ್ರೀ ಜಿ. ಶ್ರೀನಿವಾಸ ಭಟ್ಟ, ಚಿಣೆವಾರ.

ಶಾಂತಿಕಾ ಪರಮೇಶ್ವರಿ ದೇವಾಲಯದಲ್ಲಿ ಕಾವಿಚಿತ್ರಕಲೆ ಕಂಡುಬರುತ್ತದೆ. ಈ ದೇವಾಲಯದ ಹೊರಗೋಡೆಗಳು ಕಾವಿಕಲೆಯಿಂದ ಅಲಂಕರಿಸಲ್ಪಟ್ಟಿದ್ದು, ನಕ್ಷೆಗಳು, ಸುಳಿವುಗಳ ವಿನ್ಯಾಸಗಳು ಇಲ್ಲಿ ರಚಿಸಿವೆ. ಈ ದೇವಾಲಯದ ನಕ್ಷಾವಿನ್ಯಾಸವನ್ನು ಈ ಕೆಳಗಿನಂತೆ ಮೂರು ವಿಧದಲ್ಲಿ ವಿಂಗಡಿಸಬಹುದು :

೧. ಹೂ ಬಳ್ಳಿಯ ನಕ್ಷೆ
೨. ಹಗ್ಗದ ವಿನ್ಯಾಸದ ನಕ್ಷೆ
೩. ಕಟ್ಟಡ ವಿನ್ಯಾಸದ ನಕ್ಷೆ

**೧. ಹೂ ಬಳ್ಳಿಯ ನಕ್ಷೆ :** ಈ ನಕ್ಷೆಯು ಬಾಗಿಲು ಮತ್ತು ಸುತ್ತಲಿನ ಕಿಟಕಿಗಳ ಅಂಚುಗಳಿಗೆ ಚಿತ್ರಿಸಿದೆ. ಒಂದೇ ಅಳತೆಯ ವೃತ್ತಗಳನ್ನು ಸಾಲಾಗಿ ರಚಿಸಿ ಅವುಗಳಲ್ಲಿ ನಾಲ್ಕು ಎಸಳಿನ ಹೂವನ್ನು ಜ್ಯಾಮಿತಿಕ ರೂಪದಲ್ಲಿ ರಚನೆಮಾಡಲಾಗಿದೆ. ಈ ನಕ್ಷೆಯು ಆರು ಕಿಟಕಿಗಳಿಗೆ ರಚಿಸಿದೆ.

**೨. ಹಗ್ಗದ ವಿನ್ಯಾಸದ ನಕ್ಷೆ :** ಸಾಮಾನ್ಯವಾಗಿ ಹೆಚ್ಚಿನ ದೇವಾಲಯಗಳಲ್ಲಿ ಕಂಡುಬರುವ ಈ ನಕ್ಷಾವಿನ್ಯಾಸವು ಇಲ್ಲಿ ಗರ್ಭಗೃಹದ ಬಾಗಿಲಿನ ಎಡಬಲಗಳಲ್ಲಿರುವ ಕಿಟಕಿಯ ಸುತ್ತಲೂ ರಚಿಸಲಾಗಿದೆ. ಜ್ಯಾಮಿತಿಕ ರೂಪದ ಈ ನಕ್ಷೆಯು ಹಗ್ಗದ ಮುರಿಗೆಯಂತೆ ಕಂಡಬರುತ್ತದೆ.

**೩. ಕಟ್ಟಡ ವಿನ್ಯಾಸದ ನಕ್ಷೆ :** ದೇವಾಲಯದ ಎದುರು ಭಾಗದಲ್ಲಿ ಕಿಟಕಿಗಳ ಪಕ್ಕದಲ್ಲಿ ಈ ವಿಧವಾದ ನಕ್ಷೆ ರೂಪಿಸಲಾಗಿದ್ದು. ಚೌಕಾದ ಕಲ್ಲು ಅಥವಾ ಇಟ್ಟಿಗೆಯನ್ನು ಬಳಸಿ ಕಟ್ಟಲಾದ ಕಟ್ಟಡದ ಗೋಡೆಯಂತೆ ಈ ವಿನ್ಯಾಸ ಕಂಡುಬರುತ್ತದೆ. ಇಲ್ಲಿ ಗೋಡೆಗೆ ಕಾವಿಬಣ್ಣದ ಭಿತ್ತಿಯನ್ನು ಇಡಿಯಾಗಿ ಲೇಪಿಸಿ, ಅದನ್ನು ಸಾಲಾಗಿ ಅಡ್ಡ ಉದ್ದಗೆರೆಗಳಿಂದ ಕೊರೆದು ಇಂತಹ ವಿನ್ಯಾಸ ರೂಪಿಸಲಾಗಿದೆ. ಈ ದೇವಾಲಯದ ಕಾವಿ ಚಿತ್ರಣವು ಮೂಲರೂಪದಲ್ಲಿ ಉಳಿದುಕೊಂಡಿದ್ದು, ತಿದ್ದುಪಡಿಗೆ ಒಳಗಾಗಿಲ್ಲ.'

**VII. ಮಹಾಳಸಾ ನಾರಾಯಣಿ ದೇವಾಲಯ, ಕುಮಟಾ :** ಉತ್ತರ ಕನ್ನಡ ಜಿಲ್ಲೆಯ ಕುಮಟಾ ತಾಲೂಕು ಕೇಂದ್ರವಾಗಿದ್ದು ಜಿಲ್ಲಾ ಕೇಂದ್ರವಾದ ಕಾರವಾದಿಂದ ಸುಮಾರು ೮೦ ಕಿ.ಮಿ. ಗಳ ಅಂತರದಲ್ಲಿದೆ. ಇಲ್ಲಿನ ಮಹಾಳಸಾ ನಾರಾಯಣಿ ದೇವಾಲಯದಲ್ಲಿ ಕಾವಿ ಚಿತ್ರಗಳು ರಚನೆಯಾಗಿವೆ. ಈ ಚಿತ್ರಗಳ ಮೇಲೂ ಆಧುನಿಕ ವಾರ್ನಿಸ್ ಬಣ್ಣ ಲೇಪಿಸಲಾಗಿದ್ದು. ಮೂಲಸ್ವರೂಪ ಮರೆಯಾಗಿದೆ. ಇಲ್ಲಿ ದೇವಾಲಯದ ಒಳಭಾಗದಲ್ಲಿ ಮತ್ತು ಹೊರಗೋಡೆಯಲ್ಲಿ ಚಿತ್ರಗಳು ರಚನೆಯಾಗಿವೆ. ಈ ದೇವಾಲಯದ ಚಿತ್ರಗಳನ್ನು ಅಧ್ಯಯನದ ಅನುಕೂಲ ದೃಷ್ಟಿಯಿಂದ ಈ ಕೆಳಗಿನಂತೆ ವಿಂಗಡಿಸಿಕೊಳ್ಳಬಹುದು :

೧. ಒಳಗೋಡೆಯ ಚಿತ್ರಗಳು
೨. ಹೊರಗೋಡೆಯ ಚಿತ್ರಗಳು

**೧. ಒಳಗೋಡೆಯ ಚಿತ್ರಗಳು :** ದೇವಾಲಯದ ಒಳಗೋಡೆಯಲ್ಲಿ ಹೆಚ್ಚಿನ ಚಿತ್ರಗಳು ರಚನೆಯಾಗಿರದೇ ಗರ್ಭಗೃಹದ ಬಾಗಿಲಿನ ಎಡಬಲದಲ್ಲಿ ಸೂರ್ಯಮಂಡಲ ಮತ್ತು ಚಂದ್ರಮಂಡಲದ ಚಿತ್ರಗಳು ರಚನೆಯಾಗಿವೆ. ಬಲಭಾಗಕ್ಕೆ ಸೂರ್ಯಮಂಡಲ, ಎಡಭಾಗದಲ್ಲಿ ಚಂದ್ರ ಮಂಡಲ ಚಿತ್ರಿಸಲಾಗಿದೆ.

***I. ಸೂರ್ಯ ಮಂಡಲ :*** ಈ ಚಿತ್ರದಲ್ಲಿ ಸೂರ್ಯನು ಏಳು ಕುದುರೆಗಳಿಂದ ಎಳೆಯಲ್ಪಟ್ಟ ರಥದಲ್ಲಿದ್ದಾನೆ. ರಥವು ವಿಶಿಷ್ಟವಾಗಿದ್ದು ಗಾಲಿಗಳು ಮಾತ್ರ ಪ್ರಧಾನವಾಗಿ ರಚಿಸಿವೆ. ರಥದಲ್ಲಿ ಸಾರಥಿಯೂ ಇದ್ದಾನೆ. ರಥದಿಂದ ಮೇಲ್ಭಾಗದಲ್ಲಿರುವ ಮಂಟಪದಲ್ಲಿ ಸೂರ್ಯನು ರಚನೆಯಾಗಿದ್ದು ಈ ಮಂಟಪವು ರಥಕ್ಕೆ ಅಳವಡಿಸಲ್ಪಟ್ಟದೆ. ವೃತ್ತಾಕಾರದ ಈ ಮಂಟಪದಲ್ಲಿ ವೈವಿಧ್ಯ ಸುಳುವಿನ ನಕ್ಷೆ ಕಂಡುಬರುತ್ತದೆ. ಮಂಟಪದಲ್ಲಿರುವ ಸೂರ್ಯನು ನಾಲ್ಕು ಕೈಗಳನ್ನು ಹೊಂದಿದ್ದು ಎರಡು ಕೈಗಳಲ್ಲಿ ಶಂಖ. ಚಕ್ರಗಳನ್ನು ಹಿಡಿದುಕೊಂಡಿದ್ದಾನೆ. ಇನ್ನೆರಡು ಕೈಗಳಿಂದ ಬಿಲ್ಲಿಗೆ ಬಾಣ ಹೂಡಿ ಬಿಡುತ್ತಿದ್ದಾನೆ. ಕುದುರೆಯು ಒಂದೇ ಇದ್ದು ಅದಕ್ಕೆ ಏಳುಮುಖಗಳನ್ನು ಚಿತ್ರಿಸಿ ಸಾಂಕೇತಿಸಲಾಗಿದೆ.

***II. ಚಂದ್ರಮಂಡಲ :*** ಎಡಭಾಗದ ಗೋಡೆಯಲ್ಲಿರುವ ಚಂದ್ರಮಂಡಲ ಚಿತ್ರದಲ್ಲಿ ಚಂದ್ರನು ಐದು ಕುದುರೆಗಳಿಂದ ಎಳೆಯಲ್ಪಟ್ಟ ರಥದಲ್ಲಿದ್ದಾನೆ. ಇಲ್ಲಿಯೂ ರಥದ ಮೇಲಿನ ಭಾಗದಲ್ಲಿರುವ ವೃತ್ತಾಕಾರದ ಮಂಟಪದಲ್ಲಿ ಚಂದ್ರನನ್ನು ಚಿತ್ರಸಲಾಗಿದೆ. ನಾಲ್ಕು ಕೈಗಳನ್ನು ಹೊಂದಿದ ಚಂದ್ರನು ಎರಡು ಕೈಗಳಲ್ಲಿ ಶಂಖ ಚಕ್ರಗಳನ್ನು ಹಿಡಿದುಕೊಂಡಿದ್ದಾನೆ. ಹೂವಿನ ನಕ್ಷೆಯುಳ್ಳ ಧೋತರವನ್ನು ಉಟ್ಟುಕೊಂಡ ಚಂದ್ರನು ತಲೆಯ ಮೇಲೆ ಕಿರೀಟವಲ್ಲದೇ ಮೈ ತುಂಬ ಆಭರಣಗಳನ್ನು ಧರಿಸಿದ್ದಾನೆ. ರಥದ ಸಾರಥಿಯು ಚಾಟಿಯಿಂದ ಕುದುರೆಗಳನ್ನು ಹೊಡೆಯುತ್ತ. ಎಡಗೈಯಲ್ಲಿ ಲಗಾಮು ಜಗ್ಗುತ್ತಿದ್ದಾನೆ. ಇಲ್ಲಿಯೂ ಒಂದೇ ಕುದುರೆಗೆ ಐದು ಮುಖಗಳನ್ನು ಚಿತ್ರಿಸಿ ಐದುಕುದುರೆಗಳಿವೆ ಎಂಬ ಸಾಂಕೇತಿಕ ಅರ್ಥದಲ್ಲಿ ಚಿತ್ರಿಸಿದ್ದಾರೆ. ರೇಖಾವಿನ್ಯಾಸ. ಪ್ರಮಾಣ ಬದ್ಧತೆ ಇವುಗಳಿಂದ ಸೂರ್ಯಮಂಡಲ ಚಿತ್ರಕ್ಕಿಂತ ಚಂದ್ರಮಂಡಲ ಚಿತ್ರವು ಹೆಚ್ಚು ಆಕರ್ಷಕವಾಗಿದೆ. ಉತ್ತರ ಕನ್ನಡ ಜಿಲ್ಲೆಯ ಕಾವಿಕಲೆಯಲ್ಲಿಯೇ ಗಮನಾರ್ಹ ಕೃತಿಗಳಾದ ಈ ಸೂರ್ಯಮಂಡಲ ಚಂದ್ರಮಂಡಲ ಚಿತ್ರಗಳು ಕಲಾವಿದನ ನೈಪುಣ್ಯತೆ. ಪ್ರಬುದ್ಧತೆಗಳನ್ನು ತೋರಿಸುತ್ತವೆ. ಸೂಕ್ಷ್ಮವಾದ ರೇಖಾವಿನ್ಯಾಸ. ಚಿತ್ರಗಳ ಪ್ರಮಾಣಬದ್ಧತೆ. ರೇಖೆಗಳಲ್ಲಿನ ಚಲನೆ. ಒಟ್ಟು ಚಿತ್ರಸಂಯೋಜನೆ ಇಂತಹ ತಾಂತ್ರಿಕ ಅಂಶಗಳು ಇವುಗಳನ್ನು ಉತ್ತಮ ಚಿತ್ರಗಳ ಸಾಲಿನಲ್ಲಿ ನಿಲ್ಲಿಸುತ್ತವೆ.

**೨. ಹೊರಗೋಡೆಯ ಚಿತ್ರಗಳು :** ಹೊರಗೋಡೆಯಲ್ಲಿ ಉದ್ದಕ್ಕೂ ಸಾಲಾಗಿ ಚಿತ್ರಗಳನ್ನು ರಚನೆಮಾಡಲಾಗಿದೆ. ಮಂಟಪದಂತಹ ವಿನ್ಯಾಸಗಳನ್ನು ಮಾಡಿಕೊಂಡು ಒಂದೊಂದು ಮಂಟಪದಲ್ಲಿ ಒಂದೊಂದು ವಿಷಯಕ್ಕೆ ಸಂಬಂಧಿಸಿದ ಚಿತ್ರಗಳನ್ನು ರಚಿಸಿದೆ. ಗೋಡೆಯ ಸುತ್ತಲೂ ಸಾಲಾಗಿ ವಿಷ್ಣುವಿನ ದಶಾವತಾರ ಚಿತ್ರಗಳನ್ನು ರಚಿಸಿದ್ದರೆ ಮಧ್ಯದಲ್ಲಿ ಅಲ್ಲಲ್ಲಿ ಇತರ ದೇವತಾ ಚಿತ್ರಗಳನ್ನು ಬರೆಯಲಾಗಿದೆ. ಹೊರಗೋಡೆಯ ಈ ಚಿತ್ರಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು :

I. ದಶಾವತಾರದ ಚಿತ್ರಗಳು

II. ಇತರ ದೇವತೆಗಳ ಚಿತ್ರಗಳು

III. ನಕ್ಷಾ ರೂಪಗಳು

***I. ದಶಾವತಾರದ ಚಿತ್ರಗಳು :*** ದೇವಾಲಯದ ಸುತ್ತಲೂ ರಚನೆಯಾದ ದಶಾವತಾರ ಚಿತ್ರಗಳು ಇತರೆಡೆಯ ದೇವಾಲಯಗಳಲ್ಲಿ ರಚನೆಯಾದ ದಶಾವತಾರ ಚಿತ್ರಗಳಂತೆ ಇವೆ. ವಿಷ್ಣುವಿನ ದಶಾವತಾರ ಚಿತ್ರಗಳ ಬಗೆಗೆ

ಈಗಾಗಲೇ ಹಿಂದೆ ಹೇಳಿದೆ. ಸರಿಸುಮಾರು ಹೊನ್ನಾವರದ ರಾಮದೇವಾಲಯದಲ್ಲಿನ ದಶಾವತಾರ ಚಿತ್ರಗಳಿಗೆ ಇವು ಸಮೀಪವಾಗಿದ್ದು, ನಿರೂಪಣೆಯಲ್ಲಿ ಮಾತ್ರ ಅಲ್ಪ ಭಿನ್ನತೆ ಕಂಡು ಬರುವುದು. ಮತ್ಸ್ಯಾವತಾರ ಚಿತ್ರದಲ್ಲಿ ಇಲ್ಲಿಯೂ ವಿಷ್ಣುವು ರಾಕ್ಷಸನನ್ನು ಕೊಲ್ಲುತ್ತಿದ್ದಾನೆ. ಇಲ್ಲಿ ಸಂಪೂರ್ಣವಾಗಿ ಮತ್ಸ್ಯರೂಪವನ್ನು ಚಿತ್ರಿಸದೇ ಬರೀ ಮುಖವನ್ನು ಮಾತ್ರ ಸಾಂಕೇತಿಕವಾಗಿ ಚಿತ್ರಿಸಲಾಗಿದೆ. ಇದೇ ವಿಧಾನವೇ ಕೂರ್ಮಾವತಾರದಲ್ಲಿಯೂ ಕಂಡುಬರುವುದು. ವರಹಾ ಅವತಾರದಲ್ಲಿ ವರಾಹ ರೂಪಿಯಾದ ನಾರಾಯಣನು ರಾಕ್ಷಸನನ್ನು ಕಾಲಿನಿಂದ ಮೆಟ್ಟಿನಿಂತಿದ್ದಾನೆ. ಕಿರೀಟಧಾರಿಯಾದ ವರಾಹನು ಕೈಗಳಲ್ಲಿ ಶಂಖ ಚಕ್ರಗಳನ್ನು ಹಿಡಿದಿದ್ದಾನೆ. ಆತನು ಉಟ್ಟುಕೊಂಡ ಪಂಚೆಯು ಹೂವಿನ ನಕ್ಷೆಯಿಂದ ಅಲಂಕೃತಗೊಂಡಿದೆ. ಮಂಟಪದ ಮೇಲಿನ ಭಾಗದಲ್ಲಿ ಹೂಗಳು ನೇತಾಡುತ್ತಿವೆ. ನರಸಿಂಹ ಅವತಾರದಲ್ಲಿ ಸಾಮಾನ್ಯವಾಗಿರುವಂತೆ ಇಲ್ಲಿಯೂ ಹಿರಣ್ಯಕಶಿಪುವನ್ನು ಹೊಟ್ಟೆ ಸೀಳಿ ಕೊಲ್ಲುತ್ತಿದ್ದಾನೆ. ವಾಮನಾವತಾರದಲ್ಲಿ ಎಡಗೈಯಲ್ಲಿ ಕೊಡೆ ಹಿಡಿದುಕೊಂಡ ಶ್ರೀಹರಿಯು ಕಾಲಿನಿಂದ ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ತುಳಿಯುತ್ತಿದ್ದಾನೆ. ಆತಹಿಡಿದುಕೊಂಡ ಕೊಡೆಗೆ ಸುತ್ತಲೂ ಮುತ್ತಿನಂತೆ ಜೋಲಾಡುತ್ತಿರುವ ಅಲಂಕಾರಗಳನ್ನು ರಚಿಸಲಾಗಿದೆ. ಪರಶುರಾಮ ಅವತಾರದಲ್ಲಿ ಕೊಡಲಿಯನ್ನು ಹಿಡಿದ ಪರಶುರಾಮನನ್ನು ಮಾತ್ರ ಚಿತ್ರಿಸಲಾಗಿದೆ. ಹೊನ್ನಾವರದಂತೆ ಸಹಸ್ರಾರ್ಜುನನನ್ನು ಚಿತ್ರಿಸಿಲ್ಲ. ರಾಮಾವತಾರದಲ್ಲಿ ಎಡಗೈಯಲ್ಲಿ ಬಿಲ್ಲು. ಬಲಗೈಯಲ್ಲಿ ಬಾಣವನ್ನು ಹಿಡಿಕೊಂಡ ರಾಮನನ್ನು ಚಿತ್ರಿಸಲಾಗಿದೆ. ರಾಮನ ತಲೆಯ ಕಿರೀಟವು ಸಿಲಿಂಡರಿನಂತೆ ಕೊಳವೆಯಾಕಾರದಲ್ಲಿದ್ದು ವಿಜಯನಗರ ಶೈಲಿಯ ಭಿತ್ತಿ ಚಿತ್ರಗಳನ್ನು ನೆನಪಿಗೆ ತರುತ್ತದೆ. ರಾಮನ ಬಿಲ್ಲು ಬಾಣಗಳು ಅಲಂಕಾರಿಕ ವಿನ್ಯಾಸದಲ್ಲಿದ್ದು ಅವುಗಳಿಗೆ ಹೂಗೊಂಚಲು ತೂಗಾಡುತ್ತಿರುವಂತೆ ಚಿತ್ರಿಸಿದೆ. ಕೃಷ್ಣಾವತಾರದಲ್ಲಿಯೂ ಕೃಷ್ಣನ ತಲೆಯ ಕಿರೀಟ ವಿಜಯನಗರ ಶೈಲಿಯಲ್ಲಿದೆ. ಇಲ್ಲಿ ಕೃಷ್ಣನಿಗೂ ಮೀಸೆಯನ್ನು ಚಿತ್ರಿಸಲಾಗಿದೆ. ಕೃಷ್ಣನು ಧರಿಸಿದ ಹೂಗಳ ನಕ್ಷೆಯ ಪಂಚೆ, ಹೆಗಲಿನಿಂದ ಇಳಿಬಿದ್ದ ಉದ್ದನಾದ ಶಾಲು. ಆಕರ್ಷಕವಾಗಿವೆ. ಕೃಷ್ಣನ ಚಿತ್ರವಿರುವ ಈ ಮಂಟಪದಲ್ಲಿ ಉಳಿದ ಚಿತ್ರಮಂಟಪಗಳಿಗಿಂತ ಒಳಭಾಗವನ್ನು ಹೆಚ್ಚಾಗಿ ಅಲಂಕಾರಯುಕ್ತವಾಗಿ ರಚನೆ ಮಾಡಲಾಗಿದೆ. ಮೇಲ್ಭಾಗದಲ್ಲಿ. ಕೆಳಭಾಗದಲ್ಲಿ ಅಲಂಕಾರಿಕ ಹೂಬಳ್ಳಿಗಳು. ವೃತ್ತಾಕರದ ನಕ್ಷೆಗಳು. ಗಿಡಗಳ ಅಲಂಕಾರಿಕ ವಿನ್ಯಾಸಗಳು ಅವುಗಳಲ್ಲಿ ಜ್ಯಾಮಿತಿಕ ರೂಪದ ಎಲೆ, ಹೂ, ಹಣ್ಣುಕಾಯಿಗಳನ್ನು ಚಿತ್ರಿಸಿ ಹೆಚ್ಚಿನ ಅಂದತರಲಾಗಿದೆ. ಕಲ್ಕಿ ಅವತಾರದಲ್ಲಿ ಕಲ್ಕಿಯು ಕಾಲಿನಿಂದ ರಾಕ್ಷಸನನ್ನು ತುಳಿದುಕೊಲ್ಲುತ್ತಿದ್ದಾನೆ. ಈತನ ಕಿರೀಟವು ಭಿನ್ನವಾಗಿದ್ದು ಅದರಲ್ಲಿ ಹೂಗಳನಕ್ಷೆ ಇದೆ. ಈತನ ಹಿನ್ನಲೆಯಲ್ಲಿ ಕೊಡೆ ಕುದುರೆಯ ರೂಪಗಳು ಸಾಂಕೇತಿಕವಾಗಿ ಚಿತ್ರಣಗೊಂಡಿವೆ.

***II. ಇತರ ದೇವತೆಗಳ ಚಿತ್ರಗಳು :*** ದಶಾವತಾರ ಚಿತ್ರಗಳ ಮಧ್ಯದಲ್ಲಿರುವ ಇತರ ದೇವತೆಗಳ ಚಿತ್ರದಲ್ಲಿ ಶಿವ. ಬ್ರಹ್ಮ. ಕಾಳಿಂಗಮರ್ದನ ಕೃಷ್ಣ. ಆದಿಶೇಷನ ಮೇಲೆ ಕುಳಿತ ವಿಷ್ಣು. ಕೃಷ್ಣರಾಧೆಯರ ಚಿತ್ರಗಳಿವೆ.

೧. ಶಿವನ ಚಿತ್ರ : ಐದು ಮುಖಗಳನ್ನು ಹೊಂದಿದ ಶಿವನು ನಂದಿಯ ಮೇಲೆ ಕುಳಿತುಕೊಂಡಿರುವ ಚಿತ್ರ ಇದಾಗಿದೆ. ಆತನ ತೊಡೆಯ ಮೇಲೆ ಪತ್ನಿ ಪಾರ್ವತಿಯೂ ಚಿಕ್ಕಪ್ರಮಾಣದಲ್ಲಿ ಚಿತ್ರಿಸಲ್ಪಟ್ಟಿದ್ದಾಳೆ. ಶಿವನು ಎಂಟು ಕೈಗಳನ್ನು ಹೊಂದಿದ್ದು, ಢಮರುಗ ಮತ್ತು ಒಂದು ಕೈಯಲ್ಲಿ ಜಿಂಕೆಯನ್ನೂ ಹಿಡಿದುಕೊಂಡಿದ್ದಾನೆ. ಶಿವನಿಗೆ ಗಡ್ಡಮೀಸೆಗಳನ್ನು ಚಿತ್ರಿಸಿ ಸಹಜತೆಯನ್ನು ಬಿಂಬಿಸಲಾಗಿದೆ. ಶಿವನ ಐದು ಮುಖಗಳಿಗೂ ಕಿರೀಟ

ಇರುವಂತೆ ಚಿತ್ರಿಸಿದ್ದು ಇಲ್ಲಿ ವಿಶೇಷ. ಶಿವನ ಕೊರಳಲ್ಲಿ ಹಾವು. ಆತನ ಜಟೆಯಲ್ಲಿ ಗಂಗೆ ಚರ್ಮದ ಉಡುಗೆ ಇವುಗಳು ಇಲ್ಲಿ ಚಿತ್ರಿಸಿಲ್ಲ. ಇಲ್ಲಿ ಶಿವನು ಸರ್ವಾಲಂಕಾರಭೂಷಿತನಾಗಿ ಚಿತ್ರಿಸಲ್ಪಟ್ಟಿದ್ದಾನೆ. ಶಿವನ ಚಿತ್ರದ ಮಂಟಪದ ಸುತ್ತಲೂ ಹೂವಿನ ನಕ್ಷೆಗಳು. ಬಳ್ಳಿಯ ವಿನ್ಯಾಸಗಳು ರೂಪಿಸಿವೆ. ಅಲ್ಲದೇ ಈ ಮಂಟಪದ ಮೇಲಿನ ಭಾಗದಲ್ಲಿ ಆಕರ್ಷಕವಾದ ಕಳಶ ಚಿತ್ರಿಸಲ್ಪಟ್ಟಿದೆ.

೨. ಬ್ರಹ್ಮನ ಚಿತ್ರ : ಚತುರ್ಮುಖ ಬ್ರಹ್ಮನ ರೂಪವು ಇಲ್ಲಿ ಚಿತ್ರಿಸಲ್ಪಟ್ಟಿದ್ದರೂ ಮೂರು ಮುಖಗಳು ಮಾತ್ರ ಕಂಡು ಬರುತ್ತವೆ. ಇನ್ನೊಂದು ಮುಖವು ಹಿಂಬದಿಯಲ್ಲಿ ಪೂರ್ತಿ ಮರೆಯಾಗಿದೆ. ಬ್ರಹ್ಮನ ಮೂರು ಮುಖಗಳು ಕಿರೀಟ ಧರಿಸಿದ್ದು ಹಣೆಯಲ್ಲಿ ಅಡ್ಡನಾಮವಿದೆ. ಒಂದು ಕೈಯಲ್ಲಿ ಕಮಂಡಲು ಇನ್ನೊಂದು ಕೈಯಲ್ಲಿ ಗ್ರಂಥವನ್ನು ಹಿಡಿದುಕೊಂಡಿದ್ದು. ಇಲ್ಲಿ ಆತನ ವಾಹನ ನವಿಲು ಚಿತ್ರಿಸಿಲ್ಲ.

೩. ಕಾಳಿಂಗಮರ್ದನ ಕೃಷ್ಣ : ಕಾಳಿಂಗವನ್ನು ಸಂಹರಿಸುತ್ತಿರುವ ಕೃಷ್ಣನು ಅದರ ಮೇಲೆ ನಾಟ್ಯವಾಡುತ್ತಿದ್ದಾನೆ. ನಾಲ್ಕು ಕೈಗಳನ್ನು ಹೊಂದಿದ ಕೃಷ್ಣನು ಒಂದುಕೈಯಿಂದ ಕಾಳಿಂಗದ ಬಾಲವನ್ನು ಹಿಡಿದೆಳೆಯುತ್ತಿದ್ದರೆ ಇನ್ನೊಂದು ಕೈಯಿಂದ ಪ್ರಹಾರ ಮಾಡುತ್ತಿದ್ದಾನೆ. ಇನ್ನೆರಡು ಕೈಗಳಿಂದ ಕೊಳಲು ನುಡಿಸುತ್ತ ನಾಟ್ಯದ ಭಂಗಿಯಲ್ಲಿದ್ದಾನೆ. ಕಾಳಿಂಗವು ಐದು ಹೆಡೆಗಳಿಂದ ಕೂಡಿದ್ದು ಅದರ ಮೈಮೇಲೆ ನಕ್ಷೆಗಳನ್ನು ರಚಿಸಿದೆ. ಕೆಳಗೆ ಸಾಂಕೇತಿಕವಾಗಿ ನೀರನ್ನು ಚಿತ್ರಿಸಿದ್ದು ಅದರಲ್ಲಿ ಮೀನು. ಹಾವು. ಏಡಿಗಳಂತಹ ಜಲಚರಗಳನ್ನು ರಚಿಸಲಾಗಿದೆ.

೪. ಆದಿಶೇಷನ ಮೇಲೆ ಕುಳಿತ ವಿಷ್ಣು : ಆದಿಶೇಷನ ಮೇಲೆ ಕುಳಿತುಕೊಂಡಿರುವ ನಾರಾಯಣನ ತೊಡೆಯ ಮೇಲೆ ಲಕ್ಷ್ಮೀದೇವಿಯು ಚಿತ್ರಿಸಲ್ಪಟ್ಟಿದ್ದಾಳೆ. ವಿಷ್ಣುವನ್ನು ದೊಡ್ಡ ಆಕಾರದಲ್ಲಿ ಚಿತ್ರಿಸಿದ್ದರೆ ಲಕ್ಷ್ಮೀದೇವಿಯನ್ನು ಚಿಕ್ಕದಾಗಿ ಚಿತ್ರಿಸಿದೆ. ನಾಲ್ಕು ಕೈಗಳನ್ನು ಹೊಂದಿದ ನಾರಾಯಣನು ಒಂದು ಕೈಯಿಂದ ಲಕ್ಷ್ಮೀದೇವಿಯನ್ನು ಬಳಸಿ ಹಿಡಿದಿದ್ದು ಇನ್ನೊಂದು ಕೈ ಆಶೀರ್ವಾದ ಭಂಗಿಯಲ್ಲಿದೆ. ಇಲ್ಲಿಯೂ ವಿಷ್ಣುವಿಗೆ ಮೀಸೆ ಚಿತ್ರಿಸಲಾಗಿದೆ. ಈ ಚಿತ್ರ ಮಂಟಪದಲ್ಲಿ ಮೇಲ್ಭಾಗದಲ್ಲಿ ವೃತ್ತಾಕಾರದ ನಕ್ಷೆಗಳು ಮತ್ತು ಹೂಬಳ್ಳಿ ನಕ್ಷೆಗಳನ್ನು ರೂಪಿಸಲಾಗಿದೆ.

೫. ಕೃಷ್ಣರಾಧೆಯರ ಚಿತ್ರ : ಈ ಚಿತ್ರದಲ್ಲಿ ಕೃಷ್ಣರಾಧೆಯರು ಚಿತ್ರಿಸಿದ್ದು ಇಬ್ಬರೂ ಒಂದು ಮರದ ಬುಡದಲ್ಲಿ ಇರುವಂತೆ ಸಾಂಕೇತಿಕವಾಗಿ ಹಾವ ಭಾವಗಳು. ಕೈ ಚಲನೆಗಳು ಚಿತ್ರಿಸಲ್ಪಟ್ಟಿವೆ. ರಾಧೆ ಮತ್ತು ಕೃಷ್ಣ ಇಬ್ಬರೂ ಆಭರಣಗಳಿಂದ ಅಲಂಕೃತರಾಗಿದ್ದಾರೆ. ರಾಧೆಯು ತಲೆಯ ಮೇಲ್ಭಾಗದಲ್ಲಿ ತುರುಬನ್ನು ಕಟ್ಟಿಕೊಂಡಿದ್ದು ಇಡೀ ತಲೆಯನ್ನು ಆಭರಣಗಳಿಂದ ಅಲಂಕರಿಸಿದಂತೆ ಚಿತ್ರಿಸಿದೆ. ಕೃಷ್ಣನು ಕಾಲನ್ನು ಕತ್ತರಿಯಾಗಿ ಇಟ್ಟುಕೊಂಡು ನಿಂತಿದ್ದಾನೆ. ಮೇಲ್ಭಾಗದಲ್ಲಿ ಅಲಂಕಾರಿಕ ರೂಪದಗಿಡದ ಚಿತ್ರಣವಿದ್ದು ಅದರಲ್ಲಿ ಎಲೆ. ಹೂ. ಹಣ್ಣು ಕಾಯಿಗಳನ್ನು ಚಿತ್ರಿಸಿದೆ. ಅಲ್ಲದೇ ಚಿತ್ರಮಂಟಪದ ಒಳಭಾಗದಲ್ಲಿಯೂ ವೃತ್ತಾಕರದ ನಕ್ಷೆಯ ವಿನ್ಯಾಸಗಳು ರಚಿಸಿವೆ.

***III. ನಕ್ಷಾ ರೂಪಗಳು :*** ಹೊರಗೋಡೆಯ ಚಿತ್ರಗಳಲ್ಲಿ ದಶಾವತಾರ ಚಿತ್ರಗಳು ಮತ್ತು ಇತರ ದೇವತಾ ಚಿತ್ರಗಳಲ್ಲದೇ ನಕ್ಷಾ ಚಿತ್ರಣವೂ ಕಂಡುಬರುವುದು. ಈ ನಕ್ಷಾ ಚಿತ್ರಣವು ಎರಡು ಬಗೆಯಲ್ಲಿದ್ದು. ಎಲೆಬಳ್ಳಿಯ ಜ್ಯಾಮಿತಿಕ ರೂಪದನಕ್ಷೆಯು ಗೋಡೆಯ ಅಂಚುಗಳಿಗೆ ಉದ್ದಕ್ಕೂ ರಚಿಸಲಾಗಿದೆ. ಇನ್ನೊಂದು ಬಗೆಯ ವಿನ್ಯಾಸವೆಂದರೆ, ಸಮಾನಾಂತರ ಅಡ್ಡಗೆರೆಗಳನ್ನು ನಿರ್ದಿಷ್ಟವಾದ ಒಂದು ಕೋನದಲ್ಲಿ ಬಾಗಿದಂತೆ

ಎಳೆದು ಅಂದಗೊಳಿಸಲಾಗಿದೆ. ಈ ಬಗೆಯ ನಕ್ಷೆಯನ್ನು ಗೋಡೆಯಲ್ಲಿನ ಕಂಬಗಳಿಗೆ ರೂಪಿಸಲಾಗಿದೆ. ಹೀಗೆ ಸಮಾನಾಂತರ ರೇಖೆ ಎಳೆಯುವಲ್ಲಿಯೂ ಎಲ್ಲ ಕಂಬಗಳಿಗೆ ಒಂದೇ ವಿಧಾನ ಅನುಸರಿಸದೇ ಒಂದೊಂದು ಕಂಬಕ್ಕೆ ಒಂದೊಂದು ಬಗೆಯಲ್ಲಿ ರೇಖೆಗಳನ್ನು ಎಳೆದು ನಕ್ಷೆಯ ವಿನ್ಯಾಸ ರೂಪಿಸಲಾಗಿದೆ. ಮಹಾಳಸಾನಾರಾಯಣಿ ದೇವಾಲಯದ ಈ ಚಿತ್ರಗಳು ರೇಖಾ ವಿನ್ಯಾಸ. ಸಂಯೋಜನಾ ರೀತಿ. ಪ್ರಮಾಣಬದ್ಧತೆ, ಸತ್ವಶಾಲಿರೇಖೆಗಳ ರಚನೆ ಇವುಗಳಿಂದಾಗಿ ಉತ್ತಮ ಚಿತ್ರಗಳ ಸಾಲಿಗೆ ಸೇರುತ್ತವೆ. ಹೊನ್ನಾವರದ ರಾಮಮಂದಿರ. ಶಿರ್ಸಿಯ ಮಾರಿಕಾಂಬಾ ದೇವಾಲಯದ ಚಿತ್ರಗಳಂತೆ ಇವುಕೂಡಾ ಉತ್ಕೃಷ್ಟಮಟ್ಟದ ರಚನೆಯಾಗಿವೆ.

**VIII. ಆರ್ಯದುರ್ಗಾ ದೇವಾಲಯ, ಅಂಕೋಲಾ :** ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲೂಕಾ ಸ್ಥಳವಾಗಿದೆ. ಇಲ್ಲಿನ ಆರ್ಯದುರ್ಗಾ ದೇವಾಲಯದಲ್ಲಿ ಕಾವಿ ಚಿತ್ರಕಲೆ ರಚನೆಯಾಗಿದೆ ಎಂಬ ಉಲ್ಲೇಖವಿದ್ದರೂ ಇಲ್ಲಿ ಈಗ ಯಾವ ಚಿತ್ರಗಳೂ ಉಳಿದುಕೊಂಡಿಲ್ಲ. ಹಳೆಯದಾದ ದೇವಾಲಯವನ್ನು ಸಂಪೂರ್ಣವಾಗಿ ನವೀಕರಿಸಿ ಕಟ್ಟಿಸಲಾಗಿದ್ದು ಚಿತ್ರಗಳ ಯಾವ ಕುರುಹುಗಳು ಇಲ್ಲಿ ಕಂಡುಬರುವುದಿಲ್ಲ. ಇಲ್ಲಿನ ದೇವಾಲಯದ ಒಳಗೋಡೆಯಲ್ಲಿ ಹೊರಗೋಡೆಯಲ್ಲಿ ಚಿತ್ರಗಳು ರಚಿಸಿದ್ದು. ಅವುಗಳಲ್ಲಿ ದೇವಿಮಹಾತ್ಮೆಯನ್ನು ಬಿಂಬಿಸುವ ಚಿತ್ರಗಳು ಪ್ರಮುಖವಾಗಿದ್ದವು. ಮಧ್ಯದಲ್ಲಿ ಅಲ್ಲಲ್ಲಿ ಕೃಷ್ಣ. ಶಿವ. ನಾರದ. ಬ್ರಹ್ಮ ಹೀಗೆ ಇತರ ದೇವತೆಗಳಿಗೆ ಸಂಬಂಧಿಸಿದ ಚಿತ್ರಗಳೂ ರಚಿಸಲ್ಪಟ್ಟಿದ್ದವು. ಮತ್ತು ಅಲ್ಲಲ್ಲಿ ವೃತ್ತಾಕಾರದ ನಕ್ಷೆಗಳು. ಹೂಬಳ್ಳಿಯ ವಿನ್ಯಾಸಗಳು, ಜ್ಯಾಮಿತಿಕ ರೂಪದ ಅಲಂಕರಣಗಳು ರಚನೆಯಾಗಿದ್ದವೆಂದು ಸ್ಥಳೀಯರು ಹೇಳುತ್ತಾರೆ. ಇಂದು ಇಡೀ ದೇವಾಲಯಕ್ಕೆ ಆಧುನಿಕ ವಾರ್ನಿಸ್‌ಬಣ್ಣ ಲೇಪನ ಮಾಡಲಾಗಿದೆ.

**IX. ದೇವಿಮಂದಿರ, ಬಳಲೆ :** ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲೂಕಿನ ಬಳಲೆ ಗ್ರಾಮದ ದೇವಿಮಂದಿರವನ್ನು ಸ್ಥಳೀಯವಾಗಿ ಅಮ್ಮನವರಗುಡಿ ಎಂದು ಕರೆಯಾಲಾಗುತ್ತಿದ್ದು. ಈ ಮಂದಿರದಲ್ಲಿ ಕಾವಿ ಚಿತ್ರಕಲೆ ಕಂಡುಬರುತ್ತದೆ. ಈ ದೇವಾಲಯದಲ್ಲಿ ದೇವಿಮಹಾತ್ಮೆ. ಹಾಗೂ ಇತರ ದೇವತೆಗಳ ವೈವಿಧ್ಯ ಚಿತ್ರಗಳಿದ್ದುದಾಗಿ ಕೃಷ್ಣಾನಂದ ಕಾಮತ[೨೦೦] ಅವರು ತಿಳಿಸುತ್ತಾರೆ. ಆದರೆ ಇಂದು ಇಲ್ಲಿ ಯಾವ ಚಿತ್ರಗಳೂ ಇಲ್ಲ. ಅವೆಲ್ಲ ನಾಶವಾಗಿದ್ದು ಕೇವಲ ಒಂದೆರಡು ವೃತ್ತದನಕ್ಷೆಗಳು ಮಾತ್ರ ಉಳಿದಿವೆ. ಬಳಲೆಗ್ರಾಮದ ದೇವಿಮಂದಿರದ ಈ ವೃತ್ತದ ನಕ್ಷೆಗಳನ್ನು ಎರಡು ವಿಧದಲ್ಲಿ ವಿಂಗಡಿಸಬಹುದು.

೧. ಒಳಭಾಗದ ಗೋಡೆಯ ವೃತ್ತದ ನಕ್ಷೆಗಳು

೨. ಹೊರಭಾಗದ ಗೋಡೆಯ ವೃತ್ತದ ನಕ್ಷೆಗಳು

೧. **ಒಳಭಾಗದ ಗೋಡೆಯ ವೃತ್ತದ ನಕ್ಷೆಗಳು :** ದೇವಾಲಯದ ಒಳಭಾಗದ ಗೋಡೆಯಲ್ಲಿ ಮೂರು ವೃತ್ತದ ನಕ್ಷೆಗಳಿದ್ದು ಪ್ರತಿಯೊಂದೂ ಭಿನ್ನರೂಪದಲ್ಲಿವೆ. ಅವುಗಳ ಒಳಭಾಗದಲ್ಲಿ ಜ್ಯಾಮಿತಿಕ ಉಪಕರಣಗಳನ್ನು ಬಳಸಿ ವಿವಿಧ ಬಗೆಯ ಎಲೆ. ಹೂಗಳ ವಿನ್ಯಾಸಗಳನ್ನು ರಚನೆಮಾಡಲಾಗಿದೆ. ಈ ಮೂರು ವೃತ್ತದ ನಕ್ಷೆಗಳು ಒಂದೇ ಅಳತೆಯಲ್ಲಿವೆ.

---

೧೯೯. ಕೃಷ್ಣಾನಂದ ಕಾಮತ್ : ಕಾವಿಕಲೆ, ಪುಟ ೯೪

೨೦೦. ಕೃಷ್ಣಾನಂದ ಕಾಮತ್ : ಕಾವಿಕಲೆ, ಪುಟ ೯೮

೨. **ಹೊರಭಾಗದ ಗೋಡೆಯ ವೃತ್ತದ ನಕ್ಷೆಗಳು :** ದೇವಾಲಯದ ಹೊರಗೋಡೆಯಲ್ಲಿ ಹಿಂಭಾಗದಲ್ಲಿ ಮಾತ್ರ ಎರಡು ವೃತ್ತಾಕಾರದ ನಕ್ಷೆಗಳಿದ್ದು ಈ ಎರಡೂ ನಕ್ಷೆಗಳಿಗೆ ಕೆಳಗೆ ಟೊಂಗೆಗಳನ್ನು ರಚಿಸಿ ಗಿಡದ ರೂಪಕೊಡಲಾಗಿದೆ. ಅದರಲ್ಲಿ ಒಂದು ವೃತ್ತದ ನಕ್ಷೆಯ ಮಧ್ಯದಲ್ಲಿ ನಕ್ಷತ್ರದ ರೂಪವನ್ನು ರಚಿಸಲಾಗಿದ್ದು ಅದಕ್ಕೆ ಆಧುನಿಕವಾದ ಕೆಂಪು ಮತ್ತು ಕಪ್ಪು ವರ್ಣ ಲೇಪನ ಮಾಡಲಾಗಿದೆ.

**X. ಬಿಳಿಗಿರಿಯಮ್ಮನ ದೇವಾಲಯ, ಶೆಟಗೇರಿ :** ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲೂಕಿಗೆ ಸೇರಿದ ಶೆಟಗೇರಿ ಗ್ರಾಮವು ಅಂಕೋಲಾದಿಂದ ೧೦ ಕಿ. ಮಿ. ಗಳ ಅಂತರದಲ್ಲಿದೆ. ಈ ಗ್ರಾಮದಲ್ಲಿರುವ ಬಿಳಿಗಿರಿಯಮ್ಮ ದೇವಾಲಯದಲ್ಲಿ ಕಾವಿ ಚಿತ್ರಕಲೆ ಕಂಡು ಬರುತ್ತದೆ. ಈ ದೇವಾಲಯದ ಒಳಭಾಗ ಮತ್ತು ಹೊರಭಾಗದ ಗೋಡೆಗಳು ಕಾವಿ ಚಿತ್ರಗಳಿಂದ ಅಲಂಕೃತಗೊಂಡಿವೆ. ಒಳಭಾಗ ಚಿತ್ರಗಳನ್ನು ಸುಣ್ಣಸಾರಿಸಿ ಪೂರ್ತಿ ಮುಚ್ಚಿಹಾಕಲಾಗಿದ್ದು ಹೊರಭಾಗದ ಚಿತ್ರಗಳು ಸುಣ್ಣದ ಲೇಪನದ ಹಿಂದೆಯೇ ಮಸುಕಾಗಿ ಕಾಣುತ್ತವೆ. ಈ ದೇವಾಲಯದ ಚಿತ್ರಗಳನ್ನು ಸ್ಥೂಲವಾಗಿ ಈ ಕೆಳಗಿನಂತೆ ವಿಂಗಡಿಸಬಹುದು :

೧. ಒಳಗೋಡೆಯ ಚಿತ್ರಗಳು

೨. ಹೊರಗೋಡೆಯ ಚಿತ್ರಗಳು

೧. **ಒಳಗೋಡೆಯ ಚಿತ್ರಗಳು :** ದೇವಾಲಯದ ಒಳಭಾಗದ ಗೋಡೆಯಲ್ಲಿ ವಿವಿಧ ವಿನ್ಯಾಸದಲ್ಲಿರುವ ಸುಳಿವುಗಳು. ಜ್ಯಾಮಿತಿಕ ನಕ್ಷಾರೂಪಗಳು ರಚನೆಯಾಗಿದ್ದು ಸುಣ್ಣ ಬಣ್ಣ ಸಾರಿಸಿದ್ದರಿಂದ ಮುಚ್ಚಿಹೋಗಿವೆ. ತೆಳುವಾದ ಲೇಪನವಾದಲ್ಲಿ ಅಲ್ಲಲ್ಲಿ ನಕ್ಷೆಗಳ ಕುರುಹುಗಳು ಕಂಡುಬರುತ್ತವೆ.

೨. **ಹೊರಗೋಡೆಯ ಚಿತ್ರಗಳು :** ಹೊರಗೋಡೆಯಲ್ಲಿರುವ ಚಿತ್ರಗಳನ್ನು ಮತ್ತೆ ಈ ಕೆಳಗಿನಂತೆ ವಿಂಗಡಿಸಿಕೊಳ್ಳಬಹುದಾಗಿದೆ :

I. ದ್ವಾರಪಾಲಕರ ಚಿತ್ರಗಳು

II. ವೃತ್ತದ ನಕ್ಷೆಗಳು

***I. ದ್ವಾರಪಾಲಕರ ಚಿತ್ರಗಳು :*** ದೇವಾಲಯದ ಪ್ರವೇಶದ್ವಾರದಲ್ಲಿ ಎಡಬಲಗಳಲ್ಲಿ ಇಬ್ಬರು ದ್ವಾರಪಾಲಕರ ಚಿತ್ರಗಳನ್ನು ರಚಿಸಲಾಗಿದ್ದು. ತಲೆಯಮೇಲೆ ಕಿರೀಟ ಧರಿಸಿದ್ದಾರೆ. ಹಣೆಯಲ್ಲಿ ನಾಮವನ್ನು ಹೊಂದಿದ ಇವರು ಕೊರಳಲ್ಲಿ ಆಭರಣವನ್ನೂ ಧರಿಸಿದ್ದಾರೆ. ಉದ್ದವಾದ ಅಂಗಿ. ಹೆಗಲ ಮೇಲೆ ನಕ್ಷಾಚಿತ್ರಣದಿಂದ ಅಲಂಕೃತವಾದ ಶಾಲು. ಪಾದದವರೆಗೂ ಇರುವ ಕಚ್ಚೆಹಾಕಿ ಉಟ್ಟುಕೊಂಡ ಪಂಚೆ ಇದ್ದು ಸೊಂಟಕ್ಕೆ ಉತ್ತರೀಯವನ್ನು ಕಟ್ಟಿಕೊಂಡಿದ್ದಾರೆ. ಈ ಚಿತ್ರಗಳ ಮೇಲೆಯೂ ತೆಳುವಾದ ಸುಣ್ಣಲೇಪನಮಾಡಲಾಗಿದ್ದು. ಚಿತ್ರಗಳು ಹೆಚ್ಚು ಹಾನಿಗೊಳಗಾಗಿವೆ.

***II. ವೃತ್ತದ ನಕ್ಷೆಗಳು :*** ಹೊರಗೋಡೆಯಲ್ಲಿ ಸುತ್ತಲೂ ವೃತ್ತದ ನಕ್ಷೆಗಳನ್ನು ರಚಿಸಲಾಗಿದೆ. ಒಂದೊಂದು ಅಂಕಣಗಳಿಗೆ ಒಂದೊಂದರಂತೆ ವೃತ್ತಗಳನ್ನು ರಚಿಸಿದೆ. ದೇವಾಲಯದ ಮುಂಭಾಗದಲ್ಲಿ ಎರಡು. ಹಿಂಭಾಗದಲ್ಲಿ

ಎರಡು, ಬಲಬದಿಗೆ ಐದು ಮತ್ತು ಎಡಬದಿಯ ಗೋಡೆಯಲ್ಲಿ ಐದು ಹೀಗೆ ಒಟ್ಟು ಹದಿನಾಲ್ಕು ವೃತ್ತದ ನಕ್ಷೆಗಳು ರಚಿಸಲ್ಪಟ್ಟಿವೆ. ಆದರೆ ಇವುಗಳ ಮೇಲೆ ಸುಣ್ಣ ಲೇಪನಮಾಡಲಾಗಿದ್ದು ಇವು ಅತ್ಯಂತ ಮಸುಕಾಗಿ ಕಂಡು ಬರುತ್ತವೆ. ಹೆಚ್ಚಿನ ವಿವರಗಳು ತಿಳಿದುಬರುವುದಿಲ್ಲ.

**XI. ದುರ್ಗಾ ದೇವಾಲಯ, ಸದಾಶಿವಘಡ :** ಕಾರವಾರದಿಂದ ಸುಮಾರು ಎಂಟು ಕಿಮಿಗಳ ಅಂತರದಲ್ಲಿ ಕಾಳೀನದಿಯ ಉತ್ತರದಡದಲ್ಲಿರುವ ಸದಾಶಿವಘಡವು ಐತಿಹಾಸಿಕವಾಗಿ ಮಹತ್ವ ಪಡೆದ ಸ್ಥಳ. ಆಗಿನ ರಾಜಕೀಯದಲ್ಲಿ ಆಯಕಟ್ಟಿನ ಸ್ಥಳವಾಗಿದ್ದ ಇಲ್ಲಿನ ಗುಡ್ಡದ ಮೇಲೆ "ಸೋದೆ ಅರಸು ಒಂದನೇ ಸದಾಶಿವರಾಯನು (ಕ್ರಿ. ಶ. ೧೬೮೨-೧೭೧೮) ಕೋಟೆಯನ್ನು ಕಟ್ಟಿಸಿದನು. ಈ ಕೋಟೆಯ ಎದುರಿನ ಗುಡ್ಡದಲ್ಲಿ ದುರ್ಗಾದೇವಾಲಯವು ಕಟ್ಟಲ್ಪಟ್ಟಿದೆ. ಈ ದೇವಾಲಯವನ್ನು ಕ್ರಿ. ಶ. ೧೬೬೫ ಮತ್ತು ೧೬೭೩ ರಲ್ಲಿ ಎರಡು ಬಾರಿ ಶಿವಾಜಿಯು ಸಂದರ್ಶಿಸಿದ್ದು ತಿಳಿದು ಬರುವುದು.[೨೦೧] ಹಳೆಯದಾದ ಈ ದೇವಾಲಯವು ಕ್ರಿ. ಶ. ೧೯೨೮ ರಲ್ಲಿ ಜೀರ್ಣೋದ್ಧಾರಗೊಳಿಸಲಾಗಿದೆ. ಈ ದೇವಾಲಯವು ಕಾವಿಚಿತ್ರಕಲೆಯಿಂದ ಅಲಂಕರಿಸಲಾಗಿದ್ದು ಈಗ ಮತ್ತೆ ದೇವಾಲಯ ನವೀಕರಣ ಕಾರ್ಯನಡೆದಿರುವುದರಿಂದ ಉಳಿದಿರುವ ನಕ್ಷಾರೂಪದ ಚಿತ್ರಗಳೂ ಹಾಳಾಗುತ್ತಲಿವೆ. ಮೊದಲು ದೇವಾಲಯದ ತುಂಬೆಲ್ಲ ದೇವಿ ಮಹಾತ್ಮೆಯನ್ನು ಬಿಂಬಿಸುವ ಚಿತ್ರಗಳು, ಇತರ ದೇವತಾ ಚಿತ್ರಗಳು, ಅಲ್ಲದೇ ಸಾಮಾಜಿಕ ಘಟನೆಗಳನ್ನು ಆಧರಿಸಿದ ಚಿತ್ರಗಳು ರಚನೆಯಾಗಿದ್ದವು ಎಂದು ಸ್ಥಳೀಯ ಪೂಜಾರಿಗಳು ಹೇಳುತ್ತಾರೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೆಡವಲಾಗುತ್ತಿದ್ದ ಒಂದು ಭಾಗದ ಗೋಡೆಯ ನಕ್ಷಾಚಿತ್ರಗಳು ದೊರಕಿದವು. ದೇವಾಲಯದ ಬಾಗಿಲು, ಕಿಟಕಿ, ಮಾಡುಗಳನ್ನು ಇಲ್ಲಿ ವೈವಿಧ್ಯ ನಕ್ಷೆಗಳಿಂದ ಅಲಂಕರಿಸಲಾಗಿದೆ.

**XII. ಮಹಾಮಾಯಾ ದೇವಾಲಯ, ಚಿತಾಕುಲ :** ಸದಾಶಿವಗಡದ ಉತ್ತರಕ್ಕಿರುವ ಚಿತಾಕುಲವು ಇಂದು ಕಾರವಾರ ಪಟ್ಟಣದ ಉತ್ತರದ ಭಾಗವೇ ಆಗಿದೆ. ಚಿತಾಕುಲದಲ್ಲಿ ಮಹಾಮಾಯಾ, ಮಹಾದೇವ, ದತ್ತಮಂದಿರ, ವೀರಭದ್ರ, ವಿಠ್ಠಲ ರುಕುಮಾಯಿ ಹೀಗೆ ಅನೇಕ ದೇವಾಲಯಗಳಿದ್ದು ಇವುಗಳಲ್ಲಿ ಮಹಾಮಾಯಾ ಮತ್ತು ಮಹಾದೇವ ದೇವಾಲಯಗಳಲ್ಲಿ ಕಾವಿ ಚಿತ್ರಕಲೆ ಇದ್ದ ಉಲ್ಲೇಖವಿದೆ.[೨೦೨] ಮಹಾಮಾಯಾ ದೇವಾಲಯದಲ್ಲಿ ಹಿಂದೆ ವೈವಿಧ್ಯಮಯ ಚಿತ್ರರಚನೆಯಾಗಿರಬಹುದು ಆದರೆ ಇಡೀ ದೇವಾಲಯವನ್ನು ಆಧುನೀಕರಿಸಲಾಗಿದ್ದು ಚಿತ್ರಗಳೆಲ್ಲ ನಾಶವಾಗಿವೆ. ಮೇಲ್ಛಾವಣಿಗೆ ಹೊಂದಿಕೊಂಡಿರುವ ಕಿರುಕಂಬಗಳ ಮೇಲೆ ಮಾತ್ರ ಕೆಲವು ವೃತ್ತಾಕಾರದ ನಕ್ಷೆಗಳು ಮಸುಕಾಗಿ ಉಳಿದುಕೊಂಡಿವೆ.

**XIII. ಮಾರಿಕಾಂಬಾ ದೇವಾಲಯ, ಮಾಜಾಳಿ :** ಮಾಜಾಳಿಯು ಕಾರವಾದಿಂದ ಸುಮಾರು ೧೮ ಕಿ. ಮಿ. ಗಳ ಅಂತರದಲ್ಲಿದೆ ಕಾರವಾರ ತಾಲೂಕಿಗೆ ಸೇರಿದೆ. ಇಲ್ಲಿನ ಗ್ರಾಮದೇವತೆ ಶ್ರೀಮಾರಿಕಾದೇವಿ ದೇವಾಲಯದಲ್ಲಿ ಕಾವಿ ಚಿತ್ರಕಲೆ ಕಂಡು ಬರುತ್ತದೆ ಎಂದು ಕೃಷ್ಣಾನಂದ ಕಾಮತ್[೨೦೩] ತಿಳಿಸುತ್ತಾರೆ. ಆದರೆ ಈಗ ಎಲ್ಲ ಚಿತ್ರಗಳನ್ನು ಅಳಿಸಿಹಾಕಲಾಗಿದೆ. ಯಾವೊಂದು ಚಿತ್ರವೂ ಇಲ್ಲಿ ಈಗ ಕಂಡಬರುವುದಿಲ್ಲ. ಕಾಮತ್ ಅವರು ಭೇಟಿಕೊಟ್ಟಾಗ ದಶಾವತಾರದ ಚಿತ್ರಗಳು ಮತ್ತು ಇತರ ದೇವತಾ ಚಿತ್ರಗಳು ಇದ್ದುದಾಗಿ ಹೇಳುತ್ತಾರೆ. ದೇವತಾ

---

೨೦೧. ಡಾ. ಎಂ. ಜಿ. ವಾರಿ : ಸೋದೆ ಅರಸು ಮನೆತನ ಒಂದು ಅಧ್ಯಯನ, ಪುಟ ೧೪೬

೨೦೨. ಸೂರ್ಯನಾಥ ಕಾಮತ್ (ಸಂ) : ಉತ್ತರ ಕನ್ನಡ ಜಿಲ್ಲೆಯ ಗೆಝೆಟೀಯರ್, ಪುಟ ೯೫೭

೨೦೩. ಕೃಷ್ಣಾನಂದ ಕಾಮತ್ : ಕಾವಿಕಲೆ, ಪುಟ ೯೨

ಚಿತ್ರಗಳ ಅಂಕಣದಲ್ಲಿ ದೇವತೆಗಳಿಗಿಂತ ಹೂಬಳ್ಳಿಯ ಚಿತ್ರಗಳೇ ಪ್ರಧಾನವಾಗಿ ಕಂಡಬರುತ್ತವೆ. ಮತ್ಸ್ಯಾವತಾರ ಅಂಕಣದಲ್ಲಿ ಜಲಚರಗಳನ್ನು ಚಿತ್ರಿಸುವ ಬದಲು ಹೂಗಳನ್ನೇ ಚಿತ್ರಸಲಾಗಿದೆ. ವಾಮನಾವತಾರ ಚಿತ್ರದಲ್ಲೂ ಅನೇಕ ಹೂಗಳು ಅರಳಿನಿಂತಿವೆ. ಪರುಶುರಾಮ ಸಹಸ್ರಾರ್ಜುನ ಕಾಳಗದಲ್ಲಿ ದೊಡ್ಡದಾದ ಹೂವೊಂದು ತಲೆ ಎತ್ತಿದೆ. ಕಲ್ಕಿ ಅವತಾರದ ಅಂಕಣದಲ್ಲಿ ಹೂಬಳ್ಳಿಗಳು ಕಿಕ್ಕಿರಿದು ತುಂಬಿವೆ, ಎಂದು ಅವರು ಹೇಳುತ್ತಾರೆ. ಆದರೆ ಇಂದು ಯಾವುದೇ ಚಿತ್ರ ಅಲ್ಲಿ ಇರದೇ ಎಲ್ಲ ಚಿತ್ರಗಳನ್ನೂ ಅಳಿಸಲಾಗಿದೆ.

## ೪. ಗಣಪತಿ ದೇವಾಲಯಗಳು

ಶೈವ. ವೈಷ್ಣವ. ದೇವಿಮಂದಿರಗಳಲ್ಲಿ ಕಾವಿ ಚಿತ್ರಕಲೆ ಕಂಡು ಬಂದಂತೆ. ಗಣಪತಿ ದೇವಾಲಯಗಳಲ್ಲೂ ಕಾವಿ ಚಿತ್ರರಚನೆ ಮಾಡಲಾಗಿದೆ. ಉತ್ತರ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಕಾವಿ ಚಿತ್ರರಚನೆಯಾದ ಗಣಪತಿ ದೇವಾಲಯಗಳು ಈ ಕೆಳಗಿನಂತಿವೆ.

I. ಅರ್ಧ ಗಣಪತಿ ದೇವಾಲಯ. ಬನವಾಸಿ

II. ಗಣಪತಿ ದೇವಾಲಯ, ಹೊನ್ನಾವರ

III. ಗಣಪತಿ ದೇವಾಲಯ. ಚಂದಾವರ

IV. ಅಗಸೆ ವಿನಾಯಕ ದೇವಾಲಯ. ಅಘನಾಶಿನಿ

**I. ಅರ್ಧಗಣಪತಿ ದೇವಾಲಯ, ಬನವಾಸಿ :** ಬನವಾಸಿಯ ಮಧುಕೇಶ್ವರ ದೇವಾಲಯದ ಆವರಣದಲ್ಲಿ ಸೋದೆಯ ಅರಸು ಒಂದನೇ ಸದಾಶಿವರಾಯನಿಂದ ಕ್ರಿ. ಶ. ೧೭೧೫ ರಲ್ಲಿ ಅರ್ಧಗಣಪತಿ ಮಂಟಪವೆಂಬ ಚಿಕ್ಕಗುಡಿಯು ನಿರ್ಮಿಸಲ್ಪಟ್ಟಿದ್ದು. ಇದರಲ್ಲಿ ಕಾವಿ ಚಿತ್ರರಚನೆ ಮಾಡಲಾಗಿದೆ. ಬನಸವಾಸಿಯ ಮಧುಕೇಶ್ವರ ದೇವಾಲಯದ ಆವರಣದಲ್ಲಿ ಅನೇಕ ಚಿಕ್ಕದೇವಾಲಯಗಳು ಮಂಟಪಗಳು ಇದ್ದರೂ ಈ ಗಣಪತಿ ಮಂಟಪದಲ್ಲಿ ಮಾತ್ರ ಕಾವಿ ಕಲೆ ಕಂಡುಬರುವುದು. ಈ ಚಿಕ್ಕಗಣಪತಿ ಗುಡಿಯು ಒಂದು ಸಣ್ಣ ಗರ್ಭಗೃಹ. ಮುಂದೆ ನಾಲ್ಕು ಕಂಬಗಳ ಮಂಟಪವನ್ನು ಹೊಂದಿದ್ದು. ಗರ್ಭಗೃಹದ ಹೊರಭಾಗದ ಗೋಡೆ ಮತ್ತು ಮಂಟಪದ ನಾಲ್ಕೂ ಕಂಬಗಳಲ್ಲಿ ಕಾವಿ ಚಿತ್ರರಚನೆ ಮಾಡಲಾಗಿದೆ. ಮಧುಕೇಶ್ವರ ದೇವಾಲಯದ ಅರ್ಧಗಣಪತಿ ಮಂಟಪದ ಚಿತ್ರಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆ ವಿಂಗಡಿಸಿಕೊಳ್ಳಬಹುದು.

೧. ಗರ್ಭಗೃಹದ ಚಿತ್ರಗಳು

೨. ಕಂಬದ ಮೇಲಿನ ಚಿತ್ರಗಳು

೧. **ಗರ್ಭಗೃಹದ ಚಿತ್ರಗಳು :** ಗರ್ಭಗೃಹದ ಬಾಗಿಲಿನ ಎರಡೂ ಬದಿಯ ಗೋಡೆಗಳಲ್ಲಿ ಕಾವಿ ಚಿತ್ರಗಳನ್ನು ರಚನೆ ಮಾಡಲಾಗಿದೆ. ಈ ಚಿತ್ರಗಳು ಸ್ಪಷ್ಟವಾಗಿ ಗೋಚರಿಸುವದಿಲ್ಲ. ಅವು ಹೆಚ್ಚುನಾಶವಾಗಿದ್ದು ಮಾತ್ರವಲ್ಲದೇ ಅವುಗಳ ರಚನೆಯೇ ಪೂರ್ಣಗೊಂಡಿಲ್ಲ. ಕಾವಿ ಬಣ್ಣದ ಭಿತ್ತಿಯನ್ನು ಲೇಪಿಸಿ ಅಲ್ಲಲ್ಲಿ ಕೆಲವು ರೇಖೆಗಳನ್ನು ಎಳೆದು ಹಾಗೇ ಬಿಡಲಾಗಿದೆ. ಹಾಗಾಗಿ ಇವು ಯಾವ ಚಿತ್ರಗಳು. ಯಾವ ವಿಷಯಕ್ಕೆ ಸಂಬಂಧಿಸಿದವುಗಳು ಎಂಬುದರ ಕುರಿತಾಗಿ ಹೆಚ್ಚಿನ ವಿವರಗಳು ತಿಳಿಯುವದಿಲ್ಲ.

**೨. ಕಂಬದ ಮೇಲಿನ ಚಿತ್ರಗಳು :** ಮಂಟಪದ ಕಂಬಗಳನ್ನು ಅಷ್ಟಕೋನಾಕೃತಿಯಲ್ಲಿ ರಚನೆಮಾಡಲಾಗಿದ್ದು, ಅವುಗಳ ಸಮತಟ್ಟಾದ ಪ್ರತಿಯೊಂದೂ ಮೈಗಳಲ್ಲೂ ವಿವಿಧ ವಿನ್ಯಾಸದ ಚಿತ್ರ ಮತ್ತು ವಿನ್ಯಾಸಗಳನ್ನು ರಚನೆ ಮಾಡಲಾಗಿದೆ. ಮಂಟಪದ ಕಂಬದ ಮೇಲಿನ ಚಿತ್ರಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದಾಗಿದೆ.

I. ಜಯವಿಜಯರ ಚಿತ್ರಗಳು

II. ದೀಪದ ಸಮೆಯ ಚಿತ್ರಗಳು

III. ನಕ್ಷಾ ವಿನ್ಯಾಸಗಳು

***I. ಜಯವಿಜಯರ ಚಿತ್ರಗಳು :*** ಗರ್ಭಗೃಹದ ಕಡೆಗಿರುವ ಎರಡು ಕಂಬಗಳಲ್ಲಿ ದೇವರಿಗೆದುರಾಗಿರುವ ಕಂಬದ ಮೈಗಳಲ್ಲಿ ಜಯವಿಜಯರ ಚಿತ್ರಗಳನ್ನು ಚಿತ್ರಿಸಲಾಗಿದೆ. ಉದ್ದನಾದ ಗಧೆಗಳನ್ನು ತಲೆಕೆಳಗಾಗಿ ಹಿಡಿದುಕೊಂಡಿರುವ ಜಯವಿಜಯರು ನಾಲ್ಕು ಕೈಗಳನ್ನು ಹೊಂದಿದ್ದು ಶಂಖ ಚಕ್ರಗಳನ್ನೂ ಧರಿಸಿದ್ದಾರೆ. ಜಯವಿಜಯರ ಕಿರೀಟಗಳು ಅಗಲವಾದ ವಿನ್ಯಾಸದಲ್ಲಿದ್ದು ಹೆಚ್ಚು ಎತ್ತರವಿಲ್ಲ. ಈ ಕಿರೀಟಗಳು ಸುಳುವಿನ ನಕ್ಷೆಯಿಂದ ಕೂಡಿವೆ. ಹೆಗಲಮೇಲೆ ಹೊದ್ದುಕೊಂಡ ಶಾಲು ಪಾದದವರೆಗೂ ಇಳಿದಿದೆ. ವೈಕುಂಠದ ದ್ವಾರಪಾಲಕರಾದ ಜಯವಿಜಯರನ್ನು ಕರಾವಳಿ ಭಾಗದ ಅನೇಕ ದೇವಾಲಯಗಳಲ್ಲಿ ಕಾವಿಚಿತ್ರದಲ್ಲಿ ರಚನೆಮಾಡಲಾಗಿದೆ. ಆದರೆ ಉಳಿದ ಕಡೆಗಳಿಗಿಂತ ಈ ಚಿತ್ರಗಳು ಮಾತ್ರ ಸಂಪೂರ್ಣ ಭಿನ್ನವಾಗಿವೆ. ಇಲ್ಲಿ ಜಯವಿಜಯರು ಹಿಡಿದುಕೊಂಡ ಗಧೆ. ಶಂಖ. ಚಕ್ರಗಳ ರೂಪಗಳು ಬೇರೆಯಾಗಿವೆ. ಅವರುಧರಿಸಿದ ಕಿರೀಟ. ಆಭರಣವಿನ್ಯಾಸ. ನಿರೂಪಣಾಶೈಲಿ ಇತರೆಡೆಗಿಂತ ಭಿನ್ನವಾಗಿದೆ. ಈ ಚಿತ್ರಗಳು ಮಂಟಪದಂತಹ ಸ್ಥಳವಿನ್ಯಾಸದಲ್ಲಿ ರಚನೆಯಾಗಿದ್ದು ಮೇಲ್ಭಾಗದಲ್ಲಿ ಸುಳುವಿನ ನಕ್ಷಾರೂಪಗಳಿವೆ.

***II. ದೀಪದ ಸಮೆಯ ಚಿತ್ರಗಳು :*** ಮುಂಭಾಗದಲ್ಲಿರುವ ಎರಡು ಕಂಬಗಳಲ್ಲಿ ದೇವರಿಗೆ ಎದುರಾಗಿರುವ ಮೈಯಲ್ಲಿ ಕಂಬದ ಉದ್ದಕ್ಕೂ ಎತ್ತರವಾದ ಸಮೆಗಳನ್ನು ರಚನೆಮಾಡಲಾಗಿದೆ. ಈ ದೀಪದ ಸಮೆಗಳು ಅಲಂಕಾರಿಕ ನಕ್ಷಾರೂಪದಲ್ಲಿವೆ. ಸಮೆಗಳ ಒಳಭಾಗವನ್ನು ಪೂರ್ತಿಯಾಗಿ ನಕ್ಷೆಯ ಚಿತ್ರಣದಿಂದ ತುಂಬಿಸಲಾಗಿದೆ. ಎದುರು ಬದಿರಾಗಿರುವ ಈ ಸಮೆಗಳು ಒಂದೇ ವಿನ್ಯಾಸದಲ್ಲಿವೆ.

***III. ನಕ್ಷಾ ವಿನ್ಯಾಸಗಳು :*** ಕಂಬಗಳ ಮೇಲೆ ವಿವಿಧ ವಿನ್ಯಾಸದ ನಕ್ಷೆಗಳನ್ನು ರಚಿಸಲಾಗಿದೆ. ಅಷ್ಟಕೋನಾಕೃತಿಯ ಕಂಬಗಳ ಪ್ರತಿಯೊಂದು ಸಮತಟ್ಟಾದ ಮೈಯಲ್ಲೂ ಭಿನ್ನ ಭಿನ್ನ ರೂಪದಲ್ಲಿರುವ ನಕ್ಷೆಗಳನ್ನು ಚಿತ್ರಿಸಿದ್ದು. ಕಲಾವಿದನ ಜಾಣ್ಮೆಯನ್ನು ಇಲ್ಲಿ ಗುರುತಿಸಬಹುದು. ಒಂದಕ್ಕೊಂದು ಹೆಣೆದುಕೊಂಡಿರುವ ವೃತ್ತಾಕಾರದ ಸುಳಿವುಗಳು. ಮಧ್ಯದಲ್ಲಿ ಹೂಗಳನಕ್ಷೆ. ಕೆಲವು ಕಡೆಗೆ ದೊಡ್ಡ ಹೂಗಳ ವಿನ್ಯಾಸ. ಅದರ ಸುತ್ತಲೂ ಹೊಂದಾಣಿಕೆಯಾಗುವಂತಹ ವೃತ್ತಾಕಾರದ ಪುನರಾವರ್ತಿತ ರೂಪಗಳು. ಹಗ್ಗದ ವಿನ್ಯಾಸದಂತಿರುವ ನಕ್ಷೆ ಹೀಗೆ ಹಲವು ಬಗೆಯ ನಕ್ಷಾ ವಿನ್ಯಾಸಗಳು ಈ ಕಂಬಗಳ ಮೇಲೆ ರಚಿಸಿವೆ.

**II. ಗಣಪತಿ ದೇವಾಲಯ, ಹೊನ್ನಾವರ :** ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದಲ್ಲಿ ಅನೇಕ ಪ್ರಾಚೀನ ದೇವಾಲಯಗಳಿವೆ. ಅಲ್ಲಿನ ರಥಬೀದಿಯಲ್ಲಿರುವ ಗಣಪತಿ ದೇವಾಲಯದಲ್ಲಿ ಕಾವಿ ಭಿತ್ತಿಚಿತ್ರಕಲೆ ಕಂಡುಬರುತ್ತದೆ.

ಈ ದೇವಾಲಯದಲ್ಲಿ ಮಾನವಾಕೃತಿಗಳು ಅಥವಾ ಯಾವುದೇ ಪ್ರಾಣಿಪಕ್ಷಿಗಳ ಚಿತ್ರಗಳು ರಚನೆಯಾಗಿರದೇ ನಕ್ಷಾ ವಿನ್ಯಾಸಗಳು ಮಾತ್ರ ಕಂಡುಬರುತ್ತವೆ. ಇಲ್ಲಿನ ನಕ್ಷಾ ವಿನ್ಯಾಸಗಳನ್ನು ಎರಡು ರೀತಿಯಲ್ಲಿ ವಿಂಗಡಿಸಬಹುದು :

೧. ದೇವಾಲಯದ ಹೊರಗೋಡೆಯನಕ್ಷೆ

೨. ಮಂಟಪದ ಕಂಬದ ಮೇಲಿನಕ್ಷೆ

೧. **ದೇವಾಲಯದ ಹೊರಗೋಡೆಯನಕ್ಷೆ :** ದೇವಾಲಯದ ಹೊರಗೋಡೆಯ ಸುತ್ತಲೂ ವಿವಿಧ ನಕ್ಷೆಯ ವಿನ್ಯಾಸದಿಂದ ಅಲಂಕರಿಸಲಾಗಿದ್ದು. ಇದರಲ್ಲಿ ಮೂರು ಬಗೆ ಕಂಡುಬರುತ್ತದೆ. ಗರ್ಭಗೃಹದ ಬಾಗಿಲಿಗೆ ದೊಡ್ಡದಾದ ಹೂಗಳನ್ನು ಸಾಲಾಗಿ ರಚಿಸಿ ಅಲಂಕರಿಸಲಾಗಿದ್ದರೆ. ಗೋಡೆಯ ಮಧ್ಯಭಾಗದಲ್ಲಿ ಎರಡು ಪಟ್ಟಿಗಳನ್ನು ಮಾಡಿಕೊಂಡು ಅದರಲ್ಲಿ ವೃತ್ತಾಕಾರದ ವಿನ್ಯಾಸದಲ್ಲಿ ನಾಲ್ಕು ಎಸಳಿನ ಹೂವನ್ನು ಜ್ಯಾಮಿತಿಕ ರೂಪದಲ್ಲಿ ರಚಿಸಲಾಗಿದೆ. ಮತ್ತೊಂದು ಬಗೆ ಎಂದರೆ ಗೋಡೆಯ ಮೇಲ್ಭಾಗದಲ್ಲಿನ ಪಟ್ಟಿಕೆಯಲ್ಲಿ ಅಲಂಕಾರಿಕ ರೂಪದ ಎಲೆಬಳ್ಳಿಯನ್ನು ಸಾಲಾಗಿ ರಚಿಸಲಾಗಿದೆ. ಗೋಡೆಯಲ್ಲಿರುವ ಕಂಬಗಳಿಗೆ ಸಮಾನಾಂತರ ರೇಖೆಗಳನ್ನು ಎಳೆದು ಶೃಂಗರಿಸಲಾಗಿದ್ದು. ಕೆಳಭಾಗದ ಗೋಡೆಯಲ್ಲಿ ಎಲೆಬಳ್ಳಿಯ ನೈಜ ರೂಪವಿದೆ.

೨. **ಮಂಟಪದ ಕಂಬದ ಮೇಲಿನಕ್ಷೆ :** ದೇವಾಲಯದ ಪ್ರಕಾರದಲ್ಲಿ ಗರ್ಭಗೃಹದ ಎದುರಿಗೆ ಮಂಟಪಗಳನ್ನು ನಿರ್ಮಿಸಲಾಗಿದ್ದು ಇವುಗಳ ಮೇಲ್ಛಾವಣಿಗೆ ಹಂಚುಗಳನ್ನು ಹೊದಿಸಲಾಗಿದೆ. ಅದಕ್ಕಾಗಿ ನಿರ್ಮಿಸಿರುವ ಮಂಟಪದ ದೊಡ್ಡ ಕಂಬಗಳ ಮೇಲಿನ ಮತ್ತು ಕೆಳಗಿನ ಭಾಗದಲ್ಲಿರುವ ಪಟ್ಟಿಕೆಯಲ್ಲಿ ಹಾವಿನಂತೆ ಸುರುಳಿಯಾಗಿರುವ ನಕ್ಷೆಯನ್ನು ರಚಿಸಲಾಗಿದೆ. ಈ ಬಗೆಯ ನಕ್ಷೆ ಮಂಟಪದ ಎರಡು ಕಂಬಗಳ ಮೇಲೆ ರಚನೆಯಾಗಿದ್ದು. ಈ ದೇವಾಲಯದ ಬೇರೆ ಭಾಗದಲ್ಲಿ ಇದು ಕಂಡುಬರುವುದಿಲ್ಲ.

**III. ಗಣಪತಿ ದೇವಾಲಯ, ಚಂದಾವರ :** ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿಗೆ ಸೇರಿದ ಚಂದಾವರವು ಹೊನ್ನಾವರದಿಂದ ೧೮ ಕಿ. ಮಿ. ಗಳ ಅಂತರದಲ್ಲಿದೆ. ಇಲ್ಲಿನ ಗಣಪತಿ ದೇವಾಲಯದಲ್ಲಿ ಕಾವಿ ಚಿತ್ರಕಲೆ ಕಂಡುಬರುತ್ತದೆ ಎಂಬ ಉಲ್ಲೇಖ[೨೦೪]ವಿದ್ದರೂ ಈಗ ಈ ದೇವಾಲಯದಲ್ಲಿ ಯಾವುದೇ ಚಿತ್ರಗಳು ಕಂಡುಬರುವದಿಲ್ಲ. ಈ ದೇವಾಲಯವನ್ನು ನವೀಕರಿಸಿ ಕಟ್ಟಿಸಲಾಗಿದ್ದು ಅಲ್ಲಿರುವ ಚಿತ್ರಗಳು ನಾಶವಾಗಿವೆ.

**IV. ಅಗಸೆ ವಿನಾಯಕ ದೇವಾಲಯ, ಅಘನಾಶಿನಿ :** ಕುಮಟಾ ತಾಲೂಕಿಗೆ ಸೇರಿದ ಅಘನಾಶಿನಿಯು ಕುಮಟಾದಿಂದ ಸುಮಾರು ೨೪ ಕಿ. ಮಿ. ಅಂತರದಲ್ಲಿದೆ. ಇಲ್ಲಿನ ಅಗಸೆ ವಿನಾಯಕ ದೇವಾಲಯದಲ್ಲಿ ಕಾವಿ ಚಿತ್ರಕಲೆ ಕಂಡುಬರುತ್ತದೆ. ದೇವಾಲಯದ ನವೀಕರಣದಿಂದಾಗಿ ಚಿತ್ರಗಳೆಲ್ಲ ನಾಶವಾಗಿದ್ದು ದ್ವಾರಬಾಗಿಲಿನ ಎಡಬಲಗಳಲ್ಲಿ ಇಬ್ಬರು ದ್ವಾರಪಾಲಕರ ಚಿತ್ರಗಳು ಮಾತ್ರ ಉಳಿದಿವೆ. ಈ ಚಿತ್ರಗಳಿಗೂ ಆಧುನಿಕ ವಾರ್ನಿಸ್ ಬಣ್ಣಲೇಪನ ಮಾಡಿದ್ದರಿಂದ ಅವುಗಳ ನೈಜರೂಪ ಹೊರಟುಹೋಗಿದೆ. ಈ ದ್ವಾರಪಾಲಕರು ಕೈಯಲ್ಲಿ ಉದ್ದನಾದ ಖಡ್ಗಹಿಡಿದಂತೆ ಚಿತ್ರಿಸಿದ್ದು. ಉದ್ದತೋಳಿನ ಅಂಗಿ ತೊಡೆಯವರೆಗೂ ಇದ್ದು. ಕೆಳಗೆ ಮೊಣಕಾಲವರೆಗೆ ಚಡ್ಡಿ ಧರಿಸಿದ್ದಾರೆ. ತಲೆಯಮೇಲೆ ಇರುವ ಟೊಪ್ಪಿಗೆಯು ಬ್ರಿಟೀಷ್ ಪದ್ಧತಿಯ ಪೋಲೀಸರನ್ನು ನೆನಪಿಸುತ್ತವೆ.

---

೨೦೪. ಸೂರ್ಯನಾಥ ಕಾಮಥ (ಸಂ) : ಉತ್ತರ ಕನ್ನಡ ಜಿಲ್ಲಾ ಗೆಝೆಟೀಯರ್, ಪುಟ ೯೧೮

## ೫. ಮಾರುತಿ ದೇವಾಲಯಗಳು

ಕರಾವಳಿ ಭಾಗದ ಕೆವು ಮಾರುತಿದೇವಾಲಯಗಳಲ್ಲಿಯೂ ಕಾವಿ ಚಿತ್ರಕಲೆ ರಚನೆಯಾಗಿದ್ದು ಕಂಡುಬರುತ್ತದೆ. ಉತ್ತರ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಕಾವಿಕಲೆ ರಚನೆಯಾಗಿರುವ ಪ್ರಾಚೀನ ಮಾರುತಿ ದೇವಾಲಯಗಳು ಈ ಕೆಳಗಿನಂತಿವೆ :

I. ಮಾರುತಿ ದೇವಾಲಯ, ಹೊನ್ನಾವರ

II. ಮಾರುತಿ ದೇವಾಲಯ, ಚಂದಾವರ

III. ಹನುಮಾನ್ ದೇವಾಲಯ, ಶಿರಾಲಿ

IV. ಹನುಮಾನ್ ದೇವಾಲಯ, ಅಮದಳ್ಳಿ

ಈ ಮೇಲಿನ ಹನುಮಾನ್ ದೇವಾಲಯಗಳಲ್ಲಿ ಹೊನ್ನಾವಾರದ ಮಾರುತಿ ದೇವಾಲಯದಲ್ಲಿ ಮಾತ್ರ ಚಿತ್ರಗಳು ಇನ್ನೂ ಅಲ್ಪಸ್ವಲ್ಪ ಉಳಿದುಕೊಂಡಿದ್ದು ಉಳಿದ ದೇವಾಲಯಗಳಲ್ಲಿ ಚಿತ್ರಗಳು ಸಂಪೂರ್ಣ ನಾಶವಾಗಿವೆ. ಹೆಚ್ಚಾಗಿ ದೇವಾಲಯವನ್ನು ನವೀಕರಿಸಿದ ಕಾರಣದಿಂದಲೇ ಚಿತ್ರಗಳು ನಾಶವಾಗಿವೆ. ಇವುಗಳ ಬಗೆಗೆ ಸ್ಥೂಲವಾಗಿ ಈ ಕೆಳಗಿನಂತೆ ವಿವರಿಸಬಹುದು :

**I. ಮಾರುತಿ ದೇವಾಲಯ, ಹೊನ್ನಾವರ :** ಹೊನ್ನಾವರದ ಶ್ರೀರಾಮ ಮಂದಿರದ ಸಮೀಪದಲ್ಲಿಯೇ ಮಾರುತಿ ದೇವಾಲಯವು ಕಟ್ಟಲ್ಪಟ್ಟಿದೆ. ಈ ದೇವಾಲಯವು ಚಿಕ್ಕದಾಗಿದ್ದು ಅದರ ಒಳಭಾಗ ಮತ್ತು ಹೊರಭಾಗದಲ್ಲಿ ಕಾವಿ ಭಿತ್ತಿಚಿತ್ರಗಳನ್ನು ರಚಿಸಲಾಗಿದೆ. ಇಲ್ಲಿ ವಿಷ್ಣುವಿನ ದಶಾವತಾರಗಳು, ಕೃಷ್ಣಕಥಾನಕ, ಆಂಜನೇಯನ ಶೌರ್ಯವನ್ನು ತೋರಿಸುವ ಚಿತ್ರಗಳು ರಚನೆಯಾಗಿದ್ದು. ಅಧ್ಯಯನದ ಅನುಕೂಲಕ್ಕಾಗಿ ಇಲ್ಲಿನ ಚಿತ್ರಗಳನ್ನು ಈ ಕೆಳಗಿನಂತೆ ವಿಂಗಡಿಸಿಕೊಳ್ಳಬಹುದು.

೧. ಹೊರಗೋಡೆಯ ಚಿತ್ರಗಳು

೨. ಒಳಗೋಡೆಯ ಚಿತ್ರಗಳು

೧. **ಹೊರಗೋಡೆಯ ಚಿತ್ರಗಳು :** ದೇವಾಲಯದ ಹೊರಗೋಡೆಯ ಸುತ್ತಲೂ ವೈವಿಧ್ಯಮಯವಾದ ಕಮಾನು ಮತ್ತು ಚೌಕಗಳನ್ನು ಮಾಡಿಕೊಂಡು ಚಿತ್ರರಚನೆ ಮಾಡಲಾಗಿದೆ. ಹೊರಗೋಡೆಯ ಈ ಚಿತ್ರಗಳು ಒಂದೇ ವಿಷಯಕ್ಕೆ ಸಂಬಂಧಿಸಿರದೇ ಬೇರೆ ಬೇರೆ ವಿಷಯವನ್ನು ಆಧರಿಸಿರಚನೆಯಾಗಿವೆ. ವಿಷಯಾಧಾರಿತವಾಗಿ ಈ ಹೊರಗೋಡೆಯ ಚಿತ್ರಗಳನ್ನು ಈ ಕೆಳಗಿನಂತೆ ವಿಂಡಗಿಸಿಕೊಂಡು ವಿವರಿಸಬಹುದು.

I. ವಿಷ್ಣುವಿನ ದಶಾವತಾರದ ಚಿತ್ರಗಳು

II. ಕೃಷ್ಣ ಕಥಾನಕಗಳ ಚಿತ್ರಗಳು

III. ಸಾಮಾಜಿಕ ವ್ಯಕ್ತಿ ಚಿತ್ರಗಳು

***I. ವಿಷ್ಣುವಿನ ದಶಾವತಾರದ ಚಿತ್ರಗಳು :*** ವಿಷ್ಣುವಿನ ದಶಾವತಾರಗಳನ್ನು ಇಲ್ಲಿ ಚೌಕಗಳು ಮತ್ತು ಮಂಟಪದಂತಹ ವಿನ್ಯಾಸದಲ್ಲಿ ರಚನೆಮಾಡಲಾಗಿದ್ದು ಪ್ರತಿಯೊಂದು ಅವತಾರಕ್ಕೂ ಒಂದೊಂದು ಭಿನ್ನ ರೀತಿಯ ಸ್ಥಳವಿನ್ಯಾಸ ಸಂಯೋಜಿಸಲಾಗಿದೆ. ಅವುಗಳನ್ನು ಒಂದೊಂದಾಗಿ ಈ ರೀತಿ ಸ್ಥೂಲವಾಗಿ ಪರಿಚಯಿಸಬಹುದು.

## 5. ಮಾರುತಿ ದೇವಾಲಯಗಳ ಕಾವಿ ಭಿತ್ತಿ ಚಿತ್ರಕಲೆ



೧. ಮತ್ಸ್ಯಾವತಾರ : ವಿಷ್ಣುವಿನ ದಶಾವತಾರದಲ್ಲಿ ಮೊದಲನೆಯದಾದ ಈ ಅವತಾರದ ಚಿತ್ರದಲ್ಲಿ ವಿಷ್ಣುವಿಗೆ ನಾಲ್ಕು ಕೈಗಳನ್ನು ಚಿತ್ರಿಸಲಾಗಿದೆ. ಹಿಂದಿನ ಎರಡು ಕೈಗಳಲ್ಲಿ ಶಂಖ ಚಕ್ರಗಳನ್ನು ಹಿಡಿದುಕೊಂಡಿದ್ದು, ಉಳಿದ ಇನ್ನೆರಡು ಕೈಗಳಿಂದ ಒಂದು ಕೈಯಿಂದ ರಾಕ್ಷಸನ ಜುಟ್ಟು ಹಿಡಿದುಕೊಂಡು ಇನ್ನೊಂದು ಕೈಯಲ್ಲಿರುವ ಖಡ್ಗದಿಂದ ರಾಕ್ಷಸನನ್ನು ತಿವಿಯುತ್ತಿದ್ದಾನೆ. ರಾಕ್ಷಸನು ಖಡ್ಗಢಾಲುಗಳನ್ನು ಹಿಡಿದುಕೊಂಡು ವಿಷ್ಣುವಿನ ಪ್ರಹಾರದಿಂದ ಕೆಳಗುರುಳಿಬಿದ್ದಿದ್ದಾನೆ.

೨. ಕೂರ್ಮಾವತಾರ : ಇಲ್ಲಿ ಕೂರ್ಮರೂಪದ ವಿಷ್ಣುವು ರಾಕ್ಷಸನನ್ನು ಸಂಹರಿಸುತ್ತಿದ್ದಾನೆ. ಇಲ್ಲಿಯೂ ವಿಷ್ಣುವಿಗೆ ನಾಲ್ಕು ಕೈಗಳನ್ನು ಚಿತ್ರಿಸಲಾಗಿದ್ದು ಖಡ್ಗದಿಂದಲೇ ರಾಕ್ಷಸನನ್ನು ಸಂಹರಿಸುತ್ತಿದ್ದಾನೆ. ವಿಷ್ಣುವು ಪೂರ್ತಿಯಾಗಿ ಮಾನವ ರೂಪಿನಲ್ಲಿರದೇ ಸೊಂಟದ ಕೆಳಭಾಗವು ಕೂರ್ಮರೂಪದಲ್ಲಿದ್ದರೆ. ಮೇಲಿನಭಾಗವು ಮಾನವರೂಪದಲ್ಲಿದೆ.

೩. ವರಾಹ ಅವತಾರ : ವರಾಹ ಅವತಾರದ ವಿಷ್ಣುವು ರಾಕ್ಷಸನನ್ನು ಖಡ್ಗದಿಂದ ಸಂಹಾರ ಮಾಡುತ್ತಲಿದ್ದು, ರಾಕ್ಷಸನು ಖಡ್ಗಢಾಲುಗಳನ್ನು ಹಿಡಿದುಕೊಂಡು ಕೆಳಗೆ ಬಿದ್ದಿದ್ದಾನೆ. ವಿಷ್ಣುವಿನ ಕೆಳಭಾಗವು ಹಂದಿಯರೂಪದಲ್ಲಿದ್ದರೆ, ಮೇಲ್ಭಾಗವು ಮಾನವರೂಪದಲ್ಲಿದೆ. ಹಿಂದಿನ ಮಂಟಪದ ವಿನ್ಯಾಸದ ಮೇಲೆ ಕಳಶದ ಹಾಗೆ ಕಮಾನು ಆಕಾರ ರಚನೆಯಾಗಿದ್ದು ಅದರಮೇಲೆ ಸುಳುವಿನ ನಕ್ಷಾಚಿತ್ರಗಳು ರಚನೆಗೊಂಡಿವೆ.

೪. ನರಸಿಂಹ ಅವತಾರ : ಕಂಬವನ್ನು ಸೀಳಿ ಹೊರಬಂದ ನರಸಿಂಹನು ಹಿರಣ್ಯಕಶ್ಯಪನನ್ನು ಸಂಹರಿಸುವ ಚಿತ್ರದಲ್ಲಿ ಕಂಬವನ್ನು ಇಲ್ಲಿ ಪ್ರತ್ಯೇಕವಾಗಿ ರಚಿಸದೇ ನರಸಿಂಹನ ಬೆನ್ನಿಗೆ ಅಂಟಿಕೊಂಡಂತೆಯೇ ಚಿತ್ರಿಸಿದೆ. ರಾಮ ಮಂದಿರದ ನರಸಿಂಹ ಅವತಾರದ ಚಿತ್ರದಲ್ಲಿ ಕಂಬವು ಹೂಬಳ್ಳಿಯ ನಕ್ಷೆಯಿಂದ ಕೂಡಿದ್ದರೆ, ಇಲ್ಲಿ ಚಪ್ಪಟೆಯಾಗಿ ವರ್ಣಲೇಪನ ಮಾಡಲಾಗಿದೆ. ನರಸಿಂಹನು ಹಿರಣ್ಯಕಶ್ಯಪನನ್ನು ತೊಡೆಯಮೇಲೆ ಹಾಕಿಕೊಂಡು ಸಂಹರಿಸುತ್ತಿದ್ದು, ಈ ಚಿತ್ರದಲ್ಲಿ ಕಮಾನಿನಾಕಾರದ ಸ್ಥಳವಿನ್ಯಾಸದಲ್ಲಿ ರಚನೆಯಾಗಿದೆ.

೫. ವಾಮನ ಅವತಾರ : ವಾಮನ ವೇಷಧಾರಿ ವಿಷ್ಣುವು ಬಲಿಚಕ್ರವರ್ತಿಯಿಂದ ದಾನಪಡೆಯುತ್ತಿರುವ ಈ ಚಿತ್ರದಲ್ಲಿ, ವಾಮನನು ಬಲಿಯು ನೀಡಿದ ದಾನದಸ್ಥಳವನ್ನು ತನ್ನ ಪಾದಗಳಿಂದ ಅಳೆಯುತ್ತಿದ್ದಾನೆ. ಒಂದುಪಾದವನ್ನು ಭೂಮಿಯ ಮೇಲೂ ಮತ್ತೊಂದು ಪಾದವನ್ನು ಆಕಾಶಕ್ಕೂ ಇಟ್ಟು ವಾಮನ ಮೂರ್ತಿಯು ಮೂರನೇ ಪಾದವಿಡಲು ಸ್ಥಳವೆಲ್ಲಿ ಎಂದು ಕೇಳಿದಾಗ, ಬಲಿಚಕ್ರವರ್ತಿಯು ತನ್ನ ತಲೆಯನ್ನು ತೋರಿಸುತ್ತಾನೆ. ವಾಮನನು ಮೂರನೇ ಪಾದವನ್ನು ಬಲಿಯತಲೆಯಮೇಲೆ ಇಟ್ಟು ಪಾತಾಳಕ್ಕೆ ತುಳಿಯುತ್ತಿದ್ದಾನೆ. ಚಿತ್ರದಲ್ಲಿ ವಾಮನನ ಆಕೃತಿ ದೊಡ್ಡಾಗಿಯೂ ಬಲಿಯ ರೂಪವನ್ನು ಚಿಕ್ಕದಾಗಿಯೂ ಚಿತ್ರಿಸಿದೆ.

೬. ಪರಶುರಾಮ ಅವತಾರ. ೭. ರಾಮಾವತಾರ. ೮. ಕೃಷ್ಣಾವತಾರ. ೯. ಬೌದ್ಧವತಾರ ಚಿತ್ರಗಳು ಹಿಂದಿನ ಗೋಡೆಯಲ್ಲಿ ರಚನೆಯಾಗಿದ್ದು ಅವು ಸಂಪೂರ್ಣನಾಶವಾಗಿವೆ.

೧೦. ಕಲ್ಕಿಅವತಾರ : ಹತ್ತನೆಯ ಅವತಾರವಾದ ಕಲ್ಕಿ ಅವತಾರದ ಚಿತ್ರವು ದೇವಾಲಯದ ಎಡಭಾಗದ ಗೋಡೆಯಲ್ಲಿ ಕೊನೆಗೆ ರಚನೆಯಾಗಿದೆ. ಈ ಚಿತ್ರದಲ್ಲಿ ಕಲ್ಕಿರೂಪದ ವಿಷ್ಣುವು ನಾಲ್ಕು ಕೈಗಳನ್ನು ಹೊಂದಿದ್ದು

ಕೈಗಳಲ್ಲಿ ಶಂಖ, ಚಕ್ರ, ಗಧೆಗಳನ್ನು ಹಿಡಿದುಕೊಂಡಿದ್ದಾನೆ. ಪಕ್ಕದಲ್ಲಿ ಕುದುರೆಯು ಚಿತ್ರಿತವಾಗಿದ್ದು ಅದರ ಮೇಲೆ ಜೀಣು ತೊಡಿಸಲಾಗಿದೆ. ಕುದುರೆಯ ಬೆನ್ನಮೇಲೆ ಛತ್ರಿಯು ಚಿತ್ರಣಗೊಂಡಿದೆ. ಹಿನ್ನೆಲೆಯ ಮಂಟಪದ ವಿನ್ಯಾಸವು ಚೌಕವಾಗಿದ್ದು ಅದರ ಮೇಲೆ ಕಳಶವನ್ನು ಚಿತ್ರಿಸಿದೆ. ವಿಷ್ಣುವಿಗೆ ಸಂಬಂಧಿಸಿದ ಈ ದಶಾವತಾರ ಚಿತ್ರಗಳಲ್ಲದೇ ಕೃಷ್ಣ ಕಥೆಗೆ ಸಂಬಂಧಿಸಿದ ಚಿತ್ರಗಳು ಸಹಿತ ಹೊರಗೋಡೆಯಲ್ಲಿ ರಚಿಸಿವೆ.

***II. ಕೃಷ್ಣ ಕಥಾನಕಗಳು :*** ದಶಾವತಾರ ಚಿತ್ರಗಳ ಮಧ್ಯದಲ್ಲಿ ಅಲ್ಲಲ್ಲಿ ಕೃಷ್ಣ ಕಥೆಗಳನ್ನು ಚಿತ್ರಿಸಿದ್ದು, ಅವು ನಾಶವಾಗಿವೆ. ಅವುಗಳಲ್ಲಿ ಒಂದೆರಡು ಚಿತ್ರಗಳು ಮಾತ್ರ ಉಳಿದುಕೊಂಡಿವೆ. ಅವು ಈ ಕೆಳಗಿನಂತಿವೆ.

೧. ಕೃಷ್ಣನಿಂದ ರಾಕ್ಷಸ ಸಂಹಾರ : ನಾಲ್ಕು ಕೈಗಳನ್ನು ಹೊಂದಿದ ಕೃಷ್ಣನು ಎರಡು ಕೈಗಳಲ್ಲಿ ಶಂಖ, ಚಕ್ರಗಳನ್ನು ಹಿಡಿದುಕೊಂಡಿದ್ದು. ಇನ್ನೆರಡು ಕೈಗಳಿಂದ ರಾಕ್ಷಸನನ್ನು ಸಂಹರಿಸುತ್ತಿದ್ದಾನೆ. ಒಂದು ಕೈಯಿಂದ ರಾಕ್ಷಸನ ಜುಟ್ಟುಹಿಡಿದುಕೊಂಡಿದ್ದು ಇನ್ನೊಂದು ಕೈಯಲ್ಲಿರುವ ಖಡ್ಗದಿಂದ ಅಸುರನ ರುಂಡಕತ್ತರಿಸುತ್ತಿದ್ದಾನೆ. ರಾಕ್ಷಸನು ಖಡ್ಗ ಢಾಲುಗಳನ್ನು ಹಿಡಿದುಕೊಂಡು ಕೃಷ್ಣನೊಡನೆ ಕಾದುತ್ತಿದ್ದಾನೆ. ಹಿನ್ನೆಲೆಯಲ್ಲಿರುವ ಮಂಟಪದ ಚಿತ್ರವು ಕಮಾನುಗಳ ಆಕಾರದಲ್ಲಿದ್ದು ಅದರೊಳಗೆ ಈ ಚಿತ್ರರಚನೆಯಾಗಿದೆ. ರಾಕ್ಷಸನು ಕೃಷ್ಣನ ಪ್ರಹಾರದಿಂದ ನಾಲಿಗೆಯನ್ನು ಚಾಚಿಕೊಂಡಿದ್ದಾನೆ.

೨. ಕಾಳಿಂಗಮರ್ದನ ಕೃಷ್ಣ : ಕಾಳಿಂಗಮರ್ದನ ಕೃಷ್ಣನ ಚಿತ್ರವು ಅಲಂಕಾರಿಕ ಮಂಟಪದಲ್ಲಿ ರಚನೆಯಾಗಿದ್ದು ಮಂಟಪದ ಮೇಲೆ ಶಿಖರದ ವಿನ್ಯಾಸನವಿದೆ. ಕೃಷ್ಣನು ತನ್ನ ಎರಡು ಕಾಲುಗಳಲ್ಲಿ ಕಾಳಿಂಗ ಸರ್ಪವನ್ನು ತುಳಿದಿದ್ದು. ಒಂದು ಕೈಯಿಂದ ಅದರ ಬಾಲವನ್ನು ಹಿಡಿದುಕೊಂಡಿದ್ದಾನೆ. ಕಾಳಿಂಗವು ಐದು ಹೆಡೆಗಳನ್ನು ಹೊಂದಿದ್ದು ಹೆಡೆಯ ಅಗಲವಾದ ಭಾಗದ ಮೇಲೆ ಕೃಷ್ಣನು ನರ್ತಿಸುತ್ತಿರುವನು.

೩. ಗೋವರ್ಧನ ಗಿರಿಧಾರಿ ಕೃಷ್ಣ : ಮತ್ತೊಂದು ಚಿತ್ರದಲ್ಲಿ ಕೃಷ್ಣನು ತನ್ನ ಕಿರುಬೆರಳಲ್ಲಿ ಪರ್ವತವನ್ನು ಎತ್ತಿದ್ದು ಅದರ ಬುಡದಲ್ಲಿ ಗೋವುಗಳು. ಗೋಪಾಲಕರು ಚಿತ್ರಿತರಾಗಿದ್ದಾರೆ. ಕೃಷ್ಣನು ಒಂದು ಕೈಯಿಂದ ಪರ್ವತ ಎತ್ತಿದ್ದು ಇನ್ನೊಂದು ಕೈಯನ್ನು ಟೊಂಕದ ಮೇಲೆ ಇಟ್ಟುಕೊಂಡಿದ್ದಾನೆ. ಪರ್ವತದ ಕೆಳಗೆ ಒಬ್ಬ ಗೋಪಾಲಕ ಮತ್ತು ಎರಡು ಗೋವುಗಳು ಚಿತ್ರಿಸಿವೆ. ಇನ್ನೊಂದೆರಡು ಸ್ಥಳಗಳಲ್ಲಿಯೂ ಕೃಷ್ಣ ಕಥೆಯ ಚಿತ್ರಗಳಿದ್ದು ಅವು ಸಂಪೂರ್ಣನಾಶವಾಗಿದ್ದು ಗುರುತಿಸಲು ಸಾಧ್ಯವಾಗುವುದಿಲ್ಲ. ಕೇವಲ ಕೆಮ್ಮಣ್ಣಿನ ಬಣ್ಣದ ಉಳಿಕೆಗಳು ಮಾತ್ರ ಕಂಡು ಬರುತ್ತವೆ.

***III. ಸಾಮಾಜಿಕ ವ್ಯಕ್ತಿ ಚಿತ್ರಗಳು :*** ಹೊರಗೋಡೆಯಲ್ಲಿ ದಶಾವತಾರ ಚಿತ್ರಗಳು ಮತ್ತು ಕೃಷ್ಣ ಕಥೆಯ ಚಿತ್ರಗಳು ಮಧ್ಯದಲ್ಲಿಯೇ ಅಲ್ಲಲ್ಲಿ ವ್ಯಕ್ತಿ ಚಿತ್ರಗಳನ್ನೂ ರಚಿಸಲಾಗಿದೆ. ಅವುಗಳಲ್ಲಿ ಎರಡು ಚಿತ್ರಗಳು ನಾಶವಾಗಿದ್ದು ಇನ್ನೆರಡು ಚಿತ್ರಗಳು ಮಾತ್ರ ಉಳಿದಿವೆ ಅವು ಹೀಗಿವೆ.

೧. ಕೈಯಲ್ಲಿ ಗುಲಾಬಿ ಹೂ ಹಿಡಿದ ವ್ಯಕ್ತಿ : ಈ ಚಿತ್ರದಲ್ಲಿ ತಲೆಗೆ ಪೇಟಾಸುತ್ತಿಕೊಂಡ ವ್ಯಕ್ತಿಯು ಬಲಗೈಯಲ್ಲಿ ಗುಲಾಬಿಹೂ ಹಿಡಿದುಕೊಂಡಿದ್ದಾನೆ. ಈತನು ಉದ್ದತೋಳಿನ ಅಂಗಿಧರಿಸಿ ಎಡ ಕೈಯನ್ನು ಸಂಜ್ಞಾಪೂರ್ವಕವಾಗಿ ಚಲಿಸುತ್ತಾ ಏನೋ ಹೇಳುತ್ತಿರುವಂತಿದೆ. ಈ ಚಿತ್ರವು ಪೂರ್ಣಪ್ರಮಾಣದಲ್ಲಿರದೇ ಎದೆಮಟ್ಟದ ಅರ್ಧಚಿತ್ರವಾಗಿದೆ. ಚಿತ್ರದ ಹೆಚ್ಚಿನ ಭಾಗನಾಶವಾಗಿದ್ದು ಭಿತ್ತಿಯ ಭಾಗ ಉದುರಿಹೋಗಿದೆ. ಈ ಚಿತ್ರವು ವೃತ್ತಾಕಾರದ ವಿನ್ಯಾಸದಲ್ಲಿ ರಚನೆಯಾಗಿದೆ.

೨. ಖಡ್ಗ ಹಿಡಿದುಕೊಂಡಿರುವ ವ್ಯಕ್ತಿಯ ಚಿತ್ರ : ವೃತ್ತಾಕಾರದಲ್ಲಿ ರಚನೆಯಾಗಿರುವ ಮತ್ತೊಂದು ಚಿತ್ರದಲ್ಲಿ ವ್ಯಕ್ತಿಯೊಬ್ಬನು ಖಡ್ಗಹಿಡಿದುಕೊಂಡಿದ್ದಾನೆ. ಈತನೂ ತಲೆಗೆ ಪೇಟಾಧರಿಸಿದ್ದು, ಉದ್ದ ತೋಳಿನ ಅಂಗಿಯನ್ನು ತೊಟ್ಟಿದ್ದಾನೆ. ಈತನ ಹಿಂಭಾಗದಲ್ಲಿ ಭುಜದ ಹತ್ತಿರ ಗುಲಾಬಿ ಹೂವನ್ನು ಚಿತ್ರಿಸಲಾಗಿದೆ. ಈತನ ಚಿತ್ರವೂ ಪೂರ್ತಿಯಾಗಿ ರಚನೆಯಾಗಿರದೇ ಎದೆಯವರೆಗಿನ ವಿದ್ಧಚಿತ್ರವೇ ಆಗಿದೆ. ಈ ಎರಡೂ ಚಿತ್ರಗಳು ಬಹುಶಃ ದೇವಾಲಯದ ಚಿತ್ರರಚನೆಗೆ ಪೋಷಕರಾದ ವ್ಯಕ್ತಿಗಳಿಗೆ ಸಂಬಂಧಿಸಿದವುಗಳಾಗಿರಬೇಕು.

**೨. ಒಳಗೋಡೆಯ ಚಿತ್ರಗಳು :** ದೇವಾಲಯದ ಹೊರಗೋಡೆಯಂತೆ ಒಳಬದಿಯ ಗೋಡೆಯಲ್ಲಿಯೂ ಕಾವಿಚಿತ್ರಗಳನ್ನು ರಚಿಸಲಾಗಿದೆ. ದೇವಾಲಯವು ಚಿಕ್ಕಪ್ರಮಾಣದಲ್ಲಿದ್ದು ಒಳಭಾಗವು ತೀರಸಣ್ಣದಾಗಿದೆ. ಹಾಗಾಗಿ ಒಳಗಿನ ಚಿತ್ರಗಳು ಕಡಿಮೆ ಸಂಖ್ಯೆಯಲ್ಲಿವೆ. ಅಲ್ಲದೇ ಒಳಭಾಗದ ಈ ಚಿತ್ರಗಳನ್ನು ಸುಣ್ಣ ಬಣ್ಣ ಸಾರಿಸಿ ನಾಶಪಡಿಸಲಾಗಿದೆ. ಮತ್ತೆ ಕೆಲವು ಚಿತ್ರಗಳ ಮೇಲೆಯೇ ವಿದ್ಯುತ್ ಸಂಪರ್ಕದ ಪಟ್ಟಿಗಳು ಅಳವಡಿಸಲ್ಪಟ್ಟಿವೆ. ಉಳಿದಿರುವ ಈ ಚಿತ್ರಗಳನ್ನೇ ಈ ಕೆಳಗಿನಂತೆ ಮೂರು ರೀತಿಯಲ್ಲಿ ವಿಂಗಡಿಸಬಹುದು.

I. ಆಂಜನೇಯನ ಚಿತ್ರಗಳು

II. ಜಯವಿಜಯರ ಚಿತ್ರಗಳು

III. ನಕ್ಷಾಚಿತ್ರಗಳು

***I. ಆಂಜನೇಯನ ಚಿತ್ರಗಳು :*** ಒಳಭಾಗದಲ್ಲಿನ ಗೋಡೆಯಲ್ಲಿ ಆಂಜನೇಯನ ಮಹಿಮೆಯನ್ನು ಬಿಂಬಿಸುವ ಚಿತ್ರಗಳಿವೆ. ಅವುಗಳಲ್ಲಿ ಕೆಲವು ಸುಣ್ಣಸಾರಿಸಿ ನಾಶಪಡಿಸಲಾಗಿದ್ದು ಒಂದೆರಡು ಚಿತ್ರಗಳು ಉಳಿದುಕೊಂಡಿವೆ. ಅವುಗಳು ಹೀಗಿವೆ.

೧. ಆಂಜನೇಯನು ಪರ್ವತವನ್ನು ಎತ್ತಿರುವುದು : ಆಂಜನೇಯನು ಸಂಜೀವಿನಿ ಪರ್ವತವನ್ನು ಹೊತ್ತು ತರುತ್ತಿರುವ ಈ ಚಿತ್ರದಲ್ಲಿ ಎಡಗೈಯಲ್ಲಿ ಪರ್ವತ ಎತ್ತಿಹಿಡಿದಿದ್ದರೆ, ಬಲಗೈಯಲ್ಲಿ ಗಧೆಯನ್ನು ಹಿಡಿದುಕೊಂಡಿದ್ದಾನೆ. ಬದಿಯ ನೋಟದಲ್ಲಿರುವ ಆಂಜನೇಯನ ಮುಖದಲ್ಲಿ ಕಿರೀಟವು ಮುಖಕ್ಕಿಂತ ದೊಡ್ಡದಾಗಿದೆ. ಈ ಚಿತ್ರಕ್ಕೆ ಅಲ್ಲಲ್ಲಿ ಸುಣ್ಣವನ್ನು ಸಾರಿಸಲಾಗಿದ್ದು ಇದು ಸ್ಪಷ್ಟವಾಗಿ ಗೋಚರವಾಗುವುದಿಲ್ಲ. ಚಿತ್ರವು ರೇಖಾ ಪ್ರಧಾನವಾಗಿ ರಚನೆಯಾಗಿರದೇ ನೆರಳು ಚಿತ್ರದ ಚಪ್ಪಟೆವರ್ಣಲೇಪನದ ಕಲ್ಪನೆ ಕೊಡುತ್ತದೆ. ಈ ಚಿತ್ರಕ್ಕೆ ಅಲ್ಲಲ್ಲಿ ಆಧುನಿಕವಾಗದ ಹಸಿರು, ಕೆಂಪು, ಕಪ್ಪು ವರ್ಣಗಳನ್ನು ಲೇಪಿಸಿ ಅದರ ಮೂಲಸ್ವರೂಪ ಹಾಳು ಮಾಡಲಾಗಿದೆ.

೨. ಆಂಜನೇಯನು ಗಿಡವನ್ನು ಹಿಡಿದುಕೊಂಡಿರುವುದು : ಮತ್ತೊಂದು ಚಿತ್ರದಲ್ಲಿ ಆಂಜನೇಯನು ಕೈಯಲ್ಲಿ ಟೊಂಗೆಯನ್ನು ಹಿಡಿದುಕೊಂಡಿದ್ದಾನೆ. ಸಂಜೀವಿನಿ ಪರ್ವತದಲ್ಲಿನ ಗಿಡಮೂಲಿಕೆಗಳನ್ನು ಕಿತ್ತುತರುತ್ತಿರುವ ದೃಶ್ಯ ಇದಾಗಿರಬಹುದು ಇಲ್ಲವೇ ಮರವನ್ನು ಕಿತ್ತು ರಾಕ್ಷಸರನ್ನು ಸಂಹರಿಸುವ ಸಾಂಕೇತಿಕ ಚಿತ್ರವಾಗಿರಬಹುದು. ಈ ಚಿತ್ರವೂ ಸಹಿತ ಮಂಟಪದ ವಿನ್ಯಾಸದಲ್ಲಿ ರಚನೆಯಾಗಿದ್ದು ನೆರಳು ಚಿತ್ರದ ಸ್ವರೂಪದಲ್ಲಿದೆ. ಇಲ್ಲಿಯೂ ಆಂಜನೇಯನ ಕಿರೀಟ, ಗದೆ, ಗಿಡದ ಭಾಗ, ಆತನ ಚಲ್ಲಣಕ್ಕೆ ಆಧುನಿಕವಾದ ಕೆಂಪು, ಹಸಿರು, ಹಳದಿ ಕಪ್ಪು

ವರ್ಣಗಳನ್ನು ಲೇಪಿಸಿ ಅಂದಗೆಡಿಸಲಾಗಿದೆ. ಈ ಚಿತ್ರಗಳಲ್ಲದೇ ಇನ್ನೇರಡು ಆಂಜನೇಯನ ಚಿತ್ರಗಳಿದ್ದು ಅವು ನಾಶವಾಗಿ ಹೋಗಿವೆ ಎಂದು ಗುಡಿಯ ಪೂಜಾರಿಗಳು ಹೇಳುತ್ತಾರೆ.

*II. ಜಯವಿಜಯರ ಚಿತ್ರಗಳು :* ದೇವಾಲಯದ ಗೃರ್ಭಗೃಹದ ಎಡಬಲದಲ್ಲಿ ವೈಕುಂಠ ದ್ವಾರಪಾಲಕರಾದ ಜಯವಿಜಯರ ಚಿತ್ರಗಳನ್ನು ರಚನೆಮಾಡಲಾಗಿದೆ. ಗಧೆಯನ್ನು ತಲೆಕೆಳಗಾಗಿ ಹಿಡಿದುಕೊಂಡು ಜಯವಿಜಯರು ಠೀವಿಯಿಂದ ನಿಂತಿದ್ದಾರೆ. ಅವರು ಹೊದ್ದುಕೊಂಡ ಶಾಲು ಬೆನ್ನಹಿಂದಿನಿಂದ ಬಳಸಿ ಎರಡೂ ಕಡೆಗೆ ಭುಜದ ಮುಂದೆ ಬಂದು ನೆಲದ ಮೇಲೆ ಇಳಿದಿದೆ. ಕಾಲನ್ನು ಕತ್ತರಿಯಾಗಿ ಮಾಡಿಕೊಂಡ ವಿನ್ಯಾಸದಲ್ಲಿರುವ ಇವರ ರೂಪಗಳು ಎಲ್ಲಕಡೆಗೂ ಇದೇ ರೀತಿ ಇವೆ. ಈ ಚಿತ್ರಗಳಲ್ಲೂ ಹೊರಭಾಗದಲ್ಲಿ ಅಲ್ಲಲ್ಲಿ ಆಧುನಿಕ ಕೆಂಪು. ಹಸಿರು. ವರ್ಣಲೇಪನ ಮಾಡಿದ್ದಾರೆ. ಈ ಚಿತ್ರಗಳೂ ಮಂಟಪದಂತಹ ವಿನ್ಯಾಸದಲ್ಲಿ ರಚನೆಯಾಗಿವೆ.

*III. ನಕ್ಷಾ ಚಿತ್ರಗಳು :* ಒಳಭಾಗದ ಗೋಡೆಯಲ್ಲಿ ಆಂಜನೇಯನ ಚಿತ್ರಗಳು ಮತ್ತು ಜಯವಿಜಯರ ಚಿತ್ರಗಳು ರಚನೆಯಾದಂತೆಯೇ ಅಲ್ಲಲ್ಲಿ ನಕ್ಷಾಚಿತ್ರಗಳೂ ರಚಿಸಿವೆ. ಈ ನಕ್ಷಾ ಚಿತ್ರದಲ್ಲಿ ಮತ್ತೆ ಎರಡು ರೀತಿಯ ನಕ್ಷೆಗಳಿದ್ದು ಅವುಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು.

೧. ವೃತ್ತಾಕಾರದ ನಕ್ಷೆಗಳು

೨. ಉದ್ದಪಟ್ಟಿಕೆಯ ಹೂಬಳ್ಳಿನಕ್ಷೆಗಳು

೧. ವೃತ್ತಾಕಾರದ ನಕ್ಷೆಗಳು : ನಾಲ್ಕೂ ನಿಟ್ಟಿನಗೋಡೆಯಲ್ಲಿ ಒಂದೊಂದು ವೃತ್ತಾಕಾರದ ನಕ್ಷಾ ಚಿತ್ರಗಳಿದ್ದು ಪ್ರತಿಯೊಂದೂ ಬೇರೆ ಬೇರೆ ವಿನ್ಯಾಸದಲ್ಲಿವೆ. ಜ್ಯಾಮಿತಿಕ ಉಪಕರಣದಿಂದ ಮೊದಲು ವೃತ್ತವನ್ನು ರಚಿಸಿಕೊಂಡು ಅದರಲ್ಲಿ ವಿವಿಧ ರೀತಿಯ ಚಿತ್ತಾರಗಳನ್ನು ರಚಿಸಲಾಗಿದೆ. ಇವು ಹೂಗಳ ಮತ್ತು ಎಲೆಗಳ ರೂಪಗಳನ್ನು ಹೋಲುತ್ತಿದ್ದು ರೇಖಾ ಪ್ರಧಾನವಾಗಿವೆ. ಎರಡು ವೃತ್ತಾಕರದ ನಕ್ಷೆಗಳು ಅಲ್ಪಸ್ವಲ್ಪ ಕಾಣುತ್ತಿದ್ದು, ಇನ್ನೆರಡು ನಕ್ಷೆಗಳನ್ನು ಸಂಪೂರ್ಣ ಸುಣ್ಣ ಸಾರಿಸಿ ಮುಚ್ಚಲಾಗಿದೆ.

೨. ಉದ್ದಪಟ್ಟಿಕೆಯ ಹೂಬಳ್ಳಿ ನಕ್ಷೆಗಳು : ಗೋಡೆಯಲ್ಲಿ ಉದ್ದಕ್ಕೂ ತೆಳುವಾದ ಪಟ್ಟಿಕೆಯನ್ನು ಮಾಡಿಕೊಂಡು ಅದರಲ್ಲಿ ಹೂಬಳ್ಳಿಯ ನಕ್ಷೆಗಳನ್ನು ರಚಿಸಿದೆ. ಈ ನಕ್ಷೆಯಲ್ಲಿ ಹೂಗಳು. ಎಲೆಗಳ ಅಲಂಕಾರಿಕ ರೂಪ. ಜ್ಯಾಮಿತಿಕ ಆಕಾರಗಳು ರಚಿಸಿವೆ. ಮಧ್ಯಭಾಗದ ಗೋಡೆಯಲ್ಲಿ ಅಲ್ಲದೇ ಇಂತಹ ಪಟ್ಟಿಕೆಯ ನಕ್ಷೆಯನ್ನು ಗರ್ಭಗೃಹದ ಬಾಗಿಲಿನ ಸುತ್ತಲಿನ ಚೌಕಟ್ಟಿಗೆ. ಕಿಟಕಿ ಮಾಡುಗಳ ಅಂಚುಗಳಿಗೆ. ಚಿತ್ರಗಳ ಕಮಾನುಗಳಿಗೆ ಸಹಿತ ರಚನೆಮಾಡಲಾಗಿದೆ. ಈ ದೇವಾಲಯದ ಉದ್ದಪಟ್ಟಿಕೆಯ ನಕ್ಷಾಚಿತ್ರವು ಒಂದೇ ತೆರನಾಗಿದ್ದು ಹೆಚ್ಚಿನ ವೈವಿಧ್ಯತೆಯಿಂದ ಕೂಡಿಲ್ಲ.

**II. ಮಾರುತಿ ದೇವಾಲಯ, ಚಂದಾವರ :** ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿಗೆ ಸೇರಿದ ಚಂದಾವರವು ಹೊನ್ನಾವರದಿಂದ ಸುಮಾರು ೧೮ ಕಿ. ಮಿ. ಗಳ ಅಂತರದಲ್ಲಿದೆ. ಇಲ್ಲಿನ ಪ್ರಾಚೀನ ಮಾರುತಿ

ದೇವಾಲಯದಲ್ಲಿ ಕಾವಿ ಚಿತ್ರಕಲೆ ರಚನೆಯಾಗಿದೆ. ಎಂಬುದಾಗಿ ಉಲ್ಲೆಖವಿದ್ದು[೨೦೫] ಈಗ ದೇವಾಲಯದ ನವೀಕರಣದಿಂದಾಗಿ ಯಾವುದೇ ಚಿತ್ರಗಳು ಅಲ್ಲಿ ಕಂಡುಬರುವದಿಲ್ಲ.

**III. ಹನುಮಾನ್ ದೇವಾಲಯ, ಶಿರಾಲಿ :** ಉತ್ತರ ಕನ್ನಡ ಜಿಲ್ಲೆಯ ಭಟ್ಕಳ ತಾಲೂಕಿನ ಶಿರಾಲಿಯು ಭಟ್ಕಳದಿಂದ ಸುಮಾರು ೬ ಕಿ. ಮಿ. ಗಳ ಅಂತರದಲ್ಲಿದೆ. ಇಲ್ಲಿನ ಪ್ರಾಚೀನ ಹನುಮಾನ್ ದೇವಾಲಯದಲ್ಲಿ ಕಾವಿ ಭಿತ್ತಿಚಿತ್ರಕಲೆ ರಚನೆಯಾಗಿದೆ ಎಂದು ಉಲ್ಲೇವಿದೆ.[೨೦೬] ಆದರೆ ಇಡೀ ದೇವಾಲಯವನ್ನು ನವೀಕರಿಸಿದ್ದರಿಂದ ಯಾವಚಿತ್ರಗಳೂ ಉಳಿದುಕೊಂಡಿಲ್ಲ.

**IV. ಹನುಮಾನ್ ದೇವಾಲಯ, ಅಮದಳ್ಳಿ :** ಕಾರವಾರ ತಾಲೂಕಿಗೆ ಸೇರಿದ ಅಮದಳ್ಳಿಯು ಕಾರವಾರದಿಂದ ಸುಮಾರು ಹತ್ತು ಕಿ. ಮಿ. ಗಳ ಅಂತರದಲ್ಲಿದೆ. ಇಲ್ಲಿನ ಹನುಮಾನ್ ದೇವಾಲಯದಲ್ಲಿ ಕಾವಿಚಿತ್ರಕಲೆ ಕಂಡುಬರುತ್ತದೆ ಎಂಬ ಉಲ್ಲೇಖವಿದ್ದು.[೨೦೭] ಈಗ ಇಡೀ ದೇವಾಲಯವನ್ನು ಪುನರೂಪಿಸಲಾಗುತ್ತಿದ್ದು, ಎಲ್ಲ ಚಿತ್ರಗಳೂ ನಾಶವಾಗಿವೆ.

## ೬. ಇತರ ದೇವಾಲಯಗಳು

ಇತರ ದೇವಾಲಯಗಳಲ್ಲಿಯೂ ಕಾವಿಚಿತ್ರಕಲೆ ಕಂಡುಬರುತ್ತಿದ್ದು. ಉತ್ತರ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಕಾವಿ ಚಿತ್ರಕಲೆ ರಚನೆಯಾದ ಇತರ ದೇವಾಲಯಗಳು ಈ ಕೆಳಗಿನಂತಿವೆ :

I. ಗಡಿವಾಳಬಂಟ ಸಣ್ಣಹೊಸಬ ದೇವಾಲಯ. ಚೌಡಗೇರಿ

II. ಗಡಿವಾಳ ಬಂಟ ದೊಡ್ಡಹೊಸಬ ದೇವಾಲಯ. ಚೌಡಗೇರಿ

III. ಘಟೀಬೀರ ದೇವಾಲಯ. ಬರ್ಗಿ

IV. ಎರೆ ಹೊಸಬ ದೇವಾಲಯ. ಬಳಲೆ

**I. ಗಡಿವಾಳಬಂಟ ಸಣ್ಣಹೊಸಬ ದೇವಾಲಯ, ಚೌಡಗೇರಿ :** ಕುಮಟಾ ತಾಲೂಕಿಗೆ ಸೇರಿದ ಚೌಡಗೇರಿಗ್ರಾಮವು ಗೋಕರ್ಣದಿಂದ ಕೇವಲ ೨ ಕಿ. ಮಿ. ಗಳ ಅಂತರದಲ್ಲಿದ್ದು ಇಂದು ಗೋಕರ್ಣದ ಒಂದು ಭಾಗವೇ ಆಗಿದೆ. ಅಲ್ಲಿನ ಗಡಿವಾಳಬಂಟ ಸಣ್ಣಹೊಸಬ ಮತ್ತು ದೊಡ್ಡಹೊಸಬ ಜೋಡಿ ದೇವಾಲಯಗಳಲ್ಲಿ ಕಾವಿಭಿತ್ತಿ ಚಿತ್ರಕಲೆ ಕಂಡುಬರುತ್ತದೆ. ಗಡಿವಾಳಬಂಟ ಸಣ್ಣಹೊಸಬ ದೇವಾಲಯದಲ್ಲಿ ಹೊರಗೋಡೆಯಲ್ಲಿ ಮತ್ತು ಒಳಗೋಡೆಯಲ್ಲಿ ಕಾವಿಕಲೆ ರಚನೆಯಾಗಿದೆ. ಆದರೆ ಹೊರಭಾಗದ ಗೋಡೆಯನ್ನು ಕೆತ್ತಿ ಸಿಮೆಂಟ್ ಮಾಡಿಸಿರುವುದಾರಿಂದ ಅಲ್ಲಿನ ಚಿತ್ರಗಳು ನಾಶವಾಗಿವೆ. ಆದರೂ ಮೇಲ್ಛಾವಣಿಗೆ ಹೊಂದಿಕೊಂಡಿರುವ ಕಿರುಗೋಡೆಯಲ್ಲಿ ಸುತ್ತಲೂ ನಕ್ಷಾಚಿತ್ರಣ ಕಂಡುಬರುತ್ತದೆ. ಈ ಸಣ್ಣಹೊಸಬ ದೇವಾಲಯದ ನಕ್ಷಾ ಚಿತ್ರಣವನ್ನು ಈ ಕೆಳಗಿನಂತೆ ವಿಂಗಡಿಸಿಕೊಳ್ಳಬಹುದು.

೧. ಒಳಗೋಡೆಯ ನಕ್ಷಾವಿನ್ಯಾಸ

೨. ಹೊರಗೋಡೆಯ ನಕ್ಷಾವಿನ್ಯಾಸ

**೧. ಒಳಗೋಡೆಯ ನಕ್ಷಾವಿನ್ಯಾಸ :** ದೇವಾಲಯದ ಒಳಗೋಡೆಯಲ್ಲಿ ಗರ್ಭಗೃಹದ ಬಾಗಿಲಿಗೆ ಸುತ್ತಲೂ ಪಟ್ಟಿಕೆಯನ್ನು ರಚಿಸಿ ಅದರಲ್ಲಿ ಜ್ಯಾಮಿತಿಕ ರೂಪದ ಹೂವಿನ ನಕ್ಷೆ ಚಿತ್ರಿಸಲಾಗಿದೆ. ಪಟ್ಟಿಕೆಯಲ್ಲಿ

೨೦೫. ಸೂರ್ಯನಾಥ ಕಾಮತ್ (ಸಂ.) : ಉತ್ತರ ಕನ್ನಡ ಜಿಲ್ಲಾಗೆಜೆಟೀಯರ್, ಪುಟ ೯೧೮

೨೦೬. ಸೂರ್ಯನಾಥ ಕಾಮತ್ (ಸಂ.) : ಉತ್ತರ ಕನ್ನಡ ಜಿಲ್ಲಾಗೆಜೆಟೀಯರ್, ಪುಟ ೯೧೮

೨೦೭. ಸೂರ್ಯನಾಥ ಕಾಮತ್ (ಸಂ.) : ಉತ್ತರ ಕನ್ನಡ ಜಿಲ್ಲಾಗೆಜೆಟೀಯರ್, ಪುಟ ೯೧೮

## 6. ಇತರ ದೇವಾಲಯಗಳ ಕಾವಿ ಭಿತ್ತಿ ಚಿತ್ರಕಲೆ




## II. ಮಠಗಳಲ್ಲಿರುವ ಕಾವಿ ಭಿತ್ತಿ ಚಿತ್ರಕಲೆ

1) ಜೀವೋತ್ತಮಮಠ, ಗೋಕರ್ಣ
2)ಚಿತ್ರಾಪುರಮಠ, ಶಿರಾಲಿ

## III. ಮನೆಗಳಲ್ಲಿರುವ ಕಾವಿ ಭಿತ್ತಿ ಚಿತ್ರಕಲೆ



ಸಾಲಾಗಿ ವೃತ್ತಗಳನ್ನು ರಚಿಸಿ ಆವೃತ್ತಗಳ ಮಧ್ಯದಲ್ಲಿ ಹೂವಿನ ನಕ್ಷೆ ಚಿತ್ರಿಸಲಾಗಿದ್ದು, ಸುಮಾರು ಏಳೆಂಟು ಬಗೆಯ ವಿನ್ಯಾಸದ ಹೂವಿನ ನಕ್ಷೆಗಳು ಇಲ್ಲಿವೆ.

೨. **ಹೊರಗೋಡೆಯ ನಕ್ಷಾವಿನ್ಯಾಸ :** ಹೊರಗೋಡೆಯ ಮೇಲ್ಭಾಗದಲ್ಲಿ ಛಾವಣಿಗೆ ಹೊಂದಿಕೊಂಡಿರುವ ಕಿರುಗೋಡೆಯಲ್ಲಿ ಮಾತ್ರ ನಕ್ಷೆಗಳು ಉಳಿದುಕೊಂಡಿವೆ ಈ ನಕ್ಷೆಗಳು ಒಳಭಾಗದ ನಕ್ಷೆಗಳಂತಿರದೇ ಬರೀ ವೃತ್ತಾಕಾರದ ಜ್ಯಾಮತಿಕ ಅಲಂಕರಣದ ನಕ್ಷೆಗಳಾಗಿವೆ. ಮುಂಭಾಗದಲ್ಲಿ ಎರಡು ಹಿಂಭಾಗದಲ್ಲಿ ಎರಡು, ಎಡಬಲ ಬದಿಯ ಗೋಡೆಗಳಲ್ಲಿ ಒಂದೊಂದು ಹೀಗೆ ಈ ದೇವಾಲಯದ ಹೋರಗೋಡೆಯಲ್ಲಿ ಒಟ್ಟು ಆರು ವೃತ್ತದ ನಕ್ಷೆಗಳಿವೆ. ಪ್ರತಿಯೊಂದೂ ಭಿನ್ನರೂಪದಲ್ಲಿರುವುದು ಕಂಡುಬರುತ್ತದೆ.

**II. ಗಡಿವಾಳಬಂಟ ದೊಡ್ಡಹೊಸಬ ದೇವಾಲಯ, ಚೌಡಗೇರಿ :** ಚೌಡಗೇರಿಯ ಗಡಿವಾಳಬಂಟ ಸಣ್ಣಹೊಸಬ ದೇವಾಲಯಕ್ಕೆ ಹೊಂದಿಕೊಂಡಿರುವ, ಅದೇ ಶೈಲಿಯಲ್ಲಿ ಈ ದೇವಾಲಯ ನಿರ್ಮಿಸಿದೆ. ಶೈಲಿ ಚಿತ್ರರಚನೆ ಎಲ್ಲದರಲ್ಲೂ ಸಣ್ಣಹೊಸಬ ದೇವಾಲಯವನ್ನೇ ಇದು ಹೋಲುತ್ತದೆ. ಈ ದೇವಾಲಯದ ಚಿತ್ರಗಳನ್ನೂ ಸಹಿತ ಈ ಕೆಳಗಿನಂತೆ ವಿಂಗಡಿಸಬಹುದು.

೧. ಒಳಗೋಡೆಯ ನಕ್ಷಾವಿನ್ಯಾಸ
೨. ಹೊರಗೋಡೆಯ ನಕ್ಷಾವಿನ್ಯಾಸ

೧. **ಒಳಗೋಡೆಯ ನಕ್ಷಾವಿನ್ಯಾಸ :** ಇಲ್ಲಿಯೂ ಗರ್ಭಗೃಹದ ಬಾಗಿಲಿನ ಸುತ್ತಲೂ ಪಟ್ಟಿಕೆಯನ್ನು ರಚಿಸಿ ಅದರಲ್ಲಿ ಹೂವಿನ ನಕ್ಷೆ ಚಿತ್ರಿಸಲಾಗಿದೆ. ಸಣ್ಣಹೊಸಬ ದೇವಾಲಯದ ಗರ್ಭಗೃಹದ ನಕ್ಷೆಯನ್ನೇ ಇದು ಸಂಪೂರ್ಣ ಹೋಲುವುದು.

೨. **ಹೊರಗೋಡೆಯ ನಕ್ಷಾವಿನ್ಯಾಸ :** ಮೇಲ್ಛಾವಣಿಗೆ ಹೊಂದಿಕೊಂಡಿರುವ ಕಿರುಗೋಡೆಯ ಹೊರಭಾಗದಲ್ಲಿ ಸುತ್ತಲೂ ವೃತ್ತಾಕಾರದ ನಕ್ಷೆಗಳು ರಚನೆಯಾಗಿದ್ದು ಇವುಕೂಡಾ ಸಣ್ಣಹೊಸಬ ದೇವಾಲಯದ ಚಿತ್ರವಿನ್ಯಾಸಗಳನ್ನೇ ಹೋಲುತ್ತವೆ. ಈ ಎರಡೂ ಜೋಡಿದೇವಾಲಯಗಳ ಚಿತ್ರ ರಚನೆಯಲ್ಲಿ ಒಂದೇ ಶೈಲಿ ಇರುವುದರಿಂದ ಒಂದೇ ಚಿತ್ರದ ಅಚ್ಚುಗಳನ್ನೇ ಎರಡೂ ಕಡೆಗೂ ಬಳಸಿದಂತೆ ಕಂಡುಬರುವುದು.

**III. ಘಟಬೀರ ದೇವಾಲಯ, ಬರ್ಗಿ :** ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲೂಕಿನ ಬರ್ಗಿ ಗ್ರಾಮವು ಅಂಕೋಲಾದಿಂದ ಸುಮಾರು ೧೦ ಕಿ. ಮಿ. ಗಳ ಅಂತರದಲ್ಲಿದೆ. ಇಲ್ಲಿನ ಘಟಬೀರ ದೇವಾಲಯದಲ್ಲಿ ಕಾವಿಚಿತ್ರಕಲೆ ಕಂಡುಬರುತ್ತದೆ[೨೦೮] ಎಂಬ ಉಲ್ಲೇಖವಿದ್ದು. ಈಗ ಇಡೀ ದೇವಾಲಯವನ್ನು ನವೀಕರಿಸಿ ಕಟ್ಟಿಸಲಾಗಿದ್ದು. ಯಾವುದೇ ಚಿತ್ರಗಳು ಕಂಡುಬರುವುದಿಲ್ಲ.

**IV. ಎರೆ ಹೊಸಬ ದೇವಾಲಯ, ಬಳಲೆ :** ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲೂಕಿಗೆ ಸೇರಿದ ಬಳಲೆಗ್ರಾಮದಲ್ಲಿ ಇರುವ ದೇವಿಮಂದಿರದ ಎದುರಿಗೆ ಎರೆಹೊಸಬ ದೇವಾಲಯ ಕಟ್ಟಲ್ಪಟ್ಟಿದೆ. ಚಿಕ್ಕದಾದ ಈ ದೇವಾಲಯದಲ್ಲಿ ಕಾವಿ ಚಿತ್ರಕಲೆ ಕಂಡುಬರುತ್ತದೆ. ಈ ದೇವಾಲಯದ ಒಳಭಾಗ ಮತ್ತು ಹೊರಭಾಗದಲ್ಲಿ ಕಾವಿ ಚಿತ್ರಕಲೆ ರಚನೆಯಾಗಿದ್ದು, ಅದನ್ನು ಈ ಕೆಳಗಿನಂತೆ ವಿಂಗಡಿಸಿಕೊಂಡು ವಿವರಿಸಬಹುದು.

---

**೨೦೮. ಕೃಷ್ಣಾನಂದ ಕಾಮತ್ : ಕಾವಿಕಲೆ, ಪುಟ ೯೪**

೧. ಒಳಭಾಗದ ವಿನ್ಯಾಸಗಳು

೨. ಹೊರಭಾಗದ ವಿನ್ಯಾಸಗಳು

೧. **ಒಳಭಾಗದ ವಿನ್ಯಾಸಗಳು :** ಈ ದೇವಾಲಯದ ಒಳಗೆ ಮತ್ತು ಹೊರಗೆ ಕಾವಿಕಲೆ ರಚನೆಯಾಗಿದ್ದರೂ ಮಾನವಾಕೃತಿಗಳು. ಅಥವಾ ಯಾವುದೇ ಪ್ರಾಣಿಪಕ್ಷಿಗಳ ಚಿತ್ರಗಳು ಇರದೇ ಕೇವಲ ನಕ್ಷಾವಿನ್ಯಾಸಗಳು ಕಂಡುಬರುತ್ತವೆ. ಒಳಭಾಗದ ನಕ್ಷಾವಿನ್ಯಾಸಗಳೆಂದರೆ. ಗರ್ಭಗೃಹದಲ್ಲಿ ಮಾತ್ರ ಎರಡು ವೃತ್ತಾಕಾರದ ನಕ್ಷೆಗಳು ರಚನೆಯಾಗಿವೆ. ಗರ್ಭಗೃಹದಲ್ಲಿನ ದೇವರ ಮೂರ್ತಿಯ ಹಿಂದುಗಡೆ. ಮತ್ತು ಮೂರ್ತಿಯ ಎದುರುಗಡೆ ಬಾಗಿಲಿನ ಮೇಲಿನ ಭಾಗದ ಗೋಡೆಯಲ್ಲಿ ಒಂದು ವೃತ್ತದ ನಕ್ಷೆಗಳು ರಚನೆಯಾಗಿವೆ.

೨. **ಹೊರಭಾಗದ ವಿನ್ಯಾಸಗಳು :** ದೇವಾಲಯದ ಹೊರಭಾಗದಲ್ಲಿ ಬಾಗಿಲು ಮತ್ತು ಕಿಟಕಿಗಳಿಗೆ ಸುತ್ತಲೂ ಪಟ್ಟಿಕೆಗಳನ್ನು ರೂಪಿಸಿ ಅದರಲ್ಲಿ ಹೂವಿನ ನಕ್ಷೆರಚಿಸಲಾಗಿದೆ. ಪಟ್ಟಿಕೆಯಲ್ಲಿ ಸಾಲಾಗಿ ಸಣ್ಣವೃತ್ತಗಳನ್ನು ಮಾಡಿಕೊಂಡು ಅದರಲ್ಲಿ ಜ್ಯಾಮತಿಕ ರೂಪದ ಹೂವಿನ ನಕ್ಷೆರಚಿಸಿದ್ದು. ಈ ಹೂವಿನ ವಿನ್ಯಾಸದಲ್ಲಿಯೇ ಮೂರ್ನಾಲ್ಕು ಬಗೆಯ ನಕ್ಷೆಕಂಡುಬರುವದು. ಬಾಗಿಲಿನ ಸುತ್ತಇರುವ ನಕ್ಷೆ ಇನ್ನೂ ಉಳಿದುಕೊಂಡಿದ್ದು ಕಿಟಕಿಯ ಸುತ್ತ ಇದ್ದಂತಹ ನಕ್ಷೆಯನ್ನು ಬಣ್ಣಸಾರಿಸಿ ನಾಶಪಡಿಸಲಾಗಿದೆ.

## II. ಮಠಗಳಲ್ಲಿರುವ ಕಾವಿ ಭಿತ್ತಿ ಚಿತ್ರಕಲೆ

ಕರಾವಳಿಭಾಗದ ದೇವಾಲಯಗಳಲ್ಲಿ ಕಾವಿ ಚಿತ್ರಕಲೆ ರಚನೆಯಾದಂತೆ ಕೆಲವು ಮಠಗಳಲ್ಲಿಯೂ ಕಾವಿ ಕಲೆ ಕಂಡುಬರುತ್ತದೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಕಾವಿ ಭಿತ್ತಿಚಿತ್ರಕಲೆ ಕಂಡುಬರುವ ಮಠಗಳು ಈ ಕೆಳಗಿನಂತಿವೆ :

೧. ಜೀವೋತ್ತಮ ಮಠ ಗೋಕರ್ಣ

೨. ಚಿತ್ರಾಪುರ ಮಠ ಶಿರಾಲಿ

೧. **ಜೀವೋತ್ತಮ ಮಠ, ಗೋಕರ್ಣ :** ಉತ್ತರ ಕನ್ನಡ ಜಿಲ್ಲೆಯ ಕುಮಟಾ ತಾಲೂಕಿಗೆ ಸೇರಿದ ಗೋಕರ್ಣವು ಪುಣ್ಯಕ್ಷೇತ್ರವಾಗಿದೆ. ಇಲ್ಲಿನ ಪರ್ತಗಾಳಿ ಜೀವೋತ್ತಮ ಮಠದಲ್ಲಿ ಕಾವಿಚಿತ್ರಕಲೆ ಕಂಡುಬರುತ್ತದೆ. ಸಾರಸ್ವತ ಬ್ರಾಹ್ಮಣ ಸಮುದಾಯಕ್ಕೆ ಸೇರಿದ ಈ ಮಠವು ಗೋವಾ ಪರ್ತಗಾಳಿ ಮಠದ ಶಾಖಾಮಠವಾಗಿದೆ. ಈ ಮಠದ ಹೊರಭಾಗದ ಗೋಡೆಗಳು ಕಾವಿ ಕಲೆಯಿಂದ ಅಲಂಕರಿಸಲ್ಪಟ್ಟಿವೆ. ಹೊರಗೋಡೆಗಳು ಮಾತ್ರವಲ್ಲದೇ. ಗೋಡೆಯಲ್ಲಿರುವ ಕಂಬಗಳು. ಮೇಲ್ಛಾವಣಿಯ ಚಾಚುಭಾಗ. ಗರ್ಭಗೃಹದ ಮೇಲಿನ ಶಿಖರ. ಹೀಗೆ ಮಠದ ಹೊರಭಾಗ ಪೂರ್ತಿಯಾಗಿ ಕಾವಿಕಲೆಯ ಅಲಂಕರಣದಿಂದ ತುಂಬಿಹೋಗಿದೆ. ಇಲ್ಲಿ ಮಾನವಾಕೃತಿಗಳು. ಅಥವಾ ಯಾವುದೇ ಪ್ರಾಣಿಗಳ ರೂಪಗಳು ರಚನೆಯಾಗಿರದೇ ಕೇವಲ ವೈವಿಧ್ಯಮಯ ನಕ್ಷೆಗಳನ್ನು ರಚನೆಮಾಡಲಾಗಿದೆ. ಹೊರಭಾಗದ ಗೋಡೆಯಲ್ಲಿ ಒಂದೊಂದು ಅಂಕಣದಲ್ಲಿ ಒಂದೊಂದರಂತೆ ಮಠದ ಸುತ್ತಲೂ ವೃತ್ತದ ನಕ್ಷೆಗಳನ್ನು ರಚಿಸಿದೆ. ಮಠದ ಹೊರಭಾಗದಲ್ಲಿ ಮುಖ್ಯದ್ವಾರದ ಎದುರಿಗಿರುವ ದೀಪಸ್ತಂಭದಂತಹ ಕಟ್ಟಡ ಒಂದರಲ್ಲೂ ಮೊದಲು ಕಾವಿಕಲೆಯ ಅಲಂಕರಣವಿತ್ತೆಂದು ಸ್ಥಳೀಯರು ಹೇಳುತ್ತಾರೆ. ಆದರೆ ಈಗ ಇಲ್ಲಿ ಆಧುನಿಕ ವಾರ್ನಿಸ್ ಬಣ್ಣಲೇಪನ ಮಾಡಿ ಹಳೆಯ ಕಾವಿ ನಕ್ಷೆಗಳನ್ನು ನಾಶಪಡಿಸಲಾಗಿದೆ.

**೨. ಚಿತ್ರಾಪುರ ಮಠ, ಶಿರಾಲಿ :** ಭಟ್ಕಳ ತಾಲೂಕಿನ ಶಿರಾಲಿಯು ಭಟ್ಕಳದಿಂದ ಸುಮಾರು ೬ ಕಿ. ಮಿ. ಗಳ ಅಂತರದಲ್ಲಿದೆ. ಇಲ್ಲಿ ಸಾರಸ್ವತ ಬ್ರಾಹ್ಮಣರಿಗೆ ಸೇರಿದ 'ಚಿತ್ರಾಪುರ'ವೆಂಬ ಮಠವಿದ್ದು ಇದರಲ್ಲಿ ಕೆಲವು ಕಾವಿಕಲೆಯ ನಕ್ಷಾರೂಪಗಳು ರಚನೆಯಾಗಿದ್ದವು ಎಂಬುದಾಗಿ ಸ್ಥಳೀಯರು ಹೇಳುತ್ತಾರೆ. ಆದರೆ ಈಗ ಇಲ್ಲಿ ಯಾವುದೇ ಕಾವಿಕಲೆಯ ನಕ್ಷಾವಿನ್ಯಾಸಗಳು ಕಂಡುಬರುವುದಿಲ್ಲ. ಮಠದ ನವೀಕರಣ ಸಂದರ್ಭದಲ್ಲಿ ಸುಣ್ಣ ಬಣ್ಣ ಸಾರಿಸಿ ಚಿತ್ರವಿನ್ಯಾಸಗಳನ್ನು ಅಳಿಸಲಾಗಿದೆ.

## III. ಮನೆಗಳಲ್ಲಿರುವ ಕಾವಿ ಭಿತ್ತಿ ಚಿತ್ರಕಲೆ

ಕರಾವಳಿ ಭಾಗದಲ್ಲಿ ದೇವಾಲಯ, ಮಠಮಾನ್ಯಗಳಲ್ಲಿ ಕಾವಿ ಚಿತ್ರರಚನೆಯಾದಂತೆ, ಈ ಭಾಗದ ಕೆಲವು ಪ್ರತಿಷ್ಠಿತ ವ್ಯಕ್ತಿಗಳೂ ಸಹಿತ ತಮ್ಮ ಮನೆಗಳನ್ನು ಕಾವಿ ಕಲೆಯಿಂದ ಅಲಂಕರಿಸಿದ್ದಾರೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಕಾವಿ ಚಿತ್ರಕಲೆಯಿಂದ ಅಲಂಕರಿಸಲ್ಪಟ್ಟ ಪ್ರತಿಷ್ಠಿತರ ಮನೆಗಳು ಈ ಕೆಳಗಿನಂತಿವೆ.

೧. ತಿಮ್ಮಣ್ಣ ಪೈಯವರ ಮನೆ, ಬಿಳಗಿ

೨. ವಿ. ಎಸ್. ಕಾಮತ್ ಅವರ ಮನೆ, ಗೋಕರ್ಣ

೩. ಎನ್. ಎಮ್. ಜೋಶಿಯವರ ಮನೆ, ಗೋಕರ್ಣ

೪. ನಾಗೇಶ್ ಶೆಣೈ ಅವರ ಮನೆ, ಅವರ್ಸಾ

**೧. ತಿಮ್ಮಣ್ಣ ಪೈಯವರ ಮನೆ, ಬಿಳಗಿ :** ಉತ್ತರ ಕನ್ನಡ ಜಿಲ್ಲೆಯ ಸಿದ್ಧಾಪುರ ತಾಲೂಕಿಗೆ ಸೇರಿದ ಬಿಳಗಿಯಲ್ಲಿ ತಿಮ್ಮಣ್ಣ ಪೈ[೨೦೯] ಎಂಬುವವರ ಮನೆಯಲ್ಲಿ ಕಾವಿ ಚಿತ್ರಕಲೆ ರಚನೆಯಾಗಿದೆ. ಇಲ್ಲಿನ ಬೇಡ್ಕಣಿ ಸೀತಾರಾಮಚಂದ್ರ ದೇವಾಲಯದ ಎದುರಿಗೆ ಈ ಮನೆ ಕಟ್ಟಲ್ಪಟ್ಟಿದೆ. ಪ್ರಾಚೀನವಾದ ಈ ಮನೆಯ ಕಾವಿ ಚಿತ್ರಗಳು ಎದುರಿನ ಬೇಡ್ಕಣಿ ಸೀತಾರಾಮಚಂದ್ರ ದೇವಾಲಯದ ಕಾವಿ ಚಿತ್ರಗಳಿಗಿಂತ ಪುರಾತನವಾಗಿವೆ. ಬೇಡ್ಕಣಿ ಸೀತಾರಾಮಚಂದ್ರ ದೇವಾಲಯದ ಚಿತ್ರಗಳು ಕ್ರಿ. ಶ. ೧೮೮೦ ರಲ್ಲಿ ರಚಿಸಿವೆ ಎಂಬುದಾಗಿ ಸ್ಥಳೀಯರು ಹೇಳುತ್ತಾರೆ. ಊರಿನಗಣ್ಯಕ್ತಿಗಳಾಗಿದ್ದ ತಿಮ್ಮಣ್ಣ ಪೈ ಯವರು ತಮ್ಮ ನೇತೃತ್ವದಲ್ಲಿ ಕಾವಿ ಚಿತ್ರರಚನಾ ತಂಡವನ್ನು ಕಟ್ಟಿಕೊಂಡಿದ್ದರಂತೆ. ತಮಗೆ ಕರೆ ಬಂದಕಡೆಗೆ ಹೋಗಿ ಚಿತ್ರರಚನೆ ಮಾಡುತ್ತಿದ್ದರು ಇವರ ನೇತೃತ್ವದಲ್ಲಿ ರಚನೆಯಾದ ಕಾವಿಚಿತ್ರಗಳು ಇದೇ ಮನೆಯಲ್ಲಿ, ಮನೆಯ ಎದುರಿಗಿನ ಬೇಡ್ಕಣಿ ಸೀತಾರಾಮಚಂದ್ರ ದೇವಾಲಯದಲ್ಲಿ ಇದೇ ಊರಿನ ಬಾಳಗೊಡ ಸೀತಾರಾಮಚಂದ್ರ ದೇವಾಲಯ, ಮಾರಿಕಾಂಬಾ ದೇವಾಲಯ, ಮತ್ತು ಸಮೀಪದ ಭುವನಗಿರಿಯ ಭುವನೇಶ್ವರಿ ದೇವಾಲಯದಲ್ಲಿ ಕಂಡುಬರುತ್ತವೆ ಎಂದು ಹೇಳಲಾಗುತ್ತದೆ. ತಿಮ್ಮಣ್ಣ ಪೈ ಯವರ ಮನೆಯಲ್ಲಿ ಹೊರಭಾಗದ ಗೋಡೆಗಳು ಕಾವಿ ಭಿತ್ತಿ ಚಿತ್ರಕಲೆಯಿಂದ ಅಲಂಕೃತಗೊಂಡಿದ್ದು, ಈ ಮನೆಯ ಚಿತ್ರಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು :

I. ಮನೆಯ ವಂಶಸ್ಥರ ಚಿತ್ರಗಳು

II. ವೃತ್ತಾಕಾರದ ನಕ್ಷಾ ಚಿತ್ರಗಳು

---

೨೦೯. ತಿಮ್ಮಣ್ಣ ಪೈಯವರ ಮನೆ, ಮನೆತನ, ಅವರ ಚಿತ್ರರಚನಾ ತಂಡ ಇವುಗಳ ಕುರಿತಾಗಿ ಮಾಹಿತಿ ನೀಡಿದವರು ಬಿಳಗಿಯ ನಿವಾಸಿಗಳಾದ ಪದ್ಮಾಕರ ಮಡಗಾಂವಕರ (೫೮), ವೆಂಕಟೇಶ ಬಾಳಗಿ (೩೫) ಯವರು.

***I. ಮನೆಯ ವಂಶಸ್ಥರ ಚಿತ್ರಗಳು :*** ಮನೆಯ ಮೇಲಿನ ಮಹಡಿಯಲ್ಲಿ ಹೊರಭಾಗದಲ್ಲಿರುವ ಛಾವಣಿಗೆ ಹೊಂದಿಕೊಂಡಿರುವ ಆಸರೆಗೋಡೆಯಲ್ಲಿ ಮನೆಯ ವಂಶಸ್ಥರ ಚಿತ್ರಗಳನ್ನು ರಚಿಸಲಾಗಿದೆ. ಈ ಆಸರೆಗೋಡೆಗಳು ಸುಮಾರು ೪ × ೨ ಫೂಟು ಅಳತೆಯಲ್ಲಿದ್ದು ಅವುಗಳಲ್ಲಿ ಮನೆಯ ವಂಶಸ್ಥರ ಚಿತ್ರಗಳು ರಚಿಸಲ್ಪಟ್ಟಿವೆ. ಇಂತಹ ಒಟ್ಟು ನಾಲ್ಕು ಕಿರುಗೋಡೆಗಳಲ್ಲಿ ಚಿತ್ರಗಳಿವೆ. ಎಡ ಮತ್ತು ಬಲಭಾಗದ ಆಸರೆಗೋಡೆಗಳಲ್ಲಿ ಒಂದೇ ತೆರನಾದ ಚಿತ್ರಗಳಿದ್ದು, ಒಂದು ವೃತ್ತದ ನಕ್ಷೆಯ ಎಡಬಲದಲ್ಲಿ ಪುರುಷ ಮತ್ತು ಸ್ತ್ರೀ ಚಿತ್ರಗಳನ್ನು ರಚಿಸಲಾಗಿದೆ. ಇದರಲ್ಲಿ ಪುರುಷನು ಪಂಚೆ ಉಟ್ಟುಕೊಂಡಿದ್ದು ಉದ್ದತೋಳಿಯ ಅಂಗಿ ತೊಟ್ಟುಕೊಂಡಿದ್ದಾನೆ. ತಲೆಗೆ ಚಿಕ್ಕದಾದ ಟೊಪ್ಪಿಗೆ ಧರಿಸಿದ್ದಾನೆ. ಸ್ತ್ರೀಯು ಕಚ್ಚೆಹಾಕಿ ಸೀರೆಉಟ್ಟುಕೊಂಡಿರುವಂತೆ ಚಿತ್ರಿಸಿದೆ. ಇವರಿಬ್ಬರ ವೇಷಭೂಷಣಗಳು ಗಣ್ಯ ವ್ಯಕ್ತಿಗಳಂತೆ ಕಂಡುಬರುತ್ತವೆ. ಮಧ್ಯದಲ್ಲಿ ಇರುವ ಎರಡು ಆಸರೆಗೋಡೆಗಳಲ್ಲಿ ಒಂದೇ ತೆರನಾಗಿರುವ ಸರದಾರರ ಚಿತ್ರಗಳಿವೆ. ಸರದಾರನ ಈ ಚಿತ್ರವು ಕಂಬಂದಂತಿರುವ ಮಂಟಪದ ವಿನ್ಯಾಸದಲ್ಲಿ ರಚನೆಯಾಗಿದೆ. ಇಲ್ಲಿರಚನೆಯಾದ ವ್ಯಕ್ತಿಯ ಒಂದು ಕೈಯಲ್ಲಿ ಕೋವಿ. ಇನ್ನೊಂದು ಕೈಯಲ್ಲಿ ಖಡ್ಗವಿದೆ. ತಲೆಗೆ ರುಮಾಲು ಇದ್ದು. ಸೊಂಟಕ್ಕೆ ಉತ್ತರೀಯವನ್ನು ಕಟ್ಟಿಕೊಂಡಿದ್ದಲ್ಲದೇ ಅದಕ್ಕೇ ಖಡ್ಗದ ಒರೆಯನ್ನೂ ಸಿಕ್ಕಿಸಲಾಗಿದೆ. ಮೇಲ್ಮಹಡಿಯ ಈ ಚಿತ್ರಗಳು ಮನೆಯ ವಂಶಸ್ಥರಿಗೆ ಸಂಬಂಧಿಸಿವೆ ಎಂದು ಸ್ಥಳೀಯರು ಹೇಳುತ್ತಾರೆ.

***II. ವೃತ್ತಾಕಾರದ ನಕ್ಷಾ ಚಿತ್ರಗಳು :*** ಮನೆಯ ಕೆಳಭಾಗದ ಗೋಡೆಯಲ್ಲಿ ದೊಡ್ಡದಾದ ವೃತ್ತಾಕಾರದ ನಕ್ಷೆಗಳಿವೆ. ಬಾಗಿಲಿನ ಎಡಬಲಗಳಲ್ಲಿ ಬಾಗಿಲಿನಷ್ಟೇ ಎತ್ತರದ ಚೌಕವಾದ ನಕ್ಷಾವಿನ್ಯಾಸದ ಮಂಟಪಗಳನ್ನು ರಚಿಸಿ ಅವುಗಳ ಮಧ್ಯಭಾಗದಲ್ಲಿ ಸುಮಾರು ೩ ಫೂಟುಗಳಷ್ಟು ಎತ್ತರವಾದ ಎರಡು ವೃತ್ತದ ನಕ್ಷೆಗಳನ್ನು ಚಿತ್ರಿಸಿದೆ. ಈ ಎರಡೂ ವೃತ್ತದ ನಕ್ಷೆಗಳು ಭಿನ್ನವಾಗಿದ್ದು. ಅವುಗಳ ಕೆಳಗೆ ಸಮೆಯ ಹಾಗಿರುವ ನಿಲುವುಗಳನ್ನು ರಚಿಸಿದೆ. ಇವುಗಳಲ್ಲದೇ ಮೇಲಿನ ಮಹಡಿಯಲ್ಲಿಯೂ ಎರಡು ವೃತ್ತದ ನಕ್ಷೆಗಳು ರಚನೆಯಾಗಿವೆ.

**೨. ವಿ. ಎಸ್. ಕಾಮತ್ ಅವರ ಮನೆ, ಗೋಕರ್ಣ :** ಗೋಕರ್ಣದ ಜೀವೊತ್ತಮ ಮಠಕ್ಕೆ ಹೋಗುವದಾರಿಯಲ್ಲಿ ಎಡಕ್ಕೆ ಮುಖ್ಯರಸ್ತೆಗೆ ಹೊಂದಿಕೊಂಡಂತೆ ವಿ. ಎಸ್. ಕಾಮತ್ ಅವರ ಮನೆ ಇದ್ದು ಈ ಮನೆಯನ್ನು ಕಾವಿಕಲೆಯಿಂದ ಅಲಂಕರಿಸಲಾಗಿದೆ. ಮನೆಯ ಬಾಗಿಲ ಸುತ್ತಲೂ ವಿವಿಧ ಸುಳಿವು. ನಕ್ಷಾ ವಿನ್ಯಾಸಗಳು ರಚನೆಯಾಗಿದ್ದು. ಕಿಟಕಿಯ ಅಂಚುಗಳಿಗೂ ಇಂತಹ ಅಲಂಕರಣ ಕಂಡುಬರುತ್ತದೆ. ಇಲ್ಲಿಯ ನಕ್ಷಾಚಿತ್ರಣಗಳು ಅತ್ಯಂತ ದುಸ್ಥಿತಿಯಲ್ಲಿದ್ದು ಹೆಚ್ಚಿನಭಾಗ ಹಾಳಾಗಿವೆ. ಚಿತ್ರವಿನ್ಯಾಸಗಳು ಇರುವ ಈ ಮನೆಯಲ್ಲಿ ಈಗ ಜನ ವಾಸಮಾಡದೇ ಹಾಳುಬಿದ್ದುಕೊಂಡಿದೆ.

**೩. ಎನ್. ಎಮ್. ಜೋಶಿಯವರ ಮನೆ, ಗೋಕರ್ಣ :** ಗೋಕರ್ಣದಲ್ಲಿ ಸಮುದ್ರಕ್ಕೆ ಹೋಗುವ ಮಾರ್ಗದಲ್ಲಿ ಬಲಗಡೆಗಿರುವ ಎನ್. ಎಮ್. ಜೋಶಿಯವರ ಮನೆಯಲ್ಲಿಯೂ ಕಾವಿಕಲೆ ರಚನೆಯಾಗಿದೆ. ಈ ಮನೆಯ ಬಾಗಿಲು ಮತ್ತು ಕಿಟಕಿಗಳಲ್ಲದೇ ಹೊರಗೋಡೆಯು ವಿವಿಧ ನಕ್ಷೆ. ಸುಳುವಿನ ವಿನ್ಯಾಸಗಳಿಂದ ಅಲಂಕರಿಸಲ್ಪಟ್ಟಿವೆ. ಇದೇ ಊರಲ್ಲಿರುವ ಮೇಲೆ ಹೇಳಲಾದ ಕಾಮತ್ ಅವರ ಮನೆಯ ನಕ್ಷಾ ಚಿತ್ರಗಳಿಗಿಂತ ಈ ಮನೆಯ ನಕ್ಷಾಚಿತ್ರಗಳು ಉತ್ತಮ ಮಟ್ಟದಲ್ಲಿವೆ.

**೪. ನಾಗೇಶ್ ಶೆಣೈ ಅವರ ಮನೆ, ಅವರ್ಸಾ :** ಅಂಕೋಲಾ ತಾಲೂಕಿಗೆ ಸೇರಿದ ಅವರ್ಸಾದಲ್ಲಿನ ನಾಗೇಶ್ ಶೆಣೈ ಅವರ ಮನೆಯಲ್ಲಿ ಕಾವಿಭಿತ್ತಿಚಿತ್ರಕಲೆ ರಚನೆಯಾಗಿದೆ. ಇಲ್ಲಿ ಹೊರಭಾಗದ ಗೋಡೆಗಳು ಕಾವಿಕಲೆಯಿಂದ ಅಲಂಕರಿಸಲ್ಪಟ್ಟಿವೆ. ಈ ಮನೆಯ ದ್ವಾರದಲ್ಲಿ ಎಡಬಲದಲ್ಲಿ ಬ್ರಿಟಿಷ್ ಕಾಲದ ಪೋಲಿಸರ ಸಮವಸ್ತ್ರ ಧರಿಸಿ ಕೈಯಲ್ಲಿ ಬಡಿಗೆ, ಮತ್ತು ಕತ್ತಿಯನ್ನು ಹಿಡಿದುಕೊಂಡಿರುವ ಕಾವಲುಗಾರರ ಎರಡು ಚಿತ್ರಗಳಿವೆ. ಉಳಿದಂತೆ ಮನೆಯ ತುಂಬ ಹೂಬಳ್ಳಿಯ ನಕ್ಷೆಗಳು, ಜ್ಯಾಮತಿಕ ರೂಪದ ಅಲಂಕರಣಗಳು ಕಂಡುಬರುತ್ತವೆ. ಗೋಡೆಯಲ್ಲಿ ಮಾತ್ರವಲ್ಲದೇ ಬಾಗಿಲ ಸುತ್ತ, ಕಿಟಕಿಯ ಸುತ್ತ, ಗೋಡೆಯ ಮೇಲಿನ ಭಾಗದ ಅಂಚು ಹಾಗೂ ಕಂಬಗಳಲ್ಲಿ ನಕ್ಷಾಚಿತ್ರಣ ಕಂಡುಬರುತ್ತವೆ.

ಕಾವಿಬಣ್ಣದ ಸಮ್ಮಿಶ್ರ ಭಿತ್ತಿ ಚಿತ್ರಕಲೆಯೂ ಬಹುವರ್ಣ ಭಿತ್ತಿ ಚಿತ್ರಕಲೆಯಂತೆ ದೇವಾಲಯ, ಮನೆ ಮಠ, ಹೀಗೆ ಬೇರೆ ಬೇರೆ ನೆಲೆಗಳಲ್ಲಿ ರಚನೆಯಾಗಿದೆ. ಅವುಗಳಲ್ಲಿ ಸಿಂಹಪಾಲು ದೇವಾಲಯಗಳದ್ದೇ ಆಗಿದೆ. ದೇವಾಲಯಗಳಲ್ಲಿ ಮತ್ತೆ ದೇವಿಮಂದಿರಗಳು ಹಾಗೂ ವೈಷ್ಣವ ಮಂದಿರಗಳಲ್ಲಿ ಕಾವಿ ಚಿತ್ರರಚನೆ ಹೆಚ್ಚಾಗಿ ಕಂಡುಬರುತ್ತದೆ. ಇದು ಆ ಭಾಗದ ಧಾರ್ಮಿಕ ಜೀವನದ ಚಿತ್ರಣ ಕೊಡುವುದರ ಜೊತೆಗೆ ಅವರ ವಿಶಿಷ್ಟವಾದ ಕಲಾ ಶೈಲಿಯನ್ನೂ ಪ್ರತಿಬಿಂಬಿಸುತ್ತದೆ. ಚಿತ್ರಕಲೆಯ ತಾಂತ್ರಿಕ ಅಂಶಗಳ ಬಗ್ಗೆ ನೋಡಿದಾಗ ಬಹುವರ್ಣ ಭಿತ್ತಿ ಚಿತ್ರರಚನಾಕಾರರಂತೆ ಇವರೂ ಸಹಿತ ಯೋಜನಾಬದ್ಧವಾದ ಸಂಯೋಜನೆ, ಶಕ್ತಿಶಾಲಿ ರೇಖೆಗಳ ರಚನೆ, ಚಿತ್ರಗಳಿಗೆ ಸೂಕ್ತವಾದ ಸ್ಥಳವಿನ್ಯಾಸ ರಚಿಸುವಲ್ಲಿ ಪ್ರಬುದ್ಧರಾಗಿದ್ದರೆಂದು ಅವರ ಚಿತ್ರಗಳೇ ಹೇಳುತ್ತವೆ. ಇಲ್ಲಿಯೂ ಒಂದು ಆಕೃತಿಗಳಿಂದ ಹಿಡಿದು ಎರಡು, ಮೂರು ಹೀಗೆ ಗುಂಪಾದ ಆಕೃತಿಗಳನ್ನು ರಚಿಸಿ ಚಿತ್ರ ಸಂಯೋಜನೆ ಗೊಳಿಸಿದ್ದು ಕಂಡುಬರುವುದು. ಹೊನ್ನಾವರದ ರಾಮಮಂದಿರದಲ್ಲಿ ಒಂದು ಆಕೃತಿಯ ಸಂಯೋಜನೆಯಿಂದ ಹಿಡಿದು ಮೂರುನಾಲ್ಕು ಆಕೃತಿಗಳನ್ನು ಸಂಯೋಜನೆಗೊಳಿಸಿದ್ದು ಕಂಡಬರುತ್ತದೆ. ಸಿರ್ಸಿಯ ಮಾರಿಕಾಂಬಾ ದೇವಾಲಯದಲ್ಲಿ ಒಂದು ಆಕೃತಿಯಿಂದ ತೊಡಗಿ ಗುಂಪುಗುಂಪಾದ ಆಕೃತಿಗಳನ್ನು ವ್ಯವಸ್ಥಿತವಾಗಿ ಸಂಯೋಜನೆಗೊಳಿಸಿ ಚಿತ್ರಸಲಾಗಿದೆ. ಇಲ್ಲಿನ ಪೂರ್ವಮಂಟಪದಲ್ಲಿ ಉದ್ದನಾದ ರಾಮಾಯಣ ಪಟ್ಟಿಕೆಯಲ್ಲಿ ಹಲವು ಆಕೃತಿಗಳು ಕಿಕ್ಕಿರಿದು ತುಂಬಿಕೊಂಡಿವೆ. ದಶಾವತಾರ ಚಿತ್ರಗಳಲ್ಲಿ ಹೆಚ್ಚಾಗಿ ಎಲ್ಲಕಡೆಗೂ ಎರಡು ಆಕೃತಿಗಳನ್ನು ಸಂಯೋಜನೆಗೊಳಿಸಿ ಚಿತ್ರರಚನೆ ಮಾಡಲಾಗಿದೆ.

ಕಾವಿಭಿತ್ತಿ ಚಿತ್ರಕಲೆಯಲ್ಲಿ ಚಿತ್ರಗಳಿಗಾಗಿ ಸ್ಥಳವಿನ್ಯಾಸಗೊಳಿಸುವಲ್ಲಿ ವಿಶಿಷ್ಟತೆ ಇದೆ. ಬಹುವರ್ಣ ಭಿತ್ತಿಚಿತ್ರಕಾರನು ಕೆಲವು ಸಲ ಚಿತ್ರಗಳಿಗೆ ನಿಗದಿತ ಸ್ಥಳವನ್ನು ರೂಪಿಸಿಕೊಳ್ಳದೇ ದೊರೆತ ಸ್ಥಳದಲ್ಲಿ ಹಾಗೇ ಚಿತ್ರರಚನೆ ಮಾಡಿರುವುದೂ ಉಂಟು. ಇಂತಹ ವಿಧಾನವನ್ನು ಗುಳೇದಗುಡ್ಡದ ಹೊಸಮನಿ ಗೌಡರ ಮನೆ, ರಾಯಚೂರಿನ ಖಾಜಿನಗೌಡರ ಮನೆಯಲ್ಲಿ ಕಾಣಬಹುದು. ಆದರೆ ಕಾವಿ ಭಿತ್ತಿಚತ್ರಕಲಾವಿದನು, ಚಿತ್ರಗಳಿಗಾಗಿ ನಿಗದಿತ ಸ್ಥಳವನ್ನು ರೂಪಿಸಿಕೊಂಡು ಅದರಲ್ಲಿಯೇ ಚಿತ್ರಣಮಾಡಿರುವುದು ಹೆಚ್ಚಾಗಿ ಕಂಡುಬರುವುದು. ಚಿತ್ರಗಳಿಗಾಗಿ ಸ್ಥಳ ವಿನ್ಯಾಸಗೊಳಿಸಿಕೊಳ್ಳುವಲ್ಲಿ ಚೌಕ, ಆಯತ, ವೃತ್ತಾಕಾರದಂತಹ ವಿನ್ಯಾಸಗಳನ್ನು ರೂಪಿಸಿಕೊಳ್ಳಲಾಗಿದೆ. ಕಮಾನು ಆಕಾರದ ಮಂಟಪಗಳನ್ನು ಹೆಚ್ಚಾಗಿ ರೂಪಿಸಿಕೊಳ್ಳಲಾಗಿದ್ದು ಈ ಮಂಟಪಗಳ ಮೇಲೆ ವಿವಿಧ ವಿನ್ಯಾಸದ ಕಳಶಗಳನ್ನೂ ಚಿತ್ರಿಸಿದ್ದಾರೆ. ಇಂತಹ ಮಂಟಪ ವಿನ್ಯಾಸಗಳನ್ನು ಹೊನ್ನಾವರದ ಶ್ರೀರಾಮ ಮಂದಿರ, ಮಾರುತಿ ದೇವಾಲಯ, ಹಳದೀಪುರದ ವೆಂಕಟರಮಣ, ಅವರ್ಸಾದ ಲಕ್ಷ್ಮೀನಾರಾಯಣ, ಕುಮಟಾದ

ಮಹಾಳಸಾನಾರಾಯಣಿ, ಸಿರ್ಸಿಯ ಮಾರಿಕಾಂಬಾ ದೇವಾಲಯಗಳಲ್ಲಿ ನೋಡಬಹುದಾಗಿದೆ. ಈ ರೀತಿಯ ಸ್ಥಳವಿನ್ಯಾಸದ ಅಂಕಣಗಳನ್ನು ರಚಿಸಿಕೊಂಡ ಕಾವಿಕಲಾಕಾರನು ಆ ಅಂಕಣಗಳನ್ನು ಪೂರ್ತಿಯಾಗಿ ಚಿತ್ರದಿಂದ ತುಂಬಿಸಿದ್ದಾನೆ. ಹಲವು ಸಲ ಚಿತ್ರಗಳು ಅಂಕಣಗಳ ಸೀಮೆಯನ್ನು ದಾಟಿಯೂ ರಚನೆಯಾಗಿದ್ದು ಕಾಣಸುತ್ತದೆ. ಹೊನ್ನಾವರದ ಶ್ರೀರಾಮ ಮಂದಿರ, ಸಿರ್ಸಿಯ ಮಾರಿಕಾಂಬಾ ದೇವಾಲಯಗಳಲ್ಲಿ ಇದನ್ನು ಮನಗಾಣಬಹುದು. ಒಂದೊಂದು ಚಿತ್ರವಿಷಯಕ್ಕೆ ಒಂದೊಂದು ಅಂಕಣಗಳನ್ನು ಬಳಸಿಕೊಂಡಿದ್ದರೂ, ಕುಸ್ತೀಕಾಳಗ, ಯುದ್ಧ ಸನ್ನಿವೇಶ, ಮತ್ತು ಮೆರವಣಿಗೆಗಳಂತಹ ವಿಷಯಗಳಿಗಾಗಿ ಒಂದೇ ವಿಷಯಕ್ಕಾಗಿಯೇ ಎರಡದಿಂದ ಮೂರು ಅಂಕಣಗಳನ್ನು ಬಳಸಿಕೊಂಡಿದ್ದಾರೆ. ಹೊನ್ನಾವರದ ರಾಮಮಂದಿರದಲ್ಲಿ ರಾಮರಾವಣ, ಪರಶುರಾಮ ಸಹಸ್ರಾರ್ಜುನರ ಯುದ್ಧಗಳನ್ನು ಚಿತ್ರಿಸಲು ಎರಡೆರಡು ಅಂಕಣಗಳನ್ನು ಬಳಸಿಕೊಂಡಿದ್ದಾರೆ. ಸಿರ್ಸಿಯ ಮಾರಿಕಾಂಬಾ ದೇವಾಲಯದಲ್ಲಿ ಕರ್ಣಾರ್ಜುನರ ಯುದ್ಧವನ್ನು ಮೂರು ಅಂಕಣಗಳಲ್ಲಿ ಚಿತ್ರಿಸಿದ್ದರೆ, ರಾಮ ರಾವಣರ ಯುದ್ಧಕ್ಕಾಗಿ ಬೃಹತ್ತಾದ ಪಟ್ಟಿಕೆಯನ್ನೇ ಬಳಸಲಾಗಿದೆ. ಕಾವಿಭಿತ್ತಿ ಚಿತ್ರಕಲೆಯಲ್ಲಿ ಬಹುವರ್ಣ ಭಿತ್ತಿ ಚಿತ್ರಗಳಲ್ಲಿ ಕಂಡುಬರುವಂತೆ ಬೆಳಕು ನೆರಳುಗಳ ಸಂಯೋಜನೆ, ಉಬ್ಬುತಗ್ಗುಗಳ ಕಲ್ಪನೆ, ಅಂದರೆ ಚಿತ್ರಗಳ ಕಂಡುತನದ ಕಲ್ಪನೆ ಕಂಡುಬರದೇ ಚಿತ್ರಗಳು ಚಪ್ಪಟೆಯಾಗಿರುವಂತೆ ಕಂಡುಬರುತ್ತವೆ. ಚಿತ್ರಗಳಲ್ಲಿಯ ಪ್ರತಿಯೊಂದು ವಿವರಗಳನ್ನೂ ರೇಖೆಗಳಿಂದಲೇ ತೋರಿಸಿರುವುದು ಕಾವಿ ಭಿತ್ತಿಚಿತ್ರಕಲೆಯ ವೈಶಿಷ್ಟ್ಯ. ಚಿತ್ರಗಳು ಚಪ್ಪಟೆಯಾಗಿದ್ದು ಏಕವರ್ಣದಿಂದ ಕೂಡಿದ್ದರೂ ಸಂದರ್ಭಾನುಸಾರ ಭಾವಗಳನ್ನು ಮುಖಗಳಲ್ಲಿ  ಅರಳಿಸಲಾಗಿದೆ. ತೀರ ಚಿಕ್ಕದಾದ ಚಿತ್ರಗಳನ್ನು ಸಹಿತ ಸೂಕ್ಷ್ಮವಿರಗಳಿಂದ ಚಿತ್ರಿಸಿದೆ. ಕಾವಿಭಿತ್ತಿ ಚಿತ್ರಕಲೆಯಲ್ಲಿ ಹೆಚ್ಚಾಗಿ ದೇವತಾಚಿತ್ರಗಳೇ ಅಧಿಕವಾಗಿ ರಚನೆಯಾಗಿದ್ದರೂ ಅಲ್ಲಲ್ಲಿ ಅರಸರು, ನಾಯಕರು, ಪ್ರತಿಷ್ಟಿತರು, ಸೇವಕರು, ಸಾಮಾನ್ಯರು, ಪ್ರಾಣಿಪಕ್ಷಿಗಳು, ಹೂಬಳ್ಳಿಗಳು ಚಿತ್ರಿಸಿದ್ದು ಕಂಡು ಬರುತ್ತದೆ. ದೇವತಾ ಚಿತ್ರಿಗಳಲ್ಲಿ ಹೆಚ್ಚಿನ ದೇವಾಲಯಗಳಲ್ಲಿ ದಶಾವತಾರ ಚಿತ್ರಗಳೇ ಅಧಿಕವಾಗಿ ರಚನೆಯಾಗಿವೆ. ಹೊನ್ನಾವರದ ಶ್ರೀರಾಮ ಮಂದಿರ, ಮಾರುತಿದೇವಾಲಯ, ಹಳದೀಪುರದ ವೆಂಕಟರಮಣ, ಸಿರ್ಸಿಯ ಮಾರಿಕಾಂಬಾ, ಅವರ್ಸಾದ ಲಕ್ಷ್ಮೀನಾರಾಯಣ, ಬಿಳಗಿಯ ಬೇಡ್ಕಣಿ ಸೀತಾರಾಮಚಂದ್ರ, ಬಾಳಗೊಡಸೀತಾ ರಾಮಚಂದ್ರ ದೇವಾಲಯಗಳಲ್ಲಿ ದಶಾವತಾರ ಚಿತ್ರಗಳು ರಚನೆಯಾಗಿವೆ. ಈ ದಶಾವತಾರ ಚಿತ್ರಗಳನ್ನು ದೇವಾಲಯದ ಸುತ್ತಲೂ ಗೋಡೆಯಲ್ಲಿ ಸಾಲಾಗಿ ಪಟ್ಟಿಕೆಗಳನ್ನು ಮಾಡಿಕೊಂಡು ಅದರಲ್ಲಿ ಚಿತ್ರಿಸಿದ್ದಾರೆ. ಇದರ ಮಧ್ಯದಲ್ಲಿ ಅಲ್ಲಲ್ಲಿ ಇತರ ದೇವತಾ ಚಿತ್ರಗಳೂ ರಚನೆಯಾಗಿವೆ.

ಕಾವಿಕಲೆಯಲ್ಲಿ ಬಹು ವರ್ಣಿಯ ಭಿತ್ತಿಚಿತ್ರಗಳಿಗೆ ಕಡಿಮೆ ಇಲ್ಲದಂತೆ ನಕ್ಷಾಚಿತ್ರಗಳ ವಿವಿಧ ರೂಪಗಳು ಕಂಡು ಬರುತ್ತವೆ. ಈ ಕಲೆಯಲ್ಲಿ ವಿವಿಧ ವಿನ್ಯಾಸದ ನಕ್ಷೆಗಳಿದ್ದರೂ ಜ್ಯಾಮಿತಿಕರೂಪದ ವೃತ್ತಾಕಾರದ ನಕ್ಷೆಗಳು ಅತ್ಯಂತ ಸುಂದರವಾಗಿದ್ದು ಕಲಾವಿದರ ಪ್ರಬುದ್ಧತೆ, ಪರಿಶ್ರಮ, ಆಲೋಚನಾಪರತೆಯನ್ನು ಇವು ತೋರಿಸುತ್ತವೆ. ಇಂತಹ ಜ್ಯಾಮಿತಿ ವಿನ್ಯಾಸದ ನಕ್ಷೆಯು ಕಾವಿ ಕಲಾವಿದರ ಒಂದು ವಿಶೇಷ ಸಾಧನೆಯಾಗಿದ್ದು ಅದಕ್ಕಾಗಿ ಅವರು ತಮ್ಮದೇ ಆದ ರಚನಾ ವಿಧಾನವನ್ನು ಅನುಸರಿಸುತ್ತಿದ್ದರು. ಅದನ್ನು ಹೀಗೆ ವಿವರಿಸಬಹುದು. ಕಾವಿ ಕಲೆಯಲ್ಲಿ ಜ್ಯಾಮಿತಿ ಚಿತ್ರಗಳ ರಚನೆಯ ವಿಧಾನವು ಒಂದು ರೀತಿಯ ಪೂರ್ವತಯಾರಿಯಿಂದ ಮಾಡುವುದಾಗಿದೆ. ಮೊದಲು ರಟ್ಟು ಇಲ್ಲವೆ ತೆಳುವಾದ ಕಟ್ಟಿಗೆಯ ಪಳಿಯಮೇಲೆ, ರಚಿಸಬೇಕಾದ ನಕ್ಷೆಯನ್ನು ಕೈವಾರ ಅಳತೆ ಪಟ್ಟಿಗಳ

ಸಹಾಯದಿಂದ ರಚಿಸಿಕೊಂಡು ಅದರ ಗೆರೆಗುಂಟ ಕತ್ತರಿಸಿ ತೆಗೆದು ಅದನ್ನು ಅಚ್ಚನ್ನಾಗಿ ಪರಿವರ್ತಿಸುತ್ತಾರೆ. ಆಮೇಲೆ ಆ ಅಚ್ಚನ್ನು ಹಸಿಯಾಗಿರುವ ಕಾವಿ ಭಿತ್ತಿಯಮೇಲೆ ಒತ್ತಿಹಿಡಿದು ಅದರ ಗೆರೆಗುಂಟ ಉಕ್ಕಿನಕಂಟದಿಂದ ರೇಖೆಗಳನ್ನು ಎಳೆಯಾಗುವುದು. ಅಚ್ಚಿನಲ್ಲಿರುವ ಎಲ್ಲ ಗೆರೆಗಳನ್ನೂ ಕಂಟದಿಂದ ಕೊರೆದಾದಮೇಲೆ ಅಚ್ಚನ್ನು ಗೋಡೆಯಿಂದ ಬೇರ್ಪಡಿಸಿ ಚಿತ್ರವನ್ನುಳಿದು ಉಳಿದ ಭಾಗದ ಭಿತ್ತಿಯನ್ನು ತಾಪಿಯಿಂದ ಬೀಳಿಸಿದಾಗ ಸುಂದರವಾದ ಜಾಮಿತಿ ನಕ್ಷೆ ಗೋಡೆಯಲ್ಲಿ ಕಂಗೊಳಿಸುತ್ತದೆ.

ಜ್ಯಾಮಿತಿ ನಕ್ಷೆಗಳಲ್ಲಿ ಅನೇಕ ಹೂ. ಬಳ್ಳಿ. ಪ್ರಾಣಿ. ಪಕ್ಷಿಗಳನ್ನು ಹೋಲುವ ನಕ್ಷೆಗಳು ಇಲ್ಲವೇ ಅವುಗಳನ್ನು ಪ್ರತಿನಿಧಿಸುವಂತಹ ನಕ್ಷೆಗಳು ಕಂಡುಬಂದಿವೆ. ಜ್ಯಾಮಿತಿ ನಕ್ಷೆಯ ವೃತ್ತಕ್ಕೆ ಬೊಡ್ಡೆಯೊಂದನ್ನು ಸೇರಿಸಿ ಮರದ ನಕ್ಷೆಯನ್ನು ರೂಪಿಸಲಾಗಿದೆ. ಕೆಕ್ಕಾರದ ದೇವಾಲಯದ ಗೋಡೆಗಳಲ್ಲಿ ಇಂತಹ ಮರದ ನಕ್ಷೆಯ ಆರುಚಿತ್ರಗಳನ್ನು ಕಾಣಬಹುದಾಗಿದೆ. ಬಳಲೆಯ ದೇವಾಲಯದ ಗರ್ಭಗೃಹದ ಗೋಡೆಯಲ್ಲಿ ಎರಡು ಮರದ ನಕ್ಷಾ ಚಿತ್ರಗಳಿದ್ದರೆ ಮಾವಿನಕುರ್ವೆಯಲ್ಲಿ ವೈವಿಧ್ಯ ಮರದ ನಕ್ಷೆಗಳಿದ್ದು ಬಾಗಿದ ಮರ, ಚಿಕ್ಕ ಎಲೆಗಳನ್ನು ಹೊಂದಿದ ಮರ. ಪುಷ್ಪಗಳನ್ನು ಅರಳಿಸಿದ ಮರ, ಫಲಗಳನ್ನು ಬಿಟ್ಟಿರುವ ಮರ, ಮುಂತಾದ ಅನೇಕ ಮರದ ನಕ್ಷೆಗಳನ್ನು ಇಲ್ಲಿ ರಚಿಸಲಾಗಿದೆ. ಜ್ಯಾಮಿತಿ ನಕ್ಷೆಗಳಲ್ಲಿ ಎಲೆಗಳ ಪ್ರಾತಿನಿಧಿಕ ರೂಪಗಳಲ್ಲಿ ಅಶ್ವತ್ಥ, ಆಲ, ಮುತ್ತುಗದ ಎಲೆಗಳನ್ನು ಮತ್ತು ಹೂಗಳಲ್ಲಿ ದಾಸವಾಳ, ಸೇವಂತಿಗೆ, ಸಂಪಿಗೆ, ಕಮಲಗಳನ್ನು ಸುಲಭವಾಗಿ ಗುರುತಿಸಬಹುದೆಂದು ಕೃಷ್ಣಾನಂದ ಕಾಮತ್ ಅವರು ಹೇಳುತ್ತಾರೆ.[೨೦೦] ಇದು ಸರಿಯಾದ ವಿವರಣೆಯೇ ಆಗಿದೆ. ಇವುಗಳಲ್ಲದೇ ಇನ್ನೂ ಅನೇಕ ಹೂ. ಎಲೆ, ಹಣ್ಣು ಹಂಪಲಗಳನ್ನು ಪ್ರತಿನಿಧಿಸುವ ನಕ್ಷೆಗಳಿದ್ದರೂ ಅವುಗಳನ್ನು ಸುಲಭದಲ್ಲಿ ಗುರುತಿಸಲು ಸಾಧ್ಯವಾಗುವುದಿಲ್ಲ. ಹಾವಿನ ಹೆಡೆಯನ್ನು ಜ್ಯಾಮಿತಿ ನಕ್ಷೆಯಲ್ಲಿ ರೂಪಿಸಿದ್ದೂ ಕಾವಿಕಲೆಯಲ್ಲಿ ಕಂಡುಬರುವುದು. ವರ್ತುಲಗಳನ್ನು ರಚಿಸಿ ಅವುಗಳನ್ನು ಜ್ಯಾಮಿತಿ ಆಕೃತಿಗಳಿಂದ ಒಳಗೆಲ್ಲ ಶೃಂಗಾರಗೊಳಿಸುವಲ್ಲಿ ಕಾವಿಕಲಾವಿದನು ಹೆಚ್ಚಿನ ಪರಿಣಿತಿ ಪಡೆದಂತೆ ಕಂಡುಬರುವುದು. ಜ್ಯಾಮಿತಿ ಆಕೃತಿಗಳಿಂದ ಅಲಂಕೃತಗೊಂಡ ವೈವಿದ್ಯ ವರ್ತುಲಗಳು ಕಾವಿಕಲೆಯಲ್ಲಿ ಕಂಡುಬರುತ್ತವೆ. ವರ್ತುಲಗಳ ಇಂತಹ ವೈಭವವನ್ನು ಸಿರ್ಸಿಯಲ್ಲಿ ನೋಡಬಹುದಾಗಿದೆ.

ಜ್ಯಾಮಿತಿ ನಕ್ಷೆಗಳನ್ನು ಬಾಗಿಲು ಕಿಟಕಿಗಳ ಅಂಚುಗಳನ್ನು ಶೃಂಗರಿಸಲು ಹೆಚ್ಚಾಗಿ ಬಳಸಿದ್ದರೂ, ಮುಖ್ಯಚಿತ್ರಗಳ ಚೌಕಟ್ಟಿನ ಹಾಗೆ ಮತ್ತು ಜಾಮಿತಿ ನಕ್ಷೆಗಳನ್ನೇ ಕೆಲವುಕಡೆ ಸ್ವತಂತ್ರವಾಗಿ. ಬಿಡಿಬಿಡಿಯಾಗಿ ರಚಿಸಿದ್ದೂ ಉಂಟು.

ಜ್ಯಾಮಿತಿ ರೂಪದಲ್ಲಿ ನಕ್ಷಾಚಿತ್ರಗಳನ್ನು ರಚಿಸಿದಂತೆ ಕಾವಿಕಲಾವಿದನು ಹೂಬಳ್ಳಿಯ ಸ್ವಾಭಾವಿಕ ನಕ್ಷೆಗಳನ್ನೂ ರಚಿಸಿದ್ದಾನೆ. ಹೂಬಳ್ಳಿಗಳನ್ನು ಅಂಕಣಗಳನ್ನು ಶೃಂಗರಿಸಿಲು. ಚಿತ್ರಗಳಿಗೆ ಚೌಕಟ್ಟುಹಾಕಿದಂತೆ ಕಂಗೊಳಿಸಲು. ದೇವತಾ ಚಿತ್ರಗಳಿಗೆ ಪ್ರಭಾವಳಿಯಂತೆ ಕಾಣಲು ಬಳಸಲಾಗಿದೆ. ಅಲ್ಲದೇ ಬಾಗಿಲು. ಕಿಟಕಿ. ಕಂಬ. ಮಾಡು. ಕಮಾನುಗಳನ್ನು ಶೃಂಗರಿಸಲೂ ಹೂಬಳ್ಳಿಚಿತ್ರಗಳನ್ನು ರಚಿಸಲಾಗಿದೆ. ಮಾಜಾಳಿಯ ಚಿತ್ರಗಳಲ್ಲಿ ದೇವತಾ ಚಿತ್ರಗಳ ಅಂಕಣದಲ್ಲಿ ದೇವತೆಗಳಿಗಿಂತ ಹೂಬಳ್ಳಿಯ ಚಿತ್ರಗಳೇ ಪ್ರಧಾನವಾಗಿ ಕಂಡುಬರುತ್ತವೆ. ಇಲ್ಲಿನ ಇನ್ನುಳಿದ ಚಿತ್ರದಲ್ಲಿ ಮತ್ಸ್ಯಾವತಾರ ಅಂಕಣದಲ್ಲಿ ಸಮುದ್ರದಲ್ಲಿ ಜಲಚರಗಳನ್ನು ಚಿತ್ರಿಸುವ ಬದಲು ಹೂಗಳನ್ನೇ ಚಿತ್ರಿಸಿದ್ದಾರೆ. ವಾಮನಾವತಾರದ ಚಿತ್ರದಲ್ಲಿ ಅನೇಕ ಹೂಗಳು ಅರಳಿನಿಂತಿವೆ. ಪರಶುರಾಮ

---

೨೦೦. ಡಾ. ಕೃಷ್ಣಾನಂದ ಕಾಮತ್ : ಕಾವಿಕಲೆ, ಪುಟ ೩೭

ಸಹಸ್ರಾರ್ಜುನ ಕಾಳಗದಲ್ಲಿ ದೊಡ್ಡದಾದ ಹೂವೊಂದು ತಲೆ ಎತ್ತಿ ನಿಂತಿದೆ. ಕಲ್ಕಿ ಅವತಾರದ ಅಂಕಣದಲ್ಲಿ ಹೂ ಬಳ್ಳಿಗಳು ಕಿಕ್ಕಿರಿದು ತುಂಬಿವೆ. ವಿಠ್ಠಲನ ಚಿತ್ರದಲ್ಲೂ ಹೂಗಳಿವೆ.

ಬೀಳಗಿಯಲ್ಲಿನ ವಿಠ್ಠಲನ ಚಿತ್ರದಲ್ಲಿ ಬಳ್ಳಿಯಿಂದ ಮಂಟಪವನ್ನೇ ರಚಿಸಲಾಗಿದೆ. ನಾರದನು ಭುವಿಗಿಳಿದು ಬರುವಾಗ ಹೂಲತೆಗಳು ಬಳುಕುತ್ತಿವೆ, ಕರ್ಣನ ಅಂಕಣದಲ್ಲೂ ಹೂಬಳ್ಳಿಗಳನ್ನು ಚಿತ್ರಿಸಲಾಗಿದೆ. ಶ್ರೀರಾಮನ ಚಿತ್ರವಿರುವ ಅಂಕಣದಲ್ಲಿ ಹೂಗಳು. ಹಿನ್ನೆಲೆಯಾಗಿ ಬಳ್ಳಿಗಳನ್ನು ರಚಿಸಲಾಗಿದೆ. ಅಂತೆಯೇ ಸೀತಾದೇವಿಯ ಬಳಿಯಲ್ಲಿ ಪುಷ್ಪಲತೆಗಳು ಬೆಳೆದು ನಿಂತಿವೆ. ಅಂಕೋಲಾದಲ್ಲಿ ಓಡುತ್ತಿರುವ ಕುದುರೆಯ ಕಾಲಕೆಳಗೆ ಕೂಡಾ ಹೂಗಳನ್ನು ಚಿತ್ರಿಸಲಾಗಿದೆ. ಹೊನ್ನಾವರದಲ್ಲಿಯೂ ವೈವಿಧ್ಯ ಹೂಬಳ್ಳಿಯ ನಕ್ಷೆಗಳಿವೆ. ಸರಸ್ವತಿ ಅಂಕಣದಲ್ಲಿ ಸೂರ್ಯಕಾಂತಿ ಹೂಗಳು ಅರಳಿ ನಿಂತಿದ್ದರೆ. ಸಮೀಪದಲ್ಲಿಯೇ ದೊಡ್ಡ ಎಸಳುಗಳನ್ನು ಹೊಂದಿದ ಹೂಗಳಿವೆ. ಸಹಸ್ರಾರ್ಜುನ ಚಿತ್ರದಲ್ಲಿ ದೊಡ್ಡದಾದ ಕಮಲ. ಪಕ್ಕದಲ್ಲಿ ಕಾಲ್ಪನಿಕ ಹೂಗಳನ್ನು ಚಿತ್ರಿಸಲಾಗಿದೆ. ಕಾಳಿಂಗಮರ್ದನ ಚಿತ್ರದಲ್ಲಿ ಕಾಲ್ಪನಿಕವಾದ ಹಾರಾಡುತ್ತಿರುವ ಹೂಗಳು ಇದ್ದರೆ. ಮತ್ಸ್ಯಾವತಾರದ ಅಂಕಣದಲ್ಲಿ ಹೂಗಳ ರಾಶಿಯನ್ನೇ ಚಿತ್ರಿಸಿದೆ. ಹೊನ್ನಾವರದ ರಾಮಮಂದಿರದಲ್ಲಿ.

ಶೇಷಶಯನ ಚಿತ್ರದಲ್ಲಿ ಬಳ್ಳಿಗಳ ತುಂಬ ಹೂಗಳು ಅರಳಿನಿಂತಿವೆ. ಗಜೇಂದ್ರಮೋಕ್ಷ ಚಿತ್ರದಲ್ಲಿ ಪಕ್ಕದಲ್ಲಿರುವ ಹೊಂಡದಲ್ಲಿ ಕಮಲ ಪುಷ್ಪಗಳನ್ನು ಚಿತ್ರಿಸಲಾಗಿದೆ. ಹೂಬಳ್ಳಿಗಳನ್ನು ಚಿತ್ರಿಸಿದಂತೆ ಮರಗಳನ್ನು ಚಿತ್ರಿಸಿದ್ದು ಕಾವಿಕಲೆಯಲ್ಲಿ ಕಂಡಬರುವುದು. ತೆಂಗಿನ ಮರವು ಸಾಮಾನ್ಯವಾಗಿ ಹೆಚ್ಚಿನ ಸ್ಥಳಗಳಲ್ಲಿ ಕಾವಿಕಲೆಯಲ್ಲಿ ಕಂಡುಬರುತ್ತದೆ. ಹೊನ್ನಾವರದಲ್ಲಿ ಮೋಹಿನಿ. ಭಸ್ಮಾಸುರರ ಚಿತ್ರದಲ್ಲಿ ಪಕ್ಕದಲ್ಲಿಯೇ ಅಶ್ವತ್ಥ ಮರವಿದ್ದು ಅದಕ್ಕೆ ಕಟ್ಟೆಯನ್ನು ಕಟ್ಟಲಾಗಿದೆ. ಅನಂತಶಯನ ಚಿತ್ರದ ಅಂಕಣದಲ್ಲಿ ತೆನೆಯಂತಹ ಗಿಡಗಳು ಇದ್ದರೆ. ಶ್ರೀರಾಮಚಂದ್ರನು ಬಿಲ್ಲುಬಾಣ ಹಿಡಿದು ಹೊರಟಲ್ಲಿ ದಟ್ಟಕಾಡನ್ನೇ ಚಿತ್ರಸಲಾಗಿದೆ. ಅಂದರೆ ಸೂಚ್ಯವಾಗಿ ಜೋಡಿಮರಗಳನ್ನು ಹತ್ತಿರದಲ್ಲಿ ಚಿತ್ರಿಸಿ ತೋರಿಸಲಾಗಿದೆ. ಹೀಗೆ ಹೂಬಳ್ಳಿ ಮರಗಳನ್ನು ರಚಿಸಿ ಕಾವಿಚಿತ್ರಕಾರನು ತನ್ನ ಚಿತ್ರಗಳಿಗೆ ಹೆಚ್ಚಿನ ಅಲಂಕಾರ ತಂದುಕೊಟ್ಟಿದ್ದಾನಲ್ಲದೇ ಕೆಲವುಕಡೆ ಅವುಗಳನ್ನೇ ಮುಖ್ಯ ಕಲಾಕೃತಿಯಾಗಿಯೂ ರಚಿಸಿದ್ದಾನೆ.

ಶ್ರೀರಾಮ ದೇವಾಲಯ ಹೊನ್ನಾವರ



ಮತ್ಸ್ಯಾವತಾರ. ಸರಸ್ವತಿ.



ಸಹಸ್ರಾರ್ಜುನ.



ಭೃಂಗಿಯ ಕುಣಿತ.



ಮಹಿಷಾಸುರ ಮರ್ದಿನಿ    ಕಲ್ಕಿ ಅವತಾರ

ಗೋಪಿನಾಥ ವೆಂಕಟರಮಣ ದೇವಾಲಯ    ಹಳದೀಪುರ



ನರಸಿಂಹ ಅವತಾರ



ಮತ್ಸ್ಯ, ಕೂರ್ಮ, ವರಾಹ ಅವತಾರಗಳು. (ಹಳದಿಪುರ).

ಬಾಳಗೋಡ ಸೀತಾರಾಮಚಂದ್ರ ದೇವಾಲಯ ಬಿಳಗಿ



ಆಂಜನೇಯ.



ಮಂಗನ ಚಿತ್ರ.

ಬೇಡ್ಕಣಿ ಸೀತಾರಾಮಚಂದ್ರ ದೇವಾಲಯ ಬಿಳಗಿ



ನರಸಿಂಹ, ವರಾಹ, ರಾಮ ಅವತಾರಗಳು. ಮಧ್ಯದಲ್ಲಿ ನಾರದ ಮುನಿ.



ಪರಿಚಾರಿಕೆ. (ಬೇಡ್ಕಣಿ ಸೀತಾರಾಮ ಮಂದಿರ)

ಲಕ್ಷ್ಮೀನಾರಾಯಣ ದೇವಾಲಯ ಅವರ್ಸಾ



ನರಸಿಂಹ, ವರಾಹ ಅವತಾರಗಳು.



ಗಣ್ಯವ್ಯಕ್ತಿ.



ಆನೆ ಮುಖದ ಪಕ್ಷಿ. (ಸಿರಸಿಯ ಮಾರಿಕಾಂಬಾ ದೇವಾಲಯ)

ಮಾರಿಕಾಂಬಾ ದೇವಾಲಯ ಸಿರ್ಸಿ



ಮಂಟಪದ ಮೇಲ್ಛಾವಣಿಯ ನಕ್ಷೆ.



ಪೂರ್ವ ಮಂಟಪದ ರಾಮಾಯಣ ಚಿತ್ರಕೆ.



ದಶಾವತಾರಗಳ ಚಿತ್ರ ಪಟ್ಟಿಕೆಯ ಕಮಾನುಗಳು.



ಸೂರ್ಯ ಮಂಡಲ

**ದೇವಿ ದೇವಾಲಯ** **ಬಳಲಿ**



ಗಿಡದ ರೂಪದ ವೃತ್ತದ ನಕ್ಷೆ.



ಅಧ್ಯಗಣಪತಿ ಮಂಟಪ. (ಬನವಾಸಿ).



ಕಂಬದ ಮೇಲಿನ ನಕ್ಷೆಗಳು.





ದ್ವಾರಪಾಲಕ.



ಜಯವಿಜಯರ ಚಿತ್ರಗಳು. (ಮಾರುತಿ ದೇವಾಲಯದ ಹೊಸ್ತಿಲರ)

ಮಾರುತಿ ದೇವಾಲಯ ಹೊನ್ನಾವರ



ಗಜ್ಯಲಕ್ಷ್ಮಿಯ ಚಿತ್ರಣ.

ಅಗಸೆವಿನಾಯಕ ದೇವಾಲಯ ಅಘನಾಶಿನಿ



ದ್ವಾರಪಾಲಕ.



ಹೊರಗೋಡೆಯ ಅಲಂಕರಣ.



ದೇವರ ಹಿಂದಿನ ವೃತ್ತದ ನಕ್ಷೆ.

ಎರೆಹೊಸಬ ದೇವಾಲಯ ಬಳಲೆ

ತಿಮ್ಮಣ್ಣ ಪೈಯವರ ಮನೆ ಬಿಳಗಿ



ಮನೆಯ ವಂಶಸ್ಥರ ಚಿತ್ರಗಳು



ಬಾಗಿಲಬದಿಯ ಚಿತ್ರಣ

ವಿ. ಎಸ್. ಕಾಮತ ಅವರ ಮನೆ ಗೋಕರ್ಣ




ಬಾಗಿಲಿನ ಅಲಂಕರಣ.

ದುರ್ಗಾ ದೇವಾಲಯ ಸದಾಶಿವಗಡ



ಹೂಬಳ್ಳಿಯಂತಾ ನಕ್ಷೆಗಳು.

ಭಿತ್ತಿ ಚಿತ್ರಕಲೆಯ ಪರಂಪರೆಯಲ್ಲಿ ಅದನ್ನು ಪೋಷಿಸಿದ ಪೋಷಕರು ಮತ್ತು ಚಿತ್ರರಚನೆ ಮಾಡಿದ ಕಲಾವಿದರ ಪಾತ್ರ ತುಂಬಾ ಮಹತ್ವಪೂರ್ಣವಾದುದಾಗಿದೆ. ಈ ಹಿನ್ನೆಲೆಯಲ್ಲಿ

I. ಭಿತ್ತಿ ಚಿತ್ರಕಲೆಯ ಪೋಷಕರು

II. ಭಿತ್ತಿ ಚಿತ್ರ ಕಲಾವಿದರು

ಎಂಬುದಾಗಿ ಎರಡು ಹಂತಗಳಲ್ಲಿ ವಿವೇಚನೆಯನ್ನು ಮಾಡಬಹುದಾಗಿದೆ.

**I. ಭಿತ್ತಿ ಚಿತ್ರಕಲೆಯ ಪೋಷಕರು**

ಇಲ್ಲಿ ಭಾರತದ ಅನೇಕ ಅರಸರು ಭಿತ್ತಿ ಚಿತ್ರಕಲೆಯನ್ನು ಪ್ರೋತ್ಸಾಹಿಸಿದ ಕುರಿತು ಹಿನ್ನೆಲೆಯನ್ನು ನೀಡಿ ಕರ್ನಾಟಕದ ಅದರಲ್ಲೂ ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆಯ ಬೆಳವಣಿಗೆಗೆ ಪ್ರೋತ್ಸಾಹ ನೀಡಿದ ಪೋಷಕರ ಬಗೆಗೆ ವಿವರಗಳನ್ನು ಚರ್ಚಿಸಲಾಗಿದೆ.

ಪ್ರಾಗೈತಿಹಾಸಿಕ ಮಾನವರು ತಾವು ವಾಸಿಸುತ್ತಿದ್ದ ಗುಹೆ. ಶಿಲಾಶ್ರಯ ತಾಣಗಳ ಗೋಡೆಗಳ ಮೇಲೆ ವರ್ಣಚಿತ್ರ ರಚಿಸಿ.[೧] ಅವುಗಳನ್ನು ಕಲಾ ಸಂಗ್ರಹಾಲಯಗಳನ್ನಾಗಿ ಮಾಡಿ ಆ ಮೂಲಕ ಭಿತ್ತಿ ಚಿತ್ರಕಲೆ ಪೋಷಣೆಗೆ ಮೊದಲು ಮಾಡಿದುದನ್ನು ಗುರುತಿಸುತ್ತೇವೆ. ಈ ಪ್ರಯತ್ನಗಳು ಪ್ರಾರಂಭಿಕ ಹೆಜ್ಜೆಗಳೆಂದೇ ಹೇಳಬೇಕು. ಸುಮಾರು ಕ್ರಿ. ಪೂ. ಐದುಸಾವಿರ ವರ್ಷಗಳ ಹಿಂದಿನ ಸಿಂಧೂ ಸಂಸ್ಕೃತಿಯ ಜನರು ತಮ್ಮ ನಿವಾಸಗಳಲ್ಲಿ ಭಿತ್ತಿ ಚಿತ್ರರಚನೆ ಮಾಡುತ್ತಿದ್ದಂತೆಯೇ. ವೇದಕಾಲದಲ್ಲಿ ಋಷಿಮುನಿಗಳು ಯಜ್ಞಕಟ್ಟೆಯ ಮೇಲೆ ಕುಟೀರಗಳ ಗೋಡೆಯ ಮೇಲೆ ಭಿತ್ತಿ ಚಿತ್ರ ರಚನೆ ಮಾಡುತ್ತಿದ್ದರು (ಎರಡನೆಯ ಅಧ್ಯಯದಲ್ಲಿ ಈ ಕುರಿತು ಪ್ರಸ್ತಾಪಿಸಲಾಗಿದೆ). ಹೀಗೆ ಋಷಿಮುನಿಗಳು ಕೂಡಾ ಭಿತ್ತಿ ಚಿತ್ರಕಲೆಯ ಪೋಷಕರ ಸಾಲಿನಲ್ಲಿ ಬರುತ್ತಾರೆ. ವೇದಕಾಲದ ನಂತರ ಮಹಾಕಾವ್ಯಗಳ ಕಾಲದಲ್ಲಿ ರಾಜರು ಭಿತ್ತಿ ಚಿತ್ರಕಲೆಯ ಪ್ರಮುಖ ಪೋಷಕರಾದರೆಂದರೆ ಅತಿಶಯೋಕ್ತಿಯಲ್ಲ. ಈ ಕಾಲದಲ್ಲಿ ಭಿತ್ತಿ ಚಿತ್ರಕಲೆಯು ರಾಜರ ಆಸ್ಥಾನ ಪ್ರವೇಶಿಸಿತು. ಹಿಂದೆ ವೇದಕಾಲದಲ್ಲಿ ಋಷಿಮುನಿಗಳ ಪೋಷಣೆಯಲ್ಲಿ ಧಾರ್ಮಿಕ ಸ್ವರೂಪ ಪಡೆದಿದ್ದ ಭಿತ್ತಿ ಚಿತ್ರಕಲೆ. ರಾಜರ ಪೋಷಣೆ ಪ್ರಾರಂಭವಾದ ನಂತರ ಅವರ ಇಚ್ಛಾನುಸಾರ ಧಾರ್ಮಿಕ ಹಾಗೂ ಲೌಕಿಕ ಸ್ವರೂಪ ಪಡೆದುಕೊಂಡು. ರಾಜರ ಅರಮನೆ. ದೇವಾಲಯಗಳು. ಸಾರ್ವಜನಿಕ ಕಟ್ಟಡಗಳಲ್ಲಿ ರಚನೆಯಾಗತೊಡಗಿತು. ಮತ್ತು ಚಿತ್ರಗಳಿಗಾಗಿಯೇ ಪ್ರತ್ಯೇಕ ಚಿತ್ರಶಾಲೆಗಳು ರಚನೆಯಾದವು.[೨] ಈ ಕಾಲದಲ್ಲಿ ರಚನೆಯಾದ ರಾಮಾಯಣ.

---

೧. S. K. Panday : Indian Rock Art. Page 2

೨. E. B. Havell : Indian Sculpture and Painting, Page 156

ಮಹಾಭಾರತ ಮಹಾಕಾವ್ಯಗಳಲ್ಲಿ ಚಿತ್ರಶಾಲೆಗಳು ಅರಮನೆಯ ಗೋಡೆಗಳ ಮೇಲಿದ್ದ ಭಿತ್ತಿ ಚಿತ್ರಗಳ ವರ್ಣನೆಯ ಪ್ರಸ್ತಾಪ ಬರುವುದು. " ಹನುಮಂತನು ಲಂಕಾ ಪಟ್ಟಣಕ್ಕೆ ಹೋದಾಗ ರಾವಣನ ಅರಮನೆಯ ಗೋಡೆಗಳ ಮೇಲೆ ರಚಿಸಿರುವ ಭಿತ್ತಿ ಚಿತ್ರಗಳನ್ನು ನೋಡಿದ್ದ, ದಶರಥ ಅರಸನ ಅರಮನೆಯಲ್ಲಿನ ಭಿತ್ತಿ ಚಿತ್ರಗಳ ವಿವರಗಳು ರಾಮಾಯಣದಲ್ಲಿ ಉಲ್ಲೇಖಗೊಂಡಿವೆ.[೩] ಕ್ರಿ. ಶ. ೬ ನೇ ಶತಮಾನದ ಭವಭೂತಿಯ ' ಉತ್ತರ ರಾಮಚರಿತ ' ದಲ್ಲಿ ರಾಮನ ಅಯೋಧ್ಯೆಯ ಚಿತ್ರಶಾಲೆಯನ್ನು ವರ್ಣಿಸಲ್ಪಾಗಿದ್ದು, ರಾಮನ ಜನನದಿಂದ ಹಿಡಿದು ಆತನ ವಿದ್ಯಾಭ್ಯಾಸ, ಸ್ವಯಂವರ, ವನವಾಸ, ರಾಮ-ರಾವಣರ ಯುದ್ಧ, ಸೀತೆಯನ್ನು ಮರಳಿ ಕರೆತರುತ್ತಿರುವುದು ಹೀಗೆ ಆತನ ಜೀವನದ ಘಟನೆಗಳನ್ನು ಧಾರಾವಾಹಿಯ ಹಾಗೆ ಗೋಡೆಯ ಮೇಲೆ[೪] ಚಿತ್ರಿಸಿದ ವಿವರಗಳು ಇಲ್ಲಿ ಹೇಳಲ್ಪಟ್ಟಿವೆ.

ಭಿತ್ತಿ ಚಿತ್ರಕಲೆಗೆ ರಾಜರ ಪೋಷಣೆ ಪ್ರಾರಂಭವಾದ ಮೇಲೆ ಚಿತ್ರಗಳಿಗಾಗಿಯೇ ಪ್ರತ್ಯೇಕ ಚಿತ್ರಶಾಲೆಗಳನ್ನು ನಿರ್ಮಿಸುವ ಹವ್ಯಾಸ ಹೆಚ್ಚಾಯಿತು. ಈ ಚಿತ್ರಶಾಲೆಗಳಲ್ಲಿ ಮೂರು ಪ್ರಕಾರದ ಚಿತ್ರ ಶಾಲೆಗಳಿವೆ.[೫]

೧. ಅರಮನೆಯ ಚಿತ್ರಶಾಲೆ

೨. ಸಾರ್ವಜನಿಕ ಚಿತ್ರಶಾಲೆ

೩. ಖಾಸಗಿ ಚಿತ್ರಶಾಲೆ

**೧. ಅರಮನೆಯ ಚಿತ್ರಶಾಲೆ :** ಅರಮನೆಗಳ ಆಸ್ಥಾನ, ಅಂತಪುರ ಮತ್ತು ವಿವಿಧ ಸ್ಥಳಗಳ ಗೋಡೆಗಳಲ್ಲಿ ಭಿತ್ತಿ ಚಿತ್ರಗಳನ್ನು ಬರೆಸುತ್ತಿದ್ದುದು ಒಂದು ಬಗೆಯಾದರೆ, ಅರಮನೆಯ ಆವರಣದಲ್ಲಿ ಚಿತ್ರಗಳಿಗಾಗಿಯೇ ಪ್ರತ್ಯೇಕ ಚಿತ್ರಶಾಲೆಗಳನ್ನು ನಿರ್ಮಿಸುತ್ತಿದ್ದು ಇವುಗಳನ್ನು ಅರಮನೆಯ ಚಿತ್ರಶಾಲೆಗಳೆಂದು ಕರೆಯಲಾಗಿದೆ. ಕೆಲವು ರಾಜರು, ರಾಜಕುಮಾರರು ತಮ್ಮ ಮಲಗುವ ಕೋಣೆಗಳನ್ನು ಭಿತ್ತಿ ಚಿತ್ರಗಳಿಂದ ಅಲಂಕರಿಸುತ್ತಿದ್ದು, ಇವುಗಳನ್ನು ' ಶಯನ ಚಿತ್ರಶಾಲೆ ' ಗಳೆಂದು ಮತ್ತು ಸ್ನಾನಗೃಹಗಳಲ್ಲಿ ಭಿತ್ತಿ ಚಿತ್ರ ಬರೆಸುತ್ತಿದ್ದುದನ್ನು ' ಅಭಿಷೇಕ ' ಚಿತ್ರಶಾಲೆಗಳೆಂದೂ[೬] ವರ್ಣಿಸಲಾಗಿದೆ.

**೨. ಸಾರ್ವಜನಿಕ ಚಿತ್ರಶಾಲೆ :** ಇವು ಸಾರ್ವಜನಿಕರು ಬಂದುಹೋಗುವ ದೇವಾಲಯಗಳು, ರಾಜ ದರ್ಬಾರು ಮಾತ್ರವಲ್ಲದೇ ಸಾರ್ವಜನಿಕರು ಹೆಚ್ಚು ಸೇರುವ ನಾಲ್ಕು ದಾರಿಗಳು ಕೂಡುವ ಕೂಟ ಸ್ಥಳಗಳಲ್ಲಿ ನಿರ್ಮಿಸಿರುತ್ತಿದ್ದರು.

**೩. ಖಾಸಗಿ ಚಿತ್ರಶಾಲೆ :** ಪ್ರತಿಷ್ಠಿತರ ಮನೆಗಳಲ್ಲಿ, ವೇಶ್ಯಾಗೃಹಗಳಲ್ಲಿ ವೈಯಕ್ತಿಕವಾಗಿ ಭಿತ್ತಿಚಿತ್ರಗಳು ಮಹಾಕಾವ್ಯಗಳ ನಂತರದ ಕಾಲದಲ್ಲಿ ಇರುತ್ತಿದ್ದವು.[೭] ಬೌದ್ಧ ಧರ್ಮದ ಪ್ರಚಾರ ಮತ್ತು ಪ್ರಸಾರಕ್ಕಾಗಿ ಭಿತ್ತಿ ಚಿತ್ರಕಲೆಯನ್ನು ಬಳಸಿಕೊಳ್ಳಲಾಯಿತು. ಭಾರತದ ' ಅಜಂತಾ ', ಚೀನಾದ ' ಟುನ್‌ಹಂಗ್ ', ಜಪಾನದ ' ಹೆರ‍್ಯೂಜಿ ' ಗಳಲ್ಲಿನ ಭಿತ್ತಿ ಚಿತ್ರಗಳು ಬೌದ್ಧಧರ್ಮ ಸಂಬಂಧಿಯಾಗಿದ್ದುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಬೌದ್ಧಧರ್ಮ ಪ್ರಚಾರಕರಾದ ಭಿಕ್ಷುಗಳು ಸ್ವತಃ ಭಿತ್ತಿ ಚಿತ್ರ ಕಲಾವಿದರಾಗಿದ್ದು, ಅಜಂತಾದಲ್ಲಿನ ಭಿತ್ತಿ ಚಿತ್ರಗಳು[೮] ಮತ್ತು ಚೀನಾದ ಟುನ್‌ಹಂಗ್[೯]

---

೩. E. B. Havell : Indian Sculpture and Painting, Page 157

೪. E. B. Havell : Indian Sculpture and Painting, Page 158

೫. C. Sivaramamurti : Indian Painting, Page 9

೬. C. Sivaramamurti : Indian Painting, Page 9

೭. C. Sivaramamurti : Indian Painting, Page 10

೮. Percy Brown : Indian Painting, Page 28

೯. ಸುಧಾ, ಯುಗಾದಿ ವಿಶೇಷಾಂಕ : ೧೯೬೫, ಪುಟ ೬೯, ಮೊಗಾವೋ ಭಿತ್ತಿ ಚಿತ್ರಗಳು, ಬಿ. ವಿ. ಕೆ. ಶಾಸ್ತ್ರೀ

ಗುಹಾಚಿತ್ರಗಳು ಬೌದ್ಧ ಭಿಕ್ಷುಗಳಿಂದಲೇ ರಚನೆಯಾಗಿವೆ ಎಂದು ಅಭಿಪ್ರಾಯಪಡಲಾಗಿದೆ. ಅಲ್ಲದೇ ಬೌದ್ಧ ಭಿಕ್ಷುಗಳು ಧರ್ಮತತ್ವಗಳನ್ನು ಸಾರುತ್ತ ಭಾರತದಿಂದ ನೇಪಾಳ, ಟಿಬೇಟ್, ಚೀನಾ, ಜಾವಾ, ಬರ್ಮಾ, ಜಪಾನ್, ಸಿಲೋನ್, ಸಯಾಮ್ ಮೊದಲಾದ ಪ್ರದೇಶಗಳಿಗೆ ಹೋಗಿ ಅಲ್ಲಿಯೂ ಭಿತ್ತಿ ಚಿತ್ರರಚನೆ [೧೦] ಮಾಡಿದರು. ಬೌದ್ಧ ಭಿಕ್ಷುಗಳು ಹೀಗೆ ಭಿತ್ತಿ ಚಿತ್ರಕಲೆಯನ್ನು ಒಂದು ಪೋಷಿಸಿದರೆ, ಬೌದ್ಧ ಧರ್ಮ ಆಧರಿಸಿಯೇ ರಚನೆಯಾದ ಅಜಂತಾದಲ್ಲಿನ ಮೊದಲ ಹಂತದ ಭಿತ್ತಿ ಚಿತ್ರಗಳಿಗೆ ಶಾತವಾಹನ ದೊರೆಗಳು ಪೋಷಕರಾಗಿ ನಿಂತರಲ್ಲದೇ ೯ ಮತ್ತು ೧೦ ನೇ ಗುಹೆಯಲ್ಲಿ ಇವರ ಕಾಲದ ಭಿತ್ತಿಚಿತ್ರಗಳು ರಚನೆಯಾಗಿವೆ. [೧೧] ಕುಶಾನರು ಉತ್ತರ ಭಾರತದಲ್ಲಿ ಶುಂಗರ ನಂತರ ಪಟ್ಟಕ್ಕೆ ಬಂದ ಶಕ್ತಿಶಾಲಿ ದೊರೆಗಳಾಗಿದ್ದು, ಕ್ರಿ. ಶ. ಮೊದಲ ಶತಮಾನದಿಂದ ೩ ನೇ ಶತಮಾನದವರೆಗೆ ಆಳ್ವಿಕೆ ನಡೆಸಿದ್ದಾರೆ. ಅವರ ಅಂದಿನ ರಾಜ್ಯದ ಕೆಲ ಭಾಗಗಳು ಇಂದಿನ ಪಾಕಿಸ್ತಾನ ಮತ್ತು ಅಫಘಾನಿಸ್ತಾನದವರೆಗೂ ಹರಡಿಕೊಂಡಿದ್ದವು. ಇವರ ಪ್ರೋತ್ಸಾಹದಲ್ಲಿ ರಚನೆಯಾದ ಭಿತ್ತಿ ಚಿತ್ರಗಳು ಪೂರ್ವತುರ್ಕಸ್ಥಾನದ ' ನಿಯ ' ಎಂಬ ' ಓಯಸಿಸ್ ' ಬಳಿ ಇರುವ ಮಿರಾನ್ ಸ್ತೂಪದಲ್ಲಿ, [೧೨] ಮತ್ತು ಮಧ್ಯಏಶಿಯಾದಲ್ಲಿ [೧೩] ದೊರೆತಿರುವ ಬಗ್ಗೆ ವಿವರಗಳು ಸಿಗುತ್ತವೆ.

ಗುಪ್ತರ ಕಾಲವನ್ನು ಸ್ವರ್ಣಯುಗವೆಂದು ಕರೆಯಲಾಗಿದ್ದು ಕಲೆ, ಸಾಹಿತ್ಯಕ್ಕೆ ಹೆಚ್ಚಿನ ರಾಜಪ್ರೋತ್ಸಾಹ ಈ ಕಾಲದಲ್ಲಿ ದೊರೆಯಿತು. ಕ್ರಿ. ಶ. ೪ ನೇ ಶತಮಾನದಿಂದ ೬ ನೇ ಶತಮಾನದವರೆಗೆ ಆಳ್ವಿಕೆ ನಡೆಸಿದ ಗುಪ್ತರ ಪೋಷಣೆಯ ಭಿತ್ತಿ ಚಿತ್ರಗಳು ಗ್ವಾಲಿಯರ್ ಸಮೀಪದ ಬಾಘ್ ಗುಹೆಗಳಲ್ಲಿ ರಚನೆಯಾಗಿವೆ. [೧೪] ಇಲ್ಲಿ ಒಂಬತ್ತು ಗುಹೆಗಳನ್ನು ಕೊರೆಯಲಾಗಿದ್ದು, ಈಗ ೨, ೪ ಮತ್ತು ೫ ನೆಯ ಗುಹೆಗಳಲ್ಲಿ ಮಾತ್ರ ಚಿತ್ರಗಳು ಕಂಡುಬರುತ್ತಿವೆ. ಬೌದ್ಧ ಜಾತಕ ಕಥೆಗಳು ಮತ್ತು ಲೌಕಿಕ ವಿಷಯಗಳಿಗೆ ಇವು ಸಂಬಂಧಿಸಿದವುಗಳಾಗಿವೆ. ಕ್ರಿ. ಶ. ೪ ರಿಂದ ೬ ನೇ ಶತಮಾನದವರೆಗೆ ಆಳಿದ ವಾಕಾಟಕ ದೊರೆಗಳ ಭಿತ್ತಿಚಿತ್ರಗಳು ಅಜಂತಾ ಗುಹಾಲಯಗಳಲ್ಲಿನ ಎರಡನೆಯ ಹಂತದ ರಚನೆಗಳಾಗಿವೆ. ೧, ೧೬, ೧೭, ೨೦, ೨೭ ನೇ ಗುಹೆಯಲ್ಲಿ ವಾಕಾಟರು ಬರೆಸಿದ ಭಿತ್ತಿ ಚಿತ್ರಗಳು ಕಂಡುಬರುತ್ತಿದ್ದು [೧೫] ಬೌದ್ಧ ಧರ್ಮಕ್ಕೆ ಸಂಬಂಧಿಸಿವೆ. ಚದ್ದಂತ ಜಾತಕ, ಹಂಸ ಜಾತಕ, ಮಹಾಕಪಿ ಜಾತಕ, ಮತಿಪೋಷಕ ಜಾತಕ, ಸಿಬಿ ಜಾತಕ, ಮಹಾಜನಕ ಜಾತಕ, ವೆಸ್ಸಂತರ ಜಾತಕ, ದಿವ್ಯಾವಧಾನ, ಮರದರ್ಶನ ಚಿತ್ರಗಳು ವಾಕಾಟಕರ ಪೋಷಣೆಯಲ್ಲಿ ರಚನೆಯಾದ ಭಿತ್ತಿ ಚಿತ್ರಗಳಾಗಿವೆ. ದಕ್ಷಿಣ ಭಾರತದಲ್ಲಿ ಕ್ರಿ. ಶ. ೭ ರಿಂದ ೯ ನೇ ಶತಮಾನದವರೆಗೆ ಪ್ರಬಲವಾಗಿ ರಾಜ್ಯಭಾರ ಮಾಡಿದ ಪಲ್ಲವರು ಕಲಾ ಪ್ರೋತ್ಸಾಹ ದೊರೆಗಳಾಗಿದ್ದರು. ಒಂದನೆಯ ಮಹೇಂದ್ರವರ್ಮನು ತಮಿಳು ಪ್ರದೇಶದಲ್ಲಿ ಮೊದಲಬಾರಿಗೆ ಕಲ್ಲಿನಲ್ಲಿ ಕೊರೆದ ವಾಸ್ತುಗಳನ್ನು ಪರಿಚಯಿಸಿದನಲ್ಲದೇ, ಕ್ರಿ. ಶ. ೭ ನೇ ಶತಮಾನದ ಕೊನೆಗೆ ರಾಜಸಿಂಹನು ಕಂಚಿಯಲ್ಲಿ ಕೈಲಾಸನಾಥ ದೇವಾಲಯ ನಿರ್ಮಿಸಿ ಅದರಲ್ಲಿ ಭಿತ್ತಿಚಿತ್ರಗಳನ್ನು ಬರೆಸಿದ್ದುದು [೧೬] ತಿಳಿದುಬರುವುದು. ಈ ದೇವಾಲಯದ ಗೋಡೆಗಳ ಮೇಲೆ ಹೊರ ಆವರಣದ ಮಾಡುಗಳಲ್ಲಿ ಚಿತ್ರಗಳನ್ನು ರಚಿಸಲಾಗಿದ್ದು, ಇವು ಶೈವಧರ್ಮಸಂಬಂಧಿ ಭಿತ್ತಿ ಚಿತ್ರಗಳಾಗಿವೆ.

---

೧೦. Percy Brown : Indian Painting, Page 25
೧೧. C. Sivaramamurti : Indian Painting, Page 25
೧೨. ಪ್ರೊ. ಎಸ್. ಕೆ. ರಾಮಚಂದ್ರರಾವ್ ಶ ಕರ್ನಾಟಕದ ಕಲೆಗಳು (ಸಂಪುಟ ೧), ಪುಟ ೧೦೭
೧೩. C. Sivaramamurti : Indian Painting, Page 27
೧೪. C. Sivaramamurti : Indian Painting, Page 30
೧೫. C. Sivaramamurti : Indian Painting, Page 34
೧೬. ಸ್ಟೆಲ್ಲಾಕ್ರಾಮ್ರಿಷ್ : ದಕ್ಷಿಣ ಚಿತ್ರ, ಪುಟ ೨೧೮

ಪಾಂಡ್ಯರು ದಕ್ಷಿಣದಲ್ಲಿ ಪಲ್ಲವರ ಸಮಕಾಲೀನವಾಗಿ ರಾಜ್ಯಭಾರ ಮಾಡಿದ ಅರಸರಾಗಿದ್ದು ಭಿತ್ತಿ ಚಿತ್ರಕಲೆಗೆ ಗಮನಾರ್ಹ ಕೊಡುಗೆ ನೀಡಿದ್ದಾರೆ. ತಮಿಳುನಾಡಿನ ತಿರುಮಲೈಪುರಮ್ ಗುಹಾದೇವಾಲಯಗಳಲ್ಲಿ ಪಾಂಡ್ಯರ ಆರಂಭಕಾಲದ ಭಿತ್ತಿಚಿತ್ರಗಳಿದ್ದರೆ, ಸಿತ್ತನ್‌ವಾಸಲ್‌ದಲ್ಲಿ ಕ್ರಿ. ಶ. ೯ ನೇ ಶತಮಾನದಲ್ಲಿ ಪಾಂಡ್ಯರು ಬರೆಸಿದ ಭಿತ್ತಿ ಚಿತ್ರಗಳು [೧೭] ಕಂಡುಬರುತ್ತವೆ. ತಿರುಮಲೈಪುರಮ್ ಗುಹಾದೇವಾಲಯದಲ್ಲಿ ಬಾತುಕೋಳಿಗಳು, ಹಂಸಪಕ್ಷಿಗಳು, ಕಮಲದ ಹೂ, ಎಲೆ, ಚಿಗುರು, ಹೂ-ಕಾಯಿಗಳನ್ನು ಹೊಂದಿದ ಬಳ್ಳಿಗಳನ್ನು ನಕ್ಷಾರೂಪದಲ್ಲಿ ರಚಿಸಿದ್ದರೆ, ಸಿತ್ತನ್‌ವಾಸಲ್‌ದಲ್ಲಿ ರಾಜರಾಣಿಯರು, ಸೇವಕ, ಸೇವಕಿಯರು ನೃತ್ಯಗಾರರು, ಈಜುತ್ತಿರುವ ಜನರು, ಕೋಣಗಳ ಚಿತ್ರಗಳು ರಚನೆಯಾಗಿವೆ. [೧೮] ತಮಿಳುನಾಡು ಭಾಗದಲ್ಲಿ ಪಲ್ಲವರು ಮತ್ತು ಪಾಂಡ್ಯರ ಉತ್ತರಾರ್ಧ ಸಮಕಾಲೀನ ರಾಜರಾಗಿ ಆಳ್ವಿಕೆ ನಡೆಸಿದವರು ಚೇರದೊರೆಗಳು. ಕ್ರಿ. ಶ. ೮ ರಿಂದ ೯ ನೇ ಶತಮಾನದವರೆಗಿನ ಇವರ ಆಡಳಿತಾವಧಿಯಲ್ಲಿ ರಚನೆಯಾದಂತಹ ಹೆಚ್ಚಿನ ಭಿತ್ತಿಚಿತ್ರಗಳು ಇದುವರೆಗೆ ಕಂಡುಬಂದಿಲ್ಲ. ಆದರೆ ೯ ನೇ ಶತಮಾನದ ಪ್ರಾರಂಭದಲ್ಲಿ ತಮಿಳುನಾಡಿನ ತಿರುನಂದಿಕರೈ ಗುಹಾ ದೇವಾಲಯದಲ್ಲಿ ಚೇರ ದೊರೆಗಳ ಪೋಷಣೆಯಲ್ಲಿ ಭಿತ್ತಿ ಚಿತ್ರಗಳು ರಚನೆಯಾಗಿವೆ ಎಂದು ತಿಳಿದು ಬಂದಿದ್ದು. [೧೯] ಆಭರಣ ಧರಿಸಿದ ರಾಜನ ಚಿತ್ರ, ಕೆಲವು ಅಸ್ಪಷ್ಟ ಆಕೃತಿಗಳು ಕಂಡುಬರುತ್ತವೆ. ಓರಿಸ್ಸಾ ರಾಜ್ಯದ ಕೇಂಜಹಾರ ಜಿಲ್ಲೆಯ ಸೀತಾಭಿಂಜಿ ಎಂಬಲ್ಲಿನ ಶಿಲಾಗುಹೆಯಲ್ಲಿ ಕ್ರಿ. ಶ. ೮ ನೇ ಶತಮಾನದಲ್ಲಿ ಭಾಂಜಾ ಅರಸರು ಬರೆಸಿದ ಭಿತ್ತಿ ಚಿತ್ರಗಳಿದ್ದು. [೨೦] ರಾಜನ ಮೆರವಣಿಗೆಯ ದೃಶ್ಯ, ಆನೆ, ಕುದುರೆ, ಸೇವಕರು ಛತ್ರ ಚಾಮರಗಳು ರಚನೆಯಾಗಿವೆ. ಕ್ರಿ. ಶ. ೯ ನೇ ಶತಮಾನದವರೆಗೆ ದಕ್ಷಿಣದಲ್ಲಿ ಶಕ್ತಿಶಾಲಿ ಅರಸರಾಗಿದ್ದ ಚೋಳರು ಭಿತ್ತಿ ಚಿತ್ರಕಲೆಗೆ ಗಮನಾರ್ಹ ಕೊಡುಗೆ ನೀಡಿದ್ದಾರೆ. ಚೋಳರ ಪ್ರಾರಂಭ ಕಾಲದ ಭಿತ್ತಿ ಚಿತ್ರಗಳು ತಮಿಳುನಾಡಿನ ನಾರ್ತಾಮಲೈ, ಮಲಯಾದಿಪತ್ತಿ ಮತ್ತು ತಂಜಾವೂರಿನ ಬೃಹದೀಶ್ವರ ದೇವಾಲಯಗಳಲ್ಲಿ [೨೧] ರಚನೆಯಾಗಿವೆ.

ವರಂಗಲ್‌ನ್ನು ರಾಜಧಾನಿಯಾಗಿ ಮಾಡಿಕೊಂಡು ರಾಜ್ಯಭಾರ ಮಾಡಿದ ಕಾಕತೀಯರು ಕ್ರಿ. ಶ. ೧೧ ರಿಂದ ೧೩ ನೇ ಶತಮಾನದವರೆಗಿನ ಆಡಳಿತಾವಧಿಯಲ್ಲಿ ಅನೇಕ ದೇವಾಲಯಗಳನ್ನು ನಿರ್ಮಿಸಿ ಅವುಗಳನ್ನು ಭಿತ್ತಿ ಚಿತ್ರಗಳಿಂದ ಅಲಂಕರಿಸಿದ್ದಾರೆ. ಆಂಧ್ರಪ್ರದೇಶದ ಗುಂಟೂರು ಜಿಲ್ಲೆಯ ಸತ್ಯಂಪಲ್ಲಿ ತಾಲೂಕು ' ಮಚೇರ್ಲ ' ದಲ್ಲಿನ ಚೆನ್ನಕೇಶವ ದೇವಾಲಯ, [೨೨] ನಲಗೊಂಡಾ ಜಿಲ್ಲೆಯ ' ಪಿಲ್ಲಲಮರಿ ' ಯ ನರಸಿಂಹ ದೇವಾಲಯ, [೨೩] ಕರ್ನೂಲ್ ಜಿಲ್ಲೆಯ ಮಾರ್ಕಪುರ ತಾಲೂಕು ' ತ್ರಿಪುರಾಂತಕ ' ದಲ್ಲಿನ ತ್ರಿಪುರಾಂತಕ ದೇವಾಲಯ [೨೪] ಗಳಲ್ಲಿ ಕಾಕತಿ ಅರಸರ ಪೋಷಣೆಯ ಭಿತ್ತಿ ಚಿತ್ರಗಳಿರುವುದು ತಿಳಿದುಬರುತ್ತದೆ.

ಕ್ರಿ. ಶ. ೧೫ ನೇ ಶತಮಾನದ ಹೊತ್ತಿಗೆ ಮೊಗಲ್ ಅರಸರೂ ಸಹಿತ ಭಿತ್ತಿ ಚಿತ್ರಕಲೆಯಿಂದ ತಮ್ಮ ಕಟ್ಟಡಗಳನ್ನು ಅಲಂಕರಿಸುವಲ್ಲಿ ಆಸಕ್ತಿ ವಹಿಸಿದರು. ಇಸ್ಲಾಂ ಧರ್ಮದ ಕಟ್ಟಾ ಸಂಪ್ರದಾಯ ವಾದಿಗಳಲ್ಲಿ ಚಿತ್ರಕಲೆ ನಿಷಿದ್ಧವಿದ್ದರೂ

೧೭. C. Sivaramamurti : Indian Painting, Page 51
೧೮. C. Sivaramamurti : Indian Painting, Page 55
೧೯. C. Sivaramamurti : Indian Painting, Page 59
೨೦. Marg : Vol, VIII No. 4, Sept, 1955, Page 63
೨೧. C. Sivaramamurti : Indian Painting, Page 64
೨೨. J. C. Nagpal : Mural Paintings in India, Page 77
೨೩. C. Sivaramamurti : Indian Painting, Page 97
೨೪. J. C. Nagpal : Mural Paintings in India, Page 78

ಮೊಗಲ್ ಅರಸರು ಅದನ್ನು ಮೀರಿ ಭಿತ್ತಿ ಚಿತ್ರಕಲಾ ನಿರ್ಮಿತಿಗೆ ಪ್ರೋತ್ಸಾಹಿಸಿದರು. ಮೊಗಲ್ ಸಾಮ್ರಾಟರಲ್ಲಿಯೇ ಅರಮನೆಯಲ್ಲಿ ಮೊದಲಬಾರಿಗೆ ಭಿತ್ತಿ ಚಿತ್ರಗಳನ್ನು ಅಕ್ಬರನ ಕಾಲದಲ್ಲಿ ಬರೆಯಿಸಲಾಯಿತು. [೨೫] ಫತ್ತೇಪುರ ಸಿಕ್ರಿಯಲ್ಲಿನ ಆತನ ಅರಮನೆಯಲ್ಲಿ ಹೂ-ಬಳ್ಳಿಗಳು ಅಲಂಕಾರಗಳು, ಜ್ಯಾಮಿತಿಕ ನಕ್ಷಾರೂಪಗಳು ರಚನೆಯಾಗಿವೆ. ಅಕ್ಬರನ ನಂತರ ಜಹಾಂಗೀರನು ಭಿತ್ತಿ ಚಿತ್ರಕಲೆಯನ್ನು ತುಂಬ ಪ್ರೋತ್ಸಾಹಿಸಿದ್ದಾನೆ. ಈವನ ಕಾಲದಲ್ಲಿ ಮೊಗಲ್ ಭಿತ್ತಿ ಚಿತ್ರಕಲೆ ಪರಾಕಾಷ್ಠತೆಯನ್ನು ಮುಟ್ಟಿತು. ಮೊಗಲರ ಕಾಲದಲ್ಲಿ ಅನೇಕ ಕಟ್ಟಡಗಳನ್ನು ಭಿತ್ತಿ ಚಿತ್ರಗಳಿಂದ ಅಲಂಕರಿಸಲಾಗಿದೆ. ಉತ್ತರ ಪ್ರದೇಶದ ಆಗ್ರಾ ಜಿಲ್ಲೆಯ ಫತ್ತೇಪುರ ಸಿಕ್ರಿಯಲ್ಲಿರುವ ' ಮಾರೆಮ್ಮ-ಜಮಾನಿ ' ಮನೆಗಳು ಅಕ್ಬರನ ಕಾಲದಲ್ಲಿ ಕಟ್ಟಲಾಗಿದ್ದು. [೨೬] ಅದೇ ಕಾಲದ ಭಿತ್ತಿ ಚಿತ್ರಗಳೂ ಇವೆ ಎಂದು ತಿಳಿದುಬರುವುದು. ಚಿತ್ರಗಳು ದಟ್ಟವರ್ಣದಲ್ಲಿದ್ದು ಹೂ-ಬಳ್ಳಿ ನಕ್ಷೆಗಳು. ಜ್ಯಾಮಿತಿಕ ರೂಪದ ವಿನ್ಯಾಸಗಳನ್ನೂ ಹೊಂದಿವೆ.

ಫತ್ತೇಪುರ ಸಿಕ್ರಿಯಲ್ಲಿರುವ ಶೇಖ ಸಲೀಮ ಚಿಸ್ತಿ ಸಮಾಧಿಯೂ ಅಕ್ಬರನ ಕಾಲದಲ್ಲಿಯೇ ನಿರ್ಮಿಸಿದ ಕಟ್ಟಡವಾಗಿದ್ದು ಅದೇ ಅವಧಿಯ [೨೭] ಭಿತ್ತಿ ಚಿತ್ರಗಳೂ ಇವೆ. ಹಾಗೆಯೇ ಇದೇ ಕಾಲದಲ್ಲಿ ರಚಿಸಿದ ಭಿತ್ತಿ ಚಿತ್ರಗಳು ಫತ್ತೇಪುರ ಸಿಕ್ರಿಯಲ್ಲಿಯೇ ಇರುವ ಅಬುಲ್ ಫಜಲ್ ಮತ್ತು ಫೌಜೀಹೌಸಗಳಲ್ಲೂ ಕಂಡುಬಂದಿದ್ದು [೨೮] ಹೂ-ಬಳ್ಳಿಯ ನಕ್ಷೆಗಳು. ಜ್ಯಾಮಿತಿಕ ರೂಪಗಳೇ ಎರಡೂ ಕಡೆಗೂ ಇವೆ. ಉತ್ತರ ಪ್ರದೇಶದ ಅಲಹಾಬಾದ್‌ನಲ್ಲಿರುವ ಕುಶ್ರೋಭಾಗ ತೋಟದಲ್ಲಿನ ಕುಶ್ರೋನ ಸಮಾಧಿ. ಸುಲ್ತಾನ್-ಉನ್-ನಿಸಾ ಬೇಗಮ್ ಸಮಾಧಿ. ಅಲಹಾಬಾದ್ ಕೋಟೆಯಲ್ಲಿರುವ ಜಾನಾನಾ ಪ್ಯಾಲೇಸ್‌ಗಳಲ್ಲಿ ಮೊಗಲ್ ಕಾಲದ ಭಿತ್ತಿ ಚಿತ್ರಗಳಿವೆ. ಹಾಗೆಯೇ ಬರೇಲಿಯಲ್ಲಿನ ಹಫೀಜ್ ಉಲ್ ಮುಲ್ಕ ಸಮಾಧಿ. ಪೀರ್‌ಶಹಾದಾನಾ ಸಮಾಧಿ. [೨೯] ಆಗ್ರಾದಲ್ಲಿನ ' ಚಿನ್ನಿಕಾ ರೋಜಾ ' ಅರಮ್‌ಭಾಗ್ ಬಾರದರಿ. ಇತಿಮದ್ ಉದ್ದೌಲ್ ಸಮಾಧಿ. ಆಗ್ರಾ ಜಿಲ್ಲೆಯ ಸಿಕಂದ್ರಾದಲ್ಲಿನ ಅಕ್ಬರನ ಸಮಾಧಿಗಳಲ್ಲಿ [೩೦] ಭಿತ್ತಿ ಚಿತ್ರಗಳು ರಚನೆಯಾಗಿವೆ.

ದೆಹಲಿಯ ಕೆಂಪು ಕೋಟೆಯಲ್ಲಿನ ' ದಿವಾನ್-ಇ-ಖಾಸ್ ' ಕಟ್ಟಡದಲ್ಲಿ ಶಹಾಜಹಾನನು ಬರೆಸಿದ ಭಿತ್ತಿ ಚಿತ್ರಗಳಿದ್ದು. [೩೧] ಕಟ್ಟಡದ ಮೇಲ್ಛಾವಣಿಗೆ ಉರುಟಾದ ಬಟ್ಟೆಯನ್ನು ಅಂಟಿಸಿ ಅದರ ಮೇಲೆ ಚಿತ್ರ ರಚಿಸಲಾಗಿದೆ. ಇಲ್ಲಿ ಹಸಿರು ಹಾಗೂ ಹಳದಿ ವರ್ಣ ಕಂಡುಬಂದರೂ ಹೆಚ್ಚಾಗಿ ಬಂಗಾರ ಹಾಗೂ ಬೆಳ್ಳಿಯನ್ನು ವರ್ಣಮಾಧ್ಯಮವಾಗಿ ಬಳಸಿ ಅಲಂಕಾರಿಕ ನಕ್ಷಾ ರೂಪಗಳನ್ನು ಚಿತ್ರಿಸಿದೆ. ಹಾಗೇ ಕೆಂಪುಕೋಟೆಯಲ್ಲಿಯೇ ಇರುವ ರಂಗಮಹಲ್, ನೌಬತ್‌ಖಾನಾ ಕಟ್ಟಡ. ಹಳೆಯ ಕೋಟೆಯಲ್ಲಿನ ಶೇರ್‌ಶಹನ ಕಾಲದ ಕಲಕುಮ್ಮ ಮಸೀದಿ. ಜಮಾಲಿಕಮಾಲಿ ಸಮಾಧಿ. ಹೊಸದೆಹಲಿಯಲ್ಲಿರುವ ಶಹಾಜಹಾನನ ಕಾಲದ ರೋಷ್‌ನಾರಾ ಬಾರದರಿ ಕಟ್ಟಡಗಳಲ್ಲಿ ಮೊಗಲ್ ಕಾಲದ ಭಿತ್ತಿಚಿತ್ರಗಳು [೩೨] ರಚನೆಯಾಗಿದ್ದು ಕಂಡುಬರುತ್ತವೆ.

---

೨೫. J. C. Nagpal : Mural Paintings in India, Page 8
೨೬. J. C. Nagpal : Mural Paintings in India, Page 199
೨೭. J. C. Nagpal : Mural Paintings in India, Page 200
೨೮. J. C. Nagpal : Mural Paintings in India, Page 202
೨೯. R. S. Tewari : A. S. I. Peport, (1970), Page 29
೩೦. J. C. Nagpal : Mural Paintings in India, Page 197
೩೧. J. C. Nagpal : Mural Paintings in India, Page 120
೩೨. ದೆಹಲಿಯ ಭಿತ್ತಿ ಚಿತ್ರಗಳು ಪರಿವೀಕ್ಷಣೆ, ದಿನಾಂಕ ೨೦-೯-೧೯೯೬ ರಿಂದ ೨೫-೯-೧೯೯೬ ರ ವರೆಗೆ

ದೇವಗಿರಿಯನ್ನು (ಇಂದಿನ ದೌಲತಾಬಾದ್) ರಾಜಧಾನಿಯಾಗಿ ಮಾಡಿಕೊಂಡು ಆಡಳಿತ ನಡೆಸಿದ ಯಾದವ ದೊರೆಗಳ ಕಾಲದಲ್ಲಿಯೂ ಭಿತ್ತಿ ಚಿತ್ರರಚನೆ ನಡೆದಿರುವುದಕ್ಕೆ ಆಧಾರಗಳು ಕಂಡುಬರುತ್ತವೆ. " ದಿಲ್ಲಿಯಲ್ಲಿ ಅಲ್ಲಾಉದ್ದೀನ್ ಖಿಲ್ಜಿ ಆಳುತ್ತಿದ್ದ ಸಮಯದಲ್ಲಿ ಆತನ ಸಾಮಂತ ರಾಜನಾಗಿ ದೇವಗಿರಿಯಲ್ಲಿ ಯಾದವ ವಂಶದ ರಾಮದೇವನು ಆಡಳಿತ ನಡೆಸುತ್ತಿದ್ದನು. ರಾಮದೇವನು ತನ್ನ ಯಜಮಾನ ದೊರೆಯಾದ ದಿಲ್ಲಿಯ ಸುಲ್ತಾನನಿಗೆ ತನ್ನ ಅರಮನೆಯನ್ನು ಭಿತ್ತಿಚಿತ್ರಗಳಿಂದ ಅಲಂಕರಿಸಲು ಒಬ್ಬ ಚಿತ್ರಕಾರನನ್ನು ಕಳುಹಿಸಬೇಕೆಂದು ವಿನಂತಿಸಿದ್ದು, ಅದರಂತೆ ದಿಲ್ಲಿಯ ಸುಲ್ತಾನನು ಚಿತ್ರಕಾರನನ್ನು ಕಳುಹಿಸಿಕೊಟ್ಟಾಗ. ಅರಮನೆ ಕೇವಲ ಮರಮಟ್ಟುಗಳಿಂದ ನಿರ್ಮಾಣಗೊಂಡಿದ್ದು, ಹಲಗೆಗಳ ಮೇಲೆ ಚಿತ್ರ ರಚಿಸಿದರೆ ಅವು ಹೆಚ್ಚು ದಿನ ಬಾಳಲಾರವು ಎಂದು ಕಲಾವಿದ ತಿಳಿಸಿದನೆಂದೂ, ರಾಮದೇವನು ಕಲ್ಲಿನಿಂದ ಬೇರೆಯ ಅರಮನೆಯನ್ನು ಕಟ್ಟಿಸಿ ಅದರಲ್ಲಿ ಭಿತ್ತಿ ಚಿತ್ರಗಳನ್ನು ಬರೆಸಿದನು [೩೩] ಎಂಬ ವಿವರ ತಿಳಿದುಬರುತ್ತದೆ.

ಕ್ರಿ. ಶ. ೧೮ ನೇ ಶತಮಾನದಲ್ಲಿ ರಾಜಸ್ಥಾನ ಭಾಗದಲ್ಲಿ ಮತ್ತೆ ರಜಪೂತ ಅರಸರು ಭಿತ್ತಿ ಚಿತ್ರಕಲೆಯ ಪೋಷಕರಾದರು. ಈ ಸಂದರ್ಭದಲ್ಲಿ ರಚನೆಯಾದ ಕೋಟೆಗಳು, ಅರಮನೆಗಳು, ದೇವಾಲಯಗಳಲ್ಲಿ ಭಿತ್ತಿ ಚಿತ್ರಗಳು ಕಂಡುಬರುತ್ತವೆ. ರಾಜಸ್ಥಾನದ ಅಜ್ಮೀರ ಜಿಲ್ಲೆಯ ' ಪುಷ್ಕರ್ ' ಎಂಬಲ್ಲಿನ ' ರಂಗಜೀ ದೇವಾಲಯ ದಲ್ಲಿ ಕ್ರಿ. ಶ. ೧೮೪೪ ರಲ್ಲಿ ಸೇಠ್ ಪೆರುಮಾಳ್‌ನು ಬರೆಸಿದ ಭಿತ್ತಿ ಚಿತ್ರಗಳಿದ್ದು [೩೪] ಕೃಷ್ಣನ ಜೀವನದ ಘಟನೆಗಳನ್ನು ಆಧರಿಸಿ ರಚನೆಯಾಗಿದೆ. ಭರತಪುರ ಜಿಲ್ಲೆಯಲ್ಲಿರುವ ' ಡೀಗ್ ಅರಮನೆಯ ' ಭಿತ್ತಿಚಿತ್ರಗಳು ಜಾಟರ ಮುಖ್ಯಸ್ಥ ಸೂರಜ್‌ಮಲ್ಲನಿಂದ ಕ್ರಿ. ಶ. ೧೭೬೪ ರಲ್ಲಿ ರಚನೆಯಾಗಿದ್ದು. [೩೫] ಸ್ಥಳೀಯ ರಾಜಪೂತ ಶೈಲಿಯೊಡನೆ ಮೊಗಲ್ ಶೈಲಿ ಮಿಶ್ರಣವಾಗಿದ್ದು ಈ ಚಿತ್ರಗಳಲ್ಲಿ ಕಾಣಬಹುದಾಗಿದೆ. ಬುಂದಿಯಲ್ಲಿನ ' ಛತ್ರಮಹಲ್ ' ಅರಮನೆಯ ಸಭಾಭವನದಲ್ಲಿ ಮತ್ತು ಅರಮನೆಯ ಆವರಣದಲ್ಲಿರುವ ' ಚಿತ್ರಶಾಲೆಯಲ್ಲಿ ' ಹಾಗೂ ರಾಜ ಪರಿವಾರದವರಿಗಾಗಿ ನಿರ್ಮಿಸಿರುವ ಖಾಸಗೀ ದೇವಾಲಯದಲ್ಲಿ ಕ್ರಿ. ಶ. ೧೮ ನೇ ಶತಮಾನದ ಭಿತ್ತಿ ಚಿತ್ರಗಳು ಕಂಡುಬರುತ್ತವೆ. ಇವು ರಾಜಸ್ಥಾನದ ' ಹಡೋತಿ ' ಶೈಲಿಯಲ್ಲಿವೆ. [೩೬] ಜಯಪುರ ಜಿಲ್ಲೆಯ ' ಗಲ್ ತಾಜೀ ಬಾರದರಿ ' ಯಲ್ಲಿ ಮಹಾರಾಜಾ ಜಯಸಿಂಗನ ರಾಣಿಯಾದ ' ಶಿಶೋದಿಯಾ ' ಎಂಬವಳು ಬರೆಸಿದ ಭಿತ್ತಿ ಚಿತ್ರಗಳು. [೩೭] ಇದೇ ಜಿಲ್ಲೆಯ ಬ್ರಹ್ಮಪುರಿಯಲ್ಲಿನ ಪುಂಡರೀಕಜೀ-ಕಿ-ಹವೇಲಿ, [೩೮] ಅಮೀರ್‌ದಲ್ಲಿನ ಜಗತ್ ಶಿರೋಮಣಿ ದೇವಾಲಯ, [೩೯] ಅಮೀರ್ ಕೋಟೆ. [೪೦] ಜೋಧಪುರ ಜಿಲ್ಲೆಯ ಜೋಧಪುರ ಕೋಟೆ, ತೇಜಮಾಜಿ ದೇವಾಲಯ, ಲಾಲ್‌ಬಾಬಾ ದೇವಾಲಯ, ಘೋಟೀ ಭಾಗೇಲಿ ದೇವಾಲಯ. [೪೧] ಕೋಟಾ ಜಿಲ್ಲೆಯ ' ಜಲಾಜಾಲಿವ್‌ಸಿಂಗ್ ಹವೇಲಿ, [೪೨] ಇಂದರ್‌ಘರ್‌ನ ಅರಮನೆ. ಕರೌಲೀ ತಾಲೂಕು ಮಹಾರಾಜಾ ಗೋಪಾಲಲಾಲ್ ಅರಮನೆ, [೪೩] ನಾಗೂರು ಜಿಲ್ಲೆಯ ನಾಗೂರು

---

೩೩. ಡಾ. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪುಟ ೬೬
೩೪. H. Bheeshmapal : Temples of Rajastan, Page 63
೩೫. J. C. Nagpal : Mural Paintings in India, Page 167
೩೬. W. G. Archer : Indian Painting in Bundhi and Kota, Page 64
೩೭. J. C. Nagpal : Mural Paintings in India, Page 169
೩೮. A. S.I. Annual Report : (1927), Page 181
೩೯. J. C. Nagpal : Mural Paintings in India, Page 172
೪೦. ನವಭಾರತ್ ಟೈಮ್ಸ್ : ಏಪ್ರಿಲ್ ೨೮, ೧೯೭೬, ಪುಟ ೬
೪೧. R. A: Agarwal : Marwar Murals, Page 77
೪೨. The Times of India : July 13, 1981, Page 8
೪೩. J. C. Nagpal : Mural Paintings in India, Page 175

ಕೋಟೆ,[೪೪] ಉದಯಪುರ ಜಿಲ್ಲೆಯ ನಾಥದ್ವಾರದಲ್ಲಿನ ಕೃಷ್ಣ ದೇವಾಲಯ. ಉದಯಪುರದಲ್ಲಿರುವ ದಿಲ್‌ಕುಶ್ ಮಹಲ್. ರಂಗ ಮಹಲ್. ಬದಲ್ ಮಹಲ್. ಭೀಮಸಿಂಗನ ಅರಮನೆ. ಲೇಕ್ ಅರಮನೆಗಳಲ್ಲಿ[೪೫] ರಜಪೂತರ ಪೋಷಣೆಯ ಭಿತ್ತಿ ಚಿತ್ರಗಳು ಕಂಡುಬರುತ್ತವೆ. ಅಲ್ಲದೇ ರಾಜಸ್ತಾನದಲ್ಲಿ ರಜಪೂತ ಅರಸರು ಕ್ರಿ. ಶ. ೧೯-೨೦ ನೇ ಶತಮಾನದವರೆಗೂ ತಮ್ಮ ಹವೇಲಿಗಳಲ್ಲಿ ಭಿತ್ತಿ ಚಿತ್ರಗಳನ್ನು ರಚಿಸುತ್ತ ಬಂದಿದ್ದು. ಯಾವಾಗ ಅವರು ಯುರೋಪಿಯಸ್ ತೈಲ ಚಿತ್ರಗಳನ್ನು ತಾವು ಹೊಂದುವುದು ಒಂದು ಪ್ರತಿಷ್ಠೆ ಎಂದು ಭಾವಿಸಿದರೋ ಅಲ್ಲಿಯವರೆಗೂ ರಜಪೂತ ಹವೇಲಿಗಳಲ್ಲಿ ಭಿತ್ತಿ ಚಿತ್ರರಚನೆ ನಡೆಯುತ್ತಲೇ ಇತ್ತು[೪೬] ಎಂಬ ಅಭಿಪ್ರಾಯವಿದೆ.

ಕ್ರಿ. ಶ. ೧೯ ರಿಂದ ೨೦ ನೇ ಶತಮಾನದಲ್ಲಿ ಭಿತ್ತಿ ಚಿತ್ರ ರಚಿಸಲಾದ ರಾಜಸ್ಥಾನದ ಮಾಂಡವಾ ಹವೇಲಿ. ನವಲ್‌ಘರ್ ಹವೇಲಿ. ರೂಪನಿವಾಸ್ ಹವೇಲಿ. ದುಂಡಲೋಡ್ ಹವೇಲಿಗಳು ತಮ್ಮ ಸೌಂದರ್ಯದಿಂದ ಇಂದಿಗೂ ಪ್ರವಾಸಿಗರ ಆಕರ್ಷಣೆಯ ಕೇಂದ್ರಗಳಾಗಿವೆ. ರಜಪೂತರಂತೆ ' ಶಿಖ್ ' ಸಮುದಾಯದವರೂ ಭಿತ್ತಿ ಚಿತ್ರಕಲೆಯ ಪೋಷಕರಾಗಿ ಅದು ಬೆಳೆಯಲು ಕಾರಣರಾಗಿದ್ದಾರೆ. ಕ್ರಿ. ಶ. ೧೮ ನೇ ಶತಮಾನದಿಂದ ಪಂಜಾಬಿನಲ್ಲಿ ' ಶಿಖ್ ' ರು ಭಿತ್ತಿ ಚಿತ್ರಕಲೆಗೆ ಹೆಚ್ಚು ಮಹತ್ವ ಕೊಟ್ಟು ತಮ್ಮ ಪೂಜಾಮಂದಿರಗಳನ್ನು ಭಿತ್ತಿ ಚಿತ್ರಗಳಿಂದ ಅಲಂಕರಿಸಿದರು. ಮಹಾರಾಜಾ ರಣಜೀತ್ ಸಿಂಗನಿಂದ ಕ್ರಿ. ಶ. ೧೯ ನೇ ಶತಮಾನದಲ್ಲಿ ನಿರ್ಮಿಸಲಾದ ಪಂಜಾಬದ ಅಮೃತಸರದ ಸ್ವರ್ಣಮಂದಿರದಲ್ಲಿ[೪೭] ' ಶಿಖ್ ' ಶೈಲಿಯ ಭಿತ್ತಿ ಚಿತ್ರಗಳು ಕಂಡುಬರುತ್ತವೆ. ಇಲ್ಲಿಯ ಚಿತ್ರಗಳು ಹೂ-ಬಳ್ಳಿಯ ನಕ್ಷೆಗಳನ್ನು ಹೊಂದಿದ್ದು ವರ್ಣದ ಜೊತೆಗೇ ಬಂಗಾರ ವರ್ಣವನ್ನೂ ಇಲ್ಲಿ ವಿಪುಲವಾಗಿ ಉಪಯೋಗಿಸಲಾಗಿದೆ. ಬಳ್ಳಿಯ ಎಲೆಗಳಿಗೆ ಪೂರ್ತಿ ಬಂಗಾರವನ್ನೇ ತುಂಬಲಾಗಿದೆ. ಇಲ್ಲಿಯೇ ಸರೋವರದ ಪೂರ್ವದಲ್ಲಿನ ಬಾಗಿಲಿನ ಹತ್ತಿರ ಮುಖಮಂಟಪದಲ್ಲಿ ಕೆಲವು ಭಿತ್ತಿಚಿತ್ರಗಳಿದ್ದು ಇವು ತೀರಾ ಹಾಳಾಗಿವೆ. ಸಮೀಪದ ಹೊಟೇಲುಗಳ ಬಿಸಿ ಹವೆ ಮತ್ತು ಹೊಗೆಯು ನಿರಂತರ ತಗುಲುವುದರಿಂದ ಚಿತ್ರಗಳ ಮೇಲೆ ದಪ್ಪನಾದ ಕಪ್ಪು ಪದರ ಕುಳಿತಿರುವುದಲ್ಲದೇ ಕೆಲವು ಕಡೆ ಚಿತ್ರಗಳು ಸಂಪೂರ್ಣ ನಾಶವಾಗಿರುವುದು[೪೮] ಕಂಡುಬರುತ್ತದೆ. ಇವುಗಳಲ್ಲದೇ ಭಟಿಂಡಾ ಜಿಲ್ಲೆಯ ಭಾಯಿಥಲ್ ಸಮಾಧಿ. ದಮ್‌ದಮಾ ಸಾಹಿಬ್ ಸ್ಮಾರಕ. ಉನಾ ಜಿಲ್ಲೆಯ ' ಬಾಬಾ ಕಲಧರಿ ಗುರುದ್ವಾರ '. ಸಂಗ್ರೂರ್ ಜಿಲ್ಲೆಯ ಬಾಬಾ ದಯಾಲ್‌ದಾಸನ ಸಮಾಧಿ. ಹೋಷಿಯಾರ್‌ಪುರ ಜಿಲ್ಲೆಯ ತಂಡ ಹಳ್ಳಿಯ ಬಾಬಾ ಮಹರ್‌ಸಿಂಗನ ಸಮಾಧಿ. ಅಮೃತಸರದ ಮಂಗನಿರಾಮ್ ಸಮಾಧಿಗಳಲ್ಲಿ ' ಶಿಖ್ ' ಪೋಷಣೆಯ[೪೯] ಭಿತ್ತಿ ಚಿತ್ರಗಳು ರಚನೆಯಾಗಿರುವುದಾಗಿ ವಿವರಗಳು ದೊರೆಯುತ್ತವೆ. ಹೀಗೆ ಭಾರತದುದ್ದಕ್ಕೂ ಅನೇಕ ಅರಸು ಮನೆತನಗಳು ಭಿತ್ತಿ ಚಿತ್ರ ನಿರ್ಮಾಣ ಸಂಪ್ರದಾಯವನ್ನು ಪ್ರೋತ್ಸಾಹಿಸಿದ ಕಾರಣ ಇಂದಿಗೂ ಅವುಗಳ ಅಳಿದುಳಿದ ಅಸ್ತಿತ್ವವನ್ನು ಗುರುತಿಸುತ್ತೇವೆ. ಕರ್ನಾಟಕದಲ್ಲಿ ಕೂಡಾ ಭಿತ್ತಿ ಚಿತ್ರಪರಂಪರೆ ಪ್ರಾಚೀನ ಕಾಲದಿಂದಲೇ ಬೆಳೆದುಬಂದಿದ್ದು ಇತಿಹಾಸ ಕಾಲದಿಂದ ಇಲ್ಲಿಯೂ ಅನೇಕ ಅರಸರು, ಸಾಮಂತರು, ಪಾಳೇಗಾರರು. ಶ್ರೀಮಂತ ವರ್ಗದ ಜನರು, ಮಠಮಾನ್ಯಗಳು ಈ ಕಲಾ

---

೪೪. R. A. Agarwal : Marwar Murals, Page 84
೪೫. J. C. Nagpal : Mural Paintings in India, Page 176
೪೬. J. C. Nagpal : Mural Paintings in India, Page 178
೪೭. J. C. Nagpal : Mural Paintings in India, Page 162
೪೮. J. C. Nagpal : Mural Paintings in India, Page 163
೪೯. J. C. Nagpal : Mural Paintings in India, Page 161

ಸಂಪ್ರದಾಯವನ್ನೂ ಪೋಷಿಸಿದ ಕಾರಣವಾಗಿ ಅದು ಶ್ರೀಮಂತವಾಗಿ ಬೆಳೆದು ಬಂದಿದ್ದು ಅವುಗಳ ವಿವರಗಳನ್ನು ಸ್ಥೂಲವಾಗಿ ಇಲ್ಲಿ ನೋಡಬಹುದು.

ಉತ್ತರ ಕರ್ನಾಟಕದಲ್ಲಿ ಸೂಕ್ಷ್ಮ ಶಿಲಾಯುಗದ ಮಾನವರ ಪೋಷಣೆಯ ಭಿತ್ತಿ ಚಿತ್ರಗಳು ಬದಾಮಿಯ ಹತ್ತಿರದ ಅರೆಗುಡ್ಡ ಮತ್ತು ಹಿರೇಗುಡ್ಡ ಎಂಬಲ್ಲಿ ರಚನೆಯಾಗಿವೆ.[೫೦] ಈ ಚಿತ್ರಗಳಲ್ಲಿ ವಿಚಿತ್ರ ಆಕೃತಿಯ ಮಾನವರು, ಕಾಡುಪ್ರಾಣಿಗಳು. ವಿಚಿತ್ರ ರೇಖಾಕೃತಿಗಳು ಕಂಡುಬರುತ್ತವೆ. ಈ ಕಾಲದ ಜನರು ಶಿಲಾಶ್ರಯದ ಗೋಡೆಗಳ ಮೇಲೆ ಮಾತ್ರವಲ್ಲದೇ ಮೃತ್ಪಾತ್ರೆಯ ಮೇಲೆ[೫೧] ಸಹಿತ ಚಿತ್ರಗಳನ್ನು ರಚಿಸಿ ತಮ್ಮ ಕಲಾಭಿಜ್ಞತೆಯನ್ನು ವ್ಯಕ್ತಪಡಿಸಿದ್ದಾರೆ. ನಂತರದ ನೂತನ ಶಿಲಾಯುಗ ಇಲ್ಲವೆ ತಾಮ್ರಯುಗದ ಜನರು ಹಿಂದಿನ ಜನಸಮುದಾಯಕ್ಕಿಂತ ಹೆಚ್ಚಿನ ಕಲಾ ನೈಪುಣ್ಯತೆನನ್ನು ಪಡೆದವರಾಗಿದ್ದು ಚಿತ್ರಕಲೆಯನ್ನು ಮುಖ್ಯ ಕಲಾಪ್ರಕಾರವನ್ನಾಗಿ ಬೆಳೆಸಿಕೊಂಡಂತೆ ತೋರುತ್ತದೆ. ಈ ಕಾಲದ ಭಿತ್ತಿಚಿತ್ರಗಳು ಕೊಪ್ಪಳ, ರಾಯಚೂರು. ಬಳ್ಳಾರಿ, ಚಿತ್ರದುರ್ಗ ಪ್ರದೇಶಗಳ ಬೆಟ್ಟಗಳಲ್ಲಿ[೫೨] ರಚನೆಯಾಗಿವೆ ಎನ್ನಲಾಗಿದೆ. ಈ ಜನರು ಎರಡು ರೀತಿಯ ಭಿತ್ತಿ ಚಿತ್ರಗಳನ್ನು ರಚಿಸುತ್ತಿದ್ದು ಬಯಲು ಬಂಡೆಯ ಮೇಲೆ ಚೂಪಾದ ಸಾಧನದಿಂದ ಗೀರಿ. ಕೆತ್ತಿ. ಇಲ್ಲವೇ ಕುಟ್ಟಿ ಚಿತ್ರಗಳನ್ನು ಮೂಡಿಸುವುದು ಮತ್ತು ಶಿಲಾಶ್ರಯಗಳ ಗೋಡೆಗಳ ಮೇಲೆ ಬಣ್ಣಗಳಿಂದ ರಚಿಸಿರುವುದು ಕಂಡುಬರುತ್ತದೆ ಎಂಬ ಹೇಳಿಕೆ ಇದೆ.

ನೂತನ ಶಿಲಾಯುಗದ ಈ ಜನರು ಭಿತ್ತಿ ಚಿತ್ರಗಳಿಲ್ಲದೇ ಹಿಂದಿನ ಸೂಕ್ಷ್ಮ ಶಿಲಾಯುಗದ ಜನರಂತೆ ಮೃತ್ ಪಾತ್ರೆಗಳ ಮೇಲೆಯೂ ಚಿತ್ರರಚನೆ ಮಾಡಿದ್ದು, ಅಂತಹ ಉದಾಹರಣೆಗಳು ದೊರಕಿವೆ. ಇವರ ಭಿತ್ತಿಚಿತ್ರಗಳಲ್ಲಿ ಸಾಮಾನ್ಯವಾಗಿ ಗೂಳಿ, ಆಕಳು. ಜಿಂಕೆ. ಹುಲಿ, ಕೈಕೈ ಹಿಡಿದುಕೊಂಡ ಜನರ ನೃತ್ಯಗಳು ಕಂಡುಬರುತ್ತವೆ. ಮುಂದಿನ ಕಬ್ಬಿಣ ಯುಗದ ಸಮುದಾಯದ ಜನರ ಜೀವನ ವಿಧಾನದಲ್ಲಿ ಸುಧಾರಣೆ ಕಂಡುಬಂದಂತೆಯೇ ಅವರ ಕಲಾ ನಿರ್ಮಿತಿಗಳಲ್ಲಿ ಸುಧಾರಣೆಯಾಯಿತು ಎನ್ನಬಹುದು. ಇವರು ನಿರ್ಮಿಸಿದ ಕಲ್ಗೋರಿಗಳು, ಕಲ್ಮನೆಗಳು ಅವುಗಳ ವೈವಿಧ್ಯತೆ. ಕುಶಲತೆಗಳು ನೋಡುಗರನ್ನು ಚಕಿತಗೊಳಿಸುವವೆನ್ನಲಾಗಿದೆ. ದಿನ ನಿತ್ಯ ಬಳಕೆಯ ವಸ್ತುಗಳಲ್ಲಿ ದ್ವಿವರ್ಣದ ಚಿತ್ರರಚಿತ ಮೃತ್ ಪಾತ್ರೆಗಳು ಇವರ ಕಲಾವಂತಿಕೆಯನ್ನು ವ್ಯಕ್ತಪಡಿಸುತ್ತವೆ. ಈ ಜನರ ಭಿತ್ತಿಚಿತ್ರಗಳು ಗಂಗಾವತಿ ತಾಲೂಕು ಹಿರೇಬೆನಕಲ್, ಮಲ್ಲಾಪುರ, ಬಿಳೀಭಾವಿ. ಲಿಂಗಸುಗೂರು ತಾಲೂಕು ಭಿಲ್ಲಮರಾಯನಗುಡ್ಡ, ಉತ್ತರ ಕನ್ನಡ ಜಿಲ್ಲೆಯ ಬೋಳೆ, ಬೆಳಗಾವಿ ಜಿಲ್ಲೆಯ ಸೌದತ್ತಿ ತಾಲೂಕಿನ ನವಿಲು ತೀರ್ಥ, ಜಮಖಂಡಿ ತಾಲೂಕಿನ ಕುಳ್ಳೊಳ್ಳಿ, ಚಿತ್ರದುರ್ಗ, ಕೊಪ್ಪಳ, ಹೊಸಪೇಟೆಯ ಹಂಪಿ[೫೩] ಹೀಗೆ ಉತ್ತರ ಕರ್ನಾಟಕ ಭಾಗದ ಹೆಚ್ಚಿನ ಶಿಲಾಶ್ರಯ ವರ್ಣಚಿತ್ರ ಮತ್ತು ಬಯಲು ಬಂಡೆಯ ಕುಟ್ಟಿದ ಗೀರಿದ ರೇಖಾಚಿತ್ರಗಳು ಈ ಕಾಲದ ಜನರ ಕೊಡುಗೆಗಳೇ ಆಗಿವೆ ಎಂದು ಹೇಳಲಾಗಿದೆ. ಮೌರ್ಯರ ಕಾಲದಲ್ಲಿ ಉತ್ತರ ಕರ್ನಾಟಕದ ಜನವರ್ಗ ಭಿತ್ತಿ ಚಿತ್ರಕಲೆಗೆ ಯಾವರೀತಿ ಪೋಷಣೆಗೈದರು ? ಆ ಕಾಲದ ಭಿತ್ತಿ ಚಿತ್ರಗಳ ಸ್ವರೂಪಗಳೇನು ? ಎಂಬಂತಹ ವಿವರಗಳು ಸಧ್ಯಕ್ಕೆ ದೊರಕಿಲ್ಲ. ಜಟ್ಟಿಂಗ ರಾಮೇಶ್ವರದ ಬಂಡೇ ಶಾಸನದ ಕೆಳಗೆ ರೇಖಾಕೃತಿಯಲ್ಲಿ ಜೋಡಿ ಪಾದಗಳನ್ನು ಕೆತ್ತಿ ಚಿತ್ರಿಸಲಾಗಿದ್ದು, ಇವು ಪವಿತ್ರಬದ್ಧ ಪಾದವಿರಬೇಕು[೫೪] ಎನ್ನಲಾಗಿದೆ. ಇದಲ್ಲದೇ ಗುಲಬರ್ಗ ಜಿಲ್ಲೆಯ ' ಸನ್ನತಿ ' ಯಲ್ಲಿ ೧೯೯೩-೯೫ ರಲ್ಲಿ ಕೈಕೊಂಡ

---

೫೦. ಅ. ಸುಂದರ (ಸಂ) : ಕರ್ನಾಟಕ ಚರಿತ್ರೆ (ಸಂಪುಟ ೧), ಪುಟ ೧೩೨

೫೧. ಅ. ಸುಂದರ (ಸಂ) : ಕರ್ನಾಟಕ ಚರಿತ್ರೆ (ಸಂಪುಟ ೧), ಪುಟ ೧೨೯

೫೨. ಅ. ಸುಂದರ (ಸಂ) : ಕರ್ನಾಟಕ ಚರಿತ್ರೆ (ಸಂಪುಟ ೧), ಪುಟ ೧೬೩

೫೩. ಅ. ಸುಂದರ (ಸಂ) : ಕರ್ನಾಟಕ ಚರಿತ್ರೆ (ಸಂಪುಟ ೧), ಪುಟ ೧೬೫

೫೪. ಅ. ಸುಂದರ (ಸಂ) : ಕರ್ನಾಟಕ ಚರಿತ್ರೆ (ಸಂಪುಟ ೧), ಪುಟ ೨೯೭

ಉತ್ಖನನದಲ್ಲಿ ಮೌರ್ಯ ಕಾಲೀನ ಚಿತ್ರಿತ ಶಿಲಾ ಫಲಕವೊಂದು ದೊರೆತಿದ್ದು, ಇದು ಕೆಂಪು ಮರಳು ಕಲ್ಲಿನ ಫಲಕವಾಗಿದ್ದು ಮೇಲೆ ಕಾಂತಿಯುತವಾದ ಕಪ್ಪು ಲೇಪನ ಮಾಡಲಾಗಿದೆ. ಅದರ ಮೇಲೆ ಮೂವರು ಸ್ತ್ರೀಯರು, ಜಿಂಕೆ, ಟಗರು, ಕುದುರೆ. ಸಿಂಹ. ಆನೆ. ಕಮಲ ಪುಷ್ಪಗಳು ಚಿತ್ರಿಸಿರುವುದು ಕಂಡುಬರುತ್ತವೆ. ಶಾತವಾಹನರ ಭಿತ್ತಿಚಿತ್ರಗಳು ಅಜಂತಾದಲ್ಲಿ ಕಂಡುಬರುವುದು ಈಗಾಗಲೇ ಪ್ರಸಿದ್ಧ ವಿಷಯ. ಉತ್ತರ ಕರ್ನಾಟಕದಲ್ಲಿಯೂ ಇವರ ಕಾಲಕ್ಕೆ ಭಿತ್ತಿ ಚಿತ್ರರಚನೆ ನಡೆದಿರುವುದನ್ನು ಊಹಿಸಬಹುದು. ಬನವಾಸಿಯಲ್ಲಿ ಉತ್ಖನನದಲ್ಲಿ ದೊರೆತ ಶಾತವಾಹನ ಕಾಲದ ನಗರ ರಚನೆ ಹೇಳುವಾಗ. ಕೆಲವು ಶ್ರೀಮಂತರ ಮನೆಗಳ ಗೋಡೆಗಳ ಮೇಲೆ ಚಿತ್ರಗಳನ್ನು ಬರೆಸಲಾಗುತ್ತಿತ್ತು. ಈ ಚಿತ್ರಗಳಲ್ಲಿ ಕುಲವಧುವಿನ ಲಕ್ಷಣ. ಸ್ವಭಾವವನ್ನು ತೋರಿಸುವಂತಹ ಚಿತ್ರಗಳಿರುತ್ತಿದ್ದವು [೫೫] ಎಂಬ ವಿವರ ಸಿಗುತ್ತದೆ.

ಶಾತವಾಹನರ ಕಾಲದಿಂದಲೇ ಭಿತ್ತಿ ಚಿತ್ರಕಲೆಯ ಶಿಷ್ಟ ಎನ್ನಬಹುದಾದ ಪರಂಪರೆಯನ್ನು ಗುರುತಿಸಬಹುದಾಗಿದೆ. ಈ ಹಿಂದಿನ ಸೂಕ್ಷ್ಮ ಶಿಲಾಯುಗ. ನೂತನ ಶಿಲಾಯುಗ, ಕಬ್ಬಿಣ ಯುಗಗಳಲ್ಲಿ ಬಯಲು ಬಂಡೆಗಳ ಮೇಲೆ ಕುಟ್ಟಿ. ಗೀರಿ ಚಿತ್ರ ರಚಿಸುವುದು. ಗವಿ ಕಲ್ಲಾಸರೆಗಳಲ್ಲಿ ವರ್ಣಚಿತ್ರ ಬಿಡಿಸುವುದು, ಹಾಗೇ ಮೃತ್ ಪಾತ್ರೆಗಳ ಮೇಲೆ ವರ್ಣಚಿತ್ರ ಬರೆಯುವುದು ಇವೆಲ್ಲವೂ ಜನಸಾಮಾನ್ಯರ ಸಹಜ ಭಾವನಾತ್ಮಕ ಅಭಿವ್ಯಕ್ತಿಗಳೇ ಆಗಿದ್ದರೂ ಶಾತವಾಹನರ ಕಾಲದ ಶಿಷ್ಟ ಪರಂಪರೆಯ ಭಿತ್ತಿ ಚಿತ್ರಕಲಾ ರಚನೆಗೆ ಭದ್ರ ಬುನಾದಿಯನ್ನು ಹಾಕಿದವು ಎಂದು ಹೇಳಬಹುದು. ಈ ಹಂತದಿಂದ ಮುಂದಕ್ಕೆ ಒಂದು ಭವ್ಯವಾದ ಭಿತ್ತಿ ಚಿತ್ರಕಲಾ ಪರಂಪರೆ ಬೆಳೆಯುತ್ತಾ ಅದರ ಉದ್ದೇಶ. ಆಯ್ಕೆ. ವಿಚಾರ. ತಾಂತ್ರಿಕತೆಗಳಲ್ಲಿ ಗಂಭೀರ ಪ್ರಗತಿ ಉಂಟಾಯಿತು. ಬನವಾಸಿಯ ಕದಂಬ ದೊರೆಗಳು ಕಲಾ ಪೋಷಕರಾಗಿದ್ದು ಅನೇಕ ದೇವಾಲಯಗಳನ್ನು ಕಟ್ಟಿಸಿದ್ದಾರೆ. ಬನವಾಸಿಯ ಮಧುಕೇಶ್ವರ ದೇವಾಲಯವು ಅವರ ಶ್ರೇಷ್ಠ ಕೊಡುಗೆಯಾಗಿದೆ. ಇವರ ಕಾಲದ ಭಿತ್ತಿ ಚಿತ್ರಗಳು ಅಷ್ಟೊಂದು ಕಂಡುಬರುವದಿಲ್ಲ.

ಬದಾಮಿ ಚಾಲುಕ್ಯರ ಕಾಲದಲ್ಲಿ ಚಿತ್ರಕಲೆಯು ಸಮೃದ್ಧವಾಗಿ ಬೆಳೆದುಬಂದಿತ್ತು. ಭಿತ್ತಿ ಚಿತ್ರಕಲೆ ಇವರ ಕಾಲದಲ್ಲಿ ಮುಖ್ಯವಾದ ಚಿತ್ರಕಲಾ ಮಾಧ್ಯಮವಾಗಿದ್ದು. ಅಜಂತಾದಲ್ಲಿನ ಕೆಲವು ಗುಹೆಗಳಲ್ಲಿ ಚಿತ್ರರಚನೆಗಳಿಗೆ ಚಾಲುಕ್ಯರೇ ಪೋಷಕರಾಗಿ ನಿಂತರು. ಅಜಂತಾದಲ್ಲಿನ ಬೋಧಿಸತ್ವ ಪದ್ಮಪಾಣಿ, ರಾಣಿಯರು, ಅವರ ಪರಿವಾರ, ಪುಲಕೇಶಿಯ ದರ್ಬಾರು ಮುಂತಾದ ಗಮನಾರ್ಹ ಕೃತಿಗಳು ಚಾಲುಕ್ಯ ಅರಸರ ಕಾಲದ್ದಾಗಿವೆ. ಬದಾಮಿ ಚಾಲುಕ್ಯ ದೊರೆಗಳಲ್ಲಿ ಮಂಗಳೇಶನು ಭಿತ್ತಿ ಚಿತ್ರಕಲೆಗೆ ಹೆಚ್ಚಿನ ಪ್ರೋತ್ಸಾಹ ನೀಡಿದನು. ಇವನ ಕಾಲದಲ್ಲಿ ಬಾದಾಮಿ ವೈಷ್ಣವ ಗುಹೆಯಲ್ಲಿ ಭಿತ್ತಿ ಚಿತ್ರಗಳು ರಚನೆಯಾದವು. ಚಾಲುಕ್ಯರಲ್ಲಿ ಪ್ರಸಿದ್ಧನಾದ ಎರಡನೇ ಪುಲಕೇಶಿಯ ಪೋಷಣೆಯಲ್ಲಿಯೂ ಭಿತ್ತಿ ಚಿತ್ರರಚನೆ ನಡೆದಿದೆ. ಅಜಂತಾದ ಒಂದನೇ ಗುಹೆಯು ಈತನ ಕಾಲದ ಚಿತ್ರಗಳನ್ನು ಹೊಂದಿದೆ. ಶಾಸನದಿಂದ ಆ ಕಾಲದ ಕಲಾ ಚಟುವಟಿಕೆ ಹಾಗೂ ಕಲಾ ಸಂಪ್ರದಾಯಗಳ ವಿವರಗಳೂ ದೊರೆಯುತ್ತವೆ. ಚಾಲುಕ್ಯ ದೊರೆಗಳು ಗುಹೆ ಮತ್ತು ಕಟ್ಟಡ ಎಲ್ಲಾ ಭಾಗಗಳನ್ನು ಬಣ್ಣದಿಂದ ಅಲಂಕರಿಸುವ ಹವ್ಯಾಸ ಉಳ್ಳವರಾಗಿದ್ದರು. ಬದಾಮಿಯ ಚಾಲುಕ್ಯರಲ್ಲಿ ಜಯಸಿಂಹ, ರಣರಾಗ, ೧ನೇ ಪುಲಕೇಶಿ, ಕೀರ್ತಿವರ್ಮ, ಮಂಗಳೇಶ, ೨ನೇ ಪುಲಕೇಶಿ, ೧ನೇ ವಿಕ್ರಮಾದಿತ್ಯ, ವಿನಯಾದಿತ್ಯ, ವಿಜಯಾದಿತ್ಯರಂತಹ ಪ್ರಬಲ ದೊರೆಗಳು ರಾಜ್ಯವಾಳಿದ್ದು, ಇವರಲ್ಲಿ ೨ನೇ ಪುಲಕೇಶಿಯು ಬಹುಮಟ್ಟಿಗೆ ದಕ್ಷಿಣಭಾರತವನ್ನು ತನ್ನ ಒಡಿತದಲ್ಲಿ ತಂದಿದ್ದನಲ್ಲದೇ, ಉತ್ತರಾಪಥೇಶ್ವರನೆನಿಸಿದ

---

೫೫. ಅ. ಸುಂದರ (ಸಂ) : ಕರ್ನಾಟಕ ಚರಿತ್ರೆ (ಸಂಪುಟ ೧), ಪುಟ ೩೦೮

ಹರ್ಷವರ್ಧನನನ್ನು ನರ್ಮದಾ ನದಿಯ ದಂಡೆಯ ಮೇಲೆ ಸೋಲಿಸಿದನು. ಬದಾಮಿಯ ಚಾಲುಕ್ಯರ ಕಾಲದಲ್ಲಿ ಇಡೀ ದಖ್ಖನ್ ಪ್ರದೇಶವು ಒಂದು ರಾಜಕೀಯ ಪ್ರಭುತ್ವಕ್ಕೆ ಒಳಪಟ್ಟಿತ್ತು. ರಾಜಕೀಯ ಸ್ಥಿರತೆಗೆ ಆರ್ಥಿಕ ಸಮೃದ್ಧಿ ಸೇರಿಕೊಂಡು ದೇವಾಲಯಗಳ ನಿರ್ಮಾಣ, ಶಿಲ್ಪಗಳ ಕೆತ್ತನೆ, ಗುಹಾಲಯಗಳನ್ನು ಕೊರೆಯುವಿಕೆ, ಅವುಗಳನ್ನು ಶಿಲ್ಪ ಮತ್ತು ಚಿತ್ರಗಳಿಂದ ಅಲಂಕರಿಸುವುದು ಇಂತಹ ಕಲಾ ಚಟುವಟಿಕೆಗಳಿಗೆ ದಾರಿ ಮಾಡಿಕೊಟ್ಟವು. ಅದುವರೆಗೆ ಬೌದ್ಧ, ಜೈನ ಮತಾವಲಂಬಿ ಭಿತ್ತಿ ಚಿತ್ರಗಳು ರಚನೆಯಾಗುತ್ತಿದ್ದರೆ, ಇವರ ಕಾಲದಲ್ಲಿ ಮೊದಲ ಬಾರಿಗೆ ವೈದಿಕ ಪರವಾದ ಚಿತ್ರರಚನೆ ಮಾಡಲಾಯಿತು. ಬಾದಾಮಿ ಚಾಲುಕ್ಯರಲ್ಲಿ ರಣರಾಗ, ೧ನೇ ಪುಲಕೇಶಿ, ಮಂಗಳೇಶ ಇವರ ಕಾಲದಲ್ಲಿ ರಚನೆಯಾದ ಭಿತ್ತಿಚಿತ್ರಗಳು ಕಂಡುಬರುತ್ತವೆ.

**ರಾಷ್ಟ್ರಕೂಟರು :** ಸುಮಾರು ಕ್ರಿ. ಶ. ೮ ನೇ ಶತಮಾನದ ಮಧ್ಯಭಾಗದಿಂದ ಎರಡು ಶತಮಾನಗಳಿಗೂ ಹೆಚ್ಚುಕಾಲ ರಾಷ್ಟ್ರಕೂಟರು ದಕ್ಷಿಣದ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಮಹತ್ವದ ಪಾತ್ರ ವಹಿಸಿ ಕಲೆ ಮತ್ತು ವಾಸ್ತುಶಿಲ್ಪಗಳ ಪ್ರಮುಖ ಪೋಷಕರಾದರು. ೧ನೇ ಕೃಷ್ಣ, ಧ್ರುವ, ೧ನೇ ಅಮೋಘವರ್ಷ, ೩ನೇ ಕಷ್ಣರಂತಹ ಅರಸರು ಕಲಾಭಿಮಾನಿ ದೊರೆಗಳಾಗಿದ್ದು ಇವರುಗಳ ಆಡಳಿತಾವಧಿಯಲ್ಲಿ ಶ್ರೇಷ್ಟ ಕಲಾಕೃತಿಗಳು ನಿರ್ಮಾಣವಾದವು. ಕೆಲವು ದೊರೆಗಳು ಸ್ವತಃ ತಾವೇ ದೇವಾಲಯಗಳನ್ನು ಕಟ್ಟಿಸಿದರೆ ಇನ್ನು ಕೆಲವರು ಬೇರೆಯವರು ಕಟ್ಟಿಸಿದ ದೇವಾಲಯಗಳನ್ನು ವಿಸ್ತರಿಸುವುದು, ಜೀರ್ಣೋದ್ಧಾರಗೊಳಿಸುವುದು, ಅವುಗಳಿಗೆ ಉದಾರವಾದ ದಾನದತ್ತಿಗಳನ್ನು ನೀಡುವ ಮೂಲಕ ಕಲಾ ಪೋಷಕರೆನಿಸಿಕೊಂಡಿದ್ದಾರೆ. ಅರಸರಂತೆಯೇ ಅವರ ಕೆಲವು ಸಾಮಂತರು, ಉನ್ನತ ಅಧಿಕಾರಿಗಳು ಕಲೆಯನ್ನು ಪೋಷಿಸಿಕೊಂಡು ಬಂದರು. ರಾಷ್ಟ್ರಕೂಟರ ಸಾಮಂತನಾದ ಗಂಗವಂಶದ ಭೂತುಗ, ಉನ್ನತ ಅಧಿಕಾರಿಯಾಗಿದ್ದ ಬಂಕೆಯ ಇವರುಗಳು ಬಸದಿ ನಿರ್ಮಾಣ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದು [೫೬] ತಿಳಿದುಬರುತ್ತದೆ. ಬದಾಮಿ ಚಾಲುಕ್ಯರ ಆಳಿಕೆಯಲ್ಲಿ ದೇವಾಲಯ ನಿರ್ಮಾಣಗಳಂತಹ ಕಲಾ ಚಟುವಟಿಕೆಗಳು ಕೆಲವು ಕೇಂದ್ರಗಳಿಗೆ ಸೀಮಿತವಾಗಿದ್ದರೆ, ರಾಷ್ಟ್ರಕೂಟರ ಆಳಿಕೆಯಲ್ಲಿ ಹೆಚ್ಚು ಹೆಚ್ಚು ನಗರ ಮತ್ತು ಗ್ರಾಮಗಳಲ್ಲಿ ದೇಗುಲಗಳ ನಿರ್ಮಾಣ [೫೭] ನಡೆದದ್ದು ಕಂಡುಬರುವುದು.

ರಾಷ್ಟ್ರಕೂಟರು ಬದಾಮಿ ಚಾಲುಕ್ಯರಂತೆಯೇ ಕಲ್ಲಿನಲ್ಲಿ ಕೊರೆದ ಗುಹಾದೇವಾಲಯಗಳನ್ನು ಸಕ್ರಿಯವಾಗಿ ಪೋಷಿಸಿದರು. ಇವರ ಇಂತಹ ನಿರ್ಮಾಣಗಳು ಎಲ್ಲೋರಾ, ಎಲಿಫೆಂಟಾ, ಜೋಗೇಶ್ವರಿ, ಧಾರೇಶ್ವರಿಗಳಲ್ಲಿ ಕಂಡುಬರುತ್ತವೆ. ಭಿತ್ತಿಚಿತ್ರಕಲೆಯ ದೃಷ್ಟಿಯಿಂದ ಎಲ್ಲೋರಾ ಗುಹೆಗಳು ಗಮನಾರ್ಹವೆನಿಸುತ್ತವೆ. ೧ನೇ ಕೃಷ್ಣನ ಕಾಲದಲ್ಲಿ ನಿರ್ಮಿಸಲಾದ ಕೈಲಾಸ ದೇವಾಲಯವು ಒಂದೇ ಅಖಂಡ ಬಂಡೆಯನ್ನು ಕೊರೆದು ರಚಿಸಲಾದ ಕೃತಿಯಾಗಿದ್ದು ಇದರ ಗೋಡೆಗಳಲ್ಲಿ, ಮೇಲ್ಛಾವಣಿಯಲ್ಲಿ ಮತ್ತು ಮಂಟಪದ ಕಮಾನಗಳಲ್ಲಿ ಭಿತ್ತಿ ಚಿತ್ರಗಳನ್ನು ರಚಿಸಲಾಗಿದೆ. [೫೮] ಇಲ್ಲಿನ ಚಿತ್ರಗಳಲ್ಲಿ ನಾಟ್ಯವಾಡುತ್ತಿರುವ ನಟರಾಜ, ಗರುಡನ ಮೇಲೆ ಕುಳಿತು ಹೊರಟ ಲಕ್ಷ್ಮೀನಾರಾಯಣ, ಹಾರುತ್ತಿರುವ ವಿದ್ಯಾಧರರು, ಆನೆಗಳು, ಇತರ ಪ್ರಾಣಿ-ಪಕ್ಷಿಗಳು ಮುಖ್ಯವಾಗಿವೆ. ಹಾಗೇ ಹೂ-ಬಳ್ಳಿಯ ವೈವಿಧ್ಯ ನಕ್ಷೆಯ ಚಿತ್ರಣದಿಂದ ಖಾಲೀ ಸ್ಥಳಗಳನ್ನು ತುಂಬಲಾಗಿದೆ. ಇವುಗಳಲ್ಲದೇ ರಾಷ್ಟ್ರಕೂಟರ ಕೊನೆಗಾಲದಲ್ಲಿ

---

೫೬. ಪ್ರೊ. ಬಿ. ಸುರೇಂದ್ರರಾವ್ : ಕರ್ನಾಟಕ ಚರಿತ್ರೆ (ಸಂಪುಟ ೨), ಪುಟ ೨೫೦

೫೭. ಪ್ರೊ. ಬಿ. ಸುರೇಂದ್ರರಾವ್ : ಕರ್ನಾಟಕ ಚರಿತ್ರೆ (ಸಂಪುಟ ೨), ಪುಟ ೨೫೧

೫೮. C. Sivaramamurti : Indian Painting, Page 61

ನಿರ್ಮಿಸಲಾದ ಎಲ್ಲೋರಾದ ಜೈನ ಗುಹಾಲಯಗಳಲ್ಲಿಯೂ ಭಿತ್ತಿಚಿತ್ರಗಳು ರಚನೆಯಾಗಿವೆ. ಇಲ್ಲಿ ಮುಖ್ಯವಾಗಿ ಜೈನ ಧಾರ್ಮಿಕ ಸಾಹಿತ್ಯವನ್ನು ಆಧರಿಸಿ ಚಿತ್ರ ರಚಿಸಿದ್ದರೂ ಅದರ ಜೊತೆಗೇ ಪ್ರಾಣಿ, ಪಕ್ಷಿಗಳು, ಹೂ-ಬಳ್ಳಿಗಳು ನಕ್ಷಾ ರೂಪಗಳೂ ಚಿತ್ರಿಸಿದ್ದು ಕಂಡುಬರುತ್ತವೆ. ಈ ಭಿತ್ತಿ ಚಿತ್ರಗಳಲ್ಲದೇ ಉತ್ತರ ಕರ್ನಾಟಕದ ರೋಣ ಸಮೀಪದ ಸವಡಿ ಗ್ರಾಮದಲ್ಲಿ ನಿರ್ಮಾಣವಾದ ರಾಷ್ಟ್ರಕೂಟರ ಕಾಲದ ಬ್ರಹ್ಮದೇವಾಲಯದಲ್ಲಿ ಭಿತ್ತಿಚಿತ್ರಗಳಿವೆ[೫೯] ಎಂಬ ಸಂಗತಿ ತಿಳಿದುಬರುತ್ತಿದ್ದು ಇಂದು ಅಲ್ಲಿ ಚಿತ್ರಗಳು ಹಾಳಾಗಿವೆ.

**ಕಲ್ಯಾಣ ಚಾಲುಕ್ಯರು :** ಕ್ರಿ. ಶ. ೯೭೩ ರಿಂದ ರಾಜ್ಯವಾಳಿದ ಕಲ್ಯಾಣದ ಚಾಲುಕ್ಯರು ಕಲಾ ಪೋಷಕರಾಗಿ ಅನೇಕ ದೇವಾಲಯ. ಬಸದಿಗಳಿಗೆ ಆಶ್ರಯ ನೀಡಿದರು. ಕಲ್ಯಾಣ ಚಾಲುಕ್ಯರ ಪೋಷಣೆಯಲ್ಲಿ[೬೦] ರಾಜರು, ರಾಣಿಯರು, ದಂಡನಾಯಕರು. ಸಂಸ್ಥೆಗಳು. ವರ್ತಕರಿಂದ ಅಸಂಖ್ಯಾತ ದೇವಾಲಯಗಳ ನಿರ್ಮಾಣ ಕಾರ್ಯ ನಡೆದಿದ್ದರೂ ಭಿತ್ತಿ ಚಿತ್ರಗಳ ಪ್ರತ್ಯಕ್ಷ ಉದಾಹರಣೆಗಳು ಕಂಡುಬರುವುದು ತೀರ ಅಪರೂಪ. ಆರನೇ ವಿಕ್ರಮಾದಿತ್ಯನ ಮಗನಾದ ಮೂರನೇ ಸೋಮೇಶ್ವರನು ಮಾನಸೋಲ್ಲಾಸವೆಂಬ ಕೃತಿ ರಚಿಸಿದ್ದು ಅದರಲ್ಲಿ ಭಿತ್ತಿಚಿತ್ರಗಳ ರಚನಾವಿಧಾನ, ಬಣ್ಣ, ಕುಂಚಗಳ ಬಗೆಗೆ ವಿವರಪೂರ್ಣವಾದ ಮಾಹಿತಿ ಇದ್ದರೂ ಆ ಕಾಲದ ಭಿತ್ತಿಚಿತ್ರಗಳು ಹೆಚ್ಚಾಗಿ ಕಂಡುಬಂದಿಲ್ಲ. ಆಂಧ್ರಪ್ರದೇಶದ[೬೧] ಒಂದು ಮನೆಯಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಭಿತ್ತಿಚಿತ್ರಗಳು ಕಂಡುಬಂದಿರುವುದನ್ನು ಗುರುತಿಸಲಾಗಿದೆ.

**ಹೊಯ್ಸಳರು :** ಕಲ್ಯಾಣ ಚಾಲುಕ್ಯರ ನಂತರ ಅವರ ಸಾಮಂತರಾಗಿದ್ದ ಹೊಯ್ಸಳರು ದಕ್ಷಿಣ ಕರ್ನಾಟಕ ಪ್ರದೇಶದ ಅಧಿಪತಿಗಳಾದರು. ಹಿಂದಿನ ಕಲ್ಯಾಣ ಚಾಲುಕ್ಯರ ವಾಸ್ತುಶಿಲ್ಪ ಒಲವುಗಳನ್ನು ಹೊಯ್ಸಳರು ಹೆಚ್ಚುಕಡಿಮೆ ಅವಿದ್ದಂತೆಯೇ ಅಳವಡಿಸಿಕೊಂಡು ಅವುಗಳಿಗೆ ತಮ್ಮದೇ ಆದ ಕೆಲವು ವಿಶಿಷ್ಟ ಮಾರ್ಪಾಡುಗಳನ್ನು[೬೨] ತಂದರೆಂದು ಹೇಳಬಹುದು. ಕಲ್ಯಾಣ ಚಾಲುಕ್ಯರ ಕಾಲದಂತೆಯೇ ಹೊಯ್ಸಳ ಆಳಿಕೆಯಲ್ಲೂ ಕಲಾ ಪೋಷಣೆಗೆ ರಾಜಾಶ್ರಯದ ಕೊರತೆ ಇರಲಿಲ್ಲ. ರಾಜರು. ರಾಣಿಯರು. ರಾಜ ಪರಿವಾರದ ಸದಸ್ಯರು, ಮಂತ್ರಿಗಳು, ದಂಡನಾಯಕರು ಕಲಾ ಪೋಷಕರಾಗಿದ್ದು ಕಲಾಕೃತಿಗಳ ನಿರ್ಮಾಣಕ್ಕೆ ಕಾರಣೀಭೂತರಾಗಿದ್ದಾರೆ.

ಭಿತ್ತಿ ಚಿತ್ರಕಲೆಯ ದೃಷ್ಟಿಯಿಂದ ಹಿಂದಿನ ಕಲ್ಯಾಣ ಚಾಲುಕ್ಯರ ಅವಧಿಗಿಂತ ಹೊಯ್ಸಳರ ಕಾಲದಲ್ಲಿ ಹೆಚ್ಚಿನ ಭಿತ್ತಿಚಿತ್ರಗಳು ರಚನೆಯಾಗಿದ್ದು ಕಂಡುಬರುವುದು. ಕಲ್ಯಾಣ ಚಾಲುಕ್ಯರ ಕಾಲದ ಭಿತ್ತಿ ಚಿತ್ರ ನಿದರ್ಶನ ಕರ್ನಾಟಕದಲ್ಲಿ ಈವರೆಗೆ ಕಂಡುಬರದೇ ಇದ್ದರೆ, ಹೊಯ್ಸಳರ ಕಾಲಾವಧಿಯ ಭಿತ್ತಿ ಚಿತ್ರಗಳು ಕರ್ನಾಟಕದ ಜಕ್ಕನಹಳ್ಳಿ, ಶ್ರವಣಬೆಳಗೊಳ ಮೂಡಬಿದರೆ, ಹಳೇಬಿಡು, ಸೊಸೆಊರುಗಳಲ್ಲಿ[೬೩] ಕಂಡುಬಂದಿವೆ. ಹಾಸನ ತಾಲೂಕಿನ ಜಕ್ಕನಹಳ್ಳಿಯ ಕಾಳೇಶ್ವರ ದೇವಾಲಯವನ್ನು ಕ್ರಿ. ಶ. ೧೧೬೦ ರಲ್ಲಿ ಹೊಯ್ಸಳ ರಾಜ ೧ನೇ ನರಸಿಂಹನ ಅಧಿಕಾರಿ ಹೆಗ್ಗಡೆ ಕಾಳಿಮಯ್ಯನು ಕಟ್ಟಿಸಿ ಅದರಲ್ಲಿ ಭಿತ್ತಿ ಚಿತ್ರಗಳನ್ನು ಬರೆಸಿದನು.[೬೪] ಅಂತೆಯೇ ತಮಿಳುನಾಡಿನ ಶ್ರೀರಂಗದಲ್ಲಿ ಕ್ರಿ. ಶ. ೧೨೨೦ ರಲ್ಲಿ

---

೫೯. ಡಾ. ಅ. ಲ. ನರಸಿಂಹನ್ : ಕರ್ನಾಟಕ ಭಿತ್ತಿ ಚಿತ್ರ ಪರಂಪರೆ, ಪುಟ ೧೯೪

೬೦. ಪ್ರೊ. ಬಿ. ಸುರೇಂದ್ರರಾವ್ (ಸಂ) : ಕರ್ನಾಟಕ ಚರಿತ್ರೆ, (ಸಂಪುಟ ೨), ಪುಟ ೨೫೩

೬೧. ಡಾ. ಅ. ಸುಂದರ ಅವರು ಈ ವಿವರವನ್ನು ನೀಡಿದ್ದಾರೆ.

೬೨. ಪ್ರೊ. ಬಿ. ಸುರೇಂದ್ರರಾವ್ (ಸಂ) : ಕರ್ನಾಟಕ ಚರಿತ್ರೆಮಾಲೆ (ಸಂಪುಟ ೨), ಪುಟ ೨೬೨

೬೩. ಅ. ಲ. ನರಸಿಂಹನ್ : ಕರ್ನಾಟಕ ಭಿತ್ತಿ ಚಿತ್ರಕಲೆ, ಪುಟ ೧೯೩

೬೪. ಬಿ. ವಿ. ಕೆ. ಶಾಸ್ತ್ರೀ : ಕರ್ನಾಟಕ ಭಿತ್ತಿ ಚಿತ್ರಗಳು, ಪುಟ ೧೫

ಕಟ್ಟಲಾಗಿರುವ ವೇಣುಗೋಪಾಲ ದೇವಾಲಯದಲ್ಲಿಯೂ[೬೫] ಹೊಯ್ಸಳ ದೊರೆಗಳು ಬರೆಸಿದ ಭಿತ್ತಿ ಚಿತ್ರಗಳು ಕಂಡುಬರುತ್ತವೆ. ಮೂಡಬಿದಿರೆಯ ಜೈನಮಠದಲ್ಲಿ, ಶ್ರವಣಬೆಳಗೊಳದ ಚಾವುಂಡರಾಯ ಬಸದಿ ಮತ್ತು ಶಾಂತಿನಾಥ ಬಸದಿಗಳಲ್ಲಿ,[೬೬] ಹೊಯ್ಸಳರು ಬರೆಸಿದ ಭಿತ್ತಿ ಚಿತ್ರಗಳಿವೆ.

**ವಿಜಯನಗರದ ಅರಸರು :** ವಿಜಯನಗರ ರಾಜರು ಹೆಚ್ಚುಕಡಿಮೆ ಇಡೀ ದಕ್ಷಿಣ ಭಾರತವನ್ನು ಆಳಿದರು. ಕಲೆ ಮತ್ತು ವಾಸ್ತುಶಿಲ್ಪ ರಂಗದಲ್ಲಿ ಇವರ ಕೊಡುಗೆ ಮಹತ್ವದ್ದಾಗಿದೆ. ದಕ್ಷಿಣ ಭಾರತದಾದ್ಯಂತ ಹರಡಿಕೊಂಡಿರುವ ಇವರ ಕಲಾನಿರ್ಮಿತಿಗಳು ಅವರ ಕಲಾ ಪೋಷಣೆಯನ್ನು ತಿಳಿಸಿಕೊಡುತ್ತವೆ. ವಿಜಯನಗರ ಕಾಲದಲ್ಲಿ ದೇವಾಲಯ, ಮೂರ್ತಿಶಿಲ್ಪ ರಚನೆ ನಡೆದಂತೆಯೇ ಭಿತ್ತಿ ಚಿತ್ರರಚನೆಯೂ ನಡೆದುಕೊಂಡು ಬಂದಿತು. ಹಿಂದಿನ ಕಲ್ಯಾಣ ಚಾಲುಕ್ಯರು ಮತ್ತು ಹೊಯ್ಸಳರ ಕಾಲದಲ್ಲಿ ಮಂದಗಾಮಿಣಿಯಾಗಿದ್ದ ಭಿತ್ತಿ ಚಿತ್ರಕಲಾ ಪರಂಪರೆಯನ್ನು ಇವರು ಮತ್ತೆ ಪುನರುಜ್ಜೀವನಗೊಳಿಸಿದರು. ವಿಜಯನಗರ ದೊರೆಗಳು ತಮ್ಮ ಅರಮನೆಗಳು, ದೇವಾಲಯಗಳಲ್ಲಿ ಭಿತ್ತಿ ಚಿತ್ರ ರಚಿಸುತ್ತಿದ್ದುದು ಸಾಮಾನ್ಯವಾಗಿದ್ದರೂ ಹೆಚ್ಚಿನದಾಗಿ ಇವರ ಕಾಲದಲ್ಲಿ ದೇವಾಲಯದ ಆವರಣದಲ್ಲಿ ರಂಗಮಂಟಪ, ಕಲ್ಯಾಣ ಮಂಟಪ, ಉಯ್ಯಾಲೆ ಮಂಟಪ, ವಸಂತಮಂಟಪ, ರಥೋತ್ಸವ ಮಂಟಪಗಳಂತಹ ವಾಸ್ತುಕೃತಿಗಳನ್ನು ನಿರ್ಮಿಸಿ[೬೭] ಅವುಗಳನ್ನು ಭಿತ್ತಿ ಚಿತ್ರಗಳಿಂದ ಅಲಂಕರಿಸುತ್ತಿದ್ದುದು ಕಂಡುಬರುತ್ತದೆ. ಇದು ಭಿತ್ತಿ ಚಿತ್ರರಚನೆಯ ದೃಷ್ಟಿಯಿಂದ ಅತ್ಯಂತ ಗಮನಾರ್ಹ ಬೆಳವಣಿಗೆ ಎನ್ನಬಹುದು. ಇಂತಹ ಚಿತ್ರ ಮಂಟಪಗಳನ್ನು ಹಂಪಿಯ ವಿರೂಪಾಕ್ಷ ದೇವಾಲಯ, ವಿಠ್ಠಲ ದೇವಾಲಯ, ಲೇಪಾಕ್ಷಿಯ ವೀರಭದ್ರ ದೇವಾಲಯ, ಕಂಚೀಪುರದ ವರದರಾಜ ದೇವಾಲಯ, ವೆಲ್ಲೂರಿನ ಜಲಕಂಠೇಶ್ವರ ದೇವಾಲಯಗಳಲ್ಲಿ[೬೮] ಕಾಣಬಹುದು.

ವಿಜಯನಗರ ದೊರೆಗಳ ಪೋಷಣೆಯಲ್ಲಿ ರಚಿಸಲಾದ ಭಿತ್ತಿ ಚಿತ್ರಗಳು ಹಂಪೆಯ ವಿರೂಪಾಕ್ಷ ದೇವಾಲಯ, ಆನೆಗೊಂದಿಯ ಹುಚ್ಚಪ್ಪಯ್ಯಮಠದಲ್ಲಿ ಇವೆ. ಇವುಗಳ ಬಗ್ಗೆ ಮುಂದೆ ವಿವರವಾಗಿ ಹೇಳಲಾಗಿದೆ. ಹಾಗೇ ವಿಜಯನಗರ ದೊರೆಗಳ ಪ್ರೋತ್ಸಾಹದಿಂದ ತಮಿಳುನಾಡಿನ ಅನೇಕ ಸ್ಥಳಗಳಲ್ಲೂ ಭಿತ್ತಿ ಚಿತ್ರರಚನೆಗೊಂಡಿವೆ. ಉತ್ತರ ಅರ್ಕಾಟ್ ಜಿಲ್ಲೆಯ ತಿರುವಣ್ಣಾಮಲೈದಲ್ಲಿ ಗೋಪುರ ಮತ್ತು ಎಳತ್ತು ಮಂಟಪಗಳನ್ನು ಕೃಷ್ಣದೇವರಾಯನು ಕಟ್ಟಿಸಿ ಅವುಗಳಲ್ಲಿ ಭಿತ್ತಿ ಚಿತ್ರಗಳನ್ನು ಬರೆಸಿದ್ದಾನೆ[೬೯] ಎಂದು ತಿಳಿದುಬರುವುದು. ಬೇಟೆಯ ದೃಶ್ಯಗಳು, ಸಾಮಾಜಿಕ ವಸ್ತುಗಳನ್ನು ಹೊಂದಿದ ಈ ಚಿತ್ರಗಳು ಹಂಪಿಯ ವಿರೂಪಾಕ್ಷ ದೇವಾಲಯದ ಚಿತ್ರಶೈಲಿಗೆ ಹೋಲಿಕೆಯಾಗುತ್ತವೆ. ತಲೆಯ ಮೇಲಿನ ಉದ್ದ ಟೋಪಿಗಳು. ಹಂಪಿ ಹಾಗೂ ಲೇಪಾಕ್ಷಿಯ ಚಿತ್ರಗಳನ್ನು ನೆನಪಿಸುತ್ತವೆ. ತಮಿಳುನಾಡಿನ ಚೆಂಗಲ್‌ಪಟ್ಟು ಜಿಲ್ಲೆಯಲ್ಲಿನ ಕಂಚಿಯ ವರದರಾಜ ದೇವಾಲಯವನ್ನು ಅಚ್ಯುತದೇವರಾಯನು ವಿಸ್ತರಿಸಿ ಕಟ್ಟಿಸಿದ್ದು ಆತನ ಕಾಲದ ಭಿತ್ತಿ ಚಿತ್ರಗಳೂ[೭೦] ಇಲ್ಲಿ ರಚನೆಗೊಂಡಿವೆ. ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ೧೦೮ ದಿವ್ಯದಾಸರ ಚಿತ್ರಗಳನ್ನು ಇಲ್ಲಿ ರಚಿಸಲಾಗಿದೆ. ತಿರುಚನಾಪಳ್ಳಿ ಜಿಲ್ಲೆಯ ಶ್ರೀರಂಗಂ ಸಮೀಪದ ತಿರುವಲ್ಲರೈನಲ್ಲಿ ವಿಜಯನಗರದ ಕಾಲದ

---

೬೫. ಅ. ಲ. ನರಸಿಂಹನ್ : ತಮಿಳುನಾಡಿನಲ್ಲಿ ಚಿತ್ರಕಲೆ, ಪುಟ ೧೧

೬೬. ಅ. ಲ. ನರಸಿಂಹನ್ : ಕರ್ನಾಟಕ ಭಿತ್ತಿ ಚಿತ್ರ ಪರಂಪರೆ, ಪುಟ ೧೯೩

೬೭. ಪ್ರೊ. ಕೆ. ಎಸ್. ಶಿವಣ್ಣ (ಸಂ) : ಕರ್ನಾಟಕ ಚರಿತ್ರೆ (ಸಂಪುಟ ૩), ಪುಟ ೩೫೭

೬೮. C. Sivaramamurti : Indian Painting, Page 75

೬೯. ಅ. ಲ. ನರಸಿಂಹನ್ : ತಮಿಳುನಾಡಿನಲ್ಲಿ ಚಿತ್ರಕಲೆ, ಪುಟ ೧೧

೭೦. ಅ. ಲ. ನರಸಿಂಹನ್ : ತಮಿಳುನಾಡಿನಲ್ಲಿ ಚಿತ್ರಕಲೆ, ಪುಟ ೧೧

ಭಿತ್ತಿಚಿತ್ರಗಳಿವೆ ಎನ್ನಲಾಗಿದ್ದು,[೭೧] ರಾಮಾಯಣದ ಘಟನೆಗಳನ್ನಾಧರಿಸಿ ರಚಿಸಿದ ಈ ಚಿತ್ರಗಳಲ್ಲಿಯೂ ಲೇಪಾಕ್ಷಿಯ ಚಿತ್ರಗಳಂತೆ ತಲೆಯ ಮೇಲೆ ಉದ್ದನೆಯ ಟೋಪಿ ಇದ್ದು ವಿಜಯನಗರ ಶೈಲಿಯನ್ನು ಪ್ರತಿಬಿಂಬಿಸುತ್ತವೆ. ತಿರುನಲ್ವೇಲಿ ಜಿಲ್ಲೆಯ ' ತಿರುಪ್ಪಡಿ ಮರದೂರ್ ' ಎಂಬಲ್ಲಿನ ದೇವಾಲಯದಲ್ಲಿ ವಿಜಯನಗರ ಶೈಲಿಯ ಕ್ರಿ. ಶ. ೧೬ ನೇ ಶತಮಾನದ ಭಿತ್ತಿಚಿತ್ರಗಳು ರಚನೆಯಾಗಿವೆ.[೭೨] ಇಲ್ಲಿ ಅರಬ್ ದೇಶಿಯರು ತಮ್ಮ ಹಡಗುಗಳಲ್ಲಿ ಕುದುರೆಗಳನ್ನು ಸಾಗಿಸುತ್ತಿರುವ ದೃಶ್ಯ. ಹಡಗಿನಲ್ಲಿ ಊಟ ಮಾಡುವುದು. ಪಾನಗೋಷ್ಠಿ, ಅಲಂಕಾರ ಮಾಡಿಕೊಳ್ಳುತ್ತಿರುವುದು, ಸೈನ್ಯವು ಸಾಲಾಗಿ ಹೋಗುತ್ತಿರುವುದು. ಅವರ ಸಂಗಡ ಸೈನಿಕರ ಕುಟುಂಬಗಳೂ ಹೋಗುತ್ತಿರುವ ಚಿತ್ರಗಳನ್ನು ರಚಿಸಲಾಗಿದೆ. ಚಂಗಲ್‌ಪಟ್ಟು ಜಿಲ್ಲೆಯ ಕಂಚೀಪುರಂದಲ್ಲಿನ ವರದರಾಜ ದೇವಾಲಯದಲ್ಲಿನ ಒಂದು ಮಂಟಪದಲ್ಲಿ ವಿಜಯನಗರ ದೊರೆಗಳು ಬರೆಸಿದ ಭಿತ್ತಿ ಚಿತ್ರಗಳು ಇವೆ. ಶೈವಪರವಾದ ಚಿತ್ರಗಳಿದ್ದು,[೭೩] ಮನ್ಮಥ ವಿಜಯ ದೃಶ್ಯವು ಅತ್ಯಂತ ಮೋಹಕವಾಗಿ ರಚಿಸಿದ್ದದು ಇಲ್ಲಿ ಕಂಡುಬರುವುದು.

ಚಂಗಲ್‌ಪೇಟೆ ಜಿಲ್ಲೆಯ ಕಾಂಚೀಪುರದ ವೈಕುಂಠ ಪೆರುಮಾಳ್ ದೇವಾಲಯದಲ್ಲಿ[೭೪] ವಿಜಯನಗರ ದೊರೆಗಳ ಪ್ರೋತ್ಸಾಹದ ಭಿತ್ತಿ ಚಿತ್ರಗಳಿವೆ. ಕೆಂಪು, ಹಳದಿ. ನೀಲಿ. ತೆಳುಹಸಿರು ವರ್ಣಗಳ ಜೊತೆಗೆ ಬಂಗಾರ ಮತ್ತು ಬೆಳ್ಳಿಯ ಲೋಹಗಳಿಂದ ತಯಾರಿಸಿದ ವರ್ಣಗಳನ್ನೂ ಇಲ್ಲಿ ಬಳಸಲಾಗಿದೆ. ಈ ದೇವಾಲಯದ ' ಅಂಡಾಳ್ ಉಂಜಿಲ್ ' ಎಂಬ ಮಂಟಪದಲ್ಲಿ ಚಂಗಲ್‌ಪೇಟೆ ಜಿಲ್ಲೆಯ ತಿರುಪರುತ್ತಿಕನರಮ್‌ದಲ್ಲಿನ ' ವರ್ಧಮಾನ ' ದೇವಾಲಯದಲ್ಲಿ[೭೫] ಕೂಡಾ ವಿಜಯನಗರ ಅರಸರ ಭಿತ್ತಿಚಿತ್ರಗಳು ರಚನೆಯಾಗಿವೆ. ಈ ದೇವಾಲಯದ ಮುಖಮಂಟಪದ ಮೇಲ್ಛಾವಣಿ ಮತ್ತು ಸಂಗೀತ ಮಂಟಪಗಳಲ್ಲಿ ಚಿತ್ರಗಳಿವೆ. ಇಲ್ಲಿ ಕೆಂಪು, ಹಳದಿ, ನೀಲಿ ಹಾಗೂ ಬಿಳಿ ಬಣ್ಣವನ್ನು ಪ್ರಮುಖವಾಗಿ ಬಳಸಲಾಗಿದೆ. ಮಧುರೈ ಜಿಲ್ಲೆಯ ಮಧುರೈ ಮೀನಾಕ್ಷಿ ದೇವಾಲಯದಲ್ಲಿ[೭೬] ವಿಜಯನಗರ ಕಾಲದ ಭಿತ್ತಿಚಿತ್ರಗಳು ರಚನೆಯಾಗಿದ್ದು, ಶಿವಲೀಲೆಗೆ ಸಂಬಂಧಿಸಿದ ಚಿತ್ರಗಳು ಇಲ್ಲಿವೆ. ಕೆಂಪು, ಹಳದಿ, ಕಪ್ಪು, ಹಸಿರು, ಬಿಳಿ ಬಣ್ಣವನ್ನು ಪ್ರಮುಖವಾಗಿ ಬಳಸಿದ್ದು ಕಂಡುಬರುವುದು. ಉತ್ತರ ಅರ್ಕಾಟ್ ಜಿಲ್ಲೆಯ ' ತಿರುವನ್ನಾಮಲೈ ' ದ ಅರುಣಾಚಲೇಶ್ವರ ದೇವಾಲಯದಲ್ಲಿ ವಿಜಯನಗರ ಕಾಲದ ಭಿತ್ತಿ ಚಿತ್ರಗಳು ಕಂಡುಬರುತ್ತವೆ. ಇಲ್ಲಿ ನೇಯ್ಗೆಯ ಎಳೆಯನ್ನು ಹೆಣೆದಂತೆ ಇರುವ ನಕ್ಷಾ ಚಿತ್ರಣವಿದ್ದು. ಇದು ಸಿತ್ತನಿವಾಸಲ್[೭೭] ಗುಹಾ ಚಿತ್ರದ ನಕ್ಷೆಯನ್ನು ನೆನಪಿಗೆ ತರುತ್ತದೆ.

ಉತ್ತರ ಅರ್ಕಾಟ್ ಜಿಲ್ಲೆಯ ಪಲು ತಾಲೂಕಿನ ತಿರುಮಲೈ ಜೈನ ದೇವಾಲಯದಲ್ಲಿ ವಿಜಯನಗರ ಕಾಲದಲ್ಲಿ ಭಿತ್ತಿ ಚಿತ್ರಗಳಿದ್ದು,[೭೮] ಚಿತ್ರಗಳಲ್ಲಿ ಹೆಚ್ಚಾಗಿ ಹೂ-ಬಳ್ಳಿಯ ನಕ್ಷೆಗಳು, ಜ್ಯಾಮಿತಿ ರೂಪದ ವಿನ್ಯಾಸಗಳು, ಕಮಲದಹೂಗಳು ರಚನೆಯಾಗಿವೆ. ಇವುಗಳಲ್ಲದೇ ತಂಜಾವೂರು ಜಿಲ್ಲೆಯ ತಿರುವಲ್ಲಿಮಲೈ, ವೆಲ್ಲೂರು, ದಕ್ಷಿಣ ಅರ್ಕಾಟ್ ಜಿಲ್ಲೆಯ ಚಿದಂಬರಮ್. ಸೇಲಂ ಜಿಲ್ಲೆಯ ಅಯೋಧ್ಯಾ ಪಟ್ಟಣ, ಚಿರುಚನಾಪಳ್ಳಿ ಜಿಲ್ಲೆಯ ಶ್ರೀರಂಗಂದ

---

೭೧. ಅ. ಲ. ನರಸಿಂಹನ್ : ತಮಿಳುನಾಡಿನಲ್ಲಿ ಚಿತ್ರಕಲೆ, ಪುಟ ೧೨

೭೨. ಅ. ಲ. ನರಸಿಂಹನ್ : ತಮಿಳುನಾಡಿನಲ್ಲಿ ಚಿತ್ರಕಲೆ, ಪುಟ ೧೨

೭೩. C. Sivaramamurti : Indian Painting, Page 78

೭೪. ಕೆ. ವಿ. ರಾಮನ್ : ವರದರಾಜ ಸ್ವಾಮಿ ಟೆಂಪಲ್. ಪುಟ ೧೭

೭೫. R. Nagaswamy : South Indian Studies, Page 78

೭೬. J. C. Nagpal : Mural Paintings in India, Page 182

೭೭. J. C. Nagpal : Mural Paintings in India, Page 184

೭೮. V. A. Smith : History of Fineatr in Indian and Ceylon, Page 45

ರಾಮಾನುಜ ಸನ್ನಿಧಿ. ಧರ್ಮಪುರಿ ಜಿಲ್ಲೆಯ ಅದಮಾನ್‌ಕೋಟ್ಟೈ, ಚಂಗಲ್‌ಪಟ್ಟು ಜಿಲ್ಲೆಯ ಉತ್ತರ ಮೇರೂರುಗಳಲ್ಲಿ [೭೯] ವಿಜಯನಗರ ಕಾಲದ ಭಿತ್ತಿಚಿತ್ರಗಳು ರಚನೆಯಾಗಿವೆ ಎಂದು ತಿಳಿದುಬರುವುದು.

ಆಂಧ್ರಪ್ರದೇಶದ ಕೆಲವು ಸ್ಥಳಗಳಲ್ಲೂ ವಿಜಯನಗರ ದೊರೆಗಳ ಪೋಷಣೆಯಡಿಯಲ್ಲಿ ರಚನೆಯಾದ ಭಿತ್ತಿಚಿತ್ರಗಳು ಕಂಡುಬರುತ್ತವೆ. ಚಿತ್ತೂರು ಜಿಲ್ಲೆಯ 'ಕಾಳಹಸ್ತಿ'ಯಲ್ಲಿರುವ ಕಣ್ಣಪ್ಪ ಬೆಟ್ಟದ ಮೇಲೆ ಶಿವದೇವಾಲಯವನ್ನು ಕೃಷ್ಣದೇವರಾಯನು ಕಟ್ಟಿಸಿದ್ದು ಇವನೇ ಬರೆಸಿದ ಭಿತ್ತಿಚಿತ್ರಗಳು ಇಲ್ಲಿವೆ. [೮೦] ಚಿತ್ರಗಳು ಶೈವ ಸಂಬಂಧಿಯಾಗಿವೆ. ಇದೇ ಚಿತ್ತೂರು ಜಿಲ್ಲೆಯ ಸೋಮಪಲ್ಲಿಯಲ್ಲಿನ ವಿಷ್ಣು ದೇವಾಲಯದಲ್ಲಿ ವಿಜಯನಗರ ದೊರೆಗಳು ಬರೆಸಿದ ಭಿತ್ತಿಚಿತ್ರಗಳಿವೆ [೮೧] ಎಂದು ತಿಳಿದುಬರುವುದು. ದೇವಾಲಯದ ಮುಖಮಂಟಪದಲ್ಲಿರುವ ಈ ಚಿತ್ರಗಳು ರಾಮಾಯಣಕ್ಕೆ ಸಂಬಂಧಿಸಿವೆ. ಕೆಂಪು, ಕಪ್ಪು ಹಾಗೂ ಹಳದಿ ವರ್ಣಗಳು ಮುಖ್ಯವಾಗಿ ಬಳಸಿದ್ದು ಗಾರೆ ಭಿತ್ತಿಯ ಮೇಲೆ ಚಿತ್ರಗಳು ರಚನೆಯಾಗಿವೆ. ಅನಂತಪುರ ಜಿಲ್ಲೆಯ ಪೆನುಗೊಂಡದಲ್ಲಿರುವ ಶಿವದೇವಾಲಯ ಮತ್ತು ರಾಮದೇವಾಲಯಗಳಲ್ಲಿ [೮೨] ಮತ್ತು ಇದೇ ಜಿಲ್ಲೆಯ ತಾಡಪತ್ರಿಯಲ್ಲಿನ ರಾಮೇಶ್ವರ ಮತ್ತು ಚಿಂತಾಲರಾಯಸ್ವಾಮಿ ದೇವಾಲಯಗಳಲ್ಲಿ [೮೩] ವಿಜಯನಗರ ದೊರೆಗಳ ಪೋಷಣೆಯಲ್ಲಿ ರಚನೆಯಾದ ಭಿತ್ತಿ ಚಿತ್ರಗಳು ಕಂಡುಬರುತ್ತವೆ.

ವಿಜಯನಗರ ಅರಸರಂತೆಯೇ ಅವರ ಸಾಮಂತರು, ಅಧಿಕಾರಿಗಳು, ಮಂತ್ರಿಗಳು ತಮ್ಮ ಯಜಮಾನ ಪ್ರಭುಗಳಂತೆ ಕಲಾ ಪೋಷಕರಾಗಿದ್ದು ಭಿತ್ತಿ ಚಿತ್ರಗಳನ್ನೂ ಬರೆಸಿದ್ದಾರೆ. ವಿಜಯನಗರದ ಸಾಮಂತರಾಗಿದ್ದ ಕನಕಗಿರಿಯ ಗುಜ್ಜಲ ವಂಶದ ಪ್ರಭುಗಳು ತಮ್ಮ ರಾಜಧಾನಿಯಾಗಿದ್ದ ಕನಕಗಿರಿಯಲ್ಲಿ ಭಿತ್ತಿಚಿತ್ರಗಳ ರಚನೆಗೆ ಪ್ರೋತ್ಸಾಹ ಕೊಟ್ಟರು. [೮೪] ಕನಕಗಿರಿಯ ಕನಕಾಚಲಪತಿ ದೇವಾಲಯದಲ್ಲಿ ರಚನೆಯಾದ ಭಿತ್ತಿ ಚಿತ್ರಗಳ ಬಗ್ಗೆ ಹಿಂದೆ ವಿವರವಾಗಿ ಚರ್ಚಿಸಲಾಗಿದೆ. ಇಮ್ಮಡಿ ಬುಕ್ಕರಾಯನ ಮಂತ್ರಿಯಾಗಿದ್ದ ಇರುಗಪ್ಪನು ತಮಿಳುನಾಡಿನ ಕಂಚೀಪುರದ ಹತ್ತಿರವಿರುವ ತಿರುಪರುತ್ತಿಕುನ್ರಂದಲ್ಲಿ ಸಂಗೀತ ಮಂಟಪವನ್ನು ಕಟ್ಟಿಸಿ ಅದರಲ್ಲಿ ಭಿತ್ತಿ ಚಿತ್ರಗಳನ್ನು ಬರೆಸಿದ್ದಾನೆ. ಹಾಗೆ ವಿಜಯನಗರವನ್ನು ಅಚ್ಯುತ ದೇವರಾಯ ಆಳುತ್ತಿದ್ದಾಗ, ಅಧಿಕಾರಿಗಳಾಗಿದ್ದ ವಿರುಪಣ್ಣ ಮತ್ತು ವೀರಣ್ಣ ಎಂಬವರು ಆಂಧ್ರದ ಅನಂತಪುರ ಜಿಲ್ಲೆಯ ಲೇಪಾಕ್ಷಿಯಲ್ಲಿ ವೀರಭದ್ರ ದೇವಾಲಯವನ್ನು ಕಟ್ಟಿಸಿ ಅದನ್ನು ಭಿತ್ತಿ ಚಿತ್ರಗಳಿಂದ [೮೫] ಅಲಂಕರಿಸಿದ್ದಾರೆ.

ತಂಜಾವೂರಿನ ನಾಯಕರು ವಿಜಯನಗರದ ಅಧೀನ ಅರಸರಾಗಿದ್ದು ಭಿತ್ತಿ ಚಿತ್ರಕಲೆಗೆ ಪ್ರೋತ್ಸಾಹ ನೀಡಿದ್ದಾರೆ. ತಂಜಾವೂರಿನ ನಾಯಕರ ಚಿತ್ರಗಳು ಹಂಪೆಯ ನೇರ ಪ್ರಭಾವಕ್ಕೆ ಒಳಗಾಗಿದ್ದು ಇವರ ಚಿತ್ರಗಳು ತಿರುವಾಲಂಗುಳಿ, ಪಲೆಯರೈಗಳಲ್ಲಿ ರಚನೆಯಾಗಿವೆ. [೮೬] ವಿಜಯನಗರ ಮಾಂಡಲೀಕರಲ್ಲಿ ಒಬ್ಬರಾದ ಜಿಂಜಿಯ ನಾಯಕರು ಬರೆಸಿದ ಭಿತ್ತಿಚಿತ್ರಗಳು ದಕ್ಷಿಣ ಅರ್ಕಾಟ್ ಜಿಲ್ಲೆಯ ಜಿಂಜಿ, ಚಂಗಮ್, ಧರ್ಮಪುರಿ ಜಿಲ್ಲೆಯ ಅದಮಾನ್‌ಕೋಟ್ಟೈ, ಮದ್ರಾಸ್

---

೭೯. ಅ. ಲ. ನರಸಿಂಹನ್ : ತಮಿಳುನಾಡಿನಲ್ಲಿ ಚಿತ್ರಕಲೆ, ಪುಟ ೨೯

೮೦. J. C. Nagpal : Mural Paintings in India, Page 77

೮೧. R. Nagaswamy : South Indian Studies, Page 78

೮೨. C. Sivaramamurti : South Indian Paintings, Page 39

೮೩. J. C. Nagpal : Mural Paintings in India, Page 76

೮೪. ಶರಣಬಸಪ್ಪ ಕೋಲಕಾರ : ಕನಕಗಿರಿ ಪ್ರದೇಶದ ಮೂರ್ತಿ ಶಿಲ್ಪ ಮತ್ತು ವಾಸ್ತುಶಿಲ್ಪ (ಧಾರವಾಡ ವಿವಿಗೆ ಸಲ್ಲಿಸಿದ ಎಂ.ಫಿಲ್ ಅಪ್ರಕಟಿತ ಪ್ರಬಂಧ), ಪುಟ ೫೮

೮೫. C. Sivaramamurti : Indian Painting, Page 78

೮೬. ಅ. ಲ. ನರಸಿಂಹನ್ : ತಮಿಳುನಾಡಿನಲ್ಲಿ ಚಿತ್ರಕಲೆ, ಪುಟ ೧೨

ಸಮೀಪದ ತಿರುಕುಲಕುನ್ರಂ ಸ್ಥಳಗಳಲ್ಲಿ ಇರುವುದು [೮೭] ಕಂಡುಬರುತ್ತದೆ. ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲೂಕಿನಲ್ಲಿರುವ ಬಿಳಗಿ ಸಂಸ್ಥಾನಿಕರು ವಿಜಯನಗರ ಮಾಂಡಲೀಕರಾಗಿ ಆಳುತ್ತಿದ್ದು, ಇವರು ಸಹಿತ ಭಿತ್ತಿ ಚಿತ್ರಕಲೆಗೆ ಪ್ರೋತ್ಸಾಹ ನೀಡಿದ್ದಾರೆ. ಬಿಳಗಿ ಸಂಸ್ಥಾನಿಕರ ಪೋಷಣೆಯಲ್ಲಿ ರಚನೆಯಾದ ಭಿತ್ತಿ ಚಿತ್ರಗಳು ಕಾವಿ ಬಣ್ಣದ ಭಿತ್ತಿ ಚಿತ್ರಗಳಾಗಿದ್ದು. ಬಿಳಗಿ, ಸಿದ್ದಾಪುರ, ಭುವನಗಿರಿ (ಸಿದ್ದಾಪುರ ತಾಲೂಕು) ಗಳಲ್ಲಿ [೮೮] ಇವೆ. ವಿಜಯನಗರ ಭಿತ್ತಿ ಚಿತ್ರಕಲೆಯು ಈ ರೀತಿಯಲ್ಲಿ ದೇವಾಲಯಗಳಲ್ಲಿ ರಚನೆಯಾಗುತ್ತಿದ್ದು ಒಂದು ಬಗೆಯಾದರೆ ರಾಜಧಾನಿಯಲ್ಲಿನ ಅರಮನೆಗಳು. ಸಾಮಾನ್ಯ ಜನರ ನಿವಾಸಗಳು. ಸಾರ್ವಜನಿಕ ಕಟ್ಟಡಗಳು, ವೇಶ್ಯಾಂಗನೆಯರ ಗೃಹಗಳು ಭಿತ್ತಿ ಚಿತ್ರಗಳಿಂದ ಕಂಗೊಳಿಸುತ್ತಿದ್ದವು ಎಂದು ತಿಳಿದುಬರುವುದು. ವಿಜಯನಗರವನ್ನು ಅದರ ಆಡಳಿತಾವಧಿಯಲ್ಲಿ ಸಂದರ್ಶಿಸಿದ ಅಬ್ದುಲ್‌ರಜಾಕ್, ಬ್ಯಾರಡಸ್. ಡೋಮಿಂಗೋಪ್ಯಾಸ್. ನ್ಯೂನಿಜ್‌ರಂತಹ ವಿದೇಶಿ ಪ್ರವಾಸಿಗರು ತಾವು ಕಣ್ಣಾರೆ ಕಂಡಿದ್ದನ್ನು ವಿವರಿಸಿದ್ದಾರೆ. ವಿಜಯ ನಗರದ ಜನರು ತಮ್ಮ ಮನೆಗಳನ್ನು ಮನೆಯ ಜಗಲಿಗಳನ್ನು ಚಿತ್ರಗಳಿಂದ ಅಲಂಕರಿಸುತ್ತಿದ್ದರು. ವೇಶ್ಯಾಂಗನೆಯರು ಕುಳಿತುಕೊಳ್ಳುತ್ತಿದ್ದ ಗೃಹಗಳ ಮುಂದೆ ಹುಲಿ, ಸಿಂಹ, ಚಿರತೆ ಮುಂತಾದ ಪ್ರಾಣಿಗಳನ್ನು ಜೀವಂತವಾಗಿವೆ ಎಂಬ ಭ್ರಮೆ ಬರುವಷ್ಟು ನೈಜವಾಗಿ ಚಿತ್ರಿಸುತ್ತಿದ್ದರು. ದಸರೆಯ ರಂಗಮಂಟಪವನ್ನು ಕೆಳಗಿನಿಂದ ಮೇಲಿನವರೆಗೂ ಮನುಷ್ಯರು, ಕಾಡುಪ್ರಾಣಿಗಳು, ಹಕ್ಕಿಗಳು, ಕ್ರಿಮಿ-ಕೀಟ ಚಿತ್ರ ಬರೆದು ಅಲಂಕರಿಸಲಾಗಿತ್ತು. ಸಾಳುವ ತಿಮ್ಮನ ರಥಕ್ಕೆ ನರ್ತಕಿಯರು, ವಾದ್ಯಕಾರರು, ಛತ್ರ-ಚಾಮರ ಹಿಡಿದ ಸೇವಕರ ಚಿತ್ರಗಳನ್ನು ಬರೆಯಲಾಗಿತ್ತು. ಅರಮನೆಯಲ್ಲಿ ಒಂದುಕಡೆ ಪೋರ್ಚುಗೀಜರಿಂದ ಹಿಡಿದು ಅನೇಕ ವಿದೇಶಿ ಜನರ ನಡವಳಿಕೆಗಳನ್ನು ಬಿಂಬಿಸುವ ಚಿತ್ರಗಳನ್ನು ಬರೆದಿದ್ದಾರೆ. ರಾಜನು ಆಸ್ಥಾನಿಕರು, ಅಧಿಕಾರಿಗಳೊಡನೆ ಮಾತನಾಡುವ ಮಂಟಪದಲ್ಲಿ ಎರಡು ಬೃಹತ್ ಪ್ರಮಾಣದ ಸ್ತ್ರೀ ಚಿತ್ರಗಳನ್ನು ಗೋಡೆಯಮೇಲೆ ಚಿತ್ರಿಸಿದೆ. ಅರಮನೆಯಲ್ಲಿ ರಾಜನ ವಾಸಸ್ಥಾನಕ್ಕೆ ಪ್ರವೇಶಿಸುವ ಬಾಗಿಲಿನ ಎರಡೂ ಪಕ್ಕಗಳಲ್ಲಿ ಸಜೀವ ಆಕೃತಿಯಂತೆ ಚಿತ್ರಿಸಿದ ಮಾನವಾಕೃತಿಗಳಿವೆ. ಅವುಗಳಲ್ಲಿ ಒಂದು ರಾಜನದು ಮತ್ತು ಇನ್ನೊಂದು ಆತನ ತಂದೆಯದು ಎಂಬಂತಹ [೮೯] ವಿವರಗಳು ತಿಳಿದುಬರುತ್ತವೆ.

ವಿಜಯನಗರವು ಅಂತಿಮ ಹಂತದಲ್ಲಿ ತನ್ನ ಕೊನೆಗಾಲದಲ್ಲಿದ್ದಾಗಲೂ ಚಿತ್ರಕಲೆಗೆ ಪ್ರೋತ್ಸಾಹ ಕೊಟ್ಟದ್ದು ಕಂಡುಬರುವುದು. " ಕ್ರಿ. ಶ. ೧೬೦೦ ರ ವೇಳೆಯಲ್ಲಿ ಚಂದ್ರಗಿರಿಯಲ್ಲಿ ಎರಡನೆಯ ವೆಂಕಟನು ಆಳುತ್ತಿದ್ದಾಗ ಆತನ ಆಸ್ಥಾನಕ್ಕೆ ಅಲೆಗ್ಸಾಂಡರ್ ಎಂಬ ವಿದೇಶಿ ಕಲಾವಿದ ಬಂದಿದ್ದ. ಆತ ಚಿತ್ರಿಸಿ ತಂದಿದ್ದ ಏಸು ಮತ್ತು ಮೇರಿಯ ಚಿತ್ರಕ್ಕೆ ರಾಜಾ ವೆಂಕಟನು ವಂದಿಸಿದನಲ್ಲದೇ ಕಲಾವಿದನೊಂದಿಗೆ ಆತ್ಮೀಯವಾಗಿ ಸಂಭಾಷಿಸಿ ಬಣ್ಣಕೊಳ್ಳಲು ನೂರು ಚಿನ್ನದ ನಾಣ್ಯಗಳನ್ನು ಕೊಟ್ಟ. ಹಾಗೆ ಎರಡನೆ ವೆಂಕಟ ರಾಜನು ಬಾರ್ತಲೋಮಿಯೋ ಎಂಬ ಕಲಾವಿದ ಪಾದ್ರಿಯನ್ನು ಆಧರಿಸಿ ತನ್ನ ಎದುರಿಗೇ ಆತನು ಕ್ರೈಸ್ತಪರವಾದ ಚಿತ್ರಗಳನ್ನು ರಚಿಸಬೇಕೆಂದು ಕೇಳಿಕೊಂಡನು. ಆ ಚಿತ್ರಗಳನ್ನು ಕೊಂಡುಕೊಂಡು ತನ್ನ ಆಸ್ಥಾನದಲ್ಲಿ ತೂಗುಹಾಕಿದನು. ಈ ಕಲಾವಿದನ ಆರೋಗ್ಯ ಸುಧಾರಣೆಗೆ ನೆರವಾದನಲ್ಲದೇ ಈತನಿಗೂ ಬಣ್ಣ ಕೊಳ್ಳಲು ಇನ್ನೂರು ಚಿನ್ನದ ನಾಣ್ಯಗಳನ್ನು ನೀಡಿದ "[೯೦] ಎಂಬುದು ತಿಳಿದುಬರುತ್ತದೆ.

೮೭. ಅ. ಲ. ನರಸಿಂಹನ್ : ತಮಿಳುನಾಡಿನಲ್ಲಿ ಚಿತ್ರಕಲೆ, ಪುಟ ೧೨

೮೮. ಪದ್ಮಾಕರ ಮಡಗಾಂವಕರ್ (ಸಂ) : ಶ್ವೇತಪುರ. ಪುಟ ೨೫. ೨೭. ೩೦

೮೯. ರಾಬರ್ಟ್ ಸಿವೆಲ್ : ಮರೆತು ಹೋದ ಮಹಾಸಾಮ್ರಾಜ್ಯ ವಿಜಯನಗರ. ಪುಟ ೨೬೦. ೨೬೨. ೨೯೯. ೩೦೦

೯೦. ಅ. ಲ. ನರಸಿಂಹನ್ : ಕರ್ನಾಟಕ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು. (ಬೆಂಗಳೂರು ವಿವಿಗೆ ಸಲ್ಲಿಸಿದ ಬೆರಳಚ್ಚು ಮಹಾಪ್ರಬಂಧ) ಪುಟ ೧೪೩

**ನಾಯಕ / ಪ್ರಾಂತಾಧಿಕಾರಿಗಳು :** ರಕ್ಕಸ-ತಂಗಡಗಿ ಕದನದ ನಂತರ ವಿಜಯನಗರ ಸಾಮ್ರಾಜ್ಯವು ಪತನಗೊಂಡು ಅದರ ಅಧೀನ ರಾಜರು. ನಾಯಕರು ಮತ್ತು ಅನೇಕ ಪ್ರಾಂತಾಧಿಪತಿಗಳು ತಮ್ಮನ್ನು ಸ್ವತಂತ್ರ ದೊರೆಗಳೆಂದು ಘೋಷಿಸಿಕೊಂಡರು. ಇಂತವರಲ್ಲಿ ತಮಿಳು ಪ್ರದೇಶದಲ್ಲಿ ಆಳುತ್ತಿದ್ದ ನಾಯಕರು ಪ್ರಮುಖರಾಗಿದ್ದಾರೆ. ಈ ನಾಯಕರು ಸ್ವತಂತ್ರ ಆಳ್ವಿಕೆ ಪ್ರಾರಂಭಿಸಿದಾಗಲೂ ಹಿಂದಿನ ತಮ್ಮ ವಿಜಯನಗರ ಪ್ರಭುಗಳಂತೆ ಕಲಾ ಪೋಷಣೆಯನ್ನು ಕೈ ಬಿಡದೇ ಉತ್ಕೃಷ್ಟ ಮಟ್ಟದ ದೇವಾಲಯಗಳನ್ನು ಕಟ್ಟಿಸುವುದು. ಅವುಗಳಲ್ಲಿ ವರ್ಣಚಿತ್ರಗಳನ್ನು ಬರೆಯಿಸುವುದು ಮುಂತಾದ ಕಲಾ ಚಟುವಟಿಕೆಗಳನ್ನು ಮುಂದುವರಿಸಿಕೊಂಡು ಹೋದರು. ವಾಸ್ತುಶಿಲ್ಪ ಮತ್ತು ಭಿತ್ತಿ ಚಿತ್ರರಚನೆಯಲ್ಲಿ ನಾಯಕರು ತಮ್ಮದೇ ಆದ ವೈಶಿಷ್ಟ್ಯದ ಛಾಪನ್ನು ಬಿಟ್ಟುಹೋಗಿದ್ದಾರೆ. ಭಿತ್ತಿ ಚಿತ್ರ ರಚನೆಯ ಪ್ರಕ್ರಿಯೆಯನ್ನು ವಿಜಯನಗರದ ನಂತರ ನಿಲ್ಲದಂತೆ ಸಮರ್ಥವಾಗಿ ಮುಂದುವರಿಸಿಕೊಂಡು ಹೋದ ಹಿರಿಮೆ ಇವರಿಗೇ ಸಲ್ಲಬೇಕು.

ಮಧುರೈಯಲ್ಲಿ ತಿರುಮಲನಾಯಕನು ಸುಂದರವಾದ. ಭವ್ಯವಾದ ಗೋಪುರ ಮತ್ತು ಪುದುಮಂಟಪಗಳನ್ನು ಕಟ್ಟಿಸಿದನು. ಇವು ತಮ್ಮ ಸೌಂದರ್ಯ ಮತ್ತು ಭವ್ಯತೆಯಿಂದಾಗಿ ಇಂದು ಕೂಡಾ ಪ್ರಸಿದ್ಧವಾಗಿವೆ. ಇದೇ ವೇಳೆಯಲ್ಲಿ ತಂಜಾವೂರಿನ ರಘುನಾಥನಾಯಕನು ತಂಜಾವೂರು ಮತ್ತು ಕುಂಭಕೋಣಂದಲ್ಲಿ ಕಲಾತ್ಮಕವಾದ ದೇವಾಲಯಗಳನ್ನು ನಿರ್ಮಿಸಿದನು. ಇವುಗಳಲ್ಲದೇ ಮಧುರೈಯ ಮೀನಾಕ್ಷಿ ಸುಂದರೇಶ್ವರ ಮತ್ತು ಇತರ ಸ್ಥಳಗಳಲ್ಲಿ ನಾಯಕರ ದೇವಾಲಯಗಳನ್ನು ನೋಡಬಹುದು. ವಿಜಯನಗರ ಸಾಮ್ರಾಜ್ಯ ಪತನಗೊಂಡ ನಂತರ ನಾಯಕ ದೊರೆಗಳು ಬರೆಸಿದ ಭಿತ್ತಿ ಚಿತ್ರಗಳು ತಮಿಳುನಾಡಿನ ಹಲವು ಸ್ಥಳಗಳಲ್ಲಿ ಕಂಡುಬರುತ್ತವೆ. ತಂಜಾವೂರಿನ ಬೃಹದೀಶ್ವರ ದೇವಾಲಯದಲ್ಲಿ ಚೋಳ ಕಾಲದ ಚಿತ್ರಗಳ ಮೇಲೆ ನಾಯಕರು ಚಿತ್ರಗಳನ್ನು ಬರೆಸಿದ್ದರು. ಈಗ ನಾಯಕರ ಚಿತ್ರಗಳನ್ನು ತೆಗೆದುಹಾಕಿ ಚೋಳರ ಚಿತ್ರಗಳನ್ನು ಉಳಿಸಿಕೊಳ್ಳಲಾಗಿದೆ. ಆದರೂ ಇಲ್ಲಿಯ ಚಿತ್ರಗಳ ಸಂರಕ್ಷಣೆಯ ಸಂದರ್ಭದಲ್ಲಿ ಅಲ್ಪಸ್ವಲ್ಪ ಉಳಿದಿದ್ದಂತಹ ನಾಯಕರ ಚಿತ್ರಗಳನ್ನು ವೈಜ್ಞಾನಿಕ ವಿಧಾನದಿಂದ ಸುರಕ್ಷಿತವಾಗಿ ಬೇರ್ಪಡಿಸಲಾಗಿದೆ. ಉಳಿದಿರುವ ಈ ಚಿತ್ರಗಳನ್ನು ನೋಡಿದಾಗ " ವಸ್ತುವಿನ್ಯಾಸ. ಆಭರಣಗಳು ಮತ್ತು ಚಿತ್ರಗಳ ಇತರ ಭಾಗಗಳ ವಿವರ ಪೂರ್ಣವಾಗಿ ರಚನೆಗೊಂಡಿದ್ದು.[೯೧] ಚಿತ್ರದ ಹೊರ ರೇಖೆಗಳು ದಪ್ಪನಾಗಿ ಎಳೆದದ್ದು ಕಂಡುಬರುತ್ತದೆ."

ತಿರುಪರುತ್ತಿಕುನ್ರಂ ಮತ್ತು ಕಂಚಿಪುರಂಗಳಲ್ಲಿ ಜೈನ ಕಥೆಗಳು ಮತ್ತು ತೀರ್ಥಂಕರರ ಜೀವನ ಘಟನೆಗಳನ್ನು ಆಧರಿಸಿದ ಚಿತ್ರಗಳಿವೆ. ತಿರುವಲೂರು ಮಂಟಪದ ಮೇಲ್ಚಾವಣಿಯಲ್ಲಿ ನಾಯಕರ ಕಾಲಾವಧಿಯ ಚಿತ್ರಗಳು ರಚನೆಗೊಂಡಿವೆ. ಶಿವಲೀಲೆಗೆ ಸಂಬಂಧಿಸಿದಂತೆ ಇಲ್ಲಿ ಚಿತ್ರಗಳಿದ್ದರೂ ಮಂಗನ ಮುಖದ ಮಾನವ ಚಿತ್ರ ಇಲ್ಲಿ ಗಮನ ಸೆಳೆಯುತ್ತದೆ. ಪೌರಾಣಿಕ ವಿಷಯಗಳಾದ ಮುಚಕುಂದ, ಸೋಮಸ್ಕಂದ ಮುಂತಾದ ಘಟನೆಗಳನ್ನೂ ಇಲ್ಲಿ ಚಿತ್ರಿಸಲಾಗಿದೆ. ತಿರುವಣ್ಣಾಮಲೈ. ತಿರುವಟ್ಟಿಯೂರ್. ತಿರುವಲಂಜುಲಿಗಳಲ್ಲಿ ರಚನೆಯಾದ ನಾಯಕರ ಚಿತ್ರಗಳಲ್ಲಿ[೯೨] ಶಿವಪುರಾಣ. ರಾಮಾಯಣ. ಮಹಾಭಾರತಗಳನ್ನಾಧರಿಸಿದ ಚಿತ್ರಗಳಿವೆ.

ಚಿರಂಬರಂ ದಲ್ಲಿನ ಶಿವಕಾಮ ಸುಂದರಿ ದೇವಾಲಯದ ದೊಡ್ಡ ಮಂಟಪ ಒಂದರಲ್ಲಿ ನಾಯಕರು ಬರೆಸಿದ, ನಾಯಕರ ಕಾಲಾವಧಿಯ ಅತ್ಯಂತ ಉತ್ತಮವೆನ್ನಬಹುದಾದ ಚಿತ್ರಗಳಿದ್ದು[೯೩] ಇವು ಶೈವ ಪುರಾಣಕ್ಕೆ

---

೯೧. C. Sivaramamurti : Indian Painting, Page 78
೯೨. C. Sivaramamurti : Indian Painting, Page 79
೯೩. C. Sivaramamurti : Indian Painting, Page 83

ಸಂಬಂಧಿಸಿದವುಗಳಾಗಿವೆ. ಶಿವನ ಭಿಕ್ಷಾಟನ, ಮೋಹಿನಿ, ಶಿವನ ತಾಂಡವ ನೃತ್ಯ, ಘಟನೆಗಳಲ್ಲದೇ ಶೈವಸಂತರ ಚಿತ್ರಗಳೂ ಇಲ್ಲಿ ರಚನೆಗೊಂಡಿವೆ. ಮಧುರೆಯ ನಾಯಕರು ವಿಜಯನಗರದಿಂದ ಸ್ವತಂತ್ರರಾದರೂ ಚಿತ್ರಕಲೆಯಲ್ಲಿ ಹಿಂದಿನ ಸಾಮ್ರಾಟರ ಚಿತ್ರಶೈಲಿ, ವರ್ಣವಿನ್ಯಾಸ, ರೇಖಾ ಲಾಲಿತ್ಯ ಮುಂತಾದ ಕೆಲ ಅಂಶಗಳನ್ನು ಉಳಿಸಿಕೊಂಡೇ ಬಂದರು. ಮಧುರೆಯ ಮೀನಾಕ್ಷಿ ದೇವಾಲಯದಲ್ಲಿ ಅವುಗಳನ್ನು ಬರೆಸಿದ ನಾಯಕರ ಮತ್ತು ಅವರ ಪರಿವಾರದವರ ಚಿತ್ರಗಳಿವೆ. ಶ್ರೀರಂಗಂನಲ್ಲಿಯ ಅನೇಕ ಮಂಟಪಗಳಲ್ಲಿ ನಾಯಕರು ಬರೆಸಿದ ವರ್ಣಚಿತ್ರಗಳಿವೆ. ವಿಷ್ಣುಪುರಾಣಕ್ಕೆ ಸಂಬಂಧಿಸಿದ ಚಿತ್ರಗಳು, ಆಳ್ವಾರರ ಕಥೆಯನ್ನಾಧರಿಸಿದ ಘಟನಾವಳಿಗಳು, ರಾಮಾನುಜರ ಜೀವನ ವೃತ್ತಾಂತ, ರಾಮಾಯಣದ ದೃಶ್ಯಗಳು ಮುಂತಾದ ಚಿತ್ರಗಳು ಬೇರೆ ಬೇರೆ ಮಂಟಪಗಳಲ್ಲಿ ರಚನೆಗೊಂಡಿವೆ. ಹಾಗೆಯೇ ಮಧುರೆಯ ಬಳಿಯ ಅಳಗರ್ ಕೋಯಿಲ್, ಸೇಲಂ ಬಳಿಯ ಅಯೋಧ್ಯಾ, ಪುದುಕೋಟೆಯ ಸಮೀಪದ ತಿರುಗೋಕರ್ಣ ದೇವಾಲಯಗಳಲ್ಲಿ [೯೪] ನಾಯಕರ ಕಾಲಾವಧಿಯ ಚಿತ್ರಗಳಿವೆ.

ರಾಮನಾಡಿನ ರಾಮಲಿಂಗ ವಿಲಾಸ ಅರಮನೆಯಲ್ಲಿ ರಾಮಾಯಣದ ದೃಶ್ಯಗಳನ್ನು ಆಧರಿಸಿದ ಚಿತ್ರಗಳು, ವಿಜಯ ರಘುನಾಥ ಸೇತುಪತಿಯ ಆಸ್ಥಾನ ದೃಶ್ಯ, ಆಸ್ಥಾನದಲ್ಲಿದ್ದ ಆಂಗ್ಲರು, ಜಸುಯಿಟ್ ಪಾದ್ರಿಗಳು ಹಾಜರಿರುವದು, ಸೇತುಪತಿಯು ನೃತ್ಯಸಂಗೀತ ಕಾರ್ಯಕ್ರಮಗಳನ್ನು ವೀಕ್ಷಿಸುತ್ತಿರುವ ದೃಶ್ಯ, [೯೫] ಇವುಗಳಲ್ಲದೇ ಅನೇಕ ಸಾಮಾಜಿಕ ಘಟನಾವಳಿಗಳನ್ನು ಆಧರಿಸಿದ ಸಾಮಾಜಿಕ ಚಿತ್ರಗಳು ಇಲ್ಲಿ ರಚನೆಗೊಂಡಿವೆ. ನಾಯಕರ ಪೋಷಣೆಯಲ್ಲಿ ರಚನೆಗೊಂಡ ಕೆಲವು ಚಿತ್ರಗಳು ಮರಾಠರ ಚಿತ್ರಶೈಲಿಯ ಪ್ರಭಾವಕ್ಕೆ ಒಳಗಾಗಿವೆ. ತಂಜಾವೂರಿನ ಸರಸ್ವತಿ ಮಹಲ್‌ನಲ್ಲಿ ಗಣಪತಿ, ಸಿದ್ಧಿ ಬುದ್ಧಿ, ಸರಸ್ವತಿ, ಲಕ್ಷ್ಮೀ ಮುಂತಾದ ದೇವತೆಗಳಲ್ಲದೇ ಕೆಲವು ರಾಕ್ಷಸರ ಚಿತ್ರಗಳು ರಚನೆಗೊಂಡಿವೆ. ಇದೇ ಊರಿನ (ತಂಜಾವೂರು) ಅರಮನೆಯೊಂದರಲ್ಲಿ ಭಾವಚಿತ್ರಗಳು, ಪೌರಾಣಿಕ ಘಟನೆಯ ಚಿತ್ರಗಳು ರಚಿಸಿವೆ. ತಿರುವರೂರಿನ ತ್ಯಾಗರಾಜ ದೇವಾಲಯದಲ್ಲಿ ಸ್ಥಳ ಪುರಾಣವನ್ನು ಪ್ರತಿಬಿಂಬಿಸುವ ದೃಶ್ಯಾವಳಿಗಳನ್ನು ರಚಿಸಿದ್ದು ಈ ಎಲ್ಲ ಚಿತ್ರಗಳು ಮರಾಠ ಶೈಲಿಯ ದಟ್ಟ ಪ್ರಭಾವಕ್ಕೊಳಗಾಗಿವೆ. [೯೬] ಈ ಚಿತ್ರಗಳು ೧೮ ರಿಂದ ೧೯ ನೆಯ ಶತಮಾನದ ಕಾಲಾವಧಿಯಲ್ಲಿ ಚಿತ್ರಣಗೊಂಡಿವೆ.

ನಾಯಕರ ಜೊತೆಜೊತೆಯಾಗಿ ಮತ್ತು ನಾಯಕರ ನಂತರದಲ್ಲಿ ಭಿತ್ತಿಚಿತ್ರ ಪರಂಪರೆಯನ್ನು ಮುಂದುವರಿಸಿಕೊಂಡು ಹೋದವರು ಮರಾಠರು. ನಾಯಕರು ಮತ್ತು ಮರಾಠರು ಸೇರಿ ಹೊಸದೊಂದು ಭಿತ್ತಿ ಚಿತ್ರಕಲಾ ಶೈಲಿಯನ್ನು ಅಭಿವೃದ್ಧಿಪಡಿಸಿದರು. ಇದು ಶೈಲಿ ಮತ್ತು ರಚನಾ ವಿನ್ಯಾಸದಲ್ಲಿ ಮೊಗಲ್ ಕಲೆಯ ಮುಂದುವರಿಕೆಯಂತೆ ಕಂಡುಬರುತ್ತದೆ. ನಾಯಕರ ನಂತರದ ಕಾಲದಲ್ಲಿ ಮರಾಠರು ಭಿತ್ತಿ ಚಿತ್ರಕಲೆಯಲ್ಲಿ ತಮ್ಮದೇ ಆದ ಶೈಲಿಯನ್ನು ಅಭಿವೃದ್ಧಿಪಡಿಸಿದರು. ಇವರ ಕಾಲಾವಧಿಯ ಭಿತ್ತಿ ಚಿತ್ರಗಳನ್ನು ಮರಾಠ ಶೈಲಿಯ ಭಿತ್ತಿಚಿತ್ರಗಳೆಂದೇ ಗುರುತಿಸಲಾಗುವುದು. ಕೆಲವು ಮರಾಠಾ ಸಂಸ್ಥಾನಿಕರು, ಜಮೀನಾದಾರರು, ತಮ್ಮ ವಾಡಾಗಳಲ್ಲಿ ಭಿತ್ತಿಚಿತ್ರಗಳನ್ನು ಬರೆಸಿದರು. ಇವುಗಳಲ್ಲದೇ ಮರಾಠಾ ಶೈಲಿಯ ಚಿತ್ರಗಳು ಸುಬ್ರಹ್ಮಣ್ಯ ದೇವಾಲಯ, ಬೃಹದೀಶ್ವರ ದೇವಾಲಯ ತಂಜಾವೂರುಗಳಲ್ಲಿ [೯೭] ರಚನೆಗೊಂಡಿವೆ.

---

೯೪. ಅ. ಲ. ನರಸಿಂಹನ್ : ತಮಿಳುನಾಡಿನಲ್ಲಿ ಚಿತ್ರಕಲೆ, ಪುಟ ೧೩

೯೫. ಅ. ಲ. ನರಸಿಂಹನ್ : ತಮಿಳುನಾಡಿನಲ್ಲಿ ಚಿತ್ರಕಲೆ, ಪುಟ ೧೩

೯೬. ಅ. ಲ. ನರಸಿಂಹನ್ : ತಮಿಳುನಾಡಿನಲ್ಲಿ ಚಿತ್ರಕಲೆ, ಪುಟ ೧೪

೯೭. J. C. Nagpal : Mural Paintings in India, Page 17

**ಬೀದರ್, ಗುಲಬರ್ಗಾ ಮತ್ತು ಬಿಜಾಪುರದ ಸುಲ್ತಾನರು :** ಕರ್ನಾಟಕದ ಉತ್ತರದಲ್ಲಿರುವ ಬೀದರ್, ಗುಲಬರ್ಗಾ ಮತ್ತು ಬಿಜಾಪುರ ಪ್ರದೇಶಗಳಲ್ಲಿ ಆಳಿದ ಮುಸ್ಲಿಂ ದೊರೆಗಳ ಸೌಂದರ್ಯಪ್ರಜ್ಞೆ ಹದಿನಾಲ್ಕನೇ ಶತಮಾನದಿಂದ ಹದಿನೇಳನೇ ಶತಮಾನದವರೆಗೆ ವ್ಯಕ್ತಗೊಂಡು. ಭವ್ಯ ವಾಸ್ತುಶಿಲ್ಪ ಕೃತಿಗಳನ್ನು ನಿರ್ಮಿಸಿತಲ್ಲದೇ, ಅಂತಹ ಕೆಲವು ವಾಸ್ತು ಕೃತಿಗಳಲ್ಲಿ ಭಿತ್ತಿ ಚಿತ್ರಕಲೆಯಿಂದ ಅವುಗಳನ್ನು ಅಲಂಕರಿಸುವ ಹವ್ಯಾಸವೂ ಬೆಳೆಯಿತು. ಈ ಪ್ರದೇಶಗಳಲ್ಲಿ ಆಳ್ವಿಕೆ ಪ್ರಾರಂಭಿಸಿದ ಸುಲ್ತಾನರು ಮೊದಲು ಗುಲಬರ್ಗಾದಲ್ಲಿ ರಾಜ್ಯ ಸ್ಥಾಪಿಸಿ ನಂತರ ಬೀದರ್ ಮತ್ತು ಬಿಜಾಪುರಗಳಿಗೆ ಚದುರಿದರು. ಇವರು ಸ್ಥಳೀಯ ಜನರಿಗಿಂತ ಭಿನ್ನವಾದ ಮತಧರ್ಮ, ಬೇರೆಯದೇ ಆದ ಸಂಸ್ಕೃತಿಯನ್ನು ಪಡೆದುಬಂದವರಾಗಿದ್ದರು. ಹೀಗಾಗಿ ಇವರು ನೆಲೆನಿಂತ ಈ ಪ್ರದೇಶಗಳ ವ್ಯಾಪ್ತಿಯಲ್ಲಿ ತಮ್ಮ ಓರಿಯರಿಂದ ತಾವು ತಂದಿದ್ದ ಸಂಸ್ಕೃತಿಯನ್ನು ಹರಡಲು ಪ್ರಾರಂಭಿಸಿದರು. ಹಿಂದೂ, ಬೌದ್ಧ, ಜೈನ ಧರ್ಮಗಳನ್ನು ಆಧರಿಸಿ ಬೆಳೆಯುತ್ತಿದ್ದ ದೇಶಿಯ ವಾಸ್ತುಶಿಲ್ಪ. ಚಿತ್ರಕಲೆ ಪರಂಪರೆಗಳು ನಿಂತುಹೋಗಿ ಅದಕ್ಕೆ ಬದಲಾಗಿ ತುರ್ಕಿ, ಇರಾನ್, ಅಫಘಾನಿಸ್ತಾನ ಪ್ರದೇಶಗಳಲ್ಲಿ ಪ್ರಚಾರದಲ್ಲಿದ್ದ ಮಸೀದಿಗಳು, ಸಮಾಧಿ ಭವನಗಳು, ಅರಮನೆಗಳು, ಕೋಟೆ ಕೊತ್ತಲುಗಳು, ವಿಹಾರೋದ್ಯಾನಗಳು ಮುಂತಾದ ವಾಸ್ತು ರಚನೆಗಳ ನಿರ್ಮಾಣ ತೊಡಗಿಕೊಂಡಿತು.

ಇವುಗಳ ರೀತಿ, ಶೈಲಿಗಳು ನಮ್ಮ ದೇಶೀಯ ವಾಸ್ತು ರಚನೆಗಳಿಗಿಂತ ಬೇರೆಯೇ ಆಗಿವೆ. ಇವುಗಳನ್ನು ಸಾರ್ಸೆನಿಕ್ ಶೈಲಿಯ ವಾಸ್ತು ರಚನೆಗಳೆಂದು ಕರೆಯುವರು. ಅದುವರೆಗಿನ ಭಾರತೀಯ ವಾಸ್ತುರಚನೆಗಳಲ್ಲಿನ ಸುಂದರ ಕಲಾತ್ಮಕ ಸ್ತಂಭರಚನೆ. ಕಮಾನುಗಳು. ಅಲಂಕಾರಯುಕ್ತವಾದ ಮೇಲ್ಛಾವಣಿ, ಶೈಲೀಕೃತ ಗೋಪುರಗಳು ಇವುಗಳಲ್ಲಿ ವರ್ಜ್ಯವಾದವು. ಭಾರತೀಯರ ಚೌಕಾದ ವೈಭವದ ಬಾಗಿಲುಗಳಿಗೆ ಬದಲಾಗಿ ಮೊನಚಾದ ಕಮಾನುಗಳು ಕಾಣಿಸಿದ್ದಲ್ಲದೇ ಮಾಡುಗಳ ರಚನೆಯ ರೀತಿಯೂ ಬದಲಾಯಿತು. ಗೋಡೆಗಳನ್ನು ಕಟೆದ ಕಲ್ಲು ಮತ್ತು ಗಚ್ಚುಗಳಿಂದ ಕಟ್ಟಿ ಮೇಲೆ ಸುಣ್ಣದ ಗಾರೆಯಿಂದ ಸಮತಟ್ಟುಗೊಳಿಸುವ ಕ್ರಮ ಬೆಳೆಯಿತು. ಗೋಡೆಗಳ ಮೂಲೆಗಳನ್ನು ರಚಿಸದೇ ಕಮಾನುಗಳಂತೆ ಬಾಗಿಸಿ ಅವುಗಳ ಮೇಲೆ ಗೋಲಾಕಾರದ ಬೃಹತ್ತಾದ ಗುಂಬಜಗಳನ್ನು ನಿರ್ಮಿಸುವ ಹೊಸ ಕ್ರಮ ಬಂದಿತು. ಕಮಾನು ಮತ್ತು ಗೋಡೆಗಳ ಮೇಲೆ ವೈವಿಧ್ಯಮಯವಾದ ಗೋಪುರಗಳಿಗೆ ಬದಲಾಗಿ ಟೊಳ್ಳಾದ ಗುಂಬಜಗಳು ತಲೆಎತ್ತಿ ನಿಂತವು. ಇವುಗಳಿಗೆ ಗಾರೆಯ ಹೊದಿಕೆಯ ಲೇಪನ ಮುಖ್ಯವಾಗಿತ್ತು.

ಅಲಂಕಾರವೇ ಇಲ್ಲದಿರುವ ಈ ವಾಸ್ತು ರಚನೆಗಳು. ವಿಶಾಲವಾದ ಗೋಡೆಯ ಭಾಗ ಮತ್ತು ಗುಂಬಜಗಳ ಒಳ ಆವರಣದ ಗಾರೆ ಲೇಪನದ ಮೈಗಳು ಬೋಳಾಗಿ ಕಾಣತೊಡಗಿದವು. " ಇರಾನ್, ಅಫಘಾನಿಸ್ತಾನ, ತುರ್ಕಿ ಮೊದಲಾದ ಕಡೆಗಳಲ್ಲಿ ಇಂತಹ ವಾಸ್ತು ರಚನೆಗಳು ಬೋಳುತನವನ್ನು ಕಳೆಯಲು ವಿಶಿಷ್ಟವಾದ ಬಣ್ಣ ಬಣ್ಣದ ಕಲ್ಲಿನ ತುಂಡು (ಸೂಡುಬಿಲ್ಲೆ) ಗಳನ್ನು ಉಪಯೋಗಿಸಿ ಚಿತ್ತಾರಗಳನ್ನು ರಚಿಸಿ ಅವುಗಳಿಗೆ ಅಂದವನ್ನು ತಂದುಕೊಟ್ಟಿದ್ದರು."[೯೮] ಆದರೆ, ಆ ಸಮಯಕ್ಕೆ ನಮ್ಮ ದೇಶದ ಈ ಭಾಗದಲ್ಲಿ ಅಂತಹ ಬಣ್ಣದ ಕಲ್ಲಿನ ತುಂಡುಗಳು ಲಭ್ಯವಿಲ್ಲದ ಕಾರಣ ಮುಸ್ಲಿಂ ದೊರೆಗಳು ರಚಿಸುವ ಮಸೀದಿ, ಸಮಾಧಿಭವನ, ಅರಮನೆಗಳ ಗಾತ್ರ ಹೆಚ್ಚುತ್ತ ಹೋದಂತೆ ಅವುಗಳ ಮೈ ಬೋಳಾಗಿ ಕಾಣಿಸುವದೂ ಅಧಿಕವಾಯಿತು. ಭಾರತೀಯ ದೇವಾಲಯಗಳು, ಅರಮನೆಗಳು ಮುಂತಾದ ವಾಸ್ತುರಚನೆಗಳ ಗೋಡೆ ಅಥವಾ ಇನ್ನಾವುದೇ ಭಾಗಗಳ ಮೈಯ ಬೋಳುತನವನ್ನು ಹೋಗಲಾಡಿಸಲು ಪೂರಕವಾದ ಶಿಲ್ಪ ಇಲ್ಲವೇ ವರ್ಣಚಿತ್ರಗಳಿಂದ ಅಲಂಕರಿಸುವ ರೂಢಿ ಇತ್ತು.

---

೯೮. ಶಿರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ. ಪುಟ ೬೪

ಇಸ್ಲಾಂ ಧರ್ಮದಲ್ಲಿ ಶಿಲ್ಪ ಮತ್ತು ಚಿತ್ರರಚನೆಗೆ ನಿರ್ಬಂಧ ಇರುವದರಿಂದಲೂ, ಭಾರತೀಯ ಶಿಲ್ಪ, ಚಿತ್ರಗಳಿಗೆ ಇವರ ಮನಸ್ಸು ಬೇಗ ಒಲಿಯದೇ ಹೋದುದರಿಂದಲೂ ಇವರ ವಾಸ್ತುರಚನೆಗಳು ಬಹುಕಾಲದವರೆಗೂ ತಮ್ಮ ಬೋಳುತನವನ್ನು ಉಳಿಸಿಕೊಂಡವು. ಆದರೆ, ಕ್ರಮೇಣ ಅನ್ಯದೇಶಿಯವರಾದ ಸಾರ್ಸೆನಿಕ್ ಪದ್ಧತಿಯ ಜ್ಯಾಮತಿಕ ಅಲಂಕಾರಗಳನ್ನು ಸೂಡು ಬಿಲ್ಲೆಗಳನ್ನು ಉಪಯೋಗಿಸಿ ರಚಿಸುವ ಕ್ರಮದಿಂದ ಈ ಬೋಳುತನವನ್ನು ನಿವಾರಿಸತೊಡಗಿದರು. ಇಂತಹ ಜಾಮಿತಿಕ ಅಲಂಕಾರಗಳನ್ನು ಬೀದರ್‌ನಲ್ಲಿರುವ ಕೆಲವು ಕಟ್ಟಡಗಳಲ್ಲಿ ಅದರಲ್ಲೂ ಮುಖ್ಯವಾಗಿ ಮಹಮ್ದ ಗವಾನನ ಮದರ್‌ಸಾ ರಂಗೀನ್ ಮಹಲ್‌ಗಳಲ್ಲಿ ನೋಡಬಹುದು. ಮುಂದಿನ ಹಂತದಲ್ಲಿ ಈ ತರಹದ ಜಾಮಿತಿಕ ಅಲಂಕಾರಗಳ ಜೊತೆಗೇ ವರ್ಣಗಳಿಂದ ಹೂ-ಬಳ್ಳಿಯ ನಕ್ಷೆಗಳು, ಪ್ರಾಣಿ, ಪಕ್ಷಿಗಳ ನಕ್ಷಾರೂಪಗಳು ರಚನೆಯಾಗತೊಡಗಿದವು. ಈ ಮಾದರಿಯ ಚಿತ್ರಗಳನ್ನು ಬಿಜಾಪುರದ ಅರಸ್‌ಮಹಲ್, ಕುಮಟಗಿಯ ಮಂಟಪ ಮತ್ತು ಗುಲಬರ್ಗಾದ ಬಂದೇ ನವಾಜ್ ದರ್ಗಾಗಳಲ್ಲಿ ಕಂಡುಬರುತ್ತವೆ.

ಅನಂತರದ ದಿನಗಳಲ್ಲಿ ಕೆಲವು ಮುಸ್ಲಿಂ ದೊರೆಗಳು ತಮ್ಮ ಧಾರ್ಮಿಕ ಕಟ್ಟಳೆಯನ್ನು ಮೀರಿಯೂ ತಮ್ಮ ವಾಸ್ತು ರಚನೆಗಳಲ್ಲಿ ವ್ಯಕ್ತಿ ಚಿತ್ರಣಗಳಿಗೂ ಆಸಕ್ತಿ ತೋರಿದರು. ಬಿಜಾಪುರದ ಅಸರ್ ಮಹಲ್‌ಗಳಲ್ಲಿರುವ ಕೆಲವು ವ್ಯಕ್ತಿಚಿತ್ರಗಳು ಇದಕ್ಕೆ ಪುಷ್ಟಿಯೊದಗಿಸುತ್ತವೆ. ದಕ್ಷಿಣದ ಸುಲ್ತಾನರು ತಮ್ಮ ವಾಸ್ತುರಚನೆಗಳ ಅಲಂಕರಣಕ್ಕೆ ಮೊದಮೊದಲು ಪರ್ಶಿಯಾ ದೇಶದಿಂದಲೇ ಚಿತ್ರಕಾರರನ್ನೂ ಹಾಗೂ ಇತರ ಕಲಾವಿದರನ್ನು ಕರೆಯಿಸಿಕೊಂಡರಾದರೂ ಅನಂತರ ಇಲ್ಲಿನ ಕಲಾವಿದರನ್ನು ತರಬೇತಿಗೊಳಿಸಿ ಅಂಥ ಕೆಲಸ ಮಾಡಿಸತೊಡಗಿದರು.

ಹೀಗೆ ದಖ್ಖಣದ ಸುಲ್ತಾನರು ತಮ್ಮ ವಾಸ್ತುರಚನೆಗಳಲ್ಲಿ ಭಿತ್ತಿಚಿತ್ರಗಳನ್ನು ರಚಿಸಲು ಪ್ರಾರಂಭಿಸಿದರೂ ಅಂತಹ ಪ್ರಯತ್ನ ನಡೆದಿದ್ದು ಕಡಿಮೆಯೇ ಎನ್ನಬಹುದು. ಕರ್ನಾಟಕ ರಾಜ್ಯದಲ್ಲಿ ಬಿಜಾಪುರ, ಗುಲಬರ್ಗಾ, ಬೀದರ್ ಈ ಭಾಗಗಳು ಮುಸಲ್ಮಾನ ದೊರೆಗಳು ಆಳಿದ ಪ್ರದೇಶಗಳಾಗಿವೆ. ಇವರಲ್ಲಿ ಬಿಜಾಪುರದ ಸುಲ್ತಾನರು ಚಿತ್ರಕಲೆಗೆ ಹೆಚ್ಚಿನ ಪ್ರೋತ್ಸಾಹ ಕೊಟ್ಟು ಅದರ ಬೆಳವಣಿಗೆಗೆ ಕಾರಣರಾಗಿದ್ದಾರೆ. ಇವರ ಕಾಲಾವಧಿಯಲ್ಲಿ ಭಿತ್ತಿ ಚಿತ್ರಗಳಿಗಿಂತ ಕಿರುರೂಪ ಚಿತ್ರಗಳು. ಗ್ರಂಥ ಚಿತ್ರಗಳು ಹೆಚ್ಚು ರಚನೆಗೊಂಡಿವೆ. ಬಿಜಾಪುರ ಸುಲ್ತಾನರ ಕಾಲಾವಧಿಯ ಭಿತ್ತಿ ಚಿತ್ರಗಳು ಬಿಜಾಪುರ ನಗರದ ಅಸರ್ ಮಹಲ್. ಮತ್ತು ಇದೇ ಊರಿನ ಸಮೀಪದ ಕುಮಟಗಿ ಎಂಬಲ್ಲಿನ ಅತಿಥಿಗೃಹದಲ್ಲಿ ರಚನೆಯಾಗಿವೆ.

ಬೀದರ್ ಪ್ರದೇಶವನ್ನು ಆಳಿದ ಬಹಮನಿ ಸುಲ್ತಾನರ ಕಾಲಾವಧಿಯ ಭಿತ್ತಿ ಚಿತ್ರಗಳು ಬೀದರಿನ ರಂಗೀನ್ ಮಹಲ್. ಬೀದರಿನ ಸಮೀಪವಿರುವ 'ಅಷ್ಟೂರು' ಎಂಬ ಹಳ್ಳಿಯಲ್ಲಿ ಸುಲ್ತಾನರ ಸಮಾಧಿ ಭವನಗಳಲ್ಲಿ ರಚನೆಯಾಗಿವೆ. ಗುಲಬರ್ಗಾ ಬಂದೇನವಾಜ್ ದರ್ಗಾದಲ್ಲಿ ರಚನೆಯಾಗಿರುವ ವರ್ಣದ ಚಿತ್ತಾರಗಳು ಮುಸ್ಲಿಂ ದೊರೆಗಳ ಕಲಾ ಲಕ್ಷಣಗಳನ್ನು ಪ್ರತಿನಿಧಿಸುತ್ತವೆ.

ಬಹಮನಿ ಸುಲ್ತಾನರು ಗುಲಬರ್ಗಾದಿಂದ ಬೀದರಿಗೆ ರಾಜಧಾನಿ ವರ್ಗಾಯಿಸಿದ ನಂತರ ಕಟ್ಟಲಾದ ವಾಸ್ತು ನಿರ್ಮಿತಿಗಳಲ್ಲಿ ಭಿತ್ತಿ ಚಿತ್ರಕಲೆ ಕಂಡುಬರುತ್ತದೆ. ಕ್ರಿ. ಶ. ೧೪೨೨ ರಿಂದ ೧೪೩೬ ರ ವರೆಗೆ ಆಳಿದ ಅಹಮದ ಶಹ ಬಹಮನಿ ಕಲಾಪ್ರಿಯನಾದ ಸುಲ್ತಾನನಾಗಿದ್ದನು. ಈತನು ಬಹಮನಿ ಸುಲ್ತಾನರಲ್ಲಿ ೯ ನೆಯವನಾಗಿದ್ದು ತನ್ನ ಹಿಂದಿನ ೮ ಜನ ಸುಲ್ತಾನರಿಗಿಂತ ಹೆಚ್ಚಿನ ಆಸಕ್ತಿಯನ್ನು ಚಿತ್ರಕಲೆಯ ಬಗ್ಗೆ ಈತ ಉಳ್ಳವನಾಗಿದ್ದನು. ಆದಕಾರಣ ಆತನ ಕಾಲಾವಧಿಯಲ್ಲಿ ನಿರ್ಮಾಣವಾದ ವಾಸ್ತುಕೃತಿಗಳಲ್ಲಿ ಕೆಲವು ಬಣ್ಣದ ಚಿತ್ರಗಳಿಂದ ಅಲಂಕೃತಗೊಂಡಿವೆ. ಬೀದರ್‌ದಲ್ಲಿನ

ರಂಗೀನ್ ಮಹಲ್. ಅಸ್ಟೂರಿನಲ್ಲಿಯ ಈತನ ಸಮಾಧಿಭವನಗಳು ಈತನ ಸೌಂದರ್ಯ ಪ್ರಜ್ಞೆಯ ದ್ಯೋತಕವಾಗಿ ವರ್ಣಚಿತ್ರಗಳಿಂದ ಅಲಂಕೃತವಾಗಿವೆ. ಗುಲಬರ್ಗದಲ್ಲಿರುವ ಖ್ವಾಜಾ ಬಂದೇನವಾಜ ದರ್ಗಾದಲ್ಲಿನ ಕೆಲವು ಉತ್ತಮ ಮಟ್ಟದ ಹೂ-ಬಳ್ಳಿಯ ನಕ್ಷೆಗಳು ಇವನ ಪ್ರೋತ್ಸಾಹದಡಿಯಲ್ಲಿ ರಚನೆಯಾಗಿವೆ. ಬೀದರ್ ಸುಲ್ತಾನರಲ್ಲಿ ' ಅಲೀ ಬರೀದನೂ ' ಕಲಾ ಪೋಷಕನಾಗಿದ್ದು ರಂಗೀನ್ ಮಹಲ್‌ನ್ನು ಪುನಃ ರೂಪಿಸಿ ಅದರಲ್ಲಿ ವರ್ಣಚಿತ್ರಗಳು (ಹೂ-ಬಳ್ಳಿ ನಕ್ಷೆಗಳು) ಸೂಡು ಬಿಲ್ಲೆಗಳಿಂದ ಆ ಕಟ್ಟಡವನ್ನು (ಕ್ರಿ. ಶ. ೧೫೪೨-೮೦) ಶೃಂಗರಿಸಿದ್ದಾನೆ. ಎರಡನೆಯ ಅಲ್ಲಾವುದ್ದೀನ್ ಅಹಮ್ಮದನು (ಕ್ರಿ. ಶ. ೧೪೩೬-೧೪೫೮) ತನ್ನ ಹಿಂದಿನ ಸುಲ್ತಾನರಿಂದ ಪ್ರಭಾವಿತಗೊಂಡು ತನ್ನ ಸಮಾಧಿಭವನವನ್ನೂ ಹೂ-ಬಳ್ಳಿಯ ವರ್ಣಚಿತ್ರಗಳಿಂದ ಅಲಂಕರಿಸಿದನು.

**ವಿಜಾಪುರದ ಆದಿಲ್‌ಶಾಹಿಗಳು :** ವಾಸ್ತುಶಿಲ್ಪ ನಿರ್ಮಾಣದಲ್ಲಿ ಗಮನಾರ್ಹ ಕೊಡುಗೆ ಕೊಟ್ಟಂತೆಯೇ ಬಿಜಾಪುರದ ಆದಿಲ್‌ಶಾಹಿ ದೊರೆಗಳು ವರ್ಣ ಚಿತ್ರಕಲೆಯಲ್ಲಿಯೂ ತಮ್ಮದೇ ಆದ ಕಾಣಿಕೆ ಕೊಟ್ಟಿದ್ದಾರೆ. ಎರಡನೇ ಇಬ್ರಾಹಿಂ ಆದಿಲ್‌ಶಾಹ (ಕ್ರಿ. ಶ. ೧೫೮೦-೧೬೨೭) ನು ತನ್ನ ಸಮಕಾಲೀನ ಸಂದರ್ಭದಲ್ಲಿ ಭಾರತದ ಅತಿ ದೊಡ್ಡ ಶ್ರೇಷ್ಠ ಕಲಾಪೋಷಕನಾಗಿದ್ದನು. ಈ ಸುಲ್ತಾನನು ಪ್ರತಿಭಾವಂತ ಕಲಾವಿದರು ಮತ್ತು ಸಾಹಿತಿಗಳನ್ನು ತನ್ನ ಆಸ್ಥಾನದಲ್ಲಿ ನೇಮಿಸಿಕೊಳ್ಳುವುದು ಹವ್ಯಾಸ ಮಾಡಿಕೊಂಡಿದ್ದನು. " ೨ನೇ ಇಬ್ರಾಹಿಂ ಆದಿಲ್‌ಶಾಹನು ಕಲೆಗಳ ಆಸ್ವಾದಕನೂ ಆಗಿದ್ದನು. " ಇಬ್ರಾಹಿಮನ ಅಭಿರುಚಿಯ ಯುರೋಪಿಯನ್ ವರ್ಣಚಿತ್ರಗಳನ್ನು ಸಂಗ್ರಹಿಸುವುದರಲ್ಲೂ ಅಲ್ಲಿನ ಕಲಾವಿದರನ್ನು ಗೌರವಿಸುವುದರಲ್ಲೂ ವಿಸ್ತರಿಸಿತ್ತು. ಅಲ್ಲದೇ ಇಬ್ರಾಹಿಮನು ಶ್ರೇಷ್ಠ ಕಲಾವಿದರಿಂದ ತನ್ನ ವಿದ್ಧ ಚಿತ್ರ (ಪೋರ್ಟ್ರೇಟ್ಸ್) ಗಳನ್ನು ಬರೆಯಿಸಿಕೊಳ್ಳುವ ಹಂಬಲ ಉಳ್ಳವನೂ ಆಗಿದ್ದನು. ಈತನು ಹಾಗೆ ಬರೆಸಿಕೊಂಡ ಚಿತ್ರಗಳಲ್ಲಿ ಒಂದರಲ್ಲಿ ಇಬ್ರಾಹಿಮ್‌ನು ಅಶತ್‌ಖಾನ ಎಂಬ ಆನೆಯ ಮೇಲೆ ಕುಳಿತ ಚಿತ್ರವಿದ್ದು ಇದರಲ್ಲಿ ವಿಶಾಲ ಹುಲ್ಲುಗಾವಲು, ಆಕಾಶ, ಗಿಡಮರ ಮುಂತಾಗಿ ನಿಸರ್ಗದ ಅನಂತ ಸೌಂದರ್ಯವನ್ನು ಹೊಂದಿದೆ. ಇನ್ನೊಬ್ಬ ಕಲಾವಿದ ಗಡ್ಡವಿಲ್ಲದ ತರುಣ ಇಬ್ರಾಹಿಮನನ್ನು ಕುಳಿತು ತೂಕಡಿಸುತ್ತಿರುವಂತೆ ಚಿತ್ರಿಸಿದ್ದಾನೆ. ಬ್ರಿಟಿಷ್ ಮ್ಯುಜಿಯಂನಲ್ಲಿ ಸಂಗ್ರಹಿಸಲಾಗಿರುವ ಇನ್ನೊಂದು ಚಿತ್ರದಲ್ಲಿ ಇಬ್ರಾಹಿಮನು ಮರಗಿಡಗಳು, ಹೂ-ಬಳ್ಳಿಗಳ ಮಧ್ಯೆ ರಾಜೋಚಿತ ಉಡುಗೆಯಲ್ಲಿ ಕುಳಿತಿದ್ದಾನೆ[೯೯] ಎಂಬಂತಹ ವಿವರಗಳು ತಿಳಿದುಬರುತ್ತವೆ.

ಯುರೋಪಿಯನ್ ಕಲಾವಿದ " ಕಾರ್ನಿಲಿಯನ್ ಹೆಡಾ " ಎಂಬಾತನು ವಿಜಾಪುರಕ್ಕೆ ಭೇಟಿ ಕೊಟ್ಟಾಗ (೧೬೦೪) ಆತನ ಕೃತಿಗಳನ್ನು ವೀಕ್ಷಿಸಿ ಅವನನ್ನು ಆಸ್ಥಾನ ಕಲಾವಿದನನ್ನಾಗಿ ಇಬ್ರಾಹಿಂ ದೊರೆ ನೇಮಿಸಿಕೊಂಡನು[೧೦೦] ಎನ್ನುವ ವಿಚಾರ ತಿಳಿದುಬರುವುದು. ಅಲ್ಲದೇ ಇಬ್ರಾಹಿಮ್ ಆದಿಲ್‌ಶಹ ಬಿಜಾಪುರದ ಸುಲ್ತಾನನಾಗಿದ್ದ ವೇಳೆ ಸಮೀಪದ ಕುಮಟಗಿ ಎಂಬ ಊರಲ್ಲಿ ಕೃತಕ ಸರೋವರವನ್ನು ಕಟ್ಟಿಸಿ ಅದರ ಬದಿಯಲ್ಲಿ ವಿಹಾರ ಮಂಟಪ ಕಟ್ಟಿಸಿ ಅದರಲ್ಲಿ ವರ್ಣಚಿತ್ರಗಳನ್ನು ಬರೆಸಿ ಅಲಂಕರಿಸಿದನು. ಚಿತ್ರಕಲೆಯ ಇತಿಹಾಸ ದೃಷ್ಟಿಯಿಂದ ಅಲಿಆದಿಲ್ ಹನ ಪತ್ನಿಯಾದ ಚಾಂದಬೀಬಿ ತುಂಬಾ ಪ್ರಸಿದ್ಧಿ ಪಡೆದ ಮಹಿಳೆಯಾಗಿದ್ದಾಳೆ. ಚಿತ್ರಕಲೆಯಲ್ಲಿ ಆಕೆಗೆ ವಿಶೇಷ ಅಭಿರುಚಿ ಇದ್ದಿತು.[೧೦೧]

---

೯೯. ಬಿ. ಷೇಕ್‌ಅಲಿ (ಸಂ) : ಕರ್ನಾಟಕ ಚರಿತ್ರೆ (ಸಂಪುಟ ೪), ಪುಟ ೩೨೦

೧೦೦. ಅ. ಲ. ನರಸಿಂಹನ್ : ಕರ್ನಾಟಕ ಚಿತ್ರಕಲೆಯ ಸಾಂಸ್ಕೃತಿಕ ಅಂಶಗಳು, (ಬೆಂಗಳೂರು ವಿವಿಗೆ ಸಲ್ಲಿಸಿದ ಬೆರಳಚ್ಚು ಮಹಾಪ್ರಬಂಧ), ಪುಟ ೨೯೦

೧೦೧. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪುಟ ೭೨

ಅವಳ ಆಶ್ರಯದಲ್ಲಿ ' ನಜ-ಉಲ್-ಉಲುಮ್ ' ಎಂಬ ಸಚಿತ್ರ ಗ್ರಂಥ ನಿರ್ಮಾಣಗೊಂಡಿತು. ಅದು ಈಗ ಇಂಗ್ಲೆಂಡಿನ ಚೆಸ್ಟರ್ ಬೆಟ್ಟ ಸಂಗ್ರಹಾಲಯದಲ್ಲಿ ಕಾಯ್ದಿರಿಸಲಾಗಿದೆ. ಕಲಾವಿದರಿಂದ ಆಕೆ ತನ್ನ ಭಾವಚಿತ್ರವನ್ನೂ ಬರೆಸಿಕೊಂಡಿದ್ದಾಳೆ ಎಂಬ ವಿಚಾರಗಳು ತಿಳಿದುಬರುತ್ತವೆ.

ಚಾಂದಬೀಬಿಯ ಮಗನಾದ ಇಬ್ರಾಹಿಂ ಆದಿಲ್ ಶಹನ ಕಾಲದಲ್ಲಿ ಹಲವಾರು ಸಚಿತ್ರ ಗ್ರಂಥಗಳು ಬರೆಸಲ್ಪಟ್ಟವು. ಅಲ್ಲದೇ ತನ್ನ ಆಶ್ರಯದಲ್ಲಿದ್ದ ಚಿತ್ರಕಾರರಿಂದ ಆತ ರಾಗರಾಗಿಣಿಯರು ಎಂಬ ಸಂಗೀತ ಕಲೆಗೆ ಸಂಬಂಧಿಸಿದ ಚಿತ್ರಗಳನ್ನು ಬರೆಸಿದ್ದಾನೆ. ಆದಿಲ್‌ಶಹ ಸ್ವತಃ ಕಲಾವಿದನಾಗಿದ್ದನಂತೆ, ಕವಿ, ಸಾಹಿತಿಯೂ ಆಗಿದ್ದನು. ಆತ ರಚಿಸಿದ ಪ್ರಬಂಧಗಳು " ಕಿತಾಬಿ ನೌರಸ್ " ಎಂಬ ಗ್ರಂಥದಲ್ಲಿ ಪ್ರಕಟಗೊಂಡವು. ಅದು ಸಂಗೀತ ಮತ್ತು ಚಿತ್ರಕಲೆಗೆ ಸಂಬಂಧಿಸಿದ ಪುಸ್ತಕವಾಗಿದ್ದು ಅದರಲ್ಲಿ ಉತ್ತಮವಾದ ಹದಿನೇಳು ರಾಗರಾಗಿಣಿಯರ ಚಿತ್ರಗಳಿವೆ. [೧೦೨]

ಆದಿಲ್‌ಶಾಹಿ ವಂಶದ ಕೊನೆಯ ಅರಸನಾದ ಎರಡನೇ ಅಲಿ ಆದಿಲ್‌ಶಹ ಒಬ್ಬ ಕವಿಯಾಗಿದ್ದನಲ್ಲದೇ ಕವಿಗಳಿಗೆ, ಕಲಾವಿದರಿಗೆ ಆಶ್ರಯವನ್ನಿತ್ತಿದ್ದನು. ಇವನ ಕಾಲಾವಧಿಯಲ್ಲಿ ಅನೇಕ ಸಚಿತ್ರಗ್ರಂಥಗಳು ಬರೆಯಲ್ಪಟ್ಟವು. ಅವುಗಳಲ್ಲಿ 'ಗುಲ್ಷನ್ ಈ ಇಸ್ಕೆ', ಅಲ್ಲಿನಾಮಾ, ಮಧುಮಾಲತಿ ಎಂಬವು ಪ್ರಮುಖವಾಗಿವೆ. ಈ ರೀತಿ ದೊಡ್ಡ ದೊಡ್ಡ ಅರಸರು ಚಿತ್ರಕಲೆಗೆ ಪ್ರೋತ್ಸಾಹ, ಪೋಷಣೆ ಕೊಡುತ್ತಾ ಬಂದಿದ್ದಾರೆ. ಚಿಕ್ಕಪುಟ್ಟ ಸಂಸ್ಥಾನಿಕರೂ ಭಿತ್ತಿ ಚಿತ್ರಕಲೆಯ ಪೋಷಣೆಗೆ, ಪ್ರಸರಣಕ್ಕೆ ನೆರವಾಗಿದ್ದಾರೆ. ಕೆಲವು ಸಂಸ್ಥಾನಿಕರು ಯಾವ ಸಾಮ್ರಾಟರಿಗೂ ಕಡಿಮೆ ಇಲ್ಲದಂತೆ ಚಿತ್ರಕಲಾ ಪೋಷಕರೆನಿಸಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಭಿತ್ತಿಚಿತ್ರಕಲೆಯ ಪೋಷಕರಾದ ಉತ್ತರ ಕರ್ನಾಟಕದ ಸಂಸ್ಥಾನಗಳನ್ನು ನೋಡಬಹುದು.

**ಸವಣೂರು ನವಾಬರು :** ಬಿಜಾಪುರದಲ್ಲಿ ಸಿಕಂದರನು ಆಳುತ್ತಿದ್ದಾಗ ಔರಂಗಜೇಬನು ಸಂಪೂರ್ಣವಾಗಿ ಬಿಜಾಪುರವನ್ನು ಗೆದ್ದನು (೨೨-೦೬-೧೬೮೬). ಸಿಕಂದರನ ಮಂತ್ರಿಯಾಗಿದ್ದ ಅಬ್ದುಲ್ ರವೂಫ್‌ಖಾನ ಎಂಬ ಅಫಘನ್‌ನಿಗೆ ಔರಂಗಜೇಬನು ಕರ್ನಾಟಕದ ಈ ಭಾಗದ ಆಡಳಿತ ವಹಿಸಿಕೊಟ್ಟನು. ಅಬ್ದುಲ್ ರವೂಫ್‌ಖಾನ್‌ನು ಸವಣೂರು ರಾಜಧಾನಿ ಮಾಡಿಕೊಂಡು ಆಡಳಿತ ಪ್ರಾರಂಭಿಸಿದನು. ಇಲ್ಲಿ ಆಳಿದ ಮುಂದಿನ ದೊರೆಗಳು ಸವಣೂರು ನವಾಬರೆಂದು ಖ್ಯಾತರಾದರು. ಸವಣೂರು ನವಾಬರು ಕೂಡಾ ಭಿತ್ತಿ ಚಿತ್ರಕಲೆಗೆ ಪ್ರೋತ್ಸಾಹವಿತ್ತರು. ಈ ಸಂಸ್ಥಾನದ ಕೊನೆಯ ನವಾಬನಾದ ೨ನೇ ಅಬ್ದುಲ್ ಮಜೀದ್‌ಖಾನನ ಆಡಳಿತಾವಧಿಯಲ್ಲಿ (ಕ್ರಿ. ಶ. ೧೯೧೨-೪೮) ಸವಣೂರಿನ ಹೊರವಲಯದಲ್ಲಿ ಅರಮನೆಯೊಂದನ್ನು [೧೦೩] ಕಟ್ಟಿಸಲಾಯಿತು. ಅದರಲ್ಲಿ ಗೋಡೆ ಮತ್ತು ಕಟ್ಟಿಗೆಯ ಹಲಗೆಯ ಮೇಲೆ ವರ್ಣಚಿತ್ರಗಳನ್ನು ಬರೆಸಲಾಗಿದೆ.

**ಸುರಪುರ ಸಂಸ್ಥಾನ :** ಸುರಪುರ ಸಂಸ್ಥಾನವನ್ನು ಆಳಿದ ದೊರೆಗಳಲ್ಲಿ ರಾಜಾ ಇಮ್ಮಡಿ ವೆಂಕಟಪ್ಪ ನಾಯಕ (ಕ್ರಿ. ಶ. ೧೭೭೩-೧೮೦೨) ನಿಂದ ಮೊದಲ್ಗೊಂಡು ಕೊನೆಯ ದೊರೆಯಾದ ರಾಜಾ ನಾಲ್ವಡಿ ವೆಂಕಟಪ್ಪ ನಾಯಕ (೧೮೪೨-೫೮) ನ ವರೆಗಿನ ಅವಧಿಯು ಸುರಪುರ ಸಂಸ್ಥಾನದ ಇತಿಹಾಸದಲ್ಲಿ ಸ್ವರ್ಣಯುಗವಾಗಿತ್ತು. ಚಿತ್ರಕಲೆಯ ದೃಷ್ಟಿಯಿಂದ ಈ ನೂರು ವರ್ಷಗಳ ಅವಧಿಯು ಅತ್ಯಂತ ಗಮನಾರ್ಹವಾಗಿದೆ. ಕಾರಣ ಆಂಧ್ರಪ್ರದೇಶದಿಂದ ಗರುಡಾದ್ರಿ ಎಂಬ ಮನೆತನದ

---

೧೦೨. ಬಿ. ಷೇಕ್‌ಅಲಿ (ಸಂ) : ಕರ್ನಾಟಕ ಚರಿತ್ರೆ (ಸಂಪುಟ ೪), ಪುಟ ३.೨೨

೧೦೩. ಗೋವಿಂದಮೂರ್ತಿ ದೇಸಾಯಿ : ಸವಣೂರು ನವಾಬರು, ಪುಟ ೧೪೪

ಕಲಾವಿದ ಕುಟುಂಬವು ಬಂದು ಸುರಪುರ ಅರಸರಲ್ಲಿ ಆಶ್ರಯ ಪಡೆಯಿತು. ಕಲಾಪ್ರೇಮಿಗಳಾದ ಸುರಪುರ ದೊರೆಗಳು. ಗರುಡಾದ್ರಿ ಮನೆತನದವರನ್ನು ಅತ್ಯಂತ ಗೌರವದಿಂದ ಕಂಡು ಅವರನ್ನು ಆಸ್ಥಾನ ಕಲಾವಿದರನ್ನಾಗಿ ಮಾಡಿಕೊಂಡರಲ್ಲದೇ ತಮ್ಮ ಇಷ್ಟದೈವ ಶ್ರೀವೇಣುಗೋಪಾಲ ಸ್ವಾಮಿಯ ಅರ್ಚಕರು ಮತ್ತು ಮೇಲ್ವಿಚಾರಕರಾಗಿ ನೇಮಿಸಿದರು. ಈ ಕಲಾವಿದ ಕುಟುಂಬದ ಜೀವನೋಪಾಯಕ್ಕಾಗಿ. ಅವರನ್ನು ಪ್ರೋತ್ಸಾಹಿಸುವುದಕ್ಕಾಗಿ ಸುರಪುರ ದೊರೆಗಳು ತೆಗ್ಗಳ್ಳಿ. ಶಾಖಾಪುರ. ಶಹಪುರ ತಾಲೂಕಿನ ಮಡಬುಳ ಗ್ರಾಮಗಳಲ್ಲಿ ಸಮಾರು ಎರಡುನೂರು ಎಕರೆ ಭೂಮಿಯನ್ನು [೧೦೪] ಉಂಬಳಿಯಾಗಿ ಕೊಟ್ಟಿದ್ದರು.

ಸುರಪುರ ಸಂಸ್ಥಾನಿಕರಲ್ಲಿ ಆಸ್ಥಾನ ಕಲಾವಿದರಾಗಿದ್ದ ಗರುಡಾದ್ರಿ ಮನೆತನದವರು ಹಾಳೆಯ ಮೇಲೆ ಚಿತ್ರಗಳನ್ನು ಬರೆದಿರುವುದು ಮಾತ್ರವಲ್ಲದೇ ಅನೇಕ ಸ್ಥಳಗಳಲ್ಲಿ ಭಿತ್ತಿಚಿತ್ರಗಳನ್ನು ರಚಿಸಿದ್ದಾರೆ. ರಾಜರ ಅರಮನೆಯಲ್ಲಿ, ಮಂದಿರಗಳಲ್ಲಿ. ಮಠಗಳಲ್ಲಿ ಮತ್ತು ಕೆಲವು ಶ್ರೀಮಂತರ ಮನೆಯ ಗೋಡೆಗಳಲ್ಲಿ ಆಸ್ಥಾನದ ಇತರ ಪ್ರಮುಖರಾದ ಜಹಗೀರದಾರರು. ಅಧಿಕಾರಿಗಳಂತಹ ಪ್ರತಿಷ್ಠಿತರ ಮನೆಗಳಲ್ಲಿ ಇವರು ಭಿತ್ತಿ ಚಿತ್ರಗಳನ್ನು ರಚಿಸಿದ್ದು [೧೦೫] ಕಂಡುಬರುತ್ತವೆ. ಆದರೆ. ಅನೇಕ ಕಾರಣಗಳಿಂದ ಅಂತಹ ಹೆಚ್ಚಿನ ಭಿತ್ತಿ ಚಿತ್ರಗಳು ನಾಶಹೊಂದಿ ಈಗ ಸುರಪುರದ ಅರಮನೆ, ರಂಗಂಪೇಟೆಯ ಮಠಗಳಲ್ಲಿ ಮಾತ್ರ ಚಿತ್ರಗಳು ಉಳಿದುಕೊಂಡಿವೆ. ಸುರಪುರದ ಸಂಸ್ಥಾನದ ಕಲಾ ಬೆಳವಣಿಗೆಗೆ ಬ್ರಿಟೀಷ್ ಅಧಿಕಾರಿ ಮೆಡೋಸ್ ಟೇಲರ್ ಎಂಬವನ ಪಾತ್ರವು ಅಡಕವಾಗಿದೆ. ಈತ ಸಂಶೋಧಕ, ಇತಿಹಾಸಕಾರ, ಕಾದಂಬರಿಕಾರನಾಗಿದ್ದನಲ್ಲದೇ ಉತ್ತಮ ಚಿತ್ರಕಾರನೂ ಆಗಿದ್ದ. ಕಲೆಯಲ್ಲಿ ಪದವಿಯನ್ನು ಪಡೆದ ಈತ ಸುರಪುರವು ಕಲಾ ಕೇಂದ್ರವಾಗಲು ಶ್ರಮಿಸಿದ.

**ನರಗುಂದ ಮತ್ತು ರಾಮದುರ್ಗ ಸಂಸ್ಥಾನಗಳು :** ನರಗುಂದ ಮತ್ತು ರಾಮದುರ್ಗ ಇವೆರಡೂ ಕೋಟೆಗಳನ್ನು ಶಿವಾಜಿಯು ಕ್ರಿ. ಶ. ೧೬೭೪ ರಲ್ಲಿ ಕಟ್ಟಿಸಿದನು. ಈ ಕೋಟೆಗಳು ಶಿವಾಜಿಯ ಕೊನೆಗಾಲಕ್ಕೆ ' ಅಪ್ಪಾಜಿ ಸೂರೋ ' ಎಂಬ ಬ್ರಾಹ್ಮಣನ ವಶದಲ್ಲಿದ್ದವು. ಈ ಎರಡೂ ಕೋಟೆಗಳನ್ನು ಔರಂಗಜೇಬನು ಕ್ರಿ. ಶ. ೧೬೯೨ ರಲ್ಲಿ ಗೆದ್ದುಕೊಂಡನು. ಮುಂದೆ ೧೫ ವರ್ಷಗಳ ನಂತರ ' ಅಪ್ಪಾಜಿ ಸೂರೋ ' ನ ಕೈಕೆಳಗೆ ಕಾರಕೂನನಾಗಿದ್ದ ರಾಮರಾವ್ ದಾದಾಜಿ ಭಾವೆ ಎಂಬ ಕೊಂಕಣಸ್ಥ ಬ್ರಾಹ್ಮಣನು ಎರಡೂ ಕೋಟೆಗಳನ್ನು ಯುಕ್ತಿಯಿಂದ ಹಿಡಿದುಕೊಂಡನು. ನರಗುಂದವನ್ನು ಕೇಂದ್ರಸ್ಥಾನವನ್ನಾಗಿ ಮಾಡಿಕೊಂಡು ತನ್ನ ಆಡಳಿತ ಪ್ರಾರಂಭಿಸಿದನು. ಇಲ್ಲಿಂದಲೇ ನರಗುಂದ ಸಂಸ್ಥಾನದ ಪ್ರತ್ಯೇಕ ಆಡಳಿತ ಪ್ರಾರಂಭವಾಯಿತು. ರಾಮರಾವ್‌ಗೆ ಯೋಗಿರಾಯನೆಂಬ ಮಗನಿದ್ದು ಆತನೊಡನೆ ಕಾಶಿಯಾತ್ರೆಗೆ ತೆರಳಿದ್ದನು. ಅಲ್ಲಿ ರಾಮರಾವ್‌ನು ಅಸುನೀಗಲು ಇತ್ತ ದಾದಾಜಿಯು ಸಂಪೂರ್ಣ ಅಧಿಕಾರ ಸೂತ್ರ ಹಿಡಿದುಕೊಂಡಿದ್ದನು. ಯಾತ್ರೆಯಿಂದ ಹಿಂದಿರುಗಿದ ರಾಮರಾವ್‌ನ ಮಗ ಯೋಗಿರಾಯನು ದಾದಾಜಿಯ ಸಂಗಡ ಜಗಳವಾಡಿ ದಾದಾಜಿಯನ್ನು ಕೊಲ್ಲಿಸಿದನು. ಇದರಿಂದ ಸಿಟ್ಟಿಗೆದ್ದ ದಾದಾಜಿಯ ಮಗ ಭಾಸ್ಕರ ರಾಯನಿಗೂ ಯೋಗಿರಾಯನಿಗೂ ಮತ್ತೆ ಜಗಳ ತೊಡಗಿಕೊಂಡಿತು. ಈ ಜಗಳದ ಸಮಯದಲ್ಲಿ ಅಪ್ಪಾಜಿ ಸೂರೋನ ದತ್ತುಪುತ್ರ ಬಳವಂತರಾವ್‌ನು ಸಮಯ ಸಾಧಿಸಿ ಮತ್ತೆ ಅಧಿಕಾರ ಸೂತ್ರ ಹಿಡಿದುಕೊಂಡನು. ಆದರೆ ಈ ಘಟನೆಯಿಂದ ಸುಮ್ಮನಿರದ ಭಾಸ್ಕರ ರಾಯನು

---

೧೦೪. ಬಸವರಾಜ ಉಪ್ಪಿನ : ಬಾನಯ್ಯಗರುಡಾದ್ರಿ, ಪುಟ ೨

೧೦೫. ಬಸವರಾಜ ಉಪ್ಪಿನ : ಬಾನಯ್ಯಗರುಡಾದ್ರಿ, ಪುಟ ೩

ಪುಣೆಗೆ ಹೋಗಿ ಮಾಧವರಾಯನ ಪ್ರೀತಿ ಸಂಪಾದಿಸಿಕೊಂಡು ಅವನ ಬೆಂಬಲದಿಂದ ಬಳವಂತರಾವ್‌ನನ್ನು ಪದಚ್ಯುತಗೊಳಿಸಿ ತಾನೇ ಮತ್ತೆ ನರಗುಂದ ಸಂಸ್ಥಾನವನ್ನು ಹಿಡಿದುಕೊಂಡನು. ಈ ಘಟನೆಯಲ್ಲಿ ಅಧಿಕಾರ ಕಳೆದುಕೊಂಡ ನಿಜವಾದ ವಾರಸುದಾರನಾದ ಬಳವಂತರಾವ್‌ನಿಗೆ ಮಾಧವರಾವ್ ಪೇಶ್ವೆಯು ೧೨,೦೦೦ (ಹನ್ನೆರಡು ಸಾವಿರ) ಗಳ ಆದಾಯ ಬರುವಂತೆ ನೇಮಕ ಮಾಡಿದನು. ಅಷ್ಟಲ್ಲದೇ ಹೆಬ್ಬಳ್ಳಿ ಎಂಬ ಗ್ರಾಮವನ್ನು ಜಹಗೀರಾಗಿ ಬಳವಂತರಾವ್‌ನಿಗೆ ಕೊಡಲಾಯಿತು. ಭಾಸ್ಕರ ರಾವ್‌ನು ಸಂಸ್ಥಾನವನ್ನು ಆಳುತ್ತ ಯೋಗಿರಾಯನಿಗೆ ನಿಯಮಿತ ರೂಪದ ಆದಾಯಗಳನ್ನು ಕೊಡುತ್ತ ಬಂದನು. ಕಾರಣ ಪೇಶ್ವೆಯು ಇಬ್ಬರಿಗೂ ಸೇರಿಸಿ ಸಂಸ್ಥಾನವನ್ನು ಕೊಟ್ಟಿದ್ದನು. ಮುಂದೆ ಭಾಸ್ಕರರಾವ್‌ನ ಮಗ ವೆಂಕಟರಾವ್‌ನು ಆಡಳಿತ ಮಾಡುತ್ತಿದ್ದಾಗ ಕ್ರಿ. ಶ. ೧೭೮೦ ರಲ್ಲಿ ಟಿಪ್ಪೂಸುಲ್ತಾನ್ ನರಗುಂದವನ್ನು ವಶಪಡಿಸಿಕೊಂಡನು. ವೆಂಕಟರಾವ್‌ನನ್ನು ಅವನ ಮನೆಯವರನ್ನು ಸೆರೆಹಿಡಿದು ಶ್ರೀರಂಗಪಟ್ಟಣಕ್ಕೆ ಒಯ್ದನು. ಈ ಸಂದರ್ಭದಲ್ಲಿ ಯೋಗಿರಾವ್‌ನ ಮಗ ರಾಮರಾವ್ ತಪ್ಪಿಸಿಕೊಂಡು ಹೋಗಿ ರಾಮದುರ್ಗದಲ್ಲಿ ನೆಲೆನಿಂತನು. ಇಲ್ಲಿಂದ ಮುಂದೆ ರಾಮದುರ್ಗ ಸಂಸ್ಥಾನದ್ದೇ ಆದ ಪ್ರತ್ಯೇಕ ಆಡಳಿತ ಪ್ರಾರಂಭಗೊಂಡಿತು.

**ನರಗುಂದ ಸಂಸ್ಥಾನಿಕರು :** ಇವರು ಕಲೆಯ ಬಗ್ಗೆ ವಿಶೇಷ ಆಸಕ್ತಿ ಉಳ್ಳವರಾಗಿದ್ದರು. ಮಹಾರಾಷ್ಟ್ರ ಭಾಗದಿಂದ ಕಲಾವಿದರನ್ನು ಕರೆಸಿ ಚಿತ್ರ ಬರೆಸುತ್ತಿದ್ದರೆಂದು ಊಹಿಸಬಹುದಾಗಿದೆ. ಕಾರಣ ಇವರು ಬರೆಸಿದ ಚಿತ್ರಗಳಲ್ಲಿ ಮರಾಠಾ ಲಕ್ಷಣಗಳು ಹೆಚ್ಚಾಗಿ ಕಂಡುಬರುತ್ತವೆ. ನರಗುಂದ ಸಂಸ್ಥಾನಿಕರು ತಮ್ಮ ಅರಮನೆ ಮತ್ತು ಪೂಜಾಸ್ಥಾನಗಳನ್ನು ಭಿತ್ತಿಚಿತ್ರಗಳಿಂದ ಅಲಂಕರಿಸುವಲ್ಲಿ ಆಸಕ್ತರಾಗಿದ್ದರು. ನರಗುಂದ ಸಂಸ್ಥಾನಿಕ ಅರಸರು ಬರೆಸಿದ ಭಿತ್ತಿ ಚಿತ್ರಗಳು ಅದೇ ಊರಿನ ಅರಮನೆ (ಇದನ್ನು ಈಗ ಮುನಸಿಪಲ್ ಕಛೇರಿಯಾಗಿ ಮಾಡಲಾಗಿದೆ) ಮತ್ತು ವೆಂಕಟೇಶ್ವರ ದೇವಾಲಯಗಳಲ್ಲಿ ಕಂಡುಬರುತ್ತವೆ.

ರಾಮದುರ್ಗ ಸಂಸ್ಥಾನಿಕರ ಭಿತ್ತಿ ಚಿತ್ರಗಳು ಅದೇ ಊರಿನಲ್ಲಿರುವ ಅವರ ಅರಮನೆ (ವಾಡೆ) ಯಲ್ಲಿ ಕಂಡುಬರುತ್ತವೆ. ರಾಮದುರ್ಗ ಅರಮನೆಯ ಈ ಭಿತ್ತಿ ಚಿತ್ರಗಳು ಗೋಡೆಯ ಮೇಲೆ ಮತ್ತು ಗೋಡೆಗೆ ಅಳವಡಿಸಿದ ಗಾಜಿನ ಮೇಲೆ ಇವೆ. ಇಲ್ಲಿ ಯಾವುದೇ ವ್ಯಕ್ತಿಚಿತ್ರಣ, ಪ್ರಾಣಿ-ಪಕ್ಷಿಗಳ ಚಿತ್ರಗಳಿರದೇ ಅಲಂಕಾರಿಕ ಜಾಮಿತಿಕ ನಕ್ಷೆಗಳಿವೆ. ಕೆಲವು ನಕ್ಷೆಗಳನ್ನು ಹಸಿರು, ಕೆಂಪು, ನೀಲಿ ಮುಂತಾದ ವರ್ಣಗಳಿಂದ ಗಾಜಿನ ಮೇಲೆ ರಚಿಸಲಾಗಿದ್ದರೆ, ಪ್ರವೇಶದ್ವಾರದ ಒಳಭಾಗದಲ್ಲಿ ಬಾಗಿಲ ಮೇಲೆ ಹೂವಿನ ನಕ್ಷೆ ಸ್ವಲ್ಪ ಪ್ರಮಾಣದಲ್ಲಿ ಕಂಡುಬರುತ್ತದೆ. ಇದನ್ನು ಗೋಡೆಯ ಮೇಲೆ ರಚಿಸಲಾಗಿದೆ.

**ನಿಪ್ಪಾಣಿ ಸಂಸ್ಥಾನ :** ನಿಪ್ಪಾಣಿ ಸಂಸ್ಥಾನವನ್ನು ನಿಂಬಾಳಕರ್ ದೇಸಾಯಿ ಎಂಬ ವಂಶಸ್ಥರು ಆಳಿದ್ದಾರೆ. ನಿಪ್ಪಾಣಿ ಸಂಸ್ಥಾನವು ನಿಂಬಾಳಕರ್ ದೇಸಾಯಿ ಮನೆತನಕ್ಕೆ ವಿಜಾಪುರ ಆದಿಲ್‌ಶಾಹಿ ಸುಲ್ತಾನರಿಂದ ಜಹಗೀರಾಗಿ ಬಂದಿತ್ತು. ನಿಂಬಾಳಕರ್ ದೇಸಾಯಿ ಮನೆತನದ ರಾಜರುಗಳು ಚಿತ್ರಕಲೆಗೆ ಅತ್ಯಂತ ಹೆಚ್ಚಿನ ಗಮನ ಕೊಟ್ಟಿದ್ದು ಅವರು ಬರೆಸಿದ ಭಿತ್ತಿ ಚಿತ್ರಗಳಿಂದಲೇ ತಿಳಿಯುತ್ತದೆ. ನಿಪ್ಪಾಣಿ ಸಂಸ್ಥಾನದ ನಿಂಬಾಳಕರ್ ದೇಸಾಯಿಗಳು ಬರೆಸಿದ ಭಿತ್ತಿ ಚಿತ್ರಗಳು ನಿಪ್ಪಾಣಿಯಲ್ಲಿರುವ, ಸಂಸ್ಥಾನದ ವಾರಸುದಾರರಾದ ನಿಂಬಾಳಕರ್ ದೇಸಾಯಿಗಳಿಗೆ ಸೇರಿದ ವಾಡೆಯಲ್ಲಿ ಕಂಡುಬರುತ್ತವೆ. ಅಲ್ಲದೇ ಇದೇ ಊರಿನಲ್ಲಿರುವ ಇನ್ನೊಂದು ಹಳೆಗಾಲದ ವಾಡೆಯಲ್ಲಿ ಭಿತ್ತಿ ಚಿತ್ರಗಳಿದ್ದವೆಂದು ಶಿವರಾಮ ಕಾರಂತ ಹೇಳುತ್ತಾರೆ. ಆದರೆ ಇಂದು ಆ ಹಳೆಗಾಲದ ವಾಡೆಯು ಇಲ್ಲ. ಇದನ್ನು ನಾಶಪಡಿಸಿ ಅಲ್ಲಿ ನವ್ಯ ಕಟ್ಟಡವನ್ನು ಕಟ್ಟಲಾಗಿದೆ.

**ಮುಧೋಳ ಸಂಸ್ಥಾನ :** ಮುಧೋಳ ಸಂಸ್ಥಾನದ ದೊರೆಗಳು ಮಹಾಲಿಂಗಪುರ ಮಠಕ್ಕೆ ಉದಾರವಾಗಿ ದಾನದತ್ತಿಗಳನ್ನು ಕೊಟ್ಟು ಮಠದ ಬೆಳವಣಿಗೆಗೆ ಕಾರಣರಾದರು. ಮುಧೋಳ ಸಂಸ್ಥಾನವನ್ನು ಘೋರ್ಪಡೆ ಮನೆತನದವರು ಆಳಿದ್ದು, ಈ ಸಂಸ್ಥಾನದ ಮಾಲೋಜಿರಾಜನ ಮೊಮ್ಮಗನಾದ ನಾರಾಯಣರಾವ ಘೋರ್ಪಡೆ ಎಂಬವನು ಕ್ರಿ. ಶ. ೧೭೬೮ ರಲ್ಲಿ ನರಗಟ್ಟಿ (ಮಹಾಲಿಂಗಪುರ) ಗ್ರಾಮವನ್ನೇ ಮಠಕ್ಕೆ ಉಂಬಳಿಯಾಗಿ ಕೊಟ್ಟನು. ಇದಲ್ಲದೇ ಇಬ್ರಾಹಿಂ ಎಂಬ ಮುಸ್ಲಿಂ ಬಾದಶಹನೊಬ್ಬ ಈ ಮಠಕ್ಕೆ ಸನದು ಕೊಟ್ಟಿರುವ [೧೦೬] ವಿಷಯ ತಿಳಿದುಬರುತ್ತದೆ. ಈ ಸಂಸ್ಥಾನಿಕರು ಮಠದ ಮೇಲಿಟ್ಟಿದ್ದ ಭಕ್ತಿ. ಅಭಿಮಾನಗಳು ಅಪಾರ. ಮಹಾಲಿಂಗಪುರದ ಮಠವು ಭಿತ್ತಿ ಚಿತ್ರಗಳಿಂದ ಅಲಂಕೃತಗೊಂಡಿದ್ದು ಒಳಗೋಡೆಗಳು ಚಿತ್ರಗಳಿಂದ ತುಂಬಿದ್ದವು. ಆದರೆ ಇಂದು ಕೇವಲ ಮೂರು ಚಿತ್ರಗಳು ಮಾತ್ರ ಉಳಿದುಕೊಂಡಿವೆ. ಮಠದಲ್ಲಿನ ಈ ಭಿತ್ತಿಚಿತ್ರಗಳು ಮುಧೋಳ ಸಂಸ್ಥಾನಿಕರ ಪ್ರೋತ್ಸಾಹದಿಂದ ರಚಿಸಲ್ಪಟ್ಟಿವೆ.

**ಬಿಳಗಿ ಸಂಸ್ಥಾನ :** ಉತ್ತರ ಕನ್ನಡ ಜಿಲ್ಲೆಯ ಬಿಳಗಿಯು ಹಿಂದೆ ' ಶ್ವೇತಪುರ ' ವೆಂದು ಕರೆಯಲ್ಪಡುತ್ತಿತ್ತು. ಈ ಶ್ವೇತಪುರದ ಅರಸರು ವಿಜಯನಗರದ ಪ್ರಬಲರಾದ ಸಾಮಂತರಲ್ಲಿ ಒಬ್ಬರಾಗಿದ್ದರು. ಶ್ವೇತಪುರ ಸಂಸ್ಥಾನದ ವ್ಯಾಪ್ತಿಯು ಅಂದು ಉತ್ತರ ಕನ್ನಡ ಜಿಲ್ಲೆಯ ಗಂಗಾವಳಿ ನದಿಯಿಂದ ದಕ್ಷಿಣ ಕನ್ನಡ ಜಿಲ್ಲೆಯ ಗಂಗೊಳ್ಳಿ ನದಿಯವರೆಗೆ ಹಬ್ಬಿತ್ತು. ಈ ಪ್ರದೇಶವನ್ನು ಹೈವನಾಡೆಂದು ಕರೆಯುತ್ತಿದ್ದರು. ಈ ಹೈವನಾಡಿಗೆ ಶ್ವೇತಪುರ ರಾಜಧಾನಿ. ಆ ಶ್ವೇತಪುರವೇ ಇಂದಿನ ಬೀಳಗಿ. ಕ್ರಿ. ಶ. ೧೪೯೦ ರಿಂದ ೧೭೬೦ ರ ವರೆಗೂ ಬೀಳಗಿ ರಾಜಧಾನಿಯಾಗಿ ಮೆರೆಯಿತು. ಮುಂದೆ ಬ್ರಿಟೀಷರ ಆಗಮನದಿಂದ ಹೈವನಾಡು ಉತ್ತರ ಕನ್ನಡ ಜಿಲ್ಲೆಯಾಯಿತು. ಕ್ರಿ. ಶ. ೧೮೬೦ ರ ತನಕ ಬೀಳಗಿಯು ತಾಲೂಕು ಕೇಂದ್ರವಾಗಿತ್ತು.

ಬಿಳಗಿ (ಶ್ವೇತಪುರ) ಯಲ್ಲಿ ಘಂಟೆ ರಾಜವಂಶದವರು ಆಳ್ವಿಕೆ ನಡೆಸಿದರು. ವಿಜಯ ನಗರದ ಕೃಷ್ಣದೇವರಾಯನ ಸಮಕಾಲೀನವಾಗಿ ಬೀಳಗಿಯಲ್ಲಿ ನರಸಿಂಹ ಭೂಪಾಲ ಆಳ್ವಿಕೆ ನಡೆಸುತ್ತಿದ್ದ. ಘಂಟೆರಾಜ ವಂಶದ ಮೂಲ ಪುರುಷ ಅಂಡಣ್ಣ ಎಂಬ ವೀರ ಯೋಧ. ಈತನ ನಂತರ ಮುಂಡಣ್ಣ, ನರಸಿಂಹ, ಭೂಪಾಲ, ಘಂಟಣ್ಣನೃಪತಿ, ವೀರಪ್ಪ ಒಡೆಯ. ಇಮ್ಮಡಿ ಘಂಟೇಂದ್ರ ಮುಂತಾದ ದೊರೆಗಳು ರಾಜ್ಯಭಾರ ಮಾಡಿದ್ದಾರೆ. [೧೦೭] ಬೀಳಗಿಯ ಅರಸರು ಕಲಾ ಪೋಷಕರಾಗಿದ್ದು ಅನೇಕ ದೇವಾಲಯ, ಬಸದಿ, ಮಠಗಳನ್ನು ಸ್ಥಾಪಿಸಲು ಪ್ರೋತ್ಸಾಹಿಸಿದ್ದಾರೆ. ಅವುಗಳಲ್ಲಿ ಬಿಳಗಿಯ ೯ ನೇ ದೊರೆಯಾದ ರಂಗರಾಜನು ನಿರ್ಮಿಸಿದ ವಿರೂಪಾಕ್ಷ ದೇವಾಲಯ, ಶಿರಳಗಿಯ ಬೊಮ್ಮಣ್ಣನ ಮಗ ತಿಪ್ಪರಸಯ್ಯ ೧೪೦೦ ರಲ್ಲಿ ಕಟ್ಟಿಸಿದ ಹನುಮಂತ ದೇವಾಲಯ, ಬೀಳಗಿ ಗೌಡ ಆಳ್ವಿಕೆಯ ಕಾಲದಲ್ಲಿ ರಚನೆಯಾದ ವೀರಭದ್ರ ದೇವಾಲಯಗಳು ಸುಂದರವಾಗಿದ್ದು ಪ್ರಮುಖವಾಗಿವೆ. ಕ್ರಿ. ಶ. ೧೫೭೦ ರಲ್ಲಿ ಬಿಳಗಿಯ ಸೋಮ ನದಿ ತೀರದಲ್ಲಿ ನಿರ್ಮಿಸಿದ ವಾದಿರಾಜ ಮಠ. ೧೪೭೫ ರಿಂದ ೧೫೮೮ ರ ವರೆಗೂ ಕಾಲಕಾಲಕ್ಕೆ ಬೇರೆ ಬೇರೆ ರಾಜರಿಂದ ನಿರ್ಮಿತವಾದ ರತ್ನತ್ರಯ ಬಸದಿಗಳು [೧೦೮] ಕಲಾಕೃತಿಯಂತೆ ಕಂಗೊಳಿಸುತ್ತವೆ. ಇವೆಲ್ಲವುಗಳ ಜೊತೆಗೆ ಭಿತ್ತಿ ಚಿತ್ರಕಲೆಗೂ ಬಿಳಗಿ ಅರಸರು ಪ್ರೋತ್ಸಾಹ ಕೊಟ್ಟಿದ್ದಾರೆ. ಕರಾವಳಿ ಪ್ರದೇಶಕ್ಕೆ ಮಾತ್ರ ಸೀಮಿತವಾದ ಕಾವಿ ಬಣ್ಣದ ಭಿತ್ತಿ ಚಿತ್ರಕಲೆಯು ಈ ಭಾಗದ ಗೌಡ ಸಾರಸ್ವತ ಬ್ರಾಹ್ಮಣರ ದೇವಾಲಯಗಳು ಮತ್ತು ಮನೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಇಂತಹ ಕಾವಿ ಭಿತ್ತಿ ಚಿತ್ರ ರಚನೆಯನ್ನು ತಮ್ಮ ಗೃಹ ಮತ್ತು ದೇವಾಲಯಗಳಲ್ಲಿ ರಚಿಸುತ್ತಿದ್ದ ಸಾರಸ್ವತ ಬ್ರಾಹ್ಮಣರಿಗೆ

---

೧೦೬. ಅಶೋಕ ನರೋಡೆ (ಸಂ) : ಮಹಲಿಂಗೇಶ್ವರ ಬಹುಪರಾಕ್‌ಗಳು, ಪುಟ ೩೪

೧೦೭. ಪದ್ಮಾಕರ ಮಡಗಾಂವಕರ (ಸಂ) : ಶ್ವೇತಪುರ, ಪುಟ ೧೫, ೧೭, ೨೦

೧೦೮. ಪದ್ಮಾಕರ ಮಡಗಾಂವಕರ (ಸಂ) : ಶ್ವೇತಪುರ, ಪುಟ ೧೭

ಬೀಳಗಿಯ ಅರಸರು ಪ್ರೋತ್ಸಾಹ ಪೋಷಣೆ ಕೊಟ್ಟು ಈ ಭಾಗದ ಅಂದರೆ ಉತ್ತರ ಕನ್ನಡ ಜಿಲ್ಲೆಯ ಕಾವಿ ಭಿತ್ತಿ ಚಿತ್ರಕಲೆ ಬೆಳೆಯಲು ಕಾರಣರಾದರು.

ಕ್ರಿ. ಶ. ೧೫ ನೇ ಶತಮಾನದಲ್ಲಿ ಗೌಡ ಸಾರಸ್ವತ ಬ್ರಾಹ್ಮಣರು ಗೋವಾದಿಂದ ಕುದುರೆ ವ್ಯಾಪಾರಕ್ಕಾಗಿ ಬೀಳಗಿಗೆ ಬಂದಿದ್ದರು. ಇವರಿಗೆ ಬಿಳಗಿ ರಾಜರ ಸಹಕಾರ ದೊರೆಯಿತು. ಮುಂದೆ ಗೋವಾದಲ್ಲಿ ಪೋರ್ತುಗೀಜರಿಂದ ವ್ಯಾಪಕ ಮತಾಂತರ ಚಟುವಟಿಕೆಗಳು ನಡೆದಾಗ ಹೆಚ್ಚಿನ ಜನರು ಗೋವಾದಿಂದ ಬಿಳಗಿ ರಾಜ್ಯಕ್ಕೆ ಬಂದು ನೆಲೆಸಿದರು. ಅಂದು ಉತ್ತರ ಕನ್ನಡ ಜಿಲ್ಲೆಯ ಹೆಚ್ಚಿನ ಬಾಗ ಬೀಳಗಿ ರಾಜ್ಯಕ್ಕೊಳಪಟ್ಟಿತ್ತು. ಹೀಗೆ ವಲಸೆ ಬಂದ ಗೌಡ ಸಾರಸ್ವತ ಬ್ರಾಹ್ಮಣರಿಗೆ ಬೀಳಗಿ ದೊರೆಗಳು ಸಹಾಯ. ಸಹಕಾರ. ಪ್ರೋತ್ಸಾಹಗಳನ್ನು ಕೊಟ್ಟರು. ಅವರು ತಾವು ನೆಲೆನಿಂತಲ್ಲಿ ತಮ್ಮ ದೇವಾಲಯಗಳನ್ನು ಕಟ್ಟಿಕೊಳ್ಳಲು ತಮ್ಮಿಷ್ಟದಂತೆ ಧಾರ್ಮಿಕ ವಿಧಿ ಆಚರಿಸಲು ಅವರಿಗೆ ಸ್ವಾತಂತ್ರ್ಯವನ್ನು ಬೀಳಗಿ ರಾಜರು ಕೊಟ್ಟಿದ್ದರು. ಅಲ್ಲದೇ ಸ್ವಾದಿಯ ದೇವಸ್ಥಾನದಲ್ಲಿ ದೊರೆತ ಒಂದು ತಾಮ್ರ ಶಾಸನದಂತೆ ಬೀಳಗಿ ರಾಜನು ಕ್ರಿ. ಶ. ೧೭೧೬ ರಲ್ಲಿ ಗೌಡ ಸಾರಸ್ವತ ಸಮಾಜದ ರಾಮದಾಸ್ ಕಾಮತ್, ಅಮ್ಮಣ್ಣ ಬಿಳಗಿ, ಗೋಪಾಲ ಶಾನಭಾಗ ಎಂಬವರಿಗೆ ಕಟ್ಟೆಕೈ, ಡೊಂಬೆಕೈ, ಕಲಕೈ ಹಾಗೂ ಕಪ್ಪೆಕೈ ಈ ನಾಲ್ಕೂ ಗ್ರಾಮಗಳನ್ನು ಉಂಬಳಿಯಾಗಿ ನೀಡಿದ [೧೦೯] ದಾಖಲೆ ದೊರೆಯುತ್ತದೆ. ಹೀಗೆ ಬಿಳಗಿ ಅರಸರು ಗೌಡ ಸಾರಸ್ವತ ಬ್ರಾಹ್ಮಣರಿಗೆ ಸಹಾಯ ಸಹಕಾರ ಕೊಟ್ಟು ಅವರಿಂದ ಕಾವಿ ಭಿತ್ತಿ ಚಿತ್ರಕಲೆ ಬೆಳೆಯಲು ಕಾರಣರಾಗಿದ್ದಾರೆ. ಬಿಳಗಿಯಲ್ಲಿ ಎರಡು ಶ್ರೀ ಸೀತಾರಾಮಚಂದ್ರ ದೇವಸ್ಥಾನಗಳಿದ್ದು ಒಂದು ಬಾಳಗೋಡ ಸೀತಾರಾಮಚಂದ್ರ ದೇವಸ್ಥಾನ, ಇನ್ನೊಂದು ಬೇಡ್ಕಣೆ ಸೀತಾರಾಮಚಂದ್ರ ದೇವಸ್ಥಾನ. ಇವೆರಡೂ ಗೌಡ ಸಾರಸ್ವತ ಬ್ರಾಹ್ಮಣರಿಗೆ ಸೇರಿದ್ದು ಅವುಗಳಲ್ಲಿ ವಿಪುಲವಾಗಿ ಕಾವಿ ಬಣ್ಣದ ಭಿತ್ತಿಚಿತ್ರಗಳಿವೆ.

**ಸೋದೆ ಅರಸರು :** ಕ್ರಿ. ಶ. ಸುಮಾರು ೧೪೦೦ ರಲ್ಲಿ ಆಳ್ವಿಕೆ ಪ್ರಾರಂಭಿಸಿದ ಸೋದೆಯ ಅರಸರಲ್ಲಿ ಇಮ್ಮಡಿ ಅರಸಪ್ಪನಾಯಕ (೧೫೫೫-೧೬೦೩). ರಾಮಚಂದ್ರನಾಯಕ (೧೬೦೩-೧೬೧೮), ರಘುನಾಥನಾಯಕ (೧೬೧೮-೧೬೩೮), ಮಧುಲಿಂಗನಾಯಕ (೧೬೩೮-೧೬೬೫), ಸವಾಯಿ ರಾಮಚಂದ್ರನಾಯಕ (೧೬೬೫-೧೬೮೨), ಒಂದನೇ ಸದಾಶಿವರಾಯ (೧೬೮೨-೧೭೧೮), ಇಮ್ಮಡಿ ಸದಾಶಿವರಾಯ (೧೭೪೫-೧೭೬೩) ಪ್ರಮುಖರಾಗಿದ್ದಾರೆ. ಸೋದೆ ಅರಸರ ಕಾಲದಲ್ಲಿ ಕಲೆ ಮತ್ತು ವಾಸ್ತುಶಿಲ್ಪಗಳು ಆಯಾ ಧರ್ಮಗಳನ್ನು ಅನುಸರಿಸಿ ರಚನೆಯಾದವು. ವೈದಿಕ, ವೀರಶೈವ, ಜೈನ ಮತಗಳನ್ನು ಇವರು ಪೋಷಿಸಿ ಆಯಾ ಧರ್ಮಗಳ ಕಲಾಕೃತಿಗಳು ನಿರ್ಮಾಣವಾಗುವಲ್ಲಿ ಕಾರಣೀಕರ್ತರಾದರು. ಸ್ವರ್ಣವಲ್ಲಿ ಮಠವನ್ನು ಇಮ್ಮಡಿ ಅರಸಪ್ಪನಾಯಕನ ಕಾಲದಲ್ಲಿ ಪುನಃರೂಪಿಸಲಾಯಿತು (೧೫೫೫). ಹಾಗೇ ಸೋದೆಯ ವಾದಿರಾಜರ ಮಠ, ಹುಣಸೆ ಹೊಂಡದ ವೆಂಕಟೇಶ್ವರ ದೇವಾಲಯ, ಮುತ್ತಿನಕೆರೆಯ ವೆಂಕಟರಮಣ ದೇವಾಲಯ, ಉತ್ತರ ಕನ್ನಡ ಜಿಲ್ಲೆಯ ವೆಂಕಟರಮಣ ದೇವಾಲಯ, ಹುಲೇಕಲ್ಲಿನ ವ್ಯಾಸರಾಯರ ಮಠಗಳು ಸೋದೆ ಅವರಸ ಪೋಷಣೆಯಲ್ಲಿ ನಿರ್ಮಾಣವಾಗಿವೆ. [೧೧೦] ಇದರಲ್ಲಿ ಮಂಜುಗುಣಿಯ ವೆಂಕಟರಮಣ ದೇವಾಲಯದಲ್ಲಿ ಕಾವಿ ಭಿತ್ತಿ ಚಿತ್ರಕಲೆಯಿಂದ ಅಲಂಕಾರ ಮಾಡಲಾಗಿದೆ. ಸೋದೆಯ ಅರಸರು ಜೈನ ಧರ್ಮಕ್ಕೂ ಪ್ರೋತ್ಸಾಹ ಕೊಟ್ಟು ಆ ಧರ್ಮದ ಕಲಾಕೃತಿಗಳು, ಬಸದಿಗಳು ನಿರ್ಮಾಣವಾಗುವುದಕ್ಕೆ ಕಾರಣರಾದರು. ಸೋದೆಯಲ್ಲಿನ ಅಕಲಂಕ ಮಠ, ಜೈನ ಜಿನಾಲಯ, ಶಿರಸಿಯ ಬಸ್ತಿಕೇರಿಯಲ್ಲಿ ಇರುವ ಪಾರ್ಶ್ವನಾಥ ಬಸದಿ [೧೧೧] ಇವರ ಕೊಡುಗೆಗಳಾಗಿವೆ.

---

೧೦೯. ಪದ್ಮಾಕರ ಮಡಗಾಂವಕರ (ಸಂ) : ಶ್ವೇತಪುರ, ಪುಟ ೧೬

೧೧೦. ಡಾ. ಎಂ. ಜಿ. ವಾರಿ : ಸೋದೆ ಅರಸುಮನೆತನ : ಒಂದು ಅಧ್ಯಯನ, ಪುಟ ೧೭೫

೧೧೧. ಡಾ. ಎಂ. ಜಿ. ವಾರಿ : ಸೋದೆ ಅರಸುಮನೆತನ : ಒಂದು ಅಧ್ಯಯನ. ಪುಟ ೧೮೪

ಶಿರಸಿಯ ಮಾರಿಕಾಂಬಾ ದೇವಾಲಯವನ್ನು ಸದಾಶಿವರಾಯನ ಕಾಲದಲ್ಲಿ (೧೬೮೨-೧೭೧೮) ನಿರ್ಮಿಸಲಾಗಿದ್ದು [೧೧೨] ಇದರಲ್ಲಿ ಕಾವಿ ಭಿತ್ತಿ ಚಿತ್ರಗಳನ್ನು ರಚಿಸಿ ಅಲಂಕರಿಸಲಾಗಿದೆ. ಬನವಾಸಿಯ ಮಧುಕೇಶ್ವರ ದೇವಾಲಯವನ್ನು ಸೋದೆ ಅರಸರು ಆಗಾಗ ವಿಸ್ತರಿಸುತ್ತ ಜೀರ್ಣೋದ್ಧಾರಗೊಳಿಸುತ್ತ, ದಾನದತ್ತಿಗಳನ್ನು ಕೊಡಮಾಡುತ್ತ ಬಂದಿದ್ದಾರೆ. ರಾಮಚಂದ್ರ ನಾಯಕನು ವರ್ಷಂಪ್ರತಿ ರಥೋತ್ಸವಕ್ಕೆ ೨೦ ಅಡಿ ಅಗಲದ, ೨೨ ಅಡಿ ಎತ್ತರದ ಬೃದಾಕಾರದ ತೇರೊಂದನ್ನು ೧೬೦೮ ರಲ್ಲಿ ಕೊಡಮಾಡಿರುವನು. ರಘುನಾಥನಾಯಕನು ವಸಂತೋತ್ಸವಕ್ಕಾಗಿ ೧೬೨೮ ರಲ್ಲಿ ಕಲ್ಲುಮಂಚವನ್ನು ಮಾಡಿಸಿಕೊಟ್ಟಿದ್ದು ಇದು ಸೌಂದರ್ಯ ದೃಷ್ಟಿಯಿಂದ ಅತ್ಯಂತ ಕಲಾತ್ಮಕವಾಗಿದೆ. ಹಾಗೇ ಒಂದನೇ ಸದಾಶಿವರಾಯನು ಈ ಮಧುಕೇಶ್ವರ ದೇವಾಲಯದ ಆವರಣದಲ್ಲಿ ತ್ರೈಲೋಕ್ಯಮಂಟಪವನ್ನು ೧೭೧೩ ರಲ್ಲಿ ಕಟ್ಟಿಸಿ ದೇವರಿಗೆ ಸಮರ್ಪಿಸಿದ್ದಾನೆ. ಈ ಮಂಟಪದಲ್ಲಿ ಮೂರು ಲೋಕಗಳನ್ನು ಪ್ರತಿನಿಧಿಸುವ ಶಿಲ್ಪಗಳನ್ನು ಕೆತ್ತಲಾಗಿದ್ದು [೧೧೩] ಇದೊಂದು ಸುಂದರ ಕಲಾಕೃತಿಯಾಗಿದೆ.

ಮಧುಕೇಶ್ವರ ದೇವಾಲಯದ ಸಂಕೀರ್ಣದಲ್ಲೇ ಕ್ರಿ. ಶ. ೧೭೧೫ ರಲ್ಲಿ ೧ನೇ ಸದಾಶಿವರಾಯನು ಸದಾಶಿವಲಿಂಗವನ್ನೂ ಅಷ್ಟದಿಕಾಲ್ಪಲಕರ ಪ್ರತಿಮೆಗಳನ್ನು ಸ್ಥಾಪಿಸಿದ. ಹಾಗೇ ಇಮ್ಮಡಿ ಸದಾಶಿವರಾಯ ಪ್ರಾಕಾರದ ಬಲಭಾಗದಲ್ಲಿ ತನ್ನ ತಂದೆಯ ಸ್ಮರಣಾರ್ಥವಾಗಿ ಬಸವಲಿಂಗಗುಡಿ ಕಟ್ಟಿಸಿದ. ಇವುಗಳಲ್ಲಿ ೧ನೇ ಸದಾಶಿವರಾಯ ಸ್ಥಾಪಿಸಿದ ಅಷ್ಟದಿಕ್ಪಾಲಕರ ಮೂರ್ತಿಗಳಲ್ಲಿ ಗಣೇಶನ ಮೂರ್ತಿ ಇರುವ ಮಂಟಪದಲ್ಲಿ ಕಾವಿ ಭಿತ್ತಿ ಚಿತ್ರಕಲೆ ಕಂಡುಬರುತ್ತದೆ. ಇವುಗಳಲ್ಲದೇ ಸೋದೆ ಅರಸರು ಇನ್ನಿತರ ಪ್ರತ್ಯೇಕವಾದ ಮಠ, ದೇವಾಲಯಗಳನ್ನು ನಿರ್ಮಿಸುವಲ್ಲಿ ಪೋಷಕರಾಗಿದ್ದಾರೆ. ಸೋದೆಯ ರಾಜೇಂದ್ರಸ್ವಾಮಿ ಮಠ, ಗದ್ದಿಗೆ ಮಠ, ಸದಾಶಿವ ಮಠ, ಶಿರಸಿಯಲ್ಲಿರುವ ವೀರಭದ್ರ ದೇವಾಲಯಗಳು ಇವರ ಕಾಲದ ಕೊಡುಗೆಗಳಾಗಿವೆ. ಇವುಗಳಲ್ಲದೇ ಕಾರವಾರ ಭಾಗದ ಸದಾಶಿವಘಡ, ಕಡವಾಡ, ಅಂಕೋಲಾ. ಕಾಣಕೋಣ, ಹೊನ್ನಾವರ ಭಾಗಗಳಲ್ಲೂ ಇವರ ಆಡಳಿತ ವಿಸ್ತರಿಸಿದ್ದು ಅಲ್ಲಿಯೂ ಇವರ ಕಾಲದ ನಿರ್ಮಿತಿಗಳು ಕಂಡುಬರುತ್ತವೆ. ಕಡವಾಡದ ಶಿವನಾಥೇಶ್ವರ ದೇವಾಲಯದಲ್ಲಿ ಕಾವಿ ಭಿತ್ತಿ ಚಿತ್ರಗಳಿಂದ ಅಲಂಕರಿಸಲಾಗಿದೆ.

**ಕಿನ್ನಾಳದ ದೇಸಾಯಿಗಳು ಮತ್ತು ಕೊಪ್ಪಳದ ನವಾಬರು :** ವಿಜಯನಗರ ಪತನಾನಂತರ ಅಲ್ಲಿನ ಕಲಾವಿದರು ಬೇರೆ ಬೇರೆ ಸ್ಥಳಗಳಿಗೆ ವಲಸೆ ಹೋದರು. ಆಂಧ್ರ, ತಮಿಳುನಾಡು ಪ್ರದೇಶಗಳಿಗೆ ಹೋದಂತೆಯೇ ಕರ್ನಾಟಕದ ಮೈಸೂರು, ಕಿನ್ನಾಳ. ಹರಪನಹಳ್ಳಿ, ಕಂಪ್ಲಿ, ಕನಕಗಿರಿ ಮುಂತಾದ ಊರುಗಳಲ್ಲಿ ನೆಲೆನಿಂತರು. ಮೈಸೂರಿಗೆ ಬಂದ ಕಲಾವಿದರಿಗೆ ಮೈಸೂರು ಒಡೆಯರು, ಕನಕಗಿರಿಗೆ ಬಂದವರಿಗೆ ಅಲ್ಲಿನ ಗುಜ್ಜಲವಂಶದ ದೊರೆಗಳು, ಪ್ರೋತ್ಸಾಹ ಕೊಟ್ಟಂತೆ ಕಿನ್ನಾಳಕ್ಕೆ ಬಂದ ಕಲಾವಿದರಿಗೆ ಕಿನ್ನಾಳದ ದೇಸಾಯರು, ಕೊಪ್ಪಳದ ನವಾಬರಿಂದ ಪೋಷಣೆ ಸಹಕಾರ ದೊರೆಯಿತು. ನಂತರದಲ್ಲಿ ಹೈದ್ರಾಬಾದ್ ನಿಜಾಮರಿಂದ ವಿಶೇಷವಾಗಿ ಸಾಲಾರಜಂಗ ನಿಜಾಮಿಯವರ ಕಾಲದಲ್ಲಿ ಪೋಷಣೆ ಪ್ರೇರಣೆ ದೊರೆಯಿತು. ಹೀಗಾಗಿ ಇಂದಿಗೂ ಕಿನ್ನಾಳದಲ್ಲಿ ಪ್ರಾಚೀನ ಚಿತ್ರಕಲೆಯ ಸೆಳಕು ತನ್ನ ಅಸ್ತಿತ್ವ ಉಳಿಸಿಕೊಂಡಿದೆ. ಹೀಗೆ ರಾಜ-ಮಹಾರಾಜರು, ಸಂಸ್ಥಾನಿಕರು ಭಿತ್ತಿ ಚಿತ್ರಕಲೆಯ ಪೋಷಕರಾಗಿದ್ದು ಅದನ್ನು ಬೆಳೆಸಿದಂತೆಯೇ ಕೆಲವು ಶಾಸನಗಳೂ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಚಿತ್ರಕಲೆಯ ಪೋಷಣೆ ಮಾಡಿವೆ ಎನ್ನಬಹುದಾಗಿದೆ. ಶಾಸನಗಳಲ್ಲಿರುವ ಅಂತಹ ಕೆಲವು ಅಂಶಗಳನ್ನು ಗಮನಿಸಬಹುದು.

---

೧೧೨. ಡಾ. ಎಂ. ಜಿ. ವಾರಿ ಸೋದೆ ಅರಸುಮನೆತನ : ಒಂದು ಅಧ್ಯಯನ, ಪುಟ ೧೮೫

೧೧೩. ಡಾ. ಎಂ. ಜಿ. ವಾರಿ ಸೋದೆ ಅರಸುಮನೆತನ : ಒಂದು ಅಧ್ಯಯನ, ಪುಟ ೧೮೯

**ಮಠಗಳ ಪೋಷಣೆ :** ನಾಡಿನ ಕಲೆ ಮತ್ತು ಸಂಸ್ಕೃತಿಗೆ ಮಠಮಾನ್ಯಗಳ ಕೊಡುಗೆ ಅಪಾರವಾದುದು. ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸದಲ್ಲಿ ಪ್ರಮುಖ ಪಾತ್ರ ವಹಿಸಿದ ವೀರಶೈವ ಮಠಗಳು ಈ ನಾಡಿನ ಕಲೆಯ ಬೆಳವಣಿಗೆಯಲ್ಲಿ ಮಹತ್ವದ ಪಾತ್ರ ವಹಿಸಿವೆ. ಧರ್ಮ ಪ್ರಚಾರದ ಜೊತೆ ಜೊತೆಯಲ್ಲಿಯೇ ಅದಕ್ಕೆ ಪೂರಕವಾಗಿ ಸಾಮಾನ್ಯ ಜನರಿಗೆ ಕಲೆಯನ್ನು ತಲುಪಿಸಿದ್ದು ಇವುಗಳ ಹೆಚ್ಚುಗಾರಿಕೆಯಾಗಿದೆ. ಯಾವುದೇ ವಿಷಯವನ್ನು ಚಿತ್ರಗಳ ಮುಖಾಂತರ ಹೇಳಿದಾಗ ಇನ್ನೂ ಪರಿಣಾಮಕಾರಿಯಾಗಿ ಹೇಳಲು ಸಾಧ್ಯ ಎಂಬುದನ್ನು ತಿಳಿದ ಮಠಮಾನ್ಯಗಳು ತಮ್ಮ ಮತ-ಧರ್ಮಗಳ ಪ್ರಚಾರಕ್ಕಾಗಿ. ಧಾರ್ಮಿಕ ವಿಷಯಗಳನ್ನು ತಿಳಿಸುವದಕ್ಕಾಗಿ ಚಿತ್ರಕಲೆಯನ್ನು ಬಳಸಿಕೊಂಡವು. ರಾಜ-ಮಹಾರಾಜರು, ಸಂಸ್ಥಾನಿಕರು ಮುಂತಾದ ರಾಜವಂಶದವರ ಜೊತೆಯಾಗಿ ಹಾಗೂ ಅವರ ತರುವಾಯ ನಾಡಿನ ಭಿತಿ ಚಿತ್ರ ಪರಂಪರೆಯನ್ನು ಏಕ ಪ್ರಕಾರವಾಗಿ ನಿಲ್ಲದಂತೆ ಬೆಳೆಸಿದ ಕೀರ್ತಿ ಮಠ ಮಾನ್ಯಗಳದ್ದೇ ಆಗಿದೆ. ಆ ಕಾರಣವಾಗಿಯೇ ರಾಜ ಮಹಲು. ಅರಮನೆ. ದೇವಾಲಯಗಳನ್ನು ಹೊರತುಪಡಿಸಿ ಹೆಚ್ಚಿನ ಭಿತ್ತಿ ಚಿತ್ರಗಳು ಕಂಡುಬಂದ ನೆಲೆಗಳೆಂದರೆ ಮಠಮಾನ್ಯಗಳೇ ಆಗಿವೆ. ಉತ್ತರ ಕರ್ನಾಟಕದಲ್ಲಿ ಅಮ್ಮಿನಭಾವಿಯ ಪಂಚಗೃಹ ಹಿರೇಮಠ, ಮಹಾಲಿಂಗಪುರದ ಮಹಾಲಿಂಗೇಶ್ವರಮಠ. ಸುರಪುರದ ವಿರಕ್ತಮಠ ಮತ್ತು ಅಣ್ಣಯ್ಯನ ಮಠ. ಅಥಣಿಯ ವೀರಶೈವ ಮಠ. ಆನೆಗೊಂದಿಯ ಹುಚ್ಚಪ್ಪಯ್ಯ ಮಠಗಳಲ್ಲಿ ಭಿತ್ತಿ ಚಿತ್ರಗಳು ಕಂಡುಬರುತ್ತವೆ.

**ಕೊಂಕಣಿ ಮತಸ್ಥರ ಪ್ರೋತ್ಸಾಹ :** ಗೋವಾ ಮೂಲದ ಕೊಂಕಣಿ ಮತಸ್ಥರಾದ ಗೌಡ ಸಾರಸ್ವತ ಬ್ರಾಹ್ಮಣರು ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆಯ ವಿಶೇಷ ಪೋಷಕರೆಂದು ಹೇಳಬಹುದು. ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕರಾವಳಿ ಭಾಗದಲ್ಲಿ ಮಾತ್ರ ಕಂಡುಬರುವ ಕಾವಿ ಬಣ್ಣದ ಭಿತ್ತಿ ಚಿತ್ರಕಲೆಯನ್ನು ಈ ಭಾಗಕ್ಕೆ ಪರಿಚಯಿಸಿದವರು. ಇವರೆ ಕ್ರಿ. ಶ. ೧೫೦೦ ರಿಂದ ೧೫ ನೇ ಶತಮಾನದಲ್ಲಿ ಗೋವಾದಲ್ಲಿ ಪೋರ್ತುಗೀಜರಿಂದ ವ್ಯಾಪಕ ಮತಾಂತರ ಚಟುವಟಿಕೆಗಳು ನಡೆದಾಗ ಅಲ್ಲಿನ ಕೊಂಕಣಿ ಮತಸ್ಥ ಗೌಡ ಸಾರಸ್ವತ ಬ್ರಾಹ್ಮಣರು ಕರ್ನಾಟಕ ಉತ್ತರ ಭಾಗದ ಕರಾವಳಿ ಕಡೆಗೆ ವಲಸೆ ಬಂದರು. ತಾವು ಬರುವಾಗ ತಮ್ಮ ಜೊತೆ ಕಾವಿಕಲೆಯನ್ನೂ ತಂದರು. ಕರ್ನಾಟಕಕ್ಕೆ ಬಂದ ಕೊಂಕಣಿಗರು ಸ್ಥಳೀಯ ಜನರೊಡನೆ ಬೆರೆತರೂ ತಮ್ಮ ದೇವಾಲಯಗಳು. ಮಠಮಾನ್ಯಗಳನ್ನು ಕಟ್ಟುವಲ್ಲಿ ಅವುಗಳನ್ನು ಚಿತ್ರಗಳಿಂದ ಅಲಂಕರಿಸುವಲ್ಲಿ ತಮ್ಮ ಮೂಲ ವೃತ್ತಿಯನ್ನೇ ಅನುಸರಿಸಿದರು. ಕೊಂಕಣಿಗರಿಂದ ಈಗ್ಗೆ ಸುಮಾರು ೫೦ ವರ್ಷಗಳ ಹಿಂದಿನವರೆಗೂ ಕಾವಿ ಚಿತ್ರರಚನೆ ನಡೆಯುತ್ತಿತ್ತೆಂದು ಆ ಭಾಗದ ಜನರು ಹೇಳುತ್ತಾರೆ. ತಾವು ಬಂದು ನೆಲೆಸಿದ ಕರ್ನಾಟಕದ ಕರಾವಳಿ ಪ್ರದೇಶವನ್ನು ಕೊಂಕಣಿಗರು ಕಾವಿ ಬಣ್ಣದ ಭಿತ್ತಿ ಚಿತ್ರಕಲೆಯ ಕಣಜವನ್ನಾಗಿ ಮಾಡಿದ್ದಾರೆ.

**ಪ್ರತಿಷ್ಠಿತ ವ್ಯಕ್ತಿಗಳ ಪೋಷಣೆ :** ಸಂಸ್ಥಾನಿಕರ ಚಿತ್ರಕಲಾ ನಿರ್ಮಿತಿಗಳು ಒಂದುಕಡೆಗಾದರೆ ಊರಿನ ದೇಸಾಯಿ, ಗೌಡರು, ಶ್ರೀಮಂತರು. ಪ್ರತಿಷ್ಠಿತರು ಸ್ವಂತಕ್ಕೆ ಭಾರೀ ಮನೆಗಳನ್ನು ಮಹಲುಗಳನ್ನು ಕಟ್ಟಿ ಅವುಗಳ ಅಲಂಕರಣಕ್ಕೆ ಹೆಚ್ಚು ಗಮನ ಹರಿಸುತ್ತಿದ್ದರು. ಅನೇಕರು ಈ ರೀತಿಯಲ್ಲಿ ತಮ್ಮ ನಿವಾಸಗಳಲ್ಲಿ ಭಿತ್ತಿ ಚಿತ್ರಗಳನ್ನು ಬರೆಸಿ ಅಲಂಕರಿಸಿದ್ದೂ ಉಂಟು. ತಮ್ಮ ಪರಿವಾರದವರು ಒಂದೆಡೆ ಸೇರುವ ಸ್ಥಳ. ಅತಿಥಿ ಅಭ್ಯಾಗತರು ಬಂದು ಕೂಡುವ ಸ್ಥಳ, ಓಲಗಶಾಲೆ, ಇಲ್ಲವೇ ಅಂತಪುರ. ಮಲಗುವ ಕೋಣೆಗಳನ್ನು ತಕ್ಕುದಾದ ಭಿತ್ತಿ ಚಿತ್ರಗಳಿಂದ ಅಲಂಕರಿಸುತ್ತಿದ್ದರು. ಇಂತಹ ಪ್ರತಿಷ್ಠಿತರು ಬರೆಸಿದ ಚಿತ್ರಗಳು ಉತ್ತರ ಕರ್ನಾಟಕದಲ್ಲಿ ಗುಳೇದಗುಡ್ಡದ ಹೊಸಮನಿ ಗೌಡರ ಮನೆಯಲ್ಲಿ, ನರಗುಂದದ ಗುಂಡಪ್ಪ ಹಸಬಿ ಎಂಬವರ ಮನೆಯಲ್ಲಿ ಹಾಗೂ ಸಂಕೇಶ್ವರದ ಮುಮದಾಪುರ ಅವರ ಮನೆಯಲ್ಲಿ ಕಂಡುಬಂದಿವೆ.

**ಗ್ರಾಮೀಣ ಜನರ ಪೋಷಣೆ :** ಶಿಷ್ಟಪದ ಸಂಪ್ರದಾಯ ಈ ಭಿತ್ತಿ ಚಿತ್ರಗಳಲ್ಲದೇ ಗ್ರಾಮೀಣ ಜನರು ಜನಪದ ಭಿತ್ತಿ ಚಿತ್ರಕಲೆಯನ್ನು ಇಂದಿಗೂ ಜೀವಂತವಾಗಿ ಉಳಿಸಿಕೊಂಡು ಬಂದಿದ್ದು ಕಣ್ಣಾರೆ ಕಾಣಬಹುದು. ಮಲೆನಾಡ ಭಾಗದಲ್ಲಿ ಹಸೆ ಚಿತ್ರ ಬರೆಯುವ ಹಾಲಕ್ಕಿ ಒಕ್ಕಲಿಗರು. ಕುಣಬಿಗಳು. ನಾಮಧಾರಿಗಳು, ಮೊಗವೀರರು. ಗೊಂಡರು, ದೀವರು ಮುಂತಾದ ಗ್ರಾಮೀಣ ಜನರು ಜನಪದ ಭಿತ್ತಿ ಚಿತ್ರಕಲೆಯನ್ನು ಇನ್ನೂ ಜೀವಂತವಾಗಿ ಉಳಿಸಿದ್ದಾರೆ. ಹಬ್ಬ-ಹರಿದಿನ, ಮದುವೆ-ಮುಂಜಿವೆ ಮುಂತಾದ ಶುಭ ಸಂದರ್ಭಗಳಲ್ಲಿ ಈ ಜನಾಂಗದವರು ಗೋಡೆ ಮೇಲೆ ಜಾನಪದ ಶೈಲಿಯ ಚಿತ್ರ ಬರೆಯುವ ಸಂಪ್ರದಾಯವನ್ನು ಈಗಲೂ ಉಳಿಸಿಕೊಂಡಿದ್ದಾರೆ. ಬೆಳಗಾಂವ, ಧಾರವಾಡ, ಬಿಜಾಪುರ, ಗುಲಬರ್ಗಾ, ಬೀದರ್. ಬಾಗಲಕೋಟ ಜಿಲ್ಲೆಗಳಲ್ಲಿಯೂ ಗ್ರಾಮೀಣ ಜನರು ಶುಭ ಸಂದರ್ಭಗಳಲ್ಲಿ ಹಬ್ಬ-ಹರಿದಿನಗಳಲ್ಲಿ ಗೋಡೆ ಮೇಲೆ ಚಿತ್ರ ಬರೆಯುವ ಮೂಲಕ ಜನಪದ ಭಿತ್ತಿ ಚಿತ್ರಕಲೆಯನ್ನು ಜೀವಂತವಾಗಿ ಉಳಿಸಿದ್ದಾರೆ.

ಮಲೆನಾಡ ಭಾಗದ ಹಸೆ ಚಿತ್ರ ಬರೆಯುವುದು. ಬೆಳಗಾಂವ, ಧಾರವಾಡ, ಬಿಜಾಪುರ, ಗುಲಬರ್ಗಾ ಮುಂತಾದ ಜಿಲ್ಲೆಗಳಲ್ಲಿ ಗುಡಿಹುಣ್ಣಿಮೆಗೆ ಬೆಳದಿಂಗಳ ಚಿತ್ರ ಬರೆಯುವುದು. ದೀಪಾವಳಿಯಲ್ಲಿ ಮನೆ, ದನದ ಕೊಟ್ಟಿಗೆಯಲ್ಲಿ ಚಿತ್ರ ಬರೆಯುವುದು. ಬೀದರ್ ಜಿಲ್ಲೆಯಲ್ಲಿ ಶೀಗಿ ಚಿತ್ರಗಳನ್ನು ಬರೆಯುವುದು ಹೀಗೆ ಹೆಚ್ಚಿನ ಆಚರಣೆಗಳಲ್ಲಿ ಚಿತ್ರ ಬರೆಯುವುದು ಮಹಿಳೆಯರೇ ಅಧಿಕವಾಗಿದ್ದುದು ಗಮನಿಸಬೇಕಾದ ಅಂಶ. ಹೀಗಾಗಿ ಜನಪದ ಭಿತ್ತಿ ಚಿತ್ರಕಲೆಯ ನಿಜವಾದ ಪೋಷಕರು ಮಹಿಳೆಯರೇ ಎಂದರೆ ತಪ್ಪಾಗಲಾರದು. ಹೀಗೆ ರಾಜ ಮಹಾರಾಜರು, ಸಂಸ್ಥಾನಿಕರು, ಮಠಾಧಿಪತಿಗಳು. ಊರಿನ ಪ್ರತಿಷ್ಠಿತರು ಮುಂತಾದವರು ಭಿತ್ತಿ ಚಿತ್ರಕಲೆಯನ್ನು ಪೋಷಿಸುತ್ತ ಬಂದಿದ್ದರೆ, ಅದರ ಜೊತೆಗೆ ಸಾಮಾನ್ಯ ಜನರು ಭಿತ್ತಿ ಚಿತ್ರಕಲೆಯ ಪೋಷಣೆಗೆ ಪರೋಕ್ಷವಾಗಿ ನೆರವಾಗಿದ್ದಾರೆ. ಪ್ರಾಚೀನ ಕಾಲದಲ್ಲಿ ಪ್ರತಿಯೊಂದು ಊರಿನಲ್ಲಿ ಗರಡಿ ಮನೆಗಳಿರುತ್ತಿದ್ದು. ಈ ಗರಡಿ ಮನೆಗಳ ಗೋಡೆಯ ಮೇಲೆ ಜನಪದ ಶೈಲಿಯ ಭಿತ್ತಿ ಚಿತ್ರಗಳನ್ನು ಜನರು ಬರೆಸುತ್ತಿದ್ದುದು ಹಿಂದಿನಿಂದ ನಡೆದುಕೊಂಡುಬಂದ ಪದ್ಧತಿಯಾಗಿದೆ. ಆದರೆ ಇತ್ತೀಚಿತ್ತಲಾಗಿ ಗರಡಿ ಮನೆಗಳು ಮಾಯವಾಗುತ್ತಿವೆ. ಕೆಲವು ಹಳ್ಳಿಗಳಲ್ಲಿಯ ಚಿಕ್ಕಪುಟ್ಟ ದೇವಾಲಯಗಳನ್ನು ಉತ್ಸವದ ಸಂದರ್ಭಗಳಲ್ಲಿ ಚಿತ್ತಾರ ಬರೆದು ಅಲಂಕರಿಸುವುದು ಸಾಮಾನ್ಯ ಜನರೇ. ಈ ರೀತಿಯ ಕ್ರಮಗಳಿಂದ ಸಾಮಾನ್ಯ ಜನರು ಪ್ರತ್ಯಕ್ಷವಾಗಿ ಪರೋಕ್ಷವಾಗಿ ಭಿತ್ತಿ ಚಿತ್ರಕಲೆಯ ಪೋಷಕರಾಗಿದ್ದಾರೆ. ದೇವಾಲಯಗಳಲ್ಲಿ ಭಿತ್ತಿ ಚಿತ್ರಗಳನ್ನು ರಚಿಸುವ ಪರಂಪರೆ ಈಗಲೂ ಪ್ರಚಲಿತದಲ್ಲಿದೆ. ಕೆಲವು ದೊಡ್ಡ ದೇವಾಲಯಗಳಲ್ಲಿ ಶಿಷ್ಟಪದ ಚಿತ್ರಗಳನ್ನು ನುರಿತ ಕಲಾವಿದರಿಂದ ಜನರು ಬರೆಸಿದರೆ. ಗ್ರಾಮೀಣ ಪ್ರದೇಶದಲ್ಲಿರುವ ಚಿಕ್ಕಪುಟ್ಟ ದೇವಾಲಯಗಳಲ್ಲಿ ಸ್ಥಳೀಯ ಜನಪದ ಕಲಾವಿದರೇ ಚಿತ್ರ ರಚಿಸಿದ್ದು ಕಂಡುಬರುತ್ತದೆ. ಹೀಗೆ ಭಿತ್ತಿ ಚಿತ್ರ ರಚಿಸಿದ ದೇವಾಲಯಗಳನ್ನು ನಾವಿಂದು ಹಳ್ಳಿ-ಪಟ್ಟಣಗಳಲ್ಲಿ ನೂರಾರು ಸಂಖ್ಯೆಯಲ್ಲಿ ಕಾಣಬಹುದು. ಹೀಗೆ ರಾಜ ಮಹಾರಾಜರಿಂದ ಹಿಡಿದು ಜನಸಾಮಾನ್ಯರವರೆಗೆ ಅನೇಕರು ಭಿತ್ತಿ ಚಿತ್ರಕಲೆಗೆ ಪೋಷಕರಾಗಿ ಭಿತ್ತಿಚಿತ್ರ ಪರಂಪರೆ ಇನ್ನೂ ಜೀವಂತವಾಗಿರಲು ಕಾರಣರಾಗಿದ್ದಾರೆ.

## II. ಭಿತ್ತಿ ಚಿತ್ರ ಕಲಾವಿದರು :

ಪೌರಾಣಿಕ ನಂಬಿಕೆಯಂತೆ ಬ್ರಹ್ಮನ ನಾಲ್ಕು ಮುಖಗಳಿಂದ ವಿಶ್ವಕರ್ಮ, ಮಯ, ತ್ವಷ್ಟ್ರ ಮತ್ತು ಮನು ಜನಿಸಿದರು. ಇವರಲ್ಲಿ ಮಯನಿಂದ ಹುಟ್ಟಿದ ' ವರ್ಧಕಿ ' ಸಂತತಿಯವರು ಚಿತ್ರಕಲೆಯನ್ನು ಅನುಸರಿಸಿದರು. ಮತ್ತೊಂದು ಮೂಲದ ಪ್ರಕಾರ ವಿಶ್ವಕರ್ಮನ ಒಂಬತ್ತು ಜನ ಪುತ್ರರಾದ ಮಾಲೆಗಾರ, ಕಮ್ಮಾರ, ಶಂಖಕಾರ, ನೇಕಾರ,

ಕುಂಭಕಾರ. ಕಂಚುಕಾರ. ಸೂತ್ರಧಾರ (ಬಡಗಿ). ಚಿತ್ರಗಾರ ಹಾಗೂ ಸ್ವರ್ಣಗಾರ ಎಂಬವರಲ್ಲಿ ಚಿತ್ರಗಾರನಿಂದ ಚಿತ್ರಕಲೆ [೧೧೪] ಬೆಳೆಯಿತು ಎಂಬ ವಿವರಗಳಿವೆ. ವಿಶ್ವಕರ್ಮನಿಗೆ ಬ್ರಹ್ಮನಿಂದಲೇ ಚಿತ್ರಕಲೆ ಬೋಧಿಸಲ್ಪಡುತ್ತದೆ. ನಂತರ ಬ್ರಹ್ಮನ ಆದೇಶದಂತೆ ಭಯಾಜಿತ್ ಎಂಬ ರಾಜನಿಗೆ ವಿಶ್ವಕರ್ಮನು ಚಿತ್ರಕಲೆಯನ್ನು ಉಪದೇಶಿಸಿದನು. [೧೧೫] ರಾಜನು ನಗ್ನಜಿತ್ ಎಂಬ ಹೆಸರಿನಲ್ಲಿ ' ಚಿತ್ರಲಕ್ಷಣ ' ಗ್ರಂಥ ಪ್ರಚುರಪಡಿಸಿದನು. ಚಿತ್ರಕ ಮಹಾರಾಜನು ಮುಕ್ತಕ ರಾಜನಿಂದ ಚಿತ್ರಕಲೆಯ ಉಪದೇಶ ಪಡೆದು ಅದನ್ನು ಬೆಳೆಸಿದನೆಂದು [೧೧೬] ಸೋಮವಂಶ ಆರ್ಯಕ್ಷತ್ರಿಯರ ಪುರಾಣ ಹೇಳುತ್ತದೆ.

ಅನಿರುದ್ಧ ಉಷೆಯರಿಗೆ ವಿವಾಹ ಮಾಡಿದ ' ಚಿತ್ರಲೇಖೆ ' ಯಿಂದ ಚಿತ್ರಕಲೆ ಬಂದಿತೆಂದು [೧೧೭] ಆರ್ಯಕ್ಷತ್ರಿಯರು ನಂಬುತ್ತಾರೆ. ಮಾಂಡ್ಲ ಜನಪದ ಚಿತ್ರಕಾರರು [೧೧೮] ತಮಗೆ ಜಬ್ಬಲ್‌ಪುರದ ಬಳಿ ಇರುವ ಗರ್‌ಹದಲ್ಲಿನ ಸತಿಯೊಬ್ಬಳಿಂದ ಚಿತ್ರಕಲೆ ಬಂದಿತೆಂದು ಹೇಳುತ್ತಾರೆ. ಕಿಳ್ಳೇಕ್ಯಾತರ ಪಂಗಡದ ಸ್ತ್ರೀಯೊಬ್ಬಳು ಅಕ್ಕಸಾಲಿಗನೊಬ್ಬನೊಂದಿಗೆ ಸಂಬಂಧವಿರಿಸಿಕೊಂಡು ಮಕ್ಕಳನ್ನು ಪಡೆದಳೆಂದೂ. ಆತ ತನ್ನ ಮಕ್ಕಳಿಗೆ ಗೊಂಬೆ ತಯಾರಿಕೆ ಮತ್ತು ಚಿತ್ರಗಾರಿಕೆ ಕಲಿಸಿದನೆಂದು [೧೧೯] ಕಥೆಯಿದೆ. ಜೈನರ ಪ್ರಕಾರ [೧೨೦] ಆದಿದೇವನು ಅನಂತವಿಜಯನಿಗೆ ಚಿತ್ರಕಲೆ ಕಲಿಸಿಕೊಟ್ಟನೆಂದು ತಿಳಿದುಬರುವುದು. ಬುದ್ಧನು ತನ್ನ ಚಿತ್ರವನ್ನು ಮೊದಲು ತಾನೇ ಬರೆದು ಕಲಾವಿದ ಶಿಷ್ಯರಿಗೆ ಬಣ್ಣ ತುಂಬುವುದನ್ನು [೧೨೧] ತಿಳಿಸಿದನೆಂಬ ಐತಿಹ್ಯವಿದೆ. ನಾರಾಯಣನೆಂಬ ಋಷಿಯ ತಪೋಭಂಗ ಮಾಡಲು ಬಂದ ಅಪ್ಸರೆಯರು ನಾಚುವಂತೆ ಮಾವಿನ ಎಲೆಯ ರಸದಿಂದ ಊರ್ವಶಿಯ ಚಿತ್ರವನ್ನು ತನ್ನ ತೊಡೆಯ ಮೇಲೆ ಬರೆದು ಅದಕ್ಕೆ ಜೀವ ತುಂಬಿದನು. ಅದೇ ಮೊದಲ ಚಿತ್ರವಾಯಿತು. ನಂತರ ನಾರಾಯಣನು ಈ ಚಿತ್ರವಿದ್ಯೆಯನ್ನು ವಿಶ್ವಕರ್ಮನಿಗೆ ಬೋಧಿಸಿದನು [೧೨೨] ಎಂಬಂತಹ ವಿವರಗಳು ಚಿತ್ರಕಲಾವಿದರ ಮೂಲದ ಬಗ್ಗೆ ಇರುವಂತಹ ಸಂಗತಿಗಳಾದರೂ ಪ್ರಾಚೀನ ಭಿತ್ತಿ ಚಿತ್ರಕಲಾವಿದರ ಅಥವಾ ಚಿತ್ರ ಕಲಾವಿದರ ಹೆಸರುಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಬಹುಶಃ ಪ್ರಾಚೀನ ಕಾಲದಲ್ಲಿ ಚಿತ್ರರಚನೆಯನ್ನು ಆಧ್ಯಾತ್ಮ ದೃಷ್ಟಿಕೋನದಿಂದ ನೋಡುತ್ತಿದ್ದುದು ಇದಕ್ಕೆ ಕಾರಣವಾಗಿರಬಹುದು. ಚಿತ್ರರಚನೆ ಮಾಡಿ ಅದಕ್ಕೆ ಅಂಕಿತ ಹಾಕುವುದರಿಂದ ನಾನು ಮಾಡಿದೆನೆಂಬ ಅಹಂಭಾವ ಅಲ್ಲಿ ವ್ಯಕ್ತವಾಗಿ ದೇವರ ಸಾನಿಧ್ಯ ಸೇರುವ; ಅಥವಾ ಆತ್ಮಾನಂದ . ಆನಂದಾನುಭೂತಿ ದೊರಕಿಸುವ ನಿಟ್ಟಿನಲ್ಲಿ ತೊಡಕಾಗಬಹುದು ಎಂದು ಅವರು ಭಾವಿಸಿದ್ದರು. ಹೀಗೆ ಚಿತ್ರಕಲೆಯನ್ನು ಆಧ್ಯಾತ್ಮದೊಂದಿಗೆ ಸಮೀಕರಿಸಿ ನೋಡುತ್ತಿದ್ದರಿಂದಲೇ ಕಲಾವಿದರು ತಮ್ಮ ಹೆಸರನ್ನು ಚಿತ್ರಗಳಲ್ಲಿ ನಮೂದಿಸುತ್ತಿರಲಿಲ್ಲವೆಂದೇ ಅನೇಕ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಈ ಅಭಿಪ್ರಾಯ ನಿಜವೂ ಅನಿಸುತ್ತದೆ. ಬರುಬರುತ್ತ ಜನರಲ್ಲಿ ಅಧ್ಯಾತ್ಮದ ಒಲವು ಕಡಿಮೆಯಾದಂತೆ ಸ್ವ-ಪರಿಶ್ರಮದ ಮೇಲೆ ಅಭಿಮಾನ ಮೂಡಿ ತಮ್ಮ ಕೃತಿಗಳಲ್ಲಿ ಕಲಾವಿದರು ಹೆಸರು ನಮೂದಿಸುವ ಪರಂಪರೆಯೂ ಬಳಕೆಗೆ ಬಂದಂತೆ ತೋರುತ್ತದೆ.

---

೧೧೪. ಕರೀಗೌಡ ಬೀಚನಹಳ್ಳಿ (ಸಂ) : ಕರಕುಶಲ ಕಲೆಗಳು (ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ೨) ಪುಟ ೨೭

೧೧೫. B. N. Goswamy, A. L. Dallapiccola : Chitralakshna of Nagnajit, Page 19

೧೧೬. ಪಾನಗಂಟಿ ಗೋಪಾಲರಾಜು : ಶ್ರೀ ಸೋಮವಂಶ ಆರ್ಯಕ್ಷತ್ರಿಯ ಪುರಾಣ, ಭಾಗ ೨, ಪುಟ ೯೨

೧೧೭. ಕರೀಗೌಡ ಬೀಚನಹಳ್ಳಿ (ಸಂ) : ಕರಕುಶಲ ಕಲೆಗಳು (ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ೨) ಪುಟ ೨೭

೧೧೮. Arthus F. Cox : 'The people' (Madras District Manual, North Arcot,) Vol. I, Page 240

೧೧೯. S. A. Krishnaiah : Karnataka puppetry, Page 38, 39

೧೨೦. ಕಮಲಾ ಹಂಪನಾ. ಆರ್. ವಿ. ಕುಲಕರ್ಣಿ (ಸಂ) : ಚಾವುಂಡರಾಯಪುರಾಣ, ಪುಟ ೪೪

೧೨೧. Mulk Raj Anand : Chitralakshana, Page 10

೧೨೨. ಪ್ರಿಯಬಾಲಾ ಶಹಾ (ಸಂ) : ವಿಷ್ಣುಧರ್ಮೋತ್ತರ ಭಾಗ III, ಅಧ್ಯಾಯ ೨೭, ಶ್ಲೋಕ ೮, ೯

ಅಜಂತಾ. ಭಾಗ್ ಮುಂತಾದ ಕಡೆಗೆ ಚಿತ್ರ ರಚನೆ ಮಾಡಿದವರು ಬೌದ್ಧ ಭಿಕ್ಷುಗಳೇ ಎಂದು ಹಲವಾರು ಜನ ವಿದ್ವಾಂಸರು ತರ್ಕಿಸಿದ್ದು. ಈ ಭಿಕ್ಷುಗಳು ಬೌದ್ಧ ಧರ್ಮ ಪ್ರಚಾರಕರಾದ ಆಧ್ಯಾತ್ಮ ಜೀವಿಗಳಾಗಿದ್ದಂತೆ ಸ್ವತಃ ಶಿಲ್ಪಿಗಳು ಮತ್ತು ಚಿತ್ರಕಲಾವಿದರಾಗಿದ್ದರು[೧೨೩] ಎಂದು ಹೇಳಿಕೆಯಿದೆ. ರಾಮಾಯಣ, ಕಥಾಸರಿತ್ಸಾಗರ ಕಾವ್ಯಗಳಲ್ಲೇ ಚಿತ್ರಕಲಾವಿದರ ಹೆಸರುಗಳು ಕಂಡುಬರುತ್ತವೆ[೧೨೪] ಎನ್ನಲಾಗಿದೆ. ಭವಭೂತಿ ವಿರಚಿತ ಉತ್ತರ ರಾಮಚರಿತ್ರೆಯಲ್ಲಿ ಲಕ್ಷ್ಮಣನು ರಾಮನಿಗೆ ಅರ್ಜುನನೆಂಬ ಚಿತ್ರಕಾರನು ರಚಿಸಿದ ಚಿತ್ರಗಳನ್ನು ನೋಡಲು ಹೇಳುತ್ತಾನೆ.[೧೨೫] ವಿಶ್ವಕರ್ಮ, ಮಯ. ಮಾಂಡವ್ಯ ಇವರು ಪೌರಾಣಿಕ ವ್ಯಕ್ತಿಗಳಾಗಿದ್ದು ದೇವಶಿಲ್ಪಿ ಮತ್ತು ಚಿತ್ರಗಾರರಾಗಿದ್ದರೆಂದು[೧೨೬] ತಿಳಿಯುತ್ತದೆ. ಗ್ರೀಕ್‌ನಲ್ಲಿ ಕ್ರಿ. ಪೂ. ೪೦೦ ರ ಸುಮಾರಿಗೆ ಬದುಕಿದ್ದ 'ಸ್ಯೂಕ್ಸಿಸ್' ಎಂಬ ಕಲಾವಿದ[೧೨೭] ಒಂದೇ ಬಣ್ಣದಲ್ಲಿ ಹಲವು ಛಾಯೆಗಳನ್ನು ಉಂಟುಮಾಡುವಂತೆ ಭಿತ್ತಿಚಿತ್ರಗಳನ್ನು ರಚಿಸುತ್ತಿದ್ದನೆಂಬ ವಿವರ ತಿಳಿದು ಬರುತ್ತದೆ. ಬಹುಶಃ ಇದು ಭಿತ್ತಿ ಚಿತ್ರಕಲಾವಿದನ ಅತ್ಯಂತ ಪುರಾತನ ಉಲ್ಲೇಖವಿರಬೇಕು.

ಚೀರಫಟ್ಟಿ ಎಂಬ ಚಿತ್ರಕಲಾವಿದನ ಬಗ್ಗೆ ೧೦ ರಿಂದ ೧೨ ನೇ ಶತಮಾನದ ಅವಧಿಯಲ್ಲಿ ಕಾವ್ಯಗಳಲ್ಲಿ ಉಲ್ಲೇಖ ಬಂದಿದ್ದು. ಈ ಕುರಿತು ಈಗಾಗಲೇ ಚರ್ಚೆಗಳಾಗಿವೆ. ಮಲ್ಲಿನಾಥಪುರಾಣವನ್ನು ಸಂಪಾದಿಸಿದ ಎಸ್. ಜಿ. ನರಸಿಂಹಾಚಾರ್ ಮತ್ತು ಮ. ಆ. ರಾಮಾನುಜ ಅಯ್ಯಂಗಾರ ಅವರು[೧೨೮] ಚೀರಫಟ್ಟಿಯು ದೇವತೆಗಳ ಶಿಲ್ಪಿ ಎಂದು ಹೇಳುತ್ತಾರೆ. ಚೀರುಫಟ್ಟಿಯ ಹೆಸರು ಪೊನ್ನ (ಕ್ರಿ. ಶ. ೯೫೦). ಶಾಂತಿನಾಥ (ಕ್ರಿ.ಶ. ೧೦೬೮), ನಾಗಚಂದ್ರ (೧೧೦೦), ರುದ್ರಭಟ್ಟ (೧೧೮೫). ಅಗ್ಗಳ (೧೮೯), ಗುಣವರ್ಮ (೧೨೧೫) ಇವರುಗಳ ಕೃತಿಯಲ್ಲಿ ಪ್ರಸ್ತಾಪಿತಗೊಂಡಿದ್ದನ್ನು ಉಲ್ಲೇಖಿಸುತ್ತ ದ. ರಾ. ಬೇಂದ್ರೆಯವರು[೧೨೯] ಚೀರಫಟ್ಟಿಯು ಐತಿಹಾಸಿಕ ವ್ಯಕ್ತಿಯಾಗಿರುವ ಸಾಧ್ಯತೆ ಇದೆ ಎಂದು ತರ್ಕಿಸುತ್ತಾರೆ.

ಹಂಪನಾಗರಾಜಯ್ಯ ಅವರು[೧೩೦] ಮಯ. ಮಾಂಡವ್ಯ. ವಿಶ್ವಕರ್ಮರ ಹಾಗೆ ಚೀರಫಟ್ಟಿಯು ದೇವಶಿಲ್ಪಿಯಾಗಿರಬೇಕೆಂದು ತರ್ಕಿಸುತ್ತಾರೆ. ಇಲ್ಲಿ ದ. ರಾ. ಬೇಂದ್ರೆಯವರ ಊಹೆ ಸರಿಎನಿಸುತ್ತದೆ. ಕ್ರಿ. ಶ. ೧೦ ನೇ ಶತಮಾನಕ್ಕಿಂತ ಹಿಂದಿನ ಕವಿಗಳು ಮತ್ತು ಕ್ರಿ. ಶ. ೧೩ ನೇ ಶತಮಾನದ ನಂತರದ ಕವಿಗಳು ಚೀರಫಟ್ಟಿಯ ಹೆಸರನ್ನು ಪ್ರಸ್ತಾಪಿಸದೇ ಇರುವುದರಿಂದ ಬಹುಶ ಆತ ಕ್ರಿ. ಶ. ೧೦ ನೇ ಶತಮಾನದಲ್ಲಿ ಆಗಿಹೋದ ಕಲಾವಿದನೇ ಇರಬೇಕು ಎನ್ನುತ್ತಾರೆ. ಆತನ ಜೀವಿತ ಕಾಲವಾದ ಕ್ರಿ. ಶ. ೧೦ ನೇ ಶತಮಾನದಲ್ಲಿ ಸಮಕಾಲೀನ ಕವಿಗಳು ಆತನನ್ನು ಉಲ್ಲೇಖಿಸಿದಂತೆಯೇ ಆತನ ಪ್ರಸಿದ್ಧಿಯಿಂದ ಮುಂದಿನ ಎರಡು ಶತಮಾನಗಳಲ್ಲೂ ಆತ ಜನರ ಬಾಯಲ್ಲಿ ಉಳಿದುಕೊಂಡಿರಬಹುದು. ಹಾಗಾಗಿ ಚೀರಫಟ್ಟಿಯು ಕ್ರಿ. ಶ. ೧೦ ನೇ ಶತಮಾನದ ಪ್ರಸಿದ್ಧ ಚಿತ್ರಕಾರನಾಗಿರಬೇಕೆಂಬ

೧೨೩. ಬಿ. ಪಿ. ಬಾಯಿರಿ : ಭಾರತೀಯ ಚಿತ್ರಕಲೆ, ಪುಟ ೨೩

೧೨೪. ಅ. ಲ. ನರಸಿಂಹನ್ : ಕರ್ನಾಟಕ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು (ಬೆಂಗಳೂರು ವಿವಿಗೆ ಸಲ್ಲಿಸಿದ ಬೆರಳಚ್ಚು ಮಹಾಪ್ರಬಂಧ), ಪುಟ ೫೪೬

೧೨೫. ಸಿ. ಕೆ. ವೆಂಕಟರಾಮಯ್ಯ : ಭವಭೂತಿ ಮಹಾಕವಿ, ಪುಟ ೩೦

೧೨೬. ಅ. ಲ. ನರಸಿಂಹನ್ : ಕರ್ನಾಟಕ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು (ಬೆಂಗಳೂರು ವಿವಿಗೆ ಸಲ್ಲಿಸಿದ ಬೆರಳಚ್ಚು ಮಹಾಪ್ರಬಂಧ), ಪುಟ ೫೪೭

೧೨೭. ಎಸ್. ಕೆ. ರಾಮಚಂದ್ರರಾವ್ : ಕರ್ನಾಟಕದ ಕಲೆಗಳು (ಸಂಪುಟ ೧), ಪುಟ ೧೦೨

೧೨೮. ಎಸ್. ಜಿ. ನರಸಿಂಹಾಚಾರ್. ಮ. ಆ. ರಾಮಾನುಜ ಅಯ್ಯಂಗಾರ (ಸಂ) : (೧೮೯೫) ಮಲ್ಲಿನಾಥ ಪುರಾಣ, ಪುಟ ೩೨

೧೨೯. ಸಾಹಿತ್ಯ ಸಂಶೋಧನ : (೧೯೪೦) ಪುಟ ೧೩೪-೭. ಚೀರಫಟ್ಟಿ ಯಾರು : ಒಂದೂಹೆ, ದ. ರಾ. ಬೇಂದ್ರೆ

೧೩೦. ಹಂ. ಪ. ನಾಗರಾಜಯ್ಯ (ಸಂ) : (೧೯೮೨), ಶಾಂತಿಪುರಾಣ, ಪುಟ ೮೮, ೯೦

ದ. ರಾ. ಬೇಂದ್ರೆಯವರ ಊಹೆ ಸರಿಎನಿಸುತ್ತದೆ. ಪ್ರಾಚೀನ ಕಾವ್ಯದಲ್ಲಿ ಚೀರಘಟ್ಟಿಯಲ್ಲದೇ 'ಮೇಘವಾನನ' ಎಂಬ ಚಿತ್ರಕಲಾವಿದನ ಹೆಸರೂ ಕಂಡುಬರುತ್ತದೆ. ಭಾವಚಿತ್ರಗಳನ್ನು ರಚಿಸುವಲ್ಲಿ ಪಳಗಿದವನಾದ ಮೇಘವಾನನನು ವಿವಾಹವಾಗಬೇಕಾದ ರಾಜಕುಮಾರಿಯರ ಭಾವಚಿತ್ರಗಳನ್ನು ರಚಿಸುತ್ತಿದ್ದನೆಂದು[೧೩೧] 'ತಿಲಕಮಂಜರಿ'ಯಲ್ಲಿ ಬಣ್ಣಿಸಿದ್ದು ತಿಳಿದುಬರುತ್ತದೆ. ಪ್ರಾಚೀನ ಭಿತ್ತಿಚಿತ್ರ ಕಲಾವಿದರ ಹೆಸರುಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಅಲ್ಲಲ್ಲಿ ಕೆಲವು ಕಡೆಗೆ ಮಾತ್ರ ಚಿತ್ರಕಲಾವಿದರು ತಮ್ಮ ಹೆಸರು ನಮೂದಿಸಿದ್ದು ಕಂಡುಬರುತ್ತದೆ. ಪೂರ್ವ ತುರ್ಕಸ್ಥಾನದ 'ನಿಯ' ಎಂಬ ಓಯಸಿಸ್‌ನ ಬಳಿ ಇರುವ 'ಮಿರಾನ್' ಸ್ತೂಪದಲ್ಲಿ ಕುಶಾನರ ಕಾಲದಲ್ಲಿ ರಚನೆಯಾದ ಕ್ರಿ. ಶ. ಎರಡನೇ ಶತಮಾನದ ಭಿತ್ತಿಚಿತ್ರದಲ್ಲಿ 'ತಿತ' ಎಂಬ ಕಲಾವಿನ ಹೆಸರು[೧೩೨] ಕಂಡುಬರುತ್ತದೆ. ಅಜಂತಾ ಎಲ್ಲೋರಾಗಳಲ್ಲಿನ ಭಿತ್ತಿ ಚಿತ್ರಗಳಲ್ಲಿ ಕಲಾವಿದರ ಹೆಸರುಗಳು ಕಂಡುಬರುವುದಿಲ್ಲ. ಆದರೆ ಕ್ರಿ. ಶ. ೬ ನೇ ಶತಮಾನದಲ್ಲಿ ರಚನೆಯಾದ ಬದಾಮಿಯ ವೈಷ್ಣವ ಗುಹೆಯ ಚಾಲುಕ್ಯರ ಕಾಲದ ಭಿತ್ತಿಚಿತ್ರಗಳಲ್ಲಿ 'ದುಟ್ಟಮನೋದಾರುಣನ್' ಎಂಬ ಚಿತ್ರ ಕಲಾವಿದನ[೧೩೩] ಹೆಸರು ಕಂಡಬರುತ್ತದೆ. ಅಲ್ಲದೆ ವೈಷ್ಣವ ಗುಹೆಯ ವರ್ಣಚಿತ್ರಗಳನ್ನು ದುಟ್ಟ ಮನೋದಾರುಣನ್ ಎಂಬ ಚಿತ್ರಕಾರನು ರಚಿಸಿದನೆಂಬುದನ್ನು[೧೩೪] ಆ ಭಿತ್ತಿ ಚಿತ್ರಗಳ ಬುಡದಲ್ಲಿ ಇರುವ ಕಂದು ಬಣ್ಣದ ಲಿಪಿ ತಿಳಿಸುತ್ತದೆ. ಪ್ರಾಯಶಃ ಆ ಬಣ್ಣದ ಅಕ್ಷರಗಳು ಆ ಕಲಾವಿದನವೇ ಆಗಿರಬೇಕು. ವಿಜಾಪುರ ಸುಲ್ತಾನರ ಕಾಲದಲ್ಲಿ ಫರೂಕ್‌ಹುಸೇನ್, ಜನ್‌ಕುಲ್ಲೈ, ಸುಬಾನ್-ಅಲಿ-ಮುಸಾವಿರ್. ಅಲಿಜಾಫರ್. ಮಹಮ್ಮದ ಖಾನ್. ಹೈದರಅಲಿ, ಇಬ್ರಾಹಿಂಖಾನ್, ಅಬ್ದುಲ್‌ಖಾದಿರ್, ಕಮಲ್‌ಮಹಮ್ಮದ್. ಚಾಂದ್ ಮುಹಮ್ಮದ್, ಎಂಬ[೧೩೫] ಚಿತ್ರಕಲಾವಿದರ ಹೆಸರುಗಳು ದೊರಕುತ್ತವೆ.

ಕ್ರಿ. ಶ. ೧೬೩೭ ರಲ್ಲಿ ಶಹಾಜಿ ಭೋಸ್ಲೆ ಬೆಂಗಳೂರಿನಿಂದ ತನ್ನ ಜಹಗೀರಿನ ಮೇಲ್ವಿಚಾರಣೆ ನಡೆಸುವ ಕಾಲದಲ್ಲಿ ಆತನ ಬಳಿಯಲ್ಲಿ ಜಯರಾಮ ಪಿಂಡ್ರ, ಮಲ್ಲಾರಿಭಟ್. ನಾರೋಪಂತ ಹನುಮಂತೆ[೧೩೬] ಎಂಬ ಮರಾಠಿ ಭಿತ್ತಿ ಚಿತ್ರ ಕಲಾವಿದರಿದ್ದರೆಂದು ತಿಳಿದುಬರುತ್ತದೆ. ಮತ್ತೆ ಚಿತ್ರಕಲಾವಿದರ ಹೆಸರುಗಳು ಕಂಡುಬರುವುದು ಹೆಚ್ಚಾಗಿ ಮೈಸೂರು ಅರಸರ ಕಾಲದಲ್ಲಿ ದುರ್ಗದ ಕೃಷ್ಣಪ್ಪ. ಗುಡಿಕಾರ ತಿಪ್ಪಯ್ಯ, ಯಲ್ಲಣ್ಣ, ವೀರಣ್ಣ, ಶಿಕಾರಿಪುರದ ತಿಪ್ಪಯ್ಯ, ಜಾವಗಲ್ಲು ನರಸಿಂಹಯ್ಯ. ನೆಲಮಂಗಲದ ರಂಗಪ್ಪ, ವೈ ಸುಂದರಯ್ಯ. ಎಲ್ಲಪ್ಪ, ತಂಜಾವೂರು ಕೊಂಡಯ್ಯ, ನಗೂನಳ್ಳಿ ನಾರಣಪ್ಪ, ಅಳಸಿಂಗ್ರಯ್ಯ[೧೩೭] ಮುಂತಾದ ಕಲಾವಿದರ ಹೆಸರುಗಳು ಮೈಸೂರು ಅರಸರ ಕಾಲದಲ್ಲಿ ದೊರಕುತ್ತವೆ. ಇವುಗಳನ್ನು ಬಿಟ್ಟರೆ ತೀರಾ ಇತ್ತೀಚೆಗೆ ಕೆಲವು ಭಿತ್ತಿ ಚಿತ್ರರಚನಾ ಕಾರರ ಹೆಸರುಗಳು ತಿಳಿದುಬರುತ್ತವೆ. "ಕ್ರಿ. ಶ. ೧೮ ನೇ ಶತಮಾನದಲ್ಲಿ ರಚನೆಯಾದ ಬೆಂಗಳೂರು ಜಿಲ್ಲೆ ನಾಗಮಂಗಲ ತಾಲೂಕಿನ ಎಲ್ಲಾದ ಹಳ್ಳಿಯ ಲಕ್ಷ್ಮೀ ದೇವಾಲಯದ ಭಿತ್ತಿ ಚಿತ್ರದಲ್ಲಿ ಪುಟ್ಟಯ್ಯ ಎಂಬ ಹೆಸರು. ತುರವೇಕೆರೆ ಬಳಿಯ ಬೆನಕನ ಕೆರೆಯಲ್ಲಿ ೧೯೩೦ ರಲ್ಲಿ ರಚನೆಯಾದ ಭಿತ್ತಿ ಚಿತ್ರದಲ್ಲಿ ಎಂ. ಎಲ್. ಸಿ. ಲಿಂಗಾಚಾರ್ಯ ಎಂಬ[೧೩೮] ಕಲಾವಿದನ ಹೆಸರೂ ಕಂಡುಬರುತ್ತವೆ". ಮೊಗಲರ ಕಾಲದಲ್ಲಿ ಮೀರ್

---

೧೩೧. C. Sivaramamurti : Indian Sculpture, Page 5

೧೩೨. ಅ. ಲ. ನರಸಿಂಹನ್ : ಕರ್ನಾಟಕ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು (ಬೆಂಗಳೂರು ವಿವಿಗೆ ಸಲ್ಲಿಸಿದ ಬೆರಳಚ್ಚು ಮಹಾಪ್ರಬಂಧ). ಪುಟ ೫೪೬

೧೩೩. ಡಾ. ಬಿ. ಕೆ. ಹಿರೇಮಠ : ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ. (ಬೆರಳಚ್ಚು ಪ್ರತಿ). ಪುಟ ೨೯

೧೩೪. ಡಾ. ಶೀಲಾಕಾಂತ ಪತ್ತಾರ : ಬಾದಾಮಿ ಸಾಂಸ್ಕೃತಿಕ ಅಧ್ಯಯನ. ಪುಟ ೨೦೧

೧೩೫. Dr. D. V. Devaraj and C. S. Patil (Ed.) : Art and Architecture in Karnataka, Page 144

೧೩೬. ಪಿ. ಆರ್. ತಿಪ್ಪೇಸ್ವಾಮಿ (ಸಂ) : ಚಿತ್ರಕಲಾ ಪ್ರಪಂಚ. ಪುಟ ೬೭

೧೩೭. ಸಾ. ಕೃ. ರಾಮಚಂದ್ರರಾವ್ : ಶ್ರೀ ತತ್ವನಿಧಿ. (ಸಂಪುಟ ೧) ಪುಟ ೨೧

೧೩೮. ಅ. ಲ. ನರಸಿಂಹನ್ ಕರ್ನಾಟಕ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು (ಬೆಂಗಳೂರು ವಿವಿಗೆ ಸಲ್ಲಿಸಿದ ಬೆರಳಚ್ಚು ಮಹಾಪ್ರಬಂಧ). ಪುಟ ೫೪೭

ಸೈಯದ್‌ಅಲಿ. ಖ್ವಾಜಾಅಬ್ದುಲ್‌ಸಮದ್. ಲಾಲ್‌ಫರೂಕ್ ಬಸವಾನ್. ದಾಶ್ವಂತ್, ಮಾಧು. ಭಗವತಿ, ಮುಕುಂದ, ರಾಮದಾಸ್. ಮುಸ್ಕೀನ್. ಕೇಶು.[೧೪೯] ಮುಂತಾದ ಅನೇಕ ಚಿತ್ರಕಲಾವಿದರ ಹೆಸರುಗಳು ತಿಳಿದು ಬರುತ್ತವೆ.

**ಭಿತ್ತಿ ಚಿತ್ರ ಶಿಲ್ಪಿಗಳು :** ಚಿತ್ರ ಕಲಾವಿದರಿಗಿಂತ ಪ್ರಾಚೀನ ಶಿಲ್ಪಿಗಳ ಹೆಸರು ಹೆಚ್ಚಾಗಿ ಕಂಡುಬರುತ್ತವೆ. ಬಾದಾಮಿ ಚಾಲುಕ್ಯರ ಕಾಲದಲ್ಲಿ ಶ್ರೀ ಗುಂಡನ್. ಅನಿವಾರಿತಾಚಾರಿ, ಸರ್ವಸಿದ್ಧಿ ಆಚಾರಿ, ರೇವಡಿ ಓವಜ್ಜ್ಹಿರ,[೧೫೦] ಮುಂತಾದ ಸುಮಾರು ಮುನ್ನೂರು ಶಿಲ್ಪಿಗಳ ಹೆಸರುಗಳು ಕಂಡುಬರುತ್ತವೆ. ಹೊಯ್ಸಳರ ಕಾಲದಲ್ಲಿ ಪಲ್ಲವಾಚಾರಿ, ಮಲ್ಲಿತಮ್ಮ, ಬಳ್ಳಿಗಾವೆಯ ದಾಸೋಜ. ಅವನಮಗ ಚಾರಣ. ಇನೋಜನ ಮಗ ಚಿಕ್ಕ ಹಂಪಯ್ಯ, ಮಲ್ಲಿಯಣ್ಣ, ವಿಭಣ್ಣ, ಮಲ್ಲೋಜ. ಮಾಯಣ್ಣ. ಕಂಚುಮಲ್ಲಿಯಣ್ಣ. ಅವನ ಮಗ ಮಾಸದ, ಗದುಗಿನ ನಾಗೋಜ, ಎಂಬ ಶಿಲ್ಪಿಗಳ ಹೆಸರು ಕಂಡುಬರುತ್ತವೆ. ಶಿಲ್ಪಿಯು ತನ್ನ ಶಿಲ್ಪಕರ್ಮಕ್ಕೆ ಸಂಬಂಧಿಸಿದಂತೆ ಅನೇಕ ಪೂರಕವಾದ ವಿಷಯಗಳನ್ನು ತಿಳಿದವನಾಗಿರಬೇಕೆಂದು ಶಿಲ್ಪಶಾಸ್ತ್ರಗಳು ಹೇಳುತ್ತವೆ. ಅವುಗಳಲ್ಲಿ ಚಿತ್ರವಿದ್ಯೆಯು ಮುಖ್ಯವಾದುದಾಗಿದೆ. ಹಾಗಾಗಿ ಶಿಲ್ಪಿಗಳೂ ಚಿತ್ರಕಾರರಾಗಿರುತ್ತಿದ್ದುದು[೧೫೧] ಸಾಮಾನ್ಯವಾಗಿತ್ತು. ಹಾಗಾಗಿ ಶಿಲ್ಪಿಗಳ ಹೆಸರುಗಳನ್ನು ಸಹಿತ ಚಿತ್ರ ಕಲಾವಿದರ ಹೆಸರೆಂದು ಪರಿಗಣಿಸಬಹುದಾಗಿದೆ. ಶಿಲ್ಪಿಗಳು ಶಿಲ್ಪಕೆತ್ತನೆಗಿಂತ ಮೊದಲು ತಾವು ರಚಿಸಬೇಕಾದ ಶಿಲ್ಪದ ಆಕೃತಿಯನ್ನು ಮೊದಲು ವಿವರವಾಗಿ ರೇಖಾ ಚಿತ್ರದಲ್ಲಿ ಶಿಲೆಯಮೇಲೆ ರಚಿಸಿಕೊಳ್ಳಬೇಕಾಗುತ್ತದೆ. ಹಾಗಾಗಿ ಶಿಲ್ಪಿಯಾದವನು ಮೊದಲು ಚಿತ್ರಕಾರನಾಗಿದ್ದು ನಂತರ ಶಿಲ್ಪಿಯಾಗಬೇಕಾಗುತ್ತದೆ. ಅದರಿಂದಾಗಿಯೇ ವಿಷ್ಣುಧರ್ಮೋತ್ತರದಲ್ಲಿ "ಚಿತ್ರಕಲೆ ಗೊತ್ತಿಲ್ಲದವನು ವಿಗ್ರಹಲಕ್ಷಣಗಳನ್ನು ಅರಿಯಲಾರ" ಎಂದು ಸ್ಪಷ್ಟವಾಗಿ ಹೇಳಿದ್ದನ್ನು ವಿದ್ವಾಂಸರು ಗುರುತಿಸಿದ್ದಾರೆ.

ಕೆಲವು ಶಾಸನಗಳಲ್ಲಿ ಚಿತ್ರಕಲೆಯಲ್ಲಿ ಪ್ರವೀಣರಾದ ಶಿಲ್ಪಿಗಳ ಉಲ್ಲೇಖ ಕಂಡುಬರುತ್ತವೆ. ಮೂಡಗೆರೆ ತಾಲೂಕಿನ ಜಾವಳಿ ಗ್ರಾಮದ ೭೪೯ ರ ಶಾಸನವೊಂದು[೧೫೨] "ಚಿತ್ರಕಲಾಭಿಜ್ಞೇನ ವಿಶ್ವಕರ್ಮಾಚಾರ್ಯ" ಎಂದು ಬಣ್ಣಿಸಿದೆ. ದೇವರ ಹಳ್ಳಿಯಲ್ಲಿನ ಕ್ರಿ. ಶ. ೭೭೬ ರ ಶಾಸನದಲ್ಲಿ[೧೫೩] "ಸರ್ವಕಲಾಧಾರಭೂತ ಚಿತ್ರಕಲಾಭಿಜ್ಞೇನ ವಿಶ್ವಕರ್ಮಾಚಾರ್ಯೇಣದಂ ಶಾಸನಮ್ ಲಿಖಿತಮ್. ಎಂದು ವರ್ಣಿಸಿದೆ. ಶ್ರವಣ ಬೆಳಗೊಳದ ಕ್ರಿ. ಶ. ೧೧೧೫ ರ ಶಾಸನಲ್ಲಿ[೧೫೪] ಮೃದುರೇಖಾ ವಿಳಾಸ ಚಾಮರಾಜ ಬಳಹದಲ್ಬರೆದ ಎಂದಿದ್ದರೆ, ಮಾಳಗುಂದದ ಕ್ರಿ. ಶ. ೧೧೧೬ ರ ಶಾಸನವು[೧೫೫] ಗವರಾಚಾರಿ ಎಂಬ ರೂವಾರಿಯು ಹೇಮಕರ್ಮ, ಲೋಹಕರ್ಮ, ಶಿಲಾಕರ್ಮ, ರತ್ನಕರ್ಮ, ಕಾಷ್ಠಕರ್ಮ ಮತ್ತು ಚಿತ್ರಕರ್ಮಗಳಲ್ಲಿ ವಿಶ್ವಕರ್ಮನ ಹಾಗೆ ಪ್ರವೀಣನಾಗಿದ್ದನೆಂದು ಬಣ್ಣಿಸುತ್ತದೆ. ನರಗುಂದದ ಕ್ರಿ. ಶ. ೧೧೪೭ ರ ಶಾಸನದಲ್ಲಿ[೧೫೬] ಲಿಪಿಕಾರನಾದ 'ತೀಕ'ನು ಶಾಸನ ಅಕ್ಷರಗಳನ್ನು ಚಿತ್ರಕಲೆಯಂತೆ ಅಂದಗೊಳಿಸಿ ಬರೆದಿದ್ದಾಗಿ

---

೧೪೯. ಸಾ. ಕೃ. ರಾಮಚಂದ್ರರಾವ್ (ಸಂ) : ಶ್ರೀ ತತ್ವನಿಧಿ (ಸಂಪುಟ ೧) ಪುಟ ೨೫

೧೫೦. ಡಾ. ಎಸ್. ಸಿ. ಪಾಟೀಲ (ಸಂ) : ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, ಪುಟ ೨೭

೧೫೧. ಡಾ. ಕೆ. ಎಸ್. ಕುಮಾರಸ್ವಾಮಿ : ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಯರು, ಪುಟ ೧೧೭

೧೫೨. ಡಾ. ಬಿ. ಕೆ. ಹಿರೇಮಠ : ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ಪುಟ ೨೯

೧೫೩. E. C. Vol. IV, ಪುಟ ೮೫

೧೫೪. E. C. Vol. II, ಪುಟ ೧೨೭

೧೫೫. E. C. Vol. IV, ಪುಟ ೬೮

೧೫೬. ಡಾ. ಎಸ್. ಸಿ. ಪಾಟೀಲ (ಸಂ) : ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, ಪುಟ ೯೭

ತಿಳಿದುಬರುತ್ತದೆ. ಹಾಗೆಯೇ ಧಾರವಾಡ ಜಿಲ್ಲೆಯ ಅಸುಂಡಿಯಲ್ಲಿನ ಶಾಸನದಲ್ಲಿ[೧೪೭] 'ಲಿಖಿತ ಜನ ಸುಮಿತ್ರಂ ಮೃದುಲಲಿತ ವಿಚಿತ್ರ ಲಿಖಿತಲೇಖಂ' ಎಂಬಂತಹ ಶಾಸನೋಲ್ಲೇಖಗಳು ಲಿಪಿಕಾರ ಮತ್ತು ರೂವಾರಿಗಳು ಚಿತ್ರಕಲಾವಿದರಾಗಿದ್ದುದನ್ನು ಸ್ಪಷ್ಟಪಡಿಸುತ್ತವೆ. "ನವಲಗುಂದದ ಮಾದಿರಾಜ" ನೆಂಬ ಶಾಸನ ಲಿಪಿಕಾರನು ಒಳ್ಳೆಯ ಚಿತ್ರಕಲಾವಿದನಾಗಿದ್ದನು. ಬಿಂದುವಿನೊಂದು ಶೋಭೆ. ತಲೆಕಟ್ಟಿನ ಪೂರ್ಕುರ್ಱಿಚೆಲ್ವ ಮಾತ್ರೆಯೊಳ್ ನಿಂದ ಬೆಡಂಗು, ಒಳ್ಳಿ ಯೊಳೊಡಂಬಡುತಿರ್ಪನಯಂ ವಿಸಗನದೊಳ್ಪೊಂದಿರಲ್. ಎಂಬಲ್ಲಿ ಆತನ ಕಲಾಪ್ರಜ್ಞೆ ವ್ಯಕ್ತವಾಗಿದೆ. ಅಲ್ಲದೇ ಮದನಮಹೇಶ್ವರಂ. ಭಾರತೀಕರ್ಣಪೂರಂ. ಎಂಬ ಬಿರುದಿಗಳು ಲಿಪಿಕಾರರನ್ನು ಕುರಿತು ಹೇಳಲಾಗಿದ್ದು ಅವರ ಸೌಂದರ್ಯ ಸಿದ್ಧಿಯನ್ನು ಇವು ಹೇಳುತ್ತವೆ[೧೪೮] ಎಂಬ ವಿವರಗಳು ತಿಳಿದುಬರುತ್ತವೆ. ಕೆಲವು ಶಾಸನಗಳಲ್ಲಿ ಮುತ್ತಿನ ಸರ. ಮುತ್ತಿನ ಸರಿಗೆ. ಪೊಸಮುತ್ತು ಪದಗಳ ಉಲ್ಲೇಖಗಳು ಬಂದಿದ್ದು ಅವು ಶಾಸನಗಳ ಸೌಂದರ್ಯವನ್ನು ಕುರಿತಾಗಿವೆ ಶಾಸನಗಳಲ್ಲಿಯ ಕಲಾವಿನ್ಯಾಸ. ಸೌಂದರ್ಯತೆಯನ್ನು ಹೆಚ್ಚಿಸಲು ಲಿಪಿಕಾರನು ಚಿತ್ರಕಲಾವಿನಾಗಿರಬೇಕೆಂದು ಬೇರೆ ಹೇಳಬೇಕಾಗಿಲ್ಲ. ಶಾಸನಗಳಲ್ಲಿಯ ಅಕ್ಷರಗಳನ್ನು ಸುಂದರವಾಗಿ ಮುತ್ತು ಪೋಣಿಸಿದಂತೆ ಬರೆಯಲು ಲಿಪಿಕಾರನಿಗೆ ಕಲಾಭಿಜ್ಞತೆ ಅವಶ್ಯವಾಗಿ ಬೇಕು. ಹಲವು ಶಾಸನಗಳಲ್ಲಿಯೇ ಆಯಾ ಶಾಸನಗಳನ್ನು ಮುತ್ತಿನ ಸರದಂತೆ, ಮುತ್ತಿನ ಸರಿಗೆಯಂತೆ ಸುಂದರವಾಗಿ ಬರೆಯಲಾಗಿದೆ ಎಂದು ಹೇಳಲಾಗಿದೆ.

ಗದಗ ಜಿಲ್ಲೆಯ ಸೊರಟೂರದಲ್ಲಿನ ಕ್ರಿ. ಶ. ೧೦೬೧ ರ ಶಾಸನದಲ್ಲಿ[೧೪೯] ಮುತ್ತಿನ ಸರಿಗೆಯನುಕರಿಸೆ ಕನ್ನಪ್ಪಯ್ಯಂ ಬರೆದಂ. ಎಂದಿದ್ದರೆ. ಧಾರವಾಡ ಜಿಲ್ಲೆಯ ತಿಳುವಳ್ಳಿಯ ಕ್ರಿ. ಶ. ೧೦೭೨ ರ ಶಾಸನದಲ್ಲಿ[೧೫೦] "ವಾಗ್ದೇವಿಗೆ ಚಿತ್ತಾರದಿಂದ ಸಮೆದ ಮುತ್ತಿನ ಸರಿಗೆಯ ನನುಕರಿಪುವನ್ತೆ ಬಲ್ಲೆಯ ಲಿಖಿತಂ", ಎನ್ನಲಾಗಿದೆ. ಧಾರವಾಡ ಜಿಲ್ಲೆಯ ಚಿಕ್ಕಹಂದಿಗೋಳದ ಕ್ರಿ. ಶ. ೧೦೬೪ ರ ಶಾಸನದಲ್ಲಿ[೧೫೧] ಬರೆದ ಮುತ್ತಿನಸರಮಂ ಸಮದನ್ತೆ ಶಾಸ್ತನೊಳ್ಳಕ್ಕರಮಂ, ಎಂದು ಹೇಳಿದ್ದರೆ, ಹೊಳಲ್ಕೆರೆಯ ಕ್ರಿ. ಶ. ೧೨೦೮ ರ ಶಾಸನದಲ್ಲಿ[೧೫೨] ಪೊಸಮುತ್ತುಗಳೊಂ.... ಮಸ.... ಪರಿಣತೆಯಿಂದೇಪ ಬರೆದ, ಎಂದಿದೆ. ಹಾಗೇ ಹಾರನಹಳ್ಳಿಯ ಕ್ರಿ. ಶ. ೧೩೩೨ ರ ಶಾಸನವು[೧೫೩] ಸರಸ್ವತಿಯ ಕೊಳಮುತ್ತುವೊಲಿರೆ ವೃತ್ತಂ ಕೋಮಲಂ ಸಭದ್ರಃ. ಎಂಬ ಶಾಸನದ ಸಾಲುಗಳು ಮುತ್ತಿನಂತೆ ಸುಂದರವಾಗಿ ಬರೆದ ಶಾಸನದ ಅಕ್ಷರಗಳನ್ನು ಕುರಿತು ಹೇಳುತ್ತವೆ. ಮತ್ತೆ ಕೆಲವು ಶಾಸನ ಲಿಪಿಕಾರ ಕಾಲವಿದರು ಶಾಸನ ಅಕ್ಷರಗಳಲ್ಲಿ ಪ್ರಾಣಿ ಪಕ್ಷಿ ಹೂ, ಲತೆಗಳನ್ನು ಚಿತ್ರಿಸಿ ಶಾಸನಗಳನ್ನು ಅಲಂಕಾರಗೊಳಿಸಿದ್ದಾರೆ. ಆ ಮೂಲಕ ತಮ್ಮ ಚಿತ್ರಕಲಾ ಪ್ರಜ್ಞೆಯನ್ನು ವ್ಯಕ್ತಗೊಳಿಸಿದ್ದಾರೆ.

ಭೀಮಸಮುದ್ರದ ಕ್ರಿ. ಶ. ೧೦೬೨ ರ ಶಾಸನ[೧೫೪]

ಆನೆಯ ಸಿಂಘದ ಗಿಳಿಗಳ
ನಾನಾ ರೂಪಗಳನಕ್ಕರಂಗಳೊಳೆಸೆಯಲು
ತಾನಳವಡಿಸುವೆನೆಂದಡ
ದೇನ.... ಮರುಳೆ ತೊಡರ್ದಪ್ಪೆರೂವಕಾನೊಳ್

೧೪೭. ಡಾ. ಎಸ್. ಸಿ. ಪಾಟೀಲ (ಸಂ) : ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, ಪುಟ ೯೭
೧೪೮. ಡಾ. ಎಸ್. ಸಿ. ಪಾಟೀಲ (ಸಂ) : ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, ಪುಟ ೯೮
೧೪೯. S. I. I. Vol. XI ಪುಟ ೧೧೧
೧೫೦. K. I. Vol. V, ಪುಟ ೮
೧೫೧. K. I. Vol. V, ಪುಟ ೩೮
೧೫೨. E. C. Vol. XI, ಪುಟ ೧೨೪
೧೫೩. E. C. Vol. V, ಪುಟ ೧೩೩
೧೫೪. E. C. Vol. XI, ಪುಟ ೪

ಬಳ್ಳಾರಿ ಜಿಲ್ಲೆಯ ಬಾಗಳಿಯ ಕ್ರಿ. ಶ. ೧೦೬೮ ರ ಶಾಸನ[೧೫೫]

"ಹಸ್ತಿಸಿಂಗಂ ಹರಿಣೆಯ ರೂಹಗೆಯಕ್ಕರಾವಳಿಯಿಂದಂ ಬರೆಯ.... ದಡೆ
ಪುರುದಿಡಿಸವೇಡೆಲೆವೊ ರೇವಣಾಯ್ಯನೊಳೆಂದಂದೆಂತಿನೆ...
ನೆಲೆ.... ನಿನ್ನಳವೋ ಚಿತ್ರದ ಕರದೊಳ್ ಪಂ ಕಂಠದೊಳ್ ಬರೆದ ರೇವನ
ಕಂಠಕೆಳೆ.... ನೋರ್ಪಡೆಂದೇಕ್ಕೆಕಂ".

ಈ ಮೇಲಿನ ಶಾಸನಗಳು ಪ್ರಾಣಿ ಪ್ರಪಂಚ. ಪಕ್ಷಿಪ್ರಪಂಚ ಮತ್ತು ನಕ್ಷತ್ರ ಲೋಕದ ಚಿತ್ರಗಳನ್ನು ಕೊಡುತ್ತವೆ. ಹೀಗೆ ಶಾಸನಗಳಲ್ಲಿ ರಚಿತವಾದ ಪ್ರಾಣಿಪ್ರಪಂಚ. ಪಕ್ಷಿಲೋಕ. ನಕ್ಷತ್ರ ಸಮೂಹದ ಚಿತ್ರಗಳನ್ನು ಒಂದೆಡೆ ಸೇರಿಸಿ ವಿಶೇಷ ಅಧ್ಯಯನ ನಡೆಸಿ ಆಮೂಲಕ ಚಿತ್ರಕಲೆಯನ್ನು ತಿಳಿದುಕೊಳ್ಳುವ ಕಾರ್ಯ ನಡೆಯಬೇಕಿದೆ ಎಂದು ಡಾ. ಬಿ. ಆರ್. ಹಿರೇಮಠ ಅವರು ಹೇಳುತ್ತಾರೆ. ಇದು ಅವಶ್ಯವೂ ಆಗಿದೆ.

**ಚಿತ್ರಕಲಾವಿದರಾದ ಲಿಪಿಕಾರ ಮತ್ತು ರೂವಾರಿಗಳು :** ಕೆಲವು ಶಾಸನಗಳು ಶಾಸನ ನಿರ್ಮಿಸಿದ ಲಿಪಿಕಾರ ಹಾಗೂ ರೂವಾರಿಗಳು ಚಿತ್ರಕಲಾವಿದರಾಗಿದ್ದುದನ್ನು ಸ್ಪಷ್ಟಪಡಿಸುತ್ತವೆ. ಅಲ್ಲದೇ ಶಾಸನ ನಿರ್ಮಾಣದ ಸಂದರ್ಭದಲ್ಲಿ ಚಿತ್ರಕಲಾವಿದರ ಸಹಾಯವನ್ನು ಪಡೆದುಕೊಳ್ಳುತ್ತಿದ್ದುದು ತಿಳಿಯುತ್ತದೆ. ಶಾಸನ ನಿರ್ಮಾಣ ಸಂದರ್ಭದಲ್ಲಿ ಕವಿ, ಲಿಪಿಕಾರ. ರೂವಾರಿ ಪ್ರಮುಖ ಪಾತ್ರ ವಹಿಸುತ್ತಾರೆ. ಕವಿ ಸಿದ್ಧಪಡಿಸಿದ ಸಾಹಿತ್ಯವನ್ನು ಲಿಪಿಕಾರ ಶಿಲೆಯ ಮೇಲೆ ಬರೆಯುತ್ತಾನೆ. ಆಗ ಶಾಸನದ ಅಂದ ಹೆಚ್ಚಿಸಲು ಅವಶ್ಯಕ ಚಿತ್ರ ಸುಳುವುಗಳನ್ನು ರಚಿಸುತ್ತಾನೆ. ನಂತರ ರೂವಾರಿ ಅಥವಾ ಶಿಲ್ಪಿ ಅಂದವಾಗಿ ಅವುಗಳನ್ನು ಕಂಡರಿಸುತ್ತಿದ್ದರು ಅಲ್ಲದೇ ಕೆಲವು ಸಂದರ್ಭಗಳಲ್ಲಿ ಲಿಪಿಕಾರ ಮತ್ತು ರೂವಾರಿಗಳು ಚಿತ್ರಕಾರರೇ ಆಗಿರುತ್ತಿದ್ದರು[೧೫೬] ಎನ್ನುವ ಸಂಗತಿಗಳು ತಿಳಿದುಬರುತ್ತವೆ.

ದಾನ ಶಿಲಾಸನಗಳಲ್ಲಿ ಶಿರೋಭಾಗದಲ್ಲಿ ಸ್ವರ್ಗದ ಪರಿಕಲ್ಪನೆ ಇರುತ್ತದೆ. ಇದನ್ನು ಚಿತ್ರಕಾರ ಮೊದಲು ರೇಖಾಚಿತ್ರದ ಮೂಲಕ ಬಿಡಿಸುತ್ತಾನೆ. ನಂತರ ಶಿಲ್ಪಿ ಅದನ್ನು ಉಬ್ಬು ಚಿತ್ರ (ಶಿಲ್ಪ)ವಾಗಿ ಕೆತ್ತುತ್ತಾನೆ. ಇದೇ ರೀತಿ ವೀರಗಲ್ಲು. ಮಾಸ್ತಿಕಲ್ಲು. ನಿಷಧಿಕಲ್ಲು. ಬಲಿದಾನ. ಮುಂತಾದ ಸ್ಮಾರಕ ಶಿಲೆಗಳಲ್ಲೂ ಚಿತ್ರಕೃತಿಗಳಿರುತ್ತವೆ. ಈ ಉಬ್ಬು ಶಿಲ್ಪ ರಚನೆಗೆ ಮೊದಲು ಕಲಾವಿದನ ರೇಖಾ ಚಿತ್ರಗಳೇ ಮೂಲವೆನ್ನುವುದು ಗಮನಾರ್ಹ ಅಂಶ. "ವೀರಗಲ್ಲುಗಳಲ್ಲಿಯ ಸನ್ನಿವೇಶ. ವೀರಮರಣ ಹೊಂದಿದ ವೀರರನ್ನು ಸ್ವರ್ಗಕ್ಕೆ ಕರೆದೊಯ್ಯುವ ದೃಶ್ಯ. ವೀರನಾದವನು ವೀರಸ್ವರ್ಗ ಪಡೆದ ಸನ್ನಿವೇಶಗಳನ್ನು ಚಿತ್ರಕಾರ ಕಲಾತ್ಮಕವಾಗಿ ಚಿತ್ರಿಸಿದ ಮೇಲೆಯೇ ಶಿಲ್ಪಿ ಅವುಗಳನ್ನು ಉಬ್ಬು ಶಿಲ್ಪಗಳಾಗಿ ಕಂಡರಿಸುತ್ತಾನೆ. ಇದರಂತೆ ಪತಿಯ ಮರಣಾನಂತರ ಸಹಗಮನ ಅನುಗಮನ ಹೊಂದಿದ ಸ್ತ್ರೀಯ ಸ್ಮಾರಕವಾದ ಮಾಸ್ತಿಕಲ್ಲು. ಸಲ್ಲೇಖನ ವ್ರತದ ಮೂಲಕ ದೇಹತ್ಯಾಗಮಾಡಿದ ಜೈನ ಧಾರ್ಮಿಕ ವ್ಯಕ್ತಿಗಳ ಹೆಸರಿನಲ್ಲಿರುವ ನಿಷಧಿಕಲ್ಲು, ದೇವರ ಹೆಸರಿನಲ್ಲಿ ವ್ಯಕ್ತಿಯ ಹೆಸರಿನಲ್ಲಿ ಪ್ರಾಣೋತ್ಕ್ರಮಣ ಮಾಡಿದವರ ಸ್ಮರಣೆಗಾಗಿ ನಿಲ್ಲಿಸಿದ ಬಲಿದಾನ ಸ್ಮಾರಕಗಳು ಮುಂತಾದವುಗಳಲ್ಲಿಯ ಚಿತ್ರ ಮತ್ತು ಶಿಲ್ಪಗಳನ್ನು ಮೊದಲು ಚಿತ್ರಕಾರ ರೇಖಾಚಿತ್ರದಮೂಲಕ ಬಿಡಿಸಿದ ನಂತರವೇ ಶಿಲ್ಪಿ ಕೆತ್ತುತ್ತಾನೆ.[೧೫೭] ಎಂಬಂತಹ ಸಂಗತಿಗಳು ಗಮನಾರ್ಹವಾಗಿವೆ.

---

೧೫೫. S. S. I. Vol. IX, ಪುಟ ೧೩೨

೧೫೬. ಡಾ. ಎಸ್. ಸಿ. ಪಾಟೀಲ (ಸಂ) : ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, ಪುಟ ೯೬

೧೫೭. ಡಾ. ಎಸ್. ಸಿ. ಪಾಟೀಲ (ಸಂ) : ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, ಪುಟ ೯೭

**ಚಿತ್ರ ಕಲಾವಿದ ರಾಜರು :** ರಾಜರೂ ಸಹಿತ ಸ್ವತಃ ಚಿತ್ರಕಲಾವಿದರಾಗಿದ್ದುದು ತಿಳಿದುಬರುತ್ತದೆ. ಮಂಜರಾಬಾದ್‌ದಲ್ಲಿನ ಕ್ರಿ. ಶ. ೧೧೯೫ ರ ಶಾಸನ ಒಂದು[೧೫೮] ಕದಂಬ ವಂಶದ ದಯಾಸಿಂಹನು ಚಿತ್ರಕಲೆಯಲ್ಲಿ ನಿಪುಣನಾಗಿದ್ದನ್ನು ತಿಳಿಸುತ್ತದೆ. ರಾಷ್ಟ್ರಕೂಟ ದೊರೆ ಕೊಟ್ಟಿಗ, ತ್ರೈಲೋಕ್ಯಮಲ್ಲ. ನನ್ನಿನೊಳಂಬ ಪಲ್ಲವ ಪೆರ್ಮಾನಡಿ ಇವರನ್ನು "ಚಿತ್ರವೆಡಂಗ"ರೆಂದು ಕರೆದಿದ್ದು[೧೫೯] ತಿಳಿದುಬರುತ್ತದೆ. ಜಯನೃಪ ಚರಿತೆಯ ಕರ್ತೃ ಮಂಗರಸನು ದ್ವಾರಾವತಿಯ ಪುರವರಾಧೀಶ್ವರ ಲಕ್ಷ್ಮೀರಮಣಾನ್ವಯನಾದ ತನ್ನ ತಂದೆಯನ್ನು "ಚಿತ್ರಕಲಾಸದನಂ" ಎಂದು[೧೬೦] ಬಣ್ಣಿಸಿದೆ. ಬಿಜಾಪುರದ ಸುಲ್ತಾನರಲ್ಲಿ ಎರಡನೆಯ ಇಬ್ರಾಹಿಂ ಆದಿಲ್‌ಶಹ (ಕ್ರಿ. ಶ. ೧೬೨೭)ನು ಕಲೆಗಳ ಆಸ್ವಾದಕನು ಮಾತ್ರವಲ್ಲದೇ ಉತ್ತಮ ವರ್ಣ ಚಿತ್ರಕಾರನೂ[೧೬೧] ಆಗಿದ್ದುದು ತಿಳಿಯುತ್ತದೆ. ಪಲ್ಲವ ಮಹೇಂದ್ರವರ್ಮನು "ಚಿತ್ರಕಾರ ಪುಲಿ" ಎಂಬ ಬಿರುದನ್ನು ಧರಿಸಿದ್ದು ಮಾತ್ರವಲ್ಲದೇ "ದಕ್ಷಿಣ ಚಿತ್ರ" ಎಂಬ ಹೆಸರಿನ ಚಿತ್ರಕಲಾಗ್ರಂಥವನ್ನು ರಚಿಸಿದನೆಂದೂ[೧೬೨] ಹೇಳಲಾಗುತ್ತದೆ. ಚಾಲುಕ್ಯ ಸೋಮೇಶ್ವರನು ತನ್ನಗ್ರಂಥ ಅಭಿಲಾಷಿತಾರ್ಥ ಚಿಂತಾಮಣಿಯಲ್ಲಿ ತನ್ನನ್ನು "ಚಿತ್ರವಿದ್ಯಾವಿರಕ್ಷಣ" ಎಂಬುದಾಗಿ ಕರೆದುಕೊಂಡಿದ್ದಾನೆ. ಕಲಚೂರಿಗಳ ಸಾಮಂತನಾಗಿದ್ದ "ರೇವಂತ ರಾಜದೇ"ನೆಂಬವನನ್ನು "ಚಿತ್ರಕರ್ಮ ನಿರ್ಮಾಣತಹ ಚಿತ್ರ ಕರ್ಮೋನ್ನತ" ಎಂದು[೧೬೩] ಕರೆದಿದೆ. ಚಿತ್ರಕರ್ಮವು ಚತುಷ್ಟಿ ಕಲೆಗಳಲ್ಲಿ ಒಂದಾಗಿದ್ದು ಅದನ್ನು ಅರಸು ಕುಮಾರ. ಕುಮಾರಿಯರು ತಮ್ಮ ಅಧ್ಯಯನ ವಿಷಯಗಳಲ್ಲಿ ಕಡ್ಡಾಯವಾಗಿ ಕಲಿಯಬೇಕೆಂದು ಪಂಪ, ವಡ್ಡರಾಧನೆಯ ಕರ್ತೃ ಶಿವಕೋಟಾಚಾರ್ಯ. ನಯಸೇನ. ದೇವರಾಜಾದಿಗಳು[೧೬೪] ಸೂಚಿಸಿದ್ದು ತಿಳಿದುಬರುತ್ತದೆ. ಇತ್ತೀಚಿನ ರಾಜಾ ರವಿವರ್ಮನು ಚಿತ್ರಕಲಾವಿದನಾಗಿದ್ದನು. ಆತನು ರಚಿಸಿದ ಅನೇಕ ಚಿತ್ರಗಳನ್ನು ನಾವು ಇಂದೂ ಸಹ ನೋಡಬಹುದಾಗಿದೆ. ಹೀಗೆ ರಾಜರೂ ಚಿತ್ರಕಲಾವಿದರಾಗಿರುತ್ತಿದ್ದುದು ಕಂಡುಬರುವುದು.

ಆಚಾರ್ಯರು, ಗುರು ಮನೆಯಸ್ವಾಮಿಗಳು, ಸನ್ಯಾಸಿಗಳು, ದಾಸರು ಮುಂತಾದವರೂ ಕಲಾವಿದರಾಗಿರುತ್ತಿದ್ದರಲ್ಲದೇ ಕೆಲವೇಳೆ ಚಿತ್ರಕಲೆಯನ್ನೂ ವಿದ್ಯಾರ್ಥಿಗಳಿಗೆ ಕಲಿಸಿಕೊಡುತ್ತಿದ್ದರು. ಗದುಗಿನ ತ್ರಿಕೂಟೇಶ್ವರ ದೇವಾಲಯದ ಸ್ಥಾನಾಚಾರ್ಯನಾದ ಕ್ರಿಯಾಶಕ್ತಿ ಪಂಡಿತ ದೇವರು ಚಿತ್ರಕಲೆಯ ಉಪನ್ಯಾಸಕರಾಗಿದ್ದರೆಂದು ತಿಳಿದುಬರುವುದು. ಹಾಗೇ ಪ್ರಾಚೀನ ಸಾಲಿಮಠ, ಓಲೆಮಠ, ಬಣ್ಣದ ಮಠಗಳಲ್ಲಿ ಚಿತ್ರಕಲೆಯನ್ನೂ ಕಲಿಸಿಕೊಡುತ್ತಿದ್ದರು[೧೬೫] ಎಂಬ ಸಂಗತಿಗಳು ಗಮನಾರ್ಹ ಅಂಶಗಳಾಗಿವೆ. ದಾಸಪರಂಪರೆಯಲ್ಲಿ ಆಗಿಹೋದ ಗೋಪಾಲದಾಸರು ಅಷ್ಟವರ್ಣಗಳನ್ನು ಬಳಸಿ ಧ್ಯಾನೋಪಾಸನ ವಿರಾಡ್ರೂಪ ಚಿತ್ರವನ್ನು ಬರೆದಿರುವುದು ತಿಳಿಯುತ್ತದೆ. ಅಂತೆಯೇ ಸೊಲ್ಲಾಪುರದಲ್ಲಿರುವ ಶುಭರಾಯರ ಮಠದ ಸಂತರಾದ ಆಧ್ಯಾತ್ಮ ಜೀವಿಗಳಾಗಿದ್ದ ಶುಭರಾಯರು ಶ್ರೇಷ್ಠ ಕಲಾವಿದರಾಗಿದ್ದರಲ್ಲದೇ ಶುಭರಾಯರು ರಚಿಸಿದ ಅನೇಕ ಚಿತ್ರಗಳು ಇನ್ನೂ ಇದ್ದು[೧೬೬] ಅವುಗಳ ಕುರಿತಾಗಿ ವಿಶೇಷವಾಗಿ ಅಧ್ಯಯನವಾಗಬೇಕಾಗಿದೆ. ಅನ್ಯಧರ್ಮೀಯ ಸಂತರ ಬಗ್ಗೆ ಹೇಳಬೇಕೆಂದರೆ ಕವಿ ಹೃದಯದಿಂದ

---

೧೫೮. E. C. Vol. V, ಪುಟ ೮

೧೫೯. ಎಂ. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪುಟ ೪೬೦

೧೬೦. C. Sivaramamurti : Indian Sculpture, Page 3

೧೬೧. ಬಿ. ಷೇಕ್‌ಅಲಿ (ಸಂ) : ಕರ್ನಾಟಕ ಚರಿತ್ರೆ ಸಂಪುಟ ೪, ಪುಟ ೩೨೦

೧೬೨. ಅ. ಲ. ನರಸಿಂಹನ್ : ಕರ್ನಾಟಕ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ಪುಟ ೫೪೭

೧೬೩. ಹೆಚ್. ಆರ್. ರಘುನಾಥಭಟ್ : ಕರ್ನಾಟಕ ಶಾಸನ ಕಲೆ, ಪುಟ ೭೬

೧೬೪. ಅ. ಲ. ನರಸಿಂಹನ್ : ಕರ್ನಾಟಕ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ಪುಟ ೫೪೩

೧೬೫. ಡಾ. ಬಿ. ಕೆ. ಹಿರೇಮಠ : ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ (ಬೆರಳಚ್ಚು ಪ್ರತಿ), ಪುಟ ೩೦೧

೧೬೬. ಅ. ಲ. ನರಸಿಂಹನ್ (ಸಂ) : ಸಂತ ಕಲಾವಿದ ಶುಭರಾಯರು. ಪುಟ ೧-೨

ಆಧ್ಯಾತ್ಮನೆಲೆಯಲ್ಲಿ ಚಿಂತಿಸುತ್ತಿದ್ದ ಜಾರ್ಜ ಕೀಟ್, ವಿಲಿಯಂ ಬ್ಲೇಕ್, ಖಲೀಲ ಗಿಬ್ರಾನ್ ಚಿತ್ರಕಲಾವಿದರಾಗಿದ್ದರು. ಮಂಗಳೂರಿನ ಸೇಂಟ್ ಅಲಾಯಿಸೆಸ್ ಚರ್ಚಿನಲ್ಲಿ ನೂರಾರು ಭಿತ್ತಿಚಿತ್ರಗಳನ್ನು ರಚಿಸಿದ "ಆ್ಯಂಟೋನಿಮೋಶ್ಚಿನಿ" ಎಂಬಾತ ಕ್ರೈಸ್ತ ಧರ್ಮ ಪ್ರಚಾರಕನಾದ ಸಂತನಾಗಿದ್ದ[೧೬೭] ಎಂಬಂತಹ ವಿವರಗಳು ಸಿಗುತ್ತವೆ.

ಕೆಲವು ಕವಿಗಳೂ ಚಿತ್ರಕಾರರಾಗಿದ್ದುದು ಕಂಡುಬರುತ್ತದೆ. ಪಂಪ, ಪೊನ್ನ, ನಾಗಚಂದ್ರ ಮುಂತಾದವರಲ್ಲದೇ ಶರಣರಾದ ಅಂಬಿಗರ ಚೌಡಯ್ಯ, ಮಧುವಯ್ಯ, ಮೋಳಿಗಯ್ಯ ಮೊದಲಾದವರು ತಮ್ಮ ಕಾವ್ಯ ವಚನಗಳಲ್ಲಿ ಚಿತ್ರಕಲೆಯ ಬಗೆಗೆ ಕೊಡಮಾಡಿದ ಅತ್ಯಂತ ಸೂಕ್ಷ್ಮವಾದ ವಿವರಗಳನ್ನು ನೋಡಿದರೆ ಇವರು ಚಿತ್ರಕಲೆಯನ್ನು ಕಲಿತವರಾಗಿರಬೇಕೆಂದು ಡಾ. ಬಿ. ಕೆ. ಹಿರೇಮಠ ರವರು ತರ್ಕಿಸುತ್ತಾರೆ. ಅದು ಸರಿಯಾದುದೆಂದೇ ಹೇಳಬೇಕು. ಹೀಗೆ ಸನ್ಯಾಸಿಗಳು, ಧರ್ಮಪ್ರಸಾರಕರು ಚಿತ್ರಕಲೆಯನ್ನು ಅಭ್ಯಸಿಸುವುದು [೧೬೮] ಬೌದ್ಧ ಧರ್ಮೀಯರ ಅನುಕರಣೆಯಾಗಿರಬೇಕು.

**ಕಲಾವಿದರ ಚಿತ್ರಕಲಾ ಶಿಕ್ಷಣ :** ಅರಸುಮಕ್ಕಳಿಗೆ ಗುರುಕುಲದಲ್ಲಿ ಕಲಿಸುವ ವಿದ್ಯೆಗಳಲ್ಲಿ ಚಿತ್ರಕಲೆಯೂ ಒಂದು ಎಂದು ಪಂಪನು ಹೇಳುತ್ತಾನೆ.[೧೬೯] ಕಥಾಸರಿತ್ಸಾಗರದಲ್ಲಿ ನರವಾಹನದತ್ತ, ಅವಂತಿಸುಂದರಿ ಕಥೆಯಲ್ಲಿ ನಾಯಕಿ, ಬಾಣನ ಕಾದಂಬರಿಯಲ್ಲಿ ಚಂದ್ರಾಪೀಡ, ತಿಲಕಮಂಜರಿಯಲ್ಲಿ ಧನಪಾಲ[೧೭೦] ಇವರು ಚಿತ್ರಕಲೆಯ ಶಿಕ್ಷಣ ಪಡೆದವರಾಗಿದ್ದರು. ತಮಿಳಿನ ಮಣಿಮೇಖಲೈ[೧೭೧] ಕೃತಿಯಲ್ಲಿಬರುವ ಮಾಧವಿ ರೇಖಾಚಿತ್ರ ಮತ್ತು ವರ್ಣಚಿತ್ರರಚಿಸುವುದನ್ನು "ಓವಿಯಥನ್ನೋಲ್" ಎಂಬವನಿಂದ ಕಲಿತಳು. ದಾಮೋದರ ಗುಪ್ತನ ಕುಟ್ಟನಿಮೀತ ಕೃತಿಯ[೧೭೨] ನಾಯಕಿ ದೇವದಾಸಿಯಾಗಿದ್ದ ಮಾಲತಿಯು ರೇಖಾ ಚಿತ್ರ ಮತ್ತು ವರ್ಣ ಚಿತ್ರ ರಚನೆಯನ್ನು ಕಲಿತವಳಾಗಿದ್ದಳು. ಚಾವುಂಡರಾಯ ಪುರಾಣದಲ್ಲಿ[೧೭೩] ಶ್ರೀಕಾಂತೆಯನ್ನು ಅವಳ ತಂದೆ ಚಿತ್ರಕಲೆ ಕಲಿಯಲು ಸುಲೋಚನೆಯ ಬಳಿಗೆ ಕಳಿಸುತ್ತಾನೆ. ಕೌಟಿಲ್ಯನು[೧೭೪] ಗಣಿಕೆಯರು, ದಾಸಿಜನರು, ಅಭಿನೇತ್ರಿಯರಿಗೆ ಚಿತ್ರಕಲೆ ಶಿಕ್ಷಣ ಪಡೆಯಲು ರಾಜನು ತನ್ನ ಬೊಕ್ಕಸದಿಂದ ಧನಸಹಾಯ ಮಾಡಿಕೊಡಬೇಕೆಂದು ಹೇಳುತ್ತಾನೆ. ಹೊಯ್ಸಳರ ಮಂತ್ರಿ ಪೆರುಮಾಳೆ ದಂಡನಾಯಕನು[೧೭೫] ಚಿತ್ರದುರ್ಗ, ನರಸಿಂಹಪುರ, ಮತ್ತು ತಲಕಾಡಿನಲ್ಲಿ ಚಿತ್ರಕಲೆ ಕಲಿಯಲು ಕಲಾಶಾಲೆಯನ್ನು ನಿರ್ಮಿಸಿದ್ದ ಎಂಬ ವಿವರಗಳು ತಿಳಿದುಬರುತ್ತವೆ.

"ಚಿತ್ತಾರಿ ವಿದ್ಯೆ" ಎಂದು ವಚನಗಳಲ್ಲಿ ಬರುವ ಮಾತು[೧೭೬] ಚಿತ್ರಕಲೆಯನ್ನು ಹೇಳಿಕೊಡುವ ವಿದ್ಯೆಯಾಗಿದೆ. ತಿಲಕಮಂಜರಿಯಲ್ಲಿ[೧೭೭] ಚಿತ್ರಕಲೆಯನ್ನು ಕಲಿಸಿಕೊಡಲು ವಿದ್ಯೋಪಾಧ್ಯಾಯರಿದ್ದುದನ್ನು ಹೇಳಿದೆ. ಕಾಳಿದಾಸನ

---

೧೬೭. ಅ. ಲ. ನರಸಿಂಹನ್ : ಕರ್ನಾಟಕ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು (ಬೆಂಗಳೂರು ವಿವಿಗೆ ಸಲ್ಲಿಸಿದ ಬೆರಳಚ್ಚು ಮಹಾಪ್ರಬಂಧ), ಪುಟ ೫೪೪

೧೬೮. ಡಾ. ಬಿ. ಕೆ. ಹಿರೇಮಠ : ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ, (ಬೆಳಚ್ಚು ಪ್ರತಿ) ಪುಟ ೩೦೪

೧೬೯. ಎನ್. ಅನಂತರಂಗಾಚಾರ್ (ಸಂ) : ವಿಕ್ರಮಾರ್ಜುನ ವಿಜಯ, ಅಧ್ಯಾಯ ೨, ಪುಟ ೪೩

೧೭೦. C. Sivaramamurti : Painter in Ancient India, Page 11

೧೭೧. Leela Ganapathy : 'The Artist and his partron through the ages', Page 18

೧೭೨. N. N. Bhattacharyya : History of Indian Erotic Literature, Page 98

೧೭೩. ಕಮಲಾ ಹಂಪನಾ, ಆರ್. ವಿ. ಕುಲಕರ್ಣಿ (ಸಂ) : ಚಾವುಂಡರಾಯ ಪುರಾಣ, ಪುಟ ೬೮

೧೭೪. ಸಚ್ಚಿದಾನಂದ ಶಂಕರಭಾತೀ ಸ್ವಾಮಿಗಳು (ಸಂ) : ಅರ್ಥಶಾಸ್ತ್ರ, ಪ್ರಕರಣ ೪೪, ಪುಟ ೧೭೫

೧೭೫. ಹುಲ್ಲೂರು ಶ್ರೀನಿವಾಸ ಜೋಯಿಸ್ : ಐತಿಹಾಸಿಕ ಲೇಖನಗಳು, ಪುಟ ೪೪೬

೧೭೬. ಕನ್ನಡ ನಿಘಂಟು : (ಕ. ಸಾ. ಪ.), ಪುಟ ೨೮೩೭

೧೭೭. C. Sivaramamurti : Painter in Ancient India, Page 10

"ಮಾಳವಿಕಾಗ್ನಿಮಿತ್ರ" ಕೃತಿಯಲ್ಲಿ[೧೭೮] ಚಿತ್ರಮೊದಲಾದ ಲಲಿತಕಲೆಗಳನ್ನು ಕಲಿಯಲು ಅರ್ಹತೆ ಇರಬೇಕಾದುದು ಮುಖ್ಯ ಎನ್ನಲಾಗಿದೆ. ಮೇಲ್ವರ್ಗದ ಹಿಂದೂ ಸ್ತ್ರೀಯರು ತಮ್ಮ ಅಧಿಕಾರ ಅಂತಸ್ತುಗಳನ್ನು ಅವಲಂಬಿಸಿ ಗುರುಮುಖೇನ ಮನೆಯಲ್ಲಿ ಅಥವಾ ಗುರುಕುಲದಲ್ಲಿ ಚಿತ್ರಕಲಾ ಶಿಕ್ಷಣ ಪಡೆಯುತ್ತಿದ್ದರು. ಹಾಗೇ ಗಣ್ಯ ಮುಸ್ಲಿಂ ಸ್ತ್ರೀಯರು ತಮ್ಮ ಅರಮನೆ ಮತ್ತು ನಿವಾಸಗಳಿಗೆ ವಯಸ್ಸಾದ ಚಿತ್ರಕಲಾವಿದ ಗುರುಗಳನ್ನು ಆಹ್ವಾನಿಸಿ ಅವನಿಂದ[೧೭೯] ಚಿತ್ರಕಲೆ ಕಲಿಯುತ್ತಿದ್ದರು. ವಿಜಯನಗರ ಕಾಲದಲ್ಲಿ ಇದ್ದ ಕನಕದಾಸರು ತಮ್ಮ ಕೃತಿ ಮೋಹನತಂಗಿಣಿಯಲ್ಲಿ[೧೮೦] ದ್ವಾರಕಾಪುರದ ವರ್ಣನೆ ಮಾಡುವಾಗ ಅಲ್ಲಿನ ಉಪಾಧ್ಯಾಯರು ವರ್ಣಚಿತ್ರಗಳಿಂದ ಕೂಡಿದ ಪುಸ್ತಕಗಳನ್ನು ಇರಿಸಿಕೊಂಡು ಪಾಠ ಮಾಡುತ್ತಾರೆ ಎಂದು ಹೇಳುತ್ತಾರೆ. ಇದು ಪರೋಕ್ಷವಾಗಿ ವಿಜಯನಗರ ರಾಜಧಾನಿಯ ವರ್ಣನೆಯೇ ಎನ್ನಬಹುದು. ಇಂತಹ ವಿವರಣೆಗಳಿಂದ ಪ್ರಾಚೀನ ಚಿತ್ರಕಲಾವಿದರು ಚಿತ್ರಕಲೆ ಶಿಕ್ಷಣ ಪಡೆಯುತ್ತಿದ್ದ ಸ್ವರೂಪವನ್ನು ತಿಳಿದು ಕೊಳ್ಳಬಹುದು.

**ಕಲಾವಿದರಿಗೆ ಮನ್ನಣೆ :** ರಾಜ ಮಹಾರಾಜರು ಕಲಾವಿರಿಗೆ ವಿಶೇಷ ಪ್ರೋತ್ಸಾಹ ಸ್ಥಾನಮಾನವನ್ನೂ ಕೊಡುತ್ತಿದ್ದರು. ವಿಜಯನಗರ ದೊರೆಗಳು ಕಲಾವಿದರಿಗೆ ವಿಶೇಷ ಮರ್ಯಾದೆ. ಮನ್ನಣೆ ಕೊಡುತ್ತಿದ್ದುದು ತಿಳಿದುಬರುತ್ತದೆ. ವಿಜಯನಗರ ಕಾಲದಲ್ಲಿ 'ಚಿತ್ರಗೆಲಸಿ'ಗರಿಗೆ ಪ್ರತ್ಯೇಕ ಕೇರಿಗಳಿದ್ದವು.[೧೮೧] ರಾಜನ ಆಸ್ಥಾನದಲ್ಲಿ ಇತರ ವಿದ್ವಾಂಸರ ಜೊತೆಗೆ ಚಿತ್ರಗಾರರಿಗೂ ಸ್ಥಳ ಮೀಸಲಾಗಿರುತ್ತಿತ್ತು.[೧೮೨] ನಗರದ ಜನವರ್ಗಗಳಲ್ಲಿ ಶಿಲ್ಪಾಯತನ ಎಂಬ ಶಿಲ್ಪಕಾರರ ಶ್ರೇಣಿ ಇದ್ದಂತೆ ಚಿತ್ರಗಾರರ ವರ್ಗವೂ ಇತ್ತು. ಜಹಾಂಗೀರನು (೧೬೦೭-೨೭) ತನ್ನ ಸಹೋದರನಿಗೆ ತಾನು ಬಹುಮಾನ ಕೊಡುತ್ತಿರುವ ಚಿತ್ರಗಳನ್ನು ಬರೆಯಲು ತಿಳಿಸಿ ಹಾಗೆ ರಚಿಸಿದ್ದಕ್ಕೆ ಅವನಿಗೆ ಆನೆಯನ್ನೇ ಉಡುಗೊರೆಯಾಗಿ ನೀಡಿದ. ಮೈಸೂರು ಅರಸರು ಶೃಂಗೇರಿಗೆ ಪಾದಪೂಜೆಮಾಡಲು ಹೋದಾಗ ಅವರ ಜೊತೆಗೆ ಚಿತ್ರಗಾರರೂ ಇದ್ದರು[೧೮೩] ಹೀಗೆ ರಾಜಮಹಾರಾಜರು ಚಿತ್ರಕಾರರಿಗೆ ವಿಶೇಷ ಮನ್ನಣೆಯನ್ನು ಕೊಟ್ಟು ಚಿತ್ರಕಲೆಯನ್ನು ಪೋಷಿಸಿದ್ದಾರೆ ಎಂಬ ಸಂಗತಿಗಳು ಗೊತ್ತಾಗುತ್ತವೆ.

**ಕಲಾವಿದರ ಸಂಭಾವನೆ, ಬಿರುದು :** ಚಿತ್ರಕಾರರಿಗೆ ಚಿತ್ರ ಬರೆಸಿದ ಪೋಷಕರು ಸಂಭಾವನೆ, ಗೌರವ ಬಿರುದುಗಳನ್ನು ನೀಡಿ ಆಮೂಲಕವೂ ಕಲೆಯನ್ನು ಪೋಷಿಸುತ್ತಿದ್ದರು. ಶಾತವಾಹನರ ನಾಸಿಕದ ಗುಹಾಲಯುವನ್ನು ಚಿತ್ರಗಳಿಂದ ಅಲಂಕರಿಸಿದ್ದಕ್ಕೆ ಚಿತ್ರಕಾರನಿಗೆ ಗ್ರಾಮವೊಂದನ್ನು ದತ್ತಿ ಬಿಡಲಾಯಿತು.[೧೮೪] ಕ್ರಿ. ಶ. ೧೦೭೧ ರಲ್ಲಿ ಕೋಲಾರಮ್ಮನ ದೇವಾಲಯದಲ್ಲಿ ಧ್ವಜದಲ್ಲಿ ಹಾಗೂ ದೇವರಿಗೆ ಕಳೆರಚಿಸುವ ಕಲಾವಿದರಿಗೆ ತಲಾ ೧/೩ ಕಾಸುಕೊಡಬೇಕೆಂದು [೧೮೫]

---

೧೭೮. ಕೆ. ಕೃಷ್ಣಮೂರ್ತಿ, ಡಿ. ಎನ್. ಶಾನಭಾಗ, (ಅನು) : ಮಾಳವಿಕಾಗ್ನಿಮಿತ್ರ, ಅಂಕ ೨ ಪುಟ ೧೩೨

೧೭೯. ಜ್ಯೋತ್ಸ್ನಾ ಕಾಮತ್ : ಕರ್ನಾಟಕದ ಶಿಕ್ಷಣ ಪರಂಪರೆ, ಪುಟ ೯೫

೧೮೦. ಎಸ್. ಎಸ್. ಕೋತಿನ (ಅನು) : ಮೋಹನತರಂಗಿಣಿ, ಪದ್ಯ ೪೧, ಪುಟ ೫೨

೧೮೧. ಅ. ಲ. ನರಸಿಂಹನ್ : ಕರ್ನಾಟಕ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, (ಬೆಂಗಳೂರು ವಿವಿಗೆ ಸಲ್ಲಿಸಿದ ಬೆರಳಚ್ಚು ಮಹಾಪ್ರಬಂಧ), ಪುಟ ೫೪೩

೧೮೨. ಕೆ. ಶ್ರೀಕಂಠಯ್ಯ ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರಣ, ಪುಟ ೮೨

೧೮೩. ಅ. ಲ. ನರಸಿಂಹನ್ : ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, (ಬೆಂಗಳೂರು ವಿವಿಗೆ ಸಲ್ಲಿಸಿದ ಬೆರಳಚ್ಚು ಮಹಾಪ್ರಬಂಧ), ಪುಟ ೫೪೮

೧೮೪. ಹೆಚ್. ಆರ್. ರಘುನಾಥಭಟ್ : ಕರ್ನಾಟಕದ ಶಾಸನ ಕಲೆ, ಪುಟ ೬

೧೮೫. ಅ. ಲ. ನರಸಿಂಹನ್ : ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, (ಬೆಂಗಳೂರು ವಿವಿಗೆ ಸಲ್ಲಿಸಿದ ಬೆರಳಚ್ಚು ಮಹಾಪ್ರಬಂಧ), ಪುಟ ೫೪೭

ಶಾಸನ ಬರೆಸಲಾಯಿತು. ಜಹಂಗೀರನು (೧೬೧೭) ಚಿತ್ರಕಲಾವಿದನೊಬ್ಬನಿಗೆ ಹತ್ತು ಪೌಂಡ ಕೊಟ್ಟು ಗೌರವಿಸಿದನು.[೧೮೬] "ಮಹಮದ್ ಆದಿಲ್‌ಶಹ (೧೬೧೫) ತನ್ನ ಚಿತ್ರ ರಚಿಸಿಕೊಟ್ಟ ಮಹಮ್‌ದಖಾನ ಎಂಬ ಕಲಾವಿದನಿಗೆ ಪ್ರತಿದಿನ ಅರ್ಧ ಪಣ ನೀಡುವಂತೆ ಚಿತ್ರದ ಹಿಂಬದಿಯಲ್ಲಿ ಶಾಸನ ಹಾಕಿಸಿದ" ಎಂದು ಹೇಳಲಾಗಿದೆ. ಕೆರೆಗೋಡಿ ರಂಗಾಪುರದಲ್ಲಿನ ದೇವಾಲಯದಲ್ಲಿ ಭಿತ್ತಿ ಚಿತ್ರ ರಚಿಸಿದ್ದಕ್ಕೆ ಕಲಾವಿದ ಸುಬ್ಬಣ್ಣನಿಗೆ ೬೦ ರೂಪಾಯಿ ಮಜೂರಿ ಕೊಡಲಾಯಿತು.[೧೮೭] ಈ ಶತಮಾನದ ಆರಂಭದಲ್ಲಿ ಮೈಸೂರು ಅರಸರು ರಾಜಾ ರವಿವರ್ಮನಿಗೆ ಚಿತ್ರವೊಂದಕ್ಕೆ ೫೦೦೦ (ಐದುಸಾವಿರ) ರೂ.ಗಳನ್ನು ನೀಡುತ್ತಿದ್ದರು[೧೮೮] ಎಂದು ತಿಳಿದುಬರುತ್ತದೆ.

ಹೀಗೆ ಭಿತ್ತಿ ಚಿತ್ರಕಲೆಯ ಪೋಷಕರು ಈ ಪರಂಪರೆಯನ್ನು ಜೀವಂತವಾಗಿರಿಸುವಲ್ಲಿ ಭಿತ್ತಿ ಚಿತ್ರಕಲಾವಿದರನ್ನು ಪ್ರೋತ್ಸಾಹಿಸಿ ಅವರಿಗೆ ಗೌರವ. ಬಿರುದು. ಸಂಭಾವನೆಗಳನ್ನು ಕೊಟ್ಟು ಪೋಷಿಸಿಕೊಂಡು ಬಂದಬಗೆಗ[೧೮೯] ಮೇಲಿನ ವಿವರಣೆಯಿಂದ ಸ್ವಲ್ಪಮಟ್ಟಿಗೆ ತಿಳಿದುಬಂದರೂ ಕಲಾವಿದರ ಕುರಿತಾಗಿ ಹೆಚ್ಚಿನ ವಿವರಗಳು ಲಭ್ಯವಾಗಿಲ್ಲವೆಂದೇ ಹೇಳಬೇಕಾಗುತ್ತದೆ.

---

೧೮೬. ಎಚ್. ಎಲ್. ನಾಗೇಗೌಡ : ಪ್ರವಾಸಿಕಂಡ ಇಂಡಿಯಾ (ಸಂಪುಟ ೩) ಪುಟ ೨೮೨

೧೮೭. ಜ್ಯೋತ್ಸ್ನಾ ಕಾಮತ್ : ಕರ್ನಾಟಕದ ಶಿಕ್ಷಣ ಪರಂಪರೆ, ಪುಟ ೯೩

೧೮೮. ಅ. ಲ. ನರಸಿಂಹನ್ : ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು. (ಬೆಂಗಳೂರು ವಿವಿಗೆ ಸಲ್ಲಿಸಿದ ಬೆರಳಚ್ಚು ಮಹಾಪ್ರಬಂಧ), ಪುಟ ೫೪೪

೧೮೯. ಕರೀಗೌಡ ಬೀಚನಹಳ್ಳಿ (ಸಂ) : ಕರಕುಶಲ ಕಲೆಗಳು (ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ೬), ಪುಟ ೨೭

**ಭಿತ್ತಿ ಚಿತ್ರಕಲೆಯ ಆಪತ್ತುಗಳು :** ಕಲಾಕೃತಿಯಲ್ಲಿನ ಕಲೆ ಶಾಶ್ವತ. ಆದರೆ ಕಲಾಕೃತಿಯನ್ನು ರಚಿಸಲು ಬಳಸುವ ಯಾವುದೇ ಪದಾರ್ಥವೂ ಶಾಶ್ವತವಲ್ಲ. ಕಲ್ಲು ಲೋಹಗಳಂತಹ ಗಟ್ಟಿ ಪದಾರ್ಥಗಳಿಂದಾದ ಶಿಲ್ಪಗಳೇ ಕಾಲಕ್ರಮೇಣ ಸವೆದು. ಬಿರಿದು. ಶಿಥಿಲಗೊಳ್ಳುವಾಗ ಮಣ್ಣು. ಮರ. ಸುಣ್ಣ, ಹುಲ್ಲು, ಹೊಟ್ಟುಗಳಂತಹ ಮೆದು ಪದಾರ್ಥಗಳಿಂದ ಹಿನ್ನೆಲೆ ನಿರ್ಮಿಸಿ ರಚಿಸಿದ ಭಿತ್ತಿ ಚಿತ್ರಗಳು ಅಚ್ಚಳಿಯದೇ ಉಳಿಯಬಲ್ಲವೇ ? ಅನೇಕ ಆಪತ್ತುಗಳಿಗೀಡಾಗಿ ಭಿತ್ತಿ ಚಿತ್ರಗಳು ನಾಶವಾಗುತ್ತವೆ. ಕಾಲಾಂತರದಲ್ಲಿ ಸ್ವಾಭಾವಿಕವಾದ ಸವಕಳಿಯಿಂದ ನಾಶವಾಗುವುದಲ್ಲದೇ ಪ್ರಕೃತಿವಿಕೋಪ, ಮನುಷ್ಯ. ಪ್ರಾಣಿಪಕ್ಷಿಗಳು. ಹಾಗೂ ಕ್ರಿಮಿಕೀಟಗಳಿಂದಲೂ ಭಿತ್ತಿ ಚಿತ್ರಗಳಿಗೆ ಹಾನಿಸಂಭವಿಸುತ್ತದೆ. ಹೀಗೆ ವಿವಿಧ ಕಾರಣಗಳಿಂದ ಭಿತ್ತಿಚಿತ್ರಗಳಿಗೆ ಸಂಭವಿಸುವ ಆಪತ್ತುಗಳನ್ನು ಇಲ್ಲಿ ಅಧ್ಯಯನದ ಅನುಕೂಲ ದೃಷ್ಟಿಯಿಂದ

೧. ಸ್ವಾಭಾವಿಕ ಆಪತ್ತು
೨. ಪ್ರಾಕೃತಿಕ ಆಪತ್ತು
೩. ವ್ಯಕ್ತಿಗತ ಆಪತ್ತು
೪. ಪ್ರಾಣಿಗಳಿಂದಾಗುವ ಆಪತ್ತು
೫. ಪಕ್ಷಿಗಳಿಂದಾಗುವ ಆಪತ್ತು
೬. ಕ್ರಿಮಿಕೀಟಗಳಿಂದಾಗುವ ಆಪತ್ತು

ಎಂಬುದಾಗಿ ಆರು ವಿಭಾಗಗಳಲ್ಲಿ ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಗಿದೆ. ಇವುಗಳನ್ನು ಒಂದೊಂದಾಗಿ ಈ ಕೆಳಗಿನಂತೆ ವಿವರಿಸಬಹುದು.

**೧. ಸ್ವಾಭಾವಿಕ ಆಪತ್ತು :** ಕಾಲಕ್ರಮೇಣ ಭಿತ್ತಿಚಿತ್ರಗಳಿಗೆ ಉಪಯೋಗಿಸಲಾದ ವಸ್ತುಗಳ ಸತ್ವಕಡಿಮೆಯಾಗಿ ಭಿತ್ತಿಚಿತ್ರಗಳು ಹಾಳಾಗುವುದನ್ನು ಇಲ್ಲಿ ಸ್ವಾಭಾವಿಕ ಆಪತ್ತು ಎಂದು ಪರಿಗಣಿಸಲಾಗಿದೆ. ಭಿತ್ತಿಚಿತ್ರಗಳಿಗೆ ಉಪಯೋಗಿಸಿದ ಬಣ್ಣಗಳು ಕಾಲಾಂತರದಲ್ಲಿ ಮಸುಕಾಗುವುದು. ಉದುರಿಹೋಗುವುದು ಸಹಜಕ್ರಿಯೆ. ಹೀಗೆ ಬಣ್ಣ ಮಸುಕಾಗಿರುವುದು, ಉದುರಿಹೋಗುವುದು ಹೆಚ್ಚಿನ ಎಲ್ಲ ಪ್ರಾಚೀನ ಭಿತ್ತಿಚಿತ್ರಗಳಲ್ಲಿಯೂ ಕಾಣಬಹುದು. ಗುಳೇದಗುಡ್ಡದ ಹೊಸಮನಿ ಗೌಡರ ಮನೆಯ ಭಿತ್ತಿಚಿತ್ರಗಳಲ್ಲಿ ವರ್ಣವು ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಉದುರಿಹೋಗಿದ್ದರೆ, ನಿಪ್ಪಾಣಿಯ ವಾಡೆಯಲ್ಲಿನ ಹೊರಭಾವಡಿಯಲ್ಲಿನ ಚಿತ್ರಗಳ ಬಣ್ಣವು ಕಾಂತಿಹೀನವಾಗಿದೆ. ಹಾಗೇ ನರಗುಂದದ ವೆಂಕಟೇಶ್ವರ ದೇವಾಲಯದಲ್ಲಿನ ಭಿತ್ತಿಚಿತ್ರಗಳ ಬಣ್ಣವು ಊದುರಿಹೋಗಿದ್ದರೆ, ಕನಕಗಿರಿಯ ಕನಕಾಚಲಪತಿ ದೇವಾಲಯದ ಭಿತ್ತಿಚಿತ್ರಗಳ ಬಣ್ಣದ ಕಾಂತಿ ಮಸುಕಾಗಿದೆ. ಭಿತ್ತಿ ರಚನೆಯಲ್ಲಿ ಉಪಯೋಗಿಸಲಾದ ವಸ್ತುಗಳ ಸತ್ವ ಕಡಿಮೆಯಾಗಿ ಭಿತ್ತಿ ಹಾಳಾಗುವುದು ಸಹಿತ ಸ್ವಾಭಾವಿಕವಾದ ಕ್ರಿಯೆ ಎನ್ನಬಹುದು.



ಭಿತ್ತಿ ಚಿತ್ರಕಲೆಯ ಆಪತ್ತುಗಳು
1) ಸ್ವಾಭಾವಿಕ ಆಪತ್ತು
2) ಪ್ರಾಕೃತಿಕ ಆಪತ್ತು
I) ನೀರು
II) ಬೆಂಕಿ
III) ಗಾಳಿ
IV) ಬಿಸಿಲು
V) ಭೂಕಂಪ
VI) ಜ್ವಾಲಾಮುಖಿ
3) ವ್ಯಕ್ತಿಗತ ಆಪತ್ತು
4) ಪ್ರಾಣಿಗಳಿಂದಾಗುವ ಆಪತ್ತು
I) ಕಾಡುಪ್ರಾಣಿಗಳಿಂದಾಗುವ ಆಪತ್ತು
II) ಸಾಕುಪ್ರಾಣಿಗಳಿಂದಾಗುವ ಆಪತ್ತು
5) ಪಕ್ಷಿಗಳಿಂದಾಗುವ ಆಪತ್ತು
I) ಬಾವಲಿಗಳು
II) ಸ್ವಾಲೋಜಾತಿಯ ಹಕ್ಕಿಗಳು
III) ಗುಬ್ಬಿಗಳು
6) ಕ್ರಿಮಿಕೀಟಗಳಿಂದಾಗುವ ಆಪತ್ತು
I) ಜೇನುಹುಳು
II) ಗೆದ್ದಲು
III) ಬೆಳ್ಳಿ ಮೀನು (ಜಿರಳೆ)
IV) ಜೇಡ
V) ಕಣಜದಹುಳು
VI) ಸೂಕ್ಷ್ಮಾಣುಜೀವಿ (ಶಿಲೀಂಧ್ರಗಳು)
I) ರಾಜಕೀಯ ಆಪತ್ತು
II) ಧಾರ್ಮಿಕ ಆಪತ್ತು
1) ಧರ್ಮಾಭಿಮಾನದಿಂದಾಗುವ ಆಪತ್ತು
2) ಪೂಜಾ ವಿಧಾನಗಳಿಂದಾಗುವ ಆಪತ್ತು
III) ಅಡಿಗೆ ಮಾಡುವುದರಿಂದಾಗುವ ಆಪತ್ತು
IV) ಕಾರ್ಖಾನೆಗಳಿಂದಾಗುವ ಆಪತ್ತು
V) ವಿದ್ಯುದ್ ದೀಪದಿಂದಾಗುವ ಆಪತ್ತು
VI) ಕಟ್ಟಡ ನವೀಕರಣದಿಂದಾಗು ಆಪತ್ತು
VI) ಮೂರ್ಖಹಸ್ತ (ಕಿಡಿಗೇಡಿತನದಿಂದಾಗುವ ಆಪತ್ತು)
1) ಚಿತ್ರಗಳನ್ನು ವಿರೂಪಗೊಳಿಸುವುದು
2) ಬೆಳ್ಳಿ . ಬಂಗಾರ ಲೇಪನ ಕಿತ್ತುಕೊಳ್ಳುವುದು
3) ಸಿನೇಮಾ ಚಿತ್ರೀಕರಣದಿಂದಾಗುವ ಆಪತ್ತು

ಮಣ್ಣಿನ ಭಿತ್ತಿನಿರ್ಮಿಸಿ ಚಿತ್ರರಚನೆಮಾಡಿದಾಗ ಇವುಗಳು ಬೇಗನೇ ಹಾಳಾಗುತ್ತವೆ. ಮಣ್ಣಿನ ಭಿತ್ತಿಯು ಬೇಗನೇ ತನ್ನ ಸತ್ವ ಕಳೆದುಕೊಳ್ಳುವುದರಿಂದ ಉಳಿದ ಭಿತ್ತಿಚಿತ್ರಗಳಿಗಿಂತ ಇದು ಬೇಗನೇ ನಾಶವಾಗುತ್ತದೆ. ಹಾಗೆಯೇ ಲೋಹಫಲಕದ ಮೇಲೆ ಚಿತ್ರಿಸಿದಾಗಲೂ ಬೇಗನೆ ಹಾಳಾಗುವ ಸಾಧ್ಯತೆ ಇದೆ. ಅದರಲ್ಲೂ ಕಬ್ಬಿಣ ಫಲಕದ ಮೇಲೆ ಚಿತ್ರಿಸಿದಾಗ ತುಕ್ಕು ಹಿಡಿದು ಇನ್ನೂ ಬೇಗನೇ ನಾಶವಾಗುತ್ತವೆ. ಭಿತ್ತಿಯ ಸತ್ವ ಕಡಿಮೆಯಾಗಿ ಭಿತ್ತಿ ಉದುರಿಬಿದ್ದು ಚಿತ್ರಹಾಳಾದ ಅನೇಕ ಉದಾಹರಣೆಗಳು ಕಂಡುಬರುತ್ತವೆ. ನಿಪ್ಪಾಣಿಯ ವಾಡೆಯಲ್ಲಿ, ಗುಳೇದಗುಡ್ಡದ ಹೊಸಮನಿ ಗೌಡರ ಮನೆ. ಹಂಪಿಯ ವಿರೂಪಾಕ್ಷ ದೇವಾಲಯ. ನರಗುಂದದ ಬಾಬಾಸಾಹೇಬ ಅರಮನೆ, ಗೋಕರ್ಣದ ಪರ್ತಗಾಳಿ ಮಠ. ಆನೆಗುಂದಿಯ ಹುಚ್ಚಪ್ಪಯ್ಯನ ಮಠ ಹೀಗೆ ಇನ್ನೂ ಅನೇಕ ಸ್ಥಳಗಳಲ್ಲಿ ಭಿತ್ತಿ ಕಳಗುದುರಿ ಬಿದ್ದು ಚಿತ್ರಗಳು ನಾಶವಾಗಿವೆ. ಅಮ್ಮಿನಭಾವಿಯ ಪಂಚಗೃಹ ಹಿರೇಮಠದಲ್ಲಿ ಗೋಡೆಗೆ ಲೇಪಿಸಿದ ಮಣ್ಣಿನ ಭಿತ್ತಿಯಮೇಲೆ, ಮರದ ಫಲಕದ ಮೇಲೆ ಮತ್ತು ಕಬ್ಬಿಣ ಫಲಕ ಹೀಗೆ ಮೂರೂ ಮಾಧ್ಯಮದ ಮೇಲೆ ಚಿತ್ರಗಳಿದ್ದು, ಅವುಗಳಲ್ಲಿ ಕಬ್ಬಿಣ ಫಲಕದ ಮೇಲೆ ರಚನೆಯಾದ ಚಿತ್ರಗಳು ತುಕ್ಕು ಹಿಡಿದು ಸಂಪೂರ್ಣನಾಶವಾಗಿವೆ. ಇದರಿಂದ ಕಬ್ಬಿಣ ಫಲಕದ ಮೇಲೆ ರಚನೆಯಾದ ಚಿತ್ರಗಳು ಉಳಿದ ಮಾಧ್ಯಮದ ಚಿತ್ರಗಳಿಗಿಂತ ಬೇಗ ನಾಶವಾಗುತ್ತವೆ. ಆಗಿವೆ ಕೂಡ. ಹೀಗೆ ಕಾಲಕ್ರಮೇಣ ಸಹಜವಾಗಿ ನಾಶಹೊಂದುವುದನ್ನು ಸ್ವಾಭಾವಿಕ ಆಪತ್ತುಗಳೆಂದು ಹೇಳಬಹುದಾಗಿದೆ.

**೨. ಪ್ರಾಕೃತಿಕ ಆಪತ್ತು :** ಪ್ರಕೃತಿಯಲ್ಲಿನ ನೀರು, ಬೆಂಕಿ, ಗಾಳಿ, ಬಿಸಿಲುಗಳಿಂದ ಭಿತ್ತಿಚಿತ್ರಗಳಿಗಾಗುವ ಹಾನಿಗಳನ್ನು ಮತ್ತು ಭೂಕಂಪ. ಪ್ರವಾಹಗಳಂತ ವಿಕೋಪಗಳನ್ನು ಪ್ರಾಕೃತಿಕ ಆಪತ್ತುಗಳೆಂದು ಇಲ್ಲಿ ಪರಿಗಣಿಸಲಾಗಿದೆ.

**I. ನೀರು :** ಭಿತ್ತಿ ಚಿತ್ರಗಳಿಗೊದಗುವ ಹಲವಾರು ಆಪತ್ತುಗಳಲ್ಲಿ ನೀರಿನಿಂದಲೇ ಅತ್ಯಂತ ಹೆಚ್ಚಿನ ಹಾನಿ ಸಂಭವಿಸುತ್ತಲಿದೆ. ಮೇಲ್ಛಾವಣಿಯಿಂದ ನೀರು ಸೋರುವುದು. ಗೋಡೆಯಲ್ಲಿನ ಬಿರುಕುಗಳಿಂದ ನೀರು ಜಿನುಗುವುದು, ಇಲ್ಲವೇ ಚಿತ್ರಗಳು ಕಟ್ಟಡದ ಹೊರಭಾಗದಲ್ಲಿದ್ದಾಗ ನೇರವಾಗಿ ನೀರಿನ ಹೊಡೆತಕ್ಕೆ ಸಿಕ್ಕುವುದು. ಹೀಗೆ ಯಾವುದೇ ರೀತಿಯಿಂದ ನೀರಿನ ಸಂಪರ್ಕ ಭಿತ್ತಿ ಚಿತ್ರಗಳಿಗಾದರೂ ಹಾನಿಯಾಗುವುದು ತಪ್ಪಿದ್ದಲ್ಲ.

*ಅ. ಮೇಲ್ಛಾವಣಿ ಅಥವಾ ಗೋಡೆಯ ಬಿರುಕುಗಳಿಂದ ನೀರು ಸೋರುವುದು :* ಮೇಲ್ಛಾವಣಿಯಿಂದ ಭಿತ್ತಿ ಚಿತ್ರಗಳ ಮೇಲೆ ನೀರು ಸೋರಿದಾಗ ಚಿತ್ರಗಳ ಮೇಲೆ ಸವಳು (ಉಪ್ಪು), ಮಣ್ಣು, ಖನಿಜಯುಕ್ತ ವಸ್ತುಗಳ ಸಂಗ್ರಹವಾಗುತ್ತದೆ. "ಹೀಗೆ ಸಂಗ್ರಹವಾಗುವ ಕ್ಯಾಲ್ಸಿಯಂ ಕಾರ್ಬೋನೆಟ್, ಕ್ಯಾಲ್ಸಿಯಂ ಪಾಸ್‌ಫೇಟ್, ಕ್ಯಾಲ್ಸಿಯಂ ಸಲ್ಫೇಟ್. ಸೋಡಿಯಂ ಕ್ಲೋರೈಡ್. ಮ್ಯಾಂಗನೀಜ್ ಆಕ್ಸೈಡ್‌ಗಳೆಂಬ[೧] ಲವಣಯುಕ್ತ ವಸ್ತುಗಳಿಂದ ತೇವಾಂಶ ಹೆಚ್ಚಾಗಿ ಚಿತ್ರಗಳಿಗೆ ಲೇಪಿಸಿದ ವರ್ಣ ಮತ್ತು ಬಿತ್ತಿಯು ನೆನೆದು ಕಳಗುದುರಿ ಬೀಳುವುದು. ನೀರಿನ ಸೋರುವಿಕೆಯಿಂದ ಹೀಗೆ ಲವಣಯುಕ್ತ ವಸ್ತುಗಳು ಸಂಗ್ರಹಗೊಳ್ಳುವುದಲ್ಲದೇ ಖನಿಜಯುಕ್ತ ಮಣ್ಣು ಸಂಗ್ರಹಗೊಂಡಾಗ ಚಿತ್ರಗಳು ನಶಿಸುತ್ತವೆ. ಖನಿಜಯುಕ್ತ ವಸ್ತುಗಳು ಸಂಗ್ರಹಗೊಂಡಾಗ ಅದರಲ್ಲಿರುವ ಖನಿಜದ ಗುಣದಿಂದ ರಾಸಾಯನಿಕ ಕ್ರಿಯೆನಡೆದು ಚಿತ್ರಗಳ ಮೇಲ ವಿವಿಧ ರೀತಿಯ ಕಲೆಗಳು ಉಂಟಾಗುತ್ತವೆ. ಮಣ್ಣಿನಲ್ಲಿ ಮ್ಯಾಂಗನೀಜ್ ಅಂಶವಿದ್ದಾಗ ಚಿತ್ರಗಳು ಕಂದು ಮತ್ತು ಕಪ್ಪು ಮಿಶ್ರಿತ ಕಲೆಗಳಿಂದ ಆವರಿಸುತ್ತವೆ. ಹೀಗೆ ನೀರಿನ ಸೋರುವಿಕೆಯಿಂದಲೇ ಇಂದು ಹೆಚ್ಚಿನ ಭಿತ್ತಿಚಿತ್ರಗಳು

೧. ಗಜೇಂದ್ರ ಎಸ್. ತ್ಯಾಗಿ : ಪ್ರಿಹಿಸ್ಟಾರಿಕ್ ಆರ್ಟ್ಸ್ ಇನ್ ಇಂಡಿಯಾ. ಪುಟ ೧೧೧

ನಾಶವಾಗುತ್ತಲಿವೆ. ಉತ್ತರ ಕರ್ನಾಟಕದಲ್ಲಿ ಗುಳೇದಗುಡ್ಡದ ಹೊಸಮನಿ ಗೌಡರ ಮನೆಯ ಭಿತ್ತಿಚಿತ್ರಗಳು ಮಳೆಯ ನೀರು ಮೇಲ್ಛಾವಣಿಯಿಂದ ಸೋರಿ ನಾಶವಾಗಿವೆ. ಹಾಗೇ ನಿಪ್ಪಾಣಿಯ ರಾಜವಾಡೆಯ ಹೊರ ಪಡಸಾಲೆಯ ಚಿತ್ರಗಳು, ಅಮ್ಮಿನಭಾವಿಯ ಹಿರೇಮಠದ ಮಹಡಿಯಲ್ಲಿನ ಹೊರಭಾಗದ ಕಬ್ಬಿಣ ಫಲಕದ ಚಿತ್ರಗಳು, ಇಲ್ಲಿಯೇ ಕೆಳಭಾಗದಲ್ಲಿರುವ ಮುಖ್ಯದ್ವಾರದ ಎಡಬಲಗಳಲ್ಲಿರುವ ಚಿತ್ರಗಳು ನೀರಿನ ಸೋರುವಿಕೆಯಿಂದ ಹಾನಿಗೊಳಗಾಗಿವೆ. ಇವುಗಳಲ್ಲಿ ಅಮ್ಮಿನಭಾವಿಯ ಮುಖ್ಯದ್ವಾರದ ಎಡಬಲಗಳಲ್ಲಿರುವ ಚಿತ್ರಗಳಲ್ಲಿ ನೀರು ಸೋರುವಿಕೆಯಿಂದ ಮ್ಯಾಂಗನೀಜ್ ಖನಿಜಯುಕ್ತವಸ್ತು ಸಂಗ್ರಹಗೊಂಡು ಚಿತ್ರಗಳಮೇಲೆ ಕಂದುವರ್ಣದ ಕಲೆಗಳು ಉಂಟಾಗಿವೆ.

*ಬ. ತೇವದಿಂದ ಚಿತ್ರಗಳಿಗೆ ಬೂಷ್ಟು ಆವರಿಸುವುದು :* ಭಿತ್ತಿಚಿತ್ರಗಳ ಮೇಲೆ ಉಂಟಾಗುವ ಹೆಚ್ಚು ತೇವಾಂಶದಿಂದ ಪಾಚಿಯಂತಹ ಬೂಷ್ಟು ನಿರ್ಮಾಣವಾಗುವುದಲ್ಲದೇ ಇದರಲ್ಲಿರುವ ಸೂಕ್ಷ್ಮಾಣು ಜೀವಿ (ಬ್ಯಾಕ್ಟೀರಿಯಾ)ಗಳು ಭಿತ್ತಿ ಚಿತ್ರಗಳಿಗೆ ಹಾನಿಮಾಡುತ್ತವೆ. ತೇವವಿದ್ದಾಗ ಹಳದಿ ಮತ್ತು ಹಸಿರು ವರ್ಣದಿಂದ ಕೂಡಿದ ಈ ಪಾಚಿಯು ಒಣಗುತ್ತಬಂದಂತೆ ಕಂದು ಮತ್ತು ಕಪ್ಪು ವರ್ಣಕ್ಕೆ ತಿರುಗತ್ತದೆ. ಈ ರೀತಿ ಪಾಚಿಬೆಳೆಯುವುದು ತೇವಾಂಶ ಅಧಿಕವಿರುವ ಮಲೆನಾಡ ಭಾಗದ ಕಾವಿಚಿತ್ರಗಳಲ್ಲಿ ಸಾಮಾನ್ಯವಾಗಿದೆ. ಇದನ್ನು ಆಗಾಗ ಸ್ವಚ್ಛಗೊಳಿಸದಿದ್ದರೆ ಚಿತ್ರಗಳು ಕಪ್ಪಾಗಿ ನಾಶವಾಗುತ್ತವೆ. ಹೊನ್ನಾವರದಲ್ಲಿನ ಮಾರುತಿ ದೇವಾಲಯದ ಕಾವಿಭಿತ್ತಿಚಿತ್ರಗಳು ಇದೇ ರೀತಿಯಲ್ಲಿ ಪಾಚಿಗಟ್ಟಿ ಕಪ್ಪಾಗಿವೆ.

*ಕ. ತೇವದಿಂದ ಉಂಟಾಗುವ ಕೀಟಗಳು :* ಭಿತ್ತಿಚಿತ್ರಗಳ ಮೇಲೆ ವ್ಯಾಪಿಸುವ ಹೆಚ್ಚಿನ ತೇವದಿಂದ ಬ್ಯಾಕ್ಟೀರಿಯಾಗಳಿಂದ ಬೂಷ್ಟು ಬೆಳೆಯುವಂತೆ ಕಣಜದ ಹುಳು (Wasp) ಎಂಬ ಜಾತೀಯ ಕೀಟಗಳು ಚಿಕ್ಕ ಚಿಕ್ಕ ಗೂಡುಗಳನ್ನು ಮಣ್ಣಿನಿಂದ ಕಟ್ಟುತ್ತವೆ. ಇದು ಕಾಡಿನಲ್ಲಿರುವ ಶಿಲಾಶ್ರಯ ಭಿತ್ತಿಚಿತ್ರಗಳಲ್ಲಿ ಹೆಚ್ಚಾಗಿ ಸಂಭವಿಸುವ ಹಾನಿಯಾಗಿದೆ. ಈ ಕೀಟಗಳು ಕಟ್ಟಿದ ಬೋಗುಣಿಯಾಕಾರದ ಮಣ್ಣಿನ ಗೂಡುಗಳ ಮೇಲೆ ನೀರು ಸೋರಿದಾಗ ಅವು ಕರಗಿ ಚಿತ್ರಗಳಮೇಲೆ ವ್ಯಾಪಿಸುತ್ತವೆ. ಅಲ್ಲದೇ ಈ ಗೂಡುಗಳಲ್ಲಿನ ಮಣ್ಣು ಚಿಕ್ಕ ಸಸ್ಯಬೆಳೆಯಲು ಫಲವತ್ತಾದ ಸ್ಥಳವಾಗಿರುತ್ತದೆ.

*ಡ. ತೇವದಿಂದ ಬೆಳೆಯುವ ಸಸ್ಯಗಳು :* ಭಿತ್ತಿ ಚಿತ್ರಗಳ ಮೇಲೆ ಉಂಟಾಗುವ ಹೆಚ್ಚು ತೇವಾಂಶದಿಂದ ಒಂದು ರೀತಿಯ ಚಿಕ್ಕದಾದ ಸಸ್ಯ ಬೆಳೆಯುವುದು. ಇದು ಎತ್ತರವಾಗಿ ಬೆಳೆಯದೇ ವಿಶಾಲವಾಗಿ ಹಬ್ಬುವುದರಿಂದ ಚಿತ್ರದ ಪರವನ್ನೆಲ್ಲ ವ್ಯಾಪಿಸುತ್ತದೆ. ಈ ರೀತಿಯ ಸಸ್ಯದ ಬೆಳವಣಿಗೆಯಿಂದ ಭಿತ್ತಿ ಮತ್ತು ಚಿತ್ರ ಎರಡೂ ನಾಶಹೋಂದುತ್ತವೆ. ಅಲ್ಲದೇ ತೇವಾಂಶವು ಹೆಚ್ಚುದಿನಗಳಕಾಲ ಉಳಿದುಕೊಂಡಾಗ ಗೋಡೆಯ ಬಿರುಕುಗಳಲ್ಲಿ ಇಲ್ಲವೇ ಕುಳಿಉಂಟಾದಲ್ಲಿ ಕುರುಚಲುಗಿಡ, ಬಳ್ಳಿಗಳು, ಜೀಳಲು[೨] (Shrubs, Vines, Creepers) ಗಳಂತಹ ಸಸ್ಯಗಳು ಬೆಳೆಯುವವು. ಇವು ಬೆಳೆದಂತೆಲ್ಲ ವಿಶಾಲವಾಗಿ ಹಬ್ಬಿ ಚಿತ್ರದ ಮೇಲೆ ವ್ಯಾಪಿಸುತ್ತವಲ್ಲದೇ ಬೇರುಗಳು ಆಳಕ್ಕಿಳಿದು ಗೋಡೆಯ ನಾಶಕ್ಕೆ ಕಾರಣವಾಗುತ್ತವೆ. ಈ ರೀತಿ ಬೆಳೆದ ಸಸ್ಯಗಳು ಗಾಳಿಬಿಟ್ಟಾಗ ಚಿತ್ರಗಳ ಮೇಲೆ ಎಳೆದಾಡುವುದರಿಂದ ಇನ್ನೂ ಹೆಚ್ಚಿನ ಹಾನಿ ಸಂಭವಿಸುತ್ತದೆ. ಹೀಗೆ ತೇವದಿಂದ ಸಸ್ಯ ಬೆಳೆದು ಹಾನಿಸಂಭವಿಸುವುದು ಶಿಲಾಶ್ರಯ ಮತ್ತು ಶಿಲಾಗುಹೆಗಳ ಭಿತ್ತಿಚಿತ್ರಗಳಲ್ಲಿ ಅಧಿಕವಾಗಿದೆ.

---

೨. ಹೆಚ್ಚಿನ ವಿವರಣೆಗೆ ನೋಡಿ : ಗಜೇಂದ್ರು ಎಸ್. ತ್ಯಾಗಿ ಪ್ರಿಹಿಸ್ಟಾರಿಕ್ ಆರ್ಟ್ಸ್ ಇನ್ ಇಂಡಿಯಾ, ಪುಟ ೧೧೪

*೯. ಪ್ರವಾಹದಿಂದ ಆಗುವ ಹಾನಿ :* ಪ್ರವಾಹವು ಪ್ರಕೃತಿವಿಕೋಪವೇ ಆಗಿದ್ದರೂ ನೀರಿನಿಂದ ಸಂಭವಿಸುವ ಹಾನಿಯಾಗಿದ್ದರಿಂದ ಇದನ್ನು ನೀರಿನಿಂದಾಗುವ ಆಪತ್ತುಗಳಲ್ಲಿ ಹೇಳಿದೆ. ಪ್ರವಾಹಗಳಿಂದ ಭಿತ್ತಿಚಿತ್ರಗಳು ನಾಶವಾಗಿರಬಹುದಾದರೂ ಅಂತಹ ಉದಾಹರಣೆಗಳು ಕಡಿಮೆ ಎನ್ನುಬಹುದು. ಕರ್ನಾಟಕದ ಯಡೆಯೂರಿನ ರೇವಣ ಸಿದ್ಧೇಶ್ವರ ದೇವಾಲಯದ ಸಮೀಪದಲ್ಲಿಯೇ ಇದ್ದಂತಹ ಭಿತ್ತಿಚಿತ್ರಗಳಿಂದ ಅಲಂಕೃತವಾದ ಮಠವೊಂದು ಹೊಳೆಯ ಪಕ್ಕದಲ್ಲಿದ್ದು,[೩] ಪ್ರವಾಹದಲ್ಲಿ ನಾಶವಾಯಿತೆಂದು ತಿಳಿದುಬರುವುದು.

**II. ಬೆಂಕಿ :** ಭಿತ್ತಿ ಚಿತ್ರಗಳಿಗೆ ಬೆಂಕಿಯಿಂದಲೂ ಹಾನಿ ಸಂಭವಿಸಿರುವುದು ತಿಳಿದುಬರುತ್ತದೆ. ಜಪಾನಿನ 'ಹೆರ್‍ಯುಜಿ' ಬುದ್ಧ ಮಂದಿರದಲ್ಲಿದ್ದಂತಹ ಕ್ರಿ. ಶ. ೭ ನೇ ಶತಮಾನದ ಅತ್ಯಮೂಲ್ಯ ಭಿತ್ತಿ ಚಿತ್ರಗಳು ಕ್ರಿ. ಶ. ೧೯೪೯ ನೇ ಇಸ್ವಿಯಲ್ಲಿ ನಡೆದ ಅಗ್ನಿ ಅನಾಹುತದಿಂದಾಗಿ ನಾಶವಾದವು.[೪] ಮೈಸೂರು ಅರಸರ ಮೊದಲಿನ ಅರಮನೆಯು ಬೆಂಕಿ ಅನಾಹುತದಲ್ಲಿ ಸುಟ್ಟುಹೋಗಿರುವುದು. ಅದರಲ್ಲಿ ಇದ್ದ ಅಮೂಲ್ಯವಾದ ಭಿತ್ತಿ ಚಿತ್ರಗಳು ನಾಶವಾಗಿರಬೇಕು. ಹಾಗೇ ವಿಜಯನಗರ ಸಾಮ್ರಾಟರು ತಾಳಿಕೋಟೆ ಕದನದಲ್ಲಿ ಮುಸ್ಲಿಮರಿಗೆ ಸೋತಾಗ ಮುಸ್ಲಿಮರು ಹಿಂದುಗಳನ್ನು ಬೆನ್ನಟ್ಟಿ ಬಂದು ವಿಜಯನಗರ ರಾಜಧಾನಿಯನ್ನು ಕೊಳ್ಳೆ ಹೊಡೆದರೆಂದು ಇತಿಹಾಸದಿಂದ ತಿಳಿದುಬರುವದು. ಈ ಸಂದರ್ಭದಲ್ಲಿ ಅವರು ರಾಜಧಾನಿಯಲ್ಲಿನ ಅರಮನೆ. ದೇವಾಲಯ. ಮನೆ. ಮಠ ಮುಂತಾದ ಕಟ್ಟಡಗಳಲ್ಲಿ ಹುಲ್ಲು ತುಂಬಿ ಬೆಂಕಿ ಹಚ್ಚಿದರೆಂದು ಹೇಳಲಾಗುತ್ತದೆ. ಈ ಸಂದರ್ಭದಲ್ಲಿ ಆ ಕಟ್ಟಡಗಳಲ್ಲಿರುವ ಭಿತ್ತಿ ಚಿತ್ರಗಳು ನಾಶವಾಗಿರುವುದನ್ನು ನಾವು ಊಹಿಸಬಹುದು. ವಿಜಯನಗರ ರಾಜಧಾನಿಯ ಅರಮನೆ. ದೇವಾಲಯ. ಮನೆ ಮಠಗಳು ಭಿತ್ತಿಚಿತ್ರಗಳಿಂದ ಅಲಂಕರಿಸಲ್ಪಟ್ಟಿದ್ದವು ಎಂದು ಪ್ರವಾಸಿಗರು ಹೇಳಿದ್ದನ್ನು ಈ ಹಿಂದೆ ಹೇಳಲಾಗಿದೆ. ಹಂಪೆಯಲ್ಲಿ ಈಗಲೂ ಕೆಲವು ಕಟ್ಟಡಗಳಲ್ಲಿ ಬೆಂಕಿಯಿಂದುಂಟಾದ ಕಪ್ಪು ಉಳಿದುಕೊಂಡಿದೆ.

**III. ಗಾಳಿ :** ವಾತಾವರಣದಲ್ಲಿನ ಗಾಳಿಯ ಒತ್ತಡದಿಂದ ಭಿತ್ತಿಚಿತ್ರಗಳು ಸೂಕ್ಷ್ಮವಾಗಿ ನಾಶವಾಗುತ್ತವೆ.[೫] ಚಿತ್ರಗಳು ಕಟ್ಟಡದ ಹೊರಭಾಗದಲ್ಲಿದ್ದಾಗ ಗಾಳಿಯ ನೇರ ಸಂಪರ್ಕಕ್ಕೆ ಬರುವುದರಿಂದ ಹೆಚ್ಚಿನ ಹಾನಿ ಸಂಭವಿಸುತ್ತದೆ. ಅಮ್ಮಿನಭಾವಿಯ ಹಿರೇಮಠದ ಮುಖ್ಯದ್ವಾರದ ಎಡಬಲಗಳಲ್ಲಿರುವ ಚಿತ್ರಗಳು ಮತ್ತು ಮಹಡಿಯ ಮೇಲಿನ ಕಬ್ಬಿಣ ಫಲಕದ ಮೇಲಿನ ಚಿತ್ರಗಳು. ಹಾಗೂ ನರಗುಂದದ ಗುಂಡಪ್ಪ ಹಸಬಿಯವರ ಮನೆಯ ಪಡಸಾಲೆಯ ಚಿತ್ರಗಳು. ಸುರಪುರದ ಅಣ್ಣಯ್ಯನ ಮಠದ ಚಿತ್ರಗಳು ನೇರವಾಗಿ ಗಾಳಿಯ ಹೊಡೆತಕ್ಕೆ ಸಿಕ್ಕು ಸೂಕ್ಷ್ಮವಾಗಿ ನಾಶವಾಗುತ್ತಿವೆ. ಉತ್ತರ ಕನ್ನಡದ ಜಿಲ್ಲೆಯ ಕಾವಿ ಭಿತ್ತಿಚಿತ್ರಗಳು ಹೆಚ್ಚಾಗಿ ದೇವಾಲಯದ ಹೊರಭಾಗದಲ್ಲಿಯೇ ರಚನೆಯಾಗಿರುವುದರಿಂದ ಈ ತೊಂದರೆಗೆ ಸಿಲುಕಿರುವುದು ಸಾಮಾನ್ಯವಾಗಿದೆ. ಹೀಗೆ ನೇರವಾಗಿ ಗಾಳಿಯ ಸಂಪರ್ಕದಿಂದ ನಾಶವಾಗುವುದಲ್ಲದೇ ಗಾಳಿಯಲ್ಲಿನ ಧೂಳಿನಿಂದಲೂ ಭಿತ್ತಿಚಿತ್ರಗಳು ಹಾನಿಗೊಳಗಾಗುತ್ತವೆ. ವಾತಾವರಣದ ವಾಯುಮಂಡಲದಲ್ಲಿರುವ ಧೂಳು ಪ್ರತಿಯೊಂದು ವಸ್ತುವಿಗೂ ಅಂಟುವುದು ಸಾಮಾನ್ಯವಾದುದೇ ಆಗಿದೆ. ಹಾಗೇ

---

೩. ಅ. ಲ. ನರಸಿಂಹನ್ : ಕರ್ನಾಟಕ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು (ಬೆಂಗಳೂರು ವಿವಿಗೆ ಸಲ್ಲಿಸಿದ ಪೆರಳಚ್ಚು ಮಹಾಪ್ರಬಂಧ). ಪುಟ ೫೨೪

೪. ಬಿ. ಪಿ. ಬಾಯಿರಿ : ಜಾಗತಿಕ ಚಿತ್ರಕಲೆ. ಪುಟ ೭೨

೫. ಗಜೇಂದ್ರ ಎಸ್. ತ್ಯಾಗಿ : ಪ್ರಿಹಿಸ್ಟಾರಿಕ್ ಆರ್ಟ್ಸ್ ಇನ್ ಇಂಡಿಯಾ. ಪುಟ ೧೧೬

ಭಿತ್ತಿಚಿತ್ರಗಳಿಗೆ ಧೂಳು ತಗುಲಿದಾಗ ಅವು ಹಾನಿಗೀಡಾಗುತ್ತವೆ. ವಾತಾವರಣದ ಸಹಜವಾದ ಧೂಳು ಅಲ್ಲದೇ ಚಟುವಟಿಕೆ ಹೆಚ್ಚಾಗಿರುವ ಸ್ಥಳದ ಸಮೀಪ ಭಿತ್ತಿಚಿತ್ರಗಳಿದ್ದರೆ ಇನ್ನೂ ಹೆಚ್ಚಿನ ಪ್ರಮಾಣದ ಧೂಳು ಆವರಿಸುತ್ತದೆ.

ಅಮ್ಮಿನಭಾವಿಯ ಹಿರೇಮಠದ ಹೊರಬಾಗಿಲಿನ ಎರಡೂ ಕಡೆಗಿರುವ ಚಿತ್ರಗಳು ರಸ್ತೆಗೆ ಸಮೀಪವಾಗಿರುವುದರಿಂದ ಹೆಚ್ಚಿನ ಧೂಳು ತಗುಲುತ್ತದೆ. ಗುಳೇದಗುಡ್ಡದ ಹೊಸಮನಿಗೌಡರ ಮನೆ, ನಿಪ್ಪಾಣಿಯ ವಾಡೆ, ರಾಯಚೂರಿನ ಖಾಜನಗೌಡರ ಮನೆಗಳಲ್ಲಿರುವ ಭಿತ್ತಿಚಿತ್ರಗಳು ಹೆಚ್ಚು ಧೂಳಿನಿಂದ ಆವರಿಸಲ್ಪಟ್ಟಿವೆ. ಕಾರಣ ಈ ಮೂರು ಮನೆಗಳ ವಾರಸುದಾರರು ಈಗ ಚಿತ್ರಗಳಿರುವ ಸ್ಥಳದಲ್ಲಿ ವಾಸಮಾಡದೇ ಆ ಕೋಣೆಗಳಲ್ಲಿ ನಿರುಪಯುಕ್ತ ವಸ್ತುಗಳನ್ನು ತುಂಬಿ ಬಾಗಿಲು ಮುಚ್ಚಿದ್ದಾರೆ. ಇದರಿಂದಾಗಿ ಕೋಣೆಗಳಲ್ಲಿ ಧೂಳು ವ್ಯಾಪಕವಾಗಿ ತುಂಬಿಕೊಂಡಿದ್ದು ಪರಿವೀಕ್ಷಣೆಗೆಗಾಗಿ ಆ ಸ್ಥಳಗಳಿಗೆ ಹೋದಾಗ ಅಲ್ಲಿ ನಿಲ್ಲಲಾರದಷ್ಟು ಧೂಳಿನ ಘಾಟು ಮೂಗಿಗೆ ನುಗ್ಗಿತಲ್ಲದೇ ಚಿತ್ರಗಳ ಮೇಲೆ ದಪ್ಪನಾದ ಧೂಳಿನ ಪದರ ನಿರ್ಮಾಣಗೊಂಡಿದ್ದು ಕಂಡುಬಂದಿತು. ಈ ಧೂಳು ಹೆಚ್ಚಿನ ದಿನಗಳವರೆಗೆ ಉಳಿದಾಗ ಚಿತ್ರಗಳು ಕ್ರಮೇಣ ನಾಶವಾಗುತ್ತವಲ್ಲದೇ. ನೀರಿನ ಸಂಪರ್ಕ ಉಂಟಾದರೆ ಧೂಳು ಚಿತ್ರಗಳ ಮೇಲೆ ಶಾಶ್ವತವಾಗಿ ಅಂಟಿಕೊಂಡುಬಿಡುವುದು. ಹಂಪೆಯ ವಿರೂಪಾಕ್ಷ ದೇವಾಲಯದ ಭಿತ್ತಿಚಿತ್ರಗಳು ಅಲ್ಲಿಂದ ಸ್ವಲ್ಪವೇ ದೂರದಲ್ಲಿ ನಡೆಯುತ್ತಿರುವ ಕಬ್ಬಿಣ ಅದಿರು ತೆಗೆಯುವ ಗಣಿಗಾರಿಕೆಯಿಂದ ಉಂಟಾಗುವ ಮ್ಯಾಂಗನೀಜ್ ಧೂಳಿನಿಂದ ಸೂಕ್ಷ್ಮವಾಗಿ ಆವರಿಸುತ್ತಿವೆ ಎನಿಸುತ್ತದೆ. ಹೊಸಪೇಟೆಯ ಸಮೀಪ ನಡೆಯುತ್ತಿರುವ ಗಣಿಗಾರಿಕೆಯಿಂದ ಹೊಸಪೇಟೆ ಸುತ್ತಮುತ್ತಲಿನ ಪ್ರದೇಶವೆಲ್ಲ ಕೆಂಪು ಧೂಳಿನಿಂದ ಆವರಿಸಿ ಕಟ್ಟಡಗಳು. ರಸ್ತೆಗಳು, ವಸ್ತುಗಳು ಎಲ್ಲವೂ ಕೆಂಪು ಛಾಯೆಯಿಂದ ಕೂಡಿರುವುದನ್ನು ಕಾಣಬಹುದು.

ಹೀಗೆ ಸುತ್ತಲಿನ ಪರಿಸರದ ಪ್ರತಿಯೊಂದು ವಸ್ತುವೂ ಮ್ಯಾಂಗನೀಜ್ ಅದಿರಿನ ಧೂಳಿನಿಂದ ಆವರಿಸಿರುವುದರಿಂದ ಹಂಪೆಯ ವಿರೂಪಾಕ್ಷ ದೇವಾಲಯದ ಭಿತ್ತಿ ಚಿತ್ರಗಳು ಅದರಿಂದ ಹೊರತಾಗಿರಲು ಹೇಗೆ ಸಾಧ್ಯ ? ಈ ಭಿತ್ತಿ ಚಿತ್ರಗಳು ಮ್ಯಾಂಗನೀಜ್ ಧೂಳಿನಿಂದ ಆವರಿಸುತ್ತಿರುವುದು ಕಳವಳಕಾರಿಯಾದ ಸಂಗತಿಯಾಗಿದೆ.

**IV. ಬಿಸಿಲು :** ಬಿಸಿಲಿನಿಂದಲೂ ಭಿತ್ತಿ ಚಿತ್ರಗಳಿಗೆ ಹಾನಿ ಸಂಭವಿಸುತ್ತದೆ. ಬಿಸಿಲಿನಿಂದ ಭಿತ್ತಿಚಿತ್ರಗಳಿಗೆ ಉಪಯೋಗಿಸಲಾದ ಬಣ್ಣಗಳ ಕಾಂತಿಯು ಕುಗ್ಗಿ ಮಸುಕಾಗುತ್ತವೆ. ಅಲ್ಲದೇ ಕೆಲವೇಳೆ ನಿರಂತರ ಬಿಸಿಲಿನ ಸಂಪರ್ಕದಿಂದ ಬಣ್ಣ ಸಂಪೂರ್ಣ ಉದುರಿಹೋಗುವುದಲ್ಲದೇ ಭಿತ್ತಿಯೂ ನಾಶವಾಗುವುದು. ಅಮ್ಮಿನಭಾವಿಯ ಹಿರೇಮಠದ ಮಹಡಿ ಮೇಲಿನ ಕಬ್ಬಿಣದ ಫಲಕದ ಮೇಲಿನ ಭಿತ್ತಿಚಿತ್ರಗಳು. ನಿಪ್ಪಾಣಿಯ ರಾಜವಾಡೆಯ ಮಹಡಿ ಮೇಲಿನ ತೆರೆದ ಛಾವಡಿಯ ಹೊರಗೋಡೆಯ ಚಿತ್ರಗಳು. ನಗರಗುಂದದ ಗುಂಡಪ್ಪ ಹಸಬಿಯವರ ಮನೆಯ ಹೊರಛಾವಣಿಯ ಚಿತ್ರಗಳು ಬಿಸಿಲಿನಿಂದ ನಾಶವಾಗಿವೆ. ಹಾಗೇ ವಿಜಾಪುರದ ಸಮೀಪದ ಕುಮಟಗಿಯಲ್ಲಿನ ನೀರಿನ ಕೊಳದಲ್ಲಿನ ಚಿತ್ರಗಳು. ಉತ್ತರ ಕನ್ನಡ ಜಿಲ್ಲೆಯ ಬಹುತೇಕ ಕಾವಿ ಭಿತ್ತಿಚಿತ್ರಗಳು ಬಿಸಿಲಿನಿಂದ ಹಾನಿಗೊಳಗಾಗಿವೆ.

**V. ಭೂಕಂಪ :** ಭೂಕಂಪದಂತಹ ಪ್ರಕೃತಿವಿಕೋಪದಿಂದಲೂ ಭಿತ್ತಿ ಚಿತ್ರಗಳು ನಾಶವಾಗುತ್ತಿರುವುದನ್ನು ಇತಿಹಾಸದಿಂದ ತಿಳಿದುಕೊಳ್ಳಬಹುದು. ಕ್ರಿ. ಶ. ೧೯೦೫ ರಲ್ಲಿ ಸಂಭವಿಸಿದ ಭೂಕಂಪದಿಂದಾಗಿ ಭಾರತದಲ್ಲೇ ಅತ್ಯಂತ ಖ್ಯಾತಿಗಳಿಸಿದ್ದ ಪ್ರಮುಖ ಚಿತ್ರಕಲಾಕೇಂದ್ರವೆಂದು ಹೆಸರುಗಳಿಸಿದ್ದ ಕಾಂಗ್ರಾ ಪಟ್ಟಣವು ಸಂಪೂರ್ಣ ನಾಶವಾಯಿತು. ಇದರಿಂದಾಗಿ ಅಲ್ಲಿನ ಕಲಾಕೃತಿಗಳು ಮಾತ್ರವಲ್ಲದೇ ಕಲಾವಿದರೂ ನಾಶವಾದರು ಎಂಬುದಾಗಿ ತಿಳಿದುಬರುತ್ತದೆ.

**VI. ಜ್ವಾಲಾಮುಖಿ :** ಪ್ರಕೃತಿವಿಕೋಪದಲ್ಲಿ ಒಂದಾದ ಜ್ವಾಲಾಮುಖಿಯಿಂದಲೂ ಭಿತ್ತಿ ಚಿತ್ರಗಳ ಹಾನಿ ಸಂಭವಿಸಿರುವುದು ತಿಳಿಯುತ್ತದೆ. ಇಟಲಿಯ ನೇಪಲ್ಸ ಸಮೀಪದ 'ಪಾಂಪಿ' ನಗರದಲ್ಲಿ ಮನೆ, ಅರಮನೆ, ದೇವಾಲಯ ಹೀಗೆ ಕಟ್ಟಡಗಳೆಲ್ಲ ಭಿತ್ತಿ ಚಿತ್ರಗಳಿಂದ ಅಲಂಕರಿಸಲ್ಪಟ್ಟಿದ್ದವು. ಇಲ್ಲಿ ಕ್ರಿ. ಶ. ೭೯ ರಲ್ಲಿ ಉಕ್ಕಿಹರಿದ ಜ್ವಾಲಾಮುಖಿಗೆ ಇಡೀ ನಗರ ಆಹುತಿಯಾಯಿತು. ಮುಂದೆ ಕ್ರಿ. ಶ. ೧೭೫೦ ರಲ್ಲಿ ಉತ್ಖನನ ಮಾಡಿದಾಗ ಇಲ್ಲಿ ಸುಮಾರು ಮೂರು ಸಾವಿರ ಐನೂರು ಭಿತ್ತಿ ಚಿತ್ರಗಳು ಕಂಡುಬಂದವೆಂದು ಹೇಳುತ್ತಾರೆ. ಭೂಕಂಪ ಮತ್ತು ಜ್ವಾಲಾಮುಖಿಯಂತಹ ಪ್ರಕೃತಿವಿಕೋಪಗಳಿಂದ ಭಿತ್ತಿ ಚಿತ್ರಗಳು ನಾಶವಾದ ಉದಾಹರಣೆ ಕರ್ನಾಟಕದಲ್ಲಿ ದಾಖಲಾಗಿಲ್ಲ.

**೩. ವ್ಯಕ್ತಿಗತ ಆಪತ್ತು :** ವ್ಯಕ್ತಿಯಿಂದ ಅಥವಾ ಆತ ನಡೆಸುವ ಯಾವುದೇ ಚಳುವಟಿಕೆಯಿಂದ ಭಿತ್ತಿ ಚಿತ್ರಗಳಿಗೆ ಹಾನಿ ಸಂಭವಿಸುವುದನ್ನು ಇಲ್ಲಿ ವ್ಯಕ್ತಿಗತ ಆಪತ್ತುಗಳೆಂದು ಪರಿಗಣಿಸಲಾಗಿದೆ. ವ್ಯಕ್ತಿಗತ ಆಪತ್ತುಗಳಲ್ಲಿ ಮತ್ತೆ

I. ರಾಜಕೀಯ ಚಟುವಟಿಕೆಗಳಿಂದಾಗುವ ಆಪತ್ತು
II. ಧಾರ್ಮಿಕ ಚಟುವಟಿಕೆಗಳಿಂದಾಗುವ ಆಪತ್ತು
III. ಅಡಿಗೆ ಮಾಡುವುದರಿಂದಾಗುವ ಆಪತ್ತು
IV. ಕಟ್ಟಡ ನವೀಕರಣದಿಂದಾಗುವ ಆಪತ್ತು
V. ಕಾರ್ಖಾನೆಗಳಿಂದ ಉಂಟಾಗುವ ಆಪತ್ತು
VI. ವಿದ್ಯುತ್ ದೀಪಗಳಿಂದಾಗುವ ಆಪತ್ತು
VII. ಕಿಡಿಗೇಡಿತನದಿಂದಾಗುವ ಆಪತ್ತು

- ಎಂಬ ಏಳು ಉಪವಿಭಾಗಗಳನ್ನು ಮಾಡಿಕೊಂಡಿದ್ದು ಅವುಗಳನ್ನು ಒಂದೊಂದಾಗಿ ಹೀಗೆ ವಿವರಿಸಬಹುದು.

*I. ರಾಜಕೀಯ ಚಟುವಟಿಕೆಗಳಿಂದಾಗುವ ಆಪತ್ತು :* ರಾಜಕೀಯ ನೆಲೆಯಿಂದ ಭಿತ್ತಿ ಚಿತ್ರಕಲೆಯ ಬೆಳವಣಿಗೆ, ಪ್ರಸರಣ. ಪೋಷಣೆ ನಡೆದಂತೆಯೇ ಕೆಲವು ಸಂದರ್ಭಗಳಲ್ಲಿ ಆಪತ್ತುಗಳೂ ಉಂಟಾಗುತ್ತವೆ. ಒಂದು ರಾಜ್ಯದವರು ಇನ್ನೊಂದು ರಾಜ್ಯದ ಮೇಲೆ ದಾಳಿಕೈಗೊಂಡಾಗ ಅಲ್ಲಿನ ಜನತೆ ಈ ಸಮಯದಲ್ಲಿ ನಡೆಯುತ್ತಿದ್ದ ರಕ್ತಪಾತ. ಸುಲಿಗೆ, ಅಪಹರಣಾದಿಗಳಿಂದ ಮೊದಲು ಜೀವ ಉಳಿಸಿಕೊಳ್ಳಬೇಕೆಂಬ ಮಾನವನ ಸಹಜ ಪ್ರವೃತ್ತಿಯು ಜಾಗೃತಗೊಳ್ಳುತ್ತದೆ. ಆಗ ಜನತೆ ಮನೆಮಾರು. ಮಠಮಾನ್ಯ. ಅರಮನೆ ಮುಂತಾದವುಗಳನ್ನು ತೊರೆದು ಸಿಕ್ಕಲ್ಲಿ ಓಡಿಹೋಗುತ್ತಾರೆ. ಇಂತಹ ಸಂದರ್ಭದಲ್ಲಿ ಅಲ್ಲಿ ರಚನೆಯಾಗಿರಬಹುದಾದ ಭಿತ್ತಿ ಚಿತ್ರಗಳು ಅನುದ್ದೇಶಿತವಾಗಿ ನಾಶವಾಗುತ್ತವೆ.

ಶಾತವಾಹನರು ಮೊದಲ್ಗೊಂಡು ಗಂಗ. ಕದಂಬ. ಚಾಲುಕ್ಯ. ರಾಷ್ಟ್ರಕೂಟ. ವಿಜಯನಗರಗಳಂತಹ ಪ್ರಮುಖ ಸಾಮ್ರಾಜ್ಯಗಳು. ಹಾಗೆಯೇ ಪಾಳೇಗಾರರು. ನಾಯಕ ಮನೆತನಗಳು ಪತನಗೊಂಡಾಗ. ಅವರ ಅರಮನೆಗಳು. ಮಠಮಾನ್ಯಗಳು ನಾಶವಾಗಿರುವುದನ್ನು ಕಲ್ಪನೆಮಾಡಿಕೊಳ್ಳಬಹುದು. ವಿಜಯನಗರ ಸಾಮ್ರಾಜ್ಯದ ರಾಜಧಾನಿಯಲ್ಲಿದ್ದಂತಹ ಅರಮನೆಗಳು. ಮನೆಮಠಗಳು. ದೇವಾಲಯಗಳು. ಸಾರ್ವಜನಿಕ ಕಟ್ಟಡಗಳು ಭಿತ್ತಿ ಚಿತ್ರಕಲೆಯಿಂದ ಅಲಂಕೃತಗೊಂಡಿದ್ದನ್ನು ಪ್ರತ್ಯಕ್ಷದರ್ಶಿಗಳಾದ ವಿದೇಶಿಪ್ರವಾಸಿಗರು ಬರೆದಿಟ್ಟಿದ್ದಾರೆ. ಈ ಸಂಗತಿಯನ್ನು ಹಿಂದೆ ಹೇಳಿದೆ. ಈ ಎಲ್ಲ ಭಿತ್ತಿ ಚಿತ್ರಗಳು ತಾಳಿಕೋಟೆ ಕದನದನಂತರ ಮುಸ್ಲಿಂ ದಾಳಿಕಾರರು ರಾಜಧಾನಿಯಮೇಲೆ ನಡೆಸಿದ ವಿನಾಶಕಾರಿ ಆಕ್ರಮಣದಿಂದ ನಾಶಹೊಂದಿದ್ದು ಇತಿಹಾಸದಿಂದ ತಿಳಿದುಬರುವ ವಿಷಯವೇ ಆಗಿದೆ. ತೀರಾ ಇತ್ತೀಚೆಗೂ ರಾಜ್ಯ ಅಳಿದುಹೋದಾಗ ಭಿತ್ತಿ ಚಿತ್ರ ನಾಶವಾಗಿರುವುದನ್ನು ಕಾಣುತ್ತೇವೆ.

ಬ್ರಿಟೀಷ್ ಸಾಮ್ರಾಜ್ಯ ಅಳಿದು ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕ ಸಂದರ್ಭದಲ್ಲಿ ೧೯೪೭ ಅಗಸ್ಟ ೧೫ ರಂದು[೬] ಕಲ್ಕತ್ತಾದ ಗವರ್ನರ್‌ನ ಭವ್ಯನಿವಾಸವನ್ನು ಹೊಕ್ಕ ಜನತೆ ಸ್ವಾತಂತ್ರ್ಯದ ಹುಚ್ಚು ಸಂತೋಷದಲ್ಲಿ ಅಲ್ಲಿನ ಗೋಡೆಯ ಮೇಲಿರುವ ಅಪರೂಪದ ಭಿತ್ತಿ ಚಿತ್ರಗಳನ್ನು ಕೊಡೆಯ ತುದಿಯಿಂದ ಚುಚ್ಚಿಗೀರಿ ಹಾಳು ಮಾಡಿದ್ದನ್ನು ಇಲ್ಲಿ ಉದಾಹರಿಸಬಹುದು.

*II. ಧಾರ್ಮಿಕ ಚಟುವಟಿಕೆಗಳಿಂದಾಗುವ ಆಪತ್ತು :* ಪ್ರಾಚೀನ ಭಿತ್ತಿ ಚಿತ್ರಗಳು ಧಾರ್ಮಿಕ ಉದ್ದೇಶ, ಧಾರ್ಮಿಕ ಕ್ರಿಯಾದಿಗಳ ಅಂಗವಾಗಿಯೇ ಹೆಚ್ಚಾಗಿ ರಚನೆಯಾಗಿದ್ದರೂ ಧಾರ್ಮಿಕ ಅಭಿಮಾನವೇ ಕೆಲವು ವೇಳೆ ಭಿತ್ತಿಚಿತ್ರಗಳ ನಾಶಕ್ಕೂ ಕಾರಣವಾಗಿವೆ ಎನ್ನಬಹುದು. ಹಾಗೇ ಧಾರ್ಮಿಕ ಕ್ರಿಯೆಯ ಅಂಗವಾಗಿ ನಡೆಸುವ ಪೂಜೆಯಂತಹ ಚಟುವಟಿಕೆಗಳಿಂದ ಭಿತ್ತಿಚಿತ್ರಗಳು ನಾಶವಾಗುತ್ತವೆ. ಹೀಗೆ ಧಾರ್ಮಿಕ ಚಟುವಟಿಕೆಗಳಿಂದಾಗುವ ಆಪತ್ತುಗಳನ್ನು (೧) ಧರ್ಮಾಭಿಮಾನದಿಂದಾಗುವ ಆಪತ್ತುಗಳು. (೨) ಪೂಜಾ ವಿಧಾನಗಳಿಂದುಂಟಾಗುವ ಆಪತ್ತುಗಳು : ಎಂಬುದಾಗಿ ಮತ್ತೆ ಎರಡು ಉಪವಿಭಾಗಗಳಲ್ಲಿ ವರ್ಗೀಕರಿಸಿಕೊಳ್ಳಲಾಗಿದೆ.

೧. ಧರ್ಮಾಭಿಮಾನದಿಂದಾಗುವ ಆಪತ್ತುಗಳು : ಒಂದು ನಾಡಿನ ಧಾರ್ಮಿಕ ಚರಿತ್ರೆಯಲ್ಲಿ ಧರ್ಮಾಭಿಮಾನ, ಮತಾಭಿಮಾನಗಳಿಂದುಂಟಾಗುವ ಮತಪ್ರಾಬಲ್ಯದ ಸಂದರ್ಭ, ಮತಮತಗಳ ತಾಕಲಾಟಗಳು ಇದ್ದದ್ದು ಇತಿಹಾಸದಿಂದ ತಿಳಿಯಬಹುದಾಗಿದೆ. ಇಂತಹ ಸಂದರ್ಭಗಳಲ್ಲಿ ಆಯಾಧರ್ಮಗಳಿಗೆ ಸಂಬಂಧಿಸಿದ ವಿಹಾರ, ಬಸದಿ, ಮಠ, ದೇವಾಲಯ, ಚರ್ಚು, ಮಸೀದೆಗಳಂತಹ ಧಾರ್ಮಿಕ ಕಟ್ಟಡಗಳು ನೆಲಸಮಗೊಂಡು ಅಲ್ಲಿರಬಹುದಾದ ಭಿತ್ತಿಚಿತ್ರಗಳು ನಾಶವಾಗಿರಬೇಕು. ಬೌದ್ಧ, ಜೈನ, ಶೈವ, ವೀರಶೈವ, ವೈಷ್ಣವ, ಇಸ್ಲಾಂ, ಕ್ರೈಸ್ತ ಧರ್ಮಗಳಂತಹ ಪ್ರಮುಖ ಧರ್ಮಗಳಿಗೆಲ್ಲ ಈ ಮಾತು ಅನ್ವಯ. ಆಯಾಮತಗಳ ಪ್ರಾಬಲ್ಯದ ಕಾಲದಲ್ಲಿ ಆಯಾ ಪ್ರದೇಶದಲ್ಲಿ ಆ ಮತದ ಭಿತ್ತಿ ಚಿತ್ರಗಳು ಮಾತ್ರ ಹೆಚ್ಚು ಸುರಕ್ಷಿತವಾಗಿ ಇನ್ನುಳಿದವು ಅವಜ್ಞೆಗೊಳಗಾಗಿರಬಹುದು ಎಂದು ಊಹಿಸಬಹುದು. ಇಂತಹ ಘಟನೆಗಳಲ್ಲದೇ ಒಬ್ಬ ದೊರೆಯ ಧಾರ್ಮಿಕ ಅಭಿಮಾನ ಇನ್ನೊಬ್ಬದೊರೆ ಬರೆಸಿದ ಭಿತ್ತಿ ಚಿತ್ರಕ್ಕೆ ಸಂಚಕಾರ ತಂದದ್ದೂ ಉಂಟು. ಒಂದು ದೇವಾಲಯದಲ್ಲಿ ಈ ಮೊದಲೇ ರಚನೆಯಾಗಿರುವ ಭಿತ್ತಿ ಚಿತ್ರಗಳನ್ನು ಮುಚ್ಚಿಹಾಕಿ ಅವುಗಳ ಮೇಲೆ ಮತ್ತೆ ಬೇರೆಯದೇ ಚಿತ್ರಗಳನ್ನು ಬರೆಸಿರುವ ಉದಾಹರಣೆಗಳೂ ಸಿಗುತ್ತವೆ.

ತಮಿಳುನಾಡಿನ ಬೃಹದೀಶ್ವರ ದೇವಾಲಯದಲ್ಲಿ ಚೋಳ ಅರಸರು ಬರೆಸಿದ ಕ್ರಿ. ಶ. ೯ ನೇ ಶತಮಾನದ ಭಿತ್ತಿ ಚಿತ್ರಗಳ ಮೇಲೆ ಕ್ರಿ. ಶ. ೧೭ ನೇ ಶತಮಾನದಲ್ಲಿ ಮತ್ತೆ ನಾಯಕ ದೊರೆಗಳು ಭಿತ್ತಿ ಚಿತ್ರ ಬರೆಸಿದ್ದನ್ನು ಕ್ರಿ. ಶ. ೧೯೩೦ ರಲ್ಲಿ ಕಂಡುಕೊಳ್ಳಲಾಯಿತು.[೭] ಒರಿಸ್ಸಾದ ಸುಪ್ರಸಿದ್ಧ ಜಗನ್ನಾಥಪುರಿ ದೇವಾಲಯದ ಆವರಣದಲ್ಲಿರುವ ಲಕ್ಷ್ಮೀ ದೇವಾಲಯದಲ್ಲಿ[೮] ಕ್ರಿ. ಶ. ೧೧ ನೇ ಶತಮಾನದಲ್ಲಿ ಬರೆಸಲಾದ ಚಿತ್ರಗಳ ಮೇಲೆ ಮತ್ತೆ ಕ್ರಿ. ಶ. ೧೨ ನೇ ಶತಮಾನದಲ್ಲಿ ಚಿತ್ರರಚಿಸಲಾಯಿತು ಹಾಗೇ ತಮಿಳುನಾಡಿನ ಮಧುರೈ ಮಿನಾಕ್ಷಿ ದೇವಾಲಯದಲ್ಲಿ ವಿಜಯನಗರ ಕಾಲದ ಭಿತ್ತಿ

---

೬. In calcutta at 8-00 a.m., a harde from the city's slums swept through the gates of the Majestic governor's palace, while the last British governor, Sir Fredirick Burrow and his wife break fasted in a corner of the house the crowd raced through the spacious salons. Celebrated their in dependece by Jumping up and down on the bed. Others expressed their joy at India's independence by stabbing the oil paintings of India's former rulers with the tips of their umbrellas. - Larry Collins and Dominique Lapirre : Freedom at Midnight, Page, 268.

೭. C. Sivarama Murti : Indian Painting, Page 64

೮. J. C. Nagpal : Mural Paintings In India, Page 161, 182

ಚಿತ್ರಗಳನ್ನು ಮುಚ್ಚಿಹಾಕಿ ಕ್ರಿ. ಶ. ೧೭ ನೇ ಶತಮಾನದಲ್ಲಿ ಮತ್ತೆ ನಾಯಕ ಅರಸರು ಭಿತ್ತಿ ಚಿತ್ರಗಳನ್ನು ಬರೆಸಿದ್ದಾರೆ ಎನ್ನುವ ಸಂಗತಿಗಳು ತಿಳಿದುಬರುತ್ತವೆ. ಹಾಗೇ ಕರ್ನಾಟದ ಶ್ರೀರಂಗ ಪಟ್ಟಣದ ದರಿಯಾದೌಲತ್,[೯] ಹಾಗೂ ಹಂಪಿಯ ವಿರುಪಾಕ್ಷ ದೇವಾಲಯದ[೧೦] ಭಿತ್ತಿಚಿತ್ರಗಳನ್ನು ತಿದ್ದುಪಡಿಮಾಡಿ ಬರೆಯಲಾಗಿದೆ ಎನ್ನುವ ವಿಚಾರ ಇಲ್ಲಿ ಗಮನಾರ್ಹವೆನಿಸುತ್ತದೆ.

೨. ಪೂಜಾವಿಧಾನಗಳಿಂದುಂಟಾಗುವ ಆಪತ್ತುಗಳು : ಭಾರತದಲ್ಲಿಯ ಬಹುತೇಕ ಭಿತ್ತಿ ಚಿತ್ರಗಳು ದೇವಾಲಯ, ಬಸದಿ, ಸ್ತೂಪ, ಚೈತ್ಯವಿಹಾರ, ಮಠಮಾನ್ಯಗಳಂತಹ ಧಾರ್ಮಿಕ ಸ್ಥಳಗಳಲ್ಲೇ ಹೆಚ್ಚಾಗಿ ರಚನೆಯಾಗಿದ್ದು ಇವುಗಳಲ್ಲಿ ಕೆಲವು ಸ್ಥಳಗಳಲ್ಲಿ ನಿತ್ಯವೂ ಪೂಜೆ ನಡೆಯುತ್ತಲಿದೆ. ಇಲ್ಲಿ ನಡೆಯುವ ಪೂಜೆಯ ಸಂದರ್ಭದಲ್ಲಿ ಉರಿಸುವ ಎಣ್ಣೆ ದೀವಿಗೆ, ಕರ್ಪೂರ, ಹೋಮ, ಹವನ ದಿಂದುಂಟಾಗುವ ಎಣ್ಣೆ ಜಿಡ್ಡುಯುಕ್ತ ಕಾಡಿಗೆ ಅಲ್ಲಿರುವ ಚಿತ್ರಗಳ ಮೇಲೆ ಆವರಿಸುತ್ತದೆ. ಕರ್ನಾಟಕದ ಭಿತ್ತಿಚಿತ್ರಗಳೂ ಈ ತೊಂದರೆಯಿಂದ ಹೊರತಾಗಿಲ್ಲ. ಇಲ್ಲಿಯೂ ಭಿತ್ತಿ ಚಿತ್ರಗಳು ಪ್ರಮುಖವಾಗಿ ಪೂಜಾಸ್ಥಳಗಳಲ್ಲೇ ರಚನೆಯಾಗಿದ್ದುದನ್ನು ನೋಡಬಹುದು. ಕೇರಳದ ತಿರುವಟ್ಟೂರು ಆದಿಕೇಶವ ಪೆರುಮಾಳ್ ದೇವಾಲಯ, ಚೆಮತೆಟ್ಟಾದಲ್ಲಿರುವ ಶಿವ ದೇವಾಲಯ, ಪಲ್ಲಿಮನ್ನಾದಲ್ಲಿರುವ ಶಿವ ದೇವಾಲಯ, ತ್ರಿಪಯಾರ್‌ನಲ್ಲಿರುವ ಶ್ರೀರಾಮ ದೇವಾಲಯ, ತಮಿಳುನಾಡಿನ ಮೆತಪುಡುರುನಲ್ಲಿರುವ ಚಂದ್ರನಾಥದೇವಾಲಯ, ಆಂಧ್ರ ಪ್ರದೇಶದಲ್ಲಿರು ಲೇಪಾಕ್ಷಿಯಲ್ಲಿನ ವೀರಭದ್ರ ದೇವಾಲಯ ಹೀಗೆ ಪಟ್ಟಿಮಾಡುತ್ತ ಹೋಗಬಹುದು. ಇಲ್ಲೆಲ್ಲ ನಿತ್ಯ ಪೂಜೆ ನಡೆಯುತ್ತಿದ್ದು ಈ ದೇವಾಲಯಗಳಲ್ಲಿ ರಚನೆಯಾಗಿರುವ ಭಿತ್ತಿಚಿತ್ರಗಳು ಅಲ್ಲಿ ನಿತ್ಯ ಉರಿಸುವ ಎಣ್ಣೆ ದೀವಿಗೆ, ಕರ್ಪೂರ, ಆಗಾಗ ನಡೆಯುವ ಹೋಮ ಹವನಗಳಿಂದುಂಟಾಗುವ ಜಿಡ್ಡುಯುಕ್ತ ಕಾಡಿಗೆಯಿಂದ ಆವರಿಸಿರುವುದು[೧೧] ಕಂಡುಬರುತ್ತದೆ.

ಕರ್ನಾಟಕದಲ್ಲಿಯ ಅನೇಕ ದೇವಾಲಯದ ಭಿತ್ತಿಚಿತ್ರಗಳೂ ಈ ತೊಂದರೆಯನ್ನು ಎದುರಿಸುತ್ತಿವೆ. ಉತ್ತರ ಕರ್ನಾಟಕ ಭಾಗದ ಭಿತ್ತಿ ಚಿತ್ರಗಳಲ್ಲಿ ಹಂಪೆಯ ವಿರೂಪಾಕ್ಷ ದೇವಾಲಯ, ನರಗುಂದದ ವೆಂಕಟರಮಣ ದೇವಾಲಯಗಳಲ್ಲಿ ಈ ಸಮಸ್ಯೆ ಅತೀ ಹೆಚ್ಚಾಗಿದೆ. ಹಂಪೆಯ ವಿರೂಪಾಕ್ಷ ದೇವಾಲಯದ ಚಿತ್ರಗಳು ಗರ್ಭಗುಡಿಯ ಎದುರಿಗಿರುವ ಮಂಟಪದಲ್ಲಿ ಇದ್ದರೂ ನಿತ್ಯ ಉರಿಸುವ ಎಣ್ಣೆ ದೀವಿಗೆ, ಕರ್ಪೂರಗಳ ಜಿಡ್ಡುಯುಕ್ತ ಕಾಡಿಗೆ ಚಿತ್ರಗಳಿಗೆ ತಗುಲಿ ಅಲ್ಲಲ್ಲಿ ಚಿತ್ರಗಳು ಕಪ್ಪಾಗಿ ಮಸುಕಾಗಿವೆ. ಅಲ್ಲದೇ ಚಿತ್ರಗಳಿರುವ ಈ ಮಂಟಪದಲ್ಲಿ ಕಂಬಗಳಲ್ಲಿ ದೀಪದ ಹಣತೆಗಳನ್ನು ಉರಿಸಲು ಪ್ರತಿಯೊಂದು ಕಂಬದಲ್ಲಿ ಜಾಗೆಯಿದ್ದು ಕಾರ್ತಿಕ ಮಾಸದಲ್ಲಿ ಇಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಎಣ್ಣೆ ದೀಪಗಳನ್ನು ಉರಿಸಲಾಗುತ್ತದೆ. ವಿರೂಪಾಕ್ಷ ದೇವಾಲಯಲ್ಲಿಯೇ ಗರ್ಭಗುಡಿಯ ಹಿಂದಿರುವ ಮೇಲ್ಛಾವಣಿಯಲ್ಲಿ ವರಟು ನಿರ್ವಹಣೆಯ ಕೆಲವು ಚಿತ್ರಗಳಿದ್ದು ಅಲ್ಲಿ ಚಿತ್ರಗಳ ಕೆಳಭಾಗದಲ್ಲಿಯೇ ಒಂದು ನಾಗದೇವತೆಯ ಪ್ರತಿಮೆ ಇದ್ದು ಅಲ್ಲಿಯೂ ನಿತ್ಯ ಪೂಜೆನಡೆಯುತ್ತದೆ. ಅಲ್ಲಿ ಉರಿಸುವ ದೀಪ, ಕರ್ಪೂರಗಳ ಹೊಗೆ ನೇರವಾಗಿ ಚಿತ್ರಗಳಿಗೇ ತಾಕುತ್ತದೆ. ಇವುಗಳಲ್ಲದೇ ಕನಕಗಿರಿಯ ಕನಕಾಚಲಪತಿ ದೇವಾಲಯ, ಅಮ್ಮಿನಭಾವಿ ಪಂಚಗೃಹ ಹಿರೇಮಠ, ಮಹಾಲಿಂಗಪುರದ ಮಹಾಲಿಂಗೇಶ್ವರ ಮಠ, ಸುರಪುರದ ವಿರಕ್ತಮಠ, ಅಣ್ಣಯ್ಯನಮಠ ಇಲ್ಲೆಲ್ಲಾ ನಿತ್ಯ

---

೯. ಡಾ. ಅ. ಲ. ನರಸಿಂಹನ್ : ಕರ್ನಾಟಕ ಭಿತ್ತಿ ಚಿತ್ರ ಪರಂಪರೆ, ಪುಟ ೧೬೬
೧೦. ಡಾ. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪುಟ ೫೯
೧೧. J. C. Nagpal : Mural Paintings In India, Page 183

ಪೂಜೆ ನಡೆಯುವ ಸ್ಥಳಗಳೇ ಆಗಿವೆ. ಹಾಗೇ ಉತ್ತರ ಕನ್ನಡ ಜಿಲ್ಲೆಯ ಕಾವಿ ಭಿತ್ತಿಚಿತ್ರಗಳು ಹೆಚ್ಚಾಗಿ ದೇವಾಲಯಗಳಲ್ಲೇ ಇರುವುದರಿಂದ ಅಲ್ಲಿ ನಿತ್ಯನಡೆಯುವ ಪೂಜಾದಿಗಳಿಂದ ಮೇಲೆ ಹೇಳಲಾದ ಆಪತ್ತುಗಳು ಸಂಭವಿಸುತ್ತಲಿವೆ. ಹೊನ್ನಾವರದ ಮಾರುತಿ ದೇವಾಲಯ, ಸಿದ್ಧಾಪುರ ತಾಲೂಕಿನ ಬಿಳಗಿಯ ಸೀತಾರಾಮಚಂದ್ರ ದೇವಾಲಯ, ಬಳಲೆಗ್ರಾಮದ ಅಮ್ಮನವರ ದೇವಾಲಯ, ಶಟಗೇರಿಯ ಬಿಳಿಗಿರಿಯಮ್ಮ ದೇವಾಲಯ, ಅಘನಾಶಿನಿಯ ವಿನಾಯಕ ದೇವಾಲಯ ಹೊನ್ನಾವರದ ರಾಮಮಂದಿರ, ಮಾರುತಿ ದೇವಾಲಯ, ವೆಂಕಟರಮಣ ದೇವಾಲಯ, ಗಣಪತಿ ದೇವಾಲಯ, ಶಾರದಾಂಬ ದೇವಾಲಯ, ಸಿರ್ಸಿಯ ಮಾರಿಕಾಂಬ ದೇವಾಲಯ, ಕುಮಟಾದ ಮಹಾಳಸಾ ನಾರಾಯಣಿ ದೇವಾಲಯ, ಅವರ್ಸಾದ ಲಕ್ಷ್ಮೀ ನಾರಾಯಣ ಮಂದಿರ, ಗೋಕರ್ಣದ ಪರ್ತಗಾಳಿ ಮಠ, ಸದಾಶಿವಗಡದ ದುರ್ಗಾ ದೇವಾಲಯ, ಚಿತಾಕುಲದ ದೇವಿಮಂದಿರ, ಇಲ್ಲೆಲ್ಲಾ ಕಾವಿ ಭಿತ್ತಿ ಚಿತ್ರಗಳಿಗೂ ಪೂಜಾ ವಿಧಾನದಿಂದ ಹಾನಿ ಸಂಭವಿಸುತ್ತಲಿದೆ ಎಂಬುದನ್ನು ಕಂಡುಕೊಳ್ಳಬಹುದಾಗಿದೆ. ಪೂಜೆಯಲ್ಲಿ ಉರಿಸುವ ವಸ್ತುಗಳಿಂದ ಜಿಡ್ಡುಯುಕ್ತ ಕಾಡಿಗೆ ಅಂಟುವುದು ಒಂದು ರೀತಿಯಾದರೆ. ನೇರವಾಗಿ ಎಣ್ಣೆ ಅಥವಾ ಎಣ್ಣೆ ಜಿಡ್ಡು ಕೂಡಾ ಭಿತ್ತಿ ಚಿತ್ರಗಳಿಗೆ ತಗುಲಿ ಚಿತ್ರಗಳು ಹಾಳಾಗುತ್ತಲಿವೆ.

ಎಣ್ಣೆ ಜಿಡ್ಡು ಚಿತ್ರಗಳಿಗೆ ತಗುಲಿದಾಗ ಧೂಳು ಜಿಡ್ಡಿನೊಡನೆ ಬೆರೆತು ಇನ್ನೂ ದಪ್ಪನಾದ ಧೂಳಿನ ಪದರ ನಿರ್ಮಾಣವಾಗುವುದು. ದೇವಾಲಯ, ಮಠ ಮಾನ್ಯ ಮುಂತಾದ ಪೂಜೆನಡೆಯುವ ಸ್ಥಳಗಳಲ್ಲಿ ರಚನೆಯಾದ ಭಿತ್ತಿ ಚಿತ್ರಗಳಿಗೆ ಎಣ್ಣೆ ಜಿಡ್ಡು ತಗುಲುವುದು ಹೆಚ್ಚು. ದೇವಾಲಯದಲ್ಲಿನ ಪೂಜಾರಿಗಳು ಪೂಜೆಯ ವೇಳೆ ಎಣ್ಣೆ ಕೈಯನ್ನು ಗೋಡೆಗೆ ಒರೆಸುವುದರಿಂದ ಆಭಾಗದಲ್ಲಿನ ಚಿತ್ರಗಳಿಗೆ ಎಣ್ಣೆ ಜಿಡ್ಡು ತಾಗಲು ಪ್ರಮುಖ ಕಾರಣವಾಗಿದೆ. ಕೇರಳದ ತ್ರಿಪಯಾರ್‌ನಲ್ಲಿರುವ ಶ್ರೀರಾಮ ದೇವಾಲಯದಲ್ಲಿರುವ ಕೆಳಭಾಗದ ಚಿತ್ರಗಳು ಹೀಗೆ ಪೂಜಾರಿಗಳು ಎಣ್ಣೆ ಕೈಯನ್ನು ಗೋಡೆಗೆ ಒರೆಸುವುದರಿಂದ ಹಾನಿಗೊಂಡಿವೆ. ಉತ್ತರ ಕರ್ನಾಟಕದ ಮಹಾಲಿಂಗಪುರದ ಮಹಾಲಿಂಗೇಶ್ವರ ಮಠದಲ್ಲಿ ಚಿತ್ರಗಳಿರುವ ಸ್ಥಳ ಮತ್ತು ಪೂಜೆ ನಡೆಯುವ ಗರ್ಭಗೃಹ ಬೇರೆ ಬೇರೆ ಕಡೆಗಿದ್ದರೂ ಕೈಗೆ ತಾಕುವಷ್ಟು ಕೆಳಭಾಗದಲ್ಲಿ ಚಿತ್ರಗಳು ಇರುವುದರಿಂದ ಪೂಜಾರಿಗಳು ಪೂಜೆಮುಗಿಸಿ ಬರುವಾಗ, ಅಥವಾ ಮಠದ ಎಲ್ಲಾ ಭಾಗದಲ್ಲೂ ಪೂಜಾಕಾರ್ಯ ನೆರವೇರಿಸಲು ಪೂಜಾ ಸಾಮಗ್ರಿಗಳನ್ನು ತೆಗೆದುಕೊಂಡು ಹೋಗುವಾಗ ಆಕಸ್ಮಿಕವಾಗಿ ಅವರ ಕೈ, ಮೈ ತಗುಲಿ ಎಣ್ಣೆ ಜಿಡ್ಡು ಅಂಟುತ್ತಲಿದೆ. ಇಲ್ಲಿರುವ ವೀರಭದ್ರ ಚಿತ್ರವು ಬಾಗಿಲಿಗೆ ಸಮೀಪವಾಗಿದ್ದು ಇದು ಎಣ್ಣೆ ಜಿಡ್ಡಿನಿಂದ ಆವರಿಸಿರುವುದನ್ನು ನೋಡಬಹುದು.

ಉತ್ತರ ಕನ್ನಡ ಜಿಲ್ಲೆಯ ದೇವಾಲಯಗಳಲ್ಲಿನ ಕಾವಿ ಚಿತ್ರಗಳಿಗೂ ಎಣ್ಣೆ ಜಿಡ್ಡಿನ ಈ ತೊಂದರೆ ಹೆಚ್ಚಾಗಿದೆ. ಕಾವಿ ಚಿತ್ರಗಳಿರುವ ದೇವಾಲಯದಲ್ಲಿ ಭಿತ್ತಿ ಚಿತ್ರ ರಚನೆಗೆ ಸಾಮಾನ್ಯವಾಗಿ ಒಂದು ಪದ್ಧತಿಯನ್ನು ಅನುಸರಿಸಿದಂತೆ ಕಂಡುಬರುವುದು. ಅದರಂತೆ ದೇವಾಲಯದ ಹೊರಗೋಡೆ, ಒಳಗೋಡೆ ಹಾಗೂ ಗರ್ಭಗೃಹದ ಬಾಗಿಲಿನ ಎಡಬಲಗಳಲ್ಲಿ ಪ್ರಮುಖವಾಗಿ ಚಿತ್ರರಚನೆ ಮಾಡಿರುವುದು ಕಂಡುಬರುತ್ತದೆ. ಕೆಲವು ದೇವಾಲಯಗಳಲ್ಲಿ ಹೊರಗೋಡೆ, ಹಾಗೂ ಒಳಗೋಡೆಗಳಲ್ಲಿ ಭಿತ್ತಿ ಚಿತ್ರಗಳಿರದಿದ್ದರೂ ಗರ್ಭಗೃಹದ ಬಾಗಿಲಿನ ಎಡಬಲಗಳ ಗೋಡೆಯ ಮೇಲೆ ಮಾತ್ರ ಕಾವಿ ಚಿತ್ರಗಳು ಕಡ್ಡಾಯವಾಗಿ ರಚನೆಯಾಗಿವೆ. ಗರ್ಭಗೃಹದ ಬಾಗಿಲಿನ ಎರಡೂ ಕಡೆಗೆ ರಚನೆಯಾದ ಈ ಕಾವಿಭಿತ್ತಿ ಚಿತ್ರಗಳು ಪೂಜಾರಿಯ ಕೈಗೆ ತಾಕುವಷ್ಟು ಸಮೀಪವಿರುತ್ತವೆ. ಪೂಜಾರಿಗಳು ಭಕ್ತರಿಗೆ ಪ್ರಸಾದ ವಿತರಿಸಲು ನಿಂತಾಗ ಸಹಿತ ಚಿತ್ರಗಳನ್ನು ಅನುದ್ದೇಶವಾಗಿ ಸ್ಪರ್ಶಿಸುತ್ತಲೇ ಇರುತ್ತಾರೆ. ಹಾಗೇ ಗರ್ಭಗೃಹದ ಒಳಗೆ ಪ್ರವೇಶಿಸುವಾಗ ಹಾಗೂ ಹೊರಬರುವಾಗ ಕೈಗಳನ್ನು ಚಿತ್ರಗಳಿರುವ ಈ ಸ್ಥಳಗಳಿಗೆ ಸ್ಪರ್ಶಿಸುತ್ತಲೇ ಇರುತ್ತಾರೆ. ಹಾಗಾಗಿ ಈ ಭಿತ್ತಿ ಚಿತ್ರಗಳು

ಅತ್ಯಂತ ಹೆಚ್ಚಿನ ಪ್ರಮಾಣದ ಎಣ್ಣೆ ಜಿಡ್ಡಿನಿಂದ ಆವರಿಸುತ್ತಲಿವೆ. ಸತತವಾಗಿ ಹೀಗೆ ಎಣ್ಣೆ ಜಿಡ್ಡು ತಗುಲುವುದರಿಂದ ತೀರಾ ಬೇಗನೇ ಚಿತ್ರಗಳು ಕಪ್ಪಾಗಿ ಹೋಗುತ್ತವೆ. ಈ ಒಂದು ಪ್ರಮುಖ ಕಾರಣಕ್ಕಾಗಿಯೇ ಈಗ ಕಾವಿ ಚಿತ್ರಗಳಿರುವ ಈ ಭಾಗಕ್ಕೆ ಆಧುನಿಕವಾರ್ನಿಸ್ ಬಣ್ಣವನ್ನು ಬಳಿಯುತ್ತಿದ್ದಾರೆ. ಕೆಲವು ದೇವಾಲಯಗಳಲ್ಲಿ ಉಳಿದ ಭಾಗದಲ್ಲಿನ ಚಿತ್ರಗಳನ್ನು ಕಾವಿ ಬಣ್ಣದ ಚಿತ್ರಗಳಾಗಿಯೇ ಉಳಿಸಿದ್ದರೂ ಗರ್ಭಗುಡಿಯ ಬಾಗಿಲಿನ ಈ ಚಿತ್ರಗಳಿಗೆ ಮಾತ್ರ ವಾರ್ನಿಸ್ ಬಣ್ಣವನ್ನು ಬಳಿದಿದ್ದಾರೆ.[೧೨] ಈ ಕಾರಣದಿಂದಾಗಿ ಗರ್ಭಗುಡಿಯ ಬಾಗಿಲಿನ ಪಕ್ಕದ ಚಿತ್ರಗಳಿಗೆ ವಾರ್ನಿಸ್ ಬಣ್ಣ ಲೇಪಿಸಿದ ದೇವಾಲಯಗಳೆಂದರೆ. ಸಿರ್ಸಿಯ ಗೋಪಾಲಕೃಷ್ಣ. ಹೊನ್ನಾವರದ ವೆಂಕಟರಮಣ, ಶಾರದಾಂಬ, ಗಣಪತಿ. ಹಳದಿಪುರದ ಗೋಪಿನಾಥ ವೆಂಕಟರಮಣ. ಅಘನಾಶಿನಿಯ ವಿನಾಯಕ ದೇವಾಲಯಗಳಾಗಿವೆ. ಹೆಚ್ಚಿನ ಭಿತ್ತಿ ಚಿತ್ರಗಳು ನಿತ್ಯ ಪೂಜೆನಡೆಯುವ ಸ್ಥಳದಲ್ಲೇ ರಚನೆಯಾಗಿರುವುದರಿಂದ. ದೀಪದ ಕಾಡಿಗೆ ವ್ಯಾಪಿಸುವುದು. ಎಣ್ಣೆ ಜಿಡ್ಡು ಹತ್ತುವುದು ಒಂದು ಪ್ರಮುಖ ಸಮಸ್ಯೆಯಾಗಿದ್ದು ಭಿತ್ತಿ ಚಿತ್ರಗಳ ರಕ್ಷಣೆಯಲ್ಲಿ ಜಟಿಲತೆಯನ್ನೇ ತಂದಿದೆ ಎನ್ನಬಹುದು.

III. ಅಡಿಗೆ ಮಾಡುವುದರಿಂದಾಗುವ ಆಪತ್ತು : ಭಿತ್ತಿ ಚಿತ್ರಗಳಿರುವ ಸ್ಥಳದಲ್ಲೇ ಆಗಲಿ ಅಥವಾ ಅದಕ್ಕೆ ಸಮೀಪವೇ ಆಗಲಿ ಅಡಿಗೆ ಮಾಡಿದಾಗ ಅದರಿಂದುಂಟಾಗುವ ಶಾಖ. ಹೊಗೆಯಿಂದ ಚಿತ್ರಗಳಿಗೆ ಹಾನಿಸಂಭವಿಸುತ್ತದೆ. ಪ್ರಾಗೈತಿಹಾಸ ಕಾಲದ ಶಿಲಾಗುಹೆ. ಮತ್ತು ಶಿಲಾಶ್ರಯ ಚಿತ್ರಗಳಿಗೆ ಸಹಿತ ಈ ರೀತಿಯ ತೊಂದರೆ ಇದೆ ಎಂದು ತಿಳಿದುಬರುವುದು. ಕೆಲವು ಅಲೆಮಾರಿಜನಾಂಗದವರು ಶಿಲಾಶ್ರಯ ತಾಣಗಳಲ್ಲಿ ತಂಗಿ ಬೆಂಕಿಹೊತ್ತಿಸಿ ಅಡಿಗೆ ಮಾಡಿಕೊಂಡಿದ್ದರಿಂದ ಆ ಹೊಗೆಯ ಕಪ್ಪು ಮಸಿಯಿಂದ ಚಿತ್ರಗಳಿಗೆ ಹಾನಿಸಂಭವಿಸಿದೆ. ಈ ತೊಂದರೆ ಮಧ್ಯಭಾರತದ ಶಿಲಾಶ್ರಯ ಚಿತ್ರಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ.[೧೩] ಅಲ್ಲದೇ ಕೆಲವು ಶಿಲಾಶ್ರಯ ತಾಣಗಳಲ್ಲಿ ಪ್ರಾಚೀನ ಮಾನವರು ತಾವು ಬೇಟೆಯಾಡಿದ ಪ್ರಾಣಿಗಳ ಮಾಂಸವನ್ನು ಬೇಯಿಸಲು ಬೆಂಕಿ ಹೊತ್ತಿಸುತ್ತಿದ್ದರು. ಈ ಬೆಂಕಿಯ ಶಾಖ. ಹೊಗೆಯಲ್ಲದೇ. ಉರಿಯಲ್ಲಿ ಬೇಯುತ್ತಿದ್ದ ಪ್ರಾಣಿಗಳ ಮಾಂಸದ ಕೊಬ್ಬು ಹೊಗೆಯ ಮೂಲಕ ಬಿಡುಗಡೆ ಹೊಂದಿ ಜಿಡ್ಡುಯುಕ್ತ ಕಪ್ಪು ಕಾಡಿಗೆಯಾಗಿ ಪರಿವರ್ತನೆಹೊಂದಿ ಅಲ್ಲಿರುವ ಚಿತ್ರಗಳಿಗೆ ಅಂಟಿಕೊಂಡಿದೆ. ಈ ರೀತಿಯ ಹಾನಿಯು ದಟ್ಟ ಅರಣ್ಯ ಪ್ರದೇಶವಿರುವ ಬಿಂಭೇಟ್ಕಾ[೧೪] ಸುತ್ತಮುತ್ತಲಿನ ಶಿಲಾಶ್ರಯ ತಾಣಗಳಲ್ಲಿ ಹೆಚ್ಚಾಗಿ ಕಂಡುಬರುವದನ್ನು ವಿದ್ವಾಂಸರು ಗುರುತಿಸಿದ್ದಾರೆ.

ಕೆಲವುಸಲ ಪ್ರಾಚೀನ ಮಾನವರು ಗುಹೆಗಳಲ್ಲಿ, ಶಿಲಾಶ್ರಯ ತಾಣಗಳಲ್ಲಿ ಅಡಗಿಕುಳಿತ ಕಾಡುಪ್ರಾಣಿಗಳನ್ನು ಬೇಟೆಯಾಡಲು. ಅವುಗಳನ್ನು ಹೊರಹಾಕುವ ಸಲುವಾಗಿ ಇಲ್ಲವೇ ಆ ಸ್ಥಳವನ್ನು ತಮ್ಮ ವಾಸಸ್ಥಳವನ್ನಾಗಿ ಮಾಡಿಕೊಳ್ಳಲು ಒಳಗಿರುವ ಪ್ರಾಣಿಗಳನ್ನು ಹೊರದಬ್ಬುವ ಸಲುವಾಗಿ ಗುಹೆಯ ಬಾಗಿಲಿಗೆ ದೊಡ್ಡ ಪ್ರಮಾಣದಲ್ಲಿ ಉರಿಯನ್ನು ಎಬ್ಬಿಸುತ್ತಿದ್ದರು. ಇದರಿಂದಾಗಿ ಅಸಾಧ್ಯ ಪ್ರಮಾಣದ ಹೊಗೆಯು ಗುಹೆಯ ಒಳಗೆ ಹೊಕ್ಕು ಅಲ್ಲಿರುವ ಪ್ರಾಣಿಗಳ ಉಸಿರು ಕಟ್ಟಿದಂತಾಗಿ ಅವು ತಮ್ಮ ಜೀವದಾಸೆಗಾಗಿ ಹೊರಗೋಡಿಬರುತ್ತಿದ್ದವು. ಕೆಲವು ಬಲಿಷ್ಠ ಪ್ರಾಣಿಗಳು

---

೧೨. ಗರ್ಭಗುಡಿಯ ಬಾಗಿಲಿನ ಪಕ್ಕದ ಚಿತ್ರಗಳಿಗೆ ವಾರ್ನಿಸ್ ಬಣ್ಣವನ್ನು ಲೇಪಿಸಿದ ಕಾರಣವನ್ನು ಕೇಳಿದಾಗ ಬಹುತೇಕ ಪೂಜಾರಿಗಳು. ದೇವಾಲಯದ ಆಡಳಿತ ಮಂಡಳಿಯವರು ಇದೇ ಕಾರಣವನ್ನೇ ನೀಡಿ ಜಿಡ್ಡಿನಿಂದ ಈ ಭಾಗ ಬೇಗ ಕಪ್ಪಾಗುವುದರಿಂದ ಆಗಾಗ ಇದರ ಮೇಲೆ ಆಧುನಿಕ ವಾರ್ನಿಸ್ ಬಣ್ಣವನ್ನು ಬಳಿಯುತ್ತೇವೆ ಎಂದು ಹೇಳುತ್ತಾರೆ. ಹೊನ್ನಾವರದ ವೆಂಕಟರಮಣ, ಶಾರದಾಂಬ. ಗಣಪತಿ. ಸಿರ್ಸಿಯ ಗೋಪಾಲಕೃಷ್ಣ, ಹಳದಿಪುರದ ಗೋಪಿನಾಥ ವೆಂಕಟರಮಣ ದೇವಾಲಯಗಳಲ್ಲಿ ಈ ಬಗ್ಗೆ ವಿಚಾರಿಸಲಾಯಿತು. ದಿನಾಂಕ ೨

೧೩. ಗಜೇಂದ್ರ ಎಸ್. ತ್ಯಾಗಿ : ಪ್ರಿಹಿಸ್ಟಾರಿಕ್ ಆರ್ಟ್ಸ್ ಇನ್ ಇಂಡಿಯಾ, ಪುಟ ೧೧೬

೧೪. ಗಜೇಂದ್ರ ಎಸ್. ತ್ಯಾಗಿ : ಪ್ರಿಹಿಸ್ಟಾರಿಕ್ ಆರ್ಟ್ಸ್ ಇನ್ ಇಂಡಿಯಾ, ಪುಟ ೧೧೬

ಉರಿಯನ್ನು ದಾಟಿ ಜಿಗಿದು ಓಡಿದರೆ, ಇನ್ನೂ ಕೆಲವು ಪ್ರಾಣಿಗಳು ಆ ಪ್ರಯತ್ನದಲ್ಲಿ ಉರಿಯಲ್ಲಿಬಿದ್ದು ಆ ಮಾನವರ ಆಹಾರವಾಗುತ್ತಿದ್ದವು. ಹೊರಗೋಡಿದ ಪ್ರಾಣಿಯನ್ನೂ ಬಿಡದೇ ಬೆನ್ನಟ್ಟಿ ಬೇಟೆಯಾಡುತ್ತಿದ್ದರು. ಹೀಗೆ ತೆರವಾದ ಗುಹೆ, ಶಿಲಾಶ್ರಯ ತಾಣಗಳನ್ನು ಕೆಲವು ಸಲ ತಮ್ಮ ಅವಶ್ಯಕತೆಗೆ ಅನುಗುಣವಾಗಿ ವಾಸಸ್ಥಳಗಳನ್ನಾಗಿ ಮಾಡಿಕೊಳ್ಳುತ್ತಿದ್ದರು. ಈ ಕ್ರಿಯೆಯಲ್ಲಿ ಉಂಟಾದ ಆಗಾಧ ಬೆಂಕಿ ಹಾಗೂ ಹೊಗೆಯಿಂದ ಚಿತ್ರಗಳಿಗೆ ದೊಡ್ಡ ಪ್ರಮಾಣದಲ್ಲಿ ಹಾನಿಸಂಭವಿಸುತ್ತಿತ್ತೆಂದು ಇಂತಹ ತೊಂದರೆಗೆ ಸಿಲುಕಿದ ಪ್ರಾಗಿತಿಹಾಸ ಶಿಲಾಶ್ರಯ ಚಿತ್ರಗಳು ಮಧ್ಯಭಾರತದ ಅಡವಿಯಲ್ಲಿ[೧೫] ಕಂಡುಬರುತ್ತವೆ ಎಂದೂ ಹೇಳಲಾಗುತ್ತದೆ. ಗುಡ್ಡ ಬೆಟ್ಟಗಳಲ್ಲಿರುವ ಪ್ರಾಗಿತಿಹಾಸ ಕಾಲದ ಶಿಲಾಶ್ರಯ ಭಿತ್ತಿಗಳಷ್ಟೇ ಅಲ್ಲದೇ ನಗರ ಪ್ರದೇಶದಲ್ಲಿನ ದೇವಾಲಯ, ಮಠಮಾನ್ಯ, ಅರಮನೆ, ಚರ್ಚು, ಮಸೀದೆ, ಮನೆ ಮುಂತಾದ ಸ್ಥಳಗಳಲ್ಲಿ ರಚನೆಯಾದ ಭಿತ್ತಿಚಿತ್ರಗಳಿಗೂ ಈ ರೀತಿಯ ತೊಂದರೆ ಇದೆ. ಮಹಾರಾಷ್ಟ್ರದ ಪುನಾ ಜಿಲ್ಲೆಯಲ್ಲಿರುವ ಕಾರ್ಲೆಗುಹಾಲಯಗಳಲ್ಲಿ ಕ್ರಿ. ಪೂ. ೧೫೧೦ ರಿಂದ ಕ್ರಿ. ಶ. ೧೦೦೦ ಅವಧಿಯಲ್ಲಿ ವರ್ಣ ಚಿತ್ರಗಳು ರಚನೆಯಾಗಿದ್ದು ನಂತರ ಅಲ್ಲಿ ತಂಗಿದವರು ಅಡಿಗೆ ಮಾಡಿಕೊಂಡಿದ್ದರಿಂದ ಗುಹೆಗಳ ಒಳಭಾಗವೆಲ್ಲ ಕಪ್ಪಾಗಿ ಚಿತ್ರಗಳು ಮಸಿ, ಜಿಡ್ಡು, ಇಲ್ಲಣದಿಂದ ಆವರಿಸಿವೆ. ಪಂಜಾಬದ ಅಮೃತಸರದಲ್ಲಿನ ಸರೋವರದ ಪೂರ್ವಭಾಗದಲ್ಲಿರುವ ಬಾಗಿಲಿನ ಹತ್ತಿರದ ಮುಖಮಂಟಪದಲ್ಲಿನ ಚಿತ್ರಗಳು ಸಮೀಪದ ಹೋಟೆಲುಗಳ ಬಿಸಿಹವೆ ಮತ್ತು ಹೊಗೆಯು ನಿರಂತರ ತಗುಲುವುದರಿಂದ ನಾಶವಾಗುತ್ತಲಿವೆ. ದಪ್ಪನಾದ ಜಿಡ್ಡುಯುಕ್ತ ಕಪ್ಪು ಪದರ ಚಿತ್ರದ ಮೇಲೆ ವ್ಯಾಪಿಸಿದೆಯಲ್ಲದೇ ಕೆಲವು ಕಡೆಗೆ ಬಿಸಿ ಹವೆಗೆ ವರ್ಣ ಮತ್ತು ತೆಳುವಾದ ಭಿತ್ತಿ ಕೆಳಗುಮರಿ ಬಿದ್ದರುವುದು[೧೬] ಕಂಡುಬರುತ್ತದೆ.

ಉತ್ತರ ಕರ್ನಾಟಕದ ಕೆಲವು ಭಿತ್ತಿ ಚಿತ್ರಗಳಿಗೂ ಈ ತೊಂದರೆ ಇದೆ. ಗುಳೇದಗುಡ್ಡದ ಹೊಸಮನಿಗೌಡರ ಮನೆಯಲ್ಲಿರುವ ಭಿತ್ತಿ ಚಿತ್ರಗಳು ಮನೆಯ ವಾರಸುದಾರರು ವಾಸಿಸುವ ನಿವಾಸದ ಮೇಲಿನ ಮಹಡಿಯಲ್ಲೇ ಇರುವುದರಿಂದ ಅದರ ಕೆಳಗೇ ಇರುವ ಅಡಿಗೆ ಕೋಣೆಯ ಹೊಗೆಯು ಚಿತ್ರಗಳಿಗೆ ತಗುಲುತ್ತದೆ. ಗುಲಬುರ್ಗಾ ಜಿಲ್ಲೆಯ ಸುರಪುರದಲ್ಲಿರುವ ಅಣ್ಣಯ್ಯನ ಮಠದ ಚಿತ್ರಗಳಿಗೂ ಅಡಿಗೆ ಮಾಡುವುದರಿಂದುಂಟಾಗುವ ಹೊಗೆಯ ತೊಂದರೆ ಇದೆ. ಇಲ್ಲಿನ ಚಿತ್ರಗಳು ಮಠದ ತೆರೆದ ಪಡಸಾಲೆಯಲ್ಲಿದ್ದು ಈ ಪಡಸಾಲೆಗೆ ಹೊಂದಿಗೊಂಡೇ ಅಡಿಗೆ ಮನೆ ಇದೆ. ಅಡಿಗೆ ಮಾಡುವಾಗ ಉಂಟಾಗುವ ಹೊಗೆಯು ನೇರವಾಗಿ ಚಿತ್ರಗಳಿಗೆ ತಗುಲುತ್ತಲಿದೆ. ಇದರಿಂದಾಗಿ ಚಿತ್ರಗಳು ಸಾಕಷ್ಟು ಕಪ್ಪಾಗಿವೆ. ಕ್ಷೇತ್ರಕಾರ್ಯಕ್ಕಾಗಿ ಇಲ್ಲಿಗೆ ಹೋದಾಗ ಕೂಡಾ ಚಿತ್ರಗಳನ್ನು ವೀಕ್ಷಿಸಲೂ ಆಗದಷ್ಟು ಹೊಗೆಯು ತುಂಬಿಕೊಂಡಿತ್ತು. ಸಮೀಪದ ವಿರಕ್ತಮಠದ ಚಿತ್ರಗಳೂ ಇಂತಹ ತೊಂದರೆ ಇದೆ. ಉತ್ತರ ಕನ್ನಡ ಜಿಲ್ಲೆಯ ಕಾವಿ ಭಿತ್ತಿ ಚಿತ್ರಗಳೂ ಇದರಿಂದ ಹೊರತಾಗಿಲ್ಲ. ಸಿದ್ದಾಪುರ ತಾಲೂಕಿನ ಬಿಳಗಿಯಲ್ಲಿರುವ ಬಾಳಗೊಡ ಸೀತಾರಾಮಚಂದ್ರ, ಬೇಡ್ಕಣಿ ಸೀತಾರಾಮಚಂದ್ರ ದೇವಾಲಯಗಳಲ್ಲಿ ಪೂಜಾರಿಗಳ ಮನೆಯು ದೇವಾಲಯದ ಆವರಣದಲ್ಲೇ ದೇವಾಲಯಕ್ಕೆ ಹೊಂದಿಕೊಂಡೇ ಇರುವುದರಿಂದ ಅವರು ಅಡಿಗೆಮಾಡುವಾಗ ಹೊಗೆಯು ನೇರವಾಗಿ ಚಿತ್ರಗಳಿಗೆ ತಾಕುವುದು. ಬಾಳಗೊಡ ಸೀತಾರಾಮಚಂದ್ರ ದೇವಾಲಯದ ಪೂಜಾರಿಗಳ ಮನೆಯ ಹೊಗೆ ಕಿಂಡಿಗಳು ದೇವಾಲಯದ ಮೇಲಿನ ಭಾಗದ ಚಿತ್ರಗಳ ಸಮೀಪವೇ ಇರುವುದರಿಂದ ಹೊಗೆಯು ಹೆಚ್ಚಿನ ಪ್ರಮಾಣದಲ್ಲಿ ಈ ಚಿತ್ರಗಳಿಗೆ ತಗುಲುತ್ತದೆ. ಹೊನ್ನಾವರದ ಶ್ರೀರಾಮಚಂದ್ರ ದೇವಾಲಯದಲ್ಲಿ ಮದುವೆ ಛತ್ರವಿದ್ದು, ಮದುವೆ ಸಂದರ್ಭದಲ್ಲಿ ಅಲ್ಲಿ ಅಡಿಗೆ

೧೫. ಗಜೇಂದ್ರ ಎಸ್. ತ್ಯಾಗಿ : ಪ್ರಿಹಿಸ್ಟಾರಿಕ್ ಆರ್ಟ್ಸ್ ಇನ್ ಇಂಡಿಯಾ, ಪುಟ ೧೧೬

೧೬. J. C. Nagpal : Mural Paintings In India, Page 180

ಮಾಡುವುದರಿಂದ ಛತ್ರದ ಮೇಲ್ಭಾಗದಲ್ಲಿ ಇರುವ ಕಾವಿ ಭಿತ್ತಿ ಚಿತ್ರಗಳಿಗೆ ನೇರವಾಗಿ ಹೊಗೆಯ ಸಂಪರ್ಕ ಉಂಟಾಗುತ್ತಲಿದೆ. ಹಾಗೇ ಹೊನ್ನಾವರದಲ್ಲಿಯೇ ಇರುವ ಮಾರುತಿ ದೇವಾಲಯ, ವೆಂಕಟರಮಣ ದೇವಾಲಯ, ಶಾರದಾಂಬಾ ದೇವಾಲಯ, ಹಳದಿಪುರದ ಗೋಪಿನಾಥ ವೆಂಕಟರಮಣ ದೇವಾಲಯಗಳಲ್ಲಿ ಪೂಜಾರಿಗಳು ಅಡಿಗೆ ಮಾಡುವ ಹೊಗೆಯು ಕಾವಿ ಭಿತ್ತಿ ಚಿತ್ರಗಳಿಗೆ ತಗುಲುತ್ತದೆ.

*IV. ಕಾರ್ಖಾನೆಗಳಿಂದುಂಟಾಗುವ ಆಪತ್ತು :* ಬೆಳೆಯುತ್ತಿರುವ ದೊಡ್ಡ ದೊಡ್ಡ ಕಾರ್ಖಾನೆಗಳು, ಕೈಗಾರಿಕೆಗಳಿಂದುಂಟಾಗುವ ಮಾಲಿನ್ಯದಿಂದ ಭಿತ್ತಿ ಚಿತ್ರಗಳಿಗೆ ಹಾನಿಸಂಭವಿಸುತ್ತಲಿದೆ. ಈ ಕಾರ್ಖಾನೆಗಳ ಹೊಗೆಯು ವಾತಾವರಣದಲ್ಲಿ ಒಂದು ರೀತಿಯ ರಾಸಾಯನಿಕ ಧೂಳಾಗಿ ಪರಿವರ್ತನೆಗೊಂಡು ಚಿತ್ರಗಳಿಗೆ ಅಂಟುತ್ತದೆ. ಅಲ್ಲದೇ ಈ ಧೂಳು ಮಳೆಯ ನೀರಿನಲ್ಲಿ ಆಮ್ಲದ ಪ್ರಮಾಣ ಹೆಚ್ಚಿಸುವುದು. ಅಂತಹ ಆಮ್ಲಯುಕ್ತ ಮಳೆಯ ನೀರು ಭಿತ್ತಿ ಚಿತ್ರಗಳ ಮೇಲೆ ಸೋರಿದಾಗ ಅವುಗಳಿಗೆ ಹಾನಿಯಾಗುವುದನ್ನು[೧೭] ವಿದ್ವಾಂಸರು ಗುರುತಿಸಿದ್ದಾರೆ. ಕಾರ್ಖಾನೆಗಳು ಹೆಚ್ಚಿರುವ ಪ್ರದೇಶಗಳಲ್ಲಿ ಈ ತೊಂದರೆ ಹೆಚ್ಚಾಗಿರುವುದು ಎಂದು ಬೇರೆ ಹೇಳಬೇಕಾಗಿಲ್ಲ. ಕರ್ನಾಟಕದ ಹೊಸಪೇಟೆ ಸುತ್ತ ಮುತ್ತ ಹೆಚ್ಚಿನ ಕಾರ್ಖಾನೆಗಳು ತಲೆ ಎತ್ತುತ್ತಿರುವುದರಿಂದ ಇಲ್ಲಿನ ಹಂಪಿಯ ವಿರೂಪಾಕ್ಷ ದೇವಾಲಯದ ಭಿತ್ತಿ ಚಿತ್ರಗಳು, ಮತ್ತು ಹಂಪಿಯ ಗುಡ್ಡಗಳಲ್ಲಿನ ಪ್ರಾಗೈತಿಹಾಸ ಶಿಲಾಶ್ರಯ ಭಿತ್ತಿಚಿತ್ರಗಳು ಇಂತಹ ತೊಂದರೆಗೆ ಸೂಕ್ಷ್ಮವಾಗಿ ಸಿಲುಕುತ್ತಿರಬಹುದಾಗಿದೆ.

*V. ವಿದ್ಯುತ್‌ದೀಪದಿಂದ ಉಂಟಾಗುವ ಆಪತ್ತು :* ಪ್ರಕಾಶಮಾನವಾದ ದೀಪಗಳಿಂದ ಕೂಡಾ ಭಿತ್ತಿ ಚಿತ್ರಗಳಿಗೆ ಹಾನಿಸಂಭವಿಸುತ್ತದೆ. ಪ್ರಮುಖವಾಗಿ ಭಿತ್ತಿ ಚಿತ್ರಗಳ ವರ್ಣ ಹೊಳಪು ಕುಂದುತ್ತದೆ. ವಿದ್ಯುತ್ ದೀಪವಾಗಬಹುದು, ಅಥವಾ ಕ್ಯಾಮರಾಕ್ಕೆ ಅಳವಡಿಸಿದ ಫ್ಲ್ಯಾಷ್‌ಲೈಟ್ ಆಗಿರಬಹುದು. ಯಾವುದೇ ಪ್ರಕಾಶಮಾನವಾದ ದೀಪದಿಂದಲೂ ಚಿತ್ರಗಳಿಗೆ ಹಾನಿಉಂಟಾಗುವುದೆಂದು[೧೮] ಅಭಿಪ್ರಾಯ ಪಡಲಾಗಿದೆ. ಅದರಿಂದಾಗಿಯೇ ಈಗ ಅಜಂತಾದಲ್ಲಿನ ಭಿತ್ತಿ ಚಿತ್ರಗಳ ವೀಕ್ಷಣೆಗೆ ಮಂದವಾದ ಹಳದಿ ಬೆಳಕನ್ನು ವ್ಯವಸ್ಥೆ ಮಾಡಿದ್ದಾರಲ್ಲದೇ ಫ್ಲ್ಯಾಷ್‌ಹಾಕಿ ಫೋಟೋ ತೆಗೆಯುವುದನ್ನು ನಿರ್ಬಂಧಿಸಿದ್ದಾರೆ.

*VI. ಕಟ್ಟಡಗಳನ್ನು ನವೀಕರಿಸುವುದರಿಂದಾಗುವ ಆಪತ್ತು :* ಭಿತ್ತಿಚಿತ್ರಗಳಿರುವ ಕಟ್ಟಡಗಳನ್ನು ಜೀರ್ಣೋದ್ಧಾರಗೊಳಿಸುವುದು. ನವೀಕರಿಸುವಂತಹ ಕ್ರಮಗಳಿಂದ ಅಲ್ಲಿರುವ ಭಿತ್ತಿ ಚಿತ್ರಗಳಿಗೆ ಹಾನಿಯಾಗುತ್ತಿರುವುದನ್ನು ನೋಡಬಹುದಾಗಿದೆ. ಹಳೆಯ ಕಟ್ಟಡಗಳನ್ನು ಸಂಪೂರ್ಣ ಕೆಡವಿ ಹೊಸದಾಗಿ ಕಟ್ಟಿಸುವುದು, ಇಲ್ಲವೇ ಜೀರ್ಣವಾದ ಭಾಗವನ್ನು ಮಾತ್ರ ನವೀಕರಿಸುವುದು. ಅಥವಾ ಆಧುನಿಕ ಮನೋಭಾವದಿಂದ ಹಳೆಯ ಕಟ್ಟಡಗಳನ್ನು ಹೊಸರೂಪಾಂತರಗೊಳಿಸುವುದು ಪ್ರಮುಖವಾಗಿವೆ. ಹಾಗೇ ಕಟ್ಟಡಗಳಿಗೆ ಸಿಮೆಂಟ್ ಮಾಡಿಸುವುದು. ಅಲಂಕಾರಿಕ ಶಿಲೆಗಳನ್ನು ಜೋಡಿಸುವುದು. ಸುಣ್ಣ ಬಣ್ಣ ಸಾರಿಸಿ ನವೀಕರಿಸುವುದು. ಈ ಸಂದರ್ಭದಲ್ಲಿ ಹಳೆಯ ಭಿತ್ತಿ ಚಿತ್ರಗಳಿಗೂ ಆಧುನಿಕ ತೈಲಬಣ್ಣ ಲೇಪಿಸುವುದು. ವಿದ್ಯುತ್ ಸಂಪರ್ಕಕ್ಕಾಗಿ ಇಲ್ಲವೇ ಇನ್ನಿತರ ಉಪಯೋಗಕ್ಕಾಗಿ ಕಟ್ಟಡಗಳಲ್ಲಿ ಮೊಳೆ ಹೊಡೆಯುವುದು. ಪಟ್ಟಿಗಳನ್ನು ಅಳವಡಿಸುವುದು. ಇಂತಹ ಕ್ರಮಗಳಿಂದ ಆ ಸ್ಥಳಗಳಲ್ಲಿರುವಂತಹ ಭಿತ್ತಿ ಚಿತ್ರಗಳು ನಾಶವಾಗುತ್ತವೆ.

---

೧೭. ಗಜೇಂದ್ರ ಎಸ್. ತ್ಯಾಗಿ : ಪ್ರಿಹಿಸ್ಟಾರಿಕ್ ಆರ್ಟ್ಸ್ ಇನ್ ಇಂಡಿಯಾ. ಪುಟ ೧೧೭

೧೮. J. C. Nagpal : Mural Paintings In India, Page 189

ಭಿತ್ತಿಚಿತ್ರಗಳಿರುವ ಹಳೆಯ ಕಟ್ಟಡಗಳನ್ನು ಸಂಪೂರ್ಣಕೆಡವಿ ಹೊಸದಾಗಿ ಕಟ್ಟಿಸುವುದು ಅದರಲ್ಲಿನ ಭಿತ್ತಿ ಚಿತ್ರಗಳು ಸಂಪೂರ್ಣ ನಾಶವಾಗಿರುವ ಸಂಗತಿಗಳು ತಿಳಿದು ಬರುವುದು. ಬೆಳಗಾಂವ ಜಿಲ್ಲೆ ಅಥಣಿಯಲ್ಲಿನ ಹಳೆಯ ವಾಡೆಯಂತಹ ಕಟ್ಟಡ ಒಂದರಲ್ಲಿ ಮತ್ತು ಅದೇ ಊರಿನ ಗಚ್ಚಿನ ಮಠದಲ್ಲಿ ಭಿತ್ತಿ ಚಿತ್ರಗಳಿವೆ ಎಂದು ಡಾ. ಶಿವರಾಮ ಕಾರಂತ ಅವರು[೧೯] ಅಲ್ಲಿಗೆ ಸಂದರ್ಶಿಸಿ ಅವುಗಳ ಬಗ್ಗೆ ೧೯೭೧ ರಲ್ಲಿ ಬರೆದಿದ್ದಾರೆ. ಆದರೆ ಇಂದು ಈ ಎರಡೂ ಸ್ಥಳಗಳಲ್ಲಿ ಭಿತ್ತಿ ಚಿತ್ರಗಳಿದ್ದ ಕಟ್ಟಡಗಳನ್ನು ಸಂಪೂರ್ಣವಾಗಿ ಕೆಡವಿ ಹೊಸ ಕಟ್ಟಡಗಳನ್ನು ನಿರ್ಮಿಸಿದ್ದಾರೆ. ಅದೇ ರೀತಿ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದಲ್ಲಿನ ಗೋಪಾಲಕೃಷ್ಣ ದೇವಾಲಯದಲ್ಲಿ ಕಾವಿ ಭಿತ್ತಿ ಚಿತ್ರಗಳಿದ್ದು ಅದನ್ನು ಇದೀಗ ತಾನೇ ಸಂಪೂರ್ಣವಾಗಿ ಕೆಡವಿ ಹೊಸದಾಗಿ ಕಟ್ಟಿಸುತ್ತಲಿದ್ದಾರೆ. ಇದೇ ಜಿಲ್ಲೆಯ ಕಾರವಾರ ಸಮೀಪದ ಸದಾಶಿವ ಘಡದ ದುರ್ಗಾದೇವಾಲಯ ಮತ್ತು ಅಮದಳ್ಳಿಯ ಹನುಮಾನ್ ದೇವಾಲಯ ಅಂಕೋಲಾ ತಾಲೂಕಿನ ಬರ್ಗಿ ಗ್ರಾಮದ ಘಟಬೀರ ದೇವಾಲಯಗಳಲ್ಲಿ ಕಾವಿ ಚಿತ್ರಗಳಿದ್ದು ಈ ದೇವಾಲಯಗಳನ್ನು ಸಂಪೂರ್ಣ ಕೆಡವಿ ಹೊಸದಾಗಿ ನಿರ್ಮಿಸಲಾಗುತ್ತಿದೆ. ಹಾಗೇ ಬೆಳಗಾವಿಯ ಸೇಂಟ್ ಕ್ಸೇವಿಯರ್ ಚರ್ಚ್‌ದಲ್ಲಿ ಗಾಜಿನ ಮೇಲೆ ಭಿತ್ತಿ ಚಿತ್ರಗಳಿದ್ದವು[೨೦] ಎಂದು ಹೇಳಲಾಗಿದ್ದು ಈಗ ಹಳೆಯದಾದ ಆ ಇಡೀ ಚರ್ಚನ್ನೇ ನಾಶಪಡಿಸಿ ಪಕ್ಕದಲ್ಲಿ ಹೊಸದಾಗಿ ನಿರ್ಮಿಸಿದ್ದಾರೆ. ಇಂತಹ ಇನ್ನೂ ಹಲವು ಕ್ರಮಗಳಿಂದ ಭಿತ್ತಿ ಚಿತ್ರಗಳು ಆಪತ್ತಿಗೊಳಗಾಗಿದ್ದನ್ನು ನೋಡಬಹುದಾಗಿದೆ.

ಅಮ್ಮಿನಭಾವಿಯ ಪಂಚಗೃಹ ಹಿರೇಮಠದಲ್ಲಿ ಮೇಲ್ಛಾವಣಿಯ ಮರದ ಫಲಕದ ಮೇಲೆ, ಮಹಡಿಯ ಛಾವಣಿಯಲ್ಲಿನ ಕಬ್ಬಿಣದ ಫಲಕದ ಮೇಲೆ ಮತ್ತು ಮಠದ ಒಳಭಾಗದ ಗೋಡೆಯಲ್ಲಿ ಭಿತ್ತಿ ಚಿತ್ರಗಳು ತೀರ ಇತ್ತೀಚಿನವರೆಗೂ ಅಂದರೆ ಸುಮಾರು ಐದಾರು ವರ್ಷಗಳ ಹಿಂದಿನವರೆಗೂ ಇದ್ದವು. ಆದರೆ ಈಗ ಗೋಡೆಯಲ್ಲಿನ ಭಿತ್ತಿ ಚಿತ್ರಗಳನ್ನು ನಾಶಪಡಿಸಿ ಆ ಸ್ಥಳದಲ್ಲಿ ಆಧುನಿಕ ಅಲಂಕಾರಿಕ ಶಿಲೆಗಳನ್ನು ಜೋಡಿಸಿದ್ದಾರೆ. ಐದು ವರ್ಷಗಳ ಹಿಂದೆ ಕಣ್ಣಿಗೆ ಬಿದ್ದಂತಹ ಗೋಡೆಯ ಮೇಲಿನ ಚಿತ್ರಗಳು ಅಧ್ಯಯನಕ್ಕಾಗಿ ಕ್ಷೇತ್ರಕಾರ್ಯಕ್ಕೆ ಅಲ್ಲಿಗೆ ಹೋದಾಗ ಇಲ್ಲವಾಗಿದ್ದು ವಿಪರ್ಯಾಸ. ಈಗ ಅಲ್ಲಿ ಕಬ್ಬಿಣ ಫಲಕ, ಹಾಗೂ ಮರದ ಹಲಗೆಗಳ ಮೇಲೆ ಮಾತ್ರ ಚಿತ್ರಗಳು ಉಳಿದುಕೊಂಡಿವೆ. ಅಮ್ಮಿನಭಾವಿಯ ಮಠವನ್ನೇ ಹೋಲುವ ಮುಧೋಳ ತಾಲೂಕಿನ ಮಹಾಲಿಂಗಪುರದ ಮಹಾಲಿಂಗೇಶ್ವರ ಮಠದಲ್ಲಿ ಈಗ ಕೇವಲ ಎರಡು ಕಡೆಗೆ ಚಿತ್ರಗಳು ಇವೆ. ಆದರೆ ಮಠದ ಒಳಗೋಡೆಯಲ್ಲಿ ನಾಲ್ಕೂ ಕಡೆಗೆ ಚಿತ್ರಗಳಿದ್ದವೆಂದು ಅಲ್ಲಿನ ಹಿರಿಯರು ಹೇಳುತ್ತಾರೆ. ಚಿತ್ರಗಳಿದ್ದ ಬಗ್ಗೆ ಅಲ್ಲಿ ಕುರುಹುಗಳೂ ಕಂಡುಬರುತ್ತವೆ. ನಾಲ್ಕು ಸಿಟ್ಟಿನ ಗೋಡೆಯ ತುಂಬ ಚಿತ್ರಕ್ಕಾಗಿಯೇ ಪ್ರತ್ಯೇಕ ಕಮಾನು ಅಥವಾ ಚೌಕಗಳನ್ನು ನಿಗದಿಪಡಿಸಲಾಗಿದೆ. ಒಳಭಾಗದಲ್ಲಿ ಕೆರೆದು ನೋಡಿದಾಗ ಸೂಕ್ಷ್ಮವಾಗಿ ವರ್ಣ ಉಳಿಕೆಗಳು ಕಂಡುಬರುತ್ತವೆ. ಇದರಿಂದ ತಿಳಿದುಬರುವುದೇನೆಂದರೆ ನಾಲ್ಕು ಬದಿಯ ಗೋಡೆಗಳು ಇಲ್ಲಿ ಭಿತ್ತಿ ಚಿತ್ರಗಳಿಂದ ಅಲಂಕೃತ ಗೊಂಡಿದ್ದವು. ನಂತರದಲ್ಲಿ ಯಾವುದೋ ಕಾರಣಕ್ಕಾಗಿ ಎಲ್ಲ ಚಿತ್ರಗಳನ್ನು ಕೆತ್ತಿ ತೆಗೆದು ನಾಶಪಡಿಸಿ ಸುಣ್ಣಸಾರಿಸಲಾಗಿದೆ ಎನ್ನಬಹುದು.

ಗುಳೇಗುಡ್ಡದ ಹೊಸಮನಿ ಗೌಡರ ಮನೆಯಲ್ಲಿ ನಾಲ್ಕೂ ದಿಕ್ಕಿನ ಗೋಡೆಗೆ ಚಿತ್ರಗಳಿದ್ದುದಾಗಿ ಮನೆಯ ವಾರಸುದಾರರು ಹೇಳುತ್ತಾರೆ. ಆದರೆ ಇಂದು ಪಶ್ಚಿಮ ದಿಕ್ಕಿನ ಗೋಡೆಯ ಮೇಲೆ ಮಾತ್ರ ಚಿತ್ರಗಳು ಉಳಿದುಕೊಂಡಿವೆ.

---

೧೯. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪುಟ ೪೯

೨೦. "Historic Magic" : (Karnataka Tourist Guide), Page 2

ಕೇವಲ ೧೦-೧೨ ವರ್ಷಗಳ ಹಿಂದೆ ಚಿತ್ರಗಳ ಕುರಿತು ಲೇಖನ ಬರೆದ ಅದೇ ಊರಿನ ಮಹಾದೇವ ಜಗತಾಪ ಎಂಬುವವರು[೨೧] ಪೂರ್ವ ಮತ್ತು ಪಶ್ಚಿಮ ದಿಕ್ಕಿನ ಗೋಡೆಯ ಚಿತ್ರಗಳನ್ನು ಉಲ್ಲೇಖಿಸುತ್ತಾರೆ. ಅಂದರೆ ೧೦-೧೨ ವರ್ಷಗಳ ಅಂತರದಲ್ಲಿ ಇಂದು ಕೇವಲ ಪಶ್ಚಿಮ ದಿಕ್ಕಿನ ಗೋಡೆಯ ಚಿತ್ರಗಳು ಮಾತ್ರ ಉಳಿದುಕೊಂಡಿವೆ. ಮದುವೆಯ ಸಂದರ್ಭ ಒಂದರಲ್ಲಿ ಮನೆಯನ್ನು ನವೀಕರಿಸುವ ಉದ್ದೇಶದಿಂದ ಈ ಚಿತ್ರಗಳನ್ನು ಕೀಳಿಸಿ ಸುಣ್ಣ ಸಾರಿಸಿದ್ದೇವೆಂದು ಸ್ವತಃ ಮನೆಯವರೇ ಹೇಳುತ್ತಾರೆ. ಸವಣೂರಿನ ನವಾಬರ ವಾಡೆಯಲ್ಲಿರುವ ಭಿತ್ತಿ ಚಿತ್ರಗಳನ್ನು ಸುಣ್ಣ ಸಾರಿಸಿ ಅಳಿಸಿ ಹಾಕುವ ಪ್ರಯತ್ನವನ್ನು ನಿಲ್ಲಿಸಲಾಗಿದೆಯಾದರೂ ಕೆಲವು ಚಿತ್ರಗಳನ್ನು ಸುಣ್ಣದಿಂದ ಮುಚ್ಚಲಾಗಿದೆ. ಸುಣ್ಣ ಸಾರಿಸಿದ್ದರೂ ಹಿಂದಿನ ವರ್ಣಚಿತ್ರ ತೆಳುವಾಗಿ ಕಂಡುಬರುತ್ತದೆ. ಯೋಗ್ಯರಾಸಾಯನಿಕದಿಂದ ಮೇಲೆ ಸಾರಿಸಿದ ಸುಣ್ಣವನ್ನು ತೆಗೆಯಬಹುದು.

ಹೀಗೆ ಪ್ರಾಚೀನ ಭಿತ್ತಿ ಚಿತ್ರಗಳನ್ನು ಅಳಿಸಿಹಾಕಿದ ನಿದರ್ಶನಗಳನ್ನು ಉದ್ದಕ್ಕೂ ಪಟ್ಟಿಮಾಡುತ್ತ ಸಾಗಬಹುದು. ಅದೇ ರೀತಿಯಾಗಿ ಉತ್ತರ ಕನ್ನಡ ಜಿಲ್ಲೆಯ ಭಟ್ಕಳ ಸಮೀಪದ ಶಿರಾಲಿಯ ಹನುಮಾನ್ ದೇವಾಲಯ, ಕಾರವಾರದ ಸಮೀಪದ ಮಾಜಾಳಿಯಲ್ಲಿನ ಮಾರಿಕಾದೇವಿ ದೇವಾಲಯ, ಅಂಕೋಲಾ ತಾಲೂಕಿನ ಅವರ್ಸಾದ ಕಾತ್ಯಾಯಿನಿ ದೇವಾಲಯ, ಅಂಕೋಲಾದ ಆರ್ಯದುರ್ಗಾ ದೇವಾಲಯ, ಕುಮಟಾ ತಾಲೂಕಿನ ಅಗ್ರಹಾರದ ನಾರಾಯಣ ದೇವಾಲಯ, ಹೊನ್ನಾವರ ತಾಲೂಕಿನ ಬಾಳೆಗದ್ದೆಯ ಈಶ್ವರ ದೇವಾಲಯ, ಮಾವಿನಕುರ್ವೆಯ ಅಮ್ಮನವರ ದೇವಾಲಯಗಳಲ್ಲಿ ಕಾವಿ ಭಿತ್ತಿ ಚಿತ್ರಗಳು ಇದ್ದುದಾಗಿ[೨೨] ಹೇಳಲಾಗುತ್ತದೆ. ಆದರೆ ಇಲ್ಲಿ ಈಗ ಚಿತ್ರಗಳನ್ನು ನಾಶಪಡಿಸಲಾಗಿದೆ. ಚಿತ್ರಗಳಿರುವ ಗೋಡೆಯನ್ನು ಕೆರೆದು ಸಿಮೆಂಟ್ ಮಾಡಲಾಗಿದೆ. ಇಲ್ಲವೇ ಸಂಪೂರ್ಣವಾಗಿ ಸುಣ್ಣ ಬಣ್ಣಗಳಿಂದ ಲೇಪಿಸಲಾಗಿದೆ. ಅಂಕೋಲಾ ತಾಲೂಕಿನ ಶೆಟಗೇರಿಯ ಬಿಳಿಗಿರಿಯಮ್ಮ ದೇವಾಲಯ, ಅವರ್ಸಾದ ಲಕ್ಷ್ಮೀನಾರಾಯಣ ದೇವಾಲಯದ ಒಳಭಾಗದ ಗೋಡೆಯ ಭಿತ್ತಿ ಚಿತ್ರಗಳ ಮೇಲೆ ಸುಣ್ಣ ಬಣ್ಣ ಸಾರಿಸಲಾಗಿದೆ. ಕಾವಿ ಚಿತ್ರಗಳು ಉಬ್ಬು ಶಿಲ್ಪದ ಸ್ವರೂಪದಲ್ಲಿರುವುದರಿಂದ ಸಾರಿಸಲಾದ ಸುಣ್ಣ ಬಣ್ಣದ ಹಿನ್ನಲೆಯಲ್ಲಿಯೂ ಉಬ್ಬಿದಂತೆ ಇಲ್ಲಿ ಅವುಗೋಚರಿಸುತ್ತವೆ. ಈ ಎರಡು ಸ್ಥಳಗಳನ್ನು ಬಿಟ್ಟು ಉಳಿದ ಸ್ಥಳಗಳಲ್ಲಿ ಸಂಪೂರ್ಣಗೋಡೆಯನ್ನೇ ಸಿಮೆಂಟ್‌ನಿಂದ ನವೀಕರಿಸಿದ್ದು ಅಲ್ಲಿ ಚಿತ್ರಗಳ ಯಾವ ಕುರುಹೂ ಕಂಡುಬರುವುದಿಲ್ಲ. ಇಂತಹ ಕ್ರಮಗಳಲ್ಲದೇ ಉತ್ತರ ಕನ್ನಡ ಜಿಲ್ಲೆಯ ಕಾವಿ ಭಿತ್ತಿಚಿತ್ರಗಳಿಗೆ ಆಧುನಿಕವಾಗಿ ವಾರ್ನಿಸ್ ಬಣ್ಣವನ್ನು ಲೇಪಿಸಲಾಗುತ್ತಿದೆ. ಇದರಿಂದಾಗಿ ಕಾವಿ ಚಿತ್ರಗಳ ಮೂಲ ವರ್ಣಛಾಯೆಯಲ್ಲಿ ಬದಲಾವಣೆಯಾಗುತ್ತದಲ್ಲದೇ ಅದರ ನೈಜ ಸೌಂದರ್ಯವೇ ಇಲ್ಲವಾಗುತ್ತದೆ. ಬನವಾಸಿಯ ಮಧುಕೇಶ್ವರ ದೇವಾಲಯ, ಸಿದ್ದಾಪುರ ತಾಲೂಕು ಬಿಳಗಿಯ ಬೇಡ್ಕಣಿ ಸೀತಾರಾಮಚಂದ್ರ ದೇವಾಲಯ, ಅಲ್ಲಿಯೇ ಇರುವ ತಿಮ್ಮಣ್ಣ ಪೈಯವರ ಮನೆ, ಕುಮಟಾ ತಾಲೂಕಿನ ಸಾಂತಗಲ್ ಗ್ರಾಮದ ಶಾಂತಿಕಾಪರಮೇಶ್ವರಿ ದೇವಾಲಯ, ಗುಣವಂತೆಯ ಈಶ್ವರ ದೇವಾಲಯಗಳಲ್ಲಿ ಕಾವಿಚಿತ್ರಗಳು ಮೂಲ ಸ್ವರೂಪದಲ್ಲಿ ಉಳಿದುಕೊಂಡಿವೆ. ಇಲ್ಲಿ ಆಧುನಿಕ ಬಣ್ಣವನ್ನು ಚಿತ್ರಗಳಿಗೆ ಲೇಪಿಸಲಾಗಿಲ್ಲ. ಇವುಗಳನ್ನು ಹೊರತು ಪಡಿಸಿದಂತೆ ಹೆಚ್ಚಿನ ಕಾವಿ ಭಿತ್ತಿ ಚಿತ್ರಗಳ ಮೇಲೆ ಆಧುನಿಕ ತೈಲ ವರ್ಣವನ್ನು ಲೇಪಿಸಲಾಗಿದೆ. ವಿದ್ಯುತ್ ಸಂಪರ್ಕಕ್ಕಾಗಿ ಇಲ್ಲವೇ ಇನ್ನಿತರ ಉಪಯೋಗಕ್ಕಾಗಿ ಭಿತ್ತಿ ಚಿತ್ರಗಳಿರುವಲ್ಲಿ ಮೊಳೆಹೊಡೆಯುವುದು, ಪಟ್ಟಿಗಳನ್ನು ಅಳವಡಿಸುವುದು

---

೨೧. ಡಾ. ಎಸ್. ಸಿ. ಪಾಟೀಲ್ (ಸಂ.) : 'ಚಿತ್ರಾಕ್ಷಿ', ಪುಟ ೧೩

೨೨. ಡಾ. ಕೃಷ್ಣಾನಂದ ಕಾಮತ್ : ಕಾವಿ ಚಿತ್ರಕಲೆ, ಪುಟ ೯೪

ಮುಂತಾದ ಕ್ರಮಗಳಿಂದಲೂ ಚಿತ್ರಗಳಿಗೆ ಹಾನಿ ಸಂಭವಿಸಿರುವುದನ್ನು ನೋಡಬಹುದಾಗಿದೆ. ಪಂಜಾಬದ ಅಮೃತಸರದ ಸ್ವರ್ಣಮಂದಿರಲ್ಲಿರುವ "ಬಾಬಾ ಅಟಲ್ ಗುರುದ್ವಾರದಲ್ಲಿ ಭಿತ್ತಿ ಚಿತ್ರಗಳಿರುವ ಗೋಡೆಗೆ ಕಬ್ಬಿಣದ ಬೋಲ್ಟು, ಮಳೆಗಳು, ವಿದ್ಯುತ್ ಸಂಪರ್ಕಕ್ಕಾಗಿ ಅಲ್ಲಲ್ಲಿ ತಂತಿಗಳು. ಪಟ್ಟಿಗಳನ್ನು ಅಳವಡಿಸಿ ಸಾಕಷ್ಟು ಹಾನಿ ಮಾಡಲಾಗಿದೆ[೨೩] ಎಂದು ತಿಳಿದುಬರುವುದು. ಉತ್ತರ ಕರ್ನಾಟಕದ ಭಿತ್ತಿ ಚಿತ್ರಗಳಿಗೂ ಈ ರೀತಿಯ ಹಾನಿ ಸಂಭವಿಸಿರುವುದನ್ನು ನೋಡಬಹುದಾಗಿದೆ. ನರಗುಂದದ ಬಾಬಾ ಸಾಹೇಬನ ಅರಮನೆಯಲ್ಲಿ ವಿದ್ಯುತ್ ಸಂಪರ್ಕಕ್ಕಾಗಿ ಚಿತ್ರಗಳಿರುವ ಗೋಡೆಗೆ ತಂತಿಗಳನ್ನು ಅಳವಡಿಸಲು ಕಟ್ಟಿಗೆ ಪಟ್ಟಿಗಳನ್ನು ಮೊಳೆಹೊಡೆದು ಕೂಡಿಸಲಾಗಿದೆ. ಸವಣೂರಿನ ನವಾಬರ ವಾಡೆಯಲ್ಲಿಯೂ ಚಿತ್ರಗಳ ಮೇಲೆಯೇ ವಿದ್ಯುತ್ ಪಟ್ಟಿಗಳನ್ನು ಮೊಳೆ ಹೊಡೆದು ಕೂಡಿಸಲಾಗಿದೆ. ಉತ್ತರ ಕನ್ನಡದ ಜಿಲ್ಲೆಯ ಹೊನ್ನಾವರದ ಮಾರುತಿ ದೇವಾಲಯದಲ್ಲಿ ಕಾವಿ ಭಿತ್ತಿ ಚಿತ್ರಗಳಿರುವ ಗೋಡೆಯ ಮೇಲೆಯೇ ವಿದ್ಯುತ್ ಸಂಪರ್ಕದ ಪಟ್ಟಿಗಳು. ಬೋರ್ಡು. ಮೀಟರುಗಳನ್ನು ಅಳವಡಿಸಲಾಗಿದೆ.

VII. *ಕಿಡಿಗೇಡಿತನದಿಂದಾಗುವ ಆಪತ್ತು* : ಇದರಲ್ಲಿ ಮತ್ತೆ (೧) ಚಿತ್ರಗಳನ್ನು ವಿರೂಪಗೊಳಿಸುವುದು, (೨) ಬೆಳ್ಳಿ, ಬಂಗಾರ ಲೇಪನ ಕಿತ್ತುಕೊಳ್ಳುವುದು. (೩) ಸಿನೇಮಾ ಚಿತ್ರೀಕರಣದಿಂದಾಗುವ ಆಪತ್ತು ಎಂಬುದಾಗಿ ಮೂರು ಬಗೆಯಲ್ಲಿ ವಿಂಗಡಿಸಿದೆ.

೧. ಚಿತ್ರಗಳನ್ನು ವಿರೂಪಗೊಳಿಸುವುದು : ಮಾನವನು ಭಿತ್ತಿ ಚಿತ್ರಗಳ ಮೌಲ್ಯತಿಳಿಯದೇ ಅವುಗಳನ್ನು ಮುಟ್ಟುವುದು. ತಟ್ಟುವುದು. ಅದೇ ಸಿದ್ಧೀತೆಂದು ಕುತೂಹಲದಿಂದ ಕೆರೆಯುವುದು. ಚಿತ್ರಗಳನ್ನು ವಿರೂಪಗೊಳಿಸುವುದು, ಚಿತ್ರಗಳ ಮೇಲೆ ಪ್ರತಿ ಚಿತ್ರಣ ಮಾಡುವಂತಹ ಕ್ರಮಗಳನ್ನನುಸರಿಸುತ್ತಿದ್ದು. ಇಂತಹ ಚಟುವಟಿಕೆಗಳನ್ನು ಇಲ್ಲಿ ಕಿಡಿಗೇಡಿತನ ಎಂದು ಪರಿಗಣಿಸಲಾಗಿದೆ.

ಅಗ್ನಿ ಮೂಶಿಕ ಚೋರೇಭ್ಯೇ ಶಿವೋರಕ್ಷಂತು ಪುಸ್ತಕಂ ।
ತೈಲಾದ್ರಕ್ಷೇಜ್ಜಲಾದ್ರಕ್ಷೇಚ್ಚಿಥಿಲ ಬಂಧಯಾತ್.
ಮೂರ್ಖಹಸ್ತೇ ನ ದಾತವ್ಯಮೇವಂ ವದತಿ ಪುಸ್ತಕಂ ॥

ಅಗ್ನಿ. ಮೂಷಿಕ. ತೈ. ಜಲ. ಚೋರ. ಶಿಥಿಲ ಬಂಧನಗಳಿಂದ ಹಸ್ತಪ್ರತಿಗಳನ್ನು ಸಂರಕ್ಷಿಸುವಂತೆಯೇ ಅವುಗಳ ಮೌಲ್ಯತಿಳಿಯದೇ ನಾಶಪಡಿಸುವ ಮೂರ್ಖಹಸ್ತದ ಕೈಗೆ ಹಸ್ತಪ್ರತಿಗಳು ಸಿಗದಂತೆ ಎಚ್ಚರಿಕೆ ವಹಿಸಬೇಕೆಂದು ಪ್ರಾಚೀನ ಗ್ರಂಥಗಳಲ್ಲೇ ಹೇಳಿದ್ದನ್ನು ಡಾ. ಬಿ. ಕೆ. ಹಿರೇಮಠ ಅವರು[೨೪] ಹಸ್ತಪ್ರತಿಯ ಆಪತ್ತುಗಳನ್ನು ಹೇಳುವಾಗ ಉಲ್ಲೇಖಿಸುತ್ತಾರೆ.

ಭಿತ್ತಿ ಚಿತ್ರಗಳನ್ನು ಹೀಗೆ ಮುಟ್ಟುವುದು. ತಟ್ಟುವುದು. ಕೆರೆಯುವುದರಿಂದ ನಾಶಮಾಡುವುದಲ್ಲದೇ ಕೆಲವರು ಚಿತ್ರಗಳ ಕೆಳಗೆ ಅಥವಾ ಪಕ್ಕದಲ್ಲಿ. ಅಥವಾ ಚಿತ್ರಗಳ ಮೇಲೆಯೇ ತಮ್ಮ ಹೆಸರನ್ನೋ. ಅಥವಾ ಇನ್ನೇನಾದರೂ ಗೀಚುತ್ತಾರೆ. ಇದಕ್ಕಾಗಿ ಇದ್ದಿಲು. ಕಟ್ಟಿಗೆ ತುಂಡು. ಸುಣ್ಣದ ಕಲ್ಲುಗಳಂತಹ ತಕ್ಷಣಲಭ್ಯವಾಗುವ ವಸ್ತುಗಳನ್ನು ತೆಗೆದುಕೊಂಡು ಚಿತ್ರಗಳಿರುವ ಸ್ಥಳದಲ್ಲೇ ತಮ್ಮ ಕಲಾಕುಶಲತೆಯನ್ನೂ ಪ್ರದರ್ಶಿಸುತ್ತಾರೆ. ಇಂತಹ ಕ್ರಮಗಳಿಂದಲೂ ಭಿತ್ತಿ ಚಿತ್ರಗಳಿಗೆ ಸಾಕಷ್ಟು ಹಾನಿ ಸಂಭವಿಸುತ್ತದೆ ಎಂಬುದನ್ನು ಬೇರೆ ಹೇಳಬೇಕಿಲ್ಲ. ರಾಯಚೂರಿನ ಖಾಜಿನಗೌಡರ ಮನೆಯಲ್ಲಿನ ಚಿತ್ರಗಳ ಪಕ್ಕದಲ್ಲಿ ಅಲ್ಲಲ್ಲಿ ಇದ್ದಿಲಿನಿಂದ ರೇಖಾಚಿತ್ರ ರಚಿಸಲಾಗಿದೆ. ಪ್ರಾಗೈತಿಹಾಸ ಕಾಲದ ಭಿತ್ತಿ

---

೨೩. J. C. Nagpal : Mural Paintings In India, Page 180

೨೪. ಡಾ. ಬಿ. ಕೆ. ಹಿರೇಮಠ : ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ, ಪುಟ ೨೩೭

ಚಿತ್ರಗಳಿಗೆ ಸಹಿತ ಈ ರೀತಿಯ ಹಾನಿತಪ್ಪಿದ್ದಲ್ಲ. ಕಾಡಿನಲ್ಲಿರುವ ಈ ಚಿತ್ರಗಳು ದನಗಾಹಿಗಳ ಕಣ್ಣಿಗೆ ಬಿದ್ದಾಗ ತಾವೂ ಆರೀತಿಯ ಚಿತ್ರರಚಿಸಬೇಕೆಂಬ ಅಪೇಕ್ಷೆಯಿಂದ ಚಿತ್ರಗಳಿರುವ ಅದೇ ಬಂಡೆಯ ಮೇಲೆ ಮತ್ತೊಂದು ಚಿತ್ರ ರಚಿಸುತ್ತಾರೆ. ಇಲ್ಲವೆ ತಮ್ಮ ಹೆಸರನ್ನೂ ಕೆತ್ತಬಹುದು. ಬಳ್ಳಾರಿ ತಾಲೂಕಿನ ಕುರುಗೋಡು, ಹೊಸಪೇಟೆ ತಾಲೂಕಿನ ಹಳಕುಂಡಿ[೨೫]ಗಳಲ್ಲಿನ ಪ್ರಾಗಿತಿಹಾಸ ಭಿತ್ತಿಚಿತ್ರಗಳಲ್ಲಿ ಈ ರೀತಿಯ ಹಾನಿಯಾಗಿದೆ.

ಅದೇ ರೀತಿಯಾಗಿ ಹಂಪಿಯ ಕನ್ನಡ ವಿಶ್ವವಿದ್ಯಾಲಯ ಆವರಣದಲ್ಲಿ ಕಂಡು ಬಂದಿರುವ ಪ್ರಾಗಿತಿಹಾಸ ಬಂಡೆ ಭಿತ್ತಿಚಿತ್ರದಲ್ಲಿ ಯಾರೋ ಹೆಸರು ಕೆತ್ತಿ ಚಿತ್ರಗಳನ್ನು ವಿರೂಪಗೊಳಿಸಿದ್ದಾರೆ. ಬಿಜಾಪುರದ ಅಸರ್‌ಮಹಲ್‌ದಲ್ಲಿನ ಭಿತ್ತಿಚಿತ್ರಗಳ ಮಾನವಾಕೃತಿಯ ಮುಖಗಳನ್ನುಕೆರೆದು ತೆಗೆದಿದ್ದಾರೆ. ಆದರೆ ಇಲ್ಲಿನ ಹೂಬಳ್ಳಿಯ ನಕ್ಷಾ ಚಿತ್ರಗಳಿಗೆ ಯಾವುದೇ ಹಾನಿ ಸಂಭವಿಸಿಲ್ಲ. ಇದು ಸಂದರ್ಶಕರ ಕ್ರಮ ಎನ್ನುವುದಕ್ಕಿಂತಲೂ ಮುಸ್ಲಿಂ ಧಾರ್ಮಿಕ ಅಭಿಮಾನ ಉಳ್ಳವರು ವ್ಯವಸ್ಥಿತವಾಗಿ ಮಾಡಿದ ಕೆಲಸವೇ ಆಗಿದೆ ಎನ್ನಬಹುದು.

೨. ಬೆಳ್ಳಿ, ಬಂಗಾರ ಲೇಪನ ಕಿತ್ತುಕೊಳ್ಳುವುದು : ಪ್ರಾಚೀನ ಭಿತ್ತಿಚಿತ್ರ ಕಲಾವಿದರು ಕೆಲವು ಸಂದರ್ಭದಲ್ಲಿ ಚಿತ್ರರಚನೆಯಲ್ಲಿ ಬಂಗಾರ, ಬೆಳ್ಳಿಯಿಂದ ತಯಾರಿಸಿದ ವರ್ಣಗಳನ್ನೇ ಬಳಸಿದ್ದು ಕಂಡುಬರುವುದು. ಚಿತ್ರಗಳಿಗೆ ಲೇಪಿಸಲಾದ ಈ ಬಂಗಾರ, ಬೆಳ್ಳಿಯನ್ನು ಪಡೆದುಕೊಳ್ಳಲು ಕೆಲವು ಜನರು ಚಿತ್ರಗಳನ್ನು ಕೆತ್ತಿ ತೆಗೆದು ವಿರೂಪಗೊಳಿಸಿದ್ದು ಉಂಟು. ಬಿಜಾಪುರದ ಅಸರ್‌ಮಹಲ್ ಭಿತ್ತಿಚಿತ್ರಗಳಲ್ಲಿ ಆಭರಣಗಳಿಗೆ, ಹೂಕುಂಡದ ನಕ್ಷೆಗಳಿಗೆ ಬಂಗಾರ, ಬೆಳ್ಳಿಯ ವರ್ಣವನ್ನೇ ಬಳಸಲಾಗಿದ್ದು, ಅದನ್ನು ಕೆತ್ತಿ ತೆಗೆಯಲಾಗಿದೆ. ಜನರಿಂದಾಗುವ ಈ ರೀತಿಯ ತೊಂದರೆಗಾಗಿ ಈಗ ಭಿತ್ತಿ ಚಿತ್ರಗಳಿರುವ ಕೋಣೆಯನ್ನು ಬೀಗಹಾಕಿ ಮುಚ್ಚಲಾಗಿದೆ. ನಿಪ್ಪಾಣಿಯ ರಾಜವಾಡೆಯಲ್ಲಿಯೂ ಆಭರಣಗಳು, ವಸ್ತ್ರಗಳ ಅಂಚುಗಳು, ಕೆಲವು ನಕ್ಷೆಗಳಿಗೆ ಬಂಗಾರ, ಬೆಳ್ಳಿಯ ವರ್ಣವನ್ನೇ ಬಳಸಲಾಗಿದೆ. ಇಲ್ಲಿಯೂ ಜನ ಚಿತ್ರಗಳನ್ನು ಕೆದರಿ ಬಂಗಾರ ಬೆಳ್ಳಿ ಅಂಶವನ್ನು ತೆಗೆದುಕೊಂಡು ಹೋಗಿದ್ದಾರೆ. ವಿಜಯ ದಶಮಿಯ ಸಂದರ್ಭದಲ್ಲಿ ಬನ್ನಿಮುಡಿಯುವ ಸಂದರ್ಭದಲ್ಲಿ ಹೆಚ್ಚಿನ ಜನ ಸೇರುತ್ತಿದ್ದು, ಜನರು ಬನ್ನಿಯ ಬಂಗಾರ ವಿನಿಮಯ ಕಾಲದಲ್ಲಿ ಚಿತ್ರಗಳಲ್ಲಿರುವ ಬಂಗಾರದ ಅಂಶವನ್ನೇ ಕೆರೆದು ತೆಗೆದುಕೊಳ್ಳುತ್ತಿದ್ದರೆಂದು ವಾಡೆಯ ಈಗಿನ ವಾರಸುದಾರರು ಹೇಳುತ್ತಾರೆ. ಇಂತಹ ಕಾರಣಗಿಗಾಗಿ ಈಗ ಚಿತ್ರಗಳಿರುವ ಕೋಣೆಗಳಿಗೆ ಜನರ ಪ್ರವೇಶವನ್ನು ನಿರ್ಬಂಧಿಸಿದ್ದಾರೆ.

ಗುಳೆದಗುಡ್ಡದ ಹೊಸಮನಿ ಗೌಡರ ಮನೆಯ ಭಿತ್ತಿ ಚಿತ್ರಗಳಲ್ಲೂ ಆಭರಣ, ವಸ್ತ್ರದಂಚುಗಳಿಗೆ ಬಂಗಾರ ಬೆಳ್ಳಿಯ ವರ್ಣವನ್ನು ಉಪಯೋಗಿಸಲಾಗಿದ್ದು, ಅವುಗಳನ್ನೂ ಕೆರೆದು ತೆಗೆಯಲಾಗಿದೆ. ಹಿಂದಿನ ದಿನಗಳಲ್ಲಿ ವಿಜಯದಶಮಿ, ಗಣೇಶ ಹಬ್ಬಗಳಲ್ಲಿ ಚಿತ್ರಗಳಿರುವ ಈ ಕೋಣೆಯಲ್ಲಿ ಹೆಚ್ಚಿನ ಜನಸೇರುತ್ತಿದ್ದರಲ್ಲದೇ ಈ ಸಂದರ್ಭಗಳಲ್ಲಿ ಬಂದ ಜನರು ಇದೊಂದು ಕಲಾ ಸಂಗ್ರಹಾಲಯವೆಂದು ತಿಳಿದು ಚಿತ್ರಗಳನ್ನು ನೋಡಲು ಸಾಲುಗಟ್ಟಿ ನಿಲ್ಲುತ್ತಿದ್ದರೆಂದು ಮನೆಯವಾರಸುದಾರರು ಹೇಳುತ್ತಾರೆ. ಈ ಸಂದರ್ಭದಲ್ಲಿ ಕೆಲವು ಜನರು ಚಿತ್ರಗಳನ್ನು ಕೆರೆದು ಅದರಲ್ಲಿನ ಬಂಗಾರ, ಬೆಳ್ಳಿಯ ಅಂಶವನ್ನು ಪಡೆದುಕೊಳ್ಳಲು ಹವಣಿಸುತ್ತಿದ್ದರೆಂದೂ, ಇಂತಹ ಪ್ರಯತ್ನಗಳಿಂದ ಈ ಭಿತ್ತಿ ಚಿತ್ರಗಳು ಹೆಚ್ಚು ನಾಶವಾಗಿವೆ ಎಂದೂ ಮನೆಯ ವಾರಸುದಾರರು ತಿಳಿಸುತ್ತಾರೆ. ಹಳಿಯಾಳ ಸಮೀಪದ ಬಿ. ಕೆ. ಹಳ್ಳಿಯ ರಾಮ ಮಂದಿರದಲ್ಲಿಯೂ ಬಂಗಾರ ಬೆಳ್ಳಿ ಕಿತ್ತು ತೆಗೆದು ಚಿತ್ರಗಳು ನಾಶವಾಗಿವೆ.

---

೨೫. ಡಾ. ಅ. ಲ. ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಪುಟ ೫೪

೩. ಚಲನಚಿತ್ರ ಚಿತ್ರೀಕರಣದಿಂದ ಆಗುವ ಆಪತ್ತು : ಭಿತ್ತಿ ಚಿತ್ರಗಳಿರುವ ನೆಲೆಗಳಲ್ಲಿ ಚಿತ್ರೀಕರಣ ನಡೆದಾಗ ಭಿತ್ತಿಚಿತ್ರಗಳಿಗೆ ಹಾನಿಸಂಭವಿಸಿರುವುದು ಉಂಟು. ಚಿತ್ರೀಕರಣದಲ್ಲಿ ಬಳಸುವ ಪ್ರಖರ ಲೈಟುಗಳಿಂದ ಸೂಕ್ಷ್ಮವಾದ ಹಾನಿ ಸಂಭವಿಸುವುದು ಒಂದು ಕಾರಣವಾರೆ, ಭಿತ್ತಿಚಿತ್ರಗಳನೆಲೆಗಳನ್ನು ತಮ್ಮ ಚಿತ್ರೀಕರಣದ ಅವಶ್ಯಕತೆಗೆ ತಕ್ಕಂತೆ ಪರಿವರ್ತಿಸಿಕೊಳ್ಳುವುದರಿಂದಲೂ ಚಿತ್ರಗಳಿಗೆ ಅಪಾಯ ಒದಗುತ್ತದೆ. ಬದಾಮಿಯ ಸಮೀಪದ ಶಿಡಿಲಫಡಿಯ ಪ್ರಾಗಿತಿಹಾಸ ಚಿತ್ರಕಲೆಯ ನೆಲೆಯಲ್ಲಿ ಕನ್ನಡ ಚಲನ ಚಿತ್ರವೊಂದರ ಚಿತ್ರೀಕರಣ ನಡೆದಾಗ, ಚಿತ್ರಗಳಿರುವ ಬಂಡೆಗೆ ಕಾಗದ. ಅಂಟು. ಬಣ್ಣಗಳನ್ನು ಲೇಪಿಸಲಾಗಿದ್ದರಿಂದ ಚಿತ್ರಗಳಿಗೆ ಹಾನಿ ಸಂಭವಿಸಿದೆ. ತೀರ ಇತ್ತೀಚೆಗೆ ಮೂಡಬಿದರೆಯ ಸಾವಿರಕಂಬದ ಬಸದಿಯಲ್ಲಿ ಕನ್ನಡ ಚಲನಚಿತ್ರದ ಚಿತ್ರೀಕರಣ ನಡೆದಾಗ ಸರ್ಚಲೈಟ್‌ನ್ನು ಎಳೆಯುತ್ತಿರುವಾಗ ಮೇಲ್ಛಾವಣಿಗೆ ಹಾನಿ ಸಂಭವಿಸಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

**೪. ಪ್ರಾಣಿಗಳಿಂದಾಗುವ ಆಪತ್ತು :** ಮಾನವ ರಚಿಸಿದ ಭಿತ್ತಿ ಚಿತ್ರಗಳಿಗೆ ಮಾನವನಿಂದಲೇ ಆಪತ್ತು ಸಂಭವಿಸುವಂತೆಯೇ ಪ್ರಾಣಿಗಳಿಂದಲೂ ಹಾನಿ ಉಂಟಾಗುತ್ತದೆ. ಪ್ರಾಣಿಗಳಿಂದ ಒದಗುವ ಆಪತ್ತುಗಳನ್ನು ಮತ್ತೆ

I. ಕಾಡು ಪ್ರಾಣಿಗಳಿಂದಾಗುವ ಆಪತ್ತು

II. ಸಾಕುಪ್ರಾಣಿಗಳಿಂದಾಗುವ ಆಪತ್ತುಗಳು - ಎಂದು ವರ್ಗೀಕರಿಸಿಕೊಂಡು ಅಧ್ಯಯನ ಮಾಡಬಹುದು.

**I. ಕಾಡು ಪ್ರಾಣಿಗಳಿಂದಾಗುವ ಆಪತ್ತು :** ಪ್ರಾಗೈತಿಹಾಸಿಕ ಮಾನವರು ತಾವು ವಾಸಿಸಿದ ಗುಹೆ, ಶಿಲಾಶ್ರಯತಾಣಗಳಲ್ಲಿ ಚಿತ್ರರಚನೆಮಾಡಿದ್ದು ಕಂಡು ಬರುತ್ತದೆ. ನಾಗರಿಕತೆ ಬೆಳೆದಂತೆ ಈ ಮಾನವರು ಇಂತಹ ಸ್ಥಳಗಳಿಂದ ತಮ್ಮವಾಸದ ತಾಣಗಳನ್ನು ಬದಲಾಯಿಸಿಕೊಂಡರು. ಅವರು ಬಿಟ್ಟುಹೋದ ಈ ಗುಹೆ, ಶಿಲಾಶ್ರಯತಾಣಗಳು ನಂತರ ಕಾಡು ಪ್ರಾಣಿಗಳ ವಾಸಸ್ಥಳಗಳಾದವು. ಚಿತ್ರಗಳಿರುವ ಇಂತಹ ಸ್ಥಳಗಳಲ್ಲಿ ಕಾಡು ಪ್ರಾಣಿಗಳ ವಾಸದಿಂದ ಚಿತ್ರಗಳಿಗೆ ಹಾನಿಸಂಭವಿಸುವುದು ಸ್ವಾಭಾವಿಕವೇ ಆಗಿದೆ. ಕಾಡು ಪ್ರಾಣಿಗಳಲ್ಲಿ ಇಂತಹ ಪ್ರಾಣಿಗಳೇ ಚಿತ್ರಗಳಿರುವ ಶಿಲಾಶ್ರಯತಾಣಗಳಲ್ಲಿ ವಾಸಮಾಡುತ್ತವೆ ಎಂದು ನಿರ್ದಿಷ್ಟವಾಗಿ ಹೇಳಲು ಬರುವದಿಲ್ಲ. ಆದರೂ ಕರಡಿ. ಕಾಡುಹಂದಿ. ಕಾಡೆಮ್ಮೆಗಳಂತಹ ಪ್ರಾಣಿಗಳಿಂದ[೨೬] ಚಿತ್ರಗಳಿಗೆ ಹಾನಿಯಾಗುತ್ತದೆ ಎನ್ನಲಾಗಿದೆ. ಈ ಪ್ರಾಣಿಗಳು ಅದರಲ್ಲೂ ಕಾಡುಹಂದಿ ಕಾಡೆಮ್ಮೆಗಳು ನೀರಿನಲ್ಲಿ ಹೊರಳಾಡಿ ತಮ್ಮ ಮೈಯನ್ನು ಶಿಲಾಶ್ರಯದ ಗೋಡೆಗೆ ಉಜ್ಜುವುದರಿಂದ ಆ ಪ್ರದೇಶದಲ್ಲಿರುವ ಚಿತ್ರಗಳು ನಾಶವಾಗುತ್ತವೆ. ಭಿತ್ತಿ ಚಿತ್ರಗಳಿಗೆ ಕಾಡುಪ್ರಾಣಿಗಳಿಂದಾಗುವ ಹಾನಿಯಲ್ಲಿ ಮಂಗನಿಂದ ಒದಗುವ ಆಪತ್ತು ಅತೀ ಹೆಚ್ಚಿನ ಪ್ರಮಾಣದಲ್ಲಿರುತ್ತದೆ. ಅಡವಿಯ ಇಂತಹ ಶಿಲಾಶ್ರಯತಾಣಗಳಲ್ಲಿ ಅವು ಹಿಂಡುಹಿಂಡಾಗಿ ವಾಸಮಾಡುತ್ತವಲ್ಲದೇ ಮಂಗಗಳು ವಿಸರ್ಜಿಸುವ ಮಲಮೂತ್ರದಲ್ಲಿರುವ ಕ್ಷಾರ ಮತ್ತು ಆಮ್ಲದ ಗುಣಧರ್ಮದಿಂದ ಚಿತ್ರಗಳಿಗೆ ಹೆಚ್ಚಿನ ಹಾನಿ ಸಂಭವಿಸುತ್ತದೆ[೨೭] ಎಂಬುದಾಗಿ ತಿಳಿದುಬರುವುದು. ಭಿಂಬೇಟ್ಕಾದಂತಹ ದಟ್ಟ ಅರಣ್ಯ ಪ್ರದೇಶದಲ್ಲಿನ ಶಿಲಾಶ್ರಯತಾಣಗಳ ಚಿತ್ರಗಳಿಗೆ ಈ ರೀತಿಯ ಕಾಡು ಪ್ರಾಣಿಗಳಿಂದ ಹಾನಿಸಂಭವಿಸುವುದು ಅಧಿಕ ಪ್ರಮಾಣದಲ್ಲಿರುತ್ತದೆ. ಬಾದಾಮಿಯ ಸುತ್ತಲ ಪರಿಸರದಲ್ಲೂ ಹಲವು ಕಡೆಗೆ ಪ್ರಾಗೈತಿಹಾಸಕಾಲದ ಮತ್ತು ಇತಿಹಾಸಕಾಲದ ಶಿಲಾಶ್ರಯ ವರ್ಣ ಚಿತ್ರಗಳಿದ್ದು ಇಲ್ಲಿಯೂ ಮಂಗಗಳು ಹಿಂಡು ಹಿಂಡಾಗಿ ಓಡಾಡುತ್ತಿರುವುದನ್ನು ಕಾಣಬಹುದಾಗಿದೆ.

---

೨೬. ಗಜೇಂದ್ರ ಎಸ್. ತ್ಯಾಗಿ : ಪ್ರಿಸ್ಟಾರಿಕ್ ಆರ್ಟ್ಸ್ ಇನ್ ಇಂಡಿಯಾ, ಪುಟ ೧೧೫
೨೭. ಗಜೇಂದ್ರ ಎಸ್. ತ್ಯಾಗಿ : ಪ್ರಿಹಿಸ್ಟಾರಿಕ್ ಆರ್ಟ್ಸ್ ಇನ್ ಇಂಡಿಯಾ, ಪುಟ ೧೧೫

**II. ಸಾಕುಪ್ರಾಣಿಗಳಿಂದಾಗುವ ಆಪತ್ತು :** ಪ್ರಾಚೀನ ಶಿಲಾಶ್ರಯ ಭಿತ್ತಿ ಚಿತ್ರಗಳಲ್ಲಿ ದನಗಳು, ಆಡು, ಕುರಿ, ಕುದುರೆಗಳಂತಹ ಸಾಕು ಪ್ರಾಣಿಗಳ ಚಿತ್ರಗಳು ರಚನೆಯಾಗಿದ್ದು ನೋಡಿದರೆ ಈ ಪ್ರಾಣಿಗಳು ಅಂದಿನಿಂದಲೇ ಮಾನವನ ಒಡನಾಡಿಗಳಾಗಿದ್ದವಲ್ಲದೇ ಆಗಲೇ ಅವನ್ನು ಸಾಕಿ ತನ್ನ ಉಪಯೋಗಕ್ಕೆ ಮಾನವ ಬಳಸಿಕೊಳ್ಳುತ್ತಿದ್ದನೆಂದು ತಿಳಿದುಬರುವುದು. ಸಾಕು ಪ್ರಾಣಿಗಳ ಚಿತ್ರಗಳಿರುವ ಶಿಲಾಶ್ರಯಗಳು ಮಧ್ಯಭಾರತದ ಭಿಂಬೇಟ್ಕಾ, ಫಿರಂಗೀ, ಕಾಟೋತಿ, ಲಡಿ-ಕಿ-ಕರಾರ್, ಸಾತಕುಂಡ ಪ್ರದೇಶದ ಬೆಟ್ಟಗಳಲ್ಲಿ[೨೮] ಹೆಚ್ಚಾಗಿ ಕಂಡುಬರುತ್ತವೆ ಎನ್ನಲಾಗಿದೆ. ಉತ್ತರ ಕನಾಟಕ ಭಾಗದಲ್ಲಿಯೂ ದನಗಳು. ಕುದುರೆಗಳು ಶಿಲಾಶ್ರಯ ಚಿತ್ರಗಳಲ್ಲಿ ಕಂಡುಬಂದಿವೆ. ಗೂಳಿಗಳು. ಆಕಳುಗಳು ಸಾಮಾನ್ಯವಾಗಿ ಎಲ್ಲ ಕಡೆಗೂ ಕಂಡುಬಂದಿವೆ. ಪ್ರಾಚೀನ ಮಾನವರ ಚಿತ್ರರಚನೆಗೆ ಸ್ಪೂರ್ತಿಕೊಟ್ಟ ಈ ಸಾಕುಪ್ರಾಣಿಗಳೇ ಕೆಲವು ಸಂದರ್ಭದಲ್ಲಿ ಆ ಚಿತ್ರಗಳ ಹಾನಿಗೂ ಕಾರಣವಾಗುತ್ತವೆ ಎನ್ನಬಹುದು. ಬೆಟ್ಟದ ಮೇಲೆ ಉನ್ನತ ಪ್ರದೇಶದಲ್ಲಿರುವ ಗುಹೆ. ಶಿಲಾಶ್ರಯ ತಾಣಗಳನ್ನು ಹೊರತುಪಡಿಸಿ. ಭೂಮಟ್ಟದಲ್ಲಿರುವ ಅಥವಾ ಸುಲಭವಾಗಿ ತಲುಪಬಹುದಾದ ಶಿಲಾಶ್ರಯತಾಣಗಳಲ್ಲಿ ಯಾವಾಗಲೂ ದನಗಳು. ಆಡು, ಕುರಿಗಳು ಅದರ ನೆರಳಲ್ಲಿ ವಿಶ್ರಮಿಸುವುದು ಸಾಮಾನ್ಯವಾದ ಸಂಗತಿಯಾಗಿದೆ.[೨೯] ವಿಶೇಷವಾಗಿ ಬೇಸಿಗೆಯಲ್ಲಿ ಈ ರೀತಿ ಸಾಕು ಪ್ರಾಣಿಗಳು ನೆರಳಿಗೆ ತಂಗುವುದು ಹೆಚ್ಚು. ಅಲ್ಲದೇ ಮಳೆಗಾಲದಲ್ಲೂ ರಕ್ಷಣೆಗಾಗಿ ಇಂತಹ ಸ್ಥಳಗಳಲ್ಲೇ ಪ್ರಾಣಿಗಳು ವಿರಮಿಸುವುದು ಕಂಡುಬರುವುದು. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಆವಣದ ಹಿಂಭಾಗದಲ್ಲಿರುವ ಕೋಡುಗಲ್ಲೊಂದರ ಮೇಲೆ ಪ್ರಾಗೈತಿಹಾಸ ವರ್ಣಚಿತ್ರವಿದ್ದು. ಅದರ ನೆರಳಿನಲ್ಲಿ ದನಗಾಹಿಗಳು. ಆಡು. ಕುರಿಗಳನ್ನು ಕಾಯುವವರು ವಿರಮಿಸುವುದು ಸಾಮಾನ್ಯದೃಶ್ಯವಾಗಿದೆ. ಹಾಗೇ ಬದಾಮಿಯ ರಂಗನಾಥ ಬೆಟ್ಟದಲ್ಲಿರುವ ಶಿಲಾಶ್ರಯ ಚಿತ್ರಗಳ ಬಳಿಯಲ್ಲಿ. ಬಾದಾಮಿಯ ಸಮೀಪದ ಕುಟಕನಕೇರಿಯ ಶಿಲಾಶ್ರಯ ಚಿತ್ರಗಳ ಹತ್ತಿರ ಕುರಿ. ಆಡು ಕಾಯುವವರು. ದನಗಾಹಿಗಳು ವಿರಮಿಸುವುದನ್ನು ಕಾಣಬಹುದಾಗಿದೆ. ಹೀಗೆ ಈ ಸ್ಥಳದಲ್ಲಿ ಈ ಸಾಕುಪ್ರಾಣಿಗಳು ವಿರಮಿಸುವ ಕಾಲದಲ್ಲಿ ಅವು ತಮ್ಮ ಮೈಯನ್ನು ಶಿಲಾಶ್ರಯದ ಗೋಡೆಗೆ ಉಜ್ಜುವುದು ಸ್ವಾಭಾವಿಕ. ಈ ಉಜ್ಜುವಿಕೆಯಿಂದ ಆ ಸ್ಥಳದಲ್ಲಿ ಇರಬಹುದಾದ ಚಿತ್ರಗಳು ನಾಶವಾಗುತ್ತವೆ

**೫. ಪಕ್ಷಿಗಳಿಂದಾಗುವ ಆಪತ್ತು :** ಪ್ರಾಣಿಗಳಿಂದ ಭಿತ್ತಿ ಚಿತ್ರಗಳಿಗೆ ಆಪತ್ತು ಉಂಟಾಗುವಂತೆ ಕೆಲವು ಪಕ್ಷಿಗಳಿಂದಲೂ ಹಾನಿ ಸಂಭವಿಸುತ್ತದೆ. ಅವುಗಳಲ್ಲಿ I. ಬಾವಲಿಗಳು. II. ಸ್ವಾಲೋಜಾತಿಯ ಹಕ್ಕಿಗಳು. III. ಗುಬ್ಬಿಗಳು ಭಿತ್ತಿಚಿತ್ರಗಳಿಗೆ ಹಾನಿಮಾಡುವ ಪಕ್ಷಿಗಳಲ್ಲಿ ಪ್ರಧಾನ ಪಾತ್ರವಹಿಸುತ್ತವೆ.

**I. ಬಾವಲಿಗಳು :** ಬಾವಲಿಗಳು ವಾಸಮಾಡಲು ಕತ್ತಲಿನಿಂದ ಕೂಡಿದ ತಂಪು ಪ್ರದೇಶವು ಅನುಕೂಲಕರವಾಗಿದೆ. ಭಿತ್ತಿ ಚಿತ್ರಗಳು ರಚನೆಯಾಗಿರುವ ಶಿಲಾಶ್ರಯ ತಾಣಗಳು. ಗುಹೆಗಳು. ಕಟ್ಟಡಗಳ ಮೇಲ್ಛಾವಣಿ. ಜಂತಿ. ತೊಲೆ. ಬೋದಿಗೆ. ಮಂಟಪಗಳು ಮೊದಲಾದ ಕತ್ತಲು ಹಾಗೂ ತಂಪಾಗಿರುವ ಪ್ರದೇಶಗಳಲ್ಲಿ ಬಾವಲಿಗಳು ವಾಸಮಾಡುವುದು ಸಹಜವೇ ಆಗಿದೆ. ಬಾವಲಿಗಳು ತಾವು ವಾಸಮಾಡುವ ಸ್ಥಳದಲ್ಲಿ ಮಲ ಮೂತ್ರ ವಿಸರ್ಜನೆ ಮಾಡುವುದು ಸ್ವಾಭಾವಿಕ. ಬಾವಲಿಗಳ ಮೂತ್ರವು ಆಕ್ಸಲೇಟ್ಸ್. ಫಾಸ್ಫೇಟ್. ಕ್ಯಾಲ್ಸಿಯಂ. ಸಾಲ್ಟ. ಮತ್ತು ಯೂರಿಯಾಗಳಂತಹ ರಾಸಾಯನಿಕಗಳಿಂದ ಸಂಯುಕ್ತಗೊಂಡಿದ್ದು ಚಿತ್ರಗಳ ಮೇಲೆ ತೀವ್ರಪರಿಣಾಮ ಉಂಟುಮಾಡುತ್ತದೆ. ಇದರಿಂದ ಚಿತ್ರಗಳ

---

೨೮. ಗಜೇಂದ್ರ ಎಸ್. ತ್ಯಾಗಿ : ಪ್ರಿಹಿಸ್ಟಾರಿಕ್ ಆರ್ಟ್ಸ್ ಇನ್ ಇಂಡಿಯಾ. ಪುಟ ೧೧೫

೨೯. ಗಜೇಂದ್ರ ಎಸ್. ತ್ಯಾಗಿ : ಪ್ರಿಹಿಸ್ಟಾರಿಕ್ ಆರ್ಟ್ಸ್ ಇನ್ ಇಂಡಿಯಾ. ಪುಟ ೧೧೫

ಮೇಲೆ ಕಪ್ಪು, ಕಂದು ವರ್ಣದ ಕಲೆಗಳು ಉಂಟಾಗುತ್ತವಲ್ಲದೇ ಕ್ರಮೇಣ ವರ್ಣ ಮತ್ತು ಭಿತ್ತಿಯ ನಾಶಕ್ಕೂ[೩೦] ಕಾರಣವಾಗುತ್ತವೆ. ಬಿಹಾರದ ಪಾಟ್ನಾ ಜಿಲ್ಲೆಯ ಬೈಕಾಟಿಪುರದಲ್ಲಿರುವ ರಾಜಾಮಾನಸಿಂಗನ ತಾಯಿಯ ನೆನಪಿನ ಕಟ್ಟಡದಲ್ಲಿ ಕ್ರಿ. ಶ. ೧೯ ನೇ ಶತಮಾನದಲ್ಲಿ ರಚನೆಯಾದ ಭಿತ್ತಿಚಿತ್ರಗಳಿದ್ದು ಅವು ಈಗಾಗಲೇ ಬಾವಲಿ, ಪಕ್ಷಿಗಳ ಮಲ ಮೂತ್ರದಿಂದ ಹಾಳಾಗಿವೆ. ಮಹಾರಾಷ್ಟ್ರದ ಔರಂಗಾಬಾದ್‌ನಲ್ಲಿರುವ ಗುಹೆಗಳಲ್ಲಿನ ಕ್ರಿ. ಶ. ೭ ನೇ ಶತಮಾನದ ಚಿತ್ರಗಳು. ಇದೇ ಜಿಲ್ಲೆಯ ಫಿಥಲ್‌ಕೋರಾ ಗುಹೆಯ ಇದೇ ಕಾಲಮಾನದ ಚಿತ್ರಗಳು. ಪುನಾ ಜಿಲ್ಲೆಯಲ್ಲಿರುವ ಕಾರ್ಲೆ ಗುಹಾಲಯಗಳಲ್ಲಿನ ಚಿತ್ರಗಳು ಬಾವಲಿಗಳು ಮತ್ತು ಪಕ್ಷಿಗಳ ಮಲ ಮೂತ್ರದಿಂದ ಹಾನಿಗೊಂಡಿವೆ. ಇಂತಹ ಉದಾಹರಣೆಯನ್ನು ಇನ್ನೂ ಹೇಳಬಹುದು. ಕರ್ನಾಟಕದ ಬದಾಮಿಯಲ್ಲಿ ೩ ನೇ ಗುಹೆಯ ಭಿತ್ತಿ ಚಿತ್ರಗಳು ನಾಶವಾಗಲು ಬಾವಲಿಗಳು ಪ್ರಮುಖ ಕಾರಣ. ಈಗಲೂ ಈ ಗುಹೆಯಲ್ಲಿ ಬಾವಲಿಗಳು ವಾಸವಾಗಿರುವುದನ್ನು ನೋಡಬಹುದು.

**II. ಸ್ವಾಲೋಜಾತಿಯ ಹಕ್ಕಿಗಳಿಂದಾಗುವ ಆಪತ್ತು :** ಸ್ವಾಲೋ ಜಾತಿಯ ಹಕ್ಕಿಗಳು ಕೂಡಾ ಬಾವಲಿಗಳಂತೆ ತಂಪು ಮತ್ತು ಕತ್ತಲು ಇರುವ ಪ್ರದೇಶಗಳಲ್ಲೇ ವಾಸಮಾಡುತ್ತವೆ. ಇಂತಹ ಹಕ್ಕಿಗಳು ಭಿತ್ತಿ ಚಿತ್ರಗಳಿರುವ ನೆಲೆಗಳಲ್ಲಿ ವಾಸಮಾಡಿದಾಗ ಚಿತ್ರಗಳಿಗೆ ಹಾನಿಸಂಭವಿಸುವುದನ್ನು[೩೧] ಕಂಡುಕೊಳ್ಳಲಾಗಿದೆ. ಈ ಹಕ್ಕಿಗಳ ತೊಂದರೆ ದಟ್ಟ ಅರಣ್ಯದಲ್ಲಿರುವ ಶಿಲಾಶ್ರಯ ಚಿತ್ರಗಳಿಗೆ ಹೆಚ್ಚು ಉಂಟಾಗುತ್ತದೆ ಎನ್ನಲಾಗಿದ್ದು. ಮಧ್ಯಭಾರತದ ಭಿಂಬೇಟ್ಕಾ. ರೈಜಿನ್. ಲಡಿಕಿ-ಕರಾರ್. ಸಾತಕುಂಡ. ಕಟೋತಿಗಳಂತಹ ಪ್ರದೇಶಗಳಲ್ಲಿನ[೩೨] ಶಿಲಾಶ್ರಯ ಚಿತ್ರಗಳಿಗೆ ಈ ತೊಂದರೆ ಇದೆ ಎಂದು ತಿಳಿದು ಬರುವುದು. ಕರ್ನಾಟಕದ ಹಾವೇರಿ ಜಿಲ್ಲೆಯ ಸವಣೂರಿನಲ್ಲಿಯ ನವಾಬರ ವಾಡೆಯಲ್ಲಿ ಬಾವಲಿ ಜಾತಿಯ ವಲಸೆ ಪಕ್ಷಿಗಳು ಹಿಂಡುಹಿಂಡಾಗಿ ಬಂದು. ನಿರ್ದಿಷ್ಟ ಸಮಯದವರೆಗೆ ವಾಸಮಾಡಿ ಹೊರಟು ಹೋಗುತ್ತವೆ. ಈ ಪಕ್ಷಿಗಳು ವಿಸರ್ಜಿಸುವ ಮಲ ಮೂತ್ರವು ಕೋಣೆಯ ತುಂಬ ಗೋಡೆಯಲ್ಲಿ ದಟ್ಟವಾಗಿ ವ್ಯಾಪಿಸಿದೆ. ಇವುಗಳ ಮಲ ಮೂತ್ರವು ರಕ್ತ ಮಾಂಸಗಳಂತೆ ಕೆಂಪಾಗಿದ್ದು ಗೋಡೆಯಲ್ಲಿ ರಕ್ತದ ಕಲೆಗಳಂತೇ ಕಾಣಿಸುತ್ತವೆ ಸ್ಥಳೀಯರು ಪಕ್ಷಿಗಳ ಮಲ ಮೂತ್ರದ ಈ ಕಲೆಗಳನ್ನು ನವಾಬರ ಕಾಲದಲ್ಲಿ ಯುದ್ಧ ಕೈದಿಗಳನ್ನು ಸಂಹರಿಸಿದಾಗ ಸಿಡಿದ ರಕ್ತದ ಕಲೆ ಎಂದು ಹೇಳುತ್ತಾರೆ. ಪಕ್ಷಿಗಳ ಮಲ ಮೂತ್ರದ ಈ ಕಲೆಗಳು ನವಾಬರ ವಾಡೆಯಲ್ಲಿ ಚಿತ್ರಗಳಿರುವ ಕೋಣೆಯಲ್ಲಿ ಇರದೇ ಜನವಸತಿ ಇಲ್ಲದ ಪಕ್ಕದ ಹಾಳುಕೋಣೆಯಲ್ಲಿ ಇವೆ. ಚಿತ್ರಗಳಿರುವ ಕೋಣೆಯಲ್ಲಿ ಮುರಾರ್ಜಿ ದೇಸಾಯಿ ವಸತಿ ಶಾಲೆ ಈಗ ನಡೆಯುತ್ತಲಿದೆ.

**III. ಗುಬ್ಬಿಗಳಿಂದಾಗುವ ಆಪತ್ತು :** ಬಾವಲಿಗಳಂತಹ ಪಕ್ಷಿಗಳಿಂದಲ್ಲದೇ ಗುಬ್ಬಿಗಳಂತಹ ಪಕ್ಷಿಗಳಿಂದಲೂ ಭಿತ್ತಿ ಚಿತ್ರಗಳಿಗೆ ಹಾನಿ ಸಂಭವಿಸುತ್ತದೆ. ಭಿತ್ತಿ ಚಿತ್ರಗಳಿರುವ ಗೋಡೆಯಲ್ಲಿರಬಹುದಾದ ಮಾಡುಗಳಲ್ಲಿ. ಕಿಂಡಿಗಳಂತಹ ಅನುಕೂಲಕರ ಸ್ಥಳಗಳಲ್ಲಿ ಗುಬ್ಬಿಗಳು ಗೂಡುಕಟ್ಟಿ ವಾಸಮಾಡುತ್ತವಲ್ಲದೇ ಮಲ ಮೂತ್ರ ವಿಸರ್ಜಿಸಿ ಚಿತ್ರಗಳ ನಾಶಕ್ಕೆ ಕಾರಣವಾಗುತ್ತವೆ. ಗುಳೇದಗುಡ್ಡದ ಹೊಸಮನಿಗೌಡರ ಮನೆಯಲ್ಲಿ ಭಿತ್ತಿ ಚಿತ್ರಗಳಿರುವ ಕೋಣೆಯಲ್ಲಿ ಗುಬ್ಬಿಗಳು ಗೂಡು ಕಟ್ಟಿಕೊಂಡು ವಾಸಮಾಡುತ್ತಿವೆ. ಚಿತ್ರಗಳಿರುವ ಗೋಡೆಯಲ್ಲಿನ ಮಾಡಿನಲ್ಲಿ. ಗೋಡೆ ಮತ್ತು ಮೇಲ್ಛಾವಣಿ ಸೇರುವ ಸ್ಥಳದ ಕಿಂಡಿಗಳಲ್ಲಿ. ಜಂತಿಗಳಲ್ಲಿ ಗುಬ್ಬಿಗಳು ವಾಸಮಾಡುತ್ತಿದ್ದು ಅವು ವಿಸರ್ಜಿಸಿದ ಮಲ

೩೦. J. C. Nagpal : Mural Paintings In India, Page 31
೩೧. ಗಜೇಂದ್ರ ಎಸ್. ತ್ಯಾಗಿ : ಪ್ರಿಹಿಸ್ಟಾರಿಕ್ ಆರ್ಟ್ಸ್ ಇನ್ ಇಂಡಿಯಾ. ಪುಟ ೧೧೪
೩೨. ಗಜೇಂದ್ರ ಎಸ್. ತ್ಯಾಗಿ : ಪ್ರಿಹಿಸ್ಟಾರಿಕ್ ಆರ್ಟ್ಸ್ ಇನ್ ಇಂಡಿಯಾ. ಪುಟ ೧೧೪

ಮೂತ್ರಗಳು ಚಿತ್ರದ ಮೇಲೆ ಅಲ್ಲಲ್ಲಿ ಅಂಟಿಕೊಂಡಿವೆ. ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲೂಕಿನ ಬಿಳಗಿಯಲ್ಲಿನ ಬಾಳಗೋಡ ಸೀತಾರಾಮಚಂದ್ರ. ಬೇಡ್ಕಣಿ ಸೀತಾರಾಮಚಂದ್ರ ದೇವಾಲಯಗಳಲ್ಲಿ ಗರ್ಭಗೃಹದ ಮೇಲಿನ ಹಂಚಿನ ಛಾವಣಿಯ ಬುಡದಲ್ಲಿ ಗುಬ್ಬಿಗಳು ಗೂಡುಕಟ್ಟಿ ವಾಸಮಾಡುತ್ತಿದ್ದು, ಆಗೂಡುಗಳ ಬುಡದಲ್ಲೇ ಕಾವಿ ಭಿತ್ತಿ ಚಿತ್ರಗಳು ರಚನೆಯಾಗಿವೆ. ಇದರಿಂದ ಗುಬ್ಬಿಗಳು ವಿಸರ್ಜಿಸುವ ಮಲಮೂತ್ರವು ಚಿತ್ರಗಳ ಮೇಲೆ ಅಂಟಿಕೊಂಡಿದೆ. ಗುಬ್ಬಿಗಳ ಈ ರೀತಿಯ ತೊಂದರೆ ಹೆಚ್ಚಿನ ಭಿತ್ತಿ ಚಿತ್ರಗಳಲ್ಲಿ ಕಂಡುಬರುತ್ತದೆ.

**೬. ಕ್ರಿಮಿ ಕಿಟಗಳಿಂದಗಾಗುವ ಆಪತ್ತು :** ಮನುಷ್ಯರು. ಪ್ರಾಣಿಗಳಿಂದ ಭಿತ್ತಿ ಚಿತ್ರಗಳಿಗೆ ಅಪಾಯ ಉಂಟಾಗುವಂತೆ ಕೆಲವು ಕೀಟಗಳು ಮತ್ತು ಸೂಕ್ಷ್ಮಾಣು ಜೀವಿ ಕ್ರಿಮಿಗಳಿಂದಲೂ ಹಾನಿ ಸಂಭವಿಸುವುದನ್ನು ಗುರುತಿಸಬಹುದು. ಭಿತ್ತಿ ಚಿತ್ರಗಳಿಗೆ ಹಾನಿ ಮಾಡುವ ಕೀಟಗಳಲ್ಲಿ I. ಜೇನುಹುಳು. II. ಗೆದ್ದಲು, III. ಬೆಳ್ಳಿಮೀನು (ಬಿಳಿಜಿರಳೆ), IV. ಕಣಜದ ಹುಳು, V. ಜೇಡದ ಹುಳು, VI. ಸೂಕ್ಷ್ಮಾಣುಜೀವಿ ಶೀಲಿಂಧ್ರಗಳು ಪ್ರಮುಖವಾಗಿವೆ.

**I. ಜೇನುಹುಳು :** ಭಿತ್ತಿ ಚಿತ್ರಗಳು ರಚನೆಯಾಗಿರುವ ಗುಹೆ, ಶಿಲಾಶ್ರಯ, ಕಟ್ಟಡಗಳ ಮೇಲ್ಛಾವಣಿ, ಕಂಬ, ಬೋದಿಗೆ, ಮಂಟಪ, ಮಾಡುಗಳಂತಹ ಸ್ಥಳದಲ್ಲಿ ಜೇನುಹುಳುಗಳು ಗೂಡುಕಟ್ಟಿ ವಾಸ ಮಾಡಿದಾಗ ಅಲ್ಲಿರುವ ಚಿತ್ರಗಳು ಅಪಾಯಕ್ಕೀಡಾಗುತ್ತವೆ. ಕೆಲವು ಸಲ ವಾತಾವರಣದಲ್ಲಿ ಉಷ್ಣತೆ ಹೆಚ್ಚಾದಾಗ ಜೇನುಹುಟ್ಟಿನಲ್ಲಿಯ ಮೇಣವು ಕರಗಿ ಚಿತ್ರಗಳ ಮೇಲೆ ಸೇರುವುದಲ್ಲದೇ ಅದರ ಮೇಲೆ ಧೂಳು ಕುಳಿತು ಮತ್ತಷ್ಟು ದಪ್ಪನಾದ ಧೂಳಿನಪದರ ನಿರ್ಮಾಣವಾಗುವುದು. ಜೇನು ಹುಳುಗಳ ತೊಂದರೆ ಅರಣ್ಯ ಪ್ರದೇಶದಲ್ಲಿರುವ ಶಿಲಾಶ್ರಯ ಚಿತ್ರಗಳಿಗೆ ಹೆಚ್ಚಾದರೂ. ಮಾನವನಿರ್ಮಿತ ಕಟ್ಟಡಗಳಲ್ಲಿ ರಚನೆಯಾದ ಶಿಷ್ಟಪರಂರೆಯ ಭಿತ್ತಿಚಿತ್ರಗಳಿಗೂ ಆಗಾಗ ಜೇನುಹುಳುಗಳಿಂದ ಹಾನಿಸಂಭವಿಸುತ್ತಿರುತ್ತದೆ.

**II. ಗೆದ್ದಲುಗಳು :** ಭಿತ್ತಿ ಚಿತ್ರಗಳಿಗೆ ಗೆದ್ದಲು ಹುಳುಗಳ ಕಾಟ ತೊಡಗಿಕೊಂಡರೆ ಬರೀ ಚಿತ್ರಗಳಲ್ಲದೇ ಚಿತ್ರರಚಿಸಿದ ಭಿತ್ತಿಯ ಆಧಾರವೇ ನಾಶವಾಗುತ್ತದೆ. ಗೆದ್ದಲು ಹುಳುಗಳು ಮರ, (ಕಟ್ಟಿಗೆ), ಮಣ್ಣು. ಎರಡೂ ಮಾಧ್ಯಮದ ಭಿತ್ತಿ ಚಿತ್ರಗಳಿಗೂ ಅಂಟಿಕೊಳ್ಳುತ್ತವೆ. ಈ ಹುಳುಗಳು ಇರುವೆಗಳ ಹೋಲಿಕೆಯಲ್ಲಿದ್ದು ಹಿಂಭಾಗದಲ್ಲಿ ಬೇರೆ ಆಕಾರದಿಂದ ಕೂಡಿರುತ್ತವೆ. ಇವು ಒಂದೇ ತೆರನಾಗಿರದೇ ಭಿನ್ನ ಬಿನ್ನ ರೂಪಗಳಲ್ಲಿರುವುದೂ ಕಂಡುಬರುವುದು. ಗೆದ್ದಲು ಹುಳುಗಳು ತಾವು ವಾಸಮಾಡುವ ವಸ್ತುವನ್ನು ಕೊರೆದು ಪುಡಿಮಾಡುತ್ತವೆ. ಸ್ವಲ್ಪ ತೇವವಾತಾವರಣ ನಿರ್ಮಾಣವಾದರೆ ಈ ಕೀಟಗಳು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಬಿಡಾರ ಹೂಡುತ್ತವೆ. ಅಮ್ಮಿನಭಾವಿಯ ಪಂಚಗೃಹ ಹಿರೇಮಠದಲ್ಲಿನ ಹೊರಬಾಗಿಲಿನ ಎಡಬಲಗಳಲ್ಲಿ ಇರುವ ಕಟ್ಟಿಗೆ ಫಲಕದ ಮೇಲಿನ ಭಿತ್ತಿಚಿತ್ರಗಳಿಗೆ ಗೆದ್ದಲು ಹುಳುಗಳ ತೊಂದರೆ ಇದೆ. ಇಲ್ಲಿನ ಕಟ್ಟಿಗೆ ಫಲಕಗಳನ್ನು ಗೆದ್ದಲುಹುಳುಗಳು ತಿಂದುಹಾಕಿದ್ದು ಅಲ್ಲಲ್ಲಿ ತೂತುಗಳಾಗಿವೆ. ಬೆಳಗಾಂವ ಜಿಲ್ಲೆಯ ನಿಪ್ಪಾಣಿಯ ರಾಜವಾಡೆಯಲ್ಲಿನ ಹೊರಚಾವಡಿಯ ಚಿತ್ರಗಳಲ್ಲಿ ಕೊನೆಯ ಎರಡು ಮಾಡುಗಳಲ್ಲಿನ ಮಣ್ಣಿನ ಭಿತ್ತಿಯ ಮೇಲೆ ರಚಿಸಿದ ಚಿತ್ರಗಳು ಗೆದ್ದಲು ಹುಳುಗಳಿಂದ ಹಾಳಾಗಿವೆ. ಧಾರವಾಡ ಸಮೀಪದ ಉಪ್ಪಿನ ಬೆಟಗೇರಿಯ ಯಲ್ಲಮ್ಮ ದೇವಾಲಯದಲ್ಲಿ ಕಟ್ಟಿಗೆ ಫಲಕದ ಮೇಲೆ ಭಿತ್ತಿ ಚಿತ್ರಗಳಿದ್ದು ದೇವಾಲಯ ಈಗ ನಾಶವಾಗಿದ್ದು ಕೆಳಗೆ ಬಿದ್ದ ಫಲಕಗಳು. ವಾತಾವರಣಕ್ಕೆ ತೆರೆದುಕೊಂಡ ಫಲಕಗಳು ಗೆದ್ದಲು ಹುಳುಗಳ ಧಾಳಿಗೆ ತುತ್ತಾಗಿವೆ. ಸವಣೂರಿನ ನವಾಬರ ವಾಡೆಯಲ್ಲಿನ ಮರದ ಫಲಕದ ಮೇಲಿನ ಚಿತ್ರಗಳೂ ಗೆದ್ದಲು ಹುಳುಗಳಿಂದ ಹಾನಿಗೊಂಡಿವೆ. ಹಳಿಯಾಳ ಸಮೀಪದ ಬಿ. ಕೆ. ಹಳ್ಳಿಯ ಭಿತ್ತಿ ಚಿತ್ರಗಳು ಗೆದ್ದಿಲು ಹುಳುಗಳಿಗೆ ತುತ್ತಾಗಿವೆ.

**III. ಬೆಳ್ಳಿಮೀನು (ಬಿಳಿಜಿರಳೆ) :** ಭಿತ್ತಿ ಚಿತ್ರಗಳಿಗೆ ಜಿರಳೆ ಜಾತಿಯ ಕೀಟಗಳಿಂದಲೂ ತೊಂದರೆ ಉಂಟಾಗುವುದು. ಭಿತ್ತಿ ನಿರ್ಮಾಣದಲ್ಲಿ ಆಕಳ ಸೆಗಣಿ, ಹೊಟ್ಟು ಸಸ್ಯಜನ್ಯ ಅಂಟುಗಳಂತಹ ಸಾರಜನಕ ವಸ್ತುಗಳು ಉಪಯೋಗಿಸಲ್ಪಟ್ಟಾಗ ಅವುಗಳು ಇಂತಹ ಕೀಟಗಳ ಆಹಾರವಾಗಿ ಅವುಗಳ ಹಾವಳಿ ಹೆಚ್ಚಾಗುತ್ತದೆ[೩೩] ಎನ್ನಲಾಗಿದೆ. ಈ ಜಿರಳೆಯಂತಹ ಕೀಟಗಳು ವರ್ಣವನ್ನು ತಿಂದುಹಾಕುತ್ತವಲ್ಲದೇ ಭಿತ್ತಿಯನ್ನೂ ಕೊರೆದುಹಾಕಿ ಪುಡಿಪುಡಿಮಾಡಿ ಅದರಲ್ಲಿರುವ ಸಾರಜನಕ ವಸ್ತುವನ್ನು ತಿನ್ನಲು ತೊಡಗುತ್ತವೆ. ಇದರಿಂದ ಕೆಲವುಕಡೆ ವರ್ಣವು ಕಿತ್ತು ಹೋದಂತೆ ಹಿನ್ನೆಲೆ ಭಿತ್ತಿಯು ಗೋಚರಿಸಿದರೆ. ಕೆಲವು ಭಾಗದಲ್ಲಿ ವರ್ಣದ ಜೊತೆಗೇ ಭಿತ್ತಿಯೇ ಕೆಳಗುದುರಿ ಪುಡಿಪುಡಿಯಾಗಿ ಬಿದ್ದಿರುತ್ತದೆ. ನಿಪ್ಪಾಣಿಯ ವಾಡೆಯಲ್ಲಿನ ಹೊರಚಾವಡಿಯ ಚಿತ್ರಗಳು. ಗುಳೇದಗುಡ್ಡದ ಹೊಸಮನಿಗೌಡರ ಮನೆಯ ಚಿತ್ರಗಳು. ನರಗುಂದದ ವೆಂಕಟರಮಣ ದೇವಾಲಯದ ಭಿತ್ತಿಚಿತ್ರಗಳಲ್ಲಿ ಇಂತಹ ತೊಂದರೆ ಇದೆ.

**IV. ಕಣಜದ ಹುಳು :** ಕಣಜದ ಹುಳು ಎಂಬ ಒಂದು ರೀತಿಯ ಕೀಟವು ಭಿತ್ತಿ ಚಿತ್ರಗಳ ಮೇಲೆ ಗೂಡುಕಟ್ಟಿ ವಾಸಮಾಡುವುದರಿಂದ ಚಿತ್ರಗಳಿಗೆ ಹಾನಿ ಸಂಭವಿಸುತ್ತದೆ. ಈ ಪ್ರಕಾರದ ಕೀಟಗಳು ಮಣ್ಣು ಉಪಯೋಗಿಸಿ ಗೂಡುಕಟ್ಟುತ್ತವಲ್ಲದೇ ಆ ಗೂಡುಗಳಿಗೆ ನೀರಿನ ಸಂಪರ್ಕ ಉಂಟಾದಾಗ ಮಣ್ಣುಕರಗಿ[೩೪] ಚಿತ್ರಗಳ ಮೇಲೆಲ್ಲ ವ್ಯಾಪಿಸುವುದು. ಈ ರೀತಿ ಕೀಟಗಳು ಭಿತ್ತಿಚಿತ್ರಗಳ ಮೇಲೆ ಗೂಡುಕಟ್ಟಿರುವುದನ್ನು ಅಲ್ಲಲ್ಲಿ ನೋಡಬಹುದು. ಗುಳೇದಗುಡ್ಡದ ಹೊಸಮನಿ ಗೌಡರ ಮನೆ. ರಾಯಚೂರಿನ ಖಾಜಿನಗೌಡರ ಮನೆ. ನಿಪ್ಪಾಣಿಯ ರಾಜವಾಡೆ. ಉತ್ತರ ಕನ್ನಡ ಜಿಲ್ಲೆಯ ಗೋಕರ್ಣದ ಪರ್ತಗಾಳಿಮಠ ಸಿದ್ಧಾಪುರ ತಾಲೂಕಿನ ಬಿಳಗಿಯ ಬೇಡ್ಕಣಿ ಸೀತಾರಾಮಚಂದ್ರ ದೇವಾಲಯ. ಪಕ್ಕದಲ್ಲಿರುವ ತಿಮ್ಮಣ್ಣ ಪೈಯವರ ಮನೆಯ ಭಿತ್ತಿಚಿತ್ರಗಳ ಮೇಲೆ ಈ ಬಗೆಯ ಕೀಟವು ಗೂಡುಕಟ್ಟಿದ್ದನ್ನು ನೋಡಬಹುದಾಗಿದೆ.

**V. ಜೇಡದ ಹುಳು :** ನಿರ್ವಾಸಿತ ಪ್ರದೇಶದಲ್ಲಿ ಸಾಮಾನ್ಯವಾಗಿಸಿಸುವ ಕೀಟ ಜೇಡ. ಇದು ತನ್ನ ಜೊಲ್ಲಿನಿಂದಲೇ ಬಲೆ ಕಟ್ಟುವುದಲ್ಲದೇ ಅದುಕಟ್ಟಿದ ಬಲೆಯಲ್ಲಿ ಅನೇಕ ಸೂಕ್ಷ್ಮ ಕೀಟಗಳು ಸಿಕ್ಕಿಕೊಳ್ಳುವುದು ಸಾಮಾನ್ಯ ಸಂಗತಿ. ಜೇಡದ ಹುಳುವಿನ ಮಲ ಮೂತ್ರವಲ್ಲದೇ ಅದರ ಬಲೆಯಲ್ಲಿ ಸಿಕ್ಕಿಕೊಂಡ ಇತರ ಕೀಟಗಳ ತ್ಯಾಜ್ಯವಸ್ತುಗಳೂ ಭಿತ್ತಿಚಿತ್ರಗಳ ಮೇಲೆ ಪರಿಣಾಮ ಉಂಟುಮಾಡುತ್ತವೆ. ಜೇಡವು ಬಲೆಕಟ್ಟಿ ವಾಸಿಸುವುದು ಹೆಚ್ಚಿನ ಭಿತ್ತಿ ಚಿತ್ರಗಳಲ್ಲಿ ಕಂಡುಬರುವುದು. ಅದರಲ್ಲೂ ವಸತಿ ಇರದ ಕೋಣೆಗಳಲ್ಲಿ ಈ ತೊಂದರೆ ಹೆಚ್ಚು. ರಾಯಚೂರಿನ ಖಾಜಿನಗೌಡರ ಮನೆ. ಗುಳೇದಗುಡ್ಡದ ಹೊಸಮನಿ ಗೌಡರ ಮನೆ. ನಿಪ್ಪಾಣಿಯ ರಾಜವಾಡೆಗಳಲ್ಲಿನ ಭಿತ್ತಿಚಿತ್ರಗಳ ಸ್ಥಳಗಳು ಜನವಸತಿಯಿಂದ ಪ್ರತ್ಯೇಕವಿದ್ದು ಇಲ್ಲಿ ಜೇಡದ ಬಲೆ ಅಂಟಿದ್ದು ಕಂಡುಬರುತ್ತದೆ.

**V. ಸೂಕ್ಷ್ಮಾಣುಜೀವಿ ಶಿಲೀಂಧ್ರಗಳು :** ಪ್ರಾಚೀನ ದೇವಾಲಯಗಳ ಕಲ್ಲಿನ ಕೆತ್ತನೆ ಮೇಲೆ ಕೆಲವು ಸೂಕ್ಷ್ಮಾಣುಜೀವಿ ಶಿಲೀಂಧ್ರಗಳು ವಾಸಮಾಡಿ ತಾವು ಬಿಡುಗಡೆಗೊಳಿಸುವ ಗಂಧಕಾಮ್ಲದಿಂದ ಶಿಲ್ಪಗಳನ್ನು ಪದರ ಪದರವಾಗಿ ನಾಶಗೊಳಿಸುತ್ತವೆ ಎನ್ನಲಾಗಿದ್ದು ಅದೇ ಪ್ರಕಾರ ಭಿತ್ತಿಚಿತ್ರಗಳ ಮೇಲೂ ಸೂಕ್ಷ್ಮಾಣುಜೀವಿಗಳು ವಾಸಮಾಡಿ ಚಿತ್ರಗಳಿಗೆ

---

೩೩. J. C. Nagpal : Mural Paintings In India, Page 14

೩೪. ಗಜೇಂದ್ರ ಎಸ್. ತ್ಯಾಗಿ : ಪ್ರಿಹಿಸ್ಟಾರಿಕ್ ಆರ್ಟ್ಸ್ ಇನ್ ಇಂಡಿಯಾ. ೧೧೨

ಹಾನಿಮಾಡುತ್ತವೆ. ಅಜಂತಾ ಭಿತ್ತಿ ಚಿತ್ರಗಳ ಮೇಲೆ ಇಂತಹ ಸೂಕ್ಷ್ಮಾಣುಜೀವಿಗಳು ವಾಸಮಾಡುತ್ತಿರುವುದನ್ನು[೩೫] ಗುರುತಿಸಲಾಗಿದೆ. ಸೂಕ್ಷ್ಮಾಣುಜೀವಿಗಳ ದಾಳಿಯಿಂದ ಶಿಲ್ಪಗಳು ಪದರ ಪದರವಾಗಿ ಉದುರಿನಾಶವಾದರೆ,. ಭಿತ್ತಿ ಚಿತ್ರಗಳು ಭಿತ್ತಿಸಮೇತವಾಗಿ ಪುಡಿಪುಡಿಯಾಗಿ ಉದುರತ್ತದೆ. ನರಗುಂದದ ಅರಮನೆಯ ಭಿತ್ತಿಚಿತ್ರಗಳು, ನಿಪ್ಪಾಣಿಯ ರಾಜವಾಡೆಯ ಒಳಕೋಣೆಯ ಚಿತ್ರಗಳು, ಹಂಪಿಯ ವಿರೂಪಾಕ್ಷದೇವಾಲಯದ ಹಿಂಭಾಗದ ಚಿತ್ರಗಳು, ಕನಕಗಿರಿಯ ಕನಕಾಚಲಪತಿ ದೇವಾಲಯದ ಚಿತ್ರಗಳು. ಬಿಜಾಪುರದ ಅಸರ್ ಮಹಲ್ ಗುಳೇದಗುಡ್ಡದ ಹೊಸಮನಿಗೌಡರ ಮನೆಯ ಭಿತ್ತಿಚಿತ್ರಗಳಲ್ಲಿ ಮತ್ತು ಉತ್ತರ ಕನ್ನಡ ಜಿಲ್ಲೆಯ ಗೋಕರ್ಣದ ಪರ್ತಗಾಳಿ ಮಠದ ಕಾವಿಭಿತ್ತಿ ಚಿತ್ರಗಳಲ್ಲಿ ವರ್ಣ ಮತ್ತು ಭಿತ್ತಿಯು ಪುಡಿಯಾಗಿ ಕೆಳಗುದರಿ ಬೀಳುತ್ತಿರುವುದು ಸೂಕ್ಷ್ಮಾಣು ಜೀವಿಗಳ ದಾಳಿಯಿಂದಲೇ ಎನ್ನಬಹುದು. ಭಿತ್ತಿ ಚಿತ್ರಗಳ ಮೇಲೆ ತೇವ ಹೆಚ್ಚಾದಾಗ ಕೆಲವು ಬ್ಯಾಕ್ಟೀರಿಯಾ ರೂಪದ ಸೂಕ್ಷ್ಮಾಣು ಜೀವಿಗಳು ವಾಸಮಾಡುವುದರಿಂದ ಹಸಿರು ಹಳದಿ ಮಿಶ್ರಿತ ಪಾಚಿಯು ಬೆಳೆಯುವುದನ್ನು ಈ ಹಿಂದೆ ಹೇಳಿದೆ. ಈ ತೊಂದರೆ ತಂಪುಹೆಚ್ಚಾಗಿರುವ ಕರಾವಳಿ ಪ್ರದೇಶದ ಕಾವಿ ಭಿತ್ತಿಚಿತ್ರಗಳಲ್ಲಿ ಹೆಚ್ಚಾಗಿ ಕಂಡುಬರುವುದು. ಇದುವರೆಗೂ ಚರ್ಚಿಸಲಾದ ವಿವಿಧ ರೀತಿಯ ವಿಪತ್ತುಗಳಿಗೊಳಗಾದ ಭಿತ್ತಿ ಚಿತ್ರಗಳನ್ನು ಹಲವು ವಿಧಾನಗಳಿಂದ ಸಂರಕ್ಷಿಸಬಹುದಾಗಿದೆ. ಪ್ರಾಚೀನರು ಭಿತ್ತಿ ಚಿತ್ರಗಳು ಅಳಿದು ಹೋಗದಂತೆ ತಮ್ಮದೇ ಆದ ವಿಧಾನಗಳಿಂದ ಸಂಸ್ಕಾರಗೊಳಿಸುತ್ತಿದ್ದುದೂ ತಿಳಿದು ಬರುವುದು. ಪ್ರಾಚೀನ ಭಿತ್ತಿಚಿತ್ರರಕ್ಷಣೆಯಲ್ಲಿ ಅನುಸರಿಸುತ್ತಿದ್ದ ವಿಧಾನಗಳಾವವು ಎನ್ನುವುದನ್ನು ನೋಡಿ. ಇಂದಿನ ಆಧುನಿಕ ವಿಧಾನಗಳಿಂದ ಭಿತ್ತಿಚಿತ್ರಗಳನ್ನು ಹೇಗೆ ಸಂರಕ್ಷಿಸಬಹುದು ಎನ್ನುವ ಕ್ರಮಗಳನ್ನು ಕುರಿತು ಚರ್ಚಿಸುವುದು ಅವಶ್ಯವೆನಿಸುವ ಅಂಶವಾಗಿದೆ.

ಭಿತ್ತಿ ಚಿತ್ರಕಲೆಯ ಸಂರಕ್ಷಣೆ



೧ **ನೇರ ಕ್ರಮಗಳು**

I. ಪುನಃ ರೂಪಿಸುವುದು
II. ಪ್ರತಿಮಾಡುವುದು
III. ನಕಲು ಮಾಡುವುದು
IV. ಛಾಯಾಚಿತ್ರಣ ಮಾಡುವುದು
V. ಸ್ಲೈಡ್ಸ್ ಮಾಡುವುದು
VI. ವಿಡಿಯೋ ಚಿತ್ರೀಕರಣ ಮಾಡುವುದು
VII. ಮೈಕ್ರೋಫಿಲಂನಲ್ಲಿ ಅಳವಡಿಸುವುದು

೨ **ಪೂರಕ ಕ್ರಮಗಳು**

I. ಪುಸ್ತಕಗಳಲ್ಲಿ ಭಿತ್ತಿಚಿತ್ರಗಳನ್ನು ಮುದ್ರಿಸುವುದು
II. ಅಲಂಕಾರಿಕ ವಾಣಿಜ್ಯವಸ್ತುಗಳಲ್ಲಿ ಭಿತ್ತಿಚಿತ್ರಗಳನ್ನು ರೂಪಿಸುವುದು

**ಭಿತ್ತಿ ಚಿತ್ರಕಲೆಯ ಸಂರಕ್ಷಣೆ :** ನೂರಾರು ಸಾವಿರಾರು ವರ್ಷಗಳ ಹಿಂದೆ ರಚಿಸಿದ. ಶಿಥಿಲಗೊಂಡ. ಅಥವಾ ಬಹುತೇಕ ವಿನಾಶಕ್ಕೀಡಾದ ಚಿತ್ರ. ಶಿಲ್ಪ. ಮೊದಲಾದ ಕಲಾಕೃತಿಗಳನ್ನು ಇನ್ನೂ ಅನೇಕ ತಲೆಮಾರುಗಳ ಕಾಲ ಉಳಿಸಿ

೩೫. ಪ್ರಜಾವಾಣಿ ಸಾಪ್ತಾಹಿಕ ಪುರವಣಿ : ೨೪ ಸೆಪ್ಟೆಂಬರ್ ೧೯೯೫. ಪುಟ ೧. ಅಜಂತಾ ಭಿತ್ತಿ ಚಿತ್ರ ಶಿಲ್ಪ ಸಂರಕ್ಷಣೆ ಸಾಧ್ಯವೆ ? ಕೆ. ವಿ. ಸುಬ್ರಹ್ಮಣ್ಯಂ

ಕಾಪಾಡುವದಾದರೂ ಹೇಗೆನ್ನುವ ಪ್ರಶ್ನೆ ಇಂದು ನಿನ್ನೆಯದಾಗಿರನೇ ಅನೇಕ ವರ್ಷಗಳಿಂದಲೂ ಕಾಡುತ್ತಿದೆ. ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರಗಳಲ್ಲಿ ಈ ಶತಮಾನದ ಮೊದಲಿನಿಂದಾದ ತೀವ್ರ ಮುನ್ನಡೆ ಕಲಾ ಪ್ರಪಂಚದಲ್ಲೂ ತನ್ನ ಪ್ರಭಾವ ಬೀರಿ ಈ ಪ್ರಶ್ನೆಗೆ ಸ್ವಲ್ಪಮಟ್ಟಿನ ಉತ್ತರವನ್ನೊದಗಿಸಿದೆ. ಕಲಾಕೃತಿಯೊಂದರ ಮೇಲಾಗಿರುವ ವಿರೂಪವನ್ನು ವೈಜ್ಞಾನಿಕ ವಿಧಾನಗಳಿಂದ ಹೋಗಲಾಡಿಸಿ ಅದನ್ನು ಸಾಧ್ಯವಾದಷ್ಟು ಮಟ್ಟಿಗೆ ಮೂಲತಃ ಇದ್ದ ಸ್ಥಿತಿಗೆ ಸಮೀಪ ತರುವ ತಂತ್ರ ಕೆಲವು ರಾಸಾಯನಿಕಗಳ ಮೂಲಕ ಸಾಧ್ಯವಾಗುತ್ತದೆ[೩೬] ಎಂದು ತಿಳಿದುಬರುತ್ತದೆ. ಆದರೂ ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಇಷ್ಟೊಂದು ಪ್ರಗತಿ ಸಾಧಿಸಿದಾಗ್ಯೂ ಹೊಸ ಹೊಸ ವೈಜ್ಞಾನಿಕ ವಿಧಾನಗಳನ್ನು ಅನುಸರಿಸಿ ಕಲಾಕೃತಿಗಳನ್ನು ಸಂರಕ್ಷಣೆಗೊಳಪಡಿಸಿದಾಗಲೂ ಅವು ಅತಿಹೆಚ್ಚು ದಿನಗಳವರೆಗೆ ಬಾಳಿಕೆ ಬರುತ್ತವೆ ಎಂದು ಹೇಳುವಂತಿಲ್ಲ. ಕೆಲವು ದಿನಗಳಲ್ಲೇ ಮತ್ತೆ ವಿವಿಧ ಬಗೆಯ ಆಪತ್ತುಗಳಿಗೀಡಾಗಿ ಶಿಥಿಲವಾಗುತ್ತ ಸಾಗುತ್ತವೆ. ಆದುದರಿಂದ ಪ್ರಾಚೀನ ಕಲಾಕೃತಿಗಳು ಹೆಚ್ಚುದಿನ ಬಾಳಿಕೆ ಬರುವಂತಾಗಲು ಅವುಗಳ ಸಂರಕ್ಷಣಾ ವಿಧಾನಗಳಲ್ಲಿ ಇನ್ನೂ ಹೊಸ ಹೊಸ ಸಂಶೋಧನೆಗಳಾಗಬೇಕಿದೆ. ಈ ದಿಸೆಯಲ್ಲಿ ಪ್ರಾಚೀನರು ಕಲಾ ಕೃತಿಗಳ ಸಂರಕ್ಷಣೆಯಲ್ಲಿ ಅನುಸರಿಸುತ್ತಿದ್ದ ಕ್ರಮಗಳತ್ತ ನಾವು ಮತ್ತೆ ಹಿಂತಿರುಗಿ ನೋಡಬೇಕಿದೆ. ಅಜಂತಾ ಮತ್ತಿತರ ಗುಹೆಗಳ ಭಿತ್ತಿ ಸೂರುಗಳಲ್ಲಿ ಕೆಂಪು. ಕೆಂಗಾವಿ. ಬಿಳುಪು. ಮತ್ತು ಕಪ್ಪು ಲೇಪಗಳು ಇಂದಿಗೂ ಪ್ರಖರವಾಗಿ ಉಳಿದಿರುವುದಕ್ಕೆ ಅವುಗಳಲ್ಲಿಯ ಪ್ರಕೃತಿ ಸಹಜ ಕ್ರಿಮಿನಾಶಕ ಗುಣಗಳಿಂದ[೩೭] ಎನ್ನಲಾಗುತ್ತದೆ. ಅದೇ ರೀತಿ ಕೆಂಗಾವಿಯನ್ನು ಲೇಪಿಸಿರುವುದು ಹಂಪೆಯ ವಿರೂಪಾಕ್ಷ ದೇವಾಲಯದಲ್ಲೂ ಕಾಣಬಹುದು. ಇಲ್ಲಿನ ಕಂಬಗಳು. ಗೋಡೆ. ಮೇಲ್ಛಾವಣಿ ಎಲ್ಲಕಡೆಗೂ ಕೆಂಗಾವಿಲೇಪನವಿದೆ. ಹಾಗೇ ಬಾದಾಮಿಯ ಗುಹಾಲಯಗಳಲ್ಲೂ ಶಿಲ್ಪಗಳಿಗೆ ಛತ್ತುಗೋಡೆಗಳಿಗೆ ಇನ್ನೂ ಅನೇಕ ಪ್ರಾಚೀನ ದೇವಾಲಯಗಳಲ್ಲಿ ಕೆಂಗಾವಿಯಂತೆ ಕಪ್ಪು. ಬಿಳಿ ಲೇಪನವಿರುವುದನ್ನು ನೋಡಬಹುದು. ಪ್ರಾಚೀನರು ಈ ಲೇಪನಗಳನ್ನು ಸೌಂದರ್ಯದ ಜೊತೆಗೆ ಸಂರಕ್ಷಣೆಯ ದೃಷ್ಟಿಯಿಂದಲೂ ಲೇಪಿಸುತ್ತಿರಬಹುದು ಎನಿಸುತ್ತದೆ. ಸೂಕ್ಷ್ಮಾಣುಜೀವಿ ಶೀಲಿಂಧ್ರಗಳ ಧಾಳಿಯಿಂದ ಶಿಲ್ಪಗಳು ನಾಶವಾಗದೇ ಇರಲಿ ಎನ್ನುವ ಕಾರಣಕ್ಕಾಗಿ ಲೇಪಿಸುತ್ತಿರಬಹುದು. ಹಾಗೇ ಪ್ರಾಚೀನರು ಭಿತ್ತಿ ಚಿತ್ರರಚನೆಯ ನಂತರ ಅವುಗಳು ಹೆಚ್ಚುಕಾಲ ಉಳಿದುಬರಲು ತಮ್ಮದೇ ಆದ ವಿಧಾನಗಳನ್ನು ಅನುಸರಿಸುತ್ತಿದ್ದರು ಚಿತ್ರರಚನೆಯ ನಂತರ ಚಿತ್ರದ ಮೇಲೆ ರಕ್ಷಣೆಗಾಗಿ 'ರಾಳ' (dammar) ಮರದಂಟು[೩೮] ಮತ್ತು ಹರಿದಳ. ದೇವದಾರು ಮರದಎಣ್ಣೆ. ಪಟಕದ ಹರಳು[೩೯]ಗಳಂತಹ ವಿವಿಧ ವಸ್ತುಗಳಿಂದ ಸಂಸ್ಕಾರ ಮಾಡುತ್ತಿದ್ದರೆಂದು ತಿಳಿದು ಬರುವುದು. ಇವು ಕಾಲಕ್ರಮೇಣ ಹಳದಿ ಇಲ್ಲವೇ ದಟ್ಟಕಂದು ಬಣ್ಣಕ್ಕೆ ತಿರುಗಿದರೂ ಅವುಗಳಲ್ಲಿರುವ ಕ್ರಿಮಿನಾಶಕಗುಣಗಳಿಂದ ಸೂಕ್ಷ್ಮಾಣುಜೀವಿಗಳ ದಾಳಿಯಿಂದ ಹೆಚ್ಚಿನ ಸಮಯದವರೆಗೆ ಚಿತ್ರಗಳನ್ನು ರಕ್ಷಿಸುತ್ತಿದ್ದವೆನ್ನುವುದೂ ಸತ್ಯಸಂಗತಿ. ಆದುದರಿಂದ ಪ್ರಾಚೀನರು ಶಿಲ್ಪಗಳಿಗ ಲೇಪಿಸುತ್ತಿದ್ದ ಕೆಂಗಾವಿಯಂತಹ ಲೇಪನಗಳು. ಭಿತ್ತಿ ಚಿತ್ರಗಳಿಗೆ ಲೇಸುತ್ತಿದ್ದ ವಿವಿಧ ದ್ರಾವಕಗಳ ಬಗೆಗೆ ಹೆಚ್ಚಿನ

---

೩೬. ಸುಧಾ (ವಾರಪತ್ರಿಕೆ) : ಮಾರ್ಚ ೨, ೧೯೯೭, ಪುಟ ೪೨. ಮಾಸಿಹೋದ ಚಿತ್ರಕ್ಕೆ ಮತ್ತೆ ಕಾಯಕಲ್ಪ. ಕೆ. ಎಸ್. ರಮಣ್.

೩೭. ಪ್ರಜಾವಾಣಿ ಸಾಪ್ತಾಹಿಕ ಪುರವಣಿ : ೨೪ ಸೆಪ್ಟೆಂಬರ್ ೧೯೯೫. ಪುಟ ೧, ಅಂಜತಾ ಭಿತ್ತಿ ಚಿತ್ರ ಶಿಲ್ಪ ಸಂರಕ್ಷಣೆ ಸಾಧ್ಯವೆ ? ಕೆ. ವಿ. ಸುಬ್ರಹ್ಮಣ್ಯಂ

೩೮. Marg : Vol. 49, No. 2. December, 1997, Page 68

೩೯. ಡಾ. ಬಿ. ಕೆ. ಹಿರೇಮಠ : ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ, ಪುಟ ೨೩೨

ವೈಜ್ಞಾನಿಕ ಸಂಶೋಧನೆ ನಡೆಯಬೇಕಾಗಿದೆ. ಎನ್ನುವ ಮಾತನ್ನು ಹೇಳಿ ಭಿತ್ತಿ ಚಿತ್ರಕಲೆಯ ಸಂರಕ್ಷಣೆಯ ಕ್ರಮಗಳನ್ನು ನೋಡಬಹುದು. ಇಲ್ಲಿ ಭಿತ್ತಿ ಚಿತ್ರಗಳ ಸಂರಕ್ಷಣೆಯಲ್ಲಿ ಅನುಸರಿಸುವ ವೈಜ್ಞಾನಿಕ ವಿಧಾನಗಳನ್ನು ಕುರಿತು ವಿವರಣೆ ನೀಡದೇ ಭಿತ್ತಿ ಚಿತ್ರಗಳ ಸಂರಕ್ಷಣೆಯಲ್ಲಿ ಕೈಕೊಳ್ಳಬಹುದಾದ ಕ್ರಮಗಳನ್ನು ಸೂಚಿಸಲಾಗಿದೆ.

ಭಿತ್ತಿ ಚಿತ್ರಗಳ ಸಂರಕ್ಷಣೆಯಲ್ಲಿ ಕೈಗೊಳ್ಳಬಹುದಾದ ಕ್ರಮಗಳನ್ನು ನೇರಕ್ರಮಗಳು. ಪೂರಕಕ್ರಮಗಳೆಂದು ಎರಡು ಭಾಗಗಳಲ್ಲಿ ವರ್ಗೀಕರಿಸಿಕೊಂಡು ವಿವರಿಸಬಹುದು. ನೇರಕ್ರಮಗಳಲ್ಲಿ ಭಿತ್ತಿ ಚಿತ್ರಗಳನ್ನು ವಿವಿಧ ವಿಧಾನಗಳಿಂದ ಸಂರಕ್ಷಣೆಗೊಳಿಸಿ ಕಾಯ್ದಿಡುವುದಾದರೆ. ಪೂರಕ ಕ್ರಮಗಳಲ್ಲಿ ಭಿತ್ತಿ ಚಿತ್ರಗಳನ್ನು ಮತ್ತೊಂದು ಮಾಧ್ಯಮದ ಮೂಲಕ ಉಳಿಸಿಕೊಳ್ಳುವುದಾಗಿದೆ. ಇವುಗಳನ್ನು ಕುರಿತು ಒಂದೊಂದಾಗಿ ಹೀಗೆ ವಿವರಿಸಬಹುದು.

**೧. ನೇರ ಕ್ರಮಗಳು :** ನೇರ ಕ್ರಮಗಳಲ್ಲಿ ಮತ್ತೆ ಉಪವಿಭಾಗಗಳನ್ನು ಹೀಗೆ ಮಾಡಬಹುದು.

I. ಪುನಃರೂಪಿಸುವುದು

II. ಪ್ರತಿಮಾಡುವುದು

III. ನಕಲು ಮಾಡುವುದು

IV. ಛಾಯಾಚಿತ್ರಣ ಮಾಡುವುದು

V. ಸ್ಲೈಡ್ಸ್ ಮಾಡುವುದು

VI. ವಿಡಿಯೋ ಚಿತ್ರೀಕರಣ ಮಾಡುವುದು

VII. ಮೈಕ್ರೋಫಿಲಂನಲ್ಲಿ ಅಳವಡಿಸುವುದು

**I. ಪುನಃರೂಪಿಸುವುದು :** ಭಿತ್ತಿ ಚಿತ್ರಗಳ ಸಂರಕ್ಷಣೆಯ ನೇರಕ್ರಮಗಳಲ್ಲಿ ಹಾಳಾದ ಭಿತ್ತಿಚಿತ್ರಗಳನ್ನು ಪುನಃರೂಪಿಸವುದೂ ಒಂದು ಎನ್ನಬಹುದು. ಪುನಃರೂಪಿಸುವ ಮೊದಲ ಹಂತವಾಗಿ ಭಿತ್ತಿ ಚಿತ್ರಗಳ ಮೇಲೆ ಆವರಿಸಿರುವ ಧೂಳನ್ನು ನವಿರಾದ ಕುಂಚದಿಂದ ತೆಗೆದು ಸ್ವಚ್ಛಗೊಳಿಸಬೇಕು. ಆಮೇಲೆ ಚಿತ್ರಕ್ಕೆ ಅಂಟಿರುವ ಕಾಡಿಗೆ, ಜಿಡ್ಡು ಹಾಗೂ ಇತರ ಕಲೆಗಳಲ್ಲದೇ ಚಿತ್ರದ ಮೇಲೆ ಲೇಪಿಸಿರಬಹುದಾದ ಹಳೆಯ ಲೇಪನಗಳನ್ನು ಯೋಗ್ಯರಾಸಾಯನಿಕ ದ್ರವ್ಯಗಳನ್ನು ಬಳಸಿ ತೆಗೆಯಬೇಕು.[೮೦] ಈ ರೀತಿ ಸ್ವಚ್ಛಗೊಳಿಸುವಾಗ ಚಿತ್ರಗಳಿಗೆ ಹಾನಿಯಾಗದಂತೆ ಎಚ್ಚರವಹಿಸಬೇಕಾದುದು ಅತ್ಯವಶ್ಯ. ಈ ರೀತಿ ಸ್ವಚ್ಛಗೊಳಿಸುವಾಗ ಈ ಮೊದಲೇ ಆ ಚಿತ್ರ ಸಂರಕ್ಷಣೆಗೊಳಗಾಗಿದ್ದರೆ ಸಂರಕ್ಷಣೆಯ ಸಮಯದಲ್ಲಿ ತುಂಬಲಾದ ಭಿತ್ತಿಯ ಸತ್ವಕಳೆದುಕೊಂಡ ಭಾಗ. ಅಲ್ಲಲ್ಲಿ ಲೇಪಿಸಿದ ಬಣ್ಣ ಮತ್ತು ಚಿತ್ರಣಮಾಡಿದ ಹೊಂದಾಣಿಕೆಯಾಗದ ಅಂಶವನ್ನೂ ತೊಳೆದು ತೆಗೆಯಬೇಕಾಗುವುದು. ಇವುಗಳನ್ನು ಸಹಿತ ಸೂಕ್ತರಾಸಾಯನಿಕಗಳಿಂದ ತೊಳೆದು ತೆಗೆದನಂತರ ಮುಂದಿನ ಹಂತವಾಗಿ ಹಾನಿಗೊಳಗಾದ ಭಾಗವನ್ನು ಪುನಃ ರೂಪಿಸುತ್ತ ಸಾಗಬೇಕು.[೮೧] ಎಂಬ ವಿವರಗಳು ಸಿಗುತ್ತವೆ. ಅಲ್ಲಲ್ಲಿ ಉದುರಿದ. ಕಳಚಿಬಿದ್ದ. ಇಲ್ಲವೇ ಕೀಟಗಳ ಧಾಳಿಯಿಂದ ಉಂಟಾದ ಕುಳಿಗಳ ಭಾಗವನ್ನು ಪ್ಯಾರೇಥರ್ಮ (Pyrethrum) ದ್ರಾವಣದಿಂದ ಉಪಚರಿಸಬೇಕು.

---

೮೦. ಸುಧಾ : (ವಾರಪತ್ರಿಕೆ). ಮಾರ್ಚ ೨, ೧೯೭೭. ಪುಟ ೪೩. ಮಾಸಿಹೋದ ಚಿತ್ರಗಳಿಗೆ ಮತ್ತೆ ಕಾಯಕಲ್ಪ. ಕೆ. ಎಸ. ರಮಣ್.

೮೧. Marg : Vol. 49, No. 2. December, 1997, Page 69

ಭಿತ್ತಿಯ ನಾಶವಾದ ಭಾಗವನ್ನು ಹೀಗೆ ಪ್ಯಾರೇಥರ್ಮ ದ್ರಾವಣದಿಂದ ಉಪಚರಿಸುವದರಿಂದ ಕೀಟಗಳ ಚಟುವಟಿಕೆಯನ್ನು ತಕ್ಕಮಟ್ಟಿಗೆ ಹತೋಟಿಯಲ್ಲಿಡಬಹುದೆಂದು[೪೨] ಹೇಳಲಾಗುತ್ತದೆ. ಹೀಗೆ ಉಪಚರಿಸಿದ ನಂತರ ಹಾಳಾದ ಕಡೆಯಲ್ಲೆಲ್ಲ ಮೂಲಭಿತ್ತಿಗೆ ಹೊಂದಾಣಿಕೆಯಾಗುವ ಗಾರೆಯ ಮಿಶ್ರಣವನ್ನು ತುಂಬಬೇಕು. ಈ ಗಾರೆ ಮಿಶ್ರಣ ಆರಿದ ನಂತರ ಭಿತ್ತಿ ಚಿತ್ರದ ಹಿನ್ನೆಲೆ ವರ್ಣವನ್ನು ನೋಡಿಕೊಂಡು ಸರಿಹೊಂದುವ ಹಿನ್ನೆಲೆ ಲೇಪನವನ್ನು ಹೊಸದಾಗಿ ಗಾರೆತುಂಬಿದ ಸ್ಥಳಗಳಿಗೆ ಲೇಪಿಸಬೇಕೆಂದು[೪೩] ತಿಳಿದುಬರುವುದು. ಮುಂದಿನ ಹಂತವಾಗಿ ವರ್ಣವು ಉದುರಿಹೋದ ಕಡೆ. ಮತ್ತು ಹೊಸದಾಗಿ ಭಿತ್ತಿ ಲೇಪನ ಮಾಡಿದ ಕಡೆ ಮೂಲಚಿತ್ರದ ವರ್ಣಗಳಿಗೆ ಚ್ಯುತಿಬಾರದಂತೆ ಯೋಗ್ಯ ವರ್ಣವನ್ನು ತುಂಬಬೇಕು. ಈ ನಡುವೆ ಭಿತ್ತಿಯಗಾರೆ ಲೇಪನ ಮಾಡಲು ಮತ್ತು ಹಿನ್ನೆಲೆ ವರ್ಣಲೇಪಿಸಲು ಯೋಗ್ಯ ಅಂಟುದ್ರಾವಕವನ್ನು ಬಳಸಬೇಕಾಗುವುದು. ಇದಕ್ಕಾಗಿ ಪ್ರಾಚೀನ ಪದ್ಧತಿಯ ಅಂಟುದ್ರಾವಕಗಳನ್ನು ಬಳಸದೇ ಹೊಸದಾಗಿ ಸಂಶೋಧಿಸಿದ ಅಂಟುದ್ರಾವಕಗಳನ್ನು ಬಳಸಬೇಕೆಂದು[೪೪] ತಜ್ಞರು ಅಭಿಪ್ರಾಯ ಪಡುತ್ತಾರೆ.

ಸಾಂಪ್ರದಾಯಿಕ ಪದ್ಧತಿಯ ಅಂಟುದ್ರಾವಕಗಳನ್ನು ಬಳಸಿದಾಗ ಕೆಲವು ತೊಂದರೆಗಳು ಮುಂದೆ ಕಾಣಿಸಿಕೊಳ್ಳುತ್ತವೆ. ಸಾಂಪ್ರದಾಯಿಕ ಅಂಟುಮಾಧ್ಯಮವಾದ ಮೇಣವನ್ನು ಭಿತ್ತಿ ಚಿತ್ರಗಳ ರಚನಾ ಸಂದರ್ಭದಲ್ಲಿ ಬಳಸಿದಾಗ ಮುಂದಿನ ದಿನಗಳಲ್ಲಿ ಚಿತ್ರಗಳ ವರ್ಣವು ಆಂತರಿಕವಾಗಿ ಸತ್ವಕಳೆದುಕೊಂಡು ಮಸುಕಾಗಿ. ಶಕ್ತಿಹೀನವಾಗಿ ಬೇಗನೇ ಉದುರುವುದು. ಅಲ್ಲದೇ ಭಾರತದಂತಹ ಉಷ್ಣವಾತಾವರಣವಿರುವ ಪ್ರದೇಶದಲ್ಲಿ ಮೇಣವನ್ನು ಅಂಟುಮಾಧ್ಯಮವಾಗಿ ಬಳಸಿದಾಗ ಉಷ್ಣತೆಯ ಪ್ರಭಾವದಿಂದ ಮೇಣವು ಕರಗಿ ಭಿತ್ತಿಯ ಸೂಕ್ಷ್ಮ ರಂಧ್ರಗಳಲ್ಲಿ ಇಳಿದು ಮುಂದಿನ ದಿನಗಳಲ್ಲಿ ಸ್ವಚ್ಛಗೊಳಿಸಲು ಸುಲಭವಾಗಿ ಬರಲಾರದು. ಹಾಗೇ ಪ್ರಾಣಿಗಳ ಮೂಲದ ವಜ್ರಸರಿ. ಸಸ್ಯಮೂಲದ ಅಂಟುಗಳನ್ನು ಬಳಸಿದಾಗ ಇವುಗಳಲ್ಲಿರುವ ಸಾರಜನಕ ಪದಾರ್ಥವು ಕೀಟಗಳಿಗೆ ಆಹಾರವಾಗಿ ಭಿತ್ತಿಚಿತ್ರಗಳು ಬೇಗನೇ ಹಾಳಾಗುತ್ತವೆ. ಅಲ್ಲದೇ ತೇವಾಂಶ ಮತ್ತು ಉಷ್ಣಾಂಶದ ಏರುಪೇರಿನಿಂದ ಚಿತ್ರಗಳ ವರ್ಣವು ಚಕ್ಕಳೆಯಾಗಿ ಉದುರಿ ಹೋಗುವ ಸಾಧ್ಯತೆಯೂ ಇದೆ[೪೫] ಎನ್ನುವಂತಹ ಎಚ್ಚರಿಕೆಗಳನ್ನು ಪ್ರಾಚೀನ ಅಂಟುದ್ರಾವಕಗಳನ್ನು ಬಳಸುವಲ್ಲಿ ನೀಡಲಾಗಿದೆ. ಅದಕ್ಕಾಗಿ ಭಿತ್ತಿ ಚಿತ್ರಗಳನ್ನು ಪುನಃರೂಪಿಸುವ ಸಂದರ್ಭದಲ್ಲಿ ಈ ಪ್ರಾಚೀನ ಅಂಟುದ್ರಾವಕಗಳ ಬದಲಿಗೆ ಹೊಸದಾಗಿ ಸಂಶೋಧಿಸಲಾದ 'ಸಿಂಥೆಟಿಕ್ ಅಕ್ರಾಲಿಕ್ ಪಾಲಿಮರ್' (Synthetic Acrylic Polymer), ಪಾಲಿವಿನ್ಯೆಲ್ ಅಸಿಟೇಟ್ (Polyvinyl Acetate), ಕೇಟೋನ್ ಗೊಂದು (Ketone resins), ವಿವಿಧ ಬಗೆಯ 'ಅಕ್ರಾಲಿಕ್ಸ್'ಗಳನ್ನು 'ಅಂಟುಮಾಧ್ಯಮವಾಗಿ ಬಳಸಬೇಕೆಂದು[೪೬] ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಹೀಗೆ ಯೋಗ್ಯ ಅಂಟು ಮಾಧ್ಯಮ ಬಳಸಿ ಗಾರೆ ಮಿಶ್ರಣ. ಹಿನ್ನೆಲೆ ಲೇಪನ. ಬಣ್ಣಗಾರಿಕೆಯನ್ನೂ ಮಾಡಿದನಂತರವೂ ಚಿತ್ರಕ್ಕೆ ಅವಶ್ಯವಿದ್ದಲ್ಲಿ ಹೊರರೇಖೆ ಎಳೆಯಬೇಕು. ಹೀಗೆ ಹೊರರೇಖೆ ಎಳೆಯುವಾಗಲೂ ಮೂಲ ಚಿತ್ರಗಳಿಗೆ ಹೊಂದಾಣಿಕೆಯಾಗುವಂತೆ ಎಚ್ಚರಿಕೆ ವಹಿಸಬೇಕಾಗುವುದು. ಈ ರೀತಿಯ ಎಲ್ಲ ಪುನಃರೂಪಿಸುವ ಕೆಲಸಗಳು ಮುಗಿದ ನಂತರ ಇಡೀ ಚಿತ್ರದ ಮೇಲೆ ರಕ್ಷಣೆಗಾಗಿ ವಾರ್ನಿಸ್ ಪದರ ಲೇಪಿಸಲಾಗುವುದು. ಮೊದಮೊದಲು ಸೆಲ್ಲಾಕ್ ವಾರ್ನಿಸ್

---

೪೨. J. C. Nagpal : Mural Paingtings in India, Page 34

೪೩. Marg : Vol. 49, No. 2. December, 1997, Page 74

೪೪. Marg : Vol. 49, No. 2. December, 1997, Page 75

೪೫. Marg : Vol. 49, No. 2. December, 1997, Page 75

೪೬. Marg : Vol. 49, No. 2. December, 1997, Page 75

(Shellac Varnish) ಅನ್ನು ಭಿತ್ತಿಚಿತ್ರಗಳ ಮೇಲೆ ರಕ್ಷಣೆಗಾಗಿ ಲೇಪಿಸಲಾಗುತ್ತಿತ್ತು. ಆದರೆ ಈ 'ಸೆಲ್ಲಾಕ್ ವಾರ್ನಿಸ್' ಕೆಲವು ಕಾಲಾನಂತರ ದಟ್ಟಹಳದೀ ವರ್ಣಕ್ಕೆ ತಿರುಗಿ ಚಿತ್ರವನ್ನು ಮಸುಕಾಗಿ ಕಾಣುವಂತೆ ಮಾಡುತ್ತದಲ್ಲದೇ ಮೂಲಚಿತ್ರದ ವರ್ಣವೈವಿಧ್ಯ ಮತ್ತು ಹೊಳಪನ್ನೇ ಮರೆಮಾಡುತ್ತದೆ[೪೭] ಎನ್ನಲಾಗುತ್ತದೆ. ಅಜಂತಾ ಭಿತ್ತಿ ಚಿತ್ರಗಳನ್ನು ಹೈದರಾಬಾದ್ ನಿಜಾಮುನ ಕಾಲಕ್ಕೆ ೧೯೨೨ ರಲ್ಲಿ ಮೊದಲು ಸಂರಕ್ಷಣೆಗೊಳಪಡಿಸಿದಾಗ ಈ ಸೆಲ್ಲಾಕ್ ವಾರ್ನಿಸ್‌ನ್ನೇ ಲೇಪಿಸಲಾಗಿತ್ತು.[೪೮] ನಂತದ ದಿನಗಳಲ್ಲಿ ಅವುದಟ್ಟಹಳದಿ ವರ್ಣಕ್ಕೆ ತಿರುಗಿಕೊಂಡದ್ದು ನಾವಿಲ್ಲಿ ನೆನಪಿಸಿಕೊಳ್ಳಬಹುದು. ಹಾಗಾಗಿ 'ಸೆಲ್ಲಾಕ್ ವಾರ್ನಿಸ್' ಲೇಪಿಸುವುದು ಅಷ್ಟೊಂದು ಪರಿಣಾಮಕಾರಿಯಾದುದಲ್ಲ. ಅದರ ಬದಲಾಗಿ ಭಿತ್ತಿ ಚಿತ್ರಗಳ ಸಂರಕ್ಷಣೆಗೆ ಈಗ 'ಐಸೋಲೇಟಿಂಗ್ ಸಿಂಥೆಟಿಕ್ ವಾರ್ನಿಸ್' (Isolating Synthetic Varnish) ದ ಪದರವನ್ನು ಲೇಪಿಸಲಾಗುತ್ತದೆ[೪೯] ಎಂದು ತಿಳಿದುಬರುವುದು. ಇದು ಮುಂಬರುವ ದಿನಗಳಲ್ಲಿ ಕಪ್ಪಾಗದೇ, ಹಳದೀ ವರ್ಣಕ್ಕೆ ತಿರುಗದೇ ಹೆಚ್ಚು ದಿನಗಳವರೆಗೆ ಉಳಿದುಬರುವುದು. ಹೀಗೆ ರಕ್ಷಣೆಗಾಗಿ ಇಡೀ ಚಿತ್ರಕ್ಕೆ ಐಸೋಲೇಟಿಂಗ್ ಸಿಂಥೆಟಿಕ್ ವಾರ್ನಿಸ್‌ದ ಪದರವನ್ನು ಲೇಪಿಸಿದ ನಂತರ ಈ ಹಂತದಲ್ಲಿ ಮತ್ತೊಮ್ಮೆ ಇಡೀ ಚಿತ್ರವನ್ನು ಸೂಕ್ಷ್ಮವಾಗಿ ಗಮನಿಸಿ ಮೂಲಚಿತ್ರಕ್ಕೆ ಚ್ಯುತಿ ಉಂಟಾಗುವ ಅಂಶಗಳಿದ್ದರೆ ಅವುಗಳನ್ನು ತೆಗೆದು ಸರಿಹೊಂದುವಂತೆ ಪುನಃರೂಪಿಸಿ. ಇಡೀ ಚಿತ್ರಕ್ಕೆ ಮತ್ತೊಮ್ಮೆ 'ಐಸೋಲೇಟಿಂಗ್ ಸಿಂಥೆಟಿಕ್ ವಾರ್ನಿಸ್'ನ್ನು ಸ್ಪ್ರೇ ಮಾಡಬೇಕು[೫೦] ಎಂದು ತಿಳಿದುಬರುವುದು. ವಾರ್ನಿಸ್‌ದ ಈ ಪದರವು ಚಿತ್ರದ ಮೇಲ್ಮೈ ಮೇಲೆ ಗಾಜಿನಂತೆ ಕೆಲಸಮಾಡಿ ಚಿತ್ರಕ್ಕೆ ರಕ್ಷಣೆಕೊಡುವುದಲ್ಲದೇ ಚಿತ್ರವು ಗಾಜಿನಹಾಗೆ ಹೊಳಪುಳ್ಳದ್ದಾಗುವುದು. ಹಾಳಾದ ಭಿತ್ತಿ ಚಿತ್ರಗಳನ್ನು ಹೀಗೆ ಪುನಃರೂಪಿಸಿ ಸಂರಕ್ಷಿಸುವುದಲ್ಲದೇ ಇದ್ದಂತಹ ಭಿತ್ತಿ ಚಿತ್ರಗಳನ್ನು ಸಂರಕ್ಷಣೆಗೊಳಪಡಿಸುವ ಇತರ ಕ್ರಮಗಳನ್ನೂ ನೋಡಬಹುದು.

**II. ಭಿತ್ತಿ ಚಿತ್ರಗಳ ಪ್ರತಿ ಮಾಡುವುದು :** ಭಿತ್ತಿ ಚಿತ್ರಕಲೆಯ ರಕ್ಷಣೆಯ ಇನ್ನುಳಿದ ಕೆಲವು ಕ್ರಮಗಳೆಂದರೆ ಯೋಗ್ಯ ಕಲಾವಿದರಿಂದ ಅವುಗಳನ್ನು ಪ್ರತಿ ಮಾಡಿಸುವುದೂ ಒಂದು. ಮೂಲಕೃತಿಯ ಮೇಲೆ ನಕಲು ಕಾಗದ (Tracing paper) ವಿಟ್ಟು ಯಥವತ್ತಾಗಿ ಚಿತ್ರಗಳನ್ನು ಮೂಡಿಸಿಕೊಂಡು ಮೂಲ ಚಿತ್ರವನ್ನು ಹೋಲುವಂತೆಯೇ ವರ್ಣ ಲೇಪಿಸುವುದು ಒಂದು ಕ್ರಮ. ಅಜಂತೆಯ ಚಿತ್ರಗಳನ್ನು ಲೇಡಿ ಹೆರಿಂಗ್ ಹೆಮ್ ನೇತೃತ್ವದ ಕಲಾವಿದರ ತಂಡ,[೫೧] ಮತ್ತು ಬಾದಾಮಿಯ ಚಿತ್ರಗಳನ್ನು ಜೆ. ಎಸ್. ಅಹೀವಾಸಿ ತಂಡದವರು ಹಾಗೂ ಎಂ. ವ್ಹಿ. ಮಿಣಜಗಿ ಅವರು[೫೨] ಪ್ರತಿ ಮಾಡಿರುವುದು ಗೊತ್ತಿರುವ ವಿಷಯವೇ ಆಗಿದೆ. ಹೀಗೆ ಚಿತ್ರಗಳನ್ನು ಪ್ರತಿ ಮಾಡಿ ಕಾಯ್ದಿರಿಸಬಹುದಾದರೂ ಅದರಲ್ಲಿ ಮೂಲ ಚಿತ್ರಕ್ಕಿಂತ ಅಲ್ಪಸ್ವಲ್ಪ ಭಿನ್ನತೆಗಳು ಕಂಡುಬರುತ್ತವೆ. ಮೂಲ ಚಿತ್ರಗಳ ಬಾಹ್ಯ ರೇಖೆಗಳ ದಪ್ಪಳತೆ. ಹರಿವಿಕೆ. ಚಿತ್ರಗಳ ಕೆಲವು ಸೂಕ್ಷ್ಮಲಕ್ಷಣಗಳು ಮಾರ್ಪಾಟಾಗುವ ಸಾಧ್ಯತೆಗಳಿವೆ. ಅಲ್ಲದೇ ಪ್ರತಿ ಮಾಡುವ ಇಂದಿನವರು ಮೂಲಚಿತ್ರಗಳಲ್ಲಿ ಪುರಾತನರು ಬಳಸಿದ ಖನಿಜಮೂಲ. ಸಸ್ಯಮೂಲ ವರ್ಣಗಳ ಬಗ್ಗೆ ಗೊತ್ತಿಲ್ಲದವರಾಗಿರುತ್ತಾರೆ. ಹಾಗಾಗಿ ಇಂದಿನ ಸಿದ್ಧರಾಸಾಯನಿಕ ವರ್ಣ ಬಳಸಿದಾಗ ಮೂಲ ಚಿತ್ರಗಳ ವರ್ಣ ವೈವಿಧ್ಯತೆಗಿಂತ ಬೇರೆಯಾದ ಹೊಳಪು

---

೪೭. J. C. Nagpal : Mural Paingtings in India, Page 34
೪೮. J. C. Nagpal : Mural Paingtings in India, Page 34
೪೯. Marg : Vol. 49, No. 2. December, 1997, Page 77
೫೦. Marg : Vol. 49, No. 2. December, 1997, Page 77
೫೧. ಎಸ್. ಕೆ. ರಾಮಚಂದ್ರರಾವ್ : ಕಲಾತಪಸ್ವಿ ವೆಂಕಟಪ್ಪ, ೨೨
೫೨. ಡಾ. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪುಟ ೩೫

ಚಿತ್ರಗಳಿಗೆ ಒದಗುವುದೂ ಸಂಭವವಿರುತ್ತದೆ. ಇಂತಹ ಅನೇಕ ಅಂಶಗಳಿಂದ ಮೂಲ ಚಿತ್ರಗಳಿಗಿಂತ ಪ್ರತಿಮಾಡಿದ ಚಿತ್ರಗಳು ಭಿನ್ನವಾಗಿದ್ದು ನಿಜವಾದ ಚಿತ್ರಗಳ ಸ್ವರೂಪ, ಲಕ್ಷಣಗಳನ್ನು ತಿಳಿಯುವಲ್ಲಿ ಅಷ್ಟೊಂದು ಪರಿಣಾಮಕಾರಿಯಾಗಿರವುದಿಲ್ಲ. ಬದಾಮಿಯ ಚಿತ್ರಗಳನ್ನು ನಾವು ಇಂದು ಪ್ರತಿಮಾಡಿಟ್ಟ ಚಿತ್ರಗಳಿಂದಲೇ ನೋಡಬೇಕಾಗುತ್ತದೆ. ಅನೇಕ ರೀತಿಯ ಅಡಚಣೆಗಳು ಈ ವಿಧಾನದಲ್ಲಿದ್ದರೂ, ದಾಖಲೆಯ ದೃಷ್ಟಿಯಿಂದ ಚಿತ್ರಗಳನ್ನು ಪ್ರತಿ ಮಾಡಿಸಿ ಇಡಬಹುದಾಗಿ.

**III. ನಕಲು ಮಾಡುವುದು :** ಭಿತ್ತಿ ಚಿತ್ರಗಳ ದಾಖಲೆಗಾಗಿ ಚಿತ್ರಗಳನ್ನು ಪ್ರತಿ ಮಾಡುವಂತೆ ಎದುರಿಗೆ ಕುಳಿತು ಅದು ಇದ್ದಂತೆ ರಚಿಸಿ ನಕಲು ಮಾಡುವ ವಿಧಾನವೂ ಇದೆ. ಹೀಗೆ ನಕಲು ಮಾಡುವಾಗ ಭಿತ್ತಿ ಹಾಳಾಗಿದ್ದರೆ, ಗಾರೆಉದುರಿ, ಬಣ್ಣಮಾಸಿ ಹೋಗಿದ್ದರೂ ಅದು ಹೇಗೆ ಕಾಣುವುದೇ ಹಾಗೇ ನಕಲು ಮಾಡುವುದು, ಅರೆಬರೆಯಾಗಿ ಕಾಣುವ ಆಕಾರಗಳನ್ನು ಪೂರ್ತಿ ಮಾಡುವುದು, ಹಾಗೂ ಏನೂ ಉಳಿದಿಲ್ಲದ ಭಾಗದಲ್ಲಿ ಊಹಾಪಾಠದಂತೆ ಊಹಿಸಿ ಚಿತ್ರಿಸುವುದು[೫೩] ಹೀಗೆ ಮೂರು ರೀತಿ ಅನುಸರಿಸುತ್ತಾರೆ. ನಕಲು ಮಾಡುವ ಪದ್ಧತಿಯಲ್ಲಿ ಪ್ರತಿ ಮಾಡುವ ವಿಧಾನಕ್ಕಿಂತ ಹೆಚ್ಚಿನ ಅಡಚಣೆಗಳು ವ್ಯತ್ಯಾಸಗಳು ಕಂಡುಬರುತ್ತವೆ. ಯೋಗ್ಯ ಕಲಾವಿದರಲ್ಲದಿದ್ದರೆ ಚಿತ್ರಗಳ ಶೈಲಿ, ರೇಖಾ ವಿನ್ಯಾಸ, ವರ್ಣಗಾರಿಕೆಯಲ್ಲಿ ಭಿನ್ನತೆ ಕಂಡುಬರುವುದು ಮಾತ್ರವಲ್ಲದೇ ಮೂಲ ಚಿತ್ರಗಳನ್ನು ಹೋಲಲಾರವು. ಅಲ್ಲದೇ ಕಲಾವಿದ ಎಷ್ಟೇ ಪ್ರಬುದ್ಧನಿದ್ದರೂ ಮೂಲಚಿತ್ರಗಳ ಶೈಲಿ, ರೇಖಾವಿನ್ಯಾಸ, ವರ್ಣಗಾರಿಕೆಯನ್ನು ಆತನ ಕೃತಿಗಳು ಸರಿಗಟ್ಟಲಾರವು ಪ್ರಾಚೀನ ವರ್ಣಗಳ ಹೊಳಪು ಆಧುನಿಕ ವರ್ಣಗಳ ಹೊಳಪು ವ್ಯತ್ಯಾಸ ವಾಗುವುದು. ಪ್ರತಿಮಾಡಿದ ಚಿತ್ರಗಳು ಮೂಲಚಿತ್ರಕ್ಕಿಂತ ಬೇರೆಯಾಗಿ ಕಂಡುಬರುವ ಸಂಭವವೇ ಅಧಿಕ. ಆದರೂ ಭಿತ್ತಿಚಿತ್ರಗಳ ದಾಖಲೆಯಿಂದ ಚಿತ್ರಗಳ ಪ್ರತಿಮಾಡಿಸಬಹುದು.

**IV. ಛಾಯಾ ಚಿತ್ರಣ (ಫೋಟೋಗ್ರಾಫ್) ಮಾಡುವುದು :** ಭಿತ್ತಿ ಚಿತ್ರಗಳ ರಕ್ಷಣೆಯ ಮತ್ತೊಂದು ಕ್ರಮವೆಂದರೆ ಫೋಟೋಗ್ರಾಫ್ ಮಾಡಿಸುವುದು. ವರ್ಣ ಫೋಟೋಗ್ರಾಫ್‌ನಲ್ಲಿ ಇಂದು ಅತ್ಯಾಧುನಿಕ ವಿಧಾನಗಳು ಬಂದಿದ್ದು, ಚಿತ್ರಗಳನ್ನು ಯಥವತ್ತಾಗಿ ಸೆರೆ ಹಿಡಿಯುವುದಷ್ಟೇ ಅಲ್ಲದೇ ಚಿತ್ರಗಳ ಸೂಕ್ಷ್ಮಾತಿಸೂಕ್ಷ್ಮ ವಿವರಗಳನ್ನು ಸೆರೆಹಿಡಿಯಬಲ್ಲ ಆಧುನಿಕ ಕ್ಯಾಮರಾಗಳೂ ಲಭ್ಯವಿವೆ. ಫೋಟೋಗ್ರಾಫ್ ವಿಧಾನದಲ್ಲಿ ಚಿತ್ರಗಳ ಮೂಲಸ್ವರೂಪ, ಬಣ್ಣಗಳು, ಚಿತ್ರದ ಮೈವಳಿಕೆ (Texture)ಗಳು ಯಥವತ್ತಾಗಿ ಮೂಡಿ ಬಂದು ಮೂಲ ಚಿತ್ರಕ್ಕೆ ಅತೀ ಸಮೀಪವಾಗಿ ಕಂಡುಬರುತ್ತವೆ. ಫೋಟೋಗ್ರಾಫ್ ಮಾಡಿದ ಚಿತ್ರಗಳು, ಮನುಷ್ಯನು ನಕಲು ಮಾಡಿದ ಮತ್ತು ಪ್ರತಿಮಾಡಿದ ಚಿತ್ರಗಳಿಗಿಂತ ಮೂಲಚಿತ್ರಗಳ ಸ್ವರೂಪವನ್ನು ಒದಗಿಸುವುದರಲ್ಲಿ ಹೆಚ್ಚಿನ ಅನುಕೂಲ ಮಾಡಿಕೊಡುತ್ತವೆ. ಭಿತ್ತಿ ಚಿತ್ರಗಳ ರಕ್ಷಣೆಯ ದೃಷ್ಟಿಯಿಂದ ವರ್ಣ ಫೋಟೋಗ್ರಾಫ್ ಮಾಡಿಸುವ ಈ ರೀತಿಯಲ್ಲಿಯೂ ಕೆಲವು ಕೊರತೆಗಳು ಕಂಡುಬರುತ್ತವೆ ಎಂದು ಶಿವರಾಮ ಕಾರಂತ ಹೇಳುತ್ತಾರೆ. "ಅಜಂತಾಗಳಲ್ಲಿರುವಂತಹ ವಿಶಾಲವಾದ ಭಿತ್ತಿ ಚಿತ್ರಗಳನ್ನು, ಫೋಟೋಗ್ರಾಫ್ ಮಾಡಿ ಅವನ್ನು ಚಿಕ್ಕಗಾತ್ರಕ್ಕೆ ಇಳಿಸಿ ಮುದ್ರಿಸುವ ಕಾಲದಲ್ಲಿ ಮೂಲಚಿತ್ರದ ಅನೇಕ ಗುಣಗಳನ್ನು ಗುರುತಿಸುವುದೇ ಕಷ್ಟವಾಗುತ್ತದೆ. ಮೂಲವರ್ಣಗಳಿಗೂ ಮುದ್ರಣ ವರ್ಣಗಳಿಗೂ ಏನೂ ವ್ಯತ್ಯಾಸ ಉಂಟಾಗಿಲ್ಲ

---

೫೩. ಅ. ಲ. ನರಸಿಂಹನ್ ಕರ್ನಾಟಕ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು. (ಬೆಂಗಳೂರು ವಿವಿಗೆ ಸಲ್ಲಿಸಿದ ಬೆರಳಚ್ಚು ಮಹಾಪ್ರಬಂಧ) ಪುಟ ೫೦೩

ಎಂದು ಖಚಿತಪಡಿಸಿಕೊಂಡರೂ ಕೂಡಾ, ಚಿತ್ರದ ಮೈವಳಿಕೆ (Texture)ಯ ವಿವರ, ಸೂಕ್ಷ್ಮವರ್ಣವ್ಯತ್ಯಾಸ ಮೊದಲಾದವು ಸಣ್ಣ ಚಿತ್ರಗಳಲ್ಲಿ ಕಾಣಿಸಲಾರವು ಚಿತ್ರರೇಖೆಗಳನ್ನು ಸಣ್ಣದಾಗಿಸುವಾಗ ಅವುಗಳ ದಪ್ಪ ಕಡಿಮೆಯಾಗುತ್ತ ಸರಿದು ಮೂಲದ ಶಕ್ತಿಯನ್ನೂ ತೋರಗೊಡುವುದಿಲ್ಲ.[೫೪] ಇಂತಹ ಅನೇಕ ಕೊರತೆಗಳು ಕಂಡುಬರುತ್ತವೆ ಎಂದು ತಿಳಿಸುತ್ತಾರೆ".

ಇಂತಹ ಸಣ್ಣಪುಟ್ಟ ಕೊರತೆಗಳ ಮಧ್ಯೆಯೂ ನಕಲು ಮತ್ತು ಪ್ರತಿಮಾಡಿದ ಚಿತ್ರಗಳಿಗಿಂತಲೂ ವರ್ಣ ಛಾಯಾಚಿತ್ರಣ (ಫೋಟೋಗ್ರಾಫ್) ಮಾಡಿದ ಚಿತ್ರಗಳು ಮೂಲ ಚಿತ್ರಗಳನ್ನು ತಿಳಿದುಕೊಳ್ಳುವಲ್ಲಿ ಹೆಚ್ಚು ಸೂಕ್ತವಾಗಿದ್ದು ಹಾಳಾಗುತ್ತಿರುವ ಭಿತ್ತಿಚಿತ್ರಗಳನ್ನು ಫೋಟೋಗ್ರಾಫ್ ಮಾಡಿಸಿಡಬಹುದಾಗಿದೆ. ಹೀಗೆ ಫೋಟೋಗ್ರಾಫ್ ಮಾಡಿಸುವಾಗ ಒಂದೊಂದು ಸ್ಥಳದ ಭಿತ್ತಿಚಿತ್ರಗಳನ್ನು ಒಂದೊಂದು ಕಡೆಗೆ ಕೂಡಿಸಿ ಸಂಪುಟಗಳಲ್ಲಿ ಹೊರತರಬಹುದು. ಇಂತಹ ಚಿತ್ರಸಂಪುಟಗಳ ಎಡಗಡೆಯಪುಟದಲ್ಲಿ ಚಿತ್ರಗಳ ವರ್ಣ ಫೋಟೋಗಳನ್ನು ಬಲಭಾಗದಲ್ಲಿ ಚಿತ್ರಗಳಿಗೆ ಸಂಬಂಧಿಸಿದ ಅವಶ್ಯಕ ಮಾಹಿತಿಗಳನ್ನು ಮುದ್ರಿಸಬಹುದು.

**V. ಸ್ಲೈಡ್ಸ್ ಮಾಡುವುದು :** ಫೋಟೋಗ್ರಾಫ್ ಮಾಡಿ ಭಿತ್ತಿ ಚಿತ್ರಗಳನ್ನು ಕಾಯ್ದಿರಿಸಿದಂತೆಯೇ ಸ್ಲಾಯಿಡ್ಸ್‌ಗಳನ್ನು ಮಾಡಿಯೂ ಇಡಬಹುದು. ಅವಶ್ಯಕತೆಬಿದ್ದಾಗ ಅಥವಾ ನಮಗೆ ಬೇಕಾದಾಗ ಸ್ಲಾಯಿಡ್ಸ್‌ಗಳನ್ನು ಹಾಕಿಕೊಂಡು ನೋಡಿ ಚಿತ್ರಗಳ ಸ್ವರೂಪ ತಿಳಿಕೊಳ್ಳಬಹುದು. ಒಂದೊಂದು ನೆಲೆಗಳ ಸ್ಲೈಡ್ಸ್‌ಗಳನ್ನು ಒಂದೊಂದು ಕಡೆಗೆ ವ್ಯವಸ್ಥಿತವಾಗಿ ಹೊಂದಿಸಿ. ಅವುಗಳಿಗೆ ಅನುಕ್ರಮವಾಗಿ ಸಂಖ್ಯೆಗಳನ್ನು ಕೊಟ್ಟು ಆಯಾಸಂಖ್ಯೆಯ ಸ್ಲೈಡ್ಸ್ನ ಮಾಹಿತಿಯನ್ನು ಅಲ್ಲಲ್ಲಿ ಬರೆದಿರಿಸಬಹುದು. ಇದರಿಂದ ಆಯಾನಂಬರಿನ ಸ್ಲೈಡ್ಸ್‌ನ್ನು ಸ್ಕ್ರೀನಿನ ಮೇಲೆ ಮೂಡಿಸಿದಾಗ ಅದರ ಮಾಹಿತಿಯು ಆನಂಬರಿನ ಕಾರ್ಡಿನಲ್ಲಿ ದೊರೆಯುವುದು. ಈ ಮಾಹಿತಿಯಲ್ಲಿ ಚಿತ್ರಗಳ ನೆಲೆ, ಚಿತ್ರಶೈಲಿ, ವಸ್ತು ವಿಷಯ. ಬೇರೆ ಚಿತ್ರಶೈಲಿಯ ಯಾವ ಪ್ರಭಾವ ಅದರ ಮೇಲಾಗಿದೆ ಎಂಬಂತಹ ವಿವರಗಳನ್ನು ಬರೆದಿರಿಸಬಹುದು.

**VI. ವಿಡಿಯೋ ಚಿತ್ರೀಕರಣ ಮಾಡುವುದು :** ಭಿತ್ತಿ ಚಿತ್ರಗಳನ್ನು ವಿಡಿಯೋ ಚಿತ್ರೀಕರಣ ಮಾಡುವುದು ರಕ್ಷಣೆಯ ದೃಷ್ಟಿಯಿಂದ ಮತ್ತು ದಾಖಲೆ ದೃಷ್ಟಿಯಿಂದ ಇನ್ನುಳಿದ ಕ್ರಮಗಳಾದ ನಕಲುಮಾಡುವುದು. ಪ್ರತಿಮಾಡುವುದು. ಫೋಟೋಗ್ರಾಫ್‌ಮಾಡುವ ವಿಧಾನಗಳಿಗಿಂತ ಸೂಕ್ತವಾದುದು. ವಿಡಿಯೋ ಚಿತ್ರೀಕರಣ ಮಾಡಿದ ದೃಶ್ಯಗಳನ್ನು ನೋಡಿದಾಗ ಅದು ನಮಗೆ ಕಣ್ಣೆದುರಿಗೆ ನೇರ ನೋಡಿದ ಅನುಭವ ಕೊಡುತ್ತದೆ. ಉಳಿದವು ಸ್ಥಿರ ಚಿತ್ರಗಳಂತೆ ಕಂಡುಬಂದರೆ ಇದು ಚಲನ ಚಿತ್ರವಾಗಿರುವುದರಿಂದ ನೇರವಾಗಿ ಚಿತ್ರಗಳ ನೆಲೆಗಳಲ್ಲಿ ಎದುರಿಗೇ ನಿಂತು ನೋಡಿದ ಅನುಭವದಂತೆ ಭಾಸವಾಗುತ್ತದೆ. ಕರ್ನಾಟಕ ಲಲಿತಕಲಾ ಅಕೆಡಮಿಯವರು ರಾಜ್ಯದ ಕೆಲವು ಭಾಗಗಳ ಭಿತ್ತಿಚಿತ್ರಗಳನ್ನು ವಿಡಿಯೋ ಚಿತ್ರೀಕರಣ ಮಾಡಿರುವುದನ್ನು ಇಲ್ಲಿ ಸ್ಮರಿಸಬಹುದು. ಅದೇ ರೀತಿ ರಾಜ್ಯದ ಎಲ್ಲ ಭಿತ್ತಿ ಚಿತ್ರಗಳನ್ನು ವಿಡಿಯೋ ಚಿತ್ರೀಕರಣ ಮಾಡಿಡಬೇಕು. ಇದರಿಂದಾಗಿ ಭಿತ್ತಿ ಚಿತ್ರಗಳನ್ನು ದಾಖಲೆಗೊಳಿಸಿಡುವುದರ ಜೊತೆಗೇ ಮುಂದಿನ ಅಧ್ಯಯನಕಾರರಿಗೆ. ನೋಡುಗರಿಗೆ ಚಿತ್ರಗಳನ್ನು ಮೂಲಸ್ವರೂಪದಲ್ಲಿ ದೊರಕಿಸುವಲ್ಲಿ. ಉಳಿಸಿಕೊಟ್ಟಲ್ಲಿ ಸ್ವಲ್ಪಮಟ್ಟಿನ ಸಹಾಯ ಮಾಡಿದಂತೆ ಆಗುವುದು.

**VII. ಮೈಕ್ರೋ ಫಿಲಂನಲ್ಲಿ ಅಳವಡಿಸುವುದು :** ಭಿತ್ತಿ ಚಿತ್ರಗಳನ್ನು ವಿಡಿಯೋ ಚಿತ್ರೀಕರಣ ಮಾಡಿದಂತೆಯೇ ಮೈಕ್ರೋ ಫಿಲಂನಲ್ಲಿ ಅಳವಡಿಸಿಯೂ ಕಾಯ್ದಿಡಬಹುದು. ಅತ್ಯಂತ ಕಡಿಮೆ ಸ್ಥಳಾವಕಾಶದಲ್ಲಿ ಅತೀ ಹೆಚ್ಚಿನ

---

೫೪. ಡಾ. ಶಿವರಾಮ ಕಾರಂತ ಕರ್ನಾಟಕದಲ್ಲಿ ಚಿತ್ರಕಲೆ, ಪುಟ ೩೪

ಮಾಹಿತಿಯನ್ನು ತುಂಬಲು ಈ ವಿಧಾನದಲ್ಲಿ ಸಾಧ್ಯವಿದ್ದು, ಹೆಚ್ಚಿನ ಭಿತ್ತಿ ಚಿತ್ರಗಳನ್ನು ಒಂದೆಡೆಗೆ ಅಳವಡಿಸಬಹುದಾಗಿದೆ. ಯಾವುದೇ ಮಾಹಿತಿಯನ್ನು ಕಾಯ್ದಿಡಲು, ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸಲು ಈ ವಿಧಾನ ಅತ್ಯಂತ ಸೂಕ್ತವಾದುದು. ಭಿತ್ತಿಚಿತ್ರಗಳನ್ನು ರಕ್ಷಣೆ ಮಾಡುವ ಕ್ರಮಗಳಲ್ಲಿ ಇಡೀ ಚಿತ್ರವನ್ನು ಬೇರೆ ಬರೆಯುವ, ಇಲ್ಲವೇ ಗಾರೆಯಲ್ಲಿ ಕೀಳಿಸಿ ಬೇರೆಯದೇ ಹಾಕಿಸಿ ಮತ್ತೆ ಬರೆಸುವ ಪದ್ಧತಿಯೂ ರಕ್ಷಣೆ ಎಂದೇ ಪರಿಗಣಿಸಬಹುದು ಎಂದು ಅ. ಲ. ನರಸಿಂಹನ್[೫೫] ಅಭಿಪ್ರಾಯ ಪಡುತ್ತಾರೆ. ಆದರೆ ಈ ಕ್ರಮಗಳಿಂದ ಹಳೆಯ ಭಿತ್ತಿ ಚಿತ್ರಗಳ ಯಾವ ಅಂಶಗಳೂ ಅಲ್ಲಿ ಉಳಿದುಕೊಳ್ಳದೇ ಬೇರೆಯಾದ ಚಿತ್ರಗಳೇ ಅಲ್ಲಿ ರಚನೆಯಾಗುವುದರಿಂದ ಇದ್ದ ಚಿತ್ರಗಳ ರಕ್ಷಣೆಯ ವ್ಯಾಪ್ತಿಯಲ್ಲಿ ಈ ವಿಧಾನಗಳು ಬರಲಾರವು. ಆದರೆ ಹಳೆಯ ಭಿತ್ತಿ ಚಿತ್ರಗಳು ಇದ್ದ ಸ್ಥಳದಲ್ಲಿ ಪರ್ಯಾಯವಾಗಿ ಹೊಸದಾಗಿ ಭಿತ್ತಿ ಚಿತ್ರಗಳನ್ನು ಬರೆಸುವ ಕ್ರಮಗಳೆಂದು ಇವುಗಳನ್ನು ಕರೆಯಬಹುದು.

**೨. ಪೂರಕ ಕ್ರಮಗಳು :** ಭಿತ್ತಿ ಚಿತ್ರ ಕಲೆಯ ಸಂರಕ್ಷಣೆಯಲ್ಲಿ ಅನುಸರಿಸುವ ನೇರ ಕ್ರಮಗಳಂತೆ ಪೂರಕವಾಗಿಯೂ ಕೆಲವು ಕ್ರಮಗಳಿಂದ ಭಿತ್ತಿಚಿತ್ರಕಲೆಯನ್ನು ಸ್ವಲ್ಪ ಮಟ್ಟಿಗಾದರೂ ಸಂರಕ್ಷಣೆ ಗೊಳಿಸಬಹುದು. ಪೂರಕ ಕ್ರಮಗಳಲ್ಲಿ ಮತ್ತೆ

I. ಪುಸ್ತಕಗಳಲ್ಲಿ ಭಿತ್ತಿ ಚಿತ್ರಗಳನ್ನು ಮುದ್ರಿಸುವುದು.

II. ಅಲಂಕಾರಿಕ ವಾಣಿಜ್ಯ ವಸ್ತುಗಳಲ್ಲಿ ಭಿತ್ತಿ ಚಿತ್ರಗಳನ್ನು ರೂಪಿಸವುದು ಎಂಬುದಾಗಿ ವಿವರಿಸಬಹುದು.

**I. ಪುಸ್ತಕಗಳಲ್ಲಿ ಭಿತ್ತಿಚಿತ್ರಗಳನ್ನು ಮುದ್ರಿಸುವುದು :** ಮೊದಲೆಯದಾಗಿ ಇತಿಹಾಸ ಪುಸ್ತಕಗಳಲ್ಲಿ. ಇತಿಹಾಸದ ಪಠ್ಯಪುಸ್ತಕಗಳಲ್ಲಿ ಹೀಗೆ ವಿವಿಧ ಪುಸ್ತಕಗಳಲ್ಲಿ ಅವಶ್ಯಕತೆ ಇದ್ದಲ್ಲಿ ಸಂಬಂಧಿಸಿದ ಭಿತ್ತಿ ಚಿತ್ರಗಳ ನೇರವಾಗಿ ಫೋಟೋಗ್ರಾಫ್ ಮಾಡಿದ ಬಣ್ಣದ ಚಿತ್ರಗಳನ್ನು ಹಾಕುವುದು. ಉದಾಹರಣೆಯಾಗಿ ಹೇಳಬೇಕೆಂದರೆ, ಚಾಲುಕ್ಯ ಇಮ್ಮಡಿ ಪುಲಕೇಶಿಯ ಇತಿಹಾಸ ಹೇಳುವ ಸಂದರ್ಭದಲ್ಲಿ ಅಜಂತಾ ಗುಹೆಯಲ್ಲಿ ಇದೆ ಎಂದು ನಂಬಲಾಗಿರುವ ಆತನ ಚಿತ್ರವನ್ನೇ ಬಳಸುವುದು. ಹಾಗೇ ನರಗುಂದದ ಬಾಬಾಸಾಹೇಬನ ಚಿತ್ರವೆಂದು ಹೇಳಲಾಗುವ ಅಮ್ಮಿನಭಾವಿಯ ಹಿರೇಮಠದಲ್ಲಿರುವ ಚಿತ್ರ. ಇಲ್ಲಿಯೇ (ಅಮ್ಮಿನ ಭಾವಿಯ ಹಿರೇಮಠ) ಇರುವ ಸಂಗೊಳ್ಳಿರಾಯಣ್ಣನ ಚಿತ್ರ. ಶ್ರೀರಂಗ ಪಟ್ಟಣದಲ್ಲಿರುವ ಟಿಪ್ಪುವಿನ ಚಿತ್ರ ಹೀಗೆ ಆಯಾ ಇತಿಹಾಸ ಹೇಳುವ ಸಂದರ್ಭದಲ್ಲಿ ಸಂಬಂಧಿಸಿದ ಅಂತಹ ಭಿತ್ತಿ ಚಿತ್ರಗಳನ್ನೇ ಬಳಸುವುದು ಹೆಚ್ಚು ಸೂಕ್ತವಾದುದು. ಮಕ್ಕಳ ಪಠ್ಯ ಪುಸ್ತಕಗಳಲ್ಲಿ ಸಂಬಂಧವೇ ಇರದ ಐತಿಹಾಸಿಕ ವ್ಯಕ್ತಿಗಳ ಚಿತ್ರಗಳನ್ನು ಬರೆಸಿ ಅವರನ್ನು ನಂಬಿಸುವುದಕ್ಕಿಂತಲೂ ಆ ವ್ಯಕ್ತಿಗಳ ಮೂಲರೂಪಕ್ಕೆ ಸ್ವಲ್ಪವಾದರೂ ಹತ್ತಿರವಿರುವ ಪ್ರಾಚೀನ ಭಿತ್ತಿ ಚಿತ್ರಗಳನ್ನು ಉಪಯೋಗಿಸಿ ಮಕ್ಕಳಿಗೆ ತಿಳುವಳಿಕೆಕೊಡುವುದು ಯೋಗ್ಯವಾದುದು. ಇದರಿಂದ ಐತಿಹಾಸಿಕ ವ್ಯಕ್ತಿಗಳ ಮೂಲರೂಪವನ್ನು ಸ್ವಲ್ಪವಾದರೂ ತಿಳಿಯಲು ಸಹಾಯಕವಾಗುತ್ತದಲ್ಲದೇ ಆ ಮೂಲಕ ಪ್ರಾಚೀನ ಭಿತ್ತಿ ಚಿತ್ರಕಲೆಯನ್ನು ಪರಿಚಯಿಸಿದಂತೆಯೂ ಆಗುವುದು. ಇದೇ ರೀತಿಯಾಗಿ ಪುಸ್ತಕಗಳ ಮುಖಪುಟ. ರಕ್ಷಾಪುಟಗಳನ್ನು ಪ್ರಾಚೀನ ಭಿತ್ತಿ ಚಿತ್ರಗಳಿಂದ ಅಲಂಕರಿಸುವ ಕ್ರಮವನ್ನು ಅನುಸರಿಸಬಹುದು. ಇದರಿಂದ

---

೫೫. ಅ. ಲ. ನರಸಿಂಹನ್ : ಕರ್ನಾಟಕ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು. (ಬೆಂಗಳೂರು ವಿವಿಗೆ ಸಲ್ಲಿಸಿದ ಬೆರಳಚ್ಚು ಮಹಾಪ್ರಬಂಧ) ಪುಟ ೫೦೧

ನಮ್ಮ ಪುರಾತನ ಭಿತ್ತಿ ಚಿತ್ರ ಪರಂಪರೆಯನ್ನು ಜನರಿಗೆ ತಿಳಿಸಿದಂತಾಗುವುದಲ್ಲದೇ ಅದರಿಂದ ಪರೋಕ್ಷವಾಗಿ ಭಿತ್ತಿ ಚಿತ್ರಗಳ ಸಂರಕ್ಷಣೆಯೂ ಆಗುವುದು.

**II. ಅಲಂಕಾರಿಕ ವಾಣಿಜ್ಯ ವಸ್ತುಗಳಲ್ಲಿ ಭಿತ್ತಿಚಿತ್ರಗಳನ್ನು ರೂಪಿಸುವುದು :** ಭಿತ್ತಿಚಿತ್ರಗಳನ್ನು ಪುಸ್ತಕದಲ್ಲಿ ಮುದ್ರಿಸುವುದು ಮಾತ್ರವಲ್ಲದೇ ಅಲಂಕಾರಿಕ ವಸ್ತುಗಳಾದ ಹೂಜಿ, ಹೂಕುಂಡಗಳು, ವಿವಿಧ ರೀತಿಯ ವಸ್ತ್ರಗಳು, ಬಾಗಿಲ ಪರದೆ, ಹಾಸುವ ಹೊದೆಯುವ ವಸ್ತ್ರಗಳು, ಕೈವಸ್ತ್ರ, ಗ್ರೀಟಿಂಗ್ಸ್ ಕಾರ್ಡುಗಳು ಹೀಗೆ ಹತ್ತುಹಲವು ಅಲಂಕಾರಿಕ ವಸ್ತುಗಳಲ್ಲಿ ಪ್ರಾಚೀನ ಭಿತ್ತಿಚಿತ್ರಗಳನ್ನು ರೂಪಿಸಿ ಅವುಗಳ ಅಂದ ಹೆಚ್ಚಿಸಬಹದು. ಇದರಿಂದ ಪುರಾತನ ಭಿತ್ತಿ ಚಿತ್ರ ಪರಂಪರೆಯನ್ನು ಪರೋಕ್ಷವಾಗಿ ಸಂರಕ್ಷಣೆಮಾಡಿದಂತಾಗುವುದಲ್ಲದೇ ಅದರ ಬಗ್ಗೆ ಜನರಿಗೆ ತಿಳಿಸಿದಂತಾಗುವುದು. ಚೀನಾದೇಶದವರು ಈ ನಿಟ್ಟಿನಲ್ಲಿ ಒಳ್ಳೆಯ ಅಭಿರುಚಿ ಉಳ್ಳವರಾಗಿದ್ದಾರೆ ಎಂದು ಹೇಳಬಹುದು. ಅಲ್ಲಿರುವ "ಮೊಗಾವೋಗ್ರೋಟಸ್" ಪ್ರದೇಶದ ಖೋಟಾನ್, ಬಜಾಲಿಕ್, ಟುರ್‌ಫಾನ್ ಮತ್ತು ಟುನ್‌ಹ್ವಾಂಗ್ ಸ್ಥಳಗಳಲ್ಲಿ ಕ್ರಿ. ಶ. ೭ನೇ ಶತಮಾನದ ಭಿತ್ತಿ ಚಿತ್ರಗಳಿದ್ದು, ಅವುಗಳನ್ನು ಅವರು ಚೆನ್ನಾಗಿ ಕಾಯ್ದುಕೊಂಡಿದ್ದಾರಲ್ಲದೇ, ಆ ಗುಹಾ ಭಿತ್ತಿ ಚಿತ್ರಗಳಲ್ಲಿ ಕಂಡುಬರುವ ಯಕ್ಷ ಯಕ್ಷಿಯರು, ಅಪ್ಸರೆಯರು, ತರುಲತೆ, ಹೂ, ಪ್ರಾಣಿಪಕ್ಷಿಗಳ ಚಿತ್ರಗಳನ್ನು ಅಲ್ಲಿ ಮಾರಲಾಗುವ ಹೂಜಿ, ಹೂಕುಂಡ, ವಸ್ತ್ರಗಳು ಗ್ರೀಟಿಂಗ್ಸ್ ಕಾರ್ಡ್ಸ್‌ಗಳು ಹೀಗೆ ಹತ್ತು ಹಲವು ಅಲಂಕಾರಿಕ ವಸ್ತುಗಳಲ್ಲೆಲ್ಲಾ[೫೬] ಬಳಸಿಕೊಂಡಿದ್ದಾರೆ. ಇದು ಅವರ ಕಲಾ ಪ್ರೇಮವನ್ನು ತೋರಿಸುತ್ತದಲ್ಲದೇ ತಮ್ಮ ನಾಡಿನ ಪ್ರಾಚೀನ ಭಿತ್ತಿ ಚಿತ್ರಕಲೆಯಬಗ್ಗೆ ಅವರಿಗಿರುವ ಅಭಿಮಾನವನ್ನೂ ತೋರಿಸುತ್ತದೆ. ಇಂತಹ ಹತ್ತು ಹಲವು ಕ್ರಮಗಳನ್ನು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಭಿತ್ತಿ ಚಿತ್ರಕಲೆಯ ರಕ್ಷಣೆಯಲ್ಲಿ ಕೈಕೊಳ್ಳಬಹುದು. ಎಲ್ಲಕ್ಕಿಂತ ಮುಖ್ಯವಾಗಿ ಲಭ್ಯವಿದ್ದ ಚಿತ್ರಗಳನ್ನು ಅವು ಅಳಿದು ಹೋಗುವ ಮುಂಚೆ ಅಧ್ಯಯನಕ್ಕೊಳಪಡಿಸುವುದು ಅತೀ ಮಹತ್ವದ್ದಾಗಿದೆ.

---

೫೬. ಸುಧಾ : ಯುಗಾದಿ ವಿಶೇಷಾಂಕ, ೧೯೯೫, ಪುಟ ೭೧, 'ಮೊಗಾವೋ ಭಿತ್ತಿ ಚಿತ್ರಗಳು', ಬಿ. ವಿ. ಕೆ. ಶಾಸ್ತ್ರಿ.

ನಾಡಿನ ಸಂಸ್ಕೃತಿಯ ಅಧ್ಯಯನದಲ್ಲಿ ಭಿತ್ತಿಚಿತ್ರಕಲೆಗಿರುವ ಪಾತ್ರ ಮಹತ್ವಪೂರ್ಣವಾದುದು. ಈ ಒಂದು ಕಲಾ ಪ್ರಕಾರವನ್ನು ಬೆಳೆಸುವಲ್ಲಿ. ಅದನ್ನು ಉಳಿಸುವಲ್ಲಿ ಉತ್ತರ ಕರ್ನಾಟಕದ ಜನಸಮುದಾಯದ ಪಾಲು ಸಣ್ಣದಿಲ್ಲ. ಪ್ರಾಗೈತಿಹಾಸಿಕ ಕಾಲದಿಂದಲೇ ಭಿತ್ತಿಚಿತ್ರಕಲೆ ಈ ಪ್ರದೇಶದಲ್ಲಿ ಕಂಡುಬಂದಿದೆ. ಕಾಲದಿಂದ ಕಾಲಕ್ಕೆ ಅದರ ರಚನಾವಿಧಾನ. ತಂತ್ರಗಾರಿಕೆ. ಶೈಲಿ. ಪರಿಕರಗಳಲ್ಲಿ ಬದಲಾವಣೆಗಳಾಗಿವೆ. ಮತ್ತು ಚಿತ್ರರಚನಾ ಮಾಧ್ಯಮಗಳ ಆಯ್ಕೆಯಲ್ಲಿಯೂ ಬೇರೆ ಬೇರೆ ಮಾಧ್ಯಮಗಳು ಭಿತ್ತಿಚಿತ್ರರಚನೆಯಲ್ಲಿ ಬಳಕೆಗೊಂಡಿದ್ದುದು ಕಂಡುಬರುತ್ತದೆ. ಹಾಗೆಯೇ ವಸ್ತು ವಿಷಯಗಳ ಆಯ್ಕೆಯ ಸಂದರ್ಭದಲ್ಲಿಯೂ ಆಯಾ ಕಾಲದಲ್ಲಿ ಬದಲಾವಣೆಗಳಾಗಿದ್ದುದನ್ನು ಗಮನಿಸಬಹುದು. ಈ ಮಹಾಪ್ರಬಂಧದಲ್ಲಿ ಒಟ್ಟು ಒಂಬತ್ತು ಅಧ್ಯಾಯಗಳಿವೆ. ಪ್ರತಿಯೊಂದು ಅಧ್ಯಾಯದಲ್ಲಿ ಈ ಕೆಳಗಿನ ಪ್ರಮುಖ ಅಂಶಗಳು ವಿವೇಚನೆಗೊಂಡಿವೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ. ಸ್ವರೂಪ. ವಿಧಾನಗಳನ್ನು ಹೇಳಲಾಗಿದೆ. ಯಾವುದೇ ಕಾಲದ ಭಿತ್ತಿಚಿತ್ರಗಳು ಆಯಾ ಕಾಲದ ಜನಜೀವನದ ಸಾಂಸ್ಕೃತಿಕ ವಿವರಗಳನ್ನು ಒಳಗೊಂಡಿರುತ್ತವೆ. ಮತ್ತು ಒಂದು ನಾಡಿನ ಧಾರ್ಮಿಕ. ರಾಜಕೀಯ. ಹಾಗೂ ಸಾಂಸ್ಕೃತಿಕ ಇತಿಹಾಸವನ್ನು ತಿಳಿಯಲು ಇವು ಮಹತ್ವದ ಆಕರಗಳಾಗಿವೆ. ವಿವಿಧ ಆಚರಣೆಗಳಿಗೆ ಸಂಬಂಧಿಸಿದ ಚಿತ್ರಗಳು. ನಿತ್ಯಜೀವನದ ಘಟನಾವಳಿಗಳು. ಪೂಜೆ ಪುನಸ್ಕಾರದ ಚಿತ್ರಗಳು. ವೇಷಭೂಷಣಗಳು ಆಯಾ ಕಾಲದ ಜನರ ಸಾಂಸ್ಕೃತಿಕ ಇತಿಹಾಸ ತಿಳಿಸುವಲ್ಲಿ ಮುಖ್ಯವಾಗಿ ಸಹಾಯಕಾರಿಯಾಗಿವೆ.

ಭಿತ್ತಿಚಿತ್ರಕಲಾ ಪರಂಪರೆಯನ್ನು ನಮ್ಮ ಪೂರ್ವಜರು ಧರ್ಮಪ್ರಚಾರಕ್ಕಾಗಿ. ಸಮಾಜವನ್ನು ರೂಪಿಸುವದಕ್ಕಾಗಿ. ಮನರಂಜನೆಗಾಗಿ. ವೈಯಕ್ತಿಕ ಭಾವನೆಗಳ ಅಭಿವ್ಯಕ್ತಿಗಾಗಿ ಹೇಗೆ ಬಳಸಿಕೊಂಡರು ಎಂಬುದನ್ನು ಕೌಲನಿಕವಾಗಿ ವಿವೇಚಿಸಲಾಗಿದೆ. ಹೀಗೆ ಪ್ರತಿಯೊಂದು ನೆಲೆಯ ಭಿತ್ತಿಚಿತ್ರಗಳನ್ನು ಸಮಗ್ರವಾಗಿ ವಿವೇಚಿಸಿದ್ದು ಚಿತ್ರಗಳ ಶೈಲಿ. ವರ್ಣಗಾರಿಕೆ. ಚಿತ್ರರಚನೆಯ ತಾಂತ್ರಿಕತೆ. ವಸ್ತುವಿಷಯ. ವೇಷಭೂಷಣ. ಉಡುಗೆತೊಡುಗೆ. ಬೇರೆ ಪ್ರದೇಶದ ಚಿತ್ರಶೈಲಿಯ ಪ್ರಭಾವ– ಹೀಗೆ ವಿವಿಧ ಸಂಗತಿಗಳನ್ನು ಹೇಳಲಾಗಿದೆ. ಜೊತೆಗೆ ಭಾರತೀಯ ಭಿತ್ತಿಚಿತ್ರಕಲೆ. ಕರ್ನಾಟಕದ ಭಿತ್ತಿಚಿತ್ರಕಲೆ. ಮತ್ತು ಉತ್ತರಕರ್ನಾಟಕದ ಭಿತ್ತಿಚಿತ್ರಕಲೆಯ ಬಗ್ಗೆ ಇದುವರೆಗೆ ನಡೆದ ಅಧ್ಯಯನವನ್ನು ಸಮೀಕ್ಷಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಭಿತ್ತಿಚಿತ್ರಕಲೆಯ ಇತಿಹಾಸವನ್ನು ಕ್ರಮವಾಗಿ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಇಲ್ಲಿ ಮೊದಲಿಗೆ ಭಿತ್ತಿಚಿತ್ರಕಲೆಯ ಅರ್ಥ. ವ್ಯಾಪ್ತಿಯನ್ನು ಹೇಳಿ, ನಂತರ ಜಾಗತಿಕ ಭಿತ್ತಿಚಿತ್ರಕಲೆಯನ್ನು

ಪ್ರಸ್ತಾಪಿಸುತ್ತ ಭಾರತ. ಕರ್ನಾಟಕ ಮತ್ತು ವಿಶೇಷವಾಗಿ ಉತ್ತರಕರ್ನಾಟಕದ ಭಿತ್ತಿಚಿತ್ರಕಲೆಯ ಇತಿಹಾಸನ್ನು ಅವಲೋಕಿಸಲಾಗಿದೆ. ಇತಿಹಾಸ ಹೇಳುವಾಗ ಭಿತ್ತಿಚಿತ್ರಗಳು ಕಂಡುಬರದ ಕಾಲಘಟ್ಟದಲ್ಲಿ ಸಮಕಾಲೀನ ಸಾಹಿತ್ಯಕೃತಿಗಳು ಮತ್ತು ಶಾಸನಗಳಲ್ಲಿ ಉಪಲಬ್ಧವಿದ್ದ ಭಿತ್ತಿಚಿತ್ರಕಲೆಯ ಉಲ್ಲೇಖಗಳನ್ನು ಬಳಸಿಕೊಂಡು ಅವರ ಇತಿಹಾಸವನ್ನು ಕಟ್ಟಿಕೊಡುವ ಪ್ರಯತ್ನಮಾಡಲಾಗಿದೆ. ಕರ್ನಾಟಕದಲ್ಲಿ ಕ್ರಿ. ಪೂ. ೪೦,೦೦೦ ವರ್ಷಗಳ ಹಿಂದಿನ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳಿಂದ ಪ್ರಾರಂಭಿಸಿ ಇಪ್ಪತ್ತನೇ ಶತಮಾನದವರೆಗೂ ಅದರ ಕ್ರಮಾನುಗತ ಇತಿಹಾಸ ರೂಪಿಸಲಾಗಿದೆ. ಕರ್ನಾಟಕದ ಶಿಷ್ಟಪರಂಪರೆಯ ಭಿತ್ತಿಚಿತ್ರಕಲೆಯನ್ನು ಶಾತವಾಹನರ ಕಾಲದಿಂದಲೇ ಅಂದರೆ ಕ್ರಿ. ಪೂ. ೨ ನೇ ಶತಮಾನದಿಂದ ಗುರುತಿಸಿ, ನಂತರದ ಬನವಾಸಿ ಕದಂಬರ ಕಾಲಕ್ಕೂ ಭಿತ್ತಿಚಿತ್ರರಚನೆ ಬೆಳೆದುಬಂದಿದೆ ಎಂದು ಹೇಳಿದೆ. ಇದುವರೆಗೆ ಬಾದಾಮಿಯ ವೈಷ್ಣವಗುಹೆ ಮತ್ತು ಐಹೊಳೆಯ ರಾವಣಫಡಿ ಗುಹೆಯ ಭಿತ್ತಿಚಿತ್ರಗಳೇ ಚಾಲುಕ್ಯರ ಭಿತ್ತಿಚಿತ್ರಕಲೆಯ ನಿದರ್ಶನಗಳಾಗಿದ್ದವು. ಇವುಗಳನ್ನು ಹೇಳುತ್ತ ಬಾದಾಮಿಯ ಪರಿಸರದ ಬೆಟ್ಟಗಳ ಶಿಲಾಶ್ರಯದಲ್ಲಿ ಕಂಡುಬಂದ ಐತಿಹಾಸಿಕ ವರ್ಣಚಿತ್ರಗಳನ್ನು ಕ್ರಿ. ಶ. ೭ ನೇ ಶತಮಾನದ ವರೆಗೆ ಹೆಸರಿಸಿದರೆ. ೮. ೯. ೧೦ ನೇ ಶತಮಾನದ ಭಿತ್ತಿಚಿತ್ರಗಳು ರಾಷ್ಟ್ರಕೂಟರ ಕಾಲದಲ್ಲಿ ರಚನೆಗೊಂಡಿವೆ. ಹೀಗೆ ಪ್ರತಿಯೊಂದೂ ಶತಮಾನಗಳ ಭಿತ್ತಿಚಿತ್ರ ನಿದರ್ಶನಗಳ ಜೊತೆಗೆ ಸಾಹಿತ್ಯಕೃತಿಗಳನ್ನು, ಶಾಸನೋಲ್ಲೇಖಗಳನ್ನು ಬಳಸಿಕೊಂಡು ಅವರ ಇತಿಹಾಸ ಕಟ್ಟಿಕೊಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಭಿತ್ತಿಚಿತ್ರರಚನೆಯ ಮಾಧ್ಯಮಗಳು ಮತ್ತು ಭಿತ್ತಿ ಸಿದ್ಧತಾ ವಿಧಾನಗಳನ್ನು ಕುರಿತು ಚರ್ಚಿಸಲಾಗಿದೆ. ಪ್ರಾರಂಭದಲ್ಲಿ ಶಿಲೆಯ ಮೇಲೆ ರಚನೆಯಾಗುತ್ತಿದ್ದ ಭಿತ್ತಿಚಿತ್ರಗಳು ನಂತರದಲ್ಲಿ ಮಣ್ಣು. ಗಾರೆ. ಮರ. ಲೋಹ. ಹಾಗೂ ಗಾಜಿನ ಮಾಧ್ಯಮದ ಮೇಲೆಯೂ ರಚನೆಯಾಗುತ್ತ ಬಂದವು ಎನ್ನುವುದನ್ನು ನಿರೂಪಿಸಿ. ಆಯಾ ಮಾಧ್ಯಮಗಳ ಮೇಲೆ ಚಿತ್ರರಚನೆ ಮಾಡುವ ಪೂರ್ವದಲ್ಲಿ ಅವುಗಳನ್ನು ಸಂಸ್ಕರಿಸಿ ಸಿದ್ಧಗೊಳಿಸುವ ವಿಧಾನಗಳು ಇಲ್ಲಿ ವಿವೇಚನೆಗೊಂಡಿವೆ. ಅಲ್ಲದೆ ಭಿತ್ತಿಚಿತ್ರಕಲೆಯ ಮುಖ್ಯ ಅಂಗವಾದ ಭಿತ್ತಿ ಸಿದ್ಧತೆಗೊಳಿಸುವ ವಿಧಾನವನ್ನು. ಮಣ್ಣಿನ ಭಿತ್ತಿಚಿತ್ರರಚನೆಯಲ್ಲಿ ಒಳಗೊಳ್ಳುವ ವಸ್ತುಗಳು. ಗಾರೆಭಿತ್ತಿ ರಚನೆಯಲ್ಲಿ ಒಳಗೊಳ್ಳುವ ವಸ್ತುಗಳು ಯಾವವು ಎಂಬುದನ್ನು ಹೇಳಿ ಇಡೀ ಭಿತ್ತಿಸಿದ್ಧತಾ ವಿಧಾನವನ್ನು ಹಂತಹಂತವಾಗಿ ವಿವರಿಸಲಾಗಿದೆ. ಚಿತ್ರ ರಚಿಸಬೇಕಾದ ಆಧಾರವನ್ನು ಸಂಸ್ಕರಿಸುವುದು, ಸಂಸ್ಕರಿಸಿದ ಆಧಾರಕ್ಕೆ ಮಿಶ್ರಲೇಪಿಸುವುದು. ಲೇಪಿಸಿದ ಮಿಶ್ರಣವನ್ನು ಸಮತಟ್ಟುಗೊಳಿಸುವುದು. ಹಿನ್ನೆಲೆ ಲೇಪಿಸುವುದು– ಹೀಗೆ ವಿವಿಧ ಹಂತಗಳಲ್ಲಿ ನಡೆಯುವ ಭಿತ್ತಿಸಿದ್ಧತೆಯನ್ನು ಪ್ರಾಚೀನ ಶಿಲ್ಪಶಾಸ್ತ್ರಗಳ ಆಧಾರದಿಂದ ವಿವರವಾಗಿ ಚರ್ಚಿಸಲಾಗಿದೆ. ಜೊತೆಗೆ ಜನಪದ ಭಿತ್ತಿಸಿದ್ಧತಾ ವಿವರಗಳು ಮೂರನೆಯ ಅಧ್ಯಾಯದಲ್ಲಿ ಚರ್ಚಿತಗೊಂಡಿವೆ.

ನಾಲ್ಕನೆಯ ಅಧ್ಯಾಯದಲ್ಲಿ ಭಿತ್ತಿಚಿತ್ರಕಲೆಯ ಪರಿಕರಗಳ ವಿವರವಾದ ವಿಶ್ಲೇಷಣೆಯನ್ನು ಮಾಡಿಕೊಡಲಾಗಿದೆ. ಭಿತ್ತಿಚಿತ್ರರಚನೆ ಮಾಡುವ ಆಧಾರದಿಂದ ತೊಡಗಿ, ಆಧಾರಕ್ಕೆ ಲೇಪಿಸುವ ಮಿಶ್ರಣ ತಯಾರಿಕೆಯಲ್ಲಿ ಬಳಸುವ ವಸ್ತುಗಳು. ಬಣ್ಣ ಕುಂಚಗಳು, ಅಂಟುಮಾಧ್ಯಮಗಳು, ಸೀಸಕಡ್ಡಿ ಮತ್ತು ಕಂಟಗಳು– ಹೀಗೆ ಭಿತ್ತಿಚಿತ್ರರಚನೆಯಲ್ಲಿ ಬಳಸುವ ಪರಿಕರಗಳನ್ನು ವ್ಯವಸ್ಥಿತರೂಪದಲ್ಲಿ ವರ್ಗೀಕರಿಸಿಕೊಂಡು ಅಧ್ಯಯನಕ್ಕೊಳಪಡಿಸಿದ ಮೊದಲ ಪ್ರಯತ್ನ ಇಲ್ಲಿದೆ. ಭಿತ್ತಿಚಿತ್ರಕಲೆಯ ಪರಿಕರಗಳನ್ನು ಭಿತ್ತಿ ಆಧಾರ ಪರಿಕರ, ಆಧಾರವನ್ನು ಸಂಸ್ಕರಿಸುವ ಪರಿಕರ,

ಸಂಸ್ಕರಿಸಿದ ಆಧಾರಕ್ಕೆ ಮಿಶ್ರಣ ಲೇಪಿಸುವ ಪರಿಕರ, ನಂತರ ಚಿತ್ರರಚನೆಗೆ ಬೇಕಾಗುವ ಪರಿಕರ– ಹೀಗೆ ಬೇರೆ ಬೇರೆಯಾಗಿ ವಿಂಗಡಿಸಿಕೊಂಡಿದ್ದು, ಆಯಾ ಪರಿಕರಗಳನ್ನು ಪ್ರಾಚೀನರು ಯಾವ ಮೂಲಗಳಿಂದ ಪಡೆದುಕೊಳ್ಳುತ್ತಿದ್ದರು ಎಂಬುದರತ್ತ ಗಮನ ಸೆಳೆಯಲಾಗಿದೆ. ಭಿತ್ತಿ ಆಧಾರ ಪರಿಕರಗಳಲ್ಲಿ ಕಂಡುಬಂದ ಶಿಲೆ, ಮಣ್ಣು, ಗಾರೆ, ಮರ, ಲೋಹ, ಮತ್ತು ಗಾಜು ಮಾಧ್ಯಮವನ್ನು ಆಧಾರಪರಿಕರಗಳೆಂದು ನಿರೂಪಿಸಲಾಗಿದೆ.

ಆಯಾ ಆಧಾರಗಳ ಮೇಲೆ ಭಿತ್ತಿಯ ಮಿಶ್ರಣಲೇಪಿಸುವ ಪೂರ್ವದಲ್ಲಿ ಅವುಗಳನ್ನು ಸಂಸ್ಕರಿಸಲು ಬಳಸಲಾಗುವ ಪರಿಕರಗಳನ್ನು ಆಧಾರ ಸಂಸ್ಕರಣಪರಿಕರಗಳೆಂದು ಪರಿಗಣಿಸಲಾಗಿದೆ. ಮರದ ಫಲಕದ ಮೇಲೆ ಚಿತ್ರರಚನೆ ಮಾಡುವ ಮೊದಲು ಫಲಕವನ್ನು ಕೆತ್ತಿ ನುಣುಪುಗೊಳಿಸಲು ಬಳಕೆಯಾಗುವ ಸುತ್ತಿಗೆ ಉಳಿಗಳು, ಗೋಡೆಯನ್ನು ಸಮಗೊಳಿಸಲು ಬೇಕಾದ ಲಿಂಗಸೂತ್ರವೆಂಬ ಉಪಕರಣ, ಇಟ್ಟಿಗೆ ಗೊಡೆಗೆ ಎರಚುವ ಸುಣ್ಣದ ನೀರು, ಬಿಸಿ ನೀರು, ಮತ್ತು ತಣ್ಣೀರುಗಳನ್ನು ಇಲ್ಲಿ ಆಧಾರ ಸಂಸ್ಕರಣ ಪರಿಕರಗಳೆಂದು ವಿವರಿಸಿದೆ.

ಮಿಶ್ರಣವಲ್ಲಿ ಬಳಕೆಯಾಗುವ ವಸ್ತುಗಳು ಮತ್ತು ಮಿಶ್ರಣಲೇಪಿಸಲು ಬಳಸುವ ವಸ್ತುಗಳನ್ನು ಒಟ್ಟಾಗಿ ಭಿತ್ತಿ ನಿರ್ಮಾಣಪರಿಕರವೆಂದು ವರ್ಗೀಕರಿಸಿಕೊಂಡಿದ್ದು, ಇದರಲ್ಲಿ ಮತ್ತೆ ಮಿಶ್ರಣಪರಿಕರ, ಬಂಧಕ ಪರಿಕರ, ಲೇಪಿಸುವ ಪರಿಕರಗಳೆಂದು ಮೂರು ಭಾಗಗಳನ್ನು ಮಾಡಿಕೊಂಡು ವಿವೇಚಿಸಲಾಗಿದೆ. ಮಿಶ್ರಣಪರಿಕರಗಳಲ್ಲಿ ಮಣ್ಣು, ಉಸುಕು, ಕಲ್ಲಿನಪುಡಿ, ಸುಣ್ಣ, ನಾರುಪದಾರ್ಥಗಳಂತಹ ವಸ್ತುಗಳನ್ನು ಹೆಸರಿಸಿದ್ದರೆ, ಬಂಧಕ ಪರಿಕರವೆಂಬ ಪ್ರತ್ಯೇಕ ವಿಭಾಗವಲ್ಲಿ ಭಿತ್ತಿನಿರ್ಮಾಣವಲ್ಲಿ ಬಳಕೆಯಾಗುವ ಅಂಟುಮಾಧ್ಯಮಗಳನ್ನು ಕುರಿತು ಹೇಳಿದೆ. ಮಿಶ್ರಣ ಲೇಪನವಲ್ಲಿ ಬಳಸುವ ತ್ಯಾಪಿಗಳು, ಪೊರಕೆಯಂತಹ ಸಾಧನಗಳನ್ನು ಹೇಳುತ್ತ ಕಾವಿಭಿತ್ತಿಚಿತ್ರರಚನೆಯಲ್ಲಿ ಪ್ರಮುಖವಾಗಿ ಬಳಸಲ್ಪಡುವ ಕಾಗದವನ್ನೂ ಈ ಗುಂಪಿನಲ್ಲಿ ಸೇರಿಸಲಾಗಿದೆ.

ಭಿತ್ತಿಚಿತ್ರರಚನಾ ಪರಿಕರಗಳೆಂಬ ವಿಭಾಗವಲ್ಲಿ ಮತ್ತೆ ರೇಖಾಚಿತ್ರಕ್ಕಾಗಿ ಬಳಸುವ ಸೀಸುಕಡ್ಡಿಗಳು(ವರ್ತಿಕಾ), ನಂತರ ಚಿತ್ರರಚನೆಯ ಬಣ್ಣಗಳು, ಬಣ್ಣಗಳಿಗೆ ಬೆರೆಸಲಾಗುವ ಅಂಟುದ್ರಾವಕಗಳು, ಬಣ್ಣ ಕಲಸಿಕೊಳ್ಳುವ ಪಾತ್ರೆಗಳು, ಕುಂಚಗಳು, ಕಾವಿ ಚಿತ್ರರಚನೆಯಲ್ಲಿ ಪ್ರಮುಖವಾಗಿ ಬಳಸಲಾಗುವ ಕುಂಚಗಳನ್ನು ಪ್ರತ್ಯೇಕವಾಗಿ ನೋಡಲಾಗಿದೆ. ಅಂಟುದ್ರಾವಕಗಳಲ್ಲಿ ಸಸ್ಯಜನ್ಯ, ಪ್ರಾಣಿಜನ್ಯ, ಖನಿಜಜನ್ಯವಾದ ಅಂಟುದ್ರಾವಕಗಳೆಂದು ಗುರುತಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಭಿತ್ತಿಚಿತ್ರರಚನೆಯ ವಿಧಾನವನ್ನು ಪೂರ್ವಾಂಗ ಮತ್ತು ಉತ್ತರಾಂಗ ಎಂಬುದಾಗಿ ಎರಡು ಹಂತಗಳಲ್ಲಿ ವಿವೇಚಿಸಲಾಗಿದ್ದು ಪೂರ್ವಾಂಗದಲ್ಲಿ ಕಲಾವಿದನು ಭಿತ್ತಿಚಿತ್ರರಚನೆಗಿಂತ ಮೊದಲು ಗಮನಿಸತಕ್ಕ ಅಂಶಗಳನ್ನು ವಿವೇಚಿಸಿದೆ. ಚಿತ್ರದ ಪ್ರಮಾಣಗಳು, ಪ್ರಮಾಣವನ್ನು ನಿಗದಿಪಡಿಸುವಲ್ಲಿ ಸಹಕಾರಿಯಾಗುವ ಸೂತ್ರಗಳು, ಚಿತ್ರಗಳ ಭಂಗಿಗಳನ್ನು ನಿರೂಪಿಸುವ ನವಸ್ಥಾನಗಳು, ಚಿತ್ರಲಕ್ಷಣಗಳು, ಚಿತ್ರದ ದೋಷಗಳು, ಚಿತ್ರದ ಉನ್ನತಿಗಳನ್ನು ಪೂರ್ವಾಂಗದಲ್ಲಿ ನಿರೂಪಿಸಲಾಗಿದೆ.

ಭಿತ್ತಿಚಿತ್ರರಚನೆಯ ಉತ್ತರಾಂಗದಲ್ಲಿ ಭಿತ್ತಿ ಹಸಿ ಇರುವಾಗ ಚಿತ್ರರಚಿಸುವುದು, ಭಿತ್ತಿ ಒಣಗಿದ ಮೇಲೆ ಚಿತ್ರರಚಿಸುವುದು, ಬಣ್ಣದ ಹುಡಿಯಿಂದ ಚಿತ್ರರಚಿಸುವುದು, ಹಸಿಭಿತ್ತಿಯನ್ನು ಕೆರೆದು ತೆಗೆದು ಭಿತ್ತಿಚಿತ್ರರೂಪಿಸುವುದು ಎಂಬ ನಾಲ್ಕು ರೀತಿಯ ಭಿತ್ತಿಚಿತ್ರರಚನಾ ವಿಧಾನಗಳನ್ನು ಕುರಿತು ಚರ್ಚಿಸಿ, ಮತ್ತೆ ಭಿತ್ತಿಚಿತ್ರರಚನೆಯಲ್ಲಿ

ಅನುಸರಿಸುವ ಹಂತಗಳನ್ನು ಒಂದೊಂದಾಗಿ ವಿವೇಚಿಸಲಾಗಿದೆ. ಇವುಗಳಲ್ಲಿ ಇದ್ದಿಲಿನಿಂದ ರೇಖಾಚಿತ್ರ ಬರೆದುಕೊಳ್ಳುವುದರಿಂದ ಹಿಡಿದು ಚಿತ್ರದ ಕೊನೆಗೆ ಹೊರರೇಖೆ ಎಳೆಯುವವರೆಗಿನ ಮುಖ್ಯವಾದ ಆರು ಹಂತಗಳನ್ನು ಎತ್ತಿಹೇಳಲಾಗಿದೆ.

ಆರನೆಯ ಅಧ್ಯಾಯದಲ್ಲಿ ಉತ್ತರಕರ್ನಾಟಕದ ಭಿತ್ತಿಚಿತ್ರಕಲೆಯನ್ನು ನಾಲ್ಕು ಪ್ರಕಾರಗಳಲ್ಲಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಅವು ಶಿಲಾಶ್ರಯಗಳಲ್ಲಿ ರಚನೆಯಾದ ಪ್ರಾಗೈತಿಹಾಸಿಕ ಭಿತ್ತಿಚಿತ್ರಕಲೆ, ಜನಪದ ಭಿತ್ತಿಚಿತ್ರಕಲೆ, ಶಿಷ್ಟಪದ ಭಿತ್ತಿಚಿತ್ರಕಲೆ, ಮತ್ತು ಸಮ್ಮಿಶ್ರ ಭಿತ್ತಿಚಿತ್ರಕಲೆಗಳಾಗಿವೆ. ಅವುಗಳ ಸ್ವರೂಪ, ರಚನಾ ವಿಧಾನ, ಮಾಧ್ಯಮ, ವಸ್ತುವಿಷಯಗಳು, ಕಾಲಮಾನ ಕುರಿತಾಗಿ ಚರ್ಚಿಸಲಾಗಿದೆ. ಪ್ರಾಗೈತಿಹಾಸಿಕ ಭಿತ್ತಿಚಿತ್ರಕಲೆಯಲ್ಲಿ ಅವುಗಳ ಸ್ವರೂಪ, ರಚನೆಯಲ್ಲಿ ಅನುಸರಿಸಿದ ತಾಂತ್ರಿಕತೆ, ಅವುಗಳ ವಿಧಗಳಾದ ವರ್ಣಚಿತ್ರ, ವರ್ಣರಹಿತ ಚಿತ್ರಗಳು, ವರ್ಣಚಿತ್ರಗಳಲ್ಲಿ ರೇಖಾಚಿತ್ರಗಳು ಮತ್ತು ನೆಳಲು ಚಿತ್ರಗಳು ಎಂದು ವಿಭಾಗಿಸಿ, ವರ್ಣರಹಿತ ಚಿತ್ರಗಳಲ್ಲಿ ಕುಟ್ಟಿದ ಚಿತ್ರಗಳು, ಕೊರೆದ ಚಿತ್ರಗಳೆಂದು ಪ್ರತ್ಯೇಕಿಸಿಕೊಂಡು ವಿವರಿಸಲಾಗಿದೆ. ಹಾಗೆಯೇ ಬೇಟೆಯ ಸಂಬಂಧಿ ಚಿತ್ರಗಳು, ಕುಣಿತದ ಚಿತ್ರಗಳು, ತಾಂತ್ರಿಕ ಚಿತ್ರಗಳು, ಮತ್ತು ಇತರ ಚಿತ್ರಗಳೆಂದು ವಿಂಗಡಿಸಿ ಹೇಳಲಾಗಿದೆ. ಪ್ರಾಗೈತಿಹಾಸಿಕ ಈ ಚಿತ್ರಗಳು ಅವರ ಭಾವಾಭಿವ್ಯಕ್ತಿಯನ್ನು ಬಿಂಬಿಸಿದರೂ ಅದರ ಜೊತೆಗೆ ಅವರ ಜೀವನ ವಿಧಾನ, ಆಚರಣೆಗಳು ಮತ್ತು ಕಲಾಬದುಕನ್ನು ತಿಳಿಸಿಕೊಡುವ ಚಿತ್ರಭಾಷೆಯ ಶಾಸನಗಳಾಗಿವೆ ಎಂಬುದನ್ನು ನಿರೂಪಿಸಲಾಗಿದೆ. ಇದರ ಜೊತೆಗೆ ಬಾದಾಮಿ ಪರಿಸರದಲ್ಲಿ ಇತ್ತೀಚೆಗೆ ಶೋಧಗೊಂಡ ಪ್ರಾಗೈತಿಹಾಸಿಕ ಭಿತ್ತಿಚಿತ್ರನೆಲೆಗಳು ಈ ಮೂಲಕ ಮೊದಲಬಾರಿಗೆ ಬೆಳಕುಕಾಣುತ್ತಿವೆ.

ಗ್ರಾಮೀಣ ಪ್ರದೇಶಗಳಲ್ಲಿ ಆಚರಣೆಯ ಸಂದರ್ಭದಲ್ಲಿ ರಚನೆಯಾಗುವ ಗೋಡೆಮೇಲಿನ ಚಿತ್ರಗಳನ್ನು ಜನಪದ ಭಿತ್ತಿಚಿತ್ರಕಲೆ ಎಂದು ಪ್ರತ್ಯೇಕವಾಗಿ ವಿಶ್ಲೇಷಿಸಲಾಗಿದೆ. ಹಾಲಕ್ಕಿ ಒಕ್ಕಲಿಗರು, ಕುಣಬಿಗಳು, ಗೊಂಡರು, ನಾಮಧಾರಿಗಳು, ಮೊಗವೀರರು, ಕರೆ ಒಕ್ಕಲಿಗರಂತಹ ಜನಸಮುದಾಯಗಳು ಆಚರಣೆಯ ಸಂದರ್ಭಗಳಲ್ಲಿ ರಚಿಸುವ 'ಹಲಿ' ಚಿತ್ರಗಳು, 'ಹಸೆ' ಚಿತ್ರಗಳಂತಹ ಜನಪದ ಕಲಾಪ್ರಕಾರಗಳು ಇಲ್ಲಿ ಸೇರ್ಪಡೆಗೊಂಡಿವೆ. ಉತ್ತರಕರ್ನಾಟಕದ ಧಾರವಾಡ, ವಿಜಾಪುರ, ಬಾಗಲಕೋಟ, ಬೆಳಗಾಂವ, ಗದಗ, ಗುಲಬರ್ಗಾ ಜಿಲ್ಲೆಗಳಲ್ಲಿ ಹಬ್ಬಹರಿದಿನಗಳಲ್ಲಿ, ಮದುವೆ ಮುಂಜಿವೆಗಳಲ್ಲಿ ಗೋಡೆಯ ಮೇಲೆ ರಚಿಸುವ ಬೆಳದಿಂಗಳು, ಹೋಳಿಗೆ ಚಿತ್ರಬರೆಯುವುದು, ಪಾಂಡವರ ಚಿತ್ರಬರೆಯುವುದು, ಕೃಷ್ಣನಪಾದ ಬರೆಯುವುದು, ಮದುವೆಗಳಲ್ಲಿ ವಧುವರರು ಕುಳಿತುಕೊಳ್ಳುವ ಗೋಡೆಯ ಹಿಂದೆ ಧಾರ್ಮಿಕ ಚಿತ್ರರಚಿಸುವುದು, ಅಲ್ಲದೆ ಬೀದರ ಭಾಗದಲ್ಲಿ ಶೀಗಿಹುಣ್ಣಿಮೆಯಲ್ಲಿ ಶೀಗಿಚಿತ್ರಬರೆಯುವ ವಿಷಯಗಳು ಇಲ್ಲಿ ಪ್ರಸ್ತಾಪಿತವಾಗಿವೆ. ಉತ್ತರ ಕರ್ನಾಟಕದ ಒಟ್ಟು ಜನಪದ ಭಿತ್ತಿಚಿತ್ರ ಕಲೆಯನ್ನು ಮನೆಗೋಡೆಯ ಚಿತ್ರವಿನ್ಯಾಸಗಳು, ಬಾಗಿಲಿನ ಸುತ್ತಲೂ ರಚಿಸುವ ಚಿತ್ರವಿನ್ಯಾಸಗಳು, ದೇವಾಲಯಗಳಲ್ಲಿನ ಚಿತ್ರವಿನ್ಯಾಸಗಳು, ಸಮಾಧಿಗಳ ಮೇಲಿನ ಚಿತ್ರವಿನ್ಯಾಸಗಳು, ತುಳಸೀಕಟ್ಟೆಯ ಮೇಲಿನ ಚಿತ್ರವಿನ್ಯಾಸಗಳೆಂದು ವಿಭಾಗಿಸಿಕೊಂಡು ವಿವರಿಸಲಾಗಿದೆ. ಶಿಲಾಶ್ರಯ ತಾಣಗಳಲ್ಲಿ ರಚಿಸಿದ ಜನಪದ ಭಿತ್ತಿಚಿತ್ರಕಲೆಯ ವಿವರಣೆಯಲ್ಲಿ ಗದಗ ಸಮೀಪದ ಚಿಂಚಲಿ ಗುಡ್ಡದ ಚಿತ್ರಗಳು, ಯಾದಗಿರಿ ತಾಲೂಕಿನ ಬಲಚಕ್ರದಲ್ಲಿನ ಚಿತ್ರಗಳು, ರಾಯಚೂರು ಜಿಲ್ಲೆಯ ಮಾಸ್ಕಿಯಲ್ಲಿನ ಚಿತ್ರಗಳು, ಬಳ್ಳಾರಿ ಜಿಲ್ಲೆಯ ಹಳಕಂಡಿಯ ಚಿತ್ರಗಳನ್ನು ಹೇಳಿ ಜೊತೆಗೆ ಬಾದಾಮಿಯಲ್ಲಿನ

ಉತ್ತರ ಕೋಟೆಯಲ್ಲಿನ ಒಂದು ಬೃಹತ್ ಬಂಡೆಯ ಮೇಲಿನ ಆಂಜನೇಯ ಚಿತ್ರ, ಇದೇ ತಾಲೂಕಿನ ಸಿದ್ಧನಕೊಳ್ಳ, ಮಲಿಗೆಮ್ಮನಕೊಳ್ಳ, ಕೆರೂರು, ಮುಚ್ಚಳಗುಡ್ಡ, ಕುಟಕನಕೇರಿಗಳಲ್ಲಿ ಕಂಡುಬಂದ ಶಿಲೆಯ ಮೇಲಿನ ಚಿತ್ರಗಳನ್ನು ಕುರಿತು ಮೊದಲಬಾರಿಗೆ ವಿವೇಚಿಸಲಾಗಿದೆ. ಆಚರಣೆಯ ಹಿನ್ನಲೆಯಲ್ಲಿ ರೂಪುಗೊಂಡ ಈ ಜನಪದ ಭಿತ್ತಿಚಿತ್ರಕಲೆಗಳೇ ಶಿಷ್ಟಪದ ಭಿತ್ತಿಚಿತ್ರಕಲೆಗೆ ಮೂಲಸೆಲೆ ಎಂಬುದನ್ನು ತೋರಿಸಿಕೊಡಲಾಗಿದೆ.

ಶಿಷ್ಟಪದ ಭಿತ್ತಿಚಿತ್ರಕಲೆಯನ್ನು ಭಿತ್ತಿಚಿತ್ರಗಳು ರಚನೆಯಾದ ನೆಲೆಗಳನ್ನಾಧರಿಸಿ ಗುಹೆ, ದೇವಾಲಯ, ಅರಮನೆ. ಮಸೀದೆ. ಮಠ. ಚರ್ಚು ಮತ್ತು ಮನೆಗಳಲ್ಲಿರುವ ಭಿತ್ತಿಚಿತ್ರಕಲೆ ಎಂಬುದಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಗುಹೆಗಳಲ್ಲಿರುವ ಭಿತ್ತಿಚಿತ್ರಕಲೆಯನ್ನು ಮತ್ತೆ ಸ್ವಾಭಾವಿಕ ಗುಹೆಗಳಲ್ಲಿರುವ ಭಿತ್ತಿಚಿತ್ರಕಲೆ, ಮಾನವನಿರ್ಮಿತ ಗುಹೆಗಳಲ್ಲಿರುವ ಭಿತ್ತಿಚಿತ್ರಕಲೆ ಎಂದು ವಿಭಾಗಿಸಿಕೊಳ್ಳಲಾಗಿದೆ. ಸ್ವಾಭಾವಿಕವಾದ ಶಿಲಾಶ್ರಯ ತಾಣಗಳಲ್ಲೂ ಶಿಷ್ಟಪದ ಭಿತ್ತಿಚಿತ್ರ ಕಲೆಯನ್ನು ಗುರುತಿಸಿ, ಬಾದಾಮಿಯ ಪರಿಸರದಲ್ಲಿನ ಶಿಲಾಶ್ರಯ ತಾಣದ ಶಿಷ್ಟಪದ ಭಿತ್ತಿಚಿತ್ರಗಳು ಚಾಲುಕ್ಯರ ಪ್ರಾರಂಭಿಕ ರಚನೆಗಳೆಂದು ನಿರೂಪಿಸಿದೆ. ಮುಂದಿನ ಮಾನವ ನಿರ್ಮಿತಗುಹೆ, ದೇವಾಲಯ ಅರಮನೆ. ಮಸೀದೆ. ಚರ್ಚು. ಮನೆಗಳಲ್ಲಿನ ಭಿತ್ತಿಚಿತ್ರಕಲೆ ಹೇಳುವಾಗ ಅವುಗಳ ರಚನಾಕಾಲ, ರಚನಾ ಮಾಧ್ಯಮ. ವಸ್ತುವಿಷಯ. ಚಿತ್ರಸಂಯೋಜನೆ, ಶೈಲಿ, ಲಕ್ಷಣ, ಹೋಲಿಕೆ, ವ್ಯತ್ಯಾಸ, ಪ್ರಾದೇಶಿಕತೆಯ ಪ್ರಭಾವ. ಚಿತ್ರರಚನೆಯಲ್ಲಿ ಅನುಸರಿಸಿದ ತಂತ್ರಗಾರಿಕೆ, ಚಿತ್ರಗಳ ವೇಷಭೂಷಣ, ಉಡುಗೆತೊಡುಗೆಗಳಂತಹ ವಿಷಯಗಳು. ಅಲ್ಲದೆ ಕಾಲದಿಂದ ಕಾಲಕ್ಕೆ ಬದಲಾದ ಅವುಗಳ ಸ್ವರೂಪ, ವಿನ್ಯಾಸಗಳು ಇಲ್ಲಿ ಚರ್ಚಿತಗೊಂಡಿವೆ. ದೇವಾಲಯ. ಮಠ. ಮನೆ. ಚರ್ಚು. ಮಸೀದೆ ಅರಮನೆಗಳಂತಹ ಸ್ಥಳಗಳಲ್ಲಿ ಯಾವ ಪ್ರಕಾರದ ಚಿತ್ರಗಳಿವೆ ಎಂಬುದನ್ನು ಆಯಾ ನೆಲೆಗಳ ಹಿನ್ನಲೆಯಲ್ಲಿ ಹೇಳಲಾಗಿದೆ. ದೇವಾಲಯಗಳಲ್ಲಿ ಎಲ್ಲ ಬಗೆಯ ಚಿತ್ರಗಳೂ, ಮಠದಲ್ಲಿ ಧಾರ್ಮಿಕ ದೇವತೆಗಳ ಜೊತೆಗೆ ಮಠದ ಸ್ವಾಮಿಗಳಿಗೆ ಸಂಬಂಧಪಟ್ಟ ಚಿತ್ರಗಳು, ಸಮಕಾಲೀನ ರಾಜಕೀಯ ವ್ಯವಸ್ಥೆಯ ಬಗ್ಗೆ ಕನ್ನಡಿಹಿಡಿಯುವಂತಹ ಚಿತ್ರಗಳು ಪ್ರಮುಖವಾಗಿ ರಚಿತಗೊಂಡಿವೆ. ಅರಮನೆಗಳಲ್ಲಿ ರಾಜರ ವಿಲಾಸ ಜೀವನ. ಅವರ ಯುದ್ಧಗಳು. ಅವರ ಧಾರ್ಮಿಕ ಭಾವನೆಗಳು ವ್ಯಕ್ತಗೊಂಡಿವೆ. ಮನೆಗಳಲ್ಲಿ ಮನೆಯ ಒಡೆಯನ ಇಚ್ಛಾನುಸಾರ ಧಾರ್ಮಿಕ ಮತ್ತು ಲೌಕಿಕ ಚಿತ್ರಗಳು ಕಂಡುಬಂದಿವೆ. ಮಸೀದೆಗಳಲ್ಲಿ ನಕ್ಷಾರೂಪಗಳು ಮಾತ್ರವಿದ್ದು. ಚರ್ಚುಗಳಲ್ಲಿ ಯೇಸುವಿನ ಜೀವನ, ಆತನ ಬೋಧನೆಗಳಿಗೆ ಸಂಬಂಧಿಸಿದ ಚಿತ್ರಗಳು ರಚನೆಗೊಂಡಿವೆ. ಶಿಷ್ಟಪದ ಭಿತ್ತಿಚಿತ್ರಕಲೆಯ ವೈವಿಧ್ಯತೆಯನ್ನು ವಿವೇಚಿಸುವಲ್ಲಿ ಹಳಿಯಾಳ ತಾಲೂಕಿನ ಬೂಜುರಕುಂಚನಹಳ್ಳಿಯ ರಾಮದೇವಾಲಯ. ಮತ್ತು ಸಂಕೇಶ್ವರದ ವರ್ತಕರೊಬ್ಬರ ಮನೆಯ ಚಿತ್ರಗಳು ಇಲ್ಲಿ ವಿಶೇಷವಾಗಿ ಬೆಳಕಿಗೆ ಬಂದಿವೆ.

ಕರಾವಳಿ ಭಾಗದ ಕಾವಿಭಿತ್ತಿಚಿತ್ರಗಳಲ್ಲಿ ಜನಪದ ಮತ್ತು ಶಿಷ್ಟಪದ ಭಿತ್ತಿಚಿತ್ರಕಲೆಯ ಅಂಶಗಳು ಸಮ್ಮಿಳಿತಗೊಂಡಿರುವುದರಿಂದ ಅದನ್ನು ಪ್ರತ್ಯೇಕವಾದ ಸಮ್ಮಿಶ್ರ ಭಿತ್ತಿಚಿತ್ರಕಲೆ ಎಂದು ವಿಭಾಗಿಸಿಕೊಳ್ಳಲಾಗಿದೆ. ಕಾವಿಕಲೆಯ ಸ್ವರೂಪ, ಗೋಡೆಗೆ ಲೇಪಿಸುವ ಮಿಶ್ರಣ ತಯಾರಿಕೆ, ಭಿತ್ತಿನಿರ್ಮಾಣ ವಿಧಾನ, ಚಿತ್ರರಚನಾ ಹಂತಗಳನ್ನು ಇಲ್ಲಿ ವಿವೇಚಿಸಿದೆ. ಇಲ್ಲಿಯೂ ಕಾವಿಚಿತ್ರಗಳು ರಚನೆಗೊಂಡ ನೆಲೆಗಳನ್ನು ಆಧರಿಸಿ ದೇವಾಲಯ, ಮಠ. ಮನೆಗಳಲ್ಲಿ ರಚಿಸಿರುವ ಕಾವಿ ಭಿತ್ತಿಚಿತ್ರಕಲೆ ಎಂದು ವಿಂಗಡಿಸಿಕೊಂಡು ಅಧ್ಯಯನ ಮಾಡಿದೆ. ಹಾಗೆಯೇ ಪ್ರತಿಯೊಂದು ನೆಲೆಯ ಚಿತ್ರಗಳನ್ನೂ ವಿಷಯಾಧಾರಿತವಾಗಿ ವಿಭಾಗಿಸಿಕೊಂಡು ವಿವರಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಭಿತ್ತಿಚಿತ್ರಕಲೆಯ ಪೋಷಕರು ಮತ್ತು ಕಲಾವಿದರ ಕುರಿತಾಗಿ ಚರ್ಚಿಸಲಾಗಿದೆ. ಭಿತ್ತಿಚಿತ್ರಕಲೆಯ ಪರಂಪರೆಯಲ್ಲಿ ಅದನ್ನು ಪೋಷಿಸಿದ ಪೋಷಕರ ಪಾತ್ರ ತುಂಬಾ ಮಹತ್ವ ಪೂರ್ಣವಾದುದು. ಇಲ್ಲಿ ಭಾರತದ ಅನೇಕ ಅರಸರು ಭಿತ್ತಿಚಿತ್ರಕಲೆಯನ್ನು ಪ್ರೋತ್ಸಾಹಿಸಿದ ಹಿನ್ನೆಲೆಯನ್ನು ಹೇಳಿ, ಕರ್ನಾಟಕದ ಅದರಲ್ಲೂ ಉತ್ತರಕರ್ನಾಟಕದಲ್ಲಿ ಭಿತ್ತಿಚಿತ್ರಕಲೆಗೆ ಪ್ರೋತ್ಸಾಹ ನೀಡಿದ ಪೋಷಕರ ಬಗೆಗೆ ವಿವರಗಳನ್ನು ಸಂಗ್ರಹಿಸಲಾಗಿದೆ. ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ವಿಜಯನಗರ ದೊರೆಗಳು ಭಿತ್ತಿಚಿತ್ರಕಲೆಗೆ ಪ್ರೋತ್ಸಾಹ ನೀಡಿದ್ದನ್ನು ಹೇಳಿ ಅವರ ಪ್ರೋತ್ಸಾಹದಲ್ಲಿ ರಚನೆಯಾದ ಭಿತ್ತಿಚಿತ್ರಗಳನ್ನು ಹೆಸರಿಸಲಾಗಿದೆ. ವಿಜಯನಗರ ದೊರೆಗಳ ಪ್ರೋತ್ಸಾಹದಲ್ಲಿ ಕರ್ನಾಟಕ ಪ್ರದೇಶದಲ್ಲಿ ಮಾತ್ರವಲ್ಲದೇ ಆಂಧ್ರಪ್ರದೇಶ, ತಮಿಳುನಾಡುಗಳಲ್ಲಿಯೂ ಭಿತ್ತಿಚಿತ್ರಗಳು ರಚನೆಯಾಗಿದ್ದ ಆ ನೆಲೆಗಳನ್ನೂ ಇಲ್ಲಿ ಹೆಸರಿಸಿದೆ. ವಿಜಯನಗರ ಪತನದನಂತರ ಮೈಸೂರು ಅರಸರು. ಸುರಪುರನಾಯಕರು, ಬಿಳಗಿ, ನರಗುಂದ, ರಾಮದುರ್ಗ, ನಿಪ್ಪಾಣಿ, ಸೋದೆ. ಮುಧೋಳಗಳಂತಹ ಸಂಸ್ಥಾನಿಕರೂ ಈ ಭಾಗದ ಭಿತ್ತಿಚಿತ್ರಕಲೆಗೆ ತಮ್ಮ ಪ್ರೋತ್ಸಾಹಕೊಟ್ಟಿದ್ದುದನ್ನೂ ವಿವರಿಸಲಾಗಿದೆ. ಜೊತೆಗೆ ಕೆಲವು ಪ್ರತಿಷ್ಠಿತ ಜನರು. ಮಠಮಾನ್ಯಗಳ ಸ್ವಾಮಿಗಳು, ಧರ್ಮಾಧಿಕಾರಿಗಳು ಭಿತ್ತಿಚಿತ್ರ ಪರಂಪರೆಯನ್ನು ಪೋಷಿಸಿದ್ದಾರೆ. ಹಾಗೆಯೇ ಮುಸ್ಲಿಮರು, ಕ್ರೈಸ್ತರು ತಮ್ಮ ಮಸೀದೆ, ಚರ್ಚುಗಳಲ್ಲಿ ಭಿತ್ತಿಚಿತ್ರ ಬರೆಯಿಸಿ ಈ ನಾಡಿನ ಕಲಾ ಪರಂಪರೆಗೆ ತಮ್ಮ ಕೊಡುಗೆಯನ್ನು ಸಲ್ಲಿಸಿದ್ದಾರೆ. ಇವುಗಳಲ್ಲದೆ ಜನಪದ ಭಿತ್ತಿಚಿತ್ರಕಲೆಯನ್ನು ಪೋಷಿಸಿದ ಗ್ರಾಮೀಣ ಜನಸಮುದಾಯದ ಕುರಿತು ವಿವೇಚಿಸಲಾಗಿದೆ. ಭಿತ್ತಿಚಿತ್ರಕಲೆಯ ಇತಿಹಾಸದಲ್ಲಿ ಅದರ ಪೋಷಕರಂತೆ ಚಿತ್ರರಚನೆಮಾಡಿದ ಕಲಾವಿದರೂ ಮುಖ್ಯರಾಗುತ್ತಾರೆ. ಆದರೆ ಭಿತ್ತಿಚಿತ್ರಕಲಾವಿದರ ಜೀವನ-ಸಾಧನೆಗಳ ವಿವರ ಹೆಚ್ಚಾಗಿ ಕಂಡುಬರುವುದಿಲ್ಲ.

ಇಲ್ಲಿ ಬ್ರಹ್ಮನಾರಾಯಣ. ವಿಶ್ವಕರ್ಮ. ಮಯ. ಮಾಂಡವ್ಯರಂತಹ ಪೌರಾಣಿಕ ವ್ಯಕ್ತಿಗಳಲ್ಲದೇ. ಪ್ರಾಚೀನ ಸಾಹಿತ್ಯಕೃತಿಗಳಲ್ಲಿ ಕಂಡುಬರುವ ಚೀರಘಟ್ಟಿ, ಮೇಘವಾನನ, ನಗ್ನಜಿತ್, ಚಿತ್ರಕ, ಮುಕ್ತಕ, ಆದಿದೇವವಾದಿಗಳಂತಹ ಕಲಾವಿದರ ಹೆಸರುಗಳನ್ನು ಪ್ರಸ್ತಾಪಿಸಲಾಗಿದೆ. ಜೊತೆಗೆ ಗ್ರೀಕ್‌ನ 'ಸ್ಯೂಕ್ಸಿಸ್', ಪೂರ್ವತುರ್ಕಿಸ್ತಾನದ 'ಲೆತ' ಎಂಬ ಪ್ರಾಚೀನ ಚಿತ್ರಕಲಾವಿದರ ಹೆಸರನ್ನು ಹೇಳಿದೆ. ಹಾಗೆಯೇ ಬಾದಾಮಿ ಭಿತ್ತಿಚಿತ್ರಗಳನ್ನು ರಚನೆಮಾಡಿದ ದುಟ್ಟಮನೋದಾರುನನ್, ವಿಜಾಪುರದ ಸುಲ್ತಾನರ ಬಳಿ ಇದ್ದ ಚಿತ್ರಕಲಾವಿದರು, ಮೈಸೂರ ಅರಸರ ಆಸ್ಥಾನದ ಚಿತ್ರಕಲಾವಿದರನ್ನು ಪ್ರಾಸಂಗಿಕವಾಗಿ ಹೆಸರಿಸಿದೆ. ಚಿತ್ರಕಲಾವಿದರಾದ ರಾಜರು, ಶಿಲ್ಪಿಗಳು, ರೂವಾರಿಗಳು, ಲಿಪಿಕಾರರು. ಮಠದ ಸ್ವಾಮಿಗಳು. ಸಂತರುಗಳ ಕುರಿತು ಇಲ್ಲಿ ಗಮನಿಸಲಾಗಿದ್ದು, ಪ್ರಾಚೀನ ಕಾಲದ ಕಲಾಶಿಕ್ಷಣ ಕಲಾವಿದರಿಗಿದ್ದ ಮನ್ನಣೆ. ಬಿರುದುಬಾವಲಿ ಮುಂತಾದ ಸ್ಥಾನಮಾನಗಳನ್ನು ವಿವೇಚಿಸಿದೆ.

ಎಂಟನೆಯ ಅಧ್ಯಾಯದಲ್ಲಿ ಭಿತ್ತಿಚಿತ್ರಕಲೆಯ ಆಪತ್ತುಗಳು ಮತ್ತು ಸಂರಕ್ಷಣಾ ಕ್ರಮಗಳ ಬಗೆಗೆ ಚರ್ಚಿಸಿದೆ. ಭಿತ್ತಿಚಿತ್ರಗಳಿಗೊದಗುವ ಆಪತ್ತುಗಳನ್ನು ಸ್ವಾಭಾವಿಕ, ಪ್ರಾಕೃತಿಕ, ವ್ಯಕ್ತಿಗತ ಆಪತ್ತುಗಳೆಂದೂ ಪ್ರಾಣಿ-ಪಕ್ಷಿ, ಕ್ರಿಮಿಕೀಟಗಳಿಂದಾಗುವ ಆಪತ್ತುಗಳೆಂದೂ ವಿಂಗಡಿಸಿಕೊಂಡು ಚರ್ಚಿಸಲಾಗಿದೆ. ಪ್ರಾಕೃತಿಕ ಆಪತ್ತುಗಳಲ್ಲಿ ನೀರು. ಬೆಂಕಿ. ಗಾಳಿ. ಬಿಸಿಲು. ಭೂಕಂಪ. ಪ್ರವಾಹಗಳಂತಹ ವಿಕೋಪಗಳಿಂದ ಸಂಭವಿಸುವ ಆಪತ್ತುಗಳನ್ನು ಹೇಳಿದೆ.

ವ್ಯಕ್ತಿಗತ ಆಪತ್ತುಗಳಲ್ಲಿ ಆತನ ರಾಜಕೀಯ ಧಾರ್ಮಿಕ ಚಟುವಟಿಕೆಗಳಿಂದಾಗುವ ಆಪತ್ತುಗಳು ಮುಖ್ಯವಾಗಿರುತ್ತವೆ. ಇದಲ್ಲದೆ ಕಾರ್ಖಾನೆ, ಅಡಿಗೆ ಮಾಡುವ ಹೊಗೆಯಿಂದುಂಟಾಗುವ ಹಾನಿ, ವಿದ್ಯುತ್‌ದೀಪ,

ಕಟ್ಟಡ ನವೀಕರಿಸುವುದರಿಂದ ಭಿತ್ತಿಚಿತ್ರಗಳು ಹಾಳಾಗುವುದನ್ನೂ ಇಲ್ಲಿ ವಿವರಿಸಲಾಗಿದೆ. ಜೊತೆಗೆ ಕೆಲವು ಜನರು ಅವುಗಳ ಮಹತ್ವ ತಿಳಿಯದೇ ಅವುಗಳನ್ನು ಕೆರೆಯುವುದು. ಅವುಗಳ ಮೇಲೆ ಹೆಸರು ಬರೆಯುವುದು, ಅದರಲ್ಲಿರುವ ಬಂಗಾರ. ಬೆಳ್ಳಿಯ ಅಂಶಗಳನ್ನು ತೆಗೆದುಕೊಳ್ಳಲು ಅವುಗಳನ್ನು ನಾಶಪಡಿಸುವುದು. ಮತ್ತು ಚಲನಚಿತ್ರ ಚಿತ್ರೀಕರಣದಿಂದ ಭಿತ್ತಿಚಿತ್ರಗಳಿಗೆ ಒದಗುವ ಆಪತ್ತುಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಭಿತ್ತಿಚಿತ್ರಗಳ ಸಂರಕ್ಷಣೆಯಲ್ಲಿ ಪ್ರಾಚೀನರು ಅನುಸರಿಸುತ್ತಿದ್ದ ಕ್ರಮಗಳನ್ನು ಚರ್ಚಿಸಿ, ಪ್ರಾಚೀನ ಭಿತ್ತಿಚಿತ್ರಗಳನ್ನು ಉಳಿಸುವ ನಿಟ್ಟಿನಲ್ಲಿ ಕೈಕೊಳ್ಳಬಹುದಾದ ಮಾರ್ಗೋಪಾಯಗಳನ್ನು ಹೇಳಿದೆ. ಹಾಳಾದ ಚಿತ್ರಗಳನ್ನು ಪುನರ್‌ರೂಪಿಸುವುದು. ನಕಲು ಮಾಡುವುದು. ಪ್ರತಿಮಾಡುವುದು, ಫೋಟೋಗ್ರಾಫ್ - ವಿಡಿಯೋ ಚಿತ್ರೀಕರಣ ಮಾಡುವದು ಮತ್ತು ಮೈಕ್ರೋಫಿಲಂನಲ್ಲಿ ಅಳವಡಿಸಿ ಕಾಯ್ದಿರಿಸುವ ಕ್ರಮಗಳನ್ನು ಕುರಿತು ಹೇಳಲಾಗಿದೆ. ಹಾಗೆಯೇ ಪೂರಕ ಕ್ರಮಗಳಲ್ಲಿ ಭಿತ್ತಿಚಿತ್ರಗಳನ್ನು ಮುದ್ರಿಸುವುದು, ಆಲಂಕಾರಿಕ ವಸ್ತುಗಳಲ್ಲಿ ಪ್ರಾಚೀನ ಭಿತ್ತಿಚಿತ್ರಗಳನ್ನು ರೂಪಿಸುವಂತಹ ವಿವಿಧ ರೀತಿಯಲ್ಲಿ ಅನುಸರಿಸುವ ಕುರಿತು ಹೇಳಲಾಗಿದೆ. ಒಂಬತ್ತನೆಯ ಅಧ್ಯಾಯದಲ್ಲಿ ಎಂಟೂ ಅಧ್ಯಾಯಗಳ ಒಟ್ಟು ಫಲಿತಗಳನ್ನು ಸಮೀಕ್ಷಿಸಲಾಗಿದೆ.

ಇಂದಿಗೂ ಉಳಿದು ಬಂದಿರುವ ಮತ್ತು ಹಾಳಾಗುತ್ತಿರುವ ಭಿತ್ತಿಚಿತ್ರಗಳನ್ನು ರಕ್ಷಿಸಿಕೊಳ್ಳಬೇಕಾದ ಹೊಣೆ ಈಗ ತುಂಬಾ ಮಹತ್ವದ್ದಾಗಿದೆ. ಏಕೆಂದರೆ ಒಂದೊಂದು ಚಿತ್ರವು ವ್ಯಕ್ತಿ, ಸಂಸ್ಥೆ, ಸಮಾಜದ ಭೂತ, ವರ್ತಮಾನ, ಹಾಗೂ ಭವಿಷತ್ತಿನ ಸಾಂಸ್ಕೃತಿಕ ಬುತ್ತಿಯಾಗಿವೆ. ಅವು ಕೆಡದಂತೆ ಅಪಹೃತವಾಗದಂತೆ ನೈಸರ್ಗಿಕತೆಯಿಂದ ಹಾಗೂ ಆಕಸ್ಮಿಕಗಳಿಂದ ಹಾಳಾಗದಂತೆ ಧೀರ್ಘಕಾಲ ಬಾಳುವಂತೆ ರಕ್ಷಿಸಿಕೊಂಡು ಬರಬೇಕಾದ ಹೊಣೆ ಸರಕಾರ, ಸಂಘ, ಸಂಸ್ಥೆ. ವಿಶ್ವವಿದ್ಯಾಲಯ, ಪ್ರಾಚ್ಯವಸ್ತು ಇಲಾಖೆ. ಮುಂತಾದವರೆಲ್ಲರ ಹೊಣೆಯಾಗಿದೆ.

ಇಲ್ಲಿ ಪ್ರಮುಖವಾಗಿ ಕೆಲವು ಸಂಗತಿಗಳು ಮಾತ್ರ ನಿರೂಪಿತಗೊಂಡಿರುತ್ತವೆ. ಭಿತ್ತಿಚಿತ್ರಕಲೆಯನ್ನು ಬೇರೆ ಬೇರೆ ದೃಷ್ಟಿಕೋನಗಳಿಂದ ಅಧ್ಯಯನ ಮಾಡಲು ಇನ್ನೂ ಸಾಕಷ್ಟು ಅವಕಾಶಗಳಿವೆ ಎಂಬ ಮಾತನ್ನು ವಿನಯದಿಂದ ಹೇಳಬಯಸುತ್ತೇನೆ.

ಅನುಬಂಧ - ೧

## ಸಂಕ್ಷೇಪಗಳು

| | | |
|---|---|---|
| ಕ. ವಿ. ವಿ. ಧಾ | – | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ |
| ಕ. ವಿ. ಹಂ. | – | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ಕ. ಸಾ. ಪ. | – | ಕನ್ನಡ ಸಾಹಿತ್ಯ ಪರಿಷತ್ತು |
| ಕ್ರಿ. ಪೂ. | – | ಕ್ರಿಸ್ತ ಪೂರ್ವ |
| ಪು. | – | ಪುಟ |
| ಮೈ. ವಿ. ವಿ. | – | ಮೈಸೂರು ವಿಶ್ವವಿದ್ಯಾಲಯ |
| ಗು. ವಿ. ವಿ. | – | ಗುಲಬರ್ಗಾ ವಿಶ್ವವಿದ್ಯಾಲಯ |
| ಕ. ಲ. ಅ. | – | ಕರ್ನಾಟಕ ಲಲಿತಕಲಾ ಅಕಾಡೆಮಿ |
| ಚಿ. ಪ. ಬೆಂ. | – | ಚಿತ್ರಕಲಾ ಪರಿಷತ್, ಬೆಂಗಳೂರು |
| ವಿ. ಧ. ಪು. | – | ವಿಷ್ಣುಧರ್ಮೋತ್ತರ ಪುರಾಣ |
| ಕಾ. ಶಿ. ಶಾ. | – | ಕಾಶ್ಯಪ ಶಿಲ್ಪಶಾಸ್ತ್ರ |
| ಶಿ. ರ. | – | ಶಿಲ್ಪ ರತ್ನ |
| ಅ. ಪ. ಪೃ. | – | ಅಪರಾಜಿತ ಪೃಚ್ಛ |
| ಸ. ಸೂ. ಧಾ. | – | ಸಮರಾಂಗಣ ಸೂತ್ರಧಾರ |

**II.**

| | | |
|---|---|---|
| J. I. S. O. A | – | Journal of the Indian Society of Oriental |
| A. S. I. | – | Archeological Survey of India |
| C. K. P. | – | Chitrakala parishat |
| M. A. R. | – | Mysore Archeological Report |
| Q. J. M. S. | – | Quarterly Journal of Mithic Society |
| E. C. | – | Epigraphia Carnatica |
| S. I. I. | – | South Indian Inscriptions |
| J. I. S. I. | – | Jainism in South India and Some Jaina Epigraphs |
| B. K. I. | – | Bombay Karnataka Inscriptions |
| Ch. | – | Chamarajanagara |
| Cl. | – | Challakera |
| Kp. | – | Koppa |
| Mj . | – | Manjarabad |
| Ng. | – | Nagamangala |
| Nl. | – | Nelamangala |
| P. | – | Page |
| Sb. | – | Sorab |

## ಅನುಬಂಧ - ೨

# ಉತ್ತರಕರ್ನಾಟಕದ ಶಿಷ್ಟಪದ ಭಿತ್ತಿಚಿತ್ರಕಲೆಯ ನೆಲೆಗಳು

| ಅ. ನಂ. | ನೆಲೆ | ಊರು | ತಾಲೂಕು | ಜಿಲ್ಲೆ |
|---|---|---|---|---|
| ೧. | ಉತ್ತರಕೋಟೆಯ ಶಿಲಾಶ್ರಯ | ಬಾದಾಮಿ | ಬಾದಾಮಿ | ಬಾಗಲಕೋಟೆ |
| ೨. | ಮಾಲಗಿತ್ತಿ ಶಿವಾಲಯದ ಕೆಳಗಿನ ಶಿಲಾಶ್ರಯ | ಬಾದಾಮಿ | ಬಾದಾಮಿ | ಬಾಗಲಕೋಟೆ |
| ೩. | ಕುಟಕನಕೇರಿ ಶಿಲಾಶ್ರಯ | ಕುಟಕನಕೇರಿ | ಬಾದಾಮಿ | ಬಾಗಲಕೋಟೆ |
| ೪. | ಬೈಲಮರ್ಚೇಡದ ಶಿಲಾಶ್ರಯ | ಬೈಲಮರ್ಚೇಡ | ಮಾನ್ವಿ | ರಾಯಚೂರು |
| ೫. | ಬಲಚಕ್ರದ ಶಿಲಾಶ್ರಯ | ಬಲಚಕ್ರ | ಯಾದಗಿರಿ | ಗುಲಬರ್ಗಾ |
| ೬. | ಮಾನ್ವಿಯ ಶಿಲಾಶ್ರಯ | ಮಾನ್ವಿ | ಮಾನ್ವಿ | ರಾಯಚೂರು |
| ೭. | ರಾವಣಫಡಿ ಗುಹಾಲಯ | ಐಹೊಳೆ | ಬಾದಾಮಿ | ಬಾಗಲಕೋಟ |
| ೮. | ವೈಷ್ಣವ ಗುಹಾಲಯ | ಬಾದಾಮಿ | ಬಾದಾಮಿ | ಬಾಗಲಕೋಟ |
| ೯. | ವಿರೂಪಾಕ್ಷೇಶ್ವರ ದೇವಾಲಯ | ಹಂಪಿ | ಹೊಸಪೇಟೆ | ಬಳ್ಳಾರಿ |
| ೧೦. | ವಿಠ್ಠಲ ದೇವಾಲಯ | ಹಂಪಿ | ಹೊಸಪೇಟೆ | ಬಳ್ಳಾರಿ |
| ೧೧. | ಕನಕಾಚಲಪತಿ ದೇವಾಲಯ | ಕನಕಗಿರಿ | ಗಂಗಾವತಿ | ಕೊಪ್ಪಳ |
| ೧೨. | ವೆಂಕಟೇಶ್ವರ ದೇವಾಲಯ | ನರಗುಂದ | ನರಗುಂದ | ಗದಗ |
| ೧೩. | ಯಲ್ಲಮ್ಮ ದೇವಾಲಯ | ಉಪ್ಪಿನ ಬೆಟಗೇರಿ | ಧಾರವಾಡ | ಧಾರವಾಡ |
| ೧೪. | ಶ್ರೀರಾಮ ದೇವಾಲಯ | ಬಿ. ಕೆ. ಹಳ್ಳಿ | ಹಳಿಯಾಳ | ಉತ್ತರಕನ್ನಡ |
| ೧೫. | ರಂಗೀನ್ ಮಹಲ್ | ಬೀದರ | ಬೀದರ | ಬೀದರ |
| ೧೬. | ಅಸರ್ ಮಹಲ್ | ವಿಜಾಪುರ | ವಿಜಾಪುರ | ವಿಜಾಪುರ |
| ೧೭. | ಬೇಸಿಗೆ ಅರಮನೆ | ಕುಮಟಗಿ | ವಿಜಾಪುರ | ವಿಜಾಪುರ |
| ೧೮. | ಬಾಬಾಸಾಹೇಬನ ಅರಮನೆ | ನರಗುಂದ | ನರಗುಂದ | ಗದಗ |
| ೧೯. | ನಿಪ್ಪಾಣಿಯ ರಾಜವಾಡೆ | ನಿಪ್ಪಾಣಿ | ನಿಪ್ಪಾಣಿ | ಬೆಳಗಾಂವ |
| ೨೦. | ನಿಪ್ಪಾಣಿಕರ್ ವಾಡೆ | ಅಥಣಿ | ಅಥಣಿ | ಬೆಳಗಾಂವ |
| ೨೧. | ನಾಯಕರ ಅರಮನೆ | ಸುರಪುರ | ಸುರಪುರ | ಗುಲಬರ್ಗಾ |
| ೨೨. | ರಾಮದುರ್ಗದ ವಾಡೆ | ರಾಮದುರ್ಗ | ರಾಮದುರ್ಗ | ಬೆಳಗಾಂವ |
| ೨೩. | ನವಾಬರ ವಾಡೆ | ಸವಣೂರ | ಸವಣೂರು | ಹಾವೇರಿ |
| ೨೪. | ತಾಜುದ್ದೀನ ಫಿರೋಜ ಸಮಾಧಿ | ಗುಲಬರ್ಗಾ | ಗುಲಬರ್ಗಾ | ಗುಲಬರ್ಗಾ |
| ೨೫. | ಬಂದೇನವಾಜ್ ದರ್ಗಾ | ಗುಲಬರ್ಗಾ | ಗುಲಬರ್ಗಾ | ಗುಲಬರ್ಗಾ |
| ೨೬. | ಶಹಾಕಮಾಲ್ ದರ್ಗಾ | ಗುಲಬರ್ಗಾ | ಗುಲಬರ್ಗಾ | ಗುಲಬರ್ಗಾ |
| ೨೭. | ಬಹಮನಿ ಸಮಾಧಿಗಳು | ಅಸ್ತೂರು | ಬೀದರ | ಬೀದರ |
| ೨೮. | ಗಚ್ಚಿನಮಠ | ಅಥಣಿ | ಅಥಣಿ | ಬೆಳಗಾಂವ |
| ೨೯. | ಹುಚ್ಚಪ್ಪಯ್ಯನ ಮಠ | ಆನೇಗುಂದಿ | ಗಂಗಾವತಿ | ಕೊಪ್ಪಳ |
| ೩೦. | ಪಂಚಗೃಹ ಹಿರೇಮಠ | ಅಮ್ಮಿನಭಾವಿ | ಧಾರವಾಡ | ಧಾರವಾಡ |
| ೩೧. | ಮಹಾಲಿಂಗೇಶ್ವರ ಮಠ | ಮಹಾಲಿಂಗಪುರ | ಮುಧೋಳ | ಬಾಗಲಕೋಟ |
| ೩೨. | ಅಣ್ಣಯ್ಯನ ಮಠ | ರಂಗಮ್‌ಪೇಟ | ಸುರಪುರ | ಗುಲಬರ್ಗಾ |
| ೩೩. | ವಿರಕ್ತ ಮಠ | ರಂಗಮ್‌ಪೇಟ | ಸುರಪುರ | ಗುಲಬರ್ಗಾ |
| ೩೪. | ಸೇಂಟ್ ಮೇರಿ ಚರ್ಚ | ಬೆಳಗಾಂವ | ಬೆಳಗಾಂವ | ಬೆಳಗಾಂವ |
| ೩೫. | ಸೇಂಟ್ ಕ್ಸೇವಿಯರ್ ಚರ್ಚ | ಬೆಳಗಾಂವ | ಬೆಳಗಾಂವ | ಬೆಳಗಾಂವ |
| ೩೬. | ಹೊಸಮನಿಗೌಡರ ಮನೆ | ಗುಳೇದಗುಡ್ಡ | ಬಾದಾಮಿ | ಬಾಗಲಕೋಟ |
| ೩೭. | ಗುಂಡಪ್ಪ ಹಸಬಿಯವರ ಮನೆ | ನರಗುಂದ | ನರಗುಂದ | ಗದಗ |
| ೩೮. | ಖಾಜಿನಗೌಡರ ಮನೆ | ರಾಯಚೂರು | ರಾಯಚೂರು | ರಾಯಚೂರು |
| ೩೯. | ಮುಮದಾಪುರರ ಮನೆ | ಸಂಕೇಶ್ವರ | ಸಂಕೇಶ್ವರ | ಬೆಳಗಾಂವ |

## ಉತ್ತರಕರ್ನಾಟಕದ ಸಮ್ಮಿಶ್ರ ಭಿತ್ತಿಚಿತ್ರಕಲೆಯ ನೆಲೆಗಳು

| ಅ. ನಂ. | ನೆಲೆ | ಊರು | ತಾಲೂಕು | ಜಿಲ್ಲೆ |
|---|---|---|---|---|
| ೧. | ಶ್ರೀರಾಮ ದೇವಾಲಯ | ಹೊನ್ನಾವರ | ಹೊನ್ನಾವರ | ಉತ್ತರಕನ್ನಡ |
| ೨. | ವೆಂಕಟರಮಣ ದೇವಾಲಯ | ಹೊನ್ನಾವರ | ಹೊನ್ನಾವರ | ಉತ್ತರಕನ್ನಡ |
| ೩. | ಗೋಪಾಲಕೃಷ್ಣ ದೇವಾಲಯ | ಹೊನ್ನಾವರ | ಹೊನ್ನಾವರ | ಉತ್ತರಕನ್ನಡ |
| ೪. | ಗೋಪಿನಾಥ ವೆಂಕಟರಮಣ ದೇವಾಲಯ | ಹಳದೀಪುರ | ಹೊನ್ನಾವರ | ಉತ್ತರಕನ್ನಡ |
| ೫. | ಬಾಳಗೋಡ ಸೀತಾರಾಮಚಂದ್ರ ದೇವಾಲಯ | ಬಿಳಗಿ | ಸಿದ್ದಾಪುರ | ಉತ್ತರಕನ್ನಡ |
| ೬. | ಬೇಡ್ಕಣಿ ಸೀತಾರಾಮಚಂದ್ರ ದೇವಾಲಯ | ಬಿಳಗಿ | ಸಿದ್ದಾಪುರ | ಉತ್ತರಕನ್ನಡ |
| ೭. | ವೆಂಕಟರಮಣ ದೇವಾಲಯ | ಅಘನಾಶಿನಿ | ಕುಮಟಾ | ಉತ್ತರಕನ್ನಡ |
| ೮. | ನಾರಾಯಣ ದೇವಾಲಯ | ಅಗ್ರಹಾರ | ಕುಮಟಾ | ಉತ್ತರಕನ್ನಡ |
| ೯. | ಲಕ್ಷ್ಮೀನಾರಾಯಣ ದೇವಾಲಯ | ಅವರ್ಸಾ | ಅಂಕೋಲಾ | ಉತ್ತರಕನ್ನಡ |
| ೧೦. | ಗೋಪಾಲಕೃಷ್ಣ ದೇವಾಲಯ | ಸಿರ್ಸಿ | ಸಿರ್ಸಿ | ಉತ್ತರಕನ್ನಡ |
| ೧೧. | ಲಕ್ಷ್ಮೀವೆಂಕಟೇಶ ದೇವಾಲಯ | ಗೇರುಸೊಪ್ಪ | ಸಿದ್ದಾಪುರ | ಉತ್ತರಕನ್ನಡ |
| ೧೨. | ಲಕ್ಷ್ಮೀವೆಂಕಟರಮಣ ದೇವಾಲಯ | ಹೊಸಾಡ | ಸಿದ್ದಾಪುರ | ಉತ್ತರಕನ್ನಡ |
| ೧೩. | ಶಂಭುಲಿಂಗೇಶ್ವರ ದೇವಾಲಯ | ಗುಣವಂತೆ | ಹೊನ್ನಾವರ | ಉತ್ತರಕನ್ನಡ |
| ೧೪. | ಈಶ್ವರ ದೇವಾಲಯ | ಬಾಳೆಗದ್ದೆ | ಹೊನ್ನಾವರ | ಉತ್ತರಕನ್ನಡ |
| ೧೫. | ಮಾರಿಕಾಂಬಾ ದೇವಾಲಯ | ಸಿರ್ಸಿ | ಸಿರ್ಸಿ | ಉತ್ತರಕನ್ನಡ |
| ೧೬. | ಶಾರದಾಂಬಾ ದೇವಾಲಯ | ಹೊನ್ನಾವರ | ಹೊನ್ನಾವರ | ಉತ್ತರಕನ್ನಡ |
| ೧೭. | ಅಮ್ಮನವರ ದೇವಾಲಯ | ಮಾವಿನಕುರ್ವೆ | ಹೊನ್ನಾವರ | ಉತ್ತರಕನ್ನಡ |
| ೧೮. | ಮಾರಿಕಾಂಬಾ ದೇವಾಲಯ | ಬಿಳಗಿ | ಸಿದ್ದಾಪುರ | ಉತ್ತರಕನ್ನಡ |
| ೧೯. | ಭುವನೇಶ್ವರಿ ದೇವಾಲಯ | ಭುವನಗಿರಿ | ಸಿದ್ದಾಪುರ | ಉತ್ತರಕನ್ನಡ |
| ೨೦. | ಶಾಂತಿಕಾಪರಮೇಶ್ವರಿ ದೇವಾಲಯ | ಸಾಂತಗಲ್ | ಕುಮಟಾ | ಉತ್ತರಕನ್ನಡ |
| ೨೧. | ಮಹಾಳಸಾ ನಾರಾಯಣಿ ದೇವಾಲಯ | ಕುಮಟಾ | ಕುಮಟಾ | ಉತ್ತರಕನ್ನಡ |
| ೨೨. | ಆರ್ಯದುರ್ಗಾ ದೇವಾಲಯ | ಅಂಕೋಲಾ | ಅಂಕೋಲಾ | ಉತ್ತರಕನ್ನಡ |
| ೨೩. | ದೇವಿ ದೇವಾಲಯ | ಬಳಲೆ | ಅಂಕೋಲಾ | ಉತ್ತರಕನ್ನಡ |
| ೨೪. | ಬಿಳಿಗಿರಿಯಮ್ಮ ದೇವಾಲಯ | ಶೆಟಗೇರಿ | ಅಂಕೋಲಾ | ಉತ್ತರಕನ್ನಡ |
| ೨೫. | ದುರ್ಗಾ ದೇವಾಲಯ | ಸದಾಶಿವಗಡ | ಕಾರವಾರ | ಉತ್ತರಕನ್ನಡ |
| ೨೬. | ಮಹಾಮಾಯಾ ದೇವಾಲಯ | ಚಿತಾಕುಲ | ಕಾರವಾರ | ಉತ್ತರಕನ್ನಡ |
| ೨೭. | ಮಾರಿಕಾಂಬಾ ದೇವಾಲಯ | ಮಾಜಾಳಿ | ಕಾರವಾರ | ಉತ್ತರಕನ್ನಡ |
| ೨೮. | ಅರ್ಧಗಣಪತಿ ದೇವಾಲಯ | ಬನವಾಸಿ | ಸಿರ್ಸಿ | ಉತ್ತರಕನ್ನಡ |
| ೨೯. | ಗಣಪತಿ ದೇವಾಲಯ | ಹೊನ್ನಾವರ | ಹೊನ್ನಾವರ | ಉತ್ತರಕನ್ನಡ |
| ೩೦. | ಗಣಪತಿ ದೇವಾಲಯ | ಚಂದಾವರ | ಹೊನ್ನಾವರ | ಉತ್ತರಕನ್ನಡ |
| ೩೧. | ಅಗಸೆವಿನಾಯಕ ದೇವಾಲಯ | ಅಘನಾಶಿನಿ | ಕುಮಟಾ | ಉತ್ತರಕನ್ನಡ |
| ೩೨. | ಮಾರುತಿ ದೇವಾಲಯ | ಹೊನ್ನಾವರ | ಹೊನ್ನಾವರ | ಉತ್ತರಕನ್ನಡ |
| ೩೩. | ಮಾರುತಿ ದೇವಾಲಯ | ಚಂದಾವರ | ಹೊನ್ನಾವರ | ಉತ್ತರಕನ್ನಡ |
| ೩೪. | ಹನುಮಾನ್ ದೇವಾಲಯ | ಶಿರಾಲಿ | ಭಟ್ಕಳ | ಉತ್ತರಕನ್ನಡ |
| ೩೫. | ಹನುಮಾನ್ ದೇವಾಲಯ | ಅಮದಳ್ಳಿ | ಕಾರವಾರ | ಉತ್ತರಕನ್ನಡ |
| ೩೬. | ಗಡಿವಾಳಬಂಟಸಣ್ಣಹೊಸಬ ದೇವಾಲಯ | ಚೌಡಗೇರಿ | ಕುಮಟಾ | ಉತ್ತರಕನ್ನಡ |
| ೩೭. | ಗಡಿವಾಳಬಂಟದೊಡ್ಡಹೊಸಬ ದೇವಾಲಯ | ಚೌಡಗೇರಿ | ಕುಮಟಾ | ಉತ್ತರಕನ್ನಡ |
| ೩೮. | ಘಟಬೀರ ದೇವಾಲಯ | ಬರ್ಗಿ | ಅಂಕೋಲಾ | ಉತ್ತರಕನ್ನಡ |
| ೩೯. | ಏರೆಹೊಸಬ ದೇವಾಲಯ | ಬಳಲೆ | ಅಂಕೋಲಾ | ಉತ್ತರಕನ್ನಡ |
| ೪೦. | ತಿಮ್ಮಣ್ಣ ಪೈಯವರ ಮನೆ | ಬಿಳಗಿ | ಸಿದ್ದಾಪುರ | ಉತ್ತರಕನ್ನಡ |
| ೪೧. | ವಿ. ಎಸ್. ಕಾಮತ ಅವರ ಮನೆ | ಗೋಕರ್ಣ | ಕುಮಟಾ | ಉತ್ತರಕನ್ನಡ |
| ೪೨. | ಎನ್. ಎಮ್. ಜೋಶಿ ಅವರ ಮನೆ | ಗೋಕರ್ಣ | ಕುಮಟಾ | ಉತ್ತರಕನ್ನಡ |
| ೪೩. | ನಾಗೇಶ್ ಶೆಣೈ ಅವರ ಮನೆ | ಅವರ್ಸಾ | ಅಂಕೋಲಾ | ಉತ್ತರಕನ್ನಡ |

## ಉತ್ತರ ಕರ್ನಾಟಕದ ಶಿಷ್ಟಪದ ಮತ್ತು ಸಮ್ಮಿಶ್ರ ಭಿತ್ತಿಚಿತ್ರಕಲೆಯ ನೆಲೆಗಳು



## ಅನುಬಂಧ - ೩

# ಗ್ರಂಥಋಣ

## ೧. ಗ್ರಂಥಗಳು

### ಅ. ಕನ್ನಡ ಗ್ರಂಥಗಳು


೧. ಅಮರಸಿಂಹನ ಅಮರಕೋಶ : (ಸಂ.) ಲೂಯಿಸ್ ರೈಸ್ – ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು
೨. ಆಲೇಖ್ಯ : ಡಾ. ಅ. ಲ. ನರಸಿಂಹನ್ – ಸಂಯೋಜಿತ, ಬೆಂಗಳೂರು, ೧೯೯೯
೩. ಆಚರಣೆಯಲ್ಲಿ ಜನಪದ ವಾಸ್ತುಶಿಲ್ಪ ಕಲೆಗಳು : ಡಾ. ಎಸ್. ಸಿ. ಪಾಟೀಲ – ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭
೪. ಇತಿಹಾಸ ದರ್ಶನ ಸಂಪುಟಗಳು – ಒಂದರಿಂದ ಹದಿನಾಲ್ಕರವರೆಗೆ : ಕರ್ನಾಟಕ ಇತಿಹಾಸ ಅಕಾಡೆಮಿ (ರಿ.), ಬೆಂಗಳೂರು
೫. ಉತ್ತರ ಕರ್ನಾಟಕದ ಜನಪದ ಕಲೆ ಮತ್ತು ವಿಧಿಕ್ರಿಯೆ : ಎ. ವಿ. ಪಾಟೀಲ – ಅಪ್ರಕಟಿತ ಮಹಾಪ್ರಬಂಧ, ಕ. ವಿ. ವಿ., ಧಾರವಾಡ, ೧೯೯೧೯೮೨
೬. ಋಗ್ವೇದಸಾರ : ಶಂ. ಭಾ. ಜೋಶಿ – ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೧
೭. ಐತಿಹಾಸಿಕ ಬಾದಾಮಿ ಪರಿಚಯ : ಆನಂದ ಕೆ. ಪೂಜಾರ – ಶಾಂಭವೀ ಪ್ರಕಾಶನ, ಬಾದಾಮಿ, ೨೦೦೦
೮. ಕಲಾಕೋಶ : (ಸಂ.) ಪಿ. ಆರ್. ತಿಪ್ಪೇಸ್ವಾಮಿ – ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೪
೯. ಕನ್ನಡ ಹಸ್ತಪ್ರತಿಗಳು - ಒಂದು ಅಧ್ಯಯನ : ಡಾ. ಬಿ. ಕೆ. ಹಿರೇಮಠ – ವೀರಶೈವ ಅಧ್ಯಯನ ಸಂಸ್ಥೆ, ಕಸಬಾಜಂಬಗಿ, ೧೯೯೨
೧೦. ಕರ್ನಾಟಕ ವಾಸ್ತುಶಿಲ್ಪ ಚಿತ್ರಕಲೆ : ಸಿಂದಗಿ ರಾಜಶೇಖರ – ಸುಜಾತಾ ಪಬ್ಲಿಕೇಶನ್ಸ್, ಧಾರವಾಡ, ೧೯೮೮
೧೧. ಕರ್ನಾಟಕದ ಕರಕುಶಲ ಕಲೆಗಳು : ಬೆನಕನಹಳ್ಳಿ ಜಿ. ನಾಯಕ – ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೬
೧೨. ಕರ್ನಾಟಕದ ಜನಪದ ಕಲೆಗಳು : ಗೊ. ರು. ಚೆನ್ನಬಸಪ್ಪ – ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭
೧೩. ಕರ್ನಾಟಕದ ಕರಕುಶಲ ಕಲೆಗಳು : ಬಿ. ಎಂ. ಚಂದ್ರಶೇಖರಯ್ಯ – ಐ. ಬಿ. ಎಚ್. ಪ್ರಕಾಶನ, ಬೆಂಗಳೂರು, ೧೯೮೩
೧೪. ಕರ್ನಾಟಕ ಚರಿತ್ರೆ ಮಾಲೆ ಸಂಪುಟಗಳು : ಕರ್ನಾಟಕ ವಿಶ್ವವಿದ್ಯಾಲಯ, ಹಂಪಿ, ೧೯೯೭
ಸಂಪುಟ ೧ : (ಸಂ.) ಪ್ರೊ. ಅ. ಸುಂದರ
ಸಂಪುಟ ೨ : (ಸಂ.) ಪ್ರೊ. ಬಿ. ಸುರೇಂದ್ರರಾವ್
ಸಂಪುಟ ೩ : (ಸಂ.) ಪ್ರೊ. ಕೆ. ಶಿವಣ್ಣ
ಸಂಪುಟ ೪ : (ಸಂ.) ಪ್ರೊ. ಬಿ. ಷೇಕ್ಅಲಿ
ಸಂಪುಟ ೫ : (ಸಂ.) ಪ್ರೊ. ಬಿ. ಷೇಕ್ಅಲಿ
ಸಂಪುಟ ೬ : (ಸಂ.) ಡಾ. ಸೆಬಾಸ್ಟಿಯನ್ ಜೋಸೆಫ್
ಸಂಪುಟ ೭ : (ಸಂ.) ಪ್ರೊ. ಎಸ್. ಚಂದ್ರಶೇಖರ್
೧೫. ಕರ್ನಾಟಕದ ಜನಪದ ಚಿತ್ರಕಲೆ : ಡಾ. ಎಸ್. ಸಿ. ಪಾಟೀಲ, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೯೩
೧೬. ಕಲೆಯ ನೆಲೆ : ವಿ. ಕೃ. ಗೋಕಾಕ – ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೮
೧೭. ಕರ್ನಾಟಕ ಸಂಸ್ಕೃತಿಯ ಸಂಶೋಧನೆ : ಕಪಟರಾಳ ಕೃಷ್ಣರಾವ್ – ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೦
೧೮. ಕಲೆಗಳು ೬೪ : ಮ. ಶ್ರೀಧರಮೂರ್ತಿ – ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು, ೧೯೭೪
೧೯. ಕಲಾಪ್ರಪಂಚ : ಶಿವರಾಮ ಕಾರಂತ – ಪ್ರಸಾರಾಂಗ, ಕ. ವಿ. ವಿ., ಧಾರವಾಡ, ೧೯೭೮
೨೦. ಕರ್ನಾಟಕದಲ್ಲಿ ಚಿತ್ರಕಲೆ : ಶಿವರಾಮ ಕಾರಂತ – ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೧
೨೧. ಕರ್ನಾಟಕದ ಕಲೆಗಳು (ಭಾಗ-೧) : ಎಸ್. ಕೆ. ರಾಮಚಂದ್ರರಾವ್ – ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೧
೨೨. ಕೃಷ್ಣದೇವರಾಯನ ಅಮುಕ್ತಮಾಲ್ಯದ : (ಅನು.) ನಿರುಪಮ – ಶ್ರೀ ಪ್ರಕಾಶನ, ಬೆಂಗಳೂರು, ೧೯೭೯
೨೩. ಕರ್ನಾಟಕ ಸಂಸ್ಕೃತಿಯ ವಿಶ್ವರೂಪ : ವ್ಹಿ. ಜಿ. ಮಾರೀಹಾಳ – ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩
೨೪. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಡಾ. ಎಂ. ಚಿದಾನಂದಮೂರ್ತಿ – ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೦
೨೫. ಕಲಾನುಭವ : ವೀ. ಸೀತಾರಾಮಯ್ಯ – ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೬
೨೬. ಕರ್ನಾಟಕ ಸಂಸ್ಕೃತಿಯ ಸಮೀಕ್ಷೆ : ಡಾ. ಎಚ್. ತಿಪ್ಪೇಸ್ವಾಮಿ – ಕೃಷ್ಣಮೂರ್ತಿಪುರಂ, ಮೈಸೂರು, ೧೯೬೮

೨೭. ಕಲೆ ಮತ್ತು ರಸಸ್ವಾದನೆ : (ಸಂ.) ಎಂ. ಎಚ್. ಕೃಷ್ಣಯ್ಯ – ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು, ೧೯೮೯
೨೮. ಕರ್ನಾಟಕದ ಭಿತ್ತಿ ಚಿತ್ರಗಳು : ಬಿ. ವಿ. ಕೆ. ಶಾಸ್ತ್ರಿ – ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು, ೧೯೮೩
೨೯. ಕರ್ನಾಟಕ ಇತಿಹಾಸ : ಆರ್. ಎಸ್. ಪಂಚಮುಖಿ – ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೧೯೬೭
೩೦. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಡಾ. ಎಂ. ಚಿದಾನಂದಮೂರ್ತಿ – ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೦
೩೧. ಕರ್ನಾಟಕದಲ್ಲಿ ನವಶಿಲಾಯುಗ : ಡಾ. ಬಾ. ರಾ. ಗೋಪಾಲ – ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೩೨. ಕನ್ನಡ ಹಸ್ತಪ್ರತಿಗಳ ಮೈಕ್ರೋಫಿಲಂ ಸೂಚಿ : (ಸಂ.) ಬಿ. ಎಸ್. ಸಣ್ಣಯ್ಯ – ಮೈಸೂರು ವಿಶ್ವವಿದ್ಯಾಲಯ, ಮೈಸೂರು
೩೩. ಕೊಪ್ಪಳ - ಸಾಂಸ್ಕೃತಿಕ ಪರಂಪರೆ : ಬಿ. ಸಿ. ಪಾಟೀಲ – ಹರಿಹರ ಪ್ರಕಾಶನ, ಜವಾಹರ ರಸ್ತೆ, ಕೊಪ್ಪಳ, ೧೯೯೮
೩೪. ಗಂಜೀಫಾ ಕಲೆ : ಸಂತೋಷಕುಮಾರ ಗುಲ್ವಾಡಿ – ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೪
೩೫. ಚಾಲುಕ್ಯರ ಇತಿಹಾಸ : ಎಂ. ಎಸ್. ನಂಜುಂಡ ಸ್ವಾಮಿ – ಸಮಾಜ ಪುಸ್ತಕಾಲಯ, ಧಾರವಾಡ, ೧೯೭೧
೩೬. ಚಿತ್ರಕಲೆ : ಅ. ನ. ಕೃಷ್ಣರಾಯ – ಎಚ್. ವೆಂಕಟರಾಮಯ್ಯ ಆ್ಯಂಡ್ ಸನ್ಸ್, ವಿದ್ಯಾನಿಧಿ ಬುಕ್ ಡಿಪೋ, ಮೈಸೂರು, ೧೯೭೦
೩೭. ಚಿತ್ರಕಲಾ ಪರಿಚಯ : ವ್ಹಿ. ಟಿ. ಕಾಳಿ – ವಿಜಯ ಬುಕ್ ಡಿಪೋ, ಸ್ಟೇಶನ್ ರೋಡ್, ಗದಗ, ೧೯೮೦
೩೮. ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು : (ಸಂ.) ಡಾ. ಎಸ್. ಸಿ. ಪಾಟೀಲ – ಸ್ಕೂಲ್ ಆಫ್ ಆರ್ಟ್, ಧಾರವಾಡ, ೧೯೯೫
೩೯. ಚಿತ್ರಾಕ್ಷಿ : (ಸಂ.) ಡಾ. ಎಸ್. ಸಿ. ಪಾಟೀಲ – ಸ್ಕೂಲ್ ಆಫ್ ಆರ್ಟ್, ಧಾರವಾಡ, ೧೯೯೬
೪೦. ಚಿತ್ರಕಲೆ : ಬಿ. ಪಿ. ಬಾಯರಿ – ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೦
೪೧. ಚಿತ್ರಕಲಾ ಕೈದೀಪ : ಎಸ್. ಎಂ. ಶಿರಹಟ್ಟಿ – ಸಿ ಹಾಮಿ ಪಬ್ಲಿಕೇಶನ್, ಗದಗ, ೧೯೮೨
೪೨. ಚಿತ್ರಕಲಾ ದರ್ಪಣ : ವಿ. ಟಿ. ಕಾಳೆ – ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೪
೪೩. ಜನಪದ ಆರಾಧನೆ ಮತ್ತು ಕಲೆ : ಡಾ. ಸುಶೀಲಾ ಪಿ. ಉಪಾಧ್ಯಾಯ – ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ, ಉಡುಪಿ, ೧೯೮೯
೪೪. ಜನಪದ ಕಲೆ – ಚಿತ್ರಕಲೆ : ಡಾ. ಎಸ್. ಸಿ. ಪಾಟೀಲ – ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೫
೪೫. ತುಳುವರ ಆಚರಣೆಯಲ್ಲಿ ಕಲಾವಂತಿಕೆ : (ಸಂ.) ಕ. ವೆಂ. ರಾಜಗೋಪಾಲ – ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು, ೧೯೮೯
೪೬. ದುರಗ ಮುರಗಿಯರ ಸಂಸ್ಕೃತಿ : ಗೀತಾ ನಾಗಭೂಷಣ – ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩
೪೭. ದರ್ಶನ : ದೇವಿಪ್ರಸಾದ್ ಚಟ್ಟೋಪಾಧ್ಯಾಯ – ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೫
೪೮. ಪ್ರವಾಸಿ ಕಂಡ ಇಂಡಿಯಾ : (ಸಂ.) ಎಚ್. ಎಲ್. ನಾಗೇಗೌಡ – ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೬೬
೪೯. ಪುರಾತನ ಜಗತ್ತಿನ ಇತಿಹಾಸ : ಎಫ್. ಕರೋವ್ಕಿನ್ – ನವಕರ್ನಾಟಕ ಪಬ್ಲಿಕೇಶನ್, ಬೆಂಗಳೂರು ೧೯೮೭
೫೦. ಭರತೇಶ ವೈಭವ ಸಂಗ್ರಹ : (ಸಂ.) ಟಿ. ಎಸ್. ಶಾಮರಾವ್ – ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೫೫
೫೧. ಬಾದಾಮಿ - ಒಂದು ಸಾಂಸ್ಕೃತಿಕ ಅಧ್ಯಯನ : ಡಾ. ಶೀಲಾಕಾಂತ ಪತ್ತಾರ – ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦
೫೨. ಬಾಗಿಲು : (ಸಂ.) ಮಲ್ಲಿಕಾರ್ಜುನ ಹಿರೇಮಠ – ಅಖಿಲಭಾರತ ೬೮ ನೇ ಕನ್ನಡ ಸಾಹಿತ್ಯ ಸಮ್ಮೇಳನ, ಬಾಗಲಕೋಟೆ, ೨೦೦೦
೫೩. ಬಾನಯ್ಯ ಗರುಡಾದ್ರಿ : ಬಸವರಾಜ ಉಪ್ಪಿನ – ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೫
೫೪. ಭಾರತೀಯ ಚಿತ್ರಕಲೆ : ಎಸ್. ಎಂ. ಶಿರಹಟ್ಟಿ – ವಿಜಯ ಕಲಾ ಮಂದಿರ, ಗದಗ, ೧೯೭೨
೫೫. ಭಾರತೀಯ ಚಿತ್ರಕಲೆ : ಡಾ. ಶಿವರಾಮ ಕಾರಂತ – ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೮
೫೬. ಭಾರತೀಯ ಸಂಸ್ಕೃತಿ : ಎಸ್. ಶ್ರೀಕಂಠಶಾಸ್ತ್ರಿ – ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೫
೫೭. ಬೆಳ್ವೊಲ : (ಸಂ.) ಡಾ. ಎಂ. ಎಸ್. ಸುಂಕಾಪುರ, ಡಾ. ಎಂ. ಎಂ. ಕಲಬುರ್ಗಿ – ಡಾ. ಆರ್. ಸಿ. ಹಿರೇಮಠ ಅಭಿನಂದನ ಸಮಿತಿ, ಧಾರವಾಡ, ೧೯೮೧
೫೮. ಬೆಳೆದು ಬಂದ ಭಾರತದ ಚಿತ್ರಕಲೆ : ಪಿ. ಆರ್. ತಿಪ್ಪೇಸ್ವಾಮಿ – ಕಲಾಕ್ಷೇತ್ರ, ಮೈಸೂರು, ೧೯೬೨
೫೯. ಬೆಳ್ಳಿಂಗಳಪ್ಪನ ಪೂಜೆ : ಅಗ್ರಹಾರ ಕೃಷ್ಣಮೂತಿ – ಡಿ. ವಿ. ಕೆ. ಮೂರ್ತಿ ಪ್ರಕಾಶನ, ಮೈಸೂರು, ೧೯೭೬
೬೦. ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು : ಡಿ. ಸಿ. ರಾಜಪ್ಪ – ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೫
೬೧. ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ : ಡಾ. ಎಸ್. ಸಿ. ಪಾಟೀಲ – ಕ. ವಿ. ವಿ. ಸ್ನಾತಕೋತ್ತರ ಶಿಕ್ಷಣ ವಿಭಾಗಕ್ಕೆ ಸಲ್ಲಿಸಿದ ಕಿರು-ಸಂಶೋಧನ ಮಹಾಪ್ರಬಂಧ, ಧಾರವಾಡ, ೧೯೯೩
೬೨. ಯುರೋಪ ದರ್ಶನ : ಹೇಮಲತಾ ಮಹಿಷಿ – ಮನೋಹರ ಗ್ರಂಥಮಾಲೆ, ಧಾರವಾಡ, ೧೯೯೯
೬೩. ವಂದನೆ : (ಸಂ.) ಡಾ. ಶಶಿಕಲಾ ಮೋಳ್ಳಿ – ಡಾ. ಹೆಂಡಿ ಅಭಿನಂದನ ಸಮಿತಿ, ಕಲಬುರ್ಗಿ, ೧೯೮೮
೬೪. ವರ್ಣಸಂಚಯ : ಡಾ. ಎಸ್. ಸಿ. ಪಾಟೀಲ – ಕರ್ನಾಟಕ ಆರ್ಟ್ ಗಿಲ್ಡ್ ಅಕಾಡೆಮಿ, ಬಾದಾಮಿ, ೨೦೦೦

೬೫. ವಚನ ಸಾಹಿತ್ಯ - ಒಂದು ಸಾಂಸ್ಕೃತಿಕ ಅಧ್ಯಯನ : ಡಾ. ಪಿ. ವಿ. ನಾರಾಯಣ –ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ, ೧೯೮೩
೬೬. ವಿಜಯನಗರದ ಕಲೆ ಮತ್ತು ಸಾಹಿತ್ಯ : ಪುಲುಮತಿ ಶ್ಯಾಮರಾವ್ –ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೫೭
೬೭. ವಿಜಯನಗರ ಸಾಮ್ರಾಜ್ಯ : ಸೂರ್ಯನಾಥ ಕಾಮತ್ –ಅರ್ಪಣಾ ಪ್ರಕಾಶನ, ಬೆಂಗಳೂರು, ೧೯೭೩
೬೮. ವಿಜಯನಗರ ಸಾಮ್ರಾಜ್ಯ ಸ್ಥಾಪನೆ : ವಸುಂಧರಾ ಫಿಲಿಯೋಜಾ –ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೨
೬೯. ವಿಶ್ವ ಕನ್ನಡ (ಭಾಗ-೩) : (ಸಂ.) ಎನ್. ಎಸ್. ರಾಮಪ್ರಸಾದ –ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೬
೭೦. ಶೃಂಗಾರ ಲಹರಿ : ಎಂ. ಎಚ್. ಕೃಷ್ಣಯ್ಯ –ಸಿ. ಎಂ. ಎನ್. ಪ್ರಕಾಶನ, ಬೆಂಗಳೂರು, ೧೯೮೯
೭೧. ಶ್ರೀಮದಥಣಿ ಶಿವಯೋಗೀಶ ಮಹಿಮೆ : ಪಂಡಿತ ಚಂದ್ರಶೇಖರ ಶಾಸ್ತ್ರಿ –ರಾಜ ಪ್ರಿಂಟರ್ಸ್, ಧಾರವಾಡ, ೧೯೯೭ (ಮೂರನೇ ಮುದ್ರಣ)
೭೨. ಶಾಸನ ವ್ಯಾಸಂಗ : ಡಾ. ಎಂ. ಎಂ. ಕಲಬುರ್ಗಿ –ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೭೩. ಶಿವತತ್ತ್ವ ರತ್ನಾಕರ : (ಅನು.) ಮಲ್ಲೇಪುರಂ ಜಿ. ವೆಂಕಟೇಶ –ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮
೭೪. ಶಿಲ್ಪ ವಿದ್ಯಾರಹಸ್ಯೋಪನಿಷತ್ : ಸಿದ್ಧಲಿಂಗ ಸ್ವಾಮಿಗಳು –ಪರಿಮಳ ಪವರ್‌ಪ್ರೆಸ್, ಮೈಸೂರು, ೧೯೨೯
೭೫. ಶ್ವೇತಪುರ : (ಸಂ.) ಪದ್ಮಾಕರ ಮಡಗಾಂವಕರ –ಶ್ರೀ ಸೀತಾಮರಾಮಚಂದ್ರ ಪ್ರೌಢಶಾಲೆ, ಬಿಳಗಿ, ಸಿದ್ಧಾಪುರ ತಾಲೂಕು, ಉತ್ತರ ಕನ್ನಡ ಜಿಲ್ಲೆ, ೧೯೯೩
೭೬. ಸವಣೂರು ನವಾಬರು : ಗೋವಿಂದಮೂರ್ತಿ ದೇಸಾಯಿ –ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯
೭೭. ಸಂಶೋಧನೆ : (ಸಂ.) ಲಕ್ಷ್ಮಣ ತೆಲಗಾವಿ – ಡಾ. ಎಂ. ಚಿದಾನಂದಮೂರ್ತಿ ಅಭಿನಂದನಾ ಸಮಿತಿ, ಬೆಂಗಳೂರು, ೧೯೯೧
೭೮. ಸಂತ, ಕಲಾವಿದ, ಶುಭರಾಯರು : (ಸಂ.) ಅ. ಲ. ನರಸಿಂಹನ್ –ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೩
೭೯. ಸಂಶೋಧನೆಯ ಹಾದಿಯಲ್ಲಿ : ಶ್ರೀಶೈಲ ಆರಾಧ್ಯ –ಆರೋಹಣ ಪ್ರಕಾಶನ, ಚಿತ್ರದುರ್ಗ, ೧೯೮೩
೮೦. ಸಂಪ್ರದಾಯ ಶಿಲ್ಪಕಲೆ ಮತ್ತು ಚಿತ್ರಕಲೆ : ಎಸ್. ಕೆ. ರಾಮಚಂದ್ರರಾವ್ –ಶಿಲ್ಪಕಲಾ ಪ್ರತಿಷ್ಠಾನ, ಬೆಂಗಳೂರು, ೧೯೮೩
೮೧. ಸಾಹಿತ್ಯ ಮತ್ತು ಚಿತ್ರಕಲೆ : ತೀ. ಸೀತಾರಾಮಯ್ಯ –ರಾಘವ ಪ್ರಕಾಶನ, ಬೆಂಗಳೂರು, ೧೯೮೫
೮೨. ಸಾಹಿತ್ಯದಲ್ಲಿ ಚಿತ್ರಕಲೆ : ಎನ್. ಮರಿಶಾಮಾಚಾರ –ಸಿ. ಎಂ. ಎನ್. ಪ್ರಕಾಶನ, ಬೆಂಗಳೂರು, ೧೯೮೯
೮೩. ಸಾಹಿತ್ಯ ಮತ್ತು ಚಿತ್ರಕಲೆ : ಚಂದ್ರಕಾಂತ ಕುಸನೂರ –ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩
೮೪. ಸೋದೆ ಅರಸು ಮನೆತನ : ಡಾ. ಎಂ. ಜಿ. ವಾರಿ –ಸಮನ್ವಯ ವಿಚಾರ ವೇದಿಕೆ, ಬಾದಾಮಿ, ೧೯೯೯
೮೫. ಸೌಂದರ್ಯ ಮೀಮಾಂಸೆ : ವಿ. ಕೃ. ಗೋಕಾಕ –ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩
೮೬. ಹರತಿ ಸಿರಿ : (ಸಂ.) ಲಕ್ಷ್ಮಣ ತೆಲಗಾವಿ –ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೧೯೮೭
೮೭. ಹಂಪೆ ಒಂದು ಪರಿಚಯ : ಬಸವರಾಜ ಮಲಶೆಟ್ಟಿ –ಮಹಾಕವಿ ಹರಿಹರ ಸ್ಮಾರಕ ಸಂಶೋಧನಾ ಕೇಂದ್ರ, ಹಂಪೆ, ೧೯೮೧
೮೮. ಹಂಪೆ : ಪಾಂಡುರಂಗರಾವ್ ದೇಸಾಯಿ –ಐ. ಬಿ. ಹೆಚ್. ಪ್ರಕಾಶನ, ಬೆಂಗಳೂರು, ೧೯೮೬
೮೯. ಹಂಪಿಯ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು : ಚೆಲುವರಾಜು –ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

## ಆ. ಇಂಗ್ಲೀಷ್ ಗ್ರಂಥಗಳು

1. A Manual of Tempera Painting : Maxwell Armfield –Phaidon Press, London, 1930
2. A Notes on Adilshahi Paintings : R. C. Agarwal –Archaeological studies, Vol. III, Mysore, 1978
3. Art and Architecture in Karnataka : (Ed.) Dr. D. V. Devaraj and C. S. Patil –Directorate of Archaeology and Museams, Mysore, 1985
4. Agnipurana : (Ed.) Panchanana Tarkatirtha –Bangabasi Edition, Calcutta, 1908
5. Arts and Crafts of India and Ceylon : A. K. Coomarswamy –Oxford University press, 1913
6. Ajanta Fresco : Lady Herringham –Oxford University Press, Oxford, 1915
7. A History of Fine Art in India and Ceylon : Vincent A. Smith –Clarendon Press, 1911
8. Art and Crafts of Travancore : R. V. Poduval and J. J. Cousins –London, 1948
9. Abhilashitartaha Chintamani : (Ed.) R. Shama Sastri –Mysore Sanskrit Series, Mysore, 1926
10. Ajanta (4 Volumes) : G. Yazdani –Oxford University Press, Oxford, 1930-1958
11. Ajanta : Balasaheb Panth –Bombay, 1982
12. A Treatise on Painting : Cennino Cennini (Trans Merrifield) –London, 1844
13. A History of Fine Arts in India and West : Edith Tomory –Orient Longman Limited, Madras, 1992

14. Art Experience : M. Hiriyanna –Kavyalaya Publications, Mysore, 1954
15. An Early Document of Indian Art : B. N. Goswamy –Manohara Books Service, Delhi, 1976
16. Astrology and Religion in Indian Art : Swamy Sivapriyanand –Shaktimalik Abhinava Publication, Delhi, 1990
17. Aparajitapraccha (of Bhuvanadeva) : (Ed.) P. A. Mankad –Gaekwad's Oriental Series No. CXV, Baroda, 1950
18. Arts and Crafts of India : George Watts and Percy Brown –Cosmo Publication, New Dehli, 1979
19. Abhilasitartha Chintamani (Manasollasa) : (Ed.) G. K. Shrigondekar –Gaekwad's Oriental Sereis, No. LXXXIV, Baroda, 1939
20. Bidar, its History and Monuments : G. Yazdani –Motilal Banarasidas Publishers Private Limited, Delhi, 1995
21. Buddist Cave Painting at Tun - Hung : Basil Gray –Faber and Faber, London, 1959
22. Citralaksana of Nagnajit : B. N. Goswamy, A. I. Dhamen Dallapicola –Manohar Book Service, Delhi, 1976
23. 'Citralaksan' (of Srikumara) : Ashok K. Bhattacharya –Calcutta, 1974
24. Colour and Meaning : Mariciahall –Cambridge University Press, Cambridge, 1992
25. Chitralaksana : A. K. Coomaraswamy –Sir Asutosh Memorial Volume, Patna, 1927
26. Deccani School - Bijapur : Motichandra –Bijapur Municipality Century Souviner, 1954
27. Dance and Other Fine Arts in Karnataka Sculpture and Painting : M. S. Choodamani –Mysore University, Mysore, 1985
28. Deccani Painting : Mark Zebrowski –Roli Book International, New Delhi, 1983
29. Fresco Painting : Olle Nard Mark –American Artists Group, New York, 1947
30. Fundamental of Indian Art : S. N. Dasgupta –Bharatiya Vidya Bhavana, Bombay, 1954
31. Freedom at Midnight : Larry Collins and Dominique Lapierre –Vikas Publishing House Pvt. Ltd., Sahibabad, Dist, Gaziabad (U.P.), 7th Edition, 1980
32. Fine Arts in Ancient India : Anibaran Ganguli –Abhinava Prakashana, New Delhi, 1979
33. Hand Book of Indian Art : E. B. Havell –Murry, 1920
34. History of Indian and Indonesian Art : A. K. Coomarswamy –London, 1927
35. History of Decorative Art in Mughal Architecture : R. Nath –Delhi, 1976
36. Harsacharita : (Ed. and Trans.) H. Oldenberg –Pali text Series, London, 1930
37. Indian Painting : Percy Brown –Y.M.C.A. Publishing House, 5, Russel Street, Caltutta, 1960 (Seventh Edition)
38. Indian Rock Paintings : V. S. Wakankar, R. R. Brooks –Smithsonian Institute, Smithsonia, Washington, D. C., 1974
39. Indian Sculpture and Painting : E. B. Havell –COSMO Publication, Delhi, 1980
40. Indian Drawings : A. K. Coomarswamy –Oxford University Press, Oxford, 1910
41. Indian Sculpture and Painting : Karl Khandalvala –Bombay, 1938
42. Indian Painting : C. Sivaramamurti –National Book Trust of India, New Delhi, 1970
43. Indian Jewellery : Holbein Thomas –Low Price Publication, New Delhi, 1993
44. Indian Architecture (Bhuddist and Hindu Periods) : Percy Brown –Taraporevala and Sons, Bombay, 1983
45. Inscriptions at Vijayanagar : S. Rajashekar –Sujata Publication, Dharwad, 1984
46. Jain Miniature Paintings from Western India : Motichandra –Ahmedabad, 1946
47. Karnataka Paintings : Shivarama Karanta –Prasaranga, University of Mysore, 1973
48. 'Lepakshi' : Amancherla Gopal Rao –Archaeological Survey of India, Delhi, 1969
49. Marwar Murals : R. A. Agarwala –Agamaprakashana, New Delhi, 1977
50. Mural Paintings in India : J. C. Nagpal –Gain Publication, Delhi, 1987
51. Memorial Stones : S. Settar and G. D. Sontheimer –Institute of Indian Art history, Karnataka University, Dharwad, 1982
52. Master Pieces of Vijayanagar Art : S. Rajashekar –Taraporevala, 210, Naroji Road, Bombay, 1983
53. Notes on the Technique of Painting : Hiller Hiladre –Faber and Faber, London, 1969
54. Paintings of India : Barrett Douglas and Basil Gray –S.K.I.R.A. Publication Geneva, 1963
55. Painted Rock-Shelters of India : V. S. Wakanakr –Pune University, Pune, 1972
56. Paintings of Ajanta : J. Griffiths –Secretary of State for India, 1897

57. Pre-historic Rockpaintings of Bhimbetka : Yashodhar Mathpal –Shaktimalik Abhinava Publications, E-37, Hauz Khas, New Dehli, 1984
58. Primitive Art : France Book –Publication Inc, New York, 1955
59. Pre, Proto and early Historic Cultures of Krishna - Tungabhadra Vally : B. Subrahamanyam –C. P. Goutam Bharatiya Kala Prakashana, 36, 11/5, Naranga Colony, Delhi, 1997
60. Pratijna Yaugandharayanam (of Bhasa) : (Ed. and Trans.) C. R. Devadhar –Poona Oriental Book Series, No. 61, Poona, 1939
61. Rajput Painting : A. K. Coomarswamy –Oxford University Press, Oxford, 1916
62. Rajput Painting : O. C. Ganguly –Calcutta, 1926
63. Samarangana Sutradhara : V. S. Agarwala –Gaekwadas Oriental Series, No. 25, Borada, 1966
64. Stone Age Painting in India : V. S. Wakankar, R. R. Brooks –D. P. Taraporevala Sons & Co., Bombay, 1976
65. Selected Examples of Indian Art : A. K. Coomarswamy –Oxford University Press, Oxford, 1911
66. Studies in Indian Painting : N. C. Mehta –Bombay, 1926
67. Sixty Four Arts in Ancient India : Anil Baran Ganguly –The English Book Store, 72, Connaught Circule, New Dehli, 1982
68. South Indian Paingings : C. Sivaramamurti –National Museum, Delhi, 1968
69. Selected Vijayanagara Temples of Rayala Seema : Kameshwara Rao –Govt. of Andhra Pradesh, Hyderabad, 1976
70. Silparatna (of Srikumara) : Ganapati Sastri –Trivendrum Sanskrit Series, No. LXXV, Trivendrum, 1922
71. The Artist's Methods of Materials : Bazzi Maria –Phaidon Press, London, 1960
72. The Sibi Murals : R. Ramakrishna –Souviner from the Sibi Temple, 1988
73. The Panchadasi : (Trns.) Swami Swachananda –Ramakrishna Math, Madras, 1967
74. The Court Painters of the Grand Moguls : Binyon and Arnolds –Oxford University Press, Oxford, 1921
75. The Early History of the Deccan, Fine Arts : G. Yazdani –Oxford University Press, Oxford, 1952
76. The Cave Paintings of Ajanta : Madanjeet Sing –London, 1965
77. Technique of Indian Painting : A. K. Bhattacharya –Calcutta, 1976
78. Temples of South India : K. R. Srinivasan –Archaeological Survey of India, Delhi, 1971
79. Techniques in Indian Mural Paintings : Jayanth Chakravarthi –K. P. Bagachi & Company, Calcutta, 1980
80. The Significance of Indian Art : Sri Aurobindo –Sri Aurobindo Ashram, Pandicherry, 1964
81. The Meaning of Art : Herbert Read –Harmonds Worth, Pengum, 1961
82. The Art and Architecture of Indian Subcontinent : J. C. Harle –Penguin Group, 1986
83. Tribal Art and Craft : A. K. Das –Agama Kala Prakashana, Delhi, 1979
84. Traditional Paintings of Karnataka : S. R. Rao, B. V. K. Shastry –C.K.P., Bangalore, 1980
85. The Baghcaves in the Gwalier State : Sir John Marshall, M. B. Garde, E. B. Havell, James Cousin –The India Society, London, 1927
86. The Murals - Their Composition and Technique (Ajanta Murals) : B. B. Lal –Archacological Survey of India, New Delhi, 1967
87. The Sukraniti : (Trns.) Binoy Kumar Sarkar –Panini Office, Alahabad, 1923
88. The Technique and Theory of Indian Painting : A. K. Coomarswamy –Fogg Art Museum, U.S.A., 1934
89. The Architecture of India (Bhuddist and Hindu) : D. N. Saraf –Vikas Publishing House, Uhaziabad (U.P.), 1980
90. The Development of Early Culture in Raichur Doab (Ph.D. Thesis) : F. R. Allchin –London University, 1954
91. Temples of Raichur and Bellary Districts : Chennabasappa S. Patil –K.S.A.D., Mysore, 1990
92. The Megalithic Culture in South India : B. K. Gururaj Rao –Dharwad, 1972
93. Tanjvur Painting of the Maratha Period : Jaya Appaswamy –Abhinava Publications, New Dehli, 1980
94. The Old Stone Age : M. C. Burkitt –Rupa and co., Calcutta, 1969
95. Vishnudharmottara Purana (Third Khanda) : (Trans.) Priyabala Shah –Gaekwad's Oriental Series, No. 37, Baroda, 1961
96. Vishnudharmottara Purana : A. K. Coomarswamy –J.A.O.S., Vol. 52, U.S.A., 1932
97. Vishnudharmottara Purana : Stella Kramrisch –C.U. Publishing, Calcutta, 1924
98. Vijayanagara Art : R. N. Saletore –Bombay University, Bombay, 1930
99. Vishnudharmottara Mahapurana : (Ed.) Madhusudan and Madhav Prasad Sharma –Venkateshwar Press, Bombay, 1912
100. Wood Cut Prints of Nineteenth Century : Ashit Paul –Seagull Books, Calcutta, 1983

## ೨. ಲೇಖನಗಳು

### ಅ. ಕನ್ನಡ ಲೇಖನಗಳು


೧. ಅವಸಾನದ ಅಂಚಿನಲ್ಲಿ ಸಿರಾದ ಭಿತ್ತಿ ಚಿತ್ರಗಳು : ಎಸ್. ವೆಂಕಟೇಶ –ಕರ್ಮವೀರ, ನವ್ಹೆಂಬರ್ ೧, ೧೯೯೮
೨. ಕರ್ನಾಟಕದ ಸಾಂಪ್ರದಾಯಕ ಚಿತ್ರಕಲೆ : ಸಂತೋಷಕುಮಾರ ಗುಲ್ವಾಡಿ –ಉದಯವಾಣಿ, ದೀಪಾವಳಿ ವಿಶೇಷಾಂಕ, ೧೯೮೦
೩. ಕರ್ನಾಟಕದಲ್ಲಿ ಚಿತ್ರಕಲೆ : ಪಿ. ಆರ್. ತಿಪ್ಪೇಸ್ವಾಮಿ –ಅವಲೋಕನ (ವಿಶ್ವಕನ್ನಡ ಸಮ್ಮೇಳನ, ಮೈಸೂರು), ೧೯೮೬
೪. ಕರಾವಳಿ ದೇಗುಲಗಳಲ್ಲಿ ಭಿತ್ತಿಚಿತ್ರಗಳು : ಎಂ. ಆರ್. ಶ್ಯಾನಭಾಗ –ಸಂಯುಕ್ತ ಕರ್ನಾಟಕ, ಸಾಪ್ತಾಹಿಕ ಸೌರಭ, ಡಿಸೆಂಬರ್ ೨೮, ೧೯೮೬
೫. ಕನ್ನಡ ಸಾಹಿತ್ಯದಲ್ಲಿ ಚಿತ್ರಕಲೆ : ರಸಯೋಗಿ ಗೆಳೆಯರ ಗುಂಪು –ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಏಪ್ರಿಲ್ ೧೯೩೦
೬. ಕರ್ನಾಟಕ ಸಾಹಿತ್ಯದಲ್ಲಿ ಚಿತ್ರಕಲೆ : ಕೆ. ಜಿ. ಕುಂದಣಗಾರ –ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಏಪ್ರಿಲ್ ೧೯೮೦
೭. ಕಣ್ಮರೆಯಾಗುತ್ತಿರುವ ಆನೆಗೊಂದಿಯ ಭಿತ್ತಿ ಚಿತ್ರಗಳು : ಎಸ್. ವೆಂಕಟೇಶ್ –ನೂತನ, ಫೆಬ್ರುವರಿ ೨೦, ೨೦೦೦
೮. ಕಣ್ಣು ಹಾಯಿಸಬಾರದೇ ಈ ಭಿತ್ತಿ ಚಿತ್ರಗಳತ್ತ : ಎಸ್. ವೆಂಕಟೇಶ –ಕರ್ಮವೀರ, ಜುಲೈ ೨೫, ೧೯೯೯
೯. ಚಿತ್ರಕಲೆಯ ಆರು ಅಂಗಲಕ್ಷಣಗಳು : ಎಸ್. ಸಿ. ಪಾಟೀಲ –ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಡಿಸೆಂಬರ್, ೧೯೮೬
೧೦. ಚೀರ ಘಟ್ಟಿಯಾರು ? ಒಂದೂಹೆ : ದ. ರಾ. ಬೇಂದ್ರೆ –ಸಾಹಿತ್ಯ ಸಂಶೋಧನ, ಧಾರವಾಡ, ೧೯೪೦
೧೧. ತೋಳಹರಾಳಿದ ಸುಂದರ ಸುರಾಲು : ಮ. ಮುರಳೀಕೃಷ್ಣ –ಸುಧಾ, ಜುಲೈ ೧೫, ೧೯೯೯
೧೨. ನಶಿಸುತ್ತಿರುವ ಗರುಡಾದ್ರಿ ಪರಂಪರೆಯ ಚಿತ್ರಕಲೆ : ಜಯತೀರ್ಥ ಕಾಗಲಕರ –ಸಂಯುಕ್ತ ಕರ್ನಾಟಕ, ಮೇ ೨೮, ೧೯೯೬
೧೩. ಪ್ರಾಚೀನ ಚಿತ್ರಕಲೆ : ಬಿ. ವಿ. ಕೆ. ಶಾಸ್ತ್ರಿ –ಪ್ರಬುದ್ಧ ಕರ್ನಾಟಕ, ಮೈಸೂರು, ೧೯೪೨
೧೪. ಭಾಸನಲ್ಲಿ ಚಿತ್ರಕಲೆ ಮತ್ತು ಸಂಗೀತ : ಎಸ್. ರಾಮಚಂದ್ರರಾವ್ –ಸಂಭಾವನೆ (ಬಿ. ಎಂ. ಶ್ರೀ. ಸಂಭಾವನಾ ಗ್ರಂಥ), ೧೯೪೧
೧೫. ಭಾರತೀಯ ಚಿತ್ರಕಲೆ ಅದರ ಪ್ರಾಚೀನತೆ ಮತ್ತು ಬೆಳವಣಿಗೆ : ಎಂ. ವಿ. ಸೀತಾರಾಮಯ್ಯ –ಜೀವನ ಪತ್ರಿಕೆ, ಸಂಚಿಕೆ ೪, ಸಂಪುಟ ೨, ೧೯೫೦
೧೬. ಭಾರತೀಯ ಚಿತ್ರಕಲಾ ಪರಂಪರೆ : ಪಿ. ಆರ್. ತಿಪ್ಪೇಸ್ವಾಮಿ –ಸವಿಸಂಚಯ (ಸದಾಶಿವ ಒಡೆಯರ್ ಸಂಸ್ಮರಣ ಗ್ರಂಥ), ೧೯೮೦
೧೭. ಭಿತ್ತಿ ಚಿತ್ರ ನಮ್ಮ ಪ್ರಾಚೀನರ ಅಪೂರ್ವಸಿದ್ಧಿ : ಪಿ. ಆರ್. ತಿಪ್ಪೇಸ್ವಾಮಿ –ಕಲಾವಿಕಾಸ, ಸಂಪುಟ ೬, ಡಿಸೆಂಬರ್ ೧೯೭೮
೧೮. ಮಾನಸೋಲ್ಲಾಸ : ಬಿ. ವಿ. ಕೆ. ಶಾಸ್ತ್ರಿ –ಸುಧಾ, ಯುಗಾದಿ ವಿಶೇಷಾಂಕ, ೧೯೭೨
೧೯. ಮಾನಸೋಲ್ಲಾಸದಲ್ಲಿ ಚಿತ್ರಕಲೆ : ಬಿ. ವಿ. ಕೆ. ಶಾಸ್ತ್ರಿ –ಸುಧಾ, ಏಪ್ರಿಲ್ ೨೯, ೧೯೭೩
೨೦. ರಾಯಚೂರಿನ ಅಪೂರ್ವ ಕಲಾ ನಿಕ್ಷೇಪ ಖಾಜಿನಗೌಡರ ಮನೆ : ಸಂತೋಷಕುಮಾರ ಗುಲ್ವಾಡಿ –ಉದಯವಾಣಿ, ದೀಪಾವಳಿ ವಿಶೇಷಾಂಕ, ೧೯೭೮
೨೧. ಲೇಪಾಕ್ಷಿಯ ಭಿತ್ತಿ ಚಿತ್ರಗಳು : ಕೃಷ್ಣಾನಂದ ಕಾಮತ್ –ಪ್ರಜಾವಾಣಿ, ದೀಪಾವಳಿ ವಿಶೇಷಾಂಕ, ೧೯೯೮
೨೨. ವಿಶಿಷ್ಟ ವರ್ಣ ಚಿತ್ರಕಲೆಯ ಆಗರ ಬಾದಾಮಿ : ಡಾ. ಅ. ಸುಂದರ –ಚಾಳುಕ್ಯ ಶ್ರೀ, ಬಾದಾಮಿ, ೧೯೮೨
೨೩. ವಿನಾಶದ ಅಂಚಿನಲ್ಲಿ ವಿಶ್ವವಿಖ್ಯಾತ ಗರುಡಾದ್ರಿ ಕಲೆ : ರಾಜೇಶ ಶಹಬಾದಿ –ವಿಜಯಕರ್ನಾಟಕ, ಸಪ್ಟೆಂಬರ್ ೨೨, ೨೦೦೦
೨೪. ಶ್ರವಣಬೆಳಗೊಳದ ಭಿತ್ತಿ ಚಿತ್ರಗಳು : ಎನ್. ಜಗನ್ನಾಥಪ್ರಕಾಶ –ಕರ್ಮವೀರ, ಅಗಷ್ಟ್ ೧೫, ೧೯೯೯
೨೫. ಶಿಬಿ ಒಂದು ಕಲಾಕ್ಷೇತ್ರ : ತಿ. ತಾ. ಶರ್ಮಾ –ಪ್ರಜಾಮತ, ದೀಪಾವಳಿ ಸಂಚಿಕೆ, ೧೯೬೬


### ಬ. ಇಂಗ್ಲೀಷ್ ಲೇಖನಗಳು


1. Artist and his Patron through the ages : Leela Ganapathi –Nun-Kalai, July - Dec, 1983
2. Artist's Materials : C. Sivaramamurti –Journal of Oriental Research, II, Calcutta, 1935
3. Artist's Jotting from the Nalachampu of Trivikrama : C. Sivaramamurti –Journal of Oriental Research, VII, Madras, 1934
4. Art in the Service of History : O. C. Gangoly –March of India, Vol.IX, 5 May, 1957
5. A Study on the Techniques of the Indian Wall Paintings : O. P. Agarwal –Journal of Indian Museum, Vol. 25, 26, 1965 - 70
6. A Fragment of an Ancient Painting in Deccan : T. G. Aravamuthan –Journal of Oriental Research, Vol. XIII, Madras, 1939
7. Art Titbits from Ratnakara's Haravijaya : C. Sivaramamurti –Dr. S. Krishnaswamy Aiyangar Commemoration Volume, Madras, 1936
8. British Artists, Impression of Hindustan : M. Jagmohan –India Magazine, April, 1987

